# ಭಗವದ್ಗೀತಾ ಯಥಾರೂಪ




ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ
ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸ್ಥಾಪಕಾಚಾರ್ಯ

ಗೀತೋಪನಿಷದ್

# ಭಗವದ್ಗೀತಾ

## ಯಥಾರೂಪ

## ಕನ್ನಡಕ್ಕೆ ಅನುವಾದವಾಗಿರುವ

## ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ ಗ್ರಂಥಗಳು

ಶ್ರೀಮದ್ಭಾಗವತಮ್ (18 ಸಂಪುಟಗಳು)
ಭಗವದ್ಗೀತಾ ಯಥಾರೂಪ
ಜನನ ಮರಣಗಳಾಚೆ
ಕೃಷ್ಣಪ್ರಜ್ಞೆ ಅನುಪಮ ಕೊಡುಗೆ
ಶ್ರೀ ಈಶೋಪನಿಷದ್
ರಾಜವಿದ್ಯಾ
ಪರಿಪೂರ್ಣ ಪ್ರಶ್ನೆ ಪರಿಪೂರ್ಣ ಉತ್ತರ
ಕೃಷ್ಣನನ್ನು ಅರಸುತ್ತಾ...
ಕೃಷ್ಣಪ್ರಜ್ಞೆಗೆ ಆರೋಹಣ
ಭಗವತ್ ಸಂದೇಶ
ಉಪದೇಶಾಮೃತ
ಕೃಷ್ಣಪ್ರಜ್ಞೆ : ಶ್ರೇಷ್ಠತಮ ಯೋಗ ಪದ್ಧತಿ
ಇತರ ಲೋಕಗಳಿಗೆ ಸುಗಮ ಪ್ರಯಾಣ
ಆತ್ಮಸಾಕ್ಷಾತ್ಕಾರ ವಿಜ್ಞಾನ
ಯೋಗದ ಪರಿಪೂರ್ಣತೆ
ಕೃಷ್ಣ —— ಆನಂದದ ಆಗರ
ಪ್ರಹ್ಲಾದ ಮಹಾರಾಜನ ಪಾರಮಾರ್ಥಿಕ ಬೋಧನೆಗಳು
ಶ್ರೀ ಚೈತನ್ಯ ಮಹಾಪ್ರಭುಗಳು ಯಾರು?
ಶ್ರೀ ಚೈತನ್ಯರ ಬೋಧನೆಗಳು
ಕಾವನಾರು ಕೃಷ್ಣನಲ್ಲದೆ ಕುಂತೀದೇವಿಯ ಧರ್ಮಭೋದೆ
ಸನಾತನ ಧರ್ಮ ಏಕೆ? ಏನು?
ಆಧುನಿಕ ಯುಗಕ್ಕೆ ಶ್ರೀ ಚೈತನ್ಯರ ಶಿಕ್ಷಾಮೃತ
ವೇದಾಂತ ದರ್ಶನ
ಆತ್ಮಾನ್ವೇಷಣೆಯ ಪಯಣ
ಕಪಿಲರ ಬೋಧನೆಗಳು
ವಿವೇಕದಿಂದ ವಿರಕ್ತಿ
ಜಪಿಸಿ ಸಂತಸದಿಂದಿರಿ...
ಪುನರ್ಜನ್ಮ
ನೈಸರ್ಗಿಕ ನಿಯಮಗಳು
ಗೀತಾ ಸಾರ
ಜೀವದ ಮೂಲ ಜೀವ

ವೇದಾಂತ ತತ್ವಜ್ಞಾನವನ್ನು ಕುರಿತ

**"ಗೋವಿಂದ ಭಾಷ್ಯ"** ವ್ಯಾಖ್ಯಾನವನ್ನು ಅಷ್ಟು ಸೊಗಸಾಗಿ ನಿರೂಪಿಸಿದ

**ಶ್ರೀಲ ಬಲದೇವ ವಿದ್ಯಾಭೂಷಣ ಅವರಿಗೆ**

ಅರ್ಪಿತ

A book in Kannada
**Bhagavad-gita Yatharupa**

Translated from English
**Bhagavad-gita As It Is**

by **His Divine Grace A.C. Bhaktivedanta Swami Prabhupada.**
Published by The Bhaktivedanta Book Trust, Bangalore.

| | | |
|---|---|---|
| Translated by | : | **Prof. L.S. Sheshagiri Rao** |
| No. of Pages | : | **830** |
| Page size | : | **135 x 215 mm** |

ಈ ಪುಸ್ತಕದ ವಿಷಯದಲ್ಲಿ ಆಸಕ್ತರಾದ ಓದುಗರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಕಾರ್ಯದರ್ಶಿಯವರೊಡನೆ ಈ ಕೆಳಗಿನ ವಿಳಾಸದೊಂದಿಗೆ ಪತ್ರವ್ಯವಹಾರ ಮಾಡಬಹುದು.

ವಿಳಾಸ :-

**ಇಸ್ಕಾನ್ (ISKCON),** ಹರೇಕೃಷ್ಣ ಗಿರಿ, ಕಾರ್ಡ್‌ರಸ್ತೆ, ರಾಜಾಜಿನಗರ,
ಬೆಂಗಳೂರು - 560 010. ದೂರವಾಣಿ : 3321956
Email: infodesk@iskconbangalore.org
Web address : www.iskconbangalore.org



| | | |
|---|---|---|
| ಹಿಂದಿನ ಹದಿನೇಳು ಮುದ್ರಣಗಳು | : | 1,94,500 ಪ್ರತಿಗಳು. |
| ಹದಿನೆಂಟನೆಯ ಮುದ್ರಣ | : | Oct. 2001, 10,000 ಪ್ರತಿಗಳು. |
| ಹತ್ತೊಂಭತ್ತನೆಯ ಮುದ್ರಣ | : | Jan. 2002, 8,000 ಪ್ರತಿಗಳು. |

ಭಗವದ್ಗೀತಾ ಯಥಾರೂಪವು, ಅರೇಬಿಕ್, ಬಂಗಾಲಿ, ಚೀನಿ, ಡಚ್, ಫ್ರೆಂಚ್, ಜರ್ಮನ್, ಗುಜರಾತಿ, ಹಿಂದಿ, ಇಟಾಲಿಯನ್, ಜಾಪನೀಸ್, ಪೋರ್ಚುಗೀಸ್, ಸ್ಪಾನಿಷ್, ಸ್ವೀಡಿಷ್, ರಷ್ಯನ್ ಮತ್ತು ಇತರ 29 ಭಾಷೆಗಳಲ್ಲಿಯೂ ಕೂಡ ಮುದ್ರಿತವಾಗಿದೆ.

ಮುದ್ರಕರುಃ
**Brilliant Printers Pvt. Ltd.,**
Bangalore.

ಗೀತೋಪನಿಷದ್

# ಭಗವದ್ಗೀತಾ ಯಥಾರೂಪ

ಸಂಪೂರ್ಣ ಆವೃತ್ತಿ

ಸಂಸ್ಕೃತ ಮೂಲ, ಪದಶಃ ಅರ್ಥ,
ಅನುವಾದ ಮತ್ತು ಭಾವಾರ್ಥಗಳೊಂದಿಗೆ

ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ
ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸ್ಥಾಪನಾಚಾರ್ಯ

ಕನ್ನಡ ಅನುವಾದ
ಪ್ರೊ. ಎಲ್.ಎಸ್. ಶೇಷಗಿರಿ ರಾವ್

ಭಕ್ತಿವೇದಾಂತ ಬುಕ್ ಟ್ರಸ್ಟ್
ನ್ಯೂಯಾರ್ಕ್ • ಲಾಸ್ ಏಂಜಲೀಸ್ • ಲಂಡನ್ • ಬೊಂಬಾಯಿ • ಬೆಂಗಳೂರು

## ಆಭಾರ ಮನ್ನಣೆ

ಭಗವದ್ಗೀತಾ ಯಥಾರೂಪವನ್ನು ಆಂಗ್ಲಭಾಷೆಯಿಂದ ಕನ್ನಡಭಾಷೆಗೆ ಪ್ರೊ. ಎಲ್.ಎಸ್. ಶೇಷಗಿರಿ ರಾವ್ ಅವರು ಅನುವಾದಿಸಿದ್ದಾರೆ. ಅವರಿಗೆ ನಾವು ಕೃತಜ್ಞರಾಗಿದ್ದೇವೆ. ಹಾಗೆಯೇ ಶ್ಲೋಕಗಳು ಮತ್ತು ಪದಶಃ ಅರ್ಥವನ್ನು ಕನ್ನಡಕ್ಕೆ ಪರಿವರ್ತಿಸಿ, ಪ್ರಾರಂಭದ ಕರಡಚ್ಚು ತಿದ್ದಿರುವ ಶ್ರೀ ಎನ್. ಗೋಪಾಲಕೃಷ್ಣ ಉಡುಪರಿಗೂ, ಅನಂತರದ ಕರಡಚ್ಚುಗಳನ್ನು ಪರಿಷ್ಕರಿಸಿದ ಡಾ. ಶ್ರೀರಾಮಭಟ್, ಶ್ರೀ ಎಂ.ಕೆ. ಗೋಪೀನಾಥ್ ಮತ್ತು ಶ್ರೀ ಈಶ್ವರಚಂದ್ರರಿಗೂ ನಾವು ಆಭಾರಿಗಳಾಗಿದ್ದೇವೆ.

ಪ್ರಕಾಶಕರು
ಭಕ್ತಿವೇದಾಂತ ಬುಕ್ ಟ್ರಸ್ಟ್
ಬೆಂಗಳೂರು

# ವಿಮರ್ಶಕರಿಂದ 'ಭಗವದ್ಗೀತಾ ಯಥಾರೂಪ'ದ ಪ್ರಶಂಸೆ

ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ 'ಭಗವದ್ಗೀತಾ ಯಥಾರೂಪ'ವು ಇಪ್ಪತ್ತನಾಲ್ಕಕ್ಕಿಂತ ಹೆಚ್ಚು ಭಾಷೆಗಳಲ್ಲಿ, ಐವತ್ತು ಲಕ್ಷಕ್ಕಿಂತಲೂ ಹೆಚ್ಚು ಪ್ರತಿಗಳಷ್ಟು ಅಚ್ಚಾಗಿದೆ. ಇದು ಜಗತ್ತಿನ ಸಾಹಿತ್ಯದ ಒಂದು ಶ್ರೇಷ್ಠ ಕೃತಿ. ಅತ್ಯಂತ ಅಧಿಕಾರಯುತವಾದ ಮತ್ತು ಅತ್ಯಧಿಕವಾಗಿ ಮಾರಾಟವಾಗುವ ಆವೃತ್ತಿ. ಈ ಗ್ರಂಥವನ್ನು ಕುರಿತು ಪ್ರಪಂಚದ ಕೆಲವರು ಪ್ರಮುಖ ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಈ ಕೆಳಗೆ ಕೊಡಲಾಗಿದೆ.

"ಗೀತೆಯ ಮೇಲೆ ಮತ್ತು ಭಕ್ತಿಯ ಮೇಲೆ ಲಭ್ಯವಿರುವ ಅತಿಶ್ರೇಷ್ಠ ಗ್ರಂಥಗಳಲ್ಲಿ ಇದು ಒಂದು ಎನ್ನುವುದರಲ್ಲಿ ಅನುಮಾನವೇ ಇಲ್ಲ. ಪ್ರಭುಪಾದರ ಈ ಅನುವಾದ ಅಕ್ಷರಶಃ ನಿಖರತೆ ಮತ್ತು ಧಾರ್ಮಿಕ ಒಳನೋಟಗಳ ಆದರ್ಶ ಸಂಗಮವಾಗಿದೆ."

ಡಾ. ಥಾಮಸ್ ಜೆ. ಹಾಪ್‌ಕಿನ್ಸ್
ಅಧ್ಯಕ್ಷರು, ಧಾರ್ಮಿಕ ಅಧ್ಯಯನಗಳ ವಿಭಾಗ
ಫ್ರ್ಯಾಕ್‌ಲಿನ್ ಮತ್ತು ಮಾರ್ಷಲ್ ಕಾಲೇಜ್.

"ಭಾರತದ ನಾಗರಿಕತೆಯು ಜಗತ್ತಿನಲ್ಲಿ ಇಂದು ಉಳಿದಿರುವ ಅತ್ಯಂತ ಪ್ರಾಚೀನ ಸಂಸ್ಕೃತಿ. ಈ ಮಹಾನ್ ಧಾರ್ಮಿಕ ನಾಗರಿಕತೆಗೆ ಮುಖ್ಯವಾದ ಸಾಹಿತ್ಯಕ ಸಮರ್ಥನೆ ಎಂದು **ಗೀತೆ**ಯನ್ನು ನೋಡಬಹುದು ........ ಗೀತೆಯ ಶಾಶ್ವತ ಜೀವಂತ ಪ್ರಾಧಾನ್ಯದ ಇನ್ನೊಂದು ಅಭಿವ್ಯಕ್ತಿ ಈ ಅನುವಾದ ಮತ್ತು ವ್ಯಾಖ್ಯಾನ. ನಮ್ಮ ಸಂಸ್ಕೃತಿಯು ವಿಪರೀತ ಕ್ರಿಯಾ ಪ್ರಧಾನವಾದದ್ದು ಮತ್ತು ಏಕಪಕ್ಷೀಯವಾದದ್ದು. ಅದಕ್ಕೆ ಅಧಿಕಾರಯುತವಾದ ತಾತ್ವಿಕ ಪ್ರಜ್ಞೆಯ ಆಂತರಿಕ ಗಹನತೆ ಇಲ್ಲದಿರುವುದರಿಂದ ಈಗ ಅದು ಎದುರಿಸುತ್ತಿರುವ ಬಿಕ್ಕಟ್ಟು ಆತ್ಮವಿನಾಶದಲ್ಲಿ ಕೊನೆಗಾಣಬಹುದು. ಸ್ವಾಮಿ ಭಕ್ತಿವೇದಾಂತರು ಪಾಶ್ಚಾತ್ಯ ಜಗತ್ತಿಗೆ ಈ ಅಪಾಯದ ಪರಿಣಾಮಕಾರಿ ನೆನಪನ್ನು ಕೊಡುತ್ತಾರೆ. ಇಂತಹ ಗಹಗತೆಯಿಲ್ಲದೆ ನಮ್ಮ ನೈತಿಕ ಮತ್ತು ರಾಜಕೀಯ ಪ್ರತಿಜ್ಞಾಪನೆಗಳು ಬರಿಯ ಮಾತಿನ ಸಂತೆಯಾಗುತ್ತದೆ".

ಥಾಮಸ್ ಮರ್ಟನ್
ಮಾಜಿ ಕ್ಯಾಥಲಿಕ್ ಧರ್ಮಶಾಸ್ತ್ರಜ್ಞ, ಸನ್ಯಾಸಿ, ಲೇಖಕ.

"ಪಾಶ್ಚಾತ್ಯ ಜಗತ್ತು ಇಡೀ ಭಾರತೀಯ ಸಾಹಿತ್ಯದಲ್ಲಿ **ಭಗವದ್ಗೀತೆ**ಯನ್ನು ಉಲ್ಲೇಖಿಸುವ ಮಟ್ಟಿಗೆ ಬೇರೆ ಯಾವ ಕೃತಿಯನ್ನೂ ಉಲ್ಲೇಖಿಸುವುದಿಲ್ಲ. ಇದಕ್ಕೆ ಕಾರಣ ಅಲ್ಲಿ ಇದಕ್ಕಿಂತ ಹೆಚ್ಚು ಪ್ರೀತಿಪಾತ್ರವಾದ ಇನ್ನೊಂದು ಗ್ರಂಥವಿಲ್ಲ. ಇಂತಹ ಕೃತಿಯ ಅನುವಾದಕ್ಕೆ ಸಂಸ್ಕೃತದ ಜ್ಞಾನವು ಮಾತ್ರವಲ್ಲ, ವಸ್ತುವಿನಲ್ಲಿ ಆಂತರಿಕ ಒಲವು ಮತ್ತು ಮಾತಿನ ಕೌಶಲ ಇವೂ ಅಗತ್ಯ. ಏಕೆಂದರೆ ಈ ಕಾವ್ಯವು ಎಲ್ಲ ವಸ್ತುಗಳಲ್ಲೂ ಭಗವಂತನನ್ನು ಕಾಣುವ ಸ್ವರಮೇಳ.

"ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರಿಗೆ ಸಹಜವಾಗಿಯೇ ಈ ವಸ್ತುವಿನಲ್ಲಿ ಗಾಢವಾದ ಒಲವಿದೆ. ಅಲ್ಲದೆ, ಒಂದು ವ್ಯಾಖ್ಯಾನದ ವಿಶೇಷವಾದ ಒಳನೋಟ, ಭಕ್ತಿಪರಂಪರೆಯಲ್ಲಿ ಶಕ್ತವಾದ ಮತ್ತು ಮನ ಒಲಿಸುವ ನಿರೂಪಣೆ. ಇವು ಅವರಿಗೆ ಇವೆ ........ ಸಕಲರ ಪ್ರೀತಿಗೂ ಪಾತ್ರವಾದ ಈ ಭಾರತೀಯ ಮಹಾಕಾವ್ಯಕ್ಕೆ ಹೊಸ ಅರ್ಥವನ್ನು ಹೊದಿಸಿ ಸ್ವಾಮೀಜಿಯವರು ವಿದ್ಯಾರ್ಥಿಗಳಿಗೆ ನಿಜವಾಗಿ ಉಪಕಾರ ಮಾಡಿದ್ದಾರೆ. ನಮ್ಮ ದೃಷ್ಟಿ ಏನೇ ಇರಲಿ, ಬೆಳಕು ಚೆಲ್ಲುವ ಈ ಕೃತಿಯನ್ನು ಕೊಟ್ಟ ಶ್ರಮಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು."

ಡಾ. ಗೆಡೆಸ್ ಮೆಕ್‌ಗ್ರಿಗೋರ್
ತತ್ವಶಾಸ್ತ್ರದ ಎಮೆರಿಟಸ್ ಡಿಸ್‌ಟಿಂಗ್‌ವಿಷ್ಡ್ ಪ್ರೊಫಸರ್
ಸದರನ್ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯಾ

"ಈ ಸುಂದರವಾದ ಅನುವಾದದಲ್ಲಿ ಶ್ರೀಲ ಪ್ರಭುಪಾದರು **ಗೀತೆ**ಯ ಗಾಢವಾದ ಭಕ್ತಿಯ ಮನೋಧರ್ಮವನ್ನು ಸೆರೆ ಹಿಡಿದಿದ್ದಾರೆ, ಶ್ರೀಕೃಷ್ಣ ಚೈತನ್ಯರು ಭಾರತೀಯ ಸಂತರಲ್ಲಿಯೇ ಅತ್ಯಂತ ಮುಖ್ಯರಾದವರು ಮತ್ತು ಪ್ರಭಾವಶಾಲಿಗಳಾದವರು. ಅವರ ಅಧಿಕಾರಯುತವಾದ ಪರಂಪರೆಯ ವಿವರವಾದ ವ್ಯಾಖ್ಯಾನವನ್ನು ಪ್ರಭುಪಾದರು ಇಲ್ಲಿ ನೀಡಿದ್ದಾರೆ."

ಡಾ. ಜೆ.ಸ್ಟಿಲ್‌ಸನ್ ಜೂಡ
ಧರ್ಮಗಳ ಇತಿಹಾಸದ ಎಮೆರಿಟಸ್ ಪ್ರೊಫೆಸರ್
ಮತ್ತು ಗ್ರಂಥ ಭಂಡಾರದ ನಿರ್ದೇಶಕರು
ಗ್ರ್ಯಾಜುಯೇಟ್, ಥಿಯಲಾಜಿಕಲ್ ಯೂನಿಯನ್, ಬರ್ಕ್‌ಲೇ

"ಪಿಯರ್ಸನೂ ಮತ್ತು ಪ್ರಯೋಜನ ಪ್ರಮಾಣವಾದಿಗಳೂ ಒತ್ತಿ ಹೇಳುವಂತೆ, ಯಾವುದು ಪರಿಣಾಮ ಮಾಡಬಲ್ಲದೋ ಅದು ಸತ್ಯವಾದರೆ ಭಗವದ್ಗೀತಾ ಯಥಾರೂಪದಲ್ಲಿ ಒಂದು ಬಗೆಯ ಸತ್ಯವಿರಬೇಕು. ಏಕೆಂದರೆ ಸಮಕಾಲೀನ ಜನರ ನಿರುತ್ಸಾಹದ ಮತ್ತು ಕರ್ಕಶವಾದ ಬದುಕುಗಳಲ್ಲಿ ಸಾಮಾನ್ಯವಾಗಿ ಕಾಣದಿರುವ ಆನಂದಮಯವಾದ ಶಾಂತಿಯನ್ನು ಭಗವದ್ಗೀತಾ ಯಥಾರೂಪದ ಉಪದೇಶಗಳನ್ನು ಅನುಸರಿಸುವವರಲ್ಲಿ ಕಾಣಬಹುದು."

ಡಾ. ಎಲ್ವಿನ್ ಎಚ್. ಪೊವೆಲ್
ಸಮಾಜಶಾಸ್ತ್ರದ ಪ್ರಾಧ್ಯಾಪಕರು
ನ್ಯೂಯಾರ್ಕಿನ ಸ್ಟೇಟ್ ಯೂನಿವರ್ಸಿಟಿ

"ಭಾರತೀಯ ಆಧ್ಯಾತ್ಮಿಕ ಶಾಸ್ತ್ರದಲ್ಲಿ ಓದುಗನು ತಜ್ಞನಾಗಿರಲಿ ಇಲ್ಲದಿರಲಿ, **ಭಗವದ್ಗೀತಾ ಯಥಾರೂಪ**ವನ್ನು ಓದುವುದು ತುಂಬ ಲಾಭಕರವಾದದ್ದು, ಏಕೆಂದರೆ ಅದರಿಂದ, ಈಗಲೂ ಹಿಂದೂಗಳಲ್ಲಿ ಬಹುಸಂಖ್ಯಾತರು **ಗೀತೆ**ಯನ್ನು ಅರ್ಥಮಾಡಿಕೊಳ್ಳುವಂತೆ ಅವನೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಬಹುಮಂದಿಗೆ ಇದು ನಿಜವಾದ ಭಾರತದೊಡನೆ,

ಪ್ರಾಚೀನ ಭಾರತದೊಡನೆ, ಶಾಶ್ವತ ಭಾರತದೊಡನೆ ಮೊದಲನೆಯ ಸಂಪರ್ಕವಾಗುತ್ತದೆ."

ಡಾ. ಫ್ರ್ಯಾಂಕಾಯ್ ಷೆನಿಕ್
ಡಾಕ್ಟರ್ ಆಫ್ ರಿಲಿಜಿಸ್ ಸೈನ್ಸಸ್
ಇನ್‌ಸ್ಟಿಟೂಟ್ ಆಫ್ ಪೊಲಿಟಿಕಲ್ ಸ್ಟಡೀಸ್, ಪ್ಯಾರಿಸ್

"ಭಗವದ್ಗೀತಾ ಯಥಾರೂಪವು ಗಾಢವಾಗಿ ಅನುಭವಿಸಿದ, ಶಕ್ತಿಶಾಲಿಯಾಗಿ ಕಲ್ಪಿಸಿಕೊಂಡ ಮತ್ತು ಸುಂದರವಾಗಿ ವಿವರಿಸಿರುವ ಕೃತಿ ...... **ಗೀತೆ**ಯನ್ನು ಕುರಿತು ಇಂತಹ ಮುಖ್ಯವಾದ ಧ್ವನಿ ಮತ್ತು ಶೈಲಿಗಳಿರುವ ಇನ್ನೊಂದು ಕೃತಿಯನ್ನು ನಾನು ನೋಡಿಲ್ಲ. ಅದು ಸಂದೇಹಾತೀತವಾದ ಪ್ರಾಮಾಣಿಕತೆ ಇರುವ ಕೃತಿ ......... ಆಧುನಿಕ ಮನುಷ್ಯನ ಬೌದ್ಧಿಕ ಮತ್ತು ನೈತಿಕ ಬದುಕಿನಲ್ಲಿ ಅದು ಬಹುಕಾಲ ಮಹತ್ವದ ಸ್ಥಾನವನ್ನು ಪಡೆದಿರುತ್ತದೆ."

ಡಾ. ಎಸ್.ಶುಕ್ಲ
ಭಾಷಾ ವಿಜ್ಞಾನದ ಉಪಪ್ರಾಧ್ಯಾಪಕರು
ಜಾರ್ಜ್‌ಟೌನ್ ವಿಶ್ವವಿದ್ಯಾಲಯ.

# ಪರಿವಿಡಿ

# ರಂಗಸಿದ್ಧತೆ

ಭಗವದ್ಗೀತೆಯು ವ್ಯಾಪಕವಾಗಿ ಪ್ರಕಟವಾಗಿ ಪ್ರತ್ಯೇಕವಾಗಿಯೇ ಓದಲ್ಪಟ್ಟ ಗ್ರಂಥ. ಆದರೂ ಮೂಲದಲ್ಲಿ ಅದು ಮಹಾಭಾರತದ ಒಂದು ಘಟನೆಯಾಗಿ ಕಾಣಿಸಿಕೊಳ್ಳುತ್ತದೆ; ಮಹಾಭಾರತವು ಪ್ರಾಚೀನ ಜಗತ್ತಿನ ಸಂಸ್ಕೃತ ಮಹಾಕಾವ್ಯ-ಚರಿತ್ರೆ. ಈಗಿನ ಕಲಿಯುಗಕ್ಕೆ ಕೊಂಡೊಯ್ದ ಘಟನೆಗಳನ್ನು ಮಹಾಭಾರತವು ಬಿತ್ತರಿಸುತ್ತದೆ. ಈ ಯುಗದ ಪ್ರಾರಂಭದಲ್ಲಿ, ಸುಮಾರು ಐದುಸಾವಿರ ವರ್ಷಗಳ ಕೆಳಗೆ ಶ್ರೀಕೃಷ್ಣನು ಭಗವದ್ಗೀತೆಯನ್ನು ತನ್ನ ಗೆಳೆಯನೂ ಭಕ್ತನೂ ಆದ ಅರ್ಜುನನಿಗೆ ಹೇಳಿದನು.

ಅವರ ಸಂವಾದವು ಮಾನವ ಕುಲಕ್ಕೆ ತಿಳಿದಿರುವ ಅತ್ಯಂತ ಶ್ರೇಷ್ಠ ತಾತ್ವಿಕ ಮತ್ತು ಧಾರ್ಮಿಕ ಸಂವಾದಗಳಲ್ಲಿ ಒಂದು. ಈ ಸಂವಾದವು ಒಂದು ಯುದ್ಧವು ಪ್ರಾರಂಭವಾಗುವ ಸ್ವಲ್ಪ ಮೊದಲು ನಡೆಯಿತು. ಇದೊಂದು ಭ್ರಾತೃ ಹತ್ಯೆಯ ಘೋರಯುದ್ಧ, ಇದು ಧೃತರಾಷ್ಟ್ರನ ನೂರು ಮಂದಿ ಗಂಡು ಮಕ್ಕಳು ಮತ್ತು ಅವರ ಚಿಕ್ಕಪ್ಪ ಪಾಂಡುವಿನ ಮಕ್ಕಳಾದ ಪಾಂಡವರ ನಡುವೆ ನಡೆಯಿತು.

ಧೃತರಾಷ್ಟ್ರ ಮತ್ತು ಪಾಂಡು ಕುರುವಂಶಕ್ಕೆ ಸೇರಿದ ಅಣ್ಣತಮ್ಮಂದಿರು, ಒಂದು ಕಾಲದಲ್ಲಿ ಭೂಮಿಯನ್ನೇ ಆಳಿದ ರಾಜ ಭರತನ ವಂಶಜರು; ಮಹಾಭಾರತ ಎಂಬ ಹೆಸರು ಆ ಭರತನಿಂದ ಬಂದದ್ದು. ಅಣ್ಣನಾದ ಧೃತರಾಷ್ಟ್ರನು ಕುರುಡನಾಗಿಲ್ಲದಿದ್ದರೆ ಅವನೇ ಸಿಂಹಾಸನವನ್ನು ಏರುತ್ತಿದ್ದ. ಅವನು ಹುಟ್ಟು ಕುರುಡುನಾದುದರಿಂದ ತಮ್ಮ ಪಾಂಡುವಿಗೆ ಸಿಂಹಾಸನವು ಪ್ರಾಪ್ತವಾಯಿತು.

ಪಾಂಡುವು ಚಿಕ್ಕವಯಸ್ಸಿನಲ್ಲೇ ಮರಣಹೊಂದಿದ. ಅವನ ಐದುಜನ ಮಕ್ಕಳಾದ ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವರು ಧೃತರಾಷ್ಟ್ರನ ಪೋಷಣೆಗೆ ಒಳಗಾದರು; ಆ ಕಾಲಕ್ಕೆ ವಸ್ತುತಃ ಧೃತರಾಷ್ಟ್ರನೇ ಅರಸನಾದ. ಹೀಗೆ ಧೃತರಾಷ್ಟ್ರನ ಮತ್ತು ಪಾಂಡುವಿನ ಮಕ್ಕಳು ಒಂದೇ ರಾಜಕುಟುಂಬದಲ್ಲಿ ಬೆಳೆದರು. ಶಸ್ತ್ರನಿಪುಣರಾದ ದ್ರೋಣಾಚಾರ್ಯರು ಅವರಿಗೆ ಸಮರ ಕಲೆಗಳಲ್ಲಿ ಶಿಕ್ಷಣ ನೀಡಿದರು; ಕುಲದ ಪಿತಾಮಹರಾದ ಭೀಷ್ಮರು ಅವರ ಮಾರ್ಗದರ್ಶಕರಾದರು.

ಆದರೆ ಧೃತರಾಷ್ಟ್ರನ ಮಕ್ಕಳಿಗೆ, ಅದರಲ್ಲಿಯೂ ಮೊದಲನೆಯವನಾದ ದುರ್ಯೋಧನನಿಗೆ, ಪಾಂಡವರೆಂದರೆ ದ್ವೇಷ ಮತ್ತು ಅಸೂಯೆ. ಕುರುಡನೂ ದುರ್ಬಲ ಮನಸ್ಸಿನವನೂ ಆದ ಧೃತರಾಷ್ಟ್ರನಿಗೆ ರಾಜ್ಯವು ತನ್ನ ಮಕ್ಕಳಿಗೆ ಹೋಗಬೇಕು, ಪಾಂಡುವಿನ ಮಕ್ಕಳಿಗಲ್ಲ ಎಂದು ಅಪೇಕ್ಷೆ.

ಧೃತರಾಷ್ಟ್ರನ ಸಮ್ಮತಿಯಿಂದ ದುರ್ಯೋಧನನು ಪಾಂಡುವಿನ ಮಕ್ಕಳನ್ನು ಕೊಲ್ಲಲು ಹಂಚಿಕೆ ಹೂಡಿದ; ಅವರ ಚಿಕ್ಕಪ್ಪ ವಿದುರ ಮತ್ತು ಬಂಧು ಶ್ರೀಕೃಷ್ಣ ಇವರ ಎಚ್ಚರಿಕೆಯ ರಕ್ಷಣೆಯಿಂದ ಮಾತ್ರವೇ ಪಾಂಡವರು ತಮ್ಮನ್ನು ಕೊಲ್ಲುವ ಹಲವು ಪ್ರಯತ್ನಗಳಿಂದ ಪಾರಾದರು.

ಕೃಷ್ಣನು ಸಾಮಾನ್ಯ ಮನುಷ್ಯನಾಗಿರಲಿಲ್ಲ, ಅವನು ದೇವೋತ್ತಮ ಪರಮ ಪುರುಷ; ಅವನು ಭೂಮಿಗೆ ಇಳಿದು ಬಂದು ಆ ಕಾಲದ ಒಂದು ವಂಶದಲ್ಲಿ ರಾಜಕುಮಾರನ ಪಾತ್ರವನ್ನು

ವಹಿಸಿದ. ಈ ಪಾತ್ರದಲ್ಲಿ ಅವನು ಪಾಂಡುವಿನ ಹೆಂಡತಿಯೂ, ಪಾಂಡವರ ತಾಯಿಯೂ ಆದ ಕುಂತಿ ಅಥವಾ ಪೃಥೆಯ ಸೋದರಳಿಯ. ಹೀಗೆ ನೆಂಟನಾಗಿ ಮತ್ತು ನಿತ್ಯ ಧರ್ಮೋದ್ಧಾರಕನಾಗಿ ಕೃಷ್ಣನು ಪಾಂಡುವಿನ ಧರ್ಮಿಷ್ಠ ಮಕ್ಕಳ ಪರವಾಗಿದ್ದ ಮತ್ತು ಅವರನ್ನು ಕಾಪಾಡಿದ.

ಆದರೆ ಮುಂದೆ ಚಾಣಾಕ್ಷನಾದ ದುರ್ಯೋಧನನು ಪಾಂಡವರಿಗೆ ದ್ಯೂತಕ್ಕೆ ಬರುವಂತೆ ಸವಾಲು ಹಾಕಿದ. ಆ ನಿರ್ಧಾರಕ ಪಂದ್ಯದಲ್ಲಿ ದುರ್ಯೋಧನನೂ ಅವನ ತಮ್ಮಂದಿರೂ ಪಾಂಡವರ ಹೆಂಡತಿ ಪತಿವ್ರತೆಯಾದ ದ್ರೌಪದಿಯನ್ನು ವಶಮಾಡಿಕೊಂಡರು ಮತ್ತು ಅಪಮಾನ ಮಾಡಲೆಂದು ರಾಜರುಗಳು ತುಂಬಿದ ಸಭೆಯಲ್ಲಿ ಅವಳ ವಸ್ತ್ರಾಪಹರಣ ಮಾಡಲು ಪ್ರಯತ್ನಿಸಿದರು. ಕೃಷ್ಣನ ದೈವೀ ಹಸ್ತಕ್ಷೇಪವು ಅವಳನ್ನು ಉಳಿಸಿತು; ಆದರೆ ಮೋಸದ ಜೂಜಾಟದಿಂದ ಪಾಂಡವರು ತಮ್ಮ ರಾಜ್ಯದಿಂದ ವಂಚಿತರಾದರು. ಅವರು ಹದಿಮೂರು ವರ್ಷಗಳ ಕಾಲ ರಾಜ್ಯಭ್ರಷ್ಟರಾಗಿ ಹೊರ ಹೋಗಬೇಕಾಯಿತು.

ದೇಶಾಂತರ ಹೋಗಿದ್ದ ಪಾಂಡವರು ಹಿಂದಿರುಗಿದಾಗ ತಮ್ಮ ರಾಜ್ಯವನ್ನು ಹಿಂದಿರುಗಿಸುವಂತೆ ನ್ಯಾಯವಾಗಿಯೇ ದುರ್ಯೋಧನನನ್ನು ಪ್ರಾರ್ಥಿಸಿದರು. ಅವನು ಒರಟಾಗಿ ತಿರಸ್ಕರಿಸಿದ. ರಾಜಕುಮಾರರಾಗಿ ಸಾರ್ವಜನಿಕ ಆಡಳಿತದಲ್ಲಿ ಸೇವೆಸಲ್ಲಿಸಲು ಕರ್ತವ್ಯ ಬದ್ಧರಾಗಿದ್ದ ಪಾಂಡವರು ಐದು ಗ್ರಾಮಗಳನ್ನಾದರೂ ನೀಡಬೇಕೆಂದು ವಿನಂತಿಸಿದರು. ದುರ್ಯೋಧನನು ದುರಹಂಕಾರದಿಂದ ಅವರಿಗೆ ಸೂಜಿಮೊನೆಯಷ್ಟು ನೆಲವನ್ನೂ ತಾನು ಕೊಡುವುದಿಲ್ಲ ಎಂದು ಉತ್ತರಿಸಿದ.

ಇದೆಲ್ಲ ನಡೆಯುತ್ತಿದ್ದರೂ ಪಾಂಡವರು ವಿಚಲಿತರಾಗದೆ ಸಹನಶೀಲರಾಗಿದ್ದರು. ಆದರೆ ಈಗ ಯುದ್ಧವು ಅನಿವಾರ್ಯ ಎಂದು ತೋರಿತು.

ಹೀಗಿದ್ದರೂ ಜಗತ್ತಿನ ರಾಜ ಮಹಾರಾಜರು ಭಿನ್ನಾಭಿಪ್ರಾಯಗಳನ್ನು ತಳೆದು ಕೆಲವರು ಧೃತರಾಷ್ಟ್ರನ ಪಕ್ಷವನ್ನೂ ಇತರರು ಪಾಂಡವರ ಪಕ್ಷವನ್ನೂ ವಹಿಸುತ್ತಿದ್ದಾಗ ಸ್ವತಃ ಕೃಷ್ಣನೇ ಪಾಂಡವರ ದೂತನಾಗಿ ಶಾಂತಿಗಾಗಿ ಕಳಕಳಿಯಿಂದ ಪ್ರಾರ್ಥಿಸಲು ಧೃತರಾಷ್ಟ್ರನ ಆಸ್ಥಾನಕ್ಕೆ ಹೋದನು. ಅವನ ಕಳಕಳಿಯ ಮಾತುಗಳೂ ತಿರಸ್ಕೃತವಾದಾಗ ಯುದ್ಧವು ನಿಶ್ಚಯವಾಯಿತು.

ಅತ್ಯುನ್ನತ ನೈತಿಕ ಉದಾತ್ತತೆಯ ಪಾಂಡವರು ಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ಗುರುತಿಸಿದರು; ಅಧರ್ಮಿಗಳಾದ ಧೃತರಾಷ್ಟ್ರನ ಮಕ್ಕಳು ಗುರುತಿಸಲಿಲ್ಲ. ಆದರೂ ಕೃಷ್ಣನು ಪ್ರತಿಸ್ಪರ್ಧಿಗಳ ಅಪೇಕ್ಷೆಯಂತೆ ಯುದ್ಧವನ್ನು ಪ್ರವೇಶಿಸುವುದಾಗಿ ಹೇಳಿದ. ದೇವರಾಗಿ ಅವನು ಯುದ್ಧಮಾಡುವುದಿಲ್ಲವೆಂದ; ಆದರೆ ಬಯಸಿದವರು ಕೃಷ್ಣನ ಸೈನ್ಯವನ್ನು ಬಳಸಿಕೊಳ್ಳಬಹುದು ಮತ್ತು ಪ್ರತಿಪಕ್ಷವು ಸ್ವತಃ ಕೃಷ್ಣನನ್ನೇ ಮಾರ್ಗದರ್ಶಕನಾಗಿ ಮತ್ತು ಸಹಾಯಕನಾಗಿ ಪಡೆಯಬಹುದು ಎಂದು ಹೇಳಿದ. ರಾಜಕೀಯ ಮುತ್ಸದ್ದಿಯಾದ ದುರ್ಯೋಧನನು ತಕ್ಷಣವೇ ಕೃಷ್ಣನ ಸೈನ್ಯವನ್ನು ಬಾಚಿಕೊಂಡ. ಸ್ವತಃ ಕೃಷ್ಣನನ್ನೇ ಪಡೆಯಲು ಪಾಂಡವರು ಅಷ್ಟೇ ಕಾತರರಾಗಿದ್ದರು.

ಹೀಗೆ ಕೃಷ್ಣನು ಅರ್ಜುನನ ಸಾರಥಿಯಾದ; ಪುರಾಣ ಪ್ರಸಿದ್ಧನಾದ ಆ ಬಿಲ್ಲುಗಾರನ ರಥದ ಸಾರಥ್ಯವನ್ನು ವಹಿಸಿಕೊಂಡ. ಭಗವದ್ಗೀತೆಯು ಪ್ರಾರಂಭವಾಗುವುದು ಈ ಘಟ್ಟದಲ್ಲಿ; ಎರಡು ಸೈನ್ಯಗಳೂ ಯುದ್ಧ ಸನ್ನದ್ಧವಾಗಿ ನಿಂತಿವೆ. ಧೃತರಾಷ್ಟ್ರನು ತನ್ನ ಸಹಾಯಕನಾದ ಸಂಜಯನನ್ನು,

'ಅವರೇನು ಮಾಡಿದರು?' ಎಂದು ಆತಂಕದಿಂದ ಕೇಳುತ್ತಿದ್ದಾನೆ.

ಹೀಗೆ ರಂಗಸಜ್ಜಿಕೆಯಾಗಿದೆ; ಈ ಅನುವಾದ ಮತ್ತು ವ್ಯಾಖ್ಯಾನಗಳನ್ನು ಕುರಿತು ಒಂದು ಹ್ರಸ್ವವಾದ ಟಿಪ್ಪಣಿಯೊಂದೇ ಅಗತ್ಯ.

ಅನುವಾದಕರು ಭಗವದ್ಗೀತೆಯನ್ನು ಇಂಗ್ಲಿಷಿಗೆ ಅನುವಾದಿಸುವಾಗ ಸಾಮಾನ್ಯವಾಗಿ ಅನುಸರಿಸಿರುವ ರೀತಿಯೆಂದರೆ ತಮ್ಮ ಸ್ವಂತ ಪರಿಕಲ್ಪನೆಗಳಿಗೆ ಮತ್ತು ವೈಚಾರಿಕತೆಗಳಿಗೆ ಸ್ಥಳಮಾಡಲು ವ್ಯಕ್ತಿ ಕೃಷ್ಣನನ್ನು ಪಕ್ಕಕ್ಕೆ ತಳ್ಳಿಬಿಡುವುದು. ಮಹಾಭಾರತದಲ್ಲಿರುವ ಚರಿತ್ರೆಯನ್ನು ವಿಚಿತ್ರ ಕಟ್ಟುಕಥೆಯೆಂದು ಪರಿಗಣಿಸಲಾಗುತ್ತದೆ; ಅನಾಮಧೇಯ ಪ್ರತಿಭಾವಂತನೊಬ್ಬನ ವಿಚಾರಗಳನ್ನು ನಿರೂಪಿಸಲು ಕೃಷ್ಣನು ಒಂದು ಕಾವ್ಯಮಯವಾದ ಸಾಧನವಾಗುತ್ತಾನೆ, ಹೆಚ್ಚೆಂದರೆ ಆತನು ಒಬ್ಬ ಅಮುಖ್ಯ ಚಾರಿತ್ರಿಕ ವ್ಯಕ್ತಿಯಾಗಿ ಬಿಡುತ್ತಾನೆ.

ಆದರೆ ಗೀತೆಯೇ ತನ್ನ ವಿಷಯವನ್ನು ಹೇಳಿಕೊಳ್ಳುವ ಮಟ್ಟಿಗೆ ಕೃಷ್ಣನೇ ಭಗವದ್ಗೀತೆಯ ಗುರಿ ಮತ್ತು ಸತ್ವ.

ಆದುದರಿಂದ ಈ ಅನುವಾದದ ಅದರೊಂದಿಗಿರುವ ವ್ಯಾಖ್ಯಾನದ ಉದ್ದೇಶವು ಓದುಗನನ್ನು ಕೃಷ್ಣನತ್ತ ಕರೆದೊಯ್ಯುವುದಲ್ಲದೆ ಕೃಷ್ಣನಿಂದ ದೂರ ಒಯ್ಯುವುದಲ್ಲ. ಈ ರೀತಿಯಲ್ಲಿ **ಯಥಾವತ್ತಾಗಿ ಭಗವದ್ಗೀತೆ**ಯು ವಿಶಿಷ್ಟವಾದದ್ದು. ಹೀಗೆ ಭಗವದ್ಗೀತೆಯು ಸಂಪೂರ್ಣವಾಗಿ ಸಮಂಜಸವಾಗುತ್ತದೆ ಮತ್ತು ಗ್ರಹಿಸಲು ಸಾಧ್ಯವಾಗುತ್ತದೆ ಎನ್ನುವುದೂ ವಿಶಿಷ್ಟವಾದ ಸಂಗತಿಯೆ. ಕೃಷ್ಣನೇ ಗೀತೆಯನ್ನು ಹೇಳುವವನು, ಅದರ ಪರಮ ಗುರಿಯೂ ಅವನೇ ಆದದ್ದರಿಂದ ಈ ಮಹಾ ಧರ್ಮಗ್ರಂಥವನ್ನು ಅದರ ನಿಜವಾದ ಅರ್ಥದಲ್ಲಿ ನಿರೂಪಿಸುವ ಒಂದೇ ಅನುವಾದವು ಇದೇ.

—**ಪ್ರಕಾಶಕರು**

# ಮೊದಲ ಮಾತು

**ಭಗವದ್ಗೀತಾ ಯಥಾರೂಪ**ವನ್ನು ಮೊದಲು ನಾನು ಅದು ಇಲ್ಲಿ ಕಾಣುವ ರೂಪದಲ್ಲಿ ಬರೆದೆ. ಆದರೆ ದುರದೃಷ್ಟದಿಂದ ಪುಸ್ತಕವು ಮೊದಲು ಪ್ರಕಟವಾದಾಗ ಮೂಲ ಹಸ್ತಪ್ರತಿಯನ್ನು ನಾಲ್ಕುನೂರಕ್ಕಿಂತಲೂ ಕಡಮೆ ಪುಟಗಳಿಗೆ ಇಳಿಸಲಾಯಿತು. ಚಿತ್ರಗಳಿರಲಿಲ್ಲ ಮತ್ತು **ಶ್ರೀಮದ್ಭಗವದ್ಗೀತೆ**ಯ ಬಹುಪಾಲು ಮೂಲ ಶ್ಲೋಕಗಳಿಗೆ ವಿವರಣೆಯಿರಲಿಲ್ಲ. ಶ್ರೀಮದ್ಭಾಗವತಮ್, ಶ್ರೀ ಈಶೋಪನಿಷತ್ ಮೊದಲಾದ ನನ್ನ ಇತರ ಪುಸಕ್ತಗಳಲ್ಲಿ ಅನುಸರಿಸಿರುವ ರೀತಿ ಇದು. ಮೊದಲು ಮೂಲ ಶ್ಲೋಕವನ್ನು ಕೊಟ್ಟಿದ್ದೇನೆ, ಅನಂತರ ಅದರ ಇಂಗ್ಲಿಷ್ ಲಿಪ್ಯಂತರ, ಸಂಸ್ಕೃತ-ಇಂಗ್ಲಿಷ್ ಪ್ರತಿಪದಾರ್ಥ, ಅನುವಾದಗಳು ಮತ್ತು ಭಾವಾರ್ಥಗಳು. ಇದು ಪುಸಕ್ತವನ್ನು ಬಹು ಅಧಿಕಾರಯುತವನ್ನಾಗಿ ಮತ್ತು ವಿದ್ವತ್ಪೂರ್ಣವನ್ನಾಗಿ ಮಾಡುತ್ತದೆ ಮತ್ತು ಅರ್ಥವು ಸ್ವಯಂವೇದ್ಯವಾಗುತ್ತದೆ. ಆದುದರಿಂದ ನನ್ನ ಮೂಲ ಹಸ್ತಪ್ರತಿಯ ಗಾತ್ರವನ್ನು ಕಡಮೆ ಮಾಡಬೇಕಾಗಿ ಬಂದಾಗ ನನಗೆ ಅಷ್ಟೇನೂ ಸಂತೋಷವಾಗಲಿಲ್ಲ. ಆದರೆ ಅನಂತರ **ಭಗವದ್ಗೀತಾ ಯಥಾರೂಪ**ಕ್ಕೆ ಬೇಡಿಕೆಯು ಬಹುವಾಗಿ ಹೆಚ್ಚಿದಾಗ ಪುಸ್ತಕವನ್ನು ಅದರ ಮೂಲರೂಪದಲ್ಲಿ ಪ್ರಕಟಿಸಬೇಕೆಂದು ಬಹುಮಂದಿ ವಿದ್ವಾಂಸರು, ಭಕ್ತರು ನನ್ನನ್ನು ಪ್ರಾರ್ಥಿಸಿದರು. ಆದುದರಿಂದ ಈ ಮಹಾನ್ ಜ್ಞಾನಗ್ರಂಥವನ್ನು ಪರಂಪರೆಗೆ ಅನುಗುಣವಾದ ವಿವರಣೆಯೊಂದಿಗೆ ಮೂಲಹಸ್ತಪ್ರತಿಯಲ್ಲಿದ್ದಂತೆ ಓದುಗರ ಮುಂದಿಡುವ ಪ್ರಯತ್ನವಾಗಿದೆ ಇದು. ಕೃಷ್ಣಪ್ರಜ್ಞೆಯ ಆಂದೋಳನವನ್ನು ಇನ್ನೂ ಭದ್ರವಾಗಿ ಪ್ರಗತಿಪೂರ್ಣವಾಗಿ ಸ್ಥಾಪಿಸುವುದು ಇದರ ಉದ್ದೇಶ.

**ಭಗವದ್ಗೀತಾ ಯಥಾರೂಪ**ದ ಆಧಾರವಿರುವುದರಿಂದ ನಮ್ಮ ಕೃಷ್ಣಪ್ರಜ್ಞೆಯ ಆಂದೋಳನವು ಪ್ರಾಮಾಣಿಕವಾದದ್ದು, ಚರಿತ್ರೆಯ ಅಧಿಕಾರ ಪಡೆದದ್ದು, ಸಹಜವಾದದ್ದು ಮತ್ತು ದಿವ್ಯವಾದದ್ದು. ಕ್ರಮೇಣ ಅದು ಇಡೀ ಜಗತ್ತಿನಲ್ಲಿ ಅದರಲ್ಲಿಯೂ ಹಿರಿಯ ಪೀಳಿಗೆಯವರಲ್ಲಿ ಅತ್ಯಂತ ಜನಪ್ರಿಯವಾದ ಆಂದೋಳನವಾಗುತ್ತಿದೆ. ಕಿರಿಯ ಪೀಳಿಗೆಯವರಿಗೂ ಸಹ ಅದರಲ್ಲಿ ಆಸಕ್ತಿಯು ಹೆಚ್ಚುತ್ತಿದೆ. ಹಿರಿಯರಿಗೆ ಎಷ್ಟು ಆಸಕ್ತಿ ಬರುತ್ತಿದೆ ಎಂದರೆ ನನ್ನ ಶಿಷ್ಯರ ತಂದೆಯರೂ ಮತ್ತು ತಾತಂದಿರೂ ನಮ್ಮ ಮಹಾನ್ ಸಂಸ್ಥೆಯಾದ ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘ (ಇಸ್ಕಾನ್)ದ ಆಜೀವಸದಸ್ಯರಾಗಿ ನಮ್ಮನ್ನು ಪ್ರೋತ್ಸಾಹಿಸುತ್ತಿದ್ದಾರೆ. ಇಡೀ ಜಗತ್ತಿನಲ್ಲಿ ಕೃಷ್ಣಪ್ರಜ್ಞೆಯ ಆಂದೋಳನದ ನಾಯಕತ್ವವನ್ನು ನಾನು ವಹಿಸಿದುದಕ್ಕಾಗಿ ತಮ್ಮ ಕೃತಜ್ಞತೆಯನ್ನು ಹೇಳಲು ಲಾಸ್ ಆ್ಯಂಜಲೀಸ್‌ನಲ್ಲಿ ಅನೇಕಮಂದಿ ತಂದೆತಾಯಿಯರು ನನ್ನನ್ನು ಕಾಣಲು ಬರುತ್ತಿದ್ದರು. ಅವರಲ್ಲಿ ಕೆಲವರು ನಾನು ಅಮೇರಿಕದಲ್ಲಿ ಕೃಷ್ಣಪ್ರಜ್ಞೆಯ ಆಂದೋಳನವನ್ನು ಪ್ರಾರಂಭಿಸಿದ್ದು ಅಮೆರಿಕದ ಭಾಗ್ಯ ಎಂದು ಹೇಳಿದರು. ಆದರೆ ಈ ಆಂದೋಳನವು ಬಹು ಹಿಂದಿನ ಕಾಲದಲ್ಲಿಯೇ ಪ್ರಾರಂಭವಾಗಿ ಗುರುಶಿಷ್ಯ ಪರಂಪರೆಯಲ್ಲಿ ಮಾನವ ಸಮಾಜಕ್ಕೆ ಬರುತ್ತಿರುವುದರಿಂದ ನಿಜವಾಗಿ ಈ ಆಂದೋಳನದ ಜನಕ ಸ್ವತಃ ಕೃಷ್ಣನೇ. ಈ ಸಂಬಂಧದಲ್ಲಿ ನನಗೇನಾದರೂ ಯಶಸ್ಸಿದ್ದರೆ ಅದು ವೈಯಕ್ತಿಕವಾಗಿ ನನಗೆ ಸೇರಿದ್ದಲ್ಲ, ಎಂದೆಂದೂ ನನ್ನ ಗುರುಗಳಾದ ಓಂ ವಿಷ್ಣುಪಾದ ಪರಮಹಂಸ

ಪರಿವ್ರಾಜಕಾಚಾರ್ಯ ಅಷ್ಟೋತ್ತರಶತ ಶ್ರೀ ಶ್ರೀಮದ್ ಭಕ್ತಿಸಿದ್ಧಾಂತ ಸರಸ್ವತಿ ಗೋಸ್ವಾಮಿ ಮಹಾರಾಜ ಪ್ರಭುಪಾದರಿಗೆ ಸೇರಬೇಕು.

ಈ ವಿಷಯದಲ್ಲಿ ವೈಯಕ್ತಿಕವಾಗಿ ನನಗೇನಾದರೂ ಕೀರ್ತಿ ಸಲ್ಲುವುದಿದ್ದರೆ ನಾನು ಭಗವದ್ಗೀತೆಯನ್ನು ಅದು ಯಥಾವತ್ತಾಗಿ ಇರುವಂತೆ ಯಾವುದೇ ಬೆರಕೆಯಿಲ್ಲದೆ ಓದುಗರ ಮುಂದಿಡಲು ಯತ್ನಿಸಿದ್ದೇನೆ ಎನ್ನುವುದು. ನಾನು **ಭಗವದ್ಗೀತಾ ಯಥಾರೂಪ**ವನ್ನು ನಿರೂಪಿಸುವ ಮೊದಲು ಪ್ರಕಟವಾಗಿದ್ದ ಬಹುತೇಕ ಎಲ್ಲ ಇಂಗ್ಲೀಷ್ ಆವೃತ್ತಿಗಳು ಯಾರಾದರೊಬ್ಬರ ವೈಯಕ್ತಿಕ ಆಕಾಂಕ್ಷೆಯನ್ನು ತೃಪ್ತಿಪಡಿಸಲು ಸಿದ್ಧಮಾಡಿದವು. ಆದರೆ **ಭಗವದ್ಗೀತಾ ಯಥಾರೂಪ**ವನ್ನು ನಿರೂಪಿಸುವಲ್ಲಿ ನಾವು ಮಾಡಿದ ಪ್ರಯತ್ನ ದೇವೋತ್ತಮ ಪರಮ ಪುರುಷನಾದ ಕೃಷ್ಣನ ಮಹತ್ಕಾರ್ಯವನ್ನು ನಿರೂಪಿಸುವುದು. ನಮ್ಮ ಕರ್ತವ್ಯ ಕೃಷ್ಣನ ಇಚ್ಛೆಯನ್ನು ನಿರೂಪಿಸುವುದು; ರಾಜಕಾರಣಿ, ತತ್ವಶಾಸ್ತ್ರಜ್ಞ ಅಥವಾ ವಿಜ್ಞಾನಿಯಂತೆ ಈ ಪ್ರಪಂಚದಲ್ಲಿ ಊಹಾತ್ಮಕ ಚಿಂತನೆಯಲ್ಲಿ ತೊಡಗುವವರ ಇಚ್ಛೆಯನ್ನು ನಿರೂಪಿಸುವುದಲ್ಲ; ಏಕೆಂದರೆ ಬೇರೆ ರೀತಿಗಳಲ್ಲಿ ಅವರಿಗೆ ಏನೇ ತಿಳುವಳಿಕೆಯಿದ್ದರೂ ಅವರ ಕೃಷ್ಣಜ್ಞಾನವು ಅತ್ಯಲ್ಪವಾದದ್ದು. ಕೃಷ್ಣನು **ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು** ಇತ್ಯಾದಿಯಾಗಿ ಹೇಳುವಾಗ ವಿದ್ವಾಂಸರೆನಿಸಿಕೊಂಡ ಇತರರ ಹಾಗೆ ಕೃಷ್ಣನೂ ಮತ್ತು ಅವನ ಆತ್ಮವೂ ಬೇರೆ ಬೇರೆ ಎಂದೂ ನಾವು ಹೇಳುವುದಿಲ್ಲ. ಕೃಷ್ಣನು ಪರಿಪೂರ್ಣನು; ಕೃಷ್ಣನ ನಾಮ, ಕೃಷ್ಣನ ರೂಪ, ಕೃಷ್ಣನ ಗುಣಗಳು, ಕೃಷ್ಣನ ಲೀಲೆಗಳು ಮೊದಲಾದವುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಪರಂಪರಾ ಪದ್ಧತಿಗೆ ಅನುಗುಣವಾಗಿ ಕೃಷ್ಣ ಭಕ್ತನಲ್ಲದ ಯಾರಿಗೇ ಆಗಲಿ ಕೃಷ್ಣನ ಈ ಸ್ಥಾನವನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಸಾಮಾನ್ಯವಾಗಿ ವಿದ್ವಾಂಸರು, ರಾಜಕಾರಣಿಗಳು, ತತ್ವಶಾಸ್ತ್ರಜ್ಞರು ಮತ್ತು ಸ್ವಾಮಿಗಳು ಎನಿಸಿಕೊಂಡವರು ಕೃಷ್ಣನ ಪರಿಪೂರ್ಣ ಜ್ಞಾನವಿಲ್ಲದೆ ಭಗವದ್ಗೀತೆಗೆ ವ್ಯಾಖ್ಯಾನವನ್ನು ಬರೆಯುವಾಗ ಕೃಷ್ಣನನ್ನು ಹೊರಗಟ್ಟಲು ಅಥವಾ ಕೊಲ್ಲಲು ಪ್ರಯತ್ನಿಸುತ್ತಾರೆ. ಅಧಿಕೃತವಲ್ಲದ ಇಂತಹ ಭಗವದ್ಗೀತೆಯ ವ್ಯಾಖ್ಯಾನಕ್ಕೆ **ಮಾಯಾವಾದ ಭಾಷ್ಯ** ಎಂದು ಹೆಸರು, ಅಧಿಕಾರಿಗಳಲ್ಲದ ಈ ಜನರ ವಿರುದ್ಧ ಚೈತನ್ಯ ಮಹಾಪ್ರಭುಗಳು ನಮಗೆ ಎಚ್ಚರಿಕೆ ನೀಡಿದ್ದಾರೆ. ಮಾಯಾವಾದಿ ದೃಷ್ಟಿಯಿಂದ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವ ಯಾರೇ ಆಗಲಿ ಬಹುದೊಡ್ಡ ಅವಿವೇಕವನ್ನು ಮಾಡುತ್ತಾರೆ ಎಂದು ಚೈತನ್ಯ ಮಹಾಪ್ರಭುಗಳು ಸ್ಪಷ್ಟವಾಗಿ ಹೇಳುತ್ತಾರೆ. ಇಂತಹ ಅವಿವೇಕದ ಪರಿಣಾಮವೆಂದರೆ ಭಗವದ್ಗೀತೆಯ ವಿದ್ಯಾರ್ಥಿಯು ತಪ್ಪು ದಾರಿ ಹಿಡಿದು ಆಧ್ಯಾತ್ಮಿಕ ಮಾರ್ಗದರ್ಶನದಲ್ಲಿ ನಿಶ್ಚಯವಾಗಿಯೂ ಗೊಂದಲಕ್ಕೆ ಒಳಗಾಗುತ್ತಾನೆ ಮತ್ತು ಮರಳಿ ಭಗವದ್ಧಾಮಕ್ಕೆ ಹೋಗಲು ಅವನಿಗೆ ಸಾಧ್ಯವಾಗುವುದಿಲ್ಲ.

ಬ್ರಹ್ಮನ ಒಂದು ದಿವಸದಲ್ಲಿ ಅಥವಾ 8,600,000,000 ವರ್ಷಗಳಿಗೆ ಒಮ್ಮೆ ಕೃಷ್ಣನು ಯಾವ ಉದ್ದೇಶದಿಂದ ಈ ಗ್ರಹಕ್ಕೆ ಇಳಿದು ಬರುತ್ತಾನೋ ಅದೇ ಉದ್ದೇಶವನ್ನಿಟ್ಟುಕೊಂಡು ಬದ್ಧವಿದ್ಯಾರ್ಥಿಗೆ ಮಾರ್ಗದರ್ಶನ ಮಾಡಲು ಈ **ಭಗವದ್ಗೀತಾ ಯಥಾರೂಪ**ವನ್ನು ಓದುಗರ ಮುಂದಿಡುತ್ತಿದ್ದೇವೆ. ಈ ಉದ್ದೇಶವನ್ನು ಭಗವದ್ಗೀತೆಯಲ್ಲಿ ಹೇಳಿದೆ ಮತ್ತು ಅದಿರುವಂತೆಯೇ ನಾವದನ್ನು ಒಪ್ಪಿಕೊಳ್ಳಬೇಕು; ಇಲ್ಲವಾದರೆ ಭಗವದ್ಗೀತೆಯನ್ನೂ ಅದನ್ನು ಉಪದೇಶಿಸಿದ ಶ್ರೀಕೃಷ್ಣನನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದರಲ್ಲಿ ಅರ್ಥವೇ ಇಲ್ಲ. ಶ್ರೀಕೃಷ್ಣನು ಭಗವದ್ಗೀತೆಯನ್ನು ಮೊಟ್ಟಮೊದಲಬಾರಿಗೆ ಕೋಟ್ಯಂತರ ವರ್ಷಗಳ ಕೆಳಗೆ ಸೂರ್ಯನಿಗೆ ಹೇಳಿದನು.

ನಾವು ಈ ವಾಸ್ತವಾಂಶವನ್ನು ಒಪ್ಪಿಕೊಳ್ಳಬೇಕು; ತಪ್ಪು ವ್ಯಾಖ್ಯಾನಮಾಡದೆ ಕೃಷ್ಣನ ಅಧಿಕಾರ ವಾಣಿಯಿಂದ ಭಗವದ್ಗೀತೆಯ ಐತಿಹಾಸಿಕ ಮಹತ್ವವನ್ನು ತಿಳಿದುಕೊಳ್ಳಬೇಕು. ಕೃಷ್ಣನ ಇಚ್ಛೆಯನ್ನು ಗಮನಿಸದೆಯೆ ಭಗವದ್ಗೀತೆಗೆ ಅರ್ಥಹೇಳುವುದು ಮಹಾಪರಾಧ. ಈ ಅಪರಾಧವನ್ನು ಮಾಡದಂತೆ ನೋಡಿಕೊಳ್ಳಲು ನಾವು ಶ್ರೀಕೃಷ್ಣನ ಮೊದಲ ಶಿಷ್ಯನಾದ ಅರ್ಜುನನು ನೇರವಾಗಿ ಅವನನ್ನು ಅರ್ಥಮಾಡಿಕೊಂಡಂತೆ ದೇವೋತ್ತಮ ಪರಮ ಪುರುಷನಾದ ಪ್ರಭುವನ್ನು ಅರ್ಥಮಾಡಿಕೊಳ್ಳಬೇಕು. ಭಗವದ್ಗೀತೆಯನ್ನು ಹೀಗೆ ಅರ್ಥಮಾಡಿಕೊಳ್ಳುವುದು ನಿಜವಾಗಿ ಲಾಭದಾಯಕ. ಬದುಕಿನ ಮಹದುದ್ದೇಶವನ್ನು ಸಾಧಿಸುವುದರಲ್ಲಿ ಮಾನವ ಕುಲದ ಕಲ್ಯಾಣಕ್ಕೆ ಇದು ಅಧಿಕೃತ ಮಾರ್ಗ.

ಕೃಷ್ಣಪ್ರಜ್ಞೆಯ ಆಂದೋಳನವು ಬದುಕಿನ ಅತ್ಯುನ್ನತ ಪರಿಪೂರ್ಣತೆಯನ್ನು ತಂದುಕೊಡುವ ವಾಗ್ದಾನ ಮಾಡುತ್ತದೆ; ಆದುದರಿಂದ ಮಾನವ ಕುಲಕ್ಕೆ ಇದು ಅಗತ್ಯವಾದದ್ದು. ಇದು ಹೇಗೆ ಎನ್ನುವುದನ್ನು ಭಗವದ್ಗೀತೆಯಲ್ಲಿ ಸಂಪೂರ್ಣವಾಗಿ ವಿವರಿಸಿದೆ. ದುರದೃಷ್ಟದಿಂದ ಪ್ರಾಪಂಚಿಕ ಮನೋಧರ್ಮದ ಜಗಳಗಂಟರು ತಮ್ಮ ಆಸುರೀ ಒಲವುಗಳನ್ನು ಮುನ್ನುಗ್ಗಿಸಿದ್ದಾರೆ. ಬದುಕಿನ ಸರಳಸೂತ್ರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಲ್ಲಿ ಜನರನ್ನು ತಪ್ಪುಮಾರ್ಗಕ್ಕೆಳೆದಿದ್ದಾರೆ; ಇವುಗಳಿಗಾಗಿ ಭಗವದ್ಗೀತೆಯ ಲಾಭವನ್ನು ಪಡೆದುಕೊಂಡಿದ್ದಾರೆ. ದೇವರ ಅಥವಾ ಕೃಷ್ಣನ ಮಹಿಮೆಯೇನು ಎನ್ನುವುದು ಪ್ರತಿಯೊಬ್ಬರಿಗೂ ತಿಳಿದಿರಬೇಕು. ಜೀವಿಗಳ ವಾಸ್ತವಸ್ಥಾನವೇನು ಎನ್ನುವುದನ್ನು ಪ್ರತಿಯೊಬ್ಬರೂ ತಿಳಿದಿರಬೇಕು. ಪ್ರತಿಯೊಬ್ಬರೂ ಈ ವಿಷಯಗಳನ್ನು ತಿಳಿದಿರಬೇಕು; ಜೀವಿಯು ಶಾಶ್ವತನಾಗಿ ಸೇವಕನು; ಮನುಷ್ಯನು ಕೃಷ್ಣನ ಸೇವೆ ಮಾಡದಿದ್ದರೆ ಐಹಿಕ ಪ್ರಕೃತಿಯ ಮೂರು ಗುಣಗಳ ವಿವಿಧ ರೀತಿಗಳಲ್ಲಿ ಮಾಯೆಯನ್ನು ಸೇವಿಸಬೇಕಾಗುತ್ತದೆ, ಇದರಿಂದ ನಿರಂತರವಾಗಿ ಹುಟ್ಟುಸಾವುಗಳ ಚಕ್ರದಲ್ಲಿ ಅಲೆಯಬೇಕಾಗುತ್ತದೆ; ಊಹಾತ್ಮಕ ಚಿಂತನೆ ಮಾಡುವ ಮುಕ್ತ ಮಾಯಾವಾದಿ ಎನಿಸಿಕೊಂಡವನು ಈ ಪ್ರಕ್ರಿಯೆಯನ್ನು ಅನುಭವಿಸಬೇಕಾಗುತ್ತದೆ. ಈ ಜ್ಞಾನವು ಬಹು ಶ್ರೇಷ್ಠ ವಿಜ್ಞಾನ; ಪ್ರತಿಯೊಬ್ಬ ಜೀವಿಯೂ ತನ್ನ ಹಿತಕ್ಕಾಗಿಯೇ ಇದನ್ನು ಕೇಳಬೇಕು.

ಸಾಮಾನ್ಯವಾಗಿ ಜನರು, ಅದರಲ್ಲಿಯೂ ಈ ಕಲಿಯುಗದಲ್ಲಿ, ಕೃಷ್ಣನ ಬಹಿರಂಗ ಶಕ್ತಿಯಲ್ಲಿ ಮೋಹಗೊಳ್ಳುತ್ತಾರೆ; ಐಹಿಕ ಸೌಕರ್ಯಗಳನ್ನು ಹೆಚ್ಚಿಸಿದರೆ ಪ್ರತಿಯೊಬ್ಬ ಮನುಷ್ಯನೂ ಸುಖವಾಗಿರುತ್ತಾನೆ ಎಂದು ಅವರು ಭಾವಿಸುತ್ತಾರೆ. ಪ್ರತಿಯೊಬ್ಬನೂ ಐಹಿಕ ಪ್ರಕೃತಿಯ ಕಠಿಣ ನಿಯಮಗಳಿಂದ ಬಂಧಿತನಾಗಿದ್ದಾನೆ, ಆದುದರಿಂದ ಐಹಿಕ ಅಥವಾ ಹೊರಗಿನ ಪ್ರಕೃತಿಯು ತುಂಬ ಬಲಶಾಲಿಯಾದದ್ದು ಎನ್ನುವುದು ಅವರಿಗೆ ತಿಳಿಯದು. ಜೀವಿಯು ಪ್ರಭುವಿನ ವಿಭಿನ್ನಾಂಶವಾಗಿ ಸುಖವಾಗಿರುತ್ತಾನೆ ಮತ್ತು ಸಹಜವಾಗಿ ಅವನ ಕೆಲಸವೆಂದರೆ ಪ್ರಭುವಿಗೆ ಕೂಡಲೇ ಸೇವೆ ಸಲ್ಲಿಸುವುದು. ಆದರೆ ಮಾಯೆಯ ಸಂಮೋಹನದಿಂದ ಮನುಷ್ಯನು ತನ್ನ ವೈಯಕ್ತಿಕ ಇಂದ್ರಿಯ ತೃಪ್ತಿಯನ್ನು ವಿವಿಧ ರೀತಿಗಳಲ್ಲಿ ಪೂರೈಸಿಕೊಂಡು ಸುಖವಾಗಿರಲು ಪ್ರಯತ್ನಿಸುತ್ತಾನೆ; ಇದರಿಂದ ಅವನು ಎಂದೂ ಸುಖವಾಗಿರಲಾರ. ತನ್ನ ವೈಯಕ್ತಿಕ ಐಹಿಕ ಇಂದ್ರಿಯಗಳನ್ನು ತೃಪ್ತಿಪಡಿಸಲು ಪ್ರಯತ್ನಿಸುವುದರ ಬದಲಾಗಿ ಅವನು ಪ್ರಭುವಿನ ಇಂದ್ರಿಯಗಳನ್ನು ತೃಪ್ತಿಪಡಿಸಬೇಕು. ಇದೇ ಬದುಕಿನ ಅತ್ಯುನ್ನತ ಪರಿಪೂರ್ಣತೆ. ಪ್ರಭುವು ಇದನ್ನು ಬಯಸುತ್ತಾನೆ ಮತ್ತು ಹೀಗೆ ಮಾಡಬೇಕೆಂದು ಒತ್ತಾಯಿಸಿ ಹೇಳುತ್ತಾನೆ. ಭಗವದ್ಗೀತೆಯ ಈ ಕೇಂದ್ರ ಅಂಶವನ್ನು ಜನರು ಅರ್ಥಮಾಡಿಕೊಳ್ಳಬೇಕು. ನಮ್ಮ ಕೃಷ್ಣಪ್ರಜ್ಞೆ ಆಂದೋಳನವು ಈ ಕೇಂದ್ರ ಅಂಶವನ್ನು ಇಡೀ ಜಗತ್ತಿಗೆ ಉಪದೇಶಿಸುತ್ತಿದೆ; *ಭಗವದ್ಗೀತಾ ಯಥಾರೂಪ*ದ ವಸ್ತುವನ್ನು ನಾವು ಮಲಿನಗೊಳಿಸುತ್ತಿಲ್ಲ; ಆದುದರಿಂದ *ಭಗವದ್ಗೀತೆ*ಯ

ಅಧ್ಯಯನದಿಂದ ಪ್ರಯೋಜನ ಪಡೆಯಬೇಕೆಂದು ಗಂಭೀರವಾದ ಆಸಕ್ತಿ ಇರುವ ಯಾರೇ ಆಗಲಿ ಪ್ರಭುವಿನ ನೇರ ಮಾರ್ಗದರ್ಶನದಲ್ಲಿ **ಭಗವದ್ಗೀತೆ**ಯ ಕಾರ್ಯಸಾಧ್ಯವಾದ ತಿಳುವಳಿಕೆಗಾಗಿ ಕೃಷ್ಣಪ್ರಜ್ಞೆಯ ಆಂದೋಳನದಿಂದ ನೆರವನ್ನು ಪಡೆಯಬೇಕು. ಆದುದರಿಂದ ನಾವು ಇಲ್ಲಿ ನಿರೂಪಿಸಿರುವಂತೆ **ಭಗವದ್ಗೀತಾ ಯಥಾರೂಪ**ವನ್ನು ಜನರು ಅಧ್ಯಯನ ಮಾಡಿ ಅತಿಹೆಚ್ಚಿನ ಪ್ರಯೋಜನವನ್ನು ಪಡೆದುಕೊಳ್ಳುತ್ತಾರೆ ಎಂದು ನಾವು ಆಶಿಸುತ್ತೇವೆ; ಒಬ್ಬನೇ ಒಬ್ಬ ಮನುಷ್ಯನು ಪ್ರಭುವಿನ ಪರಿಶುದ್ಧ ಭಕ್ತನಾದರೂ ನಮ್ಮ ಪ್ರಯತ್ನವು ಯಶಸ್ವಿಯಾಯಿತೆಂದು ನಾವು ಭಾವಿಸುತ್ತೇವೆ.

12, ಮೇ 1971 **ಎ.ಸಿ. ಭಕ್ತಿವೇದಾಂತ ಸ್ವಾಮಿ.**

ಸಿಡ್ನಿ, ಆಸ್ಟ್ರೇಲಿಯ.

# ಪ್ರಸ್ತಾವನೆ

**ಓಂ ಅಜ್ಞಾನತಿಮಿರಾನ್ಧಸ್ಯ ಜ್ಞಾನಾಞ್ಜನಶಲಾಕಯಾ |**
**ಚಕ್ಷುರ್ ಉನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ||**

**ಶ್ರೀ ಚೈತನ್ಯ ಮನೋಽಭೀಷ್ಟಂ ಸ್ಥಾಪಿತಂ ಯೇನ ಭೂ-ತಲೇ |**
**ಸ್ವಯಂ ರೂಪಃ ಕದಾ ಮಹ್ಯಂ ದದಾತಿ ಸ್ವಪದಾನ್ತಿಕಮ್ ||**

ನಾನು ಅಜ್ಞಾನದ ಗಾಢಾಂಧಕಾರದಲ್ಲಿ ಹುಟ್ಟಿದೆ. ನನ್ನ ಗುರುವು ಜ್ಞಾನದ ದೀವಟಿಗೆಯಿಂದ ನನ್ನ ಕಣ್ಣುಗಳನ್ನು ತೆರೆಸಿದರು. ಅವರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ಚೈತನ್ಯ ಮಹಾಪ್ರಭುಗಳ ಮನೋಭೀಷ್ಟವನ್ನು ಪೂರೈಸುವ ಧ್ಯೇಯವನ್ನು ಈ ಐಹಿಕ ಜಗತ್ತಿನಲ್ಲಿ ನೆಲೆಗೊಳಿಸಿರುವ ಶ್ರೀಲ ರೂಪಗೋಸ್ವಾಮಿ ಪ್ರಭುಪಾದರು, ಅವರ ಅಡಿದಾವರೆಗಳಲ್ಲಿ ನನಗೆ ಆಶ್ರಯವನ್ನೆಂದು ನೀಡುವರು?

**ವಂದೇಽಹಂ ಶ್ರೀಗುರೋಃ ಶ್ರೀಯುತ ಪದಕಮಲಂ ಶ್ರೀಗುರೂನ್ ವೈಷ್ಣವಾಂಶ್ಚ |**
**ಶ್ರೀರೂಪಂ ಸಾಗ್ರಜಾತಂ ಸಹಗಣರಘುನಾಥಾನ್ವಿತಂ ತಂ ಸ-ಜೀವಮ್ ||**

**ಸಾದ್ವೈತಂ ಸಾವಧೂತಂ ಪರಿಜನಸಹಿತಂ ಕೃಷ್ಣಚೈತನ್ಯದೇವಂ |**
**ಶ್ರೀರಾಧಾಕೃಷ್ಣಪಾದಾನ್ ಸಹ-ಗಣ-ಲಲಿತಾ-ಶ್ರೀವಿಶಾಖಾನ್ವಿತಾಂಶ್ಚ ||**

ನನ್ನ ಗುರುಗಳ ಚರಣಕಮಲಗಳಿಗೆ ಮತ್ತು ಎಲ್ಲ ವೈಷ್ಣವರ ಚರಣಗಳಿಗೆ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಶ್ರೀಲ ರೂಪಗೋಸ್ವಾಮಿ, ಅವರ ಅಣ್ಣ ಸನಾತನ ಗೋಸ್ವಾಮಿ, ಇವರ ಜೊತೆಗೆ ರಘುನಾಥ ದಾಸರು, ರಘುನಾಥ ಭಟ್ಟರು, ಗೋಪಾಲ ಭಟ್ಟರು ಮತ್ತು ಶ್ರೀಲ ಜೀವ ಗೋಸ್ವಾಮಿ ಇವರೆಲ್ಲರ ಪಾದಕಮಲಗಳಿಗೆ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಕೃಷ್ಣ ಚೈತನ್ಯ ಮಹಾ ಪ್ರಭುಗಳು, ನಿತ್ಯಾನಂದ ಪ್ರಭುಗಳು ಇವರೊಂದಿಗೆ ಅದ್ವೈತ ಆಚಾರ್ಯ, ಗದಾಧರ, ಶ್ರೀವಾಸ ಮತ್ತು ಇತರ ಸಂಗಡಿಗರಿಗೆ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಶ್ರೀಮತಿ ರಾಧಾರಾಣಿ ಮತ್ತು ಶ್ರೀಕೃಷ್ಣ ಹಾಗೂ ಅವರ ಸಂಗಡಿಗರಾದ ಶ್ರೀ ಲಲಿತಾ ಮತ್ತು ವಿಶಾಖಾ ಇವರೆಲ್ಲರಿಗೆ ನನ್ನ ಗೌರವಪೂರ್ವಕ ಪ್ರಣಾಮಗಳು.

**ಹೇ ಕೃಷ್ಣ ಕರುಣಾಸಿನ್ಧೋ ದೀನಬನ್ಧೋ ಜಗತ್-ಪತೇ |**
**ಗೋಪೇಶ ಗೋಪಿಕಾ ಕಾನ್ತ ರಾಧಾಕಾನ್ತ ನಮೋಽಸ್ತು ತೇ ||**

ನನ್ನ ಪ್ರೀತಿಯ ಕೃಷ್ಣನೇ, ನೀನು ದೀನ ಬಂಧು ಮತ್ತು ಸೃಷ್ಟಿಯ ಮೂಲ. ನೀನು ಗೋಪಿಯರ ಈಶ, ರಾಧಾರಾಣಿಯ ನಲ್ಲ. ನಿನಗೆ ನನ್ನ ಗೌರವಪೂರ್ವಕ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

**ತಪ್ತಕಾಞ್ಚನ ಗೌರಾಙ್ಗಿ ರಾಧೇ ವೃನ್ದಾವನೇಶ್ವರಿ |**
**ವೃಷಭಾನು-ಸುತೇ ದೇವಿ ಪ್ರಣಮಾಮಿ ಹರಿ-ಪ್ರಿಯೇ ||**

ರಾಧಾರಾಣಿಗೆ ನನ್ನ ಪ್ರಣಾಮಗಳು — ನಿನ್ನ ದೇಹದ ವರ್ಣವು ಕರಗಿದ ಬಂಗಾರದಂತಿದೆ. ನೀನು ವೃಂದಾವನೇಶ್ವರಿ. ವೃಷಭಾನು ರಾಜನ ಮಗಳಾದ ನೀನು, ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯಳಾದವಳು.

**ವಾಞ್ಛಕಲ್ಪತರುಭ್ಯಶ್ಚ ಕೃಪಾಸಿಮ್ಧುಭ್ಯ ಏವ ಚ |**
**ಪತಿತಾನಾಂ ಪಾವನೇಭ್ಯೋ ವೈಷ್ಣವೇಭ್ಯೋ ನಮೋ ನಮಃ ||**

ಕೃಷ್ಣನ ಎಲ್ಲ ವೈಷ್ಣವ ಭಕ್ತರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು. ಅವರು ಕಲ್ಪವೃಕ್ಷದಂತೆ ಎಲ್ಲರ ಇಚ್ಛೆಗಳನ್ನು ನಡೆಸಿಕೊಡಬಲ್ಲರು. ಪತಿತರ ವಿಷಯದಲ್ಲಿಯೂ ಅವರು ಬಹು ಕೃಪಾಳುಗಳು.

**ಶ್ರೀಕೃಷ್ಣ ಚೈತನ್ಯ ಪ್ರಭು ನಿತ್ಯಾನನ್ದ |**
**ಶ್ರೀ ಅದ್ವೈತ ಗದಾಧರ ಶ್ರೀವಾಸಾದಿ ಗೌರಭಕ್ತವೃನ್ದ ||**

ಶ್ರೀಕೃಷ್ಣ ಚೈತನ್ಯರಿಗೆ, ಪ್ರಭು ನಿತ್ಯಾನಂದರಿಗೆ, ಶ್ರೀ ಅದ್ವೈತ, ಗದಾಧರ, ಶ್ರೀವಾಸ ಇವರಿಗೆ ಮತ್ತು ಭಕ್ತವೃಂದದ ಇತರ ಎಲ್ಲರಿಗೆ ನಾನು ವಂದಿಸುತ್ತೇನೆ.

**ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ |**
**ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ||**

ಭಗವದ್ಗೀತೆಯು **ಗೀತೋಪನಿಷತ್ತು** ಎಂದೂ ಪ್ರಸಿದ್ಧವಾಗಿದೆ. ಇದು ವೈದಿಕ ಜ್ಞಾನದ ಸಾರಸರ್ವಸ್ವ; ವೈದಿಕ ಸಾಹಿತ್ಯದಲ್ಲಿ ಅತ್ಯಂತ ಮುಖ್ಯವಾದ ಉಪನಿಷತ್ತುಗಳಲ್ಲಿ ಒಂದು. ಇಂಗ್ಲಿಷಿನಲ್ಲಿ ಭಗವದ್ಗೀತೆಗೆ ಹಲವು ವ್ಯಾಖ್ಯಾನಗಳಿವೆ; ಇನ್ನೊಂದು ವ್ಯಾಖ್ಯಾನದ ಅಗತ್ಯವೇನು ಎಂದು ಪ್ರಶ್ನೆ ಮಾಡಬಹುದು. ಈ ಆವೃತ್ತಿಗೆ ಇಲ್ಲಿ ಹೇಳಿರುವಂತೆ ವಿವರಣೆಯನ್ನು ಕೊಡಬಹುದು. ಇತ್ತೀಚೆಗೆ ಅಮೆರಿಕದ ಮಹಿಳೆಯೊಬ್ಬರು ಭಗವದ್ಗೀತೆಯ ಒಂದು ಒಳ್ಳೆಯ ಇಂಗ್ಲಿಷ್ ಆವೃತ್ತಿಯನ್ನು ತಿಳಿಸುವಂತೆ ಕೇಳಿದರು. ನಿಜ, ಅಮೆರಿಕದಲ್ಲಿ ಭಗವದ್ಗೀತೆಯ ಇಂಗ್ಲಿಷ್ ಆವೃತ್ತಿಗಳು ಹಲವಾರು ಲಭ್ಯವಿವೆ. ಆದರೆ ನಾನು ನೋಡಿರುವ ಮಟ್ಟಿಗೆ ಅಮೆರಿಕದಲ್ಲಿ ಮಾತ್ರವಲ್ಲ, ಭಾರತದಲ್ಲಿ ಸಹ, ಇದು ಪ್ರಮಾಣಭೂತವಾದದ್ದು ಎಂದು ಕಟ್ಟುನಿಟ್ಟಾಗಿ ಹೇಳಬಹುದಾದ ಒಂದು ಆವೃತ್ತಿಯೂ ಇಲ್ಲ. ಏಕೆಂದರೆ ಸ್ವಲ್ಪ ಹೆಚ್ಚು ಕಡಮೆ ಪ್ರತಿಯೊಂದರಲ್ಲಿಯೂ ವ್ಯಾಖ್ಯಾನಕಾರನು ಭಗವದ್ಗೀತೆಯ ವಾಸ್ತವವಾದ ಅಂತರಾರ್ಥವನ್ನು ಮುಟ್ಟದೆ ಕೇವಲ ತನ್ನ ಅಭಿಪ್ರಾಯಗಳನ್ನಷ್ಟೆ ವ್ಯಕ್ತಪಡಿಸಿದ್ದಾನೆ.

ಭಗವದ್ಗೀತೆಯ ಅಂತರಾರ್ಥವನ್ನು ಭಗವದ್ಗೀತೆಯಲ್ಲಿಯೇ ಹೇಳಿದೆ. ಇದು ಆ ಅಂತರಾರ್ಥ — ನಾವು ಒಂದು ಔಷಧವನ್ನು ಸೇವಿಸಲು ಬಯಸಿದರೆ, ಸೀಸೆಯ ಮೇಲಿನ ಚೀಟಿಯಲ್ಲಿ ಹೇಳಿರುವ ಸೂಚನೆಗಳನ್ನು ಪಾಲಿಸಬೇಕು. ನಮ್ಮ ಖಯಾಲಿಗೆ ಅಥವಾ ಸ್ನೇಹಿತರ ಸೂಚನೆಗೆ

ಅನುಗುಣವಾಗಿ ಔಷಧವನ್ನು ತೆಗೆದುಕೊಳ್ಳಲು ಆಗುವುದಿಲ್ಲ. ಚೀಟಿಯಲ್ಲಿ ಹೇಳಿರುವ ಆದೇಶಗಳಿಗೆ ಅಥವಾ ವೈದ್ಯರೊಬ್ಬರ ಆದೇಶಗಳಿಗೆ ಅನುಗುಣವಾಗಿ ತೆಗೆದುಕೊಳ್ಳಬೇಕು. ಹಾಗೆಯೇ ಭಗವದ್ಗೀತೆಯನ್ನು ಅದರ ವಕ್ತಾರನು ಉಪದೇಶಿಸಿದ ರೀತಿಯಲ್ಲೇ ಸ್ವೀಕರಿಸಬೇಕು. ಭಗವದ್ಗೀತೆಯನ್ನು ಹೇಳಿದಾತ ಶ್ರೀಕೃಷ್ಣ. ಅದರ ಪ್ರತಿಯೊಂದು ಪುಟದಲ್ಲಿಯೂ ಆತನನ್ನು ದೇವೋತ್ತಮ ಪರಮ ಪುರುಷನೆಂದು, **ಭಗವಾನ್** ಎಂದು ವರ್ಣಿಸಿದೆ. ಒಮ್ಮೊಮ್ಮೆ ಭಗವಾನ್ ಎನ್ನುವ ಪದವು ಒಬ್ಬ ಶಕ್ತಿಶಾಲಿಯಾದ ವ್ಯಕ್ತಿಗೆ ಅಥವಾ ಒಬ್ಬ ಪ್ರಬಲ ದೇವತೆಗೆ ಅನ್ವಯಿಸುತ್ತದೆ ಎನ್ನುವುದು ನಿಜವೇ. ಇಲ್ಲಿ ಭಗವಾನ್ ಎನ್ನುವ ಪದವು ಶ್ರೀಕೃಷ್ಣನನ್ನು ಮಹಾ ಪುರುಷನೆಂದು ಹೆಸರಿಸುತ್ತದೆ. ಆದರೆ ಶ್ರೀಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ನಾವು ತಿಳಿಯಬೇಕು. ಇದನ್ನು ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ, ನಿಂಬಾರ್ಕಸ್ವಾಮಿ, ಶ್ರೀ ಚೈತನ್ಯ ಮಹಾಪ್ರಭು ಇವರಂತಹ ಶ್ರೇಷ್ಠ ಆಚಾರ್ಯರುಗಳೂ, ಭಾರತದಲ್ಲಿ ವೈದಿಕ ಜ್ಞಾನದಲ್ಲಿ ಪ್ರಭುತ್ವ ಪಡೆದ ಇತರ ಅನೇಕರೂ ದೃಢಪಡಿಸಿದ್ದಾರೆ. ಭಗವಂತನೇ ಭಗವದ್ಗೀತೆಯಲ್ಲಿ ತನ್ನನ್ನು ದೇವೋತ್ತಮ ಪರಮ ಪುರುಷನೆಂದು ಸ್ಥಾಪಿಸಿಕೊಂಡಿದ್ದಾನೆ. ಬ್ರಹ್ಮಸಂಹಿತೆಯೂ, ಎಲ್ಲ ಪುರಾಣಗಳೂ ಭಾಗವತ ಪುರಾಣ ಎಂದೇ ಪ್ರಸಿದ್ಧವಾಗಿರುವ ಶ್ರೀಮದ್ಭಾಗವತವೂ (**ಕೃಷ್ಣಸ್ತು ಭಗವಾನ್ ಸ್ವಯಂ**) ಆತನನ್ನು ದೇವೋತ್ತಮ ಪರಮ ಪುರುಷನೆಂದೇ ಒಪ್ಪಿಕೊಂಡಿವೆ. ಆದುದರಿಂದ ನಾವು ಭಗವದ್ಗೀತೆಯನ್ನು ಸ್ವಯಂ ಭಗವಂತನೇ ನಿರ್ದೇಶಿಸಿದಂತೆ ಸ್ವೀಕರಿಸಬೇಕು.

ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ (4.1-3) ಭಗವಂತನು ಹೀಗೆ ಹೇಳುತ್ತಾನೆ —

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನ್ ಅಹಂ ಅವ್ಯಯಮ್ |**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ||**

**ಏವಂ ಪರಮ್ಪರಾಪ್ರಾಪ್ತಮ್ ಇಮಂ ರಾಜರ್ಷಯೋ ವಿದುಃ |**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ||**

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ |**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದ ಉತ್ತಮಮ್ ||**

ಇಲ್ಲಿ ಭಗವಂತನು ಅರ್ಜುನನಿಗೆ ಯೋಗ ಪದ್ಧತಿಯ, ಎಂದರೆ ಭಗವದ್ಗೀತೆಯು ಸಾಗಿ ಬಂದ ರೀತಿಯನ್ನು ವಿವರಿಸುತ್ತಾನೆ. ಇದನ್ನು ಮೊದಲು ಸೂರ್ಯದೇವನಿಗೆ ಹೇಳಲಾಯಿತು; ಸೂರ್ಯದೇವನು ಇದನ್ನು ಮನುವಿಗೆ ವಿವರಿಸಿದ; ಮನುವು ಇಕ್ಷ್ವಾಕುವಿಗೆ ವಿವರಿಸಿದ. ಇದೇ ರೀತಿಯಲ್ಲಿ ಗುರುಶಿಷ್ಯ ಪರಂಪರೆಯಲ್ಲಿ ಈ ಯೋಗ ಪದ್ಧತಿಯು ಸಾಗಿಬಂದಿದೆ. ಆದರೆ ಕಾಲಕಳೆದಂತೆ ಇದು ನಷ್ಟವಾಯಿತು. ಪರಿಣಾಮವಾಗಿ ಭಗವಂತನು ಇದನ್ನು ಮತ್ತೆ ಹೇಳಬೇಕಾಯಿತು; ಈ ಬಾರಿ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಅವನು ಇದನ್ನು ಅರ್ಜುನನಿಗೆ ಉಪದೇಶಿಸಿದ.

ಅರ್ಜುನನು ತನ್ನ ಭಕ್ತನೂ, ಸ್ನೇಹಿತನೂ ಆದದ್ದರಿಂದ ಈ ಪರಮ ರಹಸ್ಯವನ್ನು ಅವನಿಗೆ ತಿಳಿಸುತ್ತಿರುವುದಾಗಿ ಭಗವಂತನು ಅರ್ಜುನನಿಗೆ ಹೇಳುತ್ತಾನೆ. ಇದರ ಇಂಗಿತಾರ್ಥವೆಂದರೆ ಭಗವದ್ಗೀತೆಯು ಭಗವಂತನ ಭಕ್ತರಿಗಾಗಿಯೇ ವಿಶೇಷವಾಗಿ ರಚಿತವಾದ ಶಾಸ್ತ್ರ. ಅಧ್ಯಾತ್ಮವಾದಿಗಳಲ್ಲಿ ಮೂರು ವರ್ಗಗಳು — ಜ್ಞಾನಿ, ಯೋಗಿ ಮತ್ತು ಭಕ್ತ. ಇಲ್ಲಿ ಭಗವಂತನು

ಹಿಂದಿನ ಪರಂಪರೆಯು ನಷ್ಟವಾದದ್ದರಿಂದ ತಾನು ಅರ್ಜುನನನ್ನು ಹೊಸ ಪರಂಪರೆಯ ಮೊದಲನೆಯ ಶಿಷ್ಯನನ್ನಾಗಿ ಆರಿಸಿಕೊಂಡಿರುವುದಾಗಿ ಸ್ಪಷ್ಟವಾಗಿ ಹೇಳುತ್ತಾನೆ. ಸೂರ್ಯದೇವನಿಂದ ಇತರರಿಗೆ ಸಾಗಿ ಬರುತ್ತಿದ್ದ ಚಿಂತನ ಮಾರ್ಗದಲ್ಲಿ ಇನ್ನೊಂದು ಪರಂಪರೆಯನ್ನು ಸ್ಥಾಪಿಸುವುದು ಭಗವಂತನ ಇಚ್ಛೆಯಾಗಿತ್ತು. ಅರ್ಜುನನು ಮತ್ತೆ ಹೊಸದಾಗಿ ತನ್ನ ಉಪದೇಶದ ಪ್ರಸಾರ ಮಾಡಬೇಕು ಎಂದೂ ಅವನ ಅಪೇಕ್ಷೆಯಾಗಿತ್ತು. ಭಗವದ್ಗೀತೆಯ ತಿಳುವಳಿಕೆಯಲ್ಲಿ ಅರ್ಜುನನು ಅಧಿಕಾರಿಯಾಗಬೇಕೆಂದು ಆತನ ಇಚ್ಛೆಯಾಗಿತ್ತು. ಅರ್ಜುನನು ಭಗವಂತನ ಭಕ್ತನಾಗಿದ್ದ. ಕೃಷ್ಣನ ನೇರವಾದ ಶಿಷ್ಯನಾಗಿದ್ದ ಮತ್ತು ಅವನ ಆತ್ಮೀಯ ಗೆಳೆಯನಾಗಿದ್ದ. ಈ ವಿಶೇಷ ಕಾರಣಕ್ಕಾಗಿ ಅರ್ಜುನನಿಗೆ ಭಗವದ್ಗೀತೆಯ ಉಪದೇಶವಾಯಿತು ಎನ್ನುವುದನ್ನು ನೋಡುತ್ತೇವೆ. ಆದುದರಿಂದ ಅರ್ಜುನನ ಗುಣಗಳನ್ನು ಹೋಲುವ ಗುಣಗಳನ್ನು ಹೊಂದಿರುವವನೇ ಭಗವದ್ಗೀತೆಯನ್ನು ಅತ್ಯಂತ ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ. ಎಂದರೆ ಆತನು ಭಗವಂತನೊಡನೆ ನೇರ ಸಂಬಂಧವನ್ನು ಪಡೆದ ಭಕ್ತನಾಗಿರಬೇಕು. ಯಾವುದೇ ಮನುಷ್ಯನು ಭಗವಂತನ ಭಕ್ತನಾಗುತ್ತಲೇ ಆತನಿಗೆ ಭಗವಂತನೊಡನೆ ನೇರವಾದ ಸಂಬಂಧವಾಗುತ್ತದೆ. ಇದು ಬಹು ವಿಸ್ತಾರವಾದ ವಿಷಯ. ಇದನ್ನು ಸಂಗ್ರಹವಾಗಿ ಹೀಗೆ ಹೇಳಬಹುದು — ಭಕ್ತನು ದೇವೋತ್ತಮ ಪರಮ ಪುರುಷನೊಡನೆ ಐದು ರೀತಿಗಳಲ್ಲಿ ಯಾವುದಾದರೊಂದು ಬಗೆಯಲ್ಲಿ ಸಂಬಂಧವನ್ನು ಪಡೆಯಬಹುದು.

1. ನಿಷ್ಕ್ರಿಯ ಸ್ಥಿತಿಯಲ್ಲಿ ಭಕ್ತನಾಗಿರಬಹುದು.
2. ಕ್ರಿಯಾಶೀಲ ರೀತಿಯಲ್ಲಿ ಭಕ್ತನಾಗಿರಬಹುದು.
3. ಗೆಳೆಯನಾಗಿ ಭಕ್ತನಾಗಿರಬಹುದು.
4. ತಂದೆ ಅಥವಾ ತಾಯಿಯಾಗಿ ಭಕ್ತನಾಗಿರಬಹುದು.
5. ಮಧುರ ಪ್ರೇಮಿಯಾಗಿ ಭಕ್ತನಾಗಿರಬಹುದು.

ಅರ್ಜುನನು ಕೃಷ್ಣನೊಂದಿಗೆ ಗೆಳೆತನದ ಸಂಬಂಧವನ್ನು ಹೊಂದಿದ್ದ ನಿಜ. ಈ ಗೆಳೆತನಕ್ಕೂ ಪ್ರಾಪಂಚಿಕ ಜಗತ್ತಿನಲ್ಲಿ ಕಾಣುವ ಗೆಳೆತನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಇದು ಅಲೌಕಿಕ ಸ್ನೇಹ. ಎಲ್ಲರಿಗೂ ಲಭ್ಯವಾಗುವಂತಹುದಲ್ಲ, ನಿಜ. ಪ್ರತಿಯೊಬ್ಬನೂ ಭಗವಂತನೊಡನೆ ಒಂದು ವಿಶಿಷ್ಟ ಸಂಬಂಧವನ್ನು ಹೊಂದಿರುತ್ತಾನೆ. ಭಕ್ತಿಸೇವೆಯ ಪರಿಪೂರ್ಣತೆಯು ಈ ಸಂಬಂಧವನ್ನು ಪ್ರಚೋದಿಸುತ್ತದೆ. ನಮ್ಮ ಬದುಕಿನ ಇಂದಿನ ಸ್ಥಿತಿಯಲ್ಲಿ ನಾವು ಭಗವಂತನನ್ನು ಮರೆತಿದ್ದೇವೆ. ಅಷ್ಟೇ ಅಲ್ಲ, ಭಗವಂತನೊಡನೆ ನಮ್ಮ ನಿರಂತರವಾದ ಸಂಬಂಧವನ್ನೂ ಮರೆತಿದ್ದೇವೆ. ಕೋಟ್ಯನುಕೋಟಿ ಜೀವಿಗಳಲ್ಲಿ ಪ್ರತಿಯೊಂದು ಜೀವಿಗೂ ಭಗವಂತನೊಡನೆ ಒಂದು ನಿರಂತರವಾದ ವಿಶಿಷ್ಟ ಸಂಬಂಧವಿರುತ್ತದೆ. ಇದಕ್ಕೆ **ಸ್ವರೂಪ** ಎಂದು ಹೆಸರು. ಭಕ್ತಿಸೇವೆಯಿಂದ ಸ್ವರೂಪವನ್ನು ಮತ್ತೆ ಪಡೆಯಬಹುದು. ಈ ಘಟ್ಟಕ್ಕೆ **ಸ್ವರೂಪಸಿದ್ಧಿ** ಎಂದು ಹೆಸರು. ಅರ್ಜುನನು ಭಕ್ತನಾಗಿದ್ದ. ಭಗವಂತನೊಂದಿಗೆ ಸಖ್ಯಸಂಬಂಧವನ್ನು ಹೊಂದಿದ್ದ.

ಅರ್ಜುನನು ಭಗವದ್ಗೀತೆಯನ್ನು ಹೇಗೆ ಸ್ವೀಕರಿಸಿದ ಎನ್ನುವುದನ್ನು ಗಮನಿಸಬೇಕು. ಅದನ್ನು ಹತ್ತನೆಯ ಅಧ್ಯಾಯದಲ್ಲಿ ಹೇಳಿದೆ. (10.12-14) —

**ಅರ್ಜುನ ಉವಾಚ**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ |**
**ಪುರುಷಂ ಶಾಶ್ವತಂ ದಿವ್ಯಂ ಆದಿ-ದೇವಂ ಅಜಂ ವಿಭುಮ್ ||**

**ಆಹುಸ್ತ್ವಾಮ್ ಋಷಯಃ ಸರ್ವೇ ದೇವರ್ಶಿರ್ ನಾರದಸ್ ತಥಾ |**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ||**

**ಸರ್ವಮ್ ಏತದೃತಂ ಮನ್ಯೇ ಯನ್ಮಾಂ ವದಸಿ ಕೇಶವ |**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್-ದೇವಾ ನ ದಾನವಾಃ ||**

ಅರ್ಜುನನು ಹೇಳಿದ — "ನೀನು ದೇವೋತ್ತಮ ಪರಮ ಪುರುಷ, ಪರಂಧಾಮ, ಪವಿತ್ರ, ಪರಿಪೂರ್ಣ ಸತ್ಯ. ನೀನು ನಿತ್ಯನು, ದಿವ್ಯನು, ಆದಿಪುರುಷನು. ನಿನಗೆ ಹುಟ್ಟಿಲ್ಲ; ನೀನೇ ಅತ್ಯಂತ ಶ್ರೇಷ್ಠನು. ನಾರದ, ಅಸಿತ, ದೇವಲ ಮತ್ತು ವ್ಯಾಸರಂತಹ ಮಹರ್ಷಿಗಳು ನಿನ್ನ ವಿಷಯದಲ್ಲಿ ಈ ಸತ್ಯವನ್ನು ದೃಢಪಡಿಸುತ್ತಾರೆ. ಈಗ ನೀನೇ ಇದನ್ನು ನನಗೆ ಹೇಳುತ್ತಿದ್ದೀಯೆ. ಕೃಷ್ಣ, ನೀನು ನನಗೆ ಹೇಳುವುದನ್ನೆಲ್ಲ ಸತ್ಯವೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಪ್ರಭುವೇ, ದೇವತೆಗಳಾಗಲಿ ದಾನವರಾಗಲಿ ನಿನ್ನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲಾರರು."

ದೇವೋತ್ತಮ ಪರಮ ಪುರುಷನಿಂದ ಭಗವದ್ಗೀತೆಯನ್ನು ಆಲಿಸಿದನಂತರ ಅರ್ಜುನನು ಕೃಷ್ಣನನ್ನು **ಪರಂ ಬ್ರಹ್ಮ** ಎಂದು ಸ್ವೀಕರಿಸಿದನು. ಪ್ರತಿಯೊಂದು ಜೀವಿಯೂ ಬ್ರಹ್ಮನ್ ಆದರೆ ದೇವೋತ್ತಮ ಪರಮಪುರುಷನು ಪರಬ್ರಹ್ಮನು. **ಪರಂ ಧಾಮ** ಎಂದರೆ ಅವನು ಎಲ್ಲದರ ಕಟ್ಟಕಡೆಯ ಆಶ್ರಯ; **ಪವಿತ್ರಮ್** ಎಂದರೆ ಆತನು ಪರಿಶುದ್ಧ, ಐಹಿಕದ ಸೋಂಕಿಲ್ಲದವನು; **ಪುರುಷಮ್** ಎಂದರೆ ಪರಮ ಭೋಕ್ತಾರನು; **ಶಾಶ್ವತಮ್** ಎಂದರೆ ಮೂಲನಾದವನು; **ದಿವ್ಯಮ್** ಎಂದರೆ ಅಲೌಕಿಕನಾದವನು; **ಆದಿ ದೇವಮ್** ಎಂದರೆ ದೇವೋತ್ತಮ ಪರಮ ಪುರುಷ; **ಅಜಮ್** ಎಂದರೆ ಜನನವಿಲ್ಲದವನು; **ವಿಭುಮ್** ಎಂದರೆ ಸರ್ವೋತ್ತಮನು.

ಕೃಷ್ಣನು ಅರ್ಜುನನ ಗೆಳೆಯನಾದದ್ದರಿಂದ ಅರ್ಜುನನು ಅವನನ್ನು ಹೊಗಳಲು ಇದನ್ನೆಲ್ಲ ಹೇಳಿದ ಎಂದು ಯಾರಾದರೂ ಭಾವಿಸಬಹುದು. ಆದರೆ, ಭಗವದ್ಗೀತೆಯನ್ನು ಓದುವವರ ಮನಸ್ಸಿನಲ್ಲಿ ಮೂಡಬಹುದಾದ ಈ ಬಗೆಯ ಸಂದೇಹವನ್ನು ಹೊಡೆದೋಡಿಸಲು ಅರ್ಜುನ ಈ ಪ್ರಶಂಸೆಯನ್ನು ಮುಂದಿನ ಶ್ಲೋಕದಲ್ಲಿ ಸಮರ್ಥಿಸಿಕೊಳ್ಳುತ್ತಾನೆ. ಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ತಾನು ಮಾತ್ರವಲ್ಲದೆ ನಾರದ, ಅಸಿತ, ದೇವಲ ಮತ್ತು ವ್ಯಾಸದೇವರಂತಹ ಅಧಿಕೃತರೂ ಒಪ್ಪುತ್ತಾರೆ ಎಂದು ಹೇಳುತ್ತಾನೆ. ಇವರು, ಎಲ್ಲ ಆಚಾರ್ಯರು ಸ್ವೀಕರಿಸಿದ ರೀತಿಯಲ್ಲಿ ವೈದಿಕ ಜ್ಞಾನವನ್ನು ಹಂಚಿಕೊಡುವ ಮಹಾನ್ ವ್ಯಕ್ತಿಗಳು. ಆದುದರಿಂದ ಅರ್ಜುನನು ಕೃಷ್ಣನಿಗೆ ಆತನು (ಕೃಷ್ಣನು ) ಹೇಳಿದುದೆಲ್ಲ ಪರಿಪೂರ್ಣ ಎಂದು ತಾನು ಸ್ವೀಕರಿಸುವುದಾಗಿ ಹೇಳುತ್ತಾನೆ. **ಸರ್ವಮ್ ಏತದೃತಂ ಮನ್ಯೇ** — "ನೀನು ಹೇಳುವುದನ್ನೆಲ್ಲ ನಾನು ಸತ್ಯವೆಂದು ಸ್ವೀಕರಿಸುತ್ತೇನೆ." ಭಗವಂತನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ. ಮಹಾನ್ ದೇವತೆಗಳೂ ಸಹ ಅವನನ್ನು ತಿಳಿಯಲಾರರು ಎಂದು ಅರ್ಜುನನು ಹೇಳುತ್ತಾನೆ. ಮನುಷ್ಯನಿಗಿಂತ ಶ್ರೇಷ್ಠರಾದವರು ಸಹ ಭಗವಂತನನ್ನು ತಿಳಿಯಲಾರರು ಎಂದು ಇದರ ಅರ್ಥ. ಹಾಗಿರುವಾಗ ಮನುಷ್ಯ ಮಾತ್ರನಾದವನು

ಭಗವಾನ್ ಶ್ರೀಕೃಷ್ಣನ ಭಕ್ತನಾಗದೆ ಅವನನ್ನು ಅರ್ಥಮಾಡಿಕೊಳ್ಳಲು ಹೇಗೆ ಸಾಧ್ಯ?

ಆದುದರಿಂದ ಭಗವದ್ಗೀತೆಯನ್ನು ಭಕ್ತಿಭಾವದಿಂದ ಸ್ವೀಕರಿಸಬೇಕು. ಯಾರೇ ಆಗಲಿ ತಾನು ಶ್ರೀಕೃಷ್ಣನಿಗೆ ಸಮಾನ ಎಂದಾಗಲೀ ಅಥವಾ ಕೃಷ್ಣನು ಸಾಮಾನ್ಯವ್ಯಕ್ತಿ ಎಂದಾಗಲೀ ಅಥವಾ ಕೃಷ್ಣನು ಬಹು ಶ್ರೇಷ್ಠವ್ಯಕ್ತಿ ಎಂದಾಗಲೀ ಯೋಚಿಸಬಾರದು. ಭಗವಾನ್ ಶ್ರೀಕೃಷ್ಣನು ದೇವೋತ್ತಮ ಪರಮ ಪುರುಷನು. ಭಗವದ್ಗೀತೆಯಲ್ಲಿ ಹೇಳಿರುವಂತೆ ಅಥವಾ ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವ ಅರ್ಜುನನು ಹೇಳುವಂತೆ ನಾವು ತಾತ್ವಿಕವಾಗಿಯಾದರೂ ಶ್ರೀಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ಅಂಗೀಕರಿಸಬೇಕು. ಆ ವಿನೀತಭಾವದಿಂದ ಮಾತ್ರ ನಾವು ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳಬಹುದು. ಭಗವದ್ಗೀತೆಯನ್ನು ವಿನಯಭಾವದಿಂದ ಓದದಿದ್ದರೆ ಅದನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಏಕೆಂದರೆ ಅದೊಂದು ಮಹಾ ರಹಸ್ಯ.

ಭಗವದ್ಗೀತೆ ಎಂದರೇನು? ಭಗವದ್ಗೀತೆಯ ಗುರಿಯು ಮಾನವ ಕುಲವನ್ನು ಐಹಿಕ ಅಸ್ತಿತ್ವದ ಅಜ್ಞಾನದಿಂದ ಉದ್ಧರಿಸುವುದು. ಕುರುಕ್ಷೇತ್ರ ಯುದ್ಧದಲ್ಲಿ ಹೋರಾಡಬೇಕಾಗಿ ಬಂದು ಅರ್ಜುನನು ಕಷ್ಟದಲ್ಲಿದ್ದಂತೆ ಪ್ರತಿಯೊಬ್ಬನೂ ಹಲವಾರು ಬಗೆಯ ಕಷ್ಟದಲ್ಲಿರುತ್ತಾನೆ. ಅರ್ಜುನನು ಕೃಷ್ಣನಿಗೆ ಶರಣಾಗತನಾದನು. ಇದರಿಂದಾಗಿ ಗೀತೆಯ ಉಪದೇಶವಾಯಿತು. ಅರ್ಜುನನು ಮಾತ್ರವೇ ಅಲ್ಲ, ನಮ್ಮಲ್ಲಿ ಪ್ರತಿಯೊಬ್ಬನೂ ಐಹಿಕ ಅಸ್ತಿತ್ವದಿಂದಾಗಿ ಆತಂಕದಿಂದ ತುಂಬಿಹೋಗಿರುತ್ತಾನೆ. ನಮ್ಮ ಅಸ್ತಿತ್ವವೇ ಅಸ್ತಿತ್ವರಹಿತ ವಾತಾವರಣದಲ್ಲಿದೆ. ವಾಸ್ತವವಾಗಿ ಅಸ್ತಿತ್ವರಾಹಿತ್ಯದ ಭಯ ನಮಗಿರಬಾರದು. ನಮ್ಮ ಅಸ್ತಿತ್ವವು ನಿತ್ಯವಾದದ್ದು. ಆದರೆ ಹೇಗೋ ಏನೋ ನಾವು **ಅಸತ್ತಿ**ನಲ್ಲಿ ಸಿಕ್ಕಿಕೊಂಡಿದ್ದೇವೆ. ಅಸತ್ ಎಂದರೆ ಯಾವುದು ಅಸ್ತಿತ್ವದಲ್ಲಿಲ್ಲವೋ ಅದು.

ಕಷ್ಟದಲ್ಲಿರುವ ಅಸಂಖ್ಯಾತ ಮನುಷ್ಯರಲ್ಲಿ ತಮ್ಮ ಸ್ಥಿತಿಯನ್ನು ಕುರಿತು ಪ್ರಶ್ನಿಸುವವರು ಕೆಲವರಿದ್ದಾರೆ; ತಾವು ಯಾರು, ತಾವು ಈ ತೊಡಕಿನ ಸ್ಥಿತಿಯಲ್ಲಿರುವುದಕ್ಕೆ ಕಾರಣವೇನು ಮುಂತಾಗಿ ಕೇಳಿಕೊಳ್ಳುತ್ತಾರೆ. ವ್ಯಕ್ತಿಯು ಸಂಕಟವನ್ನು ಕುರಿತು ಪ್ರಶ್ನೆ ಮಾಡುವ ಈ ಸ್ಥಿತಿಗೆ ಬರದಿದ್ದರೆ, ಸಂಕಟ ಬೇಡ, ಆದರೆ ಎಲ್ಲ ಸಂಕಟಕ್ಕೆ ಪರಿಹಾರ ಬೇಕು ಎಂಬುದನ್ನು ಅರಿತುಕೊಳ್ಳದಿದ್ದರೆ, ಅವನನ್ನು ಪರಿಪೂರ್ಣ ಮನುಷ್ಯ ಎಂದು ಪರಿಗಣಿಸಲಾಗುವುದಿಲ್ಲ. ಇಂತಹ ಪ್ರಶ್ನೆಯು ಮನಸ್ಸಿನಲ್ಲಿ ಜಾಗ್ರತವಾದಾಗ ಮಾನವಕುಲ ಪ್ರಾರಂಭವಾಗುತ್ತದೆ. ಬ್ರಹ್ಮಸೂತ್ರದಲ್ಲಿ ಈ ಪ್ರಶ್ನೆಯ ಪ್ರಕ್ರಿಯೆಯನ್ನು **ಬ್ರಹ್ಮಜಿಜ್ಞಾಸಾ** ಎಂದು ಕರೆದಿದ್ದಾರೆ. **ಅಥಾತೋ ಬ್ರಹ್ಮಜಿಜ್ಞಾಸಾ.** ಪರಾತ್ಪರದ ಸ್ವರೂಪವನ್ನು ಕುರಿತು ಮನುಷ್ಯನು ಪ್ರಶ್ನೆ ಮಾಡದಿದ್ದರೆ ಅವನ ಎಲ್ಲ ಬಗೆಯ ಕ್ರಿಯೆಗಳನ್ನೂ ವಿಫಲವೆಂದೇ ಭಾವಿಸಬೇಕಾಗುತ್ತದೆ. ಆದುದರಿಂದ, ತಾವು ಸಂಕಟಕ್ಕೆ ಒಳಗಾಗುವುದೇಕೆ, ತಾವು ಎಲ್ಲಿಂದ ಬಂದಿದ್ದೇವೆ, ಸತ್ತನಂತರ ತಾವು ಹೋಗುವುದೆಲ್ಲಿಗೆ ಎಂದೆಲ್ಲ ಪ್ರಶ್ನಿಸುವವರು ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳಬಲ್ಲ ಯೋಗ್ಯ ವಿದ್ಯಾರ್ಥಿಗಳು. ಪ್ರಾಮಾಣಿಕ ವಿದ್ಯಾರ್ಥಿಗೆ ದೇವೋತ್ತಮ ಪರಮ ಪುರುಷನಲ್ಲಿ ದೃಢವಾದ ಗೌರವ ಇರಬೇಕು. ಅರ್ಜುನನು ಇಂತಹ ವಿದ್ಯಾರ್ಥಿ.

ಮನುಷ್ಯನು ಬದುಕಿನ ನಿಜವಾದ ಉದ್ದೇಶವನ್ನು ಮರೆತಾಗ ಅದನ್ನು ಮತ್ತೆ ಸ್ಥಾಪಿಸುವ

ಸ್ಪಷ್ಟ ಕಾರಣಕ್ಕಾಗಿಯೇ ಕೃಷ್ಣನು ಇಳಿದುಬರುತ್ತಾನೆ. ಆಗಲೂ ಸಹ ಜಾಗೃತರಾಗುವ ಅಸಂಖ್ಯಾತ ಮನುಷ್ಯರಲ್ಲಿ ತನ್ನ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಮನೋಧರ್ಮದವನು ಒಬ್ಬನಿರಬಹುದು. ಭಗವದ್ಗೀತೆಯನ್ನು ಹೇಳಿರುವುದು ಅವನಿಗಾಗಿ. ವಾಸ್ತವವಾಗಿ ಅಜ್ಞಾನದ ವ್ಯಾಘ್ರಿಣಿ ನಮ್ಮನ್ನೆಲ್ಲ ನುಂಗಿಹಾಕಿದ್ದಾಳೆ. ಆದರೆ ಭಗವಂತನಿಗೆ ಜೀವಿಗಳಲ್ಲಿ, ಅದರಲ್ಲಿಯೂ ಮನುಷ್ಯರಲ್ಲಿ ಅಪಾರಕರುಣೆ. ಈ ಉದ್ದೇಶದಿಂದಲೇ ಭಗವಂತನ ಗೆಳೆಯನಾದ ಅರ್ಜುನನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡು ಭಗವದ್ಗೀತೆಯನ್ನು ಬೋಧಿಸಿದ.

ಶ್ರೀಕೃಷ್ಣನ ಸಂಗಾತಿಯಾಗಿ ಅರ್ಜುನನು ಎಲ್ಲ ಅಜ್ಞಾನವನ್ನೂ ಮೀರಿದ್ದವನು. ಆದರೆ ಕುರುಕ್ಷೇತ್ರದ ರಣಭೂಮಿಯಲ್ಲಿ ಆತನಿಗೆ ಅಜ್ಞಾನ ಕವಿಯಿತು. ಮುಂದಿನ ಪೀಳಿಗೆಗಳ ಮನುಷ್ಯರ ಒಳಿತಿಗಾಗಿ ಮತ್ತು ಅವರು ಬದುಕಿನ ಯೋಜನೆಯನ್ನು ರೂಪಿಸಿಕೊಳ್ಳಲಿಕ್ಕಾಗಿ ಶ್ರೀಕೃಷ್ಣನು ಬದುಕಿನ ಸಮಸ್ಯೆಗಳನ್ನು ಕುರಿತು ವಿವರಿಸಲೆಂದು ಅರ್ಜುನನು ಅವನನ್ನು ಪ್ರಶ್ನಿಸುವುದೇ ಇದರ ಉದ್ದೇಶವಾಗಿತ್ತು. ಆಗ ಜನರು ಅದರಂತೆಯೇ ನಡೆದು ಮಾನವ ಜೀವನದ ಧ್ಯೇಯವನ್ನು ಪರಿಪೂರ್ಣಗೊಳಿಸಿಕೊಳ್ಳಬಹುದು.

ಭಗವದ್ಗೀತೆಯ ವಸ್ತುವು ಐದು ಮೂಲ ಸತ್ಯಗಳ ಅರಿವನ್ನು ಒಳಗೊಳ್ಳುತ್ತದೆ. ಮೊದಲನೆಯದಾಗಿ ಭಗವದ್ ವಿಜ್ಞಾನವನ್ನು ವಿವರಿಸಿ ಅನಂತರ ಜೀವಿಗಳ ಸಹಜ ಸ್ವರೂಪವನ್ನು ವಿವರಿಸಿದೆ. ಸರ್ವನಿಯಾಮಕನಾದ ಈಶ್ವರನಿದ್ದಾನೆ; ನಿಯಮಕ್ಕೊಳಗಾಗುವ ಜೀವಿಗಳಿದ್ದಾರೆ. ತಾನು ನಿಯಮಕ್ಕೊಳಪಟ್ಟಿಲ್ಲ, ಸ್ವತಂತ್ರನು ಎಂದು ಯಾವ ಜೀವಿಯಾದರೂ ಹೇಳಿದರೆ ಅವನು ಹುಚ್ಚನೇ ಸರಿ. ಜೀವಿಯ ಬದ್ಧಬದುಕಿನಲ್ಲಂತೂ ಆತನು ಎಲ್ಲ ರೀತಿಗಳಲ್ಲೂ ನಿಯಂತ್ರಣಕ್ಕೊಳಪಟ್ಟಿರುತ್ತಾನೆ. ಭಗವದ್ಗೀತೆಯ ವಸ್ತು ಪರಮ ನಿಯಾಮಕನಾದ **ಈಶ್ವರ** ಮತ್ತು ನಿಯಮಕ್ಕೊಳಪಟ್ಟ **ಜೀವಿಗಳು, ಪ್ರಕೃತಿ** (ಐಹಿಕ ನಿಸರ್ಗ) ಮತ್ತು **ಕಾಲ** (ಇಡೀ ವಿಶ್ವದ ಅಸ್ತಿತ್ವದ ಅಥವಾ ಐಹಿಕ ನಿಸರ್ಗದ ಕಾಲಾವಧಿ) ಮತ್ತು **ಕರ್ಮ** ಇವುಗಳನ್ನು ಚರ್ಚಿಸಲಾಗಿದೆ. ವಿಶ್ವಸೃಷ್ಟಿಯು ವಿಧವಿಧವಾದ ಕರ್ಮಗಳಿಂದ ತುಂಬಿದೆ. ಎಲ್ಲ ಜೀವಿಗಳು ವಿವಿಧ ಕರ್ಮಗಳಲ್ಲಿ ತೊಡಗಿದ್ದಾರೆ. ದೇವರು ಎಂದರೇನು? ಜೀವಾತ್ಮರು ಯಾರು, ಪ್ರಕೃತಿ ಎಂದರೇನು, ವಿಶ್ವಸೃಷ್ಟಿ ಎಂದರೇನು, ಅದನ್ನು ಕಾಲವು ಹೇಗೆ ನಿಯಂತ್ರಿಸುತ್ತದೆ ಮತ್ತು ಜೀವಿಗಳ ಕರ್ಮಗಳು ಯಾವುವು ಎಂದು ಭಗವದ್ಗೀತೆಯಿಂದ ನಾವು ಕಲಿಯಬೇಕು.

ಭಗವದ್ಗೀತೆಯ ಐದು ಮೂಲ ವಿಷಯಗಳಲ್ಲಿ, ಪರಮ ಪುರುಷನು ಅಥವಾ ಕೃಷ್ಣನು ಅಥವಾ ಬ್ರಹ್ಮನ್ ಅಥವಾ ಪರಮ ನಿಯಾಮಕನು ಅಥವಾ ಪರಮಾತ್ಮನು — ನೀವು ಯಾವ ಹೆಸರನ್ನಾದರೂ ಬಳಸಬಹುದು — ಪರಮ ಶ್ರೇಷ್ಠನು ಎಂದು ಸಿದ್ಧವಾಗಿದೆ. ಜೀವಿಗಳು ಗುಣದಲ್ಲಿ ಪರಮ ನಿಯಾಮಕನನ್ನು ಹೋಲುತ್ತಾರೆ. ಉದಾಹರಣೆಗೆ, ಭಗವದ್ಗೀತೆಯ ಮುಂದಿನ ಅಧ್ಯಾಯಗಳಲ್ಲಿ ವಿವರಿಸುವಂತೆ, ಭಗವಂತನಿಗೆ ಐಹಿಕ ನಿಸರ್ಗದ ಎಲ್ಲ ಕ್ರಿಯೆಗಳ ಮೇಲೆ ನಿಯಂತ್ರಣವಿದೆ. ಐಹಿಕ ನಿಸರ್ಗವು ಸ್ವತಂತ್ರವಲ್ಲ. ಪ್ರಕೃತಿ ದೇವಿಯು ಭಗವಂತನ ನಿರ್ದೇಶನಕ್ಕೆ ವಿಧೇಯಳು. ಶ್ರೀಕೃಷ್ಣನು ಹೇಳುವಂತೆ, **ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸ-ಚರಾಚರಮ್** "ಈ ಐಹಿಕ ಪ್ರಕೃತಿಯು ನನ್ನ ಮಾರ್ಗದರ್ಶನದಲ್ಲಿ ಕೆಲಸ ಮಾಡುತ್ತದೆ." ವಿಶ್ವದಲ್ಲಿ ಅನೇಕ ಅದ್ಭುತಗಳು ಜರುಗಿದಾಗ ಈ ವಿಶ್ವಸೃಷ್ಟಿಯ ಹಿಂದೆ ನಿಯಾಮಕನೊಬ್ಬನಿದ್ದಾನೆ ಎಂದು ನಾವು

ತಿಳಿಯಬೇಕು. ನಿಯಂತ್ರಣವಿಲ್ಲದೆ ಅಭಿವ್ಯಕ್ತಿಯೇ ಇಲ್ಲ. ನಿಯಾಮಕನನ್ನು ಕುರಿತು ಯೋಚನೆ ಮಾಡದಿರುವುದು ಬಾಲಿಶ. ಉದಾಹರಣೆಗೆ ಕುದುರೆಯಾಗಲಿ, ಬೇರೆ ಯಾವುದೇ ಪ್ರಾಣಿಯಾಗಲಿ ಎಳೆಯದಿದ್ದರೂ ಓಡುವ ಸ್ವಯಂ ಚಾಲಿತ ವಾಹನವು ಅದ್ಭುತವಾದದ್ದು ಎಂದು ಮಗುವು ಯೋಚಿಸಬಹುದು. ಆದರೆ ಬುದ್ಧಿ ಸರಿಯಾಗಿರುವ ಮನುಷ್ಯನಿಗೆ ಸ್ವಯಂಚಾಲಿತ ವಾಹನದ ಯಂತ್ರಶಿಲ್ಪದ ಜೋಡಣೆ ಅರ್ಥವಾಗುತ್ತದೆ. ಈ ಯಂತ್ರವ್ಯವಸ್ಥೆಯ ಹಿಂದೆ ಒಬ್ಬ ಮನುಷ್ಯ, ಒಬ್ಬ ಚಾಲಕ ಇದ್ದಾನೆ ಎಂದು ಅವನಿಗೆ ಯಾವಾಗಲೂ ಗೊತ್ತು. ಇದೇ ರೀತಿಯಲ್ಲಿ ಭಗವಂತನು ಚಾಲಕ, ಎಲ್ಲವೂ ಅವನ ನಿರ್ದೇಶನದಂತೆ ನಡೆಯುತ್ತದೆ. ಮುಂದಿನ ಅಧ್ಯಾಯಗಳಲ್ಲಿ ನಾವು ತಿಳಿಯುವಂತೆ ಭಗವಂತನು ಜೀವಿಗಳನ್ನು ತನ್ನ ವಿಭಿನ್ನಾಂಶವೆಂದು ಸ್ವೀಕರಿಸಿದ್ದಾನೆ. ಚಿನ್ನದ ಒಂದು ಕಣವೂ ಚಿನ್ನವೇ. ಸಮುದ್ರದ ಒಂದು ಹನಿ ನೀರೂ ಉಪ್ಪಾಗಿರುತ್ತದೆ. ಇದೇ ರೀತಿಯಲ್ಲಿ ಪರಮ ನಿಯಾಮಕನಾದ ಈಶ್ವರನ ಅಥವಾ ಭಗವಂತನ, ಶ್ರೀಕೃಷ್ಣನ ವಿಭಿನ್ನಾಂಶವಾಗಿರುವ ನಾವು ಬಹುಸಣ್ಣ ಈಶ್ವರರು, ಅಧೀನ ಈಶ್ವರರು. ಆದುದರಿಂದ ಪರಮ ಪ್ರಭುವಿನ ಎಲ್ಲ ಗುಣಗಳೂ ಬಹು ಅಲ್ಪಪ್ರಮಾಣದಲ್ಲಿ ನಮ್ಮಲ್ಲಿವೆ. ನಾವು ಈಗ ಬಾಹ್ಯಾಕಾಶವನ್ನು ಅಥವಾ ಗ್ರಹಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿರುವಂತೆ ಪ್ರಕೃತಿಯನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದ್ದೇವೆ. ನಿಯಂತ್ರಿಸುವ ಈ ಪ್ರವೃತ್ತಿ ಇರುವುದಕ್ಕೆ ಕಾರಣ ಅದು ಶ್ರೀಕೃಷ್ಣನಲ್ಲಿಯೂ ಇರುವುದು. ಆದರೆ ಐಹಿಕ ಪ್ರಕೃತಿಯ ಮೇಲೆ ಪ್ರಭುತ್ವ ಸಾಧಿಸುವ ಪ್ರವೃತ್ತಿಯು ನಮ್ಮಲ್ಲಿದ್ದರೂ ನಾವೇ ಪರಮ ನಿಯಾಮಕರಲ್ಲ ಎನ್ನುವುದನ್ನು ನಾವು ತಿಳಿದುಕೊಳ್ಳಬೇಕು. ಇದನ್ನು ಭಗವದ್ಗೀತೆಯಲ್ಲಿ ವಿವರಿಸಲಾಗಿದೆ.

ಭೌತಿಕ ಪ್ರಕೃತಿ ಎಂದರೇನು? ಇದನ್ನು ಭಗವದ್ಗೀತೆಯಲ್ಲಿ **ಅಪರಾ ಪ್ರಕೃತಿ** ಎಂದು ವಿವರಿಸಿದೆ. ಜೀವಿಯನ್ನು **ಪರಾ ಪ್ರಕೃತಿ** ಎಂದು ಕರೆದಿದೆ. ಪರಾಪ್ರಕೃತಿಯಾಗಲೀ ಅಪರಾಪ್ರಕೃತಿಯಾಗಲೀ ಪ್ರಕೃತಿಯು ಯಾವಾಗಲೂ ನಿಯಂತ್ರಣದಲ್ಲಿರುತ್ತದೆ. ಪ್ರಕೃತಿ ಹೆಣ್ಣು. ಹೆಂಡತಿಯ ಚಟುವಟಿಕೆಗಳನ್ನು ಗಂಡನು ನಿಯಂತ್ರಿಸುವಂತೆ ಭಗವಂತನು ಪ್ರಕೃತಿಯನ್ನು ನಿಯಂತ್ರಿಸುತ್ತಾನೆ. ಪ್ರಕೃತಿಯು ಯಾವಾಗಲೂ ಅಧೀನ. ಅವಳು ಭಗವಂತನ ಆಧಿಪತ್ಯಕ್ಕೆ ಒಳಪಟ್ಟಿರುತ್ತಾಳೆ. ಭಗವಂತನು ಪ್ರಭು; ಜೀವಿಗಳು ಮತ್ತು ಭೌತಿಕ ಪ್ರಕೃತಿ ಎಲ್ಲ ಅಧೀನರು. ಭಗವಂತನು ಅವರನ್ನು ನಿಯಂತ್ರಿಸುತ್ತಾನೆ. ಗೀತೆಯಲ್ಲಿ ಹೇಳಿರುವಂತೆ ಜೀವಿಗಳು ಭಗವಂತನ ವಿಭಿನ್ನಾಂಶಗಳಾದರೂ ಅವರನ್ನು ಪ್ರಕೃತಿಯೆಂದೇ ಪರಿಗಣಿಸಬೇಕು. ಇದನ್ನು ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳಿದೆ, **ಅಪರೇಯಮ್ ಇತಸ್ ಅನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್/ಜೀವಭೂತಾಮ್.** "ಈ ಭೌತಿಕ ಪ್ರಕೃತಿಯು ನನ್ನ ಅಪರಾ ಪ್ರಕೃತಿಯಾಗಿದೆ. ಆದರೆ ಇದರಾಚೆ ಇನ್ನೊಂದು ಪ್ರಕೃತಿಯಿದೆ — ಜೀವ ಭೂತಾಮ್, ಜೀವಿಗಳು."

ಐಹಿಕ ಪ್ರಕೃತಿಯೇ ಮೂರು ಗುಣಗಳಿಂದ ನಿರ್ಮಾಣವಾಗಿದೆ; ಆ ಗುಣಗಳು ಸಾತ್ವಿಕ, ರಾಜಸ ಮತ್ತು ತಾಮಸ. ಇವುಗಳ ಮೇಲೆ ಸನಾತನ ಕಾಲವಿದೆ. ಪ್ರಕೃತಿಯ ಈ ಮೂರು ಗುಣಗಳ ಸೇರುವಿಕೆಯಿಂದಾಗಿ ಮತ್ತು ಸನಾತನ ಕಾಲದ ನಿಯಂತ್ರಣ ಮತ್ತು ಗಮನದಿಂದಾಗಿ ಕರ್ಮಗಳು ನಡೆಯುತ್ತವೆ. ಸ್ಮರಣೆಗೂ ಮೀರಿದ ಕಾಲದಿಂದ ಈ ಕರ್ಮಗಳು ನಡೆಯುತ್ತಿವೆ. ನಾವು ನಮ್ಮ ಕರ್ಮಫಲಕ್ಕನುಗುಣವಾಗಿ ಸುಖ ದುಃಖಗಳನ್ನು ಅನುಭವಿಸುತ್ತಿದ್ದೇವೆ. ಉದಾಹರಣೆಗೆ, ನಾನೊಬ್ಬ ವ್ಯವಹಾರ ಉದ್ಯಮಿಯಾಗಿದ್ದು, ಬುದ್ಧಿವಂತನಾಗಿ ಬಹಳ ಕಷ್ಟಪಟ್ಟು

ಬ್ಯಾಂಕಿನಲ್ಲಿ ವಿಪುಲವಾಗಿ ಹಣವನ್ನಿಟ್ಟುಕೊಂಡಿದ್ದೇನೆ ಎಂದುಕೊಳ್ಳೋಣ, ಆಗ ನಾನು ಸುಖಿ. ನಾನು ವ್ಯಾಪಾರದಲ್ಲಿ ಹಣವನ್ನೆಲ್ಲ ಕಳೆದುಕೊಂಡೆ ಎಂದು ಭಾವಿಸೋಣ, ಆಗ ನಾನು ದುಃಖಿ. ಇದೇ ರೀತಿಯಲ್ಲಿ ಬದುಕಿನ ಪ್ರತಿಯೊಂದು ಕ್ಷೇತ್ರದಲ್ಲಿ ನಮ್ಮ ಕೆಲಸದ ಫಲವಾಗಿ ಸುಖವನ್ನೋ ದುಃಖವನ್ನೋ ಅನುಭವಿಸುತ್ತೇವೆ. ಇದಕ್ಕೆ ಕರ್ಮ ಎಂದು ಹೆಸರು.

ಭಗವದ್ಗೀತೆಯು **ಈಶ್ವರ, ಜೀವ, ಪ್ರಕೃತಿ, ಕಾಲ, ಕರ್ಮ** ಎಲ್ಲವನ್ನೂ ವಿವರಿಸುತ್ತದೆ. ಈ ಐವರಲ್ಲಿ ಈಶ್ವರ, ಜೀವಿಗಳು, ಪ್ರಕೃತಿ ಮತ್ತು ಕಾಲ ಅನಂತ. ಪ್ರಕೃತಿಯ ಅಭಿವ್ಯಕ್ತಿಯು ತಾತ್ಕಾಲಿಕವಾಗಿರಬಹುದು; ಆದರೆ ಹುಸಿಯಲ್ಲ. ಕೆಲವರು ತತ್ವಶಾಸ್ತ್ರಜ್ಞರು ಭೌತಿಕ ಪ್ರಕೃತಿಯ ಸೃಷ್ಟಿಯು ಹುಸಿ ಎನ್ನುತ್ತಾರೆ. ಆದರೆ ಭಗವದ್ಗೀತೆಯ ಸಿದ್ಧಾಂತದಂತೆ ಅಥವಾ ವೈಷ್ಣವ ಸಿದ್ಧಾಂತದಂತೆ ಇದು ಸರಿಯಲ್ಲ. ಜಗತ್ತಿನ ಅಭಿವ್ಯಕ್ತಿ ಹುಸಿ ಎಂದು ಅದು ಒಪ್ಪುವುದಿಲ್ಲ; ಅದು ವಾಸ್ತವ, ಆದರೆ ಅಶಾಶ್ವತ. ಅದನ್ನು ಆಕಾಶದಲ್ಲಿ ಸಾಗಿಹೋಗುವ ಮೋಡಕ್ಕೆ ಅಥವಾ ಬೆಳೆಗೆ ವರವಾದ ಮಳೆಗೆ ಹೋಲಿಸಿದೆ. ಮಳೆಗಾಲ ಮುಗಿಯುತ್ತಲೇ, ಮೋಡ ಹೊರಟುಹೋಗುತ್ತಲೇ ಮಳೆಯು ಪೋಷಿಸಿದ ಬೆಳೆ ಎಲ್ಲ ಒಣಗುತ್ತದೆ. ಇದೇ ರೀತಿಯಲ್ಲಿ ಭೌತಿಕ ಸೃಷ್ಟಿಯು ಒಂದು ವಿಶಿಷ್ಟ ಅವಧಿಯಲ್ಲಿ ಆಗುತ್ತದೆ. ಸ್ವಲ್ಪಕಾಲ ಇರುತ್ತದೆ; ಅನಂತರ ಮಾಯವಾಗುತ್ತದೆ. ಇದು ಪ್ರಕೃತಿಯ ಕಾರ್ಯದ ರೀತಿ. ಈ ಚಕ್ರವು ನಿರಂತರವಾಗಿ ಸಾಗುತ್ತದೆ. ಆದ್ದರಿಂದ ಪ್ರಕೃತಿಯು ನಿರಂತರ; ಅದು ಹುಸಿಯಲ್ಲ. ಭಗವಂತನು ಅದನ್ನು ನನ್ನ ಪ್ರಕೃತಿ ಎಂದು ಕರೆದಿದ್ದಾನೆ. ಭೌತಿಕ ಪ್ರಕೃತಿಯು ಭಗವಂತನಿಂದ ಬೇರ್ಪಟ್ಟ ಶಕ್ತಿ. ಇದೇ ರೀತಿಯಲ್ಲಿ ಜೀವಿಗಳು ಸಹ ಭಗವಂತನ ಶಕ್ತಿ. ಆದರೆ ಅವರು ಬೇರ್ಪಟ್ಟವರಲ್ಲ; ನಿರಂತರವಾಗಿ ಸಂಬಂಧ ಹೊಂದಿರುವವರು. ಆದುದರಿಂದ **ಈಶ್ವರ, ಜೀವಿ, ಐಹಿಕ ಪ್ರಕೃತಿ** ಮತ್ತು **ಕಾಲ** ಇವಕ್ಕೆ ಪರಸ್ಪರ ಸಂಬಂಧವಿದೆ. ಇವೆಲ್ಲವೂ ಸನಾತನ. ಆದರೆ **ಕರ್ಮ**ವು ಸನಾತನವಲ್ಲ. ಕರ್ಮಫಲಗಳು ಬಹು ಪ್ರಾಚೀನವಾಗಿರಬಹುದು. ನೆನಪಿಗೆ ಸಿಕ್ಕದ ಪ್ರಾಚೀನ ಕಾಲದಿಂದ ನಾವು ನಮ್ಮ ಕರ್ಮಫಲಗಳನ್ನು ಅನುಭವಿಸುತ್ತಿದ್ದೇವೆ. ಆದರೆ ನಾವು ನಮ್ಮ ಕರ್ಮಫಲಗಳನ್ನು ಬದಲಾಯಿಸಬಹುದು. ಈ ಬದಲಾವಣೆಯು ನಮ್ಮ ಜ್ಞಾನದ ಪರಿಪೂರ್ಣತೆಯನ್ನು ಅವಲಂಬಿಸಿದೆ. ನಾವು ವಿವಿಧ **ಕರ್ಮ**ಗಳಲ್ಲಿ ನಿರತರಾಗಿರುತ್ತೇವೆ. ಎಲ್ಲ ಕರ್ಮಗಳ ಫಲಗಳಿಂದ ಬಿಡುಗಡೆ ಹೊಂದಲು ನಾವು ಯಾವ ಕರ್ಮಗಳನ್ನು ನಡೆಸಬೇಕು ಎನ್ನುವುದು ನಮಗೆ ಖಚಿತವಾಗಿ ತಿಳಿದಿಲ್ಲ. ಆದರೆ ಭಗವದ್ಗೀತೆಯು ಇದನ್ನೂ ವಿವರಿಸುತ್ತದೆ.

ಈಶ್ವರನ ಸ್ಥಾನ ಪರಮ ಪ್ರಜ್ಞೆಯದು. ಜೀವಿಗಳು ಈಶ್ವರನ ವಿಭಿನ್ನಾಂಶಗಳಾದದ್ದರಿಂದ ಅವರಿಗೂ ಪ್ರಜ್ಞೆಯುಂಟು. ಜೀವಿಯನ್ನೂ ಭೌತಿಕ ನಿಸರ್ಗವನ್ನೂ ಪ್ರಕೃತಿ ಅಥವಾ ಈಶ್ವರನ ಶಕ್ತಿ ಎಂದು ವಿವರಿಸಿದೆ. ಆದರೆ ಇವೆರಡರಲ್ಲಿ ಒಂದು, ಜೀವ; ಪ್ರಜ್ಞೆಯನ್ನು ಪಡೆದಿದ್ದಾನೆ. ಇನ್ನೊಂದು ಪ್ರಕೃತಿ; ಪ್ರಜ್ಞೆಯನ್ನು ಪಡೆದಿಲ್ಲ. ಇದೇ ವ್ಯತ್ಯಾಸ. ಈಶ್ವರನ ಪ್ರಜ್ಞೆಯನ್ನು ಹೋಲುವಂತಹ ಪ್ರಜ್ಞೆಯು ಇರುವ ಜೀವಿಯನ್ನು ಪರಾ ಎಂದು ಕರೆದಿದೆ. ಆದರೆ ಈಶ್ವರನದು ಪರಮ ಪ್ರಜ್ಞೆ; ಜೀವಿಗೂ ಪರಮ ಪ್ರಜ್ಞೆಯುಂಟು ಎಂದು ಹೇಳಲಾಗದು. ಜೀವಿಯು ತನ್ನ ಪರಿಪೂರ್ಣತೆಯ ಯಾವುದೇ ಘಟ್ಟದಲ್ಲಿ ಪರಮ ಪ್ರಜ್ಞೆಯನ್ನು ಹೊಂದಿರಲಾರ; ಅವನು ಹಾಗಿರಬಲ್ಲ ಎನ್ನುವುದು ತಪ್ಪುದಾರಿಗೆ ಎಳೆಯುವ ಊಹೆ. ಅವನಿಗೆ ಪ್ರಜ್ಞೆಯು ಇರಬಹುದು. ಆದರೆ ಅವನಿಗೆ ಪರಿಪೂರ್ಣ ಪ್ರಜ್ಞೆಯಾಗಲೀ, ಪರಮ ಪ್ರಜ್ಞೆಯಾಗಲೀ ಇಲ್ಲ.

ಜೀವಿಗೂ ಈಶ್ವರನಿಗೂ ಇರುವ ವ್ಯತ್ಯಾಸವನ್ನು ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ಹೇಳಿದೆ. ಈಶ್ವರನು ಕ್ಷೇತ್ರಜ್ಞ ; ಪ್ರಜ್ಞೆ ಇರುವವನು. ಜೀವಿಗೂ ಪ್ರಜ್ಞೆಯುಂಟು; ಆದರೆ ಜೀವಿಗೆ ತನ್ನ ನಿರ್ದಿಷ್ಟ ದೇಹದ ಪ್ರಜ್ಞೆಯುಂಟು; ಈಶ್ವರನಿಗೋ ಎಲ್ಲ ದೇಹಗಳ ಪ್ರಜ್ಞೆಯುಂಟು. ಈಶ್ವರನು ಎಲ್ಲ ಜೀವಿಗಳ ಹೃದಯಗಳಲ್ಲಿ ನೆಲೆಸಿದ್ದಾನೆ. ಆದುದರಿಂದ ಬೇರೆ ಬೇರೆ ಜೀವಿಗಳ ಮಾನಸಿಕ ವ್ಯಾಪಾರಗಳ ಅರಿವು ಆತನಿಗಿದೆ. ಇದನ್ನು ನಾವು ಮರೆಯಬಾರದು. ದೇವೋತ್ತಮ ಪರಮ ಪುರುಷನಾದ ಪರಮಾತ್ಮನು ಎಲ್ಲರ ಹೃದಯಗಳಲ್ಲಿ ಈಶ್ವರನಾಗಿ, ನಿಯಾಮಕನಾಗಿ ವಾಸಿಸುತ್ತಿದ್ದಾನೆ; ತಾನು ಅಪೇಕ್ಷಿಸಿದಂತೆ ಕೆಲಸಮಾಡಲು ಆತ ನಿರ್ದೇಶನ ಮಾಡುತ್ತಿದ್ದಾನೆ ಎಂದೂ ವಿವರಿಸಿದೆ. ಜೀವಿಯು ಏನು ಮಾಡಬೇಕೆಂಬುದನ್ನು ಮರೆತುಬಿಡುತ್ತಾನೆ. ಯಾವುದೋ ಒಂದು ರೀತಿಯಲ್ಲಿ ಕಾರ್ಯೋನ್ಮುಖನಾಗಲು ನಿರ್ಧರಿಸುತ್ತಾನೆ. ಅನಂತರ ಅವನು ತನ್ನದೇ ಕರ್ಮದ ಕ್ರಿಯೆ-ಪ್ರತಿಕ್ರಿಯೆಗಳ ಗೊಂದಲದಲ್ಲಿ ಸಿಕ್ಕಿಬೀಳುತ್ತಾನೆ. ನಾವು ಉಡುಪನ್ನು ಹಾಕಿಕೊಂಡು ಕಳಚಿಹಾಕುವಂತೆ, ಒಂದು ಬಗೆಯ ದೇಹವನ್ನು ಬಿಟ್ಟು ಇನ್ನೊಂದು ಬಗೆಯ ದೇಹವನ್ನು ಪ್ರವೇಶಿಸುತ್ತಾನೆ; ಹೀಗೆ ಆತ್ಮನು ದೇಹದಿಂದ ದೇಹಕ್ಕೆ ಸಾಗುತ್ತಿರುವಾಗ ಅವನು ತನ್ನ ಹಿಂದಿನ ಕರ್ಮಗಳ ಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ಅನುಭವಿಸುತ್ತಾನೆ. ಆತ್ಮನು ಸತ್ವಗುಣದಲ್ಲಿದ್ದಾಗ ಮತ್ತು ತಿಳಿಯಾದ ಬುದ್ಧಿಯಲ್ಲಿದ್ದಾಗ ತಾನು ಯಾವ ಬಗೆಯ ಕರ್ಮಗಳನ್ನು ಮಾಡಬೇಕು ಎಂದು ಅರ್ಥಮಾಡಿಕೊಂಡು ಈ ಚಟುವಟಿಕೆಗಳನ್ನು ಬದಲಾಯಿಸಬಹುದು. ಅವನು ಹಾಗೆ ಮಾಡಿದಾಗ ಅವನ ಹಿಂದಿನ ಕರ್ಮಗಳ ಕ್ರಿಯೆಗಳನ್ನು ಮತ್ತು ಪ್ರತಿಕ್ರಿಯೆಗಳನ್ನು ಬದಲಾಯಿಸಬಹುದು. ಕರ್ಮವು ನಿತ್ಯವಲ್ಲ. ಆದುದರಿಂದಲೇ, (ಈಶ್ವರ, ಜೀವಿ, ಪ್ರಕೃತಿ, ಕಾಲ ಮತ್ತು ಕರ್ಮ ಎನ್ನುವ ಐದು ಅಂಶಗಳಲ್ಲಿ) ನಾಲ್ಕು ನಿತ್ಯವಾದವು, ಕರ್ಮ ನಿತ್ಯವಲ್ಲ ಎಂದು ನಾವು ಹೇಳಿದೆವು.

ಪರಮ ಪ್ರಜ್ಞೆಯ ಈಶ್ವರನು ಜೀವಿಯನ್ನು ಈ ರೀತಿಯಲ್ಲಿ ಹೋಲುತ್ತಾನೆ. ಈಶ್ವರನ ಪ್ರಜ್ಞೆ ಮತ್ತು ಜೀವಿಯ ಪ್ರಜ್ಞೆ ಎರಡೂ ಅಲೌಕಿಕವಾದವು. ಜಡದೊಡನೆ ಸೇರುವುದರಿಂದ ಪ್ರಜ್ಞೆಯು ಹುಟ್ಟುತ್ತದೆ ಎಂದೇನೂ ಅಲ್ಲ. ಇದೊಂದು ತಪ್ಪು ಭಾವನೆ. ಕೆಲವೊಂದು ಸನ್ನಿವೇಶಗಳಲ್ಲಿ ಭೌತಿಕ ಸಂಯೋಜನೆಯಿಂದ ಪ್ರಜ್ಞೆಯು ಉತ್ಪತ್ತಿಯಾಗುತ್ತದೆ ಎನ್ನುವ ಊಹೆಯನ್ನು ಭಗವದ್ಗೀತೆಯು ಒಪ್ಪುವುದಿಲ್ಲ. ಬಣ್ಣದ ಗಾಜಿನಲ್ಲಿ ಬೆಳಕು ಪ್ರತಿಫಲಿತವಾದಾಗ ಅದಕ್ಕೆ ಯಾವುದೋ ಬಣ್ಣವಿದ್ದಂತೆ ತೋರಬಹುದು. ಹಾಗೆಯೇ ಪ್ರಜ್ಞೆಯು ಭೌತಿಕ ಸನ್ನಿವೇಶಗಳ ಆಚ್ಛಾದನೆಯಿಂದ ವಿಕೃತವಾಗಿ ಪ್ರತಿಫಲಿತವಾಗಬಹುದು. ಆದರೆ ಈಶ್ವರನ ಪ್ರಜ್ಞೆಯು ಭೌತಿಕ ಪ್ರಭಾವಕ್ಕೆ ಒಳಗಾಗುವುದಿಲ್ಲ. ಶ್ರೀಕೃಷ್ಣನು **ಮಯಾಧ್ಯಕ್ಷೇಣ ಪ್ರಕೃತಿಃ** ಎಂದು ಹೇಳುತ್ತಾನೆ. ಆತನು ಐಹಿಕ ವಿಶ್ವಕ್ಕೆ ಇಳಿದು ಬಂದಾಗ ಅವನ ಪ್ರಜ್ಞೆಗೆ ಐಹಿಕ ಲೇಪವು ಉಂಟಾಗುವುದಿಲ್ಲ. ಹಾಗೆ ಲೇಪವಾಗುವುದಾದರೆ ಆತನು ಭಗವದ್ಗೀತೆಯಲ್ಲಿ ಮಾತನಾಡುವಂತೆ ಅಲೌಕಿಕ ವಿಷಯಗಳನ್ನು ಕುರಿತು ಮಾತನಾಡಲು ಅನರ್ಹನಾಗುತ್ತಾನೆ. ಭೌತಿಕವಾಗಿ ಕಲ್ಮಷಗೊಂಡ ಪ್ರಜ್ಞೆಯಿಂದ ಬಿಡುಗಡೆಯಾಗದವನು ಅಲೌಕಿಕ ಜಗತ್ತನ್ನು ಕುರಿತು ಏನನ್ನೂ ಹೇಳಲಾರ. ಆದುದರಿಂದ ಈಶ್ವರನಿಗೆ ಭೌತಿಕ ಕಲ್ಮಷವಿಲ್ಲ. ಆದರೆ ನಮ್ಮ ಪ್ರಜ್ಞೆಗೆ ಭೌತಿಕ ಕಲ್ಮಷ ಉಂಟಾಗಿದೆ. ಭೌತಿಕ ಕಲ್ಮಷವಿರುವ ಈ ಪ್ರಜ್ಞೆಯನ್ನು ನಾವು ಪರಿಶುದ್ಧಗೊಳಿಸಬೇಕು ಎಂದು ಭಗವದ್ಗೀತೆಯು ಉಪದೇಶಿಸುತ್ತದೆ. ಪರಿಶುದ್ಧ ಪ್ರಜ್ಞೆಯಲ್ಲಿ ನಮ್ಮ ಕಾರ್ಯಗಳು ಈಶ್ವರ ಸಂಕಲ್ಪಕ್ಕೆ ಸರಿಯಾಗಿ

ಹೊಂದಿಕೆಯಾಗುತ್ತವೆ. ಅದರಿಂದ ನಮಗೆ ಸುಖವಾಗುತ್ತದೆ. ಎಂದರೆ ನಾವು ಕರ್ಮಗಳನ್ನು ಬಿಟ್ಟು ಬಿಡುತ್ತೇವೆ ಎಂದಲ್ಲ. ನಮ್ಮ ಕರ್ಮಗಳು ಪರಿಶುದ್ಧವಾಗುತ್ತವೆ, ಅಷ್ಟೆ. ಪರಿಶುದ್ಧವಾದ ಕರ್ಮವನ್ನು ಭಕ್ತಿ ಎಂದು ಕರೆಯುತ್ತಾರೆ. ಭಕ್ತಿ ಸ್ಥಿತಿಯಲ್ಲಿನ ಕರ್ಮಗಳು ಸಾಧಾರಣ ಕರ್ಮಗಳಂತೆಯೇ ತೋರುತ್ತವೆ. ಆದರೆ ಅವು ಕಶ್ಮಲರಹಿತವಾಗಿರುತ್ತವೆ. ಭಕ್ತನು ಸಾಮಾನ್ಯ ಮನುಷ್ಯನಂತೆಯೇ ಕರ್ಮ ಮಾಡುತ್ತಾನೆ ಅಥವಾ ಕೆಲಸ ಮಾಡುತ್ತಾನೆ ಎಂದು ಅಜ್ಞಾನಿಯಾದವನಿಗೆ ತೋರಬಹುದು. ಆದರೆ ಹೆಚ್ಚು ತಿಳುವಳಿಕೆಯಿಲ್ಲದ ಅವನಿಗೆ ಭಕ್ತನ ಕ್ರಿಯೆಗಳಾಗಲೀ ಈಶ್ವರನ ಕ್ರಿಯೆಗಳಾಗಲೀ ಅಶುದ್ಧ ಪ್ರಜ್ಞೆಯಿಂದ ಅಥವಾ ಜಡದ ಸಂಪರ್ಕದಿಂದ ಕಲುಷಿತವಾಗಿಲ್ಲ ಎಂದು ಗೊತ್ತಾಗುವುದಿಲ್ಲ. ಅವು ಪ್ರಕೃತಿಯ ಮೂರು ಗುಣಗಳನ್ನೂ ಮೀರಿದವು. ಈಗಿರುವಂತೆ ನಮ್ಮ ಪ್ರಜ್ಞೆಯು ಕಲುಷಿತಗೊಂಡಿದೆ ಎನ್ನುವುದನ್ನು ನಾವು ತಿಳಿಯಬೇಕು.

ಭೌತಿಕ ಕಲ್ಮಷವಿರುವಾಗ ನಾವು ಬದ್ಧರು ಎನ್ನಿಸಿಕೊಳ್ಳುತ್ತೇವೆ. ನಾವು ಭೌತಿಕ ಪ್ರಕೃತಿಯ ಸೃಷ್ಟಿ ಎಂಬ ಭಾವನೆಯಿಂದ ಮಿಥ್ಯಾಪ್ರಜ್ಞೆಯನ್ನು ತೋರುತ್ತೇವೆ. ಇದಕ್ಕೆ ಮಿಥ್ಯಾಹಂಕಾರ ಎಂದು ಹೆಸರು. ದೇಹದ ಕಲ್ಪನೆಗಳಲ್ಲೇ ಮುಳುಗಿರುವವನಿಗೆ ತನ್ನ ನಿಜಸ್ಥಿತಿಯ ಅರಿವಾಗುವುದಿಲ್ಲ. ದೇಹಾತ್ಮ ಕಲ್ಪನೆಯನ್ನು ಹೋಗಲಾಡಿಸುವುದಕ್ಕಾಗಿಯೇ ಭಗವದ್ಗೀತೆಯನ್ನು ಉಪದೇಶಿಸಲಾಯಿತು. ಈ ತಿಳುವಳಿಕೆಯನ್ನು ಭಗವಂತನಿಂದ ಪಡೆಯುವುದಕ್ಕಾಗಿ ಅರ್ಜುನನು ತನ್ನನ್ನು ಇಂತಹ ಸ್ಥಿತಿಯಲ್ಲಿ ಇರಿಸಿಕೊಂಡನು. ಬದುಕಿನ ದೈಹಿಕ ಕಲ್ಪನೆಯಿಂದ ಬಿಡುಗಡೆ ಹೊಂದಬೇಕು; ಆಧ್ಯಾತ್ಮಿಕವಾದಿಗೆ ಇದೇ ಮೊದಲನೆಯ ಕ್ರಿಯೆ. ಸ್ವತಂತ್ರನಾಗಲು ಬಯಸುವವನು, ಮುಕ್ತನಾಗಲು ಬಯಸುವವನು ತಾನು ಈ ಜಡ ದೇಹವಲ್ಲ ಎನ್ನುವುದನ್ನು ತಿಳಿದುಕೊಳ್ಳಬೇಕು. ಮುಕ್ತಿ ಎಂದರೆ ಭೌತಿಕ ಪ್ರಜ್ಞೆಯಿಂದ ಬಿಡುಗಡೆ. ಶ್ರೀಮದ್ಭಾಗವತದಲ್ಲಿಯೂ ಮುಕ್ತಿಯ ವಿವರಣೆ ಇದೆ. **ಮುಕ್ತಿರ್‌ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ** ಹೀಗೆಂದರೆ ಈ ಐಹಿಕ ಜಗತ್ತಿನ ಕಲುಷಿತ ಪ್ರಜ್ಞೆಯಿಂದ ಬಿಡುಗಡೆ ಹೊಂದಿ ಪರಿಶುದ್ಧ ಪ್ರಜ್ಞೆಯಲ್ಲಿ ನಿಷ್ಠೆಯನ್ನು ಪಡೆಯುವುದು. ಭಗವದ್ಗೀತೆಯ ಎಲ್ಲ ಉಪದೇಶಗಳ ಉದ್ದೇಶವು ಈ ಪರಿಶುದ್ಧ ಪ್ರಜ್ಞೆಯನ್ನು ಜಾಗೃತಗೊಳಿಸುವುದು. ಆದುದರಿಂದಲೇ ಗೀತೋಪದೇಶದ ಕೊನೆಯ ಘಟ್ಟದಲ್ಲಿ ಕೃಷ್ಣನು ಅರ್ಜುನನನ್ನು ಈಗ ನಿನ್ನ (ಅರ್ಜುನನ) ಪ್ರಜ್ಞೆ ಪರಿಶುದ್ಧವಾಯಿತೆ ಎಂದು ಕೇಳುವುದನ್ನು ನೋಡುತ್ತೇವೆ. ಪರಿಶುದ್ಧಗೊಂಡ ಪ್ರಜ್ಞೆ ಎಂದರೆ ಭಗವಂತನ ಉಪದೇಶಕ್ಕೆ ಅನುಗುಣವಾಗಿ ನಡೆಯುವುದು. ಪರಿಶುದ್ಧ ಪ್ರಜ್ಞೆಯ ಸಾರ ಸರ್ವಸ್ವವೂ ಇದೇ. ಭಗವಂತನ ವಿಭಿನ್ನಾಂಶಗಳಾದದ್ದರಿಂದ ನಮಗೆ ಪ್ರಜ್ಞೆಯು ಇದ್ದೇ ಇದೆ. ಆದರೆ ನಾವು ಕೀಳುಗುಣಗಳಿಂದ ಪ್ರಭಾವಿತರಾಗುವ ಸಾಧ್ಯತೆ ಇದೆ. ಆದರೆ ಭಗವಂತನು ಪರಾತ್ಪರನು; ಆದುದರಿಂದ ಈ ಬಗೆಯ ಪ್ರಭಾವಕ್ಕೆ ಎಂದೂ ಒಳಗಾಗುವುದಿಲ್ಲ. ಭಗವಂತನಿಗೂ ಅಲ್ಪ ಜೀವಿಗಳಿಗೂ ಇದೇ ವ್ಯತ್ಯಾಸ.

ಈ ಪ್ರಜ್ಞೆ ಎಂದರೇನು? 'ನಾನು ಇದ್ದೇನೆ' ಎನ್ನುವುದೇ ಈ ಪ್ರಜ್ಞೆ. ಹಾಗಾದರೆ ನಾನು ಯಾರು? ಕಲುಷಿತ ಪ್ರಜ್ಞೆಯಲ್ಲಿ 'ನಾನು ಇದ್ದೇನೆ' ಎನ್ನುವುದರ ಅರ್ಥ, "ನನ್ನ ಕಣ್ಣು ಕಾಣುವುದಕ್ಕೆಲ್ಲ ನಾನೇ ಪ್ರಭು, ಭೋಗಿಸುವವನು ನಾನೇ" ಎನ್ನುವುದು. ಪ್ರತಿಯೊಂದು ಜೀವಿಯು ತಾನೇ ಐಹಿಕ ಜಗತ್ತಿನ ಒಡೆಯ ಮತ್ತು ಸೃಷ್ಟಿಕರ್ತ ಎಂದು ಭಾವಿಸುತ್ತಾನೆ; ಅದರಿಂದಲೇ ಜಗತ್ತು ಸಾಗುತ್ತದೆ. ಭೌತಿಕ ಪ್ರಜ್ಞೆಗೆ ಎರಡು ಮಾನಸಿಕ ಭಾಗಗಳುಂಟು. ಒಂದು ನಾನೇ ಸೃಷ್ಟಿಕರ್ತ ಎನ್ನುವುದು, ಇನ್ನೊಂದು ನಾನೇ ಭೋಗಿಸುವವನು ಎನ್ನುವುದು. ಆದರೆ ವಾಸ್ತವವಾಗಿ ಸೃಷ್ಟಿಕರ್ತನೂ

ಭಗವಂತನೇ ಮತ್ತು ಭೋಗಿಸುವವನೂ ಭಗವಂತನೇ. ಭಗವಂತನ ವಿಭಿನ್ನಾಂಶವಾದ ಜೀವಿಯು ಸೃಷ್ಟಿಕರ್ತನೂ ಅಲ್ಲ, ಭೋಗಿಸುವವನೂ ಅಲ್ಲ. ಅವನು ಸಹಕರಿಸುವವನು ಮಾತ್ರ. ಅವನು ಸೃಷ್ಟಿಯಾಗಿದ್ದಾನೆ ಮತ್ತು ಭೋಗಿಸಲ್ಪಡುತ್ತಾನೆ. ಉದಾಹರಣೆಗೆ, ಒಂದು ಯಂತ್ರದ ಭಾಗವು ಇಡೀ ಯಂತ್ರದೊಂದಿಗೆ ಸಹಕರಿಸುತ್ತದೆ; ದೇಹದ ಒಂದು ಭಾಗವು ಇಡೀ ದೇಹದೊಂದಿಗೆ ಸಹಕರಿಸುತ್ತದೆ. ಕೈಗಳು, ಕಾಲುಗಳು, ಕಣ್ಣುಗಳು, ಮೊದಲಾದುವೆಲ್ಲ ದೇಹದ ಭಾಗಗಳು. ಆದರೆ ಅವು ವಾಸ್ತವಿಕವಾಗಿ ಭೋಗಿಸುವುದಿಲ್ಲ. ಭೋಗಿಸುವುದು ಹೊಟ್ಟೆ. ಕಾಲುಗಳು ಚಲಿಸುತ್ತವೆ. ಕೈಗಳು ಆಹಾರವನ್ನು ತೆಗೆದುಕೊಡುತ್ತವೆ. ಹಲ್ಲುಗಳು ಅಗಿಯುತ್ತವೆ. ದೇಹದ ಎಲ್ಲ ಭಾಗಗಳೂ ಹೊಟ್ಟೆಯನ್ನು ತೃಪ್ತಿಪಡಿಸುವುದರಲ್ಲಿ ನಿರತವಾಗಿವೆ. ಇದಕ್ಕೆ ಕಾರಣ, ದೇಹದ ವ್ಯವಸ್ಥೆಗೆ ಪುಷ್ಟಿನೀಡುವ ಮುಖ್ಯಭಾಗ ಹೊಟ್ಟೆಯೇ. ಆದುದರಿಂದ ಎಲ್ಲವೂ ಹೋಗುವುದು ಹೊಟ್ಟೆಗೇ. ಮರವನ್ನು ಪೋಷಿಸಲು ಬೇರುಗಳಿಗೆ ನೀರೆರೆಯುತ್ತೇವೆ; ದೇಹವನ್ನು ಪೋಷಿಸಲು ಹೊಟ್ಟೆಗೆ ಆಹಾರವನ್ನು ಕೊಡುತ್ತೇವೆ. ಏಕೆಂದರೆ, ದೇಹವು ಆರೋಗ್ಯವಾಗಿರಬೇಕಾದರೆ ದೇಹದ ಭಾಗಗಳು ಹೊಟ್ಟೆಗೆ ಆಹಾರ ನೀಡಲು ಸಹಕರಿಸಬೇಕು. ಹಾಗೆಯೇ, ಭೋಗಿಸುವವನೂ ಸೃಷ್ಟಿಕರ್ತನೂ ಭಗವಂತನೇ. ಅಧೀನ ಜೀವಿಗಳಾದ ನಾವು ಇರುವುದೇ ಆತನ ಸಂತೃಪ್ತಿಗಾಗಿ; ಪರಸ್ಪರ ಸಹಕರಿಸಿ ಕೆಲಸಮಾಡುವುದಕ್ಕಾಗಿ. ಹೊಟ್ಟೆಯು ತೆಗೆದುಕೊಂಡ ಆಹಾರವು ದೇಹದ ಇತರ ಎಲ್ಲ ಭಾಗಗಳಿಗೆ ನೆರವಾಗುವಂತೆ ಈ ಸಹಕಾರವು ವಾಸ್ತವವಾಗಿ ನಮಗೆ ಸಹಾಯ ಮಾಡುತ್ತದೆ. ಕೈಬೆರಳುಗಳು ಆಹಾರವನ್ನು ಹೊಟ್ಟೆಗೆ ಕೊಡದೆ ತಾವೇ ತೆಗೆದುಕೊಳ್ಳಬೇಕೆಂದು ಯೋಚಿಸಿದರೆ ಅವಕ್ಕೆ ಸೋಲಾಗುತ್ತದೆ. ಸೃಷ್ಟಿ ಮತ್ತು ಭೋಗಿಸುವುದು ಎರಡಕ್ಕೂ ಭಗವಂತನೇ ಕೇಂದ್ರ; ಜೀವಿಗಳು ಸಹಕರಿಸುತ್ತಾರೆ. ಸಹಕಾರದಿಂದ ಜೀವಿಗಳಿಗೆ ಸವಿಯಲು ಸಾಧ್ಯವಾಗುತ್ತದೆ. ಈ ಸಂಬಂಧವು ಒಡೆಯ-ಸೇವಕರ ಸಂಬಂಧದಂತೆಯೂ ಹೌದು. ಒಡೆಯನಿಗೆ ತೃಪ್ತಿಯಾದರೆ ಸೇವಕನಿಗೆ ತೃಪ್ತಿಯಾಗುತ್ತದೆ. ವ್ಯಕ್ತವಾದ ವಿಶ್ವವನ್ನು ಸೃಷ್ಟಿಸಿದ ಭಗವಂತನಲ್ಲಿ ಸೃಷ್ಟಿಸುವ ಪ್ರವೃತ್ತಿ ಮತ್ತು ಸವಿಯುವ ಪ್ರವೃತ್ತಿ ಎರಡೂ ಇರುತ್ತವೆ. ಆದುದರಿಂದ ಈ ಐಹಿಕ ಜಗತ್ತನ್ನು ಸೃಷ್ಟಿಸುವ ಮತ್ತು ಸವಿಯುವ ಪ್ರವೃತ್ತಿಗಳು ಜೀವಿಯಲ್ಲಿಯೂ ಇರುತ್ತವೆ. ಆದರೂ ಭಗವಂತನಿಗೆ ತೃಪ್ತಿಯಾಗಬೇಕು.

ಆದುದರಿಂದ, ಅಖಂಡ ಪೂರ್ಣವು ಪರಮ ನಿಯಂತ್ರಕನನ್ನೂ, ನಿಯಂತ್ರಣಕ್ಕೊಳಗಾದ ಜೀವಿಗಳನ್ನೂ, ವಿಶ್ವ ಅಭಿವ್ಯಕ್ತಿಯನ್ನೂ, ಅನಂತಕಾಲವನ್ನೂ, ಕರ್ಮವನ್ನೂ ಒಳಗೊಂಡಿದೆ ಎಂಬುದನ್ನು ಭಗವದ್ಗೀತೆಯಲ್ಲಿ ಕಾಣುತ್ತೇವೆ. ಅದರಲ್ಲಿ ಇವೆಲ್ಲವನ್ನೂ ವಿವರಿಸಿದೆ. ಇವೆಲ್ಲವೂ ಸೇರಿ ಅಖಂಡ ಪೂರ್ಣವಾಗುತ್ತದೆ. ಈ ಅಖಂಡ ಪೂರ್ಣವನ್ನು ಪರಮ ಸತ್ಯ ಎಂದು ಕರೆಯುತ್ತಾರೆ. ದೇವೋತ್ತಮ ಪುರುಷನಾದ ಶ್ರೀಕೃಷ್ಣನೇ ಅಖಂಡ ಪೂರ್ಣವೂ, ಪರಮ ಸತ್ಯವೂ ಆಗಿದ್ದಾನೆ. ಅಭಿವ್ಯಕ್ತಿಗಳು ಅವನ ವಿವಿಧ ಶಕ್ತಿಗಳಿಂದ ಆಗಿವೆ. ಅವನೇ ಪರಿಪೂರ್ಣ ಅಖಂಡನಾಗಿದ್ದಾನೆ.

ನಿರಾಕಾರ ಬ್ರಹ್ಮನ್ ಪೂರ್ಣ ಪರಮ ಪುರುಷನಿಗೆ ಅಧೀನ **(ಬ್ರಹ್ಮಣೋ ಹಿ ಪ್ರತಿಷ್ಠಾಹಮ್)** ಎಂದು ಗೀತೆಯು ವಿವರಿಸುತ್ತದೆ. ಬ್ರಹ್ಮಸೂತ್ರವು ಬ್ರಹ್ಮನು ಸೂರ್ಯಕಿರಣಗಳಂತೆ ಎಂದು ಸ್ಪಷ್ಟವಾಗಿ ಹೇಳುತ್ತದೆ. ನಿರಾಕಾರ ಬ್ರಹ್ಮನ್ ಪರಿಪೂರ್ಣ ಅಖಂಡದ ಅಸಂಪೂರ್ಣ ಸಾಕ್ಷಾತ್ಕಾರ; ಪರಮಾತ್ಮ ಪರಿಕಲ್ಪನೆಯೂ ಹೀಗೆಯೇ. ದೇವೋತ್ತಮ ಪರಮ ಪುರುಷನಾದ ಪುರುಷೋತ್ತಮನು ನಿರಾಕಾರ ಬ್ರಹ್ಮನನ್ನೂ ಪರಮಾತ್ಮನ ಅಸಂಪೂರ್ಣ ಸಾಕ್ಷಾತ್ಕಾರವನ್ನೂ ಮೀರಿದವನು ಎನ್ನುವುದನ್ನು ಹದಿನೈದನೆಯ ಅಧ್ಯಾಯದಲ್ಲಿ ಕಾಣುತ್ತೇವೆ.

ದೇವೋತ್ತಮ ಪರಮ ಪುರುಷನನ್ನು ಸಚ್ಚಿದಾನಂದವಿಗ್ರಹ ಎಂದು ಕರೆಯಲಾಗಿದೆ. ಬ್ರಹ್ಮಸಂಹಿತೆಯು ಆರಂಭವಾಗುವುದು ಹೀಗೆ — **ಈಶ್ವರಃ ಪರಮಃ ಕೃಷ್ಣಃ ಸತ್-ಚಿತ್-ಆನನ್ದ ವಿಗ್ರಹಃ / ಅನಾದಿರ್ ಆದಿರ್ ಗೋವಿನ್ದಃ ಸರ್ವಕಾರಣಕಾರಣಮ್.** ಎಂದರೆ "ಗೋವಿಂದನು, ಕೃಷ್ಣನು ಎಲ್ಲ ಕಾರಣಗಳ ಕಾರಣನು. ಅವನು ಮೂಲಕಾರಣನು. ಅವನೇ ಸನಾತನನು, ಚಿತ್ ಮತ್ತು ಆನಂದಗಳ ಸಾಕಾರ ರೂಪನು." ನಿರಾಕಾರ ಬ್ರಹ್ಮನ್‌ನ ಸಾಕ್ಷಾತ್ಕಾರವು ಅವನ **ಸತ್** (ಸನಾತನ) ಲಕ್ಷಣವಾದ ಸಾಕ್ಷಾತ್ಕಾರ. ಪರಮಾತ್ಮ ಸಾಕ್ಷಾತ್ಕಾರವು ಅವನ **ಸತ್-ಚಿತ್** (ಸನಾತನ ಚಿತ್ತ) ದ ಸಾಕ್ಷಾತ್ಕಾರ. ಆದರೆ ಪೂರ್ಣ **ವಿಗ್ರಹ** (ರೂಪ)ದಲ್ಲಿ ಸತ್, ಚಿತ್ ಮತ್ತು ಆನಂದ (ಶಾಶ್ವತ, ಜ್ಞಾನ ಮತ್ತು ಆನಂದ)ಗಳ ಎಲ್ಲ ದಿವ್ಯಲಕ್ಷಣಗಳ ಸಾಕ್ಷಾತ್ಕಾರವೇ ದೇವೋತ್ತಮ ಪುರುಷನಾದ ಶ್ರೀಕೃಷ್ಣನ ಸಾಕ್ಷಾತ್ಕಾರವಾಗಿದೆ.

ಹೆಚ್ಚು ಬುದ್ಧಿಯಿಲ್ಲದವರು ಪರಮ ಸತ್ಯವು ನಿರಾಕಾರ ಎಂದು ಭಾವಿಸುತ್ತಾರೆ. ಆದರೆ ಅವನು ಅಲೌಕಿಕ ಪುರುಷ. ಎಲ್ಲ ವೈದಿಕ ಸಾಹಿತ್ಯವು ಇದನ್ನೇ ದೃಢಪಡಿಸುತ್ತದೆ, **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್** (ಕಠೋಪನಿಷತ್ 2.2.13). ನಾವೆಲ್ಲ ಪ್ರತ್ಯೇಕ ಪ್ರತ್ಯೇಕ ವ್ಯಕ್ತಿಗಳಾಗಿದ್ದು ನಮಗೆ ಪ್ರತ್ಯೇಕ ವ್ಯಕ್ತಿತ್ವವಿರುವಂತೆ ಕಟ್ಟಕಡೆಗೆ ಪರಮ ಪರಾತ್ಪರಸತ್ಯವು ಪುರುಷನೇ. ದೇವೋತ್ತಮ ಪುರುಷನ ಸಾಕ್ಷಾತ್ಕಾರವೆಂದರೆ ಅವನ ಪೂರ್ಣರೂಪದ ಎಲ್ಲ ಅಲೌಕಿಕ ಲಕ್ಷಣಗಳ ಸಾಕ್ಷಾತ್ಕಾರ. ಅಖಂಡತೆಯು ಆಕಾರರಹಿತವಲ್ಲ. ಆತನು ಆಕಾರರಹಿತನಾದರೆ ಅಥವಾ ಬೇರೆ ಯಾವುದೇ ವಸ್ತುವಿಗಿಂತ ಕಡಮೆಯಾದರೆ ಅವನು ಪೂರ್ಣನಾಗುವುದು ಸಾಧ್ಯವಿಲ್ಲ. ನಮ್ಮ ಅನುಭವದಲ್ಲಿ ಬಂದದ್ದೆಲ್ಲ ಮತ್ತು ನಮ್ಮ ಅನುಭವದ ಆಚೆ ಇರುವುದೆಲ್ಲ ಅಖಂಡತ್ವದಲ್ಲಿ ಇರಬೇಕು. ಇಲ್ಲವಾದರೆ ಅದು ಅಖಂಡವಾಗಲಾರದು.

ದೇವೋತ್ತಮ ಪುರುಷನಾದ ಅಖಂಡನಿಗೆ ಅಗಾಧ ಶಕ್ತಿ ಸಾಧ್ಯತೆಗಳಿವೆ (**ಪರಾಸ್ಯ ಶಕ್ತಿ ರ್ವಿವಿಧೈವ ಶ್ರೂಯತೇ**). ಶ್ರೀಕೃಷ್ಣನು ಬೇರೆ ಬೇರೆ ಶಕ್ತಿಗಳ ಮೂಲಕ ಹೇಗೆ ಕೆಲಸ ಮಾಡುತ್ತಾನೆ ಎನ್ನುವುದನ್ನು ಭಗವದ್ಗೀತೆಯು ವಿವರಿಸುತ್ತದೆ. ನಾವಿರುವ ಈ ಭೌತಿಕ ಜಗತ್ತು ಸಹ ಸ್ವಯಂಪೂರ್ಣ. ಏಕೆಂದರೆ ಸಾಂಖ್ಯ ಸಿದ್ಧಾಂತದ ಪ್ರಕಾರ ಭೌತಿಕ ವಿಶ್ವವು ಇಪ್ಪತ್ತನಾಲ್ಕು ಮೂಲಾಂಶಗಳ ತಾತ್ಕಾಲಿಕ ಅಭಿವ್ಯಕ್ತಿ. ಈ ವಿಶ್ವದ ನಿರ್ವಹಣೆ ಮತ್ತು ಉಳಿವಿಗೆ ಅಗತ್ಯವಾದ ಎಲ್ಲ ಸಂಪನ್ಮೂಲಗಳನ್ನು ಸೃಷ್ಟಿಸುವಂತೆ ಈ ಅಂಶಗಳನ್ನು ಸಂಪೂರ್ಣವಾಗಿ ಹೊಂದಾಣಿಕೆ ಮಾಡಲಾಗಿದೆ. ಅನಗತ್ಯವಾದದ್ದು ಏನೂ ಇಲ್ಲ. ಈಗಿರುವುದಲ್ಲದೆ ಬೇರೆ ಯಾವುದರ ಅಗತ್ಯವೂ ಇಲ್ಲ. ಈ ಅಭಿವ್ಯಕ್ತಿಯ ಕಾಲಪ್ರಮಾಣವನ್ನು ಪರಮ ಅಖಂಡತ್ವದ ಚೈತನ್ಯವು ನಿರ್ಧರಿಸಿದೆ. ಅದರ ಕಾಲಪ್ರಮಾಣವು ಮುಗಿದಾಗ ಈ ತಾತ್ಕಾಲಿಕ ಅಭಿವ್ಯಕ್ತಿಗಳನ್ನು ಪೂರ್ಣತ್ವದ ಪೂರ್ಣ ಏರ್ಪಾಡು ನಾಶಮಾಡುತ್ತದೆ. ಕಿರುಪೂರ್ಣ ಘಟಕಗಳಿಗೆ ಎಂದರೆ ಜೀವಿಗಳಿಗೆ ಪೂರ್ಣತ್ವದ ಸಾಕ್ಷಾತ್ಕಾರಕ್ಕೆ ಎಲ್ಲ ಅವಕಾಶವಿದೆ. ಪೂರ್ಣತ್ವದ ಸಮಗ್ರ ತಿಳುವಳಿಕೆ ಇಲ್ಲದಿರುವುದರಿಂದ ಎಲ್ಲ ಬಗೆಯ ಅಪರಿಪೂರ್ಣತೆಯ ಅನುಭವವಾಗುತ್ತದೆ. ಆದುದರಿಂದ ಭಗವದ್ಗೀತೆಯಲ್ಲಿ ವೈದಿಕ ಜ್ಞಾನದ ಸಂಪೂರ್ಣ ತಿಳಿವು ಇದೆ.

ವೈದಿಕ ತಿಳುವಳಿಕೆಯಲ್ಲಿ ತಪ್ಪಿರಲು ಸಾಧ್ಯವೇ ಇಲ್ಲ. ಹಿಂದೂಗಳು, ವೈದಿಕ ತಿಳುವಳಿಕೆಯು ಸಂಪೂರ್ಣವಾದದ್ದು ಮತ್ತು ತಪ್ಪಲು ಸಾಧ್ಯವೇ ಇಲ್ಲದ್ದು ಎಂದು ಸ್ವೀಕರಿಸುತ್ತಾರೆ. ಉದಾಹರಣೆಗೆ ಸಗಣಿಯು ಒಂದು ಪ್ರಾಣಿಯ ಮಲ. ಸ್ಮೃತಿ ಅಥವಾ ವೈದಿಕ ವಿಧಿಗಳ ಪ್ರಕಾರ

ಯಾರಾದರೂ ಪ್ರಾಣಿಯ ಮಲವನ್ನು ಮುಟ್ಟಿದರೆ ಸ್ನಾನಮಾಡಿ ಶುದ್ಧಮಾಡಿಕೊಳ್ಳಬೇಕು. ಆದರೆ ವೈದಿಕ ಧರ್ಮಗ್ರಂಥಗಳಲ್ಲಿ ಸಗಣಿಯನ್ನು ಶುದ್ಧಿಗೊಳಿಸುವ ಒಂದು ಸಾಧನ ಎಂದು ಪರಿಗಣಿಸಿದೆ. ಇವುಗಳಲ್ಲಿ ಪರಸ್ಪರ ವಿರೋಧವಿದೆ ಎಂದು ತೋರಬಹುದು. ಆದರೆ ಇದು ವೈದಿಕ ವಿಧಿಯಾದದ್ದರಿಂದ ಜನರು ಇದನ್ನು ಒಪ್ಪುತ್ತಾರೆ. ಇದನ್ನು ಒಪ್ಪುವುದು ತಪ್ಪೆನಿಸುವುದಿಲ್ಲ. ಸಗಣಿಯು ಕ್ರಿಮಿನಾಶಕವೆಂದು ಈಚಿನ ವೈಜ್ಞಾನಿಕ ಸಂಶೋಧನೆಗಳು ತಿಳಿಯಪಡಿಸಿವೆ. ವೇದಜ್ಞಾನವು ಸಂದೇಹ ಮತ್ತು ದೋಷಗಳಿಗೆ ಹೊರತಾಗಿರುವುದರಿಂದ ಪರಿಪೂರ್ಣವಾದದ್ದು. ಭಗವದ್ಗೀತೆಯಾದರೋ ವೇದಜ್ಞಾನದ ಸಾರವೇ ಆಗಿದೆ.

ವೇದಜ್ಞಾನವು ಸಂಶೋಧನೆಗೆ ವಸ್ತುವಲ್ಲ. ನಾವು ಪರಿಪೂರ್ಣವಲ್ಲದ ಇಂದ್ರಿಯಗಳನ್ನು ಬಳಸಿ ಸಂಶೋಧನೆಯನ್ನು ಮಾಡುತ್ತೇವೆ. ಆದುದರಿಂದ ನಮ್ಮ ಸಂಶೋಧನೆಯು ಪರಿಪೂರ್ಣವಲ್ಲ. ಭಗವದ್ಗೀತೆಯು ಹೇಳುವಂತೆ ಪರಂಪರೆಯಿಂದ ನಮಗೆ ಬರುವ ಪರಿಪೂರ್ಣ ಜ್ಞಾನವನ್ನು ನಾವು ಸ್ವೀಕರಿಸಬೇಕು. ಪರಮ ಗುರುವಾದ ಭಗವಂತನಿಂದ ಪ್ರಾರಂಭವಾಗಿ ಗುರುಶಿಷ್ಯರ ಪರಂಪರೆಯಲ್ಲಿ ಯೋಗ್ಯಮೂಲದಿಂದ ಬರುವ ಮತ್ತು ಗುರುಗಳ ಪರಂಪರೆಯಲ್ಲಿ ಒಬ್ಬರಿಂದ ಇನ್ನೊಬ್ಬರಿಗೆ ಬಂದಿರುವ ಜ್ಞಾನವನ್ನು ನಾವು ಒಪ್ಪಿಕೊಳ್ಳಬೇಕು. ಶ್ರೀಕೃಷ್ಣನಿಂದ ಆತನ ಶಿಷ್ಯನಾಗಿ ಉಪದೇಶ ಪಡೆದ ಅರ್ಜುನನು ಅವನು ಹೇಳಿದುದೆಲ್ಲವನ್ನೂ ವಿರೋಧಿಸದೆ ಒಪ್ಪಿಕೊಂಡನು. ಭಗವದ್ಗೀತೆಯ ಒಂದು ಭಾಗವನ್ನು ಒಪ್ಪಿಕೊಂಡು ಮತ್ತೊಂದು ಭಾಗವನ್ನು ನಿರಾಕರಿಸಲು ಅವಕಾಶವಿಲ್ಲ. ಇಲ್ಲಿ ನಾವು ಕುತರ್ಕಮಾಡದೆ, ಏನನ್ನೂ ಬಿಡದೆ, ಮತ್ತು ನಮ್ಮ ಮನಸೋ ಇಚ್ಛೆ ಅರ್ಥಮಾಡದೆ ಭಗವದ್ಗೀತೆಯನ್ನು ಒಪ್ಪಿಕೊಳ್ಳಬೇಕು. ಭಗವದ್ಗೀತೆಯನ್ನು ವೈದಿಕ ಜ್ಞಾನದ ಅತ್ಯಂತ ಪರಿಪೂರ್ಣ ನಿರೂಪಣೆ ಎಂದು ಒಪ್ಪಿಕೊಳ್ಳಬೇಕು. ವೈದಿಕ ಜ್ಞಾನವು ಅಲೌಕಿಕ ಮೂಲಗಳಿಂದ ಬರುತ್ತದೆ. ಇದರ ಪ್ರಾರಂಭದ ವಾಕ್ಯಗಳನ್ನು ಭಗವಂತನೇ ಆಡಿದ್ದಾನೆ. ಭಗವಂತನ ಮಾತುಗಳಿಗೆ **ಅಪೌರುಷೇಯ** ಎಂದು ಹೆಸರು. ಹೀಗೆಂದರೆ, ಈ ಮಾತುಗಳು ನಾಲ್ಕು ದೋಷಗಳಿಂದ ಕೂಡಿದ ಇಹಲೋಕದ ವ್ಯಕ್ತಿಯ ಮಾತುಗಳಿಂದ ಭಿನ್ನವಾದವು ಎಂದು ಅರ್ಥ. ಇಹಲೋಕದ ವ್ಯಕ್ತಿಯು (1) ಖಂಡಿತವಾಗಿಯೂ ತಪ್ಪುಗಳನ್ನು ಮಾಡುತ್ತಾನೆ, (2) ಭ್ರಮೆಗೆ ಒಳಗಾಗಿಯೇ ಇರುತ್ತಾನೆ, (3) ಇತರರಿಗೆ ಮೋಸಮಾಡುವ ಪ್ರವೃತ್ತಿಯವನಾಗಿರುತ್ತಾನೆ ಮತ್ತು (4) ಅಪರಿಪೂರ್ಣ ಇಂದ್ರಿಯಗಳಿಂದ ಮಿತಿಗೊಳಗಾಗಿರುತ್ತಾನೆ. ಈ ನಾಲ್ಕು ದೋಷಗಳ ಕಾರಣ ಮನುಷ್ಯನಾದವನು ಸರ್ವವ್ಯಾಪಿಯಾದ ಜ್ಞಾನವನ್ನು ಕುರಿತು ಪೂರ್ಣ ತಿಳುವಳಿಕೆಯನ್ನು ನೀಡಲಾರ.

ವೈದಿಕ ಜ್ಞಾನವನ್ನು ಇಂತಹ ದೋಷಯುಕ್ತ ಜೀವಿಗಳು ನೀಡುವುದಿಲ್ಲ. ಪ್ರಥಮವಾಗಿ ಸೃಷ್ಟಿಯಾದ ಜೀವಿ ಬ್ರಹ್ಮ. ಅವನ ಹೃದಯಕ್ಕೆ ಈ ಜ್ಞಾನವನ್ನು ನೀಡಲಾಯಿತು. ತಾನು ಭಗವಂತನಿಂದ ಪಡೆದುಕೊಂಡಂತೆಯೇ ಈ ಜ್ಞಾನವನ್ನು ಬ್ರಹ್ಮನು ತನ್ನ ಪುತ್ರರಿಗೂ ಶಿಷ್ಯರಿಗೂ ಅನುಗ್ರಹಿಸಿದನು. ಭಗವಂತನು ಪೂರ್ಣನು; ಆತನು ಐಹಿಕ ಪ್ರಕೃತಿಯ ನಿಯಮಗಳಿಗೆ ಒಳಗಾಗುವ ಸಾಧ್ಯತೆಯೇ ಇಲ್ಲ. ಆದುದರಿಂದ ಭಗವಂತನೇ ಈ ಜಗತ್ತಿನಲ್ಲಿರುವ ಎಲ್ಲ ವಸ್ತುಗಳ ಒಡೆಯ. ಬ್ರಹ್ಮನನ್ನು ಸೃಷ್ಟಿಸಿದಾತನೇ ಮೂಲ ಸೃಷ್ಟಿಕರ್ತ ಎಂದು ತಿಳಿಯುವಷ್ಟು ಬುದ್ಧಿ ನಮಗಿರಬೇಕು. ಹನ್ನೊಂದನೆಯ ಅಧ್ಯಾಯದಲ್ಲಿ ಭಗವಂತನನ್ನು **ಪ್ರಪಿತಾಮಹ** ಎಂದು ಸಂಬೋಧಿಸಿದೆ. ಏಕೆಂದರೆ ಬ್ರಹ್ಮನನ್ನು ಪಿತಾಮಹ ಎಂದು ಕರೆದಿದೆ ಮತ್ತು ಭಗವಂತನು ಪಿತಾಮಹನನ್ನು ಸೃಷ್ಟಿಸಿದವನು. ಆದುದರಿಂದ ಯಾರೂ ಯಾವುದೇ ವಸ್ತುವಿಗೂ ತಾನು ಒಡೆಯ ಎಂದು ಹೇಳಿಕೊಳ್ಳಬಾರದು.

ತನ್ನ ಜೀವನ ನಿರ್ವಹಣೆಗಾಗಿ ತನ್ನ ಭಾಗ ಎಂದು ಭಗವಂತನು ಪ್ರತ್ಯೇಕ ತೆಗೆದಿಟ್ಟದ್ದು ಎಂದೇ ವಸ್ತುಗಳನ್ನು ಸ್ವೀಕರಿಸಬೇಕು.

ನಮಗಾಗಿ ಭಗವಂತನು ಪ್ರತ್ಯೇಕವಾಗಿ ತೆಗೆದಿಟ್ಟ ವಸ್ತುಗಳನ್ನು ನಾವು ಹೇಗೆ ಬಳಸಬೇಕು ಎನ್ನುವದಕ್ಕೆ ಹಲವಾರು ನಿದರ್ಶನಗಳನ್ನು ಕೊಟ್ಟಿದೆ. ಇದನ್ನು ಭಗವದ್ಗೀತೆಯಲ್ಲಿಯೂ ವಿವರಿಸಿದೆ. ಅರ್ಜುನನು ಕುರುಕ್ಷೇತ್ರದ ಯುದ್ಧದಲ್ಲಿ ತಾನು ಯುದ್ಧ ಮಾಡುವುದಿಲ್ಲ ಎಂದು ನಿರ್ಧರಿಸಿದ. ಇದು ಅವನದೇ ನಿರ್ಣಯ. ತನ್ನ ಬಂಧುಗಳನ್ನು ಕೊಂದನಂತರ ರಾಜ್ಯವನ್ನು ಸಂತೋಷದಿಂದ ಅನುಭವಿಸುವುದು ಸಾಧ್ಯವಿಲ್ಲ ಎಂದು ಅರ್ಜುನನು ಭಗವಂತನಿಗೆ ಹೇಳಿದನು. ದೇಹದ ಆಧಾರದ ಮೇಲೆ ಮಾಡಿದ ನಿರ್ಣಯ ಇದು. ಏಕೆಂದರೆ ಅರ್ಜುನನು ದೇಹವೇ ತಾನು, ತನ್ನ ಸೋದರರು, ಸೋದರಳಿಯಂದಿರು, ಭಾವಂದಿರು, ಅಜ್ಜಂದಿರು ಮೊದಲಾದವರೆಲ್ಲ ತನ್ನ ರಕ್ತ ಸಂಬಂಧಿಗಳು ಅಥವಾ ತನ್ನ ದೇಹದ ವಿಸ್ತರಣೆಗಳು ಎಂದು ಭಾವಿಸಿದ್ದ. ಆದುದರಿಂದ ಆತನು ತನ್ನ ದೇಹದ ಬೇಡಿಕೆಗಳನ್ನು ಈಡೇರಿಸಲು ಬಯಸಿದ. ಈ ಅಭಿಪ್ರಾಯವನ್ನು ಬದಲಾಯಿಸುವುದಕ್ಕಾಗಿಯೇ ಭಗವಂತನು ಭಗವದ್ಗೀತೆಯನ್ನು ನುಡಿದ. ಕಡೆಯಲ್ಲಿ ಅರ್ಜುನನು, **ಕರಿಷ್ಯೇ ವಚನಂ ತವ** (ನಾನು ನಿನ್ನ ಮಾತಿನಂತೆ ನಡೆಯುತ್ತೇನೆ) ಎಂದು ಹೇಳಿ ಭಗವಂತನ ಆದೇಶಕ್ಕೆ ಅನುಗುಣವಾಗಿ ಯುದ್ಧ ಮಾಡಲು ತೀರ್ಮಾನಿಸಿದ.

ಮನುಷ್ಯರು ಈ ಜಗತ್ತಿನಲ್ಲಿರುವುದು ಬೆಕ್ಕು ನಾಯಿಗಳಂತೆ ಜಗಳವಾಡುವುದಕ್ಕಲ್ಲ. ಮನುಷ್ಯನಾದವನು ತನ್ನ ಬದುಕಿನ ಗುರಿಯನ್ನು ಅರ್ಥ ಮಾಡಿಕೊಳ್ಳಬೇಕು. ಎಲ್ಲ ವೈದಿಕ ಸಾಹಿತ್ಯದಲ್ಲಿ ಈ ದಿಗ್ದರ್ಶನವಿದೆ ಮತ್ತು ಭಗವದ್ಗೀತೆಯಲ್ಲಿ ಇದರ ತಿರುಳನ್ನು ಕೊಟ್ಟಿದೆ. ವೈದಿಕ ಸಾಹಿತ್ಯವು ಮನುಷ್ಯರಿಗಾಗಿ ಉದ್ದಿಷ್ಟವಾಗಿದೆ, ಪ್ರಾಣಿಗಳಿಗಾಗಿ ಅಲ್ಲ. ಪ್ರಾಣಿಗಳು ಇತರ ಪ್ರಾಣಿಗಳನ್ನು ಕೊಲ್ಲಬಹುದು. ಇದರಲ್ಲಿ ಪಾಪದ ಪ್ರಶ್ನೆಯೇ ಇಲ್ಲ. ಆದರೆ ಮನುಷ್ಯನೊಬ್ಬನು ತನ್ನ ನಾಲಿಗೆಯ ರುಚಿಯನ್ನು ಅಂಕೆಯಲ್ಲಿಡದೆ ಅದರ ತೃಪ್ತಿಗಾಗಿ ಒಂದು ಪ್ರಾಣಿಯನ್ನು ಕೊಂದರೆ ಅವನು ನಿಸರ್ಗದ ನಿಯಮಗಳನ್ನು ಮುರಿದುದಕ್ಕಾಗಿ ಹೊಣೆಯಾಗುತ್ತಾನೆ. ಭಗವದ್ಗೀತೆಯಲ್ಲಿ — ಪ್ರಕೃತಿಯಲ್ಲಿ ಮೂರು ಗುಣಗಳು, ಇವು ಸತ್ವ, ರಜಸ್ಸು ಮತ್ತು ತಮಸ್ಸು, ಇವುಗಳಿಗೆ ಅನುಗುಣವಾಗಿ ಕಾರ್ಯಗಳಲ್ಲಿಯೂ ಮೂರು ವಿಧ ಎಂದು ಹೇಳಿದೆ. ಹೀಗೆಯೇ ಆಹಾರದಲ್ಲಿ ಸಹ ಮೂರು ರೀತಿಗಳು — ಸಾತ್ವಿಕ ಆಹಾರ, ರಾಜಸ ಆಹಾರ ಮತ್ತು ತಾಮಸ ಆಹಾರ — ಇದೆಲ್ಲವನ್ನೂ ಸ್ಪಷ್ಟವಾಗಿ ವರ್ಣಿಸಿದೆ. ಭಗವದ್ಗೀತೆಯ ಆದೇಶಗಳನ್ನು ನಾವು ಯೋಗ್ಯ ರೀತಿಯಲ್ಲಿ ಬಳಸಿಕೊಂಡರೆ ನಮ್ಮ ಇಡೀ ಬದುಕು ಪರಿಶುದ್ಧವಾಗುತ್ತದೆ. ಕಟ್ಟಕಡೆಗೆ ನಾವು ಭೌತಿಕ ಆಕಾಶದ ಆಚೆ ಇರುವ ನಮ್ಮ ಗುರಿಯನ್ನು ಸೇರಲು ಶಕ್ತರಾಗುತ್ತೇವೆ. (**ಯದ್ ಗತ್ವಾ ನ ನಿವರ್ತನ್ತೇ ತದ್-ಧಾಮ ಪರಮಂ ಮಮ**).

ಈ ಗುರಿಯನ್ನು ಸನಾತನ ಆಕಾಶ ಎಂದು ಕರೆದಿದೆ; ಇದು ಸನಾತನ, ಆಧ್ಯಾತ್ಮಿಕ ಆಕಾಶ. ನಮ್ಮ ಐಹಿಕ ಜಗತ್ತಿನಲ್ಲಿ ಎಲ್ಲವೂ ನಶ್ವರ ಎಂದು ಕಂಡುಕೊಳ್ಳುತ್ತೇವೆ. ಯಾವುದೇ ವಸ್ತು ಹುಟ್ಟುತ್ತದೆ, ಸ್ವಲ್ಪ ಕಾಲ ಇರುತ್ತದೆ, ಕೆಲವು ಉಪವಸ್ತುಗಳನ್ನು ಸೃಷ್ಟಿಮಾಡುತ್ತದೆ, ಕ್ಷಯಿಸುತ್ತದೆ, ಅನಂತರ ಮಾಯವಾಗುತ್ತದೆ. ಇದು ಇಹಜಗತ್ತಿನ ನಿಯಮ. ಆದರೆ ಈ ನಶ್ವರ ಜಗತ್ತಿನಾಚೆ ಬೇರೊಂದು ಜಗತ್ತಿದೆ. ನಮಗೆ ಅದರ ವಿಷಯ ತಿಳಿದಿದೆ. ಅದು ಬೇರೊಂದು ಸ್ವಭಾವದ

ಜಗತ್ತು. ಅದು ಸನಾತನ, ಎಂದೆಂದಿಗೂ ಇರುವಂತಹದು. ಹನ್ನೊಂದನೆಯ ಅಧ್ಯಾಯದಲ್ಲಿ ಜೀವಿಯನ್ನೂ ಸನಾತನ, ಎಂದೆಂದಿಗೂ ಇರುವಂತಹದು ಎಂದು ವರ್ಣಿಸಿದೆ. ಭಗವಂತನನ್ನೂ ಸನಾತನ ಎಂದು ವರ್ಣಿಸಿದೆ. ಭಗವಂತನೊಡನೆ ನಮಗೆ ನಿಕಟ ಬಾಂಧವ್ಯವಿದೆ; ನಾವೆಲ್ಲ ಗುಣಾತ್ಮಕವಾಗಿ ಒಂದೇ ಆದದ್ದರಿಂದ ಸನಾತನ ಧಾಮ, ಸನಾತನ ಪರಮ ಪುರುಷ, ಸನಾತನ ಜೀವಿಗಳು. ಭಗವದ್ಗೀತೆಯ ಸಂಪೂರ್ಣ ಉದ್ದೇಶವೇ ನಮ್ಮ ಸನಾತನ ಧರ್ಮವನ್ನು, ಜೀವನದ ನಿರಂತರ ಕರ್ತವ್ಯವನ್ನು ಮರಳಿ ತಂದುಕೊಡುವುದು. ನಾವು ತಾತ್ಕಾಲಿಕವಾಗಿ ಬೇರೆ ಕ್ರಿಯೆಗಳಲ್ಲಿ ನಿರತರಾಗಿರುತ್ತೇವೆ. ಆದರೆ ಈ ತಾತ್ಕಾಲಿಕ ಕ್ರಿಯೆಗಳನ್ನು ಬಿಟ್ಟು ಭಗವಂತನು ಆದೇಶಿಸಿದ ಕಾರ್ಯಗಳಲ್ಲಿ ನಿರತರಾದಾಗ ಈ ಎಲ್ಲ ಚಟುವಟಿಕೆಗಳನ್ನು ಪರಿಶುದ್ಧಗೊಳಿಸಬಹುದು. ಇದಕ್ಕೆ ಪರಿಶುದ್ಧ ಜೀವನ ಎಂದು ಹೆಸರು.

ಭಗವಂತನೂ ಅವನ ಅಲೌಕಿಕ ನಿವಾಸವೂ ಸನಾತನ; ಜೀವಿಗಳೂ ಸನಾತನ; ಸನಾತನ ನಿವಾಸದಲ್ಲಿ ಭಗವಂತನ ಮತ್ತು ಜೀವಿಗಳ ಸಹವಾಸವೇ ಮಾನವನ ಬದುಕಿನ ಪರಿಪೂರ್ಣತೆ. ಜೀವಿಗಳು ಭಗವಂತನ ಪುತ್ರರಾದದ್ದರಿಂದ ಅವನಿಗೆ ಅವರಲ್ಲಿ ಬಹು ಕೃಪೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು, **ಸರ್ವಯೋನಿಷು ........ ಅಹಂ ಬೀಜಪ್ರದಃ ಪಿತಾ** "ನಾನೇ ಎಲ್ಲರ ತಂದೆ" ಎಂದು ಘೋಷಿಸುತ್ತಾನೆ. ನಿಜ, ತಮ್ಮ ತಮ್ಮ ಕರ್ಮಗಳಿಗೆ ಅನುಗುಣವಾಗಿ ಮೂರು ಬಗೆಗಳ ಜೀವಿಗಳಿದ್ದಾರೆ. ಆದರೆ ಇಲ್ಲಿ ಭಗವಂತನು ತಾನೇ ಅವರೆಲ್ಲರ ತಂದೆ ಎಂದು ಹೇಳುತ್ತಾನೆ. ಆದುದರಿಂದ ಭಗವಂತನು ಈ ಪತಿತ, ಬದ್ಧ ಆತ್ಮಗಳನ್ನು ಉದ್ಧಾರ ಮಾಡಲು ಅವತಾರ ಮಾಡುತ್ತಾನೆ; ಈ ಸನಾತನ ಜೀವಿಗಳು ಭಗವಂತನೊಡನೆ ನಿರಂತರ ಸಹವಾಸಕ್ಕಾಗಿ ತಮ್ಮ ಸನಾತನ ಸ್ಥಾನಗಳನ್ನು ಪಡೆದುಕೊಳ್ಳಬೇಕು. ಹೀಗೆ ಅವರನ್ನು ಸನಾತನ ಆಕಾಶಕ್ಕೆ ಹಿಂದಕ್ಕೆ ಕರೆದುಕೊಳ್ಳಲು ಭಗವಂತನು ಅವತರಿಸುತ್ತಾನೆ. ಬದ್ಧ ಆತ್ಮಗಳ ಉದ್ಧಾರಕ್ಕಾಗಿ ಭಗವಂತನೇ ಬೇರೆ ಬೇರೆ ಅವತಾರಗಳನ್ನು ಎತ್ತುತ್ತಾನೆ ಅಥವಾ ತನ್ನ ಆಪ್ತ ಸೇವಕರನ್ನು ಮಕ್ಕಳಾಗಿ ಅಥವಾ ತನ್ನ ಸಂಗಾತಿಗಳಾಗಿ ಇಲ್ಲವೇ ಆಚಾರ್ಯರಾಗಿ ಕಳುಹಿಸುತ್ತಾನೆ.

ಆದುದರಿಂದ ಸನಾತನ ಧರ್ಮ ಎಂದರೆ ಯಾವುದೊಂದು ಧರ್ಮದ, ಪಂಥದ ಪ್ರಕ್ರಿಯೆಯಲ್ಲ. ಅದು ಸನಾತನ ಜೀವಿಗಳು ಸನಾತನ ಭಗವಂತನೊಡನೆ ಹೊಂದಿರುವ ಸಂಬಂಧದ ಸನಾತನ ಕರ್ತವ್ಯ. ಆಗಲೇ ಹೇಳಿದಂತೆ ಸನಾತನ ಧರ್ಮ ಎನ್ನುವುದು ಜೀವಿಯ ನಿರಂತರ ಕರ್ತವ್ಯವನ್ನು ತೋರಿಸುತ್ತದೆ. ಸನಾತನ ಪದವನ್ನು ಶ್ರೀಪಾದ ರಾಮಾನುಜಾಚಾರ್ಯರು, ಆದಿಯೂ ಅಂತ್ಯವೂ ಇಲ್ಲದ್ದು ಎಂದು ವಿವರಿಸಿದ್ದಾರೆ. ಆದುದರಿಂದ ನಾವು ಸನಾತನ ಧರ್ಮವನ್ನು ಕುರಿತು ಮಾತನಾಡಿದಾಗ ಶ್ರೀಪಾದ ರಾಮಾನುಜಾಚಾರ್ಯರ ಅಧಿಕಾರ ವಾಣಿಯಂತೆ ಆದಿಯಾಗಲಿ ಅಂತ್ಯವಾಗಲಿ ಇಲ್ಲದ್ದು ಎಂದು ಭಾವಿಸಬೇಕು.

**ರಿಲಿಜನ್** (Religion) ಎನ್ನುವ ಇಂಗ್ಲಿಷ್ ಪದವು ಸನಾತನ ಧರ್ಮಕ್ಕಿಂತ ಸ್ವಲ್ಪ ಭಿನ್ನವಾದದ್ದು. ರಿಲಿಜನ್ ಎನ್ನುವ ಪದವು ಶ್ರದ್ಧೆಯ ಭಾವವನ್ನು ತಿಳಿಸುತ್ತದೆ. ಶ್ರದ್ಧೆಯು ಬದಲಾಗಬಹುದು. ಒಬ್ಬ ವ್ಯಕ್ತಿಗೆ ಒಂದು ನಿರ್ದಿಷ್ಟ ಪ್ರಕ್ರಿಯೆಯಲ್ಲಿ ಶ್ರದ್ಧೆಯಿರಬಹುದು. ಆತನು ಈ ಶ್ರದ್ಧೆಯನ್ನು ಬಿಟ್ಟು ಬೇರೊಂದನ್ನು ಸ್ವೀಕರಿಸಬಹುದು. ಆದರೆ ಸನಾತನ ಧರ್ಮ ಎನ್ನುವ ಶಬ್ದವು ಬದಲಾವಣೆ ಮಾಡಲು ಸಾಧ್ಯವಿಲ್ಲದ ಕಾರ್ಯವನ್ನು ಸೂಚಿಸುತ್ತದೆ.

ಉದಾಹರಣೆಗೆ ನೀರಿನಿಂದ ದ್ರವತ್ವವನ್ನು ತೆಗೆದುಹಾಕಲು ಸಾಧ್ಯವಿಲ್ಲ; ಬೆಂಕಿಯಿಂದ ಶಾಖವನ್ನು ತೆಗೆದುಹಾಕಲು ಸಾಧ್ಯವಿಲ್ಲ. ಹಾಗೆಯೇ ಸನಾತನ ಜೀವಿಯ ಸನಾತನ ಕರ್ತವ್ಯವನ್ನು ಜೀವಿಯಿಂದ ತೆಗೆದುಹಾಕಲು ಸಾಧ್ಯವಿಲ್ಲ. ಸನಾತನ ಧರ್ಮವು ಜೀವಿಯೊಂದಿಗೆ ಎಂದೆಂದೂ ಅವಿಭಾಜ್ಯ. ಆದುದರಿಂದ ನಾವು ಸನಾತನ ಧರ್ಮವನ್ನು ಕುರಿತು ಮಾತನಾಡಿದಾಗ ಶ್ರೀಪಾದ ರಾಮಾನುಜಾಚಾರ್ಯರ ಅಧಿಕಾರವಾಣಿಯಂತೆ ಅದಕ್ಕೆ ಆದಿಯೂ ಇಲ್ಲ ಅಂತ್ಯವೂ ಇಲ್ಲ ಎಂದು ಭಾವಿಸಬೇಕು. ಆದಿಯಾಗಲಿ ಅಂತ್ಯವಾಗಲಿ ಇಲ್ಲದ್ದು ಒಂದು ಪಂಥಕ್ಕೆ ಸೇರಿರಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಯಾವುದೇ ಎಲ್ಲೆಗಳ ಮಿತಿ ಇರಲು ಸಾಧ್ಯವಿಲ್ಲ. ಯಾವುದಾದರೊಂದು ಪಂಥದ ಶ್ರದ್ಧೆಗೆ ಸೇರಿದವರು ಸನಾತನ ಧರ್ಮವೂ ಒಂದು ಪಂಥಕ್ಕೆ ಸೇರಿದ್ದು ಎಂದು ತಪ್ಪಾಗಿ ಭಾವಿಸುತ್ತಾರೆ. ಆದರೆ ಈ ವಿಷಯವನ್ನು ಆಳವಾಗಿ ಪರಿಶೀಲಿಸಿ ಆಧುನಿಕ ವಿಜ್ಞಾನದ ಬೆಳಕಿನಲ್ಲಿ ನೋಡಿದರೆ ಸನಾತನ ಧರ್ಮವು ಜಗತ್ತಿನ ಎಲ್ಲ ಜನರಿಗೆ, ಅಷ್ಟೇ ಅಲ್ಲ, ವಿಶ್ವದ ಎಲ್ಲ ಜೀವಿಗಳಿಗೆ ಸಂಬಂಧಿಸಿದ್ದು ಎಂದು ತಿಳಿಯುತ್ತದೆ.

ಸನಾತನೇತರ ಧಾರ್ಮಿಕ ಶ್ರದ್ಧೆಗೆ ಮಾನವನ ಇತಿಹಾಸದಲ್ಲಿ ಎಲ್ಲಿಯೋ ಪ್ರಾರಂಭವಿರಬಹುದು. ಆದರೆ ಸನಾತನ ಧರ್ಮದ ಇತಿಹಾಸಕ್ಕೆ ಪ್ರಾರಂಭ ಎನ್ನುವುದು ಇಲ್ಲ. ಏಕೆಂದರೆ ಅದು ಜೀವಿಗಳೊಂದಿಗೆ ನಿರಂತರವಾಗಿ ಉಳಿಯುತ್ತದೆ. ಜೀವಿಗಳ ಮಟ್ಟಿಗೆ ಹೇಳುವುದಾದರೆ ಅಧಿಕಾರದಿಂದ ಹೇಳಬಲ್ಲ ಶಾಸ್ತ್ರಗಳು ಜೀವಿಗೆ ಹುಟ್ಟೂ ಇಲ್ಲ ಸಾವೂ ಇಲ್ಲ ಎನ್ನುತ್ತವೆ. ಜೀವಿಯು ಹುಟ್ಟುವುದೇ ಇಲ್ಲ, ಸಾಯುವುದೇ ಇಲ್ಲ ಎಂದು ಗೀತೆಯು ಹೇಳುತ್ತದೆ. ಆತನು ಸನಾತನನು, ಅವಿನಾಶನು; ಅವನ ನಶ್ವರವಾದ ಐಹಿಕ ದೇಹವು ನಾಶವಾದ ಮೇಲೂ ಅವನು ಜೀವಿಸಿಯೇ ಇರುತ್ತಾನೆ. ಸನಾತನ ಧರ್ಮದ ಪರಿಕಲ್ಪನೆಯ ವಿಷಯದಲ್ಲಿ ನಾವು ಸಂಸ್ಕೃತದಲ್ಲಿ ಆ ಪದದ ಮೂಲವನ್ನು ಗಮನಿಸಿ ಧರ್ಮದ ಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು. ಯಾವುದೊಂದು ವಿಶಿಷ್ಟ ವಸ್ತುವಿನೊಂದಿಗೆ ಯಾವುದು ನಿರಂತರವಾಗಿರುತ್ತದೋ ಅದು ಧರ್ಮ. ಬೆಂಕಿಯೊಂದಿಗೆ ಶಾಖವೂ ಬೆಳಕೂ ಇರುತ್ತವೆ ಎಂದು ತಿಳಿದುಕೊಳ್ಳುತ್ತೇವೆ. ಶಾಖ ಮತ್ತು ಬೆಳಕುಗಳಿಲ್ಲದೆ ಬೆಂಕಿ ಎನ್ನುವ ಪದಕ್ಕೆ ಅರ್ಥವೇ ಇಲ್ಲ. ಹಾಗೆಯೇ ಜೀವನ ಸಾರಭೂತವಾದ ಭಾಗವನ್ನು, ಅವನ ನಿರಂತರ ಸಂಗಾತಿಯಾದ ಭಾಗವನ್ನು ನಾವು ಕಂಡುಕೊಳ್ಳಬೇಕು. ಈ ನಿರಂತರ ಸಂಗಾತಿಯೇ ಅವನ ಸನಾತನ ಗುಣ ಮತ್ತು ಆ ಸನಾತನ ಗುಣವೇ ಅವನ ಸನಾತನ ಧರ್ಮ.

ಸನಾತನ ಗೋಸ್ವಾಮಿಯವರು ಪ್ರತಿಯೊಂದು ಜೀವನ ಸ್ವರೂಪವನ್ನು ಕುರಿತು ಶ್ರೀ ಚೈತನ್ಯ ಮಹಾಪ್ರಭುಗಳನ್ನು ಪ್ರಶ್ನಿಸಿದಾಗ ಮಹಾಪ್ರಭುಗಳು ದೇವೋತ್ತಮ ಪರಮ ಪುರುಷನ ಸೇವೆಯೇ ಜೀವಿಯ ಸ್ವರೂಪ ಎಂದು ಹೇಳಿದರು. ಚೈತನ್ಯ ಮಹಾಪ್ರಭುಗಳ ಈ ಮಾತನ್ನು ನಾವು ವಿಶ್ಲೇಷಿಸಿ ನೋಡಿದರೆ ಪ್ರತಿಯೊಬ್ಬ ಜೀವಿಯೂ ಮತ್ತೊಬ್ಬ ಜೀವಿಯ ಸೇವೆಯಲ್ಲೇ ಸದಾ ನಿರತನಾಗಿರುತ್ತಾನೆ ಎಂದು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಒಬ್ಬ ಜೀವಿಯು ಇತರ ಜೀವಿಗಳಿಗೆ ಹಲವು ರೀತಿಗಳಲ್ಲಿ ಸೇವೆಸಲ್ಲಿಸುತ್ತಾನೆ. ಹೀಗೆ ಮಾಡುವುದರಿಂದ ಜೀವಿಯು ಬದುಕನ್ನು ಸವಿಯುತ್ತಾನೆ. ಸೇವಕರು ತಮ್ಮ ಒಡೆಯನನ್ನು ಸೇವಿಸುವಂತೆ ಕೆಳಮಟ್ಟದ ಪ್ರಾಣಿಗಳು ಮನುಷ್ಯರನ್ನು ಸೇವಿಸುತ್ತವೆ. ["ಎ" ಯು ತನ್ನ ಒಡೆಯ "ಬಿ" ಯನ್ನು ಸೇವಿಸುತ್ತಾನೆ. "ಬಿ" ಯು ತನ್ನ ಒಡೆಯ "ಸಿ" ಯನ್ನು ಸೇವಿಸುತ್ತಾನೆ. "ಸಿ" ಯು ತನ್ನ ಒಡೆಯ "ಡಿ" ಯನ್ನು ಸೇವಿಸುತ್ತಾನೆ ಇತ್ಯಾದಿ].

ಈ ಸನ್ನಿವೇಶದಲ್ಲಿ ಒಬ್ಬ ಸ್ನೇಹಿತನು ಮತ್ತೊಬ್ಬ ಸ್ನೇಹಿತನನ್ನು ಸೇವಿಸುತ್ತಾನೆ. ತಾಯಿಯು ಮಗನನ್ನು ಸೇವಿಸುತ್ತಾಳೆ. ಹೆಂಡತಿಯು ಗಂಡನನ್ನು ಸೇವಿಸುತ್ತಾಳೆ. ಗಂಡನು ಹೆಂಡತಿಯನ್ನು ಸೇವಿಸುತ್ತಾನೆ ಇತ್ಯಾದಿ. ಇದೇ ರೀತಿಯಲ್ಲಿ ನಾವು ಹುಡುಕುತ್ತಾ ಹೋದರೆ ಜೀವಿಗಳ ಸಮಾಜದಲ್ಲಿ ಸೇವೆಯ ಕಾರ್ಯಕ್ಕೆ ಹೊರತಾದ ಜೀವ ಎನ್ನುವುದೇ ಇಲ್ಲ ಎನ್ನುವುದನ್ನು ಕಾಣುತ್ತೇವೆ. ತನ್ನ ಸೇವಾ ಸಾಮರ್ಥ್ಯದಲ್ಲಿ ಜನತೆಗೆ ನಂಬಿಕೆಯನ್ನು ಹುಟ್ಟಿಸುವುದಕ್ಕೋಸ್ಕರ ರಾಜಕಾರಣಿಯು ತನ್ನ ಪ್ರಣಾಳಿಕೆಯನ್ನು ಪ್ರಕಟಿಸುತ್ತಾನೆ. ಆತನು ಸಮಾಜಕ್ಕೆ ಮೌಲಿಕವಾದ ಸೇವೆಯನ್ನು ಮಾಡುತ್ತಾನೆ ಎಂದು ನಂಬಿ ಮತದಾರರು ರಾಜಕಾರಣಿಗೆ ತಮ್ಮ ಮೌಲಿಕವಾದ ಮತಗಳನ್ನು ನೀಡುತ್ತಾರೆ. ಅಂಗಡಿಯವನು ಗಿರಾಕಿಯ ಸೇವೆ ಮಾಡುತ್ತಾನೆ. ಕುಶಲಕರ್ಮಿಯು ಬಂಡವಾಳಗಾರನ ಸೇವೆ ಮಾಡುತ್ತಾನೆ. ಬಂಡವಾಳಗಾರನು ಕುಟುಂಬವನ್ನು ಸೇವಿಸುತ್ತಾನೆ. ಸನಾತನ ಜೀವನದ ಸನಾತನ ಸಾಮರ್ಥ್ಯಕ್ಕನುಗುಣವಾಗಿ ಕುಟುಂಬವು ರಾಜ್ಯಕ್ಕೆ ಸೇವೆ ಸಲ್ಲಿಸುತ್ತದೆ. ಹೀಗೆ ಇತರ ಜೀವಿಗಳಿಗೆ ಸೇವೆ ಸಲ್ಲಿಸುವುದರಿಂದ ಯಾವ ಜೀವಿಗೂ ವಿನಾಯಿತಿ ಇಲ್ಲ ಎನ್ನುವುದನ್ನು ಕಾಣುತ್ತೇವೆ. ಆದುದರಿಂದ ಸೇವೆಯೇ ಜೀವನದ ನಿರಂತರ ಸಂಗಾತಿ ಮತ್ತು ಸೇವೆ ಮಾಡುವುದೇ ಜೀವನದ ಸನಾತನ ಧರ್ಮ ಎಂದು ನಾವು ಖಂಡಿತವಾಗಿ ತೀರ್ಮಾನಿಸಬಹುದು.

ಅದರೂ ಮನುಷ್ಯನು ಒಂದು ನಿರ್ದಿಷ್ಟ ಕಾಲದಲ್ಲಿ ಒಂದು ನಿರ್ದಿಷ್ಟ ಬಗೆಯ ಶ್ರದ್ಧೆಗೆ ತಾನು ಸೇರಿದವನು ಎಂದು ಹೇಳುತ್ತಾನೆ ಮತ್ತು ತಾನು ಒಬ್ಬ ಹಿಂದು, ಮುಸ್ಲಿಂ, ಕ್ರೈಸ್ತ, ಬೌದ್ಧ ಅಥವಾ ಬೇರಾವುದೋ ಪಂಥವನ್ನು ಅನುಸರಿಸುತ್ತೇನೆ ಎಂದು ಹೇಳಿಕೊಳ್ಳುತ್ತಾನೆ. ಇಂತಹವು ಸನಾತನ ಧರ್ಮೇತರ ಹೆಸರುಗಳು. ಹಿಂದುವೊಬ್ಬನು ತನ್ನ ಮತವನ್ನು ಬದಲಾಯಿಸಿ ಮುಸ್ಲಿಂ ಆಗಬಹುದು ಅಥವಾ ಮುಸ್ಲಿಂನೊಬ್ಬನು ತನ್ನ ಮತವನ್ನು ಬದಲಾಯಿಸಿ ಹಿಂದು ಆಗಬಹುದು ಅಥವಾ ಕ್ರೈಸ್ತನೊಬ್ಬ ತನ್ನ ಮತವನ್ನು ಬದಲಾಯಿಸಬಹುದು ಇತ್ಯಾದಿ. ಆದರೆ ಯಾವುದೇ ಸನ್ನಿವೇಶದಲ್ಲಿಯೂ ಮತದ ಬದಲಾವಣೆಯು ಇತರರ ಸೇವೆ ಮಾಡುವ ಸನಾತನ ಧರ್ಮದ ಮೇಲೆ ಪ್ರಭಾವ ಬೀರುವುದಿಲ್ಲ. ಯಾವುದೇ ಸನ್ನಿವೇಶದಲ್ಲಿಯೂ ಹಿಂದು, ಮುಸ್ಲಿಂ ಅಥವಾ ಕ್ರೈಸ್ತನು ಮತ್ತೊಬ್ಬನ ಸೇವಕ. ಆದುದರಿಂದ ಯಾವುದೋ ಒಂದು ಮತಕ್ಕೆ ಸೇರಿದವನು ಎಂದು ಹೇಳಿಕೊಂಡರೆ ಸನಾತನ ಧರ್ಮಕ್ಕೆ ಸೇರಿದವನು ಎಂದಲ್ಲ. ಸೇವೆ ಮಾಡುವುದೇ ಸನಾತನ ಧರ್ಮ.

ವಾಸ್ತವವಾಗಿ ನಮಗೆ ಭಗವಂತನೊಡನೆ ಸೇವೆಯ ಬಾಂಧವ್ಯವಿದೆ. ಭಗವಂತನೇ ಪರಮ ಭೋಕ್ತಾರ. ಜೀವಿಗಳಾದ ನಾವೆಲ್ಲ ಅವನ ಸೇವಕರು. ನಾವೆಲ್ಲ ಸೃಷ್ಟಿಯಾಗಿರುವುದು ಅವನ ಭೋಗಕ್ಕಾಗಿಯೇ. ಆ ದೇವೋತ್ತಮ ಪರಮ ಪುರುಷನ ಸನಾತನ ಭೋಗದಲ್ಲಿ ನಾವೂ ಭಾಗಿಗಳಾದರೆ ನಾವು ಸುಖಿಗಳಾಗುತ್ತೇವೆ. ಬೇರೆ ರೀತಿಯಲ್ಲಿ ನಾವು ಸುಖಿಗಳಾಗುವುದು ಸಾಧ್ಯವಿಲ್ಲ. ಹೊಟ್ಟೆಯೊಡನೆ ಸಹಕರಿಸದೆ ದೇಹದ ಯಾವುದೇ ಭಾಗವು ಹೇಗೆ ಸುಖಿಯಾಗಲು ಸಾಧ್ಯವಿಲ್ಲವೋ ಹಾಗೆಯೇ ನಾವು ಸ್ವತಂತ್ರವಾಗಿ ಸುಖಿಗಳಾಗುವುದು ಸಾಧ್ಯವಿಲ್ಲ. ಭಗವಂತನಿಗೆ ಅಲೌಕಿಕವಾದ ಪ್ರೀತಿಯ ಸೇವೆಯನ್ನು ಅರ್ಪಿಸದೆ ಜೀವಿಯು ಸುಖಿಯಾಗಲಾರ.

ಭಗವದ್ಗೀತೆಯು ಬೇರೆ ದೇವತೆಗಳನ್ನು ಪೂಜಿಸುವುದನ್ನಾಗಲಿ ಅವರನ್ನು ಸೇವಿಸುವುದನ್ನಾಗಲೀ ಅನುಮೋದಿಸುವುದಿಲ್ಲ. ಏಳನೆಯ ಅಧ್ಯಾಯದ ಇಪ್ಪತ್ತನೆಯ ಶ್ಲೋಕದಲ್ಲಿ ಹೀಗೆ ಹೇಳಿದೆ —

**ಕಾಮೈಸ್ ತೈಸ್ ತೈರ್ ಹೃತಜ್ಞಾನಾಃ ಪ್ರಪದ್ಯನ್ತೇಽನ್ಯ ದೇವತಾಃ |**
**ತಂ ತಂ ನಿಯಮಮ್ ಆಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ||**

"ಐಹಿಕ ಬಯಕೆಗಳು ಯಾರ ಬುದ್ಧಿಶಕ್ತಿಯನ್ನು ಅಪಹರಿಸಿರುತ್ತವೆಯೋ ಅವರು ಅನ್ಯದೇವತೆಗಳಿಗೆ ಶರಣಾಗುತ್ತಾರೆ ಮತ್ತು ತಮ್ಮ ತಮ್ಮ ಪ್ರಕೃತಿಗಳಿಗನುಗುಣವಾಗಿ ಪೂಜೆಯ ನಿಯಮಗಳನ್ನು ಅನುಸರಿಸುತ್ತಾರೆ." ಕಾಮವನ್ನು ಅನುಸರಿಸುವವರು ಮಾತ್ರ ದೇವತೆಗಳನ್ನು ಪೂಜೆಮಾಡುತ್ತಾರೆ, ಪರಮ ಪ್ರಭು ಶ್ರೀಕೃಷ್ಣನನ್ನು ಪೂಜೆಮಾಡುವುದಿಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ನಾವು ಕೃಷ್ಣನ ಹೆಸರನ್ನು ಹೇಳಿದಾಗ ಯಾವುದೇ ಒಂದು ಪಂಥದವರು ಕೊಟ್ಟಿರುವ ಹೆಸರನ್ನು ಹೇಳುತ್ತಿಲ್ಲ. **ಕೃಷ್ಣ** ಎಂದರೆ ಅತ್ಯುನ್ನತ ಆನಂದ. ಭಗವಂತನೇ ಎಲ್ಲ ಆನಂದದ ಸಾಗರ, ಎಲ್ಲ ಆನಂದದ ಭಂಡಾರ ಎಂದು ದೃಢಪಡಿಸಿದೆ. ನಾವೆಲ್ಲ ಆನಂದಕ್ಕಾಗಿ ಹಾತೊರೆಯುತ್ತೇವೆ. **ಆನನ್ದಮಯೋಽಭ್ಯಾಸಾತ್** (ವೇದಾಂತ ಸೂತ್ರ 1.1.12). ಭಗವಂತನಂತೆ ಜೀವಿಗಳೂ ಪ್ರಜ್ಞಾಭರಿತರು ಮತ್ತು ಅವರು ಸುಖವನ್ನು ಅರಸುತ್ತಾರೆ. ಭಗವಂತನು ಸದಾ ಆನಂದಮಯನು. ಜೀವಿಗಳು ಭಗವಂತನೊಂದಿಗೆ ಸೇರಿದರೆ, ಅವನೊಡನೆ ಸಹಕರಿಸಿದರೆ ಮತ್ತು ಅವನ ಸಹವಾಸದಲ್ಲಿ ಭಾಗಿಗಳಾದರೆ ಅವರೂ ಸುಖಿಗಳಾಗುತ್ತಾರೆ.

ಭಗವಂತನು ಸುಖಮಯವಾದ ತನ್ನ ಲೀಲೆಗಳನ್ನು ವೃಂದಾವನದಲ್ಲಿ ತೋರಲು ಈ ಮರ್ತ್ಯ ಜಗತ್ತಿಗೆ ಇಳಿದು ಬರುತ್ತಾನೆ. ಶ್ರೀಕೃಷ್ಣನು ವೃಂದಾವನದಲ್ಲಿದ್ದಾಗ ಅವನ ಗೋಪಾಲಕ ಸ್ನೇಹಿತರೊಡನೆ, ಅವನ ಸಖಿಯರೊಡನೆ, ವೃಂದಾವನದ ಇತರ ನಿವಾಸಿಗಳೊಡನೆ ಮತ್ತು ಗೋವುಗಳೊಡನೆ ಅವನ ಲೀಲೆಗಳು ಸುಖಮಯವಾಗಿದ್ದವು. ಇಡೀ ವೃಂದಾವನದ ಜನತೆಗೆ ಕೃಷ್ಣನನ್ನು ಬಿಟ್ಟು ಬೇರೇನೂ ತಿಳಿದಿರಲಿಲ್ಲ. ಆದರೆ ಶ್ರೀಕೃಷ್ಣನು ತನ್ನ ತಂದೆ ನಂದಮಹಾರಾಜನಿಗೆ ದೇವತೆಯಾದ ಇಂದ್ರನನ್ನು ಪೂಜೆ ಮಾಡುವುದರಲ್ಲಿ ಇದ್ದ ಉತ್ಸಾಹವನ್ನು ಕುಂದಿಸಿದನು. ಏಕೆಂದರೆ ಜನರು ಯಾವ ದೇವತೆಯನ್ನೂ ಪೂಜಿಸಬಾರದೆಂದು ತೋರಿಸಲು ಕೃಷ್ಣನು ಬಯಸಿದ. ಅವರು ಪೂಜಿಸಬೇಕಾದದ್ದು ಭಗವಂತನನ್ನು ಮಾತ್ರ. ಏಕೆಂದರೆ ಅವರ ಕಟ್ಟಕಡೆಯ ಗುರಿ ಭಗವಂತನ ನಿವಾಸಕ್ಕೆ ಹಿಂದಿರುಗುವುದು.

ಶ್ರೀಕೃಷ್ಣನ ನಿವಾಸವನ್ನು ಭಗವದ್ಗೀತೆಯ ಹದಿನೈದನೆಯ ಅಧ್ಯಾಯದ ಆರನೆಯ ಶ್ಲೋಕದಲ್ಲಿ ವರ್ಣಿಸಿದೆ —

**ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ |**
**ಯದ್‌ಗತ್ವಾ ನ ನಿವರ್ತನ್ತೇ ತದ್ ಧಾಮ ಪರಮಂ ಮಮ ||**

"ಈ ನನ್ನ ಪರಮ ಧಾಮವನ್ನು ಸೂರ್ಯನಾಗಲಿ ಚಂದ್ರನಾಗಲಿ ಅಗ್ನಿಯಾಗಲಿ ವಿದ್ಯುಚ್ಛಕ್ತಿಯಾಗಲಿ ಬೆಳಗುವುದಿಲ್ಲ. ಅದನ್ನು ಸೇರಿದವರು ಈ ಐಹಿಕ ಜಗತ್ತಿಗೆ ಹಿಂದಕ್ಕೆ ಬರುವುದೇ ಇಲ್ಲ."

ಈ ಶ್ಲೋಕವು ಸನಾತನ ಗಗನವನ್ನು ವರ್ಣಿಸುತ್ತದೆ, ನಿಜ. ಆಕಾಶದ ಐಹಿಕ ಪರಿಕಲ್ಪನೆಯೊಂದು ನಮಗಿದೆ. ಅದನ್ನು ಕುರಿತು ಯೋಚಿಸುವಾಗ ಸೂರ್ಯ, ಚಂದ್ರ, ನಕ್ಷತ್ರ ಮುಂತಾದುವುಗಳಿಗೆ ಸಂಬಂಧಿಸಿದಂತೆ ಯೋಚಿಸುತ್ತೇವೆ. ಆದರೆ ಈ ಆಧ್ಯಾತ್ಮಿಕ ಗಗನವನ್ನು

ಬ್ರಹ್ಮಜ್ಯೋತಿಯು ಎಂದರೆ ಭಗವಂತನಿಂದ ಹೊರಸೂಸುತ್ತಿರುವ ಕಿರಣಗಳು ಬೆಳಗುತ್ತಿರುವುದರಿಂದ ಈ ಸನಾತನ ಗಗನಕ್ಕೆ ಸೂರ್ಯ ಅಥವಾ ಚಂದ್ರ ಅಥವಾ ವಿದ್ಯುಚ್ಛಕ್ತಿ ಅಥವಾ ಅಗ್ನಿಯ ಅಗತ್ಯವೇ ಇಲ್ಲ ಎಂದು ಈ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ. ನಾವು ಇತರ ಗ್ರಹಗಳನ್ನು ತಲಪಲು ಕಷ್ಟದಿಂದ ಪ್ರಯತ್ನಿಸುತ್ತಿದ್ದೇವೆ. ಆದರೆ ಭಗವಂತನ ನಿವಾಸವನ್ನು ಅರ್ಥಮಾಡಿಕೊಳ್ಳಲು ಕಷ್ಟಪಡಲೇಬೇಕಾಗಿಲ್ಲ. ಈ ನಿವಾಸವನ್ನು ಗೋಲೋಕ ಎಂದು ಕರೆಯುತ್ತಾರೆ. ಬ್ರಹ್ಮಸಂಹಿತೆಯಲ್ಲಿ (5.37) ಇದರ ಸುಂದರ ವರ್ಣನೆಯಿದೆ. **ಗೋಲೋಕ ಏವ ನಿವಸತ್ಯಖಿಲಾತ್ಮಭೂತಃ.** ಭಗವಂತನು ನಿರಂತರವಾಗಿ ತನ್ನ ನಿವಾಸವಾದ ಗೋಲೋಕದಲ್ಲಿ ವಾಸಿಸುತ್ತಾನೆ. ಆದರೂ ಈ ಪ್ರಪಂಚದಿಂದ ಅವನ ಬಳಿಗೆ ಹೋಗಲು ಸಾಧ್ಯವಿದೆ. ಇದಕ್ಕಾಗಿ ತನ್ನ ನಿಜ ರೂಪವಾದ ಸತ್-ಚಿತ್-ಆನಂದ ವಿಗ್ರಹವನ್ನು ತೋರಿಸಲು ಇಳಿದು ಬರುತ್ತಾನೆ. ಈ ರೂಪವನ್ನು ತೋರಿದಾಗ ಅವನು ಹೇಗೆ ಕಾಣಿಸುತ್ತಾನೆ ಎಂದು ನಾವು ಕಲ್ಪಿಸಿಕೊಳ್ಳುವ ಅಗತ್ಯವೇ ಇಲ್ಲ. ಅಂತಹ ಕಲ್ಪನೆಯ ಊಹೆಗಳಿಗೆ ಪ್ರೋತ್ಸಾಹ ಕೊಡದಿರಲು ಭಗವಂತನು ಇಳಿದುಬರುತ್ತಾನೆ ಮತ್ತು ತಾನು ಇರುವಂತೆ ಶ್ಯಾಮಸುಂದರನಾಗಿ ತೋರಿಸಿಕೊಳ್ಳುತ್ತಾನೆ. ಆದರೆ ದುರದೃಷ್ಟದಿಂದ, ಆತನು ನಮ್ಮಲ್ಲಿ ಒಬ್ಬನಾಗಿ ಮಾನವನಂತೆ ಲೀಲೆಗಳನ್ನು ಮೆರೆಯುವುದರಿಂದ ಸಾಕಷ್ಟು ಬುದ್ಧಿಯಿಲ್ಲದವರು ಅವನನ್ನು ಹಾಸ್ಯಮಾಡುತ್ತಾರೆ. ಆದರೆ ಈ ಕಾರಣಕ್ಕಾಗಿ ನಾವು ಅವನು ನಮ್ಮಲ್ಲಿ ಒಬ್ಬನು ಎಂದು ಭಾವಿಸಬಾರದು. ಅವನು ಸರ್ವಶಕ್ತನಾದದ್ದರಿಂದಲೇ ನಮ್ಮ ಮುಂದೆ ತನ್ನ ನಿಜವಾದ ರೂಪವನ್ನು ಮೆರೆದು ತನ್ನ ಲೀಲೆಗಳನ್ನು ತೋರುತ್ತಾನೆ. ಇವು ಅವನ ನಿವಾಸದಲ್ಲಿನ ಲೀಲೆಗಳ ಪ್ರತಿರೂಪಗಳಾಗಿರುತ್ತವೆ.

ಆಧ್ಯಾತ್ಮಿಕ ಗಗನದ ಪ್ರಜ್ವಲಿಸುವ ಕಿರಣಗಳಲ್ಲಿ ಅಸಂಖ್ಯಾತ ಗ್ರಹಗಳು ತೇಲುತ್ತಿರುತ್ತವೆ. ಬ್ರಹ್ಮಜ್ಯೋತಿಯು ಪರಮ ನಿವಾಸವಾದ ಕೃಷ್ಣ ಲೋಕದಿಂದ ಹೊರಸೂಸುತ್ತದೆ. ಜಡವಸ್ತುವಿನಿಂದ ಮಾಡಲ್ಪಟ್ಟಿರುವ **ಆನಂದಮಯ** ಮತ್ತು **ಚಿನ್ಮಯ** ಗ್ರಹಗಳು ಈ ಕಿರಣಗಳಲ್ಲಿ ತೇಲುತ್ತವೆ. ಭಗವಂತನು, **ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ/ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ** ಎಂದು ಹೇಳುತ್ತಾನೆ. ಆ ಆಧ್ಯಾತ್ಮಿಕ ಗಗನವನ್ನು ಸೇರಬಲ್ಲ ಯಾರೂ ಮತ್ತೆ ಐಹಿಕ ಆಕಾಶಕ್ಕೆ ಇಳಿದು ಬರಬೇಕಾಗಿಲ್ಲ. ಚಂದ್ರನ ಮಾತಿರಲಿ, ನಾವು ಐಹಿಕ ಆಕಾಶದಲ್ಲಿ ಅತ್ಯುನ್ನತ ಗ್ರಹವಾದ ಬ್ರಹ್ಮಲೋಕವನ್ನೇ ತಲಪಿದರೂ ಹುಟ್ಟು, ಸಾವು, ರೋಗ, ಮುಪ್ಪು, ಬದುಕಿನ ಇದೇ ಸ್ಥಿತಿಗಳನ್ನು ಕಾಣುತ್ತೇವೆ. ಐಹಿಕ ಅಸ್ತಿತ್ವದ ಈ ನಾಲ್ಕು ತತ್ವಗಳಿಂದ ಐಹಿಕ ವಿಶ್ವದ ಯಾವ ಗ್ರಹವೂ ಹೊರತಾಗಿಲ್ಲ.

ಜೀವಿಗಳು ಒಂದು ಗ್ರಹದಿಂದ ಇನ್ನೊಂದು ಗ್ರಹಕ್ಕೆ ಸಾಗುತ್ತಿರುತ್ತಾರೆ. ಆದರೆ ಯಾಂತ್ರಿಕ ಏರ್ಪಾಟಿನಿಂದ ಇಷ್ಟಬಂದ ಗ್ರಹಕ್ಕೆ ನಾವು ಹೋಗಬಹುದು ಎಂದೇನೂ ಅಲ್ಲ. ನಾವು ಬೇರೆ ಗ್ರಹಗಳಿಗೆ ಹೋಗಲು ಅಪೇಕ್ಷಿಸಿದರೆ ಅದಕ್ಕೊಂದು ಕ್ರಮವಿದೆ. ಇದನ್ನು ಹೀಗೆ ಹೇಳಿದೆ — **ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ.** ನಾವು ಅಂತರ್‌ಗ್ರಹ ಪ್ರಯಾಣ ಮಾಡಲು ಯಾವುದೇ ಯಂತ್ರಗಳ ವ್ಯವಸ್ಥೆಯ ಅಗತ್ಯವಿಲ್ಲ. ಗೀತೆಯು ಉಪದೇಶಿಸುತ್ತದೆ — **ಯಾನ್ತಿ ದೇವವ್ರತಾ ದೇವಾನ್.** ಸೂರ್ಯ, ಚಂದ್ರ ಮತ್ತು ಉನ್ನತ ಗ್ರಹಗಳಿಗೆ ಸ್ವರ್ಗಲೋಕವೆಂದು ಹೆಸರು. ಗ್ರಹಗಳಲ್ಲಿ ಮೂರು ಹಂತಗಳುಂಟು — ಊರ್ಧ್ವ, ಮಧ್ಯ ಮತ್ತು ಅಧೋ ಲೋಕಗಳು. ಭೂಮಿಯು ಮಧ್ಯವ್ಯವಸ್ಥೆಗೆ ಸೇರಿದೆ. ದೇವ ಲೋಕಕ್ಕೆ ಪ್ರಯಾಣಮಾಡುವುದು ಹೇಗೆಂಬುದನ್ನು

ಭಗವದ್ಗೀತೆಯು ಒಂದು ಸರಳವಾದ ಸೂತ್ರದಿಂದ ತಿಳಿಸಿಕೊಡುತ್ತದೆ — **ಯಾಂತಿ ದೇವವ್ರತಾ ದೇವಾನ್**. ಆ ಗ್ರಹದ ಅಭಿಮಾನಿ ದೇವತೆಯನ್ನು ಪೂಜಿಸಿದರೆ ಸಾಕು. ಈ ರೀತಿಯಲ್ಲಿ ಸೂರ್ಯ, ಚಂದ್ರ ಅಥವಾ ಬೇರಾವುದೋ ಊರ್ಧ್ವ ಲೋಕಕ್ಕೆ ಹೋಗಬಹುದು.

ಆದರೆ ಈ ಐಹಿಕ ಜಗತ್ತಿನಲ್ಲಿ ಯಾವುದೇ ಗ್ರಹಕ್ಕೆ ಹೋಗಬೇಕೆಂದು ಭಗವದ್ಗೀತೆಯು ನಮಗೆ ಉಪದೇಶಮಾಡುವುದಿಲ್ಲ. ಏಕೆಂದರೆ ಯಾವುದಾದರೂ ಯಾಂತ್ರಿಕ ಸಾಧನದಿಂದ ನಲವತ್ತು ಸಾವಿರ ವರ್ಷ ಪ್ರಯಾಣಮಾಡಿ (ಅಷ್ಟು ದೀರ್ಘಕಾಲ ಯಾರು ಬದುಕಿರುತ್ತಾರೆ?) ಅತ್ಯುನ್ನತ ಗ್ರಹವಾದ ಬ್ರಹ್ಮಲೋಕಕ್ಕೆ ಹೋದರೂ ಐಹಿಕ ಕ್ಲೇಶಗಳಾದ ಹುಟ್ಟು, ಸಾವು, ರೋಗ ಮತ್ತು ಮುಪ್ಪುಗಳನ್ನು ಅಲ್ಲಿ ಕಾಣುತ್ತೇವೆ. ಆದರೆ ಪರಮ ಲೋಕವಾದ ಕೃಷ್ಣಲೋಕವಾಗಲೀ, ಆಧ್ಯಾತ್ಮಿಕ ಗಗನದಲ್ಲಿರುವ ಬೇರಾವುದೇ ಗ್ರಹಗಳನ್ನಾಗಲೀ ತಲಪಲು ಬಯಸುವ ಮನುಷ್ಯನು ಅಲ್ಲಿ ಈ ಐಹಿಕ ಕ್ಲೇಶಗಳನ್ನು ಕಾಣುವುದಿಲ್ಲ. ಆಧ್ಯಾತ್ಮಿಕ ಗಗನದಲ್ಲಿ ಇರುವ ಗ್ರಹಗಳಲ್ಲಿ ಗೋಲೋಕ ವೃಂದಾವನ ಎನ್ನುವ ಪರಮ ಗ್ರಹವಿದೆ. ಇದು ಮೂಲ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ಆವಾಸದಲ್ಲಿ ಮೂಲಗ್ರಹ. ಈ ಎಲ್ಲ ವಿಷಯಗಳನ್ನು ಭಗವದ್ಗೀತೆಯು ತಿಳಿಸಿಕೊಡುತ್ತದೆ. ಈ ತಿಳುವಳಿಕೆಯ ಮೂಲಕ, ಈ ಐಹಿಕ ಜಗತ್ತನ್ನು ಬಿಟ್ಟು ಆಧ್ಯಾತ್ಮಿಕ ಗಗನದಲ್ಲಿ ನಿಜವಾಗಿಯೂ ಆನಂದಮಯವಾದ ಬದುಕನ್ನು ಪ್ರಾರಂಭಿಸುವುದು ಹೇಗೆ ಎನ್ನುವ ಮಾಹಿತಿಯನ್ನು ಅದು ನಮಗೆ ಕೊಟ್ಟಿದೆ.

ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಐಹಿಕ ಪ್ರಪಂಚದ ನಿಜವಾದ ಚಿತ್ರವನ್ನು ಕೊಟ್ಟಿದೆ. ಅಲ್ಲಿ ಹೀಗೆ ಹೇಳಿದೆ —

**ಊರ್ಧ್ವಮೂಲಮಧಃಶಾಖಮ್ ಅಶ್ವತ್ಥಂ ಪ್ರಾಹುರವ್ಯಯಮ್ |**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ||**

ಮೇಲ್ಭಾಗದಲ್ಲಿ ಬೇರುಗಳೂ ಕೆಳಭಾಗದಲ್ಲಿ ರೆಂಬೆಗಳೂ ಇರುವ ಒಂದು ಮರಕ್ಕೆ ಐಹಿಕ ಜಗತ್ತನ್ನು ಹೋಲಿಸಲಾಗಿದೆ. ಬೇರುಗಳು ಮೇಲಿರುವ ಮರದ ಅನುಭವ ನಮಗಿದೆ. ಒಂದು ನದಿಯ ಅಥವಾ ಜಲಾಶಯದ ದಡದ ಮೇಲೆ ನಿಂತವನು ನೀರಿನಲ್ಲಿ ಪ್ರತಿಬಿಂಬ ಕಾಣುವ ಮರಗಳು ತಲೆಕೆಳಗಾಗಿವೆ ಎಂದು ಕಾಣುತ್ತಾನೆ. ಕೊಂಬೆಗಳು ಕೆಳಕ್ಕೆ ಹೋಗುತ್ತವೆ ಮತ್ತು ಬೇರುಗಳು ಮೇಲೆ ಹೋಗುತ್ತವೆ. ಇದೇ ರೀತಿಯಲ್ಲಿ ಐಹಿಕ ಪ್ರಪಂಚವು ಆಧ್ಯಾತ್ಮಿಕ ಪ್ರಪಂಚದ ಪ್ರತಿಬಿಂಬ. ಐಹಿಕ ಜಗತ್ತು ವಾಸ್ತವಿಕತೆಯ ಪ್ರತಿಬಿಂಬ ಮಾತ್ರ. ಪ್ರತಿಬಿಂಬದಲ್ಲಿ ವಾಸ್ತವವಾಗಲಿ ಸಾರವಾಗಲಿ ಇಲ್ಲ. ಆದರೆ ಪ್ರತಿಬಿಂಬದಿಂದಾಗಿ ಸಾರ ಎನ್ನುವುದು, ವಾಸ್ತವತೆ ಎನ್ನುವುದು ಉಂಟು ಎಂದು ನಾವು ಅರ್ಥಮಾಡಿಕೊಳ್ಳಬಹುದು. ಮರಳುಗಾಡಿನಲ್ಲಿ ನೀರಿಲ್ಲ. ಆದರೆ ಮರೀಚಿಕೆಯು ನೀರು ಎನ್ನುವ ವಸ್ತು ಉಂಟು ಎನ್ನುವುದನ್ನು ಸೂಚಿಸುತ್ತದೆ. ಐಹಿಕ ಜಗತ್ತಿನಲ್ಲಿ ನೀರಿಲ್ಲ; ಸುಖವಿಲ್ಲ. ಆದರೆ ಸುಖದ ವಾಸ್ತವವಾದ ನೀರು ಆಧ್ಯಾತ್ಮಿಕ ಜಗತ್ತಿನಲ್ಲಿ ಉಂಟು.

ನಾವು ಆಧ್ಯಾತ್ಮಿಕ ಜಗತ್ತನ್ನು ಈ ರೀತಿಯಲ್ಲಿ ಸೇರಬಹುದೆಂದು ಭಗವಂತನು ಸೂಚಿಸುತ್ತಾನೆ. (ಗೀತಾ 15.5)

**ನಿರ್ಮಾನಮೋಹಾ ಜಿತಸಙ್ಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ |**

**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ||**

**ನಿರ್ಮಾನ ಮೋಹಾ** ಆದವನು **ಪದಮ್ ಅವ್ಯಯಮ್** ಅನ್ನು ಎಂದರೆ ಸನಾತನ ರಾಜ್ಯವನ್ನು ಸೇರಬಲ್ಲ. ಹಾಗೆಂದರೆ ಅರ್ಥವೇನು? ನಮಗೆ ಸ್ಥಾನಗಳ ಹೆಸರುಗಳ ಮೋಹ. ಒಬ್ಬನಿಗೆ ಸರ್ (Sir) ಎಂದು ಕರೆಸಿಕೊಳ್ಳುವ ಆಸೆ, ಮತ್ತೊಬ್ಬನಿಗೆ ಲಾರ್ಡ್ (Lord) ಆಗುವ ಆಸೆ. ಮತ್ತೊಬ್ಬನಿಗೆ ಅಧ್ಯಕ್ಷನಾಗುವ, ಶ್ರೀಮಂತನಾಗುವ ಅಥವಾ ರಾಜನಾಗುವ ಇಲ್ಲವೇ ಬೇರೇನೋ ಆಗುವ ಬಯಕೆ. ಈ ಸ್ಥಾನಗಳ ಹೆಸರುಗಳಿಗೆ ಅಂಟಿಕೊಂಡಿರುವಷ್ಟು ಕಾಲವೂ ನಾವು ದೇಹಕ್ಕೆ ಅಂಟಿಕೊಂಡಿರುತ್ತೇವೆ. ಏಕೆಂದರೆ ಈ ಸ್ಥಾನನಾಮಗಳು ದೇಹಕ್ಕೆ ಸೇರಿದವು. ಆದರೆ ನಾವು ದೇಹಗಳಲ್ಲ. ಇದರ ಅರಿವೇ ಆಧ್ಯಾತ್ಮಿಕ ಅರಿವಿನಲ್ಲಿ ಮೊದಲ ಹೆಜ್ಜೆ. ನಮಗೆ ತ್ರಿವಿಧ ಪ್ರಕೃತಿ ಗುಣಗಳ ಸಂಬಂಧವಿದೆ. ಆದ್ದರಿಂದ ನಾವು ಭಗವಂತನ ಭಕ್ತಿಸೇವೆಯ ಮೂಲಕ ನಿರ್ಮಾನ ಮೋಹರಾಗಬೇಕು. ನಾವು ಭಗವಂತನ ಭಕ್ತಿಸೇವೆಗೆ ಅಂಟಿಕೊಳ್ಳದಿದ್ದರೆ ತ್ರಿವಿಧ ಪ್ರಕೃತಿ ಗುಣಗಳಿಂದ ದೂರವಾಗಲಾರೆವು. ಸ್ಥಾನನಾಮಗಳಿಗೂ ಮೋಹಗಳಿಗೂ ನಮ್ಮ ಕಾಮ ಮತ್ತು ಅಪೇಕ್ಷೆಗಳೇ ಕಾರಣ. ಪ್ರಕೃತಿ ಗುಣಗಳ ಮೇಲೆ ಯಜಮಾನಿಕೆಯನ್ನು ತೋರುವ ಅಪೇಕ್ಷೆಯೇ ಕಾರಣ. ಪ್ರಕೃತಿ ಗುಣಗಳ ಮೇಲೆ ಯಜಮಾನಿಕೆಯನ್ನು ಪ್ರದರ್ಶಿಸುವ ಪ್ರವೃತ್ತಿಯನ್ನು ನಾವು ಬಿಟ್ಟುಕೊಡುವವರೆಗೆ ಭಗವದ್ಧಾಮಕ್ಕೆ ಹಿಂದಿರುಗುವ ಸಾಧ್ಯತೆಯೇ ಇಲ್ಲ. ಹುಸಿ ಐಹಿಕ ಭೋಗಗಳ ಆಕರ್ಷಣೆಯಿಂದ ದಿಗ್ಭ್ರಮೆಯಾಗದವನು ಮಾತ್ರ, ಭಗವಂತನ ಸೇವೆಯಲ್ಲಿ ನಿಷ್ಠನಾದವನು ಮಾತ್ರ, ಎಂದೂ ನಾಶವಾಗದ ಆ ಸನಾತನ ರಾಜ್ಯದ ಬಳಿ ಹೋಗಬಲ್ಲ. ಹೀಗೆ ನಿಷ್ಠನಾದವನು ಸುಲಭವಾಗಿ ಪರಂಧಾಮದ ಬಳಿ ಸಾರಬಲ್ಲ.

ಗೀತೆಯಲ್ಲಿ ಬೇರೊಂದು ಕಡೆ (8.21) ಹೀಗೆ ಹೇಳಿದೆ —

**ಅವ್ಯಕ್ತೋऽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ |**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ||**

ಅವ್ಯಕ್ತ ಎಂದರೆ ವ್ಯಕ್ತವಾಗದಿರುವುದು. ಐಹಿಕ ಜಗತ್ತೆಲ್ಲವೂ ನಮ್ಮ ಮುಂದೆ ವ್ಯಕ್ತವಾಗಿಲ್ಲ. ನಮ್ಮ ಇಂದ್ರಿಯಗಳು ಎಷ್ಟು ಅಪರಿಪೂರ್ಣ ಎಂದರೆ ಈ ಐಹಿಕ ವಿಶ್ವದ ಎಲ್ಲ ನಕ್ಷತ್ರಗಳನ್ನು ಸಹ ನಾವು ನೋಡಲಾರೆವು. ವೈದಿಕ ಸಾಹಿತ್ಯದಲ್ಲಿ ಎಲ್ಲ ಗ್ರಹಗಳ ವಿಷಯವಾಗಿ ನಮಗೆ ಬಹಳ ಮಾಹಿತಿ ದೊರಕುತ್ತದೆ. ನಾವು ಅದನ್ನೆಲ್ಲ ನಂಬಬಹುದು ಅಥವಾ ನಂಬದಿರಬಹುದು. ವೈದಿಕ ಸಾಹಿತ್ಯದಲ್ಲಿ, ಮುಖ್ಯವಾಗಿ ಶ್ರೀಮದ್ಭಾಗವತದಲ್ಲಿ ಎಲ್ಲ ಮುಖ್ಯ ಗ್ರಹಗಳ ವರ್ಣನೆಯಿದೆ. ಈ ಭೌತಿಕ ಆಕಾಶದಾಚೆ ಇರುವ ಆಧ್ಯಾತ್ಮಿಕ ಜಗತ್ತನ್ನು **ಅವ್ಯಕ್ತ**, ವ್ಯಕ್ತವಾಗದಿರುವುದು ಎಂದು ವರ್ಣಿಸಿದೆ. ಮನುಷ್ಯನಾದವನು ಆ ಪರಮ ಸಾಮ್ರಾಜ್ಯಕ್ಕಾಗಿ ಹಂಬಲಿಸಬೇಕು. ಏಕೆಂದರೆ ಆ ಸಾಮ್ರಾಜ್ಯವನ್ನು ಸೇರಿದವನು ಈ ಐಹಿಕ ಜಗತ್ತಿಗೆ ಹಿಂದಿರುಗಬೇಕಾಗಿಲ್ಲ.

ಇದಾದ ಮೇಲೆ ಭಗವಂತನ ನಿವಾಸವನ್ನು ಸಮೀಪಿಸುವುದು ಹೇಗೆ ಎಂದು ಪ್ರಶ್ನಿಸಬಹುದು. ಎಂಟನೆಯ ಅಧ್ಯಾಯದಲ್ಲಿ ಈ ವಿಷಯವಿದೆ. ಅಲ್ಲಿ ಹೀಗೆ ಹೇಳಿದೆ —

**ಅನ್ತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ |**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ||**

"ಅಂತ್ಯಕಾಲದಲ್ಲಿ ನನ್ನನ್ನು ಸ್ಮರಿಸುತ್ತ ಯಾವನು ದೇಹವನ್ನು ಬಿಡುತ್ತಾನೋ ಆತನು ನನ್ನ ಭಾವವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ" (ಗೀತಾ 8.5) ತನ್ನ ಮರಣದ ಹೊತ್ತಿನಲ್ಲಿ ಕೃಷ್ಣನ ರೂಪವನ್ನು ಸ್ಮರಿಸಿಕೊಳ್ಳಬೇಕು; ಈ ರೂಪವನ್ನು ಧ್ಯಾನಿಸುತ್ತ ದೇಹವನ್ನು ಬಿಟ್ಟವನು ಖಂಡಿತವಾಗಿಯೂ ಆಧ್ಯಾತ್ಮಿಕ ಲೋಕವನ್ನು ಪಡೆಯುವನು. **ಮದ್ಭಾವಮ್** ಎನ್ನುವುದು ಭಗವಂತನ ಪರಮ ಸ್ವರೂಪವನ್ನು ಹೇಳುತ್ತದೆ. ಭಗವಂತನು **ಸತ್-ಚಿತ್-ಆನನ್ದ ವಿಗ್ರಹ.** ಎಂದರೆ ಅವನ ರೂಪವು ಸನಾತನ, ಜ್ಞಾನಪೂರ್ಣ ಮತ್ತು ಆನಂದಪೂರ್ಣ. ನಮ್ಮ ಈಗಿನ ದೇಹವು **ಸತ್-ಚಿತ್-ಆನನ್ದ**ವಲ್ಲ. ಅದು **ಅಸತ್, ಸತ್** ಅಲ್ಲ, ಅದು ಸನಾತನವಲ್ಲ; ನಾಶವಾಗತಕ್ಕದ್ದು. ಅದು **ಚಿತ್** ಅಲ್ಲ, ಜ್ಞಾನಪೂರ್ಣವಲ್ಲ, ಅಜ್ಞಾನಪೂರ್ಣ. ನಮಗೆ ಆಧ್ಯಾತ್ಮಿಕ ರಾಜ್ಯದ ವಿಷಯ ತಿಳಿಯದು. ಈ ಐಹಿಕ ಜಗತ್ತಿನ ವಿಷಯವೂ ಪರಿಪೂರ್ಣವಾಗಿ ತಿಳಿಯದು. ಇಲ್ಲಿ ನಮಗೆ ತಿಳಿಯದ ಎಷ್ಟೋ ಸಂಗತಿಗಳುಂಟು. ದೇಹವು **ನಿರಾನಂದ**; ಆನಂದ ಮಯವಾಗಿರುವುದರ ಬದಲು ಅದು ದುಃಖಮಯವಾಗಿದೆ. ಈ ಐಹಿಕ ಜಗತ್ತಿನಲ್ಲಿ ನಾವು ಅನುಭವಿಸುವ ಎಲ್ಲ ದುಃಖಗಳ ಮೂಲ ದೇಹವೇ. ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನನ್ನು ಸ್ಮರಿಸುತ್ತ ಯಾವನು ದೇಹವನ್ನು ಬಿಡುವನೋ ಅವನು ಕೂಡಲೇ **ಸತ್-ಚಿತ್-ಆನನ್ದ** ದೇಹವನ್ನು ಪಡೆಯುತ್ತಾನೆ.

ಈ ದೇಹವನ್ನು ಬಿಟ್ಟು ಈ ಐಹಿಕ ಜಗತ್ತಿನಲ್ಲಿ ಮತ್ತೊಂದು ದೇಹವನ್ನು ಪಡೆಯುವ ಪ್ರಕ್ರಿಯೆಯು ವ್ಯವಸ್ಥಿತವಾಗಿದೆ. ಒಬ್ಬ ಮನುಷ್ಯನು ಮುಂದಿನ ಜನ್ಮದಲ್ಲಿ ಯಾವ ರೂಪದ ದೇಹವನ್ನು ಪಡೆಯಬೇಕೆಂದು ತೀರ್ಮಾನವಾದ ಅನಂತರ ಅವನು ಸಾಯುತ್ತಾನೆ. ಈ ತೀರ್ಮಾನವನ್ನು ಜೀವಿಯು ಮಾಡುವುದಿಲ್ಲ. ಅವನಿಗಿಂತ ಮೇಲಿನವರು ಮಾಡುತ್ತಾರೆ. ಈ ಜನ್ಮದಲ್ಲಿ ನಮ್ಮ ಕರ್ಮಗಳಿಗೆ ಅನುಗುಣವಾಗಿ ನಾವು ಮೇಲೇರುತ್ತೇವೆ ಅಥವಾ ಕೆಳಕ್ಕಿಳಿಯುತ್ತೇವೆ. ಈ ಜನ್ಮವು ಮುಂದಿನ ಜನ್ಮಕ್ಕೆ ಸಿದ್ಧತೆ. ಆದುದರಿಂದ ನಾವು ಭಗವಂತನ ರಾಜ್ಯಕ್ಕೆ ಏರಲು ಈ ಜನ್ಮದಲ್ಲಿ ಸಿದ್ಧತೆಯನ್ನು ಮಾಡಿಕೊಳ್ಳುವುದು ಸಾಧ್ಯವಾದರೆ, ನಿಶ್ಚಯವಾಗಿಯೂ ಈ ಐಹಿಕ ದೇಹವನ್ನು ತ್ಯಜಿಸಿದ ಅನಂತರ ಭಗವಂತನ ದೇಹವನ್ನು ಹೋಲುವ ಆಧ್ಯಾತ್ಮಿಕ ದೇಹವನ್ನು ಪಡೆಯುತ್ತೇವೆ.

ಹಿಂದೆಯೇ ವಿವರಿಸಿದಂತೆ ಆಧ್ಯಾತ್ಮಿಕವಾದಿಗಳಲ್ಲಿ **ಬ್ರಹ್ಮವಾದಿ, ಪರಮಾತ್ಮವಾದಿ** ಮತ್ತು **ಭಕ್ತ**, ಹೀಗೆ ಬೇರೆ ಬೇರೆ ವರ್ಗಗಳವರಿದ್ದಾರೆ. ಮೊದಲೇ ಹೇಳಿದಂತೆ ಬ್ರಹ್ಮಜ್ಯೋತಿ (ಆಧ್ಯಾತ್ಮಿಕ ಗಗನ) ಯಲ್ಲಿ ಅಸಂಖ್ಯಾತ ಆಧ್ಯಾತ್ಮಿಕ ಗ್ರಹಗಳಿವೆ. ಈ ಗ್ರಹಗಳ ಸಂಖ್ಯೆಯು ಐಹಿಕ ಜಗತ್ತಿನ ಎಲ್ಲ ಗ್ರಹಗಳ ಸಂಖ್ಯೆಗಿಂತ ಅಪಾರವಾದದ್ದು. ಈ ಐಹಿಕ ಜಗತ್ತು ಸೃಷ್ಟಿಯ ಸುಮಾರು ಕಾಲುಭಾಗ (**ಏಕಾಂಶೇನ ಸ್ಥಿತೋ ಜಗತ್**) ಎಂದು ಹೇಳಲಾಗಿದೆ. ಈ ಐಹಿಕ ವಿಭಾಗದಲ್ಲಿ ಕೋಟ್ಯಂತರ ವಿಶ್ವಗಳಿವೆ, ಕೋಟ್ಯಂತರ ಸೂರ್ಯರು, ಚಂದ್ರರು, ತಾರೆಗಳು ಇವೆ. ಆದರೆ ಈ ಸಮಸ್ತ ಭೌತಿಕ ಸೃಷ್ಟಿಯೂ ಇಡೀ ಸೃಷ್ಟಿಯ ಒಂದು ಸಣ್ಣ ಭಾಗ ಮಾತ್ರ. ಸೃಷ್ಟಿಯ ಬಹು ಭಾಗವು ಆಧ್ಯಾತ್ಮಿಕ ಗಗನ. ಪರಬ್ರಹ್ಮನ ಅಸ್ತಿತ್ವದಲ್ಲಿ ಒಂದಾಗಬಯಸುವವನು ಕೂಡಲೇ ಭಗವಂತನ ಬ್ರಹ್ಮಜ್ಯೋತಿಗೆ ಒಯ್ಯಲ್ಪಡುತ್ತಾನೆ. ಹೀಗೆ ಆಧ್ಯಾತ್ಮಿಕ ಗಗನವನ್ನು ಸೇರುತ್ತಾನೆ. ಭಗವಂತನ ಸಹವಾಸವನ್ನು ಸವಿಯಬಯಸುವ ಭಕ್ತನು ಅಸಂಖ್ಯಾತವಾದ ವೈಕುಂಠ ಗ್ರಹಗಳನ್ನು ಸೇರುತ್ತಾನೆ. ಅಲ್ಲಿ ಭಗವಂತನು, ನಾರಾಯಣನಾಗಿ ತನ್ನ ಸ್ವರೂಪವನ್ನು ಚತುರ್ಭುಜಗಳಿಂದ ವಿಸ್ತರಿಸಿ, ಪ್ರದ್ಯುಮ್ನ, ಅನಿರುದ್ಧ, ಗೋವಿಂದ ಮೊದಲಾದ ಹೆಸರುಗಳೊಡನೆ ಅವನಿಗೆ ಸಹವಾಸ ಭಾಗ್ಯವನ್ನು ನೀಡುತ್ತಾನೆ. ಆದುದರಿಂದ

ಬದುಕಿನ ಅಂತ್ಯಕಾಲದಲ್ಲಿ ಆಧ್ಯಾತ್ಮಿಕವಾದಿಗಳು ಬ್ರಹ್ಮಜ್ಯೋತಿಯನ್ನು ಕುರಿತಾಗಲಿ, ಪರಮಾತ್ಮನನ್ನು ಕುರಿತಾಗಲಿ, ಶ್ರೀಕೃಷ್ಣನ ದೇವೋತ್ತಮ ಪರಮ ಪುರುಷತ್ವವನ್ನು ಕುರಿತಾಗಲಿ ಚಿಂತಿಸುತ್ತಾರೆ. ಇವುಗಳಲ್ಲಿ ಯಾವುದನ್ನು ಧ್ಯಾನಿಸಿದರೂ ಆಧ್ಯಾತ್ಮಿಕ ಗಗನವನ್ನು ಪ್ರವೇಶಿಸುತ್ತಾರೆ. ಆದರೆ ಭಕ್ತನು ಮಾತ್ರ ಅಥವಾ ಭಗವಂತನೊಡನೆ ನೇರ ಸಂಪರ್ಕ ಹೊಂದಿದವನು ಮಾತ್ರ ವೈಕುಂಠ ಗ್ರಹಗಳನ್ನು ಅಥವಾ ಗೋಲೋಕ ವೃಂದಾವನ ಗ್ರಹವನ್ನು ಪ್ರವೇಶಿಸುತ್ತಾನೆ. ಭಗವಂತನು, ಇದರಲ್ಲಿ 'ಸಂದೇಹವಿಲ್ಲ' ಎಂದೂ ಹೇಳುತ್ತಾನೆ. ಇದನ್ನು ದೃಢವಾಗಿ ನಂಬಬೇಕು. ನಮ್ಮ ಕಲ್ಪನೆಗೆ ಸಂಪೂರ್ಣವಾಗಿ ಹೊಂದಿಕೊಳ್ಳದಿರುವುದನ್ನು ನಾವು ತಿರಸ್ಕರಿಸಬಾರದು. ನಮ್ಮ ನಿಲುವು "ನೀನು ಹೇಳಿದ ಪ್ರತಿಯೊಂದು ಮಾತನ್ನೂ ನಾನು ನಂಬುತ್ತೇನೆ" ಎಂಬ ಅರ್ಜುನನ ನಿಲುವೇ ಆಗಬೇಕು. ಮರಣಕಾಲದಲ್ಲಿ ಯಾರು ತನ್ನನ್ನು ಬ್ರಹ್ಮನೆಂದೋ ಅಥವಾ ಪರಮಾತ್ಮನೆಂದೋ ಅಥವಾ ದೈವತ್ವದ ಪುರುಷನೆಂದೋ ಚಿಂತಿಸುತ್ತಾರೋ ಅವರು ಆಧ್ಯಾತ್ಮಿಕ ಗಗನವನ್ನು ಪ್ರವೇಶಿಸುತ್ತಾರೆ ಎಂದು ಭಗವಂತನು ಹೇಳಿದಾಗ ಅದರ ವಿಷಯದಲ್ಲಿ ಸಂಶಯವೇ ಇಲ್ಲ. ಅದನ್ನು ನಂಬದಿರುವ ಪ್ರಶ್ನೆಯೇ ಇಲ್ಲ.

ಮರಣಕಾಲದಲ್ಲಿ ಪರಮ ಪ್ರಭುವನ್ನು ಕುರಿತು ಚಿಂತಿಸುವ ಮಾತ್ರದಿಂದಲೇ ಆಧ್ಯಾತ್ಮಿಕ ಜಗತ್ತನ್ನು ಪ್ರವೇಶಿಸುವುದು ಸಾಧ್ಯ ಎನ್ನುವ ಸಾಮಾನ್ಯ ತತ್ವವನ್ನೂ ಭಗವದ್ಗೀತೆಯು ವಿವರಿಸುತ್ತದೆ (8.6) —

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ |**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ||**

"ತನ್ನ ಈಗಿನ ದೇಹವನ್ನು ಬಿಡುವಾಗ ಮನುಷ್ಯನು ಯಾವ ಭಾವವನ್ನು ಸ್ಮರಿಸುತ್ತಿರುತ್ತಾನೋ ಆ ಭಾವವನ್ನೇ ಅವನು ಖಂಡಿತವಾಗಿಯೂ ಮುಂದಿನ ಜನ್ಮದಲ್ಲಿ ಪಡೆಯುವನು." ನಾವೀಗ ಮೊದಲು ಅರ್ಥ ಮಾಡಿಕೊಳ್ಳಬೇಕಾದದ್ದು ಭೌತಿಕ ನಿಸರ್ಗವು ಭಗವಂತನ ಶಕ್ತಿಗಳಲ್ಲಿ ಒಂದರ ಅಭಿವ್ಯಕ್ತಿ ಎನ್ನುವುದನ್ನು. ವಿಷ್ಣು ಪುರಾಣದಲ್ಲಿ (6.7.61) ಭಗವಂತನ ಸಂಪೂರ್ಣ ಶಕ್ತಿಗಳನ್ನು ನಿರೂಪಿಸಲಾಗಿದೆ.

**ವಿಷ್ಣುಶಕ್ತಿಃ ಪರಾಪ್ರೋಕ್ತಾ ಕ್ಷೇತ್ರಜ್ಞಾಖ್ಯಾ ತಥಾ ಪರಾ |**
**ಅವಿದ್ಯಾಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ ||**

ಭಗವಂತನಿಗೆ, ನಮ್ಮ ಕಲ್ಪನೆಗೇ ನಿಲುಕದ ವಿವಿಧ ಮತ್ತು ಅಸಂಖ್ಯಾತ ಶಕ್ತಿಗಳಿವೆ. ಆದರೆ, ಬಲ್ಲಿದರಾದ ಋಷಿಗಳು ಅಥವಾ ಮುಕ್ತಾತ್ಮರು ಅವುಗಳನ್ನು ಅಧ್ಯಯನ ಮಾಡಿ ಅದನ್ನು ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ಎಲ್ಲ ಶಕ್ತಿಗಳೂ ವಿಷ್ಣು ಶಕ್ತಿಗಳು, ಎಂದರೆ ವಿಷ್ಣುವಿನ ಬೇರೆ ಬೇರೆ ಶಕ್ತಿಗಳು. ಮೊದಲನೆ ಶಕ್ತಿಯು ಪರಾ ಎಂದರೆ ಆಧ್ಯಾತ್ಮಿಕ. ಆಗಲೇ ವಿವರಿಸಿದಂತೆ ಜೀವಿಗಳು ಸಹ ಉತ್ತಮ ಶಕ್ತಿಗೆ ಸೇರಿದವರು. ಇತರ ಶಕ್ತಿಗಳು ಅಥವಾ ಭೌತಿಕ ಶಕ್ತಿಗಳು ತಾಮಸಗುಣಕ್ಕೆ ಸೇರಿದವು. ಮರಣಕಾಲದಲ್ಲಿ ನಾವು ಈ ಭೌತಿಕ ಜಗತ್ತಿನ ಅಪರಾಶಕ್ತಿಯಲ್ಲಿ ಉಳಿಯಬಹುದು, ಇಲ್ಲವೇ ಈ ಶಕ್ತಿಯನ್ನು ಆಧ್ಯಾತ್ಮಿಕ ಜಗತ್ತಿಗೆ ವರ್ಗಾಯಿಸಬಹುದು. ಆದುದರಿಂದ ಭಗವದ್ಗೀತೆಯಲ್ಲಿ ಹೀಗೆ ಹೇಳಿದೆ (8.6) —

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ |**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ||**

"ತನ್ನ ಈಗಿನ ದೇಹವನ್ನು ಬಿಡುವಾಗ ಮನುಷ್ಯನು ಯಾವ ಭಾವವನ್ನು ಸ್ಮರಿಸುತ್ತಿರುತ್ತಾನೋ ಆ ಭಾವವನ್ನೇ ಅವನು ಖಂಡಿತವಾಗಿಯೂ ಮುಂದಿನ ಜನ್ಮದಲ್ಲಿ ಪಡೆಯುವನು."

ಬದುಕಿನಲ್ಲಿ ಐಹಿಕ ಶಕ್ತಿ ಅಥವಾ ಆಧ್ಯಾತ್ಮಿಕ ಶಕ್ತಿ ಎರಡರಲ್ಲಿ ಒಂದನ್ನು ಕುರಿತು ಯೋಚಿಸುವುದು ನಮ್ಮ ಅಭ್ಯಾಸ. ನಮ್ಮ ಚಿಂತನೆಯನ್ನು ಐಹಿಕ ಶಕ್ತಿಯಿಂದ ಆಧ್ಯಾತ್ಮಿಕ ಶಕ್ತಿಗೆ ಕೊಂಡೊಯ್ಯುವುದು ಹೇಗೆ ಸಾಧ್ಯ? ನಮ್ಮ ಯೋಚನೆಗಳಲ್ಲಿ ಐಹಿಕ ಶಕ್ತಿಯನ್ನು ತುಂಬಿಸುವ ಹಲವಾರು ಬರಹಗಳಿವೆ—ವೃತ್ತ ಪತ್ರಿಕೆಗಳು, ನಿಯತಕಾಲಿಕಗಳು, ಕಾದಂಬರಿಗಳು ಇತ್ಯಾದಿ. ಈ ಬರಹಗಳಲ್ಲಿ ಮುಳುಗಿರುವ ನಮ್ಮ ಚಿಂತನೆಯನ್ನು ವೈದಿಕ ಸಾಹಿತ್ಯಕ್ಕೆ ಏರಿಸಬೇಕು. ಆದುದರಿಂದ ಮಹರ್ಷಿಗಳು ಪುರಾಣಗಳಂತಹ ಅನೇಕ ವೈದಿಕ ಬರಹಗಳನ್ನು ರಚಿಸಿದ್ದಾರೆ. ಪುರಾಣಗಳು ಕಟ್ಟುಕಥೆಗಳಲ್ಲ; ಅವು ಚಾರಿತ್ರಿಕ ದಾಖಲೆಗಳು. ಚೈತನ್ಯ ಚರಿತಾಮೃತದಲ್ಲಿ (ಮಧ್ಯ 20.122) ಈ ಕೆಳಗಿನ ಶ್ಲೋಕವಿದೆ —

**ಮಾಯಾ ಮುಗ್ಧ ಜೀವೇರ ನಾಹಿ ಸ್ವತಃ ಕೃಷ್ಣಜ್ಞಾನ |**
**ಜೀವೇರೇ ಕೃಪಾಯ ಕೈಲಾ ಕೃಷ್ಣ ವೇದ ಪುರಾಣ ||**

ವಿಸ್ಮೃತಿಗೊಂಡ ಜೀವಿಗಳು ಅಥವಾ ಬದ್ಧ ಆತ್ಮರು ಭಗವಂತನೊಡನೆ ತಮ್ಮ ಸಂಬಂಧವನ್ನು ಮರೆತಿರುತ್ತಾರೆ. ಐಹಿಕ ಚಟುವಟಿಕೆಗಳನ್ನು ಕುರಿತು ಯೋಚನೆ ಮಾಡುವುದರಲ್ಲಿ ತನ್ಮಯರಾಗಿರುತ್ತಾರೆ. ಅವರ ಯೋಚನಾ ಶಕ್ತಿಯನ್ನು ಆಧ್ಯಾತ್ಮಿಕ ಗಗನಕ್ಕೆ ಏರಿಸಲು ಕೃಷ್ಣದ್ವೈಪಾಯನ ವ್ಯಾಸರು ಹಲವಾರು ವೈದಿಕ ಕೃತಿಗಳನ್ನು ಕೊಟ್ಟಿದ್ದಾರೆ. ಮೊದಲು ಅವರು ವೇದಗಳನ್ನು ನಾಲ್ಕು ಭಾಗ ಮಾಡಿದರು. ಅನಂತರ ಅವುಗಳನ್ನು ಪುರಾಣಗಳಲ್ಲಿ ವಿವರಿಸಿದರು ಮತ್ತು ಅಷ್ಟು ಸಾಮರ್ಥ್ಯವಿಲ್ಲದಿರುವವರಿಗಾಗಿ ಮಹಾಭಾರತವನ್ನು ಬರೆದರು. ಮಹಾಭಾರತದಲ್ಲಿ ಭಗವದ್ಗೀತೆಯನ್ನು ಅಳವಡಿಸಿದರು. ಅನಂತರ ವೈದಿಕ ಸಾಹಿತ್ಯವನ್ನೆಲ್ಲ ವೇದಾಂತ ಸೂತ್ರದಲ್ಲಿ ಸಂಗ್ರಹಿಸಿದರು. ಮುಂದಿನ ಮಾರ್ಗದರ್ಶನಕ್ಕಾಗಿ ವೇದಾಂತ ಸೂತ್ರಕ್ಕೆ ನಿಜಭಾಷ್ಯ ರೂಪವಾಗಿ ವ್ಯಾಸರು ಶ್ರೀಮದ್ಭಾಗವತವನ್ನು ರಚಿಸಿದರು. ನಾವು ನಮ್ಮ ಮನಸ್ಸುಗಳನ್ನು ಈ ವೈದಿಕ ಸಾಹಿತ್ಯದ ಕೃತಿಗಳನ್ನು ಓದುವುದರಲ್ಲಿ ತೊಡಗಿಸಬೇಕು. ಲೌಕಿಕರು ವೃತ್ತ ಪತ್ರಿಕೆಗಳನ್ನೂ ನಿಯತಕಾಲಿಕೆಗಳನ್ನೂ ಮತ್ತಿತರ ಎಷ್ಟೋ ಲೌಕಿಕ ಬರಹಗಳನ್ನೂ ಓದುವುದರಲ್ಲಿ ಮನಸ್ಸನ್ನು ತೊಡಗಿಸುವಂತೆ, ನಾವು ವೇದವ್ಯಾಸರು ನಮಗೆ ಕೊಟ್ಟಿರುವ ಈ ಕೃತಿಗಳನ್ನು ಓದಬೇಕು. ಈ ರೀತಿಯಲ್ಲಿ ಮರಣ ಕಾಲದಲ್ಲಿ ಭಗವಂತನನ್ನು ಸ್ಮರಿಸುವುದು ನಮಗೆ ಸಾಧ್ಯವಾಗುತ್ತದೆ. ಭಗವಂತನು ಸೂಚಿಸಿರುವ ಮಾರ್ಗ ಇದೊಂದೇ. 'ಇದರಲ್ಲಿ ಸಂದೇಹವೇ ಇಲ್ಲ' ಎಂದು ಹೇಳಿ ಇದರ ಪರಿಣಾಮವನ್ನು ಕುರಿತು ಅವನು ಖಂಡಿತವಾದ ಭರವಸೆಯನ್ನು ಕೊಟ್ಟಿದ್ದಾನೆ.

**ತಸ್ಮಾತ್ಸರ್ವೇಷು ಕಾಲೇಷು ಮಾಮ್ ಅನುಸ್ಮರ ಯುಧ್ಯ ಚ |**
**ಮರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ||**

"ಅರ್ಜುನ, ಆದುದರಿಂದ ನೀನು ಯಾವಾಗಲೂ ನನ್ನ ಕೃಷ್ಣರೂಪವನ್ನು ನೆನೆಯಬೇಕು,

ಅದೇ ಕಾಲದಲ್ಲಿ ಯುದ್ಧ ಮಾಡುವ ನಿನ್ನ ನಿಯತ ಕರ್ತವ್ಯವನ್ನು ಮುಂದುವರಿಸಬೇಕು. ನಿನ್ನ ಕರ್ಮಗಳನ್ನು ನನಗೆ ಸಮರ್ಪಿಸಿ, ನಿನ್ನ ಮನಸ್ಸು ಮತ್ತು ಬುದ್ಧಿಗಳನ್ನು ನನ್ನಲ್ಲಿ ಸ್ಥಿರಗೊಳಿಸಿದ್ದರೆ ನಿಸ್ಸಂಶಯವಾಗಿಯೂ ನನ್ನನ್ನು ಹೊಂದುವೆ." (ಗೀತಾ 8.7)

ನನ್ನನ್ನು ಸ್ಮರಿಸಬೇಕು, ನಿನ್ನ (ಅರ್ಜುನನ) ಸಹಜ ಧರ್ಮವನ್ನು ಬಿಟ್ಟುಬಿಡಬೇಕು ಎಂದೇನೂ ಕೃಷ್ಣನು ಅರ್ಜುನನಿಗೆ ಉಪದೇಶಮಾಡುವುದಿಲ್ಲ. ಇಲ್ಲವೇ ಇಲ್ಲ, ಕಾರ್ಯಸಾಧ್ಯವಲ್ಲದಿರುವುದನ್ನು ಭಗವಂತನು ಸೂಚಿಸುವುದೇ ಇಲ್ಲ. ಈ ಐಹಿಕ ಜಗತ್ತಿನಲ್ಲಿ ದೇಹಪಾಲನೆಗಾಗಿ ಮನುಷ್ಯನು ಕೆಲಸ ಮಾಡಲೇಬೇಕು. ಮಾಡುವ ಕೆಲಸಕ್ಕೆ ಅನುಗುಣವಾಗಿ ಮಾನವ ಸಮಾಜವನ್ನು ನಾಲ್ಕು ವರ್ಗಗಳಾಗಿ ವಿಭಾಗಿಸಿದೆ — ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಬ್ರಾಹ್ಮಣ ವರ್ಗವು ಎಂದರೆ ಬುದ್ಧಿವರ್ಗವು ಒಂದು ರೀತಿಯಲ್ಲಿ ಕೆಲಸ ಮಾಡುತ್ತದೆ. ಕ್ಷತ್ರಿಯ ವರ್ಗವು ಎಂದರೆ ಆಡಳಿತ ವರ್ಗವು ಮತ್ತೊಂದು ರೀತಿಯಲ್ಲಿ ಕೆಲಸ ಮಾಡುತ್ತದೆ. ವ್ಯಾಪಾರಿಗಳು ಮತ್ತು ಕಾರ್ಮಿಕರು ಎಲ್ಲರೂ ತಮ್ಮ ತಮ್ಮ ನಿರ್ದಿಷ್ಟ ಕರ್ತವ್ಯಗಳಲ್ಲಿ ತೊಡಗಿರುತ್ತಾರೆ. ಮನುಷ್ಯ ಸಮಾಜದಲ್ಲಿ ಒಬ್ಬಾತ ಕಾರ್ಮಿಕನಾಗಿರಬಹುದು, ವ್ಯಾಪಾರಿಯಾಗಿರಬಹುದು, ಆಡಳಿತಗಾರನಾಗಿರಬಹುದು, ರೈತನಾಗಿರಬಹುದು; ಇಲ್ಲವೇ ಅತ್ಯುಚ್ಚವರ್ಗಕ್ಕೆ ಸೇರಿ ಸಾಹಿತಿಯಾಗಿರಬಹುದು, ವಿಜ್ಞಾನಿಯಾಗಿರಬಹುದು, ಧರ್ಮಶಾಸ್ತ್ರತಜ್ಞನಾಗಿರಬಹುದು. ಆದರೆ ತನ್ನ ಜೀವನ ನಿರ್ವಹಣೆಗಾಗಿ ಆತನು ಕೆಲಸ ಮಾಡಲೇಬೇಕು. ಆದುದರಿಂದ ಅರ್ಜುನನಿಗೆ ಅವನು ತನ್ನ ಸಹಜ ಧರ್ಮವನ್ನು ಬಿಡಬೇಕಾಗಿಲ್ಲ ಎಂದು ಭಗವಂತನು ಹೇಳುತ್ತಾನೆ. ಆದರೆ ತನ್ನ ಧರ್ಮದಲ್ಲಿ ಉದ್ಯುಕ್ತನಾಗಿರುವಾಗ ಅವನು ಕೃಷ್ಣನನ್ನು ಸ್ಮರಿಸುತ್ತಿರಬೇಕು **(ಮಾಮ್ ಅನುಸ್ಮರ).** ಆತನು ಜೀವನ ನಿರ್ವಹಣೆಗಾಗಿ ಶ್ರಮಿಸುತ್ತಿರುವಾಗ ಕೃಷ್ಣಸ್ಮರಣೆಯನ್ನು ಅಭ್ಯಾಸ ಮಾಡದಿದ್ದರೆ ಮರಣಕಾಲದಲ್ಲಿ ಕೃಷ್ಣನನ್ನು ಸ್ಮರಿಸುವುದು ಅವನಿಗೆ ಸಾಧ್ಯವಾಗುವುದಿಲ್ಲ. ಚೈತನ್ಯ ಮಹಾಪ್ರಭುಗಳು ಇದೇ ಉಪದೇಶ ಮಾಡುತ್ತಾರೆ. ಅವರು, **ಕೀರ್ತನೀಯಃ ಸದಾ ಹರಿಃ** ಎಂದರೆ ಮನುಷ್ಯನು ಸದಾ ಭಗವಂತನ ನಾಮ ಸಂಕೀರ್ತನೆಯನ್ನು ಅಭ್ಯಾಸ ಮಾಡುತ್ತಿರಬೇಕು ಎಂದು ಹೇಳಿದ್ದಾರೆ. ಭಗವಂತನೂ, ಭಗವಂತನ ಹೆಸರುಗಳೂ ಅಭಿನ್ನ. ಆದುದರಿಂದ ಶ್ರೀಕೃಷ್ಣನು ಅರ್ಜುನನಿಗೆ ನೀಡಿದ 'ನನ್ನನ್ನು ಸ್ಮರಿಸುತ್ತಿರು' ಎನ್ನುವ ಆದೇಶವೂ, ಚೈತನ್ಯ ಮಹಾಪ್ರಭುಗಳು 'ಸದಾ ಶ್ರೀಕೃಷ್ಣನ ಹೆಸರುಗಳನ್ನು ಸಂಕೀರ್ತನೆ ಮಾಡುತ್ತಿರು' ಎನ್ನುವ ಆದೇಶವೂ ಬೇರೆ ಬೇರೆಯಲ್ಲ. ಕೃಷ್ಣನ ನಾಮವೂ ಕೃಷ್ಣನೂ ಬೇರೆಯಲ್ಲವಾದ್ದರಿಂದ ಈ ಆದೇಶಗಳೂ ಬೇರೆಯಲ್ಲ. ಪರಿಪೂರ್ಣ ನೆಲೆಯಲ್ಲಿ ಉಲ್ಲೇಖ ಮತ್ತು ಉಲ್ಲೇಖಿತಗಳಲ್ಲಿ ವ್ಯತ್ಯಾಸವಿಲ್ಲ. ಆದುದರಿಂದ ನಾವು ಸದಾ ಭಗವಂತನನ್ನು ಸ್ಮರಿಸುವುದು ಸಾಧ್ಯವಾಗುವಂತೆ ಅವನ ನಾಮಗಳ ಸಂಕೀರ್ತನೆಯನ್ನು ಮಾಡುತ್ತಾ ನಮ್ಮ ಬದುಕಿನ ಕರ್ಮಗಳನ್ನು ರೂಪಿಸಿಕೊಳ್ಳಬೇಕು. ಭಗವಂತನನ್ನು ದಿನದಲ್ಲಿ ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ಸ್ಮರಿಸುವುದನ್ನು ಅಭ್ಯಾಸಮಾಡಬೇಕು.

ಇದು ಹೇಗೆ ಸಾಧ್ಯ? ಆಚಾರ್ಯರು ಈ ಉದಾಹರಣೆಯನ್ನು ಕೊಡುತ್ತಾರೆ. ಮದುವೆಯಾದ ಹೆಂಗಸೊಬ್ಬಳು ಬೇರೊಬ್ಬ ಮನುಷ್ಯನನ್ನು ಪ್ರೀತಿಸುತ್ತಿದ್ದರೆ ಅಥವಾ ಒಬ್ಬ ಮನುಷ್ಯನು ತನ್ನ ಹೆಂಡತಿಯಲ್ಲದವಳನ್ನು ಪ್ರೀತಿಸುತ್ತಿದ್ದರೆ ಆ ಪ್ರೀತಿಯು ಬಹಳ ಬಲವಾದದ್ದು ಎಂದು

ಭಾವಿಸಲ್ಪಡುತ್ತದೆ. ಹೀಗೆ ಅನುರಕ್ತರಾದವರು ಸದಾ ತಮ್ಮ ಪ್ರೀತಿಪಾತ್ರರಾದವರನ್ನೇ ಕುರಿತು ಯೋಚಿಸುತ್ತಿರುತ್ತಾರೆ. ತನ್ನ ಪ್ರಿಯನನ್ನು ಕುರಿತು ಯೋಚಿಸುತ್ತಿರುವ ಪತ್ನಿಯು ತನ್ನ ಮನೆಗೆಲಸದಲ್ಲಿ ತೊಡಗಿದ್ದಾಗಲೂ ಸದಾ ಅವನನ್ನು ಭೇಟಿಮಾಡುವ ವಿಷಯವನ್ನೇ ಯೋಚಿಸುತ್ತಿರುತ್ತಾಳೆ. ಅಷ್ಟೇ ಅಲ್ಲ, ತನ್ನ ಗಂಡನಿಗೆ ಅನುಮಾನ ಬರದಿರಲೆಂದು ತನ್ನ ಮನೆಗೆಲಸವನ್ನು ಇನ್ನೂ ಎಚ್ಚರಿಕೆಯಿಂದ ಮಾಡುತ್ತಾಳೆ. ಇದೇ ರೀತಿಯಲ್ಲಿ ನಾವು ಸದಾ ಪರಮ ಪ್ರಿಯನಾದ ಶ್ರೀಕೃಷ್ಣನನ್ನು ಸ್ಮರಿಸುತ್ತಿರಬೇಕು. ಅದೇ ಕಾಲದಲ್ಲಿ ನಮ್ಮ ಐಹಿಕ ಕರ್ತವ್ಯಗಳನ್ನು ಚೆನ್ನಾಗಿ ನಿರ್ವಹಿಸಬೇಕು. ಹೀಗೆ ಮಾಡಲು ಪ್ರಬಲವಾದ ಪ್ರೇಮಪ್ರಜ್ಞೆ ಅಗತ್ಯ. ನಮಗೆ ಭಗವಂತನಲ್ಲಿ ಬಲವಾದ ಪ್ರೇಮಪ್ರಜ್ಞೆ ಇದ್ದರೆ ನಾವು ನಮ್ಮ ಕರ್ತವ್ಯವನ್ನೂ ಮಾಡಬಹುದು, ಅದೇ ಕಾಲದಲ್ಲಿ ಭಗವಂತನನ್ನೂ ಸ್ಮರಿಸಬಹುದು. ಆದರೆ ನಾವು ಈ ಪ್ರೇಮಪ್ರಜ್ಞೆಯನ್ನು ಬೆಳಸಿಕೊಳ್ಳಬೇಕು. ಉದಾಹರಣೆಗೆ ಅರ್ಜುನನು ಸದಾ ಕೃಷ್ಣನನ್ನು ಕುರಿತು ಯೋಚಿಸುತ್ತಿದ್ದ. ಅವನು ಸದಾ ಕೃಷ್ಣನ ಸಖನಾಗಿದ್ದ, ಅದೇ ಕಾಲದಲ್ಲಿ ಯೋಧನಾಗಿದ್ದ. ಅವನು ಯುದ್ಧಮಾಡುವುದನ್ನು ಬಿಟ್ಟು ಧ್ಯಾನ ಮಾಡಲು ಕಾಡಿಗೆ ಹೋಗಬೇಕೆಂದು ಕೃಷ್ಣನು ಉಪದೇಶ ಮಾಡಲಿಲ್ಲ. ಶ್ರೀಕೃಷ್ಣನು ಯೋಗ ವಿಧಾನವನ್ನು ಅರ್ಜುನನಿಗೆ ವಿವರಿಸಿದಾಗ ಅರ್ಜುನನು ಅದನ್ನು ಆಚರಿಸುವುದು ತನಗೆ ಸಾಧ್ಯವಾಗುವುದಿಲ್ಲ ಎಂದು ಹೇಳಿದ.

ಅರ್ಜುನ ಉವಾಚ

ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ |
ಏತಸ್ಯಾಹಂ ನ ಪಶ್ಯಾಮಿ ಚಞ್ಚಲತ್ವಾತ್ ಸ್ಥಿತಿಂ ಸ್ಥಿರಾಮ್ ||

ಅರ್ಜುನನು ಹೀಗೆ ಹೇಳಿದನು — "ಓ ಮಧುಸೂದನ, ನೀನು ಈಗ ಹೇಳಿದ ಯೋಗ ಪದ್ಧತಿಯು ಕಾರ್ಯಸಾಧ್ಯವಲ್ಲ ಮತ್ತು ಸಹಿಸಲು ಅಸಾಧ್ಯವಾದದ್ದು ಎಂದು ನನಗೆ ತೋರುತ್ತದೆ. ಏಕೆಂದರೆ ಮನಸ್ಸು ಅಶಾಂತವಾಗಿರುತ್ತದೆ ಮತ್ತು ಚಂಚಲವಾಗಿರುತ್ತದೆ." (ಗೀತಾ 6.33)

ಆದರೆ ಭಗವಂತನು ಹೇಳುತ್ತಾನೆ —

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ |
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ||

"ಎಲ್ಲ ಯೋಗಿಗಳಲ್ಲಿ, ಸದಾ ಯಾರು ನನ್ನಲ್ಲೇ ಸ್ಥಿರವಾಗಿದ್ದು, ತನ್ನಲ್ಲೇ ನನ್ನನ್ನು ಕುರಿತು ಚಿಂತಿಸುತ್ತ ನನಗೆ ಆಧ್ಯಾತ್ಮಿಕ ಪ್ರೇಮಪೂರ್ವಕ ಸೇವೆಯನ್ನು ಬಹು ಶ್ರದ್ಧೆಯಿಂದ ಸಲ್ಲಿಸುತ್ತಾನೋ ಆತನೇ ಯೋಗದಲ್ಲಿ ನನ್ನೊಡನೆ ಅತ್ಯಂತ ನಿಕಟವಾಗಿ ಒಂದಾಗಿರುವವನು ಮತ್ತು ಆತನೇ ಎಲ್ಲರಿಗಿಂತಲೂ ಶ್ರೇಷ್ಠನು. ಇದೇ ನನ್ನ ಅಭಿಪ್ರಾಯ." (ಗೀತಾ 6.47). ಆದುದರಿಂದ ಯಾರು ಸದಾ ಭಗವಂತನನ್ನೇ ಕುರಿತು ಚಿಂತಿಸುವರೋ ಅವನೇ ಅತ್ಯಂತ ಶ್ರೇಷ್ಠ ಯೋಗಿ, ಪರಮ ಜ್ಞಾನಿ ಮತ್ತು ಅತ್ಯಂತ ಶ್ರೇಷ್ಠ ಭಕ್ತ. ಭಗವಂತನು ಅರ್ಜುನನಿಗೆ, ನೀನು ಕ್ಷತ್ರಿಯನಾದದ್ದರಿಂದ ಯುದ್ಧಮಾಡುವುದನ್ನು ಬಿಡುವಂತಿಲ್ಲ, ಆದರೆ ನನ್ನನ್ನು ಸ್ಮರಿಸುತ್ತಾ ನೀನು ಯುದ್ಧ ಮಾಡಿದರೆ ನಿನ್ನ ಮರಣಕಾಲದಲ್ಲಿ ನನ್ನನ್ನು ಸ್ಮರಿಸುವುದು ಸಾಧ್ಯವಾಗುತ್ತದೆ ಎಂದೂ

ಹೇಳುತ್ತಾನೆ. ಆದರೆ ಮನುಷ್ಯನು ಭಗವಂತನ ಆಧ್ಯಾತ್ಮಿಕ ಪ್ರೇಮಪೂರ್ವಕ ಸೇವೆಯಲ್ಲಿ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು.

ವಾಸ್ತವವಾಗಿ ನಾವು ಕೆಲಸಮಾಡುವುದು ನಮ್ಮ ದೇಹದಿಂದಲ್ಲ, ನಮ್ಮ ಮನಸ್ಸು ಮತ್ತು ಬುದ್ಧಿಗಳಿಂದ. ಆದುದರಿಂದ ಬುದ್ಧಿಶಕ್ತಿಯೂ ಮನಸ್ಸೂ ಸದಾ ಭಗವಂತನ ಚಿಂತೆಯಲ್ಲಿ ತೊಡಗಿದ್ದರೆ ಸಹಜವಾಗಿ ಇಂದ್ರಿಯಗಳು ಅವನ ಸೇವೆಯಲ್ಲಿ ನಿರತವಾಗಿರುತ್ತವೆ. ಕಡೆಯ ಪಕ್ಷ ಮೇಲ್ನೋಟಕ್ಕೆ ಇಂದ್ರಿಯಗಳ ಚಟುವಟಿಕೆಗಳು ಹಿಂದಿನಂತೆಯೇ ಇರುತ್ತವೆ. ಆದರೆ ಪ್ರಜ್ಞೆಯು ಬದಲಾಗುತ್ತದೆ. ಮನಸ್ಸನ್ನೂ ಬುದ್ಧಿಶಕ್ತಿಯನ್ನೂ ಭಗವಂತನ ಚಿಂತನೆಯಲ್ಲಿ ತಲ್ಲೀನಗೊಳಿಸುವುದು ಹೇಗೆ ಎನ್ನುವುದನ್ನು ಭಗವದ್ಗೀತೆಯು ಹೇಳಿಕೊಡುತ್ತದೆ. ಇಂತಹ ತಲ್ಲೀನತೆಯಿಂದ ಮನುಷ್ಯನು ಭಗವಂತನ ಸಾಮ್ರಾಜ್ಯಕ್ಕೆ ಏರುವುದು ಸಾಧ್ಯವಾಗುತ್ತದೆ. ಮನಸ್ಸು ಕೃಷ್ಣಸೇವೆಯಲ್ಲಿ ತೊಡಗಿದ್ದರೆ ಇಂದ್ರಿಯಗಳು ತಾವಾಗಿಯೇ ಅವನ ಸೇವೆಯಲ್ಲಿ ತೊಡಗುತ್ತವೆ. ಭಗವದ್ಗೀತೆಯ ಕಲೆಯೂ ರಹಸ್ಯವೂ ಇದೇ — ಕೃಷ್ಣ ಚಿಂತನೆಯಲ್ಲಿ ಸಂಪೂರ್ಣ ತಲ್ಲೀನತೆ.

ಆಧುನಿಕ ಮನುಷ್ಯನು ಚಂದ್ರನನ್ನು ತಲಪಲು ಬಹಳ ಶ್ರಮಪಟ್ಟಿದ್ದಾನೆ. ಆದರೆ ಆಧ್ಯಾತ್ಮಿಕವಾಗಿ ತಾನು ಮೇಲಕ್ಕೆ ಏರಲು ಬಹಳ ಪ್ರಯತ್ನವೇನನ್ನೂ ಮಾಡಿಲ್ಲ. ಒಬ್ಬ ಮನುಷ್ಯನಿಗೆ ಐವತ್ತು ವರ್ಷಗಳ ಆಯಸ್ಸು ಉಳಿದಿದ್ದರೆ ಅವನು ಆ ಅಲ್ಪಾವಧಿಯನ್ನು ದೇವೋತ್ತಮ ಪರಮ ಪುರುಷನನ್ನು ಸ್ಮರಿಸಿಕೊಳ್ಳುವ ಅಭ್ಯಾಸವನ್ನು ಬೆಳೆಸಿಕೊಳ್ಳಲು ಉಪಯೋಗಿಸಿಕೊಳ್ಳಬೇಕು. ಈ ಸಾಧನೆಯೇ ಭಕ್ತಿಮಾರ್ಗ —

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ |**
**ಅರ್ಚನಂ ವನ್ದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ||**

(ಭಾಗವತ 7.5.23)

ಈ ಒಂಬತ್ತು ವಿಧಗಳಲ್ಲಿ ಶ್ರವಣವು ಅಥವಾ ಸಾಕ್ಷಾತ್ಕಾರ ಪಡೆದವರಿಂದ ಭಗವದ್ಗೀತೆಯನ್ನು ಕೇಳುವುದು ಅತ್ಯಂತ ಸುಲಭವಾದದ್ದು. ಇದು ಶ್ರೋತೃವಿನ ಚಿಂತನೆಯನ್ನು ಪರಮ ಪ್ರಭುವಿನ ಕಡೆಗೆ ತಿರುಗಿಸುತ್ತದೆ. ಇದು ಭಗವಂತನ ಸ್ಮರಣೆಗೆ ದಾರಿಮಾಡುತ್ತದೆ. ದೇಹವನ್ನು ತ್ಯಾಗಮಾಡಿದಾಗ ಭಗವಂತನ ಸಹವಾಸಕ್ಕೆ ಯೋಗ್ಯವಾದ ಆಧ್ಯಾತ್ಮಿಕ ಶರೀರವನ್ನು ಪಡೆಯಲು ಇದರಿಂದ ಸಾಧ್ಯವಾಗುತ್ತದೆ.

ಭಗವಂತನು ಇನ್ನೂ ಹೇಳುತ್ತಾನೆ —

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ |**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ||**

"ಅರ್ಜುನ, ಯಾವ ಮನುಷ್ಯನು ಮಾರ್ಗದಿಂದ ವಿಚಲಿತನಾಗದೆ ಸದಾ ನನ್ನ ಸ್ಮರಣೆಯಲ್ಲಿ ತನ್ಮಯವಾಗಿದ್ದು ಸದಾ ನನ್ನನ್ನು ದೇವೋತ್ತಮ ಪರಮ ಪುರುಷನೆಂದು ಧ್ಯಾನಿಸುತ್ತಾನೊ ಆತನು, ಖಂಡಿತವಾಗಿ ನನ್ನ ಬಳಿಗೆ ಬರುತ್ತಾನೆ" (ಗೀತಾ 8.8).

ಇದು ಬಹು ಕಠಿಣವಾದ ಮಾರ್ಗವೇನೂ ಅಲ್ಲ. ಆದರೆ ಅದನ್ನು ಅನುಭವಿಗಳಾದವರಿಂದ ಕಲಿಯಬೇಕು. **ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್** ಎಂದರೆ ಈಗಾಗಲೆ ಆಚರಿಸುತ್ತಿರುವವನಿಂದ ಕಲಿಯಬೇಕು. ಮನಸ್ಸು ಸದಾ ಇತ್ತ ಅತ್ತ ಹಾರುತ್ತಲೇ ಇರುತ್ತದೆ. ಆದರೆ ಭಗವಂತನಾದ ಕೃಷ್ಣನ ರೂಪದಲ್ಲಿ ಅಥವಾ ಅವನ ನಾಮದ ಧ್ವನಿಯಲ್ಲಿ ಮನಸ್ಸನ್ನು ಸದಾ ಕೇಂದ್ರೀಕರಿಸುವುದನ್ನು ಅಭ್ಯಾಸ ಮಾಡಬೇಕು. ಮನಸ್ಸು ಸಹಜವಾಗಿಯೇ ಚಂಚಲ, ಆದರೆ ಅದು ಕೃಷ್ಣಶಬ್ದತರಂಗದಲ್ಲಿ ವಿರಮಿಸಬಹುದು. ಮನುಷ್ಯನು ಹೀಗೆ ಆಧ್ಯಾತ್ಮಿಕ ಸಾಮ್ರಾಜ್ಯದಲ್ಲಿರುವ, ಆಧ್ಯಾತ್ಮಿಕ ಗಗನದಲ್ಲಿರುವ ದೇವೋತ್ತಮ ಪರಮ ಪುರುಷನನ್ನು ಧ್ಯಾನಿಸಬೇಕು; ಅವನನ್ನು ಸೇರಬೇಕು. ಪರಮ ಸಿದ್ಧಿಗೆ, ಪರಮ ಸಾಕ್ಷಾತ್ಕಾರಕ್ಕೆ ಮಾರ್ಗಗಳನ್ನೂ ಸಾಧನಗಳನ್ನೂ ಭಗವದ್ಗೀತೆಯಲ್ಲಿ ಹೇಳಿದೆ. ಈ ಜ್ಞಾನದ ಬಾಗಿಲುಗಳು ಎಲ್ಲರಿಗೂ ತೆರೆದಿವೆ. ಯಾರನ್ನೂ ಹೊರಗಿಟ್ಟಿಲ್ಲ. ಶ್ರೀಕೃಷ್ಣನ ಚಿಂತನೆಯಿಂದ ಎಲ್ಲ ವರ್ಗಗಳ ಜನರೂ ಅವನ ಬಳಿಸಾರಬಹುದು. ಏಕೆಂದರೆ ಆತನ ವಿಷಯವನ್ನು ಕೇಳುವುದು ಮತ್ತು ಚಿಂತಿಸುವುದು ಎಲ್ಲರಿಗೂ ಸಾಧ್ಯ.

ಭಗವಂತನು ಮುಂದುವರಿದು ಹೇಳುತ್ತಾನೆ — (ಗೀತಾ 9.32-33)

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ |**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ||**

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ |**
**ಅನಿತ್ಯಮಸುಖಂ ಲೋಕಮ್ ಇಮಂ ಪ್ರಾಪ್ಯ ಭಜಸ್ವ ಮಾಮ್ ||**

ವರ್ತಕನಾಗಲಿ, ಪತಿತ ಸ್ತ್ರೀಯಾಗಲಿ, ಅಥವಾ ಶ್ರಮಜೀವಿಯಾಗಲಿ, ಇಲ್ಲವೇ ಬದುಕಿನ ಅತ್ಯಂತ ಕೆಳಸ್ತರದ ಮನುಷ್ಯರಾಗಲಿ ಪರಾತ್ಪರವನ್ನು ಸೇರಲು ಸಾಧ್ಯ ಎಂದು ಭಗವಂತನು ಹೇಳುತ್ತಾನೆ. ಇದಕ್ಕೆ ಮಹಾಬುದ್ಧಿಯ ಅಗತ್ಯವಿಲ್ಲ. ಭಕ್ತಿಯೋಗದ ತತ್ವವನ್ನು ಒಪ್ಪಿಕೊಂಡು ಭಗವಂತನನ್ನೇ ಬದುಕಿನ ಪರಮ ಶ್ರೇಯಸ್ಸು, ಪರಮ ಗುರಿ ಎಂದು ಸ್ವೀಕರಿಸುವ ಯಾರೇ ಆಗಲಿ ಆಧ್ಯಾತ್ಮಿಕ ವ್ಯೋಮದಲ್ಲಿ ಭಗವಂತನ ಬಳಿಸಾರಬಹುದು. ಭಗವದ್ಗೀತೆಯಲ್ಲಿ ಹೇಳಿರುವ ತತ್ವಗಳನ್ನು ಅನುಷ್ಠಾನಕ್ಕೆ ತರುವ ಮನುಷ್ಯನು ತನ್ನ ಬದುಕನ್ನು ಪರಿಪೂರ್ಣ ಮಾಡಿಕೊಳ್ಳಬಹುದು ಮತ್ತು ಬದುಕಿನ ಎಲ್ಲ ಸಮಸ್ಯೆಗಳಿಗೆ ಶಾಶ್ವತ ಪರಿಹಾರವನ್ನು ಪಡೆಯಬಹುದು. ಇದೇ ಇಡೀ ಭಗವದ್ಗೀತೆಯ ಸಾರ ಸರ್ವಸ್ವ.

ಕಡೆಯಲ್ಲಿ ಹೇಳಬೇಕಾದ ಮಾತೆಂದರೆ ಭಗವದ್ಗೀತೆಯು ಅತ್ಯಂತ ಎಚ್ಚರಿಕೆಯಿಂದ ಓದಬೇಕಾದ ಆಧ್ಯಾತ್ಮಿಕ ಕೃತಿ. **ಗೀತಾ ಶಾಸ್ತ್ರಮಿದಂ ಪುಣ್ಯಂ ಯಃ ಪಠೇತ್ ಪ್ರಯತಃ ಪುಮಾನ್.** ಭಗವದ್ಗೀತೆಯ ಉಪದೇಶವನ್ನು ಸರಿಯಾಗಿ ಅನುಷ್ಠಾನಕ್ಕೆ ತಂದರೆ ಮನುಷ್ಯನು ಬದುಕಿನ ಎಲ್ಲ ದುಃಖಗಳಿಂದ ಮತ್ತು ಆತಂಕಗಳಿಂದ ಮುಕ್ತನಾಗಬಹುದು. **ಭಯಶೋಕಾದಿವರ್ಜಿತಃ** ಎಂದರೆ ವ್ಯಕ್ತಿಯು ಈ ಬದುಕಿನಲ್ಲಿ ಎಲ್ಲ ಭಯಗಳಿಂದ ಬಿಡುಗಡೆ ಹೊಂದಬಹುದು ಮತ್ತು ಅಂತಹವನ ಮುಂದಿನ ಬದುಕು ಆಧ್ಯಾತ್ಮಿಕ ಬದುಕಾಗುತ್ತದೆ. (ಗೀತಾ ಮಾಹಾತ್ಮ್ಯ 1)

ಇದರಿಂದ ಇನ್ನೂ ಫಲವಿದೆ —

ಗೀತಾಧ್ಯಾಯನಶೀಲಸ್ಯ ಪ್ರಾಣಾಯಾಮಪರಸ್ಯ ಚ |
ನೈವ ಸನ್ತಿ ಹಿ ಪಾಪಾನಿ ಪೂರ್ವಜನ್ಮಕೃತಾನಿ ಚ ||

"ಭಗವದ್ಗೀತೆಯನ್ನು ಶ್ರದ್ಧೆಯಿಂದ, ಅತ್ಯಂತ ಪ್ರಾಮಾಣಿಕತೆಯಿಂದ ಅಧ್ಯಯನ ಮಾಡಿದರೆ ಭಗವಂತನ ಕೃಪೆಯಿಂದ ಅಂತಹ ಮನುಷ್ಯನ ಹಿಂದಿನ ಪಾಪಕರ್ಮಗಳು ಅವನ ಮೇಲೆ ಪರಿಣಾಮ ಮಾಡಲಾರವು" (ಗೀತಾಮಾಹಾತ್ಮ್ಯ 2). ಭಗವದ್ಗೀತೆಯ ಕಡೆಯ ಭಾಗದಲ್ಲಿ ಭಗವಂತನು (18.66) ಉಚ್ಚಸ್ವರದಲ್ಲಿ ಹೀಗೆ ಹೇಳುತ್ತಾನೆ.

ಸರ್ವಧರ್ಮಾನ್ಪರಿತ್ಯಜ್ಯ ಮಾಮ್ ಏಕಂ ಶರಣಂ ವ್ರಜ |
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ||

"ಬೇರೆ ಬೇರೆ ಧರ್ಮಗಳನ್ನು ಪರಿತ್ಯಜಿಸು, ಕೇವಲ ನನಗೆ ಶರಣಾಗತನಾಗು. ಎಲ್ಲ ಪಾಪಗಳಿಂದ ನಿನ್ನನ್ನು ಮುಕ್ತನನ್ನಾಗಿ ಮಾಡುತ್ತೇನೆ, ಹೆದರಬೇಡ". ಹೀಗೆ ಭಗವಂತನು ತನಗೆ ಶರಣಾಗತನಾದವನ ವಿಷಯದಲ್ಲಿ ಎಲ್ಲ ಹೊಣೆಯನ್ನೂ ವಹಿಸಿಕೊಳ್ಳುತ್ತಾನೆ ಮತ್ತು ಅಂತಹ ಮನುಷ್ಯನಿಗೆ ಎಲ್ಲ ಪಾಪಕರ್ಮಗಳ ಫಲದಿಂದ ರಕ್ಷಣೆಯನ್ನು ಕೊಡುತ್ತಾನೆ.

ಮಲಿನೇ ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ |
ಸಕೃದ್ಗೀತಾಮೃತಸ್ನಾನಂ ಸಂಸಾರಮಲನಾಶನಮ್ ||

"ಒಬ್ಬ ಮನುಷ್ಯನು ಪ್ರತಿನಿತ್ಯವೂ ನೀರಿನಲ್ಲಿ ಸ್ನಾನಮಾಡಿ ತನ್ನನ್ನು ಶುದ್ಧಿಗೊಳಿಸಿಕೊಳ್ಳಬಹುದು. ಆದರೆ ಭಗವದ್ಗೀತೆಯ ಪವಿತ್ರ ಗಂಗಾಜಲದಲ್ಲಿ ಒಮ್ಮೆಯಾದರೂ ಸ್ನಾನಮಾಡಿದರೆ ಅಂತಹವನ ಐಹಿಕ ಜೀವನದ ಕೊಳೆಯೆಲ್ಲ ಸಂಪೂರ್ಣವಾಗಿ ನಾಶವಾಗಿ ಹೋಗುತ್ತದೆ" (ಗೀತಾಮಾಹಾತ್ಮ್ಯ 3).

ಗೀತಾ ಸು-ಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ |
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ||

ಭಗವದ್ಗೀತೆಯನ್ನು ದೇವೋತ್ತಮ ಪರಮ ಪುರುಷನೇ ಹೇಳಿರುವುದರಿಂದ ಬೇರೆ ಯಾವುದೇ ವೈದಿಕ ರಚನೆಯನ್ನು ಓದುವ ಅಗತ್ಯವಿಲ್ಲ. ಗಮನವಿಟ್ಟು, ಸದಾ ಭಗವದ್ಗೀತೆಯನ್ನು ಕೇಳಿದರೆ ಮತ್ತು ಓದಿದರೆ ಸಾಕು. ಇಂದಿನ ಯುಗದಲ್ಲಿ ಜನರು ಪ್ರಾಪಂಚಿಕ ಚಟುವಟಿಕೆಗಳಲ್ಲಿ ಎಷ್ಟರ ಮಟ್ಟಿಗೆ ತಲ್ಲೀನರಾಗಿದ್ದಾರೆ ಎಂದರೆ ಅವರಿಗೆ ಎಲ್ಲ ವೈದಿಕ ಸಾಹಿತ್ಯವನ್ನು ಓದುವುದಕ್ಕೆ ಸಾಧ್ಯವಿಲ್ಲ. ಆದರೆ ಅದು ಅಗತ್ಯವಿಲ್ಲ. ಈ ಒಂದು ಕೃತಿ, ಭಗವದ್ಗೀತೆ, ಸಾಕು; ಏಕೆಂದರೆ ಅದು ಎಲ್ಲ ವೈದಿಕ ಸಾಹಿತ್ಯದ ಸಾರ; ವಿಶೇಷವಾದ ಕಾರಣವೆಂದರೆ ಅದನ್ನು ದೇವೋತ್ತಮ ಪರಮ ಪುರುಷನೇ ಹೇಳಿದ್ದಾನೆ (ಗೀತಾಮಾಹಾತ್ಮ್ಯ4) —

ಭಾರತಾಮೃತಸರ್ವಸ್ವಂ ವಿಷ್ಣುವಕ್ತ್ರಾದ್ವಿನಿಃಸೃತಮ್ |
ಗೀತಾಗನ್ಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ||

"ಗಂಗಾಜಲವನ್ನು ಕುಡಿದವನಿಗೇ ಮುಕ್ತಿಯು ದೊರಕುತ್ತದೆ ಎಂದ ಮೇಲೆ

ಭಗವದ್ಗೀತೆಯ ಅಮೃತವನ್ನು ಕುಡಿದವನ ವಿಷಯ ಹೇಳುವುದೇನಿದೆ? ಭಗವದ್ಗೀತೆಯು ಮಹಾಭಾರತದ ಅಮೃತಸರ್ವಸ್ವ. ಅದನ್ನು ಮೂಲ ವಿಷ್ಣುವಾದ ಶ್ರೀಕೃಷ್ಣನೇ ಹೇಳಿದ್ದಾನೆ" (ಗೀತಾಮಾಹಾತ್ಮ್ಯ 5). ಭಗವದ್ಗೀತೆಯು ದೇವೋತ್ತಮ ಪರಮ ಪುರುಷನ ಬಾಯಿಂದ ಬಂದಿದೆ; ಗಂಗೆಯು ಭಗವಂತನ ಪಾದಕಮಲಗಳಿಂದ ಹರಿದಿದೆ ಎಂದು ಹೇಳಲಾಗಿದೆ. ಭಗವಂತನ ಬಾಯಿಗೂ ಪಾದಗಳಿಗೂ ವ್ಯತ್ಯಾಸವಿಲ್ಲ. ಆದರೆ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿದಾಗ ಭಗವದ್ಗೀತೆಯು ಗಂಗಾಜಲಕ್ಕಿಂತ ಹೆಚ್ಚಿನ ಮಹತ್ವದ್ದು ಎಂದು ಅರ್ಥಮಾಡಿಕೊಳ್ಳಬಹುದು.

**ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನನ್ದನಃ |**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ||**

"ಭಗವದ್ಗೀತೆಯು ಗೀತೋಪನಿಷತ್ತು. ಎಲ್ಲ ಉಪನಿಷತ್ತುಗಳ ಸಾರ. ಅದು ಗೋವಿನಂತಿದೆ. ಗೋಪಾಲ ನಂದನನೆಂದು ಪ್ರಸಿದ್ಧನಾಗಿರುವ ಶ್ರೀಕೃಷ್ಣನು ಈ ಹಸುವಿನ ಹಾಲನ್ನು ಕರೆಯುತ್ತಿದ್ದಾನೆ. ಅರ್ಜುನನು ಕರುವಿನಂತಿದ್ದಾನೆ. ಎಲ್ಲ ವಿದ್ವಾಂಸರೂ ಪರಿಶುದ್ಧ ಭಕ್ತರೂ ಭಗವದ್ಗೀತೆಯ ಹಾಲಿನ ಅಮೃತವನ್ನು ಕುಡಿಯುತ್ತಾರೆ". (ಗೀತಾಮಾಹಾತ್ಮ್ಯ 6)

**ಏಕಂ ಶಾಸ್ತ್ರಂ ದೇವಕೀಪುತ್ರಗೀತಮ್ ಏಕೋ ದೇವೋ ದೇವಕೀಪುತ್ರ ಏವ |**
**ಏಕೋ ಮನ್ತ್ರಸ್ತಸ್ಯ ನಾಮಾನಿ ಯಾನಿ ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ ||**

(ಗೀತಾಮಾಹಾತ್ಮ್ಯ 7)

ಇಂದಿನ ದಿನದಲ್ಲಿ ಜನರು ಒಂದು ಧರ್ಮಶಾಸ್ತ್ರ, ಒಬ್ಬ ದೇವರು, ಒಂದು ಧರ್ಮ, ಒಂದು ಕಾರ್ಯ ಇವು ಬೇಕೆಂದು ಹಂಬಲಿಸುತ್ತಾರೆ. ಆದುದರಿಂದ, **ಏಕಂ ಶಾಸ್ತ್ರಂ ದೇವಕೀಪುತ್ರಗೀತಮ್** — ಇಡೀ — ಜಗತ್ತಿಗೆ ಒಂದೇ ಒಂದು ಧರ್ಮಗ್ರಂಥ — ಭಗವದ್ಗೀತಾ — ಇರಲಿ. **ಏಕೋ ದೇವೋ ದೇವಕೀ ಪುತ್ರ ಏವ** — ಇಡೀ ಜಗತ್ತಿಗೆ ಒಬ್ಬನೇ ದೇವರು — ಶ್ರೀಕೃಷ್ಣ — ಇರಲಿ. **ಏಕೋ ಮಂತ್ರಃ ತಸ್ಯ ನಾಮಾನಿ** —ಒಂದೇ ಮಂತ್ರ, ಒಂದೇ ಪ್ರಾರ್ಥನೆ ಇರಲಿ — ಅವನ ನಾಮ — ಸಂಕೀರ್ತನೆ — ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ. **ಕರ್ಮಾಪಿ ಏಕಂ ತಸ್ಯ ದೇವಸ್ಯ ಸೇವಾ** — ಒಂದೇ ಕೆಲಸವಿರಲಿ, ಅದು ದೇವೋತ್ತಮ ಪರಮ ಪುರುಷನ ಸೇವೆ.

## ಗುರು ಪರಂಪರೆ

**ಏವಂ ಪರಮ್ಪರಾಪ್ರಾಪ್ತಮ್ ಇಮಂ ರಾಜರ್ಷಯೋ ವಿದುಃ** (ಗೀತಾ 4.2). ಈ ಭಗವದ್ಗೀತೆಯ ಯಥಾರೂಪವು ಈ ಗುರು ಪರಂಪರೆಯಿಂದ ಪ್ರಾಪ್ತವಾಗಿದೆ.

1. ಕೃಷ್ಣ
2. ಬ್ರಹ್ಮ
3. ನಾರದ
4. ವ್ಯಾಸ
5. ಮಧ್ವ

17. ಬ್ರಹ್ಮಣ್ಯ ತೀರ್ಥ
18. ವ್ಯಾಸ ತೀರ್ಥ
19. ಲಕ್ಷ್ಮೀಪತಿ
20. ಮಾಧವೇಂದ್ರ ಪುರೀ
21. ಈಶ್ವರ ಪುರೀ (ನಿತ್ಯಾನಂದ, ಅದ್ವೈತ)

6. ಪದ್ಮನಾಭ
7. ನೃಹರಿ
8. ಮಾಧವ
9. ಅಕ್ಷೋಭ್ಯ
10. ಜಯತೀರ್ಥ
11. ಜ್ಞಾನಸಿಂಧು
12. ದಯಾನಿಧಿ
13. ವಿದ್ಯಾನಿಧಿ
14. ರಾಜೇಂದ್ರ
15. ಜಯಧರ್ಮ
16. ಪುರುಷೋತ್ತಮ
22. ಚೈತನ್ಯ ಮಹಾಪ್ರಭು
23. ರೂಪ, (ಸ್ವರೂಪ, ಸನಾತನ)
24. ರಘುನಾಥ, ಜೀವ
25. ಕೃಷ್ಣದಾಸ
26. ನರೋತ್ತಮ
27. ವಿಶ್ವನಾಥ
28. (ಬಲದೇವ), ಜಗನ್ನಾಥ
29. ಭಕ್ತಿವಿನೋದ
30. ಗೌರಕಿಶೋರ
31. ಭಕ್ತಿಸಿದ್ಧಾಂತ ಸರಸ್ವತೀ
32. ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ

ಅಧ್ಯಾಯ - 1

# ಕುರುಕ್ಷೇತ್ರದ ರಣರಂಗದಲ್ಲಿ ಸೇನಾವಲೋಕನ

## ಶ್ಲೋಕ - 1

**ಧೃತರಾಷ್ಟ್ರ ಉವಾಚ**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ |**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಞ್ಜಯ ||೧||**

**ಧೃತರಾಷ್ಟ್ರಃ ಉವಾಚ**—ಧೃತರಾಷ್ಟ್ರ ರಾಜನು ಹೇಳಿದನು; **ಧರ್ಮಕ್ಷೇತ್ರೇ**—ಯಾತ್ರಾ ಸ್ಥಳವಾದ; **ಕುರುಕ್ಷೇತ್ರೇ**—ಕುರುಕ್ಷೇತ್ರವೆಂಬ ಸ್ಥಳದಲ್ಲಿ; **ಸಮವೇತಾಃ**—ಸೇರಿದ; **ಯುಯುತ್ಸವಃ**—ಯುದ್ಧಮಾಡಲು ಅಪೇಕ್ಷಿಸುವವರಾದ; **ಮಾಮಕಾಃ**—ನನ್ನ ಪಕ್ಷದವರು (ಪುತ್ರರು); **ಪಾಂಡವಾಃ**—ಪಾಂಡು ಪುತ್ರರು; **ಚ**—ಮತ್ತು; **ಏವ**—ಖಂಡಿತವಾಗಿ; **ಕಿಮ್**—ಏನನ್ನು; **ಅಕುರ್ವತ**—ಮಾಡಿದರು; **ಸಞ್ಜಯ**—ಸಂಜಯನೇ.

## ಅನುವಾದ

**ಧೃತರಾಷ್ಟ್ರನು, ಹೇ ಸಂಜಯ, ಯುದ್ಧಾಪೇಕ್ಷೆಯಿಂದ ನನ್ನ ಮಕ್ಕಳು ಮತ್ತು ಪಾಂಡವರು ಧರ್ಮಕ್ಷೇತ್ರದಲ್ಲಿ ಸೇರಿದನಂತರ ಏನು ಮಾಡಿದರು ಎಂದು ಕೇಳಿದನು.**

## ಭಾವಾರ್ಥ

**ಗೀತಾಮಾಹಾತ್ಮ್ಯ** ದಲ್ಲಿ ಸಂಗ್ರಹವಾಗಿ ಹೇಳಿದ ಮತ್ತು ಬಹುಜನರು ಓದುವ ಧರ್ಮಶಾಸ್ತ್ರ ಭಗವದ್ಗೀತೆ. ಕೃಷ್ಣನ ಭಕ್ತರೊಬ್ಬರ ಸಹಾಯವನ್ನು ಪಡೆದು ಸೂಕ್ಷ್ಮವಾಗಿ ಪರಿಶೀಲಿಸುತ್ತ ಓದಿ, ಸ್ವಪ್ರೇರಿತ ವ್ಯಾಖ್ಯಾನಗಳಿಲ್ಲದೆ ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು ಎಂದು ಗೀತಾಮಾಹಾತ್ಮ್ಯದಲ್ಲಿ ಹೇಳಿದೆ. ಅರ್ಜುನನು ಭಗವದ್ಗೀತೆಯನ್ನು ಕೃಷ್ಣನಿಂದಲೇ ನೇರವಾಗಿ ಕೇಳಿ ತಾನೇ ಉಪದೇಶವನ್ನು ಅರ್ಥಮಾಡಿಕೊಂಡ. ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುವ ರೀತಿಗೆ ಇದೇ ಉದಾಹರಣೆ. ಇದು ಗೀತೆಯಲ್ಲೇ ಇದೆ. ಈ ಗುರುಶಿಷ್ಯಪರಂಪರೆಯಲ್ಲಿ ಸ್ವಪ್ರೇರಿತ ವ್ಯಾಖ್ಯಾನವಿಲ್ಲದೆ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳುವ ಭಾಗ್ಯಶಾಲಿಯು, ಎಲ್ಲ ವೇದಗಳ ಜ್ಞಾನದ ಅಧ್ಯಯನವನ್ನೂ ಜಗತ್ತಿನ ಎಲ್ಲ ಧರ್ಮಗ್ರಂಥಗಳ ಅಧ್ಯಯನವನ್ನೂ ಮೀರುತ್ತಾನೆ. ಇತರ ಧರ್ಮಗ್ರಂಥಗಳಲ್ಲಿ ಇರುವುದೆಲ್ಲವೂ ಓದುಗನಿಗೆ ಭಗವದ್ಗೀತೆಯಲ್ಲಿ ದೊರೆಯುತ್ತದೆ. ಜೊತೆಗೆ ಬೇರೆಲ್ಲೂ ದೊರೆಯದಿರುವುದೂ ಇಲ್ಲಿದೆ. ಇದು ಗೀತೆಯ ವಿಶಿಷ್ಟ ಸಾಧನೆ. ಇದು ಪರಿಪೂರ್ಣವಾದ ಧರ್ಮಶಾಸ್ತ್ರ. ಏಕೆಂದರೆ ಇದು ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ನೇರವಾದ ಮಾತು.

ಮಹಾಭಾರತದಲ್ಲಿ ವರ್ಣಿಸಿರುವಂತೆ ಧೃತರಾಷ್ಟ್ರನೂ ಸಂಜಯನೂ ಚರ್ಚಿಸಿದ ವಿಷಯಗಳು ಈ ಸಿದ್ಧಾಂತದ ಮೂಲತತ್ವ. ಈ ಸಿದ್ಧಾಂತವು ಕುರುಕ್ಷೇತ್ರದ ರಣಭೂಮಿಯಲ್ಲಿ ರೂಪಿತವಾಯಿತು ಎಂದು ತಿಳಿಯಲಾಗಿದೆ. ವೇದಯುಗದಷ್ಟು ನೆನಪಿಗೆ ಮೀರಿದ ಪ್ರಾಚೀನ ಕಾಲದಿಂದ ಕುರುಕ್ಷೇತ್ರವು ಪವಿತ್ರವಾದ ಯಾತ್ರಾಸ್ಥಳವಾಗಿದೆ. ಶ್ರೀಕೃಷ್ಣನೇ ಭೂಮಿಯ ಮೇಲಿದ್ದಾಗ ಮಾನವಕುಲದ ಮಾರ್ಗದರ್ಶನಕ್ಕಾಗಿ ಇದನ್ನು ಹೇಳಿದ.

**ಧರ್ಮಕ್ಷೇತ್ರ** (ಧಾರ್ಮಿಕ ವಿಧಿಗಳು ನಡೆಯುವ ಕ್ಷೇತ್ರ) ಎನ್ನುವ ಶಬ್ದ ಮಹತ್ವದ್ದು. ಏಕೆಂದರೆ ಕುರುಕ್ಷೇತ್ರ ರಣರಂಗದಲ್ಲಿ ದೇವೋತ್ತಮ ಪರಮ ಪುರುಷನೇ ಅರ್ಜುನನ ಪಕ್ಷದಲ್ಲಿದ್ದ. ಕೌರವರ ತಂದೆಯಾದ ಧೃತರಾಷ್ಟ್ರನಿಗೆ ತನ್ನ ಮಕ್ಕಳು ಕಟ್ಟಕಡೆಗೆ ವಿಜಯವನ್ನು ಸಂಪಾದಿಸುತ್ತಾರೆಯೇ ಎನ್ನುವುದರಲ್ಲಿ ತೀವ್ರ ಸಂದೇಹವಿತ್ತು. ಅವನು ಸಂದೇಹಗ್ರಸ್ತನಾಗಿ ತನ್ನ ಸಹಾಯಕ ಸಂಜಯನನ್ನು `ಅವರು ಏನು ಮಾಡಿದರು?' ಎಂದು ಪ್ರಶ್ನಿಸಿದ. ತನ್ನ ಮಕ್ಕಳೂ ತನ್ನ ತಮ್ಮ ಪಾಂಡುವಿನ ಮಕ್ಕಳೂ ಘನಘೋರ ಸಮರಕ್ಕಾಗಿ ಕುರುಕ್ಷೇತ್ರ ರಣಭೂಮಿಯಲ್ಲಿ ನೆರೆದಿದ್ದರು ಎಂದು ಅವನಿಗೆ ಖಚಿತವಾಗಿ ತಿಳಿದಿತ್ತು. ಆದರೂ, ಅವನ ಪ್ರಶ್ನೆ ಮಹತ್ವದ್ದು. ಅಣ್ಣತಮ್ಮಂದಿರ ಮಕ್ಕಳ ನಡುವೆ ರಾಜಿಯಾಗುವುದು ಅವನಿಗೆ ಇಷ್ಟವಿರಲಿಲ್ಲ. ಅವನು ರಣರಂಗದಲ್ಲಿ ತನ್ನ ಮಕ್ಕಳ ಅದೃಷ್ಟದ ಬಗ್ಗೆ ಖಚಿತವಾಗಿ ತಿಳಿಯಲು ಬಯಸಿದ್ದ. ವೇದಗಳಲ್ಲಿ ಕುರುಕ್ಷೇತ್ರವನ್ನು ಪವಿತ್ರ ಪೂಜಾಸ್ಥಳ, ಸ್ವರ್ಗದ ನಿವಾಸಿಗಳಿಗೂ ಪೂಜಾಸ್ಥಳ ಎಂದು ಹೆಸರಿಸಿದೆ. ಇಂತಹ ಸ್ಥಳವನ್ನು ಯುದ್ಧಕ್ಕಾಗಿ ಆರಿಸಿದುದರಿಂದ ಈ ಪವಿತ್ರಕ್ಷೇತ್ರವು ಯುದ್ಧದ ಫಲಿತಾಂಶದ ಮೇಲೆ ಯಾವ ಪ್ರಭಾವವನ್ನು ಬೀರುವುದೋ ಎಂದು ಧೃತರಾಷ್ಟ್ರನಿಗೆ ಬಹಳ ಭಯವಿತ್ತು. ಅರ್ಜುನನೂ ಪಾಂಡುವಿನ ಇತರ ಮಕ್ಕಳೂ ಸ್ವಭಾವತಃ ಧರ್ಮಿಷ್ಠರಾದುದರಿಂದ ಪವಿತ್ರಕ್ಷೇತ್ರದ ಪ್ರಭಾವವು ಪ್ರಬಲವಾಗಿ ಅವರ ಪರವಾಗಿರುತ್ತದೆ ಎಂದು ಆತನಿಗೆ ತಿಳಿದಿತ್ತು. ಸಂಜಯನು ವ್ಯಾಸರ ಶಿಷ್ಯ. ಅವರ ಕೃಪೆಯಿಂದ ಆತನು ಧೃತರಾಷ್ಟ್ರನ ಮಂದಿರದಲ್ಲಿದ್ದಂತೆಯೇ ಕುರುಕ್ಷೇತ್ರ ಯುದ್ಧವನ್ನು ಕಾಣಲು ಸಮರ್ಥನಾದ. ಆದುದರಿಂದ ಧೃತರಾಷ್ಟ್ರನು ಯುದ್ಧಭೂಮಿಯಲ್ಲಿ ಏನಾಗುತ್ತಿದೆ ಎಂದು ಕೇಳಿದ.

ಪಾಂಡವರೂ ಧೃತರಾಷ್ಟ್ರನ ಮಕ್ಕಳೂ ಒಂದೇ ಕುಟುಂಬದವರು. ಧೃತರಾಷ್ಟ್ರನ ಅಂತರ್ಯವು ಇಲ್ಲಿ ಬಯಲಾಗುತ್ತದೆ. ಉದ್ದೇಶಪೂರ್ವಕವಾಗಿ ತನ್ನ ಮಕ್ಕಳನ್ನು ಕುರುವಂಶದವರೆಂದು ಹೆಸರಿಸಿ ಪಾಂಡವರನ್ನು ಕುಟುಂಬದ ಪಿತ್ರಾರ್ಜಿತದಿಂದ ದೂರವಿರಿಸಿದ. ಪಾಂಡುವಿನ ಮಕ್ಕಳ ವಿಷಯದಲ್ಲಿ ಧೃತರಾಷ್ಟ್ರನ ಖಚಿತವಾದ ನಿಲುವನ್ನು ಇದರಿಂದ ತಿಳಿಯಬಹುದು. ಧರ್ಮದ ಜನಕನೆನಿಸಿರುವ ಶ್ರೀಕೃಷ್ಣನೇ ಉಪಸ್ಥಿತನಾಗಿದ್ದ ಕುರುಕ್ಷೇತ್ರ ಒಂದು ಧರ್ಮಕ್ಷೇತ್ರವಾಗಿತ್ತು. ಅಲ್ಲಿ, ಭತ್ತದ ಗದ್ದೆಯಲ್ಲಿ ಕಳೆಯನ್ನು ಕಿತ್ತೆಸೆಯುವ ಹಾಗೆ ದುರ್ಯೋಧನನಂತಹ ಅನಗತ್ಯವಾದ ಸಸ್ಯಗಳನ್ನು ಪ್ರಭುವು ಕಿತ್ತೆಸೆಯುತ್ತಾನೆ. ಅಲ್ಲದೆ ಯುಧಿಷ್ಠಿರನಂತಹ ನಾಯಕರನ್ನುಳ್ಳ ಧರ್ಮಿಷ್ಠರನ್ನು ಮತ್ತೆ ಪ್ರತಿಷ್ಠಾಪನೆ ಮಾಡುತ್ತಾನೆ. ಈ ನಿರೀಕ್ಷೆ ಪ್ರಸ್ತುತ ವಿಷಯಗಳ ಆರಂಭದಿಂದಲೇ ಇದೆ. ಐತಿಹಾಸಿಕ ಮತ್ತು ವೈದಿಕ ಪ್ರಾಮುಖ್ಯದ ಜೊತೆಗೆ ಧರ್ಮಕ್ಷೇತ್ರ, ಕುರುಕ್ಷೇತ್ರ ಎಂಬ ಶಬ್ದಗಳಿಗೆ ಈ ಮಹತ್ವವೂ ಇದೆ.

## ಶ್ಲೋಕ - 2

**ಸಞ್ಜಯ ಉವಾಚ**

**ದೃಷ್ಟ್ವಾ ತು ಪಾಣ್ಡವಾನೀಕಂ ವ್ಯೂಢಂ ದುರ್ಯೋಧನಸ್ತದಾ |**
**ಆಚಾರ್ಯಮುಪಸಙ್ಗಮ್ಯ ರಾಜಾ ವಚನಮಬ್ರವೀತ್ ||೨||**

**ಸಞ್ಜಯಃ ಉವಾಚ**—ಸಂಜಯನು ಹೇಳಿದನು; **ದೃಷ್ಟ್ವಾ**—ನೋಡಿದನಂತರ; **ತು**—ಆದರೆ; **ಪಾಣ್ಡವ ಅನೀಕಮ್**—ಪಾಂಡವರ ಸೈನ್ಯವನ್ನು; **ವ್ಯೂಢಮ್**—ವ್ಯೂಹದ ವ್ಯವಸ್ಥೆಯಲ್ಲಿದ್ದ; **ದುರ್ಯೋಧನಃ**—ದುರ್ಯೋಧನ ರಾಜನು; **ತದಾ**—ಆಗ; **ಆಚಾರ್ಯಮ್**—ಗುರುಗಳನ್ನು; **ಉಪಸಙ್ಗಮ್ಯ**—ಸಮೀಪಿಸಿ; **ರಾಜಾ**—ರಾಜನಾದ; **ವಚನಮ್**—ಮಾತುಗಳನ್ನು; **ಅಬ್ರವೀತ್**—ಹೇಳಿದನು.

### ಅನುವಾದ

**ಸಂಜಯನು ಹೇಳಿದ — ರಾಜನೇ, ಪಾಂಡವರ ಸೇನಾವ್ಯೂಹವನ್ನು ವೀಕ್ಷಿಸಿ ರಾಜಾ ದುರ್ಯೋಧನನು ತನ್ನ ಗುರುಗಳ ಬಳಿಗೆ ಹೋಗಿ ಹೀಗೆಂದನು.**

### ಭಾವಾರ್ಥ

ಧೃತರಾಷ್ಟ್ರನು ಹುಟ್ಟುಗುರುಡ. ದುರದೃಷ್ಟವಶಾತ್ ಅವನು ಆಧ್ಯಾತ್ಮಿಕವಾಗಿಯೂ ಕುರುಡ. ಧರ್ಮದ ವಿಷಯದಲ್ಲಿ ತನ್ನ ಮಕ್ಕಳು ತನ್ನಷ್ಟೇ ಕುರುಡರು ಎಂದು ಅವನಿಗೆ ತಿಳಿದಿತ್ತು. ಹುಟ್ಟಿದಾಗಿನಿಂದ ಧರ್ಮಿಷ್ಠರಾಗಿದ್ದ ಪಾಂಡವರೊಡನೆ ತನ್ನ ಮಕ್ಕಳು ಒಪ್ಪಂದ ಮಾಡಿಕೊಳ್ಳಲು ಎಂದೂ ಸಾಧ್ಯವೇ ಇಲ್ಲ ಎಂದು ಅವನಿಗೆ ಖಚಿತವಾಗಿತ್ತು. ಆದರೂ ಅವನಿಗೆ ಯಾತ್ರಾಸ್ಥಳದ ಪ್ರಭಾವದ ಬಗ್ಗೆ ಅನುಮಾನವಿದ್ದೇ ಇತ್ತು. ರಣರಂಗದಲ್ಲಿ ಏನಾಯಿತು ಎಂದು ಕೇಳುವುದರಲ್ಲಿ ಧೃತರಾಷ್ಟ್ರನ ಉದ್ದೇಶವೇನು ಎಂದು ಸಂಜಯ ಅರ್ಥಮಾಡಿಕೊಳ್ಳಬಲ್ಲವನಾಗಿದ್ದ. ಆದುದರಿಂದ ಸಂಜಯನು ವಿಷಣ್ಣನಾಗಿದ್ದ ರಾಜನಿಗೆ ಉತ್ಸಾಹ ಬರಿಸಲು ಬಯಸಿದ. ರಾಜನಿಗೆ, ಅವನ ಮಕ್ಕಳು ಧರ್ಮಕ್ಷೇತ್ರದ ಪ್ರಭಾವದಿಂದ ಯಾವುದೇ ರೀತಿಯ ರಾಜಿಯನ್ನು ಮಾಡಿಕೊಳ್ಳುವುದಿಲ್ಲ ಎಂದು ಭರವಸೆ ನೀಡಿದ. ದುರ್ಯೋಧನನು ಪಾಂಡವರ ಸೇನಾಬಲವನ್ನು ವೀಕ್ಷಿಸಿದನಂತರ ಸನ್ನಿವೇಶವನ್ನು ವಾಸ್ತವವಾಗಿ ತಿಳಿಸಿಕೊಡಲು ಸೈನ್ಯಾಧಿಪತಿ ದ್ರೋಣಾಚಾರ್ಯರ ಬಳಿಗೆ ಹೋದ ಎಂದು ಹೇಳಿದ. ದುರ್ಯೋಧನನು ರಾಜನೆಂದು ಹೇಳಿದ್ದರೂ ಸನ್ನಿವೇಶವು ಗಂಭೀರವಾಗಿದ್ದುದರಿಂದ ಅವನು ಸೈನ್ಯಾಧಿಪತಿಗಳ ಬಳಿಗೆ ಹೋಗಬೇಕಾಯಿತು. ಆದುದರಿಂದ ಅವನಿಗೆ ರಾಜಕಾರಣಿಯಾಗುವ ಅರ್ಹತೆ ಇತ್ತು. ಆದರೆ ದುರ್ಯೋಧನನ ವ್ಯವಹಾರ ಕೌಶಲಕ್ಕೆ ಪಾಂಡವರ ಸೇನಾವ್ಯೂಹವನ್ನು ಕಂಡಾಗ ಆತನಿಗಾದ ಭಯವನ್ನು ಮುಚ್ಚಿಡಲಾಗಲಿಲ್ಲ.

## ಶ್ಲೋಕ - 3

**ಪಶ್ಯೈತಾಂ ಪಾಣ್ಡು ಪುತ್ರಾಣಾಂ ಆಚಾರ್ಯ ಮಹತೀಂ ಚಮೂಮ್ |**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ||೩||**

**ಪಶ್ಯ**—ನೋಡಿರಿ; **ಏತಾಮ್**—ಈ; **ಪಾಣ್ಡು ಪುತ್ರಾಣಾಮ್**—ಪಾಂಡು ಪುತ್ರರ; **ಆಚಾರ್ಯ**—

ಗುರುಗಳೇ; **ಮಹತೀಮ್**—ಮಹತ್ತಾದ; **ಚಮೂಮ್**—ಸೇನಾ ಬಲವನ್ನು; **ವ್ಯೂಢಾಮ್**—ವ್ಯೂಹರಚನೆಯಲ್ಲಿರುವ; **ದ್ರುಪದ ಪುತ್ರೇಣ**—ದ್ರುಪದನ ಮಗನಿಂದ; **ತವ**—ನಿಮ್ಮ; **ಶಿಷ್ಯೇಣ**—ಶಿಷ್ಯನಾದ; **ಧೀ-ಮತಾ**—ಬಹಳ ಬುದ್ಧಿವಂತನಾದ.

## ಅನುವಾದ

**ಆಚಾರ್ಯರೇ, ನಿಮ್ಮ ಚತುರ ಶಿಷ್ಯನಾದ ದ್ರುಪದನ ಮಗನು ಕೌಶಲದಿಂದ ವ್ಯೂಹರೂಪವಾಗಿ ರಚಿಸಿರುವ ಈ ಪಾಂಡವ ಸೈನ್ಯವನ್ನು ನೋಡಿ.**

## ಭಾವಾರ್ಥ

ವ್ಯವಹಾರ ಚತುರನಾದ ದುರ್ಯೋಧನನು ಶ್ರೇಷ್ಠ ಬ್ರಾಹ್ಮಣ ಸೈನ್ಯಾಧಿಪತಿಯಾದ ದ್ರೋಣಾಚಾರ್ಯನ ದೋಷಗಳನ್ನು ಎತ್ತಿತೋರಿಸಲು ಬಯಸಿದ. ಅರ್ಜುನನ ಹೆಂಡತಿ ದ್ರೌಪದಿ; ಅವಳ ತಂದೆ ದ್ರುಪದ. ದ್ರೋಣಾಚಾರ್ಯರಿಗೂ ದ್ರುಪದನಿಗೂ ಒಂದು ರಾಜಕೀಯ ಕಲಹವಾಯಿತು. ಕಲಹದ ಫಲವಾಗಿ ದ್ರುಪದನು ಒಂದು ಮಹಾಯಾಗವನ್ನು ಮಾಡಿ, ದ್ರೋಣಾಚಾರ್ಯರನ್ನು ಕೊಲ್ಲಬಲ್ಲ ಮಗನನ್ನು ಪಡೆಯುವ ವರವನ್ನು ಗಳಿಸಿದ. ಇದು ದ್ರೋಣಾಚಾರ್ಯರಿಗೆ ಚೆನ್ನಾಗಿ ತಿಳಿದಿತ್ತು. ಆದರೂ ದ್ರುಪದನ ಮಗ ಧೃಷ್ಟದ್ಯುಮ್ನನಿಗೆ ಯುದ್ಧ ವಿದ್ಯೆಯನ್ನು ಕಲಿಸಲು ಅವರಿಗೆ ಒಪ್ಪಿಸಿದಾಗ, ಉದಾರ ಮನಸ್ಸಿನ ಬ್ರಾಹ್ಮಣರಾಗಿ ಅವರು, ತಮಗೆ ತಿಳಿದ ಎಲ್ಲ ಅಸ್ತ್ರಶಸ್ತ್ರರಹಸ್ಯಗಳನ್ನೂ ಅವನಿಗೆ ಹೇಳಿಕೊಡಲು ಹಿಂದೆಗೆಯಲಿಲ್ಲ. ಕುರುಕ್ಷೇತ್ರ ರಣಭೂಮಿಯಲ್ಲೀಗ ಧೃಷ್ಟದ್ಯುಮ್ನನು ಪಾಂಡವರ ಪಕ್ಷವನ್ನು ಸೇರಿದ್ದ ಸೇನಾವ್ಯೂಹದ ರಚನೆಯ ಕಲೆಯನ್ನು ದ್ರೋಣಾಚಾರ್ಯರಿಂದ ಕಲಿತು ಈಗ ಅವನೇ ವ್ಯೂಹರಚನೆ ಮಾಡಿದ್ದ. ದ್ರೋಣಾಚಾರ್ಯರು ಸಮರದಲ್ಲಿ ಎಚ್ಚರದಿಂದಿದ್ದು ಯಾವ ರೀತಿಯಲ್ಲಿಯೂ ಬಿಗಿ ಸಡಿಲಿಸದಂತೆ ಇರಬೇಕೆಂಬ ಉದ್ದೇಶದಿಂದ ದುರ್ಯೋಧನನು ಅವರ ತಪ್ಪನ್ನು ಅವರಿಗೆ ತೋರಿಸಿಕೊಟ್ಟ. ಅವನಿಗೆ ಮತ್ತೊಂದು ಉದ್ದೇಶವೂ ಇತ್ತು. ದ್ರೋಣಾಚಾರ್ಯರು ತಮ್ಮ ಪ್ರಿಯಶಿಷ್ಯರಾಗಿದ್ದ ಪಾಂಡವರ ವಿಷಯದಲ್ಲಿ ಇದೇ ರೀತಿ ಉದಾರವಾಗಿರಬಾರದು ಎಂದು ಎತ್ತಿ ಹೇಳಲು ಬಯಸಿದ. ಅರ್ಜುನನಂತೂ ದ್ರೋಣಾಚಾರ್ಯರ ಅತ್ಯಂತ ಪ್ರೀತಿಪಾತ್ರನಾದ ಮತ್ತು ತೀಕ್ಷ್ಣ ಬುದ್ಧಿಯ ಶಿಷ್ಯ. ಹಿಂದೆ ತೋರಿದಂತಹ ಔದಾರ್ಯವನ್ನೇ ಯುದ್ಧದಲ್ಲಿ ತೋರಿಸಿದರೆ ಅದರಿಂದ ಸೋಲಾಗುತ್ತದೆ ಎಂದೂ ದುರ್ಯೋಧನನು ಎಚ್ಚರ ಹೇಳಿದ.

## ಶ್ಲೋಕ - 4

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ |**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ||೪||**

**ಅತ್ರ**—ಇಲ್ಲಿ; **ಶೂರಾಃ**—ವೀರರಾದ; **ಮಹಾ ಇಷು ಆಸಾಃ**—ಮಹಾ ಬಿಲ್ಗಾರರು; **ಭೀಮ ಅರ್ಜುನ**—ಭೀಮ, ಅರ್ಜುನರಿಗೆ; **ಸಮಾಃ**—ಸಮಾನರಾದ; **ಯುಧಿ**—ಯುದ್ಧದಲ್ಲಿ; **ಯುಯುಧಾನಃ**—ಯುಯುಧಾನನು; **ವಿರಾಟಃ**—ವಿರಾಟನು; **ಚ**—ಕೂಡ; **ದ್ರುಪದಃ**—ದ್ರುಪದನು; **ಚ**—ಸಹಾ; **ಮಹಾ ರಥಃ**—ಮಹಾಯೋಧನಾದ.

### ಅನುವಾದ

**ಹೋರಾಟದಲ್ಲಿ ಭೀಮಾರ್ಜುನರಿಗೆ ಸಮಾನರಾದ ಅನೇಕ ವೀರ ಬಿಲ್ಲಾಳುಗಳು ಈ ಸೈನ್ಯದಲ್ಲಿದ್ದಾರೆ. ಯುಯುಧಾನ, ವಿರಾಟ ಮತ್ತು ದ್ರುಪದರಂತಹ ಮಹಾರಥರಿದ್ದಾರೆ.**

### ಭಾವಾರ್ಥ

ದ್ರೋಣಾಚಾರ್ಯರಿಗೆ ಯುದ್ಧಕಲೆಯಲ್ಲಿದ್ದ ಮಹಾಶಕ್ತಿಯ ಎದುರಿನಲ್ಲಿ ಧೃಷ್ಟದ್ಯುಮ್ನನು ಬಹು ದೊಡ್ಡ ತಡೆಯೇನೂ ಆಗಿರಲಿಲ್ಲ. ಆದರೆ ಆತಂಕವನ್ನುಂಟುಮಾಡಬಲ್ಲ ಇತರರು ಅನೇಕರಿದ್ದರು. ಅವರಲ್ಲಿ ಪ್ರತಿಯೊಬ್ಬರೂ ಭೀಮಾರ್ಜುನರಷ್ಟೇ ದುರ್ಜಯರಾದದ್ದರಿಂದ ಕೌರವರ ಜಯಕ್ಕೆ ಅಡ್ಡಿಯಾಗಬಲ್ಲರೆಂದು ದುರ್ಯೋಧನನು ಅವರನ್ನು ಹೆಸರಿಸುತ್ತಾನೆ. ಅವನಿಗೆ ಭೀಮಾರ್ಜುನರ ಶಕ್ತಿಯ ಅರಿವಿತ್ತು. ಆದ್ದರಿಂದ ಅವನು ಇತರರನ್ನು ಅವರೊಂದಿಗೆ ಹೋಲಿಸುತ್ತಾನೆ.

### ಶ್ಲೋಕ - 5

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುನ್ತಿಭೋಜಶ್ಚ ಶೈಬ್ಯಶ್ಚ ನರಪುಙ್ಗವಃ ॥೫॥**

**ಧೃಷ್ಟಕೇತುಃ**—ಧೃಷ್ಟಕೇತು; **ಚೇಕಿತಾನಃ**—ಚೇಕಿತಾನ; **ಕಾಶೀರಾಜಃ**—ಕಾಶೀರಾಜ; **ಚ**—ಕೂಡ; **ವೀರ್ಯವಾನ್**—ಮಹಾ ಬಲಶಾಲಿಯಾದ; **ಪುರುಜಿತ್**—ಪುರುಜಿತನು; **ಕುಂತಿಭೋಜಃ**—ಕುಂತಿಭೋಜನು; **ಚ**—ಮತ್ತು; **ಶೈಬ್ಯಃ**—ಶೈಬ್ಯನು; **ಚ**—ಮತ್ತು; **ನರ ಪುಂಗವಃ**—ಮಾನವಸಮಾಜದಲ್ಲಿ ಶ್ರೇಷ್ಠನಾದ.

### ಅನುವಾದ

**ಧೃಷ್ಟಕೇತು, ಚೇಕಿತಾನ, ಕಾಶೀರಾಜ, ಪುರುಜಿತ್, ಕುಂತಿಭೋಜ ಮತ್ತು ಶೈಬ್ಯನಂತಹ ನರಪುಂಗವರು ಇದ್ದಾರೆ.**

### ಶ್ಲೋಕ - 6

**ಯುಧಾಮನ್ಯುಶ್ಚ ವಿಕ್ರಾನ್ತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥**

**ಯುಧಾಮನ್ಯುಃ**—ಯುಧಾಮನ್ಯುವು; **ಚ**—ಮತ್ತು; **ವಿಕ್ರಾನ್ತ**—ಮಹಾ ಬಲಶಾಲಿಯಾದ; **ಉತ್ತಮೌಜಾಃ**—ಉತ್ತಮೌಜನು; **ಚ**—ಮತ್ತು; **ವೀರ್ಯ-ವಾನ್**—ಮಹಾಬಲಿಷ್ಠನಾದ; **ಸೌಭದ್ರಃ**—ಸುಭದ್ರೆಯ ಮಗನು; **ದ್ರೌಪದೇಯಾಃ**—ದ್ರೌಪದಿಯ ಮಕ್ಕಳು; **ಚ**—ಮತ್ತು; **ಸರ್ವೇ**—ಎಲ್ಲರೂ; **ಏವ**—ನಿಶ್ಚಯವಾಗಿಯೂ; **ಮಹಾರಥಾಃ**—ಮಹಾರಥಿಕರಾದ.

## ಅನುವಾದ

**ಬಲಶಾಲಿ ಯುಧಾಮನ್ಯು, ಬಹುಶಕ್ತಿವಂತನಾದ ಉತ್ತಮೌಜ, ಸುಭದ್ರೆಯ ಮಗ, ದ್ರೌಪದಿಯ ಮಕ್ಕಳು ಇವರೆಲ್ಲ ಇದ್ದಾರೆ. ಇವರೆಲ್ಲ ಮಹಾರಥರು.**

## ಶ್ಲೋಕ - 7

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ |**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ||೭||**

**ಅಸ್ಮಾಕಮ್**—ನಮ್ಮ; **ತು**—ಆದರೆ; **ವಿಶಿಷ್ಟಾಃ**—ವಿಶೇಷವಾಗಿ ಬಲಿಷ್ಠರಾದ; **ಯೇ**—ಯಾರು; **ತಾನ್**—ಅವರನ್ನು; **ನಿಬೋಧ**—ಗಮನಿಸಿ; **ದ್ವಿಜ-ಉತ್ತಮ**—ಬ್ರಾಹ್ಮಣಶ್ರೇಷ್ಠರೇ; **ನಾಯಕಾಃ**—ಸೇನಾಪತಿಗಳು; **ಮಮ**—ನನ್ನ; **ಸೈನ್ಯಸ್ಯ**—ಸೈನ್ಯದ; **ಸಂಜ್ಞಾ ಅರ್ಥಮ್**—ತಿಳಿವಳಿಕೆಗಾಗಿ; **ತಾನ್**—ಅವರನ್ನು; **ಬ್ರವೀಮಿ**—ಹೇಳುತ್ತೇನೆ; **ತೇ**—ನಿಮಗೆ.

## ಅನುವಾದ

**ಬ್ರಾಹ್ಮಣೋತ್ತಮರೇ, ನಿಮಗೆ ತಿಳಿಸಲೆಂದು ನನ್ನ ಸೈನ್ಯವನ್ನು ನಡೆಸಬಲ್ಲ ವಿಶೇಷ ಅರ್ಹತೆಯಿರುವ ನಾಯಕರ ವಿಷಯವನ್ನು ಹೇಳಬಯಸುತ್ತೇನೆ.**

## ಶ್ಲೋಕ - 8

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ |**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ||೮||**

**ಭವಾನ್**—ತಾವು; **ಭೀಷ್ಮಃ**—ಪಿತಾಮಹರಾದ ಭೀಷ್ಮಾಚಾರ್ಯರು; **ಚ**—ಕೂಡ; **ಕರ್ಣಃ**—ಕರ್ಣನು; **ಚ**—ಮತ್ತು; **ಕೃಪಃ**—ಕೃಪರು; **ಚ**—ಮತ್ತು; **ಸಮಿತಿಮ್‌ಜಯಃ**—ಯುದ್ಧದಲ್ಲಿ ಸದಾ ಜಯಶಾಲಿಯಾದ; **ಅಶ್ವತ್ಥಾಮಾ**—ಅಶ್ವತ್ಥಾಮನು; **ವಿಕರ್ಣಃ**—ವಿಕರ್ಣನು; **ಚ**—ಹಾಗೆಯೇ **ಸೌಮದತ್ತಿಃ**—ಸೋಮದತ್ತನ ಪುತ್ರನು; **ತಥಾ**—ಹಾಗೆಯೇ; **ಏವ**—ಖಂಡಿತವಾಗಿಯೂ; **ಚ**—ಕೂಡ.

## ಅನುವಾದ

**ತಾವು, ಭೀಷ್ಮರು, ಕರ್ಣ, ಕೃಪ, ಅಶ್ವತ್ಥಾಮ, ವಿಕರ್ಣ, ಸೋಮದತ್ತನ ಮಗನಾದ ಭೂರಿಶ್ರವ, ಇವರೆಲ್ಲ ಯಾವಾಗಲೂ ಯುದ್ಧದಲ್ಲಿ ವಿಜಯಿಗಳಾಗುವವರು.**

## ಭಾವಾರ್ಥ

ದುರ್ಯೋಧನನು ಸದಾ ವಿಜಯಿಗಳಾಗುವ ಅಸಾಧಾರಣ ವೀರರನ್ನು ಹೆಸರಿಸುತ್ತಾನೆ.

ವಿಕರ್ಣನು ದುರ್ಯೋಧನನ ತಮ್ಮ. ಅಶ್ವತ್ಥಾಮನು ದ್ರೋಣಾಚಾರ್ಯರ ಮಗ. ಸೌಮದತ್ತಿ ಅಥವ ಭೂರಿಶ್ರವನು ಬಾಹ್ಲೀಕರ ಅರಸನ ಮಗ. ಕರ್ಣನು ಅರ್ಜುನನ ಮಲ ಅಣ್ಣ; ಪಾಂಡುರಾಜನನ್ನು ಕುಂತಿಯು ಮದುವೆಯಾಗುವ ಮೊದಲು ಅವಳು ಹೆತ್ತ ಮಗ. ಕೃಪಾಚಾರ್ಯರ ಅವಳಿ ಸೋದರಿ ದ್ರೋಣಾಚಾರ್ಯರನ್ನು ಮದುವೆಯಾದಳು.

## ಶ್ಲೋಕ - 9

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ |**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ||೯||**

**ಅನ್ಯೇ**—ಇತರರು; **ಚ**—ಕೂಡ; **ಬಹವಃ**—ಬಹು ಸಂಖ್ಯೆಯಲ್ಲಿ; **ಶೂರಾಃ**—ಶೂರರು; **ಮತ್ ಅರ್ಥೇ**—ನನ್ನ ಸಲುವಾಗಿ; **ತ್ಯಕ್ತ ಜೀವಿತಾಃ**—ಪ್ರಾಣಾರ್ಪಣೆಗೆ ಸಿದ್ಧರಾದವರು; **ನಾನಾ**—ಅನೇಕ; **ಶಸ್ತ್ರ**—ಆಯುಧಗಳಿಂದ; **ಪ್ರಹರಣಾಃ**—ಸಜ್ಜಿತರಾದವರು; **ಸರ್ವೇ**—ಎಲ್ಲರೂ; **ಯುದ್ಧ ವಿಶಾರದಾಃ**—ಯುದ್ಧವಿಜ್ಞಾನದಲ್ಲಿ ಅನುಭವಪಡೆದವರು.

## ಅನುವಾದ

**ನನಗಾಗಿ ಪ್ರಾಣವನ್ನೇ ಕೊಡಲು ಸಿದ್ಧರಾಗಿರುವ ಇನ್ನೂ ಅನೇಕ ಮಂದಿ ವೀರರಿದ್ದಾರೆ. ಅವರೆಲ್ಲ ವಿವಿಧ ಅಸ್ತ್ರ ಶಸ್ತ್ರಗಳನ್ನು ಹೊಂದಿರುವವರು. ಎಲ್ಲರೂ ಯುದ್ಧ ವಿಶಾರದರು.**

## ಭಾವಾರ್ಥ

ಜಯದ್ರಥ, ಕೃತವರ್ಮ ಮತ್ತು ಶಲ್ಯರಂತಹವರ ವಿಷಯ ಹೇಳುವುದಾದರೆ ಅವರೆಲ್ಲ ದುರ್ಯೋಧನನಿಗಾಗಿ ತಮ್ಮ ಪ್ರಾಣವನ್ನೇ ಅರ್ಪಿಸಲು ಸಂಕಲ್ಪ ಮಾಡಿದ್ದಾರೆ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ, ಪಾಪಮಾಡಿರುವ ದುರ್ಯೋಧನನ ಪಕ್ಷವನ್ನು ಸೇರಿರುವುದರಿಂದ ಅವರೆಲ್ಲ ಕುರುಕ್ಷೇತ್ರ ಯುದ್ಧದಲ್ಲಿ ಸಾಯಬೇಕೆಂದು ಆಗಲೇ ನಿರ್ಧಾರವಾಗಿಹೋಗಿದೆ. ದುರ್ಯೋಧನನು ಮಾತ್ರ ಈ ಎಲ್ಲ ಸ್ನೇಹಿತರ ಬಲವು ಒಂದುಗೂಡಿರುವುದರಿಂದ ವಿಜಯವು ತನ್ನದೇ ಎಂದು ವಿಶ್ವಾಸ ಹೊಂದಿದ್ದಾನೆ.

## ಶ್ಲೋಕ - 10

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ |**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ||೧೦||**

**ಅಪರ್ಯಾಪ್ತಮ್**—ಅಳೆಯಲಾಗದ; **ತತ್**—ಅದು; **ಅಸ್ಮಾಕಮ್**—ನಮ್ಮ; **ಬಲಮ್**—ಬಲವು; **ಭೀಷ್ಮ**—ಪಿತಾಮಹ ಭೀಷ್ಮರಿಂದ; **ಅಭಿರಕ್ಷಿತಮ್**—ಪರಿಪೂರ್ಣವಾಗಿ ರಕ್ಷಿತವಾಗಿದೆ; **ಪರ್ಯಾಪ್ತಮ್**—ಪರಿಮಿತವಾದ; **ತು**—ಆದರೆ; **ಇದಮ್**—ಈ; **ಏತೇಷಾಮ್**—ಪಾಂಡವರ; **ಬಲಮ್**—ಬಲವು; **ಭೀಮ**—ಭೀಮನಿಂದ; **ಅಭಿರಕ್ಷಿತಮ್**—ಬಹು ಎಚ್ಚರಿಕೆಯಿಂದ ರಕ್ಷಿತವಾಗಿದೆ.

## ಅನುವಾದ

**ನಮ್ಮ ಶಕ್ತಿಯು ಅಳತೆಯನ್ನು ಮೀರಿದ್ದು. ತಾತ ಭೀಷ್ಮರಿಂದ ನಮಗೆ ಪರಿಪೂರ್ಣ ರಕ್ಷಣೆಯು ದೊರೆತಿದೆ. ಭೀಮನು ಎಚ್ಚರದಿಂದ ರಕ್ಷಿಸುತ್ತಿರುವ ಪಾಂಡವರ ಶಕ್ತಿಯಾದರೋ ಮಿತವಾದದ್ದು.**

## ಭಾವಾರ್ಥ

ಇಲ್ಲಿ ದುರ್ಯೋಧನನು ಎರಡು ಸೈನ್ಯಗಳ ಶಕ್ತಿಯನ್ನು ಹೋಲಿಸಿ ಅಂದಾಜು ಮಾಡುತ್ತಿದ್ದಾನೆ. ಅದ್ವಿತೀಯ ಅನುಭವಶಾಲಿ ದಂಡನಾಯಕರಾದ ಪಿತಾಮಹ ಭೀಷ್ಮರೇ ಸಂರಕ್ಷಿಸುತ್ತಿರುವುದರಿಂದ ತನ್ನ ಸೈನ್ಯದ ಶಕ್ತಿಯನ್ನು ಅಳೆಯುವುದೇ ಸಾಧ್ಯವಿಲ್ಲ ಎಂದು ಅವನ ಭಾವನೆ. ಇದಕ್ಕೆ ಪ್ರತಿಯಾಗಿ ಪಾಂಡವರ ಸೇನೆಯನ್ನು ಸಂರಕ್ಷಿಸುತ್ತಿರುವವನು ಅಷ್ಟೊಂದು ಅನುಭವವಿಲ್ಲದ ಭೀಮ. ಭೀಷ್ಮರೊಂದಿಗೆ ಹೋಲಿಸಿದರೆ ಅವನು ಕಡ್ಡಿಗೆ ಸಮಾನ. ಆದ್ದರಿಂದ ಆ ಸೇನೆಯ ಶಕ್ತಿಯು ಮಿತವಾದದ್ದು. ತನಗೆ ಸಾವು ಬರುವುದೇ ಆದರೆ ತನ್ನನ್ನು ಕೊಲ್ಲುವವನು ಭೀಮನೇ ಎಂದು ದುರ್ಯೋಧನನಿಗೆ ಚೆನ್ನಾಗಿ ತಿಳಿದಿತ್ತು. ಆದುದರಿಂದ ಅವನಿಗೆ ಭೀಮನೆಂದರೆ ಯಾವಾಗಲೂ ಅಸೂಯೆ. ಆದರೆ ಭೀಮನಿಗಿಂತ ಬಹು ಶ್ರೇಷ್ಠ ಸೇನಾನಾಯಕರಾದ ಭೀಷ್ಮರು ತನ್ನ ಕಡೆ ಇರುವುದರಿಂದ ತನಗೇ ವಿಜಯವೆಂಬ ದೃಢ ವಿಶ್ವಾಸ ಅವನಿಗಿತ್ತು. ತಾನು ಯುದ್ಧದಲ್ಲಿ ಜಯಶಾಲಿಯಾಗುತ್ತೇನೆ ಎನ್ನುವ ಅವನ ನಿರ್ಣಯಕ್ಕೆ ಆಧಾರವಿತ್ತು.

## ಶ್ಲೋಕ - 11

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ |**
**ಭೀಷ್ಮಮೇವಾಭಿರಕ್ಷನ್ತು ಭವಂತಃ ಸರ್ವ ಏವ ಹಿ ||೧೧||**

**ಅಯನೇಷು**—ಯುದ್ಧತಂತ್ರಗಳಲ್ಲಿ; **ಚ**—ಕೂಡ; **ಸರ್ವೇಷು**—ಎಲ್ಲಕಡೆಗಳಲ್ಲಿ; **ಯಥಾ**—**ಭಾಗಮ್**—ವಿಭಿನ್ನವಾಗಿ ವ್ಯವಸ್ಥೆಮಾಡಿದಂತೆ; **ಅವಸ್ಥಿತಾಃ**—ಇರುವ; **ಭೀಷ್ಮಮ್**—ಪಿತಾಮಹ ಭೀಷ್ಮಾಚಾರ್ಯರನ್ನು; **ಏವ**—ಖಂಡಿತವಾಗಿಯೂ; **ಅಭಿರಕ್ಷನ್ತು**—ಬೆಂಬಲಿಸಬೇಕು; **ಭವಂತಃ**—ತಾವು; **ಸರ್ವೇ**—ಎಲ್ಲರೂ ಕ್ರಮಶಃ; **ಏವ ಹಿ**—ನಿಶ್ಚಿತವಾಗಿಯೂ.

## ಅನುವಾದ

**ಸೈನ್ಯವ್ಯೂಹವನ್ನು ಪ್ರವೇಶಿಸಲು ಇರುವ ಆಯಕಟ್ಟಿನ ಬಿಂದುಗಳಲ್ಲಿ ನಿಮ್ಮನಿಮ್ಮ ಸ್ಥಳಗಳಲ್ಲಿ ನಿಂತಿರುವ ನೀವು ಈಗ ಪಿತಾಮಹ ಭೀಷ್ಮರಿಗೆ ಸಂಪೂರ್ಣ ಬೆಂಬಲವನ್ನು ನೀಡಬೇಕು.**

## ಭಾವಾರ್ಥ

ದುರ್ಯೋಧನನು ಭೀಷ್ಮರ ಸಾಮರ್ಥ್ಯವನ್ನು ಪ್ರಶಂಸಿಸಿದನಷ್ಟೆ. ಇದನ್ನು ಕಂಡು ಉಳಿದವರಿಗೆ ದುರ್ಯೋಧನನ ದೃಷ್ಟಿಯಲ್ಲಿ ತಾವು ಭೀಷ್ಮರಷ್ಟು ಮುಖ್ಯರಲ್ಲ ಎನ್ನಿಸಬಹುದು. ಈ ಆಲೋಚನೆ ಬಂದ ಕೂಡಲೆ ದುರ್ಯೋಧನನು ತನ್ನ ಎಂದಿನ ವ್ಯವಹಾರ ಕೌಶಲದ ರೀತಿಯಲ್ಲಿ ಮೇಲಿನ ಮಾತುಗಳನ್ನಾಡಿ ಸನ್ನಿವೇಶವನ್ನು ಸರಿಹೊಂದಿಸಲು ಪ್ರಯತ್ನಿಸಿದ. ಭೀಷ್ಮರು

ನಿಸ್ಸಂದೇಹವಾಗಿಯೂ ವೀರಶ್ರೇಷ್ಠರಲ್ಲಿ ಶ್ರೇಷ್ಠರು ಎಂದು ಒತ್ತಿ ಹೇಳಿದ. ಆದರೆ ಅವರು ವೃದ್ಧರಾದುದರಿಂದ ಎಲ್ಲ ದಿಕ್ಕುಗಳಿಂದ ಅವರನ್ನು ರಕ್ಷಿಸುವ ಯೋಚನೆಯನ್ನು ಎಲ್ಲರೂ ವಿಶೇಷವಾಗಿ ಮಾಡಬೇಕು. ಭೀಷ್ಮರು ಯುದ್ಧದಲ್ಲಿ ತೊಡಗಬಹುದು. ಅವರು ಸಂಪೂರ್ಣವಾಗಿ ಒಂದೆಡೆ ಕಾದುವುದರಲ್ಲಿ ಮಗ್ನರಾಗಿರುವುದರ ಲಾಭವನ್ನು ಶತ್ರುಗಳು ಪಡೆದುಕೊಳ್ಳಬಹುದು. ಆದುದರಿಂದ, ಇತರ ವೀರರು ತಮ್ಮ ಆಯಕಟ್ಟಿನ ಸ್ಥಾನಗಳಲ್ಲಿ ಉಳಿದು ಶತ್ರುವು ಸೇನಾವ್ಯೂಹವನ್ನು ಚದುರಿಸಲು ಅವಕಾಶ ಕೊಡದಿರುವುದು ಮುಖ್ಯವಾಗಿತ್ತು. ಭೀಷ್ಮರು ಕೌರವರೊಡನೆ ಇದ್ದರೆ ಮಾತ್ರ ಕೌರವರಿಗೆ ವಿಜಯ ಎಂದೇ ಸ್ಪಷ್ಟವಾಗಿ ದುರ್ಯೋಧನನ ಭಾವನೆ. ಭೀಷ್ಮರೂ ದ್ರೋಣರೂ ಯುದ್ಧದಲ್ಲಿ ಸಂಪೂರ್ಣವಾಗಿ ತನ್ನನ್ನು ಬೆಂಬಲಿಸುತ್ತಾರೆ ಎಂಬ ವಿಶ್ವಾಸವು ಅವನಿಗಿತ್ತು. ಏಕೆಂದರೆ, ಮಹಾಯೋಧರಿಂದ ತುಂಬಿದ ಆಸ್ಥಾನದಲ್ಲಿ ಬಲಾತ್ಕಾರವಾಗಿ ದ್ರೌಪದಿಯ ವಸ್ತ್ರಾಪಹರಣ ಪ್ರಯತ್ನ ನಡೆದಾಗ, ನಿಸ್ಸಹಾಯಕಳಾದ ಅವಳು ಅವರಿಗೆ ಮೊರೆ ಇಟ್ಟಳು. ಆದರೆ ಆಗ ಅವರಿಬ್ಬರೂ ಒಂದು ಮಾತನ್ನೂ ಆಡಲಿಲ್ಲ. ಆ ಇಬ್ಬರು ಮಹಾನಾಯಕರಿಗೂ ಪಾಂಡವರ ವಿಷಯದಲ್ಲಿ ಒಂದು ಬಗೆಯ ಪ್ರೀತಿ ಇದ್ದಿತು ಎಂದು ಅವನಿಗೆ ತಿಳಿದಿದ್ದರೂ, ಜೂಜಾಟದ ಸಮಯದಲ್ಲಿ ಅವರು ಆ ಪ್ರೀತಿಯನ್ನು ದೂರವಿಟ್ಟ ಹಾಗೆ ಈಗಲೂ ದೂರವಿಡುತ್ತಾರೆ ಎಂದು ಅವನು ಭರವಸೆ ಇಟ್ಟುಕೊಂಡಿದ್ದ.

## ಶ್ಲೋಕ - 12

**ತಸ್ಯ ಸಞ್ಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ |**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ||೧೨||**

**ತಸ್ಯ**—ಅವನ; **ಸಞ್ಜನಯನ್**—ಹೆಚ್ಚಿಸುತ್ತ; **ಹರ್ಷಮ್**—ಹರ್ಷವನ್ನು; **ಕುರುವೃದ್ಧಃ**—ಕುರುಕುಲದ ವೃದ್ಧರಾದ (ಭೀಷ್ಮರು); **ಪಿತಾಮಹಃ**—ಅಜ್ಜ; **ಸಿಂಹನಾದಮ್**—ಸಿಂಹನಾದವನ್ನು; **ವಿನದ್ಯ**—ಮೊಳಗಿಸಿ; **ಉಚ್ಚೈಃ**—ಎತ್ತರದ ಧ್ವನಿಯಲ್ಲಿ; **ಶಂಖಮ್**—ಶಂಖವನ್ನು; **ದಧ್ಮೌ**— ಊದಿದರು; **ಪ್ರತಾಪವಾನ್**—ಪ್ರತಾಪವುಳ್ಳ.

## ಅನುವಾದ

**ಕುರುಕುಲ ಪಿತಾಮಹರಾದ ಮತ್ತು ಪ್ರತಾಪಶಾಲಿಗಳಾದ ಭೀಷ್ಮರು ಉಚ್ಚಸ್ವರದಿಂದ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದರು. ಇದರಿಂದ ದುರ್ಯೋಧನನಿಗೆ ಹರ್ಷವಾಯಿತು.**

## ಭಾವಾರ್ಥ

ಕುರುಕುಲ ಪಿತಾಮಹರು ತಮ್ಮ ಮೊಮ್ಮಗ ದುರ್ಯೋಧನನ ಹೃದಯದ ಅಂತರ್ಯವನ್ನು ಅರಿಯಬಲ್ಲವರಾಗಿದ್ದರು. ಅವರಿಗೆ ಅವನಲ್ಲಿ ಕರುಣೆಯುಂಟಾಯಿತು. ಸಿಂಹಸದೃಶರಾದ ಅವರು ತಮ್ಮ ಘನತೆಗೆ ತಕ್ಕಂತೆ ಗಟ್ಟಿಯಾಗಿ ಶಂಖನಾದವನ್ನು ಮಾಡಿ ದುರ್ಯೋಧನನಿಗೆ ಹರ್ಷವನ್ನುಂಟುಮಾಡಲು ಬಯಸಿದರು. ಅವರ ಶಂಖನಾದ ಸಾಂಕೇತಿಕವಾಗಿತ್ತು. ಪರಮ ಪ್ರಭು ಶ್ರೀಕೃಷ್ಣನು ಎದುರು ಪಕ್ಷದಲ್ಲಿ ಇರುವುದರಿಂದ

ದುರ್ಯೋಧನನಿಗೆ ಜಯದ ಸಾಧ್ಯತೆಯೇ ಇಲ್ಲ ಎನ್ನುವುದನ್ನು ಅದು ಪರೋಕ್ಷವಾಗಿ ಸೂಚಿಸಿತು. ಆದರೂ ಯುದ್ಧವನ್ನು ನಿರ್ವಹಿಸುವುದು ಅವರ ಕರ್ತವ್ಯವಾಗಿತ್ತು. ಈ ಕರ್ತವ್ಯ ನಿರ್ವಹಣೆಯಲ್ಲಿ ಅವರು ಶ್ರಮವನ್ನು ಸ್ವಲ್ಪವೂ ಲೆಕ್ಕಿಸುವವರಾಗಿರಲಿಲ್ಲ.

## ಶ್ಲೋಕ - 13

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥೧೩॥**

**ತತಃ**—ಅನಂತರ; **ಶಂಖಾಃ**—ಶಂಖಗಳು; **ಚ**—ಕೂಡ; **ಭೇರ್ಯಃ**—ಭೇರಿಗಳು; **ಚ**—ಮತ್ತು; **ಪಣವ ಆನಕ**—ಮದ್ದಳೆ, ನಗಾರಿಗಳು; **ಗೋಮುಖಾಃ**—ಕಹಳೆಗಳು; **ಸಹಸಾ**—ಒಮ್ಮಿಂದೊಮ್ಮೆಗೇ; **ಏವ**—ನಿಶ್ಚಿತವಾಗಿ; **ಅಭ್ಯಹನ್ಯನ್ತ**—ಒಟ್ಟೊಟ್ಟಿಗೆ ಧ್ವನಿಮಾಡಿದುವು; **ಸಃ**—ಆ; **ಶಬ್ದಃ**—ಸಮೂಹ ಧ್ವನಿಯು; **ತುಮುಲಃ**—ತುಂಬ ಜೋರಾಗಿ; **ಅಭವತ್**—ಉಂಟಾಯಿತು.

### ಅನುವಾದ

**ಅನಂತರ ಶಂಖಗಳೂ ಭೇರಿಗಳೂ ಡೋಲು, ತಮಟೆ, ಗೋಮುಖ ಮೊದಲಾದ ವಾದ್ಯಗಳೂ ಇದ್ದಕ್ಕಿದ್ದಂತೆ ಒಟ್ಟಿಗೆ ಮೊಳಗಿದವು. ಆ ರಣಶಬ್ದವು ಭೀಷಣವಾಗಿತ್ತು.**

## ಶ್ಲೋಕ - 14

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಃ ಪಾಣ್ಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**

**ತತಃ**—ಅನಂತರ; **ಶ್ವೇತೈಃ**—ಬಿಳಿಯಬಣ್ಣದ; **ಹಯೈಃ**—ಕುದುರೆಗಳಿಂದ; **ಯುಕ್ತೇ**—ಹೂಡಲಾದ, **ಮಹತಿ**—ದೊಡ್ಡದಾದ; **ಸ್ಯನ್ದನೇ**—ರಥದಲ್ಲಿ; **ಸ್ಥಿತೌ**—ಕುಳಿತಿದ್ದ; **ಮಾಧವಃ**—ಕೃಷ್ಣನು (ಲಕ್ಷ್ಮೀರಮಣನು); **ಪಾಣ್ಡವಃ**—ಅರ್ಜುನನು (ಪಾಂಡುಪುತ್ರನು); **ಚ**—ಕೂಡ; **ಏವ**—ಖಂಡಿತವಾಗಿಯೂ; **ದಿವ್ಯೌ**—ದಿವ್ಯವಾದ; **ಶಂಖೌ**—ಶಂಖಗಳನ್ನು; **ಪ್ರದಧ್ಮತುಃ**—ಊದಿದರು.

### ಅನುವಾದ

**ಎದುರು ಪಕ್ಷದಲ್ಲಿ, ಬಿಳಿಯ ಕುದುರೆಗಳನ್ನು ಕಟ್ಟಿದ, ಮಹಾರಥದಲ್ಲಿ ಉಪಸ್ಥಿತರಾಗಿದ್ದ ಶ್ರೀಕೃಷ್ಣನೂ ಅರ್ಜುನನೂ ತಮ್ಮ ಅಲೌಕಿಕವಾದ ಶಂಖಗಳನ್ನು ಊದಿದರು.**

### ಭಾವಾರ್ಥ

ಭೀಷ್ಮರು ಊದಿದ ಶಂಖವನ್ನು ಅಲೌಕಿಕ ಎಂದು ವರ್ಣಿಸಿಲ್ಲ. ಕೃಷ್ಣಾರ್ಜುನರ ಶಂಖಗಳನ್ನು ಮಾತ್ರ ಅಲೌಕಿಕ ಎಂದು ವರ್ಣಿಸಿದೆ. ಅಲೌಕಿಕ ಶಂಖಗಳ ನಾದವು ಎದುರು ಪಕ್ಷಕ್ಕೆ ಜಯದ ಸಂಭವವೇ ಇಲ್ಲ ಎಂಬುದನ್ನು ಸೂಚಿಸಿತು. ಏಕೆಂದರೆ ಕೃಷ್ಣನು ಪಾಂಡವರ ಪಕ್ಷದಲ್ಲಿದ್ದ. **ಜಯಸ್ತು ಪಾಂಡುಪುತ್ರಾಣಾಮ್ ಯೇಷಾಂ ಪಕ್ಷೇ ಜನಾರ್ದನಃ** ಜಯವು ಯಾವಾಗಲೂ

ಲಭಿಸುವುದು ಪಾಂಡವರಂತಹವರಿಗೇ. ಏಕೆಂದರೆ ಭಗವಾನ್ ಕೃಷ್ಣನು ಅವರ ಜೊತೆಗಿದ್ದಾನೆ. ಭಗವಾನ್ ಕೃಷ್ಣನು ಯಾವಾಗ, ಎಲ್ಲಿ ಇದ್ದರೆ ಆಗ, ಅಲ್ಲಿ ಭಾಗ್ಯಶ್ರೀ ಇರುತ್ತಾಳೆ. ಏಕೆಂದರೆ ಭಾಗ್ಯಶ್ರೀ ತನ್ನ ಪತಿಯನ್ನು ಬಿಟ್ಟು ಒಬ್ಬಳೇ ಎಂದೂ ಇರುವುದಿಲ್ಲ. ವಿಷ್ಣು, ಅಥವಾ ಶ್ರೀಕೃಷ್ಣನ ಶಂಖದ ಅಲೌಕಿಕ ನಾದವು ಸೂಚಿಸುವಂತೆ ವಿಜಯವೂ ಭಾಗ್ಯವೂ ಅರ್ಜುನನಿಗಾಗಿ ಕಾಯುತ್ತಿವೆ. ಇಷ್ಟೇ ಅಲ್ಲದೆ, ಈ ಮಿತ್ರರಿಬ್ಬರೂ ಕುಳಿತಿದ್ದ ರಥವನ್ನು ಅಗ್ನಿಯು ಅರ್ಜುನನಿಗೆ ಉಡುಗೊರೆಯಾಗಿ ಕೊಟ್ಟಿದ್ದ. ತ್ರಿಲೋಕಗಳಲ್ಲಿ ಎಲ್ಲಿಯೇ ಯಾವ ದಿಕ್ಕಿನಲ್ಲೇ ಆದರೂ ಈ ರಥವು ವಿಜಯಿಯಾಗುವುದೆಂಬುದನ್ನು ಇದು ತೋರಿಸುತ್ತಿತ್ತು.

## ಶ್ಲೋಕ - 15

**ಪಾಞ್ಚಜನ್ಯಂ ಹೃಷೀಕೇಶೋ ದೇವದತ್ತಂ ಧನಞ್ಜಯಃ |**
**ಪೌಣ್ಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ||೧೫||**

**ಪಾಞ್ಚಜನ್ಯಮ್**—ಪಾಂಚಜನ್ಯ ಎಂಬ ಶಂಖವನ್ನು; **ಹೃಷೀಕ ಈಶಃ**—ಹೃಷೀಕೇಶನು (ಭಕ್ತರ ಇಂದ್ರಿಯ ನಿಯಂತ್ರಕನಾದ ಕೃಷ್ಣನು); **ದೇವದತ್ತಮ್**—ದೇವದತ್ತವೆಂಬ ಶಂಖವನ್ನು; **ಧನಞ್ಜಯಃ**—ಧನಂಜಯನು (ಸಂಪತ್ತನ್ನು ಗೆಲ್ಲುವ ಅರ್ಜುನನು); **ಪೌಣ್ಡ್ರಮ್**—ಪೌಂಡ್ರ ಎಂಬ; **ದಧ್ಮೌ**—ಊದಿದರು; **ಮಹಾಶಂಖಮ್**—ಭಯಂಕರವಾದ ಶಂಖವನ್ನು; **ಭೀಮ ಕರ್ಮಾ**— ದುಸ್ಸಾಹಸ ಕೆಲಸಗಳನ್ನೆಸಗುವ; **ವೃಕ ಉದರಃ**—ಹೊಟ್ಟೆಬಾಕನಂತೆ ತಿನ್ನುವ (ಭೀಮನು);

## ಅನುವಾದ

**ಹೃಷೀಕೇಶನು ತನ್ನ ಪಾಂಚಜನ್ಯವೆನ್ನುವ ಶಂಖವನ್ನೂ, ಅರ್ಜುನನು ಭಯಂಕರ ದೇವದತ್ತವನ್ನೂ, ವೃಕೋದರನೂ ಮತ್ತು ಅದ್ಭುತ ಸಾಹಸಗಳನ್ನು ಮಾಡಬಲ್ಲವನೂ ಆದ ಭೀಮನು ಪೌಂಡ್ರವೆನ್ನುವ ಮಹಾಶಂಖವನ್ನೂ ಊದಿದರು.**

## ಭಾವಾರ್ಥ

ಈ ಶ್ಲೋಕದಲ್ಲಿ ಕೃಷ್ಣನನ್ನು ಹೃಷೀಕೇಶ ಎಂದು ಕರೆದಿದೆ. ಏಕೆಂದರೆ ಅವನು ಎಲ್ಲ ಇಂದ್ರಿಯಗಳ ಒಡೆಯ. ಜೀವಿಗಳೆಲ್ಲ ಅವನ ಅವಿಭಾಜ್ಯ ಅಂಶಗಳು. ನಿರಾಕಾರವಾದಿಗಳು ಜೀವಿಗಳಿಗೆ ಇಂದ್ರಿಯಗಳಿವೆ ಎನ್ನುವುದಕ್ಕೆ ವಿವರಣೆ ಕೊಡಲಾರರು. ಆದುದರಿಂದ ಅವರು ಎಲ್ಲ ಜೀವಿಗಳನ್ನೂ ಇಂದ್ರಿಯರಹಿತರು ಅಥವಾ ನಿರಾಕಾರ ಎಂದು ವರ್ಣಿಸಲು ಕಾತರರಾಗಿರುತ್ತಾರೆ. ಎಲ್ಲ ಜೀವಿಗಳ ಹೃದಯಗಳಲ್ಲಿ ನೆಲೆಸಿರುವ ಭಗವಂತನು ಅವರ ಇಂದ್ರಿಯಗಳನ್ನು ನಿರ್ದೇಶಿಸುತ್ತಾನೆ. ಆದರೆ ಆಯಾ ಜೀವಿಯು ಶರಣಾಗತನಾಗಿರುವ ರೀತಿಯಲ್ಲಿ ನಿರ್ದೇಶಿಸುತ್ತಾನೆ. ಭಕ್ತನು ಪರಿಶುದ್ಧನಾದರೆ ಭಗವಂತನು ಅವನ ಇಂದ್ರಿಯಗಳನ್ನು ನೇರವಾಗಿ ನಿಯಂತ್ರಿಸುತ್ತಾನೆ. ಕುರುಕ್ಷೇತ್ರ ರಣಭೂಮಿಯಲ್ಲಿ ಭಗವಂತನು ನೇರವಾಗಿ ಅರ್ಜುನನ ಅಲೌಕಿಕ ಇಂದ್ರಿಯಗಳನ್ನು ನಿಯಂತ್ರಿಸುತ್ತಾನೆ. ಇದರಿಂದಲೇ ಅವನನ್ನು ಹೃಷೀಕೇಶ ಎಂದು ಕರೆಯುವುದು. ಭಗವಂತನಿಗೆ ಅವನ ಬೇರೆಬೇರೆ ಕಾರ್ಯಗಳಿಗೆ ಅನುಗುಣವಾಗಿ ಬೇರೆಬೇರೆ ಹೆಸರುಗಳು ಇವೆ. ಉದಾಹರಣೆಗೆ,

ಅವನು ಮಧು ಎಂಬ ರಾಕ್ಷಸನನ್ನು ಕೊಂದ. ಆದುದರಿಂದ ಆತನ ಹೆಸರು ಮಧುಸೂದನ. ಅವನು ಗೋವುಗಳಿಗೂ, ಇಂದ್ರಿಯಗಳಿಗೂ ಸಂತೋಷವನ್ನು ಉಂಟು ಮಾಡುತ್ತಾನೆ. ಆದುದರಿಂದ ಗೋವಿಂದ. ವಸುದೇವನ ಮಗನಾಗಿ ಅವತರಿಸಿದ್ದರಿಂದ ವಾಸುದೇವ. ದೇವಕಿಯನ್ನು ತಾಯಿಯಾಗಿ ಸ್ವೀಕರಿಸಿದ. ಆದುದರಿಂದ ದೇವಕಿನಂದನ. ತನ್ನ ಬಾಲಲೀಲೆಗಳ ಸಂತೋಷವನ್ನು ವೃಂದಾವನದಲ್ಲಿ ಯಶೋದೆಗೆ ಅನುಗ್ರಹಿಸಿದ ಕಾರಣ ಯಶೋದಾನಂದನ. ತನ್ನ ಗೆಳೆಯ ಪಾರ್ಥನ ಸಾರಥಿಯಾದನೆಂದು ಪಾರ್ಥಸಾರಥಿ. ಕುರುಕ್ಷೇತ್ರದ ರಣರಂಗದಲ್ಲಿ ಅರ್ಜುನನಿಗೆ ಮಾರ್ಗದರ್ಶನ ಮಾಡಿದುದರಿಂದ ಹೃಷೀಕೇಶ.

ಈ ಶ್ಲೋಕದಲ್ಲಿ ಅರ್ಜುನನನ್ನು ಧನಂಜಯ ಎಂದು ಕರೆಯಲಾಗಿದೆ. ಏಕೆಂದರೆ ಅವನ ಅಣ್ಣನು ಕೈಗೊಂಡ ಹಲವು ಯಾಗಗಳಿಗೆ ಹಣವು ಅಗತ್ಯವಾದಾಗ ಅದನ್ನು ಪಡೆಯಲು ಅವನು ನೆರವಾದ. ಭೀಮನಿಗೆ ವೃಕೋದರನೆಂದು ಹೆಸರು. ಏಕೆಂದರೆ ರಾಕ್ಷಸ ಹಿಡಿಂಬನನ್ನು ಕೊಲ್ಲುವಂತಹ ಅಸಾಧಾರಣ ಸಾಹಸಗಳನ್ನು ಮಾಡಿದಂತೆಯೇ ಅವನು ಎಲ್ಲರನ್ನೂ ಮೀರಿಸಿ ಆಹಾರವನ್ನು ತಿನ್ನುತ್ತಿದ್ದ. ಭಗವಂತನಿಂದ ಪ್ರಾರಂಭಿಸಿ ಪಾಂಡವ ಸೈನ್ಯದ ನಾಯಕರು ಊದಿದ ಶಂಖಗಳ ನಾದವು ಯೋಧರಿಗೆ ಹುರುಪನ್ನುಂಟುಮಾಡಿತು. ಅವರ ಎದುರು ಪಕ್ಷದಲ್ಲಿ ಇಂತಹ ಪುಣ್ಯವಿರಲಿಲ್ಲ. ಪರಮ ನಿಯಾಮಕನಾದ ಶ್ರೀಕೃಷ್ಣನೂ ಅಲ್ಲಿರಲಿಲ್ಲ, ಭಾಗ್ಯಲಕ್ಷ್ಮಿಯೂ ಇರಲಿಲ್ಲ. ಆದುದರಿಂದ ಅವರ ಸೋಲು ಆಗಲೇ ನಿಶ್ಚಯವಾಗಿಹೋಗಿತ್ತು. ಶಂಖಗಳ ನಾದವು ಘೋಷಿಸಿದ್ದು ಈ ಸಂದೇಶವನ್ನೇ.

## ಶ್ಲೋಕಗಳು 16 - 18

**ಅನನ್ತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ||೧೬||**

**ಕಾಶ್ಯಶ್ಚ ಪರಮೇಷ್ವಾಸಃ ಶಿಖಣ್ಡೀ ಚ ಮಹಾರಥಃ |**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ||೧೭||**

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ |**
**ಸೌಭದ್ರಶ್ಚ ಮಹಾಬಾಹುಃ ಶಙ್ಖಾನ್ ದಧ್ಮುಃ ಪೃಥಕ್ ಪೃಥಕ್ ||೧೮||**

**ಅನನ್ತ ವಿಜಯಮ್**—ಅನಂತವಿಜಯವೆಂಬ ಶಂಖವನ್ನು; **ರಾಜಾ**—ರಾಜನಾದ; **ಕುಂತೀಪುತ್ರಃ**—ಕುಂತಿಯ ಮಗನಾದ; **ಯುಧಿಷ್ಠಿರಃ**—ಯುಧಿಷ್ಠಿರನೂ; **ನಕುಲಃ**—ನಕುಲನು; **ಸಹದೇವಃ**—ಸಹದೇವನು; **ಚ**—ಮತ್ತು; **ಸುಘೋಷ ಮಣಿಪುಷ್ಪಕೌ**—ಸುಘೋಷ ಮತ್ತು ಮಣಿಪುಷ್ಪಕಗಳೆಂಬ ಶಂಖಗಳನ್ನು; **ಕಾಶ್ಯಃ**—ಕಾಶಿಯ (ವಾರಾಣಸೀ) ರಾಜನು; **ಚ**—ಮತ್ತು; **ಪರಮ ಇಷು ಆಸಃ**— ಮಹಾಬಿಲ್ಗಾರನಾದ; **ಶಿಖಣ್ಡೀ**—ಶಿಖಂಡಿಯು; **ಚ**—ಕೂಡ; **ಮಹಾರಥಃ**—ಸಹಸ್ರಾರು ಸೈನಿಕರ ವಿರುದ್ಧ ಏಕಾಂಗಿಯಾಗಿ ಹೋರಾಡಬಲ್ಲ; **ಧೃಷ್ಟದ್ಯುಮ್ನಃ**—ಧೃಷ್ಟದ್ಯುಮ್ನನು (ದ್ರುಪದನ ಮಗ); **ವಿರಾಟಃ**—ವಿರಾಟನು (ಪಾಂಡವರಿಗೆ ಅಜ್ಞಾತವಾಸದಲ್ಲಿದ್ದಾಗ ಆಶ್ರಯವಿತ್ತವನು); **ಚ**—ಸಹಾ; **ಸಾತ್ಯಕಿಃ**—ಸಾತ್ಯಕಿಯು (ಕೃಷ್ಣನ ಸಾರಥಿಯಾದ ಯುಯುಧಾನನು); **ಚ**—ಮತ್ತು; **ಅಪರಾಜಿತಃ**— ಎಂದೂ ಸೋಲದ;

**ದ್ರುಪದಃ**—ಪಾಂಚಾಲರಾಜನಾದ ದ್ರುಪದನು; **ದ್ರೌಪದೇಯಾಃ**—ದ್ರೌಪದಿಯ ಪುತ್ರರು; **ಚ**—ಕೂಡ; **ಸರ್ವಶಃ**—ಎಲ್ಲರೂ; **ಪೃಥಿವೀ ಪತೇ**—ರಾಜನೇ; **ಸೌಭದ್ರಃ**—ಸುಭದ್ರೆಯ ಮಗನಾದ ಅಭಿಮನ್ಯುವು; **ಚ**—ಕೂಡ; **ಮಹಾಬಾಹುಃ**—ಮಹಾಬಲಶಾಲಿಯಾದ; **ಶಙ್ಖಾನ್**—ಶಂಖಗಳನ್ನು; **ದಧ್ಮುಃ**—ಊದಿದರು; **ಪೃಥಕ್ ಪೃಥಕ್**—ಬೇರೆಬೇರೆಯಾಗಿ.

## ಅನುವಾದ

**ಕುಂತೀಪುತ್ರನಾದ ಯುಧಿಷ್ಠಿರನು ಅನಂತವಿಜಯವೆಂಬ ತನ್ನ ಶಂಖವನ್ನು ಊದಿದನು. ನಕುಲ ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಶಂಖಗಳನ್ನು ಊದಿದರು. ಅರಸನೇ, ಮಹಾಧನುರ್ಧಾರಿಯಾದ ಕಾಶೀರಾಜ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಅಜೇಯನಾದ ಸಾತ್ಯಕಿ, ದ್ರುಪದ, ದ್ರೌಪದಿಯ ಮಕ್ಕಳು, ಮಹಾಬಾಹುವೂ ಸುಭದ್ರೆಯ ಮಗನೂ ಆದ ಅಭಿಮನ್ಯು ಎಲ್ಲರೂ ತಮ್ಮ ತಮ್ಮ ಶಂಖಗಳನ್ನು ಊದಿದರು.**

## ಭಾವಾರ್ಥ

ಅರಸ ಧೃತರಾಷ್ಟ್ರನು ಪಾಂಡುಪುತ್ರರಿಗೆ ಮೋಸಮಾಡಿ ತನ್ನ ಮಕ್ಕಳನ್ನೇ ಸಿಂಹಾಸನದ ಮೇಲೆ ಕೂಡಿಸಲು ಕೈಗೊಂಡ ಅವಿವೇಕದ ನೀತಿಯು ಮೆಚ್ಚುವಂತಹುದಲ್ಲ ಎಂದು ಸಂಜಯನು ಜಾಣ್ಮೆಯಿಂದ ಅವನಿಗೆ ತಿಳಿಸಿದ. ಆ ಮಹಾಸಮರದಲ್ಲಿ ಇಡೀ ಕುರುಕುಲ ನಿರ್ನಾಮವಾಗುತ್ತದೆ ಎಂದು ಆಗಲೇ ಸ್ಪಷ್ಟವಾದ ಸೂಚನೆಗಳಿದ್ದವು. ಪಿತಾಮಹ ಭೀಷ್ಮನಿಂದ ಪ್ರಾರಂಭಿಸಿ ಅಭಿಮನ್ಯು ಮತ್ತಿತರ ಮೊಮ್ಮಕ್ಕಳವರೆಗೆ ಎಲ್ಲರೂ ಮತ್ತು ಜಗತ್ತಿನ ಅನೇಕ ರಾಜ್ಯಗಳ ದೊರೆಗಳೂ ಅಲ್ಲಿದ್ದರು. ಎಲ್ಲರ ಸಾವು ಖಚಿತವಾಗಿತ್ತು. ಈ ಭೀಕರ ವಿಪತ್ತಿಗೆ ರಾಜ ಧೃತರಾಷ್ಟ್ರನೇ ಕಾರಣ. ಏಕೆಂದರೆ ಅವನು ತನ್ನ ಮಕ್ಕಳು ಅನುಸರಿಸಿದ ನೀತಿಗೆ ಬೆಂಬಲ ನೀಡಿದ.

## ಶ್ಲೋಕ - 19

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ |**
**ನಭಶ್ಚ ಪೃಥಿವೀಂ ಚೈವ ತುಮುಲೋಽಭ್ಯನುನಾದಯನ್ ||೧೯||**

**ಸ**—ಆ; **ಘೋಷಃ**—ಧ್ವನಿಸ್ಪಂದನವು; **ಧಾರ್ತರಾಷ್ಟ್ರಾಣಾಮ್**—ಧೃತರಾಷ್ಟ್ರನ ಮಕ್ಕಳ; **ಹೃದಯಾನಿ**—ಹೃದಯಗಳನ್ನು; **ವ್ಯದಾರಯತ್**—ಭೇದಿಸಿತು; **ನಭಃ**—ಆಕಾಶವನ್ನು; **ಚ**—ಕೂಡ; **ಪೃಥಿವೀಮ್**—ಭೂಮಿಯ ಮೇಲ್ಭಾಗವನ್ನು; **ಚ**—ಸಹಾ; **ಏವ**—ಖಂಡಿತವಾಗಿಯೂ; **ತುಮುಲಃ**—ಕೋಲಾಹಲವು; **ಅಭ್ಯನುನಾದಯನ್**—ಮೊಳಗಿಸುತ್ತ.

## ಅನುವಾದ

**ಈ ಶಂಖಗಳ ನಾದದಿಂದ ತುಮುಲ ಉಂಟಾಯಿತು. ಭೂಮಿ ಮತ್ತು ಆಕಾಶಗಳಲ್ಲಿ ಪ್ರತಿಧ್ವನಿಯನ್ನು ಮಾಡುತ್ತ ಅದು ಕೌರವರ ಹೃದಯಗಳನ್ನು ಚೂರುಚೂರು ಮಾಡಿತು.**

### ಭಾವಾರ್ಥ

ದುರ್ಯೋಧನನ ಪಕ್ಷದಲ್ಲಿದ್ದ ಭೀಷ್ಮರೂ ಮತ್ತಿತರರೂ ತಮ್ಮ ಶಂಖಗಳನ್ನು ಊದಿದಾಗ ಪಾಂಡವರ ಹೃದಯಗಳು ಬಿರಿಯಲಿಲ್ಲ. ಅಂತಹ ಘಟನೆಗಳನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಆದರೆ ಇಲ್ಲಿ ಪಾಂಡವ ಪಕ್ಷದವರ ಸದ್ದುಗಳ ಪ್ರತಿಧ್ವನಿಯಿಂದ ಧೃತರಾಷ್ಟ್ರನ ಮಕ್ಕಳ ಹೃದಯಗಳು ನುಚ್ಚುನೂರಾದವು ಎಂದು ಹೇಳಿದೆ. ಇದಕ್ಕೆ ಕಾರಣ ಪಾಂಡವರು ಮತ್ತು ಕೃಷ್ಣನಲ್ಲಿ ಅವರಿಗಿದ್ದ ವಿಶ್ವಾಸ. ದೇವಾಧಿದೇವನಲ್ಲಿ ಆಶ್ರಯ ಪಡೆದವನು ಅತ್ಯಂತ ಘೋರ ಅನಾಹುತದ ನಡುವೆಯೂ ಹೆದರುವ ಅಗತ್ಯವೇ ಇಲ್ಲ.

### ಶ್ಲೋಕ - 20

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ |**
**ಪ್ರವೃತ್ತೇ ಶಸ್ತ್ರಸಮ್ಪಾತೇ ಧನುರುದ್ಯಮ್ಯ ಪಾಣ್ಡವಃ |**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ||೨೦||**

**ಅಥ**—ಆಮೇಲೆ; **ವ್ಯವಸ್ಥಿತಾನ್**—ವ್ಯವಸ್ಥಿತವಾಗಿದ್ದ; **ದೃಷ್ಟ್ವಾ**—ನೋಡಿ; **ಧಾರ್ತರಾಷ್ಟ್ರಾನ್**—ಧೃತರಾಷ್ಟ್ರನ ಮಕ್ಕಳನ್ನು; **ಕಪಿಧ್ವಜಃ**—ಹನುಮಂತನ ಚಿಹ್ನೆಯ ಧ್ವಜವುಳ್ಳ; **ಪ್ರವೃತ್ತೇ**—ತೊಡಗುತ್ತಿರುವಾಗ; **ಶಸ್ತ್ರಸಮ್ಪಾತೇ**—ಬಾಣಗಳನ್ನು ಬಿಡಲು; **ಧನುಃ**—ಬಿಲ್ಲನ್ನು; **ಉದ್ಯಮ್ಯ**—ತೆಗೆದುಕೊಂಡು; **ಪಾಣ್ಡವಃ**—ಪಾಂಡುಪುತ್ರನು (ಅರ್ಜುನನು); **ಹೃಷೀಕೇಶಮ್**—ಶ್ರೀಕೃಷ್ಣನನ್ನು; **ತದಾ**—ಆಗ; **ವಾಕ್ಯಮ್**—ಮಾತುಗಳನ್ನು; **ಇದಮ್**—ಈ; **ಆಹ**—ಹೇಳಿದನು; **ಮಹೀಪತೇ**—ರಾಜನೇ.

### ಅನುವಾದ

**ಹೇ ಅರಸನೆ, ಆಗ ಕಪಿಧ್ವಜನಾದ ಅರ್ಜುನನು ಯುದ್ಧಸನ್ನದ್ಧರಾದ ಕೌರವರನ್ನು ನೋಡಿದನು. ತನ್ನ ಧನುಸ್ಸನ್ನು ಎತ್ತಿಹಿಡಿದು ಬಾಣಗಳನ್ನು ಬಿಡಲು ಸಿದ್ಧನಾಗಿ, ಶ್ರೀಕೃಷ್ಣನಿಗೆ ಈ ಮಾತುಗಳನ್ನು ಹೇಳಿದನು.**

### ಭಾವಾರ್ಥ

ಯುದ್ಧವು ಇನ್ನೇನು ಪ್ರಾರಂಭವಾಗುವುದರಲ್ಲಿತ್ತು. ರಣಭೂಮಿಯಲ್ಲಿ ಶ್ರೀಕೃಷ್ಣನ ಮಾರ್ಗದರ್ಶನವನ್ನು ಅನುಸರಿಸಿದ ಪಾಂಡವರು ಅನಿರೀಕ್ಷಿತ ರೀತಿಯಲ್ಲಿ ತಮ್ಮ ಸೈನ್ಯದ ವ್ಯೂಹವನ್ನು ರಚಿಸಿದ್ದರಿಂದ ಕೌರವರು ಬಹುಮಟ್ಟಿಗೆ ಉತ್ಸಾಹವನ್ನು ಕಳೆದುಕೊಂಡರು. ಇದು ಮುಂಚೆ ಬಂದ ಮಾತುಗಳಿಂದ ತಿಳಿಯುವಂತಿದೆ. ಅರ್ಜುನನ ಧ್ವಜದಲ್ಲಿದ್ದ ಹನುಮಂತನ ಸಂಕೇತವು ವಿಜಯದ ಮತ್ತೊಂದು ಸೂಚನೆಯಾಗಿತ್ತು. ಏಕೆಂದರೆ ರಾಮರಾವಣರ ಯುದ್ಧದಲ್ಲಿ ಹನುಮಂತನು ರಾಮನ ಪಕ್ಷವನ್ನು ವಹಿಸಿದ್ದ. ಶ್ರೀರಾಮನು ವಿಜಯಿಯಾದನು. ಈಗ ಅರ್ಜುನನಿಗೆ ನೆರವಾಗಲು ರಾಮ, ಹನುಮಂತ ಇಬ್ಬರೂ ಆತನ ರಥದಲ್ಲಿದ್ದರು. ಶ್ರೀಕೃಷ್ಣನೇ ಶ್ರೀರಾಮ. ಶ್ರೀರಾಮನು ಎಲ್ಲಿದ್ದರೆ ಅಲ್ಲಿ ಅವನ ನಿರಂತರ ಸೇವಕ ಹನುಮಂತನೂ, ಆತನ ನಿರಂತರ ಧರ್ಮಪತ್ನಿ,

ಭಾಗ್ಯಲಕ್ಷ್ಮಿಯಾದ ಸೀತೆಯೂ ಇರುತ್ತಾರೆ. ಆದುದರಿಂದ ಅರ್ಜುನನಿಗೆ ಶತ್ರುಭಯಕ್ಕೆ ಕಾರಣವೇ ಇರಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಇಂದ್ರಿಯಗಳ ಸ್ವಾಮಿಯಾದ ಶ್ರೀಕೃಷ್ಣನೇ ಸ್ವತಃ ಅಲ್ಲಿದ್ದು ಅವನಿಗೆ ನಿರ್ದೇಶಿಸುತ್ತಿದ್ದ. ಹೀಗೆ ಅರ್ಜುನನಿಗೆ ಯುದ್ಧನಿರ್ವಹಣೆಯಲ್ಲಿ ಎಲ್ಲ ಸನ್ಮಾರ್ಗದರ್ಶನವೂ ಲಭ್ಯವಾಗಿತ್ತು. ಭಗವಂತ ತನ್ನ ನಿರಂತರ ಭಕ್ತನಿಗಾಗಿ ರೂಪಿಸಿದ್ದ ಇಂತಹ ಶುಭ ಸನ್ನಿವೇಶವೇ ನಿಶ್ಚಯವಾದ ವಿಜಯದ ಸೂಚನೆಯಾಗಿತ್ತು.

## ಶ್ಲೋಕ 21 - 22

**ಅರ್ಜುನ ಉವಾಚ**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ |**
**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ||೨೧||**

**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ||೨೨||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಸೇನಯೋಃ**—ಸೈನ್ಯಗಳ; **ಉಭಯೋಃ**—ಎರಡರ; **ಮಧ್ಯೇ**—ನಡುವಿನಲ್ಲಿ; **ರಥಮ್**—ರಥವನ್ನು; **ಸ್ಥಾಪಯ**—ದಯವಿಟ್ಟು ನಿಲ್ಲಿಸು; **ಮೇ**—ನನ್ನ; **ಅಚ್ಯುತ**—ಚ್ಯುತಿರಹಿತನೇ; **ಯಾವತ್**—ಎಲ್ಲಿಯವರೆಗೆ; **ಏತಾನ್**—ಈ ಎಲ್ಲ; **ನಿರೀಕ್ಷೇ**—ನೋಡಬಹುದು; **ಅಹಮ್**—ನಾನು; **ಯೋದ್ಧುಕಾಮಾನ್**—ಯುದ್ಧಮಾಡಲು ಅಪೇಕ್ಷಿಸುವವರನ್ನು; **ಅವಸ್ಥಿತಾನ್**—ಯುದ್ಧಭೂಮಿಯಲ್ಲಿ ವ್ಯೂಹಗೊಂಡ; **ಕೈಃ**—ಯಾರೊಂದಿಗೆ; **ಮಯಾ**—ನನ್ನಿಂದ; **ಸಹ**—ಒಟ್ಟಾಗಿ; **ಯೋದ್ಧವ್ಯಮ್**—ಯುದ್ಧಮಾಡಲ್ಪಡಬೇಕು; **ಅಸ್ಮಿನ್**— ಈ; **ರಣ**—ಕದನದ; **ಸಮುದ್ಯಮೇ**—ಪ್ರಯತ್ನದಲ್ಲಿ.

## ಅನುವಾದ

**ಅರ್ಜುನ ಹೇಳಿದ — ಹೇ ಅಚ್ಯುತ, ಯುದ್ಧ ಮಾಡಲು ಸನ್ನದ್ಧವಾಗಿರುವ ಇವರನ್ನು ಮತ್ತು ಈ ಘೋರ ಶಸ್ತ್ರಸ್ಪರ್ಧೆಯಲ್ಲಿ ನಾನು ಯಾರೊಡನೆ ಹೋರಾಡಬೇಕೋ ಅವರನ್ನು ನೋಡಲು ಸಾಧ್ಯವಾಗುವಂತೆ ಈ ಎರಡು ಸೈನ್ಯಗಳ ಮಧ್ಯೆ ನನ್ನ ರಥವನ್ನು ನಿಲ್ಲಿಸು.**

## ಭಾವಾರ್ಥ

ಶ್ರೀಕೃಷ್ಣನು ದೇವೋತ್ತಮ ಪರಮ ಪುರುಷನೇ ಆದರೂ ಅನಿಮಿತ್ತ ಕಾರಣದಿಂದ ಆತನು ತನ್ನ ಗೆಳೆಯನ ಸೇವೆಯಲ್ಲಿ ತೊಡಗಿದ್ದನು. ತನ್ನ ಭಕ್ತರಲ್ಲಿ ಎಂದೂ ಅವನು ಪ್ರೀತಿಯನ್ನು ತೋರದಿರುವುದಿಲ್ಲ. ಆದ್ದರಿಂದ ಇಲ್ಲಿ ಆತನನ್ನು ಅಚ್ಯುತ ಎಂದು ಸಂಬೋಧಿಸಿದೆ. ಸಾರಥಿಯಾಗಿ ಅವನು ಅರ್ಜುನನ ಅಪ್ಪಣೆಯಂತೆ ನಡೆಯಬೇಕಾಗಿತ್ತು. ಹೀಗೆ ನಡೆದುಕೊಳ್ಳಲು ಆತನು ಹಿಂದೆಗೆಯದಿದ್ದುದರಿಂದ ಆತನನ್ನು ಅಚ್ಯುತ ಎಂದು ಸಂಬೋಧಿಸಿದೆ. ತನ್ನ ಭಕ್ತನಿಗಾಗಿ ಸಾರಥಿಯ ಸ್ಥಾನವನ್ನು ಒಪ್ಪಿಕೊಂಡಿದ್ದರೂ ಅವನ ಸರ್ವೋಚ್ಚ ಸ್ಥಾನಕ್ಕೆ ಎದುರಿಲ್ಲ. ಎಲ್ಲ ಸನ್ನಿವೇಶಗಳಲ್ಲಿಯೂ ಅವನು ದೇವೋತ್ತಮ ಪರಮ ಪುರುಷ. ಹೃಷೀಕೇಶ ಎಂದರೆ ಸಕಲೇಂದ್ರಿಯಗಳ ಸ್ವಾಮಿ. ಭಗವಂತನಿಗೂ ಅವನ ಸೇವಕನಿಗೂ ನಡುವಣ ಸಂಬಂಧ ಅತಿ

ಮಧುರ ಮತ್ತು ಅಲೌಕಿಕ. ಸೇವಕನು ಭಗವಂತನ ಸೇವೆಗೆ ಸದಾ ಸಿದ್ಧ. ಹಾಗೆಯೇ ಭಗವಂತನು ತನ್ನ ಭಕ್ತನಿಗೆ ಒಂದಿಷ್ಟು ಸೇವೆ ಮಾಡಲು ಸದಾ ಅವಕಾಶವನ್ನು ಹುಡುಕುತ್ತಿರುತ್ತಾನೆ. ತಾನೇ ಅಪ್ಪಣೆ ನೀಡುವ ಪ್ರಭುವಾಗುವುದಕ್ಕಿಂತ ತನ್ನ ಪರಿಶುದ್ಧ ಭಕ್ತನೇ ತನಗೆ ಅಪ್ಪಣೆ ನೀಡುವ ಸ್ಥಾನವನ್ನು ವಹಿಸಿಕೊಂಡಾಗ ಭಗವಂತನಿಗೆ ಹೆಚ್ಚು ಸಂತೋಷ. ಅವನೇ ಪ್ರಭುವಾದುದರಿಂದ ಎಲ್ಲರೂ ಅವನ ಆಜ್ಞಾಧಾರಕರು. ಅವನಿಗೆ ಅಪ್ಪಣೆ ಮಾಡಲು ಅವನಿಗಿಂತ ಉಚ್ಚರಾದವರು ಇಲ್ಲ. ಹೀಗೆ ತಾನೇ ಎಲ್ಲ ಆಗುಹೋಗುಗಳ ಪ್ರಭುವಾದರೂ ಪರಿಶುದ್ಧ ಭಕ್ತನೊಬ್ಬನು ತನಗೆ ಅಪ್ಪಣೆ ಮಾಡುವುದನ್ನು ಕಂಡಾಗ ಭಗವಂತನಿಗೆ ಅಲೌಕಿಕ ಆನಂದವಾಗುತ್ತದೆ.

ಭಗವಂತನ ಪರಿಶುದ್ಧ ಭಕ್ತನಾದ ಅರ್ಜುನನಿಗೆ ತನ್ನ ದಾಯಾದಿಗಳೊಡನೆ ಮತ್ತು ಸೋದರರರರೊಡನೆ ಯುದ್ಧಮಾಡಲು ಇಚ್ಛೆಯೇ ಇರಲಿಲ್ಲ. ಆದರೆ ಶಾಂತಿಯ ಮಾರ್ಗದ ಯಾವುದೇ ಸಂಧಾನಕ್ಕೆ ಒಪ್ಪದ ದುರ್ಯೋಧನನ ಹಠಮಾರಿತನದಿಂದ ಆತನು ರಣಭೂಮಿಗೆ ಬರಬೇಕಾಯಿತು. ಆತನಿಗೆ ರಣಭೂಮಿಯಲ್ಲಿದ್ದ ಪ್ರಮುಖರನ್ನು ಕಾಣುವ ಕುತೂಹಲ ಉಂಟಾಯಿತು. ರಣಭೂಮಿಯಲ್ಲಿ ಶಾಂತಿಯ ಪ್ರಯತ್ನದ ಸಾಧ್ಯತೆಯೇ ಇಲ್ಲವಾದರೂ ಅವರನ್ನು ಮತ್ತೆ ನೋಡುವ ಮತ್ತು ಈ ಅನಗತ್ಯವಾದ ಯುದ್ಧಕ್ಕೆ ಅವರು ಎಷ್ಟು ಕಾತರರಾಗಿದ್ದಾರೆ ಎಂದು ಕಾಣುವ ಬಯಕೆ ಅವನಿಗಾಯಿತು.

## ಶ್ಲೋಕ - 23

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥**

**ಯೋತ್ಸ್ಯಮಾನಾನ್**—ಯುದ್ಧಮಾಡುವವರನ್ನು; **ಅವೇಕ್ಷೇ**—ನೋಡುತ್ತೇನೆ; **ಅಹಮ್**—ನಾನು; **ಯೇ**—ಯಾವ; **ಏತೇ**—ಅವರು; **ಅತ್ರ**—ಇಲ್ಲಿ; **ಸಮಾಗತಾಃ**—ಸೇರಿದ್ದಾರೆ; **ಧಾರ್ತರಾಷ್ಟ್ರಸ್ಯ**—ಧೃತರಾಷ್ಟ್ರನ ಮಗನಿಗಾಗಿ; **ದುರ್ಬುದ್ಧೇಃ**—ದುರ್ಬುದ್ಧಿಯವನಾದ; **ಯುದ್ಧೇ**—ಯುದ್ಧದಲ್ಲಿ; **ಪ್ರಿಯ**—ಹಿತವನ್ನು; **ಚಿಕೀರ್ಷವಃ**—ಮಾಡಬಯಸುವವರು.

## ಅನುವಾದ

**ದುರ್ಬುದ್ಧಿಯವನಾದ ಧೃತರಾಷ್ಟ್ರನ ಮಗನನ್ನು ಸುಪ್ರೀತಗೊಳಿಸುವ ಅಪೇಕ್ಷೆಯಿಂದ ಯುದ್ಧಮಾಡಲು ಇಲ್ಲಿಗೆ ಯಾರು ಯಾರು ಬಂದಿದ್ದಾರೆ ಎಂದು ನಾನು ನೋಡಲು ಬಯಸುತ್ತೇನೆ.**

## ಭಾವಾರ್ಥ

ತನ್ನ ತಂದೆಯಾದ ಧೃತರಾಷ್ಟ್ರನ ಜೊತೆಗೂಡಿ ದುಷ್ಟಯೋಜನೆಗಳಿಂದ ಪಾಂಡವರ ರಾಜ್ಯವನ್ನು ಆಕ್ರಮಿಸಿಕೊಳ್ಳುವುದು ದುರ್ಯೋಧನನ ಬಯಕೆ ಎಂಬುದು ಎಲ್ಲರಿಗೂ ತಿಳಿದಿದ್ದ ರಹಸ್ಯ. ಆದುದರಿಂದ ದುರ್ಯೋಧನನ ಪಕ್ಷವನ್ನು ಸೇರಿದವರೆಲ್ಲ ಒಂದೇ ಬಗೆಯ ಜನರೇ ಆಗಿದ್ದಿರಬೇಕು. ಅವರು ಯಾರು ಎಂದು ತಿಳಿಯುವುದಕ್ಕಾಗಿ ಅರ್ಜುನನು ಯುದ್ಧಕ್ಕೆ ಮೊದಲು ಅವರನ್ನು ಕಾಣಲು ಬಯಸಿದ. ಅವರೊಡನೆ ಶಾಂತಿಸಂಧಾನವನ್ನು ನಡೆಸುವ ಯೋಚನೆಯೇನೂ

ಇರಲಿಲ್ಲ. ಕೃಷ್ಣನು ತನ್ನ ಪಕ್ಕದಲ್ಲಿಯೇ ಕುಳಿತಿದ್ದುದರಿಂದ ಅವನಿಗೆ ವಿಜಯದ ಸಂಪೂರ್ಣ ಭರವಸೆ ಇತ್ತು. ಆದರೂ ತಾನು ಎದುರಿಸಬೇಕಾಗಿದ್ದ ಬಲದ ಕಲ್ಪನೆಯನ್ನು ಪಡೆಯಲು ಅವನು ಬಯಸಿದ ಎನ್ನುವುದೂ ನಿಜ.

## ಶ್ಲೋಕ - 24

**ಸಂಜಯ ಉವಾಚ**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ |**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ||೨೪||**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಏವಮ್**—ಹೀಗೆ; **ಉಕ್ತಃ**—ಹೇಳಲ್ಪಟ್ಟನು; **ಹೃಷೀಕೇಶಃ**—ಶ್ರೀಕೃಷ್ಣನು; **ಗುಡಾಕೇಶೇನ**—ಅರ್ಜುನನಿಂದ; **ಭಾರತ**—ಭರತ ವಂಶದವನೇ; **ಸೇನಯೋಃ**—ಸೈನ್ಯಗಳ; **ಉಭಯೋಃ**—ಎರಡು; **ಮಧ್ಯೇ**—ಮಧ್ಯದಲ್ಲಿ; **ಸ್ಥಾಪಯಿತ್ವಾ**—ನಿಲ್ಲಿಸಿ; **ರಥ ಉತ್ತಮಮ್**—ಉತ್ತಮವಾದ ರಥವನ್ನು.

## ಅನುವಾದ

**ಸಂಜಯನು ಹೇಳಿದ — ಹೇ ಭರತವಂಶಜನೇ, ಅರ್ಜುನನ ಈ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಎರಡು ಸೈನ್ಯಗಳ ನಡುವೆ ತನ್ನ ಶ್ರೇಷ್ಠ ರಥವನ್ನು ನಿಲ್ಲಿಸಿದ.**

## ಭಾವಾರ್ಥ

ಈ ಶ್ಲೋಕದಲ್ಲಿ ಅರ್ಜುನನನ್ನು **ಗುಡಾಕೇಶ** ಎಂದು ಕರೆದಿದೆ. **ಗುಡಾಕಾ** ಎಂದರೆ ನಿದ್ರೆ; ನಿದ್ರೆಯನ್ನು ಗೆದ್ದವನು **ಗುಡಾಕೇಶ.** ನಿದ್ರೆ ಎಂದರೆ ಅಜ್ಞಾನ ಎಂದೂ ಅರ್ಥ. ಕೃಷ್ಣನೊಡನೆ ತನ್ನ ಗೆಳೆತನದಿಂದ ಅರ್ಜುನನು ನಿದ್ರೆಯನ್ನೂ ಅಜ್ಞಾನವನ್ನೂ ಗೆದ್ದ. ಕೃಷ್ಣನ ಮಹಾಭಕ್ತನಾಗಿ ಅವನಿಗೆ ಕೃಷ್ಣನನ್ನು ಒಂದು ಕ್ಷಣವೂ ಮರೆಯಲು ಸಾಧ್ಯವಿರಲಿಲ್ಲ. ಏಕೆಂದರೆ ಇದೇ ಭಕ್ತನ ಸ್ವಭಾವ. ಜಾಗ್ರತಾವಸ್ಥೆಯಲ್ಲಾಗಲಿ ನಿದ್ರೆಯಲ್ಲಾಗಲೀ ಭಕ್ತನು ಕೃಷ್ಣನ ಹೆಸರು, ರೂಪ, ಗುಣ ಮತ್ತು ಲೀಲೆಗಳನ್ನು ಯೋಚಿಸದಿರುವ ಒಂದು ಕ್ಷಣವೂ ಇಲ್ಲ. ಹೀಗೆ ಕೃಷ್ಣನನ್ನು ಕುರಿತು ಸದಾ ಚಿಂತಿಸುವವಷ್ಟರಿಂದಲೇ ಅವನು ನಿದ್ರೆಯನ್ನೂ ಅಜ್ಞಾನವನ್ನೂ ಗೆಲ್ಲಬಲ್ಲ. ಇದಕ್ಕೆ ಕೃಷ್ಣಪ್ರಜ್ಞೆ ಅಥವಾ **ಸಮಾಧಿ** ಎಂದು ಹೆಸರು. ಹೃಷೀಕೇಶನಾದ, ಎಂದರೆ ಎಲ್ಲ ಜೀವಿಗಳ ಇಂದ್ರಿಯಗಳ ಮತ್ತು ಮನಸ್ಸುಗಳ ನಿರ್ದೇಶಕನಾದ ಕೃಷ್ಣನಿಗೆ ಅರ್ಜುನನು ರಥವನ್ನು ಸೈನ್ಯಗಳ ಮಧ್ಯೆ ನಿಲ್ಲಿಸು ಎಂದು ಹೇಳಿದುದಕ್ಕೆ ಕಾರಣವು ಅರ್ಥವಾಯಿತು. ಅವನು ಹಾಗೆಯೇ ಮಾಡಿ ಅನಂತರ ಈ ಮಾತುಗಳನ್ನು ಹೇಳಿದನು.

## ಶ್ಲೋಕ - 25

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ |**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ||೨೫||**

**ಭೀಷ್ಮ**—ಪಿತಾಮಹ ಭೀಷ್ಮ; **ದ್ರೋಣ**—ಆಚಾರ್ಯ ದ್ರೋಣ; **ಪ್ರಮುಖತಃ**—ಮುಂಭಾಗದಲ್ಲಿ; **ಸರ್ವೇಷಾಮ್**—ಎಲ್ಲರ; **ಚ**—ಕೂಡ; **ಮಹೀಕ್ಷಿತಾಮ್**—ಜಗತ್ಪತಿಗಳು; **ಉವಾಚ**— ಹೇಳಿದನು; **ಪಾರ್ಥ**—ಪೃಥೆಯ ಪುತ್ರನೇ; **ಪಶ್ಯ**—ನೋಡು; **ಏತಾನ್**—ಅವರೆಲ್ಲರನ್ನು; **ಸಮವೇತಾನ್**—ನೆರೆದ; **ಕುರೂನ್**—ಕುರುಕುಲದ ಸದಸ್ಯರಾದ; **ಇತಿ**—ಹೀಗೆ.

## ಅನುವಾದ

**ಭೀಷ್ಮ, ದ್ರೋಣ ಮತ್ತು ಜಗತ್ತಿನ ಇತರ ರಾಜರ ಮುಂದೆ ರಥವನ್ನು ನಿಲ್ಲಿಸಿ ಭಗವಂತನು, ಪಾರ್ಥ, ಇಲ್ಲಿ ನೆರೆದಿರುವ ಎಲ್ಲ ಕೌರವರನ್ನು ನೋಡು, ಎಂದನು.**

## ಭಾವಾರ್ಥ

ಎಲ್ಲ ಜೀವಿಗಳ ಪರಮಾತ್ಮನಾಗಿ ಕೃಷ್ಣನು ಪಾರ್ಥನ ಮನಸ್ಸಿನ ವ್ಯಾಪಾರಗಳನ್ನು ಅರ್ಥಮಾಡಿಕೊಳ್ಳಬಲ್ಲವನಾಗಿದ್ದ. ಇಲ್ಲಿ ಹೃಷೀಕೇಶ ಎನ್ನುವ ಪದವನ್ನು ಬಳಸಿರುವುದು ಆತನಿಗೆ ಎಲ್ಲವೂ ತಿಳಿದಿತ್ತು ಎನ್ನುವುದನ್ನು ತೋರಿಸುತ್ತದೆ. ಪಾರ್ಥ ಎಂದರೆ ಪೃಥಾ ಅಥವಾ ಕುಂತಿಯ ಮಗ. ಈ ಶಬ್ದದ ಬಳಕೆಯೂ ಅರ್ಥವತ್ತಾಗಿದೆ. ಅರ್ಜುನನು ಕೃಷ್ಣನ ತಂದೆ ವಸುದೇವನ ತಂಗಿಯಾದ ಪೃಥೆಯ ಮಗ. ಈ ಕಾರಣಕ್ಕಾಗಿ ತಾನು ಅರ್ಜುನನ ಸಾರಥಿಯಾದೆ ಎನ್ನುವುದನ್ನು ಕೃಷ್ಣ ಅರ್ಜುನನಿಗೆ ತಿಳಿಸಬಯಸಿದ. ಕೃಷ್ಣನು ಅರ್ಜುನನಿಗೆ "ಕೌರವರನ್ನು ನೋಡು" ಎಂದುದರ ಅರ್ಥವೇನು? ಅರ್ಜುನನು ಯುದ್ಧಮಾಡದಿರಲು ಬಯಸಿದ್ದನೆ? ಕೃಷ್ಣನು ತನ್ನ ಸೋದರತ್ತೆ ಕುಂತಿಯ ಮಗನಿಂದ ಇಂತಹ ನಡತೆಯನ್ನು ನಿರೀಕ್ಷಿಸಿರಲಿಲ್ಲ. ಅರ್ಜುನನ ಮನಸ್ಸಿನ ಮುಂದಿನ ಸ್ಥಿತಿಯನ್ನು ಹೀಗೆ ಭಗವಂತನು ವಿನೋದವಾಗಿ ಸೂಚಿಸಿದ.

## ಶ್ಲೋಕ - 26

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ |**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ |**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ||೨೬||**

**ತತ್ರ**—ಅಲ್ಲಿ; **ಅಪಶ್ಯತ್**—ನೋಡಿದನು; **ಸ್ಥಿತಾನ್**—ನಿಂತಿರುವ; **ಪಾರ್ಥಃ**—ಅರ್ಜುನನು; **ಪಿತೄನ್**—ಪಿತೃಗಳನ್ನು; **ಅಥ**—ಕೂಡ; **ಪಿತಾಮಹಾನ್**—ಪಿತಾಮಹರನ್ನು; **ಆಚಾರ್ಯಾನ್**—ಆಚಾರ್ಯರನ್ನು; **ಮಾತುಲಾನ್**—ಸೋದರ ಮಾವಂದಿರನ್ನು; **ಭ್ರಾತೄನ್**—ಸಹೋದರರನ್ನು; **ಪುತ್ರಾನ್**—ಮಕ್ಕಳನ್ನು; **ಪೌತ್ರಾನ್**—ಮೊಮ್ಮಕ್ಕಳನ್ನು; **ಸಖೀನ್**—ಸ್ನೇಹಿತರನ್ನು; **ತಥಾ**—ಕೂಡಾ; **ಶ್ವಶುರಾನ್**—ಮಾವಂದಿರನ್ನು; **ಸುಹೃದಃ**—ಹಿತೈಷಿಗಳನ್ನು; **ಚ**—ಸಹಾ; **ಏವ**—ಖಂಡಿತವಾಗಿಯೂ; **ಸೇನಯೋಃ**—ಸೈನ್ಯಗಳಲ್ಲಿ; **ಉಭಯೋಃ**—ಎರಡು ಪಕ್ಷಗಳ; **ಅಪಿ**—ಸೇರಿದಂತೆ.

## ಅನುವಾದ

**ಅರ್ಜುನನು ಎರಡು ಸೈನ್ಯಗಳಲ್ಲಿಯೂ ಇದ್ದ ತನ್ನ ಚಿಕ್ಕಪ್ಪ ದೊಡ್ಡಪ್ಪಂದಿರನ್ನೂ, ತಾತಂದಿರನ್ನೂ, ಗುರುಗಳನ್ನೂ, ಸೋದರ ಮಾವಂದಿರನ್ನೂ, ಸೋದರರನ್ನೂ, ಮಕ್ಕಳನ್ನೂ, ಮೊಮ್ಮಕ್ಕಳನ್ನೂ,**

**ಸ್ನೇಹಿತರನ್ನೂ, ಮಾವಂದಿರನ್ನೂ, ಹಿತೈಷಿಗಳನ್ನೂ ನೋಡಿದನು.**

## ಭಾವಾರ್ಥ

ರಣಭೂಮಿಯಲ್ಲಿ ಅರ್ಜುನನು ಎಲ್ಲ ಬಗೆಯ ಬಂಧುಗಳನ್ನು ಕಂಡನು. ಭೂರಿಶ್ರವನಂತಹ ತನ್ನ ತಂದೆಯ ಓರಗೆಯವರು, ಭೀಷ್ಮ ಮತ್ತು ಸೋಮದತ್ತರಂತಹ ಪಿತಾಮಹರು, ದ್ರೋಣಾಚಾರ್ಯ ಮತ್ತು ಕೃಪಾಚಾರ್ಯರಂತಹ ಗುರುಗಳು, ಶಲ್ಯ ಮತ್ತು ಶಕುನಿಗಳಂತಹ ಸೋದರ ಮಾವಂದಿರು, ದುರ್ಯೋಧನನಂತಹ ಸೋದರರು, ಲಕ್ಷ್ಮಣನಂತಹ ಮಕ್ಕಳು, ಅಶ್ವತ್ಥಾಮರಂತಹ ಸ್ನೇಹಿತರು, ಕೃತವರ್ಮನಂತಹ ಹಿತೈಷಿಗಳು ಮೊದಲಾಗಿ ಅನೇಕರನ್ನು ನೋಡಿದನು. ತನ್ನ ಹಲವರು ಸ್ನೇಹಿತರು ಇದ್ದ ಸೈನ್ಯಗಳನ್ನು ಕಂಡನು.

## ಶ್ಲೋಕ - 27

**ತಾನ್ ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ ಬನ್ಧೂನವಸ್ಥಿತಾನ್ |**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ||೨೭||**

**ತಾನ್**—ಆ; **ಸಮೀಕ್ಷ್ಯ**—ನೋಡಿದ ಮೇಲೆ; **ಸಃ**—ಆ; **ಕೌನ್ತೇಯಃ**—ಕುಂತಿಯ ಮಗನು; **ಸರ್ವಾನ್**—ಎಲ್ಲ ಬಗೆಯ; **ಬನ್ಧೂನ್**—ಬಂಧುಗಳನ್ನು; **ಅವಸ್ಥಿತಾನ್**—ನಿಂತಿದ್ದ; **ಕೃಪಯಾ**—ಕೃಪೆಯಿಂದ; **ಪರಯಾ**—ಉತ್ತಮಶ್ರೇಣಿಯ; **ಆವಿಷ್ಟಃ**—ಆಕ್ರಾಂತನಾಗಿ; **ವಿಷೀದನ್**—ವಿಷಾದಿಸುತ್ತ; **ಇದಮ್**—ಹೀಗೆ; **ಅಬ್ರವೀತ್**—ಹೇಳಿದನು.

## ಅನುವಾದ

**ಕುಂತಿಯ ಮಗ ಅರ್ಜುನನು ಈ ಎಲ್ಲ ನೆಂಟರಿಷ್ಟರನ್ನು ಕಂಡಾಗ ತುಂಬ ಭಾವಪರವಶನಾಗಿ ಹೀಗೆ ಹೇಳಿದನು.**

## ಶ್ಲೋಕ - 28

**ಅರ್ಜುನ ಉವಾಚ**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ |**
**ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ||೨೮||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ದೃಷ್ಟ್ವಾ**—ನೋಡಿದನಂತರ; **ಇಮಮ್**—ಈ; **ಸ್ವಜನಮ್**—ಬಂಧುಗಳನ್ನು; **ಕೃಷ್ಣ**—ಕೃಷ್ಣನೇ; **ಯುಯುತ್ಸುಮ್**—ಯುದ್ಧೋತ್ಸಾಹಿಗಳಾದ; **ಸಮುಪಸ್ಥಿತಮ್**—ಇಲ್ಲಿ ಇರುವ; **ಸೀದನ್ತಿ**—ಕಂಪಿಸುತ್ತಿವೆ; **ಮಮ**—ನನ್ನ; **ಗಾತ್ರಾಣಿ**—ದೇಹದ ಅವಯವಗಳು; **ಮುಖಮ್**—ಬಾಯಿಯೂ; **ಚ**—ಸಹಾ; **ಪರಿಶುಷ್ಯತಿ**—ಒಣಗುತ್ತಿದೆ.

## ಅನುವಾದ

**ಅರ್ಜುನನು ಹೇಳಿದನು — ಕೃಷ್ಣ, ಯುದ್ಧಾಭಿಲಾಷೆಯಿಂದ ಇಲ್ಲಿ ಸಮಾವೇಶಗೊಂಡಿರುವ ನನ್ನ**

**ನೆಂಟರಿಷ್ಟರನ್ನು ನೋಡಿ ನನ್ನ ಅವಯವಗಳು ಕಂಪಿಸುತ್ತಿವೆ ಮತ್ತು ಬಾಯಿಯು ಒಣಗುತ್ತಿದೆ.**

## ಭಾವಾರ್ಥ

ದಿವ್ಯ ಪುರುಷರಲ್ಲಿ ಅಥವಾ ದೇವತೆಗಳಲ್ಲಿ ಇರುವ ಎಲ್ಲ ಸದ್ಗುಣಗಳೂ ಭಗವಂತನಲ್ಲಿ ನಿಜವಾಗಿ ಭಕ್ತಿಯುಳ್ಳವರಲ್ಲಿ ಇರುತ್ತವೆ. ಆದರೆ ಭಕ್ತನಲ್ಲದವನು ವಿದ್ಯೆ ಮತ್ತು ಸಂಸ್ಕೃತಿಗಳಿಂದ ಲೌಕಿಕವಾಗಿ ಎಷ್ಟೇ ಅರ್ಹತೆಯನ್ನು ಗಳಿಸಿರಲಿ ಅವನಲ್ಲಿ ದಿವ್ಯ ಗುಣಗಳಿರುವುದಿಲ್ಲ. ಆದುದರಿಂದ ರಣರಂಗದಲ್ಲಿ ತನ್ನ ನೆಂಟರು ಮತ್ತು ಸ್ನೇಹಿತರನ್ನು ಕಾಣುತ್ತಲೇ ತಮ್ಮತಮ್ಮಲ್ಲೇ ಹೋರಾಡಲು ನಿರ್ಧರಿಸಿದ್ದ ಅವರ ವಿಷಯದಲ್ಲಿ ಅರ್ಜುನನಿಗೆ ತಡೆಯಲಾರದಷ್ಟು ಕರುಣೆಯುಂಟಾಯಿತು. ತನ್ನ ಕಡೆಯ ಯೋಧರ ಬಗೆಗೆ ಅವನಿಗೆ ಮೊದಲಿನಿಂದ ಅನುಕಂಪ. ಆದರೆ ಶತ್ರುಪಕ್ಷದ ಸೈನಿಕರ ಮೇಲೆ ಎರಗಲಿರುವ ಮೃತ್ಯುವನ್ನು ಕಂಡು ಅವರ ವಿಷಯದಲ್ಲಿಯೂ ಮನಸ್ಸು ಕರಗಿತು. ಹೀಗೆ ಯೋಚಿಸುತ್ತಿರುವಂತೆಯೇ ಅವನ ದೇಹದ ಅವಯವಗಳು ನಡುಗಲಾರಂಭಿಸಿದವು. ಅವನ ಬಾಯಿಯು ಒಣಗಿತು. ಶತ್ರುಗಳ ಸಮರೋತ್ಸಾಹವನ್ನು ಕಂಡು ಅವನಿಗೆ ಅಚ್ಚರಿಯಾಯಿತು. ಅರ್ಜುನನ ರಕ್ತಸಂಬಂಧಿಗಳೇ ಆಗಿದ್ದ ಒಂದು ಇಡೀ ಸಮುದಾಯವೇ ಅವನೊಡನೆ ಹೋರಾಡಲು ಬಂದಿದ್ದಿತು. ಮೃದುಮನಸ್ಸಿನ ಭಕ್ತನಾದ ಅರ್ಜುನನಿಗೆ ಇದನ್ನು ತಡೆಯಲಾಗಲಿಲ್ಲ. ಅರ್ಜುನನ ಅವಯವಗಳು ನಡುಗುತ್ತಿದ್ದು ಬಾಯಿಯು ಒಣಗಿದುದಷ್ಟೇ ಅಲ್ಲ, ಅವನು ಅನುಕಂಪದಿಂದ ಕಣ್ಣೀರು ಸುರಿಸುತ್ತಿದ್ದ ಎನ್ನುವುದನ್ನು ಇಲ್ಲಿ ಹೇಳಿಲ್ಲದಿದ್ದರೂ ಸುಲಭವಾಗಿ ಕಲ್ಪಿಸಿಕೊಳ್ಳಬಹುದು. ಅರ್ಜುನನಲ್ಲಿ ಈ ಲಕ್ಷಣಗಳು ದೌರ್ಬಲ್ಯದಿಂದ ಮೂಡಿದುವಲ್ಲ. ಭಗವಂತನ ಪರಿಶುದ್ಧ ಭಕ್ತನ ಗುಣವಾದ ಮೃದುಮನಸ್ಸಿನಿಂದ ಮೂಡಿದವು. ಆದ್ದರಿಂದಲೇ,

**ಯಸ್ಯಾಸ್ತಿ ಭಕ್ತಿರ್ಭಗವತ್ಯಕಿಞ್ಚನಾ**
**ಸರ್ವೈರ್ಗುಣೈಸ್ತತ್ರ ಸಮಾಸತೇ ಸುರಾಃ |**
**ಹರಾವಭಕ್ತಸ್ಯ ಕುತೋ ಮಹದ್ಗುಣಾ**
**ಮನೋರಥೇನಾಸತಿ ಧಾವತೋ ಬಹಿಃ ||**

ಎಂದು ಹೇಳಿದೆ. ಎಂದರೆ ದೇವೋತ್ತಮ ಪುರುಷನಲ್ಲಿ ಅಸ್ಖಲಿತ ಭಕ್ತಿ ಇರುವಾತನಲ್ಲಿ ದೇವತೆಗಳಲ್ಲಿರುವ ಎಲ್ಲ ಸದ್ಗುಣಗಳೂ ಇರುತ್ತವೆ. ಆದರೆ ಭಗವಂತನ ಭಕ್ತನಲ್ಲದವನಿಗೆ ಲೌಕಿಕ ಅರ್ಹತೆಗಳು ಮಾತ್ರ ಇರುತ್ತವೆ. ಇವುಗಳಿಂದ ಪ್ರಯೋಜನವಿಲ್ಲ. ಇದಕ್ಕೆ ಕಾರಣವೆಂದರೆ ಆತನು ಮನಸ್ಸಿನ ಕ್ಷೇತ್ರದ ಅಂಚಿನಲ್ಲಿ ಸುಳಿದಾಡುತ್ತಿರುತ್ತಾನೆ ಮತ್ತು ಕಣ್ಣುಕುಕ್ಕುವ ಐಹಿಕ ಶಕ್ತಿಯಿಂದ ಖಂಡಿತವಾಗಿಯೂ ಆಕರ್ಷಿತನಾಗುತ್ತಾನೆ.

## ಶ್ಲೋಕ - 29

**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ |**
**ಗಾಣ್ಡೀವಂ ಸ್ರಂಸತೇ ಹಸ್ತಾತ್ ತ್ವಕ್ ಚೈವ ಪರಿದಹ್ಯತೇ ||೨೯||**

**ವೇಪಥುಃ**—ಶರೀರದ ಕಂಪನವು; **ಚ**—ಕೂಡಾ; **ಶರೀರೇ**—ದೇಹದಲ್ಲಿ; **ಮೇ**—ನನ್ನ; **ರೋಮ ಹರ್ಷಃ**—ರೋಮಾಂಚನವು; **ಚ**—ಸಹಾ; **ಜಾಯತೇ**—ಉಂಟಾಗುತ್ತದೆ; **ಗಾಣ್ಡೀವಮ್**—ಗಾಂಡೀವ

ಧನುಸ್ಸು; **ಸ್ರಂಸತೇ**—ಜಾರುತ್ತಿದೆ; **ಹಸ್ತಾತ್**—ಕೈಯಿಂದ; **ತ್ವಕ್**—ಚರ್ಮವೂ; **ಚ**—ಸಹಾ; **ಏವ**—ಖಂಡಿತವಾಗಿಯೂ; **ಪರಿದಹ್ಯತೇ**—ಉರಿಯುತ್ತಿದೆ.

### ಅನುವಾದ

**ನನ್ನ ಶರೀರವು ಕಂಪಿಸುತ್ತಿದೆ, ಕೂದಲು ನಿಮಿರುತ್ತಿದೆ, ಗಾಂಡೀವ ಧನುಸ್ಸು ಕೈಯಿಂದ ಜಾರುತ್ತಿದೆ ಮತ್ತು ನನ್ನ ಚರ್ಮವು ಉರಿಯುತ್ತಿದೆ.**

### ಭಾವಾರ್ಥ

ಶರೀರದ ಕಂಪನ ಮತ್ತು ರೋಮಾಂಚನಗಳಲ್ಲಿ ಎರಡು ವಿಧ. ವಿಶೇಷ ಆಧ್ಯಾತ್ಮಿಕ ಹರ್ಷೋನ್ಮಾದದಿಂದ ಅಥವಾ ಲೌಕಿಕ ಸನ್ನಿವೇಶದಲ್ಲಿ ವಿಶೇಷ ಭಯದಿಂದ ಇವು ಅನುಭವವಾಗುತ್ತವೆ. ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಭಯವಿರುವುದಿಲ್ಲ. ಈ ಸನ್ನಿವೇಶದಲ್ಲಿ ಅರ್ಜುನನಲ್ಲಿ ಕಾಣುವುದು ಲೌಕಿಕ ಭಯದ, ಎಂದರೆ ಪ್ರಾಣನಷ್ಟದ ಲಕ್ಷಣಗಳು. ಇತರ ಲಕ್ಷಣಗಳಿಂದಲೂ ಇದು ಸ್ಪಷ್ಟವಾಗುತ್ತದೆ. ಅವನು ಎಷ್ಟು ತಾಳ್ಮೆಗೆಟ್ಟಿದ್ದನೆಂದರೆ ಅವನ ಪ್ರಸಿದ್ಧ ಧನುಸ್ಸು ಗಾಂಡೀವ ಅವನ ಕೈಗಳಿಂದ ಜಾರುತ್ತಿತ್ತು. ಅವನೊಳಗಿನ ಹೃದಯವು ಉರಿಯುತ್ತಿದ್ದುದರಿಂದ ಚರ್ಮವು ಉರಿಯುತ್ತಿದೆ ಎನ್ನಿಸಿತು. ಇವೆಲ್ಲವೂ ಬದುಕನ್ನು ಕುರಿತ ಲೌಕಿಕ ಕಲ್ಪನೆಯಿಂದ ಉಂಟಾದಂತಹವು.

### ಶ್ಲೋಕ - 30

**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ |**
**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ||೩೦||**

**ನ**—ಇಲ್ಲ; **ಚ**—ಕೂಡ; **ಶಕ್ನೋಮಿ**—ಶಕ್ತನಾಗಿದ್ದೇನೆ; **ಅವಸ್ಥಾತುಮ್**—ನಿಲ್ಲಲು; **ಭ್ರಮತಿ**—ವಿಸ್ಮೃತಿಯಾಗುತ್ತಿದೆ; **ಇವ**—ಹಾಗೆ; **ಚ**—ಮತ್ತು; **ಮೇ**—ನನ್ನ; **ಮನಃ**—ಮನಸ್ಸು; **ನಿಮಿತ್ತಾನಿ**—ಕಾರಣಗಳನ್ನು; **ಚ**—ಕೂಡ; **ಪಶ್ಯಾಮಿ**—ನೋಡುತ್ತೇನೆ; **ವಿಪರೀತಾನಿ**—ಶುಭಕ್ಕೆ ತದ್ವಿರುದ್ಧವಾದ; **ಕೇಶವ**—ಕೇಶಿ ರಾಕ್ಷಸನನ್ನು ಕೊಂದವನೇ (ಕೃಷ್ಣನೇ).

### ಅನುವಾದ

**ಹೇ ಕೇಶವ, ಇಲ್ಲಿ ನಿಲ್ಲುವುದಕ್ಕೂ ನನಗೆ ಆಗುತ್ತಿಲ್ಲ. ನನ್ನನ್ನೇ ನಾನು ಮರೆಯುತ್ತಿದ್ದೇನೆ, ನನ್ನ ಮನಸ್ಸು ಸುತ್ತುತ್ತಿದೆ; ಅಶುಭಸೂಚಕ ಶಕುನಗಳೇ ಕಾಣುತ್ತಿವೆ.**

### ಭಾವಾರ್ಥ

ತಾಳ್ಮೆಗೆಟ್ಟುದರಿಂದ ಅರ್ಜುನನಿಗೆ ರಣಭೂಮಿಯಲ್ಲಿ ನಿಲ್ಲುವುದಕ್ಕೂ ಸಾಧ್ಯವಾಗಲಿಲ್ಲ. ಮನಸ್ಸಿನ ಈ ದೌರ್ಬಲ್ಯದಿಂದಾಗಿ ಅವನು ತನ್ನನ್ನೇ ಮರೆಯುತ್ತಿದ್ದ. ಲೌಕಿಕ ವಿಷಯಗಳಲ್ಲಿ ಅತಿಯಾದ ಮೋಹವು ಮನುಷ್ಯನನ್ನು ಇಂತಹ ದಿಗ್ಭ್ರಾಂತ ಸ್ಥಿತಿಗೆ ತರುತ್ತದೆ. **ಭಯಂ ದ್ವಿತೀಯಾಭಿನಿವೇಶತಃಸ್ಯಾತ್`** (ಭಾಗವತ -11.2.37); ಲೌಕಿಕ ಆಗುಹೋಗುಗಳಿಂದ ಅತಿಯಾಗಿ

ಪ್ರಕ್ಷುಬ್ಧಗೊಳ್ಳುವವರಲ್ಲಿ ಇಂತಹ ಭಯ ಮತ್ತು ಮನಸ್ಸಿನ ಸಮತೋಲನದ ನಷ್ಟಗಳು ಕಾಣಿಸಿಕೊಳ್ಳುತ್ತವೆ. ಅರ್ಜುನನು ರಣಭೂಮಿಯಲ್ಲಿ ನೋವನ್ನುಂಟುಮಾಡುವ ಸೋಲುಗಳನ್ನೇ ಕಲ್ಪಿಸಿಕೊಂಡ. ಶತ್ರುವಿನ ಮೇಲೆ ವಿಜಯವನ್ನು ಸಾಧಿಸಿದರೂ ಅವನ ಮನಸ್ಸಿಗೆ ಸುಖವಾಗುತ್ತಿರಲಿಲ್ಲ. **ನಿಮಿತ್ತಾನಿ ವಿಪರೀತಾನಿ** ಎನ್ನುವ ಮಾತುಗಳು ಮುಖ್ಯವಾದವು. ಒಬ್ಬ ಮನುಷ್ಯನು ತನ್ನ ನಿರೀಕ್ಷಣೆಗಳೆಲ್ಲವುಗಳಲ್ಲಿ ಸೋಲನ್ನು ಮಾತ್ರ ಕಂಡಾಗ ಆತ, ನಾನೇಕೆ ಇಲ್ಲಿದ್ದೇನೆ ಎಂದು ಪ್ರಶ್ನೆ ಮಾಡಿಕೊಳ್ಳುತ್ತಾನೆ. ಪ್ರತಿಯೊಬ್ಬನಿಗೂ ತನ್ನ ವಿಷಯದಲ್ಲಿ, ತನ್ನ ಯೋಗಕ್ಷೇಮದಲ್ಲಿ ಆಸಕ್ತಿ. ಯಾರಿಗೂ ಪರಮಾತ್ಮನಲ್ಲಿ ಆಸಕ್ತಿ ಇಲ್ಲ. ಕೃಷ್ಣನ ಸಂಕಲ್ಪದಿಂದ ಅರ್ಜುನನು ತನ್ನ ನಿಜವಾದ ಸ್ವಹಿತದ ಅಜ್ಞಾನವನ್ನು ಪ್ರದರ್ಶಿಸುತ್ತಿದ್ದಾನೆ. ಯಾರದೇ ಸ್ವಹಿತವಾದರೂ ನೆಲೆಸಿರುವುದು ವಿಷ್ಣುವಿನಲ್ಲಿ ಅಥವಾ ಕೃಷ್ಣನಲ್ಲಿ. ಬದ್ಧಾತ್ಮನು ಇದನ್ನು ಮರೆಯುತ್ತಾನೆ. ಆದುದರಿಂದ ಪ್ರಾಪಂಚಿಕ ಯಾತನೆಯನ್ನು ಅನುಭವಿಸುತ್ತಾನೆ. ಯುದ್ಧದಲ್ಲಿ ತನಗೆ ವಿಜಯವಾದರೆ ಅದು ತನ್ನ ದುಃಖಕ್ಕೆ ಮಾತ್ರ ಕಾರಣವಾಗುತ್ತದೆ ಎಂದು ಅರ್ಜುನನು ಭಾವಿಸಿದ.

## ಶ್ಲೋಕ - 31

**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ |**
**ನ ಕಾಙ್ಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ||೩೧||**

**ನ**—ಇಲ್ಲ; **ಚ**—ಕೂಡ; **ಶ್ರೇಯಃ**—ಶ್ರೇಯಸ್ಸನ್ನು; **ಅನುಪಶ್ಯಾಮಿ**—ಭವಿಷ್ಯದಲ್ಲಿ ನೋಡುವೆನು; **ಹತ್ವಾ**—ಕೊಲ್ಲುವುದರಿಂದ; **ಸ್ವಜನಮ್**—ಬಂಧುಗಳನ್ನು; **ಆಹವೇ**—ಯುದ್ಧದಲ್ಲಿ; **ನ ಕಾಙ್ಕ್ಷೇ**—ಅಪೇಕ್ಷಿಸಲಾರೆ; **ವಿಜಯಮ್**—ಜಯವನ್ನು; **ಕೃಷ್ಣ**—ಕೃಷ್ಣನೇ; **ನ**—ಇಲ್ಲ; **ಚ**—ಕೂಡಾ; **ರಾಜ್ಯಮ್**—ರಾಜ್ಯವನ್ನು; **ಸುಖಾನಿ**—ಅದರ ಸುಖಗಳನ್ನು; **ಚ**—ಕೂಡಾ.

## ಅನುವಾದ

**ಹೇ ಕೃಷ್ಣ, ಯುದ್ಧದಲ್ಲಿ ನನ್ನ ಬಂಧುಗಳನ್ನೇ ಕೊಲ್ಲುವುದರಿಂದ ನನಗೆ ಯಾವ ಶ್ರೇಯಸ್ಸೂ ಆಗಲಾರದು. ಅನಂತರವೂ ನಾನು ಯಾವುದೇ ವಿಜಯವನ್ನಾಗಲೀ ರಾಜ್ಯವನ್ನಾಗಲೀ ಸುಖವನ್ನಾಗಲೀ ಬಯಸಲಾರೆ.**

## ಭಾವಾರ್ಥ

ಸ್ವಹಿತವಿರುವುದು ವಿಷ್ಣುವಿನಲ್ಲಿ ಅಥವಾ ಕೃಷ್ಣನಲ್ಲಿ ಎನ್ನುವುದನ್ನು ಅರಿಯದೆ ಬದ್ಧಾತ್ಮರು ದೇಹಸಂಬಂಧಗಳಲ್ಲಿ ಆಸಕ್ತರಾಗುತ್ತಾರೆ. ಇಂತಹ ಸನ್ನಿವೇಶಗಳಿಂದ ಸುಖವನ್ನು ನಿರೀಕ್ಷಿಸುತ್ತಾರೆ. ಬದುಕನ್ನು ಕುರಿತ ಇಂತಹ ಕುರುಡು ಕಲ್ಪನೆಗಳಲ್ಲಿ ಅವರು ಪ್ರಾಪಂಚಿಕ ಸುಖದ ಮೂಲಗಳನ್ನೂ ಮರೆತುಬಿಡುತ್ತಾರೆ. ಅರ್ಜುನನು ಕ್ಷತ್ರಿಯನ ನೀತಿಸಂಹಿತೆಯನ್ನೂ ಮರೆತುಬಿಟ್ಟಂತೆ ಕಾಣುತ್ತದೆ. ಸೂರ್ಯಮಂಡಲವು ಬಹು ಶಕ್ತಿಯಿಂದ ಕೂಡಿದ್ದು ಅದರ ಪ್ರಭೆಯು ಕಣ್ಣನ್ನು ಕೋರೈಸುತ್ತದೆ. ಇಂತಹ ಸೂರ್ಯಮಂಡಲವನ್ನು ಪ್ರವೇಶಿಸಲು ಇಬ್ಬರು ಅರ್ಹರು ಎಂದು ಹೇಳುತ್ತಾರೆ — ಕೃಷ್ಣನೇ ನೀಡಿದ ಆಜ್ಞೆಯಂತೆ ರಣಭೂಮಿಯಲ್ಲಿ ಸೈನ್ಯದ ಮುಂಚೂಣಿಯಲ್ಲಿ

ಪ್ರಾಣಾರ್ಪಣೆ ಮಾಡುವವನು ಮತ್ತು ಆಧ್ಯಾತ್ಮಿಕ ಬೆಳವಣಿಗೆಗೆ ಮುಡಿಪಾದ ಸನ್ಯಾಸಿ. ಅರ್ಜುನನು ತನ್ನ ಬಂಧುಗಳನ್ನು ಕೊಲ್ಲುವುದಿರಲಿ, ಶತ್ರುಗಳನ್ನು ಕೊಲ್ಲಲೂ ಸಿದ್ಧನಾಗಿಲ್ಲ. ಹಸಿವಿಲ್ಲದಿರುವವನಿಗೆ ಅಡಿಗೆ ಮಾಡಲು ಹೇಗೆ ಇಷ್ಟವಿರುವುದಿಲ್ಲವೋ ಹಾಗೆ ಅರ್ಜುನನು ತನ್ನ ಬಂಧುಗಳನ್ನೂ ಕೊಲ್ಲುವುದರಿಂದ ತನಗೆ ಸುಖ ಉಂಟಾಗುವುದಿಲ್ಲ ಎಂದು ಯೋಚಿಸುತ್ತಾನೆ. ಆದುದರಿಂದ ಅವನಿಗೆ ಯುದ್ಧ ಮಾಡಲು ಇಷ್ಟವಿಲ್ಲ. ಈಗ ಅವನು ಕಾಡಿಗೆ ಹೋಗಿ ನಿರಾಶೆಯಲ್ಲಿ ಏಕಾಂತದಲ್ಲಿ ಬದುಕಲು ನಿಶ್ಚಯಿಸಿದ್ದಾನೆ. ಆದರೆ ಕ್ಷತ್ರಿಯನಾದವನು ಜೀವನೋಪಾಯಕ್ಕಾಗಿ ಬೇರಾವ ವೃತ್ತಿಯನ್ನು ಅನುಸರಿಸಲು ಸಾಧ್ಯವಿಲ್ಲ. ಆದುದರಿಂದ ಅವನಿಗೆ ಒಂದು ರಾಜ್ಯವು ಬೇಕು. ಆದರೆ ಅರ್ಜುನನಿಗೆ ರಾಜ್ಯವಿಲ್ಲ. ರಾಜ್ಯವನ್ನು ಪಡೆಯಲು ಅವನಿಗೆ ಇರುವುದು ಒಂದೇ ಮಾರ್ಗ. ತನ್ನ ಸೋದರರೊಂದಿಗೆ ಮತ್ತು ದಾಯಾದಿಗಳೊಂದಿಗೆ ಯುದ್ಧಮಾಡಿ, ತನ್ನ ತಂದೆಯಿಂದ ಬಂದ ರಾಜ್ಯವನ್ನು ಮರಳಿ ಪಡೆಯುವುದು. ಆದರೆ ಇದನ್ನು ಮಾಡಲು ಅವನಿಗೆ ಇಷ್ಟವಿಲ್ಲ. ಆದುದರಿಂದ ಅರ್ಜುನನು ತಾನು ಹತಾಶನಾಗಿ ಒಬ್ಬಂಟಿಯಾಗಿ ಕಾಡಿನಲ್ಲಿ ವಾಸಿಸಲು ಮಾತ್ರ ಯೋಗ್ಯ ಎಂದು ಭಾವಿಸುತ್ತಾನೆ.

## ಶ್ಲೋಕ 32 - 35

**ಕಿಂ ನೋ ರಾಜ್ಯೇನ ಗೋವಿನ್ದ ಕಿಂ ಭೋಗೈರ್ಜೀವಿತೇನ ವಾ |**
**ಯೇಷಾಮರ್ಥೇ ಕಾಙ್ಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ||೩೨||**

**ತ ಇಮೇऽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ |**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ||೩೩||**

**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಮ್ಬನ್ಧಿನಸ್ತಥಾ |**
**ಏತಾನ್ನ ಹನ್ತುಮಿಚ್ಛಾಮಿ ಘ್ನತೋऽಪಿ ಮಧುಸೂದನ ||೩೪||**

**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ |**
**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ||೩೫||**

**ಕಿಮ್**—ಏನು ಪ್ರಯೋಜನ; **ನಃ**—ನಮಗೆ; **ರಾಜ್ಯೇನ**—ರಾಜ್ಯದಿಂದ; **ಗೋವಿನ್ದ**—ಹೇ ಕೃಷ್ಣನೇ; **ಕಿಮ್**—ಏನು; **ಭೋಗೈಃ**—ಭೋಗದಿಂದ; **ಜೀವಿತೇನ**—ಜೀವನದಿಂದ; **ವಾ**—ಅಥವಾ; **ಯೇಷಾಮ್**—ಯಾರ; **ಅರ್ಥೇ**—ಸಲುವಾಗಿ; **ಕಾಙ್ಕ್ಷಿತಮ್**—ಅಪೇಕ್ಷಿಸುವುದು; **ನಃ**—ನಮ್ಮಿಂದ; **ರಾಜ್ಯಮ್**—ರಾಜ್ಯವನ್ನು; **ಭೋಗಾಃ**—ಲೌಕಿಕ ಸುಖಗಳನ್ನು; **ಸುಖಾನಿ**—ಸಕಲ ಸುಖಗಳನ್ನೂ; **ಚ**—ಕೂಡ; **ತೇ**—ಅವೆಲ್ಲವೂ; **ಇಮೇ**—ಇವು; **ಅವಸ್ಥಿತಾಃ**—ಇವೆ; **ಯುದ್ಧೇ**—ಯುದ್ಧ ಭೂಮಿಯಲ್ಲಿ; **ಪ್ರಾಣಾನ್**—ಪ್ರಾಣಗಳನ್ನು; **ತ್ಯಕ್ತ್ವಾ**—ತ್ಯಜಿಸಿ; **ಧನಾನಿ**—ಸಂಪತ್ತುಗಳನ್ನೂ; **ಚ**—ಕೂಡ; **ಆಚಾರ್ಯಾಃ**—ಆಚಾರ್ಯರು; **ಪಿತರಃ**—ಪಿತೃಗಳು; **ಪುತ್ರಾಃ**—ಮಕ್ಕಳು; **ತಥಾ**—ಹಾಗೆಯೇ; **ಏವ**—ನಿಶ್ಚಿತವಾಗಿಯೂ; **ಚ**—ಕೂಡ; **ಪಿತಾಮಹಾಃ**—ಪಿತಾಮಹರು; **ಮಾತುಲಾಃ**—ಸೋದರ ಮಾವಂದಿರು; **ಶ್ವಶುರಾಃ**—ಮಾವಂದಿರು; **ಪೌತ್ರಾಃ**—ಮೊಮ್ಮಕ್ಕಳು; **ಶ್ಯಾಲಾಃ**—ಭಾವಂದಿರು; **ಸಮ್ಬನ್ಧಿನಃ**—ಬಂಧುಗಳು; **ತಥಾ**—ಹಾಗೆಯೇ; **ಏತಾನ್**—ಇವರೆಲ್ಲರನ್ನೂ; **ನ**—ಎಂದಿಗೂ

ಇಲ್ಲ; **ಹನ್ತುಮ್**—ಕೊಲ್ಲಲು; **ಇಚ್ಛಾಮಿ**—ಇಚ್ಛಿಸುತ್ತೇನೆ; **ಘ್ನತಃ**—ಕೊಲ್ಲಲ್ಪಟ್ಟರೂ; **ಅಪಿ**—ಕೂಡ; **ಮಧುಸೂದನ**—ಮಧುವೆಂಬ ರಾಕ್ಷಸನನ್ನು ಕೊಂದವನೇ (ಕೃಷ್ಣನೇ); **ಅಪಿ**—ಆದರೂ; **ತ್ರೈಲೋಕ್ಯ**—ಮೂರುಲೋಕಗಳ; **ರಾಜ್ಯಸ್ಯ**—ರಾಜ್ಯದ; **ಹೇತೋಃ**—ಬದಲಾಗಿ; **ಕಿಮ್ ನು**—ಹೇಳುವುದೇನು; **ಮಹೀಕೃತೇ**—ಭೂಮಿಗಾಗಿ; **ನಿಹತ್ಯ**—ಕೊಂದು; **ಧಾರ್ತರಾಷ್ಟ್ರಾನ್**—ಧೃತರಾಷ್ಟ್ರನ ಮಕ್ಕಳನ್ನು; **ನಃ**—ನಮಗೆ; **ಕಾ**—ಏನು; **ಪ್ರೀತಿಃ**—ಸಂತೋಷವು; **ಸ್ಯಾತ್**—ಇರುವುದು; **ಜನಾರ್ದನ**—ಸಕಲ ಜೀವಿಗಳ ರಕ್ಷಕನೇ.

## ಅನುವಾದ

**ಹೇ ಗೋವಿಂದ, ಯಾರಿಗೋಸ್ಕರ ನಾವು ರಾಜ್ಯವನ್ನು ಸುಖವನ್ನು ಮತ್ತು ಬದುಕನ್ನು ಸಹ ಬಯಸುತ್ತೇವೆಯೋ ಅವರೇ ನಮ್ಮ ವಿರುದ್ಧವಾಗಿ ಯುದ್ಧಕ್ಕೆ ಸನ್ನದ್ಧರಾಗಿರುವಾಗ ಅವುಗಳಿಂದ ಏನು ಪ್ರಯೋಜನ? ಹೇ ಮಧುಸೂದನ, ಆಚಾರ್ಯರು, ಪಿತರು, ಪುತ್ರರು, ಪಿತಾಮಹರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದಂದಿರು ಮತ್ತು ಇತರ ಬಂಧುಗಳು ತಮ್ಮ ರಾಜ್ಯಗಳನ್ನು ಧನವನ್ನು ತ್ಯಜಿಸಲು ಸಿದ್ಧರಾಗಿ ನನ್ನ ಮುಂದೆ ನಿಂತಿದ್ದಾರೆ. ಅವರು ನನ್ನನ್ನು ಕೊಲ್ಲಬಹುದು, ಆದರೂ ಅವರನ್ನು ಕೊಲ್ಲಲು ನಾನೇಕೆ ಅಪೇಕ್ಷಿಸಬೇಕು? ಹೇ ಜನಾರ್ದನ, ಈ ಭೂಮಿಯ ಮಾತಿರಲಿ, ಮೂರುಲೋಕಗಳನ್ನು ನನಗೆ ಕೊಡುವುದಾದರೂ ನಾನು ಇವರೊಡನೆ ಯುದ್ಧಮಾಡಲು ಸಿದ್ಧನಾಗಿಲ್ಲ. ಧೃತರಾಷ್ಟ್ರನ ಮಕ್ಕಳನ್ನು ಕೊಂದು ನಮಗೆ ಯಾವ ಸಂತೋಷ ಬಂದೀತು?**

## ಭಾವಾರ್ಥ

ಕೃಷ್ಣನು ಗೋವುಗಳ ಮತ್ತು ಇಂದ್ರಿಯಗಳ ಎಲ್ಲ ಸಂತೋಷಗಳಿಗೆ ಕಾರಣನಾದವನು. ಇದರಿಂದಲೇ ಅರ್ಜುನನು ಶ್ರೀಕೃಷ್ಣನನ್ನು ಗೋವಿಂದ ಎಂದು ಕರೆದಿದ್ದು. ಈ ಅರ್ಥವತ್ತಾದ ಪದವನ್ನು ಬಳಸಿ, ತನ್ನ ಇಂದ್ರಿಯಗಳಿಗೆ ಯಾವುದು ತೃಪ್ತಿಯನ್ನು ಕೊಡಬಲ್ಲದು ಎನ್ನುವುದನ್ನು ಕೃಷ್ಣನು ಅರ್ಥಮಾಡಿಕೊಳ್ಳಬೇಕು ಎಂದು ಅರ್ಜುನನು ಸೂಚಿಸುತ್ತಾನೆ. ಆದರೆ ಗೋವಿಂದನು ಇರುವುದು ನಮ್ಮ ಇಂದ್ರಿಯಗಳನ್ನು ತೃಪ್ತಿಗೊಳಿಸುವುದಕ್ಕಲ್ಲ. ನಾವು ಗೋವಿಂದನ ಇಂದ್ರಿಯಗಳನ್ನು ತೃಪ್ತಿಗೊಳಿಸಲು ಪ್ರಯತ್ನಿಸಿದರೆ ನಮ್ಮ ಪ್ರಯತ್ನವಿಲ್ಲದೆಯೇ ನಮ್ಮ ಇಂದ್ರಿಯಗಳು ತೃಪ್ತಿ ಹೊಂದುತ್ತವೆ. ಪ್ರಾಪಂಚಿಕವಾಗಿ ಪ್ರತಿಯೊಬ್ಬನೂ ತನ್ನ ಇಂದ್ರಿಯಗಳನ್ನು ತೃಪ್ತಿಪಡಿಸಲು ಬಯಸುತ್ತಾನೆ ಮತ್ತು ತನ್ನ ಅಪ್ಪಣೆಯಂತೆ ದೇವರು ಈ ತೃಪ್ತಿಗಾಗಿ ಎಲ್ಲವನ್ನೂ ಒದಗಿಸಬೇಕು ಎಂದು ಬಯಸುತ್ತಾನೆ. ದೇವರು ಜೀವಿಗಳ ಯೋಗ್ಯತೆಗಳಿಗೆ ಅನುಗುಣವಾಗಿ ಅವರ ಇಂದ್ರಿಯಗಳಿಗೆ ತೃಪ್ತಿ ಕೊಡುತ್ತಾನೆ. ಆದರೆ ಅವರು ಹಂಬಲಿಸುವಷ್ಟು ತೃಪ್ತಿಯನ್ನು ಕೊಡುವುದಿಲ್ಲ. ಆದರೆ ಯಾರೇ ಆಗಲಿ ಇದರ ವಿರುದ್ಧವಾದ ದಾರಿಯನ್ನು ಹಿಡಿದರೆ ಎಂದರೆ ತನ್ನ ಇಂದ್ರಿಯಗಳ ತೃಪ್ತಿಯನ್ನು ಬಯಸದೆ ಗೋವಿಂದನ ಇಂದ್ರಿಯಗಳನ್ನು ತೃಪ್ತಿಪಡಿಸಲು ಪ್ರಯತ್ನಿಸಿದರೆ, ಆಗ ಗೋವಿಂದನ ಕೃಪೆಯಿಂದ ಜೀವಿಯ ಎಲ್ಲ ಬಯಕೆಗಳೂ ಈಡೇರುತ್ತವೆ. ತನ್ನ ಕುಲದ ಮತ್ತು ಕುಟುಂಬದ ಸದಸ್ಯರ ವಿಷಯದಲ್ಲಿ ಅರ್ಜುನನಿಗೆ ಇರುವ ಗಾಢವಾದ ಪ್ರೀತಿಯು ಇಲ್ಲಿ ವ್ಯಕ್ತವಾಗುತ್ತದೆ. ಅವನು ಯುದ್ಧಮಾಡಲು ಸಿದ್ಧನಿಲ್ಲ. ಯಾರಿಗೇ ಆದರೂ ತನ್ನ

ಸಂಪತ್ತನ್ನು ಬಂಧುಮಿತ್ರರಿಗೆ ತೋರಿಸಬೇಕೆಂಬ ಅಪೇಕ್ಷೆ ಇರುತ್ತದೆ. ತನ್ನ ಬಂಧುಮಿತ್ರರೆಲ್ಲ ರಣರಂಗದಲ್ಲಿ ಸಾಯುತ್ತಾರೆ. ಆದ್ದರಿಂದ ವಿಜಯವನ್ನು ಗಳಿಸಿದಮೇಲೆ ತನ್ನ ಸಂಪತ್ತನ್ನು ಅವರೊಂದಿಗೆ ಹಂಚಿಕೊಳ್ಳುವುದು ಸಾಧ್ಯವಾಗುವುದಿಲ್ಲ ಎಂದು ಅರ್ಜುನನ ಆತಂಕ. ಇದು ಐಹಿಕ ಬದುಕಿನ ಸಹಜವಾದ ಲೆಕ್ಕಾಚಾರ. ಅಲೌಕಿಕ ಬದುಕಾದರೋ ಸಂಪೂರ್ಣವಾಗಿ ಭಿನ್ನವಾದದ್ದು. ಭಕ್ತನಾದವನು ಭಗವಂತನ ಅಪೇಕ್ಷೆಗಳನ್ನು ಪೂರೈಸಲು ಬಯಸುವುದರಿಂದ, ಭಗವಂತನು ಅನುಮತಿಕೊಟ್ಟರೆ ಅವನು ಭಗವಂತನ ಸೇವೆಗಾಗಿ ಎಲ್ಲ ಬಗೆಯ ಸಂಪತ್ತನ್ನೂ ಸ್ವೀಕರಿಸಬಹುದು. ಆದರೆ ಭಗವಂತನು ಅನುಮತಿ ನೀಡದಿದ್ದರೆ ಒಂದು ಕಾಸನ್ನೂ ಸ್ವೀಕರಿಸಬಾರದು. ಅರ್ಜುನನಿಗೆ ತನ್ನ ಬಂಧುಗಳನ್ನು ಕೊಲ್ಲಲು ಇಷ್ಟವಿರಲಿಲ್ಲ. ಅವರನ್ನು ಕೊಲ್ಲುವುದೇ ಅಗತ್ಯವಾದರೆ ಕೃಷ್ಣನೇ ಕೊಲ್ಲಲಿ ಎಂದು ಬಯಸಿದ. ಅವರು ರಣಭೂಮಿಗೆ ಬರುವ ಮೊದಲೇ ಕೃಷ್ಣನು ಅವರನ್ನು ಕೊಂದಿದ್ದಾನೆ. ತಾನೇನಿದ್ದರೂ ಕೃಷ್ಣನ ಸಾಧನವಾಗಬೇಕು ಅಷ್ಟೆ ಎಂಬುದು ಈ ಘಟ್ಟದಲ್ಲಿ ಅವನಿಗೆ ತಿಳಿದಿರಲಿಲ್ಲ. ಈ ಸಂಗತಿಯನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಯಪಡಿಸಿದೆ. ಭಗವಂತನ ಸಹಜ ಭಕ್ತನಾದ ಅರ್ಜುನನಿಗೆ ದುಷ್ಕೃತ್ಯಮಾಡಿದ ತನ್ನ ದಾಯಾದಿಗಳು ಮತ್ತು ಸೋದರರಿಗೆ ಪ್ರತೀಕಾರ ಮಾಡಲು ಇಷ್ಟವಿರಲಿಲ್ಲ. ಆದರೆ ಅವರೆಲ್ಲರೂ ಹತರಾಗಬೇಕು ಎನ್ನುವುದು ಭಗವಂತನ ಯೋಜನೆ. ಭಗವಂತನ ಭಕ್ತನು ದುಷ್ಕರ್ಮಿಯ ವಿರುದ್ಧ ಪ್ರತೀಕಾರ ಮಾಡುವುದಿಲ್ಲ, ಆದರೆ ದುಷ್ಕರ್ಮಿಯು ಭಕ್ತನಿಗೆ ಮಾಡುವ ಯಾವುದೇ ಕೆಡುಕನ್ನು ಭಗವಂತನು ಸಹಿಸುವುದಿಲ್ಲ. ತನ್ನ ವಿರುದ್ಧವಾಗಿ ಅಪರಾಧ ಮಾಡಿದರೆ ಭಗವಂತನು ಅದನ್ನು ಕ್ಷಮಿಸಬಲ್ಲ. ಆದರೆ ತನ್ನ ಭಕ್ತರಿಗೆ ಕೆಡುಕನ್ನು ಮಾಡಿದವರನ್ನು ಕ್ಷಮಿಸುವುದಿಲ್ಲ. ಆದ್ದರಿಂದ ಅರ್ಜುನನು ದುಷ್ಕರ್ಮಿಗಳನ್ನು ಕ್ಷಮಿಸಲು ಬಯಸಿದರೂ ಭಗವಂತನು ಅವರನ್ನು ಕೊಲ್ಲಲು ಸಂಕಲ್ಪಿಸಿದ್ದ.

## ಶ್ಲೋಕ - 36

**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ |**
**ತಸ್ಮಾನ್ನಾರ್ಹಾ ವಯಂ ಹನ್ತುಮ್ ಧಾರ್ತರಾಷ್ಟ್ರಾನ್ ಸ-ಬಾನ್ಧವಾನ್ |**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ||೩೬||**

**ಪಾಪಮ್**—ಪಾಪಗಳು; **ಏವ**—ಖಂಡಿತವಾಗಿ; **ಆಶ್ರಯೇತ್**—ಆಶ್ರಯಿಸುವುದು; **ಅಸ್ಮಾನ್**—ನಮ್ಮನ್ನು; **ಹತ್ವಾ**—ಕೊಂದು; **ಏತಾನ್**—ಈ ಎಲ್ಲ; **ಆತತಾಯಿನಃ**—ಆಕ್ರಮಣಕಾರಿಗಳನ್ನು; **ತಸ್ಮಾತ್**—ಆದ್ದರಿಂದ; **ನ ಅರ್ಹಾ**—ಅರ್ಹರಲ್ಲ; **ವಯಮ್**—ನಾವು; **ಹನ್ತುಮ್**—ಕೊಲ್ಲಲು; **ಧಾರ್ತರಾಷ್ಟ್ರಾನ್**—ಧೃತರಾಷ್ಟ್ರನ ಮಕ್ಕಳನ್ನು; **ಸ ಬಾನ್ಧವಾನ್**—ಮಿತ್ರರೊಡನೆ; **ಸ್ವ ಜನಮ್**—ಸ್ವಜನರನ್ನು; **ಹಿ**—ಖಂಡಿತವಾಗಿಯೂ; **ಕಥಮ್**—ಹೇಗೆ; **ಹತ್ವಾ**—ಕೊಂದು; **ಸುಖಿನಃ**—ಸುಖಿಗಳು; **ಸ್ಯಾಮ**—ಆಗುವೆವು; **ಮಾಧವ**—ಲಕ್ಷ್ಮೀರಮಣನಾದ ಕೃಷ್ಣನೇ.

## ಅನುವಾದ

**ಇಂತಹ ಆಕ್ರಮಣಕಾರರನ್ನು ಕೊಂದರೆ ನಮಗೆ ಪಾಪವೇ ಘಟಿಸುತ್ತದೆ. ಆದ್ದರಿಂದ ಧೃತರಾಷ್ಟ್ರನ ಮಕ್ಕಳನ್ನೂ ನಮ್ಮ ಸ್ನೇಹಿತರನ್ನೂ ನಾವು ಕೊಲ್ಲುವುದು ಸರಿಯಲ್ಲ. ಭಾಗ್ಯದೇವತೆಯ ಪತಿಯಾದ**

**ಮಾಧವನೇ, ನಮ್ಮ ಬಂಧುಗಳನ್ನೇ ಕೊಂದು ನಾವು ಏನನ್ನು ಪಡೆಯುತ್ತೇವೆ? ನಾವು ಸುಖವಾಗಿರಲು ಹೇಗೆ ಸಾಧ್ಯ?**

## ಭಾವಾರ್ಥ

ವೇದಗಳ ಪ್ರಕಾರ ದುರಾಕ್ರಮಣ ಮಾಡುವವರು ಆರು ಬಗೆಯ ಜನ—(1) ವಿಷಹಾಕುವವನು, (2) ಮನೆಗೆ ಬೆಂಕಿ ಹಚ್ಚುವವನು, (3) ಮಾರಕ ಆಯುಧಗಳಿಂದ ಹಲ್ಲೆ ಮಾಡುವವನು, (4) ಸಂಪತ್ತನ್ನು ಲೂಟಿಮಾಡುವವನು, (5) ಮತ್ತೊಬ್ಬನ ನೆಲವನ್ನು ವಶಮಾಡಿಕೊಳ್ಳುವವನು ಮತ್ತು (6) ಮತ್ತೊಬ್ಬನ ಹೆಂಡತಿಯನ್ನು ಅಪಹರಿಸುವವನು. ಇಂತಹ ಆಕ್ರಮಣಕಾರರನ್ನು ಕೂಡಲೇ ಕೊಲ್ಲಬೇಕು. ಹಾಗೆ ಕೊಲ್ಲುವುದರಿಂದ ಪಾಪವೇನೂ ಬರುವುದಿಲ್ಲ. ಇಂತಹ ಆಕ್ರಮಣಕಾರರನ್ನು ಕೊಲ್ಲುವುದು ಸಾಮಾನ್ಯ ಮನುಷ್ಯನಿಗೂ ಯೋಗ್ಯಕಾರ್ಯ. ಆದರೆ ಅರ್ಜುನನು ಸಾಮಾನ್ಯ ಮನುಷ್ಯನಾಗಿರಲಿಲ್ಲ. ಅವನದು ಸಂತ ಸದೃಶ ಸ್ವಭಾವ. ಆದ್ದರಿಂದ ಅವನು ಸಂತನಂತೆಯೇ ಅವರೊಡನೆ ನಡೆದುಕೊಳ್ಳಲು ಬಯಸಿದ. ಆದರೆ ಇಂತಹ ಸಂತನ ರೀತಿ ಕ್ಷತ್ರಿಯನಿಗಲ್ಲ. ಒಂದು ರಾಜ್ಯದ ಆಡಳಿತದಲ್ಲಿ ಹೊಣೆಗಾರಿಕೆಯುಳ್ಳ ಮನುಷ್ಯನು ಸಂತ ಸದೃಶನಾಗಿರಬೇಕೆಂದು ಬಯಸುತ್ತಾರೆ. ನಿಜ, ಆದರೆ ಅವನು ಹೇಡಿಯಾಗಿರಬಾರದು. ಉದಾಹರಣೆಗೆ ಶ್ರೀರಾಮ. ಅವನದು ಎಂತಹ ಸ್ವಭಾವ ಎಂದರೆ ಈಗಲೂ ಜನರು ರಾಮರಾಜ್ಯದಲ್ಲಿರಬೇಕೆಂದು ಬಯಸುತ್ತಾರೆ. ಆದರೆ ರಾಮನು ಎಂದೂ ಹೇಡಿಯಂತೆ ನಡೆದುಕೊಳ್ಳಲಿಲ್ಲ. ರಾಮನ ಪತ್ನಿ ಸೀತೆಯನ್ನು ಅಪಹರಿಸಿದ ರಾವಣನು ರಾಮನ ವಿರುದ್ಧ ಆಕ್ರಮಣ ಮಾಡಿದವನೇ; ಜಗತ್ತಿನ ಚರಿತ್ರೆಯಲ್ಲೇ ಸಾಮ್ಯವಿಲ್ಲದಂತಹ ಪಾಠವನ್ನು ಶ್ರೀರಾಮನು ಅವನಿಗೆ ಕಲಿಸಿದ. ಆದರೆ ಅರ್ಜುನನ ವಿರುದ್ಧ ಆಕ್ರಮಣ ಮಾಡಿದವರು ವಿಶೇಷ ವರ್ಗದವರು; ಎಂದರೆ ಅವನ ತಾತ, ಅವನ ಗುರು, ಸ್ನೇಹಿತರು, ಮಕ್ಕಳು, ಮೊಮ್ಮಕ್ಕಳು ಮೊದಲಾದವರು ಎಂಬುದನ್ನು ಪರಿಗಣಿಸಬೇಕು. ಅದರಿಂದಾಗಿ ಅರ್ಜುನನು ಸಾಮಾನ್ಯ ಅತಿಕ್ರಮಣಕಾರರ ವಿರುದ್ಧ ಅಗತ್ಯವೆನಿಸುವ ತೀವ್ರಕ್ರಮಗಳನ್ನು ಕೈಗೊಳ್ಳಬಾರದು ಎಂದು ಭಾವಿಸಿದ. ಅಲ್ಲದೆ, ಸಂತಸ್ವಭಾವದವರು ಕ್ಷಮೆಯನ್ನು ತೋರಬೇಕೆಂದು ಆದೇಶವಿದೆ. ಸಂತಸ್ವಭಾವದವರಿಗೆ ಯಾವುದೇ ರಾಜಕೀಯ ತುರ್ತಿಗಿಂತ ಇಂತಹ ಆದೇಶಗಳು ಮುಖ್ಯ. ರಾಜಕೀಯ ಕಾರಣಗಳಿಗಾಗಿ ತನ್ನ ಬಂಧುಗಳನ್ನು ಕೊಲ್ಲುವುದಕ್ಕಿಂತ ಧರ್ಮ ಮತ್ತು ಸಂತಸಹಜ ರೀತಿ, ಈ ಕಾರಣಗಳಿಗಾಗಿ ಅವರನ್ನು ಕ್ಷಮಿಸುವುದೇ ಉತ್ತಮ ಎಂದು ಅರ್ಜುನನು ಭಾವಿಸಿದ. ತಾತ್ಕಾಲಿಕವಾದ ದೇಹಸುಖಕ್ಕಾಗಿ ಮಾತ್ರ ಅವರನ್ನು ಕೊಲ್ಲುವುದು ಯೋಗ್ಯವಲ್ಲ ಎಂದು ಅವನು ಭಾವಿಸಿದ. ಅವರನ್ನು ಕೊಂದು ಪಡೆಯುವ ರಾಜ್ಯವಾಗಲಿ ಸುಖವಾಗಲಿ ಶಾಶ್ವತವೇನೂ ಅಲ್ಲ. ಹೀಗಿರುವಾಗ ತನ್ನ ಬಂಧುಗಳನ್ನೇ ಕೊಂದು ತನ್ನ ಜೀವಕ್ಕೂ ಶಾಶ್ವತವಾದ ಮುಕ್ತಿಗೂ ಆಪತ್ತನ್ನೇಕೆ ತಂದುಕೊಳ್ಳಬೇಕು? ಅರ್ಜುನನು ಕೃಷ್ಣನನ್ನು 'ಮಾಧವ' ಅಥವಾ ಭಾಗ್ಯದೇವತೆಯ ಪತಿ ಎಂದು ಕರೆಯುವುದೂ ಅರ್ಥವತ್ತಾಗಿದೆ. ಕೃಷ್ಣನು ಭಾಗ್ಯದೇವತೆಯ ಪತಿ. ಅವನು ತನ್ನನ್ನು ದೌರ್ಭಾಗ್ಯಕರವಾದ ದಾರಿಯಲ್ಲಿ ನಡೆಯುವಂತೆ ಪ್ರೇರಿಸಬಾರದು ಎಂದು ಅರ್ಜುನ ಹೇಳಬಯಸಿದ. ಆದರೆ ಕೃಷ್ಣನು ಭಕ್ತರಿಗೆ ಮಾತ್ರವಲ್ಲ, ಯಾರಿಗೂ ದುರದೃಷ್ಟವನ್ನು ತರುವುದಿಲ್ಲ.

## ಶ್ಲೋಕ 37-38

**ಯದ್ಯಪ್ಯೇತೇ ನ ಪಶ್ಯನ್ತಿ ಲೋಭೋಪಹತಚೇತಸಃ |**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ||೩೭||**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ |**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ||೩೮||**

**ಯದಿ**—ಆದರೆ; **ಅಪಿ**—ಕೂಡ; **ಏತೇ**—ಅವರು; **ನ ಪಶ್ಯನ್ತಿ**—ನೋಡುವುದಿಲ್ಲ; **ಲೋಭ**—ದುರಾಸೆಯಿಂದ; **ಉಪಹತ**—ಪ್ರಭಾವಿತವಾದ; **ಚೇತಸಃ**—ಹೃದಯವುಳ್ಳ; **ಕುಲಕ್ಷಯ**—ಕುಲನಾಶದಲ್ಲಿ; **ಕೃತಮ್**—ಮಾಡಲಾದ; **ದೋಷಮ್**—ತಪ್ಪನ್ನು; **ಮಿತ್ರದ್ರೋಹೇ**—ಸ್ನೇಹಿತರೊಂದಿಗೆ ಕಾದಾಡುವುದರಲ್ಲಿ; **ಚ**—ಕೂಡ; **ಪಾತಕಮ್**—ಪಾಪಪ್ರತಿಕ್ರಿಯೆಗಳನ್ನು; **ಕಥಮ್**—ಏಕೆ; **ನ ಜ್ಞೇಯಮ್**—ತಿಳಿಯಲ್ಪಡಬಾರದು; **ಅಸ್ಮಾಭಿಃ**—ನಮ್ಮಿಂದ; **ಪಾಪಾತ್**—ಪಾಪಗಳಿಂದ; **ಅಸ್ಮಾತ್**—ಈ; **ನಿವರ್ತಿತುಮ್**—ಸ್ಥಗಿತರಾಗಲು; **ಕುಲಕ್ಷಯ**— ವಂಶನಾಶದಲ್ಲಿ; **ಕೃತಮ್**—ಮಾಡಲಾದ; **ದೋಷಮ್**—ಅಪರಾಧವನ್ನು; **ಪ್ರಪಶ್ಯದ್ಭಿಃ**—ನೋಡಬಲ್ಲವರಾದ; **ಜನಾರ್ದನ**—ಕೃಷ್ಣನೇ.

## ಅನುವಾದ

**ಹೇ ಜನಾರ್ದನ, ಈ ಜನರ ಹೃದಯಗಳು ಸಂಪೂರ್ಣವಾಗಿ ದುರಾಶೆಗೆ ವಶವಾಗಿವೆ. ತಮ್ಮ ಕುಟುಂಬದವರನ್ನು ಕೊಲ್ಲುವುದರಲ್ಲಾಗಲೀ ಮಿತ್ರ ದ್ರೋಹದಲ್ಲಾಗಲಿ ಇವರಿಗೆ ದೋಷವೇನೂ ಕಾಣುವುದಿಲ್ಲ. ಆದರೆ ಕುಲಕ್ಷಯವನ್ನು ಮಾಡುವುದು ಪಾಪವೆಂದು ತಿಳಿದ ನಾವು ಈ ಪಾಪಕಾರ್ಯವನ್ನೇಕೆ ಮಾಡಬೇಕು?**

## ಭಾವಾರ್ಥ

ಎದುರಾಳಿಯು ಯುದ್ಧಕ್ಕಾಗಲಿ ಜೂಜಿಗಾಗಲಿ ಆಹ್ವಾನಿಸಿದಾಗ ಕ್ಷತ್ರಿಯನಾದವನು ತಿರಸ್ಕರಿಸಲಾಗದು. ಇಂತಹ ಕರ್ತವ್ಯಕ್ಕೆ ಬದ್ಧನಾದ ಅರ್ಜುನನು ಯುದ್ಧ ಮಾಡಲು ನಿರಾಕರಿಸುವಂತಿರಲಿಲ್ಲ. ದುರ್ಯೋಧನನ ಪಕ್ಷವು ಅವನಿಗೆ ಸವಾಲು ಎಸೆದಿತ್ತು. ಈ ಸನ್ನಿವೇಶದಲ್ಲಿ ಎದುರು ಪಕ್ಷವು ಇಂತಹ ಸವಾಲಿನ ಪರಿಣಾಮಕ್ಕೆ ಕುರುಡಾಗಿರಬಹುದು ಎನ್ನುವುದನ್ನೂ ಅರ್ಜುನನು ಪರಿಗಣಿಸಿದ. ಅವನು ಇದರ ದುಷ್ಪರಿಣಾಮಗಳನ್ನು ಕಾಣಬಲ್ಲವನಾಗಿದ್ದ. ಆದುದರಿಂದ ಅವನು ಸವಾಲನ್ನು ಒಪ್ಪಿಕೊಳ್ಳುವುದು ಸಾಧ್ಯವಿರಲಿಲ್ಲ. ಪರಿಣಾಮ ಒಳ್ಳೆಯದಾಗಿದ್ದಾಗ ಮಾತ್ರ ಕರ್ತವ್ಯವು ವ್ಯಕ್ತಿಯನ್ನು ಬಂಧಿಸುತ್ತದೆ. ಪರಿಣಾಮ ಬೇರೆಯ ರೀತಿಯದಾಗಿದ್ದರೆ ಅದು ಯಾರನ್ನೂ ಕಟ್ಟಿಗೆ ಒಳಪಡಿಸುವಂತಿಲ್ಲ. ಯುದ್ಧಮಾಡುವುದರ ಪರವಾಗಿ ಮತ್ತು ವಿರುದ್ಧವಾಗಿ ಈ ಎಲ್ಲ ಅಂಶಗಳನ್ನೂ ಪರಿಶೀಲಿಸಿ ಅರ್ಜುನನು ಯುದ್ಧ ಮಾಡುವುದಿಲ್ಲ ಎಂದು ನಿರ್ಧರಿಸಿದ.

## ಶ್ಲೋಕ - 39

**ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ |**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋऽಭಿಭವತ್ಯುತ ||೩೯||**

**ಕುಲಕ್ಷಯೇ**—ವಂಶನಾಶದಲ್ಲಿ; **ಪ್ರಣಶ್ಯನ್ತಿ**—ನಾಶವಾಗುತ್ತವೆ; **ಕುಲ ಧರ್ಮಾಃ**—ಕುಲ ಸಂಪ್ರದಾಯಗಳು; **ಸನಾತನಾಃ**—ಶಾಶ್ವತವಾದ; **ಧರ್ಮೇ**—ಧರ್ಮವು; **ನಷ್ಟೇ**—ನಾಶವಾಗಲು; **ಕುಲಮ್**—ಕುಲವನ್ನು; **ಕೃತ್ಸ್ನಮ್**—ಸಂಪೂರ್ಣವಾಗಿ; **ಅಧರ್ಮಃ**—ಅಧರ್ಮವು; **ಅಭಿಭವತಿ**—ಆವರಿಸುತ್ತದೆ; **ಉತ**—ಎಂದು ಹೇಳಲಾಗಿದೆ.

## ಅನುವಾದ

**ಕುಲಕ್ಷಯವಾದರೆ ಸನಾತನವಾದ ಕುಲಧರ್ಮವು ನಾಶವಾಗುತ್ತದೆ. ಧರ್ಮವು ನಷ್ಟವಾದರೆ ಕುಟುಂಬದಲ್ಲಿ ಉಳಿದ ಭಾಗವು ಅಧರ್ಮದ ವಶವಾಗುತ್ತದೆ.**

## ಭಾವಾರ್ಥ

ವರ್ಣಾಶ್ರಮ ವ್ಯವಸ್ಥೆಯಲ್ಲಿ, ಕುಟುಂಬದ ಸದಸ್ಯರು ಯೋಗ್ಯವಾದ ರೀತಿಯಲ್ಲಿ ಬೆಳೆದು ಆಧ್ಯಾತ್ಮಿಕ ಮೌಲ್ಯಗಳನ್ನು ಸಾಧಿಸಲು ನೆರವಾಗುವ ಧಾರ್ಮಿಕ ಸಂಪ್ರದಾಯಗಳ ಸೂತ್ರಗಳು ಹಲವಿವೆ. ಹುಟ್ಟಿನಿಂದ ಪ್ರಾರಂಭವಾಗಿ ಸಾವಿನವರೆಗೆ ಕುಟುಂಬದಲ್ಲಿ ಜರುಗುವ ಇಂತಹ ಶುದ್ಧೀಕರಣ ಪ್ರಕ್ರಿಯೆಗಳಿಗೆ ಕುಟುಂಬದ ಹಿರಿಯರದೇ ಹೊಣೆ. ಆದರೆ ಹಿರಿಯರು ತೀರಿಕೊಂಡಾಗ ಕುಟುಂಬದ ಇಂತಹ ಶುದ್ಧೀಕರಣ ಸಂಪ್ರದಾಯಗಳು ನಿಂತು ಹೋಗಬಹುದು. ಸಂಸಾರದ ಉಳಿದ ಕಿರಿಯರು ಅಧಾರ್ಮಿಕ ಅಭ್ಯಾಸಗಳನ್ನು ಬೆಳೆಸಿಕೊಂಡು ಆಧ್ಯಾತ್ಮಿಕ ಮುಕ್ತಿಯ ಅವಕಾಶವನ್ನು ಕಳೆದುಕೊಳ್ಳಬಹುದು. ಆದುದರಿಂದ, ಯಾವುದೇ ಉದ್ದೇಶದಿಂದಲಾಗಲಿ ಕುಟುಂಬದ ಹಿರಿಯರನ್ನು ಕೊಲ್ಲಲಾಗದು.

## ಶ್ಲೋಕ - 40

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ |**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸನ್ಕರಃ ||೪೦||**

**ಅಧರ್ಮ**—ಅಧರ್ಮವು; **ಅಭಿಭವಾತ್**—ಪ್ರಧಾನವಾಗುವುದರಿಂದ; **ಕೃಷ್ಣ**—ಕೃಷ್ಣನೇ; **ಪ್ರದುಷ್ಯನ್ತಿ**—ದೂಷಿತರಾಗುತ್ತಾರೆ; **ಕುಲಸ್ತ್ರೀಯಃ**—ಕುಲಸ್ತ್ರೀಯರು; **ಸ್ತ್ರೀಷು**—ಸ್ತ್ರೀಯರು; **ದುಷ್ಟಾಸು**—ದೂಷಿತರಾಗಲು; **ವಾರ್ಷ್ಣೇಯ**—ವೃಷ್ಣಿವಂಶದವನೇ; **ಜಾಯತೇ**—ಉಂಟಾಗುತ್ತದೆ; **ವರ್ಣಸನ್ಕರಃ**—ಅನಪೇಕ್ಷಿತ ಸಂತಾನವು.

## ಅನುವಾದ

**ಹೇ ಕೃಷ್ಣ, ಕುಟುಂಬದಲ್ಲಿ ಅಧರ್ಮವು ಪ್ರಧಾನವಾದಾಗ ಕುಲಸ್ತ್ರೀಯರು ನೀತಿಭ್ರಷ್ಟರಾಗಿ ಅನಿಷ್ಟ ಸಂತಾನ ಸೃಷ್ಟಿಯಾಗುತ್ತದೆ.**

## ಭಾವಾರ್ಥ

ಬದುಕಿನಲ್ಲಿ ಶಾಂತಿ, ಶ್ರೇಯಸ್ಸು ಮತ್ತು ಆಧ್ಯಾತ್ಮಿಕ ಮುನ್ನಡೆಗಳನ್ನು ಸಾಧಿಸಲು ಮಾನವ ಕುಲದಲ್ಲಿ ಅನಿವಾರ್ಯವಾದ ಮೂಲಾಧಾರವೆಂದರೆ ಒಳ್ಳೆಯ ಜನತೆ. ರಾಜ್ಯದ ಮತ್ತು ಸಮುದಾಯದ ಸಾಮಾನ್ಯ ಆಧ್ಯಾತ್ಮಿಕ ಬೆಳವಣಿಗೆಗಾಗಿ ಒಳ್ಳೆಯ ಜನರೇ ಪ್ರಭಾವಶಾಲಿಗಳಾಗುವಂತೆ ವರ್ಣಾಶ್ರಮಧರ್ಮದ ತತ್ವಗಳನ್ನು ರೂಪಿಸಲಾಗಿತ್ತು. ಇಂತಹ ಜನತೆಗೆ, ಸ್ತ್ರೀಯರ ಪಾತಿವ್ರತ್ಯ ಮತ್ತು ನಿಷ್ಠೆಯೇ ಆಧಾರ. ಮಕ್ಕಳು ಹೇಗೆ ಸುಲಭವಾಗಿ ದಾರಿತಪ್ಪಬಹುದೋ ಹಾಗೆ ಸ್ತ್ರೀಯರೂ ಸುಲಭವಾಗಿ ಭ್ರಷ್ಟರಾಗಬಹುದು. ಆದುದರಿಂದ ಮಕ್ಕಳಿಗೂ ಸ್ತ್ರೀಯರಿಗೂ ಕುಟುಂಬದ ಹಿರಿಯರಿಂದ ರಕ್ಷಣೆಯು ಅಗತ್ಯ. ಹಲವಾರು ಧಾರ್ಮಿಕ ವಿಧಿಗಳಲ್ಲಿ ಮಗ್ನರಾದ ಸ್ತ್ರೀಯರು ದಾರಿತಪ್ಪಿ ವ್ಯಭಿಚಾರಕ್ಕಿಳಿಯುವುದಿಲ್ಲ. ಚಾಣಕ್ಯ ಪಂಡಿತನ ಪ್ರಕಾರ ಸ್ತ್ರೀಯರು ಸಾಮಾನ್ಯವಾಗಿ ಬಹಳ ಜಾಣರಲ್ಲವಾಗಿ ಅವರು ನಂಬಿಕೆಗೆ ಯೋಗ್ಯರಲ್ಲ. ಆದುದರಿಂದ ಧಾರ್ಮಿಕ ವಿಧಿಗಳ ಹಲವಾರು ಕೌಟುಂಬಿಕ ಸಂಪ್ರದಾಯಗಳಲ್ಲಿ ಅವರು ಸದಾ ಮಗ್ನರಾಗಿರಬೇಕು. ಅವರ ಪಾತಿವ್ರತ್ಯ ಮತ್ತು ನಿಷ್ಠೆಗಳಿಂದ ವರ್ಣಾಶ್ರಮ ವ್ಯವಸ್ಥೆಯಲ್ಲಿ ಭಾಗವಹಿಸಬಲ್ಲ ಜನತೆಯು ಸೃಷ್ಟಿಯಾಗುತ್ತದೆ. ಇಂತಹ ವರ್ಣಾಶ್ರಮ ಧರ್ಮವು ವಿಫಲವಾದರೆ ಸಹಜವಾಗಿ ಮಹಿಳೆಯರಿಗೆ ಪುರುಷರೊಂದಿಗೆ ಕೆಲಸ ಮಾಡಿ ಬೆರೆಯಲು ಸ್ವಾತಂತ್ರ್ಯವು ದೊರೆಯುತ್ತದೆ. ಆಗ ವ್ಯಭಿಚಾರವು ಹೆಚ್ಚಿ ಅನಪೇಕ್ಷಿತ ಜನತೆ ಸೃಷ್ಟಿಯಾಗುವ ಅಪಾಯ ಉಂಟಾಗುತ್ತದೆ. ಹೊಣೆಗೇಡಿ ಪುರುಷರು ಸಮಾಜದಲ್ಲಿ ವ್ಯಭಿಚಾರವನ್ನು ಪ್ರಚೋದಿಸುತ್ತಾರೆ. ಹೀಗೆ ಅನಪೇಕ್ಷಿತ ಮಕ್ಕಳು ಮಾನವಕುಲವನ್ನು ತುಂಬಿ, ಯುದ್ಧ ಮತ್ತು ಕ್ಷಾಮಗಳ ಅಪಾಯವು ತಲೆದೋರುತ್ತದೆ.

## ಶ್ಲೋಕ - 41

**ಸಙ್ಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ |**
**ಪತನ್ತಿ ಪಿತರೋ ಹ್ಯೇಷಾಂ ಲುಪ್ತಪಿಣ್ಡೋದಕಕ್ರಿಯಾಃ ||೪೧||**

**ಸಙ್ಕರಃ**—ಅಂತಹ ಅನಪೇಕ್ಷಿತ ಮಕ್ಕಳು; **ನರಕಾಯ**—ನರಕಜೀವನವನ್ನು ಉಂಟುಮಾಡುತ್ತಾರೆ; **ಏವ**—ಖಂಡಿತವಾಗಿಯೂ; **ಕುಲಘ್ನಾನಾಮ್**—ವಂಶನಾಶಕರ; **ಕುಲಸ್ಯ**—ವಂಶದ; **ಚ**—ಕೂಡ; **ಪತನ್ತಿ**—ಪತನಗೊಳ್ಳುತ್ತಾರೆ; **ಪಿತರಃ**—ಪಿತೃಗಳು; **ಹಿ**—ನಿಶ್ಚಿತವಾಗಿ; **ಏಷಾಮ್**—ಈ; **ಲುಪ್ತ**—ನಿಲ್ಲಿಸಿದ; **ಪಿಣ್ಡ**—ಪಿಂಡಪ್ರದಾನ; **ಉದಕ ಕ್ರಿಯಾಃ**—ತರ್ಪಣಕ್ರಿಯೆಗಳುಳ್ಳ.

## ಅನುವಾದ

**ಬೇಡದ ಜನರ ಸಂಖ್ಯೆ ಹೆಚ್ಚಿದರೆ ಅದು ಸಂಸಾರದ ಬದುಕನ್ನು ಮತ್ತು ಸಂಸಾರದ ಸಂಪ್ರದಾಯವನ್ನು ನಾಶಗೊಳಿಸಿದವರ ಬದುಕನ್ನು ನರಕಸದೃಶ ಮಾಡುತ್ತದೆ. ಇಂತಹ ಭ್ರಷ್ಟ ಸಂಸಾರಗಳ ಪೂರ್ವಿಕರು ಪತನಹೊಂದುತ್ತಾರೆ. ಏಕೆಂದರೆ ಅವರಿಗಾಗಿ ನಡೆಯಬೇಕಾದ ಪಿಂಡೋದಕ ಕ್ರಿಯೆಗಳು ಸಂಪೂರ್ಣವಾಗಿ ನಿಂತುಹೋಗುತ್ತವೆ.**

## ಭಾವಾರ್ಥ

ಕಾಮ್ಯಕರ್ಮದ ನಿಯಮಗಳ ಪ್ರಕಾರ ಕುಟುಂಬದ ಪೂರ್ವಿಕರಿಗೆ ಕಾಲಕಾಲಕ್ಕೆ ಪಿಂಡೋದಕ ಪ್ರದಾನವು ಅಗತ್ಯ. ಈ ಪ್ರದಾನವನ್ನು ವಿಷ್ಣುಪೂಜೆಯ ಮೂಲಕ ಮಾಡಲಾಗುತ್ತದೆ. ಏಕೆಂದರೆ ವಿಷ್ಣುವಿನ ಪ್ರಸಾದ ಸೇವನೆ ವ್ಯಕ್ತಿಯನ್ನು ಎಲ್ಲ ಪಾಪಕರ್ಮಗಳಿಂದ ಮುಕ್ತಗೊಳಿಸುತ್ತದೆ. ಕೆಲವು ಸಲ ಪಿತೃಗಳು ನಾನಾ ಬಗೆಯ ಪಾಪಪೂರ್ಣ ಪ್ರತಿಕ್ರಿಯೆಗಳನ್ನು ಅನುಭವಿಸುತ್ತಿರಬಹುದು. ಕೆಲವೊಮ್ಮೆ ಅವರಲ್ಲಿ ಕೆಲವರು ಸ್ಥೂಲ ದೇಹವನ್ನೂ ಪಡೆಯಲಾಗದೆ ಪ್ರೇತಗಳಾಗಿ ಸೂಕ್ಷ್ಮ ಶರೀರದಲ್ಲೇ ಉಳಿದಿರಬೇಕಾಗಿ ಬರಬಹುದು. ಪ್ರಸಾದದ ಉಳಿದ ಭಾಗವನ್ನು ವಂಶಜರು ಅರ್ಪಿಸಿದಾಗ ಪಿತೃಗಳಿಗೆ ಪ್ರೇತ ಅಥವಾ ಬೇರೆ ಬಗೆಯ ಯಾತನಾಮಯ ಅಸ್ತಿತ್ವದಿಂದ ಬಿಡುಗಡೆಯಾಗುತ್ತದೆ. ಪಿತೃಗಳಿಗೆ ನೀಡುವ ಈ ನೆರವು ಕುಟುಂಬದ ಸಂಪ್ರದಾಯ. ಇಂತಹ ವಿಧಿಗಳನ್ನು ನಡೆಸುವುದು ಭಕ್ತಿಸೇವೆಯಲ್ಲಿ ತೊಡಗಿಲ್ಲದ ಎಲ್ಲ ಜನರ ಕರ್ತವ್ಯ. ಭಕ್ತಿ ಸೇವೆಯಲ್ಲಿ ನಿರತರಾದವರು, ಈ ವಿಧಿಗಳನ್ನು ನಡೆಸಬೇಕಾಗಿಲ್ಲ. ಭಕ್ತಿಪೂರ್ವಕ ಸೇವೆ ಸಲ್ಲಿಸಿದ ಮಾತ್ರದಿಂದಲೇ ಒಬ್ಬ ಮನುಷ್ಯನು ನೂರಾರು ಮಂದಿ, ಸಾವಿರಾರು ಮಂದಿ ಪೂರ್ವಿಕರನ್ನು ಎಲ್ಲ ಬಗೆಯ ಯಾತನೆಗಳಿಂದ ಬಿಡುಗಡೆ ಮಾಡಬಹುದು. ಭಾಗವತದಲ್ಲಿ (11.5.41) ಹೀಗೆ ಹೇಳಿದೆ —

**ದೇವರ್ಷಿಭೂತಾಪ್ತನೃಣಾಂ ಪಿತೄಣಾಮ್**
**ನ ಕಿನ್ಕರೋ ನಾಯಮ್ ಋಣೀ ಚ ರಾಜನ್ |**
**ಸರ್ವಾತ್ಮನಾ ಯಃ ಶರಣಂ ಶರಣ್ಯಂ**
**ಗತೋ ಮುಕುನ್ದಂ ಪರಿಹೃತ್ಯ ಕರ್ತಮ್ ||**

"ಎಲ್ಲ ಕರ್ಮವನ್ನು ಪರಿತ್ಯಜಿಸಿ ಮುಕ್ತಿದಾಯಕನಾದ ಮುಕುಂದನ ಚರಣಕಮಲಗಳಲ್ಲಿ ಯಾರು ಆಶ್ರಯವನ್ನು ಪಡೆದಿರುತ್ತಾನೋ ಮತ್ತು ಶ್ರದ್ಧೆಯಿಂದ ಆ ಮಾರ್ಗವನ್ನು ಅನುಸರಿಸುವನೋ ಅವನು ದೇವತೆಗಳಿಗೆ, ಋಷಿಗಳಿಗೆ, ಜೀವಿಗಳಿಗೆ, ಕುಟುಂಬಕ್ಕೆ, ಮಾನವ ಕುಲಕ್ಕೆ ಅಥವಾ ಪಿತೃಗಳಿಗೆ ಯಾವ ಕರ್ತವ್ಯಗಳನ್ನೂ ಮಾಡಬೇಕಾಗಿಲ್ಲ; ಯಾವ ಋಣವನ್ನೂ ಸಲ್ಲಿಸಬೇಕಾಗಿಲ್ಲ." ದೇವೋತ್ತಮ ಪರಮ ಪುರುಷನನ್ನು ಭಕ್ತಿಪೂರ್ವಕವಾಗಿ ಸೇವಿಸುವುದರಿಂದ ಇಂತಹ ಕರ್ತವ್ಯಗಳೂ ಋಣಗಳೂ ತಾವಾಗಿಯೇ ಪೂರೈಸುತ್ತವೆ.

## ಶ್ಲೋಕ - 42

**ದೋಷೈರೇತೈಃ ಕುಲಘ್ನಾನಾಂ ವರ್ಣಸನ್ಕರಕಾರಕೈಃ |**
**ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ||೪೨||**

**ದೋಷೈಃ**—ತಪ್ಪುಗಳಿಂದ; **ಏತೈಃ**—ಈ ಎಲ್ಲ; **ಕುಲಘ್ನಾನಾಮ್**—ವಂಶನಾಶಕರ; **ವರ್ಣಸನ್ಕರ**—ಅನಪೇಕ್ಷಿತ ಮಕ್ಕಳಿಗೆ; **ಕಾರಕೈಃ**—ಕಾರಣವಾಗುವ; **ಉತ್ಸಾದ್ಯನ್ತೇ**—ನಾಶವಾಗುತ್ತವೆ; **ಜಾತಿಧರ್ಮಾಃ**—ಸಮುದಾಯ ಯೋಜನೆಗಳು; **ಕುಲಧರ್ಮಾಃ**—ಕುಲ ಸಂಪ್ರದಾಯಗಳು; **ಚ**—ಕೂಡ; **ಶಾಶ್ವತಾಃ**—ಶಾಶ್ವತವಾದ.

## ಅನುವಾದ

**ಕುಟುಂಬದ ಸಂಪ್ರದಾಯವನ್ನು ನಾಶಮಾಡಿ ಬೇಡದ ಮಕ್ಕಳನ್ನು ಸೃಷ್ಟಿಸುವವರ ದುಷ್ಕರ್ಮದಿಂದ ಎಲ್ಲ ಸಮುದಾಯ ಯೋಜನೆಗಳೂ ಕುಟುಂಬ ಕಲ್ಯಾಣ ಚಟುವಟಿಕೆಗಳೂ ನಾಶವಾಗುತ್ತವೆ.**

## ಭಾವಾರ್ಥ

ಸನಾತನ ಧರ್ಮ ಅಥವಾ ವರ್ಣಾಶ್ರಮ ಧರ್ಮವು ಮಾನವ ಕುಲದ ನಾಲ್ಕು ವರ್ಗಗಳಿಗೂ ಸಮುದಾಯ ಯೋಜನೆಗಳನ್ನು ವಿಧಿಸಿದೆ. ಇವುಗಳೊಡನೆ ಕುಟುಂಬದ ಕಲ್ಯಾಣದ ಚಟುವಟಿಕೆಗಳು ಸೇರುತ್ತವೆ. ಮನುಷ್ಯನು ಕಟ್ಟಕಡೆಗೆ ಮುಕ್ತಿಯನ್ನು ಸಾಧಿಸಲು ಸಾಧ್ಯವಾಗುವಂತೆ ಇವುಗಳನ್ನು ರೂಪಿಸಿದೆ. ಆದುದರಿಂದ ಹೊಣೆಗಾರಿಕೆ ತಿಳಿಯದ ಸಮಾಜದ ನಾಯಕರು ಸನಾತನ ಧರ್ಮವನ್ನು ಒಡೆದರೆ ಆ ಸಮಾಜದಲ್ಲಿ ಅವ್ಯವಸ್ಥೆಯುಂಟಾಗುತ್ತದೆ. ಪರಿಣಾಮವಾಗಿ ಬದುಕಿನ ಗುರಿಯನ್ನೇ, ಎಂದರೆ ವಿಷ್ಣುವನ್ನೇ ಜನರು ಮರೆತುಬಿಡುತ್ತಾರೆ. ಇಂತಹ ನಾಯಕರನ್ನು ಕುರುಡರೆಂದು ಕರೆಯುತ್ತಾರೆ. ತಮ್ಮನ್ನು ಹಿಂಬಾಲಿಸುವ ಜನರನ್ನು ಅವರು ನಿಸ್ಸಂದೇಹವಾಗಿ ಅವ್ಯವಸ್ಥೆಗೆ ಕರೆದೊಯ್ಯುತ್ತಾರೆ.

## ಶ್ಲೋಕ - 43

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ |**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ||೪೩||**

**ಉತ್ಸನ್ನ**—ಕೆಟ್ಟುಹೋದ; **ಕುಲಧರ್ಮಾಣಾಂ**—ಕುಲಧರ್ಮ ಉಳ್ಳ; **ಮನುಷ್ಯಾಣಾಮ್**—ಮನುಷ್ಯರ; **ಜನಾರ್ದನ**—ಕೃಷ್ಣನೇ; **ನರಕೇ**—ನರಕದಲ್ಲಿ; **ನಿಯತಮ್**—ಯಾವಾಗಲೂ; **ವಾಸಃ**—ವಾಸವು; **ಭವತಿ**—ಆಗುತ್ತದೆ; **ಇತಿ**—ಹೀಗೆ; **ಅನುಶುಶ್ರುಮ**—ಗುರುಶಿಷ್ಯ ಪರಂಪರೆಯಿಂದ ಕೇಳಿದ್ದೇನೆ.

## ಅನುವಾದ

**ಜನರನ್ನು ಪಾಲಿಸುವ ಹೇ ಜನಾರ್ದನ, ಕುಟುಂಬದ ಸಂಪ್ರದಾಯವನ್ನು ನಾಶಮಾಡುವವರು ನರಕವಾಸಿಗಳಾಗುತ್ತಾರೆ ಎಂದು ಗುರುಶಿಷ್ಯ ಪರಂಪರೆಯಿಂದ ಕೇಳಿದ್ದೇನೆ.**

## ಭಾವಾರ್ಥ

ಅರ್ಜುನನ ವಾದಕ್ಕೆ ಆಧಾರ ಆತನ ಸ್ವಂತ ಅನುಭವವಲ್ಲ. ಅಧಿಕಾರಯುತವಾಗಿ ಮಾತನಾಡುವವರಿಂದ ಅವನು ಕೇಳಿದ್ದು. ನೈಜಜ್ಞಾನವನ್ನು ಪಡೆಯುವ ಮಾರ್ಗ ಇದೇ. ನೈಜಜ್ಞಾನದಲ್ಲಿ ಆಗಲೇ ಪ್ರವೇಶವನ್ನು ಪಡೆದಿರುವ ಯೋಗ್ಯ ವ್ಯಕ್ತಿಯ ನೆರವಿಲ್ಲದೆ ಯಾರೂ ಆ ಜ್ಞಾನದ ನಿಜವಾದ ತಿರುಳನ್ನು ಪಡೆಯುವುದು ಸಾಧ್ಯವಿಲ್ಲ. ಮನುಷ್ಯನು ಸಾಯುವ ಮೊದಲು ತನ್ನ ಪಾಪಕರ್ಮಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ವರ್ಣಾಶ್ರಮ ಸಂಸ್ಥೆಯಲ್ಲಿ ಒಂದು ವ್ಯವಸ್ಥೆಯುಂಟು. ಸದಾ ಪಾಪಕರ್ಮದಲ್ಲಿ ತೊಡಗಿರುವವನು ಪ್ರಾಯಶ್ಚಿತ್ತವನ್ನು

ಮಾಡಿಕೊಳ್ಳಬೇಕು. ಹೀಗೆ ಮಾಡದಿದ್ದ ವ್ಯಕ್ತಿಯು, ತನ್ನ ಪಾಪಕರ್ಮಗಳ ಫಲವಾಗಿ ಯಾತನೆಯನ್ನು ಅನುಭವಿಸಲು ನರಕಲೋಕಗಳಿಗೆ ಖಂಡಿತವಾಗಿ ದೂಡಲ್ಪಡುತ್ತಾನೆ.

### ಶ್ಲೋಕ - 44

**ಅಹೋ ಬತ ಮಹತ್ ಪಾಪಂ ಕರ್ತುಂ ವ್ಯವಸಿತಾ ವಯಮ್ |**
**ಯದ್ ರಾಜ್ಯಸುಖಲೋಭೇನ ಹನ್ತುಂ ಸ್ವಜನಮುದ್ಯತಾಃ ||೪೪||**

**ಅಹೋ**—ಅಯ್ಯೋ; **ಬತ**—ಎಷ್ಟು ವಿಚಿತ್ರ; **ಮಹತ್**—ಮಹತ್ತರವಾದ; **ಪಾಪಮ್**—ಪಾಪಗಳನ್ನು; **ಕರ್ತುಮ್**—ಮಾಡಲು; **ವ್ಯವಸಿತಾಃ**—ನಿರ್ಧರಿಸಿದ್ದೇವೆ; **ವಯಮ್**—ನಾವು; **ಯತ್**—ಏಕೆಂದರೆ; **ರಾಜ್ಯ ಸುಖ ಲೋಭೇನ**—ರಾಜ್ಯದ ಸುಖದ ದುರಾಸೆಯಿಂದ; **ಹನ್ತುಮ್**—ಕೊಲ್ಲಲು; **ಸ್ವಜನಮ್**—ದಾಯಾದಿಗಳನ್ನು; **ಉದ್ಯತಾಃ**—ಪ್ರಯತ್ನಿಸುತ್ತಿದ್ದೇವೆ.

### ಅನುವಾದ

**ಅಯ್ಯೋ, ಮಹತ್ತಾದ ಪಾಪಕಾರ್ಯಗಳನ್ನು ಮಾಡಲು ನಾವು ಸಿದ್ಧತೆ ಮಾಡಿಕೊಳ್ಳುತ್ತಿದ್ದೇವೆ ಎನ್ನುವುದು ಎಂತಹ ಆಶ್ಚರ್ಯದ ಸಂಗತಿ! ರಾಜ್ಯಸುಖದ ಲೋಭದಿಂದಾಗಿ ನಾವು ಸ್ವಜನರನ್ನು ಕೊಲ್ಲಲು ಸಂಕಲ್ಪ ಮಾಡಿದ್ದೇವೆ.**

### ಭಾವಾರ್ಥ

ಒಬ್ಬ ಮನುಷ್ಯನು ಸ್ವಾರ್ಥಕ್ಕಾಗಿ ತನ್ನ ಸೋದರ, ತಂದೆ ಅಥವಾ ತಾಯಿಯನ್ನು ಕೊಲ್ಲುವಂತಹ ಪಾಪಕೃತ್ಯಕ್ಕೆ ಮನಸ್ಸು ಮಾಡಬಹುದು. ಜಗತ್ತಿನ ಚರಿತ್ರೆಯಲ್ಲಿ ಇಂತಹ ಎಷ್ಟೋ ನಿದರ್ಶನಗಳುಂಟು. ಆದರೆ ಸಾತ್ವಿಕ ಭಗವದ್ಭಕ್ತನಾದ ಅರ್ಜುನನಿಗೆ ಸದಾ ನೈತಿಕ ತತ್ವಗಳ ಅರಿವುಂಟು. ಆದುದರಿಂದ ಅವನು ಇಂತಹ ಕೃತ್ಯಗಳಿಂದ ದೂರವಿರುವಂತೆ ಜಾಗ್ರತನಾಗಿರುತ್ತಾನೆ.

### ಶ್ಲೋಕ - 45

**ಯದಿ ಮಾಮಪ್ರತೀಕಾರಮಶಸ್ತ್ರಮ್ ಶಸ್ತ್ರಪಾಣಯಃ |**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ||೪೫||**

**ಯದಿ**—ಆದರೂ; **ಮಾಮ್**—ನನ್ನನ್ನು; **ಅಪ್ರತೀಕಾರಮ್**—ಪ್ರತೀಕಾರ ಮಾಡದ; **ಅಶಸ್ತ್ರಮ್**—ಸಂಪೂರ್ಣ ಶಸ್ತ್ರಸಜ್ಜಿತನಲ್ಲದ; **ಶಸ್ತ್ರ ಪಾಣಯಃ**—ಶಸ್ತ್ರಧಾರಿಗಳಾದ; **ಧಾರ್ತರಾಷ್ಟ್ರಾಃ**—ಧೃತರಾಷ್ಟ್ರಪುತ್ರರು; **ರಣೇ**—ಯುದ್ಧಭೂಮಿಯಲ್ಲಿ; **ಹನ್ಯುಃ**—ಕೊಲ್ಲಬಹುದು; **ತತ್**—ಅದು; **ಮೇ**—ನನಗೆ; **ಕ್ಷೇಮ ತರಮ್**—ಒಳ್ಳೆಯದೇ; **ಭವೇತ್**—ಆಗುವುದು.

### ಅನುವಾದ

**ಶಸ್ತ್ರವಿಲ್ಲದ ಮತ್ತು ಪ್ರತೀಕಾರ ಮಾಡದಿರುವ ನನ್ನನ್ನು ಶಸ್ತ್ರಪಾಣಿಗಳಾದ ಧೃತರಾಷ್ಟ್ರ ಪುತ್ರರು ರಣಭೂಮಿಯಲ್ಲಿ ಕೊಂದರೆ ಅದು ನನಗೆ ಒಳ್ಳೆಯದೇ.**

## ಭಾವಾರ್ಥ

ಕ್ಷತ್ರಿಯೋಚಿತ ನೀತಿಯಂತೆ ಶಸ್ತ್ರವಿಲ್ಲದ ಮತ್ತು ವಿರೋಧಿಸದ ಶತ್ರುವಿನ ಮೇಲೆ ಆಕ್ರಮಣ ಮಾಡಬಾರದು. ಅರ್ಜುನನು ಇಂತಹ ಅಸಹಾಯಕ ಸನ್ನಿವೇಶದಲ್ಲಿ ತನ್ನ ಮೇಲೆ ಆಕ್ರಮಣವಾದರೂ ತಾನು ಯುದ್ಧಮಾಡುವುದಿಲ್ಲ ಎಂದು ತೀರ್ಮಾನಿಸಿದ. ಎದುರು ಪಕ್ಷವು ಎಷ್ಟರಮಟ್ಟಿಗೆ ಯುದ್ಧ ಮಾಡಲು ಸಂಕಲ್ಪ ಮಾಡಿತ್ತು ಎನ್ನುವುದನ್ನು ಆತನು ಪರಿಗಣಿಸಲಿಲ್ಲ. ಆತನು ಭಗವಂತನ ಶ್ರೇಷ್ಠ ಭಕ್ತನಾಗಿದ್ದುದರಿಂದ ಮೃದುಮನಸ್ಸಿನವನಾದ; ಆದರಿಂದ ಕಾಣಿಸಿಕೊಂಡ ಲಕ್ಷಣಗಳು ಇವು.

## ಶ್ಲೋಕ - 46

**ಸಞ್ಜಯ ಉವಾಚ**
**ಏವಮುಕ್ತ್ವಾರ್ಜುನಃ ಸಙ್ಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೬॥**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಏವಮ್**—ಹೀಗೆ; **ಉಕ್ತ್ವಾ**—ಹೇಳಿ; **ಅರ್ಜುನಃ**—ಅರ್ಜುನನು; **ಸಙ್ಖ್ಯೇ**—ರಣರಂಗದಲ್ಲಿ; **ರಥ**—ರಥದ; **ಉಪಸ್ಥೇ**—ಪೀಠದಲ್ಲಿ; **ಉಪಾವಿಶತ್**—ಪುನಃ ಕುಳಿತುಕೊಂಡನು; **ವಿಸೃಜ್ಯ**—ಪಕ್ಕಕ್ಕೆ ಇಟ್ಟು; **ಸಶರಮ್**—ಬಾಣಸಹಿತವಾದ; **ಚಾಪಮ್**—ಬಿಲ್ಲನ್ನು; **ಶೋಕ**—ದುಃಖದಿಂದ; **ಸಂವಿಗ್ನ**—ಸಂಕಟಕ್ಕೊಳಗಾದ; **ಮಾನಸಃ**—ಮನಸ್ಸುಳ್ಳವನಾಗಿ.

## ಅನುವಾದ

**ಸಂಜಯನು ಹೇಳಿದನು — ರಣಭೂಮಿಯಲ್ಲಿ ಅರ್ಜುನನು ಹೀಗೆ ಹೇಳಿ ತನ್ನ ಬಿಲ್ಲು ಬಾಣಗಳನ್ನು ಬದಿಗಿಟ್ಟು ದುಃಖಪರವಶನಾಗಿ ರಥದಲ್ಲಿ ಕುಳಿತುಕೊಂಡನು.**

## ಭಾವಾರ್ಥ

ಶತ್ರುವಿನ ಪರಿಸ್ಥಿತಿಯನ್ನು ನೋಡುವುದಕ್ಕಾಗಿ ಅರ್ಜುನನು ರಥದಲ್ಲಿ ಎದ್ದುನಿಂತನು. ಆದರೆ ಅವನು ಎಷ್ಟು ಶೋಕತಪ್ತನಾದನೆಂದರೆ, ತನ್ನ ಬಿಲ್ಲು ಬಾಣಗಳನ್ನು ಬದಿಗಿಟ್ಟು ಕುಳಿತುಬಿಟ್ಟ. ಭಗವಂತನ ಸೇವೆಯಲ್ಲಿ ನಿರತನಾದ ಇಂತಹ ದಯಾಮಯನಾದ, ಮೃದುಹೃದಯಿಯಾದ ಮನುಷ್ಯನು ಆತ್ಮಜ್ಞಾನೋಪದೇಶವನ್ನು ಪಡೆಯಲು ಯೋಗ್ಯನಾದವನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಕುರುಕ್ಷೇತ್ರ ರಣರಂಗದಲ್ಲಿ ಸೇನಾವಲೋಕನ" ಎಂಬ ಮೊದಲನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

## ಅಧ್ಯಾಯ - 2

# ಗೀತಾಸಾರ ಸಂಗ್ರಹ

### ಶ್ಲೋಕ - 1

**ಸಞ್ಜಯ ಉವಾಚ**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತಮ್ ಇದಂ ವಾಕ್ಯಮುವಾಚ ಮಧುಸೂದನಃ ॥೧॥**

**ಸಞ್ಜಯಃ ಉವಾಚ**—ಸಂಜಯನು ಹೇಳಿದನು; **ತಮ್**—ಅರ್ಜುನನಿಗೆ; **ತಥಾ**—ಹೀಗೆ; **ಕೃಪಯಾ**—ಕೃಪೆಯಿಂದ; **ಆವಿಷ್ಟಮ್**—ಆಕ್ರಾಂತನಾದ; **ಅಶ್ರು ಪೂರ್ಣ ಆಕುಲ**—ಕಣ್ಣೀರು ತುಂಬಿದ; **ಈಕ್ಷಣಮ್**—ಕಣ್ಣುಗಳನ್ನುಳ್ಳ; **ವಿಷೀದನ್ತಮ್**—ವಿಷಾದಿಸುತ್ತಿದ್ದ; **ಇದಮ್**—ಈ; **ವಾಕ್ಯಮ್**—ವಾಕ್ಯಗಳನ್ನು; **ಉವಾಚ**—ಹೇಳಿದನು; **ಮಧುಸೂದನಃ**—ಮಧುವನ್ನು ಕೊಂದವನು.

### ಅನುವಾದ

**ಸಂಜಯನು ನುಡಿದನು — ಕರುಣೆಯಿಂದ ತುಂಬಿ ವಿಷಣ್ಣಮನಸ್ಕನಾಗಿ ಕಂಬನಿ ತುಂಬಿದ ಅರ್ಜುನನನ್ನು ನೋಡಿ ಮಧುಸೂದನನಾದ ಕೃಷ್ಣನು ಹೀಗೆ ಹೇಳಿದನು.**

### ಭಾವಾರ್ಥ

ಲೌಕಿಕ ಅನುಕಂಪ, ದುಃಖ ಮತ್ತು ಕಂಬನಿ ಇವೆಲ್ಲ ಆತ್ಮದ ಬಗ್ಗೆ ಅಜ್ಞಾನದ ಲಕ್ಷಣಗಳು. ಅಮರವಾದ ಆತ್ಮದ ಬಗ್ಗೆಅನುಕಂಪವಿರುವುದೇ ಆತ್ಮಸಾಕ್ಷಾತ್ಕಾರ. ಈ ಶ್ಲೋಕದಲ್ಲಿ **ಮಧುಸೂದನ** ಎನ್ನುವ ಪದ ಮಹತ್ವದ್ದು. ಶ್ರೀಕೃಷ್ಣನು ಮಧುವೆನ್ನುವ ರಾಕ್ಷಸನನ್ನು ಕೊಂದಿದ್ದ. ಈಗ ಅರ್ಜುನನು ತನ್ನ ಕರ್ತವ್ಯಪಾಲನೆಯಲ್ಲಿ ಅವನನ್ನು ಆವರಿಸಿದ್ದ ತಪ್ಪು ತಿಳುವಳಿಕೆ ಎಂಬ ರಾಕ್ಷಸನನ್ನು ಕೃಷ್ಣನು ಕೊಲ್ಲಬೇಕೆಂದು ಬಯಸಿದನು. ಯಾವ ವಿಷಯಕ್ಕೆ ಅಥವಾ ಯಾರ ವಿಷಯದಲ್ಲಿ ಅನುಕಂಪ ತೋರಿಸಬೇಕು ಎಂದು ಯಾರಿಗೂ ತಿಳಿಯುವುದಿಲ್ಲ. ಮುಳುಗುತ್ತಿರುವ ಮನುಷ್ಯನ ಉಡುಪಿನ ಬಗ್ಗೆ ಅನುಕಂಪ ತೋರಿಸುವುದರಲ್ಲಿ ಅರ್ಥವಿಲ್ಲ. ಅಜ್ಞಾನ ಸಾಗರದಲ್ಲಿ ಮುಳುಗುತ್ತಿರುವವನ ಹೊರ ಉಡುಪನ್ನು, ಎಂದರೆ, ಜಡ ಐಹಿಕ ದೇಹವನ್ನು ರಕ್ಷಿಸುವ ಮಾತ್ರದಿಂದ ಅವನನ್ನು ರಕ್ಷಿಸಲು ಸಾಧ್ಯವಿಲ್ಲ. ಇದನ್ನು ತಿಳಿಯದೆ ಹೊರ ಉಡುಪಿಗಾಗಿ ಅಳುವವನನ್ನು ಶೂದ್ರ ಎಂದು, ಅಥವಾ ಅನವಶ್ಯಕವಾಗಿ ಗೋಳಾಡುವವನು ಎಂದು ಕರೆಯುತ್ತಾರೆ. ಅರ್ಜುನನು ಒಬ್ಬ ಕ್ಷತ್ರಿಯ. ಅವನಿಂದ ಇಂತಹ ನಡವಳಿಕೆಯನ್ನು ನಿರೀಕ್ಷಿಸುವುದಿಲ್ಲ. ಆದರೆ ಶ್ರೀಕೃಷ್ಣನು ಅಜ್ಞಾನಿಯ ದುಃಖವನ್ನು ಚದುರಿಸಿಬಿಡಬಲ್ಲ. ಈ ಉದ್ದೇಶಕ್ಕಾಗಿಯೇ ಅವನು ಭಗವದ್ಗೀತೆಯನ್ನು ಹೇಳಿದ್ದು. ಈ ಅಧ್ಯಾಯವು ಪರಮಾಧಿಕಾರಿಯಾದ ಶ್ರೀಕೃಷ್ಣನು ವಿವರಿಸಿದಂತೆ ಜಡದೇಹದ ಮತ್ತು ಆತ್ಮದ

ವಿಶ್ಲೇಷಣಾತ್ಮಕ ಅಧ್ಯಯನದಿಂದ ನಮಗೆ ಆತ್ಮಸಾಕ್ಷಾತ್ಕಾರದ ವಿಷಯವನ್ನು ತಿಳಿಸಿಕೊಡುತ್ತದೆ. ಕರ್ಮಫಲದಲ್ಲಿ ಆಸಕ್ತಿಯಿಲ್ಲದೆ ಕೆಲಸ ಮಾಡುತ್ತಾ ಆತ್ಮದ ಕಲ್ಪನೆಯಲ್ಲಿ ದೃಢವಾಗಿ ನೆಲೆಗೊಂಡಿದ್ದರೆ ಮಾತ್ರ ಈ ಸಾಕ್ಷಾತ್ಕಾರವು ಸಾಧ್ಯ.

## ಶ್ಲೋಕ - 2

**ಶ್ರೀ ಭಗವಾನುವಾಚ**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ |**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ||೨||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಕುತಃ**—ಎಲ್ಲಿಂದ; **ತ್ವಾ**—ನಿನಗೆ; **ಕಶ್ಮಲಮ್**—ಕಶ್ಮಲವು; **ಇದಮ್**—ಈ; **ವಿಷಮೇ**—ಈ ಕಷ್ಟಕಾಲದಲ್ಲಿ; **ಸಮುಪಸ್ಥಿತಮ್**—ಬಂದಿತು; **ಅನಾರ್ಯ**—ಜೀವನದ ಮೌಲ್ಯವನ್ನು ತಿಳಿಯದ ವ್ಯಕ್ತಿಗಳು; **ಜುಷ್ಟಮ್**—ಆಚರಿಸಿದ; **ಅಸ್ವರ್ಗ್ಯಮ್**—ಊರ್ಧ್ವ ಲೋಕಗಳಿಗೆ ಮಾರ್ಗತೋರದ; **ಅಕೀರ್ತಿ**—ಅಪಕೀರ್ತಿಯನ್ನು; **ಕರಮ್**—ಉಂಟುಮಾಡುವ; **ಅರ್ಜುನ**—ಅರ್ಜುನನೇ;

## ಅನುವಾದ

**ದೇವೋತ್ತಮ ಪರಮ ಪುರುಷನು ಹೇಳಿದನು — ಪ್ರಿಯ ಅರ್ಜುನ, ಈ ಕಶ್ಮಲವು ನಿನಗೆ ಹೇಗೆ ಬಂದಿತು? ಬದುಕಿನ ಮಹತ್ವವನ್ನು ತಿಳಿದ ಮನುಷ್ಯನಿಗೆ ಈ ಕಶ್ಮಲವು ಭೂಷಣವಲ್ಲ; ಅನಾರ್ಯವಾದದ್ದು. ಇಂತಹ ಕಶ್ಮಲವು ಸ್ವರ್ಗಕ್ಕೆ ಕೊಂಡೊಯ್ಯುವುದಿಲ್ಲ, ಅಪಕೀರ್ತಿಗೆ ಕಾರಣವಾಗುತ್ತದೆ.**

## ಭಾವಾರ್ಥ

ಕೃಷ್ಣನೂ, ದೇವೋತ್ತಮ ಪರಮ ಪುರುಷನೂ ಅಭಿನ್ನ. ಆದುದರಿಂದಲೇ ಗೀತೆಯ ಉದ್ದಕ್ಕೂ ಶ್ರೀಕೃಷ್ಣನನ್ನು ಭಗವಾನ್ ಎಂದೇ ಕರೆಯಲಾಗಿದೆ. ಭಗವಾನನು ಪರಮಸತ್ಯದಲ್ಲಿ ಅಂತಿಮ. ಪರಮಸತ್ಯದ ಸಾಕ್ಷಾತ್ಕಾರವು ತಿಳುವಳಿಕೆಯ ಮೂರು ಅವಸ್ಥೆಗಳಲ್ಲಿ ಬರುತ್ತದೆ. ಈ ಮೂರು ಅವಸ್ಥೆಗಳೆಂದರೆ ಬ್ರಹ್ಮನ್ ಅಥವಾ ನಿರಾಕಾರವಾದ ಸರ್ವವ್ಯಾಪಿಯಾದ ಆತ್ಮ; ಪರಮಾತ್ಮ ಅಥವಾ ಎಲ್ಲ ಜೀವಿಗಳ ಹೃದಯಗಳಲ್ಲಿ ನೆಲೆಸಿರುವ ಅಂತರ್ಯಾಮಿಯಾದ ಪರಮ ಆತ್ಮ; ಮೂರನೆಯದಾಗಿ ಭಗವಾನ್ ಅಥವಾ ದೇವೋತ್ತಮನಾದ ಪರಮ ಪುರುಷ ಶ್ರೀಕೃಷ್ಣ. ಶ್ರೀಮದ್ಭಾಗವತದಲ್ಲಿ (1.2.11) ಪರಮಸತ್ಯದ ಈ ಕಲ್ಪನೆಯನ್ನು ಹೀಗೆ ವಿವರಿಸಿದೆ —

**ವದನ್ತಿ ತತ್ ತತ್ತ್ವವಿದಸ್**
**ತತ್ತ್ವಂ ಯಜ್ ಜ್ಞಾನಮದ್ವಯಮ್ |**
**ಬ್ರಹ್ಮೇತಿ ಪರಮಾತ್ಮೇತಿ**
**ಭಗವಾನ್ ಇತಿ ಶಬ್ದ್ಯತೇ ||**

"ಪರಮಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವವನಿಗೆ ತಿಳುವಳಿಕೆಯ ಮೂರು ಅವಸ್ಥೆಗಳಲ್ಲಿ ಪರಮಸತ್ಯದ ಅರಿವಾಗುತ್ತದೆ. ಆ ಮೂರೂ ಒಂದೇ. ಪರಮಸತ್ಯದ ಈ ಅವಸ್ಥೆಗಳನ್ನು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂದು ಕರೆಯುತ್ತಾರೆ."

ಈ ಮೂರು ದೈವೀಮುಖಗಳನ್ನು ಸೂರ್ಯನ ಸಾದೃಶ್ಯದಿಂದ ವಿವರಿಸಬಹುದು. ಸೂರ್ಯನಿಗೂ ಮೂರು ಮುಖಗಳು—ಸೂರ್ಯಪ್ರಕಾಶ, ಸೂರ್ಯನ ಮೇಲ್ಮೈ ಮತ್ತು ಸೂರ್ಯಗ್ರಹ. ಸೂರ್ಯಪ್ರಕಾಶವನ್ನು ಅಧ್ಯಯನ ಮಾಡುವವನು ಪ್ರಾರಂಭದ ಘಟ್ಟದ ವಿದ್ಯಾರ್ಥಿ. ಸೂರ್ಯನ ಮೇಲ್ಮೈಯನ್ನು ಅರ್ಥಮಾಡಿಕೊಳ್ಳಬಲ್ಲವನು ಇನ್ನೂ ಮುಂದಕ್ಕೆ ಹೋಗಿದ್ದಾನೆ. ಸೂರ್ಯಗ್ರಹವನ್ನು ಪ್ರವೇಶಿಸಬಲ್ಲವನು ಅತ್ಯಂತ ಪ್ರಬುದ್ಧನಾದವನು. ಸೂರ್ಯಪ್ರಕಾಶವನ್ನಷ್ಟೇ, ಎಂದರೆ ಅದರ ಸರ್ವವ್ಯಾಪಕತ್ವ ಮತ್ತು ನಿರಾಕಾರ ಸ್ವಭಾವದ ಕೋರೈಸುವ ಪ್ರಕಾಶವನ್ನಷ್ಟೇ, ತಿಳಿದುಕೊಂಡು ತೃಪ್ತಿಪಡುವ ವಿದ್ಯಾರ್ಥಿಗಳಿದ್ದಾರೆ; ಇವರನ್ನು ಪರಮಸತ್ಯದ ಬ್ರಹ್ಮನ್ ಸ್ವರೂಪವನ್ನಷ್ಟೇ ಸಾಕ್ಷಾತ್ಕಾರ ಮಾಡಿಕೊಳ್ಳುವವರಿಗೆ ಹೋಲಿಸಬಹುದು. ಇನ್ನೂ ಮುಂದೆ ಹೋದ ವಿದ್ಯಾರ್ಥಿಯು ಸೂರ್ಯಮಂಡಲವನ್ನು ಅರ್ಥಮಾಡಿಕೊಳ್ಳಬಲ್ಲ; ಇದನ್ನು ಪರಮಸತ್ಯದ ಪರಮಾತ್ಮ ಸ್ವರೂಪಕ್ಕೆ ಹೋಲಿಸುತ್ತಾರೆ. ಸೂರ್ಯಗ್ರಹದ ಹೃದಯವನ್ನು ಒಳಹೊಗಬಲ್ಲ ವಿದ್ಯಾರ್ಥಿಯನ್ನು ಪರಮಸತ್ಯದ ಸಾಕಾರಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡವರಿಗೆ ಹೋಲಿಸಬಹುದು. ಆದುದರಿಂದ, ಎಲ್ಲ ಅಭ್ಯಾಸಿಗಳೂ ಪರಮ ಸತ್ಯ ಎನ್ನುವ ಒಂದೇ ವಿಷಯವನ್ನು ಅಧ್ಯಯನ ಮಾಡುತ್ತಿದ್ದರೂ, ಭಕ್ತರು ಎಂದರೆ ಪರಮಸತ್ಯದ ಭಗವಾನ್ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವ ದಿವ್ಯವಾದಿಗಳು, ದಿವ್ಯವಾದಿಗಳಲ್ಲೇ ಅತಿ ಶ್ರೇಷ್ಠರಾದವರು. ಸೂರ್ಯನ ಪ್ರಕಾಶ ಸೂರ್ಯಮಂಡಲ ಮತ್ತು ಸೂರ್ಯಗ್ರಹದ ಒಳ ಆಗುಹೋಗುಗಳು, ಇವುಗಳಲ್ಲಿ ಒಂದರಿಂದ ಇನ್ನೊಂದನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಆದರೂ ಈ ಮೂರು ಅವಸ್ಥೆಗಳ ವಿದ್ಯಾರ್ಥಿಗಳೆಲ್ಲ ಒಂದೇ ವರ್ಗಕ್ಕೆ ಸೇರಿದವರಲ್ಲ.

ಭಗವಾನ್ ಎನ್ನುವ ಸಂಸ್ಕೃತ ಪದವನ್ನು ವ್ಯಾಸದೇವರ ತಂದೆಯೂ ಅಧಿಕೃತವಾಗಿ ಹೇಳಬಲ್ಲವರೂ ಆದ ಪರಾಶರ ಮುನಿಗಳು ವಿವರಿಸಿದ್ದಾರೆ. ಎಲ್ಲ ಸಂಪತ್ತು, ಎಲ್ಲ ಶಕ್ತಿ, ಎಲ್ಲ ಕೀರ್ತಿ, ಎಲ್ಲ ಸೌಂದರ್ಯ, ಎಲ್ಲ ಜ್ಞಾನ, ಎಲ್ಲ ವೈರಾಗ್ಯವನ್ನು ಹೊಂದಿರುವ ಪರಮ ಪುರುಷನನ್ನೇ ಭಗವಾನ್ ಎಂದು ಕರೆಯುವುದು. ತುಂಬ ಶ್ರೀಮಂತರಾದವರು, ತುಂಬ ಬಲಶಾಲಿಗಳು, ತುಂಬ ಸುಂದರರು, ತುಂಬ ಕೀರ್ತಿಶಾಲಿಗಳು, ತುಂಬ ವಿದ್ವಾಂಸರು ಮತ್ತು ತುಂಬ ನಿರ್ಲಿಪ್ತರು ಆದ ಅನೇಕ ವ್ಯಕ್ತಿಗಳಿದ್ದಾರೆ. ಆದರೆ ನಾನು ಎಲ್ಲ ಸಂಪತ್ತು, ಎಲ್ಲ ಸಾಮರ್ಥ್ಯ ಮೊದಲಾದುವನ್ನು ಸಂಪೂರ್ಣವಾಗಿ ಹೊಂದಿದ್ದೇನೆ ಎಂದು ಯಾರೂ ಹೇಳಿಕೊಳ್ಳುವಂತಿಲ್ಲ. ಕೃಷ್ಣನೊಬ್ಬ ಮಾತ್ರ ಹೀಗೆ ಹೇಳಿಕೊಳ್ಳಬಲ್ಲ. ಏಕೆಂದರೆ ಅವನು ದೇವೋತ್ತಮ ಪರಮ ಪುರುಷ. ಬ್ರಹ್ಮ ಶಿವ ಅಥವಾ ನಾರಾಯಣ ಇವರೂ ಸೇರಿದಂತೆ ಯಾವ ವ್ಯಕ್ತಿಗೂ ಕೃಷ್ಣನಿಗಿರುವಷ್ಟು ಐಶ್ವರ್ಯಗಳಿಲ್ಲ. ಆದ್ದರಿಂದ ಬ್ರಹ್ಮ ಸಂಹಿತೆಯಲ್ಲಿ ಶ್ರೀಕೃಷ್ಣನು ದೇವೋತ್ತಮನಾದ ಪರಮ ಪುರುಷ ಎಂದು ಬ್ರಹ್ಮನೇ ನಿರ್ಣಯಿಸುತ್ತಾನೆ. ಯಾರೂ ಅವನಿಗೆ ಸಮಾನರಲ್ಲ; ಅವನನ್ನು ಮೀರಿಸುವವರು ಯಾರೂ ಇಲ್ಲ. ಅವನು ಅನಾದಿಪ್ರಭು ಅಥವಾ ಭಗವಾನ್. ಗೋವಿಂದ ಎಂದು ಅವನ ಹೆಸರು. ಎಲ್ಲ ಕಾರಣಗಳ ಪರಮ ಕಾರಣನೂ ಅವನೇ—

**ಈಶ್ವರಃ ಪರಮಃ ಕೃಷ್ಣಃ ಸತ್-ಚಿದ್-ಆನನ್ದವಿಗ್ರಹಃ ।**
**ಅನಾದಿರಾದಿರ್ಗೋವಿನ್ದಃ ಸರ್ವಕಾರಣಕಾರಣಮ್ ॥**

"ಭಗವಾನನ ಗುಣಗಳನ್ನು ಹೊಂದಿರುವವರು ಅನೇಕರಿದ್ದಾರೆ. ಆದರೆ ಕೃಷ್ಣನೇ ಸರ್ವಶ್ರೇಷ್ಠ. ಏಕೆಂದರೆ ಅವನನ್ನು ಮೀರಬಲ್ಲವರು ಯಾರೂ ಇಲ್ಲ. ಅವನು ಪರಮ ಪುರುಷ; ಅವನ ಶರೀರ ನಿತ್ಯವಾದದ್ದು ಹಾಗೂ ಜ್ಞಾನ ಮತ್ತು ಆನಂದದಿಂದ ತುಂಬಿ ತುಳುಕಾಡುವುದು. ಅವನೇ ಅನಾದಿಪ್ರಭು ಗೋವಿಂದ ಮತ್ತು ಎಲ್ಲ ಕಾರಣಗಳ ಕಾರಣ" (ಬ್ರಹ್ಮ ಸಂಹಿತೆ 5.1)

ಭಾಗವತದಲ್ಲಿ ದೇವೋತ್ತಮನಾದ ಪರಮ ಪುರುಷನ ಅನೇಕ ಅವತಾರಗಳ ಪಟ್ಟಿಯಿದೆ. ಆದರೆ ಕೃಷ್ಣನನ್ನು ಮೂಲ ದೇವೋತ್ತಮ ಪುರುಷನೆಂದು ವರ್ಣಿಸಲಾಗಿದೆ; ಅವನಿಂದ ಅನೇಕ ಅವತಾರಗಳೂ ದೇವೋತ್ತಮ ಪುರುಷರೂ ವಿಸ್ತರಣಗೊಳ್ಳುತ್ತಾರೆ —

**ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।**
**ಇಂದ್ರಾರಿವ್ಯಾಕುಲಂ ಲೋಕಂ ಮೃಡಯನ್ತಿ ಯುಗೇ ಯುಗೇ ॥**

ಇಲ್ಲಿ ಕೊಟ್ಟಿರುವ ದೇವೋತ್ತಮನ ಅವತಾರಗಳೆಲ್ಲ ಪರಮ ಪ್ರಭುವಿನ ಸ್ವಾಂಶ ವಿಸ್ತರಣೆಗಳು ಅಥವಾ ಅಂತಹ ಸ್ವಾಂಶ ವಿಸ್ತರಣೆಗಳ ಅಂಶಗಳು. ಆದರೆ ಕೃಷ್ಣನು ಸ್ವಯಂ ದೇವೋತ್ತಮ ಪರಮ ಪುರುಷ. (ಭಾಗವತ, 1.3.28)

ಆದ್ದರಿಂದ ಕೃಷ್ಣನು ಮೂಲ ದೇವೋತ್ತಮ ಪರಮ ಪರುಷನು. ಅವನೇ ಪರಮ ಸತ್ಯ. ಪರಮಾತ್ಮನ ಮತ್ತು ಬ್ರಹ್ಮನ ಮೂಲವೂ ಅವನೇ.

ದೇವೋತ್ತಮ ಪರಮ ಪುರುಷನ ಸನ್ನಿಧಿಯಲ್ಲಿ ತನ್ನ ಬಂಧುಗಳಿಗಾಗಿ ಅರ್ಜುನನು ದುಃಖಿಸುವುದು ಅನುಚಿತವಾದದ್ದು. ಆದುದರಿಂದ ಕೃಷ್ಣನು **ಕುತಃ** (ಎಲ್ಲಿಂದ) ಎನ್ನುವ ಪದವನ್ನು ಬಳಸಿ ತನ್ನ ಆಶ್ಚರ್ಯವನ್ನು ವ್ಯಕ್ತಪಡಿಸಿದ. ಆರ್ಯರೆನ್ನಿಸಿಕೊಂಡು ನಾಗರಿಕ ವರ್ಗಕ್ಕೆ ಸೇರಿದ ಮನುಷ್ಯರಲ್ಲಿ ಇಂತಹ ಕಶ್ಮಲಗಳಿರುತ್ತವೆಂದು ನಿರೀಕ್ಷಿಸುವುದಿಲ್ಲ. ಬದುಕಿನ ಮೌಲ್ಯವನ್ನು ತಿಳಿದ ಮತ್ತು ಆಧ್ಯಾತ್ಮಿಕ ಸಾಕ್ಷಾತ್ಕಾರದ ಆಧಾರವಿರುವ ನಾಗರಿಕತೆಯನ್ನು ಹೊಂದಿರುವವರನ್ನು ಆರ್ಯರು ಎಂದು ಕರೆಯುತ್ತಾರೆ. ಬದುಕಿನ ಪ್ರಾಪಂಚಿಕ ಕಲ್ಪನೆಯನ್ನೇ ಅನುಸರಿಸುವವರಿಗೆ ಬದುಕಿನ ಗುರಿಯು ತಿಳಿದಿರುವುದಿಲ್ಲ; ಅವರು ಲೌಕಿಕ ಜಗತ್ತಿನ ಹೊರ ಲಕ್ಷಣಗಳಿಗೆ ಬೆರಗಾಗುತ್ತಾರೆ. ಆದುದರಿಂದ ಅವರಿಗೆ ಮುಕ್ತಿ ಏನೆನ್ನುವುದು ತಿಳಿದಿರುವುದಿಲ್ಲ. ಐಹಿಕ ಬಂಧನದಿಂದ ಮುಕ್ತಿ ಎಂದರೇನು ಎಂದು ತಿಳಿಯದವನನ್ನು ಅನಾರ್ಯರು ಎಂದು ಕರೆಯುತ್ತಾರೆ. ಅರ್ಜುನನು ಕ್ಷತ್ರಿಯನಾದರೂ ಯುದ್ಧಮಾಡಲು ನಿರಾಕರಿಸಿ ತನ್ನ ನಿಯಮಿತ ಕರ್ತವ್ಯದ ದಾರಿಯನ್ನು ಬಿಟ್ಟು ಹೋಗುತ್ತಿದ್ದ. ಈ ಹೇಡಿತನದ ಕೆಲಸವು ಅನಾರ್ಯರಿಗೆ ಮಾತ್ರ ತಕ್ಕುದೆಂದು ಹೇಳಲಾಗಿದೆ. ಇಂತಹ ಕರ್ತವ್ಯಲೋಪವು ಮನುಷ್ಯನಿಗೆ ಆಧ್ಯಾತ್ಮಿಕ ಬದುಕಿನಲ್ಲಿ ಮುನ್ನಡೆಯಲು ನೆರವಾಗುವುದಿಲ್ಲ; ಈ ಜಗತ್ತಿನಲ್ಲಿ ಕೀರ್ತಿಶಾಲಿಯಾಗಲು ಅವಕಾಶವನ್ನೂ ನೀಡುವುದಿಲ್ಲ. ತನ್ನ ಬಂಧುಗಳ ಬಗ್ಗೆ ಅನುಕಂಪವೆಂದೆನ್ನುವ ಭಾವವನ್ನು ಅರ್ಜುನ ವ್ಯಕ್ತಪಡಿಸಿದ. ಈ ಭಾವವನ್ನು ಶ್ರೀಕೃಷ್ಣ ಅನುಮೋದಿಸಲಿಲ್ಲ.

## ಶ್ಲೋಕ - 3

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ |**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ ||೩||**

**ಕ್ಲೈಬ್ಯಮ್**—ಷಂಡತನವನ್ನು; **ಮಾ ಸ್ಮಗಮಃ**—ಹೊಂದಬೇಡ; **ಪಾರ್ಥ**—ಪೃಥೆಯ ಮಗನೇ; **ನ**—ಎಂದಿಗೂ ಇಲ್ಲ; **ಏತತ್**—ಇದು; **ತ್ವಯಿ**—ನಿನಗೆ; **ಉಪಪದ್ಯತೇ**—ಸರಿಹೊಂದುವುದು; **ಕ್ಷುದ್ರಮ್**—ಅಲ್ಪವಾದ; **ಹೃದಯ**—ಹೃದಯದ; **ದೌರ್ಬಲ್ಯಮ್**—ದೌರ್ಬಲ್ಯವನ್ನು; **ತ್ಯಕ್ತ್ವಾ**—ತ್ಯಜಿಸಿ; **ಉತ್ತಿಷ್ಠ**—ಮೇಲೇಳು; **ಪರಮ್ ತಪ**—ಶತ್ರುಗಳನ್ನು ದಂಡಿಸುವವನೇ;

## ಅನುವಾದ

**ಪೃಥೆಯ ಮಗನಾದ ಪಾರ್ಥನೆ, ಷಂಡತನವನ್ನು ಹೊಂದಬೇಡ. ಇದು ನಿನಗೆ ಯೋಗ್ಯವಾದದ್ದಲ್ಲ. ಶತ್ರುಗಳಿಗೆ ತಾಪವನ್ನುಂಟು ಮಾಡುವವನೆ, ಈ ಹೃದಯ ದೌರ್ಬಲ್ಯವು ಕ್ಷುದ್ರವಾದದ್ದು; ಇದನ್ನು ಬಿಟ್ಟು ಮೇಲೇಳು.**

## ಭಾವಾರ್ಥ

ಪೃಥೆಯು ಕೃಷ್ಣನ ತಂದೆ ವಾಸುದೇವನ ತಂಗಿ; ಅರ್ಜುನನನ್ನು ಕೃಷ್ಣನು ಪೃಥೆಯ ಮಗ ಎಂದು ಕರೆಯುತ್ತಾನೆ. ಅರ್ಜುನನೂ ಕೃಷ್ಣನೂ ರಕ್ತಸಂಬಂಧಿಗಳು. ಕ್ಷತ್ರಿಯನ ಮಗನಾದವನು ಯುದ್ಧವಿಮುಖನಾದರೆ ಅವನು ಹೆಸರಿನಲ್ಲಷ್ಟೇ ಕ್ಷತ್ರಿಯ; ಬ್ರಾಹ್ಮಣನ ಮಗನಾದವನು ಧರ್ಮಶ್ರದ್ಧೆ ಇಲ್ಲದೆ ನಡೆದುಕೊಂಡರೆ ಅವನು ಹೆಸರಿನಲ್ಲಷ್ಟೇ ಬ್ರಾಹ್ಮಣ. ಇಂತಹ ಕ್ಷತ್ರಿಯರೂ ಬ್ರಾಹ್ಮಣರೂ ತಮ್ಮ ತಂದೆಯರ ಮಕ್ಕಳಾಗಲು ಯೋಗ್ಯರಲ್ಲ. ಅರ್ಜುನನು ಕ್ಷತ್ರಿಯನೊಬ್ಬನ ಅಯೋಗ್ಯ ಮಗನಾಗಬಾರದು ಎಂದು ಕೃಷ್ಣ ಬಯಸಿದ. ಅರ್ಜುನನು ಕೃಷ್ಣನ ಅತ್ಯಂತ ಆತ್ಮೀಯ ಗೆಳೆಯ. ರಥದಲ್ಲಿ ಕುಳಿತು ಕೃಷ್ಣನೇ ಅವನಿಗೆ ಮಾರ್ಗದರ್ಶನ ಮಾಡುತ್ತಿದ್ದ. ಈ ಎಲ್ಲ ಭಾಗ್ಯವಿದ್ದರೂ ಅರ್ಜುನನು ಯುದ್ಧಮಾಡಲು ನಿರಾಕರಿಸಿದರೆ ಅವನ ಕಾರ್ಯವು ಅಕೀರ್ತಿಕರವಾಗುವುದು. ಆದುದರಿಂದ ಕೃಷ್ಣನು ಇಂತಹ ವರ್ತನೆಯು ಅರ್ಜುನನ ವ್ಯಕ್ತಿತ್ವಕ್ಕೆ ಭೂಷಣವಲ್ಲ ಎಂದು ಹೇಳಿದ. ಪೂಜ್ಯರಾದ ಭೀಷ್ಮರು ಮತ್ತು ತನ್ನ ಬಂಧುಗಳ ವಿಷಯದಲ್ಲಿ ಉದಾರವಾಗಿ ನಡೆದುಕೊಂಡು ತಾನು ಯುದ್ಧ ಮಾಡುವುದಿಲ್ಲ ಎಂದು ಅರ್ಜುನನು ಹೇಳಬಹುದು. ಆದರೆ ಇಂತಹ ಔದಾರ್ಯವು ಹೃದಯ ದೌರ್ಬಲ್ಯವಷ್ಟೇ ಎಂದು ಕೃಷ್ಣನ ಭಾವನೆ. ಬಲ್ಲವರು ಯಾರೂ ಇಂತಹ ಹುಸಿ ಔದಾರ್ಯವನ್ನು ಒಪ್ಪುವುದಿಲ್ಲ. ಆದುದರಿಂದ ಅರ್ಜುನನಂತಹವರು ಕೃಷ್ಣನ ನೇರ ಮಾರ್ಗದರ್ಶನದಲ್ಲಿ ಈ ಬಗೆಯ ಔದಾರ್ಯವನ್ನು ಅಥವಾ ಹುಸಿ ಅಹಿಂಸೆಯನ್ನು ತ್ಯಜಿಸಬೇಕು.

## ಶ್ಲೋಕ - 4

**ಅರ್ಜುನ ಉವಾಚ**

**ಕಥಂ ಭೀಷ್ಮಮಹಂ ಸಙ್ಖ್ಯೇ ದ್ರೋಣಂ ಚ ಮಧುಸೂದನ |**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ||೪||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಕಥಮ್**—ಹೇಗೆ; **ಭೀಷ್ಮಮ್**—ಭೀಷ್ಮರನ್ನು; **ಅಹಮ್**—ನಾನು; **ಸಂಸ್ಖ್ಯೇ**—ಯುದ್ಧದಲ್ಲಿ; **ದ್ರೋಣಮ್**—ದ್ರೋಣರನ್ನು; **ಚ**—ಕೂಡ; **ಮಧುಸೂದನ**—ಮಧುಹಂತಕನೇ; **ಇಷುಭಿಃ**—ಬಾಣಗಳಿಂದ; **ಪ್ರತಿಯೋತ್ಸ್ಯಾಮಿ**—ಪ್ರತಿರೋಧಿಸಲಿ; **ಪೂಜಾ ಅರ್ಹೌ**—ಪೂಜಾರ್ಹರಾದ; **ಅರಿಸೂದನ**—ಶತ್ರು ಸಂಹಾರಕನೇ;

## ಅನುವಾದ

**ಅರ್ಜುನನು ಕೇಳಿದನು — ಶತ್ರುಸಂಹಾರಕನೇ, ಮಧುವನ್ನು ಕೊಂದವನೇ, ಪೂಜಾರ್ಹರಾದ ಭೀಷ್ಮ, ದ್ರೋಣ ಮೊದಲಾದವರನ್ನು ಯುದ್ಧದಲ್ಲಿ ಬಾಣಗಳಿಂದ ಹೇಗೆ ಹೊಡೆಯಲಿ?**

## ಭಾವಾರ್ಥ

ಪಿತಾಮಹ ಭೀಷ್ಮರು, ಗುರು ದ್ರೋಣಾಚಾರ್ಯರು ಇಂತಹ ಹಿರಿಯರು ಯಾವಾಗಲೂ ಪೂಜಾರ್ಹರು. ಅವರೇ ಆಕ್ರಮಣ ಮಾಡಿದರೂ ಅವರ ವಿರುದ್ಧ ಅಸ್ತ್ರಪ್ರಯೋಗವನ್ನು ಮಾಡಬಾರದು. ಹಿರಿಯರೊಡನೆ ಮಾತಿನ ಕಾಳಗವೂ ಸಲ್ಲದು ಎನ್ನುವುದು ಯೋಗ್ಯ ವರ್ತನೆ. ಅವರು ಕೆಲವೊಮ್ಮೆ ಕಟುವಾಗಿ ನಡೆದುಕೊಂಡರೂ ಅವರ ಬಗೆಗೆ ಒರಟಾಗಿ ವರ್ತಿಸಬಾರದು. ಹೀಗಿರುವಾಗ, ಅರ್ಜುನನು ಅವರ ಮೇಲೆ ಮರು ಅಸ್ತ್ರಪ್ರಯೋಗ ಮಾಡುವುದು ಹೇಗೆ ಸಾಧ್ಯ? ಕೃಷ್ಣನೇ ಎಂದಾದರೂ ತನ್ನ ತಾತ ಉಗ್ರಸೇನನ ಮೇಲಾಗಲಿ ಗುರು ಸಾಂದೀಪನಿ ಮುನಿಯ ಮೇಲಾಗಲಿ ಆಕ್ರಮಣ ಮಾಡುವನೇ? ಅರ್ಜುನನು ಕೃಷ್ಣನ ಮುಂದಿಟ್ಟ ಕೆಲವು ವಾದಗಳು ಇವು.

## ಶ್ಲೋಕ - 5

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಞ್ಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥೫॥**

**ಗುರೂನ್**—ಹಿರಿಯರನ್ನು; **ಅಹತ್ವಾ**—ಕೊಲ್ಲದೇ; **ಹಿ**—ಖಂಡಿತವಾಗಿಯೂ; **ಮಹಾನುಭಾವಾನ್**—ಮಹಾತ್ಮರಾದ; **ಶ್ರೇಯಃ**—ಉತ್ತಮವಾದುದು; **ಭೋಕ್ತುಮ್**—ಬದುಕನ್ನು ಸುಖಿಸುವುದು; **ಭೈಕ್ಷ್ಯಮ್**—ಭಿಕ್ಷೆಬೇಡುವುದರಿಂದ; **ಅಪಿ**—ಕೂಡ; **ಇಹ**—ಈ ಬದುಕಿನಲ್ಲಿ; **ಲೋಕೇ**—ಈ ಜಗತ್ತಿನಲ್ಲಿ; **ಹತ್ವಾ**—ಕೊಂದು; **ಅರ್ಥ**—ಪ್ರಯೋಜನ; **ಕಾಮಾನ್**—ಅಪೇಕ್ಷೆಗಳನ್ನು; **ತು**—ಆದರೆ; **ಗುರೂನ್**—ಹಿರಿಯರನ್ನು; **ಇಹ**—ಈ ಜಗತ್ತಿನಲ್ಲಿ; **ಏವ**—ಖಂಡಿತವಾಗಿ; **ಭುಞ್ಜೀಯ**—ಭೋಗಿಸಬೇಕಾಗುತ್ತದೆ; **ಭೋಗಾನ್**—ಭೋಗಗಳನ್ನು; **ರುಧಿರ**—ರಕ್ತದಿಂದ; **ಪ್ರದಿಗ್ಧಾನ್**—ಸಿಕ್ತವಾದುದನ್ನು.

## ಅನುವಾದ

**ನನ್ನ ಗುರುಗಳಂತಹ ಮಹಾನುಭಾವರನ್ನು ಕೊಂದು ಜೀವಿಸುವುದಕ್ಕಿಂತ ಈ ಜಗತ್ತಿನಲ್ಲಿ ಭಿಕ್ಷೆಯನ್ನು ಬೇಡಿ ಬದುಕುವುದು ಉತ್ತಮ. ಐಹಿಕ ಜೀವನದಲ್ಲಿ ಐಶ್ವರ್ಯವನ್ನು ಬಯಸುವರಾದರೂ ಅವರು**

**ಗುರುಗಳು. ಅವರನ್ನು ಕೊಂದರೆ ನಾವು ಅನುಭವಿಸುವ ಎಲ್ಲ ಭೋಗಗಳಿಗೂ ರಕ್ತವು ಅಂಟಿಕೊಂಡಿರುತ್ತದೆ.**

## ಭಾವಾರ್ಥ

ಶಾಸ್ತ್ರಗಳ ಸಂಹಿತೆಯ ಪ್ರಕಾರ ಅಯೋಗ್ಯ ಕೆಲಸವನ್ನು ಮಾಡುವ ಮತ್ತು ವಿವೇಚನೆಯನ್ನು ಕಳೆದುಕೊಂಡ ಗುರುವು ತ್ಯಜಿಸಲು ಅರ್ಹನು. ದುರ್ಯೋಧನನು ಆರ್ಥಿಕ ನೆರವನ್ನು ನೀಡಿದನೆಂದು ಭೀಷ್ಮ ದ್ರೋಣರು ಅವನ ಪಕ್ಷವನ್ನು ವಹಿಸಬೇಕಾಯಿತು. ಆರ್ಥಿಕ ಕಾರಣಗಳನ್ನು ಮಾತ್ರ ಪರಿಗಣಿಸಿ ಅವರು ಇಂತಹ ಸ್ಥಾನವನ್ನು ಒಪ್ಪಿಕೊಳ್ಳಬಾರದಾಗಿತ್ತು. ಈ ಸನ್ನಿವೇಶದಲ್ಲಿ ಅವರು ಗುರುವಿನ ಸ್ಥಾನವನ್ನು ಕಳೆದುಕೊಂಡಿದ್ದಾರೆ. ಆದರೆ ಅರ್ಜುನನು, ಹೀಗಾದರೂ ಅವರು ತನ್ನ ಗುರುಗಳು, ಅವರನ್ನು ಕೊಂದು ಭೋಗಗಳನ್ನು ಅನುಭವಿಸುವುದೆಂದರೆ ರಕ್ತಲೇಪಿತವಾದ ಯುದ್ಧಗಳಿಕೆಯನ್ನು ಸವಿದಂತೆ ಎಂದು ಭಾವಿಸುತ್ತಾನೆ.

## ಶ್ಲೋಕ - 6

**ನ ಚೈತದ್ ವಿದ್ಮಃ ಕತರನ್ನೋ ಗರೀಯೋ**
**ಯದ್ ವಾ ಜಯೇಮ ಯದಿ ವಾ ನೋ ಜಯೇಯುಃ |**
**ಯಾನೇವ ಹತ್ವಾ ನ ಜಿಜೀವಿಷಾಮಸ್**
**ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ||೬||**

**ನ**—ಇಲ್ಲ; **ಚ**—ಕೂಡ; **ಏತತ್**—ಇದು; **ವಿದ್ಮಃ**—ತಿಳಿದಿದೆ; **ಕತರತ್**—ಯಾವುದು; **ನಃ**—ನಮಗೆ; **ಗರೀಯಃ**—ಉತ್ತಮವಾದುದು; **ಯತ್ವಾ**—ಅಥವಾ; **ಜಯೇಮ**—ನಾವು ಗೆಲ್ಲುತ್ತೇವೆ; **ಯದಿ**—ಆದರೆ; **ವಾ**—ಅಥವಾ; **ನಃ**—ನಮ್ಮನ್ನು; **ಜಯೇಯುಃ**—ಅವರು ಗೆಲ್ಲುತ್ತಾರೆ; **ಯಾನ್**—ಅವರನ್ನು; **ಏವ**—ಖಂಡಿತವಾಗಿಯೂ; **ಹತ್ವಾ**—ಕೊಂದು; **ನ ಜಿಜೀವಿಷಾಮಃ**—ನಾವು ಬದುಕಲು ಬಯಸುವುದಿಲ್ಲ; **ತೇ**—ಅವರೆಲ್ಲ; **ಅವಸ್ಥಿತಾಃ**—ಇದ್ದಾರೆ; **ಪ್ರಮುಖೇ**— ಮುಂಭಾಗದಲ್ಲಿ; **ಧಾರ್ತರಾಷ್ಟ್ರಾಃ**—ಧೃತರಾಷ್ಟ್ರನ ಮಕ್ಕಳು.

## ಅನುವಾದ

**ಅವರನ್ನು ಸೋಲಿಸುವುದು ಅಥವಾ ಅವರಿಂದ ಸೋಲುವುದು ಎರಡರಲ್ಲಿ ಯಾವುದು ಉತ್ತಮ ಎಂದೂ ನಮಗೆ ತಿಳಿಯದು. ನಾವು ಧೃತರಾಷ್ಟ್ರನ ಮಕ್ಕಳನ್ನು ಕೊಂದರೆ ನಮಗೆ ಜೀವಿಸಬೇಕೆಂಬ ಆಸೆ ಇರುವುದಿಲ್ಲ. ಆದರೂ ರಣರಂಗದಲ್ಲಿ ಅವರೆಲ್ಲ ನಮ್ಮ ಮುಂದೆ ನಿಂತಿದ್ದಾರೆ.**

## ಭಾವಾರ್ಥ

ಯುದ್ಧಮಾಡುವುದು ಕ್ಷತ್ರಿಯನ ಕರ್ತವ್ಯವಾದರೂ ಯುದ್ಧಮಾಡಿ ಅನಗತ್ಯವಾದ ಹಿಂಸೆಯ ಸಾಧ್ಯತೆಗೆ ಎಡೆಕೊಡಬೇಕೆ ಅಥವಾ ಯುದ್ಧಮಾಡದೆ ಭಿಕ್ಷೆಬೇಡಿ ಬದುಕಬೇಕೆ ಎಂದು ಅರ್ಜುನನಿಗೆ ತಿಳಿಯದಾಯಿತು. ಅವನು ಶತ್ರುಗಳನ್ನು ಸೋಲಿಸದಿದ್ದಲ್ಲಿ ಜೀವನನಿರ್ವಹಣೆಗೆ ಭಿಕ್ಷುಕವೃತ್ತಿಯೊಂದೇ ಮಾರ್ಗ. ವಿಜಯದ ಭರವಸೆಯೂ ಇರಲಿಲ್ಲ. ಎರಡರಲ್ಲಿ ಯಾವ

ಪಕ್ಷವಾದರೂ ಗೆಲ್ಲಬಹುದಾಗಿತ್ತು. (ಪಾಂಡವರದು ನ್ಯಾಯದ ಪಕ್ಷ). ಅವರಿಗೇ ಜಯವು ಒಲಿದರೂ ಧೃತರಾಷ್ಟ್ರನ ಮಕ್ಕಳು ಯುದ್ಧದಲ್ಲಿ ಸತ್ತರೆ ಅವರಿಲ್ಲದೆ ಬದುಕುವುದು ತುಂಬ ಕಷ್ಟವಾಗುವುದು. ಇಂತಹ ಸ್ಥಿತಿಯಲ್ಲಿ ಪಾಂಡವರಿಗೆ ವಿಜಯವೂ ಒಂದು ಬಗೆಯ ಸೋಲೇ. ಅರ್ಜುನನ ಈ ಎಲ್ಲ ಅಂಶಗಳೂ ಅವನು ಭಗವಂತನ ಶ್ರೇಷ್ಠ ಭಕ್ತ, ಮಾತ್ರವಲ್ಲದೆ ಅವನು ತಿಳುವಳಿಕೆಯುಳ್ಳವನು ಮತ್ತು ತನ್ನ ಮನಸ್ಸು ಹಾಗೂ ಇಂದ್ರಿಯಗಳ ಮೇಲೆ ವಿಶೇಷ ನಿಯಂತ್ರಣ ಉಳ್ಳವನು ಎಂಬುದನ್ನು ತೋರಿಸಿದವು. ಅವನು ರಾಜವಂಶದಲ್ಲಿ ಜನಿಸಿದ್ದರೂ ಭಿಕ್ಷೆಬೇಡಿ ಬದುಕಲು ಸಿದ್ಧನಾಗಿರುವುದು ನಿರ್ಲಿಪ್ತತೆಯ ಮತ್ತೊಂದು ಲಕ್ಷಣ. ಈ ಎಲ್ಲ ಗುಣಗಳೊಂದಿಗೆ ಅರ್ಜುನನು ತನ್ನ ಗುರು ಶ್ರೀಕೃಷ್ಣನ ಉಪದೇಶದ ವಚನಗಳಲ್ಲಿ ಪೂರ್ಣಶ್ರದ್ಧೆಯನ್ನೂ ಹೊಂದಿದ್ದನು. ಅವನು ನಿಜವಾಗಿಯೂ ಸದ್ಗುಣಿಯಾಗಿದ್ದನೆಂಬುದನ್ನು ಇದು ಸೂಚಿಸುತ್ತದೆ. ಅರ್ಜುನನು ಮುಕ್ತಿಗೆ ಅರ್ಹನೆಂದು ನಿರ್ಣಯಿಸಬಹುದು. ಇಂದ್ರಿಯ ಸಂಯಮವಿಲ್ಲದೆ ಜ್ಞಾನಪೀಠವನ್ನೇರುವುದು ಸಾಧ್ಯವಿಲ್ಲ. ಜ್ಞಾನ ಮತ್ತು ಭಕ್ತಿಗಳಿಲ್ಲದೆ ಮುಕ್ತಿ ಸಾಧ್ಯವಿಲ್ಲ. ಐಹಿಕ ಸಂಬಂಧಗಳಲ್ಲಿ ಅವನಿಗಿದ್ದ ಅಗಾಧ ಗುಣಗಳಲ್ಲದೆ ಅರ್ಜುನನು ಈ ಎಲ್ಲ ಗುಣಗಳಲ್ಲಿಯೂ ಸಮರ್ಥನಾಗಿದ್ದ.

## ಶ್ಲೋಕ - 7

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಮ್ ಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥**

**ಕಾರ್ಪಣ್ಯ**—ಕೃಪಣತೆಯ; **ದೋಷ**—ದೌರ್ಬಲ್ಯದಿಂದ; **ಉಪಹತ**—ಬಾಧಿತವಾದ; **ಸ್ವಭಾವಃ**—ಸ್ವಭಾವವುಳ್ಳ; **ಪೃಚ್ಛಾಮಿ**—ಕೇಳುತ್ತಿದ್ದೇನೆ; **ತ್ವಾಮ್**—ನಿನ್ನನ್ನು; **ಧರ್ಮ**—ಧರ್ಮದ ಬಗ್ಗೆ; **ಸಮ್ ಮೂಢ**—ದಿಗ್ಭ್ರಮೆಗೊಂಡ; **ಚೇತಾಃ**—ಹೃದಯವುಳ್ಳ ನಾನು; **ಯತ್**—ಯಾವುದು; **ಶ್ರೇಯಃ**—ಸರ್ವಶ್ರೇಯಸ್ಕರವು; **ಸ್ಯಾತ್**—ಆಗಬಹುದು; **ನಿಶ್ಚಿತಮ್**—ನಿಶ್ಚಯವಾಗಿ; **ಬ್ರೂಹಿ**—ಹೇಳು; **ತತ್**—ಅದನ್ನು; **ಮೇ**—ನನಗೆ; **ಶಿಷ್ಯಃ** —ಶಿಷ್ಯನು; **ತೇ**—ನಿನ್ನ; **ಅಹಮ್**—ನಾನು ಆಗಿದ್ದೇನೆ; **ಶಾಧಿ**—ಬೋಧಿಸು; **ಮಾಮ್**—ನನಗೆ; **ತ್ವಾಮ್**—ನಿನಗೆ; **ಪ್ರಪನ್ನಮ್**—ಶರಣಾಗತನಾದ.

## ಅನುವಾದ

**ಕಾರ್ಪಣ್ಯದ ದೌರ್ಬಲ್ಯದಿಂದ ನಾನೀಗ ನನ್ನ ಕರ್ತವ್ಯದ ಬಗ್ಗೆ ಗೊಂದಲದಲ್ಲಿದ್ದೇನೆ; ಚಿತ್ತಸ್ವಾಸ್ಥ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದೇನೆ. ಇಂತಹ ಸ್ಥಿತಿಯಲ್ಲಿ ನನಗೆ ಯಾವುದು ಶ್ರೇಯಸ್ಕರ ಎಂದು ನಿಶ್ಚಯವಾಗಿ ಹೇಳು. ನಾನೀಗ ನಿನ್ನ ಶಿಷ್ಯ ಮತ್ತು ನಿನಗೆ ಶರಣಾಗತನಾದ ಆತ್ಮ. ದಯೆಯಿಟ್ಟು ನನಗೆ ಮಾರ್ಗದರ್ಶನ ಮಾಡು.**

## ಭಾವಾರ್ಥ

ಭೌತಿಕ ಚಟುವಟಿಕೆಗಳ ಸಂಪೂರ್ಣ ವ್ಯವಸ್ಥೆಯು ಪ್ರಕೃತಿಯ ರೀತಿಯಲ್ಲೇ ಎಲ್ಲರಿಗೂ

ಗೊಂದಲವನ್ನುಂಟುಮಾಡುತ್ತದೆ. ಹೆಜ್ಜೆಹೆಜ್ಜೆಗೂ ಗೊಂದಲ. ಆದ್ದರಿಂದ ಯಾರೇ ಆಗಲಿ ಬದುಕಿನ ಗುರಿಯನ್ನು ಸಾಧಿಸುವುದಕ್ಕೆ ಯೋಗ್ಯವಾದ ಮಾರ್ಗದರ್ಶನವನ್ನು ಮಾಡಬಲ್ಲ ಒಬ್ಬ ನಿಜವಾದ ಗುರುವಿನ ಬಳಿಗೆ ಹೋಗುವುದು ಉಚಿತವಾದದ್ದು. ನಾವು ಅಪೇಕ್ಷಿಸದೆಯೇ ಉಂಟಾಗುವ ಬದುಕಿನ ಗೊಂದಲಗಳಿಂದ ಪಾರಾಗುವುದಕ್ಕೆ ಒಬ್ಬ ನಿಜವಾದ ಗುರುವಿನ ಬಳಿಗೆ ಹೋಗಬೇಕೆಂದು ಎಲ್ಲ ವೈದಿಕ ಸಾಹಿತ್ಯವು ನಮಗೆ ಬೋಧಿಸುತ್ತವೆ. ಯಾರೂ ಉರಿ ಹೊತ್ತಿಸದೆಯೇ ಹೇಗೋ ಹೊತ್ತಿಕೊಂಡು ಪ್ರಜ್ವಲಿಸುವ ಕಾಡುಕಿಚ್ಚಿನಂತೆ ಈ ಗೊಂದಲಗಳು. ಇದೇ ರೀತಿಯಲ್ಲಿ ಜಗತ್ತಿನ ಸ್ಥಿತಿ ಎಂತಹುದೆಂದರೆ ನಮಗೆ ಗೊಂದಲ ಬೇಡವೆಂದರೂ ಬದುಕಿನ ಗೊಂದಲಗಳು ತಾವಾಗಿಯೇ ತಲೆದೋರುತ್ತವೆ. ಯಾರಿಗೂ ಬೆಂಕಿ ಬೇಡ. ಆದರೂ ಅದು ಹೊತ್ತಿಕೊಂಡು ಉರಿಯುತ್ತದೆ. ಇದರಿಂದ ನಮಗೆ ದಿಕ್ಕುತೋರದಾಗುತ್ತದೆ. ಬದುಕಿನ ಗೊಂದಲಗಳನ್ನು ಪರಿಹಾರ ಮಾಡಿಕೊಳ್ಳಲು ಮತ್ತು ಪರಿಹಾರ ವಿಜ್ಞಾನವನ್ನು ತಿಳಿಯಲು ಗುರುಶಿಷ್ಯ ಪರಂಪರೆಯಲ್ಲಿರುವ ಒಬ್ಬ ಗುರುವಿನ ಬಳಿಗೆ ಹೋಗಬೇಕೆಂದು ವೇದಗಳ ವಿವೇಕವಾಣಿ ಹೇಳುತ್ತದೆ. ನಿಜವಾದ ಗುರುವನ್ನು ಪಡೆದಿರುವ ಮನುಷ್ಯನಿಗೆ ಎಲ್ಲವೂ ತಿಳಿದಿರುತ್ತದೆ ಎಂದೇ ನಿರೀಕ್ಷಣೆ. ಆದುದರಿಂದ ಯಾರೇ ಆಗಲಿ ಐಹಿಕ ಗೊಂದಲಗಳಲ್ಲಿಯೇ ಉಳಿಯಬಾರದು; ಒಬ್ಬ ಗುರುವಿನ ಬಳಿಗೆ ಹೋಗಬೇಕು. ಇದೇ ಈ ಶ್ಲೋಕದ ಭಾವಾರ್ಥ.

ಐಹಿಕ ಗೊಂದಲಗಳಲ್ಲಿ ಇರುವ ಮನುಷ್ಯ ಯಾರು? ಅವನು ಬದುಕಿನ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳದವನು. ಗೊಂದಲದಲ್ಲಿ ಸಿಕ್ಕ ಮನುಷ್ಯನನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ (3.8.10) ಹೀಗೆ ವರ್ಣಿಸಿದೆ—**ಯೋ ವಾ ಏತದ್ ಅಕ್ಷರಂ ಗಾರ್ಗಿ ಅವಿದಿತ್ವಾಸ್ಮಾ-ಲೋಕಾತ್ ಪ್ರೈತಿ ಸ ಕೃಪಣಃ** "ಮನುಷ್ಯನಾಗಿ ಬದುಕಿನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳದೆ, ಆತ್ಮಸಾಕ್ಷಾತ್ಕಾರದ ವಿಜ್ಞಾನವನ್ನು ತಿಳಿದುಕೊಳ್ಳದೆ ಬೆಕ್ಕುಗಳು ಮತ್ತು ನಾಯಿಗಳಂತೆ ಬದುಕಿ ಈ ಜಗತ್ತನ್ನು ಬಿಡುವವನು ಕೃಪಣ." ಜೀವಿಗೆ ಬದುಕಿನ ಈ ಮಾನವ ಸ್ವರೂಪವು ಅಮೂಲ್ಯವಾದ ಆಸ್ತಿ. ಬದುಕಿನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಈ ಸ್ವರೂಪವನ್ನು ಬಳಸಬಹುದು. ಆದುದರಿಂದ ಯಾವನು ಈ ಅವಕಾಶವನ್ನು ಸರಿಯಾಗಿ ಬಳಸಿಕೊಳ್ಳುವುದಿಲ್ಲವೋ ಅವನೊಬ್ಬ ಕೃಪಣ. ಇದಕ್ಕೆ ಪ್ರತಿಯಾಗಿ ಬದುಕಿನ ಎಲ್ಲ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಈ ದೇಹವನ್ನು ಬಳಸಿಕೊಳ್ಳುವಷ್ಟು ಬುದ್ಧಿವಂತನಾದವನು ಬ್ರಾಹ್ಮಣ. **ಯಾ ಏತದ್ ಅಕ್ಷರಂ ಗಾರ್ಗಿ ವಿದಿತ್ವಾಸ್ಮಾ-ಲೋಕಾತ್ ಪ್ರೈತಿ ಸ ಬ್ರಾಹ್ಮಣಃ**

ಕೃಪಣರು ಬದುಕಿನ ಐಹಿಕ ಕಲ್ಪನೆಯನ್ನಿಟ್ಟುಕೊಂಡಿರುತ್ತಾರೆ. ಇದರಿಂದ ಕುಟುಂಬ, ಸಮಾಜ, ದೇಶ ಮೊದಲಾದವುಗಳ ವಿಷಯದಲ್ಲಿ ಅತಿಮೋಹವನ್ನು ಇಟ್ಟುಕೊಂಡು ಕಾಲವನ್ನು ವ್ಯರ್ಥಮಾಡುತ್ತಾರೆ. ಈ "ಚರ್ಮರೋಗದ" ಕಾರಣದಿಂದ ಮನುಷ್ಯನು ಕೌಟುಂಬಿಕ ಜೀವನದಲ್ಲಿ ಎಂದರೆ ಹೆಂಡತಿ, ಮಕ್ಕಳು ಮತ್ತು ಇತರ ಸದಸ್ಯರಲ್ಲಿ ಮೋಹವನ್ನು ತಳೆಯುತ್ತಾನೆ. ತನ್ನ ಕುಟುಂಬದ ಸದಸ್ಯನನ್ನು ಸಾವಿನಿಂದ ತಾನು ರಕ್ಷಿಸಬಲ್ಲೆ ಎಂದು ಕೃಪಣನು ಭಾವಿಸುತ್ತಾನೆ. ಅಥವಾ ತನ್ನ ಕುಟುಂಬ ಅಥವಾ ಸಮಾಜವು ಸಾವಿನ ಅಂಚಿನಲ್ಲಿರುವ ತನ್ನನ್ನು ಕಾಪಾಡಬಲ್ಲುದು ಎಂದು ಕೃಪಣನು ಭಾವಿಸುತ್ತಾನೆ. ಇಂತಹ ಸಂಸಾರ ವ್ಯಾಮೋಹವನ್ನು ಕೆಳವರ್ಗದ ಪ್ರಾಣಿಗಳಲ್ಲಿ ಸಹ ಕಾಣಬಹುದು. ಅವು ತಮ್ಮ ಮರಿಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತವೆ. ಬುದ್ಧಿವಂತನಾಗಿದ್ದ ಅರ್ಜುನನು ತನ್ನ ಸಂಸಾರದ ಸದಸ್ಯರಲ್ಲಿ ತನಗಿರುವ ಮೋಹ ಮತ್ತು ಅವರನ್ನು

ಸಾವಿನಿಂದ ರಕ್ಷಿಸುವ ಬಯಕೆ — ಇವೇ ತನ್ನ ಗೊಂದಲಗಳಿಗೆ ಕಾರಣ ಎಂದು ಅರ್ಥಮಾಡಿಕೊಳ್ಳಬಲ್ಲವನಾಗಿದ್ದ. ಯುದ್ಧಮಾಡುವುದು ತನ್ನ ಕರ್ತವ್ಯ ಮತ್ತು ಈ ಕರ್ತವ್ಯವು ತನಗಾಗಿ ಕಾಯುತ್ತಿದೆ ಎಂದು ಅವನಿಗೆ ತಿಳಿದಿತ್ತು. ಆದರೂ ತನ್ನ ಕೃಪಣತೆಯ ದೋಷದಿಂದ ಅವನಿಗೆ ತನ್ನ ಕರ್ತವ್ಯವನ್ನು ಪಾಲಿಸುವುದು ಸಾಧ್ಯವಾಗಲಿಲ್ಲ. ಆದುದರಿಂದ ಅವನು ಪರಮ ಗುರುವಾದ ಕೃಷ್ಣನನ್ನು ನಿಶ್ಚಿತವಾದ ಪರಿಹಾರವನ್ನು ಹೇಳಿಕೊಡುವಂತೆ ಬೇಡುತ್ತಿದ್ದಾನೆ. ತಾನು ಕೃಷ್ಣನ ಶಿಷ್ಯನಾಗುವ ಅಪೇಕ್ಷೆಯನ್ನು ಹೇಳುತ್ತಾನೆ. ಸಖ್ಯಭಾವದ ಮಾತುಗಳನ್ನು ನಿಲ್ಲಿಸಲು ಅರ್ಜುನನು ಬಯಸುತ್ತಾನೆ. ಗುರು ಮತ್ತು ಶಿಷ್ಯರ ನಡುವಣ ಮಾತುಗಳು ಗಂಭೀರ ಸ್ವರೂಪದವು. ಈಗ ಅರ್ಜುನನು ತಾನು ಒಪ್ಪಿಕೊಂಡ ಗುರುವಿನೊಡನೆ ಬಹು ಗಂಭೀರವಾಗಿ ಮಾತನಾಡಲು ಬಯಸುತ್ತಾನೆ. ಆದ್ದರಿಂದ ಕೃಷ್ಣನು ಭಗವದ್ಗೀತೆಯ ವಿಜ್ಞಾನದ ಮೂಲಗುರು ಮತ್ತು ಗೀತೆಯನ್ನು ಅರ್ಥಮಾಡಿಕೊಂಡ ಮೊದಲ ಶಿಷ್ಯ ಅರ್ಜುನ. ಅರ್ಜುನನು ಗೀತೆಯನ್ನು ಹೇಗೆ ಅರ್ಥಮಾಡಿಕೊಂಡ ಎನ್ನುವುದನ್ನು ಭಗವದ್ಗೀತೆಯಲ್ಲೇ ಹೇಳಿದೆ. ಇಷ್ಟಾದರೂ ಮೂರ್ಖರಾದ ಲೌಕಿಕ ವಿದ್ವಾಂಸರು, ಕೃಷ್ಣನನ್ನು ಒಬ್ಬ ವ್ಯಕ್ತಿಯೆಂದು ಗುರುತಿಸಿ ಶರಣಾಗತರಾಗುವ ಅಗತ್ಯವಿಲ್ಲ, "ಕೃಷ್ಣನೊಳಗೆ ಜನ್ಮತಾಳದೆ ಇರುವ ಅಂಶಕ್ಕೆ" ಶರಣಾಗಬೇಕು ಎಂದು ವಿವರಿಸುತ್ತಾರೆ. ಕೃಷ್ಣನ ಒಳಗು ಮತ್ತು ಹೊರಗುಗಳಿಗೆ ಭೇದವಿಲ್ಲ. ಇದನ್ನು ತಿಳಿಯದೆ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳುವೆನೆಂದು ಹೊರಡುವವನು ಮೂರ್ಖರಲ್ಲಿ ಮೂರ್ಖ.

## ಶ್ಲೋಕ - 8

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್**
**ಯಚ್ಛೋಕಮುಚ್ಛೋಷಣಮಿನ್ದ್ರಿಯಾಣಾಮ್ ।**
**ಅವಾಪ್ಯ ಭೂಮಾನಸಪತ್ನಮೃದ್ಧಮ್**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥೮॥**

**ನ**—ಇಲ್ಲ; **ಹಿ**—ಖಂಡಿತವಾಗಿ; **ಪ್ರಪಶ್ಯಾಮಿ**—ನೋಡುತ್ತೇನೆ; **ಮಮ**—ನನ್ನ; **ಅಪನುದ್ಯಾತ್**—ದೂರಮಾಡಬಹುದೋ; **ಯತ್**—ಯಾವುದು ಅದನ್ನು; **ಶೋಕಮ್**—ದುಃಖವನ್ನು; **ಉಚ್ಛೋಷಣಮ್**—ಶೋಷಣವನ್ನು; **ಇನ್ದ್ರಿಯಾಣಾಮ್**—ಇಂದ್ರಿಯಗಳ; **ಅವಾಪ್ಯ**— ಹೊಂದಿ; **ಭೂಮೌ**—ಭೂಮಿಯ ಮೇಲೆ; **ಅಸಪತ್ನಮ್**—ವೈರಿಗಳಿಲ್ಲದ; **ಋದ್ಧಮ್**— ಸಮೃದ್ಧವಾದ; **ರಾಜ್ಯಮ್**—ರಾಜ್ಯವನ್ನು; **ಸುರಾಣಾಮ್**—ದೇವತೆಗಳ; **ಅಪಿ**—ಕೂಡ; **ಚ**— ಸಹಾ; **ಆಧಿಪತ್ಯಮ್**—ಆಧಿಪತ್ಯವನ್ನು.

## ಅನುವಾದ

**ನನ್ನ ಇಂದ್ರಿಯಗಳನ್ನು ಸೊರಗಿಸುತ್ತಿರುವ ಈ ದುಃಖವನ್ನು ಹೊಡೆದೋಡಿಸಲು ನನಗೆ ಮಾರ್ಗವೇ ಕಾಣುತ್ತಿಲ್ಲ. ಭೂಮಿಯಲ್ಲಿ ಸಮೃದ್ಧವಾದ, ಸಾಟಿಯೇ ಇಲ್ಲದ ರಾಜ್ಯವನ್ನು ಗೆದ್ದುಕೊಂಡರೂ ಮತ್ತು ಸ್ವರ್ಗದಲ್ಲಿರುವ ದೇವತೆಗಳ ಪ್ರಭುತ್ವದಂತಹ ಪ್ರಭುತ್ವವನ್ನು ಪಡೆದುಕೊಂಡರೂ ನಾನು ಈ ದುಃಖವನ್ನು ಹೋಗಲಾಡಿಸಿಕೊಳ್ಳಲಾರೆ.**

## ಭಾವಾರ್ಥ

ಧಾರ್ಮಿಕ ತತ್ವಗಳ ಮತ್ತು ನೀತಿ ಸಂಹಿತೆಗಳ ತಿಳುವಳಿಕೆಯ ಆಧಾರದ ಮೇಲೆ ಅರ್ಜುನನು ಇಷ್ಟೊಂದು ವಾದಗಳನ್ನು ಹೂಡುತ್ತಿದ್ದಾನೆ. ಆದರೂ ತನ್ನ ಗುರುವಾದ ಶ್ರೀಕೃಷ್ಣನ ನೆರವಿಲ್ಲದೆ ತನ್ನ ನಿಜವಾದ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ಅವನಿಗೆ ಸಾಧ್ಯವಿಲ್ಲ ಎಂದು ಕಾಣುತ್ತದೆ. ಅವನ ಸಮಸ್ಯೆಗಳಿಂದ ಅವನ ಇಡೀ ಅಸ್ತಿತ್ವವೇ ಬತ್ತಿಹೋಗುತ್ತಿತ್ತು; ಈ ಸಮಸ್ಯೆಗಳನ್ನು ದೂರಮಾಡಲು ಅವನ ತೋರಿಕೆಯ ಅರಿವಿನಿಂದ ಏನೇನೂ ಉಪಯೋಗವಿಲ್ಲ ಎಂದವನಿಗೆ ಅರ್ಥವಾಗಿತ್ತು. ಶ್ರೀಕೃಷ್ಣನಂತಹ ಗುರುವಿನ ನೆರವಿಲ್ಲದೆ ಇಂತಹ ಗೊಂದಲಗಳನ್ನು ಪರಿಹರಿಸಿಕೊಳ್ಳುವುದು ಅವನಿಗೆ ಸಾಧ್ಯವಿರಲಿಲ್ಲ. ವಿದ್ಯಾಸಂಸ್ಥೆಗಳಿಂದ ಪಡೆದ ಜ್ಞಾನ, ವಿದ್ವತ್ತು, ಉನ್ನತ ಸ್ಥಾನ ಮೊದಲಾದುವೆಲ್ಲ ಬದುಕಿನ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ನಿರರ್ಥಕವಾಗುತ್ತವೆ. ಶ್ರೀಕೃಷ್ಣನಂತಹ ಗುರುವಿನಿಂದ ಮಾತ್ರವೇ ನೆರವು ದೊರೆಯುವುದು ಸಾಧ್ಯ. ಇದರ ನಿರ್ಣಯವೆಂದರೆ ನೂರಕ್ಕೆ ನೂರರಷ್ಟು ಕೃಷ್ಣಪ್ರಜ್ಞೆ ಇರುವವನು ಮಾತ್ರವೇ ನಿಜವಾದ ಗುರು; ಏಕೆಂದರೆ ಅವನು ಬದುಕಿನ ಸಮಸ್ಯೆಗಳನ್ನು ಬಿಡಿಸಬಲ್ಲ. ಕೃಷ್ಣಪ್ರಜ್ಞೆಯ ವಿಜ್ಞಾನದಲ್ಲಿ ಪರಿಣತನಾದವನು ಮಾತ್ರವೇ, ಅವನ ಸಾಮಾಜಿಕ ಸ್ಥಾನವು ಏನೇ ಆಗಿರಲಿ, ನಿಜವಾದ ಗುರು ಎಂದು ಚೈತನ್ಯ ಮಹಾಪ್ರಭು ಹೇಳಿದ್ದಾರೆ.

**ಕಿಬಾ ವಿಪ್ರ ಕಿಬಾ ನ್ಯಾಸೀ, ಶೂದ್ರ ಕೇನೇ ನಯ**
**ಯೇಇ ಕೃಷ್ಣ ತತ್ತ್ವ ವೇತ್ತಾ, ಸೇಇ 'ಗುರು' ಹಯ**

"ಒಬ್ಬ ಮನುಷ್ಯನು ವಿಪ್ರನೇ ಅಥವಾ ಶೂದ್ರನೇ ಅಥವಾ ಸನ್ಯಾಸಿಯೇ ಎನ್ನುವುದು ಮುಖ್ಯವಲ್ಲ. ಕೃಷ್ಣವಿಜ್ಞಾನದಲ್ಲಿ ಪರಿಣತನಾಗಿದ್ದರೆ ಅವನು ಪರಿಪೂರ್ಣನಾದ ಮತ್ತು ನಿಜವಾದ ಗುರು" (ಚೈತನ್ಯ ಚರಿತಾಮೃತ, ಮಧ್ಯ 8.128) ಆದುದರಿಂದ ಕೃಷ್ಣಪ್ರಜ್ಞೆಯ ವಿಜ್ಞಾನದಲ್ಲಿ ಪರಿಣತನಾಗಿಲ್ಲದೆ ಯಾರೂ ನಿಜವಾದ ಗುರುವಾಗಲಾರ. ವೈದಿಕ ಸಾಹಿತ್ಯದಲ್ಲಿ ಹೀಗೆ ಹೇಳಿದೆ—

**ಷಟ್ಕರ್ಮನಿಪುಣೋ ವಿಪ್ರೋ**
**ಮನ್ತ್ರ ತನ್ತ್ರ ವಿಶಾರದಃ**
**ಅವೈಷ್ಣವೋ ಗುರುರ್ನ ಸ್ಯಾದ್**
**ವೈಷ್ಣವಃ ಶ್ವಪಚೋ ಗುರುಃ**

"ವೈದಿಕ ವಿದ್ಯೆಯ ಎಲ್ಲ ವಿಷಯಗಳಲ್ಲೂ ತಜ್ಞನಾದ ಬ್ರಾಹ್ಮಣ ವಿದ್ವಾಂಸನು ವೈಷ್ಣವನಾಗಿಲ್ಲದಿದ್ದರೆ, ಕೃಷ್ಣಪ್ರಜ್ಞೆಯ ವಿಜ್ಞಾನದಲ್ಲಿ ತಜ್ಞನಾಗಿಲ್ಲದಿದ್ದರೆ, ಅವನು ಗುರುವಾಗಲು ಯೋಗ್ಯನಲ್ಲ. ಆದರೆ ಕೆಳಜಾತಿಯಲ್ಲಿ ಹುಟ್ಟಿದವನು ವೈಷ್ಣವನಾಗಿದ್ದರೆ, ಅವನಿಗೆ ಕೃಷ್ಣಪ್ರಜ್ಞೆಯಿದ್ದರೆ ಅವನು ಗುರುವಾಗಬಹುದು." (ಪದ್ಮಪುರಾಣ).

ಹುಟ್ಟು, ಮುಪ್ಪು, ರೋಗ, ಸಾವು — ಐಹಿಕ ಬದುಕಿನ ಈ ಸಮಸ್ಯೆಗಳನ್ನು ಸಂಪತ್ತಿನ ಶೇಖರಣೆ ಮತ್ತು ಆರ್ಥಿಕ ಅಭಿವೃದ್ಧಿಗಳಿಂದ ನಿವಾರಿಸಲು ಸಾಧ್ಯವಿಲ್ಲ. ಜಗತ್ತಿನ ಅನೇಕ ಭಾಗಗಳಲ್ಲಿ ಬದುಕಿನ ಸೌಕರ್ಯಗಳು ಸಮೃದ್ಧಿಯಾಗಿರುವ, ಸಂಪತ್ತು ತುಂಬಿತುಳುಕುತ್ತಿರುವ ಮತ್ತು ಆರ್ಥಿಕವಾಗಿ ಅಭಿವೃದ್ಧಿ ಹೊಂದಿರುವ ಹಲವು ರಾಜ್ಯಗಳಿವೆ. ಅವುಗಳಲ್ಲಿಯೂ ಐಹಿಕ

ಬದುಕಿನ ಸಮಸ್ಯೆಗಳು ಇದ್ದೇ ಇವೆ. ಅವು ಹಲವು ರೀತಿಗಳಲ್ಲಿ ಶಾಂತಿಯನ್ನು ಅರಸುತ್ತಿವೆ. ಆದರೆ ಅವು ಕೃಷ್ಣನ ಅಥವಾ ಭಗವದ್ಗೀತೆಯ ಮತ್ತು ಶ್ರೀಮದ್ಭಾಗವತದ ಮಾರ್ಗದರ್ಶನವನ್ನು ಪಡೆದರೆ ಮಾತ್ರ ನಿಜವಾದ ಸುಖವನ್ನು ಪಡೆಯಬಲ್ಲವು. ಭಗವದ್ಗೀತೆ ಮತ್ತು ಶ್ರೀಮದ್ಭಾಗವತಗಳು ಸೇರಿ ಕೃಷ್ಣವಿಜ್ಞಾನ. ಕೃಷ್ಣಪ್ರಜ್ಞೆಯಲ್ಲಿರುವ, ಕೃಷ್ಣನ ನಿಜವಾದ ಪ್ರತಿನಿಧಿಯ ಮೂಲಕ ಇವುಗಳ ಮಾರ್ಗದರ್ಶನವನ್ನು ಪಡೆದರೆ ಆ ರಾಜ್ಯಗಳಿಗೆ ಶಾಂತಿ.

ಆರ್ಥಿಕ ಅಭಿವೃದ್ಧಿ ಮತ್ತು ಐಹಿಕ ಸೌಲಭ್ಯಗಳಷ್ಟೇ ಸಂಸಾರದ, ಸಮಾಜದ, ರಾಷ್ಟ್ರದ ಮತ್ತು ವಿಶ್ವದ ಶೋಚನೀಯ ಸ್ಥಿತಿಯನ್ನು ನಿವಾರಿಸಲಾರವು. ಇಲ್ಲದಿದ್ದರೆ ಅರ್ಜುನನು ಭೂಮಿಯಲ್ಲಿ ಸಮೃದ್ಧವಾದ, ಸಾಟಿಯೇ ಇಲ್ಲದ ರಾಜ್ಯವನ್ನು ಗೆದ್ದುಕೊಂಡರೂ ಮತ್ತು ದೇವತೆಗಳ ಒಡೆತನದಂತಹ ಪ್ರಭುತ್ವವನ್ನು ಪಡೆದುಕೊಂಡರೂ ತನ್ನ ದುಃಖವನ್ನು ಹೋಗಲಾಡಿಸಿಕೊಳ್ಳುವುದು ಸಾಧ್ಯವಿಲ್ಲ ಎಂದು ಹೇಳುತ್ತಿರಲಿಲ್ಲ. ಆದುದರಿಂದ ಅವನು ಕೃಷ್ಣಪ್ರಜ್ಞೆಯಲ್ಲಿ ಆಶ್ರಯವನ್ನು ಬೇಡಿದ. ಶಾಂತಿ ಸಮರಸಗಳಿಗೆ ಇದೇ ಸರಿಯಾದ ಹಾದಿ. ಆರ್ಥಿಕ ಪ್ರಗತಿ ಮತ್ತು ಜಗತ್ತಿನ ಪ್ರಭುತ್ವಗಳನ್ನು ಪ್ರಕೃತಿಯ ವಿಕೋಪವು ಯಾವ ಕ್ಷಣದಲ್ಲಾದರೂ ಒರೆಸಿಹಾಕಿಬಿಡಬಹುದು. ಈಗ ಮಾನವನು ಚಂದ್ರಗ್ರಹದ ಅನ್ವೇಷಣೆಯಲ್ಲಿ ತೊಡಗಿದ್ದಾನೆ; ಇನ್ನೂ ಎತ್ತರದ ಗ್ರಹಕ್ಕೆ ಏರಿದರೂ ಅದು ಒಂದೇ ಏಟಿಗೆ ನುಚ್ಚುನುರಿಯಾಗಬಹುದು. ಭಗವದ್ಗೀತೆಯೂ ಇದನ್ನೇ ದೃಢಪಡಿಸುತ್ತದೆ. **ಕ್ಷೀಣೇ ಪುಣ್ಯೇ ಮರ್ತ್ಯಲೋಕಮ್ ವಿಶನ್ತಿ.** "ಒಳ್ಳೆಯ ಕಾರ್ಯಗಳಿಂದ ಪ್ರಾಪ್ತವಾದ ಪುಣ್ಯವು ತೀರಿದೊಡನೆಯೇ ಮನುಷ್ಯನು ಸಂತೋಷದ ಶಿಖರದಿಂದ ಬದುಕಿನಲ್ಲಿ ಪ್ರಪಾತಕ್ಕೆ ಉರುಳುತ್ತಾನೆ." ಜಗತ್ತಿನ ಅನೇಕ ಮಂದಿ ರಾಜಕಾರಣಿಗಳು ಹೀಗೆ ಪತನ ಹೊಂದಿದ್ದಾರೆ. ಇಂತಹ ಪತನಗಳು ಇನ್ನಿಷ್ಟು ಗೋಳಾಟಕ್ಕೆ ಕಾರಣವಾಗಬಹುದು.

ಆದುದರಿಂದ ಇಂತಹ ಗೋಳಾಟವನ್ನು ಸಂಪೂರ್ಣವಾಗಿ ನಿವಾರಿಸಬೇಕಾದರೆ ಈಗ ಅರ್ಜುನನು ಕೃಷ್ಣನಲ್ಲಿ ಆಶ್ರಯ ಪಡೆಯಲು ಪ್ರಯತ್ನಿಸುತ್ತಿರುವಂತೆ ನಾವೂ ಆಶ್ರಯ ಪಡೆಯಬೇಕು. ಅರ್ಜುನನು ತನ್ನ ಸಮಸ್ಯೆಯನ್ನು ಸ್ಪಷ್ಟವಾಗಿ ಬಗೆಹರಿಸುವಂತೆ ಕೃಷ್ಣನನ್ನು ಪ್ರಾರ್ಥಿಸಿದ. ಇದೇ ಕೃಷ್ಣಪ್ರಜ್ಞೆಯ ಮಾರ್ಗ.

## ಶ್ಲೋಕ - 9

**ಸಞ್ಜಯ ಉವಾಚ**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರನ್ತಪಃ |**
**ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ ||೯||**

**ಸಞ್ಜಯ ಉವಾಚ**—ಸಂಜಯನು ಹೇಳಿದನು; **ಏವಮ್**—ಹೀಗೆ; **ಉಕ್ತ್ವಾ**—ಹೇಳಿ; **ಹೃಷೀಕೇಶಮ್**—ಇಂದ್ರಿಯಗಳ ಒಡೆಯನಾದ ಕೃಷ್ಣನಿಗೆ; **ಗುಡಾಕೇಶಃ**—ಅಜ್ಞಾನವನ್ನು ಅಡಗಿಸಲು ಸಮರ್ಥನಾದ ಅರ್ಜುನನು; **ಪರನ್ತಪಃ**—ಶತ್ರುಗಳನ್ನು ದಂಡಿಸುವ; **ನ ಯೋತ್ಸ್ಯೇ**—ನಾನು ಯುದ್ಧಮಾಡುವುದಿಲ್ಲ; **ಇತಿ**—ಎಂದು; **ಗೋವಿನ್ದಮ್**—ಇಂದ್ರಿಯಗಳಿಗೆ ಸುಖನೀಡುವವನಾದ ಕೃಷ್ಣನಿಗೆ; **ಉಕ್ತ್ವಾ**—ಹೇಳುತ್ತ; **ತೂಷ್ಣೀಮ್**—ಮೌನ; **ಬಭೂವ**—ಆದನು; **ಹ**—ನಿಶ್ಚಯವಾಗಿಯೂ.

## ಅನುವಾದ

**ಸಂಜಯನು ನುಡಿದನು—ಶತ್ರುಗಳನ್ನು ನಿಗ್ರಹಿಸಬಲ್ಲ ಅರ್ಜುನನು ಈ ಪ್ರಕಾರ ಕೃಷ್ಣನಿಗೆ ತಿಳಿಸಿ, ಗೋವಿಂದ, ನಾನು ಯುದ್ಧಮಾಡುವುದಿಲ್ಲ, ಎಂದು ಹೇಳಿ ಮೌನತಾಳಿದನು.**

## ಭಾವಾರ್ಥ

ಅರ್ಜುನನು ಯುದ್ಧಮಾಡುವುದಿಲ್ಲ, ಅದರ ಬದಲು ಯುದ್ಧರಂಗವನ್ನು ಬಿಟ್ಟು ಭಿಕ್ಷೆ ಬೇಡಲು ಹೋಗುತ್ತಾನೆ ಎಂದು ತಿಳಿದು ಧೃತರಾಷ್ಟ್ರನಿಗೆ ತುಂಬ ಸಂತೋಷವಾಗಿದ್ದಿರಬೇಕು. ಆದರೆ ಅರ್ಜುನನನ್ನು (**ಪರಂತಪಃ**) ಶತ್ರುಗಳನ್ನು ನಿಗ್ರಹಿಸುವವನು ಎಂದು ಕರೆದು ಸಂಜಯನು ಮತ್ತೆ ಅವನಿಗೆ ನಿರಾಶೆಯನ್ನುಂಟುಮಾಡಿದ. ಸಾಂಸಾರಿಕ ಮೋಹದಿಂದ ಹುಸಿದುಃಖಕ್ಕೆ ಗುರಿಯಾಗಿ ಅರ್ಜುನನು ತತ್ಕಾಲಕ್ಕೆ ಭಾವಪರವಶನಾದ; ಆದರೂ ಅವನು ಪರಮ ಗುರುವಾದ ಕೃಷ್ಣನ ಶಿಷ್ಯನಾಗಿ ಶರಣಾಗತನಾದ. ಸಂಸಾರಮೋಹದಿಂದ ಉಂಟಾದ ಹುಸಿಗೋಳಾಟದಿಂದ ಅವನು ಬೇಗನೆ ಮುಕ್ತನಾಗುತ್ತಾನೆ ಮತ್ತು ಆತ್ಮಸಾಕ್ಷಾತ್ಕಾರದ ಅಥವಾ ಕೃಷ್ಣಪ್ರಜ್ಞೆಯ ಪರಿಪೂರ್ಣ ಅರಿವಿನಿಂದ ಬೆಳಕು ಕಾಣುತ್ತಾನೆ ಹಾಗೂ ಖಂಡಿತವಾಗಿಯೂ ಯುದ್ಧಮಾಡುತ್ತಾನೆ ಎಂದು ಇದು ತೋರಿಸುತ್ತದೆ. ಕೃಷ್ಣನಿಂದ ಜ್ಞಾನೋದಯವನ್ನು ಪಡೆದು ಅರ್ಜುನನು ಕಟ್ಟಕಡೆಯವರೆಗೆ ಯುದ್ಧಮಾಡುವುದರಿಂದ ಧೃತರಾಷ್ಟ್ರನ ಸಂತೋಷವು ನಂದಿಹೋಗುತ್ತದೆ.

## ಶ್ಲೋಕ - 10

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ |**
**ಸೇನಯೋರುಭಯೋರ್ಮಧ್ಯೇ ವಿಷೀದನ್ತಮಿದಂ ವಚಃ ||೧೦||**

**ತಮ್**—ಅವನಿಗೆ; **ಉವಾಚ**—ಹೇಳಿದನು; **ಹೃಷೀಕೇಶಃ**—ಇಂದ್ರಿಯಗಳ ಒಡೆಯನಾದ ಕೃಷ್ಣನು; **ಪ್ರಹಸನ್**—ನಗುತ್ತಾ; **ಇವ**—ಹಾಗೆ; **ಭಾರತ**—ಭರತಕುಲದವನಾದ ಧೃತರಾಷ್ಟ್ರನೇ; **ಸೇನಯೋಃ**—ಸೈನ್ಯಗಳ; **ಉಭಯೋಃ**—ಎರಡು ಪಕ್ಷಗಳ; **ಮಧ್ಯೇ**—ನಡುವೆ; **ವಿಷೀದನ್ತಮ್**—ವಿಷಾದಿಸುತ್ತಿರುವವನಿಗೆ; **ಇದಮ್**—ಈ ಮುಂದಿನ; **ವಚಃ**—ಮಾತುಗಳನ್ನು;

## ಅನುವಾದ

**ಭರತನ ವಂಶಜನಾದ ಧೃತರಾಷ್ಟ್ರನೇ, ಆಗ ಎರಡು ಸೈನ್ಯಗಳ ಮಧ್ಯೆ ವಿಷಾದದಲ್ಲಿ ಮುಳುಗಿದ ಅರ್ಜುನನನ್ನು ಕುರಿತು ಕೃಷ್ಣನು ನಸುನಗುತ್ತ ಈ ಮಾತುಗಳನ್ನು ಹೇಳಿದನು.**

## ಭಾವಾರ್ಥ

ಇಬ್ಬರು ಆತ್ಮೀಯ ಸ್ನೇಹಿತರಾದ ಹೃಷೀಕೇಶ ಮತ್ತು ಗುಡಾಕೇಶರ ನಡುವೆ ಸಂವಾದ ನಡೆಯುತ್ತಿತ್ತು. ಸ್ನೇಹಿತರಾಗಿ ಇಬ್ಬರೂ ಸರಿಸಮಾನರು; ಆದರೆ ಅವರಲ್ಲಿ ಒಬ್ಬನು ಸ್ವಇಚ್ಛೆಯಿಂದ ಮತ್ತೊಬ್ಬನ ಶಿಷ್ಯನಾದನು. ಸ್ನೇಹಿತನು ಶಿಷ್ಯನಾಗಲು ತೀರ್ಮಾನಿಸಿದ ಎಂದು ಕೃಷ್ಣನು ನಸುನಗುತ್ತಿದ್ದ. ಎಲ್ಲರ ಪ್ರಭುವಾಗಿ ಅವನು ಯಾವಾಗಲೂ ಎಲ್ಲರಿಗಿಂತ ಉಚ್ಚಸ್ಥಾನದಲ್ಲಿರುತ್ತಾನೆ.

ಆದರೆ ಭಗವಂತನು ಭಕ್ತನು ಬಯಸಿದಂತೆ ಸ್ನೇಹಿತ ಅಥವಾ ಮಗ ಅಥವಾ ನಲ್ಲನ ಪಾತ್ರವನ್ನು ವಹಿಸಲು ಸಿದ್ಧನಾಗಿರುತ್ತಾನೆ. ಆದರೆ ಅವನನ್ನು ಗುರು ಎಂದು ಸ್ವೀಕರಿಸಿದಾಗ ಅವನು ತಕ್ಷಣವೇ ಆ ಪಾತ್ರವನ್ನು ಒಪ್ಪಿಕೊಂಡ ಮತ್ತು ಶಿಷ್ಯರೊಡನೆ ಗುರುವು ಮಾತನಾಡುವಂತೆ ಗಂಭೀರವಾಗಿ ಮಾತನಾಡಿದ. ಗುರು ಮತ್ತು ಶಿಷ್ಯರ ನಡುವಿನ ಮಾತು ಎರಡು ಸೈನ್ಯಗಳ ಎದುರಿಗೆ ಬಹಿರಂಗವಾಗಿ ನಡೆಯಿತು. ಇದರಿಂದ ಎಲ್ಲರಿಗೂ ಲಾಭವಾಯಿತು ಎಂದು ಕಾಣುತ್ತದೆ. ಆದುದರಿಂದ ಭಗವದ್ಗೀತೆಯ ನುಡಿಗಳು ಯಾವ ಒಬ್ಬ ವ್ಯಕ್ತಿಗಾಗಿ ಅಥವಾ ಸಮಾಜಕ್ಕಾಗಿ ಅಥವಾ ಸಮುದಾಯಕ್ಕಾಗಿ ಉದ್ದೇಶಿಸಿದುವಲ್ಲ. ಅವು ಎಲ್ಲರಿಗಾಗಿ ಆಡಿದ ಮಾತುಗಳು. ಸ್ನೇಹಿತರಾಗಲಿ ಶತ್ರುಗಳಾಗಲಿ ಎಲ್ಲರಿಗೂ ಅವನ್ನು ಕೇಳುವ ಸಮಾನವಾದ ಹಕ್ಕಿದೆ.

## ಶ್ಲೋಕ - 11

**ಶ್ರೀಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ |**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಣ್ಡಿತಾಃ ||೧೧||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಅಶೋಚ್ಯಾನ್**—ದುಃಖಿಸಲು ಅರ್ಹವಲ್ಲದುದನ್ನು ಕುರಿತು; **ಅನ್ವಶೋಚಃ**—ದುಃಖಿಸುತ್ತಿರುವಿ; **ತ್ವಮ್**—ನೀನು; **ಪ್ರಜ್ಞಾ ವಾದಾನ್**—ವಿದ್ವದ್‌ವಚನಗಳನ್ನು; **ಚ**—ಕೂಡಾ; **ಭಾಷಸೇ**—ಆಡುತ್ತಿದ್ದೀಯೆ; **ಗತ**—ಗತಿಸಿದ; **ಅಸೂನ್**—ಜೀವಿಗಳಿಗಾಗಿ; **ಅಗತ**—ಗತಿಸಿರದ; **ಅಸೂನ್**—ಜೀವಿಗಳಿಗಾಗಿ; **ಚ**—ಕೂಡ; **ನ ಅನುಶೋಚಂತಿ**—ವಿಷಾದಿಸುವುದಿಲ್ಲ; **ಪಣ್ಡಿತಾಃ**—ವಿದ್ವಾಂಸರು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು—ನೀನು ವಿದ್ವಾಂಸರಂತೆ ಮಾತುಗಳನ್ನಾಡುತ್ತಿದ್ದೀಯೆ; ಆದರೆ ಶೋಕಕ್ಕೆ ಯೋಗ್ಯರಲ್ಲದವರನ್ನು ಕುರಿತು ಶೋಕಿಸುತ್ತಿದ್ದೀಯೆ. ಪಂಡಿತರು ಸತ್ತವರಿಗಾಗಿ ಆಗಲಿ ಬದುಕಿರುವವರಿಗಾಗಿ ಆಗಲಿ ದುಃಖಪಡುವುದಿಲ್ಲ.**

## ಭಾವಾರ್ಥ

ಭಗವಂತನು ಕೂಡಲೇ ಗುರುವಿನ ಸ್ಥಾನವನ್ನು ಸ್ವೀಕರಿಸಿ ಶಿಷ್ಯನನ್ನು ಪರೋಕ್ಷವಾಗಿ ಮೂರ್ಖನೆಂದು ಕರೆದು ದಂಡಿಸಿದನು. ಭಗವಂತನು ಹೀಗೆ ಹೇಳಿದನು— "ನೀನು ವಿದ್ವಾಂಸನ ಹಾಗೆ ಮಾತನಾಡುತ್ತಿದ್ದೀಯೆ. ಆದರೆ ದೇಹವೆಂದರೇನು ಮತ್ತು ಆತ್ಮವೆಂದರೇನು ಎಂದು ತಿಳಿದ ವಿದ್ವಾಂಸನು ದೇಹದ ಯಾವುದೇ ಹಂತದ ವಿಷಯವಾಗಿಯೂ ದುಃಖಿಸುವುದಿಲ್ಲ. ದೇಹದಲ್ಲಿ ಜೀವವಿರುವ ಸ್ಥಿತಿಯಲ್ಲಾಗಲಿ ಜೀವವಿಲ್ಲದ ಸ್ಥಿತಿಯಲ್ಲಾಗಲಿ ದುಃಖಿಸುವುದಿಲ್ಲ." ಮುಂದಿನ ಅಧ್ಯಾಯಗಳಲ್ಲಿ ಹೇಳುವಂತೆ, ಜ್ಞಾನ ಎಂದರೆ ಜಡ ಮತ್ತು ಆತ್ಮ ಎರಡನ್ನೂ ಮತ್ತು ಇವೆರಡನ್ನೂ ನಿಯಂತ್ರಿಸುವವನನ್ನೂ ತಿಳಿದುಕೊಂಡಿರುವುದು. ಅರ್ಜುನನು ಧಾರ್ಮಿಕ ತತ್ವಗಳಿಗೆ ರಾಜಕೀಯ ಅಥವಾ ಸಮಾಜವಿಜ್ಞಾನಕ್ಕಿಂತ ಹೆಚ್ಚು ಮಹತ್ವವನ್ನು ನೀಡಬೇಕೆಂದು ವಾದಿಸಿದ. ಆದರೆ

ಭೌತದ್ರವ್ಯ, ಆತ್ಮ ಮತ್ತು ಪರಾತ್ಪರದ ಜ್ಞಾನವು ಧಾರ್ಮಿಕ ಸೂತ್ರಸಂಗ್ರಹಗಳಿಗಿಂತ ಮುಖ್ಯ ಎಂದು ಅವನಿಗೆ ತಿಳಿದಿರಲಿಲ್ಲ. ಈ ತಿಳುವಳಿಕೆ ಇಲ್ಲದಿದ್ದುದರಿಂದ ಅವನು ತಾನೊಬ್ಬ ದೊಡ್ಡ ಪಂಡಿತ ಎನ್ನುವ ಸೋಗನ್ನು ಹಾಕಬಾರದಿತ್ತು. ಅವನು ಬಹು ದೊಡ್ಡ ಪಂಡಿತನೇನೂ ಅಲ್ಲವಾದುದರಿಂದ, ಯಾವುದು ಶೋಕಕ್ಕೆ ಅರ್ಹವಲ್ಲವೋ ಅದಕ್ಕಾಗಿ ಶೋಕಿಸುತ್ತಿದ್ದ. ದೇಹವು ಹುಟ್ಟುತ್ತದೆ; ಇಂದೋ ನಾಳೆಯೋ ಅದು ಸೋಲಲೆಂದೇ ಸೃಷ್ಟಿಯಾದದ್ದು. ಆದುದರಿಂದ ದೇಹವು ಆತ್ಮದಷ್ಟು ಮುಖ್ಯವಲ್ಲ. ಇದನ್ನು ಅರಿತವನೇ ವಾಸ್ತವವಾಗಿಯೂ ವಿದ್ವಾಂಸ. ಭೌತಿಕ ದೇಹದ ಸ್ಥಿತಿ ಏನೇ ಇರಲಿ, ಅಂತಹ ವಿದ್ವಾಂಸನಿಗೆ ಶೋಕಕ್ಕೆ ಕಾರಣವೇ ಇಲ್ಲ.

## ಶ್ಲೋಕ - 12

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ |**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ||೧೨||**

**ನ**—ಎಂದಿಗೂ ಇಲ್ಲ; **ತು**—ಆದರೆ; **ಏವ**—ಖಂಡಿತವಾಗಿಯೂ; **ಅಹಮ್**—ನಾನು; **ಜಾತು**—ಯಾವ ಕಾಲದಲ್ಲಿಯೂ; **ನ**—ಇಲ್ಲ; **ಆಸಮ್**—ಅಸ್ತಿತ್ವದಲ್ಲಿದ್ದೆನು; **ನ**—ಇಲ್ಲ; **ತ್ವಮ್**—ನೀನು; **ನ**—ಇಲ್ಲ; **ಇಮೇ**—ಈ ಎಲ್ಲವೂ; **ಜನ ಅಧಿಪಾಃ**—ರಾಜರು; **ನ**—ಎಂದಿಗೂ ಇಲ್ಲ; **ಚ**—ಕೂಡ; **ಏವ**—ಖಂಡಿತವಾಗಿಯೂ; **ನ**—ಇಲ್ಲ; **ಭವಿಷ್ಯಾಮಃ**—ಅಸ್ತಿತ್ವದಲ್ಲಿರುವೆವು; **ಸರ್ವೇ ವಯಮ್**—ನಾವೆಲ್ಲರೂ; **ಅತಃ ಪರಮ್**—ಇನ್ನು ಮುಂದೆ.

### ಅನುವಾದ

**ನಾನು ಇರಲಿಲ್ಲ ಎನ್ನುವ ಕಾಲವೇ ಇರಲಿಲ್ಲ. ನೀನೂ ಈ ರಾಜರೂ ಇರದಿದ್ದ ಕಾಲವೇ ಇರಲಿಲ್ಲ. ಭವಿಷ್ಯದಲ್ಲಿಯೂ ನಾವೆಲ್ಲರೂ ಇರುವುದಿಲ್ಲ ಎನ್ನುವುದೇ ಇಲ್ಲ.**

### ಭಾವಾರ್ಥ

ವೇದಗಳಲ್ಲಿ ಕಠೋಪನಿಷತ್ತು ಮತ್ತು ಶ್ವೇತಾಶ್ವತರ ಉಪನಿಷತ್ತುಗಳಲ್ಲಿ ದೇವೋತ್ತಮ ಪರಮ ಪುರುಷನು ಅಸಂಖ್ಯಾತ ಜೀವಗಳನ್ನು ಪಾಲಿಸುವವನು ಎಂದು ಹೇಳಿದೆ. ಅವರ ವೈಯಕ್ತಿಕ ಕರ್ಮ ಮತ್ತು ಕರ್ಮಫಲಾನುಸಾರವಾಗಿ ಅವುಗಳನ್ನು ಪಾಲಿಸುತ್ತಾನೆ. ದೇವೋತ್ತಮ ಪರಮ ಪುರುಷನು ತನ್ನ ಸ್ವಾಂಶದಿಂದ ಪ್ರತಿಯೊಂದು ಜೀವಿಯ ಹೃದಯದಲ್ಲಿ ಪ್ರಜ್ಞಾಪೂರ್ಣವಾಗಿ ವಾಸಿಸುತ್ತಾನೆ. ಅತಿಸಾತ್ವಿಕರು ಮಾತ್ರ ಒಳಗೂ ಹೊರಗೂ ಒಬ್ಬನೇ ಪರಮ ಪ್ರಭುವನ್ನು ಕಾಣಬಲ್ಲರು; ಅವರು ಮಾತ್ರ ಪರಿಪೂರ್ಣ ಮತ್ತು ನಿತ್ಯ ಶಾಂತಿಯನ್ನು ಪಡೆಯಬಲ್ಲರು.

**ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಮ್**
**ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ |**
**ತಮಾತ್ಮಸ್ಥಂ ಯೇಽನು ಪಶ್ಯನ್ತಿ ಧೀರಾ**
**ಸ್ತೇಷಾಂ ಶಾನ್ತಿಃ ಶಾಶ್ವತೀ ನೇತರೇಷಾಮ್ ||**

(ಕಠೋಪನಿಷತ್ತು 2.2.13)

ವಾಸ್ತವವಾಗಿ ಬಹು ಸ್ವಲ್ಪ ತಿಳಿದಿದ್ದರೂ ತಾವು ತುಂಬ ತಿಳಿದವರಂತೆ ಜಗತ್ತಿನಲ್ಲಿ ಸೋಗು ಹಾಕುವ ಎಲ್ಲರಿಗೂ ಅರ್ಜುನನಿಗೆ ನೀಡಲಾದ ವೈದಿಕ ಸತ್ಯವನ್ನೇ ನೀಡಲಾಗಿದೆ. ಭಗವಂತನು ಸ್ಪಷ್ಟವಾಗಿ ಈ ಮಾತನ್ನು ಹೇಳಿದ್ದಾನೆ. ಭಗವಂತ, ಅರ್ಜುನ ಮತ್ತು ರಣಭೂಮಿಯಲ್ಲಿ ನೆರೆದ ಎಲ್ಲ ರಾಜರೂ ನಿತ್ಯಜೀವಿಗಳು. ಜೀವಾತ್ಮರುಗಳನ್ನು ಅವರ ಬದ್ಧ ಅಥವಾ ಮುಕ್ತ ಸನ್ನಿವೇಶಗಳಲ್ಲಿ ನಿರಂತರವಾಗಿ ಪಾಲಿಸುವವನು ಭಗವಂತನೇ. ದೇವೋತ್ತಮ ಪರಮ ಪುರುಷನೇ ಪರಮ ವ್ಯಕ್ತಿಗತ ಪುರುಷ; ಭಗವಂತನ ನಿತ್ಯ ಸಂಗಾತಿಯಾದ ಅರ್ಜುನನೂ, ಅಲ್ಲಿ ನೆರೆದಿದ್ದ ಎಲ್ಲ ರಾಜರೂ ವ್ಯಕ್ತಿಗತ ನಿತ್ಯ ಜೀವಾತ್ಮರು. ಅವರಿಗೆ ಭೂತಕಾಲದ ಪ್ರತ್ಯೇಕ ಅಸ್ತಿತ್ವವಿರಲಿಲ್ಲ ಎಂದು ಅರ್ಥವಲ್ಲ; ಪ್ರತ್ಯೇಕ ಜೀವಿಗಳಾಗಿ ಭವಿಷ್ಯದಲ್ಲಿ ಅವರು ಉಳಿಯುವುದಿಲ್ಲ ಎಂದೂ ಇದರ ಅರ್ಥವಲ್ಲ. ಅವರು ಹಿಂದೆಯೂ ವ್ಯಕ್ತಿಗಳಾಗಿ ಅಸ್ತಿತ್ವದಲ್ಲಿದ್ದರು; ಮುಂದೆಯೂ ಅವರು ನಿರಂತರವಾಗಿ ವ್ಯಕ್ತಿಗಳಾಗಿ ಅಸ್ತಿತ್ವದಲ್ಲಿರುತ್ತಾರೆ. ಆದುದರಿಂದ ಯಾರಿಗಾಗಿಯೂ ಶೋಕಿಸಲು ಕಾರಣವಿಲ್ಲ.

ಮಾಯಾವಾದದ ಸಿದ್ಧಾಂತ ಒಂದಿದೆ. ಇದರ ಪ್ರಕಾರ, ಮೋಕ್ಷವನ್ನು ಪಡೆದ ಜೀವಾತ್ಮವು ಮಾಯೆಯ ಆಚ್ಛಾದನೆಯಿಂದ ಪ್ರತ್ಯೇಕಗೊಂಡು ನಿರಾಕಾರ ಬ್ರಹ್ಮನಲ್ಲಿ ಐಕ್ಯವಾಗುತ್ತದೆ; ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಪರಮಾಧಿಕಾರವುಳ್ಳ ಶ್ರೀಕೃಷ್ಣನು ಈ ಸಿದ್ಧಾಂತವನ್ನು ಸಮರ್ಥಿಸುವುದಿಲ್ಲ. ಬದ್ಧಸ್ಥಿತಿಯಲ್ಲಿ ಮಾತ್ರ ನಾವು ವ್ಯಕ್ತಿತ್ವವನ್ನು ಕುರಿತು ಯೋಚಿಸುತ್ತೇವೆ ಎನ್ನುವ ಸಿದ್ಧಾಂತಕ್ಕೂ ಇಲ್ಲಿ ಸಮರ್ಥನೆ ಇಲ್ಲ. ಕೃಷ್ಣನು ಇಲ್ಲಿ, ಭಗವಂತನ ಮತ್ತು ಇತರರ ವ್ಯಕ್ತಿತ್ವವು ನಿರಂತರವಾಗಿ ಮುಂದುವರಿಯುತ್ತದೆ ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಇದನ್ನು ಉಪನಿಷತ್ತುಗಳೂ ದೃಢಪಡಿಸುತ್ತವೆ. ಕೃಷ್ಣನ ಈ ಮಾತು ಪ್ರಮಾಣ. ಏಕೆಂದರೆ ಅವನು ಮಾಯೆಗೆ ಒಳಪಡುವವನಲ್ಲ. ಪ್ರತ್ಯೇಕ ಅಸ್ತಿತ್ವವು ವಾಸ್ತವವಾಗಿಲ್ಲದಿದ್ದರೆ ಕೃಷ್ಣನು ಇದನ್ನು ಇಷ್ಟು ಒತ್ತಿ ಹೇಳುತ್ತಿರಲಿಲ್ಲ; ಭವಿಷ್ಯದಲ್ಲೂ ಅಸ್ತಿತ್ವ ಉಂಟು ಎಂದು ಹೇಳುತ್ತಿರಲಿಲ್ಲ. ಕೃಷ್ಣನು ಹೇಳಿದ ಅಸ್ತಿತ್ವವು ಐಹಿಕವಾದದ್ದು. ಆತ್ಮಕ್ಕೆ ಸಂಬಂಧಿಸಿದ್ದಲ್ಲ ಎಂದು ಮಾಯಾವಾದಿಗಳು ವಾದಿಸಬಹುದು. ವ್ಯಕ್ತಿತ್ವವು ಐಹಿಕವಾದದ್ದು ಎನ್ನುವ ವಾದವನ್ನು ಒಪ್ಪಿದರೂ ಕೃಷ್ಣನ ವ್ಯಕ್ತಿತ್ವವನ್ನು ಗುರುತಿಸುವುದು ಹೇಗೆ? ಕೃಷ್ಣನು ಹಿಂದಿನ ತನ್ನ ವ್ಯಕ್ತಿತ್ವವನ್ನು ದೃಢಪಡಿಸುತ್ತಾನೆ; ಮುಂದೆಯೂ ತನ್ನ ವ್ಯಕ್ತಿತ್ವವಿರುವುದನ್ನು ದೃಢಪಡಿಸುತ್ತಾನೆ. ಅವನು ತನ್ನ ವ್ಯಕ್ತಿತ್ವವನ್ನು ಹಲವು ರೀತಿಗಳಲ್ಲಿ ದೃಢಪಡಿಸಿದ್ದಾನೆ, ಮತ್ತು ನಿರಾಕಾರ ಬ್ರಹ್ಮನು ಅವನಿಗೆ ಅಧೀನ ಎಂದು ಸ್ಪಷ್ಟವಾಗಿ ಹೇಳಿದೆ. ಕೃಷ್ಣನು ಆಧ್ಯಾತ್ಮಿಕ ವ್ಯಕ್ತಿತ್ವವನ್ನು ಉದ್ದಕ್ಕೂ ಉಳಿಸಿಕೊಂಡೇ ಇದ್ದಾನೆ; ಅವನನ್ನು ವ್ಯಕ್ತಿಗತ ಪ್ರಜ್ಞೆಯ ಸಾಮಾನ್ಯ ಬದ್ಧ ಆತ್ಮ ಎಂದು ಪರಿಗಣಿಸುವುದಾದರೆ ಅವನ ಭಗವದ್ಗೀತೆಗೆ, ಪ್ರಮಾಣವಾಗುವ ಧಾರ್ಮಿಕ ಗ್ರಂಥವಾಗಿ ಬೆಲೆಯೇ ಇಲ್ಲ. ಮಾನವನ ದೌರ್ಬಲ್ಯದ ನಾಲ್ಕು ದೋಷಗಳೂ ಇರುವ ಸಾಮಾನ್ಯ ಮನುಷ್ಯನು, ಕೇಳಲು ಯೋಗ್ಯವಾದದ್ದನ್ನು ಬೋಧಿಸಲು ಸಮರ್ಥನಲ್ಲ. ಗೀತೆ ಇಂತಹ ಸಾಹಿತ್ಯವನ್ನು ಮೀರಿದ್ದು. ಕೃಷ್ಣನನ್ನು ಸಾಮಾನ್ಯ ಮನುಷ್ಯ ಎಂದು ಪರಿಗಣಿಸಿದಾಗ ಗೀತೆಯು ಎಲ್ಲ ಮಹತ್ವವನ್ನು ಕಳೆದುಕೊಳ್ಳುತ್ತದೆ. ಈ ಶ್ಲೋಕದಲ್ಲಿ ಪ್ರಸ್ತಾಪಿಸಿರುವ ವ್ಯಕ್ತಿತ್ವದ ಅನೇಕತೆಯು ಪದ್ಧತಿಗನುಗುಣವಾಗಿದೆ ಮತ್ತು ಅದು ದೇಹಕ್ಕೆ ಮಾತ್ರ ಅನ್ವಯಿಸುತ್ತದೆ ಎಂದು ಮಾಯಾವಾದಿಗಳು ವಾದಮಾಡುತ್ತಾರೆ. ಆದರೆ ಈ ಶ್ಲೋಕಕ್ಕೆ ಹಿಂದೆ, ದೇಹದ ಇಂತಹ ಕಲ್ಪನೆಯನ್ನು ಉದ್ದಕ್ಕೂ ಖಂಡಿಸಿದೆ. ಜೀವಿಗಳ ದೈಹಿಕ ಕಲ್ಪನೆಯನ್ನು

ಖಂಡಿಸಿದನಂತರ ಕೃಷ್ಣನು ದೇಹದ ಬಗೆಗೆ ಪುನಃ ಸಾಂಪ್ರದಾಯಿಕ ಪರಿಕಲ್ಪನೆಯನ್ನು ನಿರೂಪಿಸುವುದು ಹೇಗೆ ಸಾಧ್ಯ? ಆದುದರಿಂದ ವ್ಯಕ್ತಿತ್ವದ ಕಲ್ಪನೆಯ ಆಧಾರ ಆಧ್ಯಾತ್ಮಿಕವಾದದ್ದು. ಶ್ರೀರಾಮಾನುಜಾಚಾರ್ಯ ಮುಂತಾದ ಹಿರಿಯ ಆಚಾರ್ಯರು ಇದನ್ನು ದೃಢಪಡಿಸಿದ್ದಾರೆ. ಭಗವಂತನ ಭಕ್ತರಾದವರಿಗೆ ಈ ಆಧ್ಯಾತ್ಮಿಕ ವ್ಯಕ್ತಿತ್ವವು ಅರ್ಥವಾಗುತ್ತದೆ ಎಂದು ಗೀತೆಯಲ್ಲಿ ಅನೇಕ ಸ್ಥಳಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಕೃಷ್ಣನು ದೇವೋತ್ತಮ ಪರಮ ಪುರುಷನೆನ್ನುವುದಕ್ಕಾಗಿ ಅಸೂಯೆ ಪಡುವವರಿಗೆ ಈ ಶ್ರೇಷ್ಠ ಸಾಹಿತ್ಯದಲ್ಲಿ ನಿಜವಾದ ಪ್ರವೇಶವೇ ಇಲ್ಲ. ಭಕ್ತನಲ್ಲದವನು ಗೀತೆಯನ್ನು ತಿಳಿಯುವ ರೀತಿಯು ದುಂಬಿಯು ಜೇನಿನ ಸೀಸೆಯನ್ನು ನೆಕ್ಕಿದಂತೆ. ಸೀಸೆಯನ್ನು ತೆರೆಯದೆ ಜೇನನ್ನು ಸವಿಯಲು ಸಾಧ್ಯವಿಲ್ಲ. ಹಾಗೆಯೇ ಈ ಗ್ರಂಥದ ನಾಲ್ಕನೆಯ ಅಧ್ಯಾಯದಲ್ಲಿ ಹೇಳಿರುವಂತೆ ಭಗವದ್ಗೀತೆಯ ಅನುಭಾವವನ್ನು ಭಕ್ತರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಬೇರೆ ಯಾರೂ ಇದನ್ನು ಸವಿಯಲಾರರು. ಭಗವಂತನ ಇರುವಿಕೆಯ ಬಗೆಗೇ ಅಸೂಯೆ ಪಡುವವರು ಗೀತೆಯನ್ನು ಮುಟ್ಟಲೂ ಸಮರ್ಥರಲ್ಲ. ಆದುದರಿಂದ, ಗೀತೆಯ ಮಾಯಾವಾದೀ ವ್ಯಾಖ್ಯಾನವು ಸಮಗ್ರಸತ್ಯದ ತೀರ ತಪ್ಪು ವಿವರಣೆ. ಮಾಯಾವಾದಿಗಳ ವ್ಯಾಖ್ಯಾನಗಳನ್ನು ಓದುವುದನ್ನೇ ಚೈತನ್ಯಮಹಾಪ್ರಭುಗಳು ನಿಷೇಧಿಸಿದ್ದಾರೆ. ಇಂತಹ ಮಾಯಾವಾದೀ ಸಿದ್ಧಾಂತದ ವಿವರಣೆಗಳನ್ನು ಒಪ್ಪುವ ಯಾರೇ ಆಗಲಿ, ಗೀತೆಯ ನಿಜವಾದ ರಹಸ್ಯವನ್ನು ಅರ್ಥಮಾಡಿಕೊಳ್ಳುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ ಎಂದು ಎಚ್ಚರಿಕೆ ಹೇಳಿದ್ದಾರೆ. ವ್ಯಕ್ತಿಯ ಪ್ರತ್ಯೇಕ ಅಸ್ತಿತ್ವವು ಭೌತಿಕ ವಿಶ್ವಕ್ಕೆ ಮಾತ್ರ ಸಂಬಂಧಿಸಿದ್ದಾದರೆ ಭಗವಂತನು ಅದನ್ನು ಕುರಿತು ಉಪದೇಶಿಸುವ ಅಗತ್ಯವೇ ಇಲ್ಲ. ಜೀವಾತ್ಮ ಮತ್ತು ಭಗವಂತನ ಪ್ರತ್ಯೇಕತೆಯು ನಿರಂತರ ಸತ್ಯ. ವೇದಗಳೂ ಇದನ್ನು ದೃಢಪಡಿಸುತ್ತವೆ.

## ಶ್ಲೋಕ - 13

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ |**
**ತಥಾ ದೇಹಾನ್ತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ||೧೩||**

**ದೇಹಿನಃ**—ದೇಹಿಗಳ; **ಅಸ್ಮಿನ್**—ಈ; **ಯಥಾ**—ಹೇಗೋ; **ದೇಹೇ**—ಈ ಶರೀರದಲ್ಲಿ; **ಕೌಮಾರಮ್**—ಕೌಮಾರ್ಯ; **ಯೌವನಮ್**—ಯೌವನ; **ಜರಾ**—ಮುಪ್ಪು; **ತಥಾ**—ಅದರಂತೆಯೇ; **ದೇಹ ಅನ್ತರ**—ಶರೀರಾಂತರ; **ಪ್ರಾಪ್ತಿಃ**—ಹೊಂದುವಿಕೆಯು; **ಧೀರಃ**— ಧೀರನಾದವನು; **ತತ್ರ**—ಆಗ; **ನ ಮುಹ್ಯತಿ**—ಭ್ರಾಂತಿಗೊಳ್ಳುವುದಿಲ್ಲ.

## ಅನುವಾದ

**ದೇಹಸ್ಥ ಆತ್ಮವು ಈ ದೇಹದಲ್ಲಿ ಬಾಲ್ಯದಿಂದ ಯೌವನಕ್ಕೆ, ಮುಪ್ಪಿಗೆ ಒಂದೇ ಸಮನೆ ಸಾಗುವ ರೀತಿಯಲ್ಲೇ ಆತ್ಮವು ಸಾವಿನನಂತರ ಮತ್ತೊಂದು ದೇಹಕ್ಕೆ ಸಾಗುತ್ತದೆ. ಧೀರನಾದವನು ಇದರಿಂದ ಗೊಂದಲಕ್ಕೆ ಒಳಗಾಗುವುದಿಲ್ಲ.**

## ಭಾವಾರ್ಥ

ಪ್ರತಿಯೊಂದು ಜೀವಿಯೂ ಪ್ರತ್ಯೇಕ ಆತ್ಮ. ಆದುದರಿಂದ ಪ್ರತಿಯೊಂದು ಜೀವಿಯೂ

ನಿಮಿಷ ನಿಮಿಷಕ್ಕೂ ತನ್ನ ದೇಹವನ್ನು ಬದಲಾಯಿಸುತ್ತಿರುತ್ತದೆ. ಕೆಲವೊಮ್ಮೆ ಮಗುವಿನಂತೆ, ಕೆಲವೊಮ್ಮೆ ಯುವಕನಂತೆ, ಮತ್ತೊಮ್ಮೆ ಮುದುಕನಂತೆ ಕಾಣಿಸಿಕೊಳ್ಳುತ್ತದೆ. ಆದರೆ ಇರುವುದು ಒಂದೇ ಆತ್ಮ. ಇದು ಯಾವ ಬಗೆಯ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಈ ಪ್ರತ್ಯೇಕ ಆತ್ಮವು ಕಟ್ಟಕಡೆಗೆ ಸಾವಿನ ಸಮಯದಲ್ಲಿ ದೇಹವನ್ನು ಬದಲಾಯಿಸುತ್ತದೆ ಮತ್ತು ಇನ್ನೊಂದು ದೇಹವನ್ನು ಪ್ರವೇಶಿಸುತ್ತದೆ. ಮುಂದಿನ ಜನ್ಮದಲ್ಲಿ ನಿಶ್ಚಯವಾಗಿ ಅದಕ್ಕೆ ಭೌತಿಕ ಅಥವಾ ಅಭೌತಿಕ ದೇಹವಿರುವುದರಿಂದ ಅರ್ಜುನನು ದುಃಖಿಸಲು ಕಾರಣವೇ ಇಲ್ಲ. ಭೀಷ್ಮ ಮತ್ತು ದ್ರೋಣರ ವಿಷಯದಲ್ಲಿ ಅವನಿಗೆ ತುಂಬ ಕಳಕಳಿಯಾದರೂ ದುಃಖಿಸುವ ಕಾರಣವಿಲ್ಲ. ಅದರ ಬದಲು ಅವರು ಹಳೆಯ ದೇಹಗಳನ್ನು ಬಿಟ್ಟು ಹೊಸ ದೇಹಗಳನ್ನು ಪ್ರವೇಶಿಸಿ ತಮ್ಮ ಚೈತನ್ಯವನ್ನು ಮತ್ತೆ ಪಡೆದುಕೊಳ್ಳುತ್ತಾರೆ ಎಂದು ಅವನು ಸಂತೋಷಪಡಬೇಕು. ಯಾವುದೇ ಮನುಷ್ಯನ ಬದುಕಿನ ಕರ್ಮಗಳಿಗೆ ಅನುಗುಣವಾಗಿ ವಿಧವಿಧವಾದ ಭೋಗಗಳೋ ನೋವುಗಳೋ ಲಭ್ಯವಾಗುವುದಕ್ಕೆ ದೇಹದ ಈ ಬದಲಾವಣೆಯೇ ಕಾರಣ. ಭೀಷ್ಮರು, ದ್ರೋಣರು, ಪುಣ್ಯಚೇತನರು. ಆದುದರಿಂದ ನಿಶ್ಚಯವಾಗಿಯೂ ಮುಂದಿನ ಜನ್ಮದಲ್ಲಿ ಅವರು ಆಧ್ಯಾತ್ಮಿಕ ಶರೀರವನ್ನು ಪಡೆಯುವರು. ಕೊನೆಯ ಪಕ್ಷ ಸ್ವರ್ಗ ಮೊದಲಾದ ಲೋಕಗಳಲ್ಲಿ ಐಹಿಕ ಬದುಕಿನ ಉನ್ನತ ಭೋಗಗಳನ್ನು ಅನುಭವಿಸಲು ದೇಹಗಳನ್ನು ಪಡೆಯುವರು. ಹೇಗೇ ಆಗಲಿ ದುಃಖಕ್ಕೆ ಕಾರಣವೇ ಇಲ್ಲ.

ಜೀವಾತ್ಮ, ಪರಮಾತ್ಮ ಮತ್ತು ಐಹಿಕವಾಗಿ ಹಾಗೂ ಅಧ್ಯಾತ್ಮಿಕವಾಗಿ ಪ್ರಕೃತಿ ಇವುಗಳ ಸ್ವರೂಪದ ಪರಿಪೂರ್ಣ ಅರಿವಿರುವವನನ್ನು **ಧೀರ** ಎಂದು ಕರೆಯುತ್ತಾರೆ. ಇಂತಹ ಮನುಷ್ಯನು ದೇಹಗಳ ಬದಲಾವಣೆಯಿಂದ ಮೋಸಹೋಗುವುದಿಲ್ಲ.

ಆತ್ಮದ ಏಕತ್ವದ ಮಾಯಾವಾದೀ ಸಿದ್ಧಾಂತವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಆತ್ಮವನ್ನು ಭಿನ್ನಾಂಶಗಳನ್ನಾಗಿ ಕತ್ತರಿಸಲು ಸಾಧ್ಯವಿಲ್ಲ. ಹೀಗೆ ಜೀವಿಗಳಾಗಿ ಕತ್ತರಿಸುವುದೆಂದರೆ ಪರಮ ಶಕ್ತಿಯನ್ನು ಕತ್ತರಿಸಲು ಸಾಧ್ಯ, ಅದು ಬದಲಾಗಬಹುದು ಎಂದು ಹೇಳಿದಂತಾಯಿತು. ಇದು ಪರಮಾತ್ಮನಿಗೆ ಬದಲಾವಣೆ ಎನ್ನುವುದು ಇಲ್ಲವೇ ಇಲ್ಲ ಎನ್ನುವ ತತ್ವಕ್ಕೆ ವಿರುದ್ಧವಾದುದು. ಗೀತೆಯು ಒಂದು ಅಂಶವನ್ನು ದೃಢಪಡಿಸುತ್ತದೆ. ಪರಮ ಪ್ರಭುವಿನ ಭಿನ್ನಾಂಶಗಳು ಸನಾತನವಾದವು. ಇವನ್ನು **ಕ್ಷರ** ಎಂದು ಕರೆಯುತ್ತಾರೆ; ಹೀಗೆಂದರೆ ಐಹಿಕ ಪ್ರಕೃತಿಯಲ್ಲಿ ಬೀಳುವ ಪ್ರವೃತ್ತಿ ಅವುಗಳದು. ಈ ಭಿನ್ನಾಂಶಗಳು ನಿರಂತರವಾಗಿ ಹಾಗೆಯೇ ಉಳಿಯುತ್ತವೆ. ಮುಕ್ತಿ ಪಡೆದ ಅನಂತರವೂ ಜೀವಾತ್ಮವು ಒಂದು ಭಿನ್ನಾಂಶವಾಗಿಯೇ ಉಳಿಯುತ್ತದೆ. ಆದರೆ ಮುಕ್ತಿ ಪಡೆದ ಅನಂತರ ನಿರಂತರ ಪರಮಾನಂದದಲ್ಲಿ ಮತ್ತು ಅರಿವಿನಲ್ಲಿ ಅದು ಪರಮ ಪುರುಷನ ಸನ್ನಿಧಿಯಲ್ಲಿ ಉಳಿಯುತ್ತದೆ. ಪ್ರತಿಬಿಂಬದ ಸಿದ್ಧಾಂತವನ್ನು ಪ್ರತಿಯೊಂದು ಪ್ರತ್ಯೇಕ ದೇಹದಲ್ಲಿ ವಾಸಿಸುವ ಪರಮಾತ್ಮನಿಗೆ ಅನ್ವಯಿಸಬಹುದು. ಪರಮಾತ್ಮನು ಜೀವಾತ್ಮನಿಗಿಂತ ಭಿನ್ನ. ಆಕಾಶವು ನೀರಿನಲ್ಲಿ ಪ್ರತಿಬಿಂಬಿತವಾದರೆ ಪ್ರತಿಬಿಂಬವು ಚಂದ್ರ, ಸೂರ್ಯ ಮತ್ತು ತಾರೆಗಳನ್ನೂ ಪ್ರತಿನಿಧಿಸುತ್ತದೆ. ತಾರೆಗಳನ್ನು ಜೀವಿಗಳಿಗೆ ಹೋಲಿಸಬಹುದು ಮತ್ತು ಸೂರ್ಯನನ್ನು ಅಥವಾ ಚಂದ್ರನನ್ನು ಪರಮಾತ್ಮನಿಗೆ ಹೋಲಿಸಬಹುದು. ಭಿನ್ನಾಂಶವಾದ ಆತ್ಮದ ಪ್ರತಿನಿಧಿ ಅರ್ಜುನ; ಪರಮಾತ್ಮನು ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣ. ಅವರಿಬ್ಬರೂ ಒಂದೇ ಮಟ್ಟದವರಲ್ಲ. ಇದು ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ ತಿಳಿಯುತ್ತದೆ. ಅರ್ಜುನನು ಶ್ರೀಕೃಷ್ಣನಿಗೆ

ಸರಿಸಮಾನನಾದರೆ ಮತ್ತು ಕೃಷ್ಣನು ಅರ್ಜುನನಿಗಿಂತ ದೊಡ್ಡವನಲ್ಲದಿದ್ದರೆ ಅವರ ಗುರು ಶಿಷ್ಯ ಸಂಬಂಧಕ್ಕೆ ಅರ್ಥವಿಲ್ಲ. ಇಬ್ಬರೂ ಮಾಯೆಯಿಂದ ಭ್ರಮಿತರಾದರೆ ಒಬ್ಬನು ಗುರು, ಮತ್ತೊಬ್ಬನು ಶಿಷ್ಯ ಎಂದು ಇರಬೇಕಾಗಿಯೇ ಇಲ್ಲ. ಮಾಯೆಯ ಹಿಡಿತದಲ್ಲಿರುವ ಯಾರೂ ಬೋಧನೆ ಮಾಡಲು ಅಧಿಕಾರ ಹೊಂದಿರುವುದಿಲ್ಲ. ಆದುದರಿಂದ ಇಂತಹ ಬೋಧನೆಯು ನಿಷ್ಪ್ರಯೋಜಕವಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಶ್ರೀಕೃಷ್ಣನು ಪರಮ ಪ್ರಭು; ಜೀವಾತ್ಮನೂ, ಮಾಯೆಯಿಂದ ಭ್ರಮಿತನಾಗಿ ಮರೆವಿಗೆ ವಶನೂ ಆದ ಅರ್ಜುನನಿಗಿಂತ ಅವನು ಉನ್ನತ ಸ್ಥಾನದಲ್ಲಿರುವವನು ಎನ್ನುವುದನ್ನು ಒಪ್ಪಿಕೊಳ್ಳಲಾಗಿದೆ.

## ಶ್ಲೋಕ - 14

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣಸುಖದುಃಖದಾಃ |**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ||೧೪||**

**ಮಾತ್ರಾಸ್ಪರ್ಶಾಃ**—ಇಂದ್ರಿಯಾನುಭವಗಳು; **ತು**—ಕೇವಲ; **ಕೌನ್ತೇಯ**—ಕುಂತೀಪುತ್ರನೇ; **ಶೀತ**—ಚಳಿಗಾಲ; **ಉಷ್ಣ**—ಬೇಸಿಗೆಕಾಲ; **ಸುಖ**—ಸುಖ; **ದುಃಖ**—ವ್ಯಥೆಗಳನ್ನು; **ದಾಃ**—ಕೊಡುವಂತಹವು; **ಆಗಮ**—ತೋರುವಂತಹವು; **ಅಪಾಯಿನಃ**—ಮರೆಯಾಗುವಂತಹವು; **ಅನಿತ್ಯಾಃ**—ಅಶಾಶ್ವತವಾದವು; **ತಾನ್**—ಅವೆಲ್ಲವನ್ನು; **ತಿತಿಕ್ಷಸ್ವ**—ಸಹಿಸಿಕೊಳ್ಳಲು ಯತ್ನಿಸು; **ಭಾರತ**—ಭರತಕುಲದವನೇ.

## ಅನುವಾದ

**ಹೇ ಕೌಂತೇಯ, ಸುಖದುಃಖಗಳು ಸ್ವಲ್ಪಕಾಲ ಕಾಣಿಸಿಕೊಳ್ಳುವುವು, ಕ್ರಮೇಣ ಮಾಯವಾಗುವುವು, ಚಳಿಗಾಲ ಮತ್ತು ಬೇಸಿಗೆಗಳು ಕಾಣಿಸಿಕೊಂಡು ಮಾಯವಾಗುವಂತೆ. ಭರತವಂಶಜನೆ, ಅವು ಇಂದ್ರಿಯಗಳ ಗ್ರಹಣಶಕ್ತಿಯಿಂದ ಉದ್ಭವವಾಗುತ್ತವೆ. ಅವುಗಳಿಂದ ಕ್ಷೋಭೆಗೊಳಗಾಗದೆ ಸಹಿಸುವುದನ್ನು ಕಲಿಯಬೇಕು.**

## ಭಾವಾರ್ಥ

ಕರ್ತವ್ಯ ನಿರ್ವಹಣೆಯಲ್ಲಿ, ಅಶಾಶ್ವತವಾದ ಸುಖ ದುಃಖಗಳ ಆಗುಹೋಗುಗಳನ್ನು ಸಹಿಸಿಕೊಳ್ಳಲು ಕಲಿಯಬೇಕು. ವೇದದ ಆದೇಶದ ಪ್ರಕಾರ ಮಾಘಮಾಸದಲ್ಲಿ ಸಹ (ಜನವರಿ—ಫೆಬ್ರುವರಿ) ಬೆಳಗಿನ ಜಾವದಲ್ಲೇ ಸ್ನಾನಮಾಡಬೇಕು. ಆ ಕಾಲದಲ್ಲಿ ವಿಪರೀತ ಚಳಿಯಿರುತ್ತದೆ. ಆದರೂ ಆಚಾರನಿಷ್ಠನಾದವನು ಸ್ನಾನಮಾಡಲು ಹಿಂಜರಿಯುವುದಿಲ್ಲ. ಮೇ ಮತ್ತು ಜೂನ್ ತಿಂಗಳಲ್ಲಿ ನಡುಬೇಸಗೆ. ಆದರೂ ಹೆಂಗಸರು ಅಡಿಗೆಮನೆಯಲ್ಲಿ ಅಡಿಗೆಮಾಡಲು ಹಿಂಜರಿಯುವುದಿಲ್ಲ. ಹವೆಯ ಅನನುಕೂಲಗಳನ್ನು ಲಕ್ಷ್ಯಮಾಡದೆ ಮನುಷ್ಯನು ತನ್ನ ಕರ್ತವ್ಯವನ್ನು ಮಾಡಬೇಕು. ಹಾಗೆಯೇ ಯುದ್ಧಮಾಡುವುದು ಕ್ಷತ್ರಿಯನ ಧರ್ಮ; ಬಂಧುವಿನೊಡನೆ ಅಥವಾ ಮಿತ್ರನೊಡನೆ ಯುದ್ಧಮಾಡಬೇಕಾಗಿ ಬಂದರೂ ಕ್ಷತ್ರಿಯನು ತನ್ನ ನಿಯತ ಧರ್ಮದಿಂದ ದೂರವಾಗಬಾರದು. ವಿದ್ಯೆಯ ಪೀಠಕ್ಕೆ ಏರಲು ಮನುಷ್ಯನು ಧರ್ಮದ ನಿಯಮಗಳನ್ನು

ಪಾಲಿಸಬೇಕು. ಏಕೆಂದರೆ ವಿದ್ಯೆ ಮತ್ತು ಭಕ್ತಿಗಳಿಂದ ಮಾತ್ರ ಮನುಷ್ಯನು ಮಾಯೆಯ ಮುಷ್ಟಿಯಿಂದ ಪಾರಾಗಬಲ್ಲ.

ಅರ್ಜುನನನ್ನು ಸಂಬೋಧಿಸಿರುವ ಎರಡು ರೀತಿಗಳೂ ಅರ್ಥವತ್ತಾದವು. ಕೌಂತೇಯ ಎನ್ನುವುದು ತಾಯಿಯ ಕಡೆಯಿಂದ ಆತನು ಬಹು ದೊಡ್ಡ ವಂಶಕ್ಕೆ ಸೇರಿದವನು ಎಂಬುದನ್ನು ಸೂಚಿಸುತ್ತದೆ. ಭಾರತ ಎನ್ನುವುದು ತಂದೆಯ ವಂಶದ ಹಿರಿಮೆಯನ್ನು ಸೂಚಿಸುತ್ತದೆ. ಎರಡು ಕಡೆಗಳಿಂದಲೂ ಅವನು ಬಹು ದೊಡ್ಡ ಪರಂಪರೆಗೆ ಸೇರಿದವನು. ಮಹತ್ವದ ಪರಂಪರೆಯು ಕರ್ತವ್ಯನಿರ್ವಹಣೆಯಲ್ಲಿ ಹೆಚ್ಚಿನ ಹೊಣೆಯನ್ನು ತರುತ್ತದೆ; ಆದುದರಿಂದ ಅವನು ಯುದ್ಧಮಾಡುವುದರಿಂದ ತಪ್ಪಿಸಿಕೊಳ್ಳುವಂತಿಲ್ಲ.

## ಶ್ಲೋಕ - 15

**ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥**

**ಯಮ್**—ಯಾವ; **ಹಿ**—ಖಂಡಿತವಾಗಿಯೂ; **ನ ವ್ಯಥಯಂತಿ**—ದುಃಖಕ್ಕೊಳಪಡಿಸುವುದಿಲ್ಲವೋ; **ಏತೇ**—ಇವೆಲ್ಲವೂ; **ಪುರುಷಮ್**—ವ್ಯಕ್ತಿಯನ್ನು; **ಪುರುಷ ಋಷಭ**—ಮಾನವ ಶ್ರೇಷ್ಠನೇ; **ಸಮ**—ವ್ಯತ್ಯಾಸಗೊಳ್ಳದ; **ದುಃಖ**—ದುಃಖ; **ಸುಖಮ್**—ಸಂತೋಷಗಳುಳ್ಳ; **ಧೀರಮ್**—ಸಹಿಷ್ಣುವಾದ; **ಸಃ**—ಅವನು; **ಅಮೃತತ್ವಾಯ**—ಮೋಕ್ಷಕ್ಕೆ; **ಕಲ್ಪತೇ**—ಅರ್ಹನೆಂದು ತಿಳಿಯಲ್ಪಡುತ್ತಾನೆ.

## ಅನುವಾದ

**ಪುರುಷಶ್ರೇಷ್ಠನೇ, (ಅರ್ಜುನನೇ) ಸುಖದುಃಖಗಳಿಂದ ವಿಚಲಿತನಾಗದೆ ಉಭಯ ಸ್ಥಿತಿಗಳಲ್ಲಿಯೂ ದೃಢನಾಗಿರುವ ಮನುಷ್ಯನು ಮೋಕ್ಷಕ್ಕೆ ಅರ್ಹನಾದವನು.**

## ಭಾವಾರ್ಥ

ಆಧ್ಯಾತ್ಮಿಕ ಸಾಕ್ಷಾತ್ಕಾರದ ಮೇಲಿನ ಹಂತವನ್ನು ಮುಟ್ಟಲು ದೃಢಸಂಕಲ್ಪ ಮಾಡಿ ಸುಖ ದುಃಖಗಳ ಆಕ್ರಮಣವನ್ನು ಸಮಚಿತ್ತದಿಂದ ಸಹಿಸಬಲ್ಲವನು ಮುಕ್ತಿಗೆ ಅರ್ಹನಾದವನು. ವರ್ಣಾಶ್ರಮಧರ್ಮದಲ್ಲಿ ನಾಲ್ಕನೆಯ ಆಶ್ರಮವಾದ ಸನ್ಯಾಸವು ಶ್ರಮದಾಯಕವಾದದ್ದು. ಆದರೆ ತನ್ನ ಬದುಕನ್ನು ಪರಿಪೂರ್ಣಮಾಡಲು ಬಯಸುವವನು ನಿಶ್ಚಯವಾಗಿಯೂ ಎಷ್ಟೇ ಕಷ್ಟಗಳಿದ್ದರೂ ಸನ್ಯಾಸಾಶ್ರಮವನ್ನು ಸ್ವೀಕರಿಸುವನು. ಸಾಮಾನ್ಯವಾಗಿ ಕಷ್ಟಗಳು ಉದ್ಭವವಾಗುವುದು ಸಾಂಸಾರಿಕ ಬಾಂಧವ್ಯಗಳನ್ನು ಕಡಿದುಕೊಂಡು ಹೆಂಡತಿ ಮಕ್ಕಳ ಸಂಬಂಧವನ್ನು ತ್ಯಜಿಸಬೇಕಾಗುವುದರಿಂದ. ಆದರೆ ಯಾರೇ ಆದರೂ ಇಂತಹ ಕಷ್ಟಗಳನ್ನು ಸಹಿಸಿಕೊಳ್ಳಲು ಸಮರ್ಥರಾದರೆ ನಿಶ್ಚಯವಾಗಿಯೂ ಅವನ ಆಧ್ಯಾತ್ಮಿಕ ಸಾಕ್ಷಾತ್ಕಾರದ ಮಾರ್ಗವು ಪೂರ್ಣವಾಗುವುದು. ಹೀಗೆಯೇ, ತನ್ನ ಕುಟುಂಬದವರೊಡನೆ ಅಥವಾ ಇತರ ಆಪ್ತೇಷ್ಟರೊಡನೆ ಯುದ್ಧಮಾಡುವುದು ಕಷ್ಟವಾದರೂ ಅರ್ಜುನನು ಕ್ಷತ್ರಿಯನಾಗಿ ತನ್ನ ಕರ್ತವ್ಯದಲ್ಲೇ ಮುಂದುವರಿಯಬೇಕೆಂಬ ಉಪದೇಶವು ಇಲ್ಲಿದೆ. ಚೈತನ್ಯ ಮಹಾಪ್ರಭುಗಳು ಇಪ್ಪತ್ತನಾಲ್ಕನೆಯ ವರ್ಷದಲ್ಲಿ ಸನ್ಯಾಸವನ್ನು ಸ್ವೀಕರಿಸಿದರೂ ಅವರ

ತರುಣ ಪತ್ನಿ ಮತ್ತು ವೃದ್ಧ ತಾಯಿ ಅವರನ್ನೇ ಅವಲಂಬಿಸಿದ್ದರು. ಅವರನ್ನು ನೋಡಿಕೊಳ್ಳಲು ಬೇರೆ ಯಾರೂ ಇರಲಿಲ್ಲ. ಆದರೂ ಚೈತನ್ಯ ಮಹಾಪ್ರಭುಗಳು ಒಂದು ಮಹದುದ್ದೇಶಕ್ಕಾಗಿ ಸನ್ಯಾಸಿಗಳಾದರು ಮತ್ತು ತಮ್ಮ ಉನ್ನತ ಕರ್ತವ್ಯಗಳ ಪಾಲನೆಯಲ್ಲಿ ದೃಢವಾಗಿದ್ದರು. ಐಹಿಕ ಬಂಧನದಿಂದ ಮುಕ್ತಿ ಪಡೆಯುವ ಮಾರ್ಗ ಇದೇ.

## ಶ್ಲೋಕ - 16

**ನಾಸತೋ ವಿದ್ಯತೇ ಭಾವೋ ನಾ ಭಾವೋ ವಿದ್ಯತೇ ಸತಃ |**
**ಉಭಯೋರಪಿ ದೃಷ್ಟೋऽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ||೧೬||**

**ನ**—ಎಂದಿಗೂ ಇಲ್ಲ; **ಅಸತಃ**—ಅಸ್ತಿತ್ವದಲ್ಲಿ ಇರದೇ ಇರುವುದರ; **ವಿದ್ಯತೇ**—ಇರುತ್ತದೆ; **ಭಾವಃ**—ಉಳಿವು; **ನ**—ಎಂದಿಗೂ ಇಲ್ಲ; **ಅಭಾವಃ**—ಬದಲಾಗುವ ಗುಣವು; **ವಿದ್ಯತೇ**—ಇರುತ್ತದೆ; **ಸತಃ**—ಶಾಶ್ವತವಾದುದರ; **ಉಭಯೋಃ**—ಎರಡರ; **ಅಪಿ**—ಸ್ಪಷ್ಟವಾಗಿ; **ದೃಷ್ಟಃ**— ನೋಡಲಾಗಿದೆ; **ಅನ್ತಃ**—ತೀರ್ಮಾನವು; **ತು**—ನಿಜವಾಗಿ; **ಅನಯೋಃ**—ಅವುಗಳ; **ತತ್ತ್ವ**— ಸತ್ಯದ; **ದರ್ಶಿಭಿಃ**—ದ್ರಷ್ಟಾರರಿಂದ.

## ಅನುವಾದ

**ಅಸ್ತಿತ್ವದಲ್ಲಿಲ್ಲದಿರುವುದು (ಐಹಿಕ ದೇಹ) ಉಳಿಯುವುದಿಲ್ಲ ಮತ್ತು ನಿರಂತರವಾದದ್ದು (ಆತ್ಮ) ಬದಲಾವಣೆ ಹೊಂದುವುದಿಲ್ಲ ಎಂದು ಅಧ್ಯಯನ ಮಾಡಿ ಅವರು ಈ ನಿರ್ಣಯಕ್ಕೆ ಬಂದಿದ್ದಾರೆ.**

## ಭಾವಾರ್ಥ

ಬದಲಾವಣೆ ಹೊಂದುತ್ತಿರುವ ದೇಹಕ್ಕೆ ಉಳಿವು ಎನ್ನುವುದಿಲ್ಲ. ಜೀವಕಣಗಳ ಕ್ರಿಯೆ ಮತ್ತು ಪ್ರಕ್ರಿಯೆಗಳಿಂದ ಪ್ರತಿಕ್ಷಣವೂ ದೇಹವು ಬದಲಾವಣೆ ಹೊಂದುತ್ತಿರುತ್ತದೆ ಎನ್ನುವುದನ್ನು ಆಧುನಿಕ ವೈದ್ಯ ವಿಜ್ಞಾನವು ಒಪ್ಪುತ್ತದೆ. ಹೀಗೆ ದೇಹವು ಬೆಳವಣಿಗೆ ಮತ್ತು ವೃದ್ಧಾಪ್ಯಗಳಿಗೆ ಒಳಗಾಗುತ್ತದೆ. ಆದರೆ ಆತ್ಮವು ನಿರಂತರವಾದದ್ದು; ದೇಹದಲ್ಲಿ ಮತ್ತು ಮನಸ್ಸಿನಲ್ಲಿ ಏನೇ ಬದಲಾವಣೆಗಳಾದರೂ ಆತ್ಮವು ಒಂದೇ ರೀತಿ ಉಳಿಯುತ್ತದೆ. ಭೌತದ್ರವ್ಯಕ್ಕೂ ಆತ್ಮಕ್ಕೂ ಇದೇ ವ್ಯತ್ಯಾಸ. ಸ್ವಭಾವತಃ ದೇಹವು ಸದಾ ಬದಲಾವಣೆ ಹೊಂದುತ್ತಿರುತ್ತದೆ; ಆತ್ಮವು ನಿರಂತರವಾಗಿರುತ್ತದೆ. ಸಾಕಾರವಾದಿಗಳಾಗಲಿ, ನಿರಾಕಾರವಾದಿಗಳಾಗಲಿ ಎಲ್ಲ ದಾರ್ಶನಿಕರು ಈ ನಿರ್ಣಯವನ್ನು ಸ್ಥಾಪಿಸಿದ್ದಾರೆ. ವಿಷ್ಣುಪುರಾಣದಲ್ಲಿ (2.12.38) ವಿಷ್ಣುವಿಗೂ ಅವನ ವಾಸಸ್ಥಾನಗಳಿಗೂ ಸ್ವಯಂ ಪ್ರಭೆಯುಳ್ಳ ಆಧ್ಯಾತ್ಮಿಕ ಅಸ್ತಿತ್ವವಿದೆ ಎಂದು ಹೇಳಿದೆ. (**ಜ್ಯೋತೀಂಷಿ ವಿಷ್ಣುರ್ ಭುವನಾನಿ ವಿಷ್ಣುಃ**) ಅಸ್ತಿತ್ವವಿದೆ, ಅಸ್ತಿತ್ವವಿಲ್ಲ ಎನ್ನುವ ಶಬ್ದಗಳು ಚೇತನ ಮತ್ತು ಜಡವಸ್ತುಗಳಿಗೆ ಮಾತ್ರ ಅನ್ವಯಿಸುತ್ತವೆ. ಸತ್ಯವನ್ನು ಕಾಣುವ ಎಲ್ಲರ ಮಾತೂ ಇದೇ.

ಅಜ್ಞಾನದ ಪ್ರಭಾವದಿಂದ ದಿಗ್ಭ್ರಮೆಯಾದ ಎಲ್ಲ ಜೀವಿಗಳಿಗೆ ಭಗವಂತನ ಮಾರ್ಗದರ್ಶನದ ಪ್ರಾರಂಭ ಇದೇ. ಅಜ್ಞಾನವನ್ನು ಹೋಗಲಾಡಿಸಬೇಕಾದರೆ ಪೂಜಿಸುವವನು ಮತ್ತು ಪೂಜನೀಯನಾದವನು ಇವರ ನಿರಂತರ ಸಂಬಂಧವನ್ನು ಮತ್ತೆ ಸ್ಥಾಪಿಸಬೇಕು. ಇದರ

ಪರಿಣಾಮವಾಗಿ ವಿಭಿನ್ನಾಂಶಗಳಷ್ಟೇ ಆದ ಜೀವಿಗಳು ಮತ್ತು ದೇವೋತ್ತಮ ಪರಮ ಪುರುಷನ ನಡುವಿನ ವ್ಯತ್ಯಾಸದ ಅರಿವು ಖಚಿತವಾಗಬೇಕು. ಮನುಷ್ಯನು ತನ್ನನ್ನು ಕೂಲಂಕಷವಾಗಿ ಅಧ್ಯಯನ ಮಾಡಿಕೊಂಡರೆ ಪರಾತ್ಪರನ ಸ್ವರೂಪವನ್ನು ತಿಳಿದುಕೊಳ್ಳಬಹುದು. ತನ್ನ ಮತ್ತು ಪರಾತ್ಪರನ ನಡುವಿನ ವ್ಯತ್ಯಾಸವು ಭಾಗಾಂಶದ ಮತ್ತು ಪೂರ್ಣವಾದುದರ ನಡುವಿನ ವ್ಯತ್ಯಾಸ ಎಂದು ಅರ್ಥಮಾಡಿಕೊಳ್ಳಬೇಕು. ವೇದಾಂತಸೂತ್ರಗಳಲ್ಲಿ ಮತ್ತು ಶ್ರೀಮದ್ಭಾಗವತದಲ್ಲಿ ಪರಾತ್ಪರನನ್ನು ಎಲ್ಲ ಉದ್ಗಮಗಳ ಮೂಲ ಎಂದು ಒಪ್ಪಿಕೊಳ್ಳಲಾಗಿದೆ. ಇಂತಹ ಉದ್ಗಮಗಳು ಉತ್ತಮವಾದ ಮತ್ತು ಕೆಳಮಟ್ಟದ ಪ್ರಕೃತಿ ಸರಣಿಗಳಿಂದ ಅನುಭವವಾಗುತ್ತದೆ. ಏಳನೆಯ ಅಧ್ಯಾಯದಲ್ಲಿ ತೋರಿಸಿಕೊಡುವಂತೆ ಜೀವಿಗಳು ಉತ್ತಮ ಪ್ರಕೃತಿಗೆ ಸೇರಿದವು. ಚೈತನ್ಯಕ್ಕೂ, ಚೈತನ್ಯಶಾಲಿಯಾದುದಕ್ಕೂ ವ್ಯತ್ಯಾಸವಿಲ್ಲದಿದ್ದರೂ ಚೈತನ್ಯಶಾಲಿಯಾದದ್ದನ್ನು ಪರಮೋಚ್ಚವೆಂದು ಸ್ವೀಕರಿಸಲಾಗಿದೆ ಮತ್ತು ಚೈತನ್ಯ ಅಥವಾ ಪ್ರಕೃತಿಯನ್ನು ಅಧೀನವಾದದ್ದು ಎಂದು ಸ್ವೀಕರಿಸಲಾಗಿದೆ. ಆದುದರಿಂದ ಒಡೆಯ ಮತ್ತು ಸೇವಕರಲ್ಲಿ ಸೇವಕ ಯಾವಾಗಲೂ ಅಧೀನನಾಗಿರುವಂತೆ ಜೀವಿಗಳು ಯಾವಾಗಲೂ ಪರಮ ಪ್ರಭುವಿಗೆ ಅಧೀನ. ಅಜ್ಞಾನವು ಮುಸುಕಿದಾಗ ಇಂತಹ ತಿಳಿಯಾದ ವಿದ್ಯೆಯನ್ನು ಗ್ರಹಿಸಲಾಗುವುದಿಲ್ಲ. ಇಂತಹ ಅಜ್ಞಾನವನ್ನು ಹೊಡೆದೋಡಿಸುವುದಕ್ಕಾಗಿ, ಎಲ್ಲ ಕಾಲದ ಎಲ್ಲ ಜೀವಿಗಳ ಜ್ಞಾನೋದಯಕ್ಕಾಗಿ ಭಗವಂತನು ಭಗವದ್ಗೀತೆಯನ್ನು ಉಪದೇಶಿಸುತ್ತಾನೆ.

## ಶ್ಲೋಕ - 17

**ಅವಿನಾಶಿ ತು ತದ್ ವಿದ್ಧಿ ಯೇನ ಸರ್ವಮಿದಂ ತತಮ್ |**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ||೧೭||**

**ಅವಿನಾಶಿ**—ನಾಶವಾಗದ್ದು ಎಂದು; **ತು**—ಆದರೆ; **ತತ್**—ಅದನ್ನು; **ವಿದ್ಧಿ**—ತಿಳಿದುಕೋ; **ಯೇನ**—ಯಾರಿಂದ; **ಸರ್ವಮ್**—ದೇಹದ ಎಲ್ಲವನ್ನು; **ಇದಮ್**—ಈ; **ತತಮ್**— ವ್ಯಾಪಿಸಲ್ಪಟ್ಟಿದೆ; **ವಿನಾಶಮ್**—ವಿನಾಶವನ್ನು; **ಅವ್ಯಯಸ್ಯ**—ಅವಿನಾಶಿಯಾದ; **ಅಸ್ಯ**—ಅವನ; **ನ ಕಶ್ಚಿತ್**—ಯಾರೂ ಇಲ್ಲ; **ಕರ್ತುಮ್**—ಮಾಡಲು; **ಅರ್ಹತಿ**—ಅರ್ಹನಾಗುತ್ತಾನೆ.

## ಅನುವಾದ

**ದೇಹವನ್ನು ಯಾವುದು ವ್ಯಾಪಿಸಿದೆಯೋ ಅದು ಅವಿನಾಶಿ ಎಂದು ನೀನು ತಿಳಿಯಬೇಕು. ನಾಶವಿಲ್ಲದ ಆತ್ಮವನ್ನು ಯಾರೂ ನಾಶಮಾಡಲಾರರು.**

## ಭಾವಾರ್ಥ

ಈ ಶ್ಲೋಕವು ದೇಹವನ್ನೆಲ್ಲ ಆವರಿಸಿರುವ ಆತ್ಮದ ನಿಜವಾದ ಸ್ವರೂಪವನ್ನು ಇನ್ನೂ ಸ್ಪಷ್ಟವಾಗಿ ವಿವರಿಸುತ್ತದೆ. ದೇಹವನ್ನೆಲ್ಲ ವ್ಯಾಪಿಸಿರುವುದು ಯಾವುದು ಎಂದು ಎಲ್ಲರಿಗೂ ಗೊತ್ತು. ಇದು ಪ್ರಜ್ಞೆ. ಭಾಗಶಃ ಅಥವಾ ಪೂರ್ಣವಾಗಿ ದೇಹವು ಅನುಭವಿಸುವ ನೋವು ಮತ್ತು ಸುಖಗಳ ಪ್ರಜ್ಞೆ ಪ್ರತಿಯೊಬ್ಬರಿಗೂ ಇರುತ್ತದೆ. ಪ್ರಜ್ಞೆಯು ಆವರಿಸಿರುವುದು ಆಯಾ ಮನುಷ್ಯನ ದೇಹದಲ್ಲಿ ಮಾತ್ರ. ಒಂದು ದೇಹದ ನೋವುಗಳು ಸುಖಗಳು ಇನ್ನೊಂದು ದೇಹಕ್ಕೆ ತಿಳಿಯುವುದಿಲ್ಲ. ಆದುದರಿಂದ ಪ್ರತಿದೇಹದಲ್ಲಿಯೂ ಒಂದು ಪ್ರತ್ಯೇಕ ಆತ್ಮವಿರುತ್ತದೆ; ಆತ್ಮದ

ಅಸ್ತಿತ್ವದ ಲಕ್ಷಣವು ವೈಯಕ್ತಿಕ ಪ್ರಜ್ಞೆಯಾಗಿ ಕಾಣಿಸಿಕೊಳ್ಳುತ್ತದೆ. ಆತ್ಮವು ಒಂದು ಕೂದಲಿನ ಮೊನೆಯ ಮೇಲ್ಭಾಗದ ಹತ್ತು ಸಾವಿರ ಭಾಗದಲ್ಲಿ ಒಂದು ಭಾಗದಷ್ಟು ಇರುತ್ತದೆ ಎಂದು ಹೇಳಲಾಗಿದೆ. ಶ್ವೇತಾಶ್ವತರ ಉಪನಿಷತ್ತು (5.9) ಇದನ್ನು ದೃಢಪಡಿಸುತ್ತದೆ.

**ಬಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।**
**ಭಾಗೋ ಜೀವಃ ಸ ವಿಜ್ಞೇಯಃ ಸ ಚಾನನ್ತ್ಯಾಯ ಕಲ್ಪತೇ ॥**

"ಒಂದು ಕೂದಲಿನ ಮೊನೆಯನ್ನು ನೂರು ಭಾಗಗಳನ್ನಾಗಿ ಮಾಡಿ, ಪ್ರತಿಯೊಂದು ಭಾಗವನ್ನು ಮತ್ತೆ ಒಂದು ನೂರು ಭಾಗಗಳನ್ನಾಗಿ ಮಾಡಿದರೆ ಪ್ರತಿಭಾಗವೂ ಆತ್ಮದ ಗಾತ್ರವನ್ನು ತೋರಿಸುತ್ತದೆ." ಇದೇ ವಿಷಯವನ್ನು ಹೀಗೆ ಹೇಳಿದೆ —

**ಕೇಶಾಗ್ರಶತಭಾಗಸ್ಯ ಶತಾಂಶಃ ಸಾದೃಶಾತ್ಮಕಃ ।**
**ಜೀವಃ ಸೂಕ್ಷ್ಮಸ್ವರೂಪೋಽಯಮ್ ಸನ್ಖ್ಯಾತೀತೋ ಹಿ ಚಿತ್‌ಕಣಃ ॥**

"ಆತ್ಮದ ಅಣುಗಳಿಗೆ ಲೆಕ್ಕವೇ ಇಲ್ಲ. ಇವುಗಳ ಗಾತ್ರ ಒಂದು ಕೂದಲಿನ ಮೊನೆಯ ಹತ್ತುಸಾವಿರ ಭಾಗಗಳಲ್ಲಿ ಒಂದು ಭಾಗ."

ಆದುದರಿಂದ ಆತ್ಮದ ಪ್ರತಿ ಬಿಡಿ ಅಣುವೂ ಒಂದು ಆಧ್ಯಾತ್ಮಿಕ ಅಣು. ಇದು ಭೌತದ್ರವ್ಯದ ಅಣುಗಳಿಗಿಂತ ಸಣ್ಣದು. ಇಂತಹ ಅಣುಗಳನ್ನು ಲೆಕ್ಕಮಾಡಲೂ ಸಾಧ್ಯವಿಲ್ಲ. ಈ ಬಹು ಸೂಕ್ಷ್ಮವಾದ ಆಧ್ಯಾತ್ಮಿಕ ಕಿಡಿಯೇ ಐಹಿಕ ದೇಹದ ಮೂಲತತ್ತ್ವ; ಒಂದು ಔಷಧದ ಚೈತನ್ಯಶಾಲಿ ತತ್ತ್ವವು ದೇಹದಲ್ಲೆಲ್ಲ ಹಬ್ಬುವಂತೆ ಈ ಆಧ್ಯಾತ್ಮಿಕ ಕಿಡಿಯ ಪ್ರಭಾವವು ದೇಹವನ್ನೆಲ್ಲ ಆವರಿಸುತ್ತದೆ. ಆತ್ಮದ ಈ ಪ್ರವಾಹವು ದೇಹದಲ್ಲೆಲ್ಲ ಪ್ರಜ್ಞೆಯೆಂದು ಅನುಭವವಾಗುತ್ತದೆ. ಆತ್ಮದ ಇರವಿಗೆ ಇದೇ ಪ್ರಮಾಣ. ಪ್ರಜ್ಞೆಯಿಲ್ಲದ ಭೌತಿಕ ದೇಹವು ಬರಿಯ ಶವ ಮಾತ್ರ ಮತ್ತು ಯಾವ ಬಗೆಯ ಭೌತಿಕ ಉಪಚಾರದಿಂದಲೂ ದೇಹದಲ್ಲಿ ಈ ಪ್ರಜ್ಞೆಯನ್ನು ಪುನಶ್ಚೇತನಗೊಳಿಸುವುದು ಸಾಧ್ಯವಿಲ್ಲ ಎಂಬುದನ್ನು ಸಾಮಾನ್ಯ ಮನುಷ್ಯನೂ ಅರ್ಥಮಾಡಿಕೊಳ್ಳಬಲ್ಲ. ಆದುದರಿಂದ ಪ್ರಜ್ಞೆಗೆ ಎಷ್ಟೇ ಪ್ರಮಾಣದ ಯಾವುದೇ ಐಹಿಕ ಸಂಯೋಜನೆಯೂ ಕಾರಣವಲ್ಲ; ಆತ್ಮವೇ ಕಾರಣ. ಮುಂಡಕ ಉಪನಿಷತ್ತಿನಲ್ಲಿ (3.1.9) ಅಣು ಸ್ವರೂಪದ ಆತ್ಮದ ಗಾತ್ರವನ್ನು ಹೀಗೆ ಇನ್ನಷ್ಟು ವಿವರಿಸಿದೆ —

**ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ**
**ಯಸ್ಮಿನ್ ಪ್ರಾಣಃ ಪಞ್ಚಧಾ ಸಂವಿವೇಶ ।**
**ಪ್ರಾಣೈಶ್ಚಿತ್ತಮ್ ಸರ್ವಮ್ ಓತಮ್ ಪ್ರಜಾನಾಮ್**
**ಯಸ್ಮಿನ್ ವಿಶುದ್ಧೇ ವಿಭವತಿ ಏಷ ಆತ್ಮಾ ॥**

"ಆತ್ಮವು ಅಣುಸ್ವರೂಪವಾದದ್ದು. ಪರಿಪೂರ್ಣವಾದ ಬುದ್ಧಿಯು ಇದನ್ನು ಕಾಣಬಲ್ಲುದು. ಈ ಅಣುಸ್ವರೂಪಿ ಆತ್ಮವು ಐದು ಬಗೆಯ ವಾಯುಗಳಲ್ಲಿ (ಪ್ರಾಣ, ಅಪಾನ, ವ್ಯಾನ, ಸಮಾನ ಮತ್ತು ಉದಾನ) ತೇಲಾಡುತ್ತಿರುತ್ತದೆ, ಹೃದಯದಲ್ಲಿ ಮನೆಮಾಡಿರುತ್ತದೆ ಮತ್ತು ದೇಹಸ್ಥ ಜೀವಿಗಳಲ್ಲಿ ಇದರ ಪ್ರಭಾವವು ದೇಹದಲ್ಲೆಲ್ಲ ವ್ಯಾಪಿಸಿರುತ್ತದೆ. ಆತ್ಮವು ಐದು ಬಗೆಯ ಭೌತಿಕ ವಾಯುವಿನ ಕಶ್ಮಲದಿಂದ ಶುದ್ಧಿಯಾದಾಗ ಅದರ ಆಧ್ಯಾತ್ಮಿಕ ಪ್ರಭಾವವು

ಪ್ರಕಟವಾಗುತ್ತದೆ."

ಹಠಯೋಗ ಪದ್ಧತಿಯ ಉದ್ದೇಶವು ಶುದ್ಧ ಆತ್ಮವನ್ನು ಸುತ್ತುವರಿದಿರುವ ಐದು ಬಗೆಯ ವಾಯುಗಳನ್ನು ವಿವಿಧ ಆಸನಗಳ ಮೂಲಕ ನಿಯಂತ್ರಿಸುವುದು. ಇದು ಯಾವುದೇ ಐಹಿಕ ಲಾಭಕ್ಕಾಗಿ ಅಲ್ಲ. ಆದರೆ ಸೂಕ್ಷ್ಮವಾದ ಆತ್ಮವನ್ನು ಭೌತಿಕ ವಾತಾವರಣದ ಗೋಜಿನಿಂದ ಮುಕ್ತಗೊಳಿಸುವುದಕ್ಕಾಗಿ.

ಆದ್ದರಿಂದ ಅಣುಸ್ವರೂಪದ ಆತ್ಮದ ರಚನೆಯನ್ನು ಎಲ್ಲ ವೈದಿಕ ಸಾಹಿತ್ಯವೂ ಒಪ್ಪಿಕೊಳ್ಳುತ್ತದೆ. ಸ್ವಸ್ಥಬುದ್ಧಿಯ ಯಾವುದೇ ಮನುಷ್ಯನ ಕಾರ್ಯನಿರ್ವಹಣೆಯ ಅನುಭವದಲ್ಲಿಯೂ ಇದು ಗೊತ್ತಾಗುತ್ತದೆ. ಮತಿಗೆಟ್ಟವನು ಮಾತ್ರ ಈ ಅಣುಸ್ವರೂಪಿ ಆತ್ಮವನ್ನು ಸರ್ವವ್ಯಾಪಿಯಾದ ವಿಷ್ಣುತತ್ತ್ವ ಎಂದು ಯೋಚಿಸಬಹುದು.

ಅಣುಸ್ವರೂಪದ ಆತ್ಮದ ಪ್ರಭಾವವು ಯಾವುದೊಂದು ದೇಹವನ್ನೆಲ್ಲ ವ್ಯಾಪಿಸಬಲ್ಲುದು. ಮುಂಡಕ ಉಪನಿಷತ್ತಿನ ಪ್ರಕಾರ ಅಣುಸ್ವರೂಪಿ ಆತ್ಮವು ಪ್ರತಿಜೀವಿಯ ಹೃದಯದಲ್ಲಿ ನೆಲೆಸಿದೆ. ಅಣುಸ್ವರೂಪಿ ಆತ್ಮದ ಗಾತ್ರವು ಐಹಿಕ ವಿಜ್ಞಾನಿಗಳ ಗ್ರಹಣ ಶಕ್ತಿಯನ್ನು ಮೀರಿರುವುದರಿಂದ ಅವರಲ್ಲಿ ಕೆಲವರು ಆತ್ಮವೇ ಇಲ್ಲ ಎಂದು ಬುದ್ಧಿಯಿಲ್ಲದೆ ಹೇಳುತ್ತಾರೆ. ಪ್ರತ್ಯೇಕವಾದ ಅಣುಸ್ವರೂಪಿಯಾದ ಆತ್ಮವು ಖಂಡಿತವಾಗಿಯೂ ಪರಮಾತ್ಮನೊಂದಿಗೆ ಹೃದಯದಲ್ಲಿದೆ; ದೇಹದ ಚಲನೆಯ ಎಲ್ಲ ಚೈತನ್ಯವೂ ದೇಹದ ಈ ಭಾಗದಿಂದ ಹರಿದು ಬರುತ್ತದೆ. ಶ್ವಾಸಕೋಶದಿಂದ ಆಮ್ಲಜನಕವನ್ನು ಒಯ್ಯುವ ರಕ್ತಕಣಗಳು ಆತ್ಮದಿಂದ ಚೈತನ್ಯವನ್ನು ಪಡೆಯುತ್ತವೆ. ಈ ಸ್ಥಾನದಿಂದ ಆತ್ಮವು ಹೊರಟು ಹೋದಾಗ ರಕ್ತವನ್ನು ಉತ್ಪತ್ತಿಮಾಡುವ ಸಂಯೋಜನೆಯ ಕ್ರಿಯೆಯು ನಿಂತುಹೋಗುತ್ತದೆ. ವೈದ್ಯವಿಜ್ಞಾನವು ಕೆಂಪು ರಕ್ತಕಣಗಳ ಮಹತ್ವವನ್ನು ಒಪ್ಪುತ್ತದೆ. ಆದರೆ ಆತ್ಮವೇ ಚೈತನ್ಯದ ಮೂಲ ಎಂದು ಕಂಡುಕೊಳ್ಳಲಾರದು. ಹೀಗಿದ್ದರೂ ವೈದ್ಯವಿಜ್ಞಾನವು ಹೃದಯವೇ ದೇಹದ ಎಲ್ಲ ಚೈತನ್ಯಗಳ ಪೀಠ ಎನ್ನುವುದನ್ನು ಒಪ್ಪಿಕೊಳ್ಳುತ್ತದೆ.

ಇಂತಹ ಆತ್ಮದ ಅಣು ಅಂಶಗಳನ್ನು ಸೂರ್ಯಪ್ರಕಾಶದ ಸಣ್ಣಕಣಗಳಿಗೆ ಹೋಲಿಸಲಾಗಿದೆ. ಸೂರ್ಯಪ್ರಕಾಶದಲ್ಲಿ ಅಸಂಖ್ಯಾತ ಪ್ರಕಾಶಮಯ ಸಣ್ಣಕಣಗಳಿವೆ. ಇದೇ ರೀತಿಯಲ್ಲಿ ಪರಮ ಪ್ರಭುವಿನ ಭಿನ್ನಾಂಶಗಳು ಪರಮ ಪ್ರಭುವಿನ ಕಿರಣಗಳ ಅಣುಸ್ವರೂಪದ ಕಿಡಿಗಳು; ಇವಕ್ಕೆ ಪ್ರಭಾ ಎಂದು ಹೆಸರು. ಆದ್ದರಿಂದ ನಾವು ವೈದಿಕ ಜ್ಞಾನವನ್ನು ಅನುಸರಿಸಲಿ, ಆಧುನಿಕ ವಿಜ್ಞಾನವನ್ನು ಅನುಸರಿಸಲಿ, ದೇಹದಲ್ಲಿ ಆತ್ಮದ ಅಸ್ತಿತ್ವವನ್ನು ನಿರಾಕರಿಸಲು ಸಾಧ್ಯವಿಲ್ಲ. ಭಗವದ್ಗೀತೆಯಲ್ಲಿ ದೇವೋತ್ತಮ ಪುರುಷನೇ ಆತ್ಮವಿಜ್ಞಾನವನ್ನು ಸ್ಪಷ್ಟವಾಗಿ ವಿವರಿಸಿದ್ದಾನೆ.

## ಶ್ಲೋಕ - 18

**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ||**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ ||೧೮||**

**ಅನ್ತವನ್ತ**—ನಾಶವಾಗುವಂತಹವು; **ಇಮೇ**—ಈ ಎಲ್ಲವೂ; **ದೇಹಾಃ**—ಭೌತಿಕ ಶರೀರಗಳು; **ನಿತ್ಯಸ್ಯ**—ಅಸ್ತಿತ್ವದಲ್ಲಿ ಶಾಶ್ವತವಾದ; **ಉಕ್ತಾಃ**—ಹೇಳಲಾಗಿದೆ; **ಶರೀರಿಣಃ**—ದೇಹಧಾರಿ ಆತ್ಮನ;

**ಅನಾಶಿನಃ**—ಎಂದಿಗೂ ನಾಶವಾಗದ; **ಅಪ್ರಮೇಯಸ್ಯ**—ಅಳೆಯಲಾಗದ; **ತಸ್ಮಾತ್**—ಆದ್ದರಿಂದ; **ಯುಧ್ಯಸ್ವ**—ಯುದ್ಧಮಾಡು; **ಭಾರತ**—ಭರತವಂಶದವನೇ.

## ಅನುವಾದ

**ಅವಿನಾಶಿಯೂ ಅಳತೆಗೆ ಸಿಕ್ಕದಿರುವುದೂ ನಿತ್ಯವೂ ಆದ ಆತ್ಮನ ಐಹಿಕ ದೇಹವು ನಾಶವಾಗಲೇಬೇಕು. ಆದುದರಿಂದ ಭರತವಂಶಜನೇ (ಅರ್ಜುನನೇ), ಯುದ್ಧಮಾಡು.**

## ಭಾವಾರ್ಥ

ಐಹಿಕ ದೇಹದ ನಾಶವು ಸ್ವಭಾವಸಿದ್ಧವಾದದ್ದು. ಅದು ಕೂಡಲೇ ನಾಶವಾಗಬಹುದು; ಒಂದು ನೂರು ವರ್ಷಗಳ ಅನಂತರ ನಶಿಸಬಹುದು. ಯಾವಾಗ ನಾಶವಾಗುತ್ತದೆ ಎನ್ನುವುದಷ್ಟೇ ಪ್ರಶ್ನೆ. ಅದನ್ನು ಅನಿಶ್ಚಿತ ಕಾಲದವರೆಗೆ ಉಳಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದರೆ ಆತ್ಮನು ಎಷ್ಟು ಸೂಕ್ಷ್ಮ ಎಂದರೆ ಶತ್ರುವು ಅದನ್ನು ಕೊಲ್ಲುವುದಿರಲಿ, ಅವನಿಗೆ ಅದು ಕಾಣುವುದೂ ಇಲ್ಲ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಅದು ಎಷ್ಟು ಸೂಕ್ಷ್ಮ ಎಂದರೆ ಅದರ ಗಾತ್ರವನ್ನು ಅಳೆಯುವುದು ಹೇಗೆ ಎಂದೇ ಯಾರಿಗೂ ಹೊಳೆಯುವುದಿಲ್ಲ. ಜೀವಿಯು ಇರುವ ಸ್ವರೂಪದ ಕಾರಣದಿಂದ ಅದನ್ನು ಕೊಲ್ಲುವುದು ಸಾಧ್ಯವೇ ಇಲ್ಲ. ಐಹಿಕ ದೇಹವನ್ನು ಬಹುಕಾಲ ಉಳಿಸುವಂತಿಲ್ಲ; ಶಾಶ್ವತವಾಗಿ ರಕ್ಷಿಸುವುದೂ ಸಾಧ್ಯವಿಲ್ಲ. ಆದುದರಿಂದ ಎರಡು ದೃಷ್ಟಿಗಳಿಂದಲೂ ಶೋಕಕ್ಕೆ ಕಾರಣವೇ ಇಲ್ಲ. ಸಂಪೂರ್ಣ ಆತ್ಮದ ಸೂಕ್ಷ್ಮಾಂಶವು ಅದರ ಕರ್ಮಕ್ಕೆ ಅನುಗುಣವಾಗಿ ಈ ಐಹಿಕ ಶರೀರವನ್ನು ಪಡೆಯುತ್ತದೆ. ಆದುದರಿಂದ ಧಾರ್ಮಿಕ ಸೂತ್ರಗಳ ಅನುಷ್ಠಾನದ ಪ್ರಯೋಜನವನ್ನು ಪಡೆದುಕೊಳ್ಳಬೇಕು. ವೇದಾಂತ ಸೂತ್ರಗಳಲ್ಲಿ ಜೀವಿಗೆ ಬೆಳಕನ್ನು ಗುಣವನ್ನಾಗಿ ಆರೋಪಿಸಿದೆ; ಏಕೆಂದರೆ ಅದು ಪರಮ ಜ್ಯೋತಿಯ ವಿಭಿನ್ನಾಂಶ. ಸೂರ್ಯಪ್ರಕಾಶವು ಇಡೀ ವಿಶ್ವವನ್ನು ಪಾಲಿಸುವಂತೆ ಆತ್ಮದ ಪ್ರಕಾಶವು ಈ ಐಹಿಕ ಶರೀರವನ್ನು ಪಾಲಿಸುತ್ತದೆ. ಆತ್ಮವು ಐಹಿಕ ದೇಹವನ್ನು ತ್ಯಜಿಸುತ್ತಲೇ ದೇಹವು ಕೊಳೆಯಲು ಅರಂಭಿಸುತ್ತದೆ; ಆದುದರಿಂದ ಈ ದೇಹವನ್ನು ಪಾಲಿಸುವುದು ಆತ್ಮವೇ. ದೇಹವಷ್ಟೇ ಅಮುಖ್ಯವಾದದ್ದು. ಧಾರ್ಮಿಕ ಗುರಿಯನ್ನು ಐಹಿಕ ಮತ್ತು ಶಾರೀರಕ ಕಾರಣಗಳಿಗಾಗಿ ಬಲಿಕೊಡದೆ ಯುದ್ಧಮಾಡಬೇಕೆನ್ನುವುದು ಅರ್ಜುನನಿಗೆ ದೊರೆತ ಉಪದೇಶ.

## ಶ್ಲೋಕ - 19

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥೧೯॥**

**ಯಃ**—ಯಾರು; **ಏನಮ್**—ಇದನ್ನು; **ವೇತ್ತಿ**—ತಿಳಿಯುತ್ತಾನೋ; **ಹನ್ತಾರಮ್**—ಕೊಲ್ಲುವವನೆಂದು; **ಯಃ**—ಯಾರು; **ಚ**—ಕೂಡ; **ಏನಮ್**—ಇದನ್ನು; **ಮನ್ಯತೇ**—ಭಾವಿಸುತ್ತಾ; **ಹತಮ್**—ಕೊಲ್ಲಲ್ಪಡುವುದೆಂದು; **ಉಭೌ**—ಇಬ್ಬರೂ; **ತೌ**—ಅವರು; **ನ ವಿಜಾನೀತಃ**—ತಿಳಿಯರು; **ನ**—ಎಂದಿಗೂ ಇಲ್ಲ; **ಅಯಮ್**—ಅದು; **ಹನ್ತಿ**—ಕೊಲ್ಲುತ್ತದೆ; **ನ ಹನ್ಯತೇ**—ಕೊಲ್ಲಲ್ಪಡುವುದಿಲ್ಲ.

## ಅನುವಾದ

**ಜೀವಿಯು ಕೊಲ್ಲುತ್ತಾನೆ ಎಂದು ಭಾವಿಸುವವನಿಗೂ ಅದು ಕೊಲ್ಲಲ್ಪಟ್ಟಿತು ಎಂದು ಭಾವಿಸುವವನಿಗೂ ತಿಳಿವಳಿಕೆ ಇಲ್ಲ; ಏಕೆಂದರೆ ಆತ್ಮನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ.**

## ಭಾವಾರ್ಥ

ದೇಹಸ್ಥ ಜೀವಿಗೆ ಮಾರಕ ಆಯುಧಗಳಿಂದ ಗಾಯವಾದಾಗ ದೇಹದೊಳಗಿನ ಜೀವಿಯು ಸಾಯುವುದಿಲ್ಲ ಎನ್ನುವುದನ್ನು ತಿಳಿದುಕೊಳ್ಳಬೇಕು. ಮುಂದೆ ಹೇಳುವ ಶ್ಲೋಕಗಳಿಂದ ಸ್ಪಷ್ಟವಾಗುವಂತೆ ಆತ್ಮವು ಎಷ್ಟು ಸೂಕ್ಷ್ಮವೆಂದರೆ ಯಾವ ಐಹಿಕ ಆಯುಧವೂ ಅದನ್ನು ಕೊಲ್ಲಲಾರದು. ಜೀವಿಯನ್ನು ಕೊಲ್ಲುವುದು ಸಾಧ್ಯವೇ ಇಲ್ಲ; ಅದರ ಆಧ್ಯಾತ್ಮಿಕ ಸ್ವರೂಪವೇ ಇದಕ್ಕೆ ಕಾರಣ. ಸಾಯುವುದು, ಅಥವಾ ಸತ್ತಿತೆಂದು ಜನ ಭಾವಿಸುವುದು ದೇಹ ಮಾತ್ರ. ಹೀಗೆಂದ ಮಾತ್ರಕ್ಕೆ ದೇಹವನ್ನು ಕೊಲ್ಲುವುದಕ್ಕೆ ಬೆಂಬಲವುಂಟು ಎಂದು ಅರ್ಥವಲ್ಲ. ವೇದದ ಆದೇಶವೆಂದರೆ, **ಮಾ ಹಿಂಸ್ಯಾತ್ ಸರ್ವಾ ಭೂತಾನಿ** — ಯಾರಿಗೂ ಹಿಂಸೆ ಮಾಡಬೇಡ. ಜೀವಿಯು ಸಾಯುವುದಿಲ್ಲ ಎನ್ನುವ ಅರಿವು ಪ್ರಾಣಿವಧೆಗೆ ಪ್ರೋತ್ಸಾಹ ನೀಡುವುದಿಲ್ಲ. ಅಧಿಕಾರವಿಲ್ಲದೆ ಯಾರನ್ನೇ ಕೊಲ್ಲುವುದು ಹೇಸಿಗೆಯ ಕೃತ್ಯ; ಇದಕ್ಕೆ ರಾಜ್ಯದ ಕಾನೂನಿನಿಂದಲೂ ಭಗವಂತನ ನಿಯಮದಿಂದಲೂ ಶಿಕ್ಷೆಯಾಗತಕ್ಕದ್ದು. ಆದರೆ ಅರ್ಜುನನಿಗೆ ವಧೆಯಲ್ಲಿ ತೊಡಗು ಎನ್ನುತ್ತಿರುವುದು ಧಾರ್ಮಿಕ ಕರ್ತವ್ಯವೆಂಬ ಮಾತ್ರದಿಂದಲೇ ಹೊರತು ಮನಃಸ್ವೇಚ್ಛೆಯಿಂದಲ್ಲ.

## ಶ್ಲೋಕ - 20

**ನ ಜಾಯತೇ ಮ್ರಿಯತೇ ವಾ ಕದಾಚಿನ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ |**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ||೨೦||**

**ನ ಜಾಯತೇ**—ಹುಟ್ಟುವುದಿಲ್ಲ; **ಮ್ರಿಯತೇ**—ಸಾಯುವುದಿಲ್ಲ; **ವಾ**—ಅಥವಾ; **ಕದಾಚಿತ್**—ಯಾವ ಕಾಲದಲ್ಲಿಯೂ (ಭೂತ, ವರ್ತಮಾನ ಅಥವಾ ಭವಿಷ್ಯತ್); **ನ**—ಎಂದಿಗೂ ಇಲ್ಲ; **ಅಯಮ್**—ಇದು; **ಭೂತ್ವಾ**—ಅಸ್ತಿತ್ವಕ್ಕೆ ಬಂದು; **ಭವಿತಾ**—ಅಸ್ತಿತ್ವಕ್ಕೆ ಬರುವ; **ವಾ**—ಅಥವಾ; **ನ**—ಇಲ್ಲ; **ಭೂಯಃ**—ಅಥವಾ ಮತ್ತೆ ಬರುತ್ತದೆ; **ಅಜಃ**—ಜನಿಸದ; **ನಿತ್ಯಃ**—ನಿತ್ಯವಾದ; **ಶಾಶ್ವತಃ**—ಶಾಶ್ವತವಾದ; **ಅಯಮ್**—ಇದು; **ಪುರಾಣಃ**—ಅತ್ಯಂತ ಪುರಾತನವಾದುದು; **ನ ಹನ್ಯತೇ**—ಕೊಲ್ಲಲ್ಪಡುದಿಲ್ಲ; **ಹನ್ಯಮಾನೇ**—ಕೊಲ್ಲಲ್ಪಡುವ; **ಶರೀರೇ**—ದೇಹದಲ್ಲಿ.

## ಅನುವಾದ

**ಆತ್ಮಕ್ಕೆ ಯಾವಾಗಲೂ ಹುಟ್ಟು ಎನ್ನುವುದಿಲ್ಲ; ಸಾವು ಎನ್ನುವುದಿಲ್ಲ. ಅದು ಹಿಂದೆ ಹುಟ್ಟಿದ್ದಿಲ್ಲ; ಈಗ ಹುಟ್ಟಿ ಬರುವುದಿಲ್ಲ; ಮುಂದೆ ಹುಟ್ಟುವುದೂ ಇಲ್ಲ. ಅದು ಜನ್ಮರಹಿತವಾದದ್ದು,**

**ನಿತ್ಯವಾದದ್ದು, ಶಾಶ್ವತವಾದದ್ದು, ಪುರಾತನವಾದದ್ದು. ದೇಹವನ್ನು ಕೊಂದಾಗ ಅದು ಸಾಯುವುದಿಲ್ಲ.**

## ಭಾವಾರ್ಥ

ಗುಣಾತ್ಮಕವಾಗಿ ಪರಮಾತ್ಮನ ಸೂಕ್ಷ್ಮವಾದ ಅಣುಸ್ವರೂಪದ ಭಾಗಾಂಶವು ಪರಮ ಪ್ರಭುವಿನೊಡನೆ ಒಂದಾಗಿದೆ. ದೇಹವು ಬದಲಾವಣೆ ಹೊಂದುವಂತೆ ಅದು ಬದಲಾವಣೆ ಹೊಂದುವುದಿಲ್ಲ. ಒಮ್ಮೊಮ್ಮೆ ಆತ್ಮವನ್ನು ಕೂಟಸ್ಥ ಎಂದರೆ ಸ್ಥಿರವಾಗಿರುವುದು ಎಂದು ಕರೆಯುವುದುಂಟು. ದೇಹಕ್ಕೆ ಆರು ಬಗೆಯ ಪರಿವರ್ತನೆಗಳುಂಟು; ಅದು ತಾಯಿಯ ಗರ್ಭದಲ್ಲಿ ಹುಟ್ಟುತ್ತದೆ, ಸ್ವಲ್ಪಕಾಲ ಇರುತ್ತದೆ, ಬೆಳೆಯುತ್ತದೆ, ಕೆಲವು ಪರಿಣಾಮಗಳನ್ನು ಮಾಡುತ್ತದೆ, ಕ್ರಮೇಣ ಕ್ಷೀಣಿಸುತ್ತದೆ, ಕಟ್ಟಕಡೆಗೆ ಮಾಯವಾಗಿ ಜನ ಅದನ್ನು ಮರೆತುಬಿಡುತ್ತಾರೆ. ಆದರೆ ಆತ್ಮವು ಇಂತಹ ಪರಿವರ್ತನೆಗಳಿಗೆ ಒಳಪಡುವುದಿಲ್ಲ. ಆತ್ಮವು ಹುಟ್ಟುವುದಿಲ್ಲ. ಆದರೆ ಅದು ಒಂದು ಐಹಿಕ ದೇಹವನ್ನು ಧರಿಸುವುದರಿಂದ ದೇಹವು ಜನ್ಮ ತಾಳುತ್ತದೆ. ಆತ್ಮವು ಅಲ್ಲಿ ಹುಟ್ಟುವುದಿಲ್ಲ; ಸಾಯುವುದೂ ಇಲ್ಲ. ಹುಟ್ಟಿದುದೆಲ್ಲ ಸಾಯಲೇಬೇಕು. ಆತ್ಮಕ್ಕೆ ಹುಟ್ಟು ಎನ್ನುವುದಿಲ್ಲ; ಆದುದರಿಂದ ಅದಕ್ಕೆ ಭೂತ, ವರ್ತಮಾನ ಮತ್ತು ಭವಿಷ್ಯ ಎಂಬುದಿಲ್ಲ. ಆತ್ಮವು ನಿತ್ಯವಾದದ್ದು, ಶಾಶ್ವತವಾದದ್ದು ಮತ್ತು ಪುರಾತನವಾದದ್ದು — ಎಂದರೆ ಅದು ಜನ್ಮತಾಳಿದುದರ ಕುರುಹು ಚರಿತ್ರೆಯಲ್ಲಿಲ್ಲ. ದೇಹವನ್ನು ಕುರಿತ ನಮ್ಮ ಭಾವನೆಯಿಂದ ನಾವು ಆತ್ಮದ ಹುಟ್ಟಿನ ಚರಿತ್ರೆ ಮೊದಲಾದುವನ್ನು ಹುಡುಕುತ್ತೇವೆ. ದೇಹಕ್ಕೆ ಮುಪ್ಪು ಬರುವಂತೆ ಆತ್ಮಕ್ಕೆ ಯಾವಾಗಲೂ ಮುಪ್ಪು ಬರುವುದಿಲ್ಲ. ಆದುದರಿಂದ ಜನರು ಮುದುಕ ಎಂದು ಕರೆಯುವ ಮನುಷ್ಯನು ತನಗೆ ಬಾಲ್ಯದಲ್ಲಿ ಅಥವಾ ಯೌವನದಲ್ಲಿ ಇದ್ದ ಚೇತನವೇ ಈಗಲೂ ಇದೆ ಎಂದುಕೊಳ್ಳುತ್ತಾನೆ. ದೇಹದಲ್ಲಿ ಆಗುವ ಬದಲಾವಣೆಗಳಿಂದ ಆತ್ಮದ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಒಂದು ಮರದಂತೆ ಅಥವಾ ಯಾವುದೇ ಐಹಿಕ ವಸ್ತುವಿನಂತೆ ಆತ್ಮವು ಕ್ಷೀಣಿಸುವುದಿಲ್ಲ. ಆತ್ಮಕ್ಕೆ ಉಪ ಉತ್ಪತ್ತಿಗಳು ಇಲ್ಲ. ದೇಹದ ಉಪ ಉತ್ಪತ್ತಿಗಳಾದ ಮಕ್ಕಳು ಪ್ರತ್ಯೇಕವಾದ, ಭಿನ್ನವಾದ ಆತ್ಮಗಳೇ. ಶರೀರದ ಕಾರಣದಿಂದಾಗಿ ಅವರು ಒಬ್ಬ ನಿರ್ದಿಷ್ಟ ಮನುಷ್ಯನ ಮಕ್ಕಳಾಗಿ ಕಾಣುತ್ತಾರೆ. ಆತ್ಮದ ಇರವಿನಿಂದ ದೇಹವು ಬೆಳೆಯುತ್ತದೆ. ಆದರೆ ಆತ್ಮಕ್ಕೆ ಶಾಖೆಗಳೂ ಇಲ್ಲ; ಬದಲಾವಣೆಯೂ ಇಲ್ಲ. ಆದುದರಿಂದ ಆತ್ಮವು ದೇಹಕ್ಕೆ ಒದಗುವ ಆರು ಬದಲಾವಣೆಗಳಿಂದ ಮುಕ್ತವಾಗಿದೆ.

ಕಠೋಪನಿಷತ್ತಿನಲ್ಲಿ (1.2.18) ಇಂತಹುದೇ ಒಂದು ಭಾಗವನ್ನು ಕಾಣುತ್ತೇವೆ. ಅದು ಹೀಗಿದೆ —

**ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್**
**ನಾಯಂ ಕುತಶ್ಚಿನ್ ನ ಬಭೂವ ಕಶ್ಚಿತ್ |**
**ಅಜೋ ನಿತ್ಯಃ ಶಾಶ್ವತೋऽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ||**

ಈ ಶ್ಲೋಕದ ಅರ್ಥ ಮತ್ತು ತಾತ್ಪರ್ಯಗಳು ಭಗವದ್ಗೀತೆಯ ಈ ಶ್ಲೋಕದ ಅರ್ಥ ಮತ್ತು ತಾತ್ಪರ್ಯಗಳೇ. ಆದರೆ ಈ ಶ್ಲೋಕದಲ್ಲಿ ಒಂದು ವಿಶೇಷ ಶಬ್ದವಿದೆ. **ವಿಪಶ್ಚಿತ್.**

ಹೀಗೆಂದರೆ ವಿದ್ವತ್ಪೂರ್ಣವಾದ ಅಥವಾ ತಿಳುವಳಿಕೆಯುಳ್ಳ ಎಂದರ್ಥ.

ಆತ್ಮವು ವಿದ್ಯೆಯಿಂದ ತುಂಬಿರುತ್ತದೆ ಅಥವಾ ಸದಾ ಪ್ರಜ್ಞೆಯಿಂದ ತುಂಬಿರುತ್ತದೆ. ಆದುದರಿಂದ ಪ್ರಜ್ಞೆಯು ಆತ್ಮದ ಲಕ್ಷಣ. ಆತ್ಮವು ಹೃದಯದಲ್ಲಿ ನೆಲೆಸಿರುತ್ತದೆ. ಅದನ್ನು ಅಲ್ಲಿ ಕಾಣಲಾಗದಿದ್ದರೂ ನಾವು ಆತ್ಮದ ಇರವನ್ನು ಪ್ರಜ್ಞೆಯ ಇರವಿನಿಂದಲೇ ಅರ್ಥಮಾಡಿಕೊಳ್ಳಬಹುದು ಕೆಲವೊಮ್ಮೆ ನಾವು ಮೋಡಗಳಿಂದ ಅಥವಾ ಬೇರಾವುದೋ ಕಾರಣದಿಂದ ಆಕಾಶದಲ್ಲಿ ಸೂರ್ಯನನ್ನು ಕಾಣಲಾಗುವುದಿಲ್ಲ. ಆದರೆ ಸೂರ್ಯನ ಪ್ರಕಾಶವು ಸದಾ ಇದ್ದೇ ಇರುತ್ತದೆ; ಆದುದರಿಂದ ಹಗಲು ಎಂದು ನಾವು ನಂಬುತ್ತೇವೆ. ಉಷಃಕಾಲದಲ್ಲಿ ಆಕಾಶದಲ್ಲಿ ಸ್ವಲ್ಪ ಬೆಳಕನ್ನು ಕಾಣುತ್ತಲೇ ಸೂರ್ಯನು ಆಕಾಶದಲ್ಲಿದ್ದಾನೆ ಎಂದು ನಮಗೆ ಅರ್ಥವಾಗುತ್ತದೆ. ಹಾಗೆಯೇ ಮನುಷ್ಯನಾಗಲಿ ಪ್ರಾಣಿಯಾಗಲಿ ಎಲ್ಲ ದೇಹಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಪ್ರಜ್ಞೆಯು ಇರುವುದರಿಂದ ನಾವು ಆತ್ಮದ ಇರವನ್ನು ಅರ್ಥಮಾಡಿಕೊಳ್ಳುತ್ತೇವೆ. ಆದರೆ ಆತ್ಮದ ಈ ಪ್ರಜ್ಞೆಯು ಪರಮೋನ್ನತದ ಪ್ರಜ್ಞೆಯಿಂದ ಭಿನ್ನವಾದದ್ದು. ಏಕೆಂದರೆ ಪರಮಪ್ರಜ್ಞೆಯು ಸರ್ವಜ್ಞವಾದುದು; ಭೂತ, ವರ್ತಮಾನ ಮತ್ತು ಭವಿಷ್ಯಗಳನ್ನು ಒಳಗೊಂಡದ್ದು. ಜೀವಿಯ ಪ್ರಜ್ಞೆಯು ಮರೆವಿಗೆ ಒಳಗಾಗುವುದುಂಟು. ಅದು ನಿಜವಾದ ಸ್ವರೂಪವನ್ನು ಮರೆತಾಗ ಕೃಷ್ಣನ ಶ್ರೇಷ್ಠ ಉಪದೇಶದಿಂದ ವಿದ್ಯೆಯನ್ನು ಜ್ಞಾನವನ್ನೂ ಪಡೆದುಕೊಳ್ಳುತ್ತದೆ. ಆದರೆ ಕೃಷ್ಣನು ಮರೆವಿಗೆ ಒಳಗಾಗುವ ಆತ್ಮನಲ್ಲ. ಹಾಗಿದ್ದಿದ್ದರೆ ಭಗವದ್ಗೀತೆಯಲ್ಲಿ ಕೃಷ್ಣನು ಮಾಡಿದ ಉಪದೇಶವು ವ್ಯರ್ಥವಾಗುತ್ತಿತ್ತು.

ಆತ್ಮಗಳಲ್ಲಿ ಎರಡು ಬಗೆ; ಅಣು ಆತ್ಮ ಅಥವಾ ಸೂಕ್ಷ್ಮ ಆತ್ಮ ಮತ್ತು ವಿಭು ಆತ್ಮ — ಇದನ್ನು ಕಠೋಪನಿಷತ್ತು (1.2.20) ಈ ರೀತಿ ದೃಢಪಡಿಸುತ್ತದೆ —

ಅಣೋರ್ ಅಣೀಯಾನ್ ಮಹತೋ ಮಹೀಯಾನ್
ಆತ್ಮಾಸ್ಯ ಜನ್ತೋರ್ ನಿಹಿತೋ ಗುಹಾಯಾಮ್ |
ತಮ್ ಅಕ್ರತುಃ ಪಶ್ಯತಿ ವೀತ ಶೋಕೋ
ಧಾತುಃ ಪ್ರಸಾದಾನ್ ಮಹಿಮಾನಮ್ ಆತ್ಮನಃ ||

"ಪರಮಾತ್ಮವೂ ಜೀವಾತ್ಮವೂ ಜೀವಿಯ ದೇಹವೆಂಬ ಒಂದೇ ವೃಕ್ಷದ ಮೇಲೆ, ಒಂದೇ ಹೃದಯದಲ್ಲಿ ನೆಲೆಸಿವೆ. ಎಲ್ಲ ಐಹಿಕ ಬಯಕೆಗಳಿಂದ ಮತ್ತು ಶೋಕಗಳಿಂದ ಮುಕ್ತನಾದವನು ಮಾತ್ರ ಪರಮಾತ್ಮನ ಕೃಪೆಯಿಂದ ಆತ್ಮದ ಮಹಿಮೆಯನ್ನು ತಿಳಿದುಕೊಳ್ಳಬಲ್ಲ." ಕೃಷ್ಣನು ಪರಮಾತ್ಮನ ಆದಿಮೂಲ; ಇದನ್ನು ಮುಂದಿನ ಅಧ್ಯಾಯಗಳು ತಿಳಿಸಿಕೊಡುತ್ತವೆ. ಅರ್ಜುನನು ತನ್ನ ನಿಜವಾದ ಸ್ವರೂಪವನ್ನು ಮರೆತಿರುವ ಜೀವಾತ್ಮ. ಆದುದರಿಂದ ಜೀವಾತ್ಮನು ಕೃಷ್ಣನಿಂದ ಅಥವಾ ಅವನ ನೈಜ ಪ್ರತಿನಿಧಿಯಿಂದ (ಗುರು) ಜ್ಞಾನೋದಯವನ್ನು ಪಡೆಯಬೇಕು.

## ಶ್ಲೋಕ - 21

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ |
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ||೨೧||

**ವೇದ**—ತಿಳಿಯುತ್ತಾನೋ; **ಅವಿನಾಶಿನವ್**—ನಾಶವಿಲ್ಲದ; **ನಿತ್ಯಮ್**—ಯಾವಾಗಲೂ ಅಸ್ತಿತ್ವದಲ್ಲಿರುವ; **ಯಃ**—ಯಾರು; **ಏನಮ್**—ಇದನ್ನು (ಆತ್ಮವನ್ನು); **ಅಜಮ್**—ಜನನರಹಿತನಾದ; **ಅವ್ಯಯಮ್**—ವಿಕಾರರಹಿತನಾದ; **ಕಥಮ್**—ಹೇಗೆ; **ಸಃ**—ಆ; **ಪುರುಷಃ**—ಪುರುಷನು; **ಪಾರ್ಥ**—ಅರ್ಜುನನೇ; **ಕಮ್**—ಯಾರನ್ನು; **ಘಾತಯತಿ**—ಕೊಲ್ಲಿಸುತ್ತಾನೆ; **ಹನ್ತಿ**—ಕೊಲ್ಲುತ್ತಾನೆ; **ಕಮ್**—ಯಾರನ್ನು.

## ಅನುವಾದ

**ಹೇ ಪಾರ್ಥ, ಆತ್ಮವು ಅವಿನಾಶಿ; ನಿತ್ಯ. ಅದಕ್ಕೆ ಹುಟ್ಟಿಲ್ಲ, ಕ್ಷಯವಿಲ್ಲ ಎಂದು ತಿಳಿದವನು ಹೇಗೆ ಯಾರನ್ನಾದರೂ ಕೊಲ್ಲುವನು ಅಥವಾ ಕೊಲ್ಲಿಸುವನು?**

## ಭಾವಾರ್ಥ

ಪ್ರತಿಯೊಂದು ವಸ್ತುವಿಗೂ ಅದರದೇ ಪ್ರಯೋಜನವಿದೆ. ಪರಿಪೂರ್ಣ ವಿದ್ಯೆಯ ನೆಲೆ ಇರುವವನಿಗೆ ಒಂದು ವಸ್ತುವನ್ನು ಸರಿಯಾದ ಪ್ರಯೋಜನವನ್ನು ಪಡೆದುಕೊಳ್ಳಲು ಹೇಗೆ ಮತ್ತು ಎಲ್ಲಿ ಅದನ್ನು ಉಪಯೋಗಿಸಬೇಕು ಎನ್ನುವುದು ತಿಳಿದಿರುತ್ತದೆ. ಇದೇ ರೀತಿ ಹಿಂಸೆಗೂ ಅದರ ಪ್ರಯೋಜನವಿದೆ. ಹಿಂಸೆಯನ್ನು ಹೇಗೆ ಬಳಸಬೇಕು ಎನ್ನುವುದು ತಿಳುವಳಿಕೆಯುಳ್ಳ ಮನುಷ್ಯನನ್ನು ಅವಲಂಬಿಸಿದೆ. ಕೊಲೆಮಾಡಿದವನೆಂದು ಶಿಕ್ಷೆಗೆ ಗುರಿಯಾಗಬೇಕಾದವನಿಗೆ ನ್ಯಾಯಾಧೀಶನು ಮರಣದಂಡನೆಯನ್ನು ವಿಧಿಸುತ್ತಾನೆ. ಆದರೆ ನ್ಯಾಯಾಧೀಶನನ್ನು ಆಕ್ಷೇಪಿಸುವಂತಿಲ್ಲ. ಏಕೆಂದರೆ ಅವನು ನ್ಯಾಯಸಂಹಿತೆಗೆ ಅನುಗುಣವಾಗಿ ಮತ್ತೊಬ್ಬನ ಮೇಲೆ ಹಿಂಸೆಯನ್ನು ಪ್ರಯೋಗಿಸುತ್ತಾನೆ. ಕೊಲೆಮಾಡಿದವನು ತಾನು ಮಾಡಿದ ಹೇಯ ಪಾಪಕ್ಕಾಗಿ ಮುಂದಿನ ಜನ್ಮದಲ್ಲಿ ಕಷ್ಟಪಡದಂತೆ ಅವನಿಗೆ ಮರಣದಂಡನೆಯನ್ನು ಕೊಡಬೇಕೆಂದು ಮನುಸಂಹಿತೆಯಲ್ಲಿ ಸಮರ್ಥಿಸಿದೆ. ಆದ್ದರಿಂದ ರಾಜನು ಕೊಲೆಗಡುಕನನ್ನು ನೇಣುಹಾಕಬೇಕೆಂದು ವಿಧಿಸಿದಾಗ ಅವನಿಗೆ ಉಪಕಾರವನ್ನೇ ಮಾಡುತ್ತಿದ್ದಾನೆ. ಹಾಗೆಯೇ ಕೃಷ್ಣನು ಯುದ್ಧಮಾಡು ಎಂದು ಆಜ್ಞಾಪಿಸಿದಾಗ ಈ ಹಿಂಸೆಯು ಪರಮ ನ್ಯಾಯಕ್ಕೋಸ್ಕರ ಎಂದು ಭಾವಿಸಬೇಕು. ಕೃಷ್ಣನಿಗಾಗಿ ಯುದ್ಧಮಾಡುವಾಗ ಆಗುವ ಹಿಂಸೆಯು ನಿಜವಾಗಿ ಹಿಂಸೆಯೇ ಅಲ್ಲ. ಏಕೆಂದರೆ ಒಬ್ಬ ಮನುಷ್ಯನನ್ನು ಅಥವಾ ಅವನ ಆತ್ಮವನ್ನು ಕೊಲ್ಲುವುದು ಸಾಧ್ಯವೇ ಇಲ್ಲ. ಆದುದರಿಂದ ನ್ಯಾಯದ ನಿರ್ವಹಣೆಗಾಗಿ ಹೊರತೋರಿಕೆಯ ಹಿಂಸೆಗೆ ಅವಕಾಶವುಂಟು. ಅರ್ಜುನನು ಇದನ್ನು ಅರ್ಥಮಾಡಿಕೊಂಡು ಕೃಷ್ಣನ ಆದೇಶವನ್ನು ಪಾಲಿಸಬೇಕು. ಶಸ್ತ್ರಚಿಕಿತ್ಸೆಯ ಉದ್ದೇಶ ರೋಗಿಯನ್ನು ಕೊಲ್ಲುವುದಲ್ಲ; ಅವನನ್ನು ಗುಣ ಪಡಿಸುವುದು. ಕೃಷ್ಣನ ಆದೇಶದಂತೆ ಅರ್ಜುನನು ಮಾಡುವ ಯುದ್ಧಕ್ಕೆ ಸಂಪೂರ್ಣ ತಿಳುವಳಿಕೆಯ ಆಧಾರವಿದೆ. ಆದ್ದರಿಂದ ಪಾಪಕರ್ಮದ ಫಲದ ಸಾಧ್ಯತೆಯೇ ಇಲ್ಲ.

## ಶ್ಲೋಕ - 22

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ |**

**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯ -**
**ನ್ಯಾನಿ ಸಂಯಾತಿ ನವಾನಿ ದೇಹೀ ||೨೨||**

**ವಾಸಾಂಸಿ**—ವಸ್ತ್ರಗಳನ್ನು; **ಜೀರ್ಣಾನಿ**—ಹಳೆಯದಾಗಿ ಹರಿದುಹೋದ; **ಯಥಾ**—ಹೇಗೆ; **ವಿಹಾಯ**—ತ್ಯಜಿಸಿ; **ನವಾನಿ**—ಹೊಸ ವಸ್ತ್ರಗಳನ್ನು; **ಗೃಹ್ಣಾತಿ**—ಸ್ವೀಕರಿಸುತ್ತಾನೋ; **ನರಃ**—ಮನುಷ್ಯನು; **ಅಪರಾಣಿ**—ಬೇರೆಯ; **ತಥಾ**—ಅದೇ ರೀತಿಯಲ್ಲಿ; **ಶರೀರಾಣಿ**— ದೇಹಗಳನ್ನು; **ವಿಹಾಯ**—ತೊರೆದು; **ಜೀರ್ಣಾನಿ**—ಹಳೆಯ ಮತ್ತು ಅನುಪಯುಕ್ತವಾದ; **ಅನ್ಯಾನಿ**—ಬೇರೆಯ; **ಸಂಯಾತಿ**—ನಿಶ್ಚಯವಾಗಿ ಸ್ವೀಕರಿಸುತ್ತಾನೆ; **ನವಾನಿ**—ಹೊಸದಾದವನ್ನು; **ದೇಹೀ**—ದೇಹಗತನಾದವನು.

## ಅನುವಾದ

**ಒಬ್ಬ ಮನುಷ್ಯನು ಹೇಗೆ ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ತೊಟ್ಟುಕೊಳ್ಳುವನೋ ಹಾಗೆಯೇ ಆತ್ಮವು ಜೀರ್ಣವಾದ ದೇಹವನ್ನು ಬಿಟ್ಟು ಹೊಸ ದೇಹವನ್ನು ಸ್ವೀಕರಿಸುತ್ತದೆ.**

## ಭಾವಾರ್ಥ

ಜೀವಾತ್ಮನು ದೇಹವನ್ನು ಬದಲಾಯಿಸುವನೆಂಬುದು ಎಲ್ಲರೂ ಒಪ್ಪಿರುವ ವಾಸ್ತವಾಂಶ. ಆಧುನಿಕ ವಿಜ್ಞಾನಿಗಳು ಆತ್ಮದ ಅಸ್ತಿತ್ವವನ್ನು ನಂಬುವುದಿಲ್ಲ. ಆದರೆ ಹೃದಯದಿಂದ ಬರುವ ಚೈತನ್ಯದ ಮೂಲವನ್ನು ವಿವರಿಸಲಾರರು; ಇವರು ಸಹ, ಶೈಶವದಿಂದ ಬಾಲ್ಯಕ್ಕೆ, ಯೌವನಕ್ಕೆ, ಮತ್ತೆ ಯೌವನದಿಂದ ವೃದ್ಧಾಪ್ಯಕ್ಕೆ ದೇಹದಲ್ಲಿ ಒಂದೇ ಸಮನೆ ಆಗುವ ಬದಲಾವಣೆಗಳನ್ನು ಒಪ್ಪಬೇಕಾಗುತ್ತದೆ. ಮುಪ್ಪಿನಲ್ಲಿ ಬದಲಾವಣೆಯು ಮತ್ತೊಂದು ದೇಹಕ್ಕೆ ಆಗುತ್ತದೆ. ಇದನ್ನು ಹಿಂದೆ ಒಂದು ಶ್ಲೋಕದಲ್ಲಿ ವಿವರಿಸಿದೆ (2.13).

ಜೀವಾತ್ಮವು ಇನ್ನೊಂದು ದೇಹವನ್ನು ಪ್ರವೇಶಿಸುವುದು ಸಾಧ್ಯವಾಗುವುದು ಪರಮಾತ್ಮನ ಕೃಪೆಯಿಂದ. ಸ್ನೇಹಿತನು ತನ್ನ ಸ್ನೇಹಿತನ ಆಸೆಯನ್ನು ನಡೆಸಿಕೊಡುವಂತೆ ಪರಮಾತ್ಮನು ಜೀವಾತ್ಮದ ಆಸೆಯನ್ನು ನಡೆಸಿಕೊಡುತ್ತಾನೆ. ಮುಂಡಕ ಉಪನಿಷತ್ತು ಮತ್ತು ಶ್ವೇತಾಶ್ವತರ ಉಪನಿಷತ್ತುಗಳಂತೆ ವೇದಗಳೂ ಆತ್ಮವನ್ನು ಮತ್ತು ಪರಮಾತ್ಮವನ್ನು ಒಂದೇ ವೃಕ್ಷದ ಮೇಲೆ ಕುಳಿತಿರುವ ಎರಡು ಗೆಳೆಯ ಪಕ್ಷಿಗಳಿಗೆ ಹೋಲಿಸುತ್ತವೆ. ಒಂದು ಪಕ್ಷಿಯು (ಜೀವಾತ್ಮ) ವೃಕ್ಷದ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಪಕ್ಷಿಯು (ಕೃಷ್ಣ) ತನ್ನ ಸ್ನೇಹಿತನನ್ನು ನೋಡುತ್ತಿದೆ. ಎರಡು ಪಕ್ಷಿಗಳೂ ಗುಣದಲ್ಲಿ ಒಂದೇ. ಆದರೆ ಒಂದು ಪ್ರಾಪಂಚಿಕ ವೃಕ್ಷದ ಹಣ್ಣುಗಳಿಗಾಗಿ ಆಸೆಪಟ್ಟಿದೆ; ಮತ್ತೊಂದು ತನ್ನ ಸ್ನೇಹಿತನು ಮಾಡುವುದನ್ನು ನೋಡುತ್ತ ಸುಮ್ಮನಿದೆ. ಕೃಷ್ಣನು ವೀಕ್ಷಿಸುವ ಪಕ್ಷಿ; ಅರ್ಜುನನು ತಿನ್ನುವ ಪಕ್ಷಿ. ಅವರು ಸ್ನೇಹಿತರಾದರೂ ಒಂದು ಪ್ರಭು; ಇನ್ನೊಂದು ಸೇವಕ. ಜೀವಾತ್ಮವು ಈ ಸಂಬಂಧವನ್ನು ಮರೆತಿರುವುದೇ ಒಂದು ಮರದ ಮೇಲಿನಿಂದ ಇನ್ನೊಂದು ಮರಕ್ಕೆ ಅಥವಾ ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಬದಲಾವಣೆ ಮಾಡುವುದಕ್ಕೆ ಕಾರಣ. ಐಹಿಕ ದೇಹವೆನ್ನುವ ಮರದ ಮೇಲೆ ಜೀವಾತ್ಮವು ಬಹು ಕಷ್ಟಪಡುತ್ತದೆ. ಆದರೆ — ಸ್ವಇಚ್ಛೆಯಿಂದ ಕೃಷ್ಣನಿಗೆ ಶರಣಾಗತನಾಗಿ ಅರ್ಜುನನು ಮಾರ್ಗದರ್ಶನವನ್ನು ಒಪ್ಪಿಕೊಂಡಂತೆ — ಅದು ಇನ್ನೊಂದು ಪಕ್ಷಿಯನ್ನು ಪರಮಗುರು ಎಂದು ಒಪ್ಪಿಕೊಳ್ಳುತ್ತಲೇ ಅಧೀನ ಪಕ್ಷಿಯು ಎಲ್ಲ ದುಃಖದಿಂದ

ಮುಕ್ತವಾಗುತ್ತದೆ. ಮುಂಡಕ ಉಪನಿಷತ್ತು (3.1.2) ಮತ್ತು ಶ್ವೇತಾಶ್ವತರ ಉಪನಿಷತ್ತು (4.7) ಎರಡೂ ಇದನ್ನು ದೃಢಪಡಿಸುತ್ತವೆ —

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋ**
**sನೀಶಯಾ ಶೋಚತಿ ಮುಹ್ಯಮಾನಃ |**
**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್**
**ಅಸ್ಯ ಮಹಿಮಾನಮ್ ಇತಿ ವೀತಶೋಕಃ ||**

ಎರಡು ಪಕ್ಷಿಗಳೂ ಒಂದೇ ಮರದ ಮೇಲಿದ್ದರೂ ಭಕ್ಷಿಸುತ್ತಿರುವ ಪಕ್ಷಿಯು ಮರದ ಫಲಗಳನ್ನು ಅನುಭವಿಸುವುದರಿಂದ ಆತಂಕ ಮತ್ತು ವಿಷಾದಗಳಿಂದ ತುಂಬಿದೆ. ಆದರೆ ಹೇಗಾದರೂ ಅದು ಭಗವಂತನಾದ ತನ್ನ ಮಿತ್ರನತ್ತ ಮುಖ ಮಾಡಿದರೆ, ಭಗವಂತನ ಮಹಿಮೆಯನ್ನು ತಿಳಿದುಕೊಂಡರೆ, ಕೂಡಲೇ ಕಷ್ಟಪಡುತ್ತಿರುವ ಪಕ್ಷಿಯು ಎಲ್ಲ ದುಃಖಗಳಿಂದ ಪಾರಾಗುತ್ತದೆ. ಅರ್ಜುನನು ಈಗ ತನ್ನ ನಿರಂತರ ಮಿತ್ರನಾದ ಕೃಷ್ಣನ ಕಡೆಗೆ ಮುಖಮಾಡಿದ್ದಾನೆ; ಅವನಿಂದ ಭಗವದ್ಗೀತೆಯನ್ನು ತಿಳಿದುಕೊಳ್ಳುತ್ತಿದ್ದಾನೆ. ಹೀಗೆ ಕೃಷ್ಣನಿಂದ ಕೇಳಿ ತಿಳಿದುಕೊಂಡು ಅವನು ಭಗವಂತನ ಮಹಾಮಹಿಮೆಯನ್ನು ಅರ್ಥ ಮಾಡಿಕೊಳ್ಳಬಲ್ಲ; ಶೋಕದಿಂದ ಮುಕ್ತನಾಗಬಲ್ಲ.

ವೃದ್ಧರಾದ ತನ್ನ ತಾತ ಮತ್ತು ತನ್ನ ಗುರುಗಳ ಶರೀರಗಳಲ್ಲಿ ಆಗುವ ಬದಲಾವಣೆಗಾಗಿ ಶೋಕಿಸಬಾರದೆಂದು ಭಗವಂತನು ಅರ್ಜುನನಿಗೆ ಬೋಧಿಸುತ್ತಾನೆ. ವಿಧವಿಧವಾದ ದೈಹಿಕ ಕ್ರಿಯೆಗಳ ಎಲ್ಲ ಪ್ರತಿಫಲಗಳಿಂದ ಒಮ್ಮೆಗೇ ಅವರು ಪರಿಶುದ್ಧರಾಗುವುದು ಸಾಧ್ಯವಾಗುವಂತೆ ಧಾರ್ಮಿಕ ಯುದ್ಧದಲ್ಲಿ ಅವರನ್ನು ಕೊಲ್ಲಲು ಅವನು ಸಂತಸಪಡಬೇಕು. ಯಜ್ಞವೇದಿಕೆಯಲ್ಲಿ ಅಥವಾ ಯೋಗ್ಯವಾದ ಯುದ್ಧದಲ್ಲಿ ಪ್ರಾಣವನ್ನು ಒಪ್ಪಿಸುವವನು ಕೂಡಲೇ ದೈಹಿಕ ಕರ್ಮಫಲಗಳಿಂದ ಪರಿಶುದ್ಧನಾಗಿ ಉತ್ತಮ ಸ್ಥಾನಕ್ಕೆ ಏರುತ್ತಾನೆ. ಆದುದರಿಂದ ಅರ್ಜುನನ ಶೋಕಕ್ಕೆ ಕಾರಣವೇ ಇಲ್ಲ.

## ಶ್ಲೋಕ - 23

**ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ|**
**ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ||೨೩||**

**ನ**—ಎಂದಿಗೂ ಇಲ್ಲ; **ಏನಮ್**—ಈ ಆತ್ಮವನ್ನು; **ಛಿನ್ದನ್ತಿ**—ತುಂಡುಗಳಾಗಿ ಕತ್ತರಿಸುತ್ತವೆ; **ಶಸ್ತ್ರಾಣಿ**—ಶಸ್ತ್ರಗಳು; **ನ**—ಎಂದಿಗೂ ಇಲ್ಲ; **ಏನಮ್**—ಈ ಆತ್ಮವನ್ನು; **ದಹತಿ**—ಸುಡುತ್ತದೆ; **ಪಾವಕಃ**—ಬೆಂಕಿಯು; **ನ**—ಎಂದಿಗೂ ಇಲ್ಲ; **ಚ**—ಕೂಡ; **ಏನಮ್**—ಈ ಆತ್ಮವನ್ನು; **ಕ್ಲೇದಯನ್ತಿ**—ನೆನೆಯಿಸುತ್ತದೆ; **ಆಪಃ**—ನೀರು; **ನ ಶೋಷಯತಿ**—ಒಣಗಿಸುವುದಿಲ್ಲ; **ಮಾರುತಃ**—ಗಾಳಿಯು.

## ಅನುವಾದ

**ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು, ಅಗ್ನಿಯು ಸುಡಲಾರದು, ನೀರು ನೆನೆಯಿಸಲಾರದು ಮತ್ತು ಗಾಳಿಯು ಒಣಗಿಸಲಾರದು.**

## ಭಾವಾರ್ಥ

ಕತ್ತಿಗಳು, ಆಗ್ನೇಯಾಸ್ತ್ರಗಳು, ವಾರುಣಾಸ್ತ್ರಗಳು, ವಾಯವ್ಯಾಸ್ತ್ರಗಳು ಯಾವ ಅಸ್ತ್ರಶಸ್ತ್ರಗಳೂ ಆತ್ಮವನ್ನು ಕೊಲ್ಲಲಾರವು. ಆಧುನಿಕ ಕಾಲದ ಬೆಂಕಿ ಉಗುಳುವ ಅಸ್ತ್ರಗಳಲ್ಲದೆ ಮಣ್ಣು, ನೀರು, ವಾಯು, ಆಕಾಶ ಮೊದಲಾದವುಗಳಿಂದ ಮಾಡಿದ ಅಸ್ತ್ರಗಳು ಇದ್ದುವೆಂದು ಕಾಣುತ್ತದೆ. ಆಧುನಿಕ ಕಾಲದ ಅಣ್ವಸ್ತ್ರಗಳನ್ನು ಆಗ್ನೇಯಾಸ್ತ್ರಗಳೆಂದೇ ವರ್ಗೀಕರಿಸಲಾಗುತ್ತದೆ. ಬೇರೆಬೇರೆ ಬಗೆಗಳ ಭೌತಿಕ ಅಂಶಗಳಿಂದ ತಯಾರಾದ ಇತರ ಅಸ್ತ್ರಗಳು ಹಿಂದಿನ ಕಾಲದಲ್ಲಿ ಇದ್ದವು. ಆಗ್ನೇಯಾಸ್ತ್ರಗಳಿಗೆ ಪ್ರತಿಯಾಗಿ ವಾರುಣಾಸ್ತ್ರಗಳನ್ನು ಪ್ರಯೋಗಿಸಲಾಗುತ್ತಿತ್ತು. ಆಧುನಿಕ ವಿಜ್ಞಾನಕ್ಕೆ ಇಂತಹ ಅಸ್ತ್ರಗಳ ಪರಿಚಯವೇ ಇಲ್ಲ. ಆಧುನಿಕ ವಿಜ್ಞಾನಿಗಳಿಗೆ ವಾಯವ್ಯಾಸ್ತ್ರಗಳ ವಿಷಯವೂ ತಿಳಿದಿಲ್ಲ. ವೈಜ್ಞಾನಿಕ ಉಪಾಯಗಳೇನೇ ಇರಲಿ ಎಷ್ಟೇ ಅಸ್ತ್ರಗಳನ್ನು ಬಳಸಿದರೂ ಆತ್ಮವನ್ನು ತುಂಡು ಮಾಡಲು ಸಾಧ್ಯವಿಲ್ಲ, ನಾಶಮಾಡಲು ಸಾಧ್ಯವಿಲ್ಲ.

ಅಜ್ಞಾನ ಮಾತ್ರದಿಂದಲೇ ಜೀವಾತ್ಮನು ಅಸ್ತಿತ್ವಕ್ಕೆ ಬಂದದ್ದು ಹೇಗೆ, ಅನಂತರ ಮಾಯಾಶಕ್ತಿಯಿಂದ ಆವೃತನಾದದ್ದು ಹೇಗೆ ಎನ್ನುವುದನ್ನು ಮಾಯಾವಾದಿಯು ವಿವರಿಸಲಾರ. ಪರಮಾತ್ಮನಿಂದ ಜೀವಾತ್ಮಗಳನ್ನು ಭಾಗ ಮಾಡಲು ಸಾಧ್ಯವಿಲ್ಲ. ಜೀವಾತ್ಮಗಳು ಪರಮಾತ್ಮನಿಂದ ನಿರಂತರವಾಗಿ ಬೇರ್ಪಟ್ಟ ಭಾಗಾಂಶಗಳು. ಈ ಅಂಶಗಳು ಸನಾತನವಾಗಿ ಜೀವಾತ್ಮಗಳಾದ್ದರಿಂದ ಅವು ಮಾಯಾಶಕ್ತಿಯಿಂದ ಆವೃತವಾಗುತ್ತವೆ. ಬೆಂಕಿಯ ಕಿಡಿಗಳು ಗುಣದಲ್ಲಿ ಬೆಂಕಿಯೊಡನೆ ಒಂದೇ ಆದರೂ ಬೆಂಕಿಯಿಂದ ಹೊರಬಿದ್ದಾಗ ಆರಿಹೋಗುತ್ತವೆ. ಹಾಗೆಯೇ ಜೀವಾತ್ಮಗಳು ಭಗವಂತನ ಸಂಗದಿಂದ ಬೇರೆಯಾಗುತ್ತವೆ. ವರಾಹ ಪುರಾಣದಲ್ಲಿ ಜೀವಿಗಳನ್ನು ಪರಮೋನ್ನತನ ವಿಭಿನ್ನಾಂಶಗಳು ಎಂದು ವರ್ಣಿಸಿದೆ. ಭಗವದ್ಗೀತೆಯ ಪ್ರಕಾರವೂ ಅವು ನಿರಂತರವಾಗಿ ಬೇರೆ ಆಗಿಯೇ ಉಳಿಯುತ್ತವೆ. ಆದುದರಿಂದ ಭಗವಂತನು ಅರ್ಜುನನಿಗೆ ಮಾಡುವ ಉಪದೇಶದಿಂದ ಸ್ಪಷ್ಟವಾಗುವಂತೆ ಮಾಯೆಯಿಂದ ಮುಕ್ತವಾದ ಮೇಲೂ ಜೀವವು ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಕೃಷ್ಣನಿಂದ ಪಡೆದ ತಿಳಿವಳಿಕೆಯಿಂದ ಅರ್ಜುನನು ಮುಕ್ತನಾದ. ಆದರೆ ಅವನು ಎಂದಿಗೂ ಕೃಷ್ಣನೊಡನೆ ಒಂದಾಗಲಿಲ್ಲ.

## ಶ್ಲೋಕ - 24

**ಅಚ್ಛೇದ್ಯೋऽಯಮದಾಹ್ಯೋऽಯಮಕ್ಲೇದ್ಯೋऽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋऽಯಂ ಸನಾತನಃ ॥೨೪॥**

**ಅಚ್ಛೇದ್ಯಃ**—ಒಡೆಯಲಾಗದುದು; **ಅಯಮ್**—ಈ ಆತ್ಮವು; **ಅದಾಹ್ಯಃ**—ಸುಡಲಾಗದ್ದು; **ಅಯಮ್**—ಈ ಆತ್ಮವು; **ಅಕ್ಲೇದ್ಯಃ**—ಕರಗಿಸಲಾಗದ್ದು; **ಅಶೋಷ್ಯಃ**—ಒಣಗಿಸಲಾಗದ್ದು; **ಏವ**—ಖಂಡಿತವಾಗಿಯೂ; **ಚ**—ಮತ್ತು; **ನಿತ್ಯಃ**—ನಿತ್ಯವಾದುದು; **ಸರ್ವಗತಃ**—ಸರ್ವವ್ಯಾಪಿಯಾದುದು; **ಸ್ಥಾಣುಃ**—ಬದಲಾವಣೆಯಿಲ್ಲದ್ದು; **ಅಚಲಃ**—ಸ್ಥಿರವಾದುದು; **ಅಯಮ್**—ಈ ಆತ್ಮವು; **ಸನಾತನಃ**—ಶಾಶ್ವತವಾಗಿಯೂ ಅದೇ.

## ಅನುವಾದ

**ಜೀವಾತ್ಮನನ್ನು ಮುರಿಯಲಾಗುವುದಿಲ್ಲ; ನೀರಿನಲ್ಲಿ ಕರಗಿಸಲು ಸಾಧ್ಯವಿಲ್ಲ. ಇದನ್ನು ಸುಡಲು ಸಾಧ್ಯವಿಲ್ಲ; ಒಣಗಿಸಲು ಸಾಧ್ಯವಿಲ್ಲ. ಈತನು ನಿತ್ಯನು, ಎಲ್ಲೆಡೆ ಇರುವವನು. ಬದಲಾವಣೆಯಿಲ್ಲದವನು, ಅಚಲನಾದವನು ಮತ್ತು ಸನಾತನವಾಗಿಯೂ ಒಂದೇ ಆಗಿರುತ್ತಾನೆ.**

## ಭಾವಾರ್ಥ

ಜೀವಾತ್ಮನು ನಿರಂತರವಾಗಿ ಪೂರ್ಣ ಚೇತನದ ಅಣುವಾಗಿ ಉಳಿಯುತ್ತಾನೆ ಮತ್ತು ಸರ್ವಕಾಲಕ್ಕೂ ಸ್ಥಾಣುವಾಗಿ ಎಂದರೆ ಬದಲಾವಣೆಯಿಲ್ಲದೆ ಅದೇ ಆತ್ಮವಾಗಿ ಉಳಿಯುತ್ತಾನೆ ಎನ್ನುವುದನ್ನು ಜೀವಾತ್ಮನ ಈ ಎಲ್ಲ ಗುಣಗಳು ತೋರಿಸಿಕೊಡುತ್ತವೆ. ಈ ವಿಷಯಕ್ಕೆ ಅದ್ವೈತ ಸಿದ್ಧಾಂತವನ್ನು ಅನ್ವಯಿಸುವುದು ಬಹುಕಷ್ಟ. ಏಕೆಂದರೆ ಜೀವಾತ್ಮನು ಭಗವಂತನೊಡನೆ ಎಂದಿಗೂ ಗುರುತಿಲ್ಲದಂತೆ ಐಕ್ಯಹೊಂದಲಾರನು. ಜಡವಸ್ತುವಿನ ಕಲ್ಮಷದಿಂದ ಮುಕ್ತವಾದ ಅನಂತರ ಜೀವಾತ್ಮನು ದೇವೋತ್ತಮ ಪರಮ ಪುರುಷನ ಉಜ್ವಲ ಕಿರಣಗಳಲ್ಲಿ ಒಂದು ಆಧ್ಯಾತ್ಮಿಕ ಕಿಡಿಯಾಗಿ ಉಳಿಯಲು ಬಯಸಬಹುದು, ಆದರೆ ವಿವೇಕಿ ಆತ್ಮಗಳು ದೇವೋತ್ತಮನ ಸನ್ನಿಧಿಯಲ್ಲಿರಲು ಆಧ್ಯಾತ್ಮಿಕ ಗ್ರಹಗಳನ್ನು ಪ್ರವೇಶಿಸುತ್ತವೆ.

**ಸರ್ವಗತ** (ಎಲ್ಲೆಡೆ ಇರುವ) ಎನ್ನುವ ಶಬ್ದವು ಮಹತ್ವದ್ದು. ಏಕೆಂದರೆ ಜೀವಿಗಳು ಭಗವಂತನ ಸೃಷ್ಟಿಯಲ್ಲಿ ಎಲ್ಲೆಲ್ಲೂ ಇವೆ ಎನ್ನುವುದರಲ್ಲಿ ಸಂದೇಹವಿಲ್ಲ. ಅವು ಭೂಮಿಯ ಮೇಲೆ, ನೀರಿನಲ್ಲಿ, ವಾಯುವಿನಲ್ಲಿ, ಭೂಮಿಯ ಒಳಗಡೆ ಮತ್ತು ಅಗ್ನಿಯಲ್ಲಿ ಸಹ ವಾಸಿಸುತ್ತವೆ. ಅವು ಅಗ್ನಿಯಲ್ಲಿ ದಗ್ಧವಾಗುತ್ತವೆ ಎನ್ನುವ ನಂಬಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಬೆಂಕಿಯು ಆತ್ಮವನ್ನು ಸುಡಲಾರದು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಸೂರ್ಯಗ್ರಹದಲ್ಲಿ ಸಹ ಅಲ್ಲಿಗೆ ಹೊಂದುವ ದೇಹಗಳಲ್ಲಿ ಜೀವಿಗಳಿದ್ದಾರೆ ಎನ್ನುವುದರಲ್ಲಿ ಅನುಮಾನವೇ ಇಲ್ಲ. ಸೂರ್ಯಮಂಡಲದಲ್ಲಿ ಯಾರೂ ಇಲ್ಲದಿದ್ದರೆ ಸರ್ವಗತ ಎನ್ನುವ ಶಬ್ದಕ್ಕೆ ಅರ್ಥವೇ ಇಲ್ಲ.

## ಶ್ಲೋಕ - 25

**ಅವ್ಯಕ್ತೋऽಯಮಚಿನ್ತ್ಯೋऽಯಮವಿಕಾರ್ಯೋऽಯಮುಚ್ಯತೇ ||**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ||೨೫||**

**ಅವ್ಯಕ್ತಃ**—ಅಗೋಚರವು; **ಅಯಮ್**—ಈ ಆತ್ಮವು; **ಅಚಿನ್ತ್ಯಃ**—ಅಚಿಂತ್ಯವು; **ಅಯಮ್**—ಈ ಆತ್ಮವು; **ಅವಿಕಾರ್ಯಃ**—ಬದಲಾವಣೆಗೊಳ್ಳದ್ದು; **ಅಯಮ್**—ಈ ಆತ್ಮವು; **ಉಚ್ಯತೇ**—ಎಂದು ಹೇಳಲ್ಪಡುತ್ತದೆ; **ತಸ್ಮಾತ್**—ಆದ್ದರಿಂದ; **ಏವಮ್**—ಇದರಂತೆ; **ವಿದಿತ್ವಾ**—ಚೆನ್ನಾಗಿ ತಿಳಿದು; **ಏನಮ್**—ಈ ಆತ್ಮವನ್ನುಕುರಿತು; **ನ**—ಕೂಡದು; **ಅನುಶೋಚಿತುಮ್**—ದುಃಖಿಸಲು; **ಅರ್ಹಸಿ**—ಅರ್ಹನಾಗುತ್ತೀಯೆ.

## ಅನುವಾದ

**ಆತ್ಮನು ಕಣ್ಣಿಗೆ ಕಾಣುವುದಿಲ್ಲ; ಅದನ್ನು ಗ್ರಹಿಸಲು ಸಾಧ್ಯವಿಲ್ಲ; ಅದು ವಿಕಾರ ಹೊಂದುವುದಿಲ್ಲ ಎಂದು ಹೇಳಲಾಗಿದೆ. ಇದನ್ನು ತಿಳಿದೂ ನೀನು ದೇಹಕ್ಕಾಗಿ ದುಃಖಿಸಬಾರದು.**

## ಭಾವಾರ್ಥ

ಹಿಂದೆ ವರ್ಣಿಸಿರುವಂತೆ ನಮ್ಮ ಲೌಕಿಕ ಲೆಕ್ಕಾಚಾರಗಳಿಗೆ ಆತ್ಮನ ಗಾತ್ರವು ಎಷ್ಟು ಸೂಕ್ಷ್ಮವೆಂದರೆ ಅತ್ಯಂತ ಶಕ್ತವಾದ ಸೂಕ್ಷ್ಮದರ್ಶಕ ಯಂತ್ರವು ಅವನನ್ನು ಕಾಣಲಾರದು. ಆದುದರಿಂದ ಅವನು ಅದೃಶ್ಯ. ಆತ್ಮನ ಅಸ್ತಿತ್ವವನ್ನು ಕುರಿತು ಹೇಳಬೇಕಾದರೆ ಅವನ ಅಸ್ತಿತ್ವವನ್ನು ಕುರಿತು ಶ್ರುತಿಯ ಅಥವಾ ವೇದ ಜ್ಞಾನದ ಪ್ರಮಾಣವನ್ನು ಮೀರಿ ಪ್ರಾಯೋಗಿಕವಾಗಿ ಯಾರೂ ಸಿದ್ಧಮಾಡಿ ತೋರಿಸಲಾರರು. ಈ ಸತ್ಯವನ್ನು ನಾವು ಒಪ್ಪಿಕೊಳ್ಳಬೇಕು; ಏಕೆಂದರೆ ಆತ್ಮನ ಅಸ್ತಿತ್ವವನ್ನು ನಾವು ಗ್ರಹಣ ಶಕ್ತಿಯಿಂದ ತಿಳಿಯಬಲ್ಲೆವು; ಇದನ್ನು ಅರ್ಥಮಾಡಿಕೊಳ್ಳಲು ನಮಗೆ ಬೇರೆ ಯಾವ ಆಧಾರವೂ ಇಲ್ಲ. ಶ್ರೇಷ್ಠ ಪ್ರಮಾಣದ ಆಧಾರ ಮಾತ್ರದಿಂದಲೇ ನಾವು ಅನೇಕ ಸಂಗತಿಗಳನ್ನು ಒಪ್ಪಬೇಕಾಗುತ್ತದೆ. ತನ್ನ ತಾಯಿಯು ಅಧಿಕಾರಯುತವಾಗಿ ತಂದೆ ಯಾರು ಎಂದು ಹೇಳಿದುದನ್ನು ಯಾರೂ ತಿರಸ್ಕರಿಸಲು ಸಾಧ್ಯವಿಲ್ಲ. ತಂದೆಯು ಯಾರು ಎನ್ನುವುದನ್ನು ತಿಳಿಯಲು ತಾಯಿಯ ಮಾತಲ್ಲದೆ ಬೇರೆ ಪ್ರಮಾಣವಿಲ್ಲ. ಹಾಗೆಯೇ ಆತ್ಮನನ್ನು ಅರ್ಥಮಾಡಿಕೊಳ್ಳಲು ವೇದಗಳ ಅಧ್ಯಯನವಲ್ಲದೆ ಬೇರೆ ಆಧಾರವಿಲ್ಲ. ಇದನ್ನೇ ಇತರ ಮಾತುಗಳಲ್ಲಿ ಹೇಳುವುದಾದರೆ ಮನುಷ್ಯನ ಪ್ರಯೋಗಾಧಾರಿತ ತಿಳುವಳಿಕೆಯಿಂದ ಆತ್ಮನನ್ನು ಗ್ರಹಿಸುವುದು ಸಾಧ್ಯವೇ ಇಲ್ಲ. ಆತ್ಮನು ಪ್ರಜ್ಞೆ ಮತ್ತು ಪ್ರಜ್ಞಾಶೀಲ. ಇದು ವೇದಗಳ ಹೇಳಿಕೆ. ಇದನ್ನು ನಾವು ಒಪ್ಪಬೇಕು. ದೇಹದಲ್ಲಿ ಬದಲಾವಣೆಗಳಾಗುತ್ತವೆ; ಆತ್ಮನಿಗೆ ಬದಲಾವಣೆಗಳಿಲ್ಲ. ಸರ್ವಕಾಲಕ್ಕೂ ಅವಿಕಾರವಾಗಿ ಉಳಿಯುವ ಆತ್ಮನನ್ನು ಅನಂತವಾದ ಪರಮಾತ್ಮನಿಗೆ ಹೋಲಿಸಿದರೆ ಆತ್ಮನು ಅಣುಗಾತ್ರದವನು. ಪರಮಾತ್ಮನು ಅನಂತನಾದವನು. ಅವನೊಡನೆ ಹೋಲಿಸಿದರೆ ಆತ್ಮನು ಅಣುಮಾತ್ರದವನು. ಆದ್ದರಿಂದ ಬದಲಾವಣೆಯಾಗಲಾರದ ಅಣುಜೀವಿಯು ಎಂದೆಂದಿಗೂ ಅನಂತವಾದ ಆತ್ಮನ ಅಥವಾ ದೇವೋತ್ತಮ ಪರಮ ಪುರುಷನ ಸಮಾನವಾಗಲಾರದು. ಆತ್ಮನ ಗ್ರಹಿಕೆಯ ಸ್ಥಿರಸ್ವರೂಪವನ್ನು ದೃಢಪಡಿಸಲು ಈ ಪರಿಕಲ್ಪನೆಯನ್ನು ವೇದಗಳಲ್ಲಿ ಮತ್ತೆ ಮತ್ತೆ ವಿಭಿನ್ನ ರೀತಿಯಲ್ಲಿ ಹೇಳಲಾಗಿದೆ. ವಿಷಯವು ಸಂಪೂರ್ಣವಾಗಿ, ತಪ್ಪಿಗೆ ಅವಕಾಶವಿಲ್ಲದೆ ಅರ್ಥವಾಗಬೇಕಾದರೆ ಅದನ್ನು ಮತ್ತೆ ಮತ್ತೆ ಹೇಳಬೇಕಾಗುತ್ತದೆ.

## ಶ್ಲೋಕ - 26

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ |**
**ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ||೨೬||**

**ಅಥ**—ಆದರೂ; **ಚ**—ಕೂಡ; **ಏನಮ್**—ಈ ಆತ್ಮನನ್ನು; **ನಿತ್ಯಜಾತಮ್**—ಸದಾ ಹುಟ್ಟಿರುವವನು; **ನಿತ್ಯಮ್**—ಎಂದೆಂದಿಗೂ; **ವಾ**—ಅಥವಾ; **ಮನ್ಯಸೇ**—ಭಾವಿಸುವೆ; **ಮೃತಮ್** —ಮೃತನೆಂದು; **ತಥಾಪಿ**—ಆದರೂ; **ತ್ವಮ್**—ನೀನು; **ಮಹಾಬಾಹೋ**—ಮಹಾಬಾಹುವೇ; **ನ**—ಎಂದಿಗೂ ಇಲ್ಲ;

**ಏನವಮ್**—ಆತ್ಮನ ವಿಚಾರದಲ್ಲಿ; **ಶೋಚಿತುಮ್**—ದುಃಖಿಸುವುದಕ್ಕೆ; **ಅರ್ಹಸಿ**—ಅರ್ಹನಾಗಿದ್ದೀಯೆ.

## ಅನುವಾದ

**ಆತ್ಮವು (ಅಥವಾ ಜೀವದ ಲಕ್ಷಣಗಳು) ಯಾವಾಗಲೂ ಹುಟ್ಟುತ್ತಿರುವುದೆಂದು ಯಾವಾಗಲೂ ಸಾಯುತ್ತಿರುವುದೆಂದು ನೀನು ಭಾವಿಸಿದರೂ, ಮಹಾಬಾಹುವೇ ನೀನು ಶೋಕಿಸಲು ಕಾರಣವಿಲ್ಲ.**

## ಭಾವಾರ್ಥ

ಬೌದ್ಧರಿಗೆ ಬಹು ಸಮೀಪವಾದ ತತ್ವಶಾಸ್ತ್ರಜ್ಞರ ವರ್ಗವೊಂದು ಸದಾ ಇರುತ್ತದೆ. ಇವರು ದೇಹವನ್ನು ಬಿಟ್ಟು ಆತ್ಮಕ್ಕೆ ಪ್ರತ್ಯೇಕ ಅಸ್ತಿತ್ವವಿದೆ ಎಂದು ನಂಬುವುದಿಲ್ಲ. ಶ್ರೀಕೃಷ್ಣನು ಭಗವದ್ಗೀತೆಯನ್ನು ಉಪದೇಶಿಸಿದಾಗ ಇಂತಹ ತತ್ವಶಾಸ್ತ್ರಜ್ಞರು ಇದ್ದಂತೆ ತೋರುತ್ತದೆ. ಇವರನ್ನು ಲೋಕಾಯತಿಕರು ಮತ್ತು ವೈಭಾಷಿಕರು ಎಂದು ಕರೆಯುತ್ತಿದ್ದರು. ಜಡವಸ್ತುವಿನ ಸಂಯೋಜನೆಯು ಒಂದು ಪಕ್ವ ಸ್ಥಿತಿಯನ್ನು ಮುಟ್ಟಿದಾಗ ಜೀವದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ ಎಂದು ಇವರು ವಾದಿಸುತ್ತಾರೆ. ಇಂದಿನ ಲೌಕಿಕ ವಿಜ್ಞಾನಿಯೂ ಪ್ರಾಪಂಚಿಕ ಮನೋಧರ್ಮದ ತತ್ವಶಾಸ್ತ್ರಜ್ಞರೂ ಹೀಗೆಯೇ ಚಿಂತನೆ ಮಾಡುತ್ತಾರೆ. ಅವರ ಅಭಿಪ್ರಾಯದಲ್ಲಿ ದೇಹವು ಹಲವು ಭೌತಿಕ ಅಂಶಗಳ ಸಂಯೋಜನೆ. ಒಂದು ಘಟ್ಟದಲ್ಲಿ ಭೌತಿಕ ಮತ್ತು ರಾಸಾಯನಿಕ ಅಂಶಗಳ ಪರಸ್ಪರ ಕ್ರಿಯೆಯಿಂದಾಗಿ ಜೀವದ ಲಕ್ಷಣಗಳು ಬೆಳೆಯುತ್ತವೆ. ಮಾನವ ವಿಜ್ಞಾನಕ್ಕೆ (Anthropology) ಈ ಸಿದ್ಧಾಂತವೇ ಆಧಾರ. ಇಂದಿನ ದಿನಗಳಲ್ಲಿ ಅಮೆರಿಕದಲ್ಲಿ ಜನಪ್ರಿಯವಾಗುತ್ತಿರುವ ಹಲವು ಹುಸಿಧರ್ಮಗಳು ಈ ಸಿದ್ಧಾಂತಕ್ಕೂ, ಸರ್ವಶೂನ್ಯವಾದ, ಭಕ್ತಿಶೂನ್ಯವಾದ ಬೌದ್ಧಪಂಥಗಳಿಗೂ ಅಂಟಿಕೊಂಡಿವೆ.

ವೈಭಾಷಿಕ ಸಿದ್ಧಾಂತದಲ್ಲಿ ಹೇಳುವಂತೆ ಅರ್ಜುನನಿಗೆ ಆತ್ಮನ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದಿದ್ದರೂ ಅವನ ದುಃಖಕ್ಕೆ ಕಾರಣವೇ ಇಲ್ಲ. ಒಂದು ಪ್ರಮಾಣದ ರಾಸಾಯನಿಕಗಳು ನಷ್ಟವಾದುವೆಂದು ಅಳುತ್ತ ಯಾರೂ ತನ್ನ ನಿಯತ ಕರ್ತವ್ಯದ ಪಾಲನೆಯನ್ನು ನಿಲ್ಲಿಸಿಬಿಡುವುದಿಲ್ಲ. ಇದಕ್ಕೆ ಪ್ರತಿಯಾಗಿ ಆಧುನಿಕ ವಿಜ್ಞಾನದಲ್ಲಿ ಮತ್ತು ವೈಜ್ಞಾನಿಕ ಸಮರದಲ್ಲಿ ಶತ್ರುಗಳನ್ನು ಸೋಲಿಸುವುದಕ್ಕಾಗಿಯೇ ಹಲವು ಟನ್‌ಗಳ ರಾಸಾಯನಿಕಗಳನ್ನು ವ್ಯರ್ಥಮಾಡಲಾಗುತ್ತದೆ. ವೈಭಾಷಿಕ ಸಿದ್ಧಾಂತದ ಪ್ರಕಾರ ದೇಹವು ಕ್ಷೀಣಗೊಂಡಾಗ ಆತ್ಮ ಎನ್ನುವುದು ಮರೆಯಾಗುತ್ತದೆ. ಆದ್ದರಿಂದ ಜೀವಾತ್ಮನಿದ್ದಾನೆ ಎಂಬ ವೇದಗಳ ನಿರ್ಣಯವನ್ನು ಒಪ್ಪಿಕೊಳ್ಳಲಿ ಅಥವಾ ಆತ್ಮನ ಅಸ್ತಿತ್ವದಲ್ಲಿ ನಂಬಿಕೆಯಿಲ್ಲದಿರಲಿ ಅರ್ಜುನನು ಶೋಕಿಸಲು ಕಾರಣವೇ ಇರಲಿಲ್ಲ. ಈ ಸಿದ್ಧಾಂತದ ಪ್ರಕಾರ ಜಡವಸ್ತುವಿನಿಂದ ಪ್ರತಿಕ್ಷಣವೂ ಎಷ್ಟೋ ಸಂಖ್ಯೆಯ ಜೀವಿಗಳು ಸೃಷ್ಟಿಯಾಗುತ್ತಿವೆ; ಪ್ರತಿ ಕ್ಷಣವೂ ಅವುಗಳಲ್ಲಿ ಬಹುಸಂಖ್ಯೆಯವು ನಾಶವಾಗುತ್ತಿವೆ. ಆದುದರಿಂದ ಇಂತಹ ಘಟನೆಗಳಿಗಾಗಿ ದುಃಖಿಸಲು ಕಾರಣವೇ ಇಲ್ಲ. ಆತ್ಮನಿಗೆ ಮತ್ತೆ ಜನ್ಮವಿಲ್ಲದಿದ್ದರೆ ಅರ್ಜುನನು ತನ್ನ ತಾತನನ್ನೂ ಗುರುವನ್ನೂ ಕೊಲ್ಲುವ ಪಾಪ ಕರ್ಮದ ಫಲವನ್ನು ಅನುಭವಿಸಬೇಕಾಗುತ್ತದೆ ಎಂದು ಹೆದರಲು ಕಾರಣವೇ ಇರಲಿಲ್ಲ. ಈ ಹೊತ್ತಿನಲ್ಲಿ ಕೃಷ್ಣನು ಅರ್ಜುನನನ್ನು ಮಹಾಬಾಹು ಎಂದು ವ್ಯಂಗ್ಯವಾಗಿ ಕರೆಯುತ್ತಾನೆ; ಏಕೆಂದರೆ ಶ್ರೀಕೃಷ್ಣನು ವೇದಗಳ ಜ್ಞಾನವನ್ನು ತೊರೆದ

ವೈಭಾಷಿಕರ ಸಿದ್ಧಾಂತವನ್ನು ಒಪ್ಪಲಿಲ್ಲ. ಕ್ಷತ್ರಿಯನಾಗಿ ಅರ್ಜುನನು ವೇದ ಸಂಸ್ಕೃತಿಗೆ ಸೇರಿದವನು; ಅದರ ತತ್ವಗಳನ್ನು ಅನುಸರಿಸುವುದೇ ಅವನಿಗೆ ಯೋಗ್ಯವಾದದ್ದು.

## ಶ್ಲೋಕ - 27

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ |**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ||೨೭||**

**ಜಾತಸ್ಯ**—ಹುಟ್ಟಿದವನಿಗೆ; **ಹಿ**—ಖಂಡಿತವಾಗಿಯೂ; **ಧ್ರುವಃ**—ನಿಶ್ಚಿತ; **ಮೃತ್ಯುಃ**—ಸಾವು; **ಧ್ರುವಮ್**—ನಿಶ್ಚಿತವೇ; **ಜನ್ಮ**—ಜನನವು; **ಮೃತಸ್ಯ**—ಸತ್ತವನಿಗೆ; **ಚ**—ಕೂಡಾ; **ತಸ್ಮಾತ್**—ಆದ್ದರಿಂದ; **ಅಪರಿಹಾರ್ಯೇ**—ತಪ್ಪಿಸಲು ಸಾಧ್ಯವಿಲ್ಲದ; **ಅರ್ಥೇ**—ವಿಚಾರದಲ್ಲಿ; **ನ**—ಕೂಡದು; **ತ್ವಮ್**—ನೀನು; **ಶೋಚಿತುಮ್**—ದುಃಖಿಸಲು; **ಅರ್ಹಸಿ**—ಅರ್ಹನಾಗಿದ್ದೀಯೆ.

### ಅನುವಾದ

**ಹುಟ್ಟಿದವನು ಸಾಯಲೇಬೇಕು. ಸತ್ತವನು ಖಂಡಿತವಾಗಿಯೂ ಮತ್ತೆ ಹುಟ್ಟುತ್ತಾನೆ. ಆದ್ದರಿಂದ ಅನಿವಾರ್ಯವಾದ ನಿನ್ನ ಕರ್ತವ್ಯಪಾಲನೆಯಲ್ಲಿ ನೀನು ದುಃಖಿಸಬಾರದು.**

### ಭಾವಾರ್ಥ

ತನ್ನ ಬದುಕಿನ ಕರ್ಮಗಳಿಗೆ ಅನುಗುಣವಾಗಿ ಯಾರೇ ಆಗಲಿ ಹುಟ್ಟಲೇಬೇಕು. ಕರ್ಮಗಳ ಒಂದು ಅವಧಿಯನ್ನು ಮುಗಿಸಿದ ಮೇಲೆ ಅವನು ಮತ್ತೆ ಹುಟ್ಟುವುದಕ್ಕಾಗಿ ಸಾಯಲೇಬೇಕು. ಹೀಗೆ ಮನುಷ್ಯನು ಮುಕ್ತಿಯಿಲ್ಲದೆ ಹುಟ್ಟು-ಸಾವುಗಳ ಒಂದು ಚಕ್ರದ ಅನಂತರ ಮತ್ತೊಂದು ಚಕ್ರದಲ್ಲಿ ಸಾಗುತ್ತಾನೆ. ಆದರೆ ಹುಟ್ಟು-ಸಾವುಗಳ ಈ ಚಕ್ರವು ಅನಗತ್ಯ ಕೊಲೆ, ಕಗ್ಗೊಲೆ ಮತ್ತು ಯುದ್ಧಗಳನ್ನು ಸಮರ್ಥಿಸುವುದಿಲ್ಲ. ಆದರೆ ಮಾನವ ಸಮಾಜದಲ್ಲಿ ನಿಯಮ ಮತ್ತು ವ್ಯವಸ್ಥೆಯನ್ನು ರಕ್ಷಿಸಲು ಹಿಂಸೆ ಮತ್ತು ಯುದ್ಧ ಅನಿವಾರ್ಯ ಅಂಶಗಳಾಗುತ್ತವೆ.

ಕುರುಕ್ಷೇತ್ರ ಸಮರವು ಪರಮ ಪ್ರಭುವಿನ ಸಂಕಲ್ಪ; ಆದ್ದರಿಂದ ಅದು ಅನಿವಾರ್ಯ. ಧರ್ಮಕ್ಕಾಗಿ ಹೋರಾಡುವುದು ಕ್ಷತ್ರಿಯನ ಕರ್ತವ್ಯ. ಅವನು ತನ್ನ ನ್ಯಾಯವಾದ ಕರ್ತವ್ಯವನ್ನಷ್ಟೇ ಮಾಡುತ್ತಿರುವಾಗ ತನ್ನ ಬಂಧುಗಳ ಸಾವಿಗಾಗಿ ಹೆದರಬೇಕೇಕೆ? ದುಃಖಿಸಬೇಕೇಕೆ? ಪಾಪಕರ್ಮಗಳೆಂದರೆ ಅವನಿಗೆ ತುಂಬ ಭಯ; ಧರ್ಮವನ್ನು ಮುರಿದು ಅದರಿಂದ ಪಾಪಕಾರ್ಯಗಳ ಫಲಕ್ಕೆ ಅವನು ಒಳಗಾಗುವುದು ಯೋಗ್ಯವಲ್ಲ. ತನ್ನ ನ್ಯಾಯವಾದ ಕರ್ತವ್ಯವನ್ನು ಮಾಡಲು ತಪ್ಪಿಸಿಕೊಂಡರೆ ಅವನು ತನ್ನ ಬಂಧುಗಳ ಸಾವನ್ನು ತಡೆಯಲು ಸಮರ್ಥನಾಗುವುದಿಲ್ಲ. ತಪ್ಪು ಕಾರ್ಯದ ಪಥವನ್ನು ಆರಿಸಿಕೊಂಡದ್ದರಿಂದ ಅವನೇ ನೀತಿಭ್ರಷ್ಟನಾಗುತ್ತಾನೆ.

## ಶ್ಲೋಕ - 28

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ |**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ||೨೮||**

**ಅವ್ಯಕ್ತ ಆದೀನಿ**—ಪ್ರಾರಂಭದಲ್ಲಿ ಅವ್ಯಕ್ತವಾಗಿರುವ; **ಭೂತಾನಿ**—ಸೃಷ್ಟಿಯಾದ ಎಲ್ಲವೂ; **ವ್ಯಕ್ತ**—ವ್ಯಕ್ತವಾಗಿ; **ಮಧ್ಯಾನಿ**—ಮಧ್ಯದಲ್ಲಿ; **ಭಾರತ**—ಭರತ ಕುಲದವನೇ; **ಅವ್ಯಕ್ತ**—ವ್ಯಕ್ತವಾಗದ; **ನಿಧನಾನಿ**—ನಾಶಹೊಂದಿದಾಗ; **ಏವ**—ಅವೆಲ್ಲವೂ ಹಾಗೆಯೇ; **ತತ್ರ**—ಆದಕಾರಣ; **ಕಾ**—ಏನು; **ಪರಿದೇವನಾ**—ಶೋಕವು.

## ಅನುವಾದ

**ಸೃಷ್ಟಿಯಾದ ಎಲ್ಲ ಜೀವಿಗಳೂ ಮೊದಲು ಕಾಣಿಸುವುದಿಲ್ಲ, ಮಧ್ಯೆ ಕೆಲಕಾಲ ಕಾಣಿಸುತ್ತವೆ ಮತ್ತು ನಾಶವಾದ ಮೇಲೆ ಕಾಣಿಸುವುದಿಲ್ಲ. ಹೀಗಿರುವಾಗ ಶೋಕಕ್ಕೆ ಕಾರಣವೆಲ್ಲಿದೆ?**

## ಭಾವಾರ್ಥ

ತತ್ವಶಾಸ್ತ್ರಜ್ಞರಲ್ಲಿ ಎರಡು ವರ್ಗಗಳಿವೆ ಎಂದು ಒಪ್ಪೋಣ. ಒಂದು ವರ್ಗವು ಆತ್ಮದ ಅಸ್ತಿತ್ವವನ್ನು ನಂಬುತ್ತದೆ; ಇನ್ನೊಂದು ಆತ್ಮದ ಅಸ್ತಿತ್ವವನ್ನು ನಂಬುವುದಿಲ್ಲ. ಇವೆರಡು ವರ್ಗಗಳಲ್ಲಿ ಯಾವುದನ್ನು ನಾವು ಒಪ್ಪಿದರೂ ಶೋಕಕ್ಕೆ ಕಾರಣವಿಲ್ಲ. ಆತ್ಮದ ಅಸ್ತಿತ್ವವನ್ನು ನಂಬದಿರುವವರನ್ನು, ವೇದದ ಜ್ಞಾನವನ್ನು ಅನುಸರಿಸುವವರು, ನಾಸ್ತಿಕರು ಎಂದು ಕರೆಯುತ್ತಾರೆ. ವಾದಕ್ಕೋಸ್ಕರ ನಾವು ಈ ನಾಸ್ತಿಕವಾದವನ್ನು ಒಪ್ಪಿದರೂ ದುಃಖಿಸಲು ಕಾರಣವಿಲ್ಲ. ಆತ್ಮದ ಪ್ರತ್ಯೇಕ ಅಸ್ತಿತ್ವವನ್ನು ಬಿಟ್ಟರೆ ಭೌತಿಕ ಅಂಶಗಳು ಸೃಷ್ಟಿಗೆ ಮೊದಲು ಅವ್ಯಕ್ತವಾಗಿರುತ್ತವೆ. ಆಕಾಶದಿಂದ ವಾಯುವು ಉತ್ಪತ್ತಿಯಾಗುವಂತೆ, ವಾಯುವಿನಿಂದ ಅಗ್ನಿಯು ಉತ್ಪತ್ತಿಯಾಗುವಂತೆ, ಅಗ್ನಿಯಿಂದ ನೀರು ಉತ್ಪತ್ತಿಯಾಗುವಂತೆ ಮತ್ತು ನೀರಿನಿಂದ ಭೂಮಿಯು ವ್ಯಕ್ತವಾಗುವಂತೆ ಈ ಸೂಕ್ಷ್ಮ ಅವ್ಯಕ್ತ ಸ್ಥಿತಿಯಿಂದ ವ್ಯಕ್ತತೆಯು ಉಂಟಾಗುತ್ತದೆ. ಭೂಮಿಯಿಂದ ವ್ಯಕ್ತತೆಯ ನಾನಾ ಬಗೆಗಳು ಉಂಟಾಗುತ್ತವೆ. ಉದಾಹರಣೆಗೆ, ಭೂಮಿಯಿಂದ ರೂಪತಾಳುವ ಗಗನಚುಂಬಿಯನ್ನು ನೋಡಿ. ಅದನ್ನು ಒಡೆದು ಹಾಕಿದಾಗ ವ್ಯಕ್ತತೆಯು ಅವ್ಯಕ್ತವಾಗುತ್ತದೆ ಮತ್ತು ಕಟ್ಟಕಡೆಯ ಘಟ್ಟದಲ್ಲಿ ಅಣುಗಳಾಗಿ ಉಳಿಯುತ್ತದೆ. ಶಕ್ತಿಸ್ಥಾಯಿತ್ವ ನಿಯಮವು ಇದ್ದೇ ಇದೆ; ಆದರೆ ಕಾಲಗತಿಯಲ್ಲಿ ವಸ್ತುಗಳು ವ್ಯಕ್ತವಾಗುತ್ತವೆ ಮತ್ತು ಅವ್ಯಕ್ತವಾಗುತ್ತವೆ. ಇದೇ ವ್ಯತ್ಯಾಸ. ಆದುದರಿಂದ ವ್ಯಕ್ತತೆಯ ಘಟ್ಟವಾಗಲೀ, ಅವ್ಯಕ್ತತೆಯ ಘಟ್ಟವಾಗಲೀ ಶೋಕಕ್ಕೆ ಕಾರಣವೆಲ್ಲಿದೆ? ಹೇಗೋ ಏನೋ, ಅವ್ಯಕ್ತ ಸ್ಥಿತಿಯಲ್ಲಿ ಸಹ ವಸ್ತುಗಳು ನಷ್ಟವಾಗುವುದಿಲ್ಲ. ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಎಲ್ಲ ಮೂಲ ಅಂಶಗಳು ಅವ್ಯಕ್ತವಾಗೇ ಇರುತ್ತವೆ. ಮಧ್ಯದಲ್ಲಿ ಮಾತ್ರ ಅವು ವ್ಯಕ್ತವಾಗುತ್ತವೆ. ಇದರಿಂದ ಅಂತಹ ಗಣನೀಯ ಭೌತಿಕ ವ್ಯತ್ಯಾಸವೇನೂ ಆಗುವುದಿಲ್ಲ.

ಕಾಲಕ್ರಮದಲ್ಲಿ ಈ ಐಹಿಕ ದೇಹಗಳು ನಾಶವಾಗುತ್ತವೆ. (**ಅನ್ತವನ್ತ ಇಮೇ ದೇಹಾಃ**) ಆದರೆ ಆತ್ಮ ನಿತ್ಯವಾದದ್ದು (**ನಿತ್ಯಸ್ಯೋಕ್ತಾಃ ಶರೀರಿಣಃ**) ಎನ್ನುವ ವೈದಿಕ ನಿರ್ಣಯವನ್ನು ಭಗವದ್ಗೀತೆಯು ಹೇಳುತ್ತದೆ; ಇದನ್ನು ನಾವು ಒಪ್ಪಿಕೊಂಡರೆ ದೇಹವು ಒಂದು ಉಡುಪಿನಂತೆ ಎನ್ನುವುದನ್ನು ಸದಾ ನೆನಪಿಡಬೇಕು. ಉಡುಪಿನ ಬದಲಾವಣೆ ಆಯಿತೆಂದು ದುಃಖಪಡುವುದು ಏಕೆ? ನಿತ್ಯವಾದ ಆತ್ಮಕ್ಕೆ ಸಂಬಂಧಿಸಿದಂತೆ ಐಹಿಕ ಶರೀರಕ್ಕೆ ವಾಸ್ತವಿಕವಾದ ಅಸ್ತಿತ್ವವಿಲ್ಲ. ಅದು ಕನಸಿನಂತೆ. ಕನಸಿನಲ್ಲಿ ನಾವು ಆಕಾಶದಲ್ಲಿ ಹಾರಾಡುವ ಯೋಚನೆಯನ್ನು ಮಾಡಬಹುದು; ರಾಜನಂತೆ ರಥದಲ್ಲಿ ಕುಳಿತುಕೊಳ್ಳುವ ಯೋಚನೆಯನ್ನು ಮಾಡಬಹುದು. ಆದರೆ ಎಚ್ಚರಿಕೆಯಾದಾಗ

ನಾವು ಆಕಾಶದಲ್ಲಿಯೂ ಇಲ್ಲ, ರಥದಲ್ಲಿಯೂ ಕುಳಿತಿಲ್ಲ ಎನ್ನುವುದನ್ನು ಕಾಣಬಹುದು. ವೇದಜ್ಞಾನವು ಐಹಿಕ ದೇಹವು ಅಸ್ತಿತ್ವದಲ್ಲಿರುವುದಿಲ್ಲ ಎನ್ನುವ ಆಧಾರದ ಮೇಲೆ ಆತ್ಮಸಾಕ್ಷಾತ್ಕಾರಕ್ಕೆ ಪ್ರೋತ್ಸಾಹ ನೀಡುತ್ತದೆ. ಆದುದರಿಂದ, ಆತ್ಮವು ಇದೆ ಎಂದು ನಂಬಲಿ ಅಥವಾ ಇಲ್ಲ ಎಂದು ನಂಬಲಿ, ದೇಹವು ನಷ್ಟವಾಯಿತೆಂದು ದುಃಖಪಡಲು ಕಾರಣವೇ ಇಲ್ಲ.

## ಶ್ಲೋಕ - 29

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್**
**ಆಶ್ಚರ್ಯವದ್ ವದತಿ ತಥೈವ ಚಾನ್ಯಃ |**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ||೨೯||**

**ಆಶ್ಚರ್ಯವತ್**—ಆಶ್ಚರ್ಯವೆನ್ನುವಂತೆ; **ಪಶ್ಯತಿ**—ನೋಡುತ್ತಾನೆ; **ಕಶ್ಚಿತ್**—ಒಬ್ಬನು; **ಏನಮ್**—ಈ ಆತ್ಮವನ್ನು; **ಆಶ್ಚರ್ಯವತ್**—ಅಚ್ಚರಿಯೆನ್ನುವಂತೆ; **ವದತಿ**—ಹೇಳುತ್ತಾನೆ; **ತಥಾ**—ಹಾಗೆ; **ಏವ**—ಖಂಡಿತವಾಗಿಯೂ; **ಚ**—ಕೂಡ; **ಅನ್ಯಃ**—ಇನ್ನೊಬ್ಬನು; **ಆಶ್ಚರ್ಯವತ್** —ಅಚ್ಚರಿಯೆನ್ನುವಂತೆ; **ಚ**—ಕೂಡ; **ಏನಮ್**—ಈ ಆತ್ಮವನ್ನು; **ಅನ್ಯಃ**—ಇನ್ನೊಬ್ಬನು; **ಶೃಣೋತಿ**—ಕೇಳುತ್ತಾನೆ; **ಶ್ರುತ್ವಾ**—ಆಲಿಸಿ; **ಅಪಿ**—ಕೂಡ; **ಏನಮ್**—ಈ ಆತ್ಮವನ್ನು; **ವೇದ**—ತಿಳಿಯುತ್ತಾನೆ; **ನ**—ಇಲ್ಲ; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಕಶ್ಚಿತ್**—ಒಬ್ಬನು.

## ಅನುವಾದ

**ಕೆಲವರು ಆತ್ಮನನ್ನು ಆಶ್ಚರ್ಯದಿಂದ ಕಾಣುತ್ತಾರೆ; ಕೆಲವರು ಅವನನ್ನು ಆಶ್ಚರ್ಯಕರ ಎಂದು ವರ್ಣಿಸುತ್ತಾರೆ; ಮತ್ತೆ ಕೆಲವರು ಅವನು ಆಶ್ಚರ್ಯಕರ ಎನ್ನುವ ಮಾತನ್ನು ಕೇಳುತ್ತಾರೆ; ಇನ್ನು ಕೆಲವರಾದರೋ ಅವನ ವಿಷಯ ಕೇಳಿದರೂ ಒಂದಿಷ್ಟೂ ಅರ್ಥಮಾಡಿಕೊಳ್ಳಲಾರರು.**

## ಭಾವಾರ್ಥ

ಗೀತೋಪನಿಷತ್ತಿಗೆ ಬಹುಮಟ್ಟಿಗೆ ಉಪನಿಷತ್ತಿನ ತತ್ವಗಳೇ ಆಧಾರ. ಆದುದರಿಂದ ಕಠೋಪನಿಷತ್ತಿನಲ್ಲಿ ಈ ಕೆಳಗಿನ ಶ್ಲೋಕ ಕಾಣುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ (1.2.7)

**ಶ್ರವಣಯಾಪಿ ಬಹುಭಿರ್ ಯೋ ನ ಲಭ್ಯಃ**
**ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ |**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ**
**ಆಶ್ಚರ್ಯೋಽಸ್ಯ ಜ್ಞಾತಾ ಕುಶಲಾನುಶಿಷ್ಟಃ ||**

ಬೃಹತ್ ಪ್ರಾಣಿಯ ದೇಹದಲ್ಲೂ, ಬೃಹತ್ ಆಲದ ಮರದ ದೇಹದಲ್ಲೂ ಜೀವಾಣುವು ಇದೆ. ಕೇವಲ ಒಂದು ಅಂಗುಲದ ಸ್ಥಳವನ್ನು ಆಕ್ರಮಿಸುವ ಕೋಟ್ಯಂತರ ಕ್ರಿಮಿಗಳಲ್ಲೂ ಜೀವಾಣುವು ಇದೆ. ಇದು ಬಹು ಬೆರಗಿನ ಸಂಗತಿ. ಪ್ರಥಮ ಜೀವಿಯಾದ ಬ್ರಹ್ಮನಿಗೆ ಪಾಠಗಳನ್ನು ಬೋಧಿಸಿದ

ಜ್ಞಾನದ ಪರಮಾಧಿಕಾರಿಯೇ ವ್ಯಕ್ತಿಗತ ಆತ್ಮನ ವಿಸ್ಮಯಗಳನ್ನು ವಿವರಿಸಿದ್ದಾನೆ. ಆದರೂ ಅಲ್ಪವಿದ್ಯೆಯುಳ್ಳವರು ಹಾಗೂ ಸಂಯಮ ಇಲ್ಲದವರು ಅದರ ವಿಸ್ಮಯಗಳನ್ನು ಅರಿಯಲಾರರು. ಈ ಯುಗದ ಬಹುಮಂದಿಗೆ ವಸ್ತುಗಳ ಸ್ಥೂಲ ಐಹಿಕ ಪರಿಕಲ್ಪನೆಯಷ್ಟೇ ಇರುತ್ತದೆ. ಇದರಿಂದಾಗಿ ಸಣ್ಣ ಕಣವು ಇಷ್ಟು ಹಿರಿದೂ ಇಷ್ಟು ಕಿರಿದೂ ಆಗಲು ಹೇಗೆ ಸಾಧ್ಯ ಎಂದು ಅವರಿಗೆ ಅರ್ಥವಾಗುವುದಿಲ್ಲ. ಆದ್ದರಿಂದ ನಿಜವಾದ ಆತ್ಮನು ಸ್ವರೂಪದಿಂದ ಅಥವಾ ವರ್ಣನೆಯಿಂದ ಅದ್ಭುತ ಎಂದು ಜನ ಭಾವಿಸುತ್ತಾರೆ. ಅಸ್ತಿತ್ವಕ್ಕಾಗಿ ನಡೆಸುವ ಹೋರಾಟದಲ್ಲಿ ಸ್ವ ಅರಿವು ಇಲ್ಲದಿದ್ದರೆ ಎಲ್ಲ ಕ್ರಿಯೆಗಳೂ ಕಟ್ಟಕಡೆಗೆ ವಿಫಲವಾಗುತ್ತವೆ ಎನ್ನುವುದು ನಿಜ; ಆದರೂ ಬಹು ಮಂದಿ ಭೌತಿಕ ಶಕ್ತಿಯಿಂದಾಗಿ ಮಾಯೆಗೆ ಸಿಲುಕುತ್ತಾರೆ; ಇದರಿಂದ ಇಂದ್ರಿಯತೃಪ್ತಿಯ ವಿಷಯಗಳಲ್ಲಿ ಮಗ್ನರಾಗಿ ಸ್ವ ಅರಿವಿನ ಪ್ರಶ್ನೆಯನ್ನು ಅರ್ಥಮಾಡಿಕೊಳ್ಳಲು ಅವರಿಗೆ ಸಮಯವೇ ಇರುವುದಿಲ್ಲ. ಆತ್ಮವನ್ನು ಕುರಿತು ಯೋಚಿಸಬೇಕು, ಆ ಮೂಲಕ ಐಹಿಕ ದುಃಖಗಳನ್ನು ಪರಿಹರಿಸಿಕೊಳ್ಳಬೇಕು ಎಂಬುದರ ಪರಿವೆಯೇ ಪ್ರಾಯಶಃ ಅವರಿಗಿಲ್ಲ.

ಆತ್ಮನ ವಿಷಯವಾಗಿ ಆಲಿಸುವ ಪ್ರವೃತ್ತಿ ಇರುವ ಕೆಲವರು ತಮ್ಮ ಒಳ್ಳೆಯ ಗೆಳೆಯರೊಂದಿಗೆ ಉಪನ್ಯಾಸಗಳಿಗೆ ಹೋಗುತ್ತಿರಬಹುದು; ಆದರೆ ಕೆಲವೊಮ್ಮೆ ಅವರು ಪ್ರಮಾಣದ ವ್ಯತ್ಯಾಸವಿಲ್ಲದೆ ಪರಮಾತ್ಮ ಮತ್ತು ಜೀವಾತ್ಮಗಳು ಒಂದೇ ಎಂಬ ದೃಷ್ಟಿಯನ್ನು ಅಜ್ಞಾನದಿಂದ ಸ್ವೀಕರಿಸಿ ಮಾರ್ಗ ತಪ್ಪುತ್ತಾರೆ. ಪರಮಾತ್ಮ, ಜೀವಾತ್ಮ ಇವುಗಳಲ್ಲಿ ಒಂದೊಂದರ ಸ್ಥಾನ, ಒಂದೊಂದರ ಕರ್ತವ್ಯಗಳು; ಪರಸ್ಪರ ಸಂಬಂಧ, ಮತ್ತಿತರ ಎಲ್ಲ ಮುಖ್ಯ ಮತ್ತು ಗೌಣ ವಿವರಗಳನ್ನು ಸಂಪೂರ್ಣವಾಗಿ ತಿಳಿದಿರುವ ಮನುಷ್ಯನನ್ನು ಕಾಣುವುದು ಬಹು ಕಷ್ಟ. ಆತ್ಮದ ತಿಳಿವಿನಿಂದ ಸಂಪೂರ್ಣ ಫಲವನ್ನು ಪಡೆದುಕೊಂಡು, ವಿವಿಧ ದೃಷ್ಟಿಕೋನಗಳಿಂದ ಆತ್ಮನ ಸ್ಥಾನವನ್ನು ವರ್ಣಿಸಬಲ್ಲ ಮನುಷ್ಯನನ್ನು ಕಾಣುವುದು ಮತ್ತೂ ಕಷ್ಟ. ಆದರೆ ಹೇಗಾದರೂ ಆತ್ಮದ ವಿಷಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾದರೆ ಮನುಷ್ಯನ ಬದುಕು ಸಾರ್ಥಕ.

ಆತ್ಮದ ವಿಷಯವನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಸುಲಭವಾದ ಮಾರ್ಗವೆಂದರೆ, ಇತರ ಸಿದ್ಧಾಂತಗಳಿಂದ ದಾರಿ ತಪ್ಪದೇ ಪರಮಾಧಿಕಾರಿಯಾದ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಮಾತುಗಳನ್ನು ಸ್ವೀಕರಿಸುವುದು. ಶ್ರೀಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದಾಗಿ ಸ್ವೀಕರಿಸುವುದಕ್ಕೂ ಈ ಜನ್ಮದಲ್ಲಾಗಲಿ ಹಿಂದಿನ ಜನ್ಮಗಳಲ್ಲಾಗಲಿ ವಿಶೇಷವಾಗಿ ತಪಸ್ಸು ಮತ್ತು ಯಜ್ಞಗಳನ್ನು ಮಾಡಿರಬೇಕು. ಆದರೆ ಪರಿಶುದ್ಧ ಭಕ್ತನ ಅವ್ಯಾಜ ಕೃಪೆಯಿಂದ ಮಾತ್ರ ಕೃಷ್ಣನನ್ನು ಅರಿಯಬಹುದು. ಇದಕ್ಕೆ ಬೇರೆ ದಾರಿಯೇ ಇಲ್ಲ.

## ಶ್ಲೋಕ - 30

**ದೇಹೀ ನಿತ್ಯಮವಧ್ಯೋSಯಂ ದೇಹೇ ಸರ್ವಸ್ಯ ಭಾರತ |**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ||೩೦||**

**ದೇಹೀ**—ಭೌತಿಕ ಶರೀರದ ಒಡೆಯನಾದ; **ನಿತ್ಯಮ್**—ಶಾಶ್ವತವಾಗಿ; **ಅವಧ್ಯಃ**—ಕೊಲ್ಲಲ್ಪಡನು; **ಅಯಮ್**—ಈ ಆತ್ಮನು; **ದೇಹೇ**—ಶರೀರದಲ್ಲಿ; **ಸರ್ವಸ್ಯ**—ಪ್ರತಿಯೊಬ್ಬರ; **ಭಾರತ**—ಭರತ

ವಂಶಜನೇ; **ತಸ್ಮಾತ್**—ಆದ್ದರಿಂದ; **ಸರ್ವಾಣಿ**—ಎಲ್ಲ; **ಭೂತಾನಿ**—ಜೀವಿಗಳನ್ನು ಕುರಿತು (ಹುಟ್ಟಿದ); **ನ** —ಎಂದಿಗೂ ಇಲ್ಲ; **ತ್ವಮ್**—ನೀನು; **ಶೋಚಿತುಮ್**—ದುಃಖಿಸಲು; **ಅರ್ಹಸಿ**—ಅರ್ಹನಾಗಿದ್ದೀಯೆ.

### ಅನುವಾದ

**ಭರತವಂಶಜನಾದ ಅರ್ಜುನನೇ, ಈ ದೇಹದಲ್ಲಿ ವಾಸಿಸುವವನನ್ನು ಎಂದೂ ಕೊಲ್ಲಲು ಸಾಧ್ಯವಿಲ್ಲ. ಆದುದರಿಂದ ನೀನು ಯಾವ ಜೀವಿಗಾಗಿಯೂ ದುಃಖಿಸುವ ಕಾರಣವಿಲ್ಲ.**

### ಭಾವಾರ್ಥ

ಅವಿಕಾರಿಯಾದ ಆತ್ಮವನ್ನು ಕುರಿತ ಬೋಧನೆಯ ಅಧ್ಯಾಯವನ್ನು ಭಗವಂತನು ಈಗ ಮುಕ್ತಾಯಗೊಳಿಸುತ್ತಾನೆ. ನಿತ್ಯವಾದ ಆತ್ಮವನ್ನು ಹಲವು ವಿಧಗಳಲ್ಲಿ ವರ್ಣಿಸಿ ಶ್ರೀಕೃಷ್ಣನು ಆತ್ಮಕ್ಕೆ ಸಾವಿಲ್ಲ ಮತ್ತು ದೇಹವು ಅಶಾಶ್ವತ ಎನ್ನುವುದನ್ನು ತೋರಿಸಿಕೊಡುತ್ತಾನೆ. ಆದುದರಿಂದ ಕ್ಷತ್ರಿಯನಾದ ಅರ್ಜುನನು ತನ್ನ ತಾತ ಮತ್ತು ಗುರುಗಳು - ಭೀಷ್ಮ ಮತ್ತು ದ್ರೋಣರು - ಸಾಯುತ್ತಾರೆ ಎಂಬ ಭಯದಿಂದ ಕರ್ತವ್ಯಚ್ಯುತನಾಗಬಾರದು. ಶ್ರೀಕೃಷ್ಣನ ಅಧಿಕಾರವಾಣಿಯಿಂದ ನಾವು ಕಲಿಯಬೇಕಾದದ್ದು ಆತ್ಮವೇ ಇಲ್ಲ ಎನ್ನುವುದಲ್ಲ; ಐಹಿಕ ಬೆಳವಣಿಗೆಯ ಒಂದು ನಿರ್ದಿಷ್ಟ ಘಟ್ಟದಲ್ಲಿ ರಾಸಾಯನಿಕ ವಸ್ತುಗಳ ಪರಸ್ಪರ ಕ್ರಿಯೆಯಿಂದ ಜೀವದ ಲಕ್ಷಣಗಳು ಸೃಷ್ಟಿಯಾಗುತ್ತವೆ ಎಂದೂ ಅಲ್ಲ; ಆದರೆ ಐಹಿಕ ದೇಹದಿಂದ ಭಿನ್ನವಾದ ಆತ್ಮವಿದೆ ಎಂದು ನಂಬಬೇಕು. ಆತ್ಮವು ನಿತ್ಯವಾದುದು ಎಂದ ಮಾತ್ರಕ್ಕೆ ಹಿಂಸೆಗೆ ಪ್ರೋತ್ಸಾಹವಿದೆ ಎಂದಲ್ಲ. ಯುದ್ಧಕಾಲದಲ್ಲಿ ವಾಸ್ತವವಾಗಿ ಅದರ ಅಗತ್ಯವಿದ್ದಾಗ ಹಿಂಸೆಯ ಉತ್ಸಾಹವನ್ನು ಅದು ಕುಗ್ಗಿಸುವುದಿಲ್ಲ. ಆದರೆ ಆ ಅಗತ್ಯವನ್ನು ಭಗವಂತನ ಸಮ್ಮತಿಗೆ ಅನುಗುಣವಾಗಿ ನಿರ್ಧರಿಸಬೇಕಲ್ಲದೆ ಮನಸ್ಸು ಬಂದಂತಲ್ಲ.

## ಶ್ಲೋಕ - 31

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಮ್ಪಿತುಮರ್ಹಸಿ |**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ||೩೧||**

**ಸ್ವಧರ್ಮಮ್**—ಸ್ವಧರ್ಮತತ್ವಗಳನ್ನು; **ಅಪಿ**—ಕೂಡ; **ಚ**—ನಿಜವಾಗಿಯೂ; **ಅವೇಕ್ಷ್ಯ**—ಗಮನಿಸಿ; **ನ**—ಎಂದಿಗೂ ಇಲ್ಲ; **ವಿಕಮ್ಪಿತುಮ್**—ಹಿಂಜರಿಯಲು; **ಅರ್ಹಸಿ**—ಅರ್ಹನಾಗಿದ್ದೀಯೆ; **ಧರ್ಮ್ಯಾತ್**—ಧರ್ಮತತ್ವಗಳಿಗಾಗಿ; **ಹಿ**—ನಿಜವಾಗಿ; **ಯುದ್ಧಾತ್**—ಯುದ್ಧಕ್ಕಿಂತ; **ಶ್ರೇಯಃ**—ಉತ್ತಮವಾದ ಕೆಲಸವು; **ಅನ್ಯತ್**—ಇನ್ನಾವುದು; **ಕ್ಷತ್ರಿಯಸ್ಯ**—ಕ್ಷತ್ರಿಯನ; **ನ ವಿದ್ಯತೇ**—ಇರುವುದಿಲ್ಲ.

### ಅನುವಾದ

**ನೀನು ಕ್ಷತ್ರಿಯನಾಗಿ ಸ್ವಧರ್ಮವನ್ನು ಪರಿಗಣಿಸಿದಾಗ ಧರ್ಮಕ್ಕಾಗಿ ಹೋರಾಡುವುದಕ್ಕಿಂತ ಶ್ರೇಯಸ್ಕರವಾದ ಕಾರ್ಯವಿನ್ನೊಂದಿಲ್ಲ ಎನ್ನುವುದನ್ನು ನೀನು ತಿಳಿದುಕೊಳ್ಳಬೇಕು. ಆದುದರಿಂದ**

ಹಿಂಜರಿಕೆಗೆ ಅವಕಾಶವೇ ಇಲ್ಲ.

## ಭಾವಾರ್ಥ

ಸಾಮಾಜಿಕ ಆಡಳಿತದ ನಾಲ್ಕು ವರ್ಗಗಳಲ್ಲಿ ಒಳ್ಳೆಯ ಆಡಳಿತಕ್ಕೆ ಅಗತ್ಯವಾದ ಎರಡನೆಯ ವರ್ಗವನ್ನು ಕ್ಷತ್ರಿಯ ಎಂದು ಕರೆಯುತ್ತಾರೆ. ಕ್ಷತ್ ಎಂದರೆ ತೊಂದರೆ, ತ್ರಾಯತೆ ಎಂದರೆ ರಕ್ಷಿಸುವುದು. ಆದುದರಿಂದ ತೊಂದರೆಯಿಂದ ರಕ್ಷಿಸುವವನು ಕ್ಷತ್ರಿಯ. ಕ್ಷತ್ರಿಯರಿಗೆ ಕಾಡಿನಲ್ಲಿ ಕೊಲ್ಲಲು ಶಿಕ್ಷಣ ಕೊಟ್ಟಿರುತ್ತಿದ್ದರು. ಕ್ಷತ್ರಿಯನು ಕಾಡಿಗೆ ಹೋಗಿ ಹುಲಿಗೆ ಎದುರೆದುರಿಗೆ ಸವಾಲು ಹಾಕಿ ಕತ್ತಿ ಹಿಡಿದು ಹೋರಾಡುತ್ತಿದ್ದ. ಹುಲಿಯು ಸತ್ತಾಗ ಅದಕ್ಕೆ ರಾಜಯೋಗ್ಯ ಅಂತ್ಯಸಂಸ್ಕಾರವನ್ನು ಮಾಡುತ್ತಿದ್ದರು. ಈ ಪದ್ಧತಿಯನ್ನು ಜಯಪುರದ ರಾಜರು ಇಂದಿಗೂ ಅನುಸರಿಸುತ್ತಾರೆ. ಕ್ಷತ್ರಿಯರಿಗೆ ಸವಾಲೊಡ್ಡಿ ಕೊಲ್ಲುವುದರಲ್ಲಿ ಶಿಕ್ಷಣ ಕೊಡಲಾಗುತ್ತದೆ. ಏಕೆಂದರೆ ಧಾರ್ಮಿಕ ಹಿಂಸೆಯು ಹಲವೊಮ್ಮೆ ಅಗತ್ಯವಾಗುತ್ತದೆ. ಆದುದರಿಂದ ಕ್ಷತ್ರಿಯರು ನೇರವಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸುವಂತಿಲ್ಲ. ರಾಜಕೀಯದಲ್ಲಿ ಅಹಿಂಸೆಯು ವ್ಯವಹಾರಜಾಣ್ಮೆ ಎನ್ನಿಸಿಕೊಳ್ಳಬಹುದು. ಆದರೆ ಅದು ಎಂದೂ ಒಂದು ಮುಖ್ಯ ಅಂಶವಲ್ಲ, ತತ್ವವಲ್ಲ. ಧರ್ಮಶಾಸ್ತ್ರಗಳಲ್ಲಿ ಹೀಗೆ ಹೇಳಿದೆ —

ಆಹವೇಷು ಮಿಥೋಽನ್ಯೋನ್ಯಂ ಜಿಘಾಂಸನ್ತೋ ಮಹೀಕ್ಷಿತಃ |
ಯುದ್ಧಮಾನಾಃ ಪರಂ ಶಕ್ತ್ಯಾ ಸ್ವರ್ಗಂ ಯಾನ್ತಿ ಅಪರಾಙ್ಮುಖಾಃ ||

ಯಜ್ಞೇಷು ಪಶವೋ ಬ್ರಹ್ಮನ್ ಹನ್ಯನ್ತೇ ಸತತಂ ದ್ವಿಜೈಃ |
ಸಂಸ್ಕೃತಾಃ ಕಿಲ ಮನ್ತ್ರೈಶ್ಚ ತೇಽಪಿ ಸ್ವರ್ಗಮ್ ಅವಾಪ್ನುವನ್ ||

"ಯಜ್ಞಕುಂಡದಲ್ಲಿ ಪ್ರಾಣಿಗಳನ್ನು ಬಲಿಯಾಗಿ ಕೊಟ್ಟು ಬ್ರಾಹ್ಮಣರು ಸ್ವರ್ಗಲೋಕಕ್ಕೆ ಹೋಗುತ್ತಾರೆ; ಇದೇ ರೀತಿಯಲ್ಲಿ ತನ್ನಲ್ಲಿ ಮಾತ್ಸರ್ಯವಿರುವ ಮತ್ತೊಬ್ಬ ಕ್ಷತ್ರಿಯನೊಡನೆ ರಣರಂಗದಲ್ಲಿ ಹೋರಾಡುವ ಕ್ಷತ್ರಿಯನು ಮರಣಾನಂತರ ಸ್ವರ್ಗಕ್ಕೇರಲು ಅರ್ಹನಾಗುತ್ತಾನೆ." ಆದುದರಿಂದ ಧಾರ್ಮಿಕ ತತ್ವಗಳಿಗಾಗಿ ರಣರಂಗದಲ್ಲಿ ಕೊಲ್ಲುವುದನ್ನಾಗಲೀ, ಯಜ್ಞಕುಂಡದಲ್ಲಿ ಪ್ರಾಣಿಗಳನ್ನು ಕೊಲ್ಲುವುದನ್ನಾಗಲೀ ಹಿಂಸೆಯ ಕಾರ್ಯಗಳೆಂದು ಪರಿಗಣಿಸುವುದಿಲ್ಲ. ಏಕೆಂದರೆ ಇವುಗಳಲ್ಲಿ ಅಡಕವಾಗಿರುವ ಧಾರ್ಮಿಕ ತತ್ವಗಳಿಂದ ಎಲ್ಲರಿಗೂ ಉಪಕಾರವಾಗುತ್ತದೆ. ಯಜ್ಞದಲ್ಲಿ ಬಲಿಯಾದ ಪ್ರಾಣಿಯು ಒಂದು ರೂಪದಿಂದ ಮತ್ತೊಂದು ರೂಪಕ್ಕೆ ಕ್ರಮವಾಗಿ ಸಾಗುವ ವಿಕಸನ ಪ್ರಕ್ರಿಯೆಗೆ ಒಳಗಾಗದೆ ನೇರವಾಗಿ ಮನುಷ್ಯಜನ್ಮವನ್ನು ಪಡೆಯುತ್ತದೆ. ಯುದ್ಧಭೂಮಿಯಲ್ಲಿ ಸತ್ತ ಕ್ಷತ್ರಿಯರು, ಯಜ್ಞದಲ್ಲಿ ಬಲಿಯನ್ನು ಅರ್ಪಿಸಿದ ಬ್ರಾಹ್ಮಣರು, ಸ್ವರ್ಗಲೋಕಕ್ಕೆ ಹೋಗುತ್ತಾರೆ.

ಸ್ವಧರ್ಮದಲ್ಲಿ ಎರಡು ವಿಧ. ಮನುಷ್ಯನಾದವನು ಮುಕ್ತಿಯನ್ನು ಪಡೆಯುವುದಕ್ಕಾಗಿ ತನ್ನ ವಿಶಿಷ್ಟ ದೇಹದ ಕರ್ತವ್ಯವನ್ನು ಧಾರ್ಮಿಕ ತತ್ವಗಳಿಗೆ ಅನುಗುಣವಾಗಿ ಮುಕ್ತಿಯು ದೊರಕುವವರೆಗೆ ಪಾಲಿಸಬೇಕು. ಮುಕ್ತಿಯು ದೊರಕಿದ ಅನಂತರ ಮನುಷ್ಯನ ಸ್ವಧರ್ಮವು ಆಧ್ಯಾತ್ಮಿಕವಾಗುತ್ತದೆ; ಅದು ಐಹಿಕ ಶರೀರದ ಪರಿಕಲ್ಪನೆಗೆ ಒಳಪಡುವುದಿಲ್ಲ. ಬದುಕಿನ ದೈಹಿಕ ಗ್ರಹಿಕೆಯಲ್ಲಿ ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ಅವರವರಿಗೆ ನಿಯೋಜಿಸಿದ ಸ್ವಧರ್ಮಗಳಿವೆ. ಈ

ಸ್ವಧರ್ಮಗಳು ಅನಿವಾರ್ಯವಾದವು. ಸ್ವಧರ್ಮವನ್ನು ಭಗವಂತನೇ ವಿಧಿಸುತ್ತಾನೆ; ಇದನ್ನು ನಾಲ್ಕನೆಯ ಅಧ್ಯಾಯದಲ್ಲಿ ಸ್ಪಷ್ಟಮಾಡಲಾಗುವುದು. ದೇಹದ ನೆಲೆಯಲ್ಲಿ ಸ್ವಧರ್ಮಕ್ಕೆ **ವರ್ಣಾಶ್ರಮಧರ್ಮ** ಎಂದು ಹೆಸರು. ಇದು ಮಾನವನ ಆಧ್ಯಾತ್ಮಿಕ ಅರಿವಿಗೆ ಸೋಪಾನ. ವರ್ಣಾಶ್ರಮಧರ್ಮ ಎಂದರೆ ದೇಹವು ಯಾವ ಪ್ರಕೃತಿಗುಣಗಳ ಪ್ರಭಾವದಲ್ಲಿದೆಯೋ ಅವುಗಳಿಗೆ ಅನುಗುಣವಾದ ಕರ್ತವ್ಯ. ಯಾವುದೇ ಕರ್ಮಕ್ಷೇತ್ರದಲ್ಲಿ ಮೇಲಿನ ಅಧಿಕಾರಿಗಳ ಅನುಜ್ಞೆಯ ಪ್ರಕಾರ ಕರ್ತವ್ಯಪಾಲನೆ ಮಾಡುವುದು ಮನುಷ್ಯನನ್ನು ಬದುಕಿನಲ್ಲಿ ಉನ್ನತ ಸ್ಥಾನಕ್ಕೆ ಏರಿಸುತ್ತದೆ.

## ಶ್ಲೋಕ - 32

**ಯಾದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಮ್ ॥೩೨॥**

**ಯದೃಚ್ಛಯಾ**—ತಾನಾಗಿಯೇ; **ಚ**—ಕೂಡ; **ಉಪಪನ್ನಮ್**—ಆಗಮಿಸಿದ; **ಸ್ವರ್ಗ**—ಸ್ವರ್ಗಲೋಕಗಳ; **ದ್ವಾರಮ್**—ಬಾಗಿಲನ್ನು; **ಅಪಾವೃತಮ್**—ವಿಶಾಲವಾಗಿ ತೆರೆದ; **ಸುಖಿನಃ**—ಬಹಳ ಸುಖಿಗಳಾದ; **ಕ್ಷತ್ರಿಯಾಃ**—ಕ್ಷತ್ರಿಯರು; **ಪಾರ್ಥ**—ಪೃಥೆಯ ಮಗನೇ; **ಲಭನ್ತೇ**—ಸಾಧಿಸುತ್ತಾರೆ; **ಯುದ್ಧಮ್**—ಯುದ್ಧವನ್ನು; **ಈದೃಶಮ್**—ಈ ರೀತಿಯ.

### ಅನುವಾದ

**ಹೇ ಪಾರ್ಥ, ಇಂತಹ ಯುದ್ಧಮಾಡುವ ಅವಕಾಶಗಳು ತಾವಾಗಿ ಬಂದು ಸ್ವರ್ಗಲೋಕದ ಬಾಗಿಲುಗಳನ್ನು ಯಾವ ಕ್ಷತ್ರಿಯರಿಗಾಗಿ ತೆರೆಯುತ್ತವೆಯೋ ಅಂತಹ ಕ್ಷತ್ರಿಯರು ಸುಖಿಗಳು.**

### ಭಾವಾರ್ಥ

ಅರ್ಜುನನು, "ಈ ಹೋರಾಟದಲ್ಲಿ ನನಗೆ ಯಾವ ಒಳಿತೂ ಕಾಣುವುದಿಲ್ಲ. ಇದು ನರಕದಲ್ಲಿ ನಿತ್ಯವಾಸವನ್ನು ಉಂಟುಮಾಡುತ್ತದೆ", ಎಂದು ಹೇಳಿದ. ಜಗತ್ತಿನ ಪರಮಗುರುವಾಗಿ ಕೃಷ್ಣನು ಅರ್ಜುನನ ಈ ಮನೋಧರ್ಮವನ್ನು ಖಂಡಿಸುತ್ತಾನೆ. ಅರ್ಜುನನ ಇಂತಹ ಮಾತುಗಳು ಅಜ್ಞಾನದಿಂದ ಮಾತ್ರ ಬಂದವು. ಸ್ವಧರ್ಮಪಾಲನೆಯಲ್ಲಿ ಅವನು ಅಹಿಂಸೆಯಿಂದ ನಡೆದುಕೊಳ್ಳಲು ಬಯಸಿದ. ಕ್ಷತ್ರಿಯನು ಯುದ್ಧಭೂಮಿಯಲ್ಲಿದ್ದು ಅಹಿಂಸೆಯಿಂದ ನಡೆದುಕೊಳ್ಳುವುದೆಂದರೆ ಅದು ಮೂರ್ಖರ ಸಿದ್ಧಾಂತ. ಮಹರ್ಷಿಯೂ ವ್ಯಾಸದೇವರ ತಂದೆಯೂ ಆದ ಪರಾಶರರು ರಚಿಸಿದ ಪರಾಶರಸ್ಮೃತಿ ಯಲ್ಲಿ ಹೀಗೆ ಹೇಳಿದೆ —

**ಕ್ಷತ್ರಿಯೋ ಹಿ ಪ್ರಜಾ ರಕ್ಷನ್ ಶಸ್ತ್ರಪಾಣಿಃ ಪ್ರದಣ್ಡಯನ್ ।**
**ನಿರ್ಜಿತ್ಯಪರಸೈನ್ಯಾದಿ ಕ್ಷಿತಿಂ ಧರ್ಮೇಣ ಪಾಲಯೇತ್ ॥**

"ಪ್ರಜೆಗಳನ್ನು ಎಲ್ಲ ಬಗೆಯ ಕಷ್ಟಗಳಿಂದ ರಕ್ಷಿಸುವುದೇ ಕ್ಷತ್ರಿಯನ ಧರ್ಮ. ಆದುದರಿಂದ ಅವನು ಶಾಸನ ಮತ್ತು ವ್ಯವಸ್ಥೆಗಳಿಗೆ ಸಂಬಂಧಿಸಿದ ಪ್ರಸಂಗಗಳಲ್ಲಿ ಸೂಕ್ತವಾಗಿ ಹಿಂಸೆಯನ್ನು ಬಳಸಬೇಕು. ಶತ್ರುರಾಜರ ಸೈನ್ಯಗಳನ್ನು ಆತನು ಗೆಲ್ಲಬೇಕು. ಹೀಗೆ ಧಾರ್ಮಿಕ ತತ್ವಗಳಿಗೆ ಅನುಗುಣವಾಗಿ ಪ್ರಪಂಚವನ್ನು ಆಳಬೇಕು."

ಎಲ್ಲ ದೃಷ್ಟಿಕೋನಗಳಿಂದಲೂ ಅರ್ಜುನನು ಯುದ್ಧಮಾಡದೆ ಇರುವುದಕ್ಕೆ ಕಾರಣವೇ ಇಲ್ಲ. ಅವನು ಶತ್ರುವನ್ನು ಸೋಲಿಸಿದರೆ ರಾಜ್ಯವನ್ನು ಅನುಭವಿಸಬಹುದು; ಯುದ್ಧದಲ್ಲಿ ಸತ್ತರೆ ಅವನು ಸ್ವರ್ಗಲೋಕಕ್ಕೆ ಏರುತ್ತಾನೆ; ಅದರ ಬಾಗಿಲುಗಳು ಅವನಿಗಾಗಿ ತೆರೆದುಕೊಂಡಿವೆ. ಏನೇ ಆದರೂ ಯುದ್ಧಮಾಡುವುದರಿಂದ ಅವನಿಗೆ ಲಾಭವೇ.

## ಶ್ಲೋಕ - 33

**ಅಥ ಚೇತ್ತ್ವಮಿಮಂ ಧರ್ಮ್ಯಂ ಸನ್ಗ್ರಾಮಂ ನ ಕರಿಷ್ಯಸಿ |**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ||೩೩||**

**ಅಥ**—ಆದ್ದರಿಂದ; **ಚೇತ್**—ಒಂದುವೇಳೆ; **ತ್ವಮ್**—ನೀನು; **ಇಮಂ**—ಈ; **ಧರ್ಮ್ಯಮ್**—ಧಾರ್ಮಿಕ ಕರ್ತವ್ಯವಾದ; **ಸನ್ಗ್ರಾಮಮ್**—ಯುದ್ಧವನ್ನು; **ನ ಕರಿಷ್ಯಸಿ**—ಮಾಡದಿದ್ದರೆ; **ತತಃ**—ಆಗ; **ಸ್ವಧರ್ಮಮ್**—ನಿನ್ನ ಧಾರ್ಮಿಕ ಕರ್ತವ್ಯವನ್ನು; **ಕೀರ್ತಿಮ್**—ಕೀರ್ತಿಯನ್ನು; **ಚ**—ಕೂಡ; **ಹಿತ್ವಾ**—ಕಳೆದುಕೊಂಡು; **ಪಾಪಮ್**—ಪಾಪವನ್ನು; **ಅವಾಪ್ಸ್ಯಸಿ**—ಗಳಿಸುತ್ತೀಯೆ.

## ಅನುವಾದ

**ನೀನೇನಾದರೂ ಯುದ್ಧಮಾಡಬೇಕಾದ ನಿನ್ನ ಸ್ವಧರ್ಮವನ್ನು ಪಾಲಿಸದೆ ಇದ್ದರೆ ನಿನ್ನ ಕರ್ತವ್ಯವನ್ನು ಅಲಕ್ಷ್ಯಮಾಡಿದ ಪಾಪಕ್ಕೊಳಗಾಗುತ್ತೀಯೆ. ಯೋಧನಾಗಿ ನಿನ್ನ ಕೀರ್ತಿಯನ್ನು ಕಳೆದುಕೊಳ್ಳುತ್ತೀಯೆ.**

## ಭಾವಾರ್ಥ

ಅರ್ಜುನನು ಪ್ರಸಿದ್ಧ ಯೋಧ. ಶಿವನೂ ಸೇರಿದಂತೆ ಹಲವರು ಮಹಾ ದೇವತೆಗಳೊಂದಿಗೆ ಹೋರಾಡಿ ಕೀರ್ತಿಯನ್ನು ಗಳಿಸಿದ್ದ. ಬೇಡನ ರೂಪದಲ್ಲಿ ಬಂದ ಶಿವನೊಂದಿಗೆ ಹೋರಾಡಿ ಅವನನ್ನು ಸೋಲಿಸಿ ಅರ್ಜುನನು ಅವನನ್ನು ಸಂತೋಷಗೊಳಿಸಿದ. ಅದರ ಫಲವಾಗಿ ಪಾಶುಪತಾಸ್ತ್ರವನ್ನು ಪಡೆದ ಅವನು ಅಸಾಧಾರಣ ಯೋಧನೆಂದು ಎಲ್ಲರಿಗೂ ತಿಳಿದಿತ್ತು. ದ್ರೋಣಾಚಾರ್ಯರು ಸಹ ಅವನನ್ನು ಹರಸಿ ಅವನು ತನ್ನ ಗುರುವನ್ನೇ ಕೊಲ್ಲುವಂತಹ ವಿಶಿಷ್ಟವಾದ ಅಸ್ತ್ರವನ್ನು ಕೊಟ್ಟರು. ಆದುದರಿಂದ ಅವನು ಸಾಕು ತಂದೆಯಾದ ಇಂದ್ರನೂ ಸೇರಿದಂತೆ ಅನೇಕ ಮಹಾ ಅಧಿಕಾರಯುತರಿಂದ ತನ್ನ ಶೌರ್ಯವನ್ನು ಕುರಿತು ಪ್ರಶಂಸೆಯನ್ನು ಪಡೆದಿದ್ದ. ಈಗ ಯುದ್ಧಭೂಮಿಯಿಂದ ಹಿಮ್ಮೆಟ್ಟಿದರೆ ಅವನು ಕ್ಷತ್ರಿಯನಾಗಿ ಸ್ವಧರ್ಮವನ್ನು ಅಲಕ್ಷ್ಯಮಾಡುವುದು ಮಾತ್ರವಲ್ಲ, ತನ್ನ ಕೀರ್ತಿಯನ್ನೆಲ್ಲ ಕಳೆದುಕೊಳ್ಳುವನು ಮತ್ತು ನರಕಕ್ಕೆ ರಾಜಮಾರ್ಗವು ಅವನ ಮುಂದೆ ತೆರೆದುಕೊಳ್ಳುತ್ತದೆ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ, ಅವನು ಯುದ್ಧಮಾಡಿದರೆ ನರಕಕ್ಕೆ ಹೋಗುವುದಿಲ್ಲ; ಯುದ್ಧಮಾಡದಿದ್ದರೆ ನರಕಕ್ಕೆ ಹೋಗುತ್ತಾನೆ.

## ಶ್ಲೋಕ - 34

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಮ್ |**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ||೩೪||**

**ಅಕೀರ್ತಿಮ್**—ಅಪಕೀರ್ತಿಯನ್ನು ಕುರಿತು; **ಚ**—ಕೂಡ; **ಅಪಿ**—ಅದಕ್ಕೂ ಹೆಚ್ಚಾಗಿ; **ಭೂತಾನಿ**—ಎಲ್ಲ ಜನರು; **ಕಥಯಿಷ್ಯನ್ತಿ**—ಆಡಿಕೊಳ್ಳುತ್ತಾರೆ; **ತೇ**—ನಿನ್ನ; **ಅವ್ಯಯಾಮ್**—ಶಾಶ್ವತವಾದ; **ಸಂಭಾವಿತಸ್ಯ**—ಗೌರವಾನ್ವಿತವ್ಯಕ್ತಿಗೆ; **ಚ**—ಕೂಡ; **ಅಕೀರ್ತಿಃ**—ಅಪಕೀರ್ತಿಯು; **ಮರಣಾತ್** —ಮರಣಕ್ಕಿಂತ; **ಅತಿರಿಚ್ಯತೇ**—ಅಧಿಕವಾದುದಾಗುತ್ತದೆ.

## ಅನುವಾದ

**ಜನರು ಎಂದೆಂದಿಗೂ ನಿನ್ನ ಅಪಕೀರ್ತಿಯನ್ನು ಕುರಿತು ಮಾತನಾಡುತ್ತಾರೆ. ಗೌರವಾರ್ಹನಾದವನಿಗೆ ಅಪಕೀರ್ತಿಯು ಸಾವಿಗಿಂತ ಕೇಡು.**

## ಭಾವಾರ್ಥ

ಅರ್ಜುನನಿಗೆ ಕೃಷ್ಣನು ಸ್ನೇಹಿತ ಮತ್ತು ತತ್ವದರ್ಶಿ. ತಾನು ಯುದ್ಧ ಮಾಡುವುದಿಲ್ಲ ಎನ್ನುವ ಅರ್ಜುನನ ವರ್ತನೆಯನ್ನು ಕುರಿತು ಶ್ರೀಕೃಷ್ಣನು ಈಗ ಅಂತಿಮ ತೀರ್ಮಾನವನ್ನು ಕೊಡುತ್ತಾನೆ. ಭಗವಂತನು ಹೀಗೆ ಹೇಳುತ್ತಾನೆ, "ಅರ್ಜುನ, ಯುದ್ಧ ಪ್ರಾರಂಭವಾಗುವ ಮೊದಲೇ ನೀನು ಯುದ್ಧಭೂಮಿಯಿಂದ ಹೊರಟುಹೋದರೆ ಜನರು ನಿನ್ನನ್ನು ಹೇಡಿ ಎಂದು ಕರೆಯುವರು. ಜನರು ನಿನ್ನ ವಿಷಯವಾಗಿ ಕೆಟ್ಟಮಾತನ್ನಾಡಬಹುದು. ಯುದ್ಧಭೂಮಿಯಿಂದ ಓಡಿಹೋಗಿ ನಿನ್ನ ಜೀವವನ್ನು ಉಳಿಸಿಕೊಳ್ಳುತ್ತೀ ಎಂದು ನೀನು ಭಾವಿಸಿದ್ದರೆ ಅದಕ್ಕಿಂತ ಯುದ್ಧದಲ್ಲಿ ನೀನು ಸಾಯುವುದೇ ಉತ್ತಮ ಎಂದು ನನ್ನ ಬುದ್ಧಿವಾದ. ನಿನ್ನಂತೆ ಗೌರವಾನ್ವಿತನಾದ ಮನುಷ್ಯನಿಗೆ ಅಪಕೀರ್ತಿಯು ಸಾವಿಗಿಂತ ಕೇಡು. ಆದುದರಿಂದ ನೀನು ಸಾವಿನ ಭಯದಿಂದ ಓಡಿಹೋಗಬಾರದು; ಯುದ್ಧದಲ್ಲಿ ಸಾಯುವುದೇ ಉತ್ತಮ. ನೀನು ಯುದ್ಧದಲ್ಲಿ ಸತ್ತರೆ ನನ್ನ ಸ್ನೇಹವನ್ನು ದುರುಪಯೋಗ ಮಾಡಿಕೊಂಡ ಅಪಕೀರ್ತಿಯೂ ಬರುವುದಿಲ್ಲ; ಸಮಾಜದಲ್ಲಿ ನಿನ್ನ ಪ್ರತಿಷ್ಠೆಯನ್ನೂ ಕಳೆದುಕೊಳ್ಳುವುದಿಲ್ಲ."

ಆದ್ದರಿಂದ ಭಗವಂತನು ಅರ್ಜುನನಿಗೆ ಕೊಡುವ ಕಡೆಯ ತೀರ್ಮಾನವೆಂದರೆ ಅವನು ಹಿಮ್ಮೆಟ್ಟಬಾರದು; ಆದರೆ ಯುದ್ಧದಲ್ಲಿ ಮಡಿಯಬೇಕು.

## ಶ್ಲೋಕ - 35

**ಭಯಾದ್ ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ||**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ||೩೫||**

**ಭಯಾತ್**—ಹೆದರಿಕೆಯಿಂದ; **ರಣಾತ್**—ರಣರಂಗದಿಂದ; **ಉಪರತಮ್**— ಬಿಟ್ಟು ಹೋದವನೆಂದು; **ಮಂಸ್ಯಂತೇ**—ಪರಿಗಣಿಸುವರು; **ತ್ವಾಮ್**—ನಿನ್ನನ್ನು; **ಮಹಾರಥಾಃ**—ಮಹಾರಥರು; **ಯೇಷಾಮ್**—ಯಾರಿಗೆ; **ಚ**—ಕೂಡ; **ತ್ವಮ್**—ನೀನು; **ಬಹುಮತಃ**—ಮಹಾಮಾನ್ಯನು; **ಭೂತ್ವಾ**—ಆಗಿದ್ದು; **ಯಾಸ್ಯಸಿ**—ಹೋಗುತ್ತೀಯೆ; **ಲಾಘವಮ್**— ಹಗುರವಾಗಿ.

## ಅನುವಾದ

**ನಿನ್ನ ವಿಷಯದಲ್ಲಿ ಅತ್ಯಂತ ಗೌರವನ್ನಿಟ್ಟುಕೊಂಡಿರುವ ಮಹಾರಥರು ನೀನು ಭಯದಿಂದಲೇ ರಣಭೂಮಿಯನ್ನು ಬಿಟ್ಟುಹೋದೆ ಎಂದು ಭಾವಿಸುತ್ತಾರೆ ಮತ್ತು ನಿನ್ನ ವಿಷಯವಾಗಿ ಹಗುರವಾಗಿ ಪರಿಗಣಿಸುತ್ತಾರೆ.**

## ಭಾವಾರ್ಥ

ಶ್ರೀಕೃಷ್ಣನು ತನ್ನ ತೀರ್ಮಾನವನ್ನು ಮುಂದುವರಿಸಿ ಅರ್ಜುನನಿಗೆ ಹೀಗೆ ಹೇಳುತ್ತಾನೆ, "ದುರ್ಯೋಧನ, ಕರ್ಣರಂತಹ ಮಹಾರಥರೂ ಇತರ ಸಮಕಾಲೀನರೂ, ನೀನು ನಿನ್ನ ಸಹೋದರರ ಮತ್ತು ತಾತನ ವಿಷಯದಲ್ಲಿ ಅನುಕಂಪಪಟ್ಟು ಯುದ್ಧಭೂಮಿಯನ್ನು ಬಿಟ್ಟುಹೋದೆ ಎಂದು ಭಾವಿಸುತ್ತಾರೆ ಎಂದುಕೊಳ್ಳಬೇಡ. ಪ್ರಾಣಭಯದಿಂದ ನೀನು ಹೊರಟುಹೋದೆ ಎಂದು ಯೋಚಿಸುತ್ತಾರೆ. ಆದ್ದರಿಂದ ನಿನ್ನ ವಿಷಯದಲ್ಲಿ ಅವರ ಗೌರವಭಾವನೆಯು ಮಣ್ಣುಪಾಲಾಗುತ್ತದೆ."

## ಶ್ಲೋಕ - 36

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯನ್ತಿ ತವಾಹಿತಾಃ |**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ||೩೬||**

**ಅವಾಚ್ಯ**—ತರವಲ್ಲದ; **ವಾದಾನ್**—ಶಬ್ದಗಳನ್ನು; **ಚ**—ಕೂಡ; **ಬಹೂನ್**—ಅನೇಕ; **ವದಿಷ್ಯಂತಿ**—ಆಡುತ್ತಾರೆ; **ತವ**—ನಿನ್ನ; **ಅಹಿತಾಃ**—ಶತ್ರುಗಳು; **ನಿನ್ದತಃ**—ನಿಂದಿಸುತ್ತಿರುವಾಗ; **ತವ**—ನಿನ್ನ; **ಸಾಮರ್ಥ್ಯಮ್**—ಸಾಮರ್ಥ್ಯವನ್ನು; **ತತಃ**—ಅದಕ್ಕಿಂತ; **ದುಃಖತರಮ್**—ಅತಿದುಃಖಕರವು; **ನು**—ಅಲ್ಲದೆ; **ಕಿಮ್**—ಇನ್ನೇನಿದೆ.

## ಅನುವಾದ

**ನಿನ್ನ ಶತ್ರುಗಳು ನಿನ್ನ ವಿಷಯವಾಗಿ ಅವಾಚ್ಯ ಶಬ್ದಗಳನ್ನಾಡುವರು; ನಿನ್ನ ಸಾಮರ್ಥ್ಯವನ್ನು ನಿಂದಿಸುವರು. ನಿನಗೆ ಇದಕ್ಕಿಂತ ಹೆಚ್ಚು ದುಃಖಕರವಾದದ್ದು ಏನುಂಟು?**

## ಭಾವಾರ್ಥ

ಪ್ರಾರಂಭದಲ್ಲಿ ಅರ್ಜುನನು ಅನಗತ್ಯವಾಗಿ ಅನುಕಂಪದ ಮಾತುಗಳನ್ನು ಆಡಿದುದರಿಂದ ಶ್ರೀಕೃಷ್ಣನಿಗೆ ತುಂಬ ಅಚ್ಚರಿಯಾಯಿತು. ಈಗ ಶ್ರೀಕೃಷ್ಣನು ಅರ್ಜುನನ ಹುಸಿ ಅನುಕಂಪದ ವಿರುದ್ಧ ತನ್ನ ಮಾತುಗಳು ಸರಿ ಎಂದು ಸ್ಪಷ್ಟವಾದ ಮಾತುಗಳಲ್ಲಿ ತೋರಿಸಿಕೊಡುತ್ತಾನೆ.

## ಶ್ಲೋಕ - 37

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ |**
**ತಸ್ಮಾದುತ್ತಿಷ್ಠ ಕೌನ್ತೇಯ ಯುದ್ಧಾಯ ಕೃತನಿಶ್ಚಯಃ ||೩೭||**

**ಹತಃ**—ಕೊಲ್ಲಲ್ಪಟ್ಟು; **ವಾ**—ಅಥವಾ; **ಪ್ರಾಪ್ಸ್ಯಸಿ**—ಪಡೆಯುತ್ತೀಯೆ; **ಸ್ವರ್ಗಮ್**—ಸ್ವರ್ಗದ ರಾಜ್ಯವನ್ನು; **ಜಿತ್ವಾ**—ಗೆಲ್ಲುವುದರಿಂದ; **ವಾ**—ಅಥವಾ; **ಭೋಕ್ಷ್ಯಸೇ**—ಭೋಗಿಸುತ್ತೀಯೆ; **ಮಹೀಮ್**—ಜಗತ್ತನ್ನು; **ತಸ್ಮಾತ್**—ಆದಕಾರಣ; **ಉತ್ತಿಷ್ಠ**—ಎದ್ದೇಳು; **ಕೌನ್ತೇಯ**— ಕುಂತಿಯ ಮಗನೇ; **ಯುದ್ಧಾಯ**—ಯುದ್ಧಮಾಡಲು; **ಕೃತ**—ಮಾಡಲ್ಪಟ್ಟ; **ನಿಶ್ಚಯಃ**—ನಿರ್ಧಾರವುಳ್ಳವನಾಗಿ.

## ಅನುವಾದ

**ಕುಂತಿಯ ಮಗನಾದ ಅರ್ಜುನನೇ, ನೀನು ಯುದ್ಧದಲ್ಲಿ ಮಡಿದು ಸ್ವರ್ಗವನ್ನು ಸೇರುತ್ತೀಯೆ ಅಥವಾ ಗೆದ್ದು ಭೂಮಿಯ ಮೇಲೆ ರಾಜ್ಯವನ್ನು ಅನುಭವಿಸುತ್ತೀಯೆ. ಆದ್ದರಿಂದ ದೃಢನಿಶ್ಚಯಮಾಡಿ ಎದ್ದೇಳು, ಯುದ್ಧಮಾಡು.**

## ಭಾವಾರ್ಥ

ಅರ್ಜುನನ ಪಕ್ಷಕ್ಕೆ ವಿಜಯ ದೊರಕುವುದೆಂಬುದು ನಿಶ್ಚಯವಲ್ಲದಿದ್ದರೂ ಅವನು ಯುದ್ಧಮಾಡಲೇಬೇಕು. ಏಕೆಂದರೆ ಅವನು ಅಲ್ಲಿ ಮಡಿದರೆ ಸ್ವರ್ಗಕ್ಕೆ ಏರುವನು.

## ಶ್ಲೋಕ - 38

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ |**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ||೩೮||**

**ಸುಖ**—ಸುಖದಲ್ಲಿ; **ದುಃಖೇ**—ದುಃಖದಲ್ಲಿ; **ಸಮೇ**—ಸಮಭಾವದಲ್ಲಿ; **ಕೃತ್ವಾ**—ಇರುವಂತೆ ಮಾಡಿ; **ಲಾಭ ಅಲಾಭೌ**—ಲಾಭ ಮತ್ತುನಷ್ಟಗಳಲ್ಲಿ; **ಜಯ ಅಜಯೌ**—ಗೆಲುವು ಮತ್ತು ಸೋಲುಗಳೆರಡರಲ್ಲಿ; **ತತಃ**—ಅನಂತರ; **ಯುದ್ಧಾಯ**—ಯುದ್ಧಮಾಡುವುದಕ್ಕಾಗಿ; **ಯುಜ್ಯಸ್ವ**— ತೊಡಗು (ಹೋರಾಡು); **ನ**—ಎಂದಿಗೂ ಇಲ್ಲ; **ಏವಮ್**—ಈ ರೀತಿಯಲ್ಲಿ; **ಪಾಪಮ್**— ಪಾಪವನ್ನು; **ಅವಾಪ್ಸ್ಯಸಿ**—ನೀನು ಹೊಂದುವೆ.

## ಅನುವಾದ

**ಸುಖದುಃಖಗಳನ್ನೂ, ಲಾಭನಷ್ಟಗಳನ್ನೂ, ಜಯಾಪಜಯಗಳನ್ನೂ ಪರಿಗಣಿಸದೆ, ಯುದ್ಧಮಾಡಲೆಂದೇ ಯುದ್ಧಮಾಡು. ಹೀಗೆ ಮಾಡಿದರೆ ನಿನಗೆ ಪಾಪದ ಲೇಪವಿಲ್ಲ.**

## ಭಾವಾರ್ಥ

ಶ್ರೀಕೃಷ್ಣನಿಗೆ ಯುದ್ಧವಾಗಬೇಕೆಂದೇ ಅಪೇಕ್ಷೆ. ಆದುದರಿಂದ ಈಗ ಅವನು ಅರ್ಜುನನು ಯುದ್ಧಮಾಡುವುದಕ್ಕಾಗಿಯೇ ಹೋರಾಡಬೇಕೆಂದು ನೇರವಾಗಿ ಹೇಳುತ್ತಾನೆ. ಕೃಷ್ಣಪ್ರಜ್ಞೆಯ ಕಾರ್ಯಗಳಲ್ಲಿ ಸುಖದುಃಖ, ಲಾಭನಷ್ಟ, ಜಯ ಅಪಜಯಗಳ ಪರಿಗಣನೆಯೇ ಇಲ್ಲ. ಕೃಷ್ಣನಿಗಾಗಿ ಮಾತ್ರವೇ ಎಲ್ಲವನ್ನೂ ಮಾಡಬೇಕು ಎನ್ನುವುದೇ ಅಲೌಕಿಕ ಪ್ರಜ್ಞೆ; ಆದುದರಿಂದ ಐಹಿಕ ಕರ್ಮಗಳಿಗೆ ಫಲವು ಇರುವುದಿಲ್ಲ. ಸಾತ್ವಿಕ ಗುಣದಿಂದಾಗಲಿ ರಜೋಗುಣದಿಂದಾಗಲಿ ತನ್ನ ಇಂದ್ರಿಯ ತೃಪ್ತಿಗಾಗಿ

ಕರ್ಮ ಮಾಡುವವನು ಒಳ್ಳೆಯ ಅಥವಾ ಕೆಟ್ಟ ಫಲಕ್ಕೆ ಒಳಗಾಗುತ್ತಾನೆ. ಆದರೆ ಕೃಷ್ಣಪ್ರಜ್ಞೆಯ ಕರ್ಮಗಳಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡವನಿಗೆ ಯಾವ ಹಂಗೂ ಇಲ್ಲ, ಯಾವ ಋಣವೂ ಇಲ್ಲ; ಇವೆಲ್ಲ ಸಾಮಾನ್ಯ ಕರ್ಮಗಳಲ್ಲಿ ತೊಡಗಿದಾಗ ಮಾತ್ರ ಘಟಿಸುತ್ತವೆ. ಹೀಗೆ ಹೇಳಿದೆ —

**ದೇವರ್ಷಿ ಭೂತಾಪ್ತ ನೃಣಾಂ ಪಿತ್ಯಾಣಾಂ**
**ನ ಕಿನ್ಕರೋ ನಾಯಮ್ ಋಣೀ ಚ ರಾಜನ್ |**
**ಸರ್ವಾತ್ಮನಾ ಯಃ ಶರಣಂ ಶರಣ್ಯಮ್**
**ಗತೋ ಮುಕುನ್ದಂ ಪರಿಹೃತ್ಯ ಕರ್ತಮ್ ||**

"ಉಳಿದೆಲ್ಲ ಕರ್ತವ್ಯಗಳನ್ನೂ ಬಿಟ್ಟು ಕೃಷ್ಣನಿಗೆ, ಮುಕುಂದನಿಗೆ ಶರಣಾದವನಿಗೆ ಯಾರ ಋಣವೂ ಇಲ್ಲ, ಯಾರ ಹಂಗೂ ಇಲ್ಲ; ದೇವತೆಗಳು, ಋಷಿಗಳು, ಒಟ್ಟಿನಲ್ಲಿ ಜನತೆ, ಬಂಧುಗಳು, ಮಾನವಕುಲ, ಪಿತೃಗಳು ಯಾರ ಹಂಗೂ ಇಲ್ಲ, ಋಣವೂ ಇಲ್ಲ" (ಭಾಗವತ 11.5.41). ಈ ಶ್ಲೋಕದಲ್ಲಿ ಕೃಷ್ಣನು ಅರ್ಜುನನಿಗೆ ಇದರ ಸೂಚನೆಯನ್ನು ಕೊಡುತ್ತಿದ್ದಾನೆ; ಮುಂದಿನ ಶ್ಲೋಕಗಳಲ್ಲಿ ಇದನ್ನು ಇನ್ನೂ ಸ್ಪಷ್ಟವಾಗಿ ನಿರೂಪಿಸಲಾಗಿದೆ.

## ಶ್ಲೋಕ - 39

**ಏಷಾ ತೇಽಭಿಹಿತಾ ಸಾಙ್ಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು |**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ||೩೯||**

**ಏಷಾ**—ಈ ಎಲ್ಲ; **ತೇ**—ನಿನಗೆ; **ಅಭಿಹಿತಾ**—ವಿವರಿಸಲ್ಪಟ್ಟ; **ಸಾಙ್ಖ್ಯೇ**—ವಿಶ್ಲೇಷಣಾತ್ಮಕ ಅಧ್ಯಯನದಲ್ಲಿ; **ಬುದ್ಧಿಃ**—ಬುದ್ಧಿಯು; **ಯೋಗೇ**—ಕಾಮ್ಯಫಲವಿಲ್ಲದ ಕಾರ್ಯದಲ್ಲಿ; **ತು**—ಆದರೆ; **ಇಮಾಮ್**—ಇದನ್ನು; **ಶೃಣು**—ಕೇಳು; **ಬುದ್ಧ್ಯಾ**—ಬುದ್ಧಿಶಕ್ತಿಯಿಂದ; **ಯುಕ್ತಃ**—ಒಡಗೂಡಿದವನಾಗಿ; **ಯಯಾ**—ಯಾವ; **ಪಾರ್ಥ**—ಪೃಥೆಯ ಮಗನೇ; **ಕರ್ಮಬನ್ಧಮ್** — ಪ್ರತಿಕ್ರಿಯೆಯ ಬಂಧನದಿಂದ; **ಪ್ರಹಾಸ್ಯಸಿ**—ಬಿಡುಗಡೆಹೊಂದುತ್ತೀಯೆ.

## ಅನುವಾದ

**ಈವರೆಗೆ ನಾನು ಈ ಜ್ಞಾನವನ್ನು ನಿನಗೆ ವಿಶ್ಲೇಷಣಾತ್ಮಕವಾಗಿ ತಿಳಿಸಿಕೊಟ್ಟಿದ್ದೇನೆ. ಈಗ ನಾನು ಇದನ್ನು ಯೋಗದ ರೀತಿಯಲ್ಲಿ ವಿವರಿಸುತ್ತೇನೆ, ಕೇಳು. ಪಾರ್ಥನೆ, ನೀನು ಇಂತಹ ಜ್ಞಾನದಿಂದ ಕರ್ಮದಲ್ಲಿ ತೊಡಗಿದರೆ ಕರ್ಮಬಂಧದಿಂದ ಮುಕ್ತನಾಗುವೆ.**

## ಭಾವಾರ್ಥ

ವೇದದ ನಿಘಂಟಾದ ನಿರುಕ್ತಿಯ ಪ್ರಕಾರ **ಸಂಖ್ಯಾ** ಎಂದರೆ ವಿಷಯವನ್ನು ವಿವರವಾಗಿ ಹೇಳುವುದು. **ಸಾಂಖ್ಯ** ಎಂದರೆ ಆತ್ಮದ ನಿಜವಾದ ಸ್ವರೂಪವನ್ನು ವಿವರಿಸುವ ದರ್ಶನ. ಯೋಗವು ಇಂದ್ರಿಯ ನಿಗ್ರಹವನ್ನು ವಿಧಿಸುತ್ತದೆ. ಯುದ್ಧಮಾಡುವುದಿಲ್ಲ ಎನ್ನುವ ಅರ್ಜುನನ ನಿರ್ಧಾರಕ್ಕೆ

ಇಂದ್ರಿಯ ತೃಪ್ತಿಯೇ ಆಧಾರ. ತನ್ನ ದಾಯಾದಿಗಳು, ಸೋದರರು ಆದ ಧೃತರಾಷ್ಟ್ರನ ಮಕ್ಕಳನ್ನು ಸೋಲಿಸಿ ರಾಜ್ಯದ ಅಧಿಕಾರವನ್ನು ಅನುಭವಿಸುವುದಕ್ಕಿಂತ ತನ್ನ ಬಂಧುಗಳನ್ನು ಕೊಲ್ಲದಿದ್ದರೆ ತಾನು ಸುಖವಾಗಿರುವೆನೆಂದು ಅರ್ಜುನನು ಭಾವಿಸಿದ; ಆದುದರಿಂದ ತನ್ನ ಮುಖ್ಯ ಕರ್ತವ್ಯವನ್ನು ಮರೆತು ಅವನು ಯುದ್ಧ ವಿಮುಖನಾಗಲು ಬಯಸಿದ. ಎರಡು ರೀತಿಗಳಲ್ಲೂ ಮೂಲಕಾರಣಗಳು ಇಂದ್ರಿಯ ತೃಪ್ತಿಯೇ. ಅವರನ್ನು ಸೋಲಿಸುವುದರಿಂದ ಬರುವ ಸಂತೋಷ ಮತ್ತು ಬಂಧುಗಳು ಬದುಕಿರುವುದನ್ನು ನೋಡುವುದರಿಂದಾಗುವ ಸಂತೋಷ ಎರಡೂ ವಿವೇಕವನ್ನೂ ಕರ್ತವ್ಯವನ್ನೂ ಬಲಿಕೊಟ್ಟಾದರೂ ಇಂದ್ರಿಯತೃಪ್ತಿ ಪಡೆಯಬೇಕೆಂಬ ಆಧಾರದ ಮೇಲೆ ನಿಂತಿವೆ. ಆದುದರಿಂದ ಕೃಷ್ಣನು ಅರ್ಜುನನಿಗೆ ತನ್ನ ತಾತನ ದೇಹವನ್ನು ಕೊಲ್ಲುವುದರಿಂದ ಅವನು ನಿಜವಾದ ಆತ್ಮವನ್ನು ಕೊಲ್ಲುವುದಿಲ್ಲ ಎಂದು ವಿವರಿಸಲು ಬಯಸಿದ. ಅವನು ಈ ರೀತಿ ವಿವರಿಸಿದ — ಭಗವಂತನೂ ಸೇರಿದಂತೆ ಎಲ್ಲ ವ್ಯಕ್ತಿಗಳೂ ನಿತ್ಯರಾದವರು; ನಾವೆಲ್ಲ ಶಾಶ್ವತವಾಗಿ ಪ್ರತ್ಯೇಕ ಪ್ರತ್ಯೇಕ ಆತ್ಮಗಳಾದ್ದರಿಂದ ಅವರೆಲ್ಲ ಹಿಂದೆ ಪ್ರತ್ಯೇಕ ವ್ಯಕ್ತಿಗಳಾಗಿದ್ದರು, ಈಗ ಪ್ರತ್ಯೇಕ ವ್ಯಕ್ತಿಗಳಾಗಿದ್ದಾರೆ ಮತ್ತು ಭವಿಷ್ಯದಲ್ಲೂ ಪ್ರತ್ಯೇಕ ವ್ಯಕ್ತಿಗಳಾಗಿ ಉಳಿಯುತ್ತಾರೆ. ದೇಹವೆನ್ನುವ ಉಡುಪನ್ನು ನಾವು ಬೇರೆಬೇರೆ ರೀತಿಗಳಲ್ಲಿ ಬದಲಾಯಿಸುತ್ತೇವೆ. ಆದರೆ ವಾಸ್ತವವಾಗಿ ಪ್ರಾಪಂಚಿಕ ಉಡುಪಿನ ಬಂಧನದಿಂದ ಮುಕ್ತರಾದ ಮೇಲೂ ನಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುತ್ತೇವೆ. ಆತ್ಮ ಮತ್ತು ದೇಹಗಳ ವಿಶ್ಲೇಷಣಾತ್ಮಕ ಅಧ್ಯಯನವನ್ನು ಶ್ರೀಕೃಷ್ಣನು ಬಹು ಸ್ಪಷ್ಟವಾಗಿ ವಿವರಿಸಿದ್ದಾನೆ. ಆತ್ಮ ಮತ್ತು ದೇಹಗಳನ್ನು ಬೇರೆಬೇರೆ ದೃಷ್ಟಿಗಳಿಂದ ಕಾಣುವ ಈ ವಿವರಣಾತ್ಮಕ ಜ್ಞಾನವನ್ನು ನಿರುಕ್ತಿ ನಿಘಂಟಿಗನುಗುಣವಾಗಿ ಸಾಂಖ್ಯ ಎಂದು ಕರೆದಿದೆ. ಈ ಸಾಂಖ್ಯಕ್ಕೂ ನಾಸ್ತಿಕನಾದ ಕಪಿಲನ ಸಾಂಖ್ಯಸಿದ್ಧಾಂತಕ್ಕೂ ಏನೇನೂ ಸಂಬಂಧವಿಲ್ಲ. ಮೋಸಗಾರ ಕಪಿಲನ ಸಾಂಖ್ಯ ಪ್ರತಿಪಾದನೆಗೆ ಎಷ್ಟೋ ಮೊದಲು ನಿಜವಾದ ಕಪಿಲದೇವ ಇದನ್ನು ತನ್ನ ತಾಯಿ ದೇವಹೂತಿಗೆ ಶ್ರೀಮದ್ಭಾಗವತದಲ್ಲಿ ವಿವರಿಸಿದ್ದ; ಈ ಕಪಿಲದೇವನು ಶ್ರೀಕೃಷ್ಣನ ಅವತಾರ. ಪುರುಷನು, ಎಂದರೆ ಭಗವಂತನು, ಕ್ರಿಯಾಶೀಲನಾದವನು ಮತ್ತು ಪ್ರಕೃತಿಯನ್ನು ವೀಕ್ಷಿಸಿ ಸೃಷ್ಟಿಮಾಡುತ್ತಾನೆ ಎಂದು ಅವನು ಸ್ಪಷ್ಟವಾಗಿ ವಿವರಿಸಿದ್ದಾನೆ. ಇದನ್ನು ವೇದಗಳೂ ಗೀತೆಯೂ ಒಪ್ಪುತ್ತವೆ. ಭಗವಂತನು ಪ್ರಕೃತಿಯನ್ನು ವೀಕ್ಷಿಸಿದ, ಅದನ್ನು ಸೂಕ್ಷ್ಮ ಜೀವಾತ್ಮಗಳಿಂದ ತುಂಬಿದ ಎಂಬುದನ್ನು ವೇದಗಳಲ್ಲಿನ ವರ್ಣನೆ ಸೂಚಿಸುತ್ತದೆ. ಈ ಎಲ್ಲ ವ್ಯಕ್ತಿಗಳು ಐಹಿಕಜಗತ್ತಿನಲ್ಲಿ ಇಂದ್ರಿಯತೃಪ್ತಿಗಾಗಿ ಕೆಲಸಮಾಡುತ್ತಿದ್ದಾರೆ. ಭೌತಿಕ ಶಕ್ತಿಯ ಮಾಂತ್ರಿಕತೆಯಿಂದ ತಾವು ಸುಖಿಗಳು ಎಂದು ಭಾವಿಸಿದ್ದಾರೆ. ಜೀವಿಯು ಭಗವಂತನೊಡನೆ ಒಂದಾಗಲು ಬಯಸಿದಾಗ ಈ ಮನೋಧರ್ಮವನ್ನು ಮುಕ್ತಿಯ ಕಡೆಯ ಹಂತಕ್ಕೆ ಎಳೆದಂತಾಗುತ್ತದೆ. ಇದು ಮಾಯೆಯ ಕಡೆಯ ಬಲೆ; ಇಂದ್ರಿಯತೃಪ್ತಿಯ ಭ್ರಮೆ. ಲೆಕ್ಕವಿಲ್ಲದಷ್ಟು ಜನ್ಮಗಳಲ್ಲಿ ಇಂತಹ ಇಂದ್ರಿಯತೃಪ್ತಿಯ ಚಟುವಟಿಕೆಗಳಲ್ಲಿ ತೊಡಗಿದ ಅನಂತರವೇ ಒಂದು ಶ್ರೇಷ್ಠ ಆತ್ಮವು ಶ್ರೀಕೃಷ್ಣನಿಗೆ ಅಥವಾ ವಾಸುದೇವನಿಗೆ ತನ್ನನ್ನು ಸಮರ್ಪಿಸಿಕೊಳ್ಳುತ್ತದೆ. ಹೀಗೆ ಪರಮಸತ್ಯದ ಅನ್ವೇಷಣೆಯನ್ನು ಪೂರ್ಣಗೊಳಿಸುತ್ತದೆ.

ಆಗಲೇ ಅರ್ಜುನನು ತನ್ನನ್ನು ಕೃಷ್ಣನಿಗೆ ಸಮರ್ಪಿಸಿಕೊಂಡು ಅವನನ್ನು ತನ್ನ ಗುರುವನ್ನಾಗಿ ಸ್ವೀಕರಿಸಿದ್ದಾನೆ. **ಶಿಷ್ಯಸ್ತೇऽಹಂ ಶಾಧಿಮಾಂ ತ್ವಾಂ ಪ್ರಪನ್ನಮ್.** ಇದರ ಪರಿಣಾಮವಾಗಿ ಕೃಷ್ಣನು ಈಗ ಅವನಿಗೆ ಬುದ್ಧಿಯೋಗ ಅಥವಾ ಕರ್ಮಯೋಗದ ಕಾರ್ಯವಿಧಾನದ ವಿಷಯ ಹೇಳುತ್ತಾನೆ. ಬುದ್ಧಿಯೋಗ ಅಥವಾ ಕರ್ಮಯೋಗ ಎಂದರೆ ಭಗವಂತನ ಇಂದ್ರಿಯತೃಪ್ತಿಗಾಗಿಯೇ ಭಕ್ತಿಯಿಂದ

ಸೇವೆಮಾಡುವುದು. ಈ ಬುದ್ಧಿಯೋಗವನ್ನು ಹತ್ತನೆಯ ಅಧ್ಯಾಯದ ಹತ್ತನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಿದೆ; ಬುದ್ಧಿಯೋಗವೆಂದರೆ ಪ್ರತಿಯೊಬ್ಬರ ಹೃದಯದಲ್ಲಿ ಪರಮಾತ್ಮನಾಗಿ ಪೀಠಸ್ಥನಾಗಿರುವ ಭಗವಂತನೊಡನೆ ನೇರವಾದ ಸಂಪರ್ಕ. ಆದರೆ ಭಕ್ತಿಸೇವೆಯಲ್ಲಿ ಅಥವಾ ಆಧ್ಯಾತ್ಮಿಕ ಸೇವೆಯಲ್ಲಿ, ಎಂದರೆ ಕೃಷ್ಣಪ್ರಜ್ಞೆಯಲ್ಲಿ ನಿಷ್ಠನಾಗಿರುವವನು ಭಗವಂತನ ವಿಶೇಷ ಕೃಪೆಯಿಂದ ಬುದ್ಧಿಯೋಗದ ಈ ಸ್ಥಿತಿಯನ್ನು ತಲಪುತ್ತಾನೆ. ದಿವ್ಯಪ್ರೇಮದಿಂದ ಭಕ್ತಿಸೇವೆಯಲ್ಲಿ ಸದಾ ನಿರತರಾಗಿರುವವರಿಗೆ ಮಾತ್ರ ಪ್ರೇಮಭಕ್ತಿಯ ಪರಿಶುದ್ಧ ಜ್ಞಾನವನ್ನು ತಾನು ಅನುಗ್ರಹಿಸುವುದಾಗಿ ಭಗವಂತನು ಹೇಳುತ್ತಾನೆ. ಈ ರೀತಿಯಲ್ಲಿ ಭಕ್ತನು ಭಗವಂತನ ನಿತ್ಯಸುಖದ ಸಾಮ್ರಾಜ್ಯದಲ್ಲಿ ಅವನನ್ನು ಸುಲಭವಾಗಿ ಸೇರಬಹುದು.

ಹೀಗೆ ಈ ಶ್ಲೋಕದಲ್ಲಿ ಪ್ರಸ್ತಾಪಿಸಿರುವ ಬುದ್ಧಿಯೋಗವು ಭಗವಂತನ ಭಕ್ತಿಪೂರ್ವಕ ಸೇವೆ. ಇಲ್ಲಿ ಬಳಸಿರುವ ಸಾಂಖ್ಯ ಪದಕ್ಕೂ ಮೋಸಗಾರ ಕಪಿಲನು ವಿವರಿಸಿದ ನಾಸ್ತಿಕವಾದದ ಸಾಂಖ್ಯಯೋಗಕ್ಕೂ ಸಂಬಂಧವಿಲ್ಲ. ಆದ್ದರಿಂದ ಇಲ್ಲಿ ಹೇಳಿರುವ ಸಾಂಖ್ಯಯೋಗಕ್ಕೂ ನಾಸ್ತಿಕವಾದದ ಸಾಂಖ್ಯಕ್ಕೂ ಸಂಬಂಧವಿದೆ ಎಂದು ತಪ್ಪುತಿಳಿದುಕೊಳ್ಳಬಾರದು. ನಾಸ್ತಿಕ ಸಾಂಖ್ಯವಾದಕ್ಕೆ ಆ ಕಾಲದಲ್ಲಿ ಯಾವುದೇ ಪ್ರಭಾವವಿರಲಿಲ್ಲ; ಅಂತಹ ನಾಸ್ತಿಕ ಊಹೆಯ ತತ್ವಚಿಂತನೆಯನ್ನು ಶ್ರೀಕೃಷ್ಣನು ಪ್ರಸ್ತಾಪಿಸಲು ಹೋಗುತ್ತಿರಲಿಲ್ಲ. ನಿಜವಾದ ಸಾಂಖ್ಯವನ್ನು ಕಪಿಲದೇವನು ಶ್ರೀಮದ್ಭಾಗವತದಲ್ಲಿ ವಿವರಿಸಿದ್ದಾನೆ. ಆದರೆ ಆ ಸಾಂಖ್ಯಕ್ಕೂ ಇಲ್ಲಿ ಹೇಳುತ್ತಿರುವ ವಿಷಯಗಳಿಗೂ ಸಂಬಂಧವಿಲ್ಲ. ಇಲ್ಲಿ ಸಾಂಖ್ಯವೆಂದರೆ ದೇಹ ಮತ್ತು ಆತ್ಮಗಳ ವಿಶ್ಲೇಷಣಾತ್ಮಕ ವರ್ಣನೆ. ಅರ್ಜುನನನ್ನು ಬುದ್ಧಿಯೋಗ ಅಥವಾ ಭಕ್ತಿಯೋಗಕ್ಕೆ ಕರೆತರುವುದಕ್ಕೋಸ್ಕರ ಶ್ರೀಕೃಷ್ಣನು ಆತ್ಮದ ವಿಶ್ಲೇಷಣಾತ್ಮಕ ವಿವರಣೆಯನ್ನು ನೀಡಿದನು. ಆದುದರಿಂದ ಶ್ರೀಕೃಷ್ಣನ ಸಾಂಖ್ಯವೂ ಭಾಗವತದಲ್ಲಿ ನಿರೂಪಿಸಿರುವ ಕಪಿಲನ ಸಾಂಖ್ಯವೂ ಒಂದೇ. ಇದೆಲ್ಲ ಭಕ್ತಿಯೋಗವೇ. ಆದುದರಿಂದ ಶ್ರೀಕೃಷ್ಣನು ಕಡಮೆ ಬುದ್ಧಿ ಇರುವ ಮನುಷ್ಯರು ಮಾತ್ರ ಸಾಂಖ್ಯಯೋಗ ಮತ್ತು ಭಕ್ತಿಯೋಗದ ನಡುವೆ ವ್ಯತ್ಯಾಸ ಕಾಣುತ್ತಾರೆ ಎಂದು ಹೇಳಿದ **(ಸಾಂಖ್ಯಯೋಗೌ ಪೃಥಗ್‌ಬಾಲಾಃ ಪ್ರವದನ್ತಿ ನ ಪಣ್ಡಿತಾಃ).**

ನಾಸ್ತಿಕವಾದದ ಸಾಂಖ್ಯಯೋಗಕ್ಕೂ ಭಕ್ತಿಯೋಗಕ್ಕೂ ಸಂಬಂಧವಿಲ್ಲ. ಆದರೂ ಬುದ್ಧಿಯಿಲ್ಲದವರು ಭಗವದ್ಗೀತೆಯಲ್ಲಿ ನಾಸ್ತಿಕವಾದದ ಸಾಂಖ್ಯಯೋಗವನ್ನು ಪ್ರಸ್ತಾಪಿಸಿದೆ ಎಂದು ಹೇಳುತ್ತಾರೆ.

ಬುದ್ಧಿಯೋಗ ಎಂದರೆ ಕೃಷ್ಣಪ್ರಜ್ಞೆಯಲ್ಲಿ ಕಾರ್ಯನಿರತರಾಗುವುದು ಎಂದರ್ಥ ಎನ್ನುವುದನ್ನು ತಿಳಿಯಬೇಕು; ಭಕ್ತಿಸೇವೆಯ ಪರಿಪೂರ್ಣ ಆನಂದ ಮತ್ತು ತಿಳುವಳಿಕೆಯಲ್ಲಿ ಕಾರ್ಯ ಮಾಡಬೇಕು. ತನ್ನ ಕೆಲಸವು ಎಷ್ಟೇ ಕಠಿಣವಾಗಿರಲಿ ಭಗವಂತನ ತೃಪ್ತಿಗಾಗಿ ಮಾತ್ರವೇ ಕೆಲಸ ಮಾಡುವವನು ಬುದ್ಧಿಯೋಗದ ಸೂತ್ರಗಳಿಗೆ ಅನುಗುಣವಾಗಿ ಕೆಲಸ ಮಾಡುತ್ತಾನೆ; ಆದುದರಿಂದ ಸದಾ ಅಲೌಕಿಕ ಆನಂದದಲ್ಲಿರುತ್ತಾನೆ. ಇಂತಹ ಅಲೌಕಿಕ ಕಾರ್ಯಮಗ್ನತೆಯಿಂದ, ಭಗವಂತನ ಕೃಪೆಯಿಂದ ಮನುಷ್ಯನಿಗೆ ತಾನಾಗಿಯೇ ಅಲೌಕಿಕ ಅರಿವಿನ ಲಭ್ಯವಾಗುತ್ತದೆ. ಆದುದರಿಂದ ಅವನು ಜ್ಞಾನಕ್ಕಾಗಿ ಬೇರೆ ರೀತಿಗಳಲ್ಲಿ ಶ್ರಮಪಡದಿದ್ದರೂ ಅವನಿಗೆ ಸಂಪೂರ್ಣ ಮುಕ್ತಿ ದೊರಕುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಕಾರ್ಯನಿರತರಾಗುವುದಕ್ಕೂ ಕರ್ಮಫಲಕ್ಕಾಗಿ

ಕಾರ್ಯಮಾಡುವುದಕ್ಕೂ, ಅದರಲ್ಲಿಯೂ ಸಾಂಸಾರಿಕ ಅಥವಾ ಪ್ರಾಪಂಚಿಕ ಸುಖವನ್ನು ಪಡೆಯುವುದಕ್ಕಾಗಿ ಇಂದ್ರಿಯ ತೃಪ್ತಿಗಾಗಿ ಮಾಡುವ ಕೆಲಸಕ್ಕೂ, ಬಹಳ ವ್ಯತ್ಯಾಸವಿದೆ. ಆದುದರಿಂದ ನಾವು ಮಾಡುವ ಕರ್ಮದ ಅಲೌಕಿಕ ಗುಣವೇ **ಬುದ್ಧಿಯೋಗ.**

## ಶ್ಲೋಕ - 40

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

**ನ**—ಅಲ್ಲಿ ಇಲ್ಲ; **ಇಹ**—ಈ ಯೋಗದಲ್ಲಿ; **ಅಭಿಕ್ರಮ**—ಪ್ರಯತ್ನದಲ್ಲಿ; **ನಾಶಃ**—ನಷ್ಟವು; **ಅಸ್ತಿ**—ಇದೆ; **ಪ್ರತ್ಯವಾಯಃ**—ಕುಗ್ಗುವಿಕೆಯ; **ನ ವಿದ್ಯತೇ**—ಇರುವುದಿಲ್ಲ; **ಸು ಅಲ್ಪಮ್**—ಒಂದು ಸ್ವಲ್ಪ ಭಾಗ; **ಅಪಿ**—ಕೂಡ; **ಅಸ್ಯ**—ಈ; **ಧರ್ಮಸ್ಯ**—ಧರ್ಮದ; **ತ್ರಾಯತೇ**—ದಾಟಿಸುತ್ತದೆ; **ಮಹತಃ**—ಬಹುದೊಡ್ಡದಾದ; **ಭಯಾತ್**—ಅಪಾಯದಿಂದ.

## ಅನುವಾದ

**ಈ ಪರಿಶ್ರಮದಲ್ಲಿ ನಷ್ಟವಾಗಲಿ ಕುಗ್ಗುವುದಾಗಲಿ ಇಲ್ಲ. ಈ ಮಾರ್ಗದಲ್ಲಿ ಸಾಧಿಸುವ ಸ್ವಲ್ಪ ಪ್ರಗತಿಯೂ ಮನುಷ್ಯನನ್ನು ಮಹಾಭಯದಿಂದ ಕಾಪಾಡುತ್ತದೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದು ಅಥವಾ ಇಂದ್ರಿಯತೃಪ್ತಿಯ ನಿರೀಕ್ಷಣೆಯಿಲ್ಲದೆ ಕೃಷ್ಣನ ಉಪಯೋಗಕ್ಕಾಗಿ ಕೆಲಸ ಮಾಡುವುದು ಕರ್ಮದ ಅತ್ಯುನ್ನತ ಆಧ್ಯಾತ್ಮಿಕ ಲಕ್ಷಣ. ಇಂತಹ ಕರ್ಮದ ಅಲ್ಪ ಪ್ರಾರಂಭಕ್ಕೂ ಅಡ್ಡಿಯುಂಟಾಗುವುದಿಲ್ಲ; ಈ ಅಲ್ಪಪ್ರಾರಂಭವು ಯಾವ ಘಟ್ಟದಲ್ಲೂ ನಷ್ಟವಾಗುವುದಿಲ್ಲ. ಐಹಿಕ ಮಟ್ಟದಲ್ಲಿ ಪ್ರಾರಂಭಮಾಡಿದ ಯಾವುದೇ ಕೆಲಸವನ್ನು ಸಂಪೂರ್ಣ ಮಾಡಬೇಕು. ಇಲ್ಲವಾದರೆ ಇಡೀ ಪ್ರಯತ್ನವೇ ವಿಫಲವಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯಿಂದ ಪ್ರಾರಂಭಮಾಡಿದ ಕೆಲಸವನ್ನು ಸಂಪೂರ್ಣಗೊಳಿಸದಿದ್ದರೂ ಅದರ ಪರಿಣಾಮವು ಶಾಶ್ವತವಾಗಿರುತ್ತದೆ. ಆದುದರಿಂದ ಇಂತಹ ಕೆಲಸವನ್ನು ಕೃಷ್ಣಪ್ರಜ್ಞೆಯಲ್ಲಿ ಮಾಡುವವನು ಕೆಲಸವನ್ನು ಪೂರ್ಣವಾಗಿ ಮಾಡದಿದ್ದರೂ ಅವನಿಗೆ ನಷ್ಟವಾಗುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಶೇಕಡ ಒಂದರಷ್ಟು ಕೆಲಸ ಮಾಡಿದರೂ ಅದು ಶಾಶ್ವತವಾದ ಪರಿಣಾಮವನ್ನು ನೀಡುತ್ತದೆ. ಆದರೆ ಪ್ರಾಪಂಚಿಕ ವ್ಯವಹಾರದಲ್ಲಿ ನೂರಕ್ಕೆ ನೂರರಷ್ಟು ಯಶಸ್ವಿಯಾಗದಿದ್ದರೆ ಲಾಭವಿಲ್ಲ. ಅಜಾಮಿಳನು ತನ್ನ ಕರ್ತವ್ಯವನ್ನು ಕೃಷ್ಣಪ್ರಜ್ಞೆಯ ಶೇಕಡ ಒಂದಿಷ್ಟು ಭಾಗದಿಂದ ಮಾಡಿದ. ಆದರೆ ಭಗವಂತನ ಕೃಪೆಯಿಂದ ಅವನಿಗೆ ಲಭ್ಯವಾದದ್ದು ನೂರಕ್ಕೆ ನೂರರಷ್ಟು ಫಲ. ಈ ವಿಷಯವಾಗಿ ಶ್ರೀಮದ್ಭಾಗವತದಲ್ಲಿ ಒಂದು ಸೊಗಸಾದ ಶ್ಲೋಕವಿದೆ (1.5.17)

**ತ್ಯಕ್ತ್ವಾ ಸ್ವಧರ್ಮಂ ಚರಣಾಮ್ಬುಜಂ ಹರೇರ್**
**ಭಜನ್ನಪಕ್ವೋಽಥ ಪತೇತ್ತತೋ ಯದಿ ।**

**ಯತ್ರ ಕ್ವ ವಾಭದ್ರಮಭೂದಮುಷ್ಯ ಕಿಂ**
**ಕೋ ವಾರ್ಥ ಆಪ್ತೋऽಭಜತಾಂ ಸ್ವಧರ್ಮತಃ ||**

"ಯಾರಾದರೂ ತನ್ನ ವೃತ್ತಿ ಕರ್ತವ್ಯವನ್ನು ಬಿಟ್ಟು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡತೊಡಗಿ ಅನಂತರ ತನ್ನ ಕೆಲಸವನ್ನು ಪೂರ್ತಿಗೊಳಿಸದೆ ಹೋದುದಕ್ಕಾಗಿ ಕೆಳಕ್ಕೆ ಬಿದ್ದರೂ ಅವನಿಗೆ ನಷ್ಟವೇನು? ಮನುಷ್ಯ ತನ್ನ ಐಹಿಕ ಕೆಲಸಕಾರ್ಯಗಳನ್ನು ಪರಿಪೂರ್ಣವಾಗಿ ಮಾಡಿದರೂ ಲಾಭವೇನು?" ಅಥವಾ ಕ್ರೈಸ್ತರು ಹೇಳುವಂತೆ, "ಒಬ್ಬ ಮನುಷ್ಯನು ಇಡೀ ಜಗತ್ತನ್ನು ಪಡೆದುಕೊಂಡರೂ ತನ್ನ ಅಮರವಾದ ಆತ್ಮವನ್ನು ಕಳೆದುಕೊಂಡರೆ ಅವನಿಗೆ ಪ್ರಯೋಜನವೇನು?"

ಐಹಿಕ ಕೆಲಸಕಾರ್ಯಗಳೂ ಅವುಗಳ ಪರಿಣಾಮಗಳೂ ದೇಹದೊಂದಿಗೆ ಅಂತ್ಯವಾಗುತ್ತವೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಮಾಡಿದ ಕೆಲಸವು ಮನುಷ್ಯನ ದೇಹವು ನಷ್ಟವಾದ ಅನಂತರವೂ ಅವನನ್ನು ಕೃಷ್ಣಪ್ರಜ್ಞೆಗೆ ಮತ್ತೆ ಕೊಂಡೊಯ್ಯುತ್ತದೆ. ಕಡೇ ಪಕ್ಷ ಒಂದು ಸುಸಂಸ್ಕೃತ ಬ್ರಾಹ್ಮಣ ಕುಟುಂಬದಲ್ಲಾಗಲೀ ಅಥವಾ ಶ್ರೀಮಂತ ಕುಟುಂಬದಲ್ಲಾಗಲಿ ಮುಂದಿನ ಜನ್ಮದಲ್ಲಿ ಮತ್ತೆ ಮನುಷ್ಯನಾಗಿ ಹುಟ್ಟಿ, ಮೇಲೇರುವುದಕ್ಕೆ ಇನ್ನೊಂದು ಅವಕಾಶವು ದೊರೆಯುವುದಂತೂ ಖಂಡಿತ. ಕೃಷ್ಣಪ್ರಜ್ಞೆಯಲ್ಲಿ ಮಾಡುವ ಕರ್ಮದ ಅದ್ವಿತೀಯ ಲಕ್ಷಣ ಇದು.

## ಶ್ಲೋಕ - 41

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ |**
**ಬಹುಶಾಖಾ ಹ್ಯನನ್ತಾಶ್ಚ ಬುದ್ಧಯೋऽವ್ಯವಸಾಯಿನಾಮ್ ||೪೧||**

**ವ್ಯವಸಾಯ ಆತ್ಮಿಕಾ**—ಕೃಷ್ಣಪ್ರಜ್ಞೆಯಲ್ಲಿ ದೃಢನಿಶ್ಚಯವಿರುವ; **ಬುದ್ಧಿಃ**—ಬುದ್ಧಿಯು; **ಏಕಾ**—ಒಂದೇ ಒಂದು; **ಇಹ**—ಈ ಜಗತ್ತಿನಲ್ಲಿ; **ಕುರು ನನ್ದನ**—ಕುರುಗಳ ಪ್ರಿಯ ಪುತ್ರನೇ; **ಬಹುಶಾಖಾಃ**—ಅನೇಕ ಶಾಖೆಗಳುಳ್ಳವು; **ಹಿ**—ನಿಜವಾಗಿಯೂ; **ಅನನ್ತಾಃ**—ಅಪರಿಮಿತವಾದವು; **ಚ**—ಕೂಡ; **ಬುದ್ಧಯಃ**—ಬುದ್ಧಿಶಕ್ತಿಗಳು; **ಅವ್ಯವಸಾಯಿನಾಮ್**—ಕೃಷ್ಣಪ್ರಜ್ಞೆಯಲ್ಲಿ ಇಲ್ಲದವರ.

## ಅನುವಾದ

**ಈ ಮಾರ್ಗದಲ್ಲಿ ಇರುವವರು ದೃಢಸಂಕಲ್ಪ ಹೊಂದಿರುತ್ತಾರೆ ಮತ್ತು ಅವರಿಗೆ ಒಂದೇ ಗುರಿ. ಪ್ರೀತಿಯ ಕುರುನಂದನನೇ, ನಿಶ್ಚಯ ಸ್ವಭಾವವಿಲ್ಲದವರ ಬುದ್ಧಿಗೆ ಅನೇಕ ಶಾಖೆಗಳಿರುತ್ತವೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಿಂದ ಮನುಷ್ಯನು ಬದುಕಿನ ಅತ್ಯುನ್ನತ ಪರಿಪೂರ್ಣತೆಯನ್ನು ಪಡೆಯಬಹುದೆನ್ನುವ ದೃಢವಿಶ್ವಾಸಕ್ಕೆ **ವ್ಯವಸಾಯಾತ್ಮಿಕಾ** ಬುದ್ಧಿ ಎಂದು ಹೆಸರು. ಚೈತನ್ಯ ಚರಿತಾಮೃತದಲ್ಲಿ (ಮಧ್ಯ 22.62) ಹೀಗೆ ಹೇಳಿದೆ —

**'ಶ್ರದ್ಧಾ' ಶಬ್ದೇ ವಿಶ್ವಾಸ ಕಹೇ ಸುದೃಢ ನಿಶ್ಚಯ**
**ಕೃಷ್ಣೇ ಭಕ್ತಿ ಕೈಲೇ ಸರ್ವಕರ್ಮ ಕೃತ ಹಯ**

ಶ್ರದ್ಧೆ ಎಂದರೆ ಭವ್ಯವಾದ ವಿಷಯವೊಂದರಲ್ಲಿ ಅಚಲ ನಂಬಿಕೆ. ಮನುಷ್ಯನು ಕೃಷ್ಣಪ್ರಜ್ಞೆಯ ಕರ್ತವ್ಯಗಳಲ್ಲಿ ನಿರತನಾಗಿರುವಾಗ ಸಂಸಾರದ ಸಂಪ್ರದಾಯಗಳು, ಮಾನವ ಕುಲ ಅಥವಾ ರಾಷ್ಟ್ರೀಯತೆ ಇಂತಹ ಐಹಿಕ ಜಗತ್ತಿನ ಕರ್ತವ್ಯಗಳಿಗಾಗಿ ಕೆಲಸ ಮಾಡಬೇಕಾಗಿಲ್ಲ. ಹಿಂದಿನ ಒಳ್ಳೆಯ ಅಥವಾ ದುಷ್ಟಕಾರ್ಯಗಳಿಗೆ ವ್ಯಕ್ತಿಯು ತೋರುವ ಪ್ರತಿಕ್ರಿಯೆಗಳ ಫಲವೇ, ಫಲಾಪೇಕ್ಷೆಯಾದ ಕರ್ಮ. ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಜಾಗೃತನಾಗಿರುವಾಗ ತನ್ನ ಕರ್ಮಗಳ ಒಳ್ಳೆಯ ಫಲಗಳಿಗಾಗಿ ಶ್ರಮಿಸಬೇಕಾಗಿಲ್ಲ. ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾಗಿರುವಾಗ ಅವನ ಎಲ್ಲ ಕೆಲಸಕಾರ್ಯಗಳು ಒಳ್ಳೆಯದು ಮತ್ತು ಕೆಟ್ಟದ್ದು ಎನ್ನುವ ದ್ವಂದ್ವಕ್ಕೆ ಒಳಗಾಗುವುದಿಲ್ಲ. ಎಲ್ಲ ಕೆಲಸಕಾರ್ಯಗಳು ಒಂದು ಪರಾತ್ಪರ ಮಟ್ಟದಲ್ಲೇ ಇರುತ್ತವೆ. ಕೃಷ್ಣಪ್ರಜ್ಞೆಯು ಅತ್ಯುನ್ನತ ಪರಿಪೂರ್ಣತೆಯೆಂದರೆ ಬದುಕಿನ ಐಹಿಕ ಕಲ್ಪನೆಯನ್ನು ತೊರೆದುಬಿಡುವುದು. ಕೃಷ್ಣಪ್ರಜ್ಞೆಯಲ್ಲಿ ಮುಂದುವರಿದಂತೆ ಈ ಸ್ಥಿತಿಯನ್ನು ತಂತಾನೇ ಮುಟ್ಟಬಹುದು.

ಕೃಷ್ಣಪ್ರಜ್ಞೆಯಲ್ಲಿ ನೆಲೆಸಿದವನ ದೃಢಸಂಕಲ್ಪಕ್ಕೆ ಜ್ಞಾನವೇ ಆಧಾರ. **ವಾಸುದೇವಹ್ ಸರ್ವಮ್ ಇತಿ ಸ ಮಹಾತ್ಮಾ ಸು ದುರ್ಲಭಃ** ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನೆಂದರೆ ವಾಸುದೇವ ಅಥವಾ ಕೃಷ್ಣನೇ ಎಲ್ಲ ವ್ಯಕ್ತ ಕಾರಣಗಳಿಗೂ ತಾಯಿಬೇರು ಎಂದು ಸಂಪೂರ್ಣವಾಗಿ ಅರಿತಿರುವ ದುರ್ಲಭನಾದ ಒಳ್ಳೆಯ ಆತ್ಮ. ಮರದ ಬೇರಿಗೆ ನೀರೆರೆದರೆ ತಾನಾಗಿಯೇ ಎಲೆಗಳಿಗೂ ಕೊಂಬೆಗಳಿಗೂ ನೀರು ಲಭ್ಯವಾಗುವಂತೆ ಕೃಷ್ಣಪ್ರಜ್ಞೆಯಿಂದ ಕೆಲಸ ಮಾಡುವುದರಿಂದ ಮನುಷ್ಯನು ತನಗೂ, ಸಂಸಾರಕ್ಕೂ, ಸಮಾಜಕ್ಕೂ, ದೇಶಕ್ಕೂ, ಮನುಕುಲಕ್ಕೂ, ಎಲ್ಲರಿಗೂ ಅತ್ಯುನ್ನತ ಸೇವೆಯನ್ನು ಸಲ್ಲಿಸಬಹುದು. ಮನುಷ್ಯನ ಕಾರ್ಯದಿಂದ ಕೃಷ್ಣನಿಗೆ ತೃಪ್ತಿಯಾದರೆ ಎಲ್ಲರಿಗೂ ತೃಪ್ತಿಯಾಗುತ್ತದೆ.

ಕೃಷ್ಣನ ಪ್ರತಿನಿಧಿಯಾದ ಗುರುವಿನ ಸಮರ್ಥ ಮಾರ್ಗದರ್ಶನದಲ್ಲಿ ಕೆಲಸ ಮಾಡುವುದೇ ಕೃಷ್ಣಪ್ರಜ್ಞೆಯಲ್ಲಿನ ಸೇವೆಯ ಅತ್ಯುತ್ತಮ ಅನುಷ್ಠಾನ. ಇಂತಹ ಗುರುವಿಗೆ ಶಿಷ್ಯನ ಸ್ವಭಾವವು ತಿಳಿದಿರುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಕರ್ಮನಿರತನಾಗುವಂತೆ ಅವನಿಗೆ (ಶಿಷ್ಯನಿಗೆ) ಮಾರ್ಗದರ್ಶನ ಮಾಡಬಲ್ಲ. ಕೃಷ್ಣಪ್ರಜ್ಞೆಯಲ್ಲಿ ಪ್ರವೀಣನಾಗಲು ಮನುಷ್ಯನು ದೃಢವಾಗಿ ಕೆಲಸಮಾಡಬೇಕು ಮತ್ತು ಕೃಷ್ಣನ ಪ್ರತಿನಿಧಿಗೆ ವಿಧೇಯನಾಗಿರಬೇಕು. ನಿಜವಾದ ಗುರುವಿನ ಮಾರ್ಗದರ್ಶನದಂತೆ ನಡೆಯುವುದೇ ಅವನ ಬದುಕಿನ ಮಹದುದ್ದೇಶವಾಗಿರಬೇಕು. ಶ್ರೀ ವಿಶ್ವನಾಥ ಚಕ್ರವರ್ತಿ ಠಾಕೂರರು ಪ್ರಸಿದ್ಧವಾದ ತಮ್ಮ ಗುರು ಸ್ತೋತ್ರದಲ್ಲಿ ಹೀಗೆ ಮಾರ್ಗದರ್ಶನ ಮಾಡುತ್ತಾರೆ—

**ಯಸ್ಯ ಪ್ರಸಾದಾದ್ ಭಗವತ್ಪ್ರಸಾದೋ**
**ಯಸ್ಯಾಪ್ರಸಾದಾನ್ ನ ಗತಿಃ ಕುತೋಽಪಿ ।**
**ಧ್ಯಾಯನ್‌ಸ್ತುವಂಸ್ತಸ್ಯ ಯಶಸ್ತ್ರಿಸನ್ಧ್ಯಂ**
**ವನ್ದೇ ಗುರೋಃ ಶ್ರೀಚರಣಾರವಿನ್ದಮ್ ॥**

"ಗುರುವಿಗೆ ಸಂತೃಪ್ತಿಯಾದರೆ ದೇವೋತ್ತಮ ಪರಮ ಪುರುಷನಿಗೆ ಸಂತೃಪ್ತಿಯಾಗುತ್ತದೆ. ಗುರುವಿಗೆ ಸಂತೃಪ್ತಿಯಾಗದಿದ್ದರೆ ಕೃಷ್ಣಪ್ರಜ್ಞೆಯ ಮಟ್ಟಕ್ಕೆ ಏರುವುದು ಸಾಧ್ಯವೇ ಇಲ್ಲ. ಆದುದರಿಂದ ನಾನು ದಿನಕ್ಕೆ ಮೂರು ಬಾರಿ ಗುರುವಿನ ಧ್ಯಾನಮಾಡಿ ಅವರ ಕೃಪೆಗಾಗಿ ಪ್ರಾರ್ಥನೆಯನ್ನು

ಮಾಡಬೇಕು, ಮತ್ತು ನನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ಅವರಿಗೆ ಅರ್ಪಿಸಬೇಕು."

ಆದರೆ ಇಡೀ ಪ್ರಕ್ರಿಯೆಯು ದೇಹದ ಕಲ್ಪನೆಯನ್ನು ಮೀರಿದ ಪರಿಪೂರ್ಣ ಆತ್ಮಜ್ಞಾನವನ್ನು ಅವಲಂಬಿಸಿದೆ; ಈ ಜ್ಞಾನ ಊಹೆಯ ಸ್ವರೂಪದ್ದಾಗಿರಬಾರದು, ಅನುಷ್ಠಾನ ಸ್ವರೂಪದ್ದಾಗಿರಬೇಕು. ಕಾಮ್ಯಕರ್ಮದಲ್ಲಿ ಪ್ರಕಟವಾಗುವ ಇಂದ್ರಿಯ ತೃಪ್ತಿಗೆ ಅವಕಾಶವೇ ಇರಬಾರದು. ಸ್ಥಿರಚಿತ್ತವಿಲ್ಲದವನು ಹಲವು ಬಗೆಯ ಫಲಾಕಾಂಕ್ಷಿ ಕರ್ಮಗಳಿಂದ ಮಾರ್ಗಭ್ರಷ್ಟನಾಗುತ್ತಾನೆ.

## ಶ್ಲೋಕ 42 - 43

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯ ವಿಪಶ್ಚಿತಃ |**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ||೪೨||**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ |**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ||೪೩||**

**ಯಾಮ್ ಇಮಾಮ್**—ಈ ಎಲ್ಲ; **ಪುಷ್ಪಿತಾಮ್**—ಹೂವಿನಂತಹ; **ವಾಚಮ್**—ಮಾತುಗಳನ್ನು; **ಪ್ರವದನ್ತಿ**—ಹೇಳುತ್ತಾರೆ; **ಅವಿಪಶ್ಚಿತಃ**—ಅಲ್ಪಜ್ಞಾನಿಗಳಾದ; **ವೇದ ವಾದ ರತಾಃ**—ವೇದಗಳ ಅನುಯಾಯಿಗಳೆನಿಸಿಕೊಂಡವರು; **ಪಾರ್ಥ**—ಪೃಥೆಯ ಮಗನೇ; **ನ**—ಎಂದಿಗೂ ಇಲ್ಲ; **ಅನ್ಯತ್**—ಬೇರೆ ಯಾವುದೂ; **ಅಸ್ತಿ**—ಇದೆ; **ಇತಿ**—ಹೀಗೆ; **ವಾದಿನಃ**—ವಾದಿಸುವವರು; **ಕಾಮ ಆತ್ಮಾನಃ**—ಇಂದ್ರಿಯತೃಪ್ತಿಯನ್ನು ಅಪೇಕ್ಷಿಸುವವರು; **ಸ್ವರ್ಗ ಪರಾಃ**—ಸ್ವರ್ಗವನ್ನು ಸಾಧಿಸುವ ಗುರಿಯುಳ್ಳವರು; **ಜನ್ಮ ಕರ್ಮ ಫಲ ಪ್ರದಾಮ್**—ಉತ್ತಮಜನ್ಮ ಮತ್ತು ಇತರ ಕಾಮ್ಯಫಲಗಳಲ್ಲಿ ಪರಿಣಮಿಸುವ; **ಕ್ರಿಯಾ ವಿಶೇಷ**—ವೈಭವಯುಕ್ತ ಆಚರಣೆಗಳ; **ಬಹುಲಾಮ್**—ಬಾಹುಳ್ಯವುಳ್ಳ; **ಭೋಗ**—ಇಂದ್ರಿಯಾನುಭವದಲ್ಲಿ; **ಐಶ್ವರ್ಯ**—ಮತ್ತು ಐಶ್ವರ್ಯದಲ್ಲಿ; **ಗತಿಮ್**—ಪ್ರಗತಿಯನ್ನು; **ಪ್ರತಿ**—ಕುರಿತು.

## ಅನುವಾದ

**ಅಲ್ಪಜ್ಞಾನಿಗಳಾದವರು ವೇದಗಳಲ್ಲಿನ ಅಲಂಕಾರದ ಮಾತುಗಳಿಗೆ ಮೋಹಗೊಳ್ಳುತ್ತಾರೆ; ಈ ಮಾತುಗಳು ಸ್ವರ್ಗಲೋಕಗಳ ಪ್ರಾಪ್ತಿ, ಒಳ್ಳೆಯ ಜನ್ಮ, ಅಧಿಕಾರ ಮೊದಲಾದವುಗಳಿಗಾಗಿ ಹಲವಾರು ಕಾಮ್ಯಕರ್ಮಗಳನ್ನು ಪ್ರಶಂಸಿಸಿ ಹೇಳುತ್ತವೆ. ಇಂದ್ರಿಯ ತೃಪ್ತಿ ಮತ್ತು ಭೋಗಜೀವನಗಳನ್ನು ಬಯಸಿ ಇವಕ್ಕಿಂತ ಉತ್ತಮವಾದದ್ದು ಏನೂ ಇಲ್ಲ ಎಂದು ಅವರು ಹೇಳುತ್ತಾರೆ.**

## ಭಾವಾರ್ಥ

ಸಾಮಾನ್ಯವಾಗಿ ಜನರಿಗೆ ಬುದ್ಧಿ ಕಡಮೆ. ತಮ್ಮ ಅಜ್ಞಾನದಿಂದಾಗಿ ಅವರು ವೇದಗಳ ಕರ್ಮಕಾಂಡ ಭಾಗಗಳಲ್ಲಿ ಹೊಗಳಿರುವ ಫಲಾಕಾಂಕ್ಷಿ ಕರ್ಮಗಳಲ್ಲಿ ಆಸಕ್ತರಾಗುತ್ತಾರೆ. ಸ್ವರ್ಗದಲ್ಲಿ ಮಧುಪಾನ, ಸ್ತ್ರೀಸುಖಗಳಿಗೆ ಪರಮಾವಕಾಶ, ಪ್ರಾಪಂಚಿಕ ವೈಭವವು ಸರ್ವೇ ಸಾಮಾನ್ಯವಾದದ್ದು; ಅಜ್ಞಾನಿಗಳಿಗೆ ಸ್ವರ್ಗದಲ್ಲಿ ಭೋಗಜೀವನದಿಂದ ಇಂದ್ರಿಯ ತೃಪ್ತಿ ಪಡೆಯುವ ಸಲಹೆಗಳಿಗಿಂತ

ಬೇರೇನೂ ಬೇಡ. ವೇದಗಳಲ್ಲಿ ಸ್ವರ್ಗಲೋಕಗಳನ್ನು ಸೇರಲು ಹಲವು ಯಾಗಗಳನ್ನು, ಮುಖ್ಯವಾಗಿ ಜ್ಯೋತಿಷ್ಟೋಮ ಯಾಗಗಳನ್ನು, ಹೇಳಿದೆ. ಸ್ವರ್ಗಲೋಕಕ್ಕೆ ಏರಬೇಕೆಂದು ಬಯಸುವ ಯಾರೇ ಆಗಲಿ ಈ ಯಾಗಗಳನ್ನು ಮಾಡಬೇಕೆಂದು ಹೇಳಿದೆ; ಅಲ್ಪಜ್ಞಾನಿಗಳು ವೇದಜ್ಞಾನದ ಸಂಪೂರ್ಣ ಗುರಿಯೇ ಇದು ಎಂದು ಭಾವಿಸಿಕೊಂಡುಬಿಡುತ್ತಾರೆ. ಇಂತಹ ಅನನುಭವಿಗಳಿಗೆ ಕೃಷ್ಣಪ್ರಜ್ಞೆಯ ದೃಢಕಾರ್ಯದಲ್ಲಿ ನೆಲೆಸುವುದು ಬಹು ಕಷ್ಟ. ಮೂರ್ಖರು ಇಂತಹ ಆಕರ್ಷಣೆಯ ಪರಿಣಾಮವೇನೆಂದು ತಿಳಿಯದೆ ವಿಷವೃಕ್ಷಗಳ ಹೂವುಗಳಿಂದ ಆಕರ್ಷಿತರಾಗುತ್ತಾರೆ; ಅಜ್ಞಾನಿಗಳೂ ಇದೇ ರೀತಿ ಸ್ವರ್ಗದ ವೈಭವ ಮತ್ತು ಇಂದ್ರಿಯ ಭೋಗಗಳಿಂದ ಅಕರ್ಷಿತರಾಗುತ್ತಾರೆ.

ವೇದಗಳ ಕರ್ಮಕಾಂಡ ಭಾಗದಲ್ಲಿ, **ಅಪಾಮ ಸೋಮಮ್ ಅಮೃತಾ ಅಭೂಮ** ಎಂದೂ **ಅಕ್ಷಯ್ಯಂ ಹ ವೈ ಚಾತುರ್ಮಾಸ್ಯ ಯಾಜಿನಃ ಸುಕೃತಮ್ ಭವತಿ** ಎಂದೂ ಹೇಳಿದೆ. ಎಂದರೆ, ಚಾತುರ್ಮಾಸದ ವಿಧಿಗಳನ್ನು ಆಚರಿಸುವವರು ಅಮರರಾಗಲು, ಎಂದೆಂದೂ ಸುಖವಾಗಿರಲು ಸೋಮರಸ ಪಾನ ಮಾಡಲು ಅರ್ಹತೆಯನ್ನು ಪಡೆಯುತ್ತಾರೆ. ಈ ಭೂಮಿಯ ಮೇಲಿರುವಾಗಲೂ ಬಲಶಾಲಿಗಳಾಗಿ ಇಂದ್ರಿಯ ಭೋಗಗಳನ್ನು ಸವಿಯಲು ಸಮರ್ಥರಾಗಲು ಸೋಮರಸವನ್ನು ಪಾನ ಮಾಡಲು ಕೆಲವರು ತವಕಪಡುತ್ತಾರೆ. ಇಂತಹ ವ್ಯಕ್ತಿಗಳಿಗೆ ಪ್ರಾಪಂಚಿಕ ಬಂಧನಗಳಿಂದ ಮುಕ್ತಿ ಪಡೆಯುವುದರಲ್ಲಿ ನಂಬಿಕೆ ಇಲ್ಲ; ಅವರಿಗೆ ವೇದದಲ್ಲಿ ಹೇಳಿರುವ ಯಜ್ಞಗಳ ವೈಭವಯುಕ್ತ ವಿಧಿಗಳಲ್ಲಿ ಮೋಹ. ಸಾಮಾನ್ಯವಾಗಿ ಅವರು ಇಂದ್ರಿಯ ಭೋಗಾಸಕ್ತರು; ಬದುಕಿನಲ್ಲಿ ಸ್ವರ್ಗಸದೃಶ ಭೋಗಗಳಲ್ಲದೆ ಬೇರೇನೂ ಅವರಿಗೆ ಬೇಡ. ನಂದನಕಾನನವೆನ್ನುವ ಉದ್ಯಾನಗಳಿರುವುವೆಂದೂ, ಅಲ್ಲಿ ದೇವತಾಸದೃಶರಾದ ಲಾವಣ್ಯವತಿಯರ ಸಹವಾಸಕ್ಕೆ ಮತ್ತು ಸೋಮಪಾನಕ್ಕೆ ಸಮೃದ್ಧವಾಗಿ ಅವಕಾಶಗಳುಂಟು ಎಂದು ಹೇಳುತ್ತಾರೆ. ಇಂತಹ ದೈಹಿಕ ಸುಖವು ನಿಶ್ಚಯವಾಗಿಯೂ ಭೋಗಾಸಕ್ತಿಯೇ. ಇಹಜಗತ್ತಿನ ಪ್ರಭುಗಳಾಗಿ ಮೆರೆಯುವ ಇಂತಹ ಪ್ರಾಪಂಚಿಕ, ಅಲ್ಪಕಾಲದ ಸುಖಕ್ಕಾಗಿಯೇ ಹಂಬಲಿಸುವ ಜನರೂ ಇದ್ದಾರೆ.

## ಶ್ಲೋಕ - 44

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ |**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ||೪೪||**

**ಭೋಗ**—ಭೌತಿಕ ಭೋಗಕ್ಕೆ; **ಐಶ್ವರ್ಯ**—ಐಶ್ವರ್ಯಕ್ಕೆ; **ಪ್ರಸಕ್ತಾನಾಮ್**—ಆಸಕ್ತರಾದ; **ತಯಾ**—ಅಂತಹವುಗಳಿಂದ; **ಅಪಹೃತಚೇತಸಾಮ್**—ಚಿತ್ತಭ್ರಮಣೆಯಾದವರ; **ವ್ಯವಸಾಯ ಆತ್ಮಿಕಾ**—ದೃಢಸಂಕಲ್ಪವುಳ್ಳ; **ಬುದ್ಧಿಃ**—ಭಗವಂತನ ಭಕ್ತಿಸೇವೆಯು; **ಸಮಾಧೌ**—ನಿಯಂತ್ರಿತ ಮನಸ್ಸಿನಲ್ಲಿ; **ನ ವಿಧೀಯತೇ**—ಉಂಟಾಗುವುದಿಲ್ಲ.

## ಅನುವಾದ

**ಭೋಗ ಮತ್ತು ಪ್ರಾಪಂಚಿಕ ಸಂಪತ್ತಿಗೆ ಅತಿಯಾಗಿ ಅಂಟಿಕೊಂಡವರಲ್ಲಿ ಮತ್ತು ಇಂತಹ ವಿಷಯಗಳಿಂದ ಚಿತ್ತಭ್ರಮಣೆಯಾದವರಲ್ಲಿ ಭಗವಂತನ ಭಕ್ತಿಸೇವೆಗಾಗಿ ದೃಢಸಂಕಲ್ಪವು**

ಇರುವುದಿಲ್ಲ.

### ಭಾವಾರ್ಥ

**ಸಮಾಧಿ** ಎಂದರೆ ಅಚಲ ಮನಸ್ಸು; ವೇದದ ನಿಘಂಟಾದ ನಿರುಕ್ತಿಯು **ಸಮ್ಯಗ್ ಆಧಿಯತೇಽಸ್ಮಿನ್ ಆತ್ಮತತ್ತ್ವ ಯಾಥಾತ್ಮ್ಯಮ್** ಎಂದು ಹೇಳುತ್ತದೆ. ಹೀಗೆಂದರೆ, ಆತ್ಮದ ಅರಿವಿಗಾಗಿ ಮನಸ್ಸು ಸ್ಥಿರವಾದಾಗ ಇದಕ್ಕೆ ಸಮಾಧಿ ಎಂದು ಹೆಸರು. ಐಹಿಕ ಇಂದ್ರಿಯ ಸುಖದಲ್ಲಿ ಆಸಕ್ತರಾದವರಿಗೆ ಸಮಾಧಿಯು ಸಾಧ್ಯವೇ ಇಲ್ಲ; ಇಂತಹ ಕ್ಷಣಿಕ ವಿಷಯಗಳಿಂದ ಗೊಂದಲಕ್ಕೊಳಗಾಗುವವರಿಗೂ ಇದು ಸಾಧ್ಯವಿಲ್ಲ. ಇವರು ಭೌತಿಕ ಶಕ್ತಿಯ ಪ್ರಕ್ರಿಯೆಯಿಂದ ಸ್ವಲ್ಪ ಹೆಚ್ಚು ಕಡಮೆ ಶಿಕ್ಷೆಗೆ ಗುರಿಯಾಗುವವರೇ.

### ಶ್ಲೋಕ - 45

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ |**
**ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||೪೫||**

**ತ್ರೈಗುಣ್ಯ**—ಭೌತಿಕ ಪ್ರಕೃತಿಯ ಮೂರು ಗುಣಗಳಿಗೆ ಸಂಬಂಧಿಸಿದ; **ವಿಷಯಾಃ**—ವಿಷಯಗಳುಳ್ಳವು; **ವೇದಾಃ**—ವೈದಿಕ ಸಾಹಿತ್ಯವು; **ನಿಸ್ತ್ರೈಗುಣ್ಯಃ**—ಮೂರು ಪ್ರಕೃತಿಗುಣಗಳಿಗೆ ಅತೀತನು; **ಭವ**—ಆಗು; **ಅರ್ಜುನ**—ಅರ್ಜುನನೇ; **ನಿರ್ದ್ವನ್ದ್ವಃ**—ದ್ವಂದ್ವರಹಿತನು; **ನಿತ್ಯ ಸತ್ತ್ವ ಸ್ಥಃ**—ಶುದ್ಧ ಆಧ್ಯಾತ್ಮಿಕ ಸ್ಥಿತಿಯಲ್ಲಿರುವವನು; **ನಿರ್ಯೋಗಕ್ಷೇಮಃ**—ಲಾಭ ಮತ್ತು ರಕ್ಷಣೆಯ ವಿಚಾರಗಳಿಂದ ಮುಕ್ತನಾದವನು; **ಆತ್ಮವಾನ್**—ಆತ್ಮನಲ್ಲಿ ಸ್ಥಿರವಾದವನು.

### ಅನುವಾದ

**ವೇದಗಳು ಬಹುಮಟ್ಟಿಗೆ ತ್ರೈಗುಣ್ಯದ ವಿಷಯವನ್ನು ಹೇಳುತ್ತವೆ. ಅರ್ಜುನ, ನೀನು ತ್ರೈಗುಣ್ಯಗಳನ್ನು ಮೀರಿದವನಾಗು. ಎಲ್ಲ ದ್ವಂದ್ವಗಳಿಂದ ಮುಕ್ತನಾಗಿರು. ಲಾಭ ಮತ್ತು ಯೋಗಕ್ಷೇಮಗಳನ್ನು ಕುರಿತು ಚಿಂತೆಯಿಲ್ಲದವನಾಗು. ಆತ್ಮದಲ್ಲಿ ನಿಷ್ಠನಾಗು.**

### ಭಾವಾರ್ಥ

ಎಲ್ಲ ಪ್ರಾಪಂಚಿಕ ಚಟುವಟಿಕೆಗಳಲ್ಲಿ ತ್ರಿಗುಣಗಳ ಕ್ರಿಯೆಗಳೂ ಮತ್ತು ಪ್ರತಿಕ್ರಿಯೆಗಳೂ ಸೇರಿವೆ. ಇವು ಫಲವನ್ನು ಭೋಗಿಸುವ ಉದ್ದೇಶದಿಂದ ಮಾಡಲಾಗುತ್ತದೆ; ಇವು ಐಹಿಕ ಪ್ರಪಂಚದಲ್ಲಿ ಬಂಧನಗಳನ್ನುಂಟುಮಾಡುತ್ತವೆ. ವೇದಗಳು ಬಹುಮಟ್ಟಿಗೆ ಫಲಾಕಾಂಕ್ಷಿ ಕರ್ಮಗಳನ್ನು ಕುರಿತು ಹೇಳುತ್ತವೆ; ಇದರ ಉದ್ದೇಶವು ಜನಸಾಮಾನ್ಯರನ್ನು ಇಂದ್ರಿಯ ಕ್ಷೇತ್ರದಿಂದ ಕ್ರಮಕ್ರಮವಾಗಿ ಆಧ್ಯಾತ್ಮಿಕ ಮಟ್ಟಕ್ಕೆ ಕೊಂಡೊಯ್ಯುವುದು. ಶ್ರೀಕೃಷ್ಣನ ಶಿಷ್ಯನೂ, ಸ್ನೇಹಿತನೂ ಆದ ಅರ್ಜುನನಿಗೆ ವೇದಾಂತದ ಆಧ್ಯಾತ್ಮಿಕ ಸ್ಥಿತಿಗೆ ಏರುವಂತೆ ಉಪದೇಶಿಸಲಾಗುತ್ತಿದೆ; ಈ ಸಿದ್ಧಾಂತದ ಪ್ರಾರಂಭದಲ್ಲಿ ಬ್ರಹ್ಮಜಿಜ್ಞಾಸೆ ಅಥವಾ ಪರಮ ಅಲೌಕಿಕತೆಯನ್ನು ಕುರಿತು ಪ್ರಶ್ನೆಗಳಿವೆ. ಐಹಿಕ ಜಗತ್ತಿನ ಎಲ್ಲ ಜೀವಿಗಳೂ ಅಸ್ತಿತ್ವಕ್ಕಾಗಿ ಬಹಳ ಶ್ರಮ ಪಡುತ್ತವೆ. ಐಹಿಕ ಜಗತ್ತನ್ನು

ಸೃಷ್ಟಿಸಿದ ಮೇಲೆ ಭಗವಂತನು ಜೀವಿಗಳಿಗೆ, ಐಹಿಕ ಬಂಧನದಿಂದ ಬಿಡಿಸಿಕೊಳ್ಳುವುದು ಹೇಗೆ ಎಂದು ಮಾರ್ಗದರ್ಶನ ಮಾಡುವ ವೈದಿಕ ಜ್ಞಾನವನ್ನು ನೀಡಿದ. ಕರ್ಮಕಾಂಡ ಅಧ್ಯಾಯವು, ಎಂದರೆ ಇಂದ್ರಿಯತೃಪ್ತಿಯ ಚಟುವಟಿಕೆಗಳು ಮುಗಿದಾಗ ಉಪನಿಷತ್ತುಗಳ ರೂಪದಲ್ಲಿ ಆತ್ಮಸಾಕ್ಷಾತ್ಕಾರಕ್ಕೆ ಅವಕಾಶವನ್ನು ಕಲ್ಪಿಸಿದೆ. ಭಗವದ್ಗೀತೆಯು ಐದನೆಯ ವೇದವಾದ ಮಹಾಭಾರತದ ಭಾಗವಾದಂತೆ, ಉಪನಿಷತ್ತುಗಳು ಬೇರೆ ವೇದಗಳ ಭಾಗಗಳು. ಉಪನಿಷತ್ತುಗಳು ಅಲೌಕಿಕ ಬದುಕಿನ ಪ್ರಾರಂಭವನ್ನು ಸೂಚಿಸುತ್ತವೆ.

ಐಹಿಕ ದೇಹವು ಇರುವಷ್ಟು ಕಾಲವೂ ಐಹಿಕ ಗುಣಗಳ ಕ್ರಿಯೆಗಳೂ ಪ್ರತಿಕ್ರಿಯೆಗಳೂ ಇದ್ದೇ ಇರುತ್ತವೆ. ಸುಖ-ದುಃಖ, ತಂಪು-ಉಷ್ಣ ಇಂತಹ ದ್ವಂದ್ವಗಳು ಎದುರಾದಾಗ ಮನುಷ್ಯನು ಸಹನೆಯನ್ನು ಕಲಿತುಕೊಳ್ಳಬೇಕು; ಇಂತಹ ದ್ವಂದ್ವಗಳನ್ನು ಸಹಿಸಿಕೊಂಡು ಲಾಭನಷ್ಟಗಳ ವಿಷಯದಲ್ಲಿ ಆತಂಕದಿಂದ ಮುಕ್ತನಾಗಬೇಕು. ಕೃಷ್ಣನ ಕೃಪೆಯೊಂದನ್ನೇ ಅವಲಂಬಿಸಿದ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಅಲೌಕಿಕ ಸ್ಥಿತಿಯು ಲಭ್ಯವಾಗುತ್ತದೆ.

## ಶ್ಲೋಕ - 46

**ಯಾವಾನರ್ಥ ಉದಪಾನೇ ಸರ್ವತಃ ಸಮ್ಪ್ಲುತೋದಕೇ |**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ||೪೬|**

**ಯಾವಾನ್**—ಯಾವೆಲ್ಲ; **ಅರ್ಥಃ**—ಉದ್ದೇಶವೋ; **ಉದಪಾನೇ**—ನೀರಿನಬಾವಿಯಲ್ಲಿ; **ಸರ್ವತಃ**—ಎಲ್ಲ ಪ್ರಕಾರಗಳಲ್ಲಿ; **ಸಮ್ಪ್ಲುತ ಉದಕೇ**—ದೊಡ್ಡ ಜಲಾಶಯದಲ್ಲೂ; **ತಾವಾನ್**—ಅದರಂತೆಯೇ; **ಸರ್ವೇಷು**—ಎಲ್ಲ; **ವೇದೇಷು**—ವೈದಿಕ ಸಾಹಿತ್ಯದಲ್ಲಿ; **ಬ್ರಾಹ್ಮಣಸ್ಯ**—ಪರಬ್ರಹ್ಮನನ್ನು ತಿಳಿದವನಿಗೆ; **ವಿಜಾನತಃ**—ಪೂರ್ಣಜ್ಞಾನದಲ್ಲಿ ಇರುವ.

## ಅನುವಾದ

**ಒಂದು ಸಣ್ಣ ಬಾವಿ ಮಾಡುವ ಕೆಲಸವನ್ನೆಲ್ಲ ದೊಡ್ಡ ಜಲಾಶಯವು ಮಾಡಬಲ್ಲದು. ಹಾಗೆಯೇ ವೇದಗಳ ಹಿಂದಿರುವ ಉದ್ದೇಶಗಳನ್ನು ತಿಳಿದವನಿಗೆ ವೇದಗಳ ಎಲ್ಲ ಪ್ರಯೋಜನವೂ ಆಗುತ್ತದೆ.**

## ಭಾವಾರ್ಥ

ವೈದಿಕ ಸಾಹಿತ್ಯದ ಕರ್ಮಕಾಂಡದ ಭಾಗದಲ್ಲಿ ಪ್ರಸ್ತಾಪಿಸಿರುವ ಎಲ್ಲ ವಿಧಿಗಳ ಮತ್ತು ಯಾಗಗಳ ಉದ್ದೇಶವು ಕ್ರಮೇಣ ಆತ್ಮಸಾಕ್ಷಾತ್ಕಾರವನ್ನು ಗಳಿಸುವಂತೆ ಪ್ರೋತ್ಸಾಹಿಸುವುದಾಗಿದೆ. ಆತ್ಮಸಾಕ್ಷಾತ್ಕಾರದ ಉದ್ದೇಶವನ್ನು ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ (15.15) ಸ್ಪಷ್ಟವಾಗಿ ಹೇಳಿದೆ — ವೇದಗಳ ಅಧ್ಯಯನದ ಗುರಿ ಎಲ್ಲ ವ್ಯಕ್ತಿಗಳ ಮೂಲಕಾರಣನಾದ ಶ್ರೀಕೃಷ್ಣನನ್ನು ಅರಿತುಕೊಳ್ಳುವುದು. ಆದುದರಿಂದ ಆತ್ಮ ಸಾಕ್ಷಾತ್ಕಾರದ ಅರ್ಥ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಮತ್ತು ಅವನೊಡನೆ ಅನಂತವಾದ ಸಂಬಂಧವನ್ನು ಪಡೆಯುವುದು. ಕೃಷ್ಣನೊಡನೆ ಜೀವಿಗಳ ಸಂಬಂಧವನ್ನೂ ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ (15.7) ಪ್ರಸ್ತಾಪಿಸಿದೆ. ಜೀವಿಗಳು ಶ್ರೀಕೃಷ್ಣನ ವಿಭಿನ್ನಾಂಶಗಳು. ಆದುದರಿಂದ ಪ್ರತ್ಯೇಕನಾದ

ಜೀವಾತ್ಮನಲ್ಲಿ ಕೃಷ್ಣಪ್ರಜ್ಞೆಯ ಪುನರುದಯವೇ ವೈದಿಕಜ್ಞಾನದ ಅತ್ಯುನ್ನತ ಪರಿಪೂರ್ಣ ಸ್ಥಿತಿ. ಶ್ರೀಮದ್ಭಾಗವತವು (3.33.7) ಇದನ್ನು ಈ ಮಾತುಗಳಲ್ಲಿ ದೃಢಪಡಿಸುತ್ತದೆ —

**ಅಹೋ ಬತ ಶ್ವಪಚೋಽತೋ ಗರೀಯಾನ್**
**ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್ |**
**ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ**
**ಬ್ರಹ್ಮಾನೂಚುರ್ನಾಮ ಗೃಣನ್ತಿ ಯೇ ತೇ ||**

"ಭಗವಂತನೇ, ನಿನ್ನ ಪವಿತ್ರವಾದ ಹೆಸರನ್ನು ಸಂಕೀರ್ತನ ಮಾಡುವವನು ಚಂಡಾಲ ಸಂಸಾರದಂತಹ ಹೀನ ಸಂಸಾರದಲ್ಲಿ ಹುಟ್ಟಿದ್ದರೂ ಆತ್ಮಸಾಕ್ಷಾತ್ಕಾರದ ಅತ್ಯುನ್ನತ ಸ್ಥಿತಿಯಲ್ಲಿರುತ್ತಾನೆ. ಇಂತಹ ಮನುಷ್ಯನು ಎಲ್ಲ ಬಗೆಯ ತಪಸ್ಸುಗಳನ್ನು ಮಾಡಿರಬೇಕು. ಎಲ್ಲ ಪವಿತ್ರ ಯಾತ್ರಾಕ್ಷೇತ್ರಗಳಲ್ಲಿ ಸ್ನಾನಮಾಡಿ ವೈದಿಕ ಸಾಹಿತ್ಯವನ್ನು ಮತ್ತೆ ಮತ್ತೆ ಅಧ್ಯಯನ ಮಾಡಿರಬೇಕು. ಇಂತಹ ಮನುಷ್ಯನನ್ನು ಆರ್ಯಕುಲದಲ್ಲಿ ಅತಿಶ್ರೇಷ್ಠನೆಂದು ಪರಿಗಣಿಸಲಾಗುತ್ತದೆ."

ಆದುದರಿಂದ ಯಾರೇ ಆಗಲಿ ವಿಧಿಗಳಿಗೇ ಅಂಟಿಕೊಳ್ಳದೆ ವೇದಗಳ ಗುರಿಯನ್ನು ಅರ್ಥಮಾಡಿಕೊಳ್ಳುವಷ್ಟು ಬುದ್ಧಿವಂತನಾಗಿರಬೇಕು. ಇನ್ನೂ ಉತ್ತಮ ಗುಣದ ಇಂದ್ರಿಯ ಭೋಗಕ್ಕಾಗಿಯೇ ಸ್ವರ್ಗಲೋಕಗಳಿಗೆ ಏರುವ ಬಯಕೆಯನ್ನಿಟ್ಟುಕೊಳ್ಳಬಾರದು. ಈಗಿನ ಕಾಲದಲ್ಲಿ ಸಾಮಾನ್ಯ ಮನುಷ್ಯನಾದವನಿಗೆ ವೇದಗಳಲ್ಲಿ ಹೇಳಿರುವ ಎಲ್ಲ ವಿಧಿಗಳನ್ನೂ ನಿಯಮಗಳನ್ನೂ ಪಾಲಿಸಲು ಸಾಧ್ಯವಿಲ್ಲ. ಎಲ್ಲ ವೇದಾಂತವನ್ನೂ ಉಪನಿಷತ್ತುಗಳನ್ನೂ ಸಮಗ್ರವಾಗಿ ಅಧ್ಯಯನ ಮಾಡುವುದೂ ಸಾಧ್ಯವಿಲ್ಲ. ವೇದಗಳ ಉದ್ದೇಶಗಳನ್ನು ಕಾರ್ಯಗತ ಮಾಡಲು ವಿಶೇಷ ಸಮಯ, ಚೈತನ್ಯ, ಜ್ಞಾನ ಮತ್ತು ಸಂಪನ್ಮೂಲಗಳು ಅವಶ್ಯವಾಗುತ್ತವೆ. ಈ ಯುಗದಲ್ಲಿ ಇವು ದೊರಕುವುದಿಲ್ಲ. ಎಲ್ಲ ಪತಿತ ಆತ್ಮಗಳ ಉದ್ಧಾರಕರು ಚೈತನ್ಯಮಹಾಪ್ರಭುಗಳು; ಅವರು ಹೇಳಿರುವಂತೆ, ಭಗವಂತನ ಪವಿತ್ರ ಹೆಸರನ್ನು ಸಂಕೀರ್ತನೆ ಮಾಡುವುದರಿಂದ ವೈದಿಕ ಸಂಸ್ಕೃತಿಯ ಅತ್ಯುತ್ತಮ ಗುರಿಯನ್ನು ಸಾಧಿಸಬಹುದು. ಒಬ್ಬ ಹಿರಿಯ ವೈದಿಕ ವಿದ್ವಾಂಸರಾದ ಪ್ರಕಾಶಾನಂದ ಸರಸ್ವತಿಯವರು, ಸ್ವಯಂ ಭಗವಂತನಾದ ಚೈತನ್ಯಮಹಾಪ್ರಭುಗಳು ವೇದಾಂತ ತತ್ವಜ್ಞಾನವನ್ನು ಅಭ್ಯಾಸ ಮಾಡುವುದನ್ನು ಬಿಟ್ಟು ಅತಿಭಾವುಕರಂತೆ ಪವಿತ್ರ ಹೆಸರಿನ ಸಂಕೀರ್ತನೆ ಮಾಡುವುದೇಕೆ ಎಂದು ಕೇಳಿದರು. ತಮ್ಮ ಗುರುಗಳು ತಾವು (ಚೈತನ್ಯ ಮಹಾಪ್ರಭುಗಳು) ದೊಡ್ಡಮೂರ್ಖನೆಂದು ತಿಳಿದು ಶ್ರೀಕೃಷ್ಣನ ನಾಮಸಂಕೀರ್ತನೆ ಮಾಡುವಂತೆ ಹೇಳಿದರು ಎಂದು ಚೈತನ್ಯಮಹಾಪ್ರಭುಗಳು ಉತ್ತರಿಸಿದರು. ತಾವು ಹಾಗೆ ಮಾಡಿದುದಾಗಿಯೂ, ಹುಚ್ಚನಂತೆ ಆನಂದೋನ್ಮಾದದಲ್ಲಿ ಮುಳುಗಿದುದಾಗಿಯೂ ಹೇಳಿದರು. ಈ ಕಲಿಯುಗದಲ್ಲಿ ಜನತೆಯಲ್ಲಿ ಬಹುಮಂದಿ ಮೂರ್ಖರು. ಅವರಿಗೆ ವೇದಾಂತ ದರ್ಶನವನ್ನು ಅರ್ಥಮಾಡಿಕೊಳ್ಳಲು ಸಾಕಷ್ಟು ವಿದ್ಯೆಯೂ ಇಲ್ಲ. ಅಪರಾಧವೆಸಗದೆ ಭಗವಂತನ ಪವಿತ್ರ ನಾಮ ಸಂಕೀರ್ತನೆ ಮಾಡುವುದರಿಂದ ವೇದಾಂತದ ಅತಿಶ್ರೇಷ್ಠ ಗುರಿಯನ್ನು ಸಾಧಿಸಿದಂತಾಗುತ್ತದೆ. ವೇದಾಂತವು ವೈದಿಕ ಜ್ಞಾನದ ಶಿಖರ; ವೇದಾಂತದ ಕರ್ತೃ ಮತ್ತು ಜ್ಞಾನಿ ಶ್ರೀಕೃಷ್ಣ; ಭಗವಂತನ ಪವಿತ್ರ ನಾಮಸಂಕೀರ್ತನೆಯಲ್ಲಿ ಆನಂದವನ್ನು ಅನುಭವಿಸುವ ಮಹಾತ್ಮನು ಅತ್ಯುತ್ತಮ ವೇದಾಂತಿ. ವೈದಿಕ ಅನುಭಾವದ ಪರಮಗುರಿ ಇದೇ.

## ಶ್ಲೋಕ - 47

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |**
**ಮಾ ಕರ್ಮಫಲಹೇತುರ್ಭೂರ್ ಮಾ ತೇ ಸಙ್ಗೋSಸ್ತ್ವಕರ್ಮಣಿ ||೪೭||**

**ಕರ್ಮಣಿ**—ವಿಹಿತ ಕರ್ತವ್ಯಗಳಲ್ಲಿ; **ಏವ**—ಖಂಡಿತವಾಗಿಯೂ; **ಅಧಿಕಾರಃ**—ಅಧಿಕಾರವು; **ತೇ**—ನಿನಗೆ; **ಮಾ ಫಲೇಷು**—ಫಲಗಳಲ್ಲಿ ಅಲ್ಲ; **ಕದಾಚನ**—ಯಾವುದೇ ಕಾಲದಲ್ಲಿಯೂ; **ಮಾ ಕರ್ಮಫಲ**—ಕರ್ಮದ ಫಲದಲ್ಲಿ ಬೇಡ; **ಹೇತುಃ**—ಕಾರಣವು; **ಭೂಃ**—ಆಗುವುದು; **ಮಾ**—ಆಗದೆ; **ತೇ**—ನಿನಗೆ; **ಸಙ್ಗಃ**—ಆಸಕ್ತಿಯು; **ಅಸ್ತು**—ಇರಲಿ; **ಅಕರ್ಮಣಿ**—ವಿಹಿತ ಕರ್ತವ್ಯಗಳನ್ನು ಮಾಡದಿರುವಲ್ಲಿ.

## ಅನುವಾದ

**ನಿನಗೆ ನಿಯೋಜಿತ ಕರ್ತವ್ಯವನ್ನು ಮಾಡುವುದಕ್ಕಷ್ಟೇ ಅಧಿಕಾರ. ಆದರೆ ಕರ್ಮಫಲಕ್ಕೆ ನಿನಗೆ ಅಧಿಕಾರವಿಲ್ಲ. ಕರ್ಮಫಲಕ್ಕೆ ನೀನು ಕಾರಣ ಎಂದು ಭಾವಿಸಲೇಬೇಡ. ಕರ್ಮವನ್ನು ಬಿಡಬೇಕೆಂದು ನಿನಗೆ ಮನಸ್ಸಾಗದಿರಲಿ.**

## ಭಾವಾರ್ಥ

ಇಲ್ಲಿ ಮೂರು ವಿಚಾರಗಳಿವೆ; ನಿಯೋಜಿತವಾದ ಕರ್ತವ್ಯಗಳು, ಮನಬಂದಂತೆ ಮಾಡುವ ಕೆಲಸ ಮತ್ತು ಕರ್ಮಮಾಡದಿರುವುದು. ಮನುಷ್ಯನು ಪಡೆದುಕೊಂಡ ಪ್ರಕೃತಿ ಗುಣಗಳಿಗೆ ಅನುಗುಣವಾಗಿ ವಿಧಿಸಿದ ಕಾರ್ಯಗಳು ನಿಯೋಜಿತ ಕರ್ತವ್ಯಗಳು. ಮನಸ್ಸೀ ನಡತೆಯ ಕೆಲಸವೆಂದರೆ ಪ್ರಮಾಣಾಧಿಕಾರದ ಒಪ್ಪಿಗೆಯಿಲ್ಲದ ಕೆಲಸ. ಕರ್ಮ ಮಾಡದಿರುವುದೆಂದರೆ ನಿಯೋಜಿತ ಕರ್ತವ್ಯಗಳನ್ನು ಮಾಡದಿರುವುದು. ಅರ್ಜುನನು ಕರ್ಮವನ್ನು ಬಿಟ್ಟು ಬಿಡಬಾರದು; ಆದರೆ ತನ್ನ ನಿಯೋಜಿತ ಕರ್ತವ್ಯವನ್ನು ಫಲದ ಆಸೆಯಿಲ್ಲದೆ ಮಾಡಬೇಕೆಂದು ಭಗವಂತನು ಬೋಧಿಸಿದನು. ತನ್ನ ಕರ್ಮದ ಫಲಕ್ಕಾಗಿ ಆಸೆ ಪಡುವವನು ತನ್ನ ಕರ್ಮದ ಕಾರಣನೂ ಆಗುತ್ತಾನೆ. ಆದುದರಿಂದ ಅಂತಹ ಕರ್ಮದ ಫಲದಿಂದ ಸಂತೋಷ ಅಥವಾ ದುಃಖಕ್ಕೆ ಗುರಿಯಾಗುತ್ತಾನೆ.

ನಿಯೋಜಿತ ಕರ್ತವ್ಯಗಳನ್ನು ಮೂರು ವರ್ಗಗಳಾಗಿ ಮಾಡಬಹುದು—ದೈನಂದಿನ ಕೆಲಸ; ತುರ್ತುಕೆಲಸ ಮತ್ತು ಬಯಸಿದ ಚಟುವಟಿಕೆಗಳು. ಶಾಸ್ತ್ರಗಳ ಆದೇಶಕ್ಕನುಗುಣವಾಗಿ ಫಲಾಪೇಕ್ಷೆಯಿಲ್ಲದೆ ಕರ್ತವ್ಯವನ್ನು ಮಾಡಿದ ದೈನಂದಿನ ಕೆಲಸವು ಸತ್ವಗುಣದಿಂದ ಮಾಡಿದ ಕರ್ಮವಾಗುತ್ತದೆ. ಫಲವನ್ನು ಅಪೇಕ್ಷಿಸಿ ಮಾಡುವ ಕೆಲಸ ಬಂಧನಕ್ಕೆ ಕಾರಣವಾಗುತ್ತದೆ; ಆದುದರಿಂದ ಇಂತಹ ಕೆಲಸವು ಶುಭಕರವಲ್ಲ. ನಿಯೋಜಿತ ಕರ್ತವ್ಯಗಳ ಮಟ್ಟಿಗೆ ಪ್ರತಿಯೊಬ್ಬನಿಗೂ ಅಧಿಕಾರವುಂಟು. ಆದರೆ ಇದು ಫಲದ ಆಸೆಯಿಲ್ಲದ ಕರ್ಮವಾಗಬೇಕು. ಇಂತಹ ನಿರ್ಲಿಪ್ತ ನಿಯೋಜಿತ ಕರ್ತವ್ಯಗಳು ನಿಸ್ಸಂಶಯವಾಗಿ ಮುಕ್ತಿಮಾರ್ಗಕ್ಕೆ ಕರೆದೊಯ್ಯುತ್ತವೆ.

ಆದುದರಿಂದ ಫಲದ ಅಪೇಕ್ಷೆಯಿಲ್ಲದೆ ಅರ್ಜುನನು ಕರ್ತವ್ಯ ದೃಷ್ಟಿಯಿಂದ ಯುದ್ಧಮಾಡಬೇಕೆಂದು ಭಗವಂತನು ಉಪದೇಶಮಾಡಿದನು. ಅವನು ಯುದ್ಧಮಾಡದಿರುವುದೇ ವ್ಯಾಮೋಹದ ಇನ್ನೊಂದು ಮುಖ. ಇಂತಹ ಮೋಹದಿಂದ ಮುಕ್ತಿಯು ಲಭ್ಯವಾಗುವುದಿಲ್ಲ.

ಧನಾತ್ಮಕವಾಗಲಿ, ಋಣಾತ್ಮಕವಾಗಲಿ ಯಾವುದೇ ಬಗೆಯ ಮೋಹವು ಬಂಧನಕ್ಕೆ ಕಾರಣ. ಕರ್ಮಮಾಡದಿರುವುದು ಪಾಪಕರ. ಆದುದರಿಂದ ಅರ್ಜುನನ ಮುಂದಿರುವ ಮುಕ್ತಿಯ ಒಂದೇ ಶುಭಕರ ಮಾರ್ಗವೆಂದರೆ ತನ್ನ ಕರ್ತವ್ಯವೆಂದು ಯುದ್ಧಮಾಡುವುದು.

## ಶ್ಲೋಕ - 48

**ಯೋಗಸ್ಥಃ ಕುರು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಧನಞ್ಜಯ |**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ||೪೮||**

**ಯೋಗಸ್ಥಃ**—ಸಮಚಿತ್ತತೆಯಲ್ಲಿದ್ದು; **ಕುರು**—ಆಚರಿಸು; **ಕರ್ಮಾಣಿ**—ಕರ್ತವ್ಯಗಳನ್ನು; **ಸಙ್ಗಮ್**—ಆಸಕ್ತಿಯನ್ನು; **ತ್ಯಕ್ತ್ವಾ**—ತೊರೆದು; **ಧನಞ್ಜಯ**—ಅರ್ಜುನನೇ; **ಸಿದ್ಧಿ ಅಸಿದ್ಧ್ಯೋಃ**—ಜಯ ಅಪಜಯಗಳಲ್ಲಿ; **ಸಮಃ**—ಸಮನಾದವನು; **ಭೂತ್ವಾ**—ಆಗಿ; **ಸಮತ್ವಮ್**—ಸಮಚಿತ್ತತೆಯನ್ನು; **ಯೋಗಃ**—ಯೋಗವೆಂದು; **ಉಚ್ಯತೇ**—ಕರೆಯಲಾಗುತ್ತದೆ.

## ಅನುವಾದ

**ಗೆಲವು ಸೋಲುಗಳಲ್ಲಿ ಯಾವುದೇ ಆಸಕ್ತಿಯನ್ನು ಇಟ್ಟುಕೊಳ್ಳದೆ ಸಮಚಿತ್ತದಿಂದ ನಿನ್ನ ಕರ್ತವ್ಯವನ್ನು ಮಾಡು, ಅರ್ಜುನ; ಇಂತಹ ಸಮಚಿತ್ತತೆಗೆ ಯೋಗ ಎಂದು ಹೆಸರು.**

## ಭಾವಾರ್ಥ

ಅರ್ಜುನನು ಯೋಗದಲ್ಲಿದ್ದು ಕರ್ಮವನ್ನು ಮಾಡಬೇಕೆಂದು ಕೃಷ್ಣನು ಹೇಳುತ್ತಾನೆ. ಯೋಗ ಎಂದರೇನು? ಯೋಗ ಎಂದರೆ, ಸದಾ ಚಂಚಲವಾಗುವ ಇಂದ್ರಿಯಗಳನ್ನು ನಿಗ್ರಹಿಸಿ ಪರಾತ್ಪರದಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವುದು. ಪರಾತ್ಪರ ಎಂದರೆ ಯಾವುದು? ಭಗವಂತನೇ ಪರಾತ್ಪರ. ಅವನೇ ಯುದ್ಧಮಾಡುವಂತೆ ಅರ್ಜುನನಿಗೆ ಹೇಳುತ್ತಿರುವುದರಿಂದ ಯುದ್ಧದ ಫಲಕ್ಕೂ ಅರ್ಜುನನಿಗೂ ಸಂಬಂಧವಿಲ್ಲ. ಲಾಭ ಅಥವಾ ಜಯ ಕೃಷ್ಣನಿಗೆ ಸೇರಿದ್ದು. ಕೃಷ್ಣನ ಮಾರ್ಗದರ್ಶನಕ್ಕೆ ಅನುಗುಣವಾಗಿ ಕಾರ್ಯನಿರತನಾಗುವಂತೆ ಅರ್ಜುನನಿಗೆ ಉಪದೇಶಿಸಲಾಗುತ್ತಿದೆ. ಕೃಷ್ಣನ ಮಾರ್ಗದರ್ಶನಕ್ಕೆ ಅನುಗುಣವಾಗಿ ನಡೆದುಕೊಳ್ಳುವುದು ನಿಜವಾದ ಯೋಗ; ಇದು ಕೃಷ್ಣಪ್ರಜ್ಞೆ ಎಂದು ಕರೆಯುವ ಪ್ರಕ್ರಿಯೆಯಲ್ಲಿ ಅಭ್ಯಾಸವಾಗುತ್ತದೆ. ಕೃಷ್ಣಪ್ರಜ್ಞೆಯಿಂದ ಮಾತ್ರವೇ ಮನುಷ್ಯನು ತಾನು ಒಡೆಯ ಎನ್ನುವ ಭಾವನೆಯನ್ನು ಬಿಡಬಹುದು. ಮನುಷ್ಯ ಕೃಷ್ಣನ ಸೇವಕನಾಗಬೇಕು ಅಥವಾ ಕೃಷ್ಣನ ಸೇವಕನ ಸೇವಕನಾಗಬೇಕು. ಕೃಷ್ಣಪ್ರಜ್ಞೆಯಲ್ಲಿ ಕರ್ತವ್ಯವನ್ನು ನಿರ್ವಹಿಸಲು ಇದು ಸರಿಯಾದ ಮಾರ್ಗ; ಕೃಷ್ಣಪ್ರಜ್ಞೆಯೊಂದೇ ಮನುಷ್ಯನು ಯೋಗಸ್ಥಿತಿಯಲ್ಲಿ ಕರ್ಮಮಾಡಲು ನೆರವಾಗಬಲ್ಲುದು.

ಅರ್ಜುನನು ಕ್ಷತ್ರಿಯ; ಆದುದರಿಂದ ಆತನು ವರ್ಣಾಶ್ರಮ ಧರ್ಮದಲ್ಲಿ ಭಾಗಿ. ವರ್ಣಾಶ್ರಮ ಧರ್ಮದ ಸಂಪೂರ್ಣ ಗುರಿ ವಿಷ್ಣುವನ್ನು ಸಂಪ್ರೀತಿಗೊಳಿಸುವುದು ಎಂದು ವಿಷ್ಣುಪುರಾಣದಲ್ಲಿ ಹೇಳಿದೆ. ಐಹಿಕ ಪ್ರಪಂಚದ ನಿಯಮವಾದರೋ ತನ್ನ ತೃಪ್ತಿಗಾಗಿ ಕೆಲಸಮಾಡುವುದು. ಹೀಗೆ ಮಾಡದೆ ಕೃಷ್ಣನನ್ನು ತೃಪ್ತಿಗೊಳಿಸಬೇಕು. ಕೃಷ್ಣನನ್ನು ತೃಪ್ತಿಗೊಳಿಸದೆ

ವರ್ಣಾಶ್ರಮ ಧರ್ಮದ ತತ್ವಗಳನ್ನು ಸರಿಯಾಗಿ ಪಾಲಿಸುವುದು ಸಾಧ್ಯವಿಲ್ಲ. ಕೃಷ್ಣನು ಹೇಳಿದಂತೆ ನಡೆಯಬೇಕು ಎಂದು ಪರೋಕ್ಷವಾಗಿ ಅರ್ಜುನನಿಗೆ ಉಪದೇಶ ಮಾಡಲಾಗುತ್ತಿದೆ.

## ಶ್ಲೋಕ - 49

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಞ್ಜಯ |**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ||೪೯||**

**ದೂರೇಣ**—ಬಹುದೂರದಲ್ಲೇ ತೊರೆದು; **ಹಿ**—ಖಂಡಿತವಾಗಿಯೂ; **ಅವರಮ್**—ಹೇಯವಾದ; **ಕರ್ಮ**—ಕರ್ಮವನ್ನು; **ಬುದ್ಧಿಯೋಗಾತ್**—ಕೃಷ್ಣಪ್ರಜ್ಞೆಯ ಬಲದಿಂದ; **ಧನಞ್ಜಯ**—ಐಶ್ವರ್ಯವನ್ನು ಜಯಿಸಿದವನೇ; **ಬುದ್ಧೌ**—ಅಂತಹ ಪ್ರಜ್ಞೆಯಲ್ಲಿ; **ಶರಣಮ್**—ಪೂರ್ಣಶರಣಾಗತಿಯನ್ನು; **ಅನ್ವಿಚ್ಛ**—ಪ್ರಯತ್ನಿಸು; **ಕೃಪಣಾಃ**—ಕೃಪಣರು; **ಫಲಹೇತವಃ**—ಕಾಮ್ಯಕರ್ಮ ಫಲಾಪೇಕ್ಷಿಗಳು.

## ಅನುವಾದ

**ಧನಂಜಯ, ಭಕ್ತಿಪೂರ್ವಕ ಸೇವೆಯಿಂದ ಎಲ್ಲ ಹೇಯ ಕಾರ್ಯಗಳನ್ನೂ ದೂರಮಾಡು; ಇಂತಹ ಪ್ರಜ್ಞೆಯಲ್ಲಿ ಭಗವಂತನಿಗೆ ಶರಣಾಗತನಾಗು. ತಮ್ಮ ಕರ್ಮಗಳ ಫಲಕ್ಕಾಗಿ ಆಸೆ ಪಡುವವರು ಕೃಪಣರು.**

## ಭಾವಾರ್ಥ

ಭಗವಂತನ ನಿರಂತರ ಸೇವಕನಾಗಿ ತನ್ನ ಸಹಜಸ್ವರೂಪವನ್ನು ವಾಸ್ತವವಾಗಿ ಅರ್ಥಮಾಡಿಕೊಂಡವನು ಕೃಷ್ಣಪ್ರಜ್ಞೆಯಲ್ಲಿ ಕರ್ಮನಿರತನಾಗುವುದಲ್ಲದೆ ಬೇರೆಲ್ಲ ಕೆಲಸಗಳನ್ನೂ ಬಿಟ್ಟುಬಿಡುತ್ತಾನೆ. ಆಗಲೇ ವಿವರಿಸಿರುವಂತೆ, ಬುದ್ಧಿಯೋಗವೆಂದರೆ ಭಗವಂತನ ದಿವ್ಯಪ್ರೇಮಪೂರ್ವಕ ಸೇವೆ. ಜೀವನಿಗೆ ಇಂತಹ ಭಕ್ತಿಸೇವೆಯೇ ಯೋಗ್ಯವಾದ ಕರ್ಮ. ಜಿಪುಣರು ಮಾತ್ರ ತಮ್ಮ ಕರ್ಮದ ಫಲವನ್ನು ಸವಿಯಲು ಬಯಸುತ್ತಾರೆ. ಇದರಿಂದ ಇನ್ನಷ್ಟು ಐಹಿಕ ಬಂಧನದಲ್ಲಿ ಸಿಲುಕುತ್ತಾರೆ. ಕೃಷ್ಣಪ್ರಜ್ಞೆಯಲ್ಲಿ ಮಾಡುವ ಕರ್ಮವಲ್ಲದೆ ಬೇರೆಲ್ಲ ಕರ್ಮವೂ ಹೇಯವಾದದ್ದು. ಏಕೆಂದರೆ ಅದು ಕರ್ಮಮಾಡುವವನನ್ನು ನಿರಂತರವಾಗಿ ಹುಟ್ಟು-ಸಾವುಗಳ ಚಕ್ರಕ್ಕೆ ಬಂಧಿಸುತ್ತದೆ. ಆದುದರಿಂದ ಕರ್ಮದ ಕಾರಣವಾಗಲು ಮನುಷ್ಯನು ಎಂದೂ ಬಯಸಬಾರದು. ಎಲ್ಲವನ್ನೂ ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನಿಗೆ ಪ್ರೀತಿಯಾಗಲೆಂದು ಮಾಡಬೇಕು. ಒಳ್ಳೆಯ ಅದೃಷ್ಟದಿಂದಲೋ ತಮ್ಮ ಶ್ರಮದಿಂದಲೋ ಸಂಪಾದಿಸಿದ ಸಿರಿಸ್ವತ್ತುಗಳನ್ನು ಹೇಗೆ ಬಳಸಬೇಕೆಂದು ಜಿಪುಣರಿಗೆ ತಿಳಿಯುವುದಿಲ್ಲ. ಮನುಷ್ಯನು ತನ್ನ ಶಕ್ತಿಗಳನ್ನೆಲ್ಲ ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡಲು ಬಳಸಬೇಕು. ಆಗ ಅವನ ಬದುಕು ಸಾರ್ಥಕವಾಗುತ್ತದೆ. ಜಿಪುಣರಂತೆಯೇ ದುರದೃಷ್ಟವಂತರು ತಮ್ಮ ಮನುಷ್ಯಶಕ್ತಿಯನ್ನು ಭಗವಂತನ ಸೇವೆಯಲ್ಲಿ ಬಳಸುವುದಿಲ್ಲ.

## ಶ್ಲೋಕ - 50

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ |**
**ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ||೫೦||**

**ಬುದ್ಧಿಯುಕ್ತಃ**—ಭಕ್ತಿಸೇವೆಯಲ್ಲಿ ತೊಡಗಿರುವವನು; **ಜಹಾತಿ**—ದೂರಮಾಡಬಲ್ಲನು; **ಇಹ**—ಈ ಬದುಕಿನಲ್ಲಿ; **ಉಭೇ**—ಎರಡೂ; **ಸುಕೃತದುಷ್ಕೃತೇ**—ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳನ್ನು; **ತಸ್ಮಾತ್**—ಆದ್ದರಿಂದ; **ಯೋಗಾಯ**—ಭಕ್ತಿಸೇವೆಯ ಸಲುವಾಗಿ; **ಯುಜ್ಯಸ್ವ**—ತೊಡಗು; **ಯೋಗಃ**—ಕೃಷ್ಣಪ್ರಜ್ಞೆಯು; **ಕರ್ಮಸು**—ಎಲ್ಲ ಕರ್ಮಗಳಲ್ಲಿಯೂ **ಕೌಶಲಮ್**—ಕೌಶಲ್ಯವು.

### ಅನುವಾದ

**ಭಕ್ತಿ ಸೇವೆಯಲ್ಲಿ ನಿರತನಾದವನು ಈ ಜನ್ಮದಲ್ಲಿಯೇ ಸುಕೃತ ದುಷ್ಕೃತಗಳನ್ನು ದೂರ ಮಾಡುತ್ತಾನೆ. ಆದುದರಿಂದ ಯೋಗವನ್ನು ಪಡೆಯಲು ಶ್ರಮಿಸು; ಅದೇ ಕರ್ಮಕೌಶಲ.**

### ಭಾವಾರ್ಥ

ಅನಂತ ಕಾಲದಿಂದ ಪ್ರತಿಯೊಬ್ಬ ಜೀವಿಯೂ ಸುಕೃತ-ದುಷ್ಕೃತಗಳ ಹಲವು ಪರಿಣಾಮಗಳನ್ನು ರಾಶಿಮಾಡಿಕೊಂಡಿದ್ದಾನೆ. ಆದುದರಿಂದ ಅವನಿಗೆ ಸದಾ ತನ್ನ ಸಹಜ ಸ್ವರೂಪದ ಅರಿವೇ ಇರುವುದಿಲ್ಲ. ಭಗವದ್ಗೀತೆಯ ಉಪದೇಶದಿಂದ ಮನುಷ್ಯನ ಅಜ್ಞಾನವನ್ನು ಹೋಗಲಾಡಿಸಬಹುದು. ಎಲ್ಲ ರೀತಿಗಳಲ್ಲಿ ಶ್ರೀಕೃಷ್ಣನಿಗೆ ಶರಣಾಗತನಾಗಿ, ಜನ್ಮಜನ್ಮಾಂತರಗಳಲ್ಲಿ ಕ್ರಿಯೆ-ಪ್ರತಿಕ್ರಿಯೆಗಳ ಬಂಧನದ ಯಾತನೆಯಿಂದ ಮುಕ್ತಿ ಸಾಧಿಸುವುದನ್ನು ಭಗವದ್ಗೀತೆಯು ಬೋಧಿಸುತ್ತದೆ. ಫಲನೀಡುವ ಕರ್ಮದಿಂದ ಪರಿಶುದ್ಧಗೊಳಿಸುವ ಕೃಷ್ಣಪ್ರಜ್ಞೆಯಲ್ಲಿ ಕಾರ್ಯನಿರತನಾಗಬೇಕೆಂದು ಅರ್ಜುನನಿಗೆ ಉಪದೇಶಿಸಲಾಗುತ್ತದೆ.

## ಶ್ಲೋಕ - 51

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ |**
**ಜನ್ಮಬನ್ಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಮ್ ||೫೧||**

**ಕರ್ಮಜಮ್**—ಕಾಮ್ಯಕರ್ಮಗಳಿಂದ ಉಂಟಾದ; **ಬುದ್ಧಿಯುಕ್ತಾಃ**—ಭಕ್ತಿಸೇವೆಯಲ್ಲಿ ತೊಡಗಿದ; **ಹಿ**—ನಿಶ್ಚಿತವಾಗಿಯೂ; **ಫಲಮ್**—ಫಲಗಳನ್ನು; **ತ್ಯಕ್ತ್ವಾ**—ತ್ಯಜಿಸಿ; **ಮನೀಷಿಣಃ**—ಮಹರ್ಷಿಗಳು ಅಥವಾ ಭಕ್ತರು; **ಜನ್ಮಬನ್ಧ**—ಜನನ ಮತ್ತು ಮರಣಗಳ ಬಂಧನದಿಂದ; **ವಿನಿರ್ಮುಕ್ತಾಃ**—ಮುಕ್ತರಾಗಿ; **ಪದಮ್**—ಸ್ಥಾನವನ್ನು; **ಗಚ್ಛನ್ತಿ**—ತಲಪುತ್ತಾರೆ; **ಅನಾಮಯಮ್**—ಕ್ಲೇಶರಹಿತವಾದ.

### ಅನುವಾದ

**ಹೀಗೆ ಭಕ್ತಿಸೇವೆಯಲ್ಲಿ ನಿರತರಾಗಿ ಮಹರ್ಷಿಗಳು ಅಥವಾ ಭಕ್ತರು ಐಹಿಕ ಜಗತ್ತಿನಲ್ಲಿ ಕರ್ಮಫಲದಿಂದ ಮುಕ್ತರಾಗುತ್ತಾರೆ. ಹೀಗೆ ಅವರು ಹುಟ್ಟು ಸಾವುಗಳ ಚಕ್ರದಿಂದ ಬಿಡುಗಡೆ**

**ಹೊಂದುತ್ತಾರೆ ಮತ್ತು (ಭಗವದ್ಧಾಮಕ್ಕೆ ಮರಳಿ) ಎಲ್ಲ ದುಃಖಗಳನ್ನೂ ಮೀರಿದ ಸ್ಥಿತಿಯನ್ನು ಪಡೆಯುತ್ತಾರೆ.**

## ಭಾವಾರ್ಥ

ಮುಕ್ತರಾದ ಜೀವಿಗಳು ಐಹಿಕ ದುಃಖಗಳಿಲ್ಲದ ಸ್ಥಳಕ್ಕೆ ಸೇರಿದವರು. ಭಾಗವತವು (10.14.58) ಹೀಗೆ ಹೇಳುತ್ತದೆ —

**ಸಮಾಶ್ರಿತಾ ಯೇ ಪದಪಲ್ಲವಪ್ಲವಂ**
**ಮಹತ್ಪದಂ ಪುಣ್ಯಯಶೋ ಮುರಾರೇಃ |**
**ಭವಾಮ್ಬುಧಿರ್ ವತ್ಸಪದಂ ಪರಂ ಪದಂ**
**ಪದಂ ಪದಂ ಯದ್ವಿಪದಾಂ ನ ತೇಷಾಮ್ ||**

"ಭಗವಂತನು ಸಮಸ್ತ ವಿಶ್ವಕ್ಕೆ ಆಶ್ರಯನು ಮತ್ತು ಮುಕುಂದ ಅಥವಾ ಮುಕ್ತಿದಾತ ಎಂದು ಪ್ರಸಿದ್ಧನಾಗಿದ್ದಾನೆ. ಇಂತಹ ಭಗವಂತನ ಕಮಲಚರಣಗಳ ದೋಣಿಯನ್ನು ಸ್ವೀಕರಿಸಿದವನಿಗೆ ಭವಸಾಗರವು ಗೋವಿನ ಕರುವಿನ ಹೆಜ್ಜೆಗುರುತಿನಲ್ಲಿ ನಿಂತಿರುವ ನೀರಿನಂತೆ; ಅವನ ಗುರಿಯು ಹೆಜ್ಜೆಹೆಜ್ಜೆಗೂ ಅಪಾಯವಿರುವ ಸ್ಥಳವಲ್ಲ; ಅವನ ಗುರಿ **ಪರಂ ಪದಮ್** ಅಥವಾ ಐಹಿಕ ಸಂಕಟಗಳಿಲ್ಲದ ಸ್ಥಳವಾದ ವೈಕುಂಠ."

ಅಜ್ಞಾನದಿಂದಾಗಿ ಈ ಐಹಿಕ ಜಗತ್ತು ಹೆಜ್ಜೆಹೆಜ್ಜೆಗೂ ಅಪಾಯವಿರುವ ದುಃಖದ ಸ್ಥಳ ಎಂದು ಮನುಷ್ಯನಿಗೆ ತಿಳಿಯುವುದಿಲ್ಲ. ಅಜ್ಞಾನದಿಂದಾಗಿ ಮಂದಮತಿಗಳು ಫಲಾಕಾಂಕ್ಷೆಯಿರುವ ಕರ್ಮಗಳ ಮೂಲಕ ಸನ್ನಿವೇಶಕ್ಕೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾರೆ. ಫಲವನ್ನು ಕೊಡುವ ಕ್ರಿಯೆಗಳಿಂದ ತಮಗೆ ಸುಖ ಬರುತ್ತದೆ ಎಂದುಕೊಳ್ಳುತ್ತಾರೆ. ವಿಶ್ವದಲ್ಲಿ ಎಲ್ಲಿಯೂ ಯಾವ ರೀತಿಯ ಜಡದೇಹವೂ ದುಃಖವಿಲ್ಲದ ಬದುಕನ್ನು ಕೊಡಲಾರದು ಎಂದು ಅವರಿಗೆ ತಿಳಿಯದು. ಹುಟ್ಟು, ಸಾವು, ಮುಪ್ಪು ಮತ್ತು ರೋಗಗಳು ಬದುಕಿನ ದುಃಖಗಳು. ಇವು ಐಹಿಕ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಇರುತ್ತವೆ. ಆದರೆ ಭಗವಂತನ ನಿರಂತರ ಸೇವಕನಾಗಿರುವುದೇ ಸಹಜ ಸ್ವರೂಪ ಎಂದು ತಿಳಿದವನು ಮತ್ತು ಇದರಿಂದ ದೇವೋತ್ತಮ ಪರಮ ಪುರುಷನ ಸ್ಥಾನವನ್ನು ತಿಳಿದವನು, ಭಗವಂತನ ದಿವ್ಯಪ್ರೇಮದ ಸೇವೆಯಲ್ಲಿ ನಿರತನಾಗುತ್ತಾನೆ. ಇದರ ಪರಿಣಾಮವಾಗಿ ಅವನು ವೈಕುಂಠ ಲೋಕಗಳನ್ನು ಪ್ರವೇಶಿಸಲು ಅರ್ಹನಾಗುತ್ತಾನೆ. ಅಲ್ಲಿ ಐಹಿಕ ದುಃಖಗಳ ಬದುಕೂ ಇಲ್ಲ; ಕಾಲ ಮತ್ತು ಸಾವುಗಳ ಪ್ರಭಾವವೂ ಇಲ್ಲ. ತನ್ನ ಸಹಜ ಸ್ವರೂಪವನ್ನು ತಿಳಿದುಕೊಳ್ಳುವುದೆಂದರೆ ಭಗವಂತನ ಭವ್ಯವಾದ ಸ್ಥಾನವನ್ನು ತಿಳಿದುಕೊಳ್ಳುವುದು ಎಂದೇ ಅರ್ಥ. ಜೀವಿಯ ಸ್ಥಾನವೂ ಭಗವಂತನ ಸ್ಥಾನವೂ ಒಂದೇ ಮಟ್ಟದಲ್ಲಿವೆ ಎಂಬುದಾಗಿ ಯಾರಾದರೂ ತಪ್ಪಾಗಿ ಯೋಚಿಸಿದರೆ ಆತ ಕತ್ತಲೆಯಲ್ಲಿದ್ದಾನೆ. ಆದುದರಿಂದ ಭಗವಂತನ ಭಕ್ತಿ ಸೇವೆಯಲ್ಲಿ ನಿರತನಾಗಲು ಅವನಿಗೆ ಸಾಧ್ಯವಿಲ್ಲ ಎಂದು ಭಾವಿಸಬೇಕು. ಆತನೇ ಪ್ರಭುವಾಗಿ ಬಿಡುತ್ತಾನೆ; ಹೀಗೆ ಹುಟ್ಟುಸಾವುಗಳ ಪುನರಾವರ್ತನೆಗೆ ದಾರಿಮಾಡುತ್ತಾನೆ. ಆದರೆ ಸೇವೆ ಮಾಡುವುದೇ ತನ್ನ ಸ್ಥಾನ ಎಂದು ಅರಿತವನು ತನ್ನನ್ನು ಭಗವಂತನ ಸೇವೆಗೆ ಮುಡಿಪು ಮಾಡಿಕೊಳ್ಳುತ್ತಾನೆ ಮತ್ತು ಕೂಡಲೇ ವೈಕುಂಠಲೋಕಕ್ಕೆ ಹೋಗಲು ಅರ್ಹನಾಗುತ್ತಾನೆ. ಭಗವಂತನಿಗಾಗಿ ಸೇವೆ ಸಲ್ಲಿಸುವುದಕ್ಕೆ

ಕರ್ಮಯೋಗ ಅಥವಾ ಬುದ್ಧಿಯೋಗ ಎಂದು ಹೆಸರು; ಇದನ್ನೇ ಸರಳವಾದ ಮಾತುಗಳಲ್ಲಿ ಹೇಳುವುದಾದರೆ ಇದು ಭಕ್ತಿಪೂರ್ವಕವಾದ ಭಗವಂತನ ಸೇವೆ.

## ಶ್ಲೋಕ - 52

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ||**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ||೫೨||**

**ಯದಾ**—ಯಾವಾಗ; **ತೇ**—ನಿನ್ನ; **ಮೋಹ**—ಭ್ರಮೆಯ; **ಕಲಿಲಮ್**—ಗೊಂಡಾರಣ್ಯವನ್ನು; **ಬುದ್ಧಿಃ**—ಬುದ್ಧಿಯುಕ್ತ ದಿವ್ಯಸೇವೆಯು; **ವ್ಯತಿತರಿಷ್ಯತಿ**—ದಾಟುವುದೊ; **ತದಾ**—ಆಗ; **ಗನ್ತಾ ಅಸಿ**—ನೀನು ಹೋಗುವೆ; **ನಿರ್ವೇದವಮ್**—ಉಪೇಕ್ಷೆಯನ್ನು; **ಶ್ರೋತವ್ಯಸ್ಯ**—ಕೇಳಬೇಕಾದುದರೆಲ್ಲದರ ಬಗ್ಗೆ; **ಶ್ರುತಸ್ಯ**—ಈಗಾಗಲೇ ಕೇಳಿದುದೆಲ್ಲವುಗಳ ಬಗ್ಗೆ; **ಚ**—ಕೂಡ.

### ಅನುವಾದ

**ನಿನ್ನ ಬುದ್ಧಿಯು ಭ್ರಾಂತಿಯ ದಟ್ಟವಾದ ಕಾಡಿನಿಂದ ಹೊರಕ್ಕೆ ಬಂದನಂತರ ನೀನು ಹಿಂದೆ ಕೇಳಿರುವುದೆಲ್ಲಕ್ಕೆ ಮತ್ತು ಮುಂದೆ ಕೇಳುವುದೆಲ್ಲಕ್ಕೆ ನಿರ್ಲಕ್ಷ್ಯವನ್ನು ತೋರಬೇಕು.**

### ಭಾವಾರ್ಥ

ಕೇವಲ ಭಗವಂತನ ಭಕ್ತಿಸೇವೆಯ ಮೂಲಕ ವೇದಗಳ ಧಾರ್ಮಿಕ ವಿಧಿಗಳನ್ನು ಅಲಕ್ಷಿಸುವ ಅನೇಕ ಉತ್ತಮ ನಿದರ್ಶನಗಳು ಶ್ರೇಷ್ಠ ಭಗವದ್ಭಕ್ತರ ಬದುಕಿನಲ್ಲಿ ಇವೆ. ಮನುಷ್ಯನು ಕೃಷ್ಣನನ್ನೂ ಕೃಷ್ಣನೊಡನೆ ತನ್ನ ಸಂಬಂಧವನ್ನೂ ವಾಸ್ತವವಾಗಿ ಅರ್ಥಮಾಡಿಕೊಂಡಾಗ ಅವನು ಅನುಭವಿಯಾದ ಬ್ರಾಹ್ಮಣನೇ ಆದರೂ ಸಹಜವಾಗಿ ಫಲಾಪೇಕ್ಷೆ ಇರುವ ಕರ್ಮಗಳಲ್ಲಿ ನಿರ್ಲಕ್ಷ್ಯವನ್ನು ತೋರುತ್ತಾನೆ. ಭಕ್ತ ಶ್ರೇಷ್ಠರೂ ಭಕ್ತಪರಂಪರೆಯಲ್ಲಿ ಆಚಾರ್ಯರೂ ಆದ ಶ್ರೀಮಾಧವೇಂದ್ರ ಪುರಿ ಹೀಗೆ ಹೇಳುತ್ತಾರೆ —

**ಸನ್ಧ್ಯಾವನ್ದನ ಭದ್ರಮಸ್ತು ಭವತೋ ಭೋಃ ಸ್ನಾನ ತುಭ್ಯಂ ನಮೋ**
**ಭೋ ದೇವಾಃ ಪಿತರಶ್ಚ ತರ್ಪಣವಿಧೌ ನಾಹಂ ಕ್ಷಮಃ ಕ್ಷಮ್ಯತಾಮ್ |**
**ಯತ್ರಕ್ವಾಪಿ ನಿಷದ್ಯ ಯಾದವಕುಲೋತ್ತಮಸ್ಯ ಕಂಸದ್ವಿಷಃ**
**ಸ್ಮಾರಂ ಸ್ಮಾರಮಘಂ ಹರಾಮಿ ತದಲಂ ಮನ್ಯೇ ಕಿಮನ್ಯೇನ ಮೇ ||**

"ಹೇ ಪ್ರತಿದಿನ ನಾನು ಮಾಡುವ ಸಂಧ್ಯಾವಂದನೆಗಳೇ, ನಿಮಗೆ ಜಯವಾಗಲಿ. ಸ್ನಾನವೇ, ನಿನಗೆ ನನ್ನ ಪ್ರಣಾಮಗಳು, ಹೇ ದೇವತೆಗಳೇ! ಹೇ ಪಿತೃಗಳೇ! ನಿಮಗೆ ತರ್ಪಣವಿಧಿ ಸಲ್ಲಿಸಲು ಅಸಮರ್ಥನಾಗಿದ್ದೇನೆ, ಕ್ಷಮಿಸಿ. ಈಗ ನಾನು ಎಲ್ಲೇ ಇರಲಿ, ಯದುಕುಲ ಶ್ರೇಷ್ಠನೂ ಕಂಸನ ಶತ್ರುವೂ ಆದವನನ್ನು (ಕೃಷ್ಣನನ್ನು) ಸ್ಮರಿಸುತ್ತೇನೆ. ಇದರಿಂದ ನಾನು ಎಲ್ಲ ಪಾಪಬಂಧನಗಳಿಂದ ಮುಕ್ತನಾಗುತ್ತೇನೆ. ನನಗೆ ಇಷ್ಟೇ ಸಾಕು ಎನ್ನಿಸುತ್ತದೆ."

ದಿನಕ್ಕೆ ಮೂರು ಬಾರಿ ಸಂಧ್ಯಾವಂದನೆಯನ್ನು ಮಾಡುವುದು, ಉಷಃಕಾಲದಲ್ಲಿ ಸ್ನಾನ ಮಾಡುವುದು, ಪಿತೃಗಳಿಗೆ ತರ್ಪಣ ನೀಡುವುದು ಮೊದಲಾದ ವೇದೋಕ್ತ ವಿಧಿಗಳನ್ನು ಹೊಸದಾಗಿ ದೀಕ್ಷೆಪಡೆದವರು ಆಚರಿಸಲೇಬೇಕು. ಆದರೆ ಯಾರೇ ಆಗಲಿ ಕೃಷ್ಣಪ್ರಜ್ಞೆಯಲ್ಲೇ ತನ್ಮಯನಾಗಿದ್ದು ಕೃಷ್ಣನ ಪ್ರೇಮಪೂರ್ವಕ ಸೇವೆಯಲ್ಲಿ ನಿರತನಾಗಿದ್ದರೆ ಅಂತಹವನು ಯಾವ ವಿಧಿಸೂತ್ರಗಳಿಗೂ ಲಕ್ಷ್ಯವನ್ನೇ ಕೊಡುವುದಿಲ್ಲ. ಏಕೆಂದರೆ ಆತನು ಆಗಲೇ ಪರಿಪೂರ್ಣತೆಯನ್ನು ಸಾಧಿಸಿಬಿಟ್ಟಿದ್ದಾನೆ. ಪರಮ ಪ್ರಭು ಕೃಷ್ಣನ ಸೇವೆಯಿಂದ ಒಬ್ಬನು ಜ್ಞಾನವೇದಿಕೆಯನ್ನು ಮುಟ್ಟಬಲ್ಲನಾದರೆ, ಶಾಸ್ತ್ರಗಳಲ್ಲಿ ಹೇಳಿರುವ ವಿವಿಧ ತಪಸ್ಸುಗಳ ಮತ್ತು ಯಾಗಗಳ ಅಗತ್ಯವೇ ಆತನಿಗಿಲ್ಲ. ಹಾಗೆಯೇ, ವೇದಗಳ ಗುರಿಯು ಕೃಷ್ಣನನ್ನು ತಲಪುವುದು ಎನ್ನುವುದನ್ನು ಅರ್ಥಮಾಡಿಕೊಳ್ಳದೆ ವಿಧಿಗಳ ಆಚರಣೆಯಲ್ಲೇ ಮುಳುಗಿದವನು ಇಂತಹ ಆಚರಣೆಗಳಲ್ಲಿ ಕಾಲವನ್ನು ವ್ಯರ್ಥವಾಗಿ ಕಳೆಯುತ್ತಾನೆ. ಕೃಷ್ಣಪ್ರಜ್ಞೆಯಲ್ಲಿರುವವರು ಶಬ್ದ ಬ್ರಹ್ಮವನ್ನು ಅಥವಾ ವೇದ, ಉಪನಿಷತ್ತುಗಳ ವ್ಯಾಪ್ತಿಯನ್ನು ಮೀರಿರುತ್ತಾರೆ.

## ಶ್ಲೋಕ - 53

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ |**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ||೫೩||**

**ಶ್ರುತಿ**—ವೇದಗಳ ದರ್ಶನದ; **ವಿಪ್ರತಿಪನ್ನಾ**—ಕಾಮ್ಯಕರ್ಮ ಫಲಗಳಿಂದ ಪ್ರಭಾವಿತವಾಗದೆ; **ತೇ**—ನಿನ್ನ; **ಯದಾ**—ಯಾವಾಗ; **ಸ್ಥಾಸ್ಯತಿ**—ಉಳಿಯುತ್ತದೋ; **ನಿಶ್ಚಲಾ**—ಅಚಲವಾಗಿ; **ಸಮಾಧೌ**—ದಿವ್ಯಪ್ರಜ್ಞೆಯಲ್ಲಿ ಅಥವಾ ಕೃಷ್ಣಪ್ರಜ್ಞೆಯಲ್ಲಿ; **ಅಚಲಾ**—ನಿಶ್ಚಲವಾಗಿ; **ಬುದ್ಧಿಃ**—ಬುದ್ಧಿಯು; **ತದಾ**—ಆಗ; **ಯೋಗಮ್**—ಆತ್ಮಸಾಕ್ಷಾತ್ಕಾರವನ್ನು; **ಅವಾಪ್ಸ್ಯಸಿ**—ಹೊಂದುತ್ತೀಯೆ.

## ಅನುವಾದ

**ವೇದಗಳ ಆಲಂಕಾರಿಕ ಭಾಷೆಯು ನಿನ್ನ ಮನಸ್ಸನ್ನು ಕಲಕದೆ ಇರುವಾಗ, ಮನಸ್ಸು ಸಮಾಧಿಯಲ್ಲಿ ನಿಶ್ಚಲವಾಗಿರುವಾಗ ನೀನು ದಿವ್ಯಪ್ರಜ್ಞೆ ಪಡೆಯುತ್ತೀಯೆ.**

## ಭಾವಾರ್ಥ

ಮನುಷ್ಯ ಸಮಾಧಿಯಲ್ಲಿದ್ದಾನೆ ಎಂದರೆ ಅವನು ಕೃಷ್ಣಪ್ರಜ್ಞೆಯನ್ನು ಸಂಪೂರ್ಣವಾಗಿ ಸಾಕ್ಷಾತ್ಕರಿಸಿಕೊಂಡಿದ್ದಾನೆ ಎಂದರ್ಥ; ಎಂದರೆ, ಪೂರ್ಣ ಸಮಾಧಿಯಲ್ಲಿರುವವನು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನರನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದಾನೆ. ಆತ್ಮಸಾಕ್ಷಾತ್ಕಾರದ ಅತ್ಯುನ್ನತ ಪರಿಪೂರ್ಣತೆ ಎಂದರೆ ತಾನು ಎಂದೆಂದೂ ಕೃಷ್ಣನ ಸೇವಕ, ಕೃಷ್ಣಪ್ರಜ್ಞೆಯಲ್ಲಿ ಕರ್ತವ್ಯನಿಷ್ಠನಾಗುವುದಷ್ಟೇ ತನ್ನ ಏಕೈಕ ಕೆಲಸ ಎನ್ನುವುದನ್ನು ಅರ್ಥಮಾಡಿಕೊಳ್ಳುವುದು. ಭಗವಂತನ ಅಚಲಭಕ್ತನಾಗಿ ಕೃಷ್ಣಪ್ರಜ್ಞೆ ಇರುವಾತನ ಮನಸ್ಸು ವೇದಗಳ ಆಲಂಕಾರಿಕ ಭಾಷೆಯಿಂದ ಕಲಕಿಹೋಗಬಾರದು. ಆತನು ಸ್ವರ್ಗವನ್ನು ಪಡೆಯುವುದಕ್ಕಾಗಿ ಫಲಾಪೇಕ್ಷೆ ಇರುವ ಕರ್ಮವನ್ನು ಮಾಡಬಾರದು. ಕೃಷ್ಣಪ್ರಜ್ಞೆಯಲ್ಲಿ ಮನುಷ್ಯನು ಕೃಷ್ಣನೊಡನೆ ನೇರವಾಗಿ ಸಂಪರ್ಕವನ್ನು

ಪಡೆಯುತ್ತಾನೆ. ಆದುದರಿಂದ ಆ ಅಲೌಕಿಕ ಸ್ಥಿತಿಯಲ್ಲಿ ಕೃಷ್ಣನಿಂದ ಬರುವ ಎಲ್ಲ ಆದೇಶಗಳೂ ಅರ್ಥವಾಗುತ್ತವೆ. ಇಂತಹ ಚಟುವಟಿಕೆಗಳಿಂದ ಮನುಷ್ಯನು ನಿಶ್ಚಯವಾಗಿ ಫಲವನ್ನು ಪಡೆಯುತ್ತಾನೆ ಮತ್ತು ಪರಿಪೂರ್ಣ ಜ್ಞಾನವನ್ನೂ ಪಡೆಯುತ್ತಾನೆ. ಇದಕ್ಕೆ ಕೃಷ್ಣನ ಅಥವಾ ಅವನ ಪ್ರತಿನಿಧಿಯಾದ ಗುರುವಿನ ಅಪ್ಪಣೆಗಳನ್ನು ಪರಿಪಾಲಿಸಬೇಕು, ಅಷ್ಟೇ.

## ಶ್ಲೋಕ - 54

**ಅರ್ಜುನ ಉವಾಚ**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥೫೪॥**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಸ್ಥಿತಪ್ರಜ್ಞಸ್ಯ**—ಸ್ಥಿರವಾದ ಕೃಷ್ಣಪ್ರಜ್ಞೆಯಲ್ಲಿ ನೆಲೆಸಿರುವವನ; **ಕಾ**—ಏನು; **ಭಾಷಾ**—ಭಾಷೆಯು; **ಸಮಾಧಿಸ್ಥಸ್ಯ**— ಸಮಾಧಿಯಲ್ಲಿರುವವನ; **ಕೇಶವ**—ಕೃಷ್ಣನೇ; **ಸ್ಥಿತಧೀಃ**—ಕೃಷ್ಣಪ್ರಜ್ಞೆಯಲ್ಲಿ ಸ್ಥಿರನಾಗಿರುವವನು; **ಕಿಮ್**—ಏನು; **ಪ್ರಭಾಷೇತ**—ಮಾತನಾಡುತ್ತಾನೆ; **ಕಿಮ್**—ಹೇಗೆ; **ಆಸೀತ**—ಕುಳಿತಿರುತ್ತಾನೆ; **ವ್ರಜೇತ**—ನಡೆಯುತ್ತಾನೆ; **ಕಿಮ್**—ಹೇಗೆ.

### ಅನುವಾದ

**ಅರ್ಜುನನು ಹೇಳುತ್ತಾನೆ — ಕೃಷ್ಣನೇ, ಯಾರ ಪ್ರಜ್ಞೆಯು ದಿವ್ಯತ್ವದಲ್ಲಿ ಇದೆಯೋ ಅವನ ಲಕ್ಷಣಗಳೇನು? ಅವನು ಹೇಗೆ ಮಾತನಾಡುತ್ತಾನೆ? ಅವನ ಭಾಷೆ ಯಾವುದು? ಅವನು ಹೇಗೆ ಕುಳಿತುಕೊಳ್ಳುತ್ತಾನೆ? ಹೇಗೆ ನಡೆಯುತ್ತಾನೆ?**

### ಭಾವಾರ್ಥ

ಪ್ರತಿಯೊಬ್ಬನಿಗೂ ಅವನವನ ವಿಶಿಷ್ಟ ಸ್ಥಿತಿಯಿಂದ ಕೆಲವು ಲಕ್ಷಣಗಳಿರುತ್ತವೆ; ಇದೇ ರೀತಿ ಕೃಷ್ಣಪ್ರಜ್ಞೆ ಇರುವವನಿಗೆ ಮಾತಿನಲ್ಲಿ, ನಡೆಯಲ್ಲಿ, ವಿಚಾರರೀತಿಯಲ್ಲಿ, ಭಾವದಲ್ಲಿ ಅವನ ವಿಶಿಷ್ಟ ಸ್ವಭಾವವಿರುತ್ತದೆ. ಐಶ್ವರ್ಯವಂತನಾದವನು ಐಶ್ವರ್ಯವಂತನೆಂದು ತೋರಿಸುವ ಲಕ್ಷಣಗಳಿರುವ ಹಾಗೆ, ರೋಗಿಗೆ ಅವನು ರೋಗಿ ಎಂದು ತೋರಿಸುವ ಲಕ್ಷಣಗಳಿರುವ ಹಾಗೆ ಅಥವಾ ವಿದ್ವಾಂಸನಿಗೆ ಅವನದೇ ಲಕ್ಷಣಗಳಿರುವಂತೆ ಕೃಷ್ಣನ ದಿವ್ಯಪ್ರಜ್ಞೆಯಲ್ಲಿರುವಾತನಿಗೆ ವಿವಿಧ ವ್ಯವಹಾರಗಳಲ್ಲಿ ನಿರ್ದಿಷ್ಟ ಲಕ್ಷಣಗಳಿರುತ್ತವೆ. ಆತನ ವಿಶಿಷ್ಟ ಲಕ್ಷಣಗಳನ್ನು ಭಗವದ್ಗೀತೆಯಿಂದ ತಿಳಿದುಕೊಳ್ಳಬಹುದು. ಬಹು ಮುಖ್ಯವಾದ ಸಂಗತಿಯೆಂದರೆ ಕೃಷ್ಣಪ್ರಜ್ಞೆಯಲ್ಲಿರುವಾತನು ಹೇಗೆ ಮಾತನಾಡುತ್ತಾನೆ ಎನ್ನುವುದು. ಏಕೆಂದರೆ ಯಾವುದೇ ಮನುಷ್ಯನ ಮುಖ್ಯಗುಣ ಮಾತು. ಮೂರ್ಖನು ಮಾತನಾಡದಿದ್ದಷ್ಟು ಹೊತ್ತೂ ನಿಜವು ಹೊರಬೀಳುವುದಿಲ್ಲವೆಂದು ಹೇಳುತ್ತಾರೆ. ಸೊಗಸಾಗಿ ಉಡುಪು ಹಾಕಿಕೊಂಡಿರುವ ಮೂರ್ಖನು ಮಾತನಾಡದಿದ್ದರೆ ನಿಶ್ಚಯವಾಗಿಯೂ ಅವನ ವಿಷಯ ತಿಳಿಯುವುದಿಲ್ಲ. ಆದರೆ ಅವನು ಮಾತನಾಡುತ್ತಲೇ ನಿಜವು ಹೊರಬೀಳುತ್ತದೆ. ಕೃಷ್ಣಪ್ರಜ್ಞೆಯ ಮನುಷ್ಯನ ತಕ್ಷಣದ ಲಕ್ಷಣವೆಂದರೆ ಅವನು ಕೃಷ್ಣನನ್ನು ಕುರಿತು ಮತ್ತು ಅವನಿಗೆ

ಸಂಬಂಧಿಸಿದ ವಿಷಯಗಳನ್ನು ಕುರಿತು ಮಾತ್ರ ಮಾತನಾಡುತ್ತಾನೆ. ಕೆಳಗೆ ಹೇಳಿರುವಂತೆ ಇತರ ಲಕ್ಷಣಗಳು ಅನಂತರ ಸಹಜವಾಗಿ ಬರುತ್ತವೆ.

## ಶ್ಲೋಕ - 55

**ಶ್ರೀ ಭಗವಾನುವಾಚ**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ||೫೫||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಪ್ರಜಹಾತಿ**—ತ್ಯಜಿಸುತ್ತಾನೋ; **ಯದಾ**—ಯಾವಾಗ; **ಕಾಮಾನ್**—ಇಂದ್ರಿಯತೃಪ್ತಿಯ ಅಪೇಕ್ಷೆಗಳನ್ನು; **ಸರ್ವಾನ್**—ಸಕಲವಿಧದ; **ಪಾರ್ಥ**—ಪೃಥೆಯ ಪುತ್ರನೇ; **ಮನಃಗತಾನ್**—ಮಾನಸಿಕ ಕಲ್ಪನೆಗಳಾದ; **ಆತ್ಮನಿ**—ಆತ್ಮನ ಶುದ್ಧಸ್ಥಿತಿಯಲ್ಲಿ; **ಏವ**—ನಿಶ್ಚಿತವಾಗಿಯೂ; **ಆತ್ಮನಾ**— ಶುದ್ಧಮನಸ್ಸಿನಿಂದ; **ತುಷ್ಟಃ**—ತೃಪ್ತನಾಗಿ; **ಸ್ಥಿತಪ್ರಜ್ಞಃ**—ದಿವ್ಯಸ್ಥಿತನೆಂದು; **ತದಾ**—ಆಗ; **ಉಚ್ಯತೇ** —ಹೇಳಲಾಗುತ್ತದೆ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೇಳಿದನು — ಪಾರ್ಥ, ಮನಸ್ಸಿನ ಕಲ್ಪನೆಗಳಿಂದ ಇಂದ್ರಿಯ ಸುಖದ ವಿವಿಧ ಬಯಕೆಗಳು ಉಂಟಾಗುತ್ತವೆ. ಒಬ್ಬ ಮನುಷ್ಯನು ಇಂದ್ರಿಯಸುಖದ ಎಲ್ಲ ಬಗೆಯ ಆಸೆಗಳನ್ನು ತ್ಯಜಿಸಿ, ಅವನ ಮನಸ್ಸು ಪರಿಶುದ್ಧವಾಗಿ ಆತ್ಮದಲ್ಲೇ ಸಂತುಷ್ಟನಾದಾಗ ಆತನನ್ನು ಶುದ್ಧ ದಿವ್ಯ ಪ್ರಜ್ಞೆಯಲ್ಲಿ ಇರುವವನೆಂದು ಕರೆಯುವರು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಗವಂತನ ಭಕ್ತಿ ಸೇವೆಯಲ್ಲಿ ತನ್ಮಯನಾಗಿರುವ ಮನುಷ್ಯನಿಗೆ ಮಹರ್ಷಿಗಳ ಎಲ್ಲ ಸದ್ಗುಣಗಳೂ ಇರುತ್ತವೆ. ಆದರೆ ಹೀಗೆ ಆಧ್ಯಾತ್ಮಿಕ ನೆಲೆಯಿಲ್ಲದವನಿಗೆ ಒಳ್ಳೆಯ ಅರ್ಹತೆಯಿರುವುದಿಲ್ಲ. ಏಕೆಂದರೆ ಆತನು ತನ್ನ ಮನಸ್ಸಿನ ಕಲ್ಪನೆಗಳನ್ನೇ ಆಶ್ರಯಿಸುತ್ತಾನೆ. ಹೀಗೆಂದು ಭಾಗವತವು ಹೇಳುತ್ತದೆ. ಮನಸ್ಸಿನ ಕಲ್ಪನೆಗಳು ಸೃಷ್ಟಿ ಮಾಡುವ ಎಲ್ಲ ಬಗೆಯ ಇಂದ್ರಿಯಾಪೇಕ್ಷೆಗಳನ್ನು ಮನುಷ್ಯನು ತ್ಯಜಿಸಬೇಕೆಂದು ಇಲ್ಲಿ ಸರಿಯಾಗಿಯೇ ಹೇಳಿದೆ. ಇಂತಹ ಇಂದ್ರಿಯಾಪೇಕ್ಷೆಗಳನ್ನು ಕೃತಕವಾಗಿ ತಡೆಯಲು ಸಾಧ್ಯವಿಲ್ಲ. ಆದರೆ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವಾಗ ಹೊರಗಿನ ಪ್ರಯತ್ನವೇ ಇಲ್ಲದೆ ಇಂದ್ರಿಯಾಪೇಕ್ಷೆಗಳು ತಾವಾಗಿಯೇ ಅಡಗುತ್ತವೆ. ಆದುದರಿಂದ ಮನುಷ್ಯನು ಯಾವ ಹಿಂಜರಿಕೆಯಿಲ್ಲದೆ ಕೃಷ್ಣಪ್ರಜ್ಞೆಯನ್ನು ಬೆಳಸಿಕೊಳ್ಳಬೇಕು. ಏಕೆಂದರೆ ಈ ಭಕ್ತಿಸೇವೆಯಿಂದ ಆತನು ಕೂಡಲೇ ಅಲೌಕಿಕ ಪ್ರಜ್ಞೆಯ ವೇದಿಕೆಗೇರುತ್ತಾನೆ. ಪ್ರಗತಿ ಹೊಂದಿದ ಆತ್ಮನು ತಾನು ಪರಮ ಪ್ರಭುವಿನ ನಿರಂತರ ಸೇವಕನೆನ್ನುವುದನ್ನು ಅರಿತುಕೊಂಡು ತನ್ನಲ್ಲಿ ಸದಾ ಸಂತೃಪ್ತನಾಗುತ್ತಾನೆ; ಅಂತಹ ದಿವ್ಯಸ್ಥಿತಿಯಲ್ಲಿರುವವನಿಗೆ ಕ್ಷುದ್ರ ಪ್ರಾಪಂಚಿಕತೆಯಿಂದುಂಟಾಗುವ ಇಂದ್ರಿಯ

ಬಯಕೆಗಳಿರುವುದಿಲ್ಲ. ಬದಲಾಗಿ ಪ್ರಭುವಿನ ನಿತ್ಯಸೇವೆ ಮಾಡುವ ತನ್ನ ಸಹಜ ಸ್ಥಿತಿಯಲ್ಲಿ ಆತನು ಸದಾ ಸುಖಿಯಾಗಿರುತ್ತಾನೆ.

## ಶ್ಲೋಕ - 56

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ |**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ||೫೬||**

**ದುಃಖೇಷು**—ಮೂರುಬಗೆಯ ಕ್ಲೇಶಗಳಲ್ಲಿ; **ಅನುದ್ವಿಗ್ನಮನಾಃ**—ಕ್ಷೋಭೆಗೊಳ್ಳದ ಮನಸ್ಸುಳ್ಳವನು; **ಸುಖೇಷು**—ಸುಖಗಳಲ್ಲಿ; **ವಿಗತ ಸ್ಪೃಹಃ**—ಆಸಕ್ತನಾಗದ; **ವೀತ**—ಇಲ್ಲದ; **ರಾಗ**—ಆಸಕ್ತಿ; **ಭಯ**—ಭೀತಿ; **ಕ್ರೋಧಃ**—ಮತ್ತು ಕೋಪಗಳುಳ್ಳ; **ಸ್ಥಿತಧೀಃ**—ನಿಶ್ಚಲವಾದ ಬುದ್ಧಿಯುಳ್ಳ; **ಮುನಿಃ**—ಮುನಿ ಎಂದು; **ಉಚ್ಯತೇ**—ಕರೆಯಲ್ಪಡುತ್ತಾನೆ.

## ಅನುವಾದ

**ತ್ರಿವಿಧವಾದ ದುಃಖಗಳಿಂದ ಮನಸ್ಸಿನಲ್ಲಿ ಉದ್ವಿಗ್ನನಾಗದವನು, ಸುಖದಿಂದ ಉಬ್ಬದವನು, ರಾಗ, ಭಯ, ಕ್ರೋಧಗಳಿಲ್ಲದವನು ಸ್ಥಿರಮನಸ್ಸಿನ ಋಷಿ ಎನಿಸಿಕೊಳ್ಳುತ್ತಾನೆ.**

## ಭಾವಾರ್ಥ

ಒಂದು ವಾಸ್ತವ ನಿರ್ಣಯಕ್ಕೆ ಬಾರದೆ, ಮನಸ್ಸನ್ನು ವಿಧವಿಧವಾಗಿ ಕದಡಿ ಊಹೆಗಳಲ್ಲಿ ತೊಡಗಿಸಬಲ್ಲವನನ್ನು **ಮುನಿ** ಎಂದು ಕರೆಯಲಾಗುತ್ತದೆ. ಪ್ರತಿಯೊಬ್ಬ ಮುನಿಗೂ ತನ್ನದೇ ಆದ ದೃಷ್ಟಿಕೋನವಿದೆ. ಇತರ ಮುನಿಗಳ ಅಭಿಪ್ರಾಯಗಳಿಗಿಂತ ಬೇರೆಯಾದ ಅಭಿಪ್ರಾಯವಿಲ್ಲದವನನ್ನು ಮುನಿಯೆಂದು ಕರೆಯುವುದೇ ಸಾಧ್ಯವಿಲ್ಲ ಎನ್ನುತ್ತಾರೆ. **ನ ಚಾಸಾವೃಷಿರ್ಯಸ್ಯ ಮತಂ ನ ಭಿನ್ನಮ್** (ಮಹಾಭಾರತ, ವನಪರ್ವ 313.117) ಆದರೆ ಇಲ್ಲಿ ಭಗವಂತನು ಹೇಳುವ, **ಸ್ಥಿತಧೀರ್ ಮುನಿ**ಯು ಯಾವಾಗಲೂ ಕೃಷ್ಣಪ್ರಜ್ಞೆಯಲ್ಲಿರುವವನು. ಏಕೆಂದರೆ ಆತನು ಎಲ್ಲ ಸೃಷ್ಟ್ಯಾತ್ಮಕ ಊಹೆಗಳನ್ನು ಮುಗಿಸಿಬಿಟ್ಟಿದ್ದಾನೆ. ಆತನನ್ನು **ಪ್ರಶಾಂತ ನಿಃಶೇಷ ಮನೋರಥಾನ್ತರ** (ಸ್ತೋತ್ರರತ್ನ 43) ಎಂದು ಕರೆಯುತ್ತಾರೆ. ಹೀಗೆಂದರೆ ಮನಸ್ಸಿನ ಊಹೆಗಳ ಹಂತವನ್ನು ದಾಟಿ ಪ್ರಭು ಶ್ರೀಕೃಷ್ಣ ಅಥವಾ ವಾಸುದೇವನೇ ಸರ್ವಸ್ವ (**ವಾಸುದೇವಃ ಸರ್ವಮ್ ಇತಿ ಸ ಮಹಾತ್ಮಾ ಸು ದುರ್ಲಭಃ**) ಎನ್ನುವ ನಿರ್ಣಯಕ್ಕೆ ಬಂದವನು. ಅವನನ್ನು **ಸ್ಥಿತಧೀರ್ ಮುನಿ** ಅಥವಾ ಸ್ಥಿತಮನಸ್ಸಿನ ಮುನಿ ಎಂದು ಕರೆಯುತ್ತಾರೆ. ಹೀಗೆ ಪೂರ್ಣ ಕೃಷ್ಣಪ್ರಜ್ಞೆಯುಳ್ಳವನಿಗೆ ತ್ರಿವಿಧ ದುಃಖಗಳ ಆಕ್ರಮಣದಿಂದ ಮನಸ್ಸು ಕಲಕುವುದಿಲ್ಲ; ಏಕೆಂದರೆ ಅವನು ಎಲ್ಲ ದುಃಖಗಳನ್ನು ದೈವಕೃಪೆಯೆಂದು ಸ್ವೀಕರಿಸುತ್ತಾನೆ; ತನ್ನ ಹಿಂದಿನ ಅಪರಾಧಗಳಿಂದಾಗಿ ತಾನು ಇನ್ನೂ ಹೆಚ್ಚಿನ ದುಃಖಕ್ಕೆ ಮಾತ್ರ ಅರ್ಹ ಎಂದು ಭಾವಿಸುತ್ತಾನೆ ಮತ್ತು ಭಗವಂತನ ಕೃಪೆಯಿಂದ ತನ್ನ ದುಃಖಗಳು ಕನಿಷ್ಠ ಪ್ರಮಾಣಕ್ಕಿಳಿದಿವೆ ಎಂದು ಕಾಣುತ್ತಾನೆ. ಹೀಗೆಯೇ ತನಗೆ ಸುಖವು ಬಂದಾಗ ತಾನು ಸುಖಕ್ಕೆ ಅರ್ಹನಲ್ಲ ಎಂದು ಭಾವಿಸಿ ಭಗವಂತನೇ ಅದಕ್ಕೆ ಕಾರಣ ಎಂದು ಕೃತಜ್ಞನಾಗುತ್ತಾನೆ. ಭಗವಂತನ ಕೃಪೆಯಿಂದ ಮಾತ್ರವೇ ತಾನು ಇಷ್ಟು ನೆಮ್ಮದಿಯ

ಸ್ಥಿತಿಯಲ್ಲಿದ್ದು ಭಗವಂತನಿಗೆ ಇನ್ನೂ ಉತ್ತಮವಾದ ಸೇವೆಯನ್ನು ಸಲ್ಲಿಸುವುದು ಸಾಧ್ಯವಾಗಿದೆ ಎಂದು ಅರಿತುಕೊಳ್ಳುತ್ತಾನೆ. ಭಗವಂತನ ಸೇವೆಗಾಗಿ ಆತನು ಸದಾ ದಿಟ್ಟನೂ ಕ್ರಿಯಾಶೀಲನೂ ಆಗಿರುತ್ತಾನೆ ಮತ್ತು ಮೋಹದಿಂದಾಗಲೀ ದ್ವೇಷದಿಂದಲಾಗಲೀ ಪ್ರಭಾವಿತನಾಗುವುದಿಲ್ಲ. ಮೋಹವೆಂದರೆ ತನ್ನ ಇಂದ್ರಿಯತೃಪ್ತಿಗಾಗಿ ವಸ್ತುಗಳನ್ನು ಸ್ವೀಕರಿಸುವುದು. ಇಂತಹ ಇಂದ್ರಿಯ ಮೋಹವಿಲ್ಲದಿರುವುದು ನಿರ್ಲಿಪ್ತತೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ನಿಷ್ಠಾವಂತನಾಗಿರುವವನಿಗೆ ಮೋಹವೂ ಇಲ್ಲ, ನಿರ್ಲಿಪ್ತತೆಯೂ ಇಲ್ಲ. ಏಕೆಂದರೆ ಅವನ ಬದುಕು ಭಗವಂತನ ಸೇವೆಗೆ ಸಮರ್ಪಿತವಾಗಿದೆ. ಇದರಿಂದ ಅವನ ಪ್ರಯತ್ನಗಳು ಯಶಸ್ವಿಯಾಗದಿದ್ದರೆ ಅವನಿಗೆ ಕೋಪವಿಲ್ಲ. ಗೆಲುವಾಗಲೀ ಸೋಲಾಗಲೀ ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ದೃಢಸಂಕಲ್ಪವುಳ್ಳವನಾಗಿರುತ್ತಾನೆ.

## ಶ್ಲೋಕ - 57

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ |**
**ನಾಭಿನನ್ದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ||೫೭||**

**ಯಃ**—ಯಾರು; **ಸರ್ವತ್ರ**—ಎಲ್ಲ ಕಡೆಗಳಲ್ಲಿಯೂ; **ಅನಭಿಸ್ನೇಹಃ**—ಪ್ರೀತಿಯಿಲ್ಲದೆ; **ತತ್**—ಅದನ್ನು; **ತತ್**—ಅದನ್ನು; **ಪ್ರಾಪ್ಯ**—ಪಡೆದು; **ಶುಭ**—ಒಳಿತು; **ಅಶುಭಮ್**—ಕೆಡಕುಗಳನ್ನು; **ನ ಅಭಿನನ್ದತಿ**—ಹೊಗಳುವುದಿಲ್ಲ; **ನ ದ್ವೇಷ್ಟಿ**—ದ್ವೇಷಿಸುವುದಿಲ್ಲ; **ತಸ್ಯ**—ಅವನ; **ಪ್ರಜ್ಞಾ**—ಸಂಪೂರ್ಣಜ್ಞಾನವು; **ಪ್ರತಿಷ್ಠಿತಾ**—ಸ್ಥಿರವಾಗಿರುತ್ತದೆ.

## ಅನುವಾದ

**ಐಹಿಕ ಜಗತ್ತಿನಲ್ಲಿ ಒಳ್ಳೆಯದಾಗಲಿ ಕೆಟ್ಟದಾಗಲಿ ಯಾರ ಮನಸ್ಸನ್ನು ತಾಗುವುದಿಲ್ಲವೋ, ಯಾರು ಅದನ್ನು ಹೊಗಳುವುದೂ ಇಲ್ಲವೋ, ತೆಗಳುವುದೂ ಇಲ್ಲವೋ, ಅಂತಹವರು ಪರಿಪೂರ್ಣ ಜ್ಞಾನದಲ್ಲಿ ಸ್ಥಿರರಾಗಿರುತ್ತಾರೆ.**

## ಭಾವಾರ್ಥ

ಐಹಿಕ ಜಗತ್ತಿನಲ್ಲಿ ಯಾವಾಗಲೂ ಏರುಪೇರಾಗುತ್ತಲೇ ಇರುತ್ತದೆ. ಇದು ಒಳ್ಳೆಯದಾಗಿರಬಹುದು ಅಥವಾ ಕೆಟ್ಟದ್ದಾಗಿರಬಹುದು. ಇಂತಹ ಪ್ರಾಪಂಚಿಕ ಏರುಪೇರುಗಳಿಂದ ಯಾರು ಉದ್ವಿಗ್ನರಾಗುವುದಿಲ್ಲವೋ, ಯಾರ ಮನಸ್ಸನ್ನು ಒಳ್ಳೆಯದಾಗಲೀ ಕೆಟ್ಟದ್ದಾಗಲೀ ತಾಗುವುದಿಲ್ಲವೋ ಅವರು ಕೃಷ್ಣಪ್ರಜ್ಞೆಯಲ್ಲಿ ನಿಷ್ಠಾವಂತರಾಗಿದ್ದಾರೆ ಎಂದು ಅರ್ಥಮಾಡಿಕೊಳ್ಳಬೇಕು. ಈ ಪ್ರಪಂಚವೇ ದ್ವಂದ್ವಮಯವಾದದ್ದು, ಆದುದರಿಂದ ಮನುಷ್ಯನು ಈ ಐಹಿಕ ಪ್ರಪಂಚದಲ್ಲಿ ಇರುವವರೆಗೆ ಒಳ್ಳೆಯದರ ಮತ್ತು ಕೆಟ್ಟದ್ದರ ಸಾಧ್ಯತೆ ಇದ್ದೇ ಇರುತ್ತದೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ನಿಷ್ಠನಾಗಿರುವವನಿಗೆ ಸಕಲ ಮಂಗಳಪೂರ್ಣನಾದ ಶ್ರೀಕೃಷ್ಣನೊಡನೆ ಮಾತ್ರ ಸಂಬಂಧ. ಆದುದರಿಂದ ಶುಭಾಶುಭಗಳಿಂದ ಬಾಧಿತನಾಗುವುದಿಲ್ಲ. ಇಂತಹ ಕೃಷ್ಣಪ್ರಜ್ಞೆಯು ಮನುಷ್ಯನನ್ನು ಪರಿಪೂರ್ಣವಾದ ಅಲೌಕಿಕ ಸ್ಥಿತಿಯಲ್ಲಿ ಇರಿಸುತ್ತದೆ. ಈ ಸ್ಥಿತಿಯನ್ನು

ಸಮಾಧಿ ಎಂದು ಕರೆಯುತ್ತಾರೆ.

## ಶ್ಲೋಕ - 58

**ಯದಾ ಸಂಹರತೇ ಚಾಯಂ ಕೂರ್ಮೋಽನ್ಗಾನೀವ ಸರ್ವಶಃ |**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ||೫೮||**

**ಯದಾ**—ಯಾವಾಗ; **ಸಂಹರತೇ**—ಹಿಂದೆಗೆದುಕೊಳ್ಳುವನೋ; **ಚ**—ಕೂಡ; **ಅಯಮ್ಃ**—ಅವನು; **ಕೂರ್ಮಃ**—ಆಮೆಯು; **ಅನ್ಗಾನಿ**—ಅವಯವಗಳನ್ನು; **ಇವ**—ಹಾಗೆ; **ಸರ್ವಶಃ**— ಪೂರ್ತಿಯಾಗಿ; **ಇನ್ದ್ರೀಯಾಣಿ**—ಇಂದ್ರಿಯಗಳನ್ನು; **ಇನ್ದ್ರಿಯ ಅರ್ಥೇಭ್ಯಃ**—ಇಂದ್ರಿಯ ವಿಷಯಗಳಿಂದ; **ತಸ್ಯ**—ಅವನ; **ಪ್ರಜ್ಞಾ**—ಪ್ರಜ್ಞೆಯು; **ಪ್ರತಿಷ್ಠಿತಾ**—ಸ್ಥಿರವಾಗಿರುತ್ತದೆ.

## ಅನುವಾದ

**ಆಮೆಯು ತನ್ನ ಅಂಗಗಳನ್ನು ಚಿಪ್ಪಿನೊಳಕ್ಕೆ ಎಳೆದುಕೊಳ್ಳುವಂತೆ ಯಾರು ತನ್ನ ಇಂದ್ರಿಯಗಳನ್ನು ಇಂದ್ರಿಯ ವಿಷಯಗಳಿಂದ ಹಿಂದಕ್ಕೆ ಎಳೆದುಕೊಳ್ಳಬಲ್ಲರೋ ಅವರು ಪರಿಪೂರ್ಣ ಪ್ರಜ್ಞೆಯಲ್ಲಿ ಸ್ಥಿರವಾಗಿರುತ್ತಾರೆ.**

## ಭಾವಾರ್ಥ

ಒಬ್ಬ ಯೋಗಿಯ, ಭಕ್ತನ ಅಥವಾ ಆತ್ಮಸಾಕ್ಷಾತ್ಕಾರ ಪಡೆದವನ ಪರೀಕ್ಷೆಯು ಆತನು ತನ್ನ ಯೋಚನೆಗನುಗುಣವಾಗಿ ಇಂದ್ರಿಯಗಳನ್ನು ನಿಯಂತ್ರಿಸಬಲ್ಲನೇ ಎನ್ನುವುದು. ಬಹು ಮಂದಿ ಇಂದ್ರಿಯಗಳ ಸೇವಕರಾಗಿರುತ್ತಾರೆ ಮತ್ತು ಇಂದ್ರಿಯಗಳು ಬಯಸಿದಂತೆ ನಡೆದುಕೊಳ್ಳುತ್ತಾರೆ. ಯೋಗಿಯ ಸ್ಥಿತಿ ಏನು ಎನ್ನುವ ಪ್ರಶ್ನೆಗೆ ಇದೇ ಉತ್ತರ. ಇಂದ್ರಿಯಗಳನ್ನು ವಿಷಸರ್ಪಗಳಿಗೆ ಹೋಲಿಸುತ್ತಾರೆ. ಅವು ಯಾವ ನಿರ್ಬಂಧವಿಲ್ಲದೆ ಹೊಣೆ ಇಲ್ಲದೆ ನಡೆದುಕೊಳ್ಳಲು ಬಯಸುತ್ತವೆ. ಸರ್ಪಗಳನ್ನು ನಿಯಂತ್ರಿಸುವ ಹಾವಾಡಿಗನಂತೆ ಯೋಗಿಯು ಶಕ್ತನಾಗಿರಬೇಕು. ಅವು ಸ್ವತಂತ್ರವಾಗಿ ಕಾರ್ಯಪ್ರವೃತ್ತವಾಗಲು ಆತನು ಅವಕಾಶವನ್ನೇ ಕೊಡುವುದಿಲ್ಲ. ಶಾಸ್ತ್ರಗಳಲ್ಲಿ ಅನೇಕ ಅಪ್ಪಣೆಗಳಿವೆ; ಇವುಗಳಲ್ಲಿ ಕೆಲವು ವಿಧಿಗಳಿವೆ, ಕೆಲವು ನಿಷೇಧಗಳಿವೆ. ಇಂದ್ರಿಯ ಭೋಗದಿಂದ ದೂರವಾಗಿ ವಿಧಿನಿಷೇಧಗಳನ್ನು ಅನುಸರಿಸದಿದ್ದರೆ ಸ್ಥಿರವಾದ ಕೃಷ್ಣಪ್ರಜ್ಞೆಯು ಸಾಧ್ಯವಾಗುವುದಿಲ್ಲ. ಇಲ್ಲಿ ಹೇಳಿರುವಂತೆ ಅತ್ಯುತ್ತಮವಾದ ಉದಾಹರಣೆ ಆಮೆ. ಆಮೆಯು ಯಾವ ಗಳಿಗೆಯಲ್ಲಾದರೂ ತನ್ನ ಇಂದ್ರಿಯಗಳನ್ನು ಒಳಗೆಳೆದುಕೊಂಡು ಅಗತ್ಯವಾದಾಗ ವಿಶಿಷ್ಟ ಉದ್ದೇಶಗಳಿಗಾಗಿ ಅವುಗಳನ್ನು ಪ್ರದರ್ಶಿಸಬಲ್ಲದು. ಹಾಗೆಯೇ ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ಇಂದ್ರಿಯಗಳನ್ನು ಭಗವಂತನ ಸೇವೆಗಾಗಿ ವಿಶೇಷ ಉದ್ದೇಶಗಳಿಗಾಗಿ ಬಳಸುತ್ತಾನೆ; ಇಲ್ಲವಾದರೆ ಹಿಂದಕ್ಕೆಳೆದುಕೊಳ್ಳುತ್ತಾನೆ. ಅರ್ಜುನನು ತನ್ನ ಇಂದ್ರಿಯಗಳನ್ನು ತನ್ನ ತೃಪ್ತಿಗಾಗಿಯೇ ಬಳಸದೆ ಭಗವಂತನ ಸೇವೆಗಾಗಿ ಬಳಸಬೇಕೆಂದು ಇಲ್ಲಿ ಉಪದೇಶಿಸಲಾಗಿದೆ. ಇಂದ್ರಿಯಗಳನ್ನು ಸದಾ ಭಗವಂತನ ಸೇವೆಯಲ್ಲಿ ಇರಿಸುವುದನ್ನು, ಸದಾ ಇಂದ್ರಿಯಗಳನ್ನು ಒಳಗಿರಿಸಿಕೊಳ್ಳುವ ಆಮೆಯ ಸಾದೃಶ್ಯದಿಂದ ಹೇಳಲಾಗಿದೆ.

## ಶ್ಲೋಕ - 59

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ |**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ||೫೯||**

**ವಿಷಯಾಃ**—ಇಂದ್ರಿಯ ಸುಖದ ವಿಷಯಗಳು; **ವಿನಿವರ್ತನ್ತೇ**—ದೂರವಾಗುವವು; **ನಿರಾಹಾರಸ್ಯ**—ನಿಷೇಧಾತ್ಮಕ ನಿಯಂತ್ರಣಗಳುಳ್ಳ; **ದೇಹಿನಃ**—ದೇಹಧಾರಿಗೆ; **ರಸವರ್ಜಮ್**—ರುಚಿಯನ್ನು ತ್ಯಜಿಸಿದ; **ರಸಃ**—ಇಂದ್ರಿಯಭೋಗವು; **ಅಪಿ**—ಅಲ್ಲಿದ್ದರೂ; **ಅಸ್ಯ**—ಅವನ; **ಪರಮ್**—ಶ್ರೇಷ್ಠವಾದ ವಿಷಯಗಳನ್ನು; **ದೃಷ್ಟ್ವಾ**—ಅನುಭವಿಸುವ ಮೂಲಕ; **ನಿವರ್ತತೇ**— ಸ್ಥಗಿತವಾಗುವುದು.

## ಅನುವಾದ

**ದೇಹಸ್ಥ ಆತ್ಮವನ್ನು ಇಂದ್ರಿಯ ಸುಖದಿಂದ ದೂರವಿಡಬಹುದು. ಆದರೆ ಇಂದ್ರಿಯಸುಖದ ವಸ್ತುಗಳ ರುಚಿಯು ಉಳಿಯುತ್ತದೆ. ಆದರೆ ಇನ್ನೂ ಉತ್ತಮವಾದ ರುಚಿಯ ಅನುಭವದಿಂದ ಈ ಆಸಕ್ತಿಗಳನ್ನು ಕೊನೆಗಾಣಿಸಿದರೆ ಆತನ ಪ್ರಜ್ಞೆಯು ಸ್ಥಿರವಾಗಿರುತ್ತದೆ.**

## ಭಾವಾರ್ಥ

ಮನುಷ್ಯನು ಆಧ್ಯಾತ್ಮಿಕವಾಗಿ ನೆಲೆ ಕಂಡುಕೊಳ್ಳದಿದ್ದರೆ ಇಂದ್ರಿಯಸುಖವನ್ನು ಕೊನೆಗಾಣಿಸಲು ಸಾಧ್ಯವಾಗುವುದಿಲ್ಲ. ನಿಯಮಗಳಿಗನುಗುಣವಾಗಿ ವಿಷಯಸುಖವನ್ನು ನಿಯಂತ್ರಿಸುವುದೆಂದರೆ ರೋಗಿಯನ್ನು ಕೆಲವು ಬಗೆಯ ತಿಂಡಿತಿನಿಸುಗಳನ್ನು ಮುಟ್ಟದಂತೆ ನಿಯಂತ್ರಿಸಿದ ಹಾಗೆ. ರೋಗಿಗೆ ಈ ನಿಯಮಗಳು ಇಷ್ಟವಾಗುವುದೂ ಇಲ್ಲ. ತಿಂಡಿತಿನಿಸುಗಳ ರುಚಿಯೂ ಹೋಗುವುದಿಲ್ಲ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮೊದಲಾದ ಅಷ್ಟಾಂಗ ಯೋಗದಂತಹ ಆಧ್ಯಾತ್ಮಿಕ ಪ್ರಕ್ರಿಯೆಯಿಂದ ಇಂದ್ರಿಯನಿಗ್ರಹ ಮಾಡಬೇಕೆಂದು ಉತ್ತಮ ತಿಳುವಳಿಕೆ ಇಲ್ಲದ ಕಡಮೆ ಬುದ್ಧಿಯ ಜನರಿಗೆ ಹೇಳಲಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯುತ್ತ ಪರಮ ಪ್ರಭು ಶ್ರೀಕೃಷ್ಣನ ಸೌಂದರ್ಯವನ್ನು ಸವಿದವನಿಗೆ ನಿರ್ಜೀವವಾದ ಐಹಿಕ ವಿಷಯಗಳಲ್ಲಿ ರುಚಿಯಿರುವುದಿಲ್ಲ. ಆದುದರಿಂದ ಅಷ್ಟು ಬುದ್ಧಿವಂತರಲ್ಲದ ಹೊಸದಾಗಿ ದೀಕ್ಷೆಪಡೆದವರಿಗೆ ಆಧ್ಯಾತ್ಮಿಕವಾಗಿ ಬದುಕಿನಲ್ಲಿ ಮುಂದುವರಿಯಲು ಕಟ್ಟುಪಾಡುಗಳು ಅಗತ್ಯ; ಆದರೆ ಕೃಷ್ಣಪ್ರಜ್ಞೆಯಲ್ಲಿ ರುಚಿ ಬರುವವರೆಗೆ ಮಾತ್ರ ಇಂತಹ ಕಟ್ಟುಪಾಡುಗಳು ಉಪಯೋಗವಾಗುತ್ತವೆ. ವಾಸ್ತವವಾಗಿ ಕೃಷ್ಣಪ್ರಜ್ಞೆ ಇರುವವನಿಗೆ ನಿಸ್ಸಾರವಾದ ವಸ್ತುಗಳಲ್ಲಿ ರುಚಿಯು ತಾನಾಗಿಯೇ ಹೋಗುತ್ತದೆ.

## ಶ್ಲೋಕ - 60

**ಯತತೋ ಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ |**
**ಇನ್ದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ||೬೦||**

**ಯತತಃ**—ಪ್ರಯತ್ನಿಸುತ್ತಿರುವ; **ಹಿ**—ಖಂಡಿತವಾಗಿಯೂ; **ಅಪಿ**—ಆದಾಗ್ಯೂ; **ಕೌಂತೇಯ**—ಕುಂತೀಪುತ್ರನೇ; **ಪುರುಷಸ್ಯ**—ಮನುಷ್ಯನ; **ವಿಪಶ್ಚಿತಃ**—ವಿವೇಚನಾತ್ಮಕ ಜ್ಞಾನಪೂರ್ಣನ;

**ಇನ್ದ್ರಿಯಾಣಿ**—ಇಂದ್ರಿಯಗಳು; **ಪ್ರಮಾಥೀನಿ**—ಉದ್ವಿಗ್ನಗೊಳ್ಳುತ್ತಿರುವ; **ಹರನ್ತಿ**—ಎಳೆಯುತ್ತವೆ; **ಪ್ರಸಭಮ್**—ಒತ್ತಾಯದಿಂದ; **ಮನಃ**—ಮನಸ್ಸನ್ನು.

## ಅನುವಾದ

**ಅರ್ಜುನ, ಇಂದ್ರಿಯಗಳು ಎಷ್ಟು ಬಲಶಾಲಿ ಮತ್ತು ಆವೇಶದಿಂದ ಕೆಲಸ ಮಾಡುತ್ತವೆ ಎಂದರೆ ಅವುಗಳನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿರುವ ವಿವೇಚನಾವಂತನ ಮನಸ್ಸನ್ನು ಸೆಳೆದುಕೊಂಡು ಹೋಗಿಬಿಡುತ್ತವೆ.**

## ಭಾವಾರ್ಥ

ಇಂದ್ರಿಯಗಳನ್ನು ಗೆಲ್ಲಲು ಪ್ರಯತ್ನಿಸುವ ಎಷ್ಟೋ ಮಂದಿ ವಿದ್ವಾಂಸರಾದ ಸಾಧುಗಳು, ತತ್ವಜ್ಞಾನಿಗಳು ಮತ್ತು ಆಧ್ಯಾತ್ಮಿಕವಾದಿಗಳು ಇದ್ದಾರೆ; ಆದರೆ ಅವರು ಎಷ್ಟೇ ಪ್ರಯತ್ನಪಟ್ಟರೂ ಅವರಲ್ಲಿ ಅತ್ಯಂತ ಶ್ರೇಷ್ಠರಾದವರೂ ಸಹ ಕ್ಷೋಭೆಗೊಂಡ ಮನಸ್ಸಿನ ಕಾರಣದಿಂದ ಐಹಿಕ ಇಂದ್ರಿಯಭೋಗಕ್ಕೆ ಒಮ್ಮೊಮ್ಮೆ ಬಲಿಯಾಗುತ್ತಾರೆ. ಮಹರ್ಷಿಯೂ ಪರಿಪೂರ್ಣ ಯೋಗಿಯೂ ಆಗಿದ್ದ ವಿಶ್ವಾಮಿತ್ರರು ಕಠಿಣ ತಪಸ್ಸಿನಿಂದ ಮತ್ತು ಯೋಗಾಭ್ಯಾಸದಿಂದ ಇಂದ್ರಿಯನಿಗ್ರಹಕ್ಕೆ ಶ್ರಮಿಸುತ್ತಿದ್ದರು; ಆದರೂ ಮೇನಕೆಯು ಅವರನ್ನು ಕಾಮಸುಖಕ್ಕೆಳೆದು ದಾರಿತಪ್ಪಿಸಿದಳು. ಪ್ರಪಂಚದ ಚರಿತ್ರೆಯಲ್ಲಿ ಇಂತಹ ಎಷ್ಟೋ ನಿದರ್ಶನಗಳಿವೆ. ಆದ್ದರಿಂದ ಪೂರ್ಣ ಕೃಷ್ಣಪ್ರಜ್ಞೆಯಿಲ್ಲದೆ ಮನಸ್ಸನ್ನೂ ಇಂದ್ರಿಯಗಳನ್ನೂ ನಿಯಂತ್ರಿಸುವುದು ಬಹುಕಷ್ಟ. ಮನಸ್ಸನ್ನು ಕೃಷ್ಣನಲ್ಲಿ ನಿಲ್ಲಿಸದೆ ಇಂತಹ ಐಹಿಕ ಚಟುವಟಿಕೆಗಳನ್ನು ಕೊನೆಗಾಣಿಸಲು ಸಾಧ್ಯವಿಲ್ಲ. ಬಹುದೊಡ್ಡ ಸಂತರೂ ಭಕ್ತರೂ ಆದ ಶ್ರೀ ಯಾಮುನಾಚಾರ್ಯರು ಒಂದು ಅನುಭವ ಸತ್ಯವಾದ ಉದಾಹರಣೆಯನ್ನು ಕೊಡುತ್ತಾರೆ —

**ಯದವಧಿ ಮಮ ಚೇತಃ ಕೃಷ್ಣಪದಾರವಿನ್ದೇ**
**ನವನವರಸಧಾಮನ್ಯುದ್ಯತಂ ರನ್ತುಮಾಸೀತ್ ।**
**ತದವಧಿ ಬತ ನಾರೀಸನ್ಗಮೇ ಸ್ಮರ್ಯಮಾನೇ**
**ಭವತಿ ಮುಖವಿಕಾರಃ ಸುಷ್ಠು ನಿಷ್ಠೀವನಂ ಚ ॥**

"ನಾನು ಶ್ರೀಕೃಷ್ಣನ ಪಾದಪದ್ಮಗಳ ಸೇವೆಯಲ್ಲಿ ನನ್ನ ಮನಸ್ಸನ್ನು ತೊಡಗಿಸಿ ಸದಾ ಹೊಸತಾದ ದಿವ್ಯ ಮನಸ್ಥಿತಿಯನ್ನು ಸವಿಯಲು ಪ್ರಾರಂಭಿಸಿದ ಮೇಲೆ, ಸ್ತ್ರೀ ಸಂಗಮವನ್ನು ಕುರಿತು ಯೋಚಿಸಿದಾಗಲೆಲ್ಲ ಅದಕ್ಕೆ ವಿಮುಖನಾಗುತ್ತೇನೆ ಮತ್ತು ಆ ಆಲೋಚನೆಗೆ ಉಗುಳುತ್ತೇನೆ."

ಕೃಷ್ಣಪ್ರಜ್ಞೆಯು ಆಧ್ಯಾತ್ಮಿಕವಾಗಿ ಎಂತಹ ಸೊಗಸಾದ ಸಂಗತಿಯೆಂದರೆ ತಾನಾಗಿಯೇ ಐಹಿಕ ಸುಖವು ಅಸಹ್ಯವಾಗುತ್ತದೆ. ಇದು ಹಸಿದ ಮನುಷ್ಯನು ಸಾಕಷ್ಟು ಪ್ರಮಾಣದಲ್ಲಿ ಪುಷ್ಟಿಕರವಾದ ಆಹಾರವನ್ನು ತಿಂದು ಹಸಿವನ್ನು ತೃಪ್ತಿಪಡಿಸಿಕೊಂಡಂತೆ. ಮಹಾರಾಜ ಅಂಬರೀಷನ ಮನಸ್ಸು ಕೃಷ್ಣಪ್ರಜ್ಞೆಯಲ್ಲಿ ನೆಲೆಸಿದುದರಿಂದ ಅವನು ಮಹಾಯೋಗಿ ದುರ್ವಾಸ ಮುನಿಯನ್ನು ಸೋಲಿಸಿದ. (**ಸ ವೈ ಮನಃ ಕೃಷ್ಣ ಪದಾರವಿಂದಯೋರ್ ವಚಾಂಸಿ ವೈಕುಂಠಗುಣಾನುವರ್ಣನೇ**)

## ಶ್ಲೋಕ - 61

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ |**
**ವಶೇ ಹಿ ಯಸ್ಯೇನ್ದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ||೬೧||**

**ತಾನಿ**—ಆ ಇಂದ್ರಿಯಗಳನ್ನು; **ಸರ್ವಾಣಿ**—ಎಲ್ಲ; **ಸಂಯಮ್ಯ**—ನಿಯಂತ್ರಣದಲ್ಲಿ ಇರಿಸಿ; **ಯುಕ್ತಃ**—ತೊಡಗಿ; **ಆಸೀತ**—ಇರಬೇಕು; **ಮತ್ ಪರಃ**—ನನ್ನೊಡನಿರುವ ಸಂಬಂಧದಲ್ಲಿ; **ವಶೇ**—ಸಂಪೂರ್ಣ ಅಧೀನದಲ್ಲಿ; **ಹಿ**—ಖಂಡಿತವಾಗಿಯೂ; **ಯಸ್ಯ**—ಯಾರ; **ಇನ್ದ್ರಿಯಾಣಿ**—ಇಂದ್ರಿಯಗಳು; **ತಸ್ಯ**—ಅವನ; **ಪ್ರಜ್ಞಾ**—ಪ್ರಜ್ಞೆಯು; **ಪ್ರತಿಷ್ಠಿತಾ**—ಸ್ಥಿರವಾಗಿರುವುದು.

## ಅನುವಾದ

**ಯಾರು ತನ್ನ ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಯಂತ್ರಿಸಿ ಅಂಕೆಯಲ್ಲಿಡುತ್ತಾನೋ ಮತ್ತು ತನ್ನ ಪ್ರಜ್ಞೆಯನ್ನು ನನ್ನಲ್ಲಿ ಕೇಂದ್ರೀಕರಿಸುತ್ತಾನೋ ಅವನನ್ನು ಸ್ಥಿರಬುದ್ಧಿಯವನು ಎಂದು ಕರೆಯುತ್ತಾರೆ.**

## ಭಾವಾರ್ಥ

ಯೋಗ ಪರಿಪೂರ್ಣತೆಯ ಅತ್ಯುನ್ನತ ಪರಿಕಲ್ಪನೆಯು ಕೃಷ್ಣಪ್ರಜ್ಞೆ ಎನ್ನುವುದನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಮನುಷ್ಯನಿಗೆ ಕೃಷ್ಣಪ್ರಜ್ಞೆ ಇಲ್ಲದಿದ್ದರೆ ಇಂದ್ರಿಯಗಳನ್ನು ನಿಯಂತ್ರಿಸುವುದು ಸಾಧ್ಯವೇ ಇಲ್ಲ. ಮೇಲೆ ಹೇಳಿದಂತೆ ದುರ್ವಾಸಮುನಿಯು ಅಂಬರೀಷ ಮಹಾರಾಜನೊಂದಿಗೆ ಜಗಳವನ್ನು ಪ್ರಾರಂಭಿಸಿದ. ದುರ್ವಾಸಮುನಿಯು ಅಹಂಕಾರದಿಂದ ಅನಗತ್ಯವಾಗಿ ಕೋಪಮಾಡಿಕೊಂಡ. ಆದುದರಿಂದ ತನ್ನ ಇಂದ್ರಿಯಗಳನ್ನು ಅಂಕೆಯಲ್ಲಿಡಲಾಗಲಿಲ್ಲ. ರಾಜನು ಋಷಿಯಂತಹ ಶಕ್ತಿವಂತ ಯೋಗಿಯಲ್ಲ; ಆದರೂ ಭಗವಂತನ ಭಕ್ತನಾದದ್ದರಿಂದ ಋಷಿಯು ಮಾಡಿದ ಅನ್ಯಾಯವನ್ನೆಲ್ಲ ಮೌನವಾಗಿ ಸಹಿಸಿಕೊಂಡ ಮತ್ತು ಇದರಿಂದ ವಿಜಯವನ್ನು ಸಾಧಿಸಿದ. ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ (9.4.18-20) ಈ ಕೆಳಗಿನ ಅರ್ಹತೆಗಳಿಂದ ರಾಜನು ತನ್ನ ಇಂದ್ರಿಯಗಳನ್ನು ನಿಯಂತ್ರಿಸಲು ಸಾಧ್ಯವಾಯಿತು.

**ಸ ವೈ ಮನಃ ಕೃಷ್ಣ ಪದಾರವಿನ್ದಯೋರ್**
**ವಚಾಂಸಿ ವೈಕುಣ್ಠಗುಣಾನುವರ್ಣನೇ |**
**ಕರೌ ಹರೇರ್ಮನ್ದಿರ ಮಾರ್ಜನಾದಿಷು**
**ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ||**

**ಮುಕುನ್ದಲಿಙ್ಗಾಲಯ ದರ್ಶನೇ ದೃಶೌ**
**ತದ್ಭೃತ್ಯಗಾತ್ರಸ್ಪರ್ಶೇऽಙ್ಗಸಙ್ಗಮಮ್ |**
**ಘ್ರಾಣಂ ಚ ತತ್ಪಾದಸರೋಜ ಸೌರಭೇ**
**ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ ||**

**ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ**
**ಶಿರೋ ಹೃಷೀಕೇಶಪದಾಭಿವನ್ದನೇ |**

**ಕಾಮಂ ಚ ದಾಸ್ಯೇ ನ ತು ಕಾಮಕಾಮ್ಯಯಾ**
**ಯಥೋತ್ತಮಶ್ಲೋಕಜನಾಶ್ರಯಾ ರತಿಃ ||**

"ಅಂಬರೀಷ ಮಹಾರಾಜನು ತನ್ನ ಮನಸ್ಸನ್ನು ಶ್ರೀಕೃಷ್ಣನ ಪದಕಮಲಗಳಲ್ಲಿ ನಿಲ್ಲಿಸಿದನು. ಭಗವಂತನ ನಿವಾಸವನ್ನು ವರ್ಣಿಸುವುದಕ್ಕೆ ಮಾತುಗಳನ್ನು ಬಳಸಿಕೊಂಡನು. ಕೈಗಳನ್ನು ಭಗವಂತನ ದೇವಸ್ಥಾನವನ್ನು ಸ್ವಚ್ಛಗೊಳಿಸಲು ಬಳಸಿದನು; ಕಿವಿಗಳನ್ನು ಭಗವಂತನ ಲೀಲೆಗಳನ್ನು ಕೇಳಲು ಬಳಸಿದನು; ಕಣ್ಣುಗಳನ್ನು ಭಗವಂತನ ರೂಪವನ್ನು ನೋಡಲು ಬಳಸಿದನು; ದೇಹವನ್ನು ಭಕ್ತನ ದೇಹವನ್ನು ಸ್ಪರ್ಶಿಸಲು ಬಳಸಿದನು; ನಾಸಿಕವನ್ನು ಭಗವಂತನ ಚರಣ ಕಮಲಗಳಲ್ಲಿ ಅರ್ಪಿಸಿದ ಹೂವುಗಳ ಸೌರಭವನ್ನು ಗ್ರಹಿಸಲು ಬಳಸಿದನು; ನಾಲಿಗೆಯನ್ನು ಭಗವಂತನಿಗೆ ಅರ್ಪಿಸಿದ ತುಳಸಿ ಪತ್ರವನ್ನು ಸವಿಯಲು ಬಳಸಿದನು; ಕಾಲುಗಳನ್ನು ಭಗವಂತನ ದೇವಾಲಯವಿದ್ದೆಡೆಗೆ ಹೋಗಲು ಬಳಸಿದನು; ಶಿರವನ್ನು ಭಗವಂತನಿಗೆ ಪ್ರಣಾಮಗಳನ್ನು ಅರ್ಪಿಸಲು ಬಳಸಿದನು ಮತ್ತು ತನ್ನ ಬಯಕೆಗಳನ್ನು ಭಗವಂತನ ಅಪೇಕ್ಷೆಗಳನ್ನು ನೆರವೇರಿಸಲು ಬಳಸಿದನು ....... ಈ ಎಲ್ಲ ಅರ್ಹತೆಗಳು ಅವನನ್ನು ಭಗವಂತನ ಮತ್ಪರ ಭಕ್ತನಾಗಲು ಯೋಗ್ಯನನ್ನಾಗಿ ಮಾಡಿದವು."

ಈ ಸಂದರ್ಭದಲ್ಲಿ **ಮತ್ಪರ** ಶಬ್ದವು ಅರ್ಥವತ್ತಾದದ್ದು. ಮನುಷ್ಯನು ಮತ್ಪರ ಹೇಗೆ ಆಗಬಹುದು ಎನ್ನುವುದನ್ನು ಅಂಬರೀಷ ಮಹಾರಾಜನ ಬದುಕಿನಲ್ಲಿ ಕಾಣಬಹುದು. ಮಹಾವಿದ್ವಾಂಸರೂ ಮತ್ಪರ ಪರಂಪರೆಯಲ್ಲಿ ಆಚಾರ್ಯರೂ ಆದ ಶ್ರೀಲ ಬಲದೇವ ವಿದ್ಯಾಭೂಷಣರು ಹೀಗೆನ್ನುತ್ತಾರೆ — **ಮದ್ಭಕ್ತಿ ಪ್ರಭಾವೇನ ಸರ್ವೇಂದ್ರಿಯವಿಜಯಪೂರ್ವಿಕಾ ಸ್ವಾತ್ಮದೃಷ್ಟಿಃ ಸುಲಭೇತಿ ಭಾವಃ** — "ಕೃಷ್ಣನಿಗೆ ಸಲ್ಲಿಸುವ ಭಕ್ತಿಪೂರ್ವಕ ಸೇವೆಯ ಶಕ್ತಿಯಿಂದ ಮಾತ್ರವೇ ಇಂದ್ರಿಯಗಳನ್ನು ಸಂಪೂರ್ಣವಾಗಿ ಹತೋಟಿಯಲ್ಲಿಡಬಹುದು." ಕೆಲವೊಮ್ಮೆ ಅಗ್ನಿಯ ಉದಾಹರಣೆಯನ್ನು ಕೊಡುವುದುಂಟು. "ಪ್ರಜ್ವಲಿಸುವ ಅಗ್ನಿಯು ಕೊಠಡಿಯಲ್ಲಿರುವ ಎಲ್ಲ ವಸ್ತುವನ್ನು ಸುಡುವಂತೆ ಯೋಗಿಯ ಹೃದಯದಲ್ಲಿ ನೆಲೆಸಿರುವ ಶ್ರೀವಿಷ್ಣುವು ಎಲ್ಲ ಬಗೆಯ ಕಲ್ಮಷಗಳನ್ನೂ ಸುಟ್ಟುಹಾಕುತ್ತಾನೆ." ಯೋಗ ಸೂತ್ರವೂ ಸಹ ವಿಷ್ಣುವನ್ನು ಕುರಿತ ಧ್ಯಾನವನ್ನು ವಿಧಿಸುತ್ತದೆ; ಶೂನ್ಯವನ್ನು ಕುರಿತ ಧ್ಯಾನವನ್ನಲ್ಲ. ವಿಷ್ಣುಪೀಠದ ಮೇಲೆ ಇಲ್ಲದಿರುವ ಏನನ್ನೋ ಧ್ಯಾನಿಸುವ ಯೋಗಿಗಳೆನಿಸಿಕೊಂಡವರು ಮಾಯಾ ಆಕೃತಿಗಳ ವ್ಯರ್ಥ ಹುಡುಕಾಟದಲ್ಲಿ ಕಾಲವನ್ನು ದಂಡಮಾಡುತ್ತಾರೆ. ನಾವು ಕೃಷ್ಣಪ್ರಜ್ಞೆಯಲ್ಲಿರಬೇಕು; ದೇವೋತ್ತಮ ಪರಮ ಪುರುಷನಲ್ಲಿ ಭಕ್ತಿಯಿಟ್ಟುಕೊಳ್ಳಬೇಕು. ಇದೇ ನಿಜವಾದ ಯೋಗದ ಗುರಿ.

## ಶ್ಲೋಕ - 62

**ಧ್ಯಾಯತೋ ವಿಷಯಾನ್ ಪುಂಸಃ ಸಙ್ಗಸ್ತೇಷೂಪಜಾಯತೇ |**
**ಸಙ್ಗಾತ್ಸಞ್ಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ||೬೨||**

**ಧ್ಯಾಯತಃ**—ಚಿಂತಿಸುತ್ತಿರುವಾಗ; **ವಿಷಯಾನ್**—ಇಂದ್ರಿಯ ವಿಷಯಗಳನ್ನು; **ಪುಂಸಃ**—ವ್ಯಕ್ತಿಯ; **ಸಙ್ಗಃ**—ಆಸಕ್ತಿಯು; **ತೇಷು**—ಇಂದ್ರಿಯ ವಿಷಯಗಳಲ್ಲಿ, **ಉಪಜಾಯತೇ**—ಬೆಳೆಯುತ್ತದೆ; **ಸಂಗಾತ್**—ಆಸಕ್ತಿಯಿಂದ; **ಸಞ್ಜಾಯತೇ**—ವರ್ಧಿಸುತ್ತದೆ; **ಕಾಮಃ**—ಆಸೆಯು; **ಕಾಮಾತ್**—ಆಸೆಯಿಂದ; **ಕ್ರೋಧಃ**—ಕೋಪವು; **ಅಭಿಜಾಯತೇ**—ವ್ಯಕ್ತವಾಗುತ್ತದೆ.

## ಅನುವಾದ

**ಇಂದ್ರಿಯ ವಸ್ತುಗಳನ್ನು ಕುರಿತು ಚಿಂತಿಸುವ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಇಂತಹ ಆಸಕ್ತಿಯಿಂದ ಕಾಮವು ಹುಟ್ಟುತ್ತದೆ. ಕಾಮದಿಂದ ಕ್ರೋಧವು ಉದ್ಭವವಾಗುತ್ತದೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಿಲ್ಲದವನು ಇಂದ್ರಿಯಗಳ ಸುಖದ ವಸ್ತುಗಳನ್ನು ಕುರಿತು ಯೋಚನೆ ಮಾಡುವಾಗ ಐಹಿಕ ಬಯಕೆಗಳು ಉಂಟಾಗುತ್ತವೆ. ಇಂದ್ರಿಯಗಳು ವಾಸ್ತವಿಕ ಕಾರ್ಯದಲ್ಲಿ ತೊಡಗಲು ಬಯಸುತ್ತವೆ. ಅವನ್ನು ಭಗವಂತನ ಅಲೌಕಿಕ ಪ್ರೀತಿಯ ಸೇವೆಯಲ್ಲಿ ತೊಡಗಿಸದಿದ್ದರೆ ನಿಶ್ಚಯವಾಗಿಯೂ ಅವು ಪ್ರಾಪಂಚಿಕತೆಯ ಸೇವೆಯಲ್ಲಿ ತೊಡಗಲು ಬಯಸುತ್ತವೆ. ಸ್ವರ್ಗಲೋಕಗಳಲ್ಲಿರುವ ಇತರ ದೇವತೆಗಳ ಮಾತಿರಲಿ, ಐಹಿಕ ಜಗತ್ತಿನಲ್ಲಿ ಶಿವ ಮತ್ತು ಬ್ರಹ್ಮರು ಸೇರಿದಂತೆ ಪ್ರತಿಯೊಬ್ಬನೂ ಇಂದ್ರಿಯ ವಸ್ತುಗಳ ಪ್ರಭಾವಕ್ಕೆ ಒಳಗಾಗುತ್ತಾರೆ; ಇಹಜೀವನದ ಅಸ್ತಿತ್ವದ ಸಮಸ್ಯೆಯಿಂದ ಪಾರಾಗಲು ಒಂದೇ ಮಾರ್ಗವೆಂದರೆ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವುದು. ಶಿವನು ಗಾಢವಾದ ಧ್ಯಾನದಲ್ಲಿದ್ದನು; ಆದರೆ ಪಾರ್ವತಿಯು ಇಂದ್ರಿಯ ಸುಖಕ್ಕಾಗಿ ಅವನನ್ನು ಕಾಡಿದಾಗ ಅವನು ಒಪ್ಪಿಕೊಂಡ. ಇದರಿಂದ ಕಾರ್ತಿಕೇಯನ ಜನನವಾಯಿತು. ಹರಿದಾಸ ಠಾಕೂರರು ತರುಣ ಭಗವದ್ಭಕ್ತರಾಗಿದ್ದಾಗ ಇದೇ ರೀತಿ ಮಾಯಾದೇವಿಯ ಅವತಾರವು ಅವರನ್ನು ಆಕರ್ಷಿಸಲು ಪ್ರಯತ್ನಿಸಿತು; ಆದರೆ ಅವರಿಗೆ ಶ್ರೀಕೃಷ್ಣನಲ್ಲಿ ಪರಿಶುದ್ಧವಾದ ಭಕ್ತಿಯಿದ್ದುದರಿಂದ ಸುಲಭವಾಗಿ ಈ ಪರೀಕ್ಷೆಯಲ್ಲಿ ಗೆದ್ದರು. ಮೇಲೆ ಹೇಳಿದ ಶ್ರೀಯಾಮುನಾಚಾರ್ಯರ ಶ್ಲೋಕದಲ್ಲಿನ ಉದಾಹರಣೆಯಂತೆ ಪ್ರಾಮಾಣಿಕನಾದ ಭಗವದ್ಭಕ್ತನು ಭಗವಂತನ ಅನುಯಾಯಿಯಾಗಿ ಉತ್ತಮ ಅಭಿರುಚಿಯನ್ನು ಬೆಳೆಸಿಕೊಂಡು ಆಧ್ಯಾತ್ಮಿಕ ಸಂತೋಷವನ್ನು ಬಯಸುತ್ತಾನೆ; ಎಲ್ಲ ಐಹಿಕ ಇಂದ್ರಿಯ ಸುಖವನ್ನು ದೂರಮಾಡುತ್ತಾನೆ. ಇದೇ ಗೆಲುವಿನ ಗುಟ್ಟು. ಕೃಷ್ಣಪ್ರಜ್ಞೆಯಿಲ್ಲದವನು ಕೃತಕವಾದ ತುಳಿತದಿಂದ ಇಂದ್ರಿಯಗಳನ್ನು ನಿಯಂತ್ರಿಸುವುದರಲ್ಲಿ ಬಹಳ ಶಕ್ತನಾಗಿರಬಹುದು; ಆದರೂ ಅಂತಿಮವಾಗಿ ಅವನು ಸೋಲುತ್ತಾನೆ. ಏಕೆಂದರೆ ಇಂದ್ರಿಯಸುಖದ ಬಹು ಅಲ್ಪ ಯೋಚನೆಯೂ ಅವನಿಗೆ ತನ್ನ ಬಯಕೆಗಳನ್ನು ತೃಪ್ತಿಗೊಳಿಸಿಕೊಳ್ಳುವಂತೆ ಕಲಕಿಬಿಡುತ್ತದೆ.

## ಶ್ಲೋಕ - 63

**ಕ್ರೋಧಾದ್ ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ|**
**ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ||೬೩||**

**ಕ್ರೋಧಾತ್**—ಕೋಪದಿಂದ; **ಭವತಿ**—ಉಂಟಾಗುತ್ತದೆ; **ಸಮ್ಮೋಹಃ**—ಪರಿಪೂರ್ಣ ಭ್ರಾಂತಿಯು; **ಸಮ್ಮೋಹಾತ್**—ಭ್ರಾಂತಿಯಿಂದ; **ಸ್ಮೃತಿ**—ನೆನಪಿನ; **ವಿಭ್ರಮಃ**—ಭ್ರಮೆಯು; **ಸ್ಮೃತಿಭ್ರಂಶಾತ್**—ನೆನಪಿನ ಭ್ರಮೆಯಿಂದ; **ಬುದ್ಧಿನಾಶಃ**—ಬುದ್ಧಿಯ ನಾಶವು; **ಬುದ್ಧಿನಾಶಾತ್**—ಮತ್ತು ಬುದ್ಧಿಯ ವಿನಾಶದಿಂದ; **ಪ್ರಣಶ್ಯತಿ**—ಪತನಹೊಂದುತ್ತಾನೆ.

## ಅನುವಾದ

**ಕ್ರೋಧದಿಂದ ಸಂಮೋಹವು ಉಂಟಾಗುತ್ತದೆ; ಸಂಮೋಹದಿಂದ ಸ್ಮೃತಿಯ ಭ್ರಮೆಯುಂಟಾಗುತ್ತದೆ. ಸ್ಮೃತಿಭ್ರಮೆಯಿಂದ ಬುದ್ಧಿನಾಶವಾಗುತ್ತದೆ; ಬುದ್ಧಿನಾಶವಾದಾಗ ಮನುಷ್ಯನು ಮತ್ತೆ ಐಹಿಕ ಪ್ರಪಂಚದಲ್ಲಿ ಮುಳುಗುತ್ತಾನೆ.**

## ಭಾವಾರ್ಥ

ಶ್ರೀಲ ರೂಪ ಗೋಸ್ವಾಮಿಯವರು ಈ ಆದೇಶವನ್ನು ನೀಡಿದ್ದಾರೆ —

**ಪ್ರಾಪಂಚಿಕತಯಾ ಬುದ್ಧ್ಯಾ ಹರಿಸಮ್ಬನ್ಧಿವಸ್ತುನಃ |**
**ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ ||**

(ಭಕ್ತಿರಸಾಮೃತಸಿಂಧು, 1.2.258)

ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡರೆ ಪ್ರತಿಯೊಂದು ವಸ್ತುವೂ ಭಗವಂತನ ಸೇವೆಗೆ ಒದಗುತ್ತದೆ ಎಂದು ತಿಳಿಯುತ್ತದೆ. ಕೃಷ್ಣಪ್ರಜ್ಞೆಯ ಅರಿವಿಲ್ಲದವರು ಕೃತಕವಾಗಿ ಪ್ರಾಪಂಚಿಕ ವಸ್ತುಗಳನ್ನು ದೂರವಿಡಲು ಪ್ರಯತ್ನಿಸುತ್ತಾರೆ. ಪರಿಣಾಮವಾಗಿ ಅವರು ಐಹಿಕ ಬಂಧನದಿಂದ ಬಿಡುಗಡೆಯನ್ನು ಬಯಸಿದರೂ ವೈರಾಗ್ಯದ ಪರಿಪೂರ್ಣ ಹಂತವನ್ನು ಮುಟ್ಟುವುದಿಲ್ಲ. ಹಾಗೆಂದು ಕರೆಯಲಾಗುವ ಅವರ ವೈರಾಗ್ಯ ಫಲ್ಗು, ಅಥವಾ ಅಷ್ಟು ಮುಖ್ಯವಲ್ಲದ್ದು. ಇದಕ್ಕೆ ಪ್ರತಿಯಾಗಿ ಕೃಷ್ಣಪ್ರಜ್ಞೆ ಇರುವವನು ಪ್ರತಿಯೊಂದು ವಸ್ತುವನ್ನೂ ಭಗವಂತನ ಸೇವೆಯಲ್ಲಿ ಹೇಗೆ ಬಳಸಬೇಕು ಎಂದು ತಿಳಿದಿರುತ್ತಾನೆ. ಆದ್ದರಿಂದ ಆತನು ಐಹಿಕ ಪ್ರಜ್ಞೆಗೆ ಬಲಿಯಾಗುವುದಿಲ್ಲ. ಉದಾಹರಣೆಗೆ, ನಿರಾಕಾರವಾದಿಯ ದೃಷ್ಟಿಯಲ್ಲಿ ಭಗವಂತ ಅಥವಾ ಪರಾತ್ಪರವಾದದ್ದು ನಿರಾಕಾರವಾದದ್ದರಿಂದ ಏನನ್ನೂ ತಿನ್ನಲಾರದು. ನಿರಾಕಾರವಾದಿಯು ಒಳ್ಳೆಯ ತಿಂಡಿತಿನಸುಗಳನ್ನು ದೂರವಿಡಲು ಪ್ರಯತ್ನಿಸುತ್ತಾನೆ. ಆದರೆ ಕೃಷ್ಣನು ಪರಮಭೋಗಿ ಎಂದೂ ಅವನಿಗೆ ಮಾಡಿದ ರುಚಿಯಾದ ನೈವೇದ್ಯವನ್ನೆಲ್ಲ ಅವನು ತಿನ್ನುತ್ತಾನೆ ಎಂದೂ ಭಕ್ತನಿಗೆ ಗೊತ್ತು. ಆದುದರಿಂದ ಭಗವಂತನಿಗೆ ರುಚಿಯಾದ ತಿಂಡಿಗಳನ್ನು ನೈವೇದ್ಯ ಮಾಡಿ ಭಕ್ತನು ಉಳಿದ ಪ್ರಸಾದವನ್ನು ಸ್ವೀಕರಿಸುತ್ತಾನೆ. ಹೀಗೆ ಎಲ್ಲವೂ ಆಧ್ಯಾತ್ಮಿಕವಾಗುತ್ತದೆ ಮತ್ತು ಪತನದ ಭಯವಿಲ್ಲ. ಭಕ್ತನು ಕೃಷ್ಣಪ್ರಜ್ಞೆಯಿಂದ ಪ್ರಸಾದವನ್ನು ಸ್ವೀಕರಿಸುತ್ತಾನೆ; ಆದರೆ ಭಕ್ತನಲ್ಲದವನು ಅದು ಪ್ರಾಪಂಚಿಕವಾದದ್ದೆಂದು ತಿರಸ್ಕರಿಸುತ್ತಾನೆ. ಆದುದರಿಂದ ನಿರಾಕಾರವಾದಿಯಾದವನು ತನ್ನ ಕೃತಕ ವೈರಾಗ್ಯದ ಫಲವಾಗಿ ಬದುಕನ್ನು ಸವಿಯಲಾರ. ಈ ಕಾರಣಕ್ಕಾಗಿ ಮನಸ್ಸು ಸ್ವಲ್ಪ ಕಲಕಿದರೂ ಆತನು ಐಹಿಕ ಬದುಕಿಗೆ ಬೀಳುತ್ತಾನೆ. ಇಂತಹ ಆತ್ಮನು ಮುಕ್ತಿಯವರೆಗೆ ಏರಿದರೂ ಸಹ ಅವನಿಗೆ ಭಕ್ತಿಪೂರ್ವಕ ಸೇವೆಯ ನೆರವಿಲ್ಲದಿರುವುದರಿಂದ ಮತ್ತೆ ಕೆಳಕ್ಕೆ ಬೀಳುತ್ತಾನೆ ಎಂದು ಹೇಳಲಾಗಿದೆ.

## ಶ್ಲೋಕ - 64

**ರಾಗದ್ವೇಷವಿಮುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ |**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ||೬೪||**

**ರಾಗ**—ಆಸಕ್ತಿ; **ದ್ವೇಷ**—ಮತ್ತು ಅನಾಸಕ್ತಿಗಳಿಂದ; **ವಿಮುಕ್ತೈಃ**—ಮುಕ್ತನಾದವನಿಂದ; **ತು**— ಆದರೆ;

**ವಿಷಯಾನ್**—ಇಂದ್ರಿಯ ವಿಷಯಗಳನ್ನು; **ಇನ್ದ್ರಿಯೈಃ**—ಇಂದ್ರಿಯಗಳಿಂದ; **ಚರನ್**— ವರ್ತಿಸಿ; **ಆತ್ಮವಶ್ಯೈಃ**—ನಿಯಂತ್ರಣದಲ್ಲಿ; **ವಿಧೇಯ ಆತ್ಮಾ**—ನಿಯಂತ್ರಿತ ಸ್ವಾತಂತ್ರ್ಯವನ್ನು ಅನುಸರಿಸುವವನು; **ಪ್ರಸಾದಮ್**—ಭಗವಂತನ ಅನುಗ್ರಹವನ್ನು; **ಅಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಆದರೆ ರಾಗದ್ವೇಷಗಳಿಂದ ಬಿಡುಗಡೆಯಾಗಿ ಸ್ವಾತಂತ್ರ್ಯವನ್ನು ಕ್ರಮಗೊಳಿಸುವ ತತ್ವಗಳ ಮೂಲಕ ತನ್ನ ಇಂದ್ರಿಯಗಳನ್ನು ನಿಯಂತ್ರಿಸಬಲ್ಲವನು ಭಗವಂತನ ಪೂರ್ಣ ದಯೆಯನ್ನು ಪಡೆಯಬಲ್ಲ.**

## ಭಾವಾರ್ಥ

ಒಬ್ಬ ಮನುಷ್ಯನು ಯಾವುದಾದರೂ ಕೃತಕ ರೀತಿಗಳಲ್ಲಿ ಹೊರಗಿನಿಂದ ಇಂದ್ರಿಯಗಳನ್ನು ನಿಯಂತ್ರಿಸಬಹುದು. ಆದರೆ ಇಂದ್ರಿಯಗಳು ಭಗವಂತನ ದಿವ್ಯ ಸೇವೆಯಲ್ಲಿ ತೊಡಗಿಲ್ಲದಿದ್ದರೆ ಅವನು ಪತನವಾಗುವ ಸಾಧ್ಯತೆಯಿದೆ ಎಂದು ಆಗಲೇ ವಿವರಿಸಿದೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿರುವವನು ಭೋಗಾಸಕ್ತಿಯ ಮಟ್ಟದಲ್ಲಿದ್ದಾನೆ ಎಂದು ಕಂಡರೂ ಅವನಿಗೆ ಕೃಷ್ಣಪ್ರಜ್ಞೆಯಿರುವುದರಿಂದ ಭೋಗಾಸಕ್ತಿ ಇರುವುದಿಲ್ಲ. ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಕೃಷ್ಣನ ತೃಪ್ತಿಯೇ ಮುಖ್ಯ. ಬೇರೇನೂ ಅಲ್ಲ. ಆದುದರಿಂದ ಅವನು ಎಲ್ಲ ಮೋಹ - ನಿರ್ಮೋಹಗಳನ್ನು ಮೀರಿದವನು. ಕೃಷ್ಣನು ಬಯಸಿದರೆ ಭಕ್ತನು ಸಾಮಾನ್ಯವಾಗಿ ಅಪೇಕ್ಷಣೀಯವಲ್ಲ ಎಂದು ಭಾವಿಸಿದುದನ್ನು ಮಾಡಬಹುದು; ಕೃಷ್ಣನು ಅಪೇಕ್ಷಿಸದಿದ್ದರೆ ಸಾಮಾನ್ಯವಾಗಿ ತನ್ನ ತೃಪ್ತಿಗಾಗಿ ಅವನು ಮಾಡುತ್ತಿದ್ದುದನ್ನೂ ಮಾಡಲಾಗದು. ಆದುದರಿಂದ ಏನನ್ನಾದರೂ ಮಾಡುವುದು ಅಥವಾ ಮಾಡದಿರುವುದು ಅವನ ಕೈಯಲ್ಲಿದೆ. ಏಕೆಂದರೆ ಅವನು ಕೃಷ್ಣನ ಆದೇಶಕ್ಕೆ ಅನುಗುಣವಾಗಿಯೇ ಕೆಲಸ ಮಾಡುತ್ತಾನೆ. ಈ ಪ್ರಜ್ಞೆಯು ಭಗವಂತನ ಅನಿಮಿತ್ತ ಕರುಣೆ; ಭಕ್ತನು ಇಂದ್ರಿಯಾಸಕ್ತಿಯನ್ನು ಹೊಂದಿದ್ದರೂ ಈ ಕರುಣೆಯನ್ನು ಪಡೆಯಬಹುದು.

## ಶ್ಲೋಕ - 65

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ |**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ||೬೫||**

**ಪ್ರಸಾದೇ**—ಭಗವಂತನ ಅವ್ಯಾಜ ಅನುಗ್ರಹವನ್ನು ಸಾಧಿಸಿದಾಗ; **ಸರ್ವ**—ಎಲ್ಲ; **ದುಃಖಾನಾಮ್**—ಭೌತಿಕ ಕ್ಲೇಶಗಳ; **ಹಾನಿಃ**—ನಾಶವು; **ಅಸ್ಯ**—ಅವನ; **ಉಪಜಾಯತೇ**—ಉಂಟಾಗುತ್ತದೆ; **ಪ್ರಸನ್ನಚೇತಸಃ**—ಸಂತೋಷಚಿತ್ತನಾದ; **ಹಿ**—ಖಂಡಿತವಾಗಿಯೂ; **ಆಶು**—ಬೇಗನೆ; **ಬುದ್ಧಿಃ**—ಬುದ್ಧಿಯು; **ಪರಿ**—ಸಾಕಷ್ಟು; **ಅವತಿಷ್ಠತೇ**—ಸ್ಥಾಪಿತವಾಗುತ್ತದೆ.

## ಅನುವಾದ

**(ಕೃಷ್ಣಪ್ರಜ್ಞೆಯಲ್ಲಿ) ಹೀಗೆ ತೃಪ್ತಿಹೊಂದಿದವನಿಗೆ ಐಹಿಕ ಬದುಕಿನ ಮೂರು ಕ್ಲೇಶಗಳು ಇರುವುದಿಲ್ಲ; ಇಂತಹ ತೃಪ್ತಿಯನ್ನು ಕಂಡ ಪ್ರಜ್ಞೆಯಲ್ಲಿ ಮನುಷ್ಯನ ಬುದ್ಧಿಯು ಸ್ಥಿರವಾಗುವುದು.**

## ಶ್ಲೋಕ - 66

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ |**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ||೬೬||**

**ನ ಅಸ್ತಿ**—ಇರಲಾರದು; **ಬುದ್ಧಿಃ**—ದಿವ್ಯ ಬುದ್ಧಿಯು; **ಅಯುಕ್ತಸ್ಯ**—(ಕೃಷ್ಣಪ್ರಜ್ಞೆಯೊಂದಿಗೆ) ಸಂಬಂಧವಿಲ್ಲದವನಿಗೆ; **ನ**—ಇಲ್ಲ; **ಚ**—ಮತ್ತು; **ಅಯುಕ್ತಸ್ಯ**—ಕೃಷ್ಣಪ್ರಜ್ಞಾರಹಿತನಾದವನಿಗೆ; **ಭಾವನಾ**—(ಸಂತೋಷದಲ್ಲಿ) ಸ್ಥಿರಮನಸ್ಸು; **ನ**—ಇಲ್ಲ; **ಚ**—ಮತ್ತು; **ಅಭಾವಯತಃ**—ಸ್ಥಿರನಲ್ಲದವನಿಗೆ; **ಶಾನ್ತಿಃ**—ಶಾಂತಿಯು; **ಅಶಾನ್ತಸ್ಯ**—ಶಾಂತಿಯಿಲ್ಲದವನಿಗೆ; **ಕುತಃ**—ಎಲ್ಲಿದೆ; **ಸುಖಮ್**—ಸುಖವು.

### ಅನುವಾದ

**(ಕೃಷ್ಣಪ್ರಜ್ಞೆಯಲ್ಲಿ) ಪರಾತ್ಪರದೊಂದಿಗೆ ಸಂಬಂಧವನ್ನು ಪಡೆಯದವನಿಗೆ ಅಲೌಕಿಕ ಬುದ್ಧಿಶಕ್ತಿಯಾಗಲಿ ಸ್ಥಿರವಾದ ಮನಸ್ಸಾಗಲಿ ಇರುವುದಿಲ್ಲ; ಇವುಗಳಿಲ್ಲದೆ ಶಾಂತಿಯಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿ?**

### ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ನೆಲೆಸದಿರುವವನಿಗೆ ಶಾಂತಿಯು ಸಾಧ್ಯವೇ ಇಲ್ಲ. ಆದುದರಿಂದ ಐದನೆಯ ಅಧ್ಯಾಯದಲ್ಲಿ (5.29) ಇದನ್ನು ದೃಢಪಡಿಸಿದೆ. ಕೃಷ್ಣನೇ ಎಲ್ಲ ಯಾಗಗಳ ಮತ್ತು ತಪಸ್ಸಿನ ಸತ್ಫಲಗಳನ್ನು ಸವಿಯುವವನು, ಕೃಷ್ಣನೇ ಜಗತ್ತಿನ ಎಲ್ಲ ಅಭಿವ್ಯಕ್ತಿಗಳ ಒಡೆಯ ಮತ್ತು ಕೃಷ್ಣನೇ ಎಲ್ಲ ಜೀವಿಗಳ ಮಿತ್ರ ಎನ್ನುವುದನ್ನು ಅರ್ಥಮಾಡಿಕೊಂಡಾಗಲೇ ಮನುಷ್ಯನಿಗೆ ನಿಜವಾದ ಶಾಂತಿ. ಆದುದರಿಂದ ಕೃಷ್ಣಪ್ರಜ್ಞೆಯಿಲ್ಲದಿದ್ದರೆ ಮನಸ್ಸಿಗೆ ಒಂದು ಅಂತಿಮ ಗುರಿ ಇರಲು ಸಾಧ್ಯವಿಲ್ಲ. ಅಂತಿಮ ಗುರಿ ಇಲ್ಲದಿರುವುದೇ ತಳಮಳಕ್ಕೆ ಕಾರಣ. ಕೃಷ್ಣನೇ ಎಲ್ಲರನ್ನೂ ಮತ್ತು ಎಲ್ಲ ವಸ್ತುಗಳನ್ನೂ ಸವಿಯುವವನು, ಎಲ್ಲರ ಮತ್ತು ಎಲ್ಲ ವಸ್ತುಗಳ ಒಡೆಯ ಮತ್ತು ಮಿತ್ರ ಎನ್ನುವುದು ಖಚಿತವಾದಾಗ ಮನುಷ್ಯನು ದೃಢ ಮನಸ್ಸಿನಿಂದ ಶಾಂತಿಯನ್ನು ಸಾಧಿಸಬಲ್ಲ. ಆದುದರಿಂದ ಕೃಷ್ಣನೊಡನೆ ಸಂಬಂಧವಿಲ್ಲದೆ ಕಾರ್ಯಪ್ರವೃತ್ತನಾದವನು ತನ್ನ ಬದುಕಿನಲ್ಲಿ ಶಾಂತಿಯಿದೆ ಮತ್ತು ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿದ್ದೇನೆ ಎಂದು ಎಷ್ಟೇ ಹೊರಗೆ ತೋರಿಸಿಕೊಂಡರೂ ಖಂಡಿತವಾಗಿಯೂ ಅವನು ಯಾವಾಗಲೂ ದುಃಖದಲ್ಲಿರುತ್ತಾನೆ ಮತ್ತು ಅವನಿಗೆ ಶಾಂತಿಯಿರುವುದಿಲ್ಲ. ಕೃಷ್ಣಪ್ರಜ್ಞೆಯು ಸ್ವಯಂ ಅಭಿವ್ಯಕ್ತಿಯುಳ್ಳ ಶಾಂತಸ್ಥಿತಿ; ಇದನ್ನು ಕೃಷ್ಣನೊಡನೆ ಸಂಬಂಧ ಸಾಧಿಸಿಯೇ ಪಡೆಯಬೇಕು.

## ಶ್ಲೋಕ - 67

**ಇನ್ದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ |**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ||೬೭||**

**ಇನ್ದ್ರಿಯಾಣಾಮ್**—ಇಂದ್ರಿಯಗಳಲ್ಲಿ; **ಹಿ**—ಖಂಡಿತವಾಗಿಯೂ; **ಚರತಾಮ್**—ಅಲೆದಾಡುವ; **ಯತ್**—ಯಾವ; **ಮನಃ**—ಮನಸ್ಸು; **ಅನುವಿಧೀಯತೇ**—ನಿರಂತರವಾಗಿ ತೊಡಗುತ್ತದೋ; **ತತ್**—ಅದು; **ಅಸ್ಯ**—ಅವನ; **ಹರತಿ**—ಎಳೆದೊಯ್ಯುತ್ತದೆ; **ಪ್ರಜ್ಞಾಮ್**—ಬುದ್ಧಿಯನ್ನು; **ವಾಯುಃ**—ಗಾಳಿಯು; **ನಾವಮ್**—ದೋಣಿಯನ್ನು; **ಇವ**—ಹಾಗೆ; **ಅಮ್ಭಸಿ**—ನೀರಿನ ಮೇಲೆ.

### ಅನುವಾದ

**ಚಂಡಮಾರುತವು ನೀರಿನಲ್ಲಿರುವ ದೋಣಿಯನ್ನು ಹೊಡೆದುಕೊಂಡು ಹೋಗುತ್ತದೆ. ಅದೇ ರೀತಿಯಲ್ಲಿ ಅಲೆದಾಡುವ ಇಂದ್ರಿಯಗಳಲ್ಲಿ ಒಂದರಲ್ಲಿ ಮನಸ್ಸು ನೆಟ್ಟರೂ ಅದು ಮನುಷ್ಯನ ಬುದ್ಧಿಶಕ್ತಿಯನ್ನು ಅಪಹರಿಸಬಲ್ಲದು.**

### ಭಾವಾರ್ಥ

ಎಲ್ಲ ಇಂದ್ರಿಯಗಳೂ ಭಗವಂತನ ಸೇವೆಯಲ್ಲಿ ತೊಡಗಿರಬೇಕು. ಅವುಗಳಲ್ಲಿ ಒಂದೇ ಒಂದು ಇಂದ್ರಿಯ ಭೋಗದಲ್ಲಿ ತೊಡಗಿದರೆ ಅದು ಭಕ್ತನನ್ನು ಅಲೌಕಿಕ ಪ್ರಗತಿಯ ಹಾದಿಯಿಂದ ಬೇರೆಡೆಗೆ ಎಳೆಯಬಹುದು. ಅಂಬರೀಷ ಮಹಾರಾಜನ ಬದುಕಿನಲ್ಲಿ ಹೇಳಿದಂತೆ ಎಲ್ಲ ಇಂದ್ರಿಯಗಳೂ ಕೃಷ್ಣಪ್ರಜ್ಞೆಯಲ್ಲಿ ತೊಡಗಿರಬೇಕು. ಮನಸ್ಸಿನ ನಿಯಂತ್ರಣಕ್ಕೆ ಇದೇ ಸರಿಯಾದ ತಂತ್ರ.

## ಶ್ಲೋಕ - 68

**ತಸ್ಮಾದ್ ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ |**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ||೬೮||**

**ತಸ್ಮಾತ್**—ಆದ್ದರಿಂದ; **ಯಸ್ಯ**—ಯಾರ; **ಮಹಾಬಾಹೋ**—ಮಹಾಬಾಹುವೇ; **ನಿಗೃಹೀತಾನಿ**—ಹಾಗೆ ನಿಗ್ರಹಿಸಲ್ಪಡುವವೋ; **ಸರ್ವಶಃ**—ಸರ್ವತ್ರ; **ಇನ್ದ್ರಿಯಾಣಿ**—ಇಂದ್ರಿಯಗಳು; **ಇನ್ದ್ರಿಯ ಅರ್ಥೇಭ್ಯಃ**—ಇಂದ್ರಿಯ ವಿಷಯಗಳಿಂದ; **ತಸ್ಯ**—ಅವನ; **ಪ್ರಜ್ಞಾ**—ಬುದ್ಧಿಯು; **ಪ್ರತಿಷ್ಠಿತಾ**—ಸ್ಥಿರವಾಗಿರುತ್ತದೆ.

### ಅನುವಾದ

**ಮಹಾಬಾಹುವೆ, ಈ ಕಾರಣದಿಂದ ಯಾರು ತನ್ನ ಇಂದ್ರಿಯಗಳನ್ನು ಅವುಗಳ ವಸ್ತುಗಳಿಂದ ತಡೆದಿಡುತ್ತಾನೋ ಆತನು ನಿಶ್ಚಯವಾಗಿಯೂ ಸ್ಥಿರಬುದ್ಧಿಯವನು.**

### ಭಾವಾರ್ಥ

ಇಂದ್ರಿಯ ಭೋಗಾಸಕ್ತಿಯ ಶಕ್ತಿಗಳನ್ನು ಕೃಷ್ಣಪ್ರಜ್ಞೆಯಿಂದ ಮಾತ್ರವೇ ಅಥವಾ ಎಲ್ಲ ಇಂದ್ರಿಯಗಳನ್ನು ಭಗವಂತನ ದಿವ್ಯ ಪ್ರೇಮದ ಸೇವೆಯಲ್ಲಿ ತೊಡಗಿಸುವುದರಿಂದ ಮಾತ್ರವೇ ಅಂಕೆಯಲ್ಲಿಡಬಹುದು. ಶತ್ರುಗಳನ್ನು ಅವರ ಶಕ್ತಿಗಿಂತ ಹೆಚ್ಚಿನ ಶಕ್ತಿಯಿಂದ ನಿಗ್ರಹಿಸುವಂತೆ

ಇಂದ್ರಿಯಗಳನ್ನು ನಿಗ್ರಹಿಸಬಹುದು. ಇದು ಮನುಷ್ಯ ಪ್ರಯತ್ನದಿಂದ ಸಾಧ್ಯವಿಲ್ಲ. ಆದರೆ ಇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿ ತೊಡಗಿಸುವುದರಿಂದ ಮಾತ್ರ ಸಾಧ್ಯ. ಕೃಷ್ಣಪ್ರಜ್ಞೆಯಿಂದ ಮಾತ್ರವೇ ಮನುಷ್ಯನು ಸ್ಥಿತಪ್ರಜ್ಞನಾಗುತ್ತಾನೆ. ಈ ಕಲೆಯನ್ನು ಒಬ್ಬ ನಿಜವಾದ ಗುರುವಿನ ಮಾರ್ಗದರ್ಶನದಲ್ಲಿ ಮಾತ್ರ ಅಭ್ಯಾಸಮಾಡಬೇಕು; ಇದನ್ನು ಅರಿತವನಿಗೆ ಸಾಧಕ ಅಥವಾ ಮುಕ್ತಿಗೆ ಯೋಗ್ಯನಾದವನು ಎಂದು ಹೆಸರು.

## ಶ್ಲೋಕ - 69

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ||೬೯||**

**ಯಾ**—ಯಾವುದು; **ನಿಶಾ**—ರಾತ್ರಿಯಾಗಿದೆಯೋ; **ಸರ್ವ**—ಸಕಲ; **ಭೂತಾನಾಮ್**— ಜೀವಿಗಳಿಗೆ; **ತಸ್ಯಾಮ್**—ಅದರಲ್ಲಿ; **ಜಾಗರ್ತಿ**—ಎಚ್ಚರವಾಗಿರುತ್ತಾನೆ; **ಸಂಯಮೀ**— ಆತ್ಮನಿಗ್ರಹವುಳ್ಳವನು; **ಯಸ್ಯಾಮ್**—ಯಾವುದರಲ್ಲಿ; **ಜಾಗ್ರತಿ**—ಎಚ್ಚರವಾಗಿರುವವೋ; **ಭೂತಾನಿ**—ಎಲ್ಲ ಜೀವಿಗಳು; **ಸಾ**—ಅದು; **ನಿಶಾ**—ರಾತ್ರಿಯಾಗಿರುವುದು; **ಪಶ್ಯತಃ**— ಆತ್ಮಪರೀಕ್ಷಕನಾದ; **ಮುನೇಃ**—ಋಷಿಗೆ.

### ಅನುವಾದ

**ಎಲ್ಲ ಪ್ರಾಣಿಗಳಿಗೆ ರಾತ್ರಿಯಾದಾಗ ಜಿತೇಂದ್ರಿಯನಿಗೆ ಎಚ್ಚರವಾಗಿರುವ ಕಾಲ; ಎಲ್ಲ ಪ್ರಾಣಿಗಳಿಗೆ ಎಚ್ಚತ್ತಿರುವ ಕಾಲವಾದಾಗ ಆಂತರ್ಯ ಪರೀಕ್ಷೆಯನ್ನು ಮಾಡಿಕೊಳ್ಳುವ ಮುನಿಗೆ ರಾತ್ರಿಯಾಗುತ್ತದೆ.**

### ಭಾವಾರ್ಥ

ಬುದ್ಧಿವಂತರಲ್ಲಿ ಎರಡು ವರ್ಗಗಳು. ಒಂದು ವರ್ಗದವರು ಇಂದ್ರಿಯ ತೃಪ್ತಿಗಾಗಿ ಮಾಡುವ ಐಹಿಕ ಚಟುವಟಿಕೆಗಳಲ್ಲಿ ಬುದ್ಧಿವಂತರು; ಇನ್ನೊಂದು ವರ್ಗದವರು ಆಂತರ್ಯ ಪರೀಕ್ಷೆ ಮಾಡಿಕೊಳ್ಳುವವರು ಮತ್ತು ಆತ್ಮಸಾಕ್ಷಾತ್ಕಾರದ ಕೃಷಿಯ ಅಗತ್ಯವನ್ನು ತಿಳಿದವರು. ಆಂತರ್ಯ ಪರೀಕ್ಷೆ ಮಾಡಿಕೊಳ್ಳುವ ಅಥವಾ ಚಿಂತನಶೀಲ ಮನುಷ್ಯನ ಚಟುವಟಿಕೆಗಳು ಐಹಿಕ ವಿಷಯಗಳಲ್ಲಿ ಮುಳುಗಿರುವವರಿಗೆ ರಾತ್ರಿ ಇದ್ದಂತೆ. ಆತ್ಮ ಸಾಕ್ಷಾತ್ಕಾರದ ತಮ್ಮ ಅಜ್ಞಾನದಿಂದ ಇಂತಹ ರಾತ್ರಿಯಲ್ಲಿ ಪ್ರಾಪಂಚಿಕ ಮನೋಧರ್ಮದವರು ನಿದ್ರೆಮಾಡುತ್ತಿರುತ್ತಾರೆ. ಪ್ರಾಪಂಚಿಕ ಮನೋಧರ್ಮದವರ 'ರಾತ್ರಿ'ಯಲ್ಲಿ ಆತ್ಮಪರೀಕ್ಷೆ ಮಾಡಿಕೊಳ್ಳುವ ಋಷಿಯು ಜಾಗೃತನಾಗಿರುತ್ತಾನೆ. ಆಧ್ಯಾತ್ಮಿಕ ಸಂಸ್ಕೃತಿಯ ಕ್ರಮ ಕ್ರಮವಾದ ಪ್ರಗತಿಯಲ್ಲಿ ಋಷಿಗೆ ದಿವ್ಯಾನಂದವಾಗುತ್ತದೆ. ಆದರೆ ಪ್ರಾಪಂಚಿಕ ಚಟುವಟಿಕೆಗಳ ಮನುಷ್ಯನು ಆತ್ಮಸಾಕ್ಷಾತ್ಕಾರದ ವಿಷಯದಲ್ಲಿ ನಿದ್ರಾವಶನಾಗಿದ್ದು ಬಗೆಬಗೆಯ ಇಂದ್ರಿಯ ಸುಖಗಳ ಕನಸನ್ನು ಕಾಣುತ್ತಾನೆ. ತನ್ನ ನಿದ್ರಾವಸ್ಥೆಯಲ್ಲಿ ಒಮ್ಮೊಮ್ಮೆ ಸುಖಪಡುತ್ತಾನೆ, ಒಮ್ಮೊಮ್ಮೆ ದುಃಖಪಡುತ್ತಾನೆ. ಆತ್ಮ ಪರೀಕ್ಷೆಮಾಡಿಕೊಳ್ಳುವ ಮನುಷ್ಯನು ಪ್ರಾಪಂಚಿಕ ಸುಖದುಃಖಗಳ ವಿಷಯದಲ್ಲಿ ಸದಾ ಅಸಡ್ಡೆಯಿಂದಿರುತ್ತಾನೆ. ಪ್ರಾಪಂಚಿಕ ಪ್ರತಿಕ್ರಿಯೆಗಳಿಂದ ವಿಚಲಿತನಾಗದೆ ತನ್ನ ಆತ್ಮಸಾಕ್ಷಾತ್ಕಾರದ

ಚಟುವಟಿಕೆಗಳಲ್ಲಿ ಮಗ್ನನಾಗಿರುತ್ತಾನೆ.

## ಶ್ಲೋಕ - 70

**ಆಪೂರ್ಯಮಾಣಮಚಲಪ್ರತಿಷ್ಠಮ್**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥೭೦॥**

**ಆಪೂರ್ಯಮಾಣಮ್**—ಸದಾ ತುಂಬುತ್ತಿರುವ; **ಅಚಲಪ್ರತಿಷ್ಠಮ್**—ಸ್ಥಿರವಾಗಿ ನೆಲೆಸಿರುವ; **ಸಮುದ್ರಮ್**—ಸಮುದ್ರವನ್ನು; **ಆಪಃ**—ನೀರು; **ಪ್ರವಿಶನ್ತಿ**—ಪ್ರವೇಶಿಸುತ್ತವೆ; **ಯದ್ವತ್**—ಹೇಗೋ; **ತದ್ವತ್**—ಅದರಂತೆ; **ಕಾಮಾಃ**—ಆಸೆಗಳು; **ಯಮ್**—ಯಾರಲ್ಲಿ; **ಪ್ರವಿಶನ್ತಿ**—ಪ್ರವೇಶಿಸುತ್ತವೋ; **ಸರ್ವೇ**—ಎಲ್ಲ; **ಸಃ**—ಆ ವ್ಯಕ್ತಿಯು; **ಶಾನ್ತಿಮ್**—ಶಾಂತಿಯನ್ನು; **ಆಪ್ನೋತಿ**—ಹೊಂದುತ್ತಾನೆ; **ನ**—ಅಲ್ಲ; **ಕಾಮಕಾಮೀ**—ಆಸೆಗಳನ್ನು ಪೂರೈಸಿಕೊಳ್ಳಲು ಆಶಿಸುವವನು.

## ಅನುವಾದ

**ಸದಾ ನದಿಗಳು ಪ್ರವೇಶಿಸಿ ನೀರು ತುಂಬುತ್ತಿದ್ದರೂ ಶಾಂತವಾಗಿರುವ ಸಾಗರದಂತೆ, ನಿರಂತರವಾಗಿ ಹರಿದು ಬರುವ ಕಾಮಗಳಿಂದ ಮನಸ್ಸು ಕಲಕದಂತಿರುವ ಮನುಷ್ಯನು ಮಾತ್ರವೇ ಶಾಂತಿಯನ್ನು ಸಾಧಿಸಬಲ್ಲ; ಇಂತಹ ಕಾಮಗಳನ್ನು ತೃಪ್ತಿಗೊಳಿಸಲು ಶ್ರಮಿಸುವವನಿಗೆ ಶಾಂತಿ ದೊರೆಯಲಾರದು.**

## ಭಾವಾರ್ಥ

ಸಾಗರವು ಯಾವಾಗಲೂ ನೀರಿನಿಂದ ತುಂಬಿರುತ್ತದೆ. ಅದರಲ್ಲಿಯೂ ಮಳೆಗಾಲದಲ್ಲಿ ಹೆಚ್ಚು ನೀರು ಅದನ್ನು ತುಂಬುತ್ತದೆ. ಆದರೂ ಸಾಗರವು ಒಂದೇ ರೀತಿ ಇರುತ್ತದೆ - ಶಾಂತವಾಗಿ ಇರುತ್ತದೆ; ಅದು ಪ್ರಕ್ಷುಬ್ಧವಾಗುವುದಿಲ್ಲ ಮತ್ತು ತನ್ನ ದಡದ ಮಿತಿಯನ್ನು ಮೀರುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಮನಸ್ಸು ನೆಲೆಸಿರುವವನ ವಿಷಯದಲ್ಲಿಯೂ ಇದು ಸತ್ಯ. ಐಹಿಕ ಶರೀರವಿರುವಷ್ಟು ಕಾಲವೂ ಇಂದ್ರಿಯತೃಪ್ತಿಗಾಗಿ ಶರೀರದ ಬೇಡಿಕೆಗಳು ಇದ್ದೇ ಇರುತ್ತವೆ. ಆದರೆ ಭಕ್ತನು ಪೂರ್ಣತೆಯನ್ನು ಪಡೆದಿರುವುದರಿಂದ ಅವನ ಮನಸ್ಸು ಇಂತಹ ಆಸೆಗಳಿಂದ ಕದಡುವುದಿಲ್ಲ. ಕೃಷ್ಣಪ್ರಜ್ಞೆಯುಳ್ಳ ಮನುಷ್ಯನಿಗೆ ಯಾವುದರ ಅಗತ್ಯವೂ ಇಲ್ಲ. ಏಕೆಂದರೆ ಭಗವಂತನೇ ಅವನ ಎಲ್ಲ ಐಹಿಕ ಅಗತ್ಯಗಳನ್ನು ಪೂರೈಸುತ್ತಾನೆ. ಆದುದರಿಂದ ಆತನು ಸಮುದ್ರದಂತೆ - ಯಾವಾಗಲೂ ತನ್ನಲ್ಲೇ ಪೂರ್ಣತೆ ಇರುವವನು. ಸಮುದ್ರದೊಳಕ್ಕೆ ಹರಿಯುವ ನದಿಯ ನೀರಿನಂತೆ ಬಯಕೆಗಳು ಅವನಿಗೆ ಬರಬಹುದು. ಆದರೆ ಅವನು ತನ್ನ ಚಟುವಟಿಕೆಗಳಲ್ಲಿ ಸ್ಥಿರನಾಗಿ ಇರುತ್ತಾನೆ; ಇಂದ್ರಿಯತೃಪ್ತಿಯ ಬಯಕೆಗಳಿಂದ ಅವನಿಗೆ ಒಂದಿಷ್ಟೂ ಕ್ಷೋಭೆಯಾಗುವುದಿಲ್ಲ. ಒಬ್ಬ ಮನುಷ್ಯನಲ್ಲಿ ಕೃಷ್ಣಪ್ರಜ್ಞೆಯು ಇದೆ ಎನ್ನುವುದಕ್ಕೆ ಇದೇ ಸಾಕ್ಷ್ಯಾಧಾರ. ಅವನಲ್ಲಿ ಬಯಕೆಗಳಿದ್ದರೂ ಐಹಿಕ ಇಂದ್ರಿಯತೃಪ್ತಿಯ ಒಲವು ಇರುವುದೇ ಇಲ್ಲ. ಅವನು ಭಗವಂತನ ದಿವ್ಯಪ್ರೇಮದ ಸೇವೆಯಲ್ಲಿ ತೃಪ್ತನಾಗಿರುವುದರಿಂದ ಸಮುದ್ರದಂತೆ ಸ್ಥಿರನಾಗಿರಬಲ್ಲ. ಆದುದರಿಂದ

ಸಂಪೂರ್ಣವಾಗಿ ಶಾಂತಿಯನ್ನು ಅನುಭವಿಸಬಲ್ಲ. ಐಹಿಕ ಯಶಸ್ಸಿನ ಬಯಕೆಯಾಗಿರಲಿ, ಮುಕ್ತಿಯ ಬಯಕೆಯೇ ಆಗಿರಲಿ, ಬಯಕೆಗಳನ್ನು ತೃಪ್ತಿಪಡಿಸಲು ಅಪೇಕ್ಷಿಸುವವರಿಗೆ ಶಾಂತಿ ಎಂಬುದೇ ಇಲ್ಲ. ಕಾಮ್ಯಕರ್ಮಿಗಳು, ಮೋಕ್ಷಾರ್ಥಿಗಳು, ಹಾಗೂ ಯೋಗಸಿದ್ಧಿಯನ್ನು ಬಯಸುವವರು ಪೂರ್ಣೈಕೆಗೊಳ್ಳದ ಬಯಕೆಗಳಿಂದಾಗಿ ಅಸುಖಿಗಳಾಗಿರುತ್ತಾರೆ. ಆದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಭಗವಂತನ ಸೇವೆಯಲ್ಲಿಯೇ ಸುಖ ಹೊಂದುತ್ತಾನೆ. ಅವನಿಗೆ ತೃಪ್ತಿಗೊಳಿಸಬೇಕಾದ ಬಯಕೆಗಳು ಯಾವುವೂ ಇರುವುದಿಲ್ಲ. ವಾಸ್ತವವಾಗಿ ಯಾವುದನ್ನು ಐಹಿಕ ಬಂಧನ ಎಂದು ಕರೆಯುತ್ತೇವೆಯೋ ಅದರಿಂದ ಸಹ ಆತನು ಬಿಡುಗಡೆಯನ್ನು ಅಪೇಕ್ಷಿಸುವುದಿಲ್ಲ. ಕೃಷ್ಣನ ಭಕ್ತರಿಗೆ ಪ್ರಾಪಂಚಿಕ ಬಯಕೆಗಳಿಲ್ಲ. ಆದುದರಿಂದ ಅವರು ಪರಿಪೂರ್ಣ ಶಾಂತಿಯಲ್ಲಿರುತ್ತಾರೆ.

## ಶ್ಲೋಕ - 71

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ |**
**ನಿರ್ಮಮೋ ನಿರಹನ್ಕಾರಃ ಸ ಶಾನ್ತಿಮಧಿಗಚ್ಛತಿ ||೭೧||**

**ವಿಹಾಯ**—ತ್ಯಜಿಸಿ; **ಕಾಮಾನ್**—ಇಂದ್ರಿಯ ತೃಪ್ತಿಗಾಗಿ ಭೌತಿಕ ಅಪೇಕ್ಷೆಗಳನ್ನು; **ಯಃ**—ಯಾವ; **ಸರ್ವಾನ್**—ಎಲ್ಲ; **ಪುಮಾನ್**—ವ್ಯಕ್ತಿಯು; **ಚರತಿ**—ಜೀವಿಸುತ್ತಾನೋ; **ನಿಸ್ಪೃಹಃ**—ಆಶಾರಹಿತನಾಗಿ; **ನಿರ್ಮಮಃ**—ಒಡೆತನದ ಭಾವನೆಯಿಲ್ಲದೆ; **ನಿರಹನ್ಕಾರಃ**—ಅಹಂಕಾರವಿಲ್ಲದೆ; **ಸಃ**—ಅವನು; **ಶಾನ್ತಿಮ್**—ಪರಿಪೂರ್ಣ ಶಾಂತಿಯನ್ನು; **ಅಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಯಾವ ಮನುಷ್ಯನು ಇಂದ್ರಿಯ ತೃಪ್ತಿಯ ಎಲ್ಲ ಬಯಕೆಯನ್ನು ತ್ಯಜಿಸಿದ್ದಾನೋ, ಬಯಕೆಗಳಿಂದ ಮುಕ್ತನಾಗಿ ಬದುಕುತ್ತಾನೋ, ಒಡೆತನದ ಭಾವವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟಿದ್ದಾನೋ ಮತ್ತು ಅಹಂಕಾರ ರಹಿತನಾಗಿದ್ದಾನೋ ಅವನು ಮಾತ್ರ ನಿಜವಾದ ಶಾಂತಿಯನ್ನು ಪಡೆಯಬಲ್ಲ.**

## ಭಾವಾರ್ಥ

ಕಾಮರಹಿತನಾಗಿರುವುದೆಂದರೆ ಇಂದ್ರಿಯ ತೃಪ್ತಿಗಾಗಿ ಏನನ್ನೂ ಬಯಸದಿರುವುದು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಕೃಷ್ಣಪ್ರಜ್ಞೆಯನ್ನು ಬಯಸುವುದೇ ವಾಸ್ತವವಾಗಿ ಕಾಮರಹಿತನಾಗಿರುವುದು. ಈ ಜಡದೇಹವೇ ತಾನು ಎಂಬ ಕಲ್ಪನೆಗೊಳಗಾಗದೆ, ಜಗತ್ತಿನಲ್ಲಿ ಯಾವುದಕ್ಕೂ ತಾನು ಒಡೆಯನೆಂದು ತಪ್ಪಾಗಿ ಭಾವಿಸದೆ, ತಾನು ಎಂದೆಂದೂ ಕೃಷ್ಣನ ಸೇವಕ ಎನ್ನುವ ತನ್ನ ನಿಜವಾದ ಸ್ಥಾನವನ್ನು ಅರ್ಥಮಾಡಿಕೊಳ್ಳುವುದೇ ಕೃಷ್ಣಪ್ರಜ್ಞೆಯ ಪರಿಪೂರ್ಣ ಸ್ಥಿತಿ. ಈ ಪರಿಪೂರ್ಣ ಸ್ಥಿತಿಯಲ್ಲಿರುವವನು, ಕೃಷ್ಣನೇ ಎಲ್ಲದರ ಒಡೆಯ, ಎಲ್ಲವನ್ನೂ ಕೃಷ್ಣನ ಸಂತೃಪ್ತಿಗಾಗಿ ಬಳಸಬೇಕು ಎನ್ನುವುದನ್ನು ತಿಳಿದಿರುತ್ತಾನೆ. ಅರ್ಜುನನು ತನ್ನ ಇಂದ್ರಿಯ ತೃಪ್ತಿಗಾಗಿ ಯುದ್ಧಮಾಡಲು ಬಯಸಲಿಲ್ಲ. ಆದರೆ ಅವನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಪಡೆದಾಗ ತಾನು (ಅರ್ಜುನನು) ಯುದ್ಧಮಾಡಬೇಕೆಂದು ಕೃಷ್ಣನು ಬಯಸುತ್ತಾನೆ ಎನ್ನುವುದಕ್ಕಾಗಿ ಯುದ್ಧ ಮಾಡಿದ. ತನಗಾಗಿ ಯುದ್ಧಮಾಡಬೇಕೆಂಬ ಬಯಕೆ ಅವನಿಗಿರಲಿಲ್ಲ. ಆದರೆ ಅದೇ

ಅರ್ಜುನನು ಕೃಷ್ಣನಿಗಾಗಿ ತನ್ನಿಂದಾದಷ್ಟು ಸಾಮರ್ಥ್ಯದಿಂದ ಯುದ್ಧಮಾಡಿದ. ನಿಜವಾಗಿ ಕಾಮವಿಲ್ಲದಿರುವುದೆಂದರೆ ಕೃಷ್ಣನನ್ನು ತೃಪ್ತಿಪಡಿಸಬೇಕೆಂಬ ಬಯಕೆ; ಬಯಕೆಗಳನ್ನು ತೊಡೆದುಹಾಕಬೇಕೆಂಬ ಕೃತಕ ಪ್ರಯತ್ನವಲ್ಲ. ಜೀವನು ಬಯಕೆಗಳಿಲ್ಲದೇ ಅಥವಾ ಇಂದ್ರಿಯಗಳಿಲ್ಲದೆ ಇರಲು ಸಾಧ್ಯವಿಲ್ಲ. ಆದರೆ ಆತನು ಬಯಕೆಗಳ ಗುಣವನ್ನು ಬದಲು ಮಾಡಬೇಕು. ಐಹಿಕವಾಗಿ ಬಯಕೆಗಳಿಲ್ಲದ ಮನುಷ್ಯನಿಗೆ ಎಲ್ಲವೂ ಕೃಷ್ಣನಿಗೆ ಸೇರಿದುದು (**ಈಶಾವಾಸ್ಯಮ್ ಇದಂ ಸರ್ವಮ್**) ಎಂದು ತಿಳಿದಿರುತ್ತದೆ. ಆದುದರಿಂದ ಆತನು ಹುಸಿಯಾಗಿ ಯಾವುದರ ಮೇಲಿನ ಒಡೆತನವನ್ನೂ ಸಾಧಿಸುವುದಿಲ್ಲ. ಈ ಅಲೌಕಿಕ ಜ್ಞಾನಕ್ಕೆ ಆತ್ಮಸಾಕ್ಷಾತ್ಕಾರವೇ ಆಧಾರ; ಆತ್ಮಸಾಕ್ಷಾತ್ಕಾರವೆಂದರೆ, ಆಧ್ಯಾತ್ಮಿಕ ವ್ಯಕ್ತಿತ್ವದಲ್ಲಿ ಪ್ರತಿಯೊಂದು ಜೀವಿಯೂ ಎಂದೆಂದಿಗೂ ಕೃಷ್ಣನ ಒಂದು ವಿಭಿನ್ನಾಂಶ; ಆದುದರಿಂದ ಜೀವಿಯ ನಿರಂತರ ಸ್ಥಾನವು ಕೃಷ್ಣನ ಸ್ಥಾನಕ್ಕೆ ಸಮವಾಗಿಯಾಗಲೀ ಅದಕ್ಕಿಂತ ಉನ್ನತವಾಗಿಯಾಗಲೀ ಇರುವುದಿಲ್ಲ ಎನ್ನುವುದನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವುದು. ಕೃಷ್ಣಪ್ರಜ್ಞೆಯ ಅರಿವೇ ನಿಜವಾದ ಶಾಂತಿಯ ಮೂಲಸೂತ್ರ.

## ಶ್ಲೋಕ - 72

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ |**
**ಸ್ಥಿತ್ವಾಸ್ಯಾಮನ್ತ ಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ||೭೨||**

**ಏಷಾ**—ಇದು; **ಬ್ರಾಹ್ಮೀ**—ಆಧ್ಯಾತ್ಮಿಕ; **ಸ್ಥಿತಿಃ**—ಸನ್ನಿವೇಶವು; **ಪಾರ್ಥ**—ಪೃಥೆಯ ಪುತ್ರನೇ; **ನ**—ಎಂದಿಗೂ ಇಲ್ಲ; **ಏನಾಮ್**—ಇದನ್ನು; **ಪ್ರಾಪ್ಯ**—ಪಡೆದು; **ವಿಮುಹ್ಯತಿ**—ದಿಗ್ಭ್ರಮೆಗೊಳ್ಳುತ್ತಾನೆ; **ಸ್ಥಿತ್ವಾ**—ಸ್ಥಿತನಾಗಿದ್ದು; **ಅಸ್ಯಾಮ್**—ಇದರಲ್ಲಿ; **ಅಂತಕಾಲೇ**—ಜೀವಿತದ ಅಂತ್ಯದಲ್ಲಿ; **ಅಪಿ**—ಕೂಡ; **ಬ್ರಹ್ಮನಿರ್ವಾಣಮ್**—ಭಗವದ್ಧಾಮವನ್ನು; **ಋಚ್ಛತಿ**—ಹೊಂದುತ್ತಾನೆ.

## ಅನುವಾದ

**ಇದು ಆಧ್ಯಾತ್ಮಿಕ ಮತ್ತು ದೇವಸಮ್ಮತ ಬದುಕಿನ ರೀತಿ; ಇದನ್ನು ಸಾಧಿಸಿದ ಅನಂತರ ಮನುಷ್ಯನು ಭ್ರಮೆಗೆ ಒಳಗಾಗುವುದಿಲ್ಲ. ಸಾವಿನ ಗಳಿಗೆಯಲ್ಲೂ ಮನುಷ್ಯನು ಈ ಸ್ಥಿತಿಯಲ್ಲಿದ್ದರೆ ಭಗವದ್ಧಾಮವನ್ನು ಪ್ರವೇಶಿಸುತ್ತಾನೆ.**

## ಭಾವಾರ್ಥ

ಮನುಷ್ಯನು ಕೃಷ್ಣಪ್ರಜ್ಞೆಯನ್ನು ಅಥವಾ ದೈವೀ ಬದುಕನ್ನು ಕೂಡಲೇ ಒಂದೇ ಕ್ಷಣದಲ್ಲಿ ಪಡೆಯಬಹುದು ಅಥವಾ ಲಕ್ಷಾಂತರ ಜನ್ಮಗಳ ಅನಂತರವೂ ಇಂತಹ ಜೀವಾವಸ್ಥೆಯನ್ನು ಮುಟ್ಟದೆ ಹೋಗಬಹುದು. ಇದು ವಸ್ತುಸ್ಥಿತಿಯನ್ನು ಅರ್ಥಮಾಡಿಕೊಂಡು ಒಪ್ಪಿಕೊಳ್ಳುವುದನ್ನು ಅವಲಂಬಿಸಿದೆ. ಖಟ್ವಾಂಗ ಮಹಾರಾಜನು ಸಾಯುವುದಕ್ಕೆ ಕೆಲವೇ ನಿಮಿಷಗಳ ಮೊದಲು ಕೃಷ್ಣನಿಗೆ ಶರಣಾಗತನಾಗಿ ಈ ಸ್ಥಿತಿಯನ್ನು ಸಾಧಿಸಿದನು. ನಿರ್ವಾಣ ಎಂದರೆ ಐಹಿಕ ಬದುಕಿನ ಪ್ರಕ್ರಿಯೆಯನ್ನು ಕೊನೆಗಾಣಿಸುವುದು. ಬೌದ್ಧಸಿದ್ಧಾಂತದ ಪ್ರಕಾರ ಐಹಿಕ ಬದುಕು ಮುಗಿದ ಅನಂತರ ಶೂನ್ಯ ಮಾತ್ರವೇ ಇರುತ್ತದೆ. ಆದರೆ ಭಗವದ್ಗೀತೆಯ ಉಪದೇಶ ಭಿನ್ನವಾಗಿದೆ. ಈ ಐಹಿಕ ಬದುಕು

ಕೊನೆಗೊಂಡ ಮೇಲೆ ವಾಸ್ತವ ಬದುಕು ಪ್ರಾರಂಭವಾಗುತ್ತದೆ. ಜಡ ಐಹಿಕವಾದಿಗೆ ಈ ಬದುಕಿನ ಐಹಿಕ ರೀತಿಯನ್ನು ಕೊನೆಗಾಣಿಸಬೇಕು ಎಂದು ತಿಳಿದರೆ ಸಾಕು. ಆದರೆ ಆಧ್ಯಾತ್ಮಿಕವಾಗಿ ಮುಂದುವರಿದವರಿಗೆ ಈ ಐಹಿಕ ಬದುಕಿನಾಚೆ ಇನ್ನೊಂದು ಬದುಕಿದೆ. ಈ ಬದುಕನ್ನು ಕೊನೆಗಾಣಿಸುವ ಮೊದಲು ಮನುಷ್ಯನು ಕೃಷ್ಣಪ್ರಜ್ಞೆಯನ್ನು ಪಡೆಯುವಷ್ಟು ಭಾಗ್ಯಶಾಲಿಯಾದರೆ ಆತನು ಕೂಡಲೇ ಬ್ರಹ್ಮನಿರ್ವಾಣದ ಹಂತವನ್ನು ಪಡೆಯುತ್ತಾನೆ. ಭಗವಂತನ ರಾಜ್ಯಕ್ಕೂ, ಭಗವಂತನ ಭಕ್ತಿಪೂರ್ವಕ ಸೇವೆಗೂ ವ್ಯತ್ಯಾಸವಿಲ್ಲ. ಅವೆರಡೂ ಪರಾತ್ಪರ ನೆಲೆಯಲ್ಲಿರುವುದರಿಂದ ಭಗವಂತನ ಪ್ರೇಮಪೂರ್ವಕ ಆಧ್ಯಾತ್ಮಿಕ ಸೇವೆಯಲ್ಲಿ ನಿರತನಾಗಿರುವುದೆಂದರೆ ಆಧ್ಯಾತ್ಮಿಕ ರಾಜ್ಯವನ್ನು ಸಾಧಿಸಿದಂತೆ. ಐಹಿಕ ಜಗತ್ತಿನಲ್ಲಿ ಇಂದ್ರಿಯ ತೃಪ್ತಿಯ ಚಟುವಟಿಕೆಗಳಿರುತ್ತವೆ. ಆಧ್ಯಾತ್ಮಿಕ ಜಗತ್ತಿನಲ್ಲಿ ಕೃಷ್ಣಪ್ರಜ್ಞೆಯ ಚಟುವಟಿಕೆಗಳಿರುತ್ತವೆ. ಈ ಬದುಕಿನಲ್ಲೇ ಕೃಷ್ಣಪ್ರಜ್ಞೆಯನ್ನು ಸಾಧಿಸುವುದೆಂದರೆ ಬ್ರಹ್ಮನ್‌ನನ್ನು ಕೂಡಲೇ ಸಾಧಿಸಿದಂತೆ; ಕೃಷ್ಣಪ್ರಜ್ಞೆಯಲ್ಲಿ ಸ್ಥಿರವಾಗಿರುವವನು ಆಗಲೇ ಭಗವಂತನ ರಾಜ್ಯವನ್ನು ಪ್ರವೇಶಿಸಿರುತ್ತಾನೆ.

ಬ್ರಹ್ಮನ್ ಎಂದರೆ ಜಡಕ್ಕೆ ವಿರುದ್ಧವಾದದ್ದು. ಆದುದರಿಂದ ಬ್ರಾಹ್ಮೀಸ್ಥಿತಿ ಎಂದರೆ "ಐಹಿಕ ಚಟುವಟಿಕೆಗಳ ನೆಲೆಯಲ್ಲಿ ಇಲ್ಲದಿರುವುದು." ಭಗವದ್ಗೀತೆಯು ಭಗವಂತನ ಭಕ್ತಿಪೂರ್ವಕ ಸೇವೆಯನ್ನು ಮುಕ್ತಿಪಡೆದ ಸ್ಥಿತಿ ಎಂದು ಪರಿಗಣಿಸುತ್ತದೆ. **(ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮ ಭೂಯಾಯ ಕಲ್ಪತೇ)** ಆದುದರಿಂದ ಐಹಿಕ ಬಂಧನದಿಂದ ಬಿಡುಗಡೆಯೇ ಬ್ರಾಹ್ಮೀಸ್ಥಿತಿ.

ಶ್ರೀಲ ಭಕ್ತಿವಿನೋದ ಠಾಕೂರರು ಭಗವದ್ಗೀತೆಯ ಎರಡನೆಯ ಅಧ್ಯಾಯವು ಇಡೀ ಗ್ರಂಥದಲ್ಲಿರುವುದನ್ನೆಲ್ಲ ಹೇಳುತ್ತದೆ ಎಂದು ಸಂಕ್ಷೇಪವಾಗಿ ಹೇಳಿದ್ದಾರೆ. ಭಗವದ್ಗೀತೆಯ ವಸ್ತುಗಳು ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ. ಎರಡನೆಯ ಅಧ್ಯಾಯದಲ್ಲಿ ಇಡೀ ಗ್ರಂಥದ ತಿರುಳಾಗಿ ಕರ್ಮಯೋಗ ಮತ್ತು ಜ್ಞಾನಯೋಗಗಳನ್ನು ಸ್ಪಷ್ಟವಾಗಿ ಚರ್ಚಿಸಿದೆ ಮತ್ತು ಭಕ್ತಿಯೋಗದ ಕ್ಷಣನೋಟವನ್ನು ನೀಡಿದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಗೀತಾಸಾರ ಸಂಗ್ರಹ" ಎಂಬ ಎರಡನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

ಅಧ್ಯಾಯ - 3

# ಕರ್ಮಯೋಗ

## ಶ್ಲೋಕ - 1

**ಅರ್ಜುನ ಉವಾಚ**

**ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ |**
**ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ||೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಜ್ಯಾಯಸೀ**—ಉತ್ತಮವು ಎಂಬುದು; **ಚೇತ್**—ಆಗಿದ್ದರೆ; **ಕರ್ಮಣಃ**—ಕಾಮ್ಯಕರ್ಮಕ್ಕಿಂತಲೂ; **ತೇ**—ನಿನ್ನ; **ಮತಾ**—ಭಾವನೆ; **ಬುದ್ಧಿಃ**—ಬುದ್ಧಿಯು; **ಜನಾರ್ದನ**—ಕೃಷ್ಣನೇ; **ತತ್**—ಆದ್ದರಿಂದ; **ಕಿಮ್**—ಏಕೆ; **ಕರ್ಮಣಿ**—ಕರ್ಮದಲ್ಲಿ; **ಘೋರೇ**—ಭೀಕರವಾದ; **ಮಾಮ್**—ನನ್ನನ್ನು; **ನಿಯೋಜಯಸಿ**—ತೊಡಗಿಸುತ್ತಿದ್ದೀಯೆ; **ಕೇಶವ**— ಕೃಷ್ಣನೇ.

### ಅನುವಾದ

**ಅರ್ಜುನನು ಹೇಳಿದನು — ಹೇ ಜನಾರ್ದನ, ಹೇ ಕೇಶವ, ಬುದ್ಧಿಯು ಕಾಮ್ಯಕರ್ಮಕ್ಕಿಂತ ಉತ್ತಮ ಎಂದು ನೀನು ಭಾವಿಸುವುದಾದರೆ ನನ್ನನ್ನು ಈ ಘೋರ ಯುದ್ಧದಲ್ಲಿ ತೊಡಗಿಸಲು ಏಕೆ ಬಯಸುವೆ?**

### ಭಾವಾರ್ಥ

ತನ್ನ ಆತ್ಮೀಯ ಗೆಳೆಯನಾದ ಅರ್ಜುನನನ್ನು ಲೌಕಿಕ ದುಃಖ ಸಾಗರದಿಂದ ಉದ್ಧರಿಸಲು ದೇವೋತ್ತಮ ಪರಮ ಪುರುಷನು ಹಿಂದಿನ ಅಧ್ಯಾಯದಲ್ಲಿ ಆತ್ಮದ ಸ್ವರೂಪವನ್ನು ಬಹು ವಿವರವಾಗಿ ವರ್ಣಿಸಿದ್ದಾನೆ. ಸಾಕ್ಷಾತ್ಕಾರಕ್ಕೆ ಸೂಚಿಸಿದ ಮಾರ್ಗ ಬುದ್ಧಿಯೋಗ ಅಥವಾ ಕೃಷ್ಣಪ್ರಜ್ಞೆ. ಹಲವೊಮ್ಮೆ ಕೃಷ್ಣಪ್ರಜ್ಞೆ ಎಂದರೆ ಜಡತ್ವ ಎನ್ನುವ ತಪ್ಪು ಗ್ರಹಿಕೆ ಇರುವುದುಂಟು. ಇಂತಹ ತಪ್ಪು ಗ್ರಹಿಕೆ ಇರುವ ಮನುಷ್ಯನು ಬಹುಬಾರಿ ಶ್ರೀಕೃಷ್ಣನ ಪಾವನ ನಾಮವನ್ನು ಜಪಮಾಡಿ ಸಂಪೂರ್ಣ ಕೃಷ್ಣಪ್ರಜ್ಞೆ ಸಾಧಿಸಲು ಏಕಾಂತವಾದ ಸ್ಥಳಕ್ಕೆ ಹೋಗಿ ಬಿಡುವುದುಂಟು. ಆದರೆ ಕೃಷ್ಣಪ್ರಜ್ಞೆಯ ಸಿದ್ಧಾಂತದಲ್ಲಿ ಶಿಕ್ಷಣವಿಲ್ಲದೆ ಏಕಾಂತ ಸ್ಥಳದಲ್ಲಿ ಕೃಷ್ಣನಾಮ ಜಪಮಾಡುವುದು ಅಪೇಕ್ಷಣೀಯವಲ್ಲ. ಹೀಗೆ ಮಾಡುವುದರಿಂದ ಮುಗ್ಧ ಜನರ ಅಗ್ಗದ ಮೆಚ್ಚಿಕೆ ಲಭ್ಯವಾಗಬಹುದು, ಅಷ್ಟೇ. ಕೃಷ್ಣಪ್ರಜ್ಞೆ ಅಥವಾ ಬುದ್ಧಿಯೋಗ (ಆಧ್ಯಾತ್ಮಿಕ ಪ್ರಗತಿಯ ವಿಜ್ಞಾನದಲ್ಲಿ ಬುದ್ಧಿಯನ್ನು ತೊಡಗಿಸುವುದು) ಎಂದರೆ, ಕ್ರಿಯಾಶೀಲ ಬದುಕಿನಿಂದ ದೂರವಾಗಿ ಏಕಾಂತ ಸ್ಥಳದಲ್ಲಿ ವ್ರತ-ತಪಸ್ಸುಗಳಲ್ಲಿ ನಿರತನಾಗುವುದು ಎಂದೇ ಅರ್ಜುನನೂ ಭಾವಿಸಿದನು. ಇದನ್ನೇ ಬೇರೆ

ಮಾತುಗಳಲ್ಲಿ ಹೇಳುವುದಾದರೆ ಕೃಷ್ಣಪ್ರಜ್ಞೆಯನ್ನು ನೆಪ ಮಾಡಿಕೊಂಡು ಬುದ್ಧಿವಂತಿಕೆಯಿಂದ ಯುದ್ಧ ಮಾಡುವುದನ್ನು ತಪ್ಪಿಸಲು ಅವನು ಬಯಸಿದ. ಆದರೆ ಶ್ರದ್ಧಾವಂತ ಶಿಷ್ಯನಾದ ಅವನು ಈ ವಿಷಯವನ್ನು ತನ್ನ ಗುರುವಿನ ಮುಂದಿಟ್ಟು ಅತ್ಯಂತ ಯೋಗ್ಯವಾದ ಕಾರ್ಯಮಾರ್ಗ ಯಾವುದು ಎಂದು ಪ್ರಶ್ನಿಸಿದ. ಉತ್ತರವಾಗಿ ಶ್ರೀಕೃಷ್ಣನು ಈ ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವನ್ನು ಅಥವಾ ಕೃಷ್ಣಪ್ರಜ್ಞೆಯ ಕಾರ್ಯವನ್ನು ವಿಸ್ತಾರವಾಗಿ ವಿವರಿಸಿದ.

## ಶ್ಲೋಕ - 2

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ |**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ||೨||**

**ವ್ಯಾಮಿಶ್ರೇಣ**—ಸಂದಿಗ್ಧಾರ್ಥದ; **ಇವ**—ಖಂಡಿತವಾಗಿಯೂ; **ವಾಕ್ಯೇನ**—ಮಾತಿನಿಂದ; **ಬುದ್ಧಿಮ್**—ಬುದ್ಧಿಯನ್ನು; **ಮೋಹಯಸಿ**—ಭ್ರಾಂತಿಗೊಳಿಸುತ್ತಿದ್ದೀಯೆ; **ಇವ**—ನಿಶ್ಚಯವಾಗಿಯೂ; **ಮೇ**—ನನ್ನ; **ತತ್**—ಆದ್ದರಿಂದ; **ಏಕಮ್**—ಒಂದೇ ಒಂದನ್ನು; **ವದ**—ದಯವಿಟ್ಟು ಹೇಳು; **ನಿಶ್ಚಿತ್ಯ**—ನಿಶ್ಚಯಿಸಿ; **ಯೇನ**—ಯಾವುದರಿಂದ; **ಶ್ರೇಯಃ**—ನೈಜ ಪ್ರಯೋಜನವನ್ನು; **ಅಹಮ್**—ನಾನು; **ಆಪ್ನುಯಾಮ್**—ಹೊಂದಬಹುದು.

## ಅನುವಾದ

**ನಿನ್ನ ಸಂದಿಗ್ಧಾರ್ಥದ ಮಾತುಗಳಿಂದ ನನ್ನ ಬುದ್ಧಿಗೆ ಮೋಹವು ಕವಿಯುತ್ತಿದೆ. ಆದುದರಿಂದ ದಯೆಯಿಟ್ಟು ನನಗೆ ಅತ್ಯಂತ ಶ್ರೇಯಸ್ಕರವಾದ ಮಾರ್ಗವನ್ನು ನಿಶ್ಚಯವಾಗಿ ತಿಳಿಸು.**

## ಭಾವಾರ್ಥ

ಹಿಂದಿನ ಅಧ್ಯಾಯದಲ್ಲಿ ಭಗವದ್ಗೀತೆಗೆ ಪ್ರಸ್ತಾವನೆಯಾಗಿ ಸಾಂಖ್ಯಯೋಗ, ಬುದ್ಧಿಯೋಗ, ಬುದ್ಧಿಯ ಮೂಲಕ ಇಂದ್ರಿಯ ನಿಗ್ರಹ, ನಿಷ್ಕಾಮಕರ್ಮ ಇಂತಹ ಹಲವು ಮಾರ್ಗಗಳನ್ನೂ, ಆರಂಭಿಕ ಶಿಷ್ಯನ ಸ್ಥಾನವನ್ನೂ ವಿವರಿಸಿದೆ. ಇವನ್ನು ವ್ಯವಸ್ಥಿತವಾಗಿ ನಿರೂಪಿಸಲಿಲ್ಲ. ಕ್ರಿಯೆ ಮತ್ತು ಗ್ರಹಿಕೆ ಸಾಧ್ಯವಾಗಲು ಇನ್ನೂ ವ್ಯವಸ್ಥಿತವಾಗಿ ಮಾರ್ಗದ ರೂಪರೇಷೆಯನ್ನು ಕೊಡಬೇಕು. ತಪ್ಪುಗ್ರಹಿಕೆ ಇಲ್ಲದೆ, ಸಾಮಾನ್ಯ ಮನುಷ್ಯನೂ ಇವನ್ನು ಸ್ವೀಕರಿಸುವುದು ಸಾಧ್ಯವಾಗುವಂತೆ, ಗೊಂದಲಮಯವೆಂದು ಕಾಣುವ ಈ ವಿಷಯಗಳನ್ನು ಸ್ಪಷ್ಟಪಡಿಸಲು ಅರ್ಜುನನು ಬಯಸಿದನು. ಮಾತಿನ ಚಮತ್ಕಾರದಿಂದ ಅರ್ಜುನನಿಗೆ ಗೊಂದಲವನ್ನುಂಟು ಮಾಡುವುದು ಕೃಷ್ಣನ ಉದ್ದೇಶವಲ್ಲದಿದ್ದರೂ ಅರ್ಜುನನಿಗೆ ಕೃಷ್ಣಪ್ರಜ್ಞೆಯ ಪ್ರಕ್ರಿಯೆಯು ನಿಷ್ಕ್ರಿಯತೆಯೇ ಅಥವಾ ಕ್ರಿಯಾಶೀಲತೆಯೇ ಎಂಬುದು ಅರ್ಥವಾಗಲಿಲ್ಲ. ಎಂದರೆ, ಭಗವದ್ಗೀತೆಯ ರಹಸ್ಯವನ್ನು ಅರ್ಥಮಾಡಿಕೊಳ್ಳಬಯಸುವ ಎಲ್ಲ ಗಂಭೀರ ಅಭ್ಯಾಸಿಗಳಿಗಾಗಿ ಅರ್ಜುನನು ತನ್ನ ಪ್ರಶ್ನೆಗಳ ಮೂಲಕ ಕೃಷ್ಣಪ್ರಜ್ಞೆಯ ಮಾರ್ಗವನ್ನು ಸ್ಪಷ್ಟಪಡಿಸುತ್ತಿದ್ದಾನೆ.

## ಶ್ಲೋಕ - 3

**ಶ್ರೀ ಭಗವಾನುವಾಚ**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ |**
**ಜ್ಞಾನಯೋಗೇನ ಸಾಙ್ಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ||೩||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಲೋಕೇ**—ಜಗತ್ತಿನಲ್ಲಿ; **ಅಸ್ಮಿನ್**—ಈ; **ದ್ವಿ ವಿಧಾ**—ಎರಡು ಬಗೆಯ; **ನಿಷ್ಠಾ**—ಶ್ರದ್ಧೆಯು; **ಪುರಾ**—ಹಿಂದೆಯೇ; **ಪ್ರೋಕ್ತಾ**—ಹೇಳಲ್ಪಟ್ಟಿದೆ; **ಮಯಾ**—ನನ್ನಿಂದ; **ಅನಘ**—ಪಾಪರಹಿತನೇ; **ಜ್ಞಾನಯೋಗೇನ**—ಜ್ಞಾನಯೋಗ ವಿಧಾನದಿಂದ; **ಸಾಙ್ಖ್ಯಾನಾಮ್**—ಅನುಭವಗಮ್ಯ ದಾರ್ಶನಿಕರ; **ಕರ್ಮ ಯೋಗೇನ**—ಭಕ್ತಿಯೋಗ ಪ್ರಕ್ರಿಯೆಯಿಂದ; **ಯೋಗಿನಾಮ್**—ಭಕ್ತರ.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಪಾಪರಹಿತನಾದ ಅರ್ಜುನನೆ, ಆತ್ಮ ಸಾಕ್ಷಾತ್ಕಾರವನ್ನು ಪಡೆಯಲು ಎರಡು ಬಗೆಯ ಮನುಷ್ಯರು ಪ್ರಯತ್ನಿಸುತ್ತಾರೆ ಎಂದು ಆಗಲೇ ಹೇಳಿದ್ದೇನೆ. ಕೆಲವರು ಅದನ್ನು ಅನುಭವಗಮ್ಯವಾದ, ತತ್ವಜ್ಞಾನದ ಊಹೆಯ ಮೂಲಕ ಸಾಧಿಸಲು ಯತ್ನಿಸುತ್ತಾರೆ. ಕೆಲವರು ಭಕ್ತಿಸೇವೆಯ ಮೂಲಕ ಸಾಧಿಸಲು ಯತ್ನಿಸುತ್ತಾರೆ.**

### ಭಾವಾರ್ಥ

ಎರಡನೆಯ ಅಧ್ಯಾಯದ 39ನೆಯ ಶ್ಲೋಕದಲ್ಲಿ ಭಗವಂತನು ಎರಡು ಮಾರ್ಗಗಳನ್ನು ವಿವರಿಸಿದನು — ಸಾಂಖ್ಯಯೋಗ ಮತ್ತು ಕರ್ಮಯೋಗ ಅಥವಾ ಬುದ್ಧಿಯೋಗ. ಈ ಶ್ಲೋಕದಲ್ಲಿ ಭಗವಂತನು ಇದನ್ನು ಇನ್ನೂ ವಿಸ್ತಾರವಾಗಿ ವಿವರಿಸುತ್ತಾನೆ. ಸಾಂಖ್ಯಯೋಗವು ಆತ್ಮ ಮತ್ತು ಜಡವಸ್ತು ಇವುಗಳ ಸ್ವರೂಪದ ವಿಶ್ಲೇಷಣಾತ್ಮಕ ಅಧ್ಯಯನ. ಪ್ರಯೋಗಗಳಿಂದ ಪಡೆದ ತಿಳಿವಳಿಕೆಯ ಮೂಲಕ ಮತ್ತು ತತ್ವಶಾಸ್ತ್ರದ ಮೂಲಕ ವಿಷಯಗಳ ಬಗ್ಗೆ ಊಹಿಸಲು ಮತ್ತು ಅರ್ಥಮಾಡಿಕೊಳ್ಳಲು ಬಯಸುವವರಿಗೆ ಸಾಂಖ್ಯಯೋಗವು ವಸ್ತು. ಎರಡನೆಯ ಅಧ್ಯಾಯದ 61ನೆಯ ಶ್ಲೋಕದಲ್ಲಿ ವಿವರಿಸಿರುವಂತೆ, ಇನ್ನೊಂದು ವರ್ಗದ ಜನರು ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡುತ್ತಾರೆ. 39ನೆಯ ಶ್ಲೋಕದಲ್ಲಿಯೂ ಭಗವಂತನು, ಬುದ್ಧಿಯೋಗ ಅಥವಾ ಕೃಷ್ಣಪ್ರಜ್ಞೆಯ ತತ್ವಗಳಿಗೆ ಅನುಗುಣವಾಗಿ ಕಾರ್ಯಮಾಡುವುದರಿಂದಲೂ ಕರ್ಮಬಂಧನದಿಂದ ಮುಕ್ತವಾಗಬಹುದು ಎಂದು ವಿವರಿಸಿದ್ದಾನೆ; ಈ ಪ್ರಕ್ರಿಯೆಯಲ್ಲಿ ದೋಷವಿಲ್ಲ ಎಂದೂ ಹೇಳಿದ್ದಾನೆ. 61ನೆಯ ಶ್ಲೋಕದಲ್ಲಿ ಇದೇ ತತ್ವವನ್ನು ಇನ್ನೂ ಸ್ಪಷ್ಟವಾಗಿ ವಿವರಿಸಿದೆ - ಬುದ್ಧಿಯೋಗವು ಪರಮೋನ್ನತವಾದದ್ದನ್ನು (ಇನ್ನೂ ನಿರ್ದಿಷ್ಟವಾಗಿ ಕೃಷ್ಣನನ್ನು) ಸಂಪೂರ್ಣವಾಗಿ ಅವಲಂಬಿಸಬೇಕು ಮತ್ತು ಈ ರೀತಿಯಲ್ಲಿ ಎಲ್ಲ ಇಂದ್ರಿಯಗಳನ್ನೂ ಬಹು ಸುಲಭವಾಗಿ ನಿಗ್ರಹಿಸಬಹುದು. ಆದುದರಿಂದ ಈ ಎರಡು ಯೋಗಗಳು ಧರ್ಮ ಮತ್ತು ತತ್ವಜ್ಞಾನಗಳಂತೆ ಒಂದನ್ನೊಂದು ಅವಲಂಬಿಸಿವೆ. ತತ್ವಜ್ಞಾನವಿಲ್ಲದ ಧರ್ಮವು ಬರಿಯ ಭಾವ ಅಷ್ಟೇ. ಅದು ಒಮ್ಮೊಮ್ಮೆ

ಧರ್ಮಾಂಧತೆಯಾಗುತ್ತದೆ. ಧರ್ಮವಿಲ್ಲದ ತತ್ವಜ್ಞಾನವು ಮಾನಸಿಕ ಊಹೆಯಷ್ಟೆ ಆಗುತ್ತದೆ. ಕಡೆಯ ಗುರಿ ಕೃಷ್ಣನೇ; ಏಕೆಂದರೆ ಸಂಪೂರ್ಣವಾದ ಸತ್ಯವನ್ನು ಪ್ರಾಮಾಣಿಕವಾಗಿ ಅರಸುವ ತತ್ವಜ್ಞಾನಿಗಳು ಕಡೆಗೆ ಕೃಷ್ಣಪ್ರಜ್ಞೆಗೇ ಬರುತ್ತಾರೆ. ಇದನ್ನೂ ಭಗವದ್ಗೀತೆಯಲ್ಲಿ ಹೇಳಿದೆ. ಪರಮಾತ್ಮನಿಗೆ ಸಂಬಂಧಿಸಿದ ಹಾಗೆ ಆತ್ಮನ ನಿಜವಾದ ಸ್ಥಾನವನ್ನು ಅರ್ಥಮಾಡಿಕೊಳ್ಳುವುದೇ ಸಂಪೂರ್ಣ ಪ್ರಕ್ರಿಯೆ. ಪರೋಕ್ಷ ಪ್ರಕ್ರಿಯೆ ಎಂದರೆ ತತ್ವಶಾಸ್ತ್ರದ ಊಹೆ. ಇದರಿಂದ ಮನುಷ್ಯನು ಕ್ರಮೇಣ ಕೃಷ್ಣಪ್ರಜ್ಞೆಯನ್ನು ಮುಟ್ಟಬಹುದು. ಇನ್ನೊಂದು ಪ್ರಕ್ರಿಯೆಯು ಕೃಷ್ಣಪ್ರಜ್ಞೆಯಲ್ಲಿ ಪ್ರತಿಯೊಂದರೊಡನೆ ನೇರ ಸಂಪರ್ಕವನ್ನು ಕಲ್ಪಿಸುತ್ತದೆ. ಇವೆರಡರಲ್ಲಿ ಕೃಷ್ಣಪ್ರಜ್ಞೆಯ ಮಾರ್ಗ ಉತ್ತಮ; ಏಕೆಂದರೆ, ತತ್ವಶಾಸ್ತ್ರದ ಪ್ರಕ್ರಿಯೆಯ ಮೂಲಕ ಇಂದ್ರಿಯಗಳನ್ನು ಪರಿಶುದ್ಧಗೊಳಿಸುವುದನ್ನು ಅದು ಅವಲಂಬಿಸಿಲ್ಲ. ಕೃಷ್ಣಪ್ರಜ್ಞೆಯೇ ಪರಿಶುದ್ಧಗೊಳಿಸುವ ಪ್ರಕ್ರಿಯೆ; ಭಕ್ತಿಸೇವೆಯ ನೇರವಿಧಾನದಿಂದಾಗಿ ಅದು ಏಕಕಾಲದಲ್ಲಿ ಸುಲಭವೂ ಭವ್ಯವೂ ಆಗಿದೆ.

## ಶ್ಲೋಕ - 4

**ನ ಕರ್ಮಣಾಮನಾರಮ್ಭಾನ್ ನೈಷ್ಕರ್ಮ್ಯಂ ಪುರುಷೋಽಶ್ನುತೇ |**
**ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ||೪||**

**ನ**—ಇಲ್ಲ; **ಕರ್ಮಣಾಮ್**—ವಿಧ್ಯುಕ್ತ ಕರ್ತವ್ಯಗಳನ್ನು; **ಅನಾರಮ್ಭಾತ್**—ಆಚರಿಸದಿರುವುದರಿಂದ; **ನೈಷ್ಕರ್ಮ್ಯಮ್**—ಪ್ರತಿಕ್ರಿಯೆಗಳಿಂದ ಬಿಡುಗಡೆಯನ್ನು; **ಪುರುಷಃ**—ಮನುಷ್ಯನು; **ಅಶ್ನುತೇ**—ಸಾಧಿಸುತ್ತಾನೆ; **ನ**—ಇಲ್ಲ; **ಚ**—ಕೂಡ; **ಸನ್ನ್ಯಸನಾತ್**—ವಿರಕ್ತಿಯಿಂದ; **ಏವ**—ಕೇವಲ; **ಸಿದ್ಧಿಮ್**—ಜಯವನ್ನು; **ಸಮಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಕಾರ್ಯ ಮಾಡದಿರುವುದರಿಂದಲೇ ಪ್ರತಿಕ್ರಿಯೆಯಿಂದ ಬಿಡುಗಡೆ ದೊರೆಯುವುದಿಲ್ಲ; ವೈರಾಗ್ಯ ಮಾತ್ರದಿಂದಲೇ ಪರಿಪೂರ್ಣತೆಯನ್ನು ಸಾಧಿಸಲು ಸಾಧ್ಯವಿಲ್ಲ.**

## ಭಾವಾರ್ಥ

ಲೌಕಿಕ ಜನರ ಹೃದಯಗಳನ್ನು ಪರಿಶುದ್ಧಗೊಳಿಸಲು ವಿಧಿಸಿರುವ ಕರ್ತವ್ಯಗಳಿವೆ; ಇವನ್ನು ನಿರ್ವಹಿಸಿ ಪರಿಶುದ್ಧನಾದನಂತರ ಮನುಷ್ಯನು ಸನ್ಯಾಸವನ್ನು ಸ್ವೀಕರಿಸಬಹುದು. ಪರಿಶುದ್ಧವಾಗದೆ ಥಟ್ಟನೆ ಸನ್ಯಾಸವನ್ನು ಸ್ವೀಕರಿಸಿದ ಮನುಷ್ಯನಿಗೆ ಜಯವು ಲಭಿಸುವುದಿಲ್ಲ. ಅನುಭವಗಮ್ಯ ತತ್ವಶಾಸ್ತ್ರಜ್ಞರ ಅಭಿಪ್ರಾಯದಲ್ಲಿ, ಸನ್ಯಾಸವನ್ನು ಸ್ವೀಕರಿಸಿದ ಮಾತ್ರದಿಂದಲೇ ಅಥವಾ ಫಲಾಪೇಕ್ಷಿತ ಕರ್ಮದಿಂದ ದೂರವಾದ ಮಾತ್ರಕ್ಕೇ ಮನುಷ್ಯನು ಕೂಡಲೇ ನಾರಾಯಣನಿಗೆ ಸಮನಾಗುವನು. ಆದರೆ ಶ್ರೀಕೃಷ್ಣನು ಈ ತತ್ವವನ್ನು ಒಪ್ಪುವುದಿಲ್ಲ. ಹೃದಯವು ಶುದ್ಧವಾಗದೆ ಸನ್ಯಾಸವು ಸಾಮಾಜಿಕ ವ್ಯವಸ್ಥೆಯ ಕ್ಷೋಭೆಯಷ್ಟೆ ಆಗುತ್ತದೆ. ಅದಕ್ಕೆ ಪ್ರತಿಯಾಗಿ ಮನುಷ್ಯನು ತನ್ನ ನಿಯತ ಕರ್ತವ್ಯಗಳನ್ನು ಮಾಡದೆಯೇ ಭಗವಂತನ ಅಲೌಕಿಕ ಸೇವೆಯಲ್ಲಿ ನಿರತನಾದರೆ, ಈ ಗುರಿಯಲ್ಲಿ ಸಾಧಿಸಿದುದೆಲ್ಲವನ್ನೂ ಭಗವಂತನು ಸ್ವೀಕರಿಸುತ್ತಾನೆ (ಬುದ್ಧಿಯೋಗ). **ಸ್ವಲ್ಪಮ್**

**ಅಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್.** ಇಂತಹ ತತ್ವವನ್ನು ಸ್ವಲ್ಪಮಟ್ಟಿಗೆ ಆಚರಿಸಿದರೂ ಅಂತಹ ಮನುಷ್ಯನು ಮಹಾ ಕಷ್ಟಗಳನ್ನು ನಿವಾರಿಸಿಕೊಳ್ಳಬಲ್ಲ.

## ಶ್ಲೋಕ - 5

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ |**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ||೫||**

**ನ**—ಇಲ್ಲ; **ಹಿ**—ಖಂಡಿತವಾಗಿಯೂ; **ಕಶ್ಚಿತ್**—ಯಾರೊಬ್ಬನೂ; **ಕ್ಷಣಮ್ ಅಪಿ**—ಒಂದು ಕ್ಷಣ ಕೂಡಾ; **ಜಾತು**—ಯಾವುದೇ ಕಾಲದಲ್ಲಿಯೂ; **ತಿಷ್ಠತಿ**—ಇರುತ್ತಾನೆ; **ಅಕರ್ಮಕೃತ್**—ಏನನ್ನಾದರೂ ಮಾಡದೆ; **ಕಾರ್ಯತೇ**—ಮಾಡಲು ಒತ್ತಾಯಕ್ಕೊಳಗಾಗುತ್ತಾನೆ; **ಹಿ**—ಖಂಡಿತವಾಗಿಯೂ; **ಅವಶಃ**—ಅಸಹಾಯಕನಾಗಿ; **ಕರ್ಮ**—ಕಾರ್ಯವನ್ನು; **ಸರ್ವಃ**—ಎಲ್ಲರೂ; **ಪ್ರಕೃತಿಜೈಃ**—ಭೌತಿಕ ಗುಣಗಳಿಂದ ಹುಟ್ಟಿದ; **ಗುಣೈಃ**—ಗುಣಗಳಿಂದ.

## ಅನುವಾದ

**ಪ್ರಕೃತಿಯಿಂದ ಬಂದ ಗುಣಗಳಿಗೆ ಅನುಗುಣವಾಗಿ ಕರ್ಮವನ್ನು ಪ್ರತಿಯೊಬ್ಬನೂ ಮಾಡಲೇಬೇಕಾಗುತ್ತದೆ. ಆದುದರಿಂದ ಯಾರೂ ಒಂದು ಕ್ಷಣವಾದರೂ ಏನನ್ನೂ ಮಾಡದೆ ಇರಲು ಸಾಧ್ಯವಿಲ್ಲ.**

## ಭಾವಾರ್ಥ

ಇದು ದೇಹಗತ ಜೀವನದ ಪ್ರಶ್ನೆಯಲ್ಲ. ಸದಾ ಕಾರ್ಯ ನಿರತನಾಗಿರುವುದೇ ಆತ್ಮನ ಸ್ವಭಾವ. ಆತ್ಮವು ದೇಹದಲ್ಲಿರದಿದ್ದರೆ ದೇಹವು ಚಲಿಸಲಾರದು. ಆತ್ಮವು ಸದಾ ಕಾರ್ಯನಿರತವಾಗಿರುತ್ತದೆ. ಒಂದು ಕ್ಷಣವೂ ಸುಮ್ಮನಿರಲಾರದು. ದೇಹವೇನಿದ್ದರೂ ಆತ್ಮವನ್ನು ಕೆಲಸದಲ್ಲಿ ತೊಡಗಿಸಬೇಕಾದ ನಿರ್ಜೀವ ವಾಹನ. ಈ ಕಾರಣದಿಂದ ಆತ್ಮವು ಕೃಷ್ಣಪ್ರಜ್ಞೆಯ ಪುಣ್ಯ ಕಾರ್ಯದಲ್ಲಿ ತೊಡಗಿರಬೇಕು. ಇಲ್ಲವಾದರೆ ಅದು ಮಾಯಾ ಶಕ್ತಿಯು ನಿರ್ದೇಶಿಸಿದ ಕೆಲಸಗಳಲ್ಲಿ ನಿರತವಾಗುತ್ತದೆ. ಐಹಿಕ ಶಕ್ತಿಯೊಡನೆ ಸಂಪರ್ಕವಿದ್ದಾಗ ಆತ್ಮವು ಐಹಿಕ ಗುಣಗಳನ್ನು ಪಡೆದುಕೊಳ್ಳುತ್ತದೆ. ಇಂತಹ ವ್ಯಾಮೋಹಗಳಿಂದ ಆತ್ಮವನ್ನು ಶುದ್ಧಿಗೊಳಿಸಲು ಶಾಸ್ತ್ರಗಳು ವಿಧಿಸಿದ ಕರ್ತವ್ಯಗಳಲ್ಲಿ ತೊಡಗುವುದು ಅಗತ್ಯ. ಆದರೆ ಆತ್ಮವು ಕೃಷ್ಣಪ್ರಜ್ಞೆಯ ತನ್ನ ಸಹಜ ಕ್ರಿಯೆಯಲ್ಲಿ ತೊಡಗಿದ್ದರೆ ಅದು ಮಾಡಿದುದೆಲ್ಲ ಅದಕ್ಕೆ ಒಳಿತಾದುದೇ ಆಗುತ್ತದೆ. ಶ್ರೀಮದ್ಭಾಗವತವು (1.5.17) ಇದನ್ನು ದೃಢವಾಗಿ ಹೇಳುತ್ತದೆ:

**ತ್ಯಕ್ತ್ವಾ ಸ್ವಧರ್ಮಂ ಚರಣಾಮ್ಬುಜಂ ಹರೇ-**
**ರ್ಭಜನ್ನಪಕ್ವೋಽಥ ಪತೇತ್ತತೋ ಯದಿ |**
**ಯತ್ರ ಕ್ವ ವಾಭದ್ರಮಭೂದಮುಷ್ಯಕಿಂ**
**ಕೋ ವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ ||**

"ಕೃಷ್ಣಪ್ರಜ್ಞೆಯನ್ನು ಅನುಸರಿಸುವವನು ಶಾಸ್ತ್ರಗಳು ವಿಧಿಸಿದ ಕರ್ತವ್ಯಗಳನ್ನು ಮಾಡದಿರಬಹುದು, ಭಕ್ತಿಸೇವೆಯನ್ನು ಸಮರ್ಪಕವಾಗಿ ಸಲ್ಲಿಸದೆ ಹೋಗಬಹುದು, ತಾನಿರಬೇಕಾದ ಮಟ್ಟದಿಂದ ಕೆಳಕ್ಕೆ ಬೀಳಬಹುದು. ಆದರೂ ಅವನಿಗೆ ನಷ್ಟವಾಗಲಿ ಕೇಡಾಗಲಿ ಇಲ್ಲ. ಆದರೆ ಶಾಸ್ತ್ರಗಳು ಪರಿಶುದ್ಧವಾಗುವುದಕ್ಕಾಗಿ ವಿಧಿಸಿದ ಎಲ್ಲ ಆಜ್ಞೆಗಳನ್ನೂ ಪರಿಪಾಲಿಸಿದರೂ ಆತನು ಕೃಷ್ಣಪ್ರಜ್ಞೆಯಲ್ಲಿ ಇಲ್ಲದಿದ್ದರೆ ಏನು ಪ್ರಯೋಜನ?" ಆದುದರಿಂದ ಪರಿಶುದ್ಧವಾಗುವ ಪ್ರಕ್ರಿಯೆಯು ಕೃಷ್ಣಪ್ರಜ್ಞೆಯ ಹಂತವನ್ನು ಮುಟ್ಟಲು ಅಗತ್ಯ. ಯಾವುದೇ ಪರಿಶುದ್ಧತೆಯ ಪ್ರಕ್ರಿಯೆ ಅಥವಾ ಸನ್ಯಾಸವು ಅಂತಿಮಗುರಿಯಾದ ಕೃಷ್ಣಪ್ರಜ್ಞೆಯನ್ನು ಮುಟ್ಟಲು ನೆರವಾಗುತ್ತದೆ. ಆದರೆ, ಕೃಷ್ಣಪ್ರಜ್ಞೆ ಇಲ್ಲದೆ ಹೋದರೆ ಉಳಿದದ್ದೆಲ್ಲ ವಿಫಲ ಎಂದೇ ಭಾವಿಸಬೇಕು.

## ಶ್ಲೋಕ - 6

**ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ |**
**ಇನ್ದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ||೬||**

**ಕರ್ಮ ಇನ್ದ್ರಿಯಾಣಿ**—ಐದು ಕರ್ಮೇಂದ್ರಿಯಗಳನ್ನು; **ಸಂಯಮ್ಯ**—ನಿಯಂತ್ರಿಸಿ; **ಯಃ**—ಯಾರು; **ಆಸ್ತೇ**—ಇರುತ್ತಾನೋ; **ಮನಸಾ**—ಮನಸ್ಸಿನಿಂದ; **ಸ್ಮರನ್**—ಯೋಚಿಸುತ್ತ; **ಇನ್ದ್ರಿಯ ಅರ್ಥಾನ್**—ಇಂದ್ರಿಯ ವಿಷಯಗಳನ್ನು; **ವಿಮೂಢ**—ಮೂರ್ಖನಾದ; **ಆತ್ಮಾ**—ಆತ್ಮನು; **ಮಿಥ್ಯಾ ಆಚಾರಃ**—ನಟನೆ ಮಾಡುವವನು; **ಸಃ**—ಅವನು; **ಉಚ್ಯತೇ**—ಎಂದು ಹೇಳಲಾಗಿದೆ.

## ಅನುವಾದ

**ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಇಂದ್ರಿಯ ವಿಷಯಗಳಲ್ಲಿ ಮನಸ್ಸು ನೆಟ್ಟ ಮನುಷ್ಯನನ್ನು ವಿಮೂಢಾತ್ಮನೆಂದೂ ಮಿಥ್ಯಾಚಾರಿಯೆಂದೂ ಕರೆಯುವರು.**

## ಭಾವಾರ್ಥ

ಅನೇಕ ಮಂದಿ ಮಿಥ್ಯಾಚಾರಿಗಳಿದ್ದಾರೆ. ಅವರು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡಲು ನಿರಾಕರಿಸುತ್ತಾರೆ. ಅವರ ಮನಸ್ಸು ಸದಾ ಯಾವುದಾದರೂ ಇಂದ್ರಿಯಭೋಗದಲ್ಲಿ ನಟ್ಟಿರುತ್ತದೆ. ಆದರೂ ಅವರು ಧ್ಯಾನ ಮಾಡುವಂತೆ ನಟಿಸುತ್ತಾರೆ. ಕುತರ್ಕಪ್ರಿಯರಾದ ತಮ್ಮ ಅನುಯಾಯಿಗಳನ್ನು ಮೋಸಗೊಳಿಸಲು ಇಂತಹ ಮಿಥ್ಯಾಚಾರಿಗಳು ಒಣ ತತ್ವಜ್ಞಾನವನ್ನು ಕುರಿತು ಮಾತನಾಡಬಹುದು. ಆದರೆ ಈ ಶ್ಲೋಕದ ಅಭಿಪ್ರಾಯದಲ್ಲಿ ಅವರು ಮಹಾ ಮೋಸಗಾರರು. ಇಂದ್ರಿಯ ಸಂತೋಷಕ್ಕಾಗಿ ಮನುಷ್ಯನು ಸಾಮಾಜಿಕ ವ್ಯವಸ್ಥೆಯಲ್ಲಿ ಯಾವುದೇ ಸ್ಥಾನದಿಂದಲಾದರೂ ಉದ್ಯುಕ್ತನಾಗಬಹುದು. ಆದರೆ ಒಬ್ಬ ಮನುಷ್ಯ ತನ್ನ ವಿಶಿಷ್ಟ ಸ್ಥಾನಮಾನದ ವಿಧಿನಿಯಮಗಳನ್ನು ಅನುಸರಿಸಿದರೆ ತನ್ನ ಅಸ್ತಿತ್ವವನ್ನು ಪರಿಶುದ್ಧ ಮಾಡಿಕೊಳ್ಳುವುದರಲ್ಲಿ ಕ್ರಮೇಣ ಪ್ರಗತಿಯನ್ನು ಸಾಧಿಸಬಹುದು. ಆದರೆ ಇಂದ್ರಿಯ ತೃಪ್ತಿಗಾಗಿ ಸಾಧನಗಳನ್ನು ಅರಸುತ್ತ ಯೋಗಿಯಂತೆ ತೋರಿಸಿಕೊಳ್ಳುವವನು ಆಗಾಗ ತತ್ವಶಾಸ್ತ್ರವನ್ನು ಕುರಿತು ಮಾತನಾಡಬಹುದು. ಆದರೂ ಆತನನ್ನು ಅತ್ಯಂತ ಕುಟಿಲ ಮನುಷ್ಯನೆಂದೇ ಕರೆಯಬೇಕಾಗುತ್ತದೆ. ಇಂತಹ ಪಾಪಿಯ ವಿದ್ಯೆಯ ಫಲವನ್ನು

ಭಗವಂತನ ಮಾಯಾಶಕ್ತಿಯು ವಶಮಾಡಿಕೊಳ್ಳುತ್ತದೆ. ಆದುದರಿಂದ ಇವನ ವಿದ್ಯೆಗೆ ಯಾವ ಬೆಲೆಯೂ ಇಲ್ಲ. ಇಂತಹ ಮಿಥ್ಯಾಚಾರಿಯ ಮನಸ್ಸು ಯಾವಾಗಲೂ ಮಲಿನವಾಗಿರುತ್ತದೆ. ಆದುದರಿಂದ ಅವನ ಯೋಗಧ್ಯಾನದ ಪ್ರದರ್ಶನಕ್ಕೆ ಯಾವ ಬೆಲೆಯೂ ಇಲ್ಲ.

## ಶ್ಲೋಕ - 7

**ಯಸ್ತ್ವಿನ್ದ್ರಿಯಾಣಿ ಮನಸಾ ನಿಯಮ್ಯಾರಭತೇऽರ್ಜುನ |**
**ಕರ್ಮೇನ್ದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ||೭||**

**ಯಃ**—ಯಾರು; **ತು**—ಆದರೆ; **ಇನ್ದ್ರಿಯಾಣಿ**—ಇಂದ್ರಿಯಗಳನ್ನು; **ಮನಸಾ**—ಮನಸ್ಸಿನಿಂದ; **ನಿಯಮ್ಯ**—ನಿಯಂತ್ರಿಸುತ್ತ; **ಆರಭತೇ**—ಪ್ರಾರಂಭಿಸುತ್ತಾನೋ; **ಅರ್ಜುನ**—ಅರ್ಜುನನೇ; **ಕರ್ಮ ಇನ್ದ್ರಿಯೈಃ**—ಸಕ್ರಿಯ ಇಂದ್ರಿಯಗಳಿಂದ; **ಕರ್ಮಯೋಗಮ್**—ಭಕ್ತಿಯನ್ನು; **ಅಸಕ್ತಃ**—ಅನಾಸಕ್ತಿಯಿಂದ; **ಸಃ**—ಅವನು; **ವಿಶಿಷ್ಯತೇ**—ಎಷ್ಟೋ ಉತ್ತಮನು.

## ಅನುವಾದ

**ಇದಕ್ಕೆ ಪ್ರತಿಯಾಗಿ, ಪ್ರಾಮಾಣಿಕನಾದ ಮನುಷ್ಯನು ಕ್ರಿಯಾಶಾಲಿಗಳಾದ ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಲು ಪ್ರಯತ್ನಿಸಿ (ಕೃಷ್ಣಪ್ರಜ್ಞೆಯಲ್ಲಿ) ಕರ್ಮಯೋಗವನ್ನು ಅನಾಸಕ್ತನಾಗಿ ಪ್ರಾರಂಭಿಸಿದರೆ ಅವನು ಎಷ್ಟೋ ಉತ್ತಮನು.**

## ಭಾವಾರ್ಥ

ಸ್ವೇಚ್ಛಾ ಜೀವನ ಮತ್ತು ಇಂದ್ರಿಯಭೋಗಕ್ಕಾಗಿ ಹುಸಿ ಆಧ್ಯಾತ್ಮಿಕವಾದಿ ಯಾಗುವುದಕ್ಕಿಂತ ತನ್ನ ವ್ಯವಹಾರಗಳಲ್ಲಿಯೇ ಉಳಿದು ಬದುಕಿನ ಉದ್ದೇಶವನ್ನು ಕಾರ್ಯಗತ ಮಾಡುವುದು ಉತ್ತಮ. ಐಹಿಕ ಬಂಧನದಿಂದ ಬಿಡುಗಡೆ ಹೊಂದಿ ಭಗವಂತನ ರಾಜ್ಯವನ್ನು ಸೇರುವುದೇ ಬದುಕಿನ ಉದ್ದೇಶ. ಮುಖ್ಯ **ಸ್ವಾರ್ಥಗತಿ** ಅಥವಾ ಸ್ವಹಿತದ ಗುರಿ ವಿಷ್ಣುವನ್ನು ಸೇರುವುದು. ಇಡೀ ವರ್ಣಾಶ್ರಮ ವ್ಯವಸ್ಥೆಯನ್ನು ನಾವು ಈ ಗುರಿಯನ್ನು ಮುಟ್ಟಲು ಸಾಧ್ಯವಾಗುವಂತೆ ರೂಪಿಸಲಾಗಿದೆ. ಕೃಷ್ಣಪ್ರಜ್ಞೆಯಲ್ಲಿ ನಿಯಂತ್ರಿತ ರೀತಿಯಲ್ಲಿ ಸೇವೆ ಮಾಡುವುದರಿಂದ ಗೃಹಸ್ಥರು ಕೂಡ ಈ ಗುರಿಯನ್ನು ಮುಟ್ಟಲು ಸಾಧ್ಯ. ಆತ್ಮಸಾಕ್ಷಾತ್ಕಾರಕ್ಕಾಗಿ ಮನುಷ್ಯನು ಶಾಸ್ತ್ರಗಳಲ್ಲಿ ವಿಧಿಸಿರುವಂತೆ ನಿಯಮಬದ್ಧ ಜೀವನವನ್ನು ನಡೆಸಬಹುದು. ಅನಾಸಕ್ತಿಯಿಂದ ತನ್ನ ವ್ಯವಹಾರಗಳನ್ನೂ ನಿರ್ವಹಿಸಬಹುದು. ಈ ರೀತಿಯಲ್ಲಿ ಪ್ರಗತಿಯನ್ನು ಸಾಧಿಸಬಹುದು. ಈ ವಿಧಾನವನ್ನು ಅನುಸರಿಸುವ ಪ್ರಾಮಾಣಿಕ ಮನುಷ್ಯನು ಮುಗ್ಧ ಸಾರ್ವಜನಿಕರನ್ನು ವಂಚಿಸಲು ಆಧ್ಯಾತ್ಮಿಕತೆಯ ಹೊರಪ್ರದರ್ಶನವನ್ನು ಬಳಸುವವನಿಗಿಂತ ಬಹುಪಾಲು ಉತ್ತಮವಾದ ಸ್ಥಿತಿಯಲ್ಲಿರುತ್ತಾನೆ. ಹೊಟ್ಟೆಹೊರೆಯುವುದಕ್ಕಾಗಿಯೇ ಧ್ಯಾನದ ಸೋಗುಹಾಕುವವನಿಗಿಂತ ಪ್ರಾಮಾಣಿಕನಾದ ಝಾಡಮಾಲಿಯು ಎಷ್ಟೋ ಉತ್ತಮ.

## ಶ್ಲೋಕ - 8

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ |**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ||೮||**

**ನಿಯತಮ್**—ವಿಧ್ಯುಕ್ತವಾದ; **ಕುರು**—ಮಾಡು; **ಕರ್ಮ**—ಕರ್ತವ್ಯಗಳನ್ನು; **ತ್ವಮ್**—ನೀನು; **ಕರ್ಮ**—ಕರ್ಮವು; **ಜ್ಯಾಯಃ**—ಉತ್ತಮವು; **ಹಿ**—ಖಂಡಿತವಾಗಿಯೂ; **ಅಕರ್ಮಣಃ**—ಕರ್ಮಮಾಡದೇ ಇರುವುದಕ್ಕಿಂತ; **ಶರೀರ**—ದೇಹದ; **ಯಾತ್ರಾ**—ಪೋಷಣೆಯೂ; **ಅಪಿ**—ಕೂಡ; **ಚ**—ಸಹಾ; **ತೇ**—ನಿನ್ನ; **ನ ಪ್ರಸಿದ್ಧ್ಯೇತ್**—ಆಗಲಾರದು; **ಅಕರ್ಮಣಃ**—ಕೆಲಸಮಾಡದೆ.

### ಅನುವಾದ

**ನಿನ್ನ ನಿಯಮಿತ ಕರ್ಮವನ್ನು ಮಾಡು. ಏಕೆಂದರೆ ಹಾಗೆ ಮಾಡುವುದು ಕರ್ಮವನ್ನು ಮಾಡದಿರುವುದಕ್ಕಿಂತ ಉತ್ತಮ. ಕರ್ಮವನ್ನು ಮಾಡದೆ ದೇಹವನ್ನು ಉಳಿಸಿಕೊಳ್ಳುವುದೂ ಸಾಧ್ಯವಿಲ್ಲ.**

### ಭಾವಾರ್ಥ

ತಾವು ಸತ್ಕುಲಪ್ರಸೂತರೆಂದು ಸುಳ್ಳಾಗಿ ತೋರಿಸಿಕೊಳ್ಳುವ ಬಹುಮಂದಿ ಹುಸಿ ಧ್ಯಾನಿಗಳಿದ್ದಾರೆ. ಆಧ್ಯಾತ್ಮಿಕ ಬದುಕಿನಲ್ಲಿ ಮುಂದುವರಿಯುವುದಕ್ಕಾಗಿ ತಾವು ಎಲ್ಲವನ್ನೂ ತ್ಯಾಗಮಾಡಿರುವುದಾಗಿ ಸುಳ್ಳು ಹೇಳುವ ವೃತ್ತಿನಿರತರೂ ಇದ್ದಾರೆ. ಅರ್ಜುನನೊಬ್ಬ ಮಿಥ್ಯಾಚಾರಿಯಾಗಬೇಕೆಂದು ಶ್ರೀಕೃಷ್ಣನು ಬಯಸಲಿಲ್ಲ. ಕ್ಷತ್ರಿಯರಿಗೆ ವಿಧಿಸಿರುವ ನಿಯತ ಕರ್ಮಗಳನ್ನು ಅರ್ಜುನನು ಮಾಡಬೇಕೆಂದು ಭಗವಂತನು ಅಪೇಕ್ಷಿಸಿದ. ಅರ್ಜುನನೊಬ್ಬ ಗೃಹಸ್ಥ, ದಂಡನಾಯಕ. ಅವನು ಹಾಗೆಯೇ ಉಳಿದು ಗೃಹಸ್ಥನಾದ ಕ್ಷತ್ರಿಯನಿಗೆ ನಿಯಮಿಸಿರುವ ಕರ್ತವ್ಯಗಳನ್ನು ಮಾಡುವುದೇ ಉತ್ತಮ. ಇಂತಹ ಕರ್ಮಗಳು ಕ್ರಮೇಣ ಪ್ರಾಪಂಚಿಕ ಮನುಷ್ಯನ ಹೃದಯವನ್ನು ಶುದ್ಧಿಮಾಡುತ್ತವೆ ಮತ್ತು ಅವನ ಐಹಿಕ ಕಲ್ಮಷಗಳನ್ನು ತೊಡೆದುಹಾಕುತ್ತವೆ. ಹೊಟ್ಟೆಪಾಡಿಗಾಗಿ ಮಾಡುವ ತ್ಯಾಗದ ತೋರಿಕೆಯನ್ನು ಭಗವಂತನಾಗಲಿ ಯಾವುದೇ ಧರ್ಮಗ್ರಂಥವಾಗಲಿ ಅನುಮೋದಿಸುವುದಿಲ್ಲ. ಯಾವುದಾದರೂ ಕೆಲಸಮಾಡಿ ಮನುಷ್ಯನು ದೇಹ ಮತ್ತು ಆತ್ಮಗಳನ್ನು ಒಟ್ಟಿಗಿಡಲೇ ಬೇಕು ಎನ್ನುವುದು ನಿಜ. ಐಹಿಕ ಪ್ರವೃತ್ತಿಗಳಿಂದ ಪರಿಶುದ್ಧನಾಗದೆ ಮನಸ್ವೀ ರೀತಿಯಲ್ಲಿ ಕೆಲಸವನ್ನು ಬಿಟ್ಟುಬಿಡಬಾರದು. ಈ ಜಗತ್ತಿನಲ್ಲಿರುವ ಯಾರಿಗೇ ಆಗಲಿ ಐಹಿಕ ಪ್ರಕೃತಿಯ ಮೇಲೆ ದಬ್ಬಾಳಿಕೆ ನಡೆಸುವ, ಎಂದರೆ ಇಂದ್ರಿಯ ತೃಪ್ತಿ ಪಡೆಯುವ, ಕಲುಷಿತ ಪ್ರವೃತ್ತಿಯು ಇದ್ದೇ ಇರುತ್ತದೆ. ಇಂತಹ ಕಲುಷಿತ ಪ್ರವೃತ್ತಿಗಳನ್ನು ದೂರಮಾಡಬೇಕು. ನಿಯತಕರ್ತವ್ಯಗಳ ಮೂಲಕ ಹೀಗೆ ಮಾಡಬೇಕಲ್ಲದೆ, ಕೆಲಸವನ್ನು ತ್ಯಜಿಸಿ ಇತರರ ಖರ್ಚಿನಲ್ಲಿ ಹೊಟ್ಟೆ ಹೊರೆಯುತ್ತ ಆಧ್ಯಾತ್ಮಿಕವಾದಿ ಎನ್ನಿಸಿಕೊಳ್ಳಲು ಯಾರೂ ಪ್ರಯತ್ನಿಸಬಾರದು.

## ಶ್ಲೋಕ - 9

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ |**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಙ್ಗಃ ಸಮಾಚರ ||೯||**

**ಯಜ್ಞ ಅರ್ಥಾತ್**—ಯಜ್ಞನ ಅಥವಾ ವಿಷ್ಣುವಿನ ಸಲುವಾಗಿ ಮಾಡಿದ; **ಕರ್ಮಣಃ**—ಕರ್ಮಗಳಿಗಿಂತ; **ಅನ್ಯತ್ರ**—ಬೇರೆ ಬಗೆಯ; **ಲೋಕಃ**—ಪ್ರಪಂಚವು; **ಅಯಮ್**—ಈ; **ಕರ್ಮ ಬನ್ಧನಃ**—ಕರ್ಮದಿಂದ ಬಂಧನವು; **ತತ್**—ಅವನ; **ಅರ್ಥಮ್**—ಸಲುವಾಗಿ; **ಕರ್ಮ**—ಕರ್ಮವನ್ನು; **ಕೌನ್ತೇಯ**—ಕುಂತಿ ಪುತ್ರನೇ; **ಮುಕ್ತ ಸಙ್ಗಃ**—ಸಹವಾಸದಿಂದ ಬಿಡುಗಡೆ ಪಡೆದು; **ಸಮಾಚರ**—ಪರಿಪೂರ್ಣವಾಗಿ ಆಚರಿಸು.

### ಅನುವಾದ

**ವಿಷ್ಣುವಿಗಾಗಿ ಮಾಡಿದ ತ್ಯಾಗವೆಂದು ಕರ್ಮವನ್ನು ಮಾಡಬೇಕು. ಇಲ್ಲವಾದರೆ ಕರ್ಮವು ಇಹಬಂಧನವನ್ನು ಸೃಷ್ಟಿ ಮಾಡುತ್ತದೆ. ಆದುದರಿಂದ, ಕೌಂತೇಯ, ಭಗವಂತನ ತೃಪ್ತಿಗಾಗಿ ನಿನ್ನ ನಿಯತ ಕರ್ತವ್ಯಗಳನ್ನು ಮಾಡು. ಆ ರೀತಿಯಲ್ಲಿ ನೀನು ಬಂಧನದಿಂದ ಸದಾ ಮುಕ್ತನಾಗಿರುತ್ತೀಯೆ.**

### ಭಾವಾರ್ಥ

ದೇಹವನ್ನು ಉಳಿಸಿಕೊಳ್ಳುವುದಕ್ಕಾದರೂ ಮನುಷ್ಯನು ಕೆಲಸ ಮಾಡಲೇಬೇಕು. ಆದುದರಿಂದ, ಆ ಉದ್ದೇಶವನ್ನು ಸಾಧಿಸಲು ಸಾಧ್ಯವಾಗುವಂತೆ ನಿರ್ದಿಷ್ಟ ಸಮಾಜ, ಸ್ಥಾನ ಮತ್ತು ಗುಣಗಳಿಗೆ ತಕ್ಕಂತೆ ಕರ್ತವ್ಯಗಳನ್ನು ನಿಯತಗೊಳಿಸಿದೆ. **ಯಜ್ಞ** ಎಂದರೆ ಮಹಾವಿಷ್ಣು ಅಥವಾ ಧಾರ್ಮಿಕವಿಧಿಗನುಸಾರವಾಗಿ ಅರ್ಪಣೆ ಮಾಡುವುದು. ಎಲ್ಲ ಯಜ್ಞಗಳನ್ನು ನಡೆಸುವುದೂ ವಿಷ್ಣುವನ್ನು ಪ್ರಸನ್ನಗೊಳಿಸುವುದಕ್ಕಾಗಿ. ವೇದಗಳು ಆದೇಶಿಸುತ್ತವೆ — **ಯಜ್ಞೋ ವೈ ವಿಷ್ಣುಃ.** ಬೇರೆ ಮಾತುಗಳಲ್ಲಿ ಹೇಳುವುದಾದರೆ, ಒಬ್ಬ ಮನುಷ್ಯನು ಯಜ್ಞ ಮಾಡಿದರೂ ಒಂದೇ, ಶ್ರೀವಿಷ್ಣುವನ್ನು ನೇರವಾಗಿ ಸೇವಿಸಿದರೂ ಒಂದೇ. ಆದುದರಿಂದ, ಕೃಷ್ಣಪ್ರಜ್ಞೆ ಎಂದರೆ ಈ ಶ್ಲೋಕದಲ್ಲಿ ವಿಧಿಸಿರುವಂತೆ ಯಜ್ಞವನ್ನು ಮಾಡುವುದೇ. ವರ್ಣಾಶ್ರಮ ಸಂಸ್ಥೆಯ ಗುರಿಯೂ ವಿಷ್ಣುವಿನ ಸಂತೃಪ್ತಿಯೇ. **ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್/ ವಿಷ್ಣುರಾರಾಧ್ಯತೇ.** (ವಿಷ್ಣುಪುರಾಣ 3.8.8).

ಆದುದರಿಂದ ವಿಷ್ಣುವಿನ ಸಂತೃಪ್ತಿಗಾಗಿ ಕೆಲಸಮಾಡಬೇಕು. ಐಹಿಕ ಜಗತ್ತಿನಲ್ಲಿ ಬೇರೆ ಯಾವ ಕೆಲಸಮಾಡಿದರೂ ಅದು ಬಂಧನಕ್ಕೆ ಕಾರಣವಾಗುತ್ತದೆ. ಏಕೆಂದರೆ ಒಳ್ಳೆಯ ಕೆಲಸ-ಕೆಟ್ಟ ಕೆಲಸ ಎರಡಕ್ಕೂ ಪ್ರತಿಕ್ರಿಯೆಗಳಿರುತ್ತವೆ. ಯಾವುದೇ ಪ್ರತಿಕ್ರಿಯೆಯಿಂದಲೂ ಕೆಲಸ ಮಾಡಿದವನು ಬಂಧನಕ್ಕೆ ಒಳಗಾಗುತ್ತಾನೆ. ಆದುದರಿಂದ ಕೃಷ್ಣನ (ಅಥವಾ ವಿಷ್ಣುವಿನ) ಸಂತೃಪ್ತಿಗಾಗಿ ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡಬೇಕು. ಇಂತಹ ಕರ್ಮಮಾಡುವಾಗ ಮನುಷ್ಯನು ಮುಕ್ತಿಯ ಸ್ಥಿತಿಯಲ್ಲಿರುತ್ತಾನೆ. ಇದು ಕರ್ಮಮಾಡುವ ಮಹಾಕಲೆ. ಪ್ರಾರಂಭದಲ್ಲಿ ಈ ಪ್ರಕ್ರಿಯೆಗೆ ಪರಿಣತ ಮಾರ್ಗದರ್ಶನದ ಅಗತ್ಯವಿದೆ. ಆದುದರಿಂದ ಶ್ರೀಕೃಷ್ಣನ ಭಕ್ತರೊಬ್ಬರ ಮಾರ್ಗದರ್ಶನದಲ್ಲಿ ಅಥವಾ (ಯಾರೊಡನೆ ಕೆಲಸ ಮಾಡುವ ಭಾಗ್ಯ ಅರ್ಜುನನದಾಯಿತೋ ಅಂತಹ) ಶ್ರೀಕೃಷ್ಣನ

ನೇರ ಮಾರ್ಗದರ್ಶನದಲ್ಲಿ ಶ್ರದ್ಧೆಯಿಂದ ಕೆಲಸ ಮಾಡಬೇಕು. ಇಂದ್ರಿಯತೃಪ್ತಿಗಾಗಿ ಏನನ್ನೂ ಮಾಡಬಾರದು. ಎಲ್ಲವನ್ನೂ ಶ್ರೀಕೃಷ್ಣನ ತೃಪ್ತಿಗಾಗಿಯೇ ಮಾಡಬೇಕು. ಇದನ್ನು ಕಲಿತ ಮನುಷ್ಯನು ಕರ್ಮಫಲದಿಂದ ಮುಕ್ತನಾಗುತ್ತಾನೆ. ಇದು ಮನುಷ್ಯನನ್ನು ಕ್ರಮೇಣ ಭಗವಂತನ ದಿವ್ಯ ಪ್ರೀತಿಯುತ ಸೇವೆಗೆ ಎತ್ತುತ್ತದೆ. ಇಂತಹ ಭಕ್ತಿಸೇವೆಯೊಂದೇ ಮನುಷ್ಯನನ್ನು ಭಗವದ್ಧಾಮಕ್ಕೆ ಏರಿಸಬಲ್ಲದು.

## ಶ್ಲೋಕ - 10

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ |**
**ಅನೇನ ಪ್ರಸವಿಷ್ಯಧ್ವಮೇಷ ವೋऽಸ್ತ್ವಿಷ್ಟಕಾಮಧುಕ್ ||೧೦||**

**ಸಹ**—ಜೊತೆಗೂಡಿ; **ಯಜ್ಞಾಃ**—ಯಜ್ಞಗಳ; **ಪ್ರಜಾಃ**—ಸಂತತಿಗಳನ್ನು; **ಸೃಷ್ಟ್ವಾ**—ಸೃಷ್ಟಿಸಿ; **ಪುರಾ**—ಪ್ರಾಚೀನ ಕಾಲದಲ್ಲಿ; **ಉವಾಚ**—ಹೇಳಿದನು; **ಪ್ರಜಾಪತಿಃ**—ಜೀವಿಗಳ ಒಡೆಯನು; **ಅನೇನ**—ಇದರಿಂದ; **ಪ್ರಸವಿಷ್ಯಧ್ವಮ್**—ಹೆಚ್ಚು ಹೆಚ್ಚು ಸಮೃದ್ಧರಾಗಿರಿ; **ಏಷಃ**—ಇದು; **ವಃ**—ನಿಮ್ಮ; **ಅಸ್ತು**—ಆಗಲಿ; **ಇಷ್ಟ**—ಅಪೇಕ್ಷಿತವಾದ ಎಲ್ಲ ವಸ್ತುಗಳ; **ಕಾಮ ಧುಕ್**—ಪ್ರದಾಯಕವು.

## ಅನುವಾದ

**ಸೃಷ್ಟಿಯ ಪ್ರಾರಂಭದಲ್ಲಿ ಸಕಲ ಜೀವಿಗಳ ಪ್ರಭುವು ಮನುಷ್ಯರ ಮತ್ತು ದೇವತೆಗಳ ಪೀಳಿಗೆಗಳನ್ನು ವಿಷ್ಣುವಿಗಾಗಿ ಯಜ್ಞಗಳೊಂದಿಗೆ ಕಳುಹಿಸಿಕೊಟ್ಟನು. ಅವರಿಗೆ, "ಈ ಯಜ್ಞದಿಂದ ಸುಖವಾಗಿರಿ, ಇದನ್ನು ನಡೆಸಿದರೆ ನಿಮಗೆ ಇಷ್ಟಕಾಮಗಳೆಲ್ಲ ಸಿದ್ಧಿಸುತ್ತವೆ ಮತ್ತು ಮುಕ್ತಿಸಾಧನೆಯು ಕೈಗೂಡುತ್ತದೆ" ಎಂದು ಹೇಳಿದನು.**

## ಭಾವಾರ್ಥ

ಸಕಲ ಜೀವಿಗಳ ಪ್ರಭುವು (ವಿಷ್ಣು) ಇಹಲೋಕವನ್ನು ಸೃಷ್ಟಿಮಾಡಿದುದು ಭಗವದ್ಧಾಮಕ್ಕೆ ಹಿಂದಿರುಗಲು ಬದ್ಧಜೀವಿಗಳಿಗೆ ಒಂದು ಅವಕಾಶ. ಐಹಿಕ ಸೃಷ್ಟಿಯಲ್ಲಿನ ಎಲ್ಲ ಜೀವಿಗಳೂ ಪ್ರಕೃತಿಯಿಂದ ಬದ್ಧರು. ಏಕೆಂದರೆ ಅವರು ದೇವೋತ್ತಮ ಪರಮ ಪುರುಷನಾದ ಕೃಷ್ಣ ಅಥವಾ ವಿಷ್ಣುವಿನೊಡನೆ ತಮ್ಮ ಸಂಬಂಧವನ್ನು ಮರೆತು ಬಿಡುತ್ತಾರೆ. ವೇದತತ್ವಗಳು ಈ ಸನಾತನ ಬಾಂಧವ್ಯವನ್ನು ಅರಿತುಕೊಳ್ಳಲು ಸಹಾಯ ಮಾಡುತ್ತವೆ. ಭಗವದ್ಗೀತೆಯಲ್ಲಿ, **ವೇದೈಶ್ಚ ಸರ್ವೈರಹಮೇವ ವೇದ್ಯಃ** ಎಂದು ಹೇಳಿದೆ. ಆತನನ್ನು ಅರಿಯುವುದೇ ವೇದಗಳ ಗುರಿ ಎಂದು ಭಗವಂತನು ಹೇಳುತ್ತಾನೆ. ವೇದದ ಸ್ತುತಿಗಳಲ್ಲಿ **ಪತಿಂ ವಿಶ್ವಸ್ಯಾತ್ಮೇಶ್ವರಮ್** ಎಂದು ಹೇಳಿದೆ. ಆದುದರಿಂದ ಸಕಲ ಜೀವಿಗಳ ಪ್ರಭುವು ದೇವೋತ್ತಮ ಪರಮ ಪುರುಷನಾದ ವಿಷ್ಣು. ಶ್ರೀಮದ್ಭಾಗವತದಲ್ಲಿ ಸಹ (2.4.20) ಶ್ರೀ ಶುಕಮುನಿಗಳು ಹಲವು ರೀತಿಗಳಲ್ಲಿ ಭಗವಂತನನ್ನು **ಪತಿ** ಎಂದು ವರ್ಣಿಸಿದ್ದಾರೆ.

ಶ್ರಿಯಃ ಪತಿರ್ಯಜ್ಞಪತಿಃ ಪ್ರಜಾಪತಿ-
ರ್ಧಿಯಾಂ ಪತಿರ್ಲೋಕಪತಿರ್ಧರಾಪತಿಃ |
ಪತಿರ್ಗತಿಶ್ಚಾನ್ಧಕವೃಷ್ಣಿಸಾತ್ವತಾಮ್
ಪ್ರಸೀದತಾಂ ಮೇ ಭಗವಾನ್ ಸತಾಂ ಪತಿಃ ||

ಪ್ರಜಾಪತಿಯು ಶ್ರೀ ವಿಷ್ಣು; ಅವನು ಎಲ್ಲ ಜೀವಿಗಳ, ಎಲ್ಲ ಲೋಕಗಳ, ಎಲ್ಲ ಚೆಲುವುಗಳ ಪತಿ, ಎಲ್ಲರ ರಕ್ಷಕ. ಭಗವಂತನು ಈ ಐಹಿಕ ಜಗತ್ತನ್ನು ಒಂದು ಉದ್ದೇಶದಿಂದ ಸೃಷ್ಟಿಸಿದ. ಬದ್ಧ ಜೀವಿಗಳು ವಿಷ್ಣುವಿನ ಸಂತೃಪ್ತಿಗಾಗಿ ಯಜ್ಞಗಳನ್ನು ಮಾಡುವುದು ಹೇಗೆ ಎನ್ನುವುದನ್ನು ಕಲಿಯಬೇಕು. ಇದರಿಂದ ಅವರು ಐಹಿಕ ಜಗತ್ತಿನಲ್ಲಿರುವಾಗ ನಿರಾತಂಕವಾಗಿ ನೆಮ್ಮದಿಯಾಗಿ ಬಾಳಿ ಅನಂತರ ಈ ಐಹಿಕ ಶರೀರದ ವಾಸವನ್ನು ಮುಗಿಸಿ ದೇವರ ರಾಜ್ಯವನ್ನು ಸೇರಬೇಕು ಎನ್ನುವುದು ಈ ಉದ್ದೇಶ. ಬದ್ಧ ಆತ್ಮಕ್ಕೆ ಇದು ಸಮಗ್ರಕಾರ್ಯಕ್ರಮ. ಯಜ್ಞವನ್ನು ಮಾಡುವುದರಿಂದ ಬದ್ಧ ಆತ್ಮವು ಕ್ರಮೇಣ ಕೃಷ್ಣಪ್ರಜ್ಞೆಯನ್ನು ಪಡೆಯುತ್ತದೆ, ಎಲ್ಲ ರೀತಿಗಳಲ್ಲಿ ದೈವಶ್ರದ್ಧೆಯನ್ನು ಪಡೆಯುತ್ತದೆ. ವೇದಶಾಸ್ತ್ರಗಳು ಕಲಿಯುಗದಲ್ಲಿ ಸಂಕೀರ್ತನ ಯಜ್ಞವನ್ನು ನಡೆಸಬೇಕೆಂದು ಹೇಳುತ್ತವೆ. ಈ ಯುಗದ ಎಲ್ಲ ಮನುಷ್ಯರ ಉದ್ಧಾರಕ್ಕಾಗಿ ಈ ಆಧ್ಯಾತ್ಮಿಕ ವ್ಯವಸ್ಥೆಯನ್ನು ಚೈತನ್ಯ ಮಹಾಪ್ರಭುಗಳು ಪ್ರಾರಂಭಿಸಿದರು. ಸಂಕೀರ್ತನ ಯಜ್ಞ ಮತ್ತು ಕೃಷ್ಣಪ್ರಜ್ಞೆಗಳು ಸೊಗಸಾಗಿ ಹೊಂದಿಕೊಳ್ಳುತ್ತವೆ. (ಚೈತನ್ಯ ಮಹಾಪ್ರಭುಗಳಾಗಿ) ಶ್ರೀಕೃಷ್ಣನ ಭಕ್ತಿರೂಪವನ್ನು ಶ್ರೀಮದ್ಭಾಗವತದಲ್ಲಿ ವಿಶೇಷವಾಗಿ ಸಂಕೀರ್ತನ ಯಜ್ಞಕ್ಕೆ ಸಂಬಂಧಿಸಿದಂತೆ, ಹೀಗೆ ನಿರೂಪಿಸಿದೆ —

ಕೃಷ್ಣವರ್ಣಂ ತ್ವಿಷಾಕೃಷ್ಣಂ ಸಾಂಗೋಪಾಂಗಾಸ್ತ್ರ ಪಾರ್ಷದಮ್ |
ಯಜ್ಞೈಃ ಸಂಕೀರ್ತನಪ್ರಾಯೈ ರ್ಯಜನ್ತಿ ಹಿ ಸುಮೇಧಸಃ ||

"ಈ ಕಲಿಯುಗದಲ್ಲಿ, ಸಾಕಷ್ಟು ಬುದ್ಧಿಯುಳ್ಳವರು, ತನ್ನ ಸಂಗಾತಿಗಳೊಡನೆ ಕೂಡಿರುವ ಭಗವಂತನನ್ನು ಸಂಕೀರ್ತನ ಯಜ್ಞವನ್ನು ಮಾಡಿ ಪೂಜಿಸುತ್ತಾರೆ." ವೈದಿಕ ಸಾಹಿತ್ಯದಲ್ಲಿ ಹೆಸರಿಸಿರುವ ಇತರ ಯಜ್ಞಗಳನ್ನು ಕಲಿಯುಗದಲ್ಲಿ ಮಾಡುವುದು ಸುಲಭವಲ್ಲ. ಆದರೆ, ಭಗವದ್ಗೀತೆಯಲ್ಲಿಯೂ (9.14) ಹೇಳಿರುವಂತೆ, ಸಂಕೀರ್ತನ ಯಜ್ಞವು ಎಲ್ಲ ಉದ್ದೇಶಸಾಧನೆಗಳಿಗೂ ಸುಲಭವೂ ಹೌದು, ಭವ್ಯವೂ ಹೌದು.

## ಶ್ಲೋಕ - 11

ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ |
ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ||೧೧||

**ದೇವಾನ್**—ದೇವತೆಗಳನ್ನು; **ಭಾವಯತಾ**—ತೃಪ್ತಿಗೊಳಿಸುವ; **ಅನೇನ**—ಈ ಯಜ್ಞದಿಂದ; **ತೇ**—ಆ; **ದೇವಾಃ**—ದೇವತೆಗಳು; **ಭಾವಯನ್ತು**—ಸಂತೋಷಪಡಿಸುವರು; **ವಃ**—ನಿಮ್ಮನ್ನು; **ಪರಸ್ಪರಮ್**—ಪರಸ್ಪರ; **ಭಾವಯನ್ತಃ**—ಒಬ್ಬರು ಮತ್ತೊಬ್ಬರನ್ನು ಸಂತೋಷಪಡಿಸಿ; **ಶ್ರೇಯಃ**—ಶ್ರೇಯಸ್ಸನ್ನು; **ಪರಮ್**—ಉತ್ಕೃಷ್ಟವಾದ; **ಅವಾಪ್ಸ್ಯಥ**—ಹೊಂದುವಿರಿ.

## ಅನುವಾದ

**ಈ ಯಜ್ಞಗಳಿಂದ ಸಂತುಷ್ಟರಾದ ದೇವತೆಗಳೂ ನಿಮ್ಮನ್ನು ಸಂತೋಷಪಡಿಸುತ್ತಾರೆ. ಹೀಗೆ ಮನುಷ್ಯನ ಮತ್ತು ದೇವತೆಗಳ ಪರಸ್ಪರ ಸಹಕಾರದಿಂದ ಎಲ್ಲರಿಗೂ ಸಮೃದ್ಧಿಯುಂಟಾಗುತ್ತದೆ.**

## ಭಾವಾರ್ಥ

ದೇವತೆಗಳು ಐಹಿಕ ವ್ಯವಹಾರಗಳ ಆಡಳಿತವನ್ನು ನಿರ್ವಹಿಸಲು ಅಧಿಕಾರವನ್ನು ಪಡೆದವರು. ಪ್ರತಿಯೊಬ್ಬ ಜೀವಿಯ ದೇಹ ಮತ್ತು ಆತ್ಮಗಳ ಪೋಷಣೆಗಾಗಿ ವಾಯು, ಬೆಳಕು, ನೀರು ಮತ್ತಿತರ ಎಲ್ಲ ವರಗಳನ್ನೂ ಒದಗಿಸುವ ಹೊಣೆಯನ್ನು ದೇವತೆಗಳಿಗೆ ವಹಿಸಿದೆ. ಅವರು ದೇವೋತ್ತಮ ಪರಮ ಪುರುಷನ ಶರೀರದ ವಿವಿಧ ಭಾಗಗಳಲ್ಲಿ ಅಸಂಖ್ಯ ಸಹಾಯಕರಾಗಿದ್ದಾರೆ. ಅವರ ಸಂತೋಷ ಮತ್ತು ಅಸಂತೋಷಗಳು ಮನುಷ್ಯನು ಯಜ್ಞಗಳನ್ನು ನಡೆಸುವುದನ್ನೆ ಅವಲಂಬಿಸಿವೆ. ಕೆಲವು ಯಜ್ಞಗಳ ಉದ್ದೇಶ ನಿರ್ದಿಷ್ಟ ದೇವತೆಗಳನ್ನು ಪ್ರಸನ್ನಗೊಳಿಸುವುದು; ಆದರೆ ಎಲ್ಲ ಯಜ್ಞಗಳಲ್ಲಿ ಮುಖ್ಯ ಭೋಕ್ತಾರ ಎಂದು ಶ್ರೀವಿಷ್ಣುವನ್ನು ಪೂಜಿಸಲಾಗುತ್ತದೆ. ಭಗವದ್ಗೀತೆಯಲ್ಲಿ, ಎಲ್ಲ ಬಗೆಗಳ ಯಜ್ಞಗಳ ಮುಖ್ಯ ಭೋಕ್ತಾರನು ಶ್ರೀಕೃಷ್ಣ ಎಂದು ಹೇಳಿದೆ; **ಭೋಕ್ತಾರಂ ಯಜ್ಞತಪಸಾಮ್.** ಆದುದರಿಂದ, ಯಜ್ಞಪತಿಯ ಕಟ್ಟಕಡೆಯ ಸಂತೃಪ್ತಿಯೇ ಎಲ್ಲ ಯಜ್ಞಗಳ ಮುಖ್ಯ ಗುರಿ. ಈ ಯಜ್ಞಗಳನ್ನು ಪರಿಪೂರ್ಣ ರೀತಿಯಲ್ಲಿ ನಡೆಸಿದಾಗ, ಸಹಜವಾಗಿ ಬೇರೆ ಬೇರೆ ವಿಭಾಗಗಳನ್ನು ವಹಿಸಿಕೊಂಡಿರುವ ದೇವತೆಗಳು ಸಂತುಷ್ಟರಾಗುತ್ತಾರೆ ಮತ್ತು ನೈಸರ್ಗಿಕ ಉತ್ಪನ್ನಗಳನ್ನು ಒದಗಿಸುವುದರಲ್ಲಿ ಅಭಾವಕ್ಕೆಡೆ ಇರುವುದಿಲ್ಲ.

ಯಜ್ಞಗಳನ್ನು ನಡೆಸುವುದರಿಂದ ಹಲವು ಉಪಪ್ರಯೋಜನಗಳುಂಟು. ಅದು ಕಡೆಗೆ ಭವಬಂಧನದಿಂದ ಮುಕ್ತಿಗೆ ಕರೆದೊಯ್ಯುತ್ತದೆ. ಯಜ್ಞಗಳನ್ನು ನಡೆಸುವುದರಿಂದ ಎಲ್ಲ ಕರ್ಮಗಳೂ ಪರಿಶುದ್ಧವಾಗುತ್ತವೆ. ವೇದಗಳಲ್ಲಿ ಹೇಳಿರುವಂತೆ, **ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ.** ಯಜ್ಞಾಚರಣೆಯಿಂದ ಮನುಷ್ಯನ ಆಹಾರವು ಪವಿತ್ರವಾಗುತ್ತದೆ. ಪವಿತ್ರವಾದ ಆಹಾರವನ್ನು ಸೇವಿಸಿದ ಮನುಷ್ಯನ ಬದುಕೇ ಪವಿತ್ರವಾಗುತ್ತದೆ. ಬದುಕು ಪವಿತ್ರವಾದಾಗ ಸ್ಮೃತಿಯು ಪವಿತ್ರವಾಗುತ್ತದೆ. ಸ್ಮೃತಿಯು ಪವಿತ್ರವಾದಾಗ ಮನುಷ್ಯನು ಮೋಕ್ಷಮಾರ್ಗವನ್ನು ಕುರಿತು ಚಿಂತಿಸಬಹುದು. ಇವೆಲ್ಲವೂ ಸೇರಿ ಕೃಷ್ಣಪ್ರಜ್ಞೆಗೆ ಒಯ್ಯುತ್ತವೆ. ಇಂದಿನ ಸಮಾಜಕ್ಕೆ ಅತ್ಯಗತ್ಯವಾದದ್ದು ಕೃಷ್ಣಪ್ರಜ್ಞೆ.

## ಶ್ಲೋಕ - 12

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ |**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ||೧೨||**

**ಇಷ್ಟಾನ್**—ಅಪೇಕ್ಷಿಸಿದ; **ಭೋಗಾನ್**—ಜೀವನದ ಆವಶ್ಯಕತೆಗಳನ್ನು; **ಹಿ**—ಖಂಡಿತವಾಗಿಯೂ; **ವಃ**—ನಿಮಗೆ; **ದೇವಾಃ**—ದೇವತೆಗಳು; **ದಾಸ್ಯನ್ತೇ**—ನೀಡುವರು; **ಯಜ್ಞ ಭಾವಿತಾಃ**—ಯಜ್ಞಾಚರಣೆಗಳಿಂದ ತೃಪ್ತರಾದ; **ತೈಃ**—ಅವರಿಂದ; **ದತ್ತಾನ್**—ಕೊಡಲ್ಪಟ್ಟ ವಸ್ತುಗಳನ್ನು;

**ಅಪ್ರದಾಯ**—ಅರ್ಪಿಸದೆ; **ಏಭ್ಯಃ**—ಈ ದೇವತೆಗಳಿಗೆ; **ಯಃ**—ಯಾರು; **ಭುಙ್ಕ್ತೇ**—ಭುಂಜಿಸುತ್ತಾನೋ; **ಸ್ತೇನಃ**—ಕಳ್ಳನು; **ಏವ**—ನಿಶ್ಚಯವಾಗಿಯೂ; **ಸಃ**—ಅವನು.

## ಅನುವಾದ

**ಬದುಕಿನ ವಿವಿಧ ಅಗತ್ಯಗಳ ಪೂರೈಕೆಯ ಹೊಣೆ ಹೊತ್ತಿರುವ ದೇವತೆಗಳು ಯಜ್ಞದ ಆಚರಣೆಯಿಂದ ಸುಪ್ರೀತರಾಗಿ ನಿಮ್ಮ ಎಲ್ಲ ಅಗತ್ಯಗಳನ್ನೂ ಪೂರೈಸುವರು. ಆದರೆ ಈ ವರಗಳನ್ನು ದೇವತೆಗಳಿಗೆ ಅರ್ಪಿಸದೆ ಅನುಭವಿಸುವವನು ನಿಜವಾಗಿಯೂ ಕಳ್ಳನೇ.**

## ಭಾವಾರ್ಥ

ದೇವತೆಗಳು, ದೇವೋತ್ತಮ ಪರಮ ಪುರುಷನ ಪರವಾಗಿ ಕೆಲಸಮಾಡಲು ಅಧಿಕಾರ ಪಡೆದ ಅಭಿಕರ್ತರು. ಆದುದರಿಂದ ಯಜ್ಞಗಳ ಆಚರಣೆಯ ಮೂಲಕ ಅವರನ್ನು ತೃಪ್ತಿಗೊಳಿಸಬೇಕು. ವೇದಗಳಲ್ಲಿ ಬೇರೆ ಬೇರೆ ದೇವತೆಗಳ ತೃಪ್ತಿಗಾಗಿ ಮಾಡಬೇಕಾದ ಹಲವಾರು ಯಜ್ಞಗಳನ್ನು ವಿಧಿಸಿದೆ. ಆದರೆ ಎಲ್ಲ ಯಜ್ಞಗಳನ್ನೂ ಕಟ್ಟಕಡೆಗೆ ಅರ್ಪಿಸುವುದು ದೇವೋತ್ತಮ ಪರಮ ಪುರುಷನಿಗೆ. ದೇವೋತ್ತಮ ಪರಮ ಪುರುಷನನ್ನು ಅರಿಯಲಾರದವರು ದೇವತೆಗಳಿಗೆ ಯಜ್ಞಗಳನ್ನು ಮಾಡಬೇಕೆಂದು ಹೇಳಿದೆ. ಸಂಬಂಧಿಸಿದ ವ್ಯಕ್ತಿಗಳ ಐಹಿಕ ಗುಣಗಳಿಗೆ ಅನುಸಾರವಾಗಿ ವೇದಗಳಲ್ಲಿ ಬೇರೆ ಬೇರೆ ಬಗೆಗಳ ಯಜ್ಞಗಳನ್ನು ಮಾಡಬೇಕೆಂದು ಹೇಳಿದೆ. ಬೇರೆ ಬೇರೆ ದೇವತೆಗಳ ಪೂಜೆಗೂ ಇದೇ ಆಧಾರ - ಬೇರೆ ಬೇರೆ ಗುಣಗಳು. ಉದಾಹರಣೆಗೆ, ಮಾಂಸಾಹಾರಿಗಳು ಕಾಳಿದೇವತೆಯನ್ನು ಪೂಜಿಸಬೇಕೆಂದು ಹೇಳಿದೆ; ಕಾಳಿದೇವತೆಯು ಐಹಿಕ ಪ್ರಕೃತಿಯ ಭಯಂಕರ ರೂಪ; ಈ ದೇವಿಗೆ ಪ್ರಾಣಿಬಲಿಯನ್ನು ಅರ್ಪಿಸಬೇಕೆಂದು ಹೇಳಿದೆ. ಆದರೆ ಸಾತ್ವಿಕಗುಣ ಉಳ್ಳವರು ವಿಷ್ಣುವಿನ ಆಧ್ಯಾತ್ಮಿಕ ಆರಾಧನೆಯನ್ನು ಮಾಡಲು ಹೇಳಿದೆ. ಆದರೆ ಅಂತಿಮವಾಗಿ ಎಲ್ಲ ಯಜ್ಞಗಳ ಗುರಿಯೂ ಆಧ್ಯಾತ್ಮಿಕ ನೆಲೆಗೆ ಕ್ರಮೇಣ ಮೇಲೇರುವುದು. ಸಾಮಾನ್ಯ ಮನುಷ್ಯರು, ಕಡೆಯಪಕ್ಷ ಪಂಚಮಹಾಯಜ್ಞಗಳೆಂಬ ಹೆಸರಿನ ಯಜ್ಞಗಳನ್ನಾದರೂ ನಡೆಸಬೇಕು.

ಮಾನವ ಸಮಾಜದ ಎಲ್ಲ ಅಗತ್ಯಗಳನ್ನೂ ಭಗವಂತನ ಪರ ಕಾರ್ಯಪ್ರವೃತ್ತರಾದ ದೇವತೆಗಳು ಪೂರೈಸುತ್ತಾರೆ ಎನ್ನುವುದನ್ನು ತಿಳಿದುಕೊಳ್ಳಬೇಕು. ಯಾರೂ ಏನನ್ನೂ ಉತ್ಪಾದಿಸುವುದು ಸಾಧ್ಯವಿಲ್ಲ. ಉದಾಹರಣೆಗೆ, ಮನುಷ್ಯ ಸಮುದಾಯದ ಆಹಾರ ಪದಾರ್ಥಗಳನ್ನು ತೆಗೆದುಕೊಳ್ಳಿ. ಸಾತ್ವಿಕ ಸ್ವಭಾವದವರಿಗೆ ಆಹಾರ ಧಾನ್ಯಗಳು, ಹಣ್ಣುಗಳು, ತರಕಾರಿಗಳು, ಹಾಲು, ಸಕ್ಕರೆ, ಮೊದಲಾದವು; ಮಾಂಸಾಹಾರಿಗಳಿಗೆ ಮಾಂಸ ಇದರಲ್ಲಿ ಯಾವುದನ್ನೂ ಮನುಷ್ಯರು ಉತ್ಪಾದನೆ ಮಾಡಲಾರರು. ಬದುಕಿಗೆ ಅಗತ್ಯವಾದ ಶಾಖ, ಬೆಳಕು, ನೀರು, ಗಾಳಿ ಮೊದಲಾದುವನ್ನು ತೆಗೆದುಕೊಳ್ಳಿ - ಇವುಗಳಲ್ಲಿ ಯಾವುದನ್ನೂ ಮನುಷ್ಯ ಸಮಾಜವು ಸೃಷ್ಟಿ ಮಾಡಲಾರದು. ಭಗವಂತನಿಲ್ಲದೆ ಸೂರ್ಯನ ಬೆಳಕು, ಬೆಳದಿಂಗಳು, ಮಳೆ, ಗಾಳಿ ಯಾವುದೂ ಸಮೃದ್ಧವಾಗಿ ಇರುವುದಿಲ್ಲ; ಇವುಗಳಿಲ್ಲದೆ ಯಾರೂ ಬದುಕಲು ಸಾಧ್ಯವಿಲ್ಲ. ನಮ್ಮ ಬದುಕು ಭಗವಂತನ ವರಗಳನ್ನೇ ಅವಲಂಬಿಸಿದೆ ಎನ್ನುವುದು ಸ್ಪಷ್ಟ. ನಮ್ಮ ಉತ್ಪಾದನೆಯ ಉದ್ಯಮಗಳಿಗೂ ಲೋಹ, ಗಂಧಕ, ಪಾದರಸ, ಮ್ಯಾಂಗನೀಸ್ ಮೊದಲಾದ ಅನೇಕ ವಸ್ತುಗಳು ಅತ್ಯಗತ್ಯ; ಇವೆಲ್ಲವನ್ನೂ ಭಗವಂತನ ಪ್ರತಿನಿಧಿಗಳೇ ನೀಡುತ್ತಾರೆ; ಅವುಗಳನ್ನು ಸಮರ್ಪಕವಾಗಿ

ಬಳಸಿ, ಆರೋಗ್ಯಕರ ಜೀವನ ನಡೆಸುತ್ತಾ, ಆತ್ಮಸಾಕ್ಷಾತ್ಕಾರ ಪಡೆಯಬೇಕು. ಹೀಗೆ ವ್ಯಕ್ತಿಯು ಜೀವನದ ಅಂತಿಮ ಗುರಿಯತ್ತ ಸಾಗುತ್ತಾನೆ. ಅಸ್ತಿತ್ವಕ್ಕಾಗಿ ಹೋರಾಟದಿಂದ ಬಿಡುಗಡೆ ಪಡೆಯುವುದೇ ಜೀವನದ ಅಂತಿಮ ಉದ್ದೇಶವಾಗಿದೆ. ಈ ಗುರಿಯನ್ನು ಯಜ್ಞಗಳ ಆಚರಣೆಯಿಂದ ನಾವು ಮುಟ್ಟಬೇಕು. ಮನುಷ್ಯನ ಬದುಕಿನ ಗುರಿಯನ್ನು ಮರೆತು ಭಗವಂತನ ಪ್ರತಿನಿಧಿಗಳು ನೀಡುವುದನ್ನು ಇಂದ್ರಿಯತೃಪ್ತಿಗಾಗಿ ಬಳಸಿಕೊಂಡರೆ ನಿಶ್ಚಯವಾಗಿ ನಾವು ಕಳ್ಳರಾಗುತ್ತೇವೆ. ಏಕೆಂದರೆ ಸೃಷ್ಟಿಯ ಗುರಿ ಇದಲ್ಲ. ಹೀಗೆ ಮಾಡಿದರೆ ಐಹಿಕ ಪ್ರಕೃತಿಯ ನಿಯಮಗಳು ನಮ್ಮನ್ನು ಶಿಕ್ಷಿಸುತ್ತವೆ. ಕಳ್ಳರ ಸಮಾಜದಲ್ಲಿ ಸುಖವು ಸಾಧ್ಯವಲ್ಲ. ಏಕೆಂದರೆ ಅವರಿಗೆ ಬದುಕಿನಲ್ಲಿ ಗುರಿಯಿಲ್ಲ. ಪ್ರಾಪಂಚಿಕ ಮನೋಭಾವದ ಅಸಂಸ್ಕೃತ ಕಳ್ಳರಿಗೆ ಬದುಕಿನಲ್ಲಿ ಅಂತಿಮ ಗುರಿಯಿಲ್ಲ. ಅವರ ಮನಸ್ಸು ಇಂದ್ರಿಯ ತೃಪ್ತಿಯತ್ತಲೇ ಸಾಗುತ್ತದೆ. ಯಜ್ಞಗಳನ್ನು ಮಾಡುವುದು ಹೇಗೆ ಎಂದು ಅವರಿಗೆ ತಿಳಿದಿರುವುದಿಲ್ಲ. ಯಜ್ಞವನ್ನು ಅತ್ಯಂತ ಸುಲಭವಾಗಿ ಆಚರಿಸುವುದನ್ನು ಚೈತನ್ಯ ಮಹಾಪ್ರಭುಗಳು ಪ್ರಾರಂಭಿಸಿದರು. ಇದು ಸಂಕೀರ್ತನ ಯಜ್ಞ. ಕೃಷ್ಣಪ್ರಜ್ಞೆಯನ್ನು ಸ್ವೀಕರಿಸುವ ಯಾರೇ ಆಗಲಿ ಇದನ್ನು ನಡೆಸಬಹುದು.

## ಶ್ಲೋಕ - 13

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯನ್ತೇ ಸರ್ವಕಿಲ್ಬಿಷೈಃ |**
**ಭುಞ್ಜತೇ ತೇ ತ್ವಘಂ ಪಾಪಾ ಯೇ ಪಚನ್ತ್ಯಾತ್ಮಕಾರಣಾತ್ ||೧೩||**

**ಯಜ್ಞಶಿಷ್ಟ**—ಯಜ್ಞದ ಆಚರಣೆಯನಂತರ ಸ್ವೀಕರಿಸಿದ ಆಹಾರವನ್ನು; **ಅಶಿನಃ**—ತಿಂದವರು; **ಸಂತಃ**—ಭಕ್ತರು; **ಮುಚ್ಯನ್ತೇ**—ಬಿಡುಗಡೆ ಪಡೆಯುತ್ತಾರೆ; **ಸರ್ವ**—ಎಲ್ಲಾ ವಿಧವಾದ; **ಕಿಲ್ಬಿಷೈಃ**—ಪಾಪಗಳಿಂದ; **ಭುಞ್ಜತೇ**—ಅನುಭವಿಸುತ್ತಾರೆ; **ತೇ**—ಅ; **ತು**—ಆದರೆ; **ಅಘಮ್**—ಘೋರಪಾಪಗಳನ್ನು; **ಪಾಪಾಃ**—ಪಾಪಿಗಳು; **ಯೇ**—ಯಾರು; **ಪಚನ್ತಿ**—ಆಹಾರವನ್ನು ಸಿದ್ಧಪಡಿಸುವರೋ; **ಆತ್ಮ ಕಾರಣಾತ್**—ಇಂದ್ರಿಯ ತೃಪ್ತಿಗಾಗಿ.

### ಅನುವಾದ

**ಭಗವಂತನ ಭಕ್ತರು ಎಲ್ಲ ಬಗೆಯ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. ಏಕೆಂದರೆ ಅವರು ಯಜ್ಞದ ಶೇಷವನ್ನು ಊಟಮಾಡುತ್ತಾರೆ. ವೈಯಕ್ತಿಕ ಸಂತೋಷಕ್ಕೋಸ್ಕರ ಪಾಕ ಮಾಡಿಕೊಳ್ಳುವವರು ಖಂಡಿತವಾಗಿಯೂ ಪಾಪವನ್ನೇ ಊಟಮಾಡುತ್ತಾರೆ.**

### ಭಾವಾರ್ಥ

ಭಗವಂತನ ಭಕ್ತರಿಗೆ, ಎಂದರೆ ಕೃಷ್ಣಪ್ರಜ್ಞೆ ಇರುವವರಿಗೆ ಸಂತರು ಎಂದು ಹೆಸರು. ಅವರು ಯಾವಾಗಲೂ ಭಗವಂತನ ಪ್ರೇಮಿಗಳು. ಇದನ್ನು ಬ್ರಹ್ಮ ಸಂಹಿತೆಯಲ್ಲಿ (5.38) ವರ್ಣಿಸಿದೆ — **ಪ್ರೇಮಾಂಜನಚ್ಛುರಿತಭಕ್ತಿವಿಲೋಚನೇನ ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ**. ಸದಾ ದೇವೋತ್ತಮ ಪರಮ ಪುರುಷ, ಗೋವಿಂದ (ಎಲ್ಲ ಸಂತಸವನ್ನು ಅನುಗ್ರಹಿಸುವವನು), ಅಥವಾ ಮುಕುಂದ (ಮುಕ್ತಿಯನ್ನು ಕೊಡುವವನು), ಅಥವಾ ಕೃಷ್ಣ

(ಸರ್ವಾಕರ್ಷಕ)ನೊಂದಿಗೆ ಪ್ರೇಮಭಾವದಲ್ಲಿರುವ ಸಂತರು ಪುರುಷೋತ್ತಮನಿಗೆ ಸಮರ್ಪಣೆ ಮಾಡದೆ ಏನನ್ನೂ ಸ್ವೀಕರಿಸಲಾರರು. ಆದುದರಿಂದ ಇಂತಹ ಭಕ್ತರು ಶ್ರವಣ, ಕೀರ್ತನ, ಸ್ಮರಣ, ಅರ್ಚನ ಮೊದಲಾದ ವಿವಿಧ ರೀತಿಗಳ ಭಕ್ತಿಸೇವೆಗಳ ಯಜ್ಞಗಳನ್ನು ಸದಾ ಆಚರಿಸುತ್ತಿರುತ್ತಾರೆ. ಈ ಬಗೆಯ ಯಜ್ಞಗಳ ಆಚರಣೆಗಳು ಐಹಿಕ ಜಗತ್ತಿನಲ್ಲಿ ಪಾಪಮಯ ಸಹವಾಸದ ಎಲ್ಲ ಕಲ್ಮಷಗಳಿಂದ ಅವರನ್ನು ದೂರದಲ್ಲಿ ಇರಿಸುತ್ತವೆ. ತಮಗಾಗಿಯೇ ಅಥವಾ ಇಂದ್ರಿಯತೃಪ್ತಿಗಾಗಿಯೇ ಆಹಾರವನ್ನು ಮಾಡಿಕೊಳ್ಳುವವರು ಕಳ್ಳರು ಮಾತ್ರವಲ್ಲ, ಅವರು ಎಲ್ಲ ರೀತಿಗಳ ಪಾಪಗಳನ್ನು ತಿನ್ನುವವರು. ಕಳ್ಳನೂ ಪಾಪಿಯೂ ಆದ ಮನುಷ್ಯನು ಸುಖವಾಗಿರುವುದು ಹೇಗೆ ಸಾಧ್ಯ? ಇದು ಅಸಾಧ್ಯ. ಆದುದರಿಂದ ಜನರು ಎಲ್ಲ ರೀತಿಗಳಲ್ಲಿ ಸುಖವಾಗಿರಬೇಕಾದರೆ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಸಂಕೀರ್ತನ ಯಜ್ಞವನ್ನು ಮಾಡುವ ಸುಲಭವಾದ ಪ್ರಕ್ರಿಯೆಯನ್ನು ಅವರಿಗೆ ಹೇಳಿಕೊಡಬೇಕು. ಇಲ್ಲವಾದರೆ ಜಗತ್ತಿನಲ್ಲಿ ಶಾಂತಿಯಾಗಲಿ ಸುಖವಾಗಲಿ ಸಾಧ್ಯವಿಲ್ಲ.

## ಶ್ಲೋಕ - 14

**ಅನ್ನಾದ್ ಭವನ್ತಿ ಭೂತಾನಿ ಪರ್ಜನ್ಯಾದನ್ನಸಮ್ಭವಃ |**
**ಯಜ್ಞಾದ್ ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ||೧೪||**

**ಅನ್ನಾತ್**—ಧಾನ್ಯಗಳಿಂದ; **ಭವನ್ತಿ**—ಬೆಳೆಯುತ್ತವೆ; **ಭೂತಾನಿ**—ಭೌತಿಕ ದೇಹಗಳು; **ಪರ್ಜನ್ಯಾತ್**—ಮಳೆಯಿಂದ; **ಅನ್ನ**—ಆಹಾರ ಧಾನ್ಯಗಳ; **ಸಮ್ಭವಃ**—ಉತ್ಪತ್ತಿಯು; **ಯಜ್ಞಾತ್**—ಯಜ್ಞಾಚರಣೆಯಿಂದ; **ಭವತಿ**—ಸಾಧ್ಯವಾಗುತ್ತದೆ; **ಪರ್ಜನ್ಯಃ**—ಮಳೆಯು; **ಯಜ್ಞಃ**—ಯಜ್ಞಾಚರಣೆಯು; **ಕರ್ಮ**—ವಿಧ್ಯುಕ್ತ ಕರ್ತವ್ಯಗಳಿಂದ; **ಸಮುದ್ಭವಃ**—ಹುಟ್ಟುತ್ತದೆ.

### ಅನುವಾದ

**ಎಲ್ಲ ಜೀವಿಗಳು ಆಹಾರ ಧಾನ್ಯಗಳಿಂದ ಬದುಕುತ್ತವೆ. ಧಾನ್ಯಗಳನ್ನು ಮಳೆ ಉತ್ಪತ್ತಿಮಾಡುತ್ತದೆ. ಯಜ್ಞದ ಆಚರಣೆಯಿಂದ ಮಳೆಯಾಗುತ್ತದೆ. ಯಜ್ಞವು ನಿಯತ ಕರ್ಮಗಳಿಂದ ಉದ್ಭವಿಸುತ್ತದೆ.**

### ಭಾವಾರ್ಥ

ಭಗವದ್ಗೀತೆಯ ಮಹಾಭಾಷ್ಯಕಾರರಾದ ಶ್ರೀ ಬಲದೇವ ವಿದ್ಯಾಭೂಷಣರು ಹೀಗೆ ಬರೆಯುತ್ತಾರೆ — **ಯೇ ಇಂದ್ರಾದಿ ಅಂಗತಯಾವಸ್ಥಿತಂ ಯಜ್ಞಂ ಸರ್ವೇಶ್ವರಂ ವಿಷ್ಣುಮಭ್ಯರ್ಚ್ಯ ತಚ್ಛೇಷಮಶ್ನನ್ತಿ ತೇನ ತದ್ದೇಹಯಾತ್ರಾಂ ಸಮ್ಪಾದಯನ್ತಿ, ತೇ ಸನ್ತಃ ಸರ್ವೇಶ್ವರಸ್ಯ ಯಜ್ಞಪುರುಷಸ್ಯ ಭಕ್ತಾಃ ಸರ್ವಕಿಲ್ಬಿಷೈರನಾದಿ ಕಾಲ ವಿವೃದ್ಧೈರಾತ್ಮಾನುಭವ ಪ್ರತಿಬನ್ಧಕೈರ್ನಿಖಿಲೈಃ ಪಾಪೈರ್ವಿಮುಚ್ಯನ್ತೇ.** ಯಜ್ಞಪುರುಷನೆಂದು ಅಥವಾ ಎಲ್ಲ ಯಜ್ಞಗಳ ಭೋಕ್ತಾರನೆಂದು ವರ್ಣಿಸುವ ಭಗವಂತನು ಎಲ್ಲ ದೇವತೆಗಳ ಪ್ರಭು; ದೇಹದ ಅಂಗಾಂಗಗಳು ಇಡೀ ದೇಹವನ್ನು ಸೇವಿಸುವಂತೆ ದೇವತೆಗಳು ಭಗವಂತನನ್ನು ಸೇವಿಸುತ್ತಾರೆ. ಇಂದ್ರ, ಚಂದ್ರ ಮತ್ತು ವರುಣ ಮೊದಲಾದ ದೇವತೆಗಳು ಐಹಿಕ ವ್ಯವಹಾರಗಳನ್ನು ನಿರ್ವಹಿಸಲು ನೇಮಿತರಾದ ಅಧಿಕಾರಿಗಳು. ಆಹಾರ ಧಾನ್ಯಗಳನ್ನು ಉತ್ಪತ್ತಿಮಾಡಲು ಅಗತ್ಯವಾದಷ್ಟು ಗಾಳಿ, ಬೆಳಕು ಮತ್ತು ನೀರನ್ನು ಒದಗಿಸುವಂತೆ

ಈ ದೇವತೆಗಳು ಸುಪ್ರೀತರಾಗಲು ಯಜ್ಞಗಳನ್ನು ಮಾಡಬೇಕೆಂದು ವೇದಗಳು ನಿರ್ದೇಶಿಸುತ್ತವೆ. ಶ್ರೀಕೃಷ್ಣನನ್ನು ಅರ್ಚಿಸಿದಾಗ ಭಗವಂತನ ವಿವಿಧ ಅಂಗಾಂಗಗಳಾದ ದೇವತೆಗಳಿಗೆ ತಾನಾಗಿಯೇ ಅರ್ಚನೆಯಾಗುತ್ತದೆ. ಆದುದರಿಂದ ಈ ದೇವತೆಗಳನ್ನು ಪ್ರತ್ಯೇಕವಾಗಿ ಪೂಜೆಮಾಡುವ ಅಗತ್ಯವಿಲ್ಲ. ಈ ಕಾರಣಕ್ಕಾಗಿ ಕೃಷ್ಣಪ್ರಜ್ಞೆಯಲ್ಲಿರುವ ಭಗವದ್ಭಕ್ತರು ಆಹಾರವನ್ನು ಕೃಷ್ಣನಿಗೆ ಅರ್ಪಿಸಿ ತಾವು ತಿನ್ನುತ್ತಾರೆ - ಈ ಪ್ರಕ್ರಿಯೆಯು ದೇಹವನ್ನು ಆಧ್ಯಾತ್ಮಿಕವಾಗಿ ಪುಷ್ಟಿಗೊಳಿಸುತ್ತದೆ. ಇಂತಹ ಕರ್ಮವು ಹಿಂದಿನ ಪಾಪಕರ್ಮಫಲವನ್ನು ನಿವಾರಿಸುವುದು ಮಾತ್ರವಲ್ಲ, ದೇಹವು ಐಹಿಕ ಪ್ರಕೃತಿಯ ಎಲ್ಲ ಕಶ್ಮಲದ ಸೋಂಕಿನಿಂದ ರಕ್ಷಿತವಾಗುತ್ತದೆ. ಸಾಂಕ್ರಾಮಿಕ ರೋಗವು ತಲೆದೋರಿದಾಗ ಪೂತಿನಾಶಕ ಲಸಿಕೆಯು ಮನುಷ್ಯನನ್ನು ಅಂತಹ ರೋಗದ ಸೋಂಕಿನಿಂದ ಕಾಪಾಡುತ್ತದೆ. ಹಾಗೆಯೇ ವಿಷ್ಣುವಿಗೆ ನೈವೇದ್ಯ ಮಾಡಿ ಸ್ವೀಕರಿಸಿದ ಪ್ರಸಾದವು ಐಹಿಕ ಸೋಂಕಿನಿಂದ ನಮಗೆ ಸಾಕಷ್ಟು ರಕ್ಷಣೆಯನ್ನು ನೀಡುತ್ತದೆ. ಈ ರೂಢಿಯನ್ನು ಮಾಡಿಕೊಂಡವನನ್ನು ಭಗವದ್ಭಕ್ತನೆಂದು ಕರೆಯುತ್ತಾರೆ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿದ್ದು ಕೃಷ್ಣನ ಪ್ರಸಾದವನ್ನು ಮಾತ್ರ ಸ್ವೀಕರಿಸುವ ಮನುಷ್ಯನು ಹಿಂದಿನ ಎಲ್ಲ ಐಹಿಕ ಸೋಂಕುಗಳನ್ನು ಪ್ರತಿರೋಧಿಸಬಲ್ಲ. ಈ ಐಹಿಕ ಸೋಂಕುಗಳು ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಅಡ್ಡಿಗಳು. ಇದಕ್ಕೆ ಪ್ರತಿಯಾಗಿ, ಹೀಗೆ ನಡೆದುಕೊಳ್ಳದೆ ಇರುವವನು ಪಾಪಕರ್ಮದ ಗಾತ್ರವನ್ನು ಹೆಚ್ಚಿಸಿಕೊಳ್ಳುತ್ತ ಹೋಗುವನು. ಇದು, ಎಲ್ಲ ಪಾಪಕರ್ಮಗಳ ಫಲಗಳನ್ನು ಅನುಭವಿಸಲು, ಮುಂದಿನ ಜನ್ಮದಲ್ಲಿ ಹಂದಿ ನಾಯಿಗಳ ಶರೀರವನ್ನು ಸಿದ್ಧಗೊಳಿಸುತ್ತದೆ. ಕಶ್ಮಲಗಳ ಸೋಂಕಿನಿಂದ ಐಹಿಕ ಜಗತ್ತು ತುಂಬಿ ಹೋಗಿದೆ. ಭಗವಂತನ ಪ್ರಸಾದವನ್ನು ಸ್ವೀಕರಿಸಿ ಈ ಎಲ್ಲ ಸೋಂಕಿನಿಂದ ರಕ್ಷಣೆ ಪಡೆದವನು ರೋಗದ ದಾಳಿಯಿಂದ ತಪ್ಪಿ ಉಳಿಯುತ್ತಾನೆ. ಹೀಗೆ ಮಾಡದವನು ಸೋಂಕಿಗೆ ಗುರಿಯಾಗುತ್ತಾನೆ.

ಆಹಾರ ಧಾನ್ಯಗಳು ಅಥವಾ ತರಕಾರಿಗಳು ವಾಸ್ತವವಾಗಿ ಆಹಾರವೇ. ಮನುಷ್ಯನು ಬಗೆಬಗೆಯ ಆಹಾರ ಧಾನ್ಯಗಳು, ತರಕಾರಿಗಳು, ಹಣ್ಣುಗಳು ಮೊದಲಾದುವನ್ನು ತಿನ್ನುತ್ತಾನೆ. ಪ್ರಾಣಿಗಳು ಆಹಾರಧಾನ್ಯಗಳಲ್ಲಿ ಮತ್ತು ತರಕಾರಿಗಳಲ್ಲಿ ಉಳಿದ ಭಾಗ, ಹುಲ್ಲು, ಸಸ್ಯಗಳು ಮೊದಲಾದುವನ್ನು ತಿನ್ನುತ್ತವೆ. ಮಾಂಸಾಹಾರವನ್ನು ತಿನ್ನುವ ಮನುಷ್ಯರೂ, ಪ್ರಾಣಿಗಳನ್ನು ತಿನ್ನಲು ಸಸ್ಯಗಳ ಬೆಳೆಯನ್ನು ನೆಚ್ಚಬೇಕು. ಹೀಗೆ ಅಂತಿಮವಾಗಿ ನಾವು ಹೊಲದ ಉತ್ಪನ್ನವನ್ನೆ ನೆಚ್ಚಬೇಕು, ಕಾರ್ಖಾನೆಯ ಉತ್ಪನ್ನವನ್ನಲ್ಲ. ಆಹಾರದ ಉತ್ಪನ್ನವು ಆಕಾಶದಿಂದ ಬೀಳುವ ಮಳೆಯಿಂದ ಆಗುವುದು; ಮಳೆಯನ್ನು ಇಂದ್ರ, ಸೂರ್ಯ, ಚಂದ್ರ ಮೊದಲಾದ ದೇವತೆಗಳು ನಿಯಂತ್ರಿಸುತ್ತಾರೆ. ಅವರೆಲ್ಲರೂ ಭಗವಂತನ ಸೇವಕರು. ಭಗವಂತನು ಯಜ್ಞಗಳಿಂದ ಸುಪ್ರೀತನಾಗುತ್ತಾನೆ. ಆದುದರಿಂದ, ಯಜ್ಞಗಳನ್ನು ಮಾಡಲಾರದವನಿಗೆ ಅಭಾವವೇ ಗತಿ. ಇದು ನಿಸರ್ಗದ ನಿಯಮ. ಆದುದರಿಂದ, ನಮಗೆ ಆಹಾರದ ಅಭಾವವುಂಟಾಗದಂತೆ ಕಾಪಾಡಿಕೊಳ್ಳುವುದಕ್ಕಾಗಿಯಾದರೂ ಯಜ್ಞವನ್ನು, ವಿಶೇಷವಾಗಿ ಈ ಯುಗಕ್ಕೆ ನಿಯತಮಾಡಿರುವ ಸಂಕೀರ್ತನ ಯಜ್ಞವನ್ನು ಮಾಡಬೇಕು.

## ಶ್ಲೋಕ - 15

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥**

**ಕರ್ಮ**—ಕರ್ಮವು; **ಬ್ರಹ್ಮ**—ವೇದಗಳಿಂದ; **ಉದ್ಭವಮ್**—ಉತ್ಪತ್ತಿಯಾಗಿದೆ ಎಂದು; **ವಿದ್ಧಿ**—ನೀನು ತಿಳಿಯಬೇಕು; **ಬ್ರಹ್ಮ**—ವೇದಗಳು; **ಅಕ್ಷರ**—ಪರಬ್ರಹ್ಮನಿಂದ (ದೇವೋತ್ತಮ ಪುರುಷನಿಂದ); **ಸಮುದ್ಭವಮ್**—ಸಾಕ್ಷಾತ್ತಾಗಿ ವ್ಯಕ್ತವಾಗಿವೆ; **ತಸ್ಮಾತ್**—ಆದ್ದರಿಂದ; **ಸರ್ವ ಗತಮ್**—ಸರ್ವವ್ಯಾಪ್ತನಾದ; **ಬ್ರಹ್ಮ**—ದಿವ್ಯನು; **ನಿತ್ಯಮ್**—ಶಾಶ್ವತವಾಗಿ; **ಯಜ್ಞೇ**—ಯಜ್ಞದಲ್ಲಿ; **ಪ್ರತಿಷ್ಠಿತಮ್**—ನೆಲೆಸಿದ್ದಾನೆ.

## ಅನುವಾದ

**ವೇದಗಳಲ್ಲಿ, ನಿಯಂತ್ರಿತವಾದ ಕರ್ಮಗಳನ್ನು ವಿಧಿಸಿದೆ. ವೇದಗಳು ದೇವೋತ್ತಮ ಪರಮ ಪುರುಷನಿಂದ ನೇರವಾಗಿ ವ್ಯಕ್ತವಾಗಿವೆ. ಆದುದರಿಂದ ಸರ್ವಾಂತರ್ಯಾಮಿ ಪರಬ್ರಹ್ಮನು ನಿತ್ಯವಾಗಿ ಯಜ್ಞಕರ್ಮಗಳಲ್ಲಿ ಪ್ರತಿಷ್ಠಿತನಾಗಿರುತ್ತಾನೆ.**

## ಭಾವಾರ್ಥ

ಈ ಶ್ಲೋಕದಲ್ಲಿ **ಯಜ್ಞಾರ್ಥಕರ್ಮ**ವನ್ನು ಎಂದರೆ ಕೃಷ್ಣನೊಬ್ಬನ ಸುಪ್ರೀತಿಗಾಗಿಯೇ ಕರ್ಮಮಾಡುವ ಅಗತ್ಯವನ್ನು ಇನ್ನೂ ಸ್ಪಷ್ಟವಾಗಿ ಹೇಳಿದೆ. ಯಜ್ಞಪುರುಷನಾದ ವಿಷ್ಣುವನ್ನು ಪ್ರಸನ್ನಗೊಳಿಸಲು ನಾವು ಕರ್ಮವನ್ನು ಮಾಡಬೇಕಾದರೆ ಬ್ರಹ್ಮನಲ್ಲಿ ಅಥವಾ ಅಲೌಕಿಕ ವೇದಗಳಲ್ಲಿ ಕರ್ಮದ ದಿಕ್ಕನ್ನು ಕಂಡುಕೊಳ್ಳಬೇಕು. ಆದುದರಿಂದ ವೇದಗಳು ಕರ್ಮದ ದಿಗ್ದರ್ಶನದ ಸಂಹಿತೆಗಳು. ವೇದಗಳ ದಿಗ್ದರ್ಶನವಿಲ್ಲದೆ ಏನನ್ನು ಮಾಡಿದರೂ ಅದಕ್ಕೆ **ವಿಕರ್ಮ** ಅಥವಾ ಅನಧಿಕೃತ ಅಥವಾ ಪಾಪಕರವಾದ ಕರ್ಮ ಎಂದು ಹೆಸರು. ಆದುದರಿಂದ ಕರ್ಮಫಲದಿಂದ ಉದ್ಧಾರವಾಗಲು ನಾವು ಯಾವಾಗಲೂ ವೇದಗಳ ಮಾರ್ಗದರ್ಶನವನ್ನು ಪಡೆಯಬೇಕು. ಸಾಮಾನ್ಯ ಜೀವನದಲ್ಲಿ ಹೇಗೆ ರಾಜ್ಯವು ಮಾರ್ಗದರ್ಶನ ಮಾಡಿದಂತೆ ಮನುಷ್ಯನು ಕೆಲಸ ಮಾಡಬೇಕಾಗುತ್ತದೆಯೋ ಹಾಗೆಯೇ ಭಗವಂತನ ಪರಮ ಸಾಮ್ರಾಜ್ಯದ ಮಾರ್ಗದರ್ಶನದಲ್ಲಿ ಕೆಲಸಮಾಡಬೇಕಾಗುತ್ತದೆ. ವೇದಗಳಲ್ಲಿ ಇಂತಹ ಮಾರ್ಗದರ್ಶನಗಳು ದೇವೋತ್ತಮ ಪರಮ ಪುರುಷನ ಉಸಿರಿನಿಂದ ನೇರವಾಗಿ ಅಭಿವ್ಯಕ್ತಿ ಪಡೆಯುತ್ತವೆ. **ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ ಯದ್ ಋಗ್ವೇದೋ ಯಜುರ್ ವೇದಃ ಸಾಮವೇದೋಽಥರ್ವಾಂಗಿರಸಃ.** "ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಈ ನಾಲ್ಕು ವೇದಗಳು ದೇವೋತ್ತಮ ಪರಮ ಪುರುಷನ ಉಸಿರಿನಿಂದ ಮೂಡಿಬಂದಿವೆ." (ಬೃಹದಾರಣ್ಯಕ ಉಪನಿಷತ್ತು 4.5.11). ಸರ್ವಶಕ್ತನಾದ ಭಗವಂತನು ವಾಯುವನ್ನು ಉಸಿರಾಡಿ ಮಾತನಾಡಬಲ್ಲ. ಬ್ರಹ್ಮಸಂಹಿತೆಯಲ್ಲಿ ದೃಢಪಡಿಸಿರುವಂತೆ ಭಗವಂತನು ತನ್ನ ಪ್ರತಿಯೊಂದು ಇಂದ್ರಿಯದ ಮೂಲಕ ಇತರ ಎಲ್ಲ ಇಂದ್ರಿಯಗಳ ಕೆಲಸ ಮಾಡಬಲ್ಲ. ಎಂದರೆ ಭಗವಂತನು ತನ್ನ ಉಸಿರಿನಿಂದ ಮಾತನಾಡಬಲ್ಲ ಮತ್ತು ಆತನು ಕಣ್ನೋಟದಿಂದ ಗರ್ಭಾಧಾನ ಮಾಡಬಲ್ಲ. ಆತನು ಐಹಿಕ ನಿಸರ್ಗದ ಮೇಲೆ ಕಣ್ಣಾಡಿಸಿದ, ಹಾಗೆ ಎಲ್ಲ ಜೀವಿಗಳನ್ನೂ ಸೃಷ್ಟಿಸಿದ ಎಂದು ಹೇಳಿದೆ. ಐಹಿಕ ನಿಸರ್ಗದ ಗರ್ಭದಲ್ಲಿ ಎಲ್ಲ ಬದ್ಧಾತ್ಮರನ್ನು ಸೃಷ್ಟಿಸಿದ ಅನಂತರ ಅಥವಾ ಉತ್ಪತ್ತಿಮಾಡಿದನಂತರ ಆತನು ಇಂತಹ ಬದ್ಧಾತ್ಮರು ಮತ್ತೆ ಭಗವದ್ಧಾಮಕ್ಕೆ ಹೇಗೆ ಮರಳಬಹುದು ಎನ್ನುವುದಕ್ಕೆ ಮಾರ್ಗದರ್ಶನವನ್ನು ವೇದಗಳ ಜ್ಞಾನದಲ್ಲಿ ನೀಡಿದ. ಐಹಿಕ ನಿಸರ್ಗದಲ್ಲಿನ ಎಲ್ಲ ಆತ್ಮಗಳು ಐಹಿಕ ಸುಖಾನುಭವಕ್ಕೆ ಹಾತೊರೆಯುತ್ತಿರುತ್ತಾರೆ

ಎನ್ನುವುದನ್ನು ನಾವು ಸದಾ ನೆನಪಿಡಬೇಕು. ಮನುಷ್ಯನು ತನ್ನ ಅಡ್ಡಮಾರ್ಗದ ಆಸೆಗಳನ್ನು ತೃಪ್ತಿಪಡಿಸಿಕೊಂಡು, ಸುಖಾನುಭವ ಎನ್ನಿಸಿಕೊಳ್ಳುವ ಅನುಭವವನ್ನು ಮುಗಿಸಿಕೊಂಡು ಭಗವದ್ಧಾಮಕ್ಕೆ ಹಿಂದಿರುಗುವುದು ವೇದದ ನಿರ್ದೇಶನಗಳಿಂದ ಸಾಧ್ಯವಾಗುತ್ತದೆ. ಬದ್ಧಾತ್ಮಗಳಿಗೆ ಮುಕ್ತಿಯನ್ನು ಸಾಧಿಸಲು ಇದು ಒಂದು ಅವಕಾಶ. ಆದುದರಿಂದ ಬದ್ಧಾತ್ಮಗಳು ಕೃಷ್ಣಪ್ರಜ್ಞೆಯ ಮೂಲಕ ಯಜ್ಞದ ಪ್ರಕ್ರಿಯೆಯ ನ್ನು ಅನುಸರಿಸಲು ಪ್ರಯತ್ನಿಸಬೇಕು. ವೇದಗಳ ಆಜ್ಞೆಗಳನ್ನು ಅನುಸರಿಸದೆ ಇರುವವರು ಸಹ ಕೃಷ್ಣಪ್ರಜ್ಞೆಯ ತತ್ವಗಳನ್ನು ಸ್ವೀಕರಿಸಬಹುದು. ಇದು ವೈದಿಕ ಯಜ್ಞಗಳ ಅಥವಾ ವೈದಿಕ ಕರ್ಮಗಳ ಆಚರಣೆಗೆ ಬದಲಾಗಿ ಸ್ಥಾನವನ್ನು ಪಡೆಯುತ್ತದೆ.

## ಶ್ಲೋಕ - 16

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |**
**ಅಘಾಯುರಿನ್ದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ||೧೬||**

**ಏವಂ**—ಹೀಗೆ; **ಪ್ರವರ್ತಿತಮ್**—ವೇದಗಳಿಂದ ಸ್ಥಾಪಿತವಾದ; **ಚಕ್ರಮ್**—ಚಕ್ರವನ್ನು; **ನ ಅನುವರ್ತಯತಿ**—ಅನುಸರಿಸುವುದಿಲ್ಲವೋ; **ಇಹ**—ಈ ಜೀವನದಲ್ಲಿ; **ಯಃ**—ಯಾರು; **ಅಘ ಆಯುಃ**—ಪಾಪಭರಿತ ಬದುಕಿನವನು; **ಇನ್ದ್ರಿಯ ಆರಾಮಃ**—ಇಂದ್ರಿಯ ತೃಪ್ತಿಯಲ್ಲಿಯೇ ಸಂತೃಪ್ತನಾದ; **ಮೋಘಮ್**—ವ್ಯರ್ಥವಾಗಿ; **ಪಾರ್ಥ**—ಪೃಥೆಯ ಮಗನೇ; **ಸಃ**—ಅವನು; **ಜೀವತಿ**— ಬದುಕುತ್ತಾನೆ.

### ಅನುವಾದ

**ಅರ್ಜುನ, ವೇದಗಳು ಪ್ರವರ್ತಿಸಿದ ಈ ಯಜ್ಞಚಕ್ರವನ್ನು ಯಾರು ಮಾನವ ಜೀವನದಲ್ಲಿ ಅನುಸರಿಸುವುದಿಲ್ಲವೋ ಅವರದು ನಿಶ್ಚಯವಾಗಿ ಪಾಪವೇ ತುಂಬಿದ ಬದುಕು. ಇಂದ್ರಿಯಗಳ ತೃಪ್ತಿಗಾಗಿಯೇ ಬದುಕುವ ಇಂತಹ ಮನುಷ್ಯನ ಬದುಕು ವ್ಯರ್ಥ.**

### ಭಾವಾರ್ಥ

"ಕಷ್ಟಪಟ್ಟು ದುಡಿಯಿರಿ, ಇಂದ್ರಿಯ ಸುಖ ಪ ಡೆಯಿರಿ" ಎನ್ನುವ ಧನಪಿಶಾಚಿಯ ಚಿಂತನರೀತಿಯನ್ನು ಇಲ್ಲಿ ಭಗವಂತನು ಖಂಡಿಸುತ್ತಾನೆ. ಆದುದರಿಂದ ಈ ಐಹಿಕ ಜಗತ್ತನ್ನು ಸವಿಯಲು ಬಯಸುವವರಿಗೆ ಮೇಲೆ ಹೇಳಿದ ಯಜ್ಞಾಚರಣೆಯ ಚಕ್ರವು ತೀರ ಅಗತ್ಯ. ಇಂತಹ ನಿಯಮಗಳನ್ನು ಪಾಲಿಸದಿರುವವನು ಹೆಚ್ಚು ಹೆಚ್ಚು ಶಿಕ್ಷೆಗೆ ಒಳಗಾಗುತ್ತ ಬಹು ಅಪಾಯದ ಬದುಕನ್ನು ನಡೆಸುತ್ತಾನೆ. ನಿಸರ್ಗದ ನಿಯಮದಂತೆ, ಈ ಮನುಷ್ಯ ಜನ್ಮದ ನಿರ್ದಿಷ್ಟ ಉದ್ದೇಶವು ಆತ್ಮಸಾಕ್ಷಾತ್ಕಾರ. ಇದನ್ನು ಸಾಧಿಸಲು ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗಗಳಲ್ಲಿ ಒಂದು ಮಾರ್ಗವನ್ನು ಅನುಸರಿಸಬಹುದು. ಪಾಪ-ಪುಣ್ಯಗಳನ್ನು ಮೀರಿದ ಆಧ್ಯಾತ್ಮಿಕವಾದಿಗೆ ನಿಯಮಿತ ಯಜ್ಞಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಅಗತ್ಯವಿಲ್ಲ. ಆದರೆ ಇಂದ್ರಿಯತೃಪ್ತಿಯಲ್ಲಿ ನಿರತರಾಗಿರುವವರು ಮೇಲೆ ಹೇಳಿದ ಯಜ್ಞಚಕ್ರದ ಆಚರಣೆಯಿಂದ ಪರಿಶುದ್ಧರಾಗಬೇಕು. ಕಾರ್ಯಗಳಲ್ಲಿ ಬೇರೆಬೇರೆ ರೀತಿಗಳುಂಟು. ಕೃಷ್ಣಪ್ರಜ್ಞೆಯಲ್ಲಿ ನಿರತರಾಗದೆ ಇರುವವರು ಖಂಡಿತವಾಗಿಯೂ ಇಂದ್ರಿಯ ಪ್ರಜ್ಞೆಯಲ್ಲಿ ನಿರತರಾಗಿರುತ್ತಾರೆ. ಆದುದರಿಂದ ಅವರು

ಪುಣ್ಯಕಾರ್ಯವನ್ನು ಮಾಡಬೇಕು. ಇಂದ್ರಿಯ ಪ್ರಜ್ಞೆ ಇರುವವರು ಇಂದ್ರಿಯತೃಪ್ತಿಯ ಪ್ರತಿಕ್ರಿಯೆಗೆ ಸಿಕ್ಕಿಕೊಳ್ಳದೆ ತಮ್ಮ ಬಯಕೆಗಳನ್ನು ತೃಪ್ತಿಗೊಳಿಸುವುದು ಸಾಧ್ಯವಾಗುವಂತೆ ಯಜ್ಞವ್ಯವಸ್ಥೆಯ ಯೋಜನೆಯಾಗಿದೆ. ಜಗತ್ತಿನ ಕಲ್ಯಾಣವು ನಮ್ಮ ಪ್ರಯತ್ನಗಳನ್ನು ಅವಲಂಬಿಸಿಲ್ಲ. ದೇವತೆಗಳು ನೇರವಾಗಿ ಕಾರ್ಯಗತ ಮಾಡುವ ಭಗವಂತನ ಹಿನ್ನೆಲೆಯ ಜೋಡಣೆಯನ್ನು ಅವಲಂಬಿಸಿದೆ. ಆದುದರಿಂದಲೇ ಯಜ್ಞಗಳನ್ನು ವೇದಗಳಲ್ಲಿ ಹೇಳಿರುವ ದೇವತೆಗಳಿಗೇ ನೇರವಾಗಿ ನಿರ್ದೇಶಿಸಲಾಗಿದೆ. ಇದು ಪರೋಕ್ಷವಾಗಿ ಕೃಷ್ಣಪ್ರಜ್ಞೆಯ ಆಚರಣೆಯೇ. ಏಕೆಂದರೆ ಯಜ್ಞಗಳ ಆಚರಣೆಯನ್ನು ಯಾರು ಸಂಪೂರ್ಣವಾಗಿ ಕಲಿಯುತ್ತಾರೊ ಅವರು ಕೃಷ್ಣಪ್ರಜ್ಞೆಯುಳ್ಳವರಾಗುವುದು ನಿಶ್ಚಯ. ಆದರೆ ಯಜ್ಞಗಳನ್ನು ನಡೆಸಿದ ಮನುಷ್ಯನಿಗೆ ಕೃಷ್ಣಪ್ರಜ್ಞೆಯು ಬಾರದೆ ಹೋದರೆ ಅಂತಹ ತತ್ವಗಳನ್ನು ನೀತಿಸಂಹಿತೆಗಳೆಂದೇ ಪರಿಗಣಿಸಲಾಗುತ್ತದೆ. ಆದುದರಿಂದ ಯಾವ ಮನುಷ್ಯನೂ ತನ್ನ ಮುನ್ನಡೆಯನ್ನು ನೀತಿಸಂಹಿತೆಗಳ ಎಲ್ಲೆಗೆ ಸೀಮಿತಗೊಳಿಸಬಾರದು. ಅದನ್ನು ಮೀರಿ ಕೃಷ್ಣಪ್ರಜ್ಞೆಯನ್ನು ಸಾಧಿಸಬೇಕು.

## ಶ್ಲೋಕ - 17

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ |**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ||೧೭||**

**ಯಃ**—ಯಾವ; **ತು**—ಆದರೆ; **ಆತ್ಮ ರತಿಃ**—ಆತ್ಮನಲ್ಲಿ ಸುಖಪಡೆಯುವವನಾಗಿ; **ಏವ**—ಖಂಡಿತವಾಗಿಯೂ; **ಸ್ಯಾತ್**—ಇರುತ್ತಾನೋ; **ಆತ್ಮ ತೃಪ್ತಃ**—ಆತ್ಮ ಪ್ರಕಾಶಿತನಾಗಿ; **ಚ**—ಮತ್ತು; **ಮಾನವಃ**—ಮನುಷ್ಯನು; **ಆತ್ಮನಿ**—ತನ್ನಲ್ಲಿ; **ಏವ**—ಮಾತ್ರ; **ಚ**—ಮತ್ತು; **ಸಂತುಷ್ಟಃ**—ಪೂರ್ಣತೃಪ್ತನಾಗಿ; **ತಸ್ಯ**—ಅವನಿಗೆ; **ಕಾರ್ಯಮ್**—ಕರ್ತವ್ಯವು; **ನ ವಿದ್ಯತೇ**—ಇರುವುದಿಲ್ಲ.

### ಅನುವಾದ

**ಯಾವ ಮನುಷ್ಯನು ಆತ್ಮದಲ್ಲಿಯೇ ಸಂತೋಷವನ್ನು ಕಂಡುಕೊಳ್ಳುವನೋ, ಯಾರ ಮನುಷ್ಯ ಜನ್ಮವು ಆತ್ಮಸಾಕ್ಷಾತ್ಕಾರದ ಬದುಕಾಗಿದೆಯೋ, ಯಾರು ಆತ್ಮನಲ್ಲಿಯೇ ಸಂತುಷ್ಟನಾಗಿರುವನೋ ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ.**

### ಭಾವಾರ್ಥ

ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಿದ್ದು ಕೃಷ್ಣಪ್ರಜ್ಞೆಯಲ್ಲಿ ತಾನು ಮಾಡುವ ಕಾರ್ಯಗಳಲ್ಲಿ ಸಂಪೂರ್ಣವಾಗಿ ಸಂತುಷ್ಟನಾದವನು ಮಾಡಬೇಕಾದ ಯಾವ ಕರ್ತವ್ಯವೂ ಇರುವುದಿಲ್ಲ. ಅವನಿಗೆ ಕೃಷ್ಣಪ್ರಜ್ಞೆ ಇರುವುದರಿಂದ ಒಳಗಿನ ಕಲ್ಮಷವೆಲ್ಲ ಒಂದೇಕ್ಷಣದಲ್ಲಿ ತೊಡೆದುಹೋಗುತ್ತದೆ; ಇದು ಸಹಸ್ರ ಸಹಸ್ರ ಯಜ್ಞಗಳ ಆಚರಣೆಯಿಂದ ಉಂಟಾಗುವ ಪರಿಣಾಮ. ಹೀಗೆ ಪ್ರಜ್ಞೆಯು ಶುದ್ಧವಾಗುವುದರಿಂದ ಮನುಷ್ಯನು ಪರಮ ಪ್ರಭುವಿನೊಂದಿಗೆ ತನ್ನ ನಿತ್ಯ ಸಂಬಂಧವನ್ನು ಕುರಿತು ಸಂಪೂರ್ಣವಾಗಿ ಭರವಸೆಯನ್ನು ಹೊಂದುತ್ತಾನೆ. ಭಗವಂತನ ಕೃಪೆಯಿಂದ ಅವನ ಕರ್ತವ್ಯವು ತಾನಾಗಿ ಗೋಚರವಾಗುತ್ತದೆ. ಆದುದರಿಂದ ಅವನಿಗೆ ವೇದಗಳ ಅಪ್ಪಣೆಗಳನ್ನು ಪರಿಪಾಲಿಸುವ

ಕರ್ತವ್ಯ ಇರುವುದಿಲ್ಲ. ಹೀಗೆ ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಐಹಿಕ ಕರ್ಮಗಳಲ್ಲಿ ಆಸಕ್ತಿ ಇರುವುದಿಲ್ಲ. ಆತನು ಮದ್ಯ, ಸ್ತ್ರೀ ಮತ್ತು ಇಂತಹ ಮೋಹಗಳ ಐಹಿಕ ಆಕರ್ಷಣೆಗಳಲ್ಲಿ ಸಂತೋಷವನ್ನು ಪಡೆಯುವುದಿಲ್ಲ.

## ಶ್ಲೋಕ - 18

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ |**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ||೧೮||**

**ನ**—ಎಂದಿಗೂ ಇಲ್ಲ; **ಏವ**—ಖಂಡಿತವಾಗಿಯೂ; **ತಸ್ಯ**—ಅವನ; **ಕೃತೇನ**—ಕರ್ತವ್ಯ ನಿರ್ವಹಣೆಯಿಂದ; **ಅರ್ಥಃ**—ಉದ್ದೇಶವು; **ನ**—ಇಲ್ಲ; **ಅಕೃತೇನ**—ಕರ್ತವ್ಯವನ್ನು ನಿರ್ವಹಿಸದಿರುವುದರಿಂದ; **ಇಹ**—ಈ ಪ್ರಪಂಚದಲ್ಲಿ; **ಕಶ್ಚನ**—ಯಾವುದಾದರೂ; **ನ**—ಎಂದಿಗೂ ಇಲ್ಲ; **ಚ**—ಮತ್ತು; **ಅಸ್ಯ**—ಅವನ; **ಸರ್ವ ಭೂತೇಷು**—ಎಲ್ಲ ಜೀವಿಗಳಲ್ಲಿಯೂ; **ಕಶ್ಚಿತ್**—ಯಾವುದೇ; **ಅರ್ಥ**—ಉದ್ದೇಶವು; **ವ್ಯಪಾಶ್ರಯಃ**—ಆಶ್ರಯವನ್ನು ಪಡೆದ.

### ಅನುವಾದ

**ಆತ್ಮಸಾಕ್ಷಾತ್ಕಾರವನ್ನು ಸಾಧಿಸಿದವನಿಗೆ ನಿಯಮಿತ ಕರ್ಮಗಳ ಅನುಷ್ಠಾನದಲ್ಲಿ ಯಾವ ಉದ್ದೇಶವೂ ಇರುವುದಿಲ್ಲ. ಅಂತಹ ಕರ್ಮವನ್ನು ಮಾಡದೇ ಇರಲು ಅವನಿಗೆ ಯಾವುದೇ ಕಾರಣವಿರುವುದಿಲ್ಲ. ಆತನು ಬೇರೊಬ್ಬ ಜೀವಿಯನ್ನು ಅವಲಂಬಿಸಲು ಕಾರಣವೂ ಇರುವುದಿಲ್ಲ.**

### ಭಾವಾರ್ಥ

ಆತ್ಮಸಾಕ್ಷಾತ್ಕಾರವಾದ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿನ ಚಟುವಟಿಕೆಗಳನ್ನು ಬಿಟ್ಟು ಬೇರೆ ಯಾವ ನಿಯಮಿತ ಕರ್ತವ್ಯವನ್ನು ಮಾಡುವ ಅಗತ್ಯವೂ ಇಲ್ಲ. ಮುಂದಿನ ಶ್ಲೋಕಗಳಲ್ಲಿ ವಿವರಿಸುವಂತೆ ಕೃಷ್ಣಪ್ರಜ್ಞೆ ಎಂದರೆ ಜಡತ್ವವಲ್ಲ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಬೇರೆ ಯಾವುದೇ ವ್ಯಕ್ತಿಯ, ಯಾವುದೇ ಮನುಷ್ಯನ ಅಥವಾ ದೇವತೆಯ ಆಶ್ರಯವನ್ನು ಪಡೆಯುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಆತನು ಏನು ಮಾಡುತ್ತಾನೆಯೋ ಅಷ್ಟರಿಂದಲೇ ಅವನ ಕರ್ತವ್ಯ ಪಾಲನೆಯಾಗುತ್ತದೆ.

## ಶ್ಲೋಕ - 19

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ |**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ||೧೯||**

**ತಸ್ಮಾತ್**—ಆದ್ದರಿಂದ; **ಅಸಕ್ತಃ**—ಅನಾಸಕ್ತನಾಗಿ; **ಸತತಂ**—ನಿರಂತರವಾಗಿ; **ಕಾರ್ಯಮ್**—ಕರ್ತವ್ಯವೆಂದು; **ಕರ್ಮ**—ಕರ್ಮವನ್ನು; **ಸಮಾಚರ**—ಆಚರಿಸು; **ಅಸಕ್ತಃ**—ಅನಾಸಕ್ತನಾಗಿ; **ಹಿ**—ಖಂಡಿತವಾಗಿಯೂ; **ಆಚರನ್**—ಆಚರಿಸುತ್ತ; **ಕರ್ಮ**—ಕರ್ಮವನ್ನು; **ಪರಮ್**—ಪರಮೋನ್ನತನನ್ನು; **ಆಪ್ನೋತಿ**—ಹೊಂದುತ್ತಾನೆ; **ಪೂರುಷಃ**—ಮನುಷ್ಯನು.

## ಅನುವಾದ

**ಆದುದರಿಂದ ಕರ್ಮಫಲದಲ್ಲಿ ಆಸಕ್ತಿಇಲ್ಲದೆ, ಕರ್ತವ್ಯವೆಂದು ಕರ್ಮವನ್ನು ಮಾಡಬೇಕು. ಅನಾಸಕ್ತ ಕರ್ಮದಿಂದ ಮನುಷ್ಯನು ಪರಮ ಪ್ರಭುವನ್ನು ಹೊಂದಬಹುದು.**

## ಭಾವಾರ್ಥ

ಭಕ್ತರಿಗೆ ದೇವೋತ್ತಮ ಪುರುಷನು ಪರಾತ್ಪರ; ಮಾಯಾವಾದಿಗಳಿಗೆ ಮುಕ್ತಿ. ಆದುದರಿಂದ ಯೋಗ್ಯ ಮಾರ್ಗದರ್ಶನ ಪಡೆದು ಕೃಷ್ಣನಿಗಾಗಿ ಅಥವಾ ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುತ್ತಾ ಕರ್ಮಫಲದ ಬಗ್ಗೆ ನಿರ್ಲಿಪ್ತನಾಗಿರುವವನು ನಿಶ್ಚಯವಾಗಿಯೂ ಬದುಕಿನ ಪರಮ ಗುರಿಯತ್ತ ಮುನ್ನಡೆಯುತ್ತಿದ್ದಾನೆ. ಅರ್ಜುನನು ಯುದ್ಧಮಾಡಬೇಕೆಂದು ಕೃಷ್ಣನು ಅಪೇಕ್ಷಿಸಿದುದರಿಂದ ಕೃಷ್ಣನಿಗಾಗಿ ಕುರುಕ್ಷೇತ್ರದಲ್ಲಿ ಯುದ್ಧಮಾಡಬೇಕೆಂದು ಅವನಿಗೆ ಹೇಳಲಾಗುತ್ತಿದೆ. ಒಳ್ಳೆಯ ಮನುಷ್ಯನಾಗಿರುವುದು ಅಥವಾ ಅಹಿಂಸಾನಿಷ್ಠನಾಗಿರುವುದು ವೈಯಕ್ತಿಕ ಆಸಕ್ತಿ; ಆದರೆ ಪರಾತ್ಪರದ ಪರವಾಗಿ ಕಾರ್ಯತತ್ಪರನಾಗುವುದು ನಿಷ್ಕಾಮಕರ್ಮ. ಇದು ಅತ್ಯಂತ ಶ್ರೇಷ್ಠ ರೀತಿಯ ಪರಿಪೂರ್ಣ ಕರ್ಮ; ಇದನ್ನೇ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನು ಪ್ರತಿಪಾದಿಸುವುದು.

ನಿಯಮಿತ ಯಜ್ಞಗಳಂತೆ, ವೈದಿಕ ಆಚರಣೆಗಳ ಉದ್ದೇಶವೂ ಇಂದ್ರಿಯತೃಪ್ತಿಗಾಗಿ ಮಾಡಿದ ಪಾಪಕರ್ಮಗಳಿಂದ ಪರಿಶುದ್ಧರಾಗುವುದು. ಆದರೆ ಕೃಷ್ಣಪ್ರಜ್ಞೆಯಿಂದ ಮಾಡಿದ ಕೆಲಸವು ಒಳ್ಳೆಯ ಕರ್ಮ ಅಥವಾ ಕೆಟ್ಟಕರ್ಮಗಳ ಫಲವನ್ನು ಮೀರಿದ್ದು, ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಫಲಾಸಕ್ತಿ ಇಲ್ಲ. ಅವನು ಕೃಷ್ಣನಿಗಾಗಿಯೇ ಕಾರ್ಯನಿರತನಾಗುತ್ತಾನೆ. ಅವನು ಎಲ್ಲ ಬಗೆಯ ಕಾರ್ಯಗಳಲ್ಲಿ ತೊಡಗುತ್ತಾನೆ. ಆದರೆ ಸಂಪೂರ್ಣವಾಗಿ ನಿರ್ಲಿಪ್ತನಾಗಿರುತ್ತಾನೆ.

## ಶ್ಲೋಕ - 20

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ |**
**ಲೋಕಸಙ್ಗ್ರಹಮೇವಾಪಿ ಸಮ್ಪಶ್ಯನ್ ಕರ್ತುಮರ್ಹಸಿ ||೨೦||**

**ಕರ್ಮಣಾ**—ಕರ್ಮದಿಂದ; **ಏವ**—ಕೂಡ; **ಹಿ**—ನಿಶ್ಚಯವಾಗಿಯೂ; **ಸಂಸಿದ್ಧಿಮ್**—ಪರಿಪೂರ್ಣತೆಯನ್ನು; **ಆಸ್ಥಿತಾಃ**—ಪಡೆದರು; **ಜನಕ ಆದಯಃ**—ಜನಕ ಮತ್ತು ಇತರ ರಾಜರು; **ಲೋಕ ಸಂಗ್ರಹಮ್**—ಜನ ಸಾಮಾನ್ಯರನ್ನು; **ಏವ ಅಪಿ**—ಕೂಡ; **ಸಂಪಶ್ಯನ್**—ಪರಿಭಾವಿಸಿ; **ಕರ್ತುಮ್**—ವರ್ತಿಸಲು; **ಅರ್ಹಸಿ**—ಅರ್ಹನಾಗುತ್ತೀಯೆ.

## ಅನುವಾದ

**ಜನಕನಂತಹ ರಾಜರು ನಿಯಮಿತ ಕರ್ಮಗಳನ್ನು ಮಾಡುವುದರಿಂದಲೇ ಪರಿಪೂರ್ಣತೆಯನ್ನು ಪಡೆದರು. ಆದುದರಿಂದ ಜನಸಾಮಾನ್ಯರಿಗೆ ಶಿಕ್ಷಣ ನೀಡುವುದಕ್ಕಾಗಿ ನೀನು ನಿನ್ನ ಕೆಲಸವನ್ನು ಮಾಡಬೇಕು.**

### ಭಾವಾರ್ಥ

ಜನಕನಂತಹ ರಾಜರು ಆತ್ಮಸಾಕ್ಷಾತ್ಕಾರ ಪಡೆದವರು. ಆದುದರಿಂದ ವೇದಗಳಲ್ಲಿ ಹೇಳಿದ ಕರ್ತವ್ಯಗಳನ್ನು ಅವರು ಮಾಡಬೇಕಾಗಿರಲಿಲ್ಲ. ಆದರೂ ಜನಸಾಮಾನ್ಯರಿಗೆ ಮೇಲ್ಪಂಕ್ತಿಯಾಗಲು ಅವರು ಎಲ್ಲ ನಿಯಮಿತ ಕರ್ತವ್ಯಗಳನ್ನು ಮಾಡಿದರು. ಜನಕನು ಸೀತೆಯ ತಂದೆ ಮತ್ತು ಶ್ರೀರಾಮನ ಮಾವ. ಭಗವಂತನ ಮಹಾಭಕ್ತನಾದುದರಿಂದ ಆತನು ಆಧ್ಯಾತ್ಮಿಕ ನೆಲೆಯಲ್ಲಿದ್ದನು. ಆದರೆ (ಭಾರತದ ಬಿಹಾರ್ ರಾಜ್ಯದ ಒಂದು ಭಾಗವಾದ) ಮಿಥಿಲೆಯ ರಾಜನಾಗಿದ್ದುದರಿಂದ ಆತನು ನಿಯಮಿತ ಕರ್ತವ್ಯಗಳನ್ನು ಮಾಡುವುದು ಹೇಗೆ ಎನ್ನುವುದನ್ನು ತನ್ನ ಪ್ರಜೆಗಳಿಗೆ ಹೇಳಿಕೊಡಬೇಕಾಗಿತ್ತು. ಶ್ರೀಕೃಷ್ಣನೂ ಭಗವಂತನ ನಿತ್ಯ ಸ್ನೇಹಿತನಾದ ಅರ್ಜುನನೂ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬೇಕಾದ ಅಗತ್ಯವಿರಲಿಲ್ಲ. ಆದರೆ ಒಳ್ಳೆಯ ವಾದಗಳು ನಿಷ್ಫಲವಾದಾಗ ಹಿಂಸೆಯು ಅಗತ್ಯ ಎನ್ನುವುದನ್ನು ಜನಸಾಮಾನ್ಯರಿಗೆ ಹೇಳಿಕೊಡಲು ಅವರು ಯುದ್ಧಮಾಡಿದರು. ಕುರುಕ್ಷೇತ್ರ ಯುದ್ಧಕ್ಕೆ ಮೊದಲು ಯುದ್ಧವನ್ನು ತಪ್ಪಿಸಲು ಎಲ್ಲ ಪ್ರಯತ್ನಗಳನ್ನೂ ಮಾಡಲಾಯಿತು. ದೇವೋತ್ತಮ ಪರಮ ಪುರುಷನೂ ಸಹ ಪ್ರಯತ್ನಿಸಿದ. ಆದರೆ ಇನ್ನೊಂದು ಪಕ್ಷವು ಯುದ್ಧಮಾಡಲು ದೃಢನಿಶ್ಚಯವನ್ನು ಮಾಡಿತ್ತು. ಹೀಗೆ ನ್ಯಾಯವಾದ ಗುರಿಗಾಗಿ ಹೋರಾಡುವುದು ಅಗತ್ಯವಾಗುತ್ತದೆ. ಕೃಷ್ಣಪ್ರಜ್ಞೆಯಲ್ಲಿ ನೆಲೆಯಾಗಿರುವವನಿಗೆ ಜಗತ್ತಿನಲ್ಲಿ ಯಾವ ಆಸಕ್ತಿಯೂ ಇಲ್ಲದಿರಬಹುದು. ಆದರೂ ಆತನು ಹೇಗೆ ಬದುಕಬೇಕು ಮತ್ತು ಹೇಗೆ ಕೆಲಸ ಮಾಡಬೇಕು ಎಂದು ಜನರಿಗೆ ತೋರಿಸಿಕೊಡಲು ಕೆಲಸ ಮಾಡುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಅನುಭವಿಗಳಾದವರು ಇತರರು ತಮ್ಮನ್ನು ಅನುಸರಿಸುವಂತೆ ಕ್ರಿಯಾ ನಿರತರಾಗಬಲ್ಲರು. ಇದನ್ನು ಮುಂದಿನ ಶ್ಲೋಕದಲ್ಲಿ ವಿವರಿಸಿದೆ.

### ಶ್ಲೋಕ - 21

**ಯದ್ ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ |**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ||೨೧||**

**ಯತ್ ಯತ್**—ಯಾವುದನ್ನೆಲ್ಲ; **ಆಚರತಿ**—ಮಾಡುತ್ತಾನೋ; **ಶ್ರೇಷ್ಠಃ**—ಗೌರವಾರ್ಹ ನಾಯಕನು; **ತತ್**—ಅದನ್ನು; **ತತ್**—ಅದನ್ನೇ; **ಏವ**—ಖಂಡಿತವಾಗಿಯೂ; **ಇತರಃ**—ಸಾಮಾನ್ಯ; **ಜನಃ**—ವ್ಯಕ್ತಿಯು; **ಸಃ**—ಅವನು; **ಯತ್**—ಯಾವುದನ್ನು; **ಪ್ರಮಾಣಮ್**—ನಿದರ್ಶನವೆಂದು; **ಕುರುತೇ**—ಆಚರಿಸುತ್ತಾನೋ; **ಲೋಕಃ**—ಜಗತ್ತೆಲ್ಲವೂ; **ತತ್**—ಅದನ್ನು; **ಅನುವರ್ತತೇ**—ಹೆಜ್ಜೆಗಳಲ್ಲಿ ಅನುಸರಿಸುತ್ತದೆ.

### ಅನುವಾದ

**ಶ್ರೇಷ್ಠನಾದವನು ಹೇಗೆ ನಡೆದರೆ ಹಾಗೆ ಸಾಮಾನ್ಯ ಜನರು ಅನುಸರಿಸುತ್ತಾರೆ. ಮೇಲ್ಪಂಕ್ತಿಯಾದ ತನ್ನ ಕಾರ್ಯಗಳಿಂದ ಆತನು ಯಾವುದನ್ನು ಪ್ರಮಾಣವನ್ನಾಗಿ ಮಾಡುತ್ತಾನೋ ಅದನ್ನೇ ಲೋಕವು ಅನುಸರಿಸುತ್ತದೆ.**

## ಭಾವಾರ್ಥ

ಸ್ವಂತ ಆಚರಣೆಯಿಂದ ಜನರಿಗೆ ಶಿಕ್ಷಣ ಕೊಡುವ ನಾಯಕನು ಯಾವಾಗಲೂ ಜನರಿಗೆ ಬೇಕು. ತಾನೇ ಧೂಮಪಾನ ಮಾಡುವ ನಾಯಕನು ಜನರಿಗೆ ಧೂಮಪಾನವನ್ನು ಬಿಡುವುದನ್ನು ಕಲಿಸಲಾರ. ಚೈತನ್ಯ ಮಹಾಪ್ರಭುಗಳು ಹೇಳಿರುವಂತೆ, ಉಪಾಧ್ಯಾಯನು ಇತರರಿಗೆ ಹೇಳಿಕೊಡುವ ಮುನ್ನ ತಾನು ಯೋಗ್ಯ ರೀತಿಯಲ್ಲಿ ನಡೆದುಕೊಳ್ಳಬೇಕು. ಆ ರೀತಿಯಲ್ಲಿ ಬೋಧಿಸುವ ಉಪಾಧ್ಯಾಯನನ್ನು ಆಚಾರ್ಯ ಅಥವಾ ಆದರ್ಶ ಉಪಾಧ್ಯಾಯನೆಂದು ಕರೆಯಲಾಗುತ್ತದೆ. ಆದುದರಿಂದ, ಸಾಮಾನ್ಯ ಮನುಷ್ಯನಿಗೆ ಬುದ್ಧಿ ಹೇಳಿಕೊಡಲು ಗುರುವು ಶಾಸ್ತ್ರಗಳ ತತ್ವಗಳನ್ನು ಆಚರಿಸಬೇಕು. ಅಪೌರುಷೇಯ ಶಾಸ್ತ್ರಗಳ ತತ್ವಗಳ ವಿರುದ್ಧ ಗುರುವು ನಿಯಮಗಳನ್ನು ಸೃಷ್ಟಿ ಮಾಡಲಾರ. ಮನುಸಂಹಿತೆಗಳಂತಹ ಅಪೌರುಷೇಯ ಗಿಶಾಸ್ತ್ರಗಳನ್ನು ಮಾನವಕುಲವು ಅನುಸರಿಸಬೇಕಾದ ಪ್ರಮಾಣಗ್ರಂಥಗಳೆಂದು ಪರಿಗಣಿಸಲಾಗಿದೆ. ಆದುದರಿಂದ ನಾಯಕನ ಬೋಧನೆಗಳಿಗೆ ಇಂತಹ ಪ್ರಮಾಣ ಶಾಸ್ತ್ರಗಳು ಆಧಾರವಾಗಬೇಕು. ತನ್ನನ್ನು ಉತ್ತಮಗೊಳಿಸಲು ಬಯಸುವವನು, ಶ್ರೇಷ್ಠ ಗುರುಗಳು ಅನುಷ್ಠಾನಕ್ಕೆ ತಂದಿರುವಂತೆ ಪ್ರಮಾಣ ನಿಯಮಗಳನ್ನು ಅನುಸರಿಸಬೇಕು. ಶ್ರೀಮದ್ಭಾಗವತವೂ ಸಹ ನಾವು ಶ್ರೇಷ್ಠಭಕ್ತರ ಹೆಜ್ಜೆಯಲ್ಲೇ ನಡೆಯಬೇಕು; ಆಧ್ಯಾತ್ಮಿಕ ಸಾಕ್ಷಾತ್ಕಾರದ ದಾರಿಯಲ್ಲಿ ಮುನ್ನಡೆಯಲು ವಿಧಾನ ಅದೇ ಎಂದು ಹೇಳುತ್ತದೆ. ಅರಸ ಅಥವಾ ರಾಜ್ಯದ ಆಡಳಿತದ ಮುಖ್ಯಸ್ಥ, ತಂದೆ, ಶಾಲೆಯ ಉಪಾಧ್ಯಾಯ ಇವರೆಲ್ಲರನ್ನೂ ಮುಗ್ಧ ಜನಸಾಮಾನ್ಯರ ಸಹಜ ನಾಯಕರೆಂದು ಪರಿಗಣಿಸಲಾಗುತ್ತದೆ. ಇಂತಹ ಎಲ್ಲ ಸಹಜ ನಾಯಕರಿಗೂ ತಮ್ಮ ಆಶ್ರಿತರ ವಿಷಯದಲ್ಲಿ ದೊಡ್ಡ ಹೊಣೆಯಿರುತ್ತದೆ. ಆದುದರಿಂದ ಅವರಿಗೆ ನೈತಿಕ ಮತ್ತು ಆಧ್ಯಾತ್ಮಿಕ ಸಂಹಿತೆಗಳ ಪ್ರಮಾಣಗ್ರಂಥಗಳ ಪರಿಚಯವು ಚೆನ್ನಾಗಿರಬೇಕು.

## ಶ್ಲೋಕ - 22

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಞ್ಚನ |**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ||೨೨||**

**ನ**—ಇಲ್ಲ; **ಮೇ**—ನನಗೆ; **ಪಾರ್ಥ**—ಪೃಥಾನಂದನನೇ; **ಅಸ್ತಿ**—ಇದೆ; **ಕರ್ತವ್ಯಮ್**—ವಿಧ್ಯುಕ್ತ ಕರ್ತವ್ಯವು; **ತ್ರಿಷು**—ಮೂರು; **ಲೋಕೇಷು**—ಲೋಕಗಳಲ್ಲಿ; **ಕಿಞ್ಚನ**— ಯಾವುದೂ; **ನ**—ಇಲ್ಲ; **ಅನವಾಪ್ತಮ್**—ಅಪೇಕ್ಷಿತವಾದ; **ಅವಾಪ್ತವ್ಯಮ್**—ಪಡೆಯಬೇಕಾದ; **ವರ್ತೇ**—ತೊಡಗಿದ್ದೇನೆ; **ಏವ**—ಖಂಡಿತವಾಗಿಯೂ; **ಚ**—ಕೂಡ; **ಕರ್ಮಣಿ**—ವಿಧ್ಯುಕ್ತ ಕರ್ತವ್ಯಗಳಲ್ಲಿ.

## ಅನುವಾದ

**ಪಾರ್ಥನೇ, ಮೂರು ಲೋಕಗಳಲ್ಲಿಯೂ ನನಗೆ ನಿಯತವಾದ ಯಾವುದೇ ಕಾರ್ಯವಿಲ್ಲ. ನಾನು ಬಯಸುವ ವಸ್ತು ಯಾವುದೂ ಇಲ್ಲ. ನಾನು ಪಡೆಯಬೇಕಾದದ್ದು ಏನೂ ಇಲ್ಲ. ಆದರೂ ನಾನು ನಿಯಮಿತ ಕರ್ತವ್ಯಗಳಲ್ಲಿ ನಿರತನಾಗಿದ್ದೇನೆ.**

### ಭಾವಾರ್ಥ

ವೈದಿಕ ಸಾಹಿತ್ಯದಲ್ಲಿ ದೇವೋತ್ತಮ ಪರಮ ಪುರುಷನನ್ನು ಹೀಗೆ ವರ್ಣಿಸಿದೆ:

**ತಮೀಶ್ವರಾಣಾಂ ಪರಮಂ ಮಹೇಶ್ವರಂ**
**ತಂ ದೇವತಾನಾಂ ಪರಮಂ ಚ ದೈವತಮ್ |**
**ಪತಿಂ ಪತೀನಾಂ ಪರಮಂ ಪರಸ್ತಾದ್**
**ವಿದಾಮ ದೇವಂ ಭುವನೇಶಮ್ ಈಢ್ಯಮ್ ||**

**ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ**
**ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ |**
**ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ**
**ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ ||**

"ಪರಮ ಪ್ರಭುವು ಎಲ್ಲ ನಿಯಂತ್ರಕರ ನಿಯಂತ್ರಕನು. ನಾನಾ ಗ್ರಹಾಧಿಪತಿಗಳಲ್ಲಿ ಗರಿಷ್ಠನು. ಎಲ್ಲರೂ ಅವನಿಗೆ ವಿಧೇಯರು. ಎಲ್ಲ ಜೀವಿಗಳಿಗೂ ವಿಶಿಷ್ಟ ಶಕ್ತಿಯನ್ನು ವಹಿಸುವವನು ಪರಮೇಶ್ವರನೇ. ಅವರು ಸ್ವತಃ ಪರಾತ್ಪರರಲ್ಲ. ಅವನು ಎಲ್ಲ ದೇವತೆಗಳಿಗೂ ಪೂಜಾರ್ಹನು ಮತ್ತು ಎಲ್ಲ ನಿರ್ದೇಶಕರ ಪರಮ ನಿರ್ದೇಶಕನು. ಆದುದರಿಂದ ಅವನು ಎಲ್ಲ ಬಗೆಯ ಲೌಕಿಕ ನಾಯಕರನ್ನು ಮೀರಿದವನು. ಎಲ್ಲರಿಗೂ ಪೂಜಾರ್ಹನು. ಅವನಿಗಿಂತ ಶ್ರೇಷ್ಠರಿಲ್ಲ. ಅವನೇ ಎಲ್ಲ ಕಾರಣಗಳ ಪರಮಕಾರಣನು."

"ಅವನಿಗೆ ಸಾಮಾನ್ಯ ಜೀವಿಯಂತೆ ಶರೀರವಿಲ್ಲ. ಅವನ ಶರೀರಕ್ಕೂ ಆತ್ಮಕ್ಕೂ ವ್ಯತ್ಯಾಸವಿಲ್ಲ. ಅವನು ಪರಮೋನ್ನತನು. ಅವನ ಎಲ್ಲ ಇಂದ್ರಿಯಗಳೂ ದಿವ್ಯವಾದವು. ಅವನ ಯಾವುದೇ ಇಂದ್ರಿಯವು ಬೇರಾವುದೇ ಇಂದ್ರಿಯದ ಕೆಲಸ ಮಾಡಬಲ್ಲದು. ಆದುದರಿಂದ ಅವನಿಗಿಂತ ಶ್ರೇಷ್ಠರಿಲ್ಲ. ಅವನ ಸಮಾನರಿಲ್ಲ. ಅವನ ಶಕ್ತಿಗಳು ವಿಧವಿಧವಾದವು. ಆದುದರಿಂದ ಅವನ ಕ್ರಿಯೆಗಳು ತಂತಾವೇ ಸಹಜವಾದ ಕ್ರಮದಲ್ಲಿ ನಡೆಯುತ್ತವೆ." (ಶ್ವೇತಾಶ್ವತರ ಉಪನಿಷತ್ತು 6.7-8).

ದೇವೋತ್ತಮ ಪರಮ ಪುರುಷನಲ್ಲಿ ಪ್ರತಿಯೊಂದೂ ಪೂರ್ಣ ಸಮೃದ್ಧಿಯಲ್ಲಿದ್ದು ಪೂರ್ಣಸತ್ಯದಲ್ಲಿ ಇರುವುದರಿಂದ ದೇವೋತ್ತಮ ಪರಮ ಪುರುಷನು ಮಾಡಬೇಕಾದ ಕರ್ತವ್ಯ ಯಾವುದೂ ಇಲ್ಲ. ಕರ್ಮಫಲಗಳನ್ನು ಸ್ವೀಕರಿಸಬೇಕಾದವನಿಗೆ ಯಾವುದಾದರೂ ನಿಯತ ಕರ್ತವ್ಯವಿರುತ್ತದೆ. ಆದರೆ ಮೂರು ಲೋಕಗಳಲ್ಲಿಯೂ ಸಾಧಿಸಬೇಕಾದದ್ದು ಏನೂ ಇಲ್ಲದಿರುವವನಿಗೆ ಕರ್ತವ್ಯವಿಲ್ಲ. ಆದರೂ ಶ್ರೀಕೃಷ್ಣನು ಕ್ಷತ್ರಿಯರ ನಾಯಕನಾಗಿ ಕುರುಕ್ಷೇತ್ರದಲ್ಲಿ ಕ್ರಿಯೆಯಲ್ಲಿ ನಿರತನಾಗಿದ್ದಾನೆ. ಏಕೆಂದರೆ ಸಂಕಟದಲ್ಲಿರುವವರಿಗೆ ರಕ್ಷಣೆಯನ್ನು ಕೊಡುವುದು ಕ್ಷತ್ರಿಯರ ಕರ್ತವ್ಯ. ಅಪೌರುಷೇಯ ಶಾಸ್ತ್ರಗಳ ಎಲ್ಲ ನಿಯಮಗಳನ್ನು ಮೀರಿದವನಾದರೂ ಅಪೌರುಷೇಯ ಶಾಸ್ತ್ರಗಳನ್ನು ಉಲ್ಲಂಘಿಸುವಂತಹ ಯಾವ ಕಾರ್ಯವನ್ನೂ ಕೃಷ್ಣನು ಮಾಡುವುದಿಲ್ಲ.

## ಶ್ಲೋಕ - 23

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತನ್ದ್ರಿತಃ |**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ||೨೩||**

**ಯದಿ**—ಆದರೆ; **ಹಿ**—ಖಂಡಿತವಾಗಿಯೂ; **ಅಹಮ್**—ನಾನು; **ನ ವರ್ತೇಯಮ್**—ನಿರತನಾಗದಿದ್ದಲ್ಲಿ; **ಜಾತು**—ಎಂದಿಗೂ; **ಕರ್ಮಣಿ**—ವಿಧ್ಯುಕ್ತ ಕರ್ಮಾಚರಣೆಯಲ್ಲಿ; **ಅತನ್ದ್ರಿತಃ**—ಬಹಳ ಎಚ್ಚರಿಕೆಯಿಂದ; **ಮಮ**—ನನ್ನ; **ವರ್ತ್ಮ**—ಮಾರ್ಗವನ್ನು; **ಅನುವರ್ತನ್ತೇ**—ಅನುಸರಿಸುತ್ತಾರೆ; **ಮನುಷ್ಯಾಃ**—ಮನುಷ್ಯರೆಲ್ಲರೂ; **ಪಾರ್ಥ**—ಪೃಥೆಯ ಮಗನೇ; **ಸರ್ವಶಃ**—ಎಲ್ಲ ವಿಧದಲ್ಲಿಯೂ.

### ಅನುವಾದ

**ಪಾರ್ಥ, ನಾನು ಯಾವಾಗಲೇ ಆಗಲಿ ನಿಯಮಿತ ಕರ್ಮಗಳಲ್ಲಿ ನಿರತನಾಗದೆ ಹೋದರೆ ಎಲ್ಲ ಮನುಷ್ಯರೂ ನನ್ನ ಮಾರ್ಗವನ್ನು ಅನುಸರಿಸುವರು.**

### ಭಾವಾರ್ಥ

ಆಧ್ಯಾತ್ಮಿಕ ಬದುಕಿನ ಮುನ್ನಡೆಗಾಗಿ ಸಾಮಾಜಿಕ ಶಾಂತಿಯ ಸಮತೋಲನವನ್ನು ಉಳಿಸಿಕೊಳ್ಳಲು, ಪ್ರತಿಯೊಬ್ಬ ನಾಗರಿಕ ಮನುಷ್ಯನೂ ಅನುಸರಿಸಬೇಕಾದ ಸಾಂಪ್ರದಾಯಿಕವಾದ ಕೌಟುಂಬಿಕ ಪದ್ಧತಿಗಳಿವೆ. ಇಂತಹ ನಿಯಮಗಳು ಬದ್ಧಜೀವಿಗಳಿಗೆ ಮಾತ್ರ, ಶ್ರೀಕೃಷ್ಣನಿಗಲ್ಲ. ಆದರೂ ಆತನು ಧಾರ್ಮಿಕ ತತ್ವಗಳನ್ನು ನೆಲೆಗೊಳಿಸಲು ಅವತರಿಸಿದುದರಿಂದ ವಿಧಿಸಿದ ನಿಯಮಗಳನ್ನು ಅನುಸರಿಸುತ್ತಾನೆ. ಇಲ್ಲವಾದರೆ, ಅವನೇ ಅತ್ಯುನ್ನತ ಅಧಿಕಾರಿಯಾದುದರಿಂದ ಜನಸಾಮಾನ್ಯರು ಆತನ ಹೆಜ್ಜೆಯಲ್ಲಿಯೇ ನಡೆಯುತ್ತಾರೆ. ಮನೆಯೊಳಗೆ, ಮನೆಯ ಹೊರಗೆ ಗೃಹಸ್ಥನಿಗೆ ವಿಧಿಸಿರುವ ಎಲ್ಲ ಧಾರ್ಮಿಕ ಕರ್ತವ್ಯಗಳನ್ನೂ ಶ್ರೀಕೃಷ್ಣನು ಪಾಲಿಸುತ್ತಿದ್ದನೆಂದು ಶ್ರೀಮದ್ಭಾಗವತದಿಂದ ತಿಳಿದುಬರುತ್ತದೆ.

## ಶ್ಲೋಕ - 24

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ |**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ||೨೪||**

**ಉತ್ಸೀದೇಯುಃ**—ನಾಶವಾಗುವುವು; **ಇಮೇ**—ಈ ಎಲ್ಲ; **ಲೋಕಾಃ**—ಲೋಕಗಳು; **ನ ಕುರ್ಯಾಮ್**—ಆಚರಿಸದಿದ್ದರೆ; **ಕರ್ಮ**—ವಿಧ್ಯುಕ್ತ ಕರ್ತವ್ಯಗಳನ್ನು; **ಚೇತ್**—ಆದರೆ; **ಅಹಮ್**—ನಾನು; **ಸಂಕರಸ್ಯ**—ಅನಪೇಕ್ಷಿತ ಜನಸಂಖ್ಯೆಯ; **ಚ**—ಮತ್ತು; **ಕರ್ತಾ**—ಸೃಷ್ಟಿಕರ್ತನು; **ಸ್ಯಾಮ್**—ಆಗುವೆನು; **ಉಪಹನ್ಯಾಮ್**—ನಾಶಮಾಡುವೆನು; **ಇಮಾಃ**—ಈ ಎಲ್ಲ; **ಪ್ರಜಾಃ**—ಜೀವಿಗಳನ್ನು.

## ಅನುವಾದ

**ನಾನು ನಿಯಮಿತ ಕರ್ತವ್ಯವನ್ನು ಮಾಡದಿದ್ದರೆ ಈ ಲೋಕಗಳೆಲ್ಲ ನಾಶವಾಗುವುವು. ನಾನೇ ವರ್ಣಸಂಕರಕ್ಕೆ ಕಾರಣನಾಗುತ್ತೇನೆ. ಅದರಿಂದಾಗಿ ನಾನೇ ಎಲ್ಲ ಜೀವಿಗಳ ಶಾಂತಿಯನ್ನು ನಾಶಮಾಡುತ್ತೇನೆ.**

## ಭಾವಾರ್ಥ

ವರ್ಣಸಂಕರ ಎಂದರೆ ಸಮಾಜದ ಶಾಂತಿಯನ್ನು ಕಲಕುವ ಅನಪೇಕ್ಷಿತ ಜನಸಂಖ್ಯೆ. ಈ ಸಾಮಾಜಿಕ ಕ್ಷೋಭೆಯನ್ನು ತಡೆಯಲು ವಿಹಿತ ನಿಯಮಗಳಿವೆ. ಇವುಗಳಿಂದ ಜನತೆಯು ತಾನಾಗಿಯೇ ಶಾಂತಿಯುತವಾಗಿ, ಬದುಕಿನಲ್ಲಿ ಆಧ್ಯಾತ್ಮಿಕ ಪ್ರಗತಿಗೆ ವ್ಯವಸ್ಥೆಗೊಳ್ಳುತ್ತದೆ. ಶ್ರೀಕೃಷ್ಣನು ಅವತಾರಮಾಡಿದಾಗ ಆತನು ಸಹಜವಾಗಿ ಇಂತಹ ನಿಯಮ ನಿಬಂಧನೆಗಳೊಡನೆ ವ್ಯವಹರಿಸುತ್ತಾನೆ. ಇಂತಹ ಮುಖ್ಯವಾದ ಆಚರಣೆಗಳ ಘನತೆಯನ್ನೂ ಅಗತ್ಯವನ್ನೂ ಕಾಪಾಡಲು ಹೀಗೆ ಮಾಡಬೇಕಾಗುತ್ತದೆ. ಭಗವಂತನು ಎಲ್ಲ ಜೀವಿಗಳ ತಂದೆ. ಜೀವಿಗಳಿಗೆ ತಪ್ಪು ಮಾರ್ಗದರ್ಶನ ದೊರೆತರೆ ಪರೋಕ್ಷವಾಗಿ ಅದರ ಹೊಣೆ ಭಗವಂತನದು. ಆದುದರಿಂದ ನಿಯಂತ್ರಕ ತತ್ವಗಳನ್ನು ಸಾಮಾನ್ಯವಾಗಿ ಅಸಡ್ಡೆ ಮಾಡಿದಾಗಲೆಲ್ಲ ಭಗವಂತನೇ ಭೂಮಿಗಿಳಿದು ಬಂದು ಸಮಾಜವನ್ನು ತಿದ್ದುತ್ತಾನೆ. ಆದರೂ ನಾವು ಈ ಸಂಗತಿಯನ್ನು ಎಚ್ಚರದಿಂದ ಗಮನಿಸಬೇಕು. ನಾವು ಭಗವಂತನ ಹೆಜ್ಜೆಯಲ್ಲೇ ನಡೆಯಬೇಕು. ಆದರೆ ನಾವು ಅವನನ್ನು ಅನುಕರಿಸಲಾರೆವು ಎನ್ನುವುದನ್ನು ನೆನಪಿಡಬೇಕು. ಅನುಸರಿಸುವುದು ಮತ್ತು ಅನುಕರಿಸುವುದು ಒಂದೇ ಮಟ್ಟದಲ್ಲಿ ಇರುವುದಿಲ್ಲ. ಭಗವಂತನು ತನ್ನ ಬಾಲ್ಯದಲ್ಲಿ ಗೋವರ್ಧನಗಿರಿಯನ್ನು ಎತ್ತಿದನು. ನಾವು ಅವನನ್ನು ಅನುಕರಿಸಲಾರೆವು. ಇದನ್ನು ಯಾವ ಮನುಷ್ಯನೂ ಮಾಡಲು ಸಾಧ್ಯವಿಲ್ಲ. ನಾವು ಆತನ ಉಪದೇಶಗಳನ್ನು ಅನುಸರಿಸಬೇಕು. ಆದರೆ ನಾವು ಯಾವಾಗಲೂ ಅವನನ್ನು ಅನುಕರಿಸಬಾರದು. ಶ್ರೀಮದ್ಭಾಗವತವು (10.33.30-31) ಹೀಗೆ ಹೇಳುತ್ತದೆ:

**ನೈತತ್ ಸಮಾಚರೇಜ್ಜಾತು ಮನಸಾಪಿ ಹ್ಯನೀಶ್ವರಃ |**
**ವಿನಶ್ಯತ್ಯಾಚರನ್ಮೌಢ್ಯಾದ್ ಯಥಾರುದ್ರೋऽಬ್ಧಿಜಂ ವಿಷಮ್ ||**

**ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ |**
**ತೇಷಾಂ ಯತ್ಸ್ವವಚೋಯುಕ್ತಂ ಬುದ್ಧಿಮಾಂಸ್ತತ್ಸಮಾಚರೇತ್ ||**

"ಮನುಷ್ಯನು ಭಗವಂತನ ಮತ್ತು ಅವನಿಂದ ಅಧಿಕಾರ ಪಡೆದ ಸೇವಕರ ಉಪದೇಶಗಳನ್ನು ಅನುಸರಿಸಬೇಕು, ಅಷ್ಟೇ. ಅವರ ಉಪದೇಶಗಳು ನಮಗೆ ಕಲ್ಯಾಣಕರ. ಬುದ್ಧಿವಂತನಾದ ಮನುಷ್ಯನು ಅವರು ಉಪದೇಶಿಸಿದಂತೆ ಆಚರಿಸುತ್ತಾನೆ. ಆದರೆ ಅವರ ಕಾರ್ಯಗಳನ್ನು ಅನುಕರಿಸದಂತೆ ಎಚ್ಚರಿಕೆ ವಹಿಸಬೇಕು. ಶಿವನನ್ನು ಅನುಕರಿಸಿ ವಿಷದ ಸಮುದ್ರವನ್ನು ಕುಡಿಯಲು ಪ್ರಯತ್ನಿಸಬಾರದು."

"ಈಶ್ವರರ, ಎಂದರೆ ವಾಸ್ತವವಾಗಿ ಸೂರ್ಯಚಂದ್ರರ ಚಲನೆಗಳನ್ನು ನಿಯಂತ್ರಿಸಬಲ್ಲವರ ಸ್ಥಾನವನ್ನು ಉಚ್ಚ ಎಂದು ನಾವು ಯಾವಾಗಲೂ ಭಾವಿಸಬೇಕು. ಇಂತಹ

ಶಕ್ತಿ ಇಲ್ಲದೆ, ಅತ್ಯಂತ ಶಕ್ತರಾದ ಈಶ್ವರರನ್ನು ಅನುಕರಿಸಲು ಸಾಧ್ಯವಿಲ್ಲ. ಶಿವನು ವಿಷದ ಸಾಗರವನ್ನು ಕುಡಿದ. ಆದರೆ ಸಾಮಾನ್ಯ ಮನುಷ್ಯನು ಅಂತಹ ವಿಷದ ಹನಿಯನ್ನು ಕುಡಿಯಲು ಪ್ರಯತ್ನಿಸಿದರೂ ಸತ್ತುಹೋಗುತ್ತಾನೆ. ಗಾಂಜಾ ಮತ್ತು ಅಂತಹ ಮಾದಕ ವಸ್ತುಗಳನ್ನು ಸೇವಿಸಲು ಬಯಸುವ ಹುಸಿ ಶಿವಭಕ್ತರು ಅನೇಕರಿದ್ದಾರೆ. ಶಿವನ ಕಾರ್ಯಗಳನ್ನು ಹೀಗೆ ಅನುಕರಿಸಿ ತಾವು ಸಾವನ್ನು ಹತ್ತಿರಕ್ಕೆ ಕರೆಯುತ್ತಿದ್ದೇವೆ ಎನ್ನುವುದನ್ನು ಅವರು ಮರೆಯುತ್ತಾರೆ. ಇದೇ ರೀತಿ, ಭಗವಂತನ ರಾಸಲೀಲೆಯನ್ನು ಅನುಕರಿಸಬಯಸುವ ಶ್ರೀಕೃಷ್ಣನ ಹುಸಿಭಕ್ತರಿದ್ದಾರೆ. ಅವರು ತಾವು ಗೋವರ್ಧನಗಿರಿಯನ್ನು ಎತ್ತಲಾರೆವು ಎನ್ನುವುದನ್ನು ಮರೆಯುತ್ತಾರೆ. ಆದುದರಿಂದ ಉತ್ತಮ ಮಾರ್ಗವೆಂದರೆ ಬಲಶಾಲಿಗಳನ್ನು ಅನುಕರಿಸಲು ಹೋಗದೆ ಅವರ ಉಪದೇಶವನ್ನಷ್ಟೆ ಅನುಸರಿಸುವುದು. ಅವರ ಅರ್ಹತೆಯಿಲ್ಲದೆ ಅವರ ಸ್ಥಾನಗಳನ್ನು ಆಕ್ರಮಿಸಲೂ ಪ್ರಯತ್ನಿಸಬಾರದು. ಪರಮ ಪ್ರಭುವಿನ ಶಕ್ತಿ ಇಲ್ಲದ ದೇವರ 'ಅವತಾರಗಳು' ಎಷ್ಟೋ ಇವೆ.

## ಶ್ಲೋಕ - 25

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ |**
**ಕುರ್ಯಾದ್ ವಿದ್ವಾಂಸ್ತಥಾಸಕ್ತಶ್ ಚಿಕೀರ್ಷುರ್ಲೋಕಸನ್ಗ್ರಹಮ್ ||೨೫||**

**ಸಕ್ತಾಃ**—ಆಸಕ್ತರಾಗಿ; **ಕರ್ಮಣಿ**—ವಿಧ್ಯುಕ್ತ ಕರ್ಮಗಳಲ್ಲಿ; **ಅವಿದ್ವಾಂಸಃ**—ಅಜ್ಞಾನಿಗಳು; **ಯಥಾ**—ಹೇಗೆ; **ಕುರ್ವಂತಿ**—ಮಾಡುತ್ತಾರೋ; **ಭಾರತ**—ಭರತ ಕುಲದವನೇ; **ಕುರ್ಯಾತ್**—ಮಾಡಬೇಕು; **ವಿದ್ವಾನ್**—ವಿದ್ವಾಂಸರು; **ತಥಾ**—ಹಾಗೆ; **ಅಸಕ್ತಃ**—ಅನಾಸಕ್ತರಾಗಿ; **ಚಿಕೀರ್ಷುಃ**—ಮುನ್ನಡೆಸಲು ಆಶಿಸಿ; **ಲೋಕ ಸನ್ಗ್ರಹಮ್**—ಜನಸಾಮಾನ್ಯರನ್ನು.

## ಅನುವಾದ

**ಅಜ್ಞಾನಿಗಳಾದವರು ಹೇಗೆ ಫಲಾಸಕ್ತರಾಗಿ ಕರ್ಮವನ್ನು ಮಾಡುತ್ತಾರೆಯೋ ಹಾಗೆಯೇ ವಿದ್ವಾಂಸರು ಆಸಕ್ತಿಯಿಲ್ಲದೆ, ಜನಸಾಮಾನ್ಯರನ್ನು ಯೋಗ್ಯಮಾರ್ಗದಲ್ಲಿ ಕರೆದೊಯ್ಯಲು ಕರ್ಮವನ್ನು ಮಾಡಬೇಕು.**

## ಭಾವಾರ್ಥ

ಕೃಷ್ಣಪ್ರಜ್ಞೆ ಇರುವವನಿಗೂ ಮತ್ತು ಕೃಷ್ಣಪ್ರಜ್ಞೆ ಇಲ್ಲದಿರುವವನಿಗೂ ಅವರ ಬೇರೆ ಬೇರೆ ಅಪೇಕ್ಷೆಗಳಿಂದ ವ್ಯತ್ಯಾಸ ಉಂಟಾಗುತ್ತದೆ. ಕೃಷ್ಣಪ್ರಜ್ಞೆಯ ಬೆಳವಣಿಗೆಗೆ ನೆರವಾಗದೆ ಇರುವುದು ಏನನ್ನೂ ಕೃಷ್ಣಪ್ರಜ್ಞೆ ಇರುವವನು ಮಾಡುವುದಿಲ್ಲ. ಅವನು ಐಹಿಕ ಚಟುವಟಿಕೆಗಳಲ್ಲಿ ಅತ್ಯಾಸಕ್ತಿ ಇರುವ ಅಜ್ಞಾನಿಯಂತೆಯೇ ಕೆಲಸಮಾಡಬಹುದು. ಆದರೆ ಅಜ್ಞಾನಿಯು ತನ್ನ ಇಂದ್ರಿಯ ತೃಪ್ತಿಗಾಗಿಯೇ ಕೆಲಸ ಮಾಡುತ್ತಾನೆ; ಇನ್ನೊಬ್ಬನು ಕೃಷ್ಣನ ತೃಪ್ತಿಗಾಗಿಯೇ ಕೆಲಸ ಮಾಡುತ್ತಾನೆ. ಆದುದರಿಂದ ಹೇಗೆ ಕಾರ್ಯಮಾಡಬೇಕು ಮತ್ತು ಹೇಗೆ ಕಾರ್ಯಫಲವನ್ನು ಕೃಷ್ಣಪ್ರಜ್ಞೆಯ ಉದ್ದೇಶಕ್ಕೆ ಬಳಸಬೇಕು ಎಂದು ಜನರಿಗೆ ತೋರಿಸಿಕೊಡುವುದು ಕೃಷ್ಣಪ್ರಜ್ಞೆ ಇರುವವನ ಕರ್ತವ್ಯ.

## ಶ್ಲೋಕ - 26

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸನ್ಗಿನಾಮ್ |**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ||೨೬||**

**ನ**—ಇಲ್ಲ; **ಬುದ್ಧಿ ಭೇದವಮ್**—ಬುದ್ಧಿಭಂಗವನ್ನು; **ಜನಯೇತ್**—ಉಂಟುಮಾಡಬೇಕು; **ಅಜ್ಞಾನಾಮ್**—ಮೂರ್ಖರ; **ಕರ್ಮ ಸನ್ಗಿನಾಮ್**—ಕಾಮ್ಯಕರ್ಮಾಸಕ್ತರಾದ; **ಜೋಷಯೇತ್**—ಹೊಂದಾಣಿಕೆ ಮಾಡಬೇಕು; **ಸರ್ವ**—ಎಲ್ಲ; **ಕರ್ಮಾಣಿ**—ಕರ್ಮಗಳನ್ನು; **ವಿದ್ವಾನ್**—ವಿದ್ವಾಂಸನು; **ಯುಕ್ತಃ**—ನಿರತನಾಗಿ; **ಸಮಾಚರನ್**—ಆಚರಿಸುತ್ತಾ.

## ಅನುವಾದ

**ನಿಯತ ಕರ್ತವ್ಯಗಳ ಕರ್ಮಫಲಕ್ಕೆ ಅಂಟಿಕೊಂಡಿರುವವರ ಕೆಲಸವನ್ನು ನಿಲ್ಲಿಸಿಬಿಟ್ಟರೆ ಅವರ ಬುದ್ಧಿ ಕಲಕುತ್ತದೆ. ಆದುದರಿಂದ ವಿದ್ವಾಂಸನು ಅವರ ಕೆಲಸವನ್ನು ನಿಲ್ಲಿಸಿಬಿಡಬಾರದು. ಭಕ್ತಿಭಾವದಿಂದ ಕೆಲಸಮಾಡಿ ಆತನು ಅಜ್ಞಾನಿಗಳನ್ನು (ಕೃಷ್ಣಪ್ರಜ್ಞೆಯ ಕ್ರಮಕ್ರಮವಾದ ಬೆಳವಣಿಗೆಗಾಗಿ) ಎಲ್ಲ ಬಗೆಯ ಚಟುವಟಿಕೆಗಳಲ್ಲಿ ತೊಡಗಿಸಬೇಕು.**

## ಭಾವಾರ್ಥ

**ವೇದೈಶ್ಚ ಸರ್ವೈರಹಮೇವ ವೇದ್ಯಃ.** ಎಲ್ಲ ವೈದಿಕ ವಿಧಿಗಳ ಗುರಿಯೂ ಇದೇ. ಎಲ್ಲ ವಿಧಿಗಳ, ಎಲ್ಲ ಯಜ್ಞಾಚರಣೆಗಳ ಮತ್ತು ಐಹಿಕ ಚಟುವಟಿಕೆಗಳ ನಿರ್ದೇಶನವೂ ಸೇರಿದಂತೆ ವೇದಗಳಲ್ಲಿ ಇರುವುದೆಲ್ಲದರ ಉದ್ದೇಶ ಕೃಷ್ಣನನ್ನು ಅರಿಯುವುದು; ಆತನೇ ಬದುಕಿನ ಪರಮ ಗುರಿಯು. ಆದರೆ ಬದ್ಧಜೀವಿಗಳಿಗೆ ಇಂದ್ರಿಯ ತೃಪ್ತಿಯಾಚೆ ಏನೂ ತಿಳಿಯದು; ಆದುದರಿಂದ ಆ ಗುರಿಗಾಗಿ ಅವರು ವೇದಗಳನ್ನು ಅಭ್ಯಾಸಮಾಡುತ್ತಾರೆ. ಆದರೆ ವೇದ ವಿಧಿಗಳಿಂದ ನಿಯಂತ್ರಿತವಾದ ಫಲಾಸಕ್ತ ಚಟುವಟಿಕೆಗಳು ಮತ್ತು ಇಂದ್ರಿಯ ತೃಪ್ತಿಯು, ಕ್ರಮೇಣ ಮನುಷ್ಯನನ್ನು ಕೃಷ್ಣಪ್ರಜ್ಞೆಗೆ ಏರಿಸುತ್ತವೆ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ಆತ್ಮಸಾಕ್ಷಾತ್ಕಾರವಾದವನು ಇತರರ ಚಟುವಟಿಕೆಗಳನ್ನಾಗಲೀ ಅರಿವನ್ನಾಗಲೀ ಕಲಕಬಾರದು. ಎಲ್ಲ ಕಾರ್ಯದ ಫಲಗಳನ್ನು ಕೃಷ್ಣನ ಸೇವೆಗೆ ಹೇಗೆ ಸಮರ್ಪಿಸಬಹುದೆಂಬುದನ್ನು ತೋರಿಸಿಕೊಡುವುದರ ಮೂಲಕ ಅವನು ಕೆಲಸ ಮಾಡಬೇಕು. ಇಂದ್ರಿಯ ತೃಪ್ತಿಗಾಗಿ ಕೆಲಸಮಾಡುವ ಅಜ್ಞಾನಿಯು ಹೇಗೆ ಕೆಲಸಮಾಡಬೇಕು ಮತ್ತು ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನು ಕಲಿತುಕೊಳ್ಳುವಂತೆ ಕೃಷ್ಣಪ್ರಜ್ಞೆಯುಳ್ಳ ವಿದ್ವಾಂಸನು ಕೆಲಸ ಮಾಡಬಹುದು. ಅಜ್ಞಾನಿಯಾದವನ ಚಟುವಟಿಕೆಗಳಿಗೆ ಭಂಗ ತರಬಾರದು. ಆದರೆ ಸ್ವಲ್ಪಮಟ್ಟಿಗೆ ಬೆಳೆದ ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ಇತರ ವೈದಿಕ ನಿಯಮಗಳಿಗೆ ಕಾಯದೆ ನೇರವಾಗಿ ಭಗವಂತನ ಸೇವೆಯಲ್ಲಿ ತೊಡಗಬಹುದು. ಈ ಭಾಗ್ಯಶಾಲಿಗೆ ವೈದಿಕ ವಿಧಿಗಳನ್ನು ಅನುಸರಿಸುವ ಅಗತ್ಯವಿಲ್ಲ. ಏಕೆಂದರೆ ನಿಯತ ಕರ್ತವ್ಯಗಳನ್ನು ಮಾಡುವುದರಿಂದ ಪಡೆಯುವ ಎಲ್ಲ ಪರಿಣಾಮಗಳನ್ನು ನೇರವಾದ ಕೃಷ್ಣಪ್ರಜ್ಞೆಯಿಂದ ಪಡೆಯಬಹುದು.

## ಶ್ಲೋಕ - 27

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |**
**ಅಹಙ್ಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ||೨೭||**

**ಪ್ರಕೃತೇಃ**—ಭೌತಿಕ ಪ್ರಕೃತಿಯ; **ಕ್ರಿಯಮಾಣಾನಿ**—ಮಾಡಲ್ಪಡುತ್ತಿರುವ; **ಗುಣೈಃ**—ಗುಣಗಳಿಂದ; **ಕರ್ಮಾಣಿ**—ಚಟುವಟಿಕೆಗಳನ್ನು; **ಸರ್ವಶಃ**—ಎಲ್ಲ ಬಗೆಯ; **ಅಹಙ್ಕಾರ ವಿಮೂಢ**—ಅಹಂಕಾರದಿಂದ ದಿಗ್ಭ್ರಮೆಗೊಂಡ; **ಆತ್ಮಾ**—ಚೇತನಾತ್ಮನು; **ಕರ್ತಾ**—ಮಾಡುವವನು; **ಅಹಮ್**—ನಾನು; **ಇತಿ**—ಎಂದು; **ಮನ್ಯತೇ**—ತಿಳಿಯುತ್ತಾನೆ.

### ಅನುವಾದ

**ಕಾರ್ಯಗಳನ್ನು ವಾಸ್ತವವಾಗಿ ಪ್ರಕೃತಿಯ ತ್ರಿಗುಣಗಳೇ ಮಾಡುತ್ತವೆ. ಆದರೆ ಅಹಂಕಾರದಿಂದ ಮೂಢನಾದವನು ತಾನೇ ಕಾರ್ಯಗಳನ್ನು ಮಾಡುತ್ತೇನೆ ಎಂದು ಭಾವಿಸುತ್ತಾನೆ.**

### ಭಾವಾರ್ಥ

ಕೃಷ್ಣಪ್ರಜ್ಞೆ ಇರುವ ಒಬ್ಬನು ಮತ್ತು ಐಹಿಕ ಪ್ರಜ್ಞೆಯಲ್ಲಿರುವ ಮತ್ತೊಬ್ಬನು ಒಂದೇ ಮಟ್ಟದಲ್ಲಿ ಕೆಲಸಮಾಡುತ್ತಿರುವಾಗ ಇಬ್ಬರೂ ಒಂದೇ ನೆಲೆಯಲ್ಲಿ ಇರುವಂತೆ ತೋರಬಹುದು. ಆದರೆ ಅವರಿಬ್ಬರ ಸ್ಥಾನಗಳಲ್ಲಿ ತೀವ್ರ ವ್ಯತ್ಯಾಸವಿದೆ. ಐಹಿಕ ಪ್ರಜ್ಞೆಯಲ್ಲಿರುವ ಮನುಷ್ಯನು ಅಹಂಕಾರದ ದೆಸೆಯಿಂದ ತಾನೇ ಎಲ್ಲವನ್ನೂ ಮಾಡುವವನು ಎಂದು ದೃಢವಾಗಿ ನಂಬಿರುತ್ತಾನೆ. ದೇಹದ ಯಂತ್ರವನ್ನು ಐಹಿಕ ಪ್ರಕೃತಿಯು ಸೃಷ್ಟಿಮಾಡಿದೆ ಮತ್ತು ಈ ಪ್ರಕೃತಿಯು ಭಗವಂತನ ಮೇಲ್ವಿಚಾರಣೆಯಲ್ಲಿ ಕೆಲಸಮಾಡುತ್ತದೆ ಎನ್ನುವುದು ಅವನಿಗೆ ತಿಳಿಯದು. ಪ್ರಾಪಂಚಿಕನಿಗೆ ಕಟ್ಟಕಡೆಯದಾಗಿ ತಾನು ಕೃಷ್ಣನ ನಿಯಂತ್ರಣದಲ್ಲಿದ್ದೇನೆ ಎನ್ನುವುದು ತಿಳಿಯದು. ಅಹಂಕಾರಿಯಾದವನು ತಾನೇ ಸ್ವತಂತ್ರವಾಗಿ ಎಲ್ಲವನ್ನೂ ಮಾಡಿದೆ ಎಂದು ಹೇಳಿಕೊಳ್ಳುತ್ತಾನೆ. ಇದೇ ಅವನ ಅಜ್ಞಾನದ ಲಕ್ಷಣ. ಈ ಜಡವಾದ ಮತ್ತು ಸೂಕ್ಷ್ಮವಾದ ದೇಹವನ್ನು ದೇವೋತ್ತಮ ಪರಮ ಪುರುಷನ ಆಜ್ಞೆಯಂತೆ ಐಹಿಕ ಪ್ರಕೃತಿಯು ಸೃಷ್ಟಿಸಿದೆ. ಆದುದರಿಂದ ಅವನ ದೇಹದ ಮತ್ತು ಮನಸ್ಸಿನ ಚಟುವಟಿಕೆಗಳು ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನ ಸೇವೆಯಲ್ಲಿ ತೊಡಗಬೇಕು ಎನ್ನುವುದು ಅವನಿಗೆ ತಿಳಿಯದು. ಇಂದ್ರಿಯಗಳನ್ನು ಇಂದ್ರಿಯತೃಪ್ತಿಗಾಗಿ ಬಹುಕಾಲ ದುರುಪಯೋಗ ಮಾಡಿಕೊಂಡಿದ್ದರಿಂದ ವಾಸ್ತವಿಕವಾಗಿ ಅಹಂಕಾರವು ಅವನನ್ನು ಮೂಢನನ್ನಾಗಿ ಮಾಡುತ್ತದೆ. ಇದರಿಂದ ಅವನು ಕೃಷ್ಣನೊಡನೆ ತನ್ನ ನಿತ್ಯಸಂಬಂಧವನ್ನು ಮರೆತು ಬಿಡುತ್ತಾನೆ. ಆದುದರಿಂದ ಅಜ್ಞಾನಿಯು ದೇವೋತ್ತಮ ಪರಮ ಪುರುಷನಿಗೆ ಹೃಷೀಕೇಶ ಅಥವಾ ಐಹಿಕ ಶರೀರದ ಇಂದ್ರಿಯಗಳ ಪ್ರಭು ಎಂದು ಹೆಸರು ಎನ್ನುವುದನ್ನು ಮರೆತುಬಿಡುತ್ತಾನೆ.

## ಶ್ಲೋಕ - 28

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ |**
**ಗುಣಾಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ||೨೮||**

**ತತ್ತ್ವವಿತ್**—ಪರಮ ಸತ್ಯವನ್ನು ತಿಳಿದವನು; **ತು**—ಆದರೆ; **ಮಹಾಬಾಹೋ**—ಶಕ್ತವಾದ ತೋಳುಗಳುಳ್ಳವನೇ; **ಗುಣ ಕರ್ಮ**—ಭೌತಿಕ ಪ್ರಭಾವದಲ್ಲಿನ ಕರ್ಮಗಳ; **ವಿಭಾಗಯೋಃ**—ವಿಭಾಗಗಳಲ್ಲಿ; **ಗುಣಾಃ**—ಇಂದ್ರಿಯಗಳು; **ಗುಣೇಷು**—ಇಂದ್ರಿಯ ತೃಪ್ತಿಯಲ್ಲಿ; **ವರ್ತನ್ತೇ**—ತೊಡಗಿರುತ್ತವೆ; **ಇತಿ**—ಎಂದು; **ಮತ್ವಾ**—ತಿಳಿದು; **ನ ಸಜ್ಜತೇ**—ಅನುರಕ್ತನಾಗುವುದಿಲ್ಲ.

## ಅನುವಾದ

**ಹೇ ಮಹಾಬಾಹುವಾದ ಅರ್ಜುನ, ಪರಮ ಸತ್ಯವನ್ನು ತಿಳಿದವನು ಇಂದ್ರಿಯಗಳಲ್ಲಿ ಮತ್ತು ಇಂದ್ರಿಯ ತೃಪ್ತಿಯಲ್ಲಿ ತೊಡಗುವುದಿಲ್ಲ. ಅವನಿಗೆ ಭಕ್ತಿಸೇವೆ ಮತ್ತು ಫಲದಾಸೆ ಇರುವ ಕರ್ಮ ಇವುಗಳಲ್ಲಿನ ವ್ಯತ್ಯಾಸವು ತಿಳಿದಿರುತ್ತದೆ.**

## ಭಾವಾರ್ಥ

ಪರಮ ಸತ್ಯವನ್ನು ತಿಳಿದವನಿಗೆ ಐಹಿಕ ಸಹವಾಸದಲ್ಲಿ ತನ್ನ ತೊಡಕಿನ ಸ್ಥಿತಿಯ ವಿಷಯವಾಗಿ ದೃಢವಾದ ಅರಿವಿರುತ್ತದೆ. ತಾನು ದೇವೋತ್ತಮ ಪರಮ ಪುರುಷನಾದ ಕೃಷ್ಣನ ವಿಭಿನ್ನ ಅಂಶ ಮತ್ತು ಐಹಿಕ ಸೃಷ್ಟಿಯಲ್ಲಿ ತನ್ನ ಸ್ಥಾನವಿರಬಾರದು ಎಂದು ಅವನಿಗೆ ತಿಳಿದಿರುತ್ತದೆ. ವಾಸ್ತವವಾಗಿ ತಾನು ನಿತ್ಯಜ್ಞಾನಾನಂದನಾದ ಪರಮ ಪ್ರಭುವಿನ ವಿಭಿನ್ನಾಂಶ ಎಂದು ಅವನಿಗೆ ಗೊತ್ತು. ಹೇಗೋ ತಾನು ಜೀವನದ ಭೌತಿಕ ಕಲ್ಪನೆಯಲ್ಲಿ ಸಿಕ್ಕಿಕೊಂಡಿದ್ದೇನೆ ಎಂದು ಅವನು ಗುರುತಿಸುತ್ತಾನೆ. ತನ್ನ ಪರಿಶುದ್ಧ ಅಸ್ತಿತ್ವದಲ್ಲಿ ತನ್ನ ಭಕ್ತಿಸೇವೆಯ ಚಟುವಟಿಕೆಗಳನ್ನು ದೇವೋತ್ತಮ ಪರಮ ಪುರುಷನಾದ ಕೃಷ್ಣನ ಸೇವೆಗೆ ಸರಿಹೊಂದಿಸುವುದು ಅವನ ಕರ್ತವ್ಯ. ಆದುದರಿಂದ ಅವನು ಕೃಷ್ಣಪ್ರಜ್ಞೆಯ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ಐಹಿಕ ಚಟುವಟಿಕೆಗಳು ಸನ್ನಿವೇಶಕ್ಕೆ ಮಿತಗೊಂಡವು ಮತ್ತು ತಾತ್ಕಾಲಿಕ. ಆದುದರಿಂದ ಆತನಿಗೆ ಸಹಜವಾಗಿ ಭೌತಿಕ ಇಂದ್ರಿಯಗಳ ಚಟುವಟಿಕೆಗಳಲ್ಲಿ ಆಸಕ್ತಿಯಿರುವುದಿಲ್ಲ. ತನ್ನ ಬದುಕಿನ ಐಹಿಕ ಸ್ಥಿತಿಯು ಭಗವಂತನ ಪರಮ ನಿಯಂತ್ರಣದಲ್ಲಿದೆ ಎಂದು ಅವನಿಗೆ ಗೊತ್ತು. ಆದುದರಿಂದ ವಿವಿಧ ಬಗೆಯ ಪ್ರಾಪಂಚಿಕ ಪ್ರತಿಕ್ರಿಯೆಗಳು ಅವನ ಮನಸ್ಸನ್ನು ಕಲಕುವುದಿಲ್ಲ. ಈ ಪ್ರತಿಕ್ರಿಯೆಗಳು ಭಗವಂತನ ಕರುಣೆ ಎಂದು ಅವನು ಭಾವಿಸುತ್ತಾನೆ. ಶ್ರೀಮದ್ಭಾಗವತದ ಪ್ರಕಾರ ಪರಮ ಸತ್ಯವನ್ನು ನಿರಾಕಾರ ಬ್ರಹ್ಮ, ಪರಮಾತ್ಮ ಮತ್ತು ದೇವೋತ್ತಮ ಪರಮ ಪುರುಷ ಎನ್ನುವ ಮೂರು ಸ್ವರೂಪಗಳಲ್ಲಿ ಅರಿತವನನ್ನು **ತತ್ತ್ವವಿತ್** ಎಂದು ಕರೆಯಲಾಗುತ್ತದೆ. ಏಕೆಂದರೆ ಪರಮ ಪ್ರಭುವಿನೊಂದಿಗೆ ತನ್ನ ಸಂಬಂಧದ ವಾಸ್ತವಸ್ಥಿತಿ ಅವನಿಗೆ ಗೊತ್ತು.

## ಶ್ಲೋಕ - 29

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜನ್ತೇ ಗುಣಕರ್ಮಸು |**
**ತಾನಕೃತ್ಸ್ನವಿದೋ ಮನ್ದಾನ್ ಕೃತ್ಸ್ನವಿನ್ನ ವಿಚಾಲಯೇತ್ ||೨೯||**

**ಪ್ರಕೃತೇಃ**—ಭೌತಿಕ ಪ್ರಕೃತಿಯ; **ಗುಣ**—ಗುಣಗಳಿಂದ; **ಸಮ್ಮೂಢಾಃ**—ಭೌತಿಕ ಗುರುತಿಸುವಿಕೆಯಿಂದ

ಮೂರ್ಖರಾಗಿ; **ಸಜ್ಜನ್ತೇ**—ನಿರತರಾಗುತ್ತಾರೆ; **ಗುಣ ಕರ್ಮಸು**—ಭೌತಿಕ ಕಾರ್ಯಗಳಲ್ಲಿ; **ತಾನ್**—ಅವರನ್ನು; **ಅಕೃತ್ಸ್ನ ವಿದಃ**—ಅಲ್ಪಜ್ಞಾನಿಗಳನ್ನು; **ಮನ್ದಾನ್**—ಆತ್ಮಸಾಕ್ಷಾತ್ಕಾರವನ್ನರಿಯಲು ಸೋಮಾರಿಗಳಾದ; **ಕೃತ್ಸ್ನವಿತ್**—ನಿಜ ಜ್ಞಾನದಲ್ಲಿರುವವನು; **ನ ವಿಚಾಲಯೇತ್**—ವಿಚಲಗೊಳಿಸಲು ಪ್ರಯತ್ನಿಸಬಾರದು.

## ಅನುವಾದ

**ಪ್ರಕೃತಿಯ ಗುಣಗಳಿಂದ ಮೂಢರಾದ ಅಜ್ಞಾನಿಗಳು ಸಂಪೂರ್ಣವಾಗಿ ಐಹಿಕ ಚಟುವಟಿಕೆಗಳಲ್ಲಿ ತನ್ಮಯರಾಗುತ್ತಾರೆ. ಕೆಲಸ ಮಾಡುವವರ ಅಜ್ಞಾನದಿಂದ ಈ ಕರ್ತವ್ಯಗಳು ಕೆಳಮಟ್ಟದವಾದರೂ ವಿವೇಕಿಗಳು ಅವರನ್ನು ವಿಚಲಗೊಳಿಸಲು ಪ್ರಯತ್ನಿಸಬಾರದು.**

## ಭಾವಾರ್ಥ

ತಿಳಿವಳಿಕೆಯಿಲ್ಲದವರು ಸ್ಥೂಲ ಐಹಿಕ ಪ್ರಜ್ಞೆಯೊಂದಿಗೆ ತಮ್ಮನ್ನು ತಪ್ಪಾಗಿ ಗುರುತಿಸಿಕೊಳ್ಳುತ್ತಾರೆ ಮತ್ತು ಐಹಿಕ ಉಪಾಧಿಗಳಿಂದ ತುಂಬಿಹೋಗಿರುತ್ತಾರೆ. ಈ ಶರೀರವು ಐಹಿಕ ಪ್ರಕೃತಿಯ ಕೊಡುಗೆ. ದೈಹಿಕ ಪ್ರಜ್ಞೆಗೆ ಅತಿಯಾಗಿ ಅಂಟಿಕೊಂಡಿರುವವನನ್ನು ಮಂದ ಅಥವಾ ಆತ್ಮದ ಅರಿವಿಲ್ಲದ ಸೋಮಾರಿ ಎಂದು ಕರೆಯುತ್ತಾರೆ. ಅಜ್ಞಾನಿಗಳು ದೇಹವನ್ನೇ ಆತ್ಮ ಎಂದು ಭಾವಿಸುತ್ತಾರೆ. ಇತರರೊಡನೆ ದೇಹ ಬಾಂಧವ್ಯವನ್ನು ಬಂಧುತ್ವ ಎಂದು ಸ್ವೀಕರಿಸುತ್ತಾರೆ. ತಮಗೆ ದೇಹವನ್ನು ಕೊಟ್ಟ ಭೂಮಿಯನ್ನು ಪೂಜಿಸುತ್ತಾರೆ ಮತ್ತು ಧಾರ್ಮಿಕ ವಿಧಿಗಳ ಔಪಚಾರಿಕಗಳೇ ಗುರಿ ಎಂದು ಭಾವಿಸುತ್ತಾರೆ. ಸಾಮಾಜಿಕ ಕಾರ್ಯ, ರಾಷ್ಟ್ರೀಯತೆ ಮತ್ತು ಪರೋಪಕಾರಗಳು — ಇವು ಐಹಿಕವಾಗಿ ಉಪಾಧಿಗಳಿಗೆ ಒಳಗಾದ ಜನರ ಕೆಲವು ಚಟುವಟಿಕೆಗಳು. ಇಂತಹ ಉಪಾಧಿಗಳ ಮೋಡಿಯಲ್ಲಿ ಸಿಕ್ಕು ಅವರು ಯಾವಾಗಲೂ ಐಹಿಕ ಕ್ಷೇತ್ರದಲ್ಲಿ ಕಾರ್ಯನಿರತರಾಗಿರುತ್ತಾರೆ. ಅವರಿಗೆ ಆತ್ಮಸಾಕ್ಷಾತ್ಕಾರವು ಒಂದು ಕಟ್ಟುಕತೆ. ಆದುದರಿಂದ ಅದರಲ್ಲಿ ಅವರಿಗೆ ಆಸಕ್ತಿಯಿಲ್ಲ. ಆದರೆ ಆಧ್ಯಾತ್ಮಿಕ ಬದುಕಿನಲ್ಲಿ ತಿಳಿವಳಿಕೆ ಇರುವವರು, ಹೀಗೆ ಐಹಿಕವಾಗಿ ತನ್ಮಯರಾಗಿರುವ ಜನರ ಮನಸ್ಸನ್ನು ಕ್ಷೋಭೆಗೊಳಿಸಲು ಪ್ರಯತ್ನಿಸಬಾರದು. ತಮ್ಮ ಆಧ್ಯಾತ್ಮಿಕ ಚಟುವಟಿಕೆಗಳನ್ನು ಸದ್ದಿಲ್ಲದೆ ಮುಂದುವರಿಸಿಕೊಂಡು ಹೋಗುವುದು ಉತ್ತಮ. ಹೀಗೆ ಗಲಿಬಿಲಿಗೊಂಡವರು ಅಹಿಂಸೆಯಂತಹ ಬದುಕಿನ ಮೂಲ ನೈತಿಕ ತತ್ವಗಳಲ್ಲಿ ಮತ್ತು ಇಂತಹವೇ ಐಹಿಕ ಕಲ್ಯಾಣಕಾರ್ಯದಲ್ಲಿ ತೊಡಗಿರಬಹುದು.

ಅಜ್ಞಾನಿಗಳಾದವರು ಕೃಷ್ಣಪ್ರಜ್ಞೆಯಲ್ಲಿನ ಚಟುವಟಿಕೆಗಳನ್ನು ಮೆಚ್ಚಿಕೊಳ್ಳಲಾರರು. ಆದುದರಿಂದ ಅವರನ್ನು ಕ್ಷೋಭೆಗೊಳಿಸಿ ಅಮೂಲ್ಯವಾದ ಸಮಯವನ್ನು ವ್ಯರ್ಥಮಾಡಬಾರದು ಎಂದು ಶ್ರೀಕೃಷ್ಣನು ನಮಗೆ ಬೋಧಿಸುತ್ತಾನೆ. ಆದರೆ ಭಗವಂತನ ಭಕ್ತರು ಭಗವಂತನಿಗಿಂತ ಹೆಚ್ಚು ಕೃಪಾಳುಗಳು. ಏಕೆಂದರೆ ಅವರಿಗೆ ಭಗವಂತನ ಉದ್ದೇಶವು ತಿಳಿದಿರುತ್ತದೆ. ಆದುದರಿಂದ ಅವರು ಎಲ್ಲ ಅಪಾಯಗಳನ್ನು ಎದುರಿಸುವರು. ಮನುಷ್ಯನಿಗೆ ನಿಸ್ಸಂದೇಹವಾಗಿ ಅಗತ್ಯವಾದ ಕೃಷ್ಣಪ್ರಜ್ಞೆಯ ಕಾರ್ಯಗಳಲ್ಲಿ ಮಂದಮತಿಗಳನ್ನು ತೊಡಗಿಸುವ ಪ್ರಯತ್ನವನ್ನು ಮಾಡುವಷ್ಟು ದೂರ ಸಹ ಹೋಗುತ್ತಾರೆ.

## ಶ್ಲೋಕ - 30

**ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ |**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ||೩೦||**

**ಮಯಿ**—ನನ್ನಲ್ಲಿ; **ಸರ್ವಾಣಿ**—ಎಲ್ಲ ಬಗೆಯ; **ಕರ್ಮಾಣಿ**—ಕಾರ್ಯಗಳನ್ನು; **ಸನ್ನ್ಯಸ್ಯ**—ಸಂಪೂರ್ಣವಾಗಿ ತ್ಯಜಿಸಿ; **ಅಧ್ಯಾತ್ಮ**—ಪೂರ್ಣ ಆತ್ಮಜ್ಞಾನದ; **ಚೇತಸಾ**—ಪ್ರಜ್ಞೆಯಿಂದ; **ನಿರಾಶೀಃ**—ಲಾಭದ ಆಸೆಯಿಲ್ಲದವನೂ; **ನಿರ್ಮಮಃ**—ಒಡೆತನದ ಭಾವವಿಲ್ಲದವನೂ; **ಭೂತ್ವಾ**—ಆಗಿ; **ಯುಧ್ಯಸ್ವ**—ಯುದ್ಧಮಾಡು; **ವಿಗತ ಜ್ವರಃ**—ನಿರುತ್ಸಾಹಿಯಾಗದವನು.

### ಅನುವಾದ

**ಆದುದರಿಂದ ಅರ್ಜುನ, ನಿನ್ನ ಎಲ್ಲ ಕರ್ಮಗಳನ್ನು ನನಗೆ ಅರ್ಪಿಸಿ, ನನ್ನನ್ನು ಸಂಪೂರ್ಣವಾಗಿ ಅರಿತುಕೊಂಡು, ಫಲಾಪೇಕ್ಷೆಯಿಲ್ಲದೆ, ಒಡೆತನದ ಭಾವವಿಲ್ಲದೆ, ಜಡತ್ವವಿಲ್ಲದೆ ಯುದ್ಧಮಾಡು.**

### ಭಾವಾರ್ಥ

ಈ ಶ್ಲೋಕವು ಭಗವದ್ಗೀತೆಯ ಉದ್ದೇಶವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಸೈನ್ಯದಲ್ಲಿನ ಶಿಸ್ತಿನಿಂದ ಕರ್ತವ್ಯಗಳನ್ನು ನಿರ್ವಹಿಸಲು ಮನುಷ್ಯನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಪಡೆಯಬೇಕೆಂದು ಭಗವಂತನು ಬೋಧಿಸುತ್ತಾನೆ. ಇಂತಹ ಅಪ್ಪಣೆಯಿಂದ ಕಷ್ಟಗಳು ತಲೆದೋರಬಹುದು. ಆದರೂ ಕೃಷ್ಣನನ್ನು ನೆಚ್ಚಿ ಕರ್ತವ್ಯಗಳನ್ನು ಮಾಡಬೇಕು. ಏಕೆಂದರೆ ಜೀವಿಯ ಸಹಜ ಸ್ವರೂಪವೇ ಅದು. ಭಗವಂತನ ಸಹಕಾರವಿಲ್ಲದೆ ಜೀವಿಯು ಸುಖವಾಗಿ ಇರುವುದು ಸಾಧ್ಯವಿಲ್ಲ. ಏಕೆಂದರೆ ಜೀವಿಯ ನಿತ್ಯ ಸಹಜ ಸ್ವರೂಪವು ಭಗವಂತನ ಅಪೇಕ್ಷೆಗಳಿಗೆ ವಿಧೇಯನಾಗಿ ನಡೆದುಕೊಳ್ಳುವುದು. ಆದುದರಿಂದ ಭಗವಂತನು ತನ್ನ ಸೇನಾಧಿಪತಿಯೆಂದು ಭಾವಿಸಿ ಯುದ್ಧಮಾಡಬೇಕೆಂದು ಕೃಷ್ಣನು ಅರ್ಜುನನಿಗೆ ಅಪ್ಪಣೆ ಮಾಡಿದನು. ಭಗವಂತನ ಸುಪ್ರೀತಿಗಾಗಿ ಎಲ್ಲವನ್ನೂ ತ್ಯಾಗಮಾಡಬೇಕು. ಜೊತೆಗೆ ಒಡೆತನವನ್ನು ಅಪೇಕ್ಷಿಸದೆ ನಿಯತ ಕರ್ತವ್ಯಗಳನ್ನು ಮಾಡಬೇಕು. ಅರ್ಜುನನು ಭಗವಂತನ ಆಜ್ಞೆಯನ್ನು ಪರಿಶೀಲಿಸುವ ಅಗತ್ಯವಿರಲಿಲ್ಲ. ಏನಿದ್ದರೂ ಅವನು ಆ ಆಜ್ಞೆಯನ್ನು ಪರಿಪಾಲಿಸಬೇಕಾಗಿತ್ತು, ಅಷ್ಟೇ. ಭಗವಂತನು ಎಲ್ಲ ಆತ್ಮಗಳ ಆತ್ಮ. ವೈಯಕ್ತಿಕ ಅಂಶಗಳ ಪರಿಗಣನೆಯಿಲ್ಲದೆ ಪರಮಾತ್ಮನೊಬ್ಬನನ್ನೇ ಸಂಪೂರ್ಣವಾಗಿ ಅವಲಂಬಿಸುವವನನ್ನು, ಎಂದರೆ ಸಂಪೂರ್ಣವಾಗಿ ಕೃಷ್ಣಪ್ರಜ್ಞೆ ಇರುವವನನ್ನು ಅಧ್ಯಾತ್ಮಚೇತಸ ಎಂದು ಕರೆಯುತ್ತಾರೆ. **ನಿರಾಶೀಃ** ಎಂದರೆ ಮನುಷ್ಯನು ತನ್ನ ಪ್ರಭುವಿನ ಆಜ್ಞೆಯನ್ನು ನಡೆಸಬೇಕು, ಆದರೆ ಫಲವನ್ನು ನಿರೀಕ್ಷಿಸಬಾರದು ಎಂದರ್ಥ. ಹಣಕಾಸಿನ ಗುಮಾಸ್ತೆಯು ತನ್ನ ಯಜಮಾನನಿಗಾಗಿ ಲಕ್ಷಾಂತರ ರೂಪಾಯಿಗಳನ್ನು ಎಣಿಸಬಹುದು. ಆದರೆ ಒಂದು ಬಿಡಿಕಾಸನ್ನೂ ತನ್ನದೆಂದುಕೊಳ್ಳುವುದಿಲ್ಲ. ಹಾಗೆಯೇ ಪ್ರಪಂಚದಲ್ಲಿ ಯಾವುದೂ ಯಾವ ಒಬ್ಬ ವ್ಯಕ್ತಿಗೂ ಸೇರಿದ್ದಲ್ಲ, ಎಲ್ಲವೂ ಭಗವಂತನಿಗೆ ಸೇರಿದುದು ಎಂದು ತಿಳಿದುಕೊಳ್ಳಬೇಕು. **ಮಯಿ** ಎನ್ನುವ ಶಬ್ದದ ನಿಜವಾದ ಅರ್ಥ ಇದೇ. ಇಂತಹ ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವವನು ಖಂಡಿತವಾಗಿಯೂ ಯಾವುದೇ ವಸ್ತುವು ತನಗೆ ಸೇರಿದುದು ಎಂದು ಭಾವಿಸುವುದಿಲ್ಲ. ಈ ಪ್ರಜ್ಞೆಗೆ

**ನಿರ್ಮಮ** (ಯಾವುದೂ ನನ್ನದಲ್ಲ) ಎಂದು ಹೆಸರು. ದೇಹ ಸಂಬಂಧಿಗಳು ಎನ್ನಿಸಿಕೊಳ್ಳುವವರನ್ನು ಪರಿಗಣನೆಗೆ ತೆಗೆದುಕೊಳ್ಳದೆ ಇಂತಹ ಕಠಿಣ ಅಪ್ಪಣೆಯನ್ನು ಪರಿಪಾಲಿಸಲು ಮನಸ್ಸಿಲ್ಲವಾದರೆ ಇಂತಹ ಹಿಂಜರಿತವನ್ನು ಕಿತ್ತು ಹಾಕಬೇಕು. ಈ ರೀತಿಯಲ್ಲಿ ಮನುಷ್ಯನು **ವಿಗತಜ್ವರ**ನಾಗಬಹುದು, ಎಂದರೆ ಜ್ವರ ಬಂದಂತಹ ಮನಃಸ್ಥಿತಿ ಅಥವಾ ಜಡತ್ವವನ್ನು ಕಳೆದುಕೊಳ್ಳಬಹುದು. ತನ್ನ ಗುಣ ಮತ್ತು ಸ್ಥಾನಗಳಿಗೆ ಅನುಗುಣವಾಗಿ ಪ್ರತಿಯೊಬ್ಬನೂ ಮಾಡಬೇಕಾದ ನಿರ್ದಿಷ್ಟ ಬಗೆಯ ಕೆಲಸವಿದೆ. ಮೇಲೆ ಹೇಳಿದ ರೀತಿಯಲ್ಲಿ ಇಂತಹ ಕರ್ತವ್ಯಗಳನ್ನೆಲ್ಲ ಕೃಷ್ಣಪ್ರಜ್ಞೆಯಲ್ಲಿ ನಿರ್ವಹಿಸಬೇಕು. ಇದು ಮುಕ್ತಿಮಾರ್ಗಕ್ಕೆ ಕರೆದೊಯ್ಯುತ್ತದೆ.

## ಶ್ಲೋಕ - 31

**ಯೇ ಮೇ ಮತಮಿದಂ ನಿತ್ಯಮನುತಿಷ್ಠನ್ತಿ ಮಾನವಾಃ |**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ||೩೧||**

**ಯೇ**—ಯಾವ; **ಮೇ**—ನನ್ನ; **ಮತಮ್**—ಆಜ್ಞೆಗಳನ್ನು; **ಇದಮ್**—ಈ; **ನಿತ್ಯಮ್**—ನಿತ್ಯಕಾರ್ಯವೆಂದು; **ಅನುತಿಷ್ಠನ್ತಿ**—ತಪ್ಪದೇ ಪಾಲಿಸುತ್ತಾರೋ; **ಮಾನವಾಃ**—ಮಾನವ ಜೀವಿಗಳು; **ಶ್ರದ್ಧಾವನ್ತಃ**—ಶ್ರದ್ಧಾವಂತರಾದ; **ಅನಸೂಯನ್ತಃ**—ಅಸೂಯೆಯಿಲ್ಲದ; **ಮುಚ್ಯನ್ತೇ**—ಮುಕ್ತರಾಗುತ್ತಾರೆ; **ತೇ**—ಅವರೆಲ್ಲರೂ; **ಅಪಿ**—ಕೂಡ; **ಕರ್ಮಭಿಃ**—ಕಾಮ್ಯ ಕರ್ಮಗಳ ಬಂಧನದ ನಿಯಮದಿಂದ.

## ಅನುವಾದ

**ನನ್ನ ಅಪ್ಪಣೆಗೆ ಅನುಸಾರವಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸಿ ಈ ಬೋಧನೆಯನ್ನು, ಅಸೂಯೆಯಿಲ್ಲದೆ, ಶ್ರದ್ಧೆಯಿಂದ ಅನುಸರಿಸುವವರು ಕರ್ಮಫಲದ ಬಂಧನದಿಂದ ಮುಕ್ತರಾಗುತ್ತಾರೆ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನ ಆಜ್ಞೆಯು ಎಲ್ಲ ವೇದಗಳ ಜ್ಞಾನದ ತಿರುಳು. ಆದುದರಿಂದ ಅದು ಆಕ್ಷೇಪಣೆಗೆ ಅವಕಾಶವಿಲ್ಲದಂತೆ ಶಾಶ್ವತವಾಗಿ ಸತ್ಯವಾಗಿರುತ್ತದೆ. ವೇದಗಳು ನಿತ್ಯವಾಗಿರುವಂತೆ ಈ ಕೃಷ್ಣಪ್ರಜ್ಞೆಯ ಸತ್ಯವೂ ನಿತ್ಯವಾದದ್ದು. ಭಗವಂತನಲ್ಲಿ ಅಸೂಯೆ ಇಲ್ಲದೆ ಮನುಷ್ಯನು ಈ ಆಜ್ಞೆಯಲ್ಲಿ ದೃಢವಾದ ನಂಬಿಕೆಯನ್ನು ಇಟ್ಟುಕೊಳ್ಳಬೇಕು. ಭಗವದ್ಗೀತೆಗೆ ಭಾಷ್ಯಗಳನ್ನು ಬರೆಯುವ ಆದರೆ ಕೃಷ್ಣನಲ್ಲಿ ನಂಬಿಕೆ ಇಲ್ಲದಿರುವ ತತ್ವಶಾಸ್ತ್ರಜ್ಞರು ಹಲವರಿದ್ದಾರೆ. ಅವರು ಎಂದೂ ಕರ್ಮಫಲದ ಬಂಧನದಿಂದ ಮುಕ್ತರಾಗುವುದಿಲ್ಲ. ಸಾಮಾನ್ಯ ಮನುಷ್ಯನಿಗೆ ಕೃಷ್ಣನ ಅಪ್ಪಣೆಗಳನ್ನು ಕಾರ್ಯಗತ ಮಾಡಲು ಸಾಧ್ಯವಾಗದೆ ಹೋಗಬಹುದು. ಆದರೂ ಭಗವಂತನ ನಿತ್ಯವಾದ ಅಪ್ಪಣೆಗಳಲ್ಲಿ ಅವನಿಗೆ ದೃಢವಾದ ಶ್ರದ್ಧೆ ಇದ್ದರೆ ಅವನು ಕರ್ಮದ ನಿಯಮದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಕೃಷ್ಣಪ್ರಜ್ಞೆಯ ಪ್ರಾರಂಭದಲ್ಲಿ ಮನುಷ್ಯನು ಭಗವಂತನ ಅಪ್ಪಣೆಗಳನ್ನು ಸಂಪೂರ್ಣವಾಗಿ ಪಾಲಿಸದೆ ಹೋಗಬಹುದು. ಆದರೆ ಈ ತತ್ವದ ವಿಷಯದಲ್ಲಿ

ಆತನಿಗೆ ಅಸಮಾಧಾನ ಇಲ್ಲದಿರುವುದರಿಂದ ಮತ್ತು ಸೋಲು ಹಾಗೂ ನಿರಾಸೆಗಳ ಪರಿಗಣನೆ ಇಲ್ಲದೆ ಪ್ರಾಮಾಣಿಕವಾಗಿ ಕೆಲಸ ಮಾಡುವುದರಿಂದ ನಿಶ್ಚಯವಾಗಿಯೂ ಆತನು ಶುದ್ಧ ಕೃಷ್ಣಪ್ರಜ್ಞೆಗೆ ಏರುವನು.

## ಶ್ಲೋಕ - 32

**ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ |**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ||೩೨||**

**ಯೇ**—ಯಾರು; **ತು**—ಆದರೆ; **ಏತತ್**—ಈ; **ಅಭ್ಯಸೂಯನ್ತಃ**—ಅಸೂಯೆಯುಳ್ಳವರಾಗಿ; **ನ ಅನುತಿಷ್ಠನ್ತಿ**—ಕ್ರಮಬದ್ಧವಾಗಿ ಆಚರಿಸುವುದಿಲ್ಲವೋ; **ಮೇ**—ನನ್ನ; **ಮತಮ್**—ಆಜ್ಞೆಯನ್ನು; **ಸರ್ವ ಜ್ಞಾನ**—ಸಕಲ ವಿಧ ಜ್ಞಾನದಲ್ಲಿ; **ವಿಮೂಢಾನ್**—ಪೂರ್ಣ ಮೂಢರೆಂದು; **ತಾನ್**—ಅವನ್ನು; **ವಿದ್ಧಿ**—ಚೆನ್ನಾಗಿ ತಿಳಿ; **ನಷ್ಟಾನ್**—ನಾಶವಾದ; **ಅಚೇತಸಃ**—ಕೃಷ್ಣಪ್ರಜ್ಞಾರಹಿತರಾದ.

### ಅನುವಾದ

**ಯಾರು ಅಸೂಯೆಯಿಂದ ಈ ಬೋಧನೆಗಳನ್ನು ಅಲಕ್ಷಿಸುವರೋ ಮತ್ತು ಅವನ್ನು ಅನುಸರಿಸುವುದಿಲ್ಲವೋ ಅವರು ಯಾವ ತಿಳಿವಳಿಕೆಯೂ ಇಲ್ಲದವರು, ವಿಮೂಢರು ಎಂದು ಭಾವಿಸಬೇಕು. ಪರಿಪೂರ್ಣತೆಗಾಗಿ ಅವರು ಪಡುವ ಶ್ರಮವೆಲ್ಲ ನಾಶವಾಗುವವು.**

### ಭಾವಾರ್ಥ

ಕೃಷ್ಣಪ್ರಜ್ಞೆ ಇಲ್ಲದಿರುವುದರ ದೋಷವನ್ನು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಅತ್ಯುನ್ನತ ಕಾರ್ಯಕಾರಿ ಅಧಿಕಾರಿಯ ಆಜ್ಞೆಗೆ ಅವಿಧೇಯರಾದರೆ ಹೇಗೆ ಶಿಕ್ಷೆಯುಂಟೋ ಹಾಗೆಯೇ ದೇವೋತ್ತಮ ಪರಮ ಪುರುಷನ ಆಜ್ಞೆಗೆ ಅವಿಧೇಯರಾದರೂ ನಿಶ್ಚಯವಾಗಿಯೂ ಶಿಕ್ಷೆಯುಂಟು. ಅವಿಧೇಯನಾದವನು ಎಷ್ಟೇ ದೊಡ್ಡವನಾದರೂ ಅವನು ಶೂನ್ಯ ಹೃದಯದವನಾಗಿ, ಆತ್ಮವನ್ನೂ ಪರಬ್ರಹ್ಮವನ್ನೂ ಪರಮಾತ್ಮನನ್ನೂ ದೇವೋತ್ತಮ ಪುರುಷನನ್ನೂ ಅರಿಯದವನು. ಆದುದರಿಂದ ಆತನಿಗೆ ಬದುಕಿನ ಪರಿಪೂರ್ಣತೆಯ ಭರವಸೆಯೇ ಇಲ್ಲ.

## ಶ್ಲೋಕ - 33

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ |**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ||೩೩||**

**ಸದೃಶಮ್**—ಅನುಗುಣವಾಗಿ; **ಚೇಷ್ಟತೇ**—ಪ್ರಯತ್ನಿಸುತ್ತಾನೆ; **ಸ್ವಸ್ಯಾಃ**—ಸ್ವಂತದ; **ಪ್ರಕೃತೇಃ**—ಪ್ರಕೃತಿ ಗುಣಗಳಿಗೆ; **ಜ್ಞಾನ ವಾನ್**—ವಿದ್ವಾಂಸನು; **ಅಪಿ**—ಆಗಿದ್ದರೂ; **ಪ್ರಕೃತಿಮ್**—ಪ್ರಕೃತಿಯನ್ನು; **ಯಾನ್ತಿ**—ಹೊಂದುತ್ತಾರೆ; **ಭೂತಾನಿ**—ಎಲ್ಲ ಜೀವಿಗಳು; **ನಿಗ್ರಹಃ**—ನಿಗ್ರಹವು; **ಕಿಮ್**—ಏನನ್ನು; **ಕರಿಷ್ಯತಿ**—ಮಾಡುತ್ತದೆ.

## ಅನುವಾದ

**ಪ್ರತಿಯೊಬ್ಬನೂ ತಾನು ತ್ರಿಗುಣಗಳಿಂದ ಪಡೆದ ಸ್ವಭಾವಕ್ಕೆ ಅನುಗುಣವಾಗಿ ನಡೆಯುತ್ತಾನೆ. ಆದ್ದರಿಂದ ತಿಳಿವಳಿಕೆಯುಳ್ಳವನು ಕೂಡ ತನ್ನ ಸ್ವಭಾವಕ್ಕೆ ಅನುಗುಣವಾಗಿ ಕಾರ್ಯ ನಡೆಸುತ್ತಾನೆ. ನಿಗ್ರಹದಿಂದ ಫಲವೇನು?**

## ಭಾವಾರ್ಥ

ಕೃಷ್ಣಪ್ರಜ್ಞೆಯ ಆಧ್ಯಾತ್ಮಿಕ ವೇದಿಕೆಯಲ್ಲಿ ನೆಲೆಗೊಳ್ಳದಿದ್ದರೆ ಮನುಷ್ಯನು ಐಹಿಕ ಪ್ರಕೃತಿಯ ಗುಣಗಳ ಪ್ರಭಾವದಿಂದ ಬಿಡಿಸಿಕೊಳ್ಳಲಾರ. ಇದನ್ನು ಭಗವಂತನೇ ಏಳನೆಯ ಅಧ್ಯಾಯದಲ್ಲಿ (7.14) ದೃಢಪಡಿಸುತ್ತಾನೆ. ಪ್ರಾಪಂಚಿಕ ಮಟ್ಟದಲ್ಲಿ ಒಬ್ಬ ಮನುಷ್ಯನು ಅತ್ಯುನ್ನತ ಶಿಕ್ಷಣವನ್ನು ಪಡೆಯಬಹುದು. ಆದರೂ ಸಾತ್ವಿಕ ಜ್ಞಾನದಿಂದ ಮಾತ್ರವೇ ಅಥವಾ ದೇಹವನ್ನು ಆತ್ಮದಿಂದ ಬೇರ್ಪಡಿಸಿದುದರಿಂದ ಮಾತ್ರವೇ ಅವನು ಮಾಯೆಯ ಗೋಜಿನಿಂದ ತಪ್ಪಿಸಿಕೊಳ್ಳಲಾರ. ಆಧ್ಯಾತ್ಮಿಕತೆಯ ಶಾಸ್ತ್ರದಲ್ಲಿ ಬಹು ಪರಿಣತರೆಂದು ಹೊರಗೆ ತೋರಿಸಿಕೊಂಡು ಆಧ್ಯಾತ್ಮಿಕ ಜೀವಿಗಳೆಂದು ಕರೆಸಿಕೊಳ್ಳುವವರು ಎಷ್ಟೋ ಮಂದಿ. ಆದರೆ ಅಂತರಂಗದಲ್ಲಿ ಅಥವಾ ಗುಟ್ಟಾಗಿ ಅವರು ಸಂಪೂರ್ಣವಾಗಿ ಪ್ರಕೃತಿಯ ಗುಣಗಳಿಗೆ ಅಧೀನರಾಗಿರುತ್ತಾರೆ. ಈ ಗುಣಗಳನ್ನು ಅವರು ದಾಟಲಾರರು. ಅಧ್ಯಯನದ ದೃಷ್ಟಿಯಿಂದ ಒಬ್ಬ ಮನುಷ್ಯ ಬಹು ದೊಡ್ಡ ವಿದ್ವಾಂಸನಾಗಿರಬಹುದು. ಆದರೆ ಐಹಿಕ ಪ್ರಕೃತಿಯೊಡನೆ ಬಹು ಕಾಲ ಸಹವಾಸ ಮಾಡಿದುದರಿಂದ ಆತನು ಬಂಧನದಲ್ಲಿರುತ್ತಾನೆ. ಐಹಿಕ ಅಸ್ತಿತ್ವದ ದೃಷ್ಟಿಯಿಂದ ಮನುಷ್ಯನು ತನಗೆ ವಿಧಿಸಿದ ಕರ್ತವ್ಯಗಳಲ್ಲಿ ತೊಡಗಿರಬಹುದು; ಆದರೂ ಕೃಷ್ಣಪ್ರಜ್ಞೆಯು ಆತನು ಐಹಿಕ ತೊಡಕಿನಿಂದ ಬಿಡುಗಡೆ ಹೊಂದಲು ನೆರವಾಗುತ್ತದೆ. ಆದುದರಿಂದ ಸಂಪೂರ್ಣ ಕೃಷ್ಣಪ್ರಜ್ಞೆಯನ್ನು ಸಾಧಿಸುವವರೆಗೆ ಮನುಷ್ಯನು ತನ್ನ ವೃತ್ತಿಯ ಕರ್ತವ್ಯಗಳನ್ನು ಬಿಡಬಾರದು. ಯಾರೂ ಇದ್ದಕ್ಕಿದ್ದಂತೆ ತನ್ನ ನಿಯತ ಕರ್ತವ್ಯಗಳನ್ನು ತ್ಯಜಿಸಿ, ಕೃತಕವಾಗಿ ಯೋಗಿ ಅಥವಾ ಆಧ್ಯಾತ್ಮಿಕವಾದಿ ಎಂದು ಕರೆಸಿಕೊಳ್ಳಬಾರದು. ತನ್ನ ಸ್ಥಾನದಲ್ಲೇ ಉಳಿದು, ಹೆಚ್ಚಿನ ಶಿಕ್ಷಣ ಪಡೆದವರ ಮಾರ್ಗದರ್ಶನದಲ್ಲಿ ಕೃಷ್ಣಪ್ರಜ್ಞೆಯನ್ನು ಪಡೆಯಲು ಪ್ರಯತ್ನಿಸುವುದು ಉತ್ತಮ. ಹೀಗೆ ಮನುಷ್ಯನು ಕೃಷ್ಣನ ಮಾಯೆಯ ಹಿಡಿತದಿಂದ ಪಾರಾಗಬಹುದು.

## ಶ್ಲೋಕ - 34

**ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ |**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪನ್ಥಿನೌ ||೩೪||**

**ಇನ್ದ್ರಿಯಸ್ಯ**—ಇಂದ್ರಿಯಗಳ; **ಇನ್ದ್ರಿಯಸ್ಯ ಅರ್ಥೇ**—ಇಂದ್ರಿಯ ವಿಷಯಗಳಲ್ಲಿ; **ರಾಗ**—ಆಸಕ್ತಿಯು; **ದ್ವೇಷೌ**—ಅನಾಸಕ್ತಿಯೂ ಕೂಡ; **ವ್ಯವಸ್ಥಿತೌ**—ನಿಯಂತ್ರಣಕ್ಕೆ ಒಳಗಾಗಿವೆ; **ತಯೋಃ**—ಅವುಗಳ; **ನ**—ಎಂದಿಗೂ ಇಲ್ಲ; **ವಶಮ್**—ನಿಯಂತ್ರಣದಲ್ಲಿ; **ಆಗಚ್ಛೇತ್**—ಬರಬೇಕು; **ತೌ**—ಅವು; **ಹಿ**—ಖಂಡಿತವಾಗಿಯೂ; **ಅಸ್ಯ**—ಅವನ; **ಪರಿಪನ್ಥಿನೌ**—ಅಡ್ಡಿಗಳು.

## ಅನುವಾದ

**ಇಂದ್ರಿಯಗಳು ಮತ್ತು ಅವುಗಳ ವಿಷಯಗಳಿಗೆ ಸಂಬಂಧಿಸಿದಂತೆ ರಾಗದ್ವೇಷಗಳನ್ನು ನಿಯಂತ್ರಿಸುವ ತತ್ವಗಳಿವೆ. ಮನುಷ್ಯನು ಇಂತಹ ರಾಗದ್ವೇಷಗಳ ವಶನಾಗಬಾರದು. ಏಕೆಂದರೆ ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಅವು ಅಡ್ಡಿಗಳು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವವರು ಸಹಜವಾಗಿಯೇ ಐಹಿಕ ಇಂದ್ರಿಯ ತೃಪ್ತಿಯಲ್ಲಿ ತೊಡಗಲು ಇಷ್ಟಪಡುವುದಿಲ್ಲ. ಆದರೆ ಇಂತಹ ಪ್ರಜ್ಞೆಯಲ್ಲಿ ಇಲ್ಲದವರು ಅಪೌರುಷೇಯ ಧರ್ಮಗ್ರಂಥಗಳ ವಿಧಿ-ನಿಯಮಗಳನ್ನು ಅನುಸರಿಸಬೇಕು. ಐಹಿಕ ಸೆರೆಗೆ ಮಿತಿ ಇಲ್ಲದ ಇಂದ್ರಿಯಭೋಗವೇ ಕಾರಣ. ಆದರೆ ಅಪೌರುಷೇಯ ಶಾಸ್ತ್ರಗಳ ವಿಧಿ-ನಿಯಮಗಳನ್ನು ಅನುಸರಿಸುವವನು ಇಂದ್ರಿಯ ವಸ್ತುಗಳ ಗೋಜಿಗೆ ಸಿಕ್ಕಿಬೀಳುವುದಿಲ್ಲ. ಉದಾಹರಣೆಗೆ, ಬದ್ಧ ಆತ್ಮಕ್ಕೆ ಕಾಮತೃಪ್ತಿಯು ಅಗತ್ಯ. ವಿವಾಹಬಂಧನದ ಸ್ವಾತಂತ್ರ್ಯದ ಮಿತಿಯಲ್ಲಿ ಕಾಮತೃಪ್ತಿಗೆ ಅವಕಾಶವುಂಟು. ಶಾಸ್ತ್ರಗಳ ಆದೇಶದಂತೆ, ತನ್ನ ಪತ್ನಿಯ ಹೊರತಾಗಿ ಬೇರೆ ಯಾವ ಹೆಂಗಸಿನೊಡನೆಯೂ ಕಾಮಭೋಗ ಪಡುವಂತಿಲ್ಲ. ಉಳಿದೆಲ್ಲ ಸ್ತ್ರೀಯರನ್ನೂ ತನ್ನ ತಾಯಿಯಂತೆ ಕಾಣತಕ್ಕದ್ದು. ಇಂತಹ ಆದೇಶಗಳಿದ್ದರೂ ಮನುಷ್ಯನು ಇತರ ಸ್ತ್ರೀಯರೊಡನೆ ಕಾಮಭೋಗಪಡಲು ಬಯಸುತ್ತಾನೆ. ಇಂತಹ ಪ್ರವೃತ್ತಿಗಳಿಗೆ ಕಡಿವಾಣವನ್ನು ಹಾಕಬೇಕು. ಇಲ್ಲವಾದರೆ ಅವು ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಅಡ್ಡಿಗಳಾಗುತ್ತವೆ. ಭೌತಿಕ ದೇಹವಿರುವಷ್ಟು ಕಾಲವೂ ಭೌತಿಕ ದೇಹದ ಅಗತ್ಯಗಳಿಗೆ ಅವಕಾಶ ಉಂಟು; ಆದರೆ ವಿಧಿ-ನಿಯಮಗಳಿಗೆ ಅನುಗುಣವಾಗಿ ಮಾತ್ರ. ಆದರೂ ನಾವು ಇಂತಹ ಅವಕಾಶಗಳ ಹತೋಟಿಯನ್ನು ಅವಲಂಬಿಸಬಾರದು. ಆ ನಿಯಮ ನಿಬಂಧನೆಗಳಿಗೆ ಅಂಟಿಕೊಳ್ಳದೆ ಅವನ್ನು ಅನುಸರಿಸಬೇಕು. ಏಕೆಂದರೆ ನಿಯಮಗಳಿಗೆ ವಿಧೇಯವಾಗಿ ಇಂದ್ರಿಯ ತೃಪ್ತಿಪಟ್ಟುಕೊಳ್ಳುವ ರೂಢಿಯೂ ಮನುಷ್ಯನಿಗೆ ದಾರಿತಪ್ಪಿಸಬಹುದು - ರಾಜಮಾರ್ಗಗಳಲ್ಲಿಯೂ ಅಪಘಾತಗಳ ಸಾಧ್ಯತೆಯು ಇರುವ ಹಾಗೆ. ರಸ್ತೆಗಳನ್ನು ಬಹು ಎಚ್ಚರಿಕೆಯಿಂದ ಒಳ್ಳೆಯ ಸ್ಥಿತಿಯಲ್ಲಿ ಉಳಿಸಿಕೊಂಡು ಬಂದಿರಬಹುದು; ಆದರೂ ಅತ್ಯಂತ ಸುರಕ್ಷಿತ ರಸ್ತೆಯಲ್ಲಿ ಸಹ ಅಪಘಾತ ಆಗುವುದೇ ಇಲ್ಲ ಎಂದು ಯಾರೂ ಖಂಡಿತವಾಗಿ ಭರವಸೆ ನೀಡಲು ಸಾಧ್ಯವಿಲ್ಲ. ಐಹಿಕ ಸಹವಾಸ ಇರುವುದರಿಂದ ಇಂದ್ರಿಯಭೋಗದ ಮನೋಧರ್ಮ ಬಹು ದೀರ್ಘಕಾಲದಿಂದ ಉಳಿದುಕೊಂಡು ಬಂದಿದೆ. ಆದುದರಿಂದ ಇಂದ್ರಿಯ ತೃಪ್ತಿಯು ನಿಯಂತ್ರಣಕ್ಕೆ ಒಳಗಾಗಿದ್ದರೂ, ಪತನದ ಸಾಧ್ಯತೆ ಇದ್ದೇ ಇದೆ. ಆದುದರಿಂದ ನಿಯಂತ್ರಿತ ಇಂದ್ರಿಯ ತೃಪ್ತಿಯನ್ನೂ ಸಹ ನಿಶ್ಚಯವಾಗಿಯೂ ತಪ್ಪಿಸಬೇಕು. ಆದರೆ ಕೃಷ್ಣಪ್ರಜ್ಞೆಯಲ್ಲಿ, ಎಂದರೆ ಸದಾ ಕೃಷ್ಣನ ಪ್ರೇಮಪೂರ್ವಕ ಸೇವೆಯಲ್ಲಿ, ಆಸಕ್ತಿಯನ್ನು ಬೆಳೆಸಿಕೊಂಡರೆ ಅದು ಎಲ್ಲ ಇಂದ್ರಿಯ ಕರ್ಮಗಳಿಂದ ಮನುಷ್ಯನನ್ನು ಕಾಪಾಡುತ್ತದೆ. ಆದುದರಿಂದ, ಬದುಕಿನ ಯಾವುದೇ ಘಟ್ಟದಲ್ಲಿಯೂ ಕೃಷ್ಣಪ್ರಜ್ಞೆಯಲ್ಲಿ ಅನಾಸಕ್ತರಾಗಲು ಪ್ರಯತ್ನಿಸಬಾರದು. ಎಲ್ಲ ರೀತಿಯ ಇಂದ್ರಿಯಾಸಕ್ತಿಯಿಂದ ದೂರವಾಗುವ ಉದ್ದೇಶವು ಅಂತಿಮವಾಗಿ ಕೃಷ್ಣಪ್ರಜ್ಞೆಯ ವೇದಿಕೆಯಲ್ಲಿ ನೆಲೆಯನ್ನು ಕಂಡುಕೊಳ್ಳುವುದೇ ಆಗಿದೆ.

## ಶ್ಲೋಕ - 35

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ |**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ||೩೫||**

**ಶ್ರೇಯಾನ್**—ಬಹಳ ಉತ್ತಮವು; **ಸ್ವ ಧರ್ಮಃ**—ತನ್ನ ವಿಧ್ಯುಕ್ತ ಕರ್ತವ್ಯಗಳು; **ವಿಗುಣಃ**—ತಪ್ಪಾಗಿದ್ದರೂ; **ಪರಧರ್ಮಾತ್**—ಇತರರಿಗೆ ಹೇಳಿರುವ ಕರ್ತವ್ಯಗಳಿಗಿಂತ; **ಸು ಅನುಷ್ಠಿತಾತ್**—ಪರಿಪೂರ್ಣವಾಗಿ ಆಚರಿಸಿದ; **ಸ್ವಧರ್ಮೇ**—ತನ್ನ ವಿಧ್ಯುಕ್ತ ಕರ್ತವ್ಯಗಳಲ್ಲಿ; **ನಿಧನಮ್**—ನಾಶವು; **ಶ್ರೇಯಃ**—ಉತ್ತಮವು; **ಪರಧರ್ಮಃ**—ಇತರರಿಗೆ ವಿಧ್ಯುಕ್ತವಾದ ಕರ್ತವ್ಯಗಳು; **ಭಯ ಆವಹಃ**—ಅಪಾಯಕರವಾದವು.

### ಅನುವಾದ

**ತನ್ನ ನಿಯತ ಕರ್ತವ್ಯಗಳನ್ನು ತಪ್ಪಾಗಿಯಾದರೂ ನಿರ್ವಹಿಸುವುದು ಪರಧರ್ಮವನ್ನು ಪರಿಪೂರ್ಣವಾಗಿ ಮಾಡುವುದಕ್ಕಿಂತ ಉತ್ತಮವಾದದ್ದು. ಸ್ವಧರ್ಮದಲ್ಲಿ ನಾಶವು ಮತ್ತೊಬ್ಬರ ಧರ್ಮವನ್ನು ಆಚರಿಸುವುದಕ್ಕಿಂತ ಉತ್ತಮ. ಏಕೆಂದರೆ ಪರಧರ್ಮವು ಭಯಂಕರವಾದದ್ದು.**

### ಭಾವಾರ್ಥ

ಇತರರಿಗೆ ಗೊತ್ತುಮಾಡಿದ ಕರ್ತವ್ಯಗಳನ್ನು ಮಾಡುವುದಕ್ಕಿಂತ ಮನುಷ್ಯನು ತನ್ನ ನಿಯತ ಕರ್ತವ್ಯಗಳನ್ನು ಕೃಷ್ಣಪ್ರಜ್ಞೆಯಲ್ಲಿ ಮಾಡಬೇಕು. ಲೌಕಿಕ ಕರ್ತವ್ಯಗಳೆಂದರೆ ನಿಸರ್ಗಗುಣಗಳ ಅಧೀನದಲ್ಲಿ ಮನುಷ್ಯನ ಮಾನಸಿಕ - ಭೌತಿಕ ಸ್ಥಿತಿಗನುಗುಣವಾಗಿ ನಿರ್ಧರಿಸಿದ ಕರ್ತವ್ಯಗಳಾಗಿವೆ. ಆಧ್ಯಾತ್ಮಿಕ ಕರ್ತವ್ಯಗಳು ಕೃಷ್ಣನ ಆಧ್ಯಾತ್ಮಿಕ ಸೇವೆಗಾಗಿ ಗುರುಗಳು ಆಜ್ಞಾಪಿಸಿದವು. ಐಹಿಕ ಕರ್ತವ್ಯಗಳಾಗಲೀ ಆಧ್ಯಾತ್ಮಿಕ ಕರ್ತವ್ಯಗಳಾಗಲೀ ಮನುಷ್ಯನು ಇನ್ನೊಬ್ಬರಿಗೆ ವಿಧಿಸಿದ ಕರ್ತವ್ಯಗಳನ್ನು ಅನುಕರಿಸದೆ ತನಗೆ ವಿಧಿಸಿದ ಕರ್ತವ್ಯಗಳನ್ನೇ ಸಾಯುವವರೆಗೆ ಪರಿಪಾಲಿಸಬೇಕು. ಆಧ್ಯಾತ್ಮಿಕ ವೇದಿಕೆಯ ಕರ್ತವ್ಯಗಳು ಮತ್ತು ಐಹಿಕ ವೇದಿಕೆಯ ಕರ್ತವ್ಯಗಳು ಭಿನ್ನವಾಗಿರಬಹುದು. ಆದರೆ ಅಧಿಕೃತ ನಿರ್ದೇಶನವನ್ನು ಪಾಲಿಸುವ ತತ್ವವು ಆಚರಿಸುವವನಿಗೆ ಯಾವಾಗಲೂ ಒಳ್ಳೆಯದು. ಐಹಿಕ ಪ್ರಕೃತಿಯ ಗುಣಗಳ ಹಿಡಿತದಲ್ಲಿದ್ದಾಗ ಮನುಷ್ಯನು ತನ್ನ ನಿರ್ದಿಷ್ಟ ಸನ್ನಿವೇಶಕ್ಕೆ ವಿಧಿಸಿದ ನಿಯಮಗಳನ್ನು ಅನುಸರಿಸಬೇಕು, ಇತರರನ್ನು ಅನುಕರಿಸಬಾರದು. ಉದಾಹರಣೆಗೆ, ಸತ್ವಗುಣದ ಬ್ರಾಹ್ಮಣನು ಅಹಿಂಸೆಯನ್ನು ಅನುಸರಿಸುತ್ತಾನೆ; ರಜೋಗುಣದ ಕ್ಷತ್ರಿಯನು ಹಿಂಸೆಯನ್ನು ಆಚರಿಸಬಹುದು. ಆದುದರಿಂದ ಕ್ಷತ್ರಿಯನಿಗೆ, ಅಹಿಂಸೆಯ ತತ್ವಗಳನ್ನು ಆಚರಿಸುವ ಬ್ರಾಹ್ಮಣನನ್ನು ಅನುಕರಿಸುವುದಕ್ಕಿಂತ ಹಿಂಸೆಯ ನಿಯಮಗಳನ್ನು ಅನುಸರಿಸಿ ಸೋಲುವುದು ಉತ್ತಮ. ಪ್ರತಿಯೊಬ್ಬನೂ ಕ್ರಮಕ್ರಮವಾದ ಪ್ರಕ್ರಿಯೆಯಿಂದ ತನ್ನ ಹೃದಯವನ್ನು ಶುದ್ಧಿಗೊಳಿಸಿಕೊಳ್ಳಬೇಕು. ಇದ್ದಕ್ಕಿದ್ದಂತೆ ಅಲ್ಲ. ಆದರೆ ಐಹಿಕ ನಿಸರ್ಗದ ಗುಣಗಳನ್ನು ಮೀರಿ ಕೃಷ್ಣಪ್ರಜ್ಞೆಯಲ್ಲಿ ಸಂಪೂರ್ಣವಾಗಿ ನೆಲೆಯನ್ನು ಕಂಡುಕೊಂಡಾಗ ಮನುಷ್ಯನು ನಿಜವಾದ ಗುರುವಿನ ಮಾರ್ಗದರ್ಶನದಲ್ಲಿ ಏನನ್ನಾದರೂ ಮಾಡಬಹುದು. ಕೃಷ್ಣಪ್ರಜ್ಞೆಯ ಆ ಪರಿಪೂರ್ಣ ಸ್ಥಿತಿಯಲ್ಲಿ

ಕ್ಷತ್ರಿಯನು ಬ್ರಾಹ್ಮಣನ ಕರ್ತವ್ಯವನ್ನು ಮಾಡಬಹುದು ಅಥವಾ ಬ್ರಾಹ್ಮಣನು ಕ್ಷತ್ರಿಯನ ಧರ್ಮವನ್ನು ಪಾಲಿಸಬಹುದು. ಆಧ್ಯಾತ್ಮಿಕ ಸ್ಥಿತಿಯಲ್ಲಿ ಐಹಿಕ ಜಗತ್ತಿನ ವ್ಯತ್ಯಾಸಗಳು ಅಮುಖ್ಯವಾಗುತ್ತವೆ. ಉದಾಹರಣೆಗೆ ವಿಶ್ವಾಮಿತ್ರನು ಮೂಲತಃ ಕ್ಷತ್ರಿಯನು. ಆದರೆ ಅನಂತರ ಅವನು ಬ್ರಾಹ್ಮಣನಂತೆ ವರ್ತಿಸಿದನು. ಪರಶುರಾಮನು ಬ್ರಾಹ್ಮಣ. ಆದರೆ ಅನಂತರ ಅವನು ಕ್ಷತ್ರಿಯನಂತೆ ನಡೆದುಕೊಂಡ. ಆಧ್ಯಾತ್ಮಿಕ ನೆಲೆಯನ್ನು ಸಾಧಿಸಿದ ಅವರು ಹಾಗೆ ಮಾಡಲು ಸಾಧ್ಯವಾಯಿತು. ಆದರೆ ಐಹಿಕ ನೆಲೆಯಲ್ಲಿ ಇರುವಷ್ಟು ಕಾಲ ಮನುಷ್ಯನು ಐಹಿಕ ನಿಸರ್ಗದ ಗುಣಗಳಿಗೆ ಅನುಗುಣವಾಗಿ ತನ್ನ ಕರ್ತವ್ಯಗಳನ್ನು ಮಾಡಬೇಕು. ಜೊತೆಗೇ, ಅವನಿಗೆ ಕೃಷ್ಣಪ್ರಜ್ಞೆಯ ಸಂಪೂರ್ಣ ಅರಿವಿರಬೇಕು.

## ಶ್ಲೋಕ - 36

**ಅರ್ಜುನ ಉವಾಚ**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ||೩೬||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಅಥ**—ಆಗ; **ಕೇನ**—ಯಾವುದರಿಂದ; **ಪ್ರಯುಕ್ತಃ**—ಬಲವಂತಕ್ಕೆ ಒಳಗಾಗುತ್ತಾನೆ; **ಅಯಮ್**—ಒಬ್ಬನು; **ಪಾಪಮ್**—ಪಾಪಗಳನ್ನು; **ಚರತಿ**—ಮಾಡುತ್ತಾನೆ; **ಪೂರುಷಃ**—ಮನುಷ್ಯನು; **ಅನಿಚ್ಛನ್**—ಅಪೇಕ್ಷಿಸದೆ; **ಅಪಿ**—ಆಗಿದ್ದರೂ; **ವಾರ್ಷ್ಣೇಯ**—ವೃಷ್ಣಿವಂಶದವನೇ; **ಬಲಾತ್**—ಬಲದಿಂದ; **ಇವ**—ಎಂಬಂತೆ; **ನಿಯೋಜಿತಃ**—ತೊಡಗುತ್ತಾನೆ.

## ಅನುವಾದ

**ಅರ್ಜುನನು ಹೇಳುತ್ತಾನೆ — ವೃಷ್ಣಿಯ ಸಂತತಿಯವನಾದ ಕೃಷ್ಣನೇ, ಮನುಷ್ಯನು ಇಷ್ಟವಿಲ್ಲದಿದ್ದರೂ ಬಲಾತ್ಕಾರದಿಂದ ಪಾಪಕಾರ್ಯಗಳನ್ನು ಮಾಡಲು ಯಾವುದರಿಂದ ಪ್ರಚೋದಿತನಾಗುತ್ತಾನೆ?**

## ಭಾವಾರ್ಥ

ಜೀವಿಯು ಪರಮ ಪ್ರಭುವಿನ ವಿಭಿನ್ನ ಅಂಶ. ಆದುದರಿಂದ ಅದು ಮೂಲತಃ ಆಧ್ಯಾತ್ಮಿಕವಾದದ್ದು, ಪರಿಶುದ್ಧವಾದದ್ದು ಮತ್ತು ಎಲ್ಲ ಐಹಿಕ ಕಶ್ಮಲಗಳಿಂದ ಮುಕ್ತವಾದದ್ದು. ಆದುದರಿಂದ ಮನುಷ್ಯನು ಈ ಐಹಿಕ ಜಗತ್ತಿನ ಪಾಪಗಳಿಗೆ ಒಳಪಟ್ಟವನಲ್ಲ. ಆದರೆ ಐಹಿಕ ನಿಸರ್ಗದ ಸಂಪರ್ಕದಲ್ಲಿದ್ದಾಗ ಆತನು ಹಿಂದೆಗೆಯದೆ ಅನೇಕ ಪಾಪಗಳನ್ನು ಮಾಡುತ್ತಾನೆ. ಕೆಲವೊಮ್ಮೆ ತನ್ನ ಇಚ್ಛೆಗೆ ವಿರುದ್ಧವಾಗಿ ಪಾಪಗಳನ್ನು ಮಾಡುತ್ತಾನೆ. ಆದುದರಿಂದ ವಕ್ರ ಜೀವಿಗಳ ವಕ್ರಬುದ್ಧಿಯನ್ನು ಕುರಿತು ಅರ್ಜುನನು ಕೃಷ್ಣನಿಗೆ ಕೇಳಿದ ಪ್ರಶ್ನೆಯು ತುಂಬ ಭರವಸೆಯಿಂದ ಕೂಡಿದೆ. ಕೆಲವೊಮ್ಮೆ ಜೀವಿಯು ಪಾಪವನ್ನು ಮಾಡಲು ಬಯಸದಿದ್ದರೂ ಆತನು ಕ್ರಿಯೆಯಲ್ಲಿ

ತೊಡಗಲೇ ಬೇಕಾಗುತ್ತದೆ. ಆದರೆ ಪಾಪಕರ್ಮಗಳನ್ನು ಅಂತರಂಗದಲ್ಲಿರುವ ಪರಮಾತ್ಮನು ಪ್ರಚೋದಿಸುವುದಿಲ್ಲ. ಇದಕ್ಕೆ ಬೇರೊಂದು ಕಾರಣವುಂಟು. ಇದನ್ನು ಮುಂದಿನ ಶ್ಲೋಕದಲ್ಲಿ ಭಗವಂತನು ವಿವರಿಸುತ್ತಾನೆ.

## ಶ್ಲೋಕ - 37

**ಶ್ರೀಭಗವಾನುವಾಚ**

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ |**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ||೩೭||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪುರುಷನು ಹೇಳಿದನು; **ಕಾಮಃ**—ಕಾಮವು; **ಏಷಃ**—ಇದು; **ಕ್ರೋಧಃ**—ಕೋಪವು; **ಏಷಃ**—ಇದು; **ರಜಃ ಗುಣ**—ರಜೋಗುಣದಿಂದ; **ಸಮುದ್ಭವಃ**—ಹುಟ್ಟಿದ; **ಮಹಾ ಅಶನಃ**—ಎಲ್ಲವನ್ನೂ ತಿನ್ನುವ; **ಮಹಾ ಪಾಪ್ಮಾ**—ಮಹಾ ಪಾಪಪೂರ್ಣವಾದ; **ವಿದ್ಧಿ**—ತಿಳಿದುಕೊ; **ಏನಮ್**—ಇದನ್ನು; **ಇಹ**—ಈ ಭೌತಿಕ ಜಗತ್ತಿನಲ್ಲಿ; **ವೈರಿಣಮ್**—ಮಹತ್ತಮ ವೈರಿಯು ಎಂದು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೇಳಿದನು — ಅರ್ಜುನಾ, ರಜೋಗುಣದ ಸಂಪರ್ಕದಿಂದ ಹುಟ್ಟಿ, ಅನಂತರ ಕ್ರೋಧವಾಗಿ ಮಾರ್ಪಡುವ ಕಾಮವೇ ಇದಕ್ಕೆ ಕಾರಣವಾಗುತ್ತದೆ. ಇದು ಎಲ್ಲವನ್ನೂ ನುಂಗಿಹಾಕುವ ಈ ಜಗತ್ತಿನ ಪಾಪಪೂರಿತ ಶತ್ರು.**

## ಭಾವಾರ್ಥ

ಜೀವಿಗೆ ಐಹಿಕ ಸೃಷ್ಟಿಯೊಡನೆ ಸಂಬಂಧ ಬಂದಾಗ, ರಜೋಗುಣದ ಸಹವಾಸದಿಂದ, ಕೃಷ್ಣನಲ್ಲಿ ಅವನ ನಿತ್ಯಪ್ರೇಮವು ಕಾಮವಾಗಿ ಮಾರ್ಪಡುತ್ತದೆ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ ಹುಳಿ ಹುಣಿಸೇಹಣ್ಣಿನ ಸಂಪರ್ಕದಿಂದ ಹಾಲು ಮೊಸರಾಗುವಂತೆ ಭಗವಂತನ ಪ್ರೇಮದ ಅರಿವು ಕಾಮವಾಗಿ ಮಾರ್ಪಡುತ್ತದೆ. ಕಾಮಕ್ಕೆ ತೃಪ್ತಿಯು ದೊರೆಯದಿದ್ದಾಗ ಅದು ಕ್ರೋಧವಾಗುತ್ತದೆ. ಕ್ರೋಧವು ಮಾಯೆಯಾಗಿ ಪರಿವರ್ತನೆಯಾಗುತ್ತದೆ. ಮಾಯೆಯಿಂದ ಐಹಿಕ ಅಸ್ತಿತ್ವವು ಮುಂದುವರಿಯುತ್ತದೆ. ಆದುದರಿಂದ ಕಾಮವು ಮನುಷ್ಯನ ಅತ್ಯಂತ ದೊಡ್ಡ ಶತ್ರು. ಶುದ್ಧವಾದ ಜೀವಿಯು ಐಹಿಕ ಜಗತ್ತಿನ ಬಲೆಯಲ್ಲಿಯೇ ಉಳಿದುಕೊಳ್ಳುವಂತೆ ಪ್ರೇರೇಪಿಸುವುದು ಕಾಮವೇ. ಕೋಪವು ತಮೋಗುಣದ ಅಭಿವ್ಯಕ್ತಿ. ಈ ಗುಣಗಳು ಕ್ರೋಧ ಮತ್ತು ಇದಕ್ಕೆ ಸಂಬಂಧಿಸಿದ ಇತರ ಫಲಗಳಾಗಿ ಕಾಣಿಸಿಕೊಳ್ಳುತ್ತವೆ. ರಜೋಗುಣವು ತಮೋಗುಣವಾಗಿ ಕೀಳುಮಟ್ಟಕ್ಕೆ ಇಳಿಯದೆ, ಬದುಕಿನ ಮತ್ತು ಕೆಲಸ ಮಾಡುವ ನಿಯತ ರೀತಿಯಿಂದ ಸತ್ವಗುಣಕ್ಕೆ ಏರಿದರೆ ಮನುಷ್ಯನು ಅಧಃಪತನದಿಂದ ಆಧ್ಯಾತ್ಮಿಕ ಆಸಕ್ತಿಯ ಮೂಲಕ ಉದ್ಧಾರವಾಗಬಹುದು.

ದೇವೋತ್ತಮ ಪರಮ ಪುರುಷನು ಸದಾ ಬೆಳೆಯುತ್ತಿರುವ ತನ್ನ ದಿವ್ಯಾನಂದಕ್ಕಾಗಿ ತನ್ನನ್ನು

ಅನೇಕವಾಗಿ ವಿಸ್ತರಿಸಿಕೊಂಡ. ಜೀವಿಗಳು ಈ ದಿವ್ಯಾನಂದದ ವಿಭಿನ್ನ ಅಂಶಗಳು. ಅವಕ್ಕೆ ಸ್ವಲ್ಪಮಟ್ಟಿನ ಸ್ವಾತಂತ್ರ್ಯವಿದೆ. ಆದರೆ ಈ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಂಡಾಗ ಸೇವಾಭಾವವು ಇಂದ್ರಿಯಭೋಗದ ಪ್ರವೃತ್ತಿಯಾಗಿ ಪರಿವರ್ತನೆಯಾಗುತ್ತದೆ. ಆಗ ಅವರು ಕಾಮವಶರಾಗುತ್ತಾರೆ. ಬದ್ಧಾತ್ಮಗಳು ತಮ್ಮ ಈ ಕಾಮಪ್ರವೃತ್ತಿಗಳನ್ನು ಪೂರೈಸಿಕೊಳ್ಳಲೆಂದೇ ಭಗವಂತನು ಐಹಿಕ ಜಗತ್ತನ್ನು ಸೃಷ್ಟಿಸಿದ್ದಾನೆ. ದೀರ್ಘಕಾಲದ ಕಾಮಪೂರಿತ ಚಟುವಟಿಕೆಗಳಿಂದ ಜೀವಿಗಳು ದಿಗ್ಭ್ರಮೆಗೊಂಡಾಗ ಅವು ತಮ್ಮ ನಿಜವಾದ ಸ್ಥಾನವನ್ನು ಕುರಿತು ಅನ್ವೇಷಿಸಲು ಪ್ರಾರಂಭಿಸುತ್ತವೆ.

ಈ ಅನ್ವೇಷಣೆಯೇ ವೇದಾಂತಸೂತ್ರಗಳ ಪ್ರಾರಂಭ. ಅಲ್ಲಿ **ಅಥಾತೋ ಬ್ರಹ್ಮಜಿಜ್ಞಾಸಾ,** ಮನುಷ್ಯನು ಪರಾತ್ಪರವನ್ನು ಕುರಿತು ಜಿಜ್ಞಾಸೆಯನ್ನು ಮಾಡಬೇಕು ಎಂದು ಹೇಳಿದೆ. ಶ್ರೀಮದ್ಭಾಗವತದಲ್ಲಿ ಪರಾತ್ಪರವನ್ನು **ಜನ್ಮಾದ್ಯಸ್ಯ ಯತೋಽನ್ವಯಾತ್ ಇತರತಶ್ಚ** ಅಥವಾ 'ಎಲ್ಲದರ ಮೂಲವೂ ಪರಬ್ರಹ್ಮ' ಎಂದು ವಿವರಿಸಿದೆ. ಆದುದರಿಂದ ಕಾಮದ ಮೂಲವೂ ಪರಾತ್ಪರವೇ. ಆದುದರಿಂದ ಕಾಮವನ್ನು ಪರಾತ್ಪರದ ಪ್ರೇಮವನ್ನಾಗಿ ಪರಿವರ್ತಿಸಿದರೆ, ಅಥವಾ ಕೃಷ್ಣಪ್ರಜ್ಞೆಯಾಗಿ-ಬೇರೆ ಮಾತುಗಳಲ್ಲಿ ಹೇಳುವುದಾದರೆ, ಎಲ್ಲವನ್ನೂ ಕೃಷ್ಣನಿಗಾಗಿ ಬಯಸುವುದನ್ನಾಗಿ-ಪರಿವರ್ತಿಸಿದರೆ ಕಾಮವನ್ನೂ ಕ್ರೋಧವನ್ನೂ ಅಧ್ಯಾತ್ಮವಾಗಿ ಪರಿವರ್ತಿಸಬಹುದು. ಶ್ರೀರಾಮನ ಮಹಾಭಕ್ತನಾದ ಹನುಮಂತನು ರಾವಣನ ಸ್ವರ್ಣನಗರವನ್ನು ಸುಟ್ಟು ತನ್ನ ಕೋಪವನ್ನು ತೋರಿಸಿಕೊಂಡನು. ಆದರೆ ಹೀಗೆ ಮಾಡಿ ಆತನು ಭಗವಂತನ ಅತ್ಯಂತ ಶ್ರೇಷ್ಠ ಭಕ್ತನಾದನು. ಇಲ್ಲಿ ಭಗವದ್ಗೀತೆಯಲ್ಲಿ ಸಹ ಭಗವಂತನ ತೃಪ್ತಿಗಾಗಿ ಅರ್ಜುನನು ತನ್ನ ಶತ್ರುಗಳ ಮೇಲೆ ತನ್ನ ಕೋಪವನ್ನು ಪ್ರಯೋಗಿಸುವಂತೆ ಭಗವಂತನು ಅವನನ್ನು ಪ್ರೇರೇಪಿಸುತ್ತಾನೆ. ಆದುದರಿಂದ ಕಾಮ ಕ್ರೋಧಗಳನ್ನು ಕೃಷ್ಣಪ್ರಜ್ಞೆಯಲ್ಲಿ ಬಳಸಿಕೊಂಡಾಗ ಅವು ನಮ್ಮ ಶತ್ರುಗಳಾಗದೆ ಮಿತ್ರರಾಗುತ್ತವೆ.

## ಶ್ಲೋಕ - 38

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ |**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ||೩೮||**

**ಧೂಮೇನ**—ಹೊಗೆಯಿಂದ; **ಆವ್ರಿಯತೇ**—ಆವರಿಸಲ್ಪಟ್ಟಿದೆಯೋ; **ವಹ್ನಿಃ**—ಬೆಂಕಿಯು; **ಯಥಾ**—ಹೇಗೆ; **ಆದರ್ಶಃ**—ಕನ್ನಡಿಯು; **ಮಲೇನ**—ಧೂಳಿನಿಂದ; **ಚ**—ಕೂಡ; **ಯಥಾ**—ಹೇಗೆ; **ಉಲ್ಬೇನ**—ಗರ್ಭಕೋಶದಿಂದ; **ಆವೃತಃ**—ಆವರಿಸಲ್ಪಟ್ಟದೆಯೋ; **ಗರ್ಭಃ**—ಭ್ರೂಣವು; **ತಥಾ**—ಹಾಗೆಯೇ; **ತೇನ**—ಆ ಕಾಮದಿಂದ; **ಇದಮ್**—ಇದು; **ಆವೃತಮ್**—ಆವೃತವಾಗಿದೆ.

## ಅನುವಾದ

**ಹೊಗೆಯು ಬೆಂಕಿಯನ್ನು ಮುಚ್ಚುವಂತೆ, ಧೂಳು ಕನ್ನಡಿಯನ್ನು ಮುಚ್ಚುವಂತೆ, ಗರ್ಭಕೋಶವು ಭ್ರೂಣವನ್ನು ಮುಚ್ಚುವಂತೆ, ವಿವಿಧ ಪ್ರಮಾಣಗಳ ಕಾಮವು ಜೀವಿಯನ್ನು ಮುಚ್ಚುತ್ತದೆ.**

## ಭಾವಾರ್ಥ

ಮೂರು ಪ್ರಮಾಣಗಳ ಆವರಣಗಳು ಜೀವಿಯನ್ನು ಮುಚ್ಚಿ ಅವನ ಶುದ್ಧ ಪ್ರಜ್ಞೆಯನ್ನು ಮಸುಕುಗೊಳಿಸುತ್ತವೆ. ಬೆಂಕಿಯಲ್ಲಿನ ಹೊಗೆ, ಕನ್ನಡಿಯ ಮೇಲಿನ ಧೂಳು, ಭ್ರೂಣದ ಸುತ್ತಣ ಗರ್ಭಕೋಶದಂತೆ ಇರುವ ಈ ಆವರಣವು ಕಾಮದ ವಿವಿಧ ತೋರಿಕೆಗಳು ಅಷ್ಟೇ. ಕಾಮವನ್ನು ಹೊಗೆಗೆ ಹೋಲಿಸಿದಾಗ ಕಿಡಿಯಂತೆ ಇರುವ ಜೀವಿಯ ಬೆಂಕಿಯು ಸ್ವಲ್ಪಮಟ್ಟಿಗೆ ಕಾಣುತ್ತದೆ ಎಂದು ಅರ್ಥ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಜೀವಿಯು ತನ್ನ ಕೃಷ್ಣಪ್ರಜ್ಞೆಯನ್ನು ಸ್ವಲ್ಪಮಟ್ಟಿಗೆ ಪ್ರದರ್ಶಿಸಿದಾಗ ಅವನನ್ನು ಹೊಗೆಯು ಮುಚ್ಚಿದ ಅಗ್ನಿಗೆ ಹೋಲಿಸಬಹುದು. ಹೊಗೆ ಇರುವಲ್ಲಿ ಅಗ್ನಿಯು ಇರಲೇಬೇಕು. ಆದರೂ ಪ್ರಾರಂಭದ ಘಟ್ಟದಲ್ಲಿ ಅಗ್ನಿಯು ಹೊರಕ್ಕೆ ಕಾಣಿಸಿಕೊಳ್ಳುವುದಿಲ್ಲ. ಈ ಘಟ್ಟವು ಕೃಷ್ಣಪ್ರಜ್ಞೆಯ ಆರಂಭಿಕ ಘಟ್ಟದಂತಿದೆ. ಕನ್ನಡಿಯ ಮೇಲಿನ ಧೂಳು, ಮನಸ್ಸಿನ ಕನ್ನಡಿಯನ್ನು ಹಲವಾರು ಆಧ್ಯಾತ್ಮಿಕ ರೀತಿಗಳಲ್ಲಿ ಶುಭ್ರಗೊಳಿಸುವ ವಿಧಾನಕ್ಕೆ ಸಂಬಂಧಿಸಿದೆ. ಅತ್ಯುತ್ತಮ ಮಾರ್ಗವೆಂದರೆ ಭಗವಂತನ ಪಾವನ ನಾಮದ ಸಂಕೀರ್ತನೆ. ಗರ್ಭಕೋಶವು ಭ್ರೂಣವನ್ನು ಆವರಿಸಿರುವ ಸಾದೃಶ್ಯವು ನಿಸ್ಸಹಾಯಕ ಸ್ಥಿತಿಯನ್ನು ಸೂಚಿಸುತ್ತದೆ. ಗರ್ಭದಲ್ಲಿರುವ ಶಿಶುವು ಎಷ್ಟು ನಿಸ್ಸಹಾಯಕ ಎಂದರೆ ಅದು ಅಲ್ಲಾಡಲಾರದು. ಬದುಕಿನ ಈ ಸ್ಥಿತಿಯನ್ನು ಮರಗಳ ಸ್ಥಿತಿಗೆ ಹೋಲಿಸಬಹುದು. ಮರಗಳೂ ಜೀವಿಗಳೇ. ಆದರೆ ಸ್ವಲ್ಪ ಹೆಚ್ಚುಕಡಮೆ ಪ್ರಜ್ಞೆಯೇ ಇಲ್ಲದಿರುವಷ್ಟು ಮಟ್ಟಿಗೆ ಕಾಮದ ಅತಿ ಹೆಚ್ಚಿನ ಪ್ರದರ್ಶನದಿಂದ ಅವನ್ನು ಇಂತಹ ಸ್ಥಿತಿಯಲ್ಲಿ ಇಡಲಾಗಿದೆ. ಮುಚ್ಚಿರುವ ಕನ್ನಡಿಯನ್ನು ಪಶುಪಕ್ಷಿಗಳಿಗೆ ಹೋಲಿಸಿದೆ. ಹೊಗೆಯಿಂದ ಆವೃತವಾದ ಅಗ್ನಿಯನ್ನು ಮನುಷ್ಯನಿಗೆ ಹೋಲಿಸಿದೆ. ಮನುಷ್ಯ ರೂಪದಲ್ಲಿ ಜೀವಿಯು ಕೃಷ್ಣಪ್ರಜ್ಞೆಯನ್ನು ಸ್ವಲ್ಪಮಟ್ಟಿಗೆ ಪುನಶ್ಚೇತನಗೊಳಿಸಬಹುದು; ಆತನು ಇನ್ನೂ ಬೆಳವಣಿಗೆಯನ್ನು ಸಾಧಿಸಿದರೆ ಆಧ್ಯಾತ್ಮಿಕ ಜೀವನದ ಅಗ್ನಿಯನ್ನು ತನ್ನಲ್ಲಿ ಮತ್ತೆ ಹೊತ್ತಿಸಬಹುದು. ಬೆಂಕಿಯಲ್ಲಿನ ಹೊಗೆಯನ್ನು ಎಚ್ಚರಿಕೆಯಿಂದ ನಿರ್ವಹಿಸಿದರೆ ಬೆಂಕಿಯು ಪ್ರಜ್ವಲಿಸುವಂತೆ ಮಾಡಬಹುದು. ಆದುದರಿಂದ ಮಾನವಜನ್ಮವು, ಐಹಿಕ ಅಸ್ತಿತ್ವದ ಗೋಜಿನಿಂದ ತಪ್ಪಿಸಿಕೊಳ್ಳಲು ಜೀವಿಗೆ ಒಂದು ಅವಕಾಶ. ಮನುಷ್ಯ ಜನ್ಮದಲ್ಲಿ, ಸಮರ್ಥ ಮಾರ್ಗದರ್ಶನದಲ್ಲಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ಶತ್ರುವಾದ ಕಾಮವನ್ನು ಸೋಲಿಸಬಹುದು.

## ಶ್ಲೋಕ - 39

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ |**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ ||೩೯||**

**ಆವೃತಮ್**—ಆವೃತವಾಗಿದೆ; **ಜ್ಞಾನಮ್**—ಶುದ್ಧ ಪ್ರಜ್ಞೆಯು; **ಏತೇನ**—ಈ; **ಜ್ಞಾನಿನಃ**—ಜೀವಿಯ; **ನಿತ್ಯ ವೈರಿಣಾ**—ಶಾಶ್ವತ ಶತ್ರುವಾದ; **ಕಾಮ ರೂಪೇಣ**—ಕಾಮ ರೂಪದಿಂದ; **ಕೌನ್ತೇಯ**—ಕುಂತಿಯ ಮಗನೇ; **ದುಷ್ಪೂರೇಣ**—ಎಂದಿಗೂ ತೃಪ್ತಿಯಾಗದ; **ಅನಲೇನ**—ಅಗ್ನಿಯಾದ; **ಚ**—ಕೂಡ.

### ಅನುವಾದ

**ಹೀಗೆ ಪ್ರಾಜ್ಞನಾದ ಜೀವಿಯ ಶುದ್ಧ ಪ್ರಜ್ಞೆಯನ್ನು ಅವನ ನಿತ್ಯವೈರಿಯು ಕಾಮರೂಪದಿಂದ ಆವರಿಸುತ್ತದೆ. ಅದಕ್ಕೆ ತೃಪ್ತಿ ಎನ್ನುವುದೇ ಇಲ್ಲ. ಅದು ಅಗ್ನಿಯಂತೆ ಉರಿಯುತ್ತಿರುತ್ತದೆ.**

### ಭಾವಾರ್ಥ

ಒಂದೇ ಸಮನೆ ಇಂಧನವನ್ನು ಪೂರೈಸುವುದರಿಂದ ಅಗ್ನಿಯು ಹೇಗೆ ಆರುವುದಿಲ್ಲವೋ ಹಾಗೆ ಎಷ್ಟೇ ಇಂದ್ರಿಯ ಭೋಗದಿಂದಲೂ ಕಾಮಕ್ಕೆ ತೃಪ್ತಿಯಾಗುವುದಿಲ್ಲ ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಈ ಐಹಿಕ ಜಗತ್ತಿನಲ್ಲಿ ಎಲ್ಲ ಚಟುವಟಿಕೆಗಳ ಕೇಂದ್ರವು ಕಾಮ; ಆದುದರಿಂದ ಐಹಿಕ ಜಗತ್ತನ್ನು **ಮೈಥುನ್ಯಾಗಾರ** ಅಥವಾ ಕಾಮಜೀವನದ ಸರಪಳಿಗಳು ಎಂದು ಕರೆಯುತ್ತಾರೆ. ಸಾಮಾನ್ಯ ಜೈಲಿನಲ್ಲಿ ಅಪರಾಧಿಗಳನ್ನು ಕಂಬಿಗಳ ಹಿಂದೆ ಇಡುತ್ತಾರೆ. ಹಾಗೆಯೇ, ಭಗವಂತನ ನಿಯಮಗಳನ್ನು ಉಲ್ಲಂಘಿಸಿದ ಅಪರಾಧಿಗಳಿಗೆ ಕಾಮ ಜೀವನದ ಕೈಕೋಳಗಳನ್ನು ತೊಡಿಸಲಾಗುತ್ತದೆ. ಇಂದ್ರಿಯ ಭೋಗದ ಆಧಾರದ ಮೇಲೆ ಐಹಿಕ ನಾಗರಿಕತೆಯನ್ನು ಬೆಳೆಸುವುದೆಂದರೆ ಜೀವಿಯ ಐಹಿಕ ಅಸ್ತಿತ್ವದ ಅವಧಿಯನ್ನು ಬೆಳೆಸುವುದು ಎಂದು ಅರ್ಥ. ಆದುದರಿಂದ ಈ ಕಾಮವು, ಜೀವಿಯನ್ನು ಐಹಿಕ ಜಗತ್ತಿನಲ್ಲಿಯೇ ಉಳಿಸುವ ಸಂಕೇತ. ಇಂದ್ರಿಯ ಭೋಗದಲ್ಲಿ ಸ್ವಲ್ಪ ಸುಖದ ಭಾವನೆ ಇರಬಹುದು. ಆದರೆ ವಾಸ್ತವವಾಗಿ ಸುಖ ಎನ್ನಿಸುವ ಈ ಭಾವನೆಯು ಅಂತಿಮವಾಗಿ ಭೋಗ ಪಡುವವನ ಶತ್ರುವೇ ಆಗಿರುತ್ತದೆ.

## ಶ್ಲೋಕ - 40

**ಇನ್ದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ |**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ||೪೦||**

**ಇನ್ದ್ರಿಯಾಣಿ**—ಇಂದ್ರಿಯಗಳು; **ಮನಃ**—ಮನಸ್ಸು; **ಬುದ್ಧಿಃ**—ಬುದ್ಧಿಯು; **ಅಸ್ಯ**—ಈ ಕಾಮದ; **ಅಧಿಷ್ಠಾನಮ್**—ಆವಾಸ ಸ್ಥಾನ ಎಂದು; **ಉಚ್ಯತೇ**—ಹೇಳಲಾಗಿದೆ; **ಏತೈಃ**—ಈ ಎಲ್ಲವುಗಳಿಂದ; **ವಿಮೋಹಯತಿ**—ಭ್ರಾಂತಿಗೊಳಿಸುವುದು; **ಏಷಃ**—ಈ ಕಾಮವು; **ಜ್ಞಾನಮ್**—ಜ್ಞಾನವನ್ನು; **ಆವೃತ್ಯ**—ಆವರಿಸಿ; **ದೇಹಿನಮ್**—ದೇಹವುಳ್ಳವನನ್ನು.

### ಅನುವಾದ

**ಈ ಕಾಮಕ್ಕೆ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಆವಾಸಸ್ಥಾನಗಳು. ಅವುಗಳ ಮೂಲಕ ಕಾಮವು ಜೀವಿಯ ಜ್ಞಾನವನ್ನು ಆವರಿಸಿ ಅವನನ್ನು ದಿಕ್ಕುಗೆಡಿಸುತ್ತದೆ.**

### ಭಾವಾರ್ಥ

ಬದ್ಧಾತ್ಮನ ದೇಹದಲ್ಲಿ ಶತ್ರುವು ಆಯಕಟ್ಟಿನ ಸ್ಥಾನಗಳನ್ನು ವಶಮಾಡಿಕೊಂಡಿದ್ದಾನೆ. ಶತ್ರುವನ್ನು ಸೋಲಿಸಲು ಬಯಸುವವನಿಗೆ ಶತ್ರು ಎಲ್ಲಿದ್ದಾನೆ ಎಂದು ತಿಳಿಯಬೇಕು. ಆದುದರಿಂದ

ಕೃಷ್ಣನು ಆ ಸ್ಥಳಗಳ ಸುಳಿವನ್ನು ಕೊಡುತ್ತಿದ್ದಾನೆ. ಇಂದ್ರಿಯಗಳ ಎಲ್ಲ ಚಟುವಟಿಕೆಗಳ ಕೇಂದ್ರ ಮನಸ್ಸು. ಆದುದರಿಂದ ಇಂದ್ರಿಯ ವಸ್ತುಗಳ ವಿಷಯವನ್ನು ಕೇಳಿದಾಗ ಸಾಮಾನ್ಯವಾಗಿ ಮನಸ್ಸು ಎಲ್ಲ ಇಂದ್ರಿಯ ಭೋಗಗಳ ಯೋಚನೆಗಳ ಆಗರವಾಗುತ್ತದೆ. ಇದರ ಪರಿಣಾಮವಾಗಿ, ಮನಸ್ಸೂ ಇಂದ್ರಿಯಗಳೂ ಕಾಮದ ಭಂಡಾರಗಳಾಗುತ್ತವೆ. ಅನಂತರ, ಬುದ್ಧಿಯ ವಿಭಾಗವು ಇಂತಹ ಕಾಮಪ್ರವೃತ್ತಿಗಳ ರಾಜಧಾನಿಯಾಗುತ್ತದೆ. ಬುದ್ಧಿಯು ಆತ್ಮದ ನೆರಮನೆಯ ನಿವಾಸಿ. ಕಾಮಪೂರಿತ ಬುದ್ಧಿಯು, ಆತ್ಮವು ಅಹಂಕಾರವನ್ನು ಪಡೆಯುವಂತೆ ಮತ್ತು ಜಡವಸ್ತುವಿನೊಂದಿಗೆ, ಆ ಮೂಲಕ ಮನಸ್ಸು ಮತ್ತು ಇಂದ್ರಿಯಗಳೊಂದಿಗೆ ತನ್ನನ್ನು ಗುರುತಿಸಿಕೊಳ್ಳುವಂತೆ, ಪ್ರಭಾವವನ್ನು ಬೀರುತ್ತದೆ. ಆತ್ಮವು ಹೀಗೆ ಐಹಿಕ ಇಂದ್ರಿಯಗಳ ಭೋಗದ ವ್ಯಸನಕ್ಕೆ ತುತ್ತಾಗುತ್ತದೆ. ಇದೇ ನಿಜವಾದ ಸುಖ ಎಂದು ಭ್ರಮಿಸುತ್ತದೆ. ಆತ್ಮವು ಹೀಗೆ ತಪ್ಪಾಗಿ ಗುರುತಿಸಿಕೊಳ್ಳುವುದನ್ನು ಶ್ರೀಮದ್ಭಾಗವತದಲ್ಲಿ (10.84.13) ಬಹು ಸೊಗಸಾಗಿ ವರ್ಣಿಸಿದೆ:

**ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ**
**ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ |**
**ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿತ್**
**ಜನೇಷ್ವಭಿಜ್ಞೇಷು ಸ ಏವ ಗೋಖರಃ ||**

"ಯಾವ ಮನುಷ್ಯನು ತ್ರಿಧಾತುಗಳಿಂದ ಆದ ಈ ದೇಹವನ್ನು ತನ್ನ ಆತ್ಮದೊಂದಿಗೆ ಒಂದಾಗಿ ಗುರುತಿಸುವನೋ, ದೇಹದ ಉತ್ಪಾದನೆಗಳನ್ನು ತನ್ನ ಬಂಧುಗಳೆಂದು ಪರಿಗಣಿಸುವನೋ, ತಾನು ಹುಟ್ಟಿದ ಭೂಮಿಯು ಪೂಜಾರ್ಹವೆಂದು ಭಾವಿಸುವನೋ ಮತ್ತು ಆಧ್ಯಾತ್ಮಿಕ ತಿಳಿವಳಿಕೆ ಉಳ್ಳವರನ್ನು ಭೇಟಿಮಾಡುವುದಕ್ಕಿಂತ ಹೆಚ್ಚಾಗಿ ಸ್ನಾನ ಮಾಡುವುದಕ್ಕಾಗಿ ಯಾತ್ರಾಸ್ಥಳಕ್ಕೆ ಹೋಗುವನೋ ಅವನನ್ನು ಒಂದು ಕತ್ತೆಯಂತೆ ಅಥವಾ ಹಸುವಿನಂತೆ ಪರಿಗಣಿಸಬೇಕು."

## ಶ್ಲೋಕ - 41

**ತಸ್ಮಾತ್ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ |**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ||೪೧||**

**ತಸ್ಮಾತ್**—ಆದ್ದರಿಂದ; **ತ್ವಮ್**—ನೀನು; **ಇನ್ದ್ರಿಯಾಣಿ**—ಇಂದ್ರಿಯಗಳನ್ನು; **ಆದೌ**—ಪ್ರಾರಂಭದಲ್ಲಿ; **ನಿಯಮ್ಯ**—ನಿಯಂತ್ರಿಸಿ; **ಭರತ ಋಷಭ**—ಭರತ ವಂಶದವರಲ್ಲಿ ಶ್ರೇಷ್ಠನಾದವನೇ; **ಪಾಪ್ಮಾನಮ್**—ಪಾಪದ ಮಹಾಸಂಕೇತವಾದ; **ಪ್ರಜಹಿ**—ತಡೆಹಿಡಿ; **ಹಿ**—ಖಂಡಿತವಾಗಿಯೂ; **ಏನಮ್**—ಇದನ್ನು; **ಜ್ಞಾನ**—ಜ್ಞಾನ; **ವಿಜ್ಞಾನ**—ಶುದ್ಧಾತ್ಮನ ವೈಜ್ಞಾನಿಕ ಜ್ಞಾನಗಳ; **ನಾಶನಮ್**—ನಾಶಮಾಡುವ.

## ಅನುವಾದ

**ಆದುದರಿಂದ, ಭರತವಂಶಜರಲ್ಲಿ ಶ್ರೇಷ್ಠನಾದ ಅರ್ಜುನನೇ, ಪ್ರಾರಂಭದಲ್ಲಿಯೇ ಇಂದ್ರಿಯಗಳನ್ನು**

**ನಿಯಂತ್ರಿಸಿ ಪಾಪದ ಮಹಾಸಂಕೇತವಾದ ಕಾಮಕ್ಕೆ ಕಡಿವಾಣ ಹಾಕು. ಜ್ಞಾನ ಮತ್ತು ಆತ್ಮ ಸಾಕ್ಷಾತ್ಕಾರಗಳನ್ನು ನಾಶಮಾಡುವ ಈ ಕಾಮವನ್ನು ಧ್ವಂಸಮಾಡು.**

## ಭಾವಾರ್ಥ

ಕಾಮವು ಆತ್ಮಸಾಕ್ಷಾತ್ಕಾರದ ಮತ್ತು ಆತ್ಮದ ನಿಶ್ಚಿತ ಜ್ಞಾನದ ಹಂಬಲವನ್ನು ನಾಶಮಾಡುತ್ತದೆ. ಇದು ಮನುಷ್ಯನ ಅತ್ಯಂತ ಪಾಪಿಯಾದ ಶತ್ರು. ಇದನ್ನು ನಿಯಂತ್ರಿಸಲು ಪ್ರಾರಂಭದಿಂದಲೂ ಇಂದ್ರಿಯಗಳನ್ನು ಹತೋಟಿಯಲ್ಲಿಡಬೇಕೆಂದು ಭಗವಂತನು ಅರ್ಜುನನಿಗೆ ಬೋಧಿಸಿದನು. ಜ್ಞಾನ ಎಂದರೆ ಆತ್ಮೇತರವಾದದ್ದರಿಂದ ಭಿನ್ನವಾದ ಆತ್ಮದ ಜ್ಞಾನ; ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇದು, ಆತ್ಮವು ದೇಹವಲ್ಲ ಎನ್ನುವ ಅರಿವು. ವಿಜ್ಞಾನ ಎನ್ನುವುದು ಆತ್ಮದ ಸ್ವರೂಪ ಮತ್ತು ಪರಮಾತ್ಮನೊಡನೆ ಅದರ ಸಂಬಂಧ ಇವುಗಳ ನಿಶ್ಚಿತ ಜ್ಞಾನ. ಇದನ್ನು ಶ್ರೀಮದ್ಭಾಗವತದಲ್ಲಿ (2.9.31) ಹೀಗೆ ವಿವರಿಸಿದೆ:

**ಜ್ಞಾನಂ ಪರಮಗುಹ್ಯಂ ಮೇ ಯದ್ ವಿಜ್ಞಾನ ಸಮನ್ವಿತಮ್ |**
**ಸರಹಸ್ಯಂ ತದಙ್ಗಂ ಚ ಗೃಹಾಣ ಗದಿತಂ ಮಯಾ ||**

"ಆತ್ಮ ಮತ್ತು ಪರಮಾತ್ಮನ ಜ್ಞಾನವು ಬಹುಗೋಪ್ಯವಾದದ್ದು ಮತ್ತು ನಿಗೂಢವಾದದ್ದು. ಆದರೆ ಭಗವಂತನೇ ಅವುಗಳ ವಿವಿಧ ಅಂಶಗಳನ್ನು ವಿವರಿಸಿದರೆ ಇಂತಹ ಜ್ಞಾನವನ್ನೂ ನಿರ್ದಿಷ್ಟ ಸಾಕ್ಷಾತ್ಕಾರವನ್ನೂ ಅರ್ಥಮಾಡಿಕೊಳ್ಳಬಹುದು." ಭಗದ್ಗೀತೆಯು ನಮಗೆ ಆತ್ಮನ ಈ ಸಾಮಾನ್ಯ ಮತ್ತು ನಿರ್ದಿಷ್ಟ ಜ್ಞಾನವನ್ನು ಕೊಡುತ್ತದೆ. ಜೀವಿಗಳು ಭಗವಂತನ ವಿಭಿನ್ನಾಂಶಗಳು. ಆದುದರಿಂದ ಅವರ ಅಸ್ತಿತ್ವದ ಉದ್ದೇಶವೇ ಭಗವಂತನ ಸೇವೆ. ಈ ಪ್ರಜ್ಞೆಗೆ ಕೃಷ್ಣಪ್ರಜ್ಞೆ ಎಂದು ಹೆಸರು. ಆದುದರಿಂದ ಬದುಕಿನ ಪ್ರಾರಂಭದಲ್ಲಿಯೇ ಮನುಷ್ಯನು ಈ ಕೃಷ್ಣಪ್ರಜ್ಞೆಯನ್ನು ಕಲಿಯಬೇಕು. ಇದರಿಂದ ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ಅದಕ್ಕೆ ಅನುಗುಣವಾಗಿ ನಡೆದುಕೊಳ್ಳುವುದು ಸಾಧ್ಯವಾಗುತ್ತದೆ.

ಪ್ರತಿಯೊಂದು ಜೀವಿಗೂ ಭಗವಂತನ ಪ್ರೇಮವು ಸಹಜ. ಕಾಮವು ಈ ಪ್ರೇಮದ ವಕ್ರ ಪ್ರತಿಬಿಂಬ. ಆದರೆ ಪ್ರಾರಂಭದಿಂದ ಕೃಷ್ಣಪ್ರಜ್ಞೆಯಲ್ಲಿ ಶಿಕ್ಷಣ ಪಡೆದವನಿಗೆ ಭಗವಂತನಲ್ಲಿನ ಸಹಜವಾದ ಪ್ರೇಮವು ಕಾಮವಾಗಿ ಕೀಳಾಗಲಾರದು. ಭಗವಂತನಲ್ಲಿನ ಪ್ರೇಮವು ಕಾಮದ ಕೀಳುಸ್ಥಿತಿಗೆ ಬಂದಾಗ ಸಹಜಸ್ಥಿತಿಗೆ ಹಿಂದಿರುಗುವುದು ಬಹುಕಷ್ಟ. ಆದರೂ ಕೃಷ್ಣಪ್ರಜ್ಞೆಯ ಶಕ್ತಿ ಎಷ್ಟೆಂದರೆ ತಡವಾಗಿ ಪ್ರಾರಂಭಿಸಿದವನು ಭಕ್ತಿಸೇವೆಯ ನಿಯಂತ್ರಕ ತತ್ವಗಳನ್ನು ಅನುಸರಿಸಿದರೆ ಭಗವಂತನ ಪ್ರೇಮಿಯಾಗಬಹುದು. ಆದುದರಿಂದ ಬದುಕಿನ ಯಾವುದೇ ಹಂತದಿಂದಾಗಲೀ ಅಥವಾ ಅದರ ತುರ್ತನ್ನು ಅರ್ಥಮಾಡಿಕೊಂಡ ಕಾಲದಿಂದಾಗಲೀ ಮನುಷ್ಯನು ಕೃಷ್ಣಪ್ರಜ್ಞೆಯಿಂದ ಇಂದ್ರಿಯಗಳನ್ನು ನಿಯಂತ್ರಿಸಿ ಭಗವಂತನ ಪ್ರೇಮಪೂರ್ವಕ ಸೇವೆಯನ್ನು ಪ್ರಾರಂಭಿಸಬಹುದು; ಕಾಮವನ್ನು ಭಗವಂತನ ಪ್ರೇಮಕ್ಕೆ ಪರಿವರ್ತಿಸಬಹುದು. ಭಗವತ್ಪ್ರೇಮವೇ ಮನುಷ್ಯ ಜೀವನದ ಅತ್ಯಂತ ಪರಿಪೂರ್ಣ ಹಂತ.

## ಶ್ಲೋಕ - 42

**ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ |**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ||೪೨||**

**ಇನ್ದ್ರಿಯಾಣಿ**—ಇಂದ್ರಿಯಗಳು; **ಪರಾಣಿ**—ಶ್ರೇಷ್ಠವು; **ಆಹುಃ**—ಎಂದು ಹೇಳುವರು; **ಇನ್ದ್ರಿಯೇಭ್ಯಃ**—ಇಂದ್ರಿಯಗಳಿಗಿಂತಲೂ; **ಪರಮ್**—ಶ್ರೇಷ್ಠವು; **ಮನಃ**—ಮನಸ್ಸು; **ಮನಸಃ**—ಮನಸ್ಸಿಗಿಂತಲೂ; **ತು**—ಕೂಡ; **ಪರಾ**—ಶ್ರೇಷ್ಠವು; **ಬುದ್ಧಿಃ**—ಬುದ್ಧಿಯು; **ಯಃ**—ಯಾವ; **ಬುದ್ಧೇಃ**—ಬುದ್ಧಿಗಿಂತಲೂ; **ಪರತಃ**—ಶ್ರೇಷ್ಠನು; **ತು**—ಆದರೆ; **ಸಃ**—ಅವನು.

### ಅನುವಾದ

**ಕ್ರಿಯಾಶಾಲಿಯಾದ ಇಂದ್ರಿಯಗಳು ಜಡವಸ್ತುವಿಗಿಂತ ಶ್ರೇಷ್ಠ. ಮನಸ್ಸು ಇಂದ್ರಿಯಗಳಿಗಿಂತ ಶ್ರೇಷ್ಠ. ಬುದ್ಧಿಯು ಮನಸ್ಸಿಗಿಂತ ಇನ್ನೂ ಬಹು ಶ್ರೇಷ್ಠ ಮತ್ತು ಆತ್ಮನು ಬುದ್ಧಿಗಿಂತ ಬಹು ಶ್ರೇಷ್ಠನು.**

### ಭಾವಾರ್ಥ

ಇಂದ್ರಿಯಗಳು ಕಾಮದ ಚಟುವಟಿಕೆಗಳ ವಿವಿಧ ದ್ವಾರಗಳು. ಕಾಮವು ದೇಹದಲ್ಲಿ ಅಡಗಿದೆ. ಆದರೆ ಅದು ಇಂದ್ರಿಯಗಳ ಮೂಲಕ ಹೊರಹೊಮ್ಮುತ್ತದೆ. ಆದುದರಿಂದ ಇಡೀ ದೇಹಕ್ಕಿಂತ ಇಂದ್ರಿಯಗಳು ಶ್ರೇಷ್ಠ. ಶ್ರೇಷ್ಠ ಪ್ರಜ್ಞೆ ಅಥವಾ ಕೃಷ್ಣಪ್ರಜ್ಞೆ ಇರುವಾಗ ಈ ದ್ವಾರಗಳ ಬಳಕೆಯಾಗುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಆತ್ಮವು ದೇವೋತ್ತಮ ಪರಮ ಪುರುಷನೊಡನೆ ನೇರ ಸಂಪರ್ಕವನ್ನು ಮಾಡುತ್ತದೆ. ಆದುದರಿಂದ ಇಲ್ಲಿ ವರ್ಣಿಸಿರುವಂತೆ ದೈಹಿಕ ಕ್ರಿಯೆಗಳ ಶ್ರೇಣಿಬದ್ಧ ವ್ಯವಸ್ಥೆಯು ಕಡೆಗೆ ಪರಮಾತ್ಮನಲ್ಲಿ ಮುಕ್ತಾಯವಾಗುತ್ತದೆ. ದೈಹಿಕ ಕ್ರಿಯೆಯೆಂದರೆ ಇಂದ್ರಿಯಗಳ ಕೆಲಸಕಾರ್ಯಗಳು. ಇಂದ್ರಿಯಗಳನ್ನು ತಡೆಯುವುದೆಂದರೆ ಎಲ್ಲ ದೈಹಿಕ ಕ್ರಿಯೆಗಳನ್ನು ನಿಲ್ಲಿಸುವುದು. ಆದರೆ ಮನಸ್ಸು ಕ್ರಿಯಾಶೀಲವಾದದ್ದರಿಂದ, ದೇಹವು ಮೌನವಾಗಿ ವಿಶ್ರಾಂತಿಯಲ್ಲಿದ್ದರೂ ಮನಸ್ಸು ಕೆಲಸ ಮಾಡುತ್ತದೆ. ಕನಸು ಕಾಣುವಾಗ ಹೀಗಾಗುತ್ತದೆ. ಆದರೆ ಬುದ್ಧಿಶಕ್ತಿಯ ನಿರ್ಧಾರವು ಮನಸ್ಸಿಗಿಂತ ಮೇಲಿದೆ. ಬುದ್ಧಿಶಕ್ತಿಯ ಮೇಲೆ ಆತ್ಮವಿದೆ. ಆದುದರಿಂದ ಆತ್ಮವು ಪರಾತ್ಪರದೊಂದಿಗೆ ನೇರವಾಗಿ ತೊಡಗಿದ್ದರೆ ಅದಕ್ಕೆ ಅಧೀನವಾದ ಬುದ್ಧಿಶಕ್ತಿ, ಮನಸ್ಸು ಮತ್ತು ಇಂದ್ರಿಯಗಳು ಸಹಜವಾಗಿ ತಂತಾವೇ ತೊಡಗುತ್ತವೆ. ಕಠೋಪನಿಷತ್ತಿನಲ್ಲಿ ಇಂತಹುದೇ ಒಂದು ಭಾಗವಿದೆ. ಇಂದ್ರಿಯಭೋಗದ ವಸ್ತುಗಳು ಇಂದ್ರಿಯಗಳಿಗಿಂತ ಶ್ರೇಷ್ಠವಾದವು ಮತ್ತು ಮನಸ್ಸು ಇಂದ್ರಿಯಗಳ ವಸ್ತುಗಳಿಗಿಂತ ಶ್ರೇಷ್ಠವಾದದ್ದು ಎಂದು ಅಲ್ಲಿ ಹೇಳಿದೆ. ಆದುದರಿಂದ ಮನಸ್ಸು ನಿರಂತರವಾಗಿ ಭಗವಂತನ ಸೇವೆಯಲ್ಲಿ ತೊಡಗಿದ್ದರೆ ಇಂದ್ರಿಯಗಳು ಬೇರೆ ರೀತಿಗಳಲ್ಲಿ ಕೆಲಸ ಮಾಡಲು ಅವಕಾಶವೇ ಇರುವುದಿಲ್ಲ. ಈ ಮಾನಸಿಕ ನಿಲುವನ್ನು ಆಗಲೇ ವಿವರಿಸಿದೆ. **ಪರಮ್ ದೃಷ್ಟ್ವಾ ನಿವರ್ತತೇ.** ಮನಸ್ಸು ಭಗವಂತನ ಅಲೌಕಿಕ ಸೇವೆಯಲ್ಲಿ ನಿರತವಾಗಿದ್ದರೆ ಕೀಳು ಪ್ರವೃತ್ತಿಗಳಲ್ಲಿ ಅದು ತೊಡಗಲು ಅವಕಾಶವೇ ಇರುವುದಿಲ್ಲ. ಕಠೋಪನಿಷತ್ತಿನಲ್ಲಿ ಆತ್ಮವನ್ನು **ಮಹಾನ್** ಎಂದು ವರ್ಣಿಸಿದೆ. ಆದುದರಿಂದ ಆತ್ಮವು ಇಂದ್ರಿಯಗಳ ವಸ್ತುಗಳು, ಇಂದ್ರಿಯಗಳು,

ಮನಸ್ಸು ಮತ್ತು ಬುದ್ಧಿ ಇವೆಲ್ಲವುಗಳಿಗಿಂತ ಶ್ರೇಷ್ಠ. ಆದುದರಿಂದ, ಆತ್ಮಸ್ವರೂಪವನ್ನು ನೇರವಾಗಿ ಅರಿತುಕೊಳ್ಳುವುದೇ ಈ ಇಡೀ ಸಮಸ್ಯೆಗೆ ಪರಿಹಾರ.

ಬುದ್ಧಿಯನ್ನು ಬಳಸಿ ಮನುಷ್ಯನು ಆತ್ಮದ ಸ್ವರೂಪವನ್ನು ಕಂಡುಕೊಳ್ಳಬೇಕು. ಅನಂತರ ಮನಸ್ಸನ್ನು ಸದಾ ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಬೇಕು. ಇದು ಇಡೀ ಸಮಸ್ಯೆಗೆ ಪರಿಹಾರ. ಹೊಸದಾಗಿ ದೀಕ್ಷೆಪಡೆದ ಆಧ್ಯಾತ್ಮಿಕ ಅನ್ವೇಷಕನಿಗೆ ಸಾಮಾನ್ಯವಾಗಿ ಇಂದ್ರಿಯಗಳ ವಸ್ತುಗಳಿಂದ ದೂರವಿರುವಂತೆ ಬುದ್ಧಿ ಹೇಳುತ್ತಾರೆ. ಆದರೆ ಇದಲ್ಲದೆ ಬುದ್ಧಿಯನ್ನು ಬಳಸಿ ಮನಸ್ಸಿಗೆ ಶಕ್ತಿಯನ್ನು ತಂದುಕೊಳ್ಳಬೇಕು. ಬುದ್ಧಿಯನ್ನು ಬಳಸಿ, ದೇವೋತ್ತಮ ಪರಮ ಪುರುಷನಿಗೆ ಸಂಪೂರ್ಣವಾಗಿ ಶರಣಾಗತನಾಗಿ ಮನಸ್ಸನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಿದರೆ ತಂತಾನೇ ಮನಸ್ಸಿನ ಶಕ್ತಿ ಹೆಚ್ಚುತ್ತದೆ. ಇಂದ್ರಿಯಗಳು ಸರ್ಪಗಳಂತೆ ಬಹು ಬಲಶಾಲಿಗಳೆಂದು ಕಂಡರೂ, ಹಲ್ಲುಕಿತ್ತ ಹಾವಿಗಿಂತ ಅವು ಪರಿಣಾಮಕಾರಿಯಾಗಲಾರವು. ಆತ್ಮವು ಬುದ್ಧಿಯ ಮತ್ತು ಮನಸ್ಸಿನ ಯಜಮಾನನಾಗಿ, ಇಂದ್ರಿಯಗಳಿಗೂ ಯಜಮಾನನಾಗಿದ್ದರೂ, ಕೃಷ್ಣಪ್ರಜ್ಞೆಯಿಂದ ಕೃಷ್ಣನೊಡನೆ ಸೇರಿ ಅದು ಬಲಶಾಲಿಯಾಗದಿದ್ದರೆ, ಉದ್ವಿಗ್ನವಾದ ಮನಸ್ಸಿನಿಂದ ಪತನ ಹೊಂದುವ ಸಾಧ್ಯತೆಯು ಇದ್ದೇ ಇರುತ್ತದೆ.

## ಶ್ಲೋಕ - 43

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ |**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ||೪೩||**

**ಏವಮ್**—ಹೀಗೆ; **ಬುದ್ಧೇಃ**—ಬುದ್ಧಿಗಿಂತ; **ಪರಮ್**—ಶ್ರೇಷ್ಠವಾದುದನ್ನು; **ಬುದ್ಧ್ವಾ**—ತಿಳಿದು; **ಸಂಸ್ತಭ್ಯ**—ಸ್ಥಿರಗೊಳಿಸಿ; **ಆತ್ಮಾನಮ್**—ಮನಸ್ಸನ್ನು; **ಆತ್ಮನಾ**—ಸಾವಧಾನದ ಬುದ್ಧಿಯಿಂದ; **ಜಹಿ**—ಜಯಿಸು; **ಶತ್ರುಮ್**—ವೈರಿಯನ್ನು; **ಮಹಾ ಬಾಹೋ**—ಮಹಾಬಾಹುವೇ; **ಕಾಮರೂಪಮ್** —ಕಾಮದ ಆಕಾರದಲ್ಲಿರುವ; **ದುರಾಸದಮ್**—ದುರ್ದಮವಾದ.

## ಅನುವಾದ

**ಮಹಾಬಾಹುವಾದ ಅರ್ಜುನನೇ, ಭೌತಿಕ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವೆಲ್ಲವನ್ನೂ ಮನುಷ್ಯನು ಮೀರಿದವನು. ಇದನ್ನು ಅರಿತು ಮನಸ್ಸನ್ನು ಉದ್ದೇಶಪೂರ್ವಕವಾದ ಅಲೌಕಿಕ ಬುದ್ಧಿಯಿಂದ (ಕೃಷ್ಣಪ್ರಜ್ಞೆಯಿಂದ) ದೃಢಗೊಳಿಸಬೇಕು; ಹೀಗೆ ಆಧ್ಯಾತ್ಮಿಕ ಶಕ್ತಿಯಿಂದ ಎಂದೂ ತೃಪ್ತಿ ಪಡಿಸಲು ಸಾಧ್ಯವಿಲ್ಲದ ಈ ಕಾಮ ಎಂಬ ವೈರಿಯನ್ನು ಗೆಲ್ಲಬೇಕು.**

## ಭಾವಾರ್ಥ

ನಿರಾಕಾರ ಶೂನ್ಯತೆಯನ್ನು ಅಂತಿಮಗುರಿಯಾಗಿ ಪರಿಗಣಿಸಬಾರದು, ದೇವೋತ್ತಮ ಪರಮ ಪುರುಷನ ನಿತ್ಯಸೇವಕ ತಾನು ಎಂದು ತಿಳಿದುಕೊಂಡು ಕೃಷ್ಣಪ್ರಜ್ಞೆಯನ್ನು ಸಾಧಿಸಬೇಕು ಎಂದು ಭಗವದ್ಗೀತೆಯ ಈ ಮೂರನೆಯ ಅಧ್ಯಾಯವು ನಿರ್ಣಾಯಕವಾಗಿ ನಿರ್ದೇಶಿಸುತ್ತದೆ. ಬದುಕಿನ ಐಹಿಕ ಅಸ್ತಿತ್ವದಲ್ಲಿ ಕಾಮಪ್ರವೃತ್ತಿಗಳಿಂದ ಮತ್ತು ಭೌತಿಕ ನಿಸರ್ಗದ ಸಂಪನ್ಮೂಲಗಳ ಮೇಲೆ

ಪ್ರಭುತ್ವ ನಡೆಸುವ ಆಸೆಯಿಂದ ನಿಶ್ಚಯವಾಗಿಯೂ ಮನುಷ್ಯನು ಪ್ರಭಾವಿತನಾಗುತ್ತಾನೆ. ಯಜಮಾನಿಕೆ ನಡೆಸುವ ಆಸೆ ಮತ್ತು ಇಂದ್ರಿಯಭೋಗದ ಆಸೆ ಬದ್ಧ ಆತ್ಮದ ಅತ್ಯಂತ ದೊಡ್ಡ ಶತ್ರು. ಆದರೆ ಕೃಷ್ಣಪ್ರಜ್ಞೆಯ ಬಲದಿಂದ ಭೌತಿಕ ಇಂದ್ರಿಯಗಳನ್ನೂ ಮನಸ್ಸನ್ನೂ ಮತ್ತು ಬುದ್ಧಿಯನ್ನೂ ಹತೋಟಿಯಲ್ಲಿಡಲು ಸಾಧ್ಯ. ಇದ್ದಕ್ಕಿದ್ದಂತೆ ಕರ್ಮವನ್ನೂ ನಿಯತಕಾರ್ಯಗಳನ್ನೂ ಬಿಟ್ಟುಬಿಡುವಂತಿಲ್ಲ. ಆದರೆ ಕ್ರಮೇಣ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ತನ್ನ ಶುದ್ಧ ವ್ಯಕ್ತಿತ್ವದ ಕಡೆಗೆ ಬುದ್ಧಿಯನ್ನು ದೃಢವಾಗಿ ನಿರ್ದೇಶಿಸುವುದು ಸಾಧ್ಯ; ಹೀಗೆ ಮಾಡಿ ಮನುಷ್ಯನು ಭೌತಿಕ ಇಂದ್ರಿಯಗಳ ಮತ್ತು ಮನಸ್ಸಿನ ಪ್ರಭಾವಕ್ಕೆ ಒಳಗಾಗದೆ ಆಧ್ಯಾತ್ಮಿಕ ಸ್ಥಿತಿಯಲ್ಲಿ ನೆಲೆಗೊಳ್ಳಬಹುದು. ಇದು ಈ ಅಧ್ಯಾಯದ ಸಾರಸಂಗ್ರಹ. ಐಹಿಕ ಅಸ್ತಿತ್ವದ ಅಪರಿಪಕ್ವ ಘಟ್ಟಗಳಲ್ಲಿ ತಾತ್ವಿಕ ಊಹೆಗಳಾಗಲೀ ಮತ್ತು ಯೋಗಾಸನಗಳ ಅಭ್ಯಾಸ ಎಂದು ಹೇಳಿಕೊಳ್ಳುವ ಅಭ್ಯಾಸದಿಂದ ಇಂದ್ರಿಯ ನಿಗ್ರಹದ ಕೃತಕ ಪ್ರಯತ್ನಗಳಾಗಲೀ ಮನುಷ್ಯನು ಆಧ್ಯಾತ್ಮಿಕ ಬದುಕಿಗೆ ಹೋಗಲು ನೆರವಾಗುವುದಿಲ್ಲ. ಅವನಿಗೆ ಉನ್ನತ ಬುದ್ಧಿಯಿಂದ ಕೃಷ್ಣಪ್ರಜ್ಞೆಯಲ್ಲಿ ಶಿಕ್ಷಣ ದೊರೆಯಬೇಕು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಕರ್ಮಯೋಗ" ಎಂಬ ಮೂರನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 4

# ದಿವ್ಯ ಜ್ಞಾನ

## ಶ್ಲೋಕ - 1

**ಶ್ರೀಭಗವಾನುವಾಚ**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ |**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ||೧||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಇಮಮ್**—ಈ; **ವಿವಸ್ವತೇ**—ಸೂರ್ಯದೇವನಿಗೆ; **ಯೋಗಮ್**—ಪರಮೋನ್ನತನೊಂದಿಗೆ ವ್ಯಕ್ತಿಯ ಸಂಬಂಧದ ವಿಜ್ಞಾನವನ್ನು; **ಪ್ರೋಕ್ತವಾನ್**—ಉಪದೇಶಿಸಿದೆನು; **ಅಹಮ್**—ನಾನು; **ಅವ್ಯಯಮ್**—ಅವಿನಾಶಿಯಾದ; **ವಿವಸ್ವಾನ್**—ವಿವಸ್ವಾನನು (ಸೂರ್ಯದೇವನ ಹೆಸರು); **ಮನವೇ**—ಮಾನವ ಕುಲದ ತಂದೆಗೆ (ವೈವಸ್ವತನಿಗೆ); **ಪ್ರಾಹ**—ಹೇಳಿದನು; **ಮನುಃ**—ಮಾನವ ಕುಲದ ತಂದೆಯು; **ಇಕ್ಷ್ವಾಕವೇ**—ಇಕ್ಷ್ವಾಕು ರಾಜನಿಗೆ; **ಅಬ್ರವೀತ್**—ಹೇಳಿದನು.

### ಅನುವಾದ

**ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನು ಹೇಳಿದನು — ನಾಶವಿಲ್ಲದ ಈ ಯೋಗವಿಜ್ಞಾನವನ್ನು ನಾನು ವಿವಸ್ವಾನ್ ಎಂದರೆ ಸೂರ್ಯನಿಗೆ ಹೇಳಿದೆನು; ವಿವಸ್ವಾನನು ಅದನ್ನು ಮಾನವ ಕುಲದ ತಂದೆಯಾದ ಮನುವಿಗೆ ಹೇಳಿದನು; ಮನುವು ಇಕ್ಷ್ವಾಕುವಿಗೆ ಹೇಳಿದನು.**

### ಭಾವಾರ್ಥ

ಸೂರ್ಯಗ್ರಹದಿಂದ ಪ್ರಾರಂಭವಾಗಿ ಎಲ್ಲ ಗ್ರಹಗಳ ರಾಜವರ್ಗಕ್ಕೆ ಭಗವದ್ಗೀತೆಯನ್ನು ಉಪದೇಶಿಸಲಾಗಿತ್ತು. ಅಂತಹ ಪ್ರಾಚೀನ ಕಾಲದಿಂದ ಅದರ ಚರಿತ್ರೆಯ ನಿರೂಪಣೆಯನ್ನು ಇಲ್ಲಿ ನೋಡುತ್ತೇವೆ. ಎಲ್ಲ ಗ್ರಹಗಳ ರಾಜರೂ ಇರುವುದು ನಿವಾಸಿಗಳ ರಕ್ಷಣೆಗಾಗಿ. ರಾಜವರ್ಗದವರು ಪ್ರಜೆಗಳನ್ನು ಆಳಿ ಅವರನ್ನು ಕಾಮದ ಸಲುವಾಗಿರುವ ಐಹಿಕ ಬಂಧನದಿಂದ ರಕ್ಷಿಸಬೇಕಾದರೆ ಅವರಿಗೆ ಭಗವದ್ಗೀತಾಶಾಸ್ತ್ರವು ತಿಳಿದಿರಬೇಕು. ಮಾನವ ಜೀವನದ ಗುರಿ ದೇವೋತ್ತಮ ಪರಮ ಪುರುಷನೊಂದಿಗೆ ನಿರಂತರವಾದ ಸಂಬಂಧದಲ್ಲಿ ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳುವುದು. ಈ ಪಾಠವನ್ನು ಶಿಕ್ಷಣ, ಸಂಸ್ಕೃತಿ ಮತ್ತು ಭಕ್ತಿಗಳ ಮೂಲಕ ಜನತೆಗೆ ತಿಳಿಸಿಕೊಡುವುದು ಎಲ್ಲ ರಾಜ್ಯಗಳ ಮತ್ತು ಎಲ್ಲ ಗ್ರಹಗಳ ಅಧಿಪತಿಗಳ ಕರ್ತವ್ಯ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ ಮಾನವ ಜನ್ಮದ ಈ ಅವಕಾಶವನ್ನು ಉಪಯೋಗಿಸಿಕೊಂಡು ಜನರು ಈ ಶ್ರೇಷ್ಠ ಶಾಸ್ತ್ರದ ಸದುಪಯೋಗ ಮಾಡಿಕೊಂಡು ಯಶಸ್ವಿಯಾದ ಮಾರ್ಗದಲ್ಲಿ ಮುಂದುವರಿಯಬೇಕು. ಇದಕ್ಕಾಗಿ ಕೃಷ್ಣಪ್ರಜ್ಞೆಯ ಶಾಸ್ತ್ರವನ್ನು ಹರಡುವುದು ಎಲ್ಲ ರಾಜ್ಯಗಳ

ಅಧಿಪತಿಗಳ ಕರ್ತವ್ಯ.

ಸೌರವ್ಯೂಹದ ಎಲ್ಲ ಗ್ರಹಗಳಿಗೆ ಮೂಲ ಸೂರ್ಯಲೋಕ; ಇದರ ರಾಜನಾದ ಸೂರ್ಯದೇವನಿಗೆ ಈ ಕಲ್ಪದಲ್ಲಿ ವಿವಸ್ವಾನ್ ಎಂದು ಹೆಸರು. ಬ್ರಹ್ಮ ಸಂಹಿತೆಯಲ್ಲಿ (5.52) ಹೀಗೆ ಹೇಳಿದೆ.

ಯಚ್ಚಕ್ಷುರೇಷ ಸವಿತಾ ಸಕಲಗ್ರಹಾಣಾಂ
ರಾಜಾ ಸಮಸ್ತಸುರಮೂರ್ತಿರಶೇಷತೇಜಾಃ |
ಯಸ್ಯಾಜ್ಞಯಾ ಭ್ರಮತಿ ಸಮ್ಭೃತಕಾಲಚಕ್ರೋ
ಗೋವಿನ್ದಮಾದಿಪುರುಷಂ ತಮಹಂ ಭಜಾಮಿ ||

ಬ್ರಹ್ಮದೇವನು ಹೇಳಿದ — "ದೇವೋತ್ತಮ ಪರಮ ಪುರುಷನಾದ ಗೋವಿಂದನನ್ನು (ಕೃಷ್ಣನನ್ನು) ನಾನು ಪೂಜಿಸಬಯಸುತ್ತೇನೆ. ಅವನು ಆದಿಪುರುಷ. ಎಲ್ಲ ಗ್ರಹಗಳ ರಾಜನಾದ ಸೂರ್ಯನು ಅವನ ಅಜ್ಞೆಯಂತೆ ಅಗಾಧ ಶಕ್ತಿಯನ್ನೂ ಶಾಖವನ್ನೂ ಪಡೆದಿರುತ್ತಾನೆ. ಸೂರ್ಯನು ಭಗವಂತನ ಕಣ್ಣಿನ ಪ್ರತಿನಿಧಿ. ಆತನ ಆಜ್ಞೆಯಂತೆ ಸೂರ್ಯನು ತನ್ನ ಪಥದಲ್ಲಿ ಚಲಿಸುತ್ತಾನೆ."

ಸೂರ್ಯನು ಗ್ರಹಗಳ ರಾಜ; (ಈಗ ವಿವಸ್ವಾನ್ ಎಂಬ ಹೆಸರಿನ) ಸೂರ್ಯದೇವನು ಸೂರ್ಯಗ್ರಹವನ್ನಾಳುತ್ತಾನೆ. ಶಾಖ ಮತ್ತು ಬೆಳಕನ್ನು ನೀಡಿ ಸೂರ್ಯಗ್ರಹವು ಎಲ್ಲ ಗ್ರಹಗಳನ್ನು ನಿಯಂತ್ರಿಸುತ್ತದೆ. ಕೃಷ್ಣನ ಅಪ್ಪಣೆಯಂತೆ ಸೂರ್ಯನು ಪರಿಭ್ರಮಿಸುತ್ತಾನೆ. ಆದಿಯಲ್ಲಿ ಶ್ರೀಕೃಷ್ಣನು ವಿವಸ್ವಾನ್‌ನನ್ನು ಭಗವದ್ಗೀತಾಶಾಸ್ತ್ರವನ್ನು ತಿಳಿದುಕೊಳ್ಳುವ ಮೊದಲ ಶಿಷ್ಯನನ್ನಾಗಿ ಮಾಡಿಕೊಂಡನು. ಆದುದರಿಂದ ಭಗವದ್ಗೀತೆಯು ಇಹಲೋಕದ ಕ್ಷುದ್ರ ಪಂಡಿತನಿಗಾಗಿ ರಚಿತವಾದ ಊಹಾತ್ಮಕ ಗ್ರಂಥವಲ್ಲ; ಅನಾದಿ ಕಾಲದಿಂದ ಬರುತ್ತಿರುವ ಜ್ಞಾನದ ಪ್ರಮಾಣಗ್ರಂಥ.

ಗೀತೆಯ ಚರಿತ್ರೆಯನ್ನು ಮಹಾಭಾರತದಲ್ಲಿ (ಶಾಂತಿ ಪರ್ವ, 348.51-52) ನಾವು ಹೀಗೆ ಗುರುತಿಸಬಹುದು.

ತ್ರೇತಾಯುಗಾದೌ ಚ ತತೋ ವಿವಸ್ವಾನ್ಮನವೇ ದದೌ |
ಮನುಶ್ಚ ಲೋಕ ಭೃತ್ಯರ್ಥಂ ಸುತಾಯೇಕ್ಷ್ವಾಕವೇ ದದೌ ||

ಇಕ್ಷ್ವಾಕುಣಾ ಚ ಕಥಿತೋ ವ್ಯಾಪ್ಯ ಲೋಕಾನವಸ್ಥಿತಃ ||

"ಪರಮ ಪ್ರಭುವಿನೊಂದಿಗೆ ಸಂಬಂಧಿಸಿದ ಈ ಶಾಸ್ತ್ರವನ್ನು ವಿವಸ್ವಾನನು ಮನುವಿಗೆ ತ್ರೇತಾಯುಗದ ಪ್ರಾರಂಭದಲ್ಲಿ ಉಪದೇಶಿಸಿದ. ಮಾನವಕುಲದ ತಂದೆಯಾದ ಮನುವು ಅದನ್ನು ತನ್ನ ಮಗ ಇಕ್ಷ್ವಾಕು ಮಹಾರಾಜನಿಗೆ ಹೇಳಿಕೊಟ್ಟ; ಇಕ್ಷ್ವಾಕುವು ಭೂಗ್ರಹದ ರಾಜ ಮತ್ತು ರಘುವಂಶದ ಮೂಲಪುರುಷ. ಶ್ರೀರಾಮಚಂದ್ರನು ಈ ರಘುವಂಶದಲ್ಲಿ ಅವತರಿಸಿದ." ಆದುದರಿಂದ ಭಗವದ್ಗೀತೆಯು ಇಕ್ಷ್ವಾಕು ಮಹಾರಾಜನ ಕಾಲದಿಂದ ಮಾನವಕುಲದಲ್ಲಿ ಉಳಿದುಬಂದಿದೆ.

ಕಲಿಯುಗದ ಅವಧಿ 4,32,000 ವರ್ಷಗಳು; ಇದರಲ್ಲಿ ಈಗತಾನೆ ಐದು ಸಾವಿರ ವರ್ಷಗಳು ಕಳೆದಿವೆ. ಇದಕ್ಕೆ ಹಿಂದಿನದು ದ್ವಾಪರಯುಗ (8,00,000 ವರ್ಷಗಳು), ಅದಕ್ಕೆ

ಮೊದಲು ತ್ರೇತಾಯುಗ (12,00,000 ವರ್ಷಗಳು) ಹೀಗೆ ಸುಮಾರು 20,05,000 ವರ್ಷಗಳ ಹಿಂದೆ ಮನುವು ಭಗವದ್ಗೀತೆಯನ್ನು ತನ್ನ ಮಗನೂ, ಶಿಷ್ಯನೂ, ಭೂಲೋಕದ ಅರಸನೂ ಆದ ಇಕ್ಷ್ವಾಕು ಮಹಾರಾಜನಿಗೆ ಉಪದೇಶಿಸಿದ. ಈಗಿನ ಮನುವಿನ ಯುಗವು ಸುಮಾರು 30,53,00,000 ವರ್ಷಗಳೆಂದು ಲೆಕ್ಕ; ಇದರಲ್ಲಿ 12,04,00,000 ವರ್ಷಗಳು ಮುಗಿದಿವೆ. ಮನುವು ಹುಟ್ಟುವ ಮೊದಲೇ ಭಗವಂತನು ತನ್ನ ಶಿಷ್ಯನೂ ಸೂರ್ಯದೇವನೂ ಆದ ವಿವಸ್ವಾನನಿಗೆ ಇದನ್ನು ಉಪದೇಶಿಸಿದ ಎಂದು ಅಂಗೀಕರಿಸಿದರೆ ಸುಮಾರು ಅಂದಾಜಿನಲ್ಲಿ ಗೀತೆಯನ್ನು ಕಡೆಯ ಪಕ್ಷ 12,04,00,000 ವರ್ಷಗಳ ಹಿಂದಾದರೂ ಉಪದೇಶಿಸಿರಬೇಕು; ಮಾನವಕುಲದಲ್ಲಿ ಅದು ಇಪ್ಪತ್ತು ಲಕ್ಷ ವರ್ಷಗಳಿಂದ ಉಳಿದು ಬಂದಿದೆ. ಸುಮಾರು ಐದು ಸಾವಿರ ವರ್ಷಗಳ ಕೆಳಗೆ ಭಗವಂತನು ಮತ್ತೆ ಅರ್ಜುನನಿಗೆ ಉಪದೇಶ ಮಾಡಿದನು. ಗೀತೆಯೇ ಹೇಳುವ ಪ್ರಕಾರ ಮತ್ತು ಉಪದೇಶ ಮಾಡುವ ಶ್ರೀಕೃಷ್ಣನ ಪ್ರಕಾರ ಇದು ಸುಮಾರಾಗಿ ಗೀತೆಯ ಚರಿತ್ರೆ. ಸೂರ್ಯದೇವನಾದ ವಿವಸ್ವಾನನು ಒಬ್ಬ ಕ್ಷತ್ರಿಯ; ಅವನು ಸೂರ್ಯವಂಶ ಕ್ಷತ್ರಿಯರೆಲ್ಲರ ತಂದೆಯಾಗಿದ್ದಾನೆ. ಈ ಕಾರಣದಿಂದಲೇ ಭಗವದ್ಗೀತೆಯನ್ನು ವಿವಸ್ವಾನನಿಗೆ ಉಪದೇಶ ಮಾಡಲಾಯಿತು. ಭಗವದ್ಗೀತೆಯನ್ನು ದೇವೋತ್ತಮ ಪರಮ ಪುರುಷನು ನುಡಿದನು; ಅದು ವೇದಗಳಿಗೆ ಸಮಾನ. ಆದುದರಿಂದ ಈ ಜ್ಞಾನವು ಅಪೌರುಷೇಯ. ವೇದದ ಆದೇಶಗಳನ್ನು ಲೌಕಿಕ ವ್ಯಾಖ್ಯಾನಗಳಿಗೆ ಒಳಪಡಿಸದೆ ಅವು ಇರುವಂತೆಯೇ ಸ್ವೀಕರಿಸಲಾಗುತ್ತದೆ. ಆದುದರಿಂದ ಗೀತೆಯನ್ನು ಸಹ ಲೌಕಿಕ ವ್ಯಾಖ್ಯಾನಗಳಿಗೆ ಒಳಪಡಿಸದೆ ಸ್ವೀಕರಿಸಬೇಕು. ಐಹಿಕ ವಿವಾದನಿರತರು ತಮಗೆ ತೋರಿದಂತೆ ಭಗವದ್ಗೀತೆಯನ್ನು ಕುರಿತು ಊಹಿಸಬಹುದು. ಆದರೆ ಅದು ಭಗವದ್ಗೀತೆಯ ಯಥಾರೂಪವಲ್ಲ. ಭಗವದ್ಗೀತೆಯನ್ನು ಅದರ ವಾಸ್ತವ ಸ್ವರೂಪದಲ್ಲಿ ಗುರು ಪರಂಪರೆಯಿಂದ ಸ್ವೀಕರಿಸಬೇಕು; ಅದನ್ನು ಇಲ್ಲಿ ಭಗವಂತನು ಸೂರ್ಯದೇವನಿಗೆ ಉಪದೇಶಿಸಿದನೆಂದೂ ಸೂರ್ಯದೇವನು ತನ್ನ ಮಗ ಮನುವಿಗೆ ಹೇಳಿದನೆಂದೂ ಮನುವು ತನ್ನ ಮಗ ಇಕ್ಷ್ವಾಕುವಿಗೆ ಹೇಳಿದನೆಂದೂ ವರ್ಣಿಸಿದೆ.

## ಶ್ಲೋಕ - 2

**ಏವಂ ಪರಮ್ಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ॥೨॥**

**ಏವಂ**—ಹೀಗೆ; **ಪರಮ್ಪರಾ**—ಗುರುಶಿಷ್ಯ ಪರಂಪರೆಯಿಂದ; **ಪ್ರಾಪ್ತಮ್**—ಪ್ರಾಪ್ತವಾದ; **ಇಮಮ್**—ಈ ವಿಜ್ಞಾನವನ್ನು; **ರಾಜ ಋಷಯಃ**—ರಾಜರ್ಷಿಗಳು; **ವಿದುಃ**—ತಿಳಿದುಕೊಂಡರು; **ಸಃ**—ಆ; **ಕಾಲೇನ**—ಕಾಲಕ್ರಮದಲ್ಲಿ; **ಇಹ**—ಈ ಪ್ರಪಂಚದಲ್ಲಿ; **ಮಹತಾ**—ಮಹತ್ತರವಾದ; **ಯೋಗಃ**—ಭಗವಂತನೊಂದಿಗೆ ವ್ಯಕ್ತಿಯ ಸಂಬಂಧದ ವಿಜ್ಞಾನವು; **ನಷ್ಟಃ**—ನಷ್ಟವಾಯಿತು; **ಪರನ್ತಪ**—ಶತ್ರುದಮನನಾದ ಅರ್ಜುನನೇ.

## ಅನುವಾದ

**ಈ ಉತ್ತಮೋತ್ತಮ ವಿಜ್ಞಾನವು ಗುರುಪರಂಪರೆಯಲ್ಲಿ ಬಂದಿತು. ರಾಜರ್ಷಿಗಳು ಅದನ್ನು ಹಾಗೆಯೇ ಗ್ರಹಿಸಿದರು. ಆದರೆ ಕಾಲಕ್ರಮದಲ್ಲಿ ಈ ಪರಂಪರೆಯು ಛೇದವಾಯಿತು; ಆದುದರಿಂದ ಈ ವಿಜ್ಞಾನವು**

**ನಷ್ಟವಾದಂತೆ ಕಾಣುತ್ತದೆ.**

## ಭಾವಾರ್ಥ

ರಾಜರ್ಷಿಗಳು ಪ್ರಜೆಗಳನ್ನು ಆಳುವಾಗ ಗೀತೆಯ ಉದ್ದೇಶವನ್ನು ಕಾರ್ಯಗತ ಮಾಡಬೇಕಾಗಿತ್ತು; ಆದುದರಿಂದ ಗೀತೆಯು ಮುಖ್ಯವಾಗಿ ಅವರಿಗಾಗಿ ರಚಿತವಾದದ್ದೆಂದು ಸ್ಪಷ್ಟವಾಗಿ ಹೇಳಲಾಗಿದೆ. ರಾಕ್ಷಸರಿಗೆ ಇದು ಎಂದೂ ಉದ್ದೇಶಿತವಾಗಿರಲಿಲ್ಲ. ಏಕೆಂದರೆ ಅವರು ಅದನ್ನು ಯಾರಿಗೂ ಪ್ರಯೋಜನವಾಗದಂತೆ ಹಾಳು ಮಾಡಿಬಿಡುತ್ತಿದ್ದರು ಮತ್ತು ಮನಸೋ ಇಚ್ಛೆಯಾಗಿ ಎಲ್ಲ ಬಗೆಯ ವ್ಯಾಖ್ಯಾನಗಳನ್ನು ಸೃಷ್ಟಿಮಾಡಿಬಿಡುತ್ತಿದ್ದರು. ಆದುದರಿಂದ ನಿಶ್ಚಯವಾಗಿಯೂ ಭಗವದ್ಗೀತೆಯನ್ನು ರಾಕ್ಷಸರಿಗಾಗಿ ಹೇಳಿಲ್ಲ. ನೀತಿನಿಷ್ಠೆಗಳಿಲ್ಲದ ವ್ಯಾಖ್ಯಾನಕಾರರ ಉದ್ದೇಶಗಳು ಮೂಲ ಉದ್ದೇಶವನ್ನು ನಷ್ಟಗೊಳಿಸಿದ ಕೂಡಲೆ ಗುರುಪರಂಪರೆಯನ್ನು ಮತ್ತೆ ಸ್ಥಾಪಿಸುವ ಅಗತ್ಯವು ತಲೆದೋರಿತು. ಗುರುಪರಂಪರೆಯು ಛೇದವಾಯಿತೆಂದು ಭಗವಂತನೇ ಐದು ಸಾವಿರ ವರ್ಷಗಳ ಹಿಂದೆ ಕಂಡುಕೊಂಡನು. ಆದುದರಿಂದ ಅವನು ಗೀತೆಯ ಉದ್ದೇಶವು ನಷ್ಟವಾಯಿತು ಎಂದು ಸಾರಿದ. ಅದೇ ರೀತಿ ಈಗಲೂ (ವಿಶೇಷವಾಗಿ ಇಂಗ್ಲಿಷಿನಲ್ಲಿ) ಗೀತೆಯ ಎಷ್ಟೋ ಆವೃತ್ತಿಗಳಿವೆ. ಅವುಗಳಲ್ಲಿ ಅನೇಕ ಆವೃತ್ತಿಗಳು ಯಾವ ಅಧಿಕೃತ ಗುರುಪರಂಪರೆಗೂ ಅನುಗುಣವಾಗಿಲ್ಲ. ಬೇರೆ ಬೇರೆ ಲೌಕಿಕ ವಿದ್ವಾಂಸರು ರೂಪಿಸಿದ ಅಸಂಖ್ಯಾತ ವ್ಯಾಖ್ಯಾನಗಳಿವೆ. ಅವರೆಲ್ಲರೂ ಕೃಷ್ಣನ ಮಾತುಗಳಿಂದ ಒಳ್ಳೆಯ ವ್ಯಾಪಾರವನ್ನು ಪಡೆದುಕೊಳ್ಳುತ್ತಿದ್ದರೂ ಹೆಚ್ಚು ಕಡಮೆ ಅವು ಯಾವುವೂ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಒಪ್ಪಿಕೊಳ್ಳುವುದಿಲ್ಲ. ಇದು ರಾಕ್ಷಸೀ ಮನೋಧರ್ಮ. ಏಕೆಂದರೆ ರಾಕ್ಷಸರಿಗೆ ದೇವರಲ್ಲಿ ನಂಬಿಕೆಯಿಲ್ಲ. ಆದರೆ ಪರಮ ಪ್ರಭುವಿನ ಸ್ವತ್ತನ್ನು ಭೋಗಿಸುತ್ತಾರೆ. ಗುರುಪರಂಪರೆಯಲ್ಲಿ ಸ್ವೀಕೃತವಾಗಿರುವಂತೆ ಗೀತೆಯ ಒಂದು ಇಂಗ್ಲಿಷ್ ಆವೃತ್ತಿಯು ಬಹಳ ಅಗತ್ಯವಾಗಿದೆ. ಈ ದೊಡ್ಡ ಅಗತ್ಯವನ್ನು ತುಂಬಿಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ. ಭಗವದ್ಗೀತೆಯನ್ನು ಯಥಾರೂಪವಾಗಿ ಅಂಗೀಕರಿಸಿದರೆ ಮಾನವ ಕುಲಕ್ಕೆ ಅದು ಒಂದು ದೊಡ್ಡ ವರ. ಆದರೆ ಅದನ್ನು ಊಹಾತ್ಮಕಚಿಂತನೆಗಳ ಒಂದು ಗ್ರಂಥವನ್ನಾಗಿ ಸ್ವೀಕರಿಸಿದರೆ ಅದು ವ್ಯರ್ಥಕಾಲಕ್ಷೇಪ.

## ಶ್ಲೋಕ - 3

**ಸ ಏವಾಯಂ ಮಯಾ ತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ |**
**ಭಕ್ತೋऽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ||೩||**

**ಸಃ**—ಅದೇ; **ಏವ**—ಖಂಡಿತವಾಗಿಯೂ; **ಅಯಮ್**—ಇದು; **ಮಯಾ**—ನನ್ನಿಂದ; **ತೇ**—ನಿನಗೆ; **ಅದ್ಯ**—ಈ ದಿನ; **ಯೋಗಃ**—ಯೋಗವಿಜ್ಞಾನವು; **ಪ್ರೋಕ್ತಃ**—ಹೇಳಲ್ಪಟ್ಟಿತು; **ಪುರಾತನಃ**—ಬಹು ಪ್ರಾಚೀನವಾದ; **ಭಕ್ತಃ**—ಭಕ್ತನು; **ಅಸಿ**—ಆಗಿದ್ದೀಯೆ; **ಮೇ**—ನನ್ನ; **ಸಖಾ**—ಸ್ನೇಹಿತನು; **ಚ**—ಕೂಡ; **ಇತಿ**—ಆದ್ದರಿಂದ; **ರಹಸ್ಯಮ್**—ರಹಸ್ಯವಾದುದನ್ನು; **ಹಿ**—ಖಂಡಿತವಾಗಿಯೂ; **ಏತತ್**—ಇದನ್ನು; **ಉತ್ತಮಮ್**—ದಿವ್ಯವಾದುದನ್ನು.

## ಅನುವಾದ

**ಪರಮ ಪ್ರಭುವಿನೊಂದಿಗೆ ಸಂಬಂಧವಿರುವ ಈ ಬಹುಪ್ರಾಚೀನ ಶಾಸ್ತ್ರವನ್ನು ಇಂದು ನಾನು ನಿನಗೆ ಹೇಳುತ್ತಿದ್ದೇನೆ. ಏಕೆಂದರೆ ನೀನು ನನ್ನ ಭಕ್ತ ಮತ್ತು ಸ್ನೇಹಿತ. ಆದುದರಿಂದ ಈ ಶಾಸ್ತ್ರದ ಅಲೌಕಿಕ ರಹಸ್ಯವನ್ನು ನೀನು ಅರ್ಥಮಾಡಿಕೊಳ್ಳಬಲ್ಲೆ.**

## ಭಾವಾರ್ಥ

ಮನುಷ್ಯರಲ್ಲಿ ಎರಡು ವರ್ಗಗಳು — ಭಕ್ತರು ಮತ್ತು ರಾಕ್ಷಸರು. ಈ ಶ್ರೇಷ್ಠ ಶಾಸ್ತ್ರವನ್ನು ತಿಳಿಯಲು ಭಗವಂತನು ಅರ್ಜುನನನ್ನು ಆರಿಸಿಕೊಂಡ. ಏಕೆಂದರೆ ಆತನು ಭಗವಂತನ ಭಕ್ತ. ರಾಕ್ಷಸನಾದವನು ಈ ಶ್ರೇಷ್ಠವಾದ, ರಹಸ್ಯವಾದ ಶಾಸ್ತ್ರವನ್ನು ಗ್ರಹಿಸಲಾರ. ಈ ಶ್ರೇಷ್ಠ ಜ್ಞಾನಗ್ರಂಥದ ಹಲವು ಆವೃತ್ತಿಗಳಿವೆ. ಕೆಲವು ಆವೃತ್ತಿಗಳಲ್ಲಿ ಭಕ್ತರು ಬರೆದ ವ್ಯಾಖ್ಯಾನಗಳಿವೆ. ಕೆಲವು ಆವೃತ್ತಿಗಳಲ್ಲಿ ರಾಕ್ಷಸರು ಬರೆದ ವ್ಯಾಖ್ಯಾನಗಳಿವೆ. ಭಕ್ತರ ವ್ಯಾಖ್ಯಾನ ವಾಸ್ತವವಾದದ್ದು; ರಾಕ್ಷಸರ ವ್ಯಾಖ್ಯಾನ ಕೆಲಸಕ್ಕೆ ಬಾರದ್ದು. ಅರ್ಜುನನು ಶ್ರೀಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ಒಪ್ಪಿಕೊಳ್ಳುತ್ತಾನೆ. ಅರ್ಜುನನ ಹೆಜ್ಜೆಯನ್ನು ಅನುಸರಿಸುವ ಯಾವುದೇ ವ್ಯಾಖ್ಯಾನವು ಈ ಶ್ರೇಷ್ಠವಾದ ಶಾಸ್ತ್ರಕ್ಕೆ ನಿಜವಾದ ಭಕ್ತಿಪೂರ್ವಕ ಸೇವೆ. ರಾಕ್ಷಸರು ಶ್ರೀಕೃಷ್ಣನು ಇರುವಂತೆ ಅವನನ್ನು ಒಪ್ಪಿಕೊಳ್ಳುವುದಿಲ್ಲ. ಅದರ ಬದಲು ಅವರು ಕೃಷ್ಣನ ವಿಷಯ ಏನೋ ಕಲ್ಪಿಸಿಕೊಂಡು ಸಾಮಾನ್ಯ ಓದುಗರನ್ನು ಕೃಷ್ಣನ ಉಪದೇಶದಿಂದ ದಾರಿ ತಪ್ಪಿಸುತ್ತಾರೆ. ಇಂತಹ ತಪ್ಪುದಾರಿಗಳ ವಿಷಯದಲ್ಲಿ ಇಲ್ಲಿ ಎಚ್ಚರಿಕೆ ಇದೆ. ನಾವು ಅರ್ಜುನನಿಂದ ಬಂದ ಗುರುಶಿಷ್ಯಪರಂಪರೆಯನ್ನು ಅನುಸರಿಸಲು ಪ್ರಯತ್ನಿಸಬೇಕು. ಈ ರೀತಿಯಲ್ಲಿ ಶ್ರೇಷ್ಠಶಾಸ್ತ್ರವಾದ ಶ್ರೀಮದ್ಭಗವದ್ಗೀತೆಯ ಪ್ರಯೋಜನವನ್ನು ಪಡೆಯಬೇಕು.

## ಶ್ಲೋಕ - 4

**ಅರ್ಜುನ ಉವಾಚ**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ |**
**ಕಥಮೇತದ್ ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ||೪||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಅಪರಮ್**—ಕಿರಿಯನಾದ; **ಭವತಃ**—ನಿನ್ನ; **ಜನ್ಮ**—ಜನನವು; **ಪರಮ್**—ಹಿರಿಯನಾದ; **ಜನ್ಮ**—ಜನನವು; **ವಿವಸ್ವತಃ**—ಸೂರ್ಯದೇವನ; **ಕಥಮ್**—ಹೇಗೆ; **ಏತತ್**—ಇದನ್ನು; **ವಿಜಾನೀಯಾಮ್**—ಅರ್ಥಮಾಡಿಕೊಳ್ಳಲಿ; **ತ್ವಮ್**—ನೀನು; **ಆದೌ**—ಮೊದಲಲ್ಲಿ; **ಪ್ರೋಕ್ತವಾನ್**—ಉಪದೇಶಿಸಿದ್ದೀಯೆ; **ಇತಿ**—ಎಂದು.

## ಅನುವಾದ

**ಅರ್ಜುನನು ಕೇಳಿದ—ಸೂರ್ಯದೇವನಾದ ವಿವಸ್ವಾನನು ನಿನಗಿಂತ ಮೊದಲು ಹುಟ್ಟಿದವನು. ಆದಿಯಲ್ಲಿ ನೀನು ಅವನಿಗೆ ಈ ಶಾಸ್ತ್ರವನ್ನು ಬೋಧಿಸಿದೆ ಎಂದು ನಾನು ಹೇಗೆ ತಿಳಿದುಕೊಳ್ಳಲಿ?**

## ಭಾವಾರ್ಥ

ಅರ್ಜುನನು ಭಗವಂತನ ಅಂಗೀಕೃತನಾದ ಭಕ್ತನು. ಅವನು ಕೃಷ್ಣನ ಮಾತುಗಳನ್ನು ನಂಬದಿರುವುದು ಹೇಗೆ? ವಾಸ್ತವ ಸಂಗತಿ ಎಂದರೆ, ಅರ್ಜುನನು ಈ ಪ್ರಶ್ನೆಯನ್ನು ಕೇಳುತ್ತಿರುವುದು ತನಗಾಗಿ ಅಲ್ಲ. ದೇವೋತ್ತಮ ಪರಮ ಪುರುಷನಲ್ಲಿ ನಂಬಿಕೆ ಇಲ್ಲದವರಿಗಾಗಿ ಅಥವಾ ಶ್ರೀಕೃಷ್ಣನನ್ನು ದೇವೋತ್ತಮ ಪರಮ ಪುರುಷನಾಗಿ ಸ್ವೀಕರಿಸುವ ವಿಚಾರವನ್ನು ಒಪ್ಪದ ರಾಕ್ಷಸರಿಗಾಗಿ. ತನಗೇ ದೇವೋತ್ತಮ ಪರಮ ಪುರುಷನ ಅಥವಾ ಕೃಷ್ಣನ ವಿಷಯ ತಿಳಿಯದು ಎನ್ನುವಂತೆ ಅರ್ಜುನನು ಅವರಿಗಾಗಿ ಈ ಪ್ರಶ್ನೆಯನ್ನು ಕೇಳುತ್ತಾನೆ. ಹತ್ತನೆಯ ಅಧ್ಯಾಯದಲ್ಲಿ ಸ್ಪಷ್ಟವಾಗುವಂತೆ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನೇ ಎಲ್ಲದರ ಆದಿಮೂಲನು ಮತ್ತು ಅಧ್ಯಾತ್ಮದಲ್ಲಿ ಕಡೆಯ ಪ್ರಮಾಣ ಎಂದು ಅರ್ಜುನನಿಗೆ ಚೆನ್ನಾಗಿ ತಿಳಿದಿದೆ. ಶ್ರೀಕೃಷ್ಣನು ದೇವಕಿಯ ಮಗನಾಗಿ ಭೂಮಿಯಲ್ಲಿ ಅವತರಿಸಿದ ಎಂಬುದು ನಿಜ. ಆ ಶ್ರೀಕೃಷ್ಣನೇ ನಿತ್ಯನಾದ ಆದಿಪುರುಷನಾಗಿ, ದೇವೋತ್ತಮ ಪರಮ ಪುರುಷನಾಗಿ ಹೇಗೆ ಉಳಿದ ಎನ್ನುವುದನ್ನು ಅರ್ಥಮಾಡಿಕೊಳ್ಳುವುದು ಸಾಮಾನ್ಯ ಮನುಷ್ಯನಿಗೆ ಕಷ್ಟ. ಈ ಅಂಶವನ್ನು ಸ್ಪಷ್ಟಪಡಿಸುವುದಕ್ಕಾಗಿ ಅರ್ಜುನನು ಶ್ರೀಕೃಷ್ಣನೇ ಅಧಿಕಾರಯುತವಾಗಿ ಮಾತನಾಡಲೆಂದು, ಈ ಪ್ರಶ್ನೆಯನ್ನು ಕೇಳಿದನು. ಇಂದು ಮಾತ್ರವಲ್ಲ, ನೆನಪಿಗೇ ಎಟುಕದಿರುವಷ್ಟು ಅನಾದಿ ಕಾಲದಿಂದಲೂ ಶ್ರೀಕೃಷ್ಣನೇ ಪರಮ ಪ್ರಮಾಣ ಎಂದು ಇಡೀ ಜಗತ್ತು ಒಪ್ಪಿಕೊಂಡಿದೆ. ರಾಕ್ಷಸರು ಮಾತ್ರವೇ ಆತನನ್ನು ನಿರಾಕರಿಸುತ್ತಾರೆ. ರಾಕ್ಷಸರಿಗೆ ಮತ್ತು ಅವರ ಹಿಂಬಾಲಕರಿಗೆ ಅರ್ಥವಾಗುವಂತೆ ಕೃಷ್ಣನನ್ನು ವಿರೂಪಗೊಳಿಸಲು ರಾಕ್ಷಸರು ಸದಾ ಪ್ರಯತ್ನಿಸುತ್ತಿರುತ್ತಾರೆ. ರಾಕ್ಷಸರು ಚಿತ್ರಿಸದ ಹಾಗೆ ಕೃಷ್ಣನೇ ತನ್ನನ್ನು ವರ್ಣಿಸಿಕೊಳ್ಳುವಂತೆ ಅರ್ಜುನನು ಈ ಪ್ರಶ್ನೆಯನ್ನು ಕೃಷ್ಣನ ಮುಂದೆ ಇಟ್ಟನು. ಪ್ರತಿಯೊಬ್ಬನೂ ತನ್ನ ಕಲ್ಯಾಣಕ್ಕಾಗಿಯೇ ಕೃಷ್ಣಶಾಸ್ತ್ರವನ್ನು ತಿಳಿದಿರುವುದು ಅಗತ್ಯ. ಕೃಷ್ಣನು ತನ್ನ ವಿಷಯವಾಗಿ ಮಾತನಾಡುವುದು ಎಲ್ಲ ಲೋಕಗಳಿಗೂ ಮಂಗಳಕರ. ಕೃಷ್ಣನೇ ಇಂತಹ ವಿವರಣೆಗಳನ್ನು ನೀಡುವುದು ರಾಕ್ಷಸರಿಗೆ ವಿಚಿತ್ರವಾಗಿ ಕಾಣಬಹುದು. ಏಕೆಂದರೆ ರಾಕ್ಷಸರು ಯಾವಾಗಲೂ ಕೃಷ್ಣನನ್ನು ತಮ್ಮ ದೃಷ್ಟಿಕೋನದಿಂದಲೇ ಅಧ್ಯಯನ ಮಾಡುತ್ತಾರೆ. ಆದರೆ ಭಕ್ತರಾದವರು ಕೃಷ್ಣನೇ ಹೇಳುವ ಮಾತುಗಳನ್ನು ಮನಃಪೂರ್ವಕವಾಗಿ ಸ್ವಾಗತಿಸುತ್ತಾರೆ. ಭಕ್ತರಿಗೆ ಅವನ ವಿಷಯವನ್ನು ಇನ್ನೂ ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳುವ ಹಂಬಲ. ಆದುದರಿಂದ ಅವರು ಕೃಷ್ಣನ ಅಧಿಕಾರಯುತ ಮಾತುಗಳನ್ನು ಎಂದೂ ಪೂಜಿಸುತ್ತಾರೆ. ಕೃಷ್ಣನು ಸಾಮಾನ್ಯ ಮನುಷ್ಯ ಎಂದು ಭಾವಿಸುವ ನಾಸ್ತಿಕರಿಗೆ ಇದರಿಂದ ಕೃಷ್ಣನು ಮಾನವಾತೀತ, ಸಚ್ಚಿದಾನಂದ ವಿಗ್ರಹ, ಆನಂದ ಜ್ಞಾನಗಳ ನಿತ್ಯಸ್ವರೂಪನು, ಅಲೌಕಿಕ, ಭೌತಿಕ ನಿಸರ್ಗದ ತ್ರಿಗುಣಗಳನ್ನೂ ಕಾಲ-ದೇಶಗಳ ಆಧಿಪತ್ಯವನ್ನೂ ಮೀರಿದವನು ಎಂದು ತಿಳಿಯಬಹುದು. ಅರ್ಜುನನಂತಹ ಕೃಷ್ಣಭಕ್ತನಿಗೆ ಕೃಷ್ಣನ ಅಲೌಕಿಕಸ್ಥಾನದ ವಿಷಯದಲ್ಲಿ ತಪ್ಪು ತಿಳಿವಳಿಕೆ ಇರಲು ಸಾಧ್ಯವೇ ಇಲ್ಲ. ಅರ್ಜುನನು ಈ ಪ್ರಶ್ನೆಯನ್ನು ಭಗವಂತನ ಮುಂದಿಡುವುದು, ಕೃಷ್ಣನು ಭೌತಿಕ ನಿಸರ್ಗದ ಗುಣತ್ರಯಗಳಿಗೆ ಬದ್ಧನಾದ ಸಾಮಾನ್ಯ ಮನುಷ್ಯ ಎಂದು ಭಾವಿಸುವ ಜನರ ನಾಸ್ತಿಕ ಮನೋಧರ್ಮವನ್ನು ಧಿಕ್ಕರಿಸಲು ಭಕ್ತನು ಮಾಡುತ್ತಿರುವ ಒಂದು ಪ್ರಯತ್ನ.

## ಶ್ಲೋಕ - 5

**ಶ್ರೀ ಭಗವಾನುವಾಚ**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರನ್ತಪ ॥೫॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪುರುಷನು ಹೇಳಿದನು; **ಬಹೂನಿ**—ಅನೇಕ; **ಮೇ**—ನನ್ನ; **ವ್ಯತೀತಾನಿ**—ಕಳೆದಿವೆ; **ಜನ್ಮಾನಿ**—ಜನ್ಮಗಳು; **ತವ**—ನಿನ್ನ; **ಚ**—ಮತ್ತು; **ಅರ್ಜುನ**—ಅರ್ಜುನನೇ; **ತಾನಿ**—ಅವುಗಳನ್ನು; **ಅಹಮ್**—ನಾನು; **ವೇದ**—ತಿಳಿದಿದ್ದೇನೆ; **ಸರ್ವಾಣಿ**—ಎಲ್ಲವನ್ನು; **ನ**—ಇಲ್ಲ; **ತ್ವಮ್**—ನೀನು; **ವೇತ್ಥ**—ತಿಳಿದಿದ್ದೀಯೆ; **ಪರನ್ತಪ**—ಶತ್ರುದಮನನೇ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು—ಶತ್ರುದಮನನಾದ ಅರ್ಜುನನೇ, ನೀನು ನಾನು ಅನೇಕ ಜನ್ಮಗಳನ್ನು ಕಳೆದಿದ್ದೇವೆ. ನನಗೆ ಅವೆಲ್ಲ ಜನ್ಮಗಳ ನೆನಪಿದೆ, ಆದರೆ ನಿನಗಿಲ್ಲ.**

## ಭಾವಾರ್ಥ

ಬ್ರಹ್ಮಸಂಹಿತೆಯಲ್ಲಿ (5.33) ನಮಗೆ ಭಗವಂತನ ಹಲವು ಅವತಾರಗಳ ವಿಷಯ ತಿಳಿಯುತ್ತದೆ. ಅಲ್ಲಿ ಹೀಗೆ ಹೇಳಿದೆ—

**ಅದ್ವೈತಮಚ್ಯುತಮನಾದಿಮನನ್ತರೂಪಮ್**
**ಆದ್ಯಂ ಪುರಾಣಪುರುಷಂ ನವಯೌವನಂ ಚ ।**
**ವೇದೇಷು ದುರ್ಲಭಮದುರ್ಲಭಮಾತ್ಮಭಕ್ತೌ**
**ಗೋವಿನ್ದಮಾದಿಪುರುಷಂ ತಮಹಂ ಭಜಾಮಿ ॥**

"ನಾನು ದೇವೋತ್ತಮ ಪರಮ ಪುರುಷನಾದ, ಗೋವಿಂದನನ್ನು (ಕೃಷ್ಣನನ್ನು) ಭಜಿಸುತ್ತೇನೆ. ಆತನು ಆದಿಪುರುಷನು, ಪರಾತ್ಪರನು, ಚ್ಯುತಿಯಿಲ್ಲದ ಅಚ್ಯುತನು, ಅನಾದಿಪುರುಷನು. ಅನಂತರೂಪವನ್ನು ತಾಳಿದರೂ ಅವನು ಆದಿಪುರುಷನು, ಪುರಾಣಪುರುಷನು, ಸದಾ ನವಯೌವನ ಶೋಭಿತನು. ಭಗವಂತನ ಇಂತಹ ನಿತ್ಯವಾದ, ಆನಂದಮಯವಾದ, ಸರ್ವಜ್ಞ ರೂಪಗಳನ್ನು ವೇದಗಳ ಪಂಡಿತೋತ್ತಮರು ಅರ್ಥಮಾಡಿಕೊಳ್ಳಬಲ್ಲರು. ಆದರೆ ಅವು ಯಾವಾಗಲೂ ಪರಿಶುದ್ಧರಾದ ಭಕ್ತರ ಮುಂದೆ ಸದಾ ಪ್ರಕಟವಾಗಿರುತ್ತವೆ." ಬ್ರಹ್ಮಸಂಹಿತೆಯಲ್ಲಿ (5.39) ಹೀಗೆಯೂ ಹೇಳಿದೆ.

**ರಾಮಾದಿಮೂರ್ತಿಷು ಕಲಾನಿಯಮೇನ ತಿಷ್ಠನ್**
**ನಾನಾವತಾರಮಕರೋದ್ ಭುವನೇಷು ಕಿನ್ತು ।**
**ಕೃಷ್ಣಃ ಸ್ವಯಂ ಸಮಭವತ್ಪರಮಃಪುಮಾನ್ ಯೋ**
**ಗೋವಿನ್ದಮಾದಿಪುರುಷಂ ತಮಹಂ ಭಜಾಮಿ ॥**

"ನಾನು ದೇವೋತ್ತಮ ಪರಮ ಪುರುಷನನ್ನು, ಗೋವಿಂದನನ್ನು (ಕೃಷ್ಣನನ್ನು) ಪೂಜಿಸುತ್ತೇನೆ.

ಆತನು ಯಾವಾಗಲೂ ರಾಮ ನರಸಿಂಹ ಮುಂತಾದ ಅವತಾರಗಳಲ್ಲಿಯೂ ಇತರ ಉಪ ಅವತಾರಗಳಲ್ಲಿಯೂ ನೆಲೆಸಿರುತ್ತಾನೆ. ಆತನು ಪರಮ ದೇವೋತ್ತಮ ಪುರುಷನು. ಆತನಿಗೆ ಕೃಷ್ಣನೆಂದು ಹೆಸರು. ಆತನೇ ಸ್ವಯಂ ಅವತರಿಸುತ್ತಾನೆ."

ಭಗವಂತನು ಅದ್ವಿತೀಯನಾದರೂ ಅಸಂಖ್ಯಾತರೂಪಗಳಲ್ಲಿ ಪ್ರಕಟವಾಗುತ್ತಾನೆ ಎಂದು ವೇದಗಳಲ್ಲಿ ಹೇಳಿದೆ. ಅವನು ವರ್ಣವನ್ನು ಬದಲಾಯಿಸಿದರೂ ತಾನೇ ಆಗಿ ಉಳಿಯುವ ವೈಡೂರ್ಯದಂತೆ. ಪರಿಶುದ್ಧರಾದ ಭಕ್ತರು ಹಲವು ರೂಪಗಳನ್ನು ಅರ್ಥಮಾಡಿಕೊಳ್ಳಬಲ್ಲರು. ಆದರೆ ವೇದಗಳ ಸರಳ ಅಧ್ಯಯನದಿಂದ ಅವನು ಅರ್ಥವಾಗುವುದಿಲ್ಲ (**ವೇದೇಷು ದುರ್ಲಭಮದುರ್ಲಭ ಮಾತ್ಮಭಕ್ತೌ**). ಅರ್ಜುನನಂತಹ ಭಕ್ತರು ಭಗವಂತನ ನಿತ್ಯ ಸಂಗಾತಿಗಳು. ಭಗವಂತನು ಅವತರಿಸಿದಾಗಲೆಲ್ಲ ಸಂಗಾತಿಗಳಾದ ಭಕ್ತರು ಭಗವಂತನನ್ನು ಬೇರೆ ಬೇರೆ ಪಾತ್ರಗಳಲ್ಲಿ ಸೇವಿಸಲು ತಾವೂ ಅವತಾರವೆತ್ತುತ್ತಾರೆ. ಅರ್ಜುನನು ಈ ಭಕ್ತರಲ್ಲಿ ಒಬ್ಬ; ಕೋಟ್ಯಂತರ ವರ್ಷಗಳ ಹಿಂದೆ ಶ್ರೀಕೃಷ್ಣನು ಸೂರ್ಯದೇವನಾದ ವಿವಸ್ವಾನನಿಗೆ ಭಗವದ್ಗೀತೆಯನ್ನು ಉಪದೇಶಿಸಿದಾಗ ಅರ್ಜುನನು ಬೇರೊಂದು ಪಾತ್ರದಲ್ಲಿ ಅಲ್ಲಿದ್ದ ಎಂದು ಈ ಶ್ಲೋಕದಲ್ಲಿ ಅರ್ಥವಾಗುತ್ತದೆ. ಆದರೆ ಭಗವಂತನಿಗೂ ಅರ್ಜುನನಿಗೂ ವ್ಯತ್ಯಾಸವೇನೆಂದರೆ ಭಗವಂತನಿಗೆ ಆ ಘಟನೆಯ ನೆನಪಿತ್ತು; ಅರ್ಜುನನಿಗೆ ಅದನ್ನು ಜ್ಞಾಪಿಸಿಕೊಳ್ಳಲು ಆಗಲಿಲ್ಲ. ವಿಭಿನ್ನಾಂಶವಾದ ಜೀವಿಗೂ ಭಗವಂತನಿಗೂ ಇದೇ ವ್ಯತ್ಯಾಸ. ಇಲ್ಲಿ ಶತ್ರುಗಳನ್ನು ಗೆಲ್ಲುವ ವೀರನೆಂದು ಅರ್ಜುನನನ್ನು ಸಂಬೋಧಿಸಿದ್ದರೂ ಅವನು ತನ್ನ ಹಿಂದಿನ ಹಲವು ಜನ್ಮಗಳಲ್ಲಿ ಆದದ್ದನ್ನು ಜ್ಞಾಪಿಸಿಕೊಳ್ಳಲಾರ. ಆದುದರಿಂದ ಜೀವಿಯು ಐಹಿಕ ದೃಷ್ಟಿಯಲ್ಲಿ ಎಷ್ಟೇ ದೊಡ್ಡವನಾದರೂ ಭಗವಂತನಿಗೆ ಸಮಾನನಾಗಲಾರ. ಭಗವಂತನ ನಿತ್ಯ ಸಂಗಾತಿಯಾದವನು ನಿಶ್ಚಯವಾಗಿಯೂ ಮುಕ್ತಜೀವಿಯು. ಆದರೆ ಅವನು ಭಗವಂತನಿಗೆ ಸಮಾನನಾಗಲಾರನು. ಬ್ರಹ್ಮಸಂಹಿತೆಯಲ್ಲಿ ಭಗವಂತನನ್ನು ಅಚ್ಯುತನೆಂದು ವರ್ಣಿಸಿದೆ. ಹೀಗೆಂದರೆ ಅವನಿಗೆ ಐಹಿಕ ಸಂಪರ್ಕವಿದ್ದರೂ ತನ್ನನ್ನು ಎಂದೂ ಮರೆಯುವುದಿಲ್ಲ ಎಂದರ್ಥ. ಆದುದರಿಂದ ಜೀವಿಯು ಅರ್ಜುನನಂತೆ ಮುಕ್ತನಾದರೂ ಭಗವಂತನೂ ಮತ್ತು ಜೀವಿಯೂ ಎಲ್ಲ ರೀತಿಗಳಲ್ಲೂ ಸಮರಾಗುವುದು ಸಾಧ್ಯವೇ ಇಲ್ಲ. ಅರ್ಜುನನು ಭಗವಂತನ ಭಕ್ತನಾದರೂ ಹಲವೊಮ್ಮೆ ಭಗವಂತನ ಸ್ವರೂಪವನ್ನು ಮರೆಯುತ್ತಾನೆ. ಆದರೆ ಭಗವಂತನ ಕೃಪೆಯಿಂದ ಭಕ್ತನು ಭಗವಂತನ ಅಚ್ಯುತ ಸ್ಥಿತಿಯನ್ನು ಕೂಡಲೆ ಅರ್ಥಮಾಡಿಕೊಳ್ಳಬಲ್ಲ; ಭಕ್ತನಲ್ಲದವನು ಅಥವಾ ರಾಕ್ಷಸನು ಈ ಅಲೌಕಿಕ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲಾರ. ಇದರ ಪರಿಣಾಮವಾಗಿ ಗೀತೆಯಲ್ಲಿನ ಈ ವರ್ಣನೆಗಳು ರಾಕ್ಷಸಬುದ್ಧಿಗೆ ಅರ್ಥವಾಗುವುದಿಲ್ಲ. ತಾನು ಕೋಟ್ಯಂತರ ವರ್ಷಗಳ ಹಿಂದೆ ಮಾಡಿದ ಕಾರ್ಯಗಳು ಕೃಷ್ಣನಿಗೆ ನೆನಪಿದ್ದವು. ಕೃಷ್ಣ ಮತ್ತು ಅರ್ಜುನ ಇಬ್ಬರೂ ನಿತ್ಯರಾದರೂ ಅರ್ಜುನನಿಗೆ ಇವುಗಳ ನೆನಪಿರಲಿಲ್ಲ. ಇಲ್ಲಿ ನಾವು ಇನ್ನೊಂದು ಅಂಶವನ್ನು ಗಮನಿಸಬಹುದು. ಜೀವಿಯು ದೇಹವನ್ನು ಬದಲಾಯಿಸುವುದರಿಂದ ಎಲ್ಲವನ್ನೂ ಮರೆಯುತ್ತಾನೆ; ಆದರೆ ಭಗವಂತನು ಸಚ್ಚಿದಾನಂದ ದೇಹವನ್ನು ಬದಲು ಮಾಡುವುದಿಲ್ಲವಾದ್ದರಿಂದ ಅವನಿಗೆ ನೆನಪಿರುತ್ತದೆ. ಅವನು ಅದ್ವೈತ, ಎಂದರೆ ಅವನ ದೇಹಕ್ಕೂ ಅವನಿಗೂ ವ್ಯತ್ಯಾಸವಿಲ್ಲ. ಅವನಿಗೆ ಸಂಬಂಧಿಸಿದ್ದೆಲ್ಲ ಆತ್ಮವೇ — ಆದರೆ ಬದ್ಧ ಆತ್ಮನು ತನ್ನ ಶರೀರಕ್ಕಿಂತ ಭಿನ್ನನಾದವನು. ಭಗವಂತನ ದೇಹ ಮತ್ತು ಆತ್ಮ ಒಂದೇ. ಆದ್ದರಿಂದ ಆತನ ಸ್ಥಿತಿಯು ಯಾವಾಗಲೂ ಸಾಮಾನ್ಯಜೀವಿಯ ಸ್ಥಿತಿಯಿಂದ ಬೇರೆಯಾದದ್ದು; ಆತನು ಭೌತಿಕ ವೇದಿಕೆಗೆ ಇಳಿದುಬಂದಾಗಲೂ ಜೀವಿಯಿಂದ ಭಿನ್ನನು. ರಾಕ್ಷಸರು ಭಗವಂತನ

ಆಧ್ಯಾತ್ಮಿಕ ಸ್ವಭಾವಕ್ಕೆ ಹೊಂದಿಕೊಳ್ಳಲಾರರು. ಇದನ್ನು ಭಗವಂತನೇ ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.

## ಶ್ಲೋಕ - 6

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ |**
**ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾಮ್ಯಾತ್ಮಮಾಯಯಾ ||೬||**

**ಅಜಃ**—ಜನ್ಮರಹಿತನು; **ಅಪಿ**—ಆದರೂ; **ಸನ್**—ಹಾಗಿದ್ದು; **ಅವ್ಯಯ**—ನಾಶರಹಿತವಾದ; **ಆತ್ಮಾ**—ದೇಹವು; **ಭೂತಾನಾಮ್**—ಜನಿಸಿದ ಎಲ್ಲರ; **ಈಶ್ವರಃ**—ಪರಮ ಪ್ರಭುವು; **ಅಪಿ**—ಆದರೂ; **ಸನ್**—ಹಾಗಿದ್ದು; **ಪ್ರಕೃತಿಮ್**—ದಿವ್ಯರೂಪದಲ್ಲಿ; **ಸ್ವಾಮ್**—ನನ್ನ; **ಅಧಿಷ್ಠಾಯ**—ಹಾಗೆ ಇದ್ದು; **ಸಮ್ಭವಾಮಿ**—ಅವತರಿಸುತ್ತೇನೆ; **ಆತ್ಮಮಾಯಯಾ**—ನನ್ನ ಅಂತರಂಗ ಶಕ್ತಿಯಿಂದ.

## ಅನುವಾದ

**ನನಗೆ ಹುಟ್ಟು ಎನ್ನುವುದಿಲ್ಲ. ನನ್ನ ಆಧ್ಯಾತ್ಮಿಕ ಶರೀರವು ಕ್ಷಯಿಸುವುದಿಲ್ಲ. ನಾನು ಎಲ್ಲ ಜೀವಿಗಳ ಪ್ರಭು. ಆದರೂ ಪ್ರತಿ ಯುಗದಲ್ಲಿಯೂ ನನ್ನ ಮೂಲ ಆಧ್ಯಾತ್ಮಿಕ ರೂಪದಲ್ಲಿ ಅವತರಿಸುತ್ತೇನೆ.**

## ಭಾವಾರ್ಥ

ಭಗವಂತನು ತನ್ನ ಜನ್ಮದ ವೈಚಿತ್ರ್ಯವನ್ನು ಕುರಿತು ಹೇಳುತ್ತಾನೆ. ಅವನು ಸಾಮಾನ್ಯ ಮನುಷ್ಯನಂತೆ ಕಂಡರೂ ತನ್ನ ಹಿಂದಿನ ಅಸಂಖ್ಯಾತ 'ಜನ್ಮಗಳ' ಎಲ್ಲ ವಿಷಯಗಳೂ ಅವನಿಗೆ ನೆನಪಿರುತ್ತವೆ. ಸಾಮಾನ್ಯ ಮನುಷ್ಯನಿಗೆ ಕೆಲವೇ ಗಂಟೆಗಳ ಹಿಂದೆ ತಾನು ಏನು ಮಾಡಿದೆ ಎನ್ನುವುದು ನೆನಪಿರುವುದಿಲ್ಲ. ಹಿಂದಿನ ದಿನ ಅದೇ ಹೊತ್ತಿನಲ್ಲಿ ಅವನು ಏನು ಮಾಡುತ್ತಿದ್ದ ಎಂದು ಪ್ರಶ್ನಿಸಿದರೆ ಜ್ಞಾಪಿಸಿಕೊಳ್ಳುವುದು ಅವನಿಗೆ ಬಹು ಕಷ್ಟವಾಗುತ್ತದೆ. ಅದನ್ನು ಜ್ಞಾಪಿಸಿಕೊಳ್ಳಲು ಖಂಡಿತವಾಗಿಯೂ ಆತನು ತನ್ನ ನೆನಪಿಗೆ ಪಾತಾಳಗರಡಿಯನ್ನು ಹಾಕಬೇಕಾಗುತ್ತದೆ. ಇಷ್ಟಾದರೂ ತಾವೇ ಭಗವಂತ ಅಥವಾ ಕೃಷ್ಣ ಎಂದು ಹೇಳಿಕೊಳ್ಳುವ ಧಾರ್ಷ್ಟ್ಯವಿರುವವರು ಇದ್ದಾರೆ. ಅವರ ಅರ್ಥಹೀನ ಬಡಾಯಿಯಿಂದ ನಾವು ಮೋಸಹೋಗಬಾರದು. ಭಗವಂತನು ತನ್ನ ಪ್ರಕೃತಿಯನ್ನು ವಿವರಿಸುತ್ತಾನೆ. ಪ್ರಕೃತಿ ಎಂದರೆ ಸ್ವಭಾವವೂ ಹೌದು, ಸ್ವರೂಪವೂ ಹೌದು. ಭಗವಂತನು ತಾನು ತನ್ನದೇ ಆದ ಶರೀರದೊಡನೆಯೇ ಅವತರಿಸುತ್ತೇನೆ ಎಂದು ಹೇಳುತ್ತಾನೆ. ಸಾಮಾನ್ಯಜೀವಿಯು ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಬದಲಾವಣೆ ಮಾಡುವಂತೆ ಭಗವಂತನು ಮಾಡುವುದಿಲ್ಲ. ಬದ್ಧಾತ್ಮನು ಈ ಜನ್ಮದಲ್ಲಿ ಒಂದು ಬಗೆಯ ದೇಹವನ್ನು ಹೊಂದಿರಬಹುದು. ಆದರೆ ಮುಂದಿನ ಜನ್ಮದಲ್ಲಿ ಇನ್ನೊಂದು ಬಗೆಯ ದೇಹವನ್ನು ಹೊಂದಿರುತ್ತಾನೆ. ಭೌತಿಕ ಜಗತ್ತಿನಲ್ಲಿ ಜೀವಿಗೆ ಬದಲಾವಣೆಯಾಗದ ದೇಹವಿಲ್ಲ; ಆತನು ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗುತ್ತಾನೆ. ಆದರೆ ಭಗವಂತನು ಹಾಗೆ ಮಾಡುವುದಿಲ್ಲ. ತನ್ನ ಅಂತರಂಗ ಶಕ್ತಿಯಿಂದ ತಾನು ಅವತರಿಸಿದಾಗಲೆಲ್ಲ ಒಂದೇ ಮೂಲಶರೀರದಲ್ಲಿ ಕಾಣಿಸಿಕೊಳ್ಳುತ್ತಾನೆ.

ಇದನ್ನೇ ಬೇರೆ ಮಾತುಗಳಲ್ಲಿ ಹೇಳಬೇಕೆಂದರೆ, ಕೃಷ್ಣನು ಈ ಭೌತಿಕ ಜಗತ್ತಿನಲ್ಲಿ ಎರಡು ಕೈಗಳೊಡನೆ ಕೊಳಲನ್ನು ಹಿಡಿದು ತನ್ನ ಮೂಲ ನಿತ್ಯ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಭೌತಿಕ ಜಗತ್ತಿನ ಕಶ್ಮಲದ ಸೋಂಕಿಲ್ಲದೆ ತನ್ನ ನಿತ್ಯ ಶರೀರದಲ್ಲಿ ಒಂದೇ ರೀತಿ ಕಾಣಿಸಿಕೊಳ್ಳುತ್ತಾನೆ. ಆತನು ತನ್ನ ಆಧ್ಯಾತ್ಮಿಕ ಶರೀರದಲ್ಲಿ ಕಾಣಿಸಿಕೊಂಡರೂ ಮತ್ತು ವಿಶ್ವದ ಪ್ರಭುವಾದರೂ ಸಾಮಾನ್ಯಜೀವಿಯಂತೆ ಜನ್ಮತಾಳಿರುವ ಹಾಗೆ ಕಾಣಿಸುತ್ತದೆ. ಭೌತಿಕ್ಕ ಶರೀರದಂತೆ ಆತನ ಶರೀರವು ಕ್ಷಯಿಸುವುದಿಲ್ಲವಾದರೂ ಶ್ರೀಕೃಷ್ಣನು ಶೈಶವದಿಂದ ಬಾಲ್ಯಕ್ಕೆ, ಬಾಲ್ಯದಿಂದ ಯೌವನಕ್ಕೆ ಬೆಳೆಯುವಂತೆ ಕಾಣುತ್ತದೆ. ಆದರೆ ಆಶ್ಚರ್ಯದ ಸಂಗತಿಯೆಂದರೆ ಅವನಿಗೆ ಯೌವನದಾಚೆ ವಯಸ್ಸಾಗುವುದೇ ಇಲ್ಲ. ಕುರುಕ್ಷೇತ್ರದ ಯುದ್ಧದ ಹೊತ್ತಿಗೆ ಅವನಿಗೆ ಮನೆಯಲ್ಲಿ ಹಲವಾರು ಮೊಮ್ಮಕ್ಕಳಿದ್ದರು; ಎಂದರೆ ಐಹಿಕ ಲೆಕ್ಕದಲ್ಲಿ ಆತನಿಗೆ ಸಾಕಷ್ಟು ವಯಸ್ಸಾಗಿತ್ತು. ಆದರೂ ಆತನು ಇಪ್ಪತ್ತು ಅಥವಾ ಇಪ್ಪತ್ತೈದು ವರ್ಷ ವಯಸ್ಸಿನ ತರುಣನಂತೆ ಕಾಣುತ್ತಿದ್ದನು. ಮುದುಕನಾದ ಕೃಷ್ಣನ ಚಿತ್ರವನ್ನು ನಾವು ನೋಡುವುದೇ ಇಲ್ಲ. ಏಕೆಂದರೆ ಇಡೀ ಸೃಷ್ಟಿಯಲ್ಲಿ ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿ ಆತನೇ ಅತ್ಯಂತ ವಯಸ್ಸಾದವನಾದರೂ ಅವನಿಗೆ ನಮ್ಮಂತೆ ಮುಪ್ಪು ಬರುವುದಿಲ್ಲ. ಆತನ ದೇಹವಾಗಲೀ ಬುದ್ಧಿಶಕ್ತಿಯಾಗಲೀ ಕ್ಷೀಣಿಸುವುದೂ ಇಲ್ಲ, ಬದಲಾಗುವುದೂ ಇಲ್ಲ. ಆದುದರಿಂದ ಆತನು ಭೌತಿಕ ಜಗತ್ತಿನಲ್ಲಿ ಇದ್ದರೂ ಆತನದು ಹುಟ್ಟಿಲ್ಲದ, ಅದೇ ಸಚ್ಚಿದಾನಂದ ಸ್ವರೂಪ ಎನ್ನುವುದು ಸ್ಪಷ್ಟವಾಗುತ್ತದೆ. ಅವನ ಆಧ್ಯಾತ್ಮಿಕ ದೇಹ ಮತ್ತು ಬುದ್ಧಿಶಕ್ತಿಗಳಿಗೆ ಬದಲಾವಣೆ ಎನ್ನುವುದಿಲ್ಲ. ವಾಸ್ತವವಾಗಿ ಅವನು ಕಾಣಿಸಿಕೊಳ್ಳುವುದು ಮತ್ತು ಕಣ್ಮರೆಯಾಗುವುದು ಸೂರ್ಯನು ಉದಯಿಸಿ, ನಮ್ಮ ಮುಂದೆಯೇ ಚಲಿಸುತ್ತಾ ಅನಂತರ ನಮ್ಮ ದೃಷ್ಟಿಯಿಂದ ಮರೆಯಾಗುವಂತೆ. ಸೂರ್ಯನು ಕಾಣಿಸದಿದ್ದಾಗ ನಾವು ಅವನು ಮುಳುಗಿದ್ದಾನೆ ಎಂದು ಭಾವಿಸುತ್ತೇವೆ. ಸೂರ್ಯನು ನಮ್ಮ ಕಣ್ಣ ಮುಂದೆ ಇದ್ದಾಗ ಸೂರ್ಯನು ಕ್ಷಿತಿಜದ ಮೇಲುಗಡೆ ಇದ್ದಾನೆ ಎಂದು ಭಾವಿಸುತ್ತೇವೆ. ವಸ್ತುತಃ ಸೂರ್ಯನು ಒಂದೇ ಅಚಲ ಸ್ಥಾನದಲ್ಲಿದ್ದಾನೆ. ಆದರೆ ನಮ್ಮ ಇಂದ್ರಿಯಗಳು ದೋಷಪೂರ್ಣವಾಗಿವೆ ಮತ್ತು ಅವಕ್ಕೆ ಸಾಕಷ್ಟು ಸಾಮರ್ಥ್ಯವಿಲ್ಲ. ಆದುದರಿಂದ ಆಕಾಶದಲ್ಲಿ ಸೂರ್ಯನು ಕಾಣಿಸಿಕೊಳ್ಳುವುದನ್ನು ಮತ್ತು ಮರೆಯಾಗುವುದನ್ನು ಲೆಕ್ಕ ಹಾಕುತ್ತೇವೆ. ಶ್ರೀಕೃಷ್ಣನು ಕಾಣಿಸಿಕೊಳ್ಳುವುದು ಮತ್ತು ಅದೃಶ್ಯನಾಗುವುದು ಯಾವುದೇ ಸಾಮಾನ್ಯ ಜೀವಿಯು ಕಾಣಿಸಿಕೊಳ್ಳುವ ಮತ್ತು ಅದೃಶ್ಯವಾಗುವ ರೀತಿಯಿಂದ ಪರಿಪೂರ್ಣವಾಗಿ ಭಿನ್ನವಾದವು. ಆತನು ಅಂತರಂಗ ಶಕ್ತಿಯಿಂದ ನಿತ್ಯನಾಗಿದ್ದಾನೆ.

ಚಿದಾನಂದನು ಭೌತಿಕ ಪ್ರಕೃತಿಯಿಂದ ಕಲುಷಿತನಾಗುವುದೇ ಇಲ್ಲ ಎಂಬುದು ಸ್ಪಷ್ಟ. ದೇವೋತ್ತಮ ಪರಮ ಪುರುಷನಿಗೆ ಹುಟ್ಟು ಎನ್ನುವುದು ಇಲ್ಲವೇ ಇಲ್ಲ. ಆದರೂ ಆತನು ಹಲವು ರೂಪಗಳಲ್ಲಿ ಜನ್ಮತಾಳುವಂತೆ ಕಾಣುತ್ತದೆ ಎಂದು ವೇದಗಳು ದೃಢಪಡಿಸುತ್ತವೆ. ವೇದಕ್ಕೆ ಪೂರಕವಾದ ಸಾಹಿತ್ಯವೂ, ಭಗವಂತನು ಜನ್ಮ ತಾಳುವಂತೆ ಕಂಡರೂ ಆತನ ಶರೀರವು ಬದಲಾಗುವುದಿಲ್ಲ ಎಂದೇ ದೃಢಪಡಿಸುತ್ತದೆ. ಭಾಗವತದಲ್ಲಿ ಆತನು ನಾಲ್ಕು ಕೈಗಳುಳ್ಳ ಷಡೈಶ್ವರ್ಯ ಶೋಭಿತನಾದ ನಾರಾಯಣನಾಗಿ ತಾಯಿಗೆ ಕಾಣಿಸಿಕೊಳ್ಳುತ್ತಾನೆ. ತನ್ನ ಮೂಲ ನಿತ್ಯಸ್ವರೂಪದಲ್ಲಿ ಆತನು ಕಾಣಿಸಿಕೊಳ್ಳುವುದು ಜೀವಿಗಳ ವಿಷಯದಲ್ಲಿ ಅವನು ತೋರುವ ಅವ್ಯಾಜ ಕರುಣೆ; ತಾನು (ಭಗವಂತನು) ಇರುವ ರೂಪದಲ್ಲಿ ಮನಸ್ಸನ್ನು ನಿಲ್ಲಿಸಲು ಅವರಿಗೆ ಸಾಧ್ಯವಾಗಲಿ ಎನ್ನುವುದು ಆತನ ಉದ್ದೇಶ. ನಿರಾಕಾರವಾದಿಗಳು ಮನಸ್ಸಿನ ಸುಳ್ಳು ಸೃಷ್ಟಿಗಳನ್ನು ಅಥವಾ ಕಲ್ಪನೆಗಳನ್ನು

ಭಗವಂತನ ರೂಪಗಳೆಂದು ಭಾವಿಸುತ್ತಾರೆ. ಜೀವಿಗಳು ಇವುಗಳಲ್ಲಿ ಮನಸ್ಸನ್ನು ನಿಲ್ಲಿಸಬಾರದೆಂದೂ ಭಗವಂತನ ಉದ್ದೇಶ. ವಿಶ್ವಕೋಶ ನಿಘಂಟಿನ ಪ್ರಕಾರ ಮಾಯಾ ಅಥವಾ ಆತ್ಮಮಾಯಾ ಎನ್ನುವ ಪದವು ಭಗವಂತನ ಅವ್ಯಾಜ ಕರುಣೆಯನ್ನು ಸೂಚಿಸುತ್ತದೆ. ಭಗವಂತನಿಗೆ ತನ್ನ ಎಲ್ಲ ಹಿಂದಿನ ಅವತಾರಗಳ ಮತ್ತು ಅದೃಶ್ಯಗಳ ನೆನಪಿರುತ್ತದೆ. ಆದರೆ ಸಾಮಾನ್ಯ ಜೀವಿಯು ಹೊಸ ಶರೀರವನ್ನು ಪಡೆಯುತ್ತಲೇ ಹಿಂದಿನ ಶರೀರದ ವಿಷಯವನ್ನು ಸಂಪೂರ್ಣವಾಗಿ ಮರೆತುಬಿಡುತ್ತಾನೆ. ಭಗವಂತನು ಈ ಭೂಮಿಯ ಮೇಲೆ ಇರುವಾಗ ಅದ್ಭುತವಾದ, ಮಾನವಾತೀತವಾದ ಕಾರ್ಯಗಳನ್ನು ಮಾಡುತ್ತಾನೆ. ಆತನು ಎಲ್ಲ ಜೀವಿಗಳ ಒಡೆಯ. ಆದುದರಿಂದ ಭಗವಂತನು ಯಾವಾಗಲೂ ಅದೇ ಪರಮ ಸತ್ಯನಾಗಿದ್ದಾನೆ. ಅವನ ಶರೀರ ಮತ್ತು ಆತ್ಮಗಳಲ್ಲಿ ಅಥವಾ ಅವನ ಗುಣ ಮತ್ತು ದೇಹಗಳಲ್ಲಿ ಭಿನ್ನತೆ ಇಲ್ಲ. ಭಗವಂತನು ಈ ಜಗತ್ತಿನಲ್ಲಿ ಅವತರಿಸುವುದೇಕೆ, ಅದೃಶ್ಯನಾಗುವುದೇಕೆ ಎಂಬ ಪ್ರಶ್ನೆ ಏಳಬಹುದು. ಇದನ್ನು ಮುಂದಿನ ಶ್ಲೋಕದಲ್ಲಿ ವಿವರಿಸಿದೆ.

## ಶ್ಲೋಕ - 7

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೭॥**

**ಯದಾ ಯದಾ**—ಯಾವಾಗ ಮತ್ತು ಎಲ್ಲೆಲ್ಲಿ; **ಹಿ**—ಖಂಡಿತವಾಗಿಯೂ; **ಧರ್ಮಸ್ಯ**—ಧರ್ಮದ; **ಗ್ಲಾನಿಃ**—ಏರುಪೇರುಗಳು; **ಭವತಿ**—ವ್ಯಕ್ತವಾಗುತ್ತವೋ; **ಭಾರತ**—ಭರತನ ಕುಲದವನೇ; **ಅಭ್ಯುತ್ಥಾನಮ್**—ಪ್ರಾಬಲ್ಯವು; **ಅಧರ್ಮಸ್ಯ**—ಅಧರ್ಮದ; **ತದಾ**—ಆ ಕಾಲದಲ್ಲಿ; **ಆತ್ಮಾನಮ್**—ಸ್ವಯಂ; **ಸೃಜಾಮಿ**—ವ್ಯಕ್ತವಾಗುತ್ತೇನೆ; **ಅಹಮ್**—ನಾನು.

## ಅನುವಾದ

**ಭರತ ವಂಶಜನಾದ ಅರ್ಜುನನೆ, ಯಾವಾಗ ಎಲ್ಲೆಲ್ಲಿ ಧರ್ಮದ ಅವನತಿಯಾಗುತ್ತದೋ ಮತ್ತು ಅಧರ್ಮವು ಹೆಚ್ಚುತ್ತದೋ ಆಗ ಸ್ವಯಂ ಅವತಾರ ಮಾಡುತ್ತೇನೆ.**

## ಭಾವಾರ್ಥ

ಇಲ್ಲಿ **ಸೃಜಾಮಿ** ಎನ್ನುವ ಪದವು ಅರ್ಥವತ್ತಾದುದು. **ಸೃಜಾಮಿ** ಎನ್ನುವ ಪದವನ್ನು ಸೃಷ್ಟಿ ಎನ್ನುವ ಅರ್ಥದಲ್ಲಿ ಬಳಸುವಂತಿಲ್ಲ. ಏಕೆಂದರೆ ಹಿಂದಿನ ಶ್ಲೋಕದ ಪ್ರಕಾರ ಭಗವಂತನ ಸ್ವರೂಪವು ಅಥವಾ ಶರೀರವು ಸೃಷ್ಟಿಯಾಗುವುದಿಲ್ಲ. ಅವನ ಎಲ್ಲ ರೂಪಗಳೂ ನಿರಂತರವಾಗಿ ಅಸ್ತಿತ್ವದಲ್ಲಿರುತ್ತವೆ. ಆದುದರಿಂದ **ಸೃಜಾಮಿ** ಎಂದರೆ ಭಗವಂತನು ತಾನು ಇರುವಂತೆಯೇ ಕಾಣಿಸಿಕೊಳ್ಳುತ್ತಾನೆ ಎಂದರ್ಥ. ಭಗವಂತನು ನಿಯತಕಾಲಕ್ಕೆ ಕಾಣಿಸಿಕೊಳ್ಳುತ್ತಾನೆ; ಎಂದರೆ ಬ್ರಹ್ಮನ ಒಂದು ದಿನದ ಏಳನೆಯ ಮನುವಿನ ಇಪ್ಪತ್ತೆಂಟನೆಯ ಕಲ್ಪದ ದ್ವಾಪರಯುಗದ ಅಂತ್ಯದಲ್ಲಿ ಕಾಣಿಸಿಕೊಳ್ಳುತ್ತಾನೆ. ಆದರೆ ಆತನು ಇಂತಹ ನಿಯಮ ನಿಬಂಧನೆಗಳಿಗೆ ಬದ್ಧನಲ್ಲ. ಏಕೆಂದರೆ ಆತನು ತನ್ನ ಇಚ್ಛೆಯ ಪ್ರಕಾರ ಹಲವು ರೀತಿಗಳಲ್ಲಿ ವರ್ತಿಸಲು ಸಂಪೂರ್ಣವಾಗಿ ಸ್ವತಂತ್ರನು. ಅಧರ್ಮವು ಹೆಚ್ಚಿ ನಿಜವಾದ ಧರ್ಮವು ಗ್ಲಾನಿಯಾದಾಗಲೆಲ್ಲ ಆತನು ತನ್ನ ಇಚ್ಛೆಯಂತೆಯೇ

ಕಾಣಿಸಿಕೊಳ್ಳುತ್ತಾನೆ. ವೇದದಲ್ಲಿ ಧಾರ್ಮಿಕ ತತ್ವಗಳನ್ನು ನಿರೂಪಿಸಲಾಗಿದೆ. ವೇದಗಳ ನಿಯಮಗಳನ್ನು ಸರಿಯಾಗಿ ಅನುಷ್ಠಾನ ಮಾಡುವುದರಲ್ಲಿ ಯಾವುದೇ ಅಸಮಂಜಸತೆಯಾದರೂ ಮನುಷ್ಯನು ಅಧರ್ಮಿಯಾಗುತ್ತಾನೆ. ಇಂತಹ ತತ್ವಗಳು ಭಗವಂತನು ವಿಧಿಸಿದ ನಿಯಮಗಳು ಎಂದು ಭಾಗವತದಲ್ಲಿ ಹೇಳಿದೆ. ಭಗವಂತನೊಬ್ಬನೇ ಧಾರ್ಮಿಕ ವ್ಯವಸ್ಥೆಯನ್ನು ಸೃಷ್ಟಿಸಬಲ್ಲ. ವೇದಗಳು ಭಗವಂತನೇ ಮೂಲತಃ ಬ್ರಹ್ಮನಿಗೆ ಅವನ ಹೃದಯದ ಮೂಲಕ ಹೇಳಿದ ಮಾತುಗಳು ಎಂದೂ ಕೂಡ ಅಂಗೀಕೃತವಾಗಿವೆ. ಆದುದರಿಂದ ಧರ್ಮದ ತತ್ವಗಳು ದೇವೋತ್ತಮ ಪರಮ ಪುರುಷನ ನೇರವಾದ ಆಜ್ಞೆಗಳು (**ಧರ್ಮಂತು ಸಾಕ್ಷಾದ್ ಭಗವತ್ಪ್ರಣೀತಮ್**). ಭಗವದ್ಗೀತೆಯ ಉದ್ದಕ್ಕೂ ಈ ತತ್ವಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ. ಭಗವಂತನ ಅಪ್ಪಣೆಯ ಪ್ರಕಾರ ಇಂತಹ ತತ್ವಗಳನ್ನು ನೆಲೆಗೊಳಿಸುವುದೇ ವೇದಗಳ ಉದ್ದೇಶ. ಗೀತೆಯ ಅಂತ್ಯದಲ್ಲಿ ಭಗವಂತನೇ, ಧರ್ಮದ ಅತ್ಯುನ್ನತ ತತ್ವವೆಂದರೆ ತನಗೆ ಶರಣಾಗುವುದು, ಬೇರೇನೂ ಅಲ್ಲ ಎಂದು ನೇರವಾಗಿ ಅಪ್ಪಣೆಮಾಡುತ್ತಾನೆ. ವೇದಗಳ ತತ್ವಗಳು ಮನುಷ್ಯನನ್ನು ಭಗವಂತನಿಗೆ ಸಂಪೂರ್ಣವಾಗಿ ಶರಣಾಗುವಂತೆ ಮುಂದಕ್ಕೆ ದೂಡುತ್ತವೆ. ಇಂತಹ ತತ್ವಗಳನ್ನು ರಾಕ್ಷಸರು ಕ್ಷೋಭೆಗೊಳಿಸಿದಾಗಲೆಲ್ಲ ಭಗವಂತನು ಕಾಣಿಸಿಕೊಳ್ಳುತ್ತಾನೆ. ಭಗವಾನ್ ಬುದ್ಧನು ಕೃಷ್ಣನ ಅವತಾರ ಎಂದು ಭಾಗವತದಿಂದ ತಿಳಿಯುತ್ತದೆ. ಪ್ರಾಪಂಚಿಕತೆಯು ತಾಂಡವವಾಡುತ್ತಿದ್ದು ಐಹಿಕ ಜೀವನಾಸಕ್ತರು ವೇದಗಳ ಅಧಿಕಾರವನ್ನು ನೆಪಮಾಡಿಕೊಂಡು ಬಳಸುತ್ತಿದ್ದಾಗ ಬುದ್ಧನು ಕಾಣಿಸಿಕೊಂಡನು. ವಿಶೇಷ ಉದ್ದೇಶಗಳಿಗಾಗಿ ಪ್ರಾಣಿಗಳನ್ನು ಬಲಿಕೊಡುವ ವಿಷಯದಲ್ಲಿ ವೇದಗಳಲ್ಲಿ ನಿರ್ದಿಷ್ಟ ನಿಯಮ ನಿಬಂಧನೆಗಳಿದ್ದರೂ ರಾಕ್ಷಸೀ ಪ್ರವೃತ್ತಿಯವರು ವೇದದ ತತ್ವಗಳಿಗೆ ಗಮನವನ್ನೇ ಕೊಡದೆ ಪ್ರಾಣಿಬಲಿಯನ್ನು ಮಾಡುತ್ತಿದ್ದರು. ಈ ವಿಪರೀತದ ನಡವಳಿಕೆಯನ್ನು ತಡೆದು ವೇದದ ಅಹಿಂಸಾ ತತ್ವಗಳನ್ನು ಸ್ಥಾಪಿಸಲು ಬುದ್ಧನು ಅವತರಿಸಿದನು. ಆದುದರಿಂದ ಭಗವಂತನ ಪ್ರತಿಯೊಂದು ಅವತಾರಕ್ಕೂ ಒಂದು ವಿಶೇಷವಾದ ಉದ್ದೇಶವಿದೆ. ಇವೆಲ್ಲವನ್ನು ಅಪೌರುಷೇಯ ಧರ್ಮಗ್ರಂಥಗಳಲ್ಲಿ ವರ್ಣಿಸಲಾಗಿದೆ. ಧರ್ಮಗ್ರಂಥಗಳು ಪ್ರಸ್ತಾಪಿಸದಿರುವ ಯಾರನ್ನೇ ಆಗಲಿ ಅವತಾರವೆಂದು ಒಪ್ಪಿಕೊಳ್ಳಬಾರದು. ಭಗವಂತನು ಭಾರತಭೂಮಿಯಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಾನೆ ಎನ್ನುವುದು ವಾಸ್ತವವಲ್ಲ. ತಾನು ಕಾಣಿಸಿಕೊಳ್ಳಲು ಅಪೇಕ್ಷಿಸುವ ಯಾವುದೇ ಸ್ಥಳದಲ್ಲಾಗಲೀ ಯಾವುದೇ ಕಾಲದಲ್ಲಾಗಲೀ ಅವನು ಅವತರಿಸಬಲ್ಲ. ಪ್ರತಿಯೊಂದು ಅವತಾರದಲ್ಲಿ ನಿರ್ದಿಷ್ಟ ಸನ್ನಿವೇಶಗಳಲ್ಲಿ ನಿರ್ದಿಷ್ಟ ಜನತೆಗೆ ಅರ್ಥವಾಗುವಷ್ಟು ಮಾತ್ರ ಧರ್ಮದ ವಿಷಯವನ್ನು ಹೇಳುತ್ತಾನೆ. ಆದರೆ ಧ್ಯೇಯೋದ್ದೇಶವು ಒಂದೇ — ಜನತೆಯನ್ನು ಭಗವತ್ ಪ್ರಜ್ಞೆಗೆ ಮತ್ತು ಧರ್ಮದ ತತ್ವಗಳ ವಿಧೇಯತೆಗೆ ಕೊಂಡೊಯ್ಯುವುದು. ಆತನು ತಾನೇ ಇಳಿದು ಬರುತ್ತಾನೆ; ಕೆಲವೊಮ್ಮೆ ತನ್ನ ನಿಜವಾದ ಪ್ರತಿನಿಧಿಯನ್ನು ತನ್ನ ಮಗ ಅಥವಾ ಸೇವಕನಾಗಿ ಕಳುಹಿಸುತ್ತಾನೆ; ಅಥವಾ ತಾನೇ ವೇಷ ಮರೆಸಿ ಬರುತ್ತಾನೆ.

ಭಗವದ್ಗೀತೆಯ ತತ್ವಗಳನ್ನು ಅರ್ಜುನನಿಗೆ ಮತ್ತು ಇತರ ಉನ್ನತ ವ್ಯಕ್ತಿಗಳಿಗೆ ಬೋಧಿಸಲಾಯಿತು. ಏಕೆಂದರೆ ಪ್ರಪಂಚದ ಇತರ ಭಾಗಗಳ ಸಾಮಾನ್ಯ ಜನರಿಗೆ ಹೋಲಿಸಿದರೆ ಅರ್ಜುನನು ಬಹಳ ಮುಂದುವರಿದಿದ್ದನು. ಎರಡಕ್ಕೆ ಎರಡನ್ನು ಸೇರಿಸಿದರೆ ನಾಲ್ಕಾಗುತ್ತದೆ ಎನ್ನುವುದು ಪ್ರಾರಂಭದ ಗಣಿತದ ತರಗತಿಯಲ್ಲೂ ಪ್ರೌಢವಾದ ಗಣಿತದ ತರಗತಿಯಲ್ಲೂ ನಿಜವಾದದ್ದು. ಆದರೂ ಪ್ರೌಢಗಣಿತ ಮತ್ತು ಕಿರಿಯಗಣಿತ ಎಂದುಂಟು. ಭಗವಂತನ ಎಲ್ಲ

ಅವತಾರಗಳಲ್ಲಿ ಬೋಧಿಸುವ ತತ್ವಗಳು ಒಂದೇ. ಆದರೆ ಬೇರೆಬೇರೆ ಸನ್ನಿವೇಶಗಳಲ್ಲಿ ಅವು ಪ್ರೌಢ ಮತ್ತು ಕಿರಿದು ಎಂದು ಕಾಣುತ್ತವೆ. ಮುಂದೆ ವಿವರಿಸುವಂತೆ ನಾಲ್ಕು ವರ್ಣಗಳ ಮತ್ತು ನಾಲ್ಕು ಆಶ್ರಮಗಳ ಸ್ವೀಕಾರದೊಂದಿಗೆ ಧರ್ಮದ ಉನ್ನತ ತತ್ವಗಳು ಪ್ರಾರಂಭವಾಗುತ್ತವೆ. ಅವತಾರದಂತಹ ಮಹತ್ಕಾರ್ಯದ ಸಂಪೂರ್ಣ ಉದ್ದೇಶ ಎಲ್ಲೆಡೆಗಳಲ್ಲಿಯೂ ಕೃಷ್ಣಪ್ರಜ್ಞೆಯನ್ನು ಜಾಗೃತಗೊಳಿಸುವುದು. ಇಂತಹ ಪ್ರಜ್ಞೆಯು ಬೇರೆಬೇರೆ ಸನ್ನಿವೇಶಗಳಲ್ಲಿ ಮಾತ್ರ ಪ್ರಕಟವಾಗುತ್ತದೆ ಅಥವಾ ಪ್ರಕಟವಾಗದೆ ಹೋಗುತ್ತದೆ.

## ಶ್ಲೋಕ - 8

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ |**
**ಧರ್ಮಸಂಸ್ಥಾಪನಾರ್ಥಾಯ ಸಮ್ಭವಾಮಿ ಯುಗೇ ಯುಗೇ ||೮||**

**ಪರಿತ್ರಾಣಾಯ**—ಉದ್ಧಾರಕ್ಕಾಗಿ; **ಸಾಧೂನಾಮ್**—ಭಕ್ತರ; **ವಿನಾಶಾಯ**—ನಾಶಕ್ಕಾಗಿ; **ಚ**—ಮತ್ತು; **ದುಷ್ಕೃತಾಮ್**—ದುಷ್ಟರ; **ಧರ್ಮ**—ಧರ್ಮತತ್ವಗಳ; **ಸಂಸ್ಥಾಪನ ಅರ್ಥಾಯ**—ಪುನಃ; ಸ್ಥಾಪನೆಗಾಗಿ; **ಸಮ್ಭವಾಮಿ**—ಪ್ರಕಟವಾಗುತ್ತೇನೆ; **ಯುಗೇ ಯುಗೇ**—ಯುಗಯುಗಗಳಲ್ಲೂ.

## ಅನುವಾದ

**ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ ದುಷ್ಟರನ್ನು ನಾಶಮಾಡುವುದಕ್ಕಾಗಿಯೂ ಮತ್ತು ಧರ್ಮದ ತತ್ವಗಳನ್ನು ಮತ್ತೆ ಸ್ಥಾಪಿಸುವುದಕ್ಕಾಗಿಯೂ ನಾನು ಪ್ರತಿಯುಗದಲ್ಲಿ ಅವತರಿಸುತ್ತೇನೆ.**

## ಭಾವಾರ್ಥ

ಭಗವದ್ಗೀತೆಯ ಪ್ರಕಾರ ಸಾಧು ಎಂದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು. ಒಬ್ಬ ವ್ಯಕ್ತಿಯು ಅಧರ್ಮಿ ಎಂದು ಕಾಣಬಹುದು. ಆದರೆ ಅವನಿಗೆ ಕೃಷ್ಣಪ್ರಜ್ಞೆಯ ಅರ್ಹತೆಗಳು ಸಂಪೂರ್ಣವಾಗಿ ಇದ್ದರೆ ಅವನು ಸಾಧು ಎಂದೇ ಅರ್ಥಮಾಡಿಕೊಳ್ಳಬೇಕು. **ದುಷ್ಕೃತಾಮ್** ಎನ್ನುವ ಪದವು ಕೃಷ್ಣಪ್ರಜ್ಞೆಗೆ ಲಕ್ಷ್ಯಕೊಡದವರಿಗೆ ಅನ್ವಯಿಸುತ್ತದೆ. ಇಂತಹ ದುಷ್ಟರು ಅಥವಾ **ದುಷ್ಕೃತಾಮ್** ಆದವರನ್ನು ಅವರು ಐಹಿಕ ವಿದ್ಯೆಯಿಂದ ಭೂಷಿತರಾಗಿದ್ದರೂ ಮೂರ್ಖರು ಮತ್ತು ಅಧಮ ಮನುಷ್ಯರು ಎಂದು ವರ್ಣಿಸಿದೆ. ನೂರಕ್ಕೆ ನೂರರಷ್ಟು ಕೃಷ್ಣಪ್ರಜ್ಞೆಯಲ್ಲಿ ತೊಡಗಿರುವವರನ್ನು ಅವರು ವಿದ್ವಾಂಸರಲ್ಲದಿದ್ದರೂ, ಸುಸಂಸ್ಕೃತರಲ್ಲದಿದ್ದರೂ, ಸಾಧು ಎಂದು ಪರಿಗಣಿಸಲಾಗುವುದು. ನಾಸ್ತಿಕರ ವಿಷಯ ಹೇಳುವುದಾದರೆ, ಭಗವಂತನು ರಾಕ್ಷಸರಾದ ರಾವಣ ಮತ್ತು ಕಂಸರನ್ನು ನಾಶಮಾಡಿದಂತೆ ನಾಸ್ತಿಕರನ್ನು ನಾಶಮಾಡಲು ತನ್ನ ನಿಜಸ್ವರೂಪದಲ್ಲಿ ಅವತರಿಸುವ ಅಗತ್ಯವಿಲ್ಲ. ರಾಕ್ಷಸರನ್ನು ನಾಶ ಮಾಡಲು ಭಗವಂತನಿಗೆ ಅನೇಕ ಬಂಟರಿದ್ದಾರೆ. ಆದರೆ ಭಗವಂತನ ಪರಿಶುದ್ಧ ಭಕ್ತರನ್ನು ರಾಕ್ಷಸರು ಸದಾ ಹಿಂಸಿಸುತ್ತಿರುತ್ತಾರೆ. ಮುಖ್ಯವಾಗಿ ಆ ಭಕ್ತರನ್ನು ತೃಪ್ತಿಗೊಳಿಸುವುದಕ್ಕೋಸ್ಕರ ಭಗವಂತನು ಇಳಿದು ಬರುತ್ತಾನೆ. ಭಕ್ತನು ತನ್ನ ನೆಂಟನೇ ಆದರೂ ರಾಕ್ಷಸನು ಅವನನ್ನು ಹಿಂಸಿಸುತ್ತಾನೆ. ಪ್ರಹ್ಲಾದ ಮಹಾರಾಜನು ತನ್ನ ಮಗನೇ ಆದರೂ ಹಿರಣ್ಯಕಶಿಪು ಅವನನ್ನು ಹಿಂಸಿಸಿದ. ಕೃಷ್ಣನ ತಾಯಿಯಾದ ದೇವಕಿಯು ಕಂಸನ ತಂಗಿಯಾದರೂ, ಕೃಷ್ಣನು

ಅವರ ಮಗ ಎನ್ನುವ ಒಂದೇ ಕಾರಣಕ್ಕಾಗಿ ಆಕೆ ಮತ್ತು ಆಕೆಯ ಗಂಡ ವಸುದೇವನು ಹಿಂಸೆಗೆ ಒಳಗಾಗಬೇಕಾಯಿತು. ಆದ್ದರಿಂದ ಶ್ರೀಕೃಷ್ಣನು ಕಂಸನನ್ನು ಕೊಲ್ಲುವುದಕ್ಕಿಂತ ಹೆಚ್ಚಾಗಿ ದೇವಕಿಯನ್ನು ರಕ್ಷಿಸುವುದಕ್ಕಾಗಿ ಅವತಾರವೆತ್ತಿದ. ಆದರೆ ಎರಡೂ ಏಕಕಾಲದಲ್ಲಿ ಸಾಧಿತವಾದವು. ಆದುದರಿಂದ ಭಕ್ತನನ್ನು ಉದ್ಧರಿಸಲು ಮತ್ತು ದುಷ್ಟ ರಾಕ್ಷಸರನ್ನು ನಿಗ್ರಹಿಸಲು ಭಗವಂತನು ವಿವಿಧ ಅವತಾರಗಳನ್ನೆತ್ತುತ್ತಾನೆ ಎಂದು ಇಲ್ಲಿ ಹೇಳಿದೆ.

ಕೃಷ್ಣ ದಾಸ ಕವಿರಾಜನ ಚೈತನ್ಯ ಚರಿತಾಮೃತ (ಮಧ್ಯ - 20.263-264) ದಲ್ಲಿ ಕೆಳಗಿನ ಶ್ಲೋಕವು ಅವತಾರದ ಈ ತತ್ವಗಳನ್ನು ಹೀಗೆ ಸಂಗ್ರಹಿಸಿ ಹೇಳುತ್ತದೆ.

**ಸೃಷ್ಟಿ ಹೇತು ಯೇಇಮೂರ್ತಿ ಪ್ರಪಞ್ಚೇ ಅವತರೇ**
**ಸೇಇ ಈಶ್ವರಮೂರ್ತಿ 'ಅವತಾರ' ನಾಮ ಧರೇ**

**ಮಾಯಾತೀತ ಪರವ್ಯೋಮೇ ಸಬಾರ ಅವಸ್ಥಾನ**
**ವಿಶ್ವೇ ಅವತರಿsಧರೇ 'ಅವತಾರ' ನಾಮ**

"ಭಗವದ್ ರಾಜ್ಯದಿಂದ ಲೌಕಿಕ ಅಭಿವ್ಯಕ್ತಿಗಾಗಿ ಇಳಿದುಬರುವುದೇ ಭಗವದವತಾರ. ಹೀಗೆ ಇಳಿದು ಬರುವ ಪರಮ ಪುರುಷನ ನಿರ್ದಿಷ್ಟ ರೂಪವನ್ನು ಅವತಾರ ಎಂದು ಕರೆಯಲಾಗುತ್ತದೆ. ಇಂತಹ ಸ್ವರೂಪಗಳು ಭಗವಂತನ ರಾಜ್ಯವಾದ ಆಧ್ಯಾತ್ಮಿಕ ಲೋಕದಲ್ಲಿ ನೆಲೆಸಿರುತ್ತವೆ. ಅವು ಭೌತಿಕ ಜಗತ್ತಿಗೆ ಬಂದಾಗ ಅವತಾರ ಎನ್ನುವ ಹೆಸರನ್ನು ಪಡೆಯುತ್ತವೆ."

ಅವತಾರಗಳಲ್ಲಿ ಹಲವು ರೀತಿಗಳು. ಉದಾಹರಣೆಗೆ ಪುರುಷಾವತಾರಗಳು, ಗುಣಾವತಾರಗಳು, ಲೀಲಾವತಾರಗಳು, ಶಕ್ತಿ ಆವೇಶ ಅವತಾರಗಳು, ಮನ್ವಂತರ ಅವತಾರಗಳು ಮತ್ತು ಯುಗಾವತಾರಗಳು; ಇವೆಲ್ಲ ವಿಶ್ವದಲ್ಲಿ ಎಲ್ಲೆಡೆಯೂ ನಿಯತಕಾಲಕ್ಕೆ ಕಾಣಿಸಿಕೊಳ್ಳುತ್ತವೆ. ಆದರೆ ಶ್ರೀಕೃಷ್ಣನು ಆದಿಪ್ರಭು, ಎಲ್ಲ ಅವತಾರಗಳ ಆದಿಮೂಲ. ಪರಿಶುದ್ಧ ಭಕ್ತರಿಗೆ ಕೃಷ್ಣನನ್ನು ಅವನ ವೃಂದಾವನದ ಮೂಲಲೀಲೆಗಳಲ್ಲಿ ಕಾಣಬೇಕೆಂದು ಬಹಳ ಕಾತರ; ಅವರ ಆತಂಕವನ್ನು ತಣಿಸುವ ನಿರ್ದಿಷ್ಟ ಉದ್ದೇಶಕ್ಕಾಗಿಯೇ ಪ್ರಭು ಶ್ರೀಕೃಷ್ಣನು ಇಳಿದು ಬರುತ್ತಾನೆ. ಆದುದರಿಂದ ಕೃಷ್ಣಾವತಾರದ ಮುಖ್ಯ ಉದ್ದೇಶ ಅವನ ಪರಿಶುದ್ಧಭಕ್ತರನ್ನು ತೃಪ್ತಿಗೊಳಿಸುವುದು.

ಪ್ರತಿಯೊಂದು ಯುಗದಲ್ಲಿಯೂ ತಾನು ಅವತಾರವೆತ್ತುವುದಾಗಿ ಭಗವಂತನು ಹೇಳುತ್ತಾನೆ. ಆತನು ಕಲಿಯುಗದಲ್ಲಿಯೂ ಅವತಾರವೆತ್ತುತ್ತಾನೆ ಎನ್ನುವುದನ್ನು ಇದು ಸೂಚಿಸುತ್ತದೆ. ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ, ಕಲಿಯುಗದ ಅವತಾರ ಶ್ರೀ ಚೈತನ್ಯ ಮಹಾಪ್ರಭು; ಅವರು ಸಂಕೀರ್ತನ ಆಂದೋಳನದಿಂದ ಕೃಷ್ಣಪ್ರಜ್ಞೆಯನ್ನು ಭಾರತದಲ್ಲೆಲ್ಲ ಹರಡಿದರು. ಈ ಸಂಕೀರ್ತನ ಸಂಸ್ಕೃತಿಯು ಊರಿನಿಂದ ಊರಿಗೆ, ಹಳ್ಳಿಯಿಂದ ಹಳ್ಳಿಗೆ ಪ್ರಪಂಚದಲ್ಲೆಲ್ಲ ಪ್ರಸಾರವಾಗುತ್ತದೆ ಎಂದು ಅವರು ಭವಿಷ್ಯ ನುಡಿದರು. ದೇವೋತ್ತಮ ಪರಮ ಪುರುಷನಾದ ಕೃಷ್ಣನ ಅವತಾರವಾದ ಚೈತನ್ಯ ಮಹಾಪ್ರಭುಗಳನ್ನು ಉಪನಿಷತ್ತುಗಳು, ಮಹಾಭಾರತ ಮತ್ತು ಭಾಗವತದಂತಹ ಅಪೌರುಷೇಯ ಧರ್ಮಗ್ರಂಥಗಳ ರಹಸ್ಯಭಾಗಗಳಲ್ಲಿ ನೇರವಾಗಿ ಅಲ್ಲದಿದ್ದರೂ ಗೋಪ್ಯವಾಗಿ ವರ್ಣಿಸಲಾಗಿದೆ. ಚೈತನ್ಯ ಮಹಾಪ್ರಭುಗಳ ಸಂಕೀರ್ತನ ಆಂದೋಳನವು ಶ್ರೀಕೃಷ್ಣನ ಭಕ್ತರನ್ನು ಬಹಳವಾಗಿ ಆಕರ್ಷಿಸುತ್ತದೆ. ಭಗವಂತನ ಈ ಅವತಾರವು ದುಷ್ಕರ್ಮಿಗಳನ್ನು

ಕೊಲ್ಲುವುದಿಲ್ಲ; ತನ್ನ ಅವ್ಯಾಜ ಕರುಣೆಯಿಂದ ಉದ್ಧರಿಸುತ್ತದೆ.

## ಶ್ಲೋಕ - 9

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ |**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ||೯||**

**ಜನ್ಮ**—ಹುಟ್ಟನ್ನು; **ಕರ್ಮ**—ಕಾರ್ಯವನ್ನು; **ಚ**—ಕೂಡ; **ಮೇ**—ನನ್ನ; **ದಿವ್ಯಮ್**—ಅಲೌಕಿಕವಾದ; **ಏವಮ್**—ಹೀಗೆ; **ಯಃ**—ಯಾರು; **ವೇತ್ತಿ**—ತಿಳಿದಿರುತ್ತಾನೋ; **ತತ್ತ್ವತಃ**—ನೈಜತೆಯಲ್ಲಿ; **ತ್ಯಕ್ತ್ವಾ**—ತ್ಯಜಿಸಿ; **ದೇಹಮ್**—ಈ ಶರೀರವನ್ನು; **ಪುನಃ**—ಮತ್ತೆ; **ಜನ್ಮ**—ಹುಟ್ಟನ್ನು; **ನ ಏತಿ**—ಪಡೆಯುವುದಿಲ್ಲ; **ಮಾಮ್**—ನನ್ನನ್ನು; **ಏತಿ**—ಹೊಂದುತ್ತಾನೆ; **ಸಃ**—ಅವನು; **ಅರ್ಜುನ**—ಅರ್ಜುನನೇ.

## ಅನುವಾದ

**ಅರ್ಜುನನೇ, ಯಾರು ಹೀಗೆ ನನ್ನ ಹುಟ್ಟಿನ ಮತ್ತು ಕರ್ಮಗಳ ದಿವ್ಯ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಳ್ಳುವರೋ ಅವರು ದೇಹತ್ಯಾಗ ಮಾಡಿದನಂತರ ಮತ್ತೆ ಈ ಐಹಿಕ ಜಗತ್ತಿನಲ್ಲಿ ಹುಟ್ಟುವುದಿಲ್ಲ. ಅವರು ನನ್ನ ನಿತ್ಯನಿವಾಸಕ್ಕೆ ಬರುತ್ತಾರೆ.**

## ಭಾವಾರ್ಥ

ಭಗವಂತನು ತನ್ನ ನಿತ್ಯನಿವಾಸದಿಂದ ಇಳಿದುಬರುವುದನ್ನು ಆರನೆಯ ಶ್ಲೋಕದಲ್ಲಿ ವಿವರಿಸಿದೆ. ದೇವೋತ್ತಮ ಪರಮ ಪುರುಷನ ಅವತಾರದ ಸತ್ಯವನ್ನು ಅರ್ಥಮಾಡಿಕೊಂಡವನು ಆಗಲೇ ಐಹಿಕ ಬಂಧನದಿಂದ ಮುಕ್ತನಾಗಿದ್ದಾನೆ. ಆದುದರಿಂದ ಈಗಿನ ಭೌತಿಕ ಶರೀರವನ್ನು ತ್ಯಜಿಸಿದ ಕೂಡಲೇ ಅವನು ಭಗವಂತನ ಸಾಮ್ರಾಜ್ಯಕ್ಕೆ ಹಿಂತಿರುಗುತ್ತಾನೆ. ಐಹಿಕ ಬಂಧನದಿಂದ ಹೀಗೆ ಮುಕ್ತನಾಗುವುದು ಜೀವಿಗೆ ಸುಲಭವೇನಲ್ಲ. ನಿರಾಕಾರವಾದಿಗಳು ಮತ್ತು ಯೋಗಿಗಳು ಬಹಳ ಕಷ್ಟಪಟ್ಟು, ಹಲವಾರು ಜನ್ಮಗಳ ಅನಂತರ ಮುಕ್ತಿಯನ್ನು ಪಡೆಯುತ್ತಾರೆ. ಆಗಲೂ ಅವರು ಪಡೆಯುವ ಮುಕ್ತಿಯೆಂದರೆ ಭಗವಂತನ ನಿರಾಕಾರ ಬ್ರಹ್ಮ ಜ್ಯೋತಿಯಲ್ಲಿ ಲೀನರಾಗುವುದು; ಇದು ಭಾಗಶಃ ಮುಕ್ತಿ. ಅವರು ಮುಂದೆ ಈ ಐಹಿಕ ಜಗತ್ತಿಗೆ ಹಿಂದಿರುಗುವ ಅಪಾಯವು ಇದ್ದೇ ಇರುತ್ತದೆ. ಆದರೆ ಭಕ್ತನು ಭಗವಂತನ ದೇಹ ಮತ್ತು ಕರ್ಮಗಳ ದಿವ್ಯ ಸ್ವರೂಪವನ್ನು ಅರ್ಥಮಾಡಿಕೊಂಡರೆ ಸಾಕು. ಆತನು ಈ ದೇಹವನ್ನು ಬಿಟ್ಟ ಅನಂತರ ಭಗವಂತನ ನಿವಾಸವನ್ನು ಸೇರುತ್ತಾನೆ; ಈ ಐಹಿಕ ಜಗತ್ತಿಗೆ ಹಿಂತಿರುಗುವ ಅಪಾಯವು ಇರುವುದಿಲ್ಲ. ಬ್ರಹ್ಮಸಂಹಿತೆಯಲ್ಲಿ (5.33) ಭಗವಂತನಿಗೆ ಹಲವಾರು ರೂಪಗಳು, ಅವತಾರಗಳು ಉಂಟು ಎಂದು ಹೇಳಿದೆ; **ಅದ್ವೈತಮ್ ಅಚ್ಯುತಮ್ ಅನಾದಿಮ್ ಅನಂತರೂಪಮ್**. ಭಗವಂತನಿಗೆ ಅನೇಕ ದಿವ್ಯರೂಪಗಳಿದ್ದರೂ ಅವೆಲ್ಲ ಒಂದೇ. ದೇವೋತ್ತಮ ಪರಮ ಪುರುಷನು ಒಬ್ಬನೇ. ಇದು ಪ್ರಾಪಂಚಿಕ ಮನಸ್ಸಿನ ವಿದ್ವಾಂಸರಿಗೂ

ಅನುಭವಗಮ್ಯ ತತ್ವಶಾಸ್ತ್ರಜ್ಞರಿಗೂ ಅರ್ಥವಾಗುವುದಿಲ್ಲ. ಆದರೂ ನಾವು ಇದನ್ನು ದೃಢಮನಸ್ಸಿನಿಂದ ಅರ್ಥಮಾಡಿಕೊಳ್ಳಬೇಕು. ವೇದಗಳಲ್ಲಿ (ಪುರುಷ ಬೋಧಿನೀ ಉಪನಿಷತ್ತು) ಹೇಳಿರುವಂತೆ —

ಏಕೋ ದೇವೋ ನಿತ್ಯಲೀಲಾನುರಕ್ತೋ
ಭಕ್ತವ್ಯಾಪೀ ಹೃದ್ಯನ್ತರಾತ್ಮಾ

"ಒಬ್ಬನೇ ಆದ ದೇವೋತ್ತಮ ಪರಮ ಪುರುಷನು ತನ್ನ ಪರಿಶುದ್ಧ ಭಕ್ತರೊಂದಿಗೆ ಅನೇಕ ದಿವ್ಯರೂಪಗಳಲ್ಲಿ ನಿರಂತರವಾಗಿ ಲೀಲೆಗಳಲ್ಲಿ ತೊಡಗಿರುತ್ತಾನೆ." ವೇದದ ಈ ಮಾತನ್ನು ಸ್ವತಃ ಭಗವಂತನೇ ಗೀತೆಯ ಈ ಶ್ಲೋಕದಲ್ಲಿ ದೃಢಪಡಿಸುತ್ತಾನೆ. ಯಾರು ವೇದಗಳ ಪ್ರಮಾಣವನ್ನು ಒಪ್ಪಿ ದೇವೋತ್ತಮ ಪರಮ ಪುರುಷನ ಪ್ರಮಾಣವನ್ನು ಒಪ್ಪಿ ಈ ಸತ್ಯವನ್ನು ಸ್ವೀಕರಿಸುತ್ತಾನೋ, ಯಾರು ಊಹಾತ್ಮಕ ಚಿಂತನೆಗಳಲ್ಲಿ ಕಾಲವನ್ನು ವ್ಯರ್ಥಮಾಡುವುದಿಲ್ಲವೋ ಅವನು ಮುಕ್ತಿಯ ಅತ್ಯುನ್ನತ ಪರಿಪೂರ್ಣಸ್ಥಿತಿಯನ್ನು ತಲಪುತ್ತಾನೆ. ಶ್ರದ್ಧೆಯಿಂದ ಈ ಸತ್ಯವನ್ನು ಸ್ವೀಕರಿಸಿದರೆ ಸಾಕು, ಮನುಷ್ಯನು ನಿಶ್ಚಯವಾಗಿಯೂ ಮುಕ್ತಿಯನ್ನು ಸಾಧಿಸುತ್ತಾನೆ. **ತತ್ತ್ವಮಸಿ** ಎನ್ನುವ ವೇದದ ಮಾತು ಇಲ್ಲಿ ವಾಸ್ತವವಾಗಿ ಅನ್ವಯವಾಗುತ್ತದೆ. ಯಾರು ಶ್ರೀಕೃಷ್ಣನೇ ಪರಮೋನ್ನತನೆಂದು ಅರ್ಥಮಾಡಿಕೊಳ್ಳುತ್ತಾನೋ ಅಥವಾ ಭಗವಂತನಿಗೆ, 'ನೀನೇ ಪರಬ್ರಹ್ಮನು, ದೇವೋತ್ತಮ ಪುರುಷನು' ಎಂದು ಹೇಳುತ್ತಾನೋ ಅವನು ನಿಶ್ಚಯವಾಗಿ ಆ ಕ್ಷಣವೇ ಮುಕ್ತಿಯನ್ನು ಪಡೆಯುತ್ತಾನೆ. ಆದುದರಿಂದ ಭಗವಂತನ ದಿವ್ಯಸಹವಾಸವು ಅವನಿಗೆ ಲಭ್ಯವಾಗುವುದು ಖಚಿತ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಭಗವಂತನ ಇಂತಹ ನಿಷ್ಠ ಭಕ್ತನು ಪರಿಪೂರ್ಣತೆಯನ್ನು ಸಾಧಿಸುತ್ತಾನೆ. ಇದನ್ನು ಕೆಳಗಿನ ವೇದವಾಕ್ಯವು ದೃಢಪಡಿಸುತ್ತದೆ—

ತಮೇವ ವಿದಿತ್ವಾತಿ ಮೃತ್ಯುಮೇತಿ
ನಾನ್ಯಃ ಪನ್ಥಾ ವಿದ್ಯತೇಽಯನಾಯ

"ದೇವೋತ್ತಮ ಪರಮ ಪುರುಷನಾದ ಭಗವಂತನನ್ನು ತಿಳಿದುಕೊಂಡ ಮಾತ್ರದಿಂದಲೇ ಮನುಷ್ಯನು ಹುಟ್ಟು, ಸಾವುಗಳಿಂದ ಪಾರಾಗಿ ಮುಕ್ತಿಯ ಪರಿಪೂರ್ಣಸ್ಥಿತಿಯನ್ನು ತಲಪಬಹುದು. ಈ ಪರಿಪೂರ್ಣತೆಯನ್ನು ಸಾಧಿಸಲು ಬೇರೆ ಯಾವ ಮಾರ್ಗವೂ ಇಲ್ಲ." (ಶ್ವೇತಾಶ್ವತರ ಉಪನಿಷತ್ತು, 3.8) ಬೇರೆ ದಾರಿಯೇ ಇಲ್ಲ ಎನ್ನುವುದರ ಅರ್ಥ, ಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ಅರಿಯದವನು ಖಂಡಿತವಾಗಿ ತಮೋಗುಣದಲ್ಲಿದ್ದಾನೆ ಎಂದು. ಅವನು ಜೇನುತುಪ್ಪದ ಸೀಸೆಯ ಹೊರ ಭಾಗವನ್ನು ನೆಕ್ಕಿದ ಮಾತ್ರಕ್ಕೆ, ಎಂದರೆ ಭಗವದ್ಗೀತೆಯನ್ನು ಐಹಿಕ ವಿದ್ವತ್ತಿಗೆ ಅನುಗುಣವಾಗಿ ವ್ಯಾಖ್ಯಾನ ಮಾಡಿದ ಮಾತ್ರಕ್ಕೆ, ಮುಕ್ತಿಯನ್ನು ಪಡೆಯಲಾರನು. ಇಂತಹ ಅನುಭವಗಮ್ಯ ತತ್ವಶಾಸ್ತ್ರಜ್ಞರು ಐಹಿಕ ಜಗತ್ತಿನಲ್ಲಿ ಬಹುಮುಖ್ಯ ಪಾತ್ರಗಳನ್ನು ವಹಿಸಬಹುದು. ಆದರೆ ಅವರು ಮುಕ್ತಿಗೆ ಅರ್ಹರಾಗಿಯೇ ಆಗುತ್ತಾರೆ ಎಂದೇನೂ ಇಲ್ಲ. ಇಂತಹ ಗರ್ವಿತರಾದ ಲೌಕಿಕ ವಿದ್ವಾಂಸರು ಭಗವದ್ಭಕ್ತನ ಅವ್ಯಾಜ ಕರುಣೆಗಾಗಿ ಕಾಯಬೇಕಾಗುತ್ತದೆ. ಆದುದರಿಂದ ಮನುಷ್ಯನು ಶ್ರದ್ಧೆ ಮತ್ತು ಜ್ಞಾನಗಳಿಂದ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು, ಮತ್ತು ಆ ಮೂಲಕ ಪರಿಪೂರ್ಣತೆಯನ್ನು ಪಡೆಯಬೇಕು.

## ಶ್ಲೋಕ - 10

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ |**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ||೧೦||**

**ವೀತ**—ಮುಕ್ತರಾಗಿ; **ರಾಗ**—ಆಸಕ್ತಿ; **ಭಯ**—ಭೀತಿ; **ಕ್ರೋಧಾಃ**—ಮತ್ತು ಕೋಪಗಳಿಂದ; **ಮತ್ ಮಯಾ**—ಪೂರ್ಣವಾಗಿ ನನ್ನಲ್ಲಿ; **ಮಾಮ್**—ನನ್ನಲ್ಲಿ; **ಉಪಾಶ್ರಿತಾಃ**—ಪೂರ್ಣವಾಗಿ ಆಶ್ರಯಪಡೆದು; **ಬಹವಃ**—ಅನೇಕರು; **ಜ್ಞಾನ**—ಜ್ಞಾನದ; **ತಪಸಾ**—ತಪಸ್ಸಿನಿಂದ; **ಪೂತಾಃ**—ಪರಿಶುದ್ಧರಾಗಿ; **ಮತ್ ಭಾವಮ್**—ದಿವ್ಯಪ್ರೇಮವನ್ನು; **ಆಗತಾಃ**—ಸಾಧಿಸಿದರು.

### ಅನುವಾದ

**ಭಯ, ರಾಗ, ಕ್ರೋಧಗಳನ್ನು ತ್ಯಜಿಸಿ ಅನೇಕರು ಸಂಪೂರ್ಣವಾಗಿ ನನ್ನಲ್ಲಿಯೇ ಮನಸ್ಸುಳ್ಳವರಾಗಿ ನನ್ನಲ್ಲಿ ಆಶ್ರಯ ಪಡೆದಿದ್ದಾರೆ. ನನ್ನ ಜ್ಞಾನದಿಂದ ಪರಿಶುದ್ಧರಾಗಿದ್ದಾರೆ. ಹೀಗೆ ಅವರು ನನ್ನಲ್ಲಿ ದಿವ್ಯಪ್ರೇಮವನ್ನು ಪಡೆದಿದ್ದಾರೆ.**

### ಭಾವಾರ್ಥ

ಮೇಲೆ ಹೇಳಿದಂತೆ, ಅತಿಯಾಗಿ ಪ್ರಾಪಂಚಿಕ ಮನಸ್ಸುಳ್ಳವನಿಗೆ ಪರಮ ಪರಿಪೂರ್ಣ ಸತ್ಯದ ಸಾಕಾರ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ಬಹುಕಷ್ಟ. ಸಾಮಾನ್ಯವಾಗಿ, ಬದುಕಿನ ದೈಹಿಕ ಕಲ್ಪನೆ ಇರುವವರು ಪ್ರಾಪಂಚಿಕತೆಯಲ್ಲೇ ತನ್ಮಯರಾಗಿರುತ್ತಾರೆ. ಎಷ್ಟು ತನ್ಮಯರಾಗಿರುತ್ತಾರೆ ಎಂದರೆ ಅವರಿಗೆ ಪರಮ ಸತ್ಯವು ಹೇಗೆ ವ್ಯಕ್ತಿಯಾಗಿರಬಲ್ಲದು ಎನ್ನುವುದನ್ನು ಅರ್ಥಮಾಡಿಕೊಳ್ಳುವುದೇ ಸಾಧ್ಯವಿಲ್ಲ. ಇಂತಹ ಪ್ರಾಪಂಚಿಕ ಮನಸ್ಸುಳ್ಳವನಿಗೆ ನಾಶವಿಲ್ಲದ, ಜ್ಞಾನ ಮತ್ತು ನಿತ್ಯಾನಂದ ಪರಿಪೂರ್ಣವಾದ ದಿವ್ಯಶರೀರವಿದೆ ಎಂದು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ಐಹಿಕ ಕಲ್ಪನೆಯಲ್ಲಿ ದೇಹವು ನಾಶವಾಗುವಂತಹುದು. ಅಜ್ಞಾನ ಮತ್ತು ದುಃಖಗಳಿಂದ ತುಂಬಿರುವಂತಹುದು. ಆದುದರಿಂದ ಭಗವಂತನ ಸಾಕಾರಸ್ವರೂಪದ ವಿಷಯವನ್ನು ಹೇಳಿದಾಗ ಜನರು ಇದೇ ಶರೀರದ ಕಲ್ಪನೆಯನ್ನು ಮನಸ್ಸಿನಲ್ಲಿ ಉಳಿಸಿಕೊಳ್ಳುತ್ತಾರೆ. ಇಂತಹ ಪ್ರಾಪಂಚಿಕ ಮನುಷ್ಯರಿಗೆ, ಭೌತಿಕ ಅಭಿವ್ಯಕ್ತಿಯ ಬೃಹದ್ರೂಪವೇ ಎಲ್ಲವನ್ನೂ ಮೀರಿದ್ದು. ಆದುದರಿಂದ ಅವರು ಪರಮ ಸತ್ಯವು ನಿರಾಕಾರ ಎಂದೇ ಭಾವಿಸುತ್ತಾರೆ. ಅವರಿಗೆ ಅತಿಯಾಗಿ ಪ್ರಾಪಂಚಿಕ ಮೋಹವಿರುವುದರಿಂದ, ಭೌತಿಕ ಅಸ್ತಿತ್ವದಿಂದ ಬಿಡುಗಡೆ ಹೊಂದಿದನಂತರವೂ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಕಲ್ಪನೆಯೇ ಭಯವನ್ನು ಉಂಟುಮಾಡುತ್ತದೆ. ಆಧ್ಯಾತ್ಮಿಕ ಬದುಕೂ ವ್ಯಕ್ತಿಗತವಾದದ್ದು ಮತ್ತು ವೈಯಕ್ತಿಕವಾದದ್ದು ಎಂದು ಅವರಿಗೆ ಹೇಳಿದರೆ, ಅವರಿಗೆ ಮತ್ತೆ ವ್ಯಕ್ತಿಗಳಾಗಬೇಕಲ್ಲ ಎಂದು ಭಯವಾಗುತ್ತದೆ. ಆದುದರಿಂದ ಸಹಜವಾಗಿಯೇ ಅವರು ನಿರಾಕಾರ ಶೂನ್ಯದಲ್ಲಿ ಲೀನವಾಗುವ ರೀತಿಯನ್ನೇ ಬಯಸುತ್ತಾರೆ. ಸಾಮಾನ್ಯವಾಗಿ ಅವರು ಜೀವಿಗಳನ್ನು ಸಮುದ್ರದೊಡನೆ ಒಂದಾಗುವ ನೀರಿನ ಗುಳ್ಳೆಗಳಿಗೆ ಹೋಲಿಸುತ್ತಾರೆ. ಪ್ರತ್ಯೇಕ ವ್ಯಕ್ತಿತ್ವವಿಲ್ಲದೆ ಪಡೆಯಬಹುದಾದ ಆಧ್ಯಾತ್ಮಿಕ ಅಸ್ತಿತ್ವದ ಅತ್ಯುನ್ನತ ಪರಿಪೂರ್ಣತೆ ಇದೇ. ಇದು ಬದುಕಿನಲ್ಲಿ ಭಯವನ್ನುಂಟುಮಾಡುವ ಘಟ್ಟ. ಇಲ್ಲಿ ಆಧ್ಯಾತ್ಮಿಕ ಅಸ್ತಿತ್ವದ ಪರಿಪೂರ್ಣ ತಿಳಿವಳಿಕೆ ಇಲ್ಲ.

ಇದಲ್ಲದೆ, ಆಧ್ಯಾತ್ಮಿಕ ಅಸ್ತಿತ್ವ ಎನ್ನುವುದನ್ನೇ ಅರ್ಥ ಮಾಡಿಕೊಳ್ಳಲಾರದವರು ಬಹುಮಂದಿ ಇದ್ದಾರೆ. ನಾನಾ ವಾದಗಳಿಂದಲೂ ವಿವಿಧ ರೀತಿಗಳ ಊಹಾತ್ಮಕ ಚಿಂತನೆಗಳ ಪರಸ್ಪರ ವಿರೋಧಗಳಿಂದಲೂ ಅವರಿಗೆ ಗೊಂದಲವಾಗುತ್ತದೆ; ಅಸಹ್ಯವಾಗುತ್ತದೆ ಇಲ್ಲವೇ ಕೋಪಬರುತ್ತದೆ. ಪರಮ ಕಾರಣವೆನ್ನುವುದೇ ಇಲ್ಲ, ಕಟ್ಟಕಡೆಗೆ ಎಲ್ಲವೂ ಶೂನ್ಯವೇ ಎಂದು ಅವರು ಮೂರ್ಖತನದಿಂದ ತೀರ್ಮಾನಿಸುತ್ತಾರೆ. ಇಂತಹವರು ಬದುಕಿನಲ್ಲಿ ಅಸ್ವಸ್ಥ ಸ್ಥಿತಿಯಲ್ಲಿರುವವರು. ಕೆಲವರಿಗೆ ಪ್ರಾಪಂಚಿಕ ಬದುಕಿನಲ್ಲಿ ಅತಿ ಮೋಹ. ಅವರು ಆಧ್ಯಾತ್ಮಿಕ ಬದುಕಿಗೆ ಗಮನವನ್ನು ಕೊಡುವುದಿಲ್ಲ. ಇನ್ನು ಕೆಲವರಿಗೆ ಪರಮ ಕಾರಣದಲ್ಲಿ ಲೀನವಾಗುವ ಆಸೆ. ಮತ್ತೆ ಕೆಲವರು ಎಲ್ಲ ಬಗೆಯ ಆಧ್ಯಾತ್ಮಿಕ ಊಹೆಗಳ ವಿಷಯದಲ್ಲಿ ಕೋಪಿಸಿಕೊಂಡು ನಿಸ್ಸಹಾಯಕತೆಯಿಂದ ಎಲ್ಲದರಲ್ಲಿಯೂ ನಂಬಿಕೆಯನ್ನು ಕಳೆದುಕೊಳ್ಳುತ್ತಾರೆ. ಈ ವರ್ಗದ ಜನ ಯಾವುದಾದರೂ ಮಾದಕದ್ರವ್ಯದ ಆಶ್ರಯ ಪಡೆಯುತ್ತಾರೆ. ಇದರಿಂದ ತಮಗೆ ಉಂಟಾಗುವ ಭ್ರಮೆಗಳನ್ನು ಕೆಲವೊಮ್ಮೆ ಆಧ್ಯಾತ್ಮಿಕ ದರ್ಶನ ಎಂದು ಅವರು ಭಾವಿಸುವುದುಂಟು. ಐಹಿಕ ಜಗತ್ತಿನ ಮೋಹದ ಮೂರೂ ಹಂತಗಳನ್ನು — ಆಧ್ಯಾತ್ಮಿಕ ಬದುಕಿನ ನಿರ್ಲಕ್ಷ್ಯ, ಆಧ್ಯಾತ್ಮಿಕ ವ್ಯಕ್ತಿತ್ವದ ಭಯ, ಮತ್ತು ಬದುಕಿನ ನಿರಾಸೆಯಿಂದ ಉದ್ಭವವಾಗುವ ಶೂನ್ಯದ ಕಲ್ಪನೆ — ತೊಲಗಿಸಬೇಕಾಗುತ್ತದೆ. ಬದುಕಿನ ಐಹಿಕ ಕಲ್ಪನೆಯ ಈ ಮೂರೂ ಹಂತಗಳಿಂದ ಪಾರಾಗಬೇಕಾದರೆ ಮನುಷ್ಯನು ನಿಜವಾದ ಗುರುವಿನ ಮಾರ್ಗದರ್ಶನದಿಂದ ಭಗವಂತನಲ್ಲಿಯೇ ಸಂಪೂರ್ಣವಾಗಿ ಆಶ್ರಯವನ್ನು ಪಡೆದು ಭಕ್ತಿಜೀವನದ ಶಿಸ್ತನ್ನೂ ನಿಯಂತ್ರಕ ತತ್ವಗಳನ್ನೂ ಅನುಸರಿಸಬೇಕಾಗುತ್ತದೆ. ಭಕ್ತಿಜೀವನದ ಕಡೆಯ ಹಂತವನ್ನು **ಭಾವ** ಅಥವಾ ಪರಮ ಪುರುಷನಲ್ಲಿ ದಿವ್ಯಪ್ರೇಮ ಎಂದು ಕರೆಯುತ್ತಾರೆ.

ಭಕ್ತಿಸೇವೆಯ ವಿಜ್ಞಾನವಾದ ಭಕ್ತಿರಸಾಮೃತ ಸಿಂಧು ಹೇಳುವಂತೆ (1.4.15-16)

**ಆದೌ ಶ್ರದ್ಧಾ ತತಃ ಸಾಧು ಸಙ್ಗೋಽಥ ಭಜನಕ್ರಿಯಾ |**
**ತತೋಽನರ್ಥ ನಿವೃತ್ತಿಃ ಸ್ಯಾತ್ತತೋ ನಿಷ್ಠಾ ರುಚಿಸ್ತತಃ ||**

**ಅಥಾಸಕ್ತಿಸ್ತತೋ ಭಾವಸ್ತತಃ ಪ್ರೇಮಾಭ್ಯುದಞ್ಚತಿ |**
**ಸಾಧಕಾನಾಮಯಂ ಪ್ರೇಮ್ಣಃ ಪ್ರಾದುರ್ಭಾವೇ ಭವೇತ್ ಕ್ರಮಃ ||**

"ಪ್ರಾರಂಭದಲ್ಲಿ ಮನುಷ್ಯನಿಗೆ ಆತ್ಮಸಾಕ್ಷಾತ್ಕಾರದ ಕಿಂಚಿತ್ ಹಂಬಲ ಇರಬೇಕು. ಇದು ಆತನನ್ನು ಆಧ್ಯಾತ್ಮಿಕವಾಗಿ ಉನ್ನತಿ ಪಡೆದವರ ಸಹವಾಸವನ್ನು ಪಡೆಯಲು ಪ್ರಯತ್ನಿಸುವ ಹಂತಕ್ಕೆ ತರುತ್ತದೆ. ಮುಂದಿನ ಹಂತದಲ್ಲಿ ಆತನು ಉನ್ನತಿಗೇರಿದ ಗುರುವಿನಿಂದ ದೀಕ್ಷೆಯನ್ನು ಪಡೆಯುತ್ತಾನೆ. ಅವನ ಮಾರ್ಗದರ್ಶನದಲ್ಲಿ ಹೊಸದಾಗಿ ದೀಕ್ಷೆಪಡೆದ ಶಿಷ್ಯನು ಭಕ್ತಿಸೇವೆಯನ್ನು ಪ್ರಾರಂಭಿಸುತ್ತಾನೆ. ಗುರುವಿನ ಮಾರ್ಗದರ್ಶನದಲ್ಲಿ ಭಕ್ತಿಸೇವೆಯನ್ನು ಸಲ್ಲಿಸುವ ಮೂಲಕ ಮನುಷ್ಯನು ಎಲ್ಲ ಐಹಿಕ ಮೋಹದಿಂದ ಮುಕ್ತನಾಗುತ್ತಾನೆ, ಆತ್ಮ ಸಾಕ್ಷಾತ್ಕಾರದಲ್ಲಿ ದೃಢತೆಯನ್ನು ಪಡೆಯುತ್ತಾನೆ ಮತ್ತು ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ವಿಷಯವನ್ನು ಕೇಳಬೇಕೆಂಬ ಅಭಿರುಚಿ ಹೊಂದುತ್ತಾನೆ. ಈ ಅಭಿರುಚಿಯು ಕೃಷ್ಣಪ್ರಜ್ಞೆಯಲ್ಲಿ ಆಸಕ್ತಿಯನ್ನುಂಟುಮಾಡುತ್ತದೆ. ಇಂತಹ ಆಸಕ್ತಿಯು **ಭಾವ**ದಲ್ಲಿ ಎಂದರೆ ಭಗವಂತನ ಅಲೌಕಿಕ ಪ್ರೇಮದ ಪ್ರಾರಂಭದ ಹಂತದಲ್ಲಿ ಪರಿಣಮಿಸುತ್ತದೆ. ಭಗವಂತನಲ್ಲಿ ನಿಜವಾದ ಪ್ರೀತಿಗೆ 'ಪ್ರೇಮ' ಎಂದು ಹೆಸರು, ಇದು ಬದುಕಿನ ಅತ್ಯುನ್ನತ ಪರಿಪೂರ್ಣ ಸ್ಥಿತಿ. ಪ್ರೇಮದ ಹಂತದಲ್ಲಿ ಭಕ್ತನು ಭಗವಂತನ ದಿವ್ಯ ಭಕ್ತಿಸೇವೆಯಲ್ಲಿ

ಸತತವಾಗಿ ತೊಡಗಿರುತ್ತಾನೆ. ಹೀಗೆ ಯೋಗ್ಯ ಗುರುವಿನ ಮಾರ್ಗದರ್ಶನದಲ್ಲಿ ಭಕ್ತಿಸೇವೆಯ ಪ್ರಕ್ರಿಯೆಯಿಂದ ಮನುಷ್ಯನು ಕ್ರಮೇಣ ಅತ್ಯುನ್ನತ ಹಂತಕ್ಕೆ ಏರಬಹುದು. ಆಗ ಆತನು ಎಲ್ಲ ಐಹಿಕ ಮೋಹದಿಂದ, ಆಧ್ಯಾತ್ಮಿಕ ವ್ಯಕ್ತಿತ್ವದ ಭಯದಿಂದ ಮತ್ತು ಶೂನ್ಯ ತತ್ವದಲ್ಲಿ ಕೊನೆಗೊಳ್ಳುವ ಹತಾಶೆಯಿಂದ ಬಿಡುಗಡೆಯಾಗಬಹುದು. ಕಟ್ಟಕಡೆಗೆ ಭಗವಂತನ ನಿವಾಸವನ್ನು ಸೇರಬಹುದು.

## ಶ್ಲೋಕ - 11

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

**ಯೇ**—ಯಾರೆಲ್ಲ; **ಯಥಾ**—ಹೇಗೆ; **ಮಾಮ್**—ನನ್ನನ್ನು; **ಪ್ರಪದ್ಯಂತೇ**—ಶರಣು ಹೊಂದುವರೋ; **ತಾನ್**—ಅವರಿಗೆ; **ತಥಾ**—ಹಾಗೆಯೇ; **ಏವ**—ಖಂಡಿತವಾಗಿಯೂ; **ಭಜಾಮಿ**—ಪ್ರತಿಫಲ ನೀಡುತ್ತೇನೆ; **ಅಹಮ್**—ನಾನು; **ಮಮ**—ನನ್ನ; **ವರ್ತ್ಮ**—ದಾರಿಯನ್ನು; **ಅನುವರ್ತನ್ತೇ**— ಅನುಸರಿಸುತ್ತಾರೆ; **ಮನುಷ್ಯಾಃ**—ಎಲ್ಲ ಮನುಷ್ಯರು; **ಪಾರ್ಥ**—ಪೃಥೆಯ ಕುಮಾರನೇ; **ಸರ್ವಶಃ**—ಸಕಲ ವಿಧಗಳಲ್ಲಿಯೂ.

### ಅನುವಾದ

**ಯಾರು ನನಗೆ ಹೇಗೆ ಶರಣಾಗತರಾಗುತ್ತಾರೋ ಹಾಗೆ ನಾನು ಅವರಿಗೆ ಅನುಗ್ರಹಿಸುತ್ತೇನೆ. ಪಾರ್ಥನೇ, ಎಲ್ಲರೂ ಎಲ್ಲ ರೀತಿಗಳಲ್ಲೂ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ.**

### ಭಾವಾರ್ಥ

ಪ್ರತಿಯೊಬ್ಬರೂ ಕೃಷ್ಣನ ವಿವಿಧ ಅಭಿವ್ಯಕ್ತಿಗಳ ವಿವಿಧ ಮುಖಗಳಲ್ಲಿ ಕೃಷ್ಣನಿಗಾಗಿ ಹುಡುಕುತ್ತಿದ್ದಾರೆ. ದೇವೋತ್ತಮ ಪರಮ ಪುರುಷನಾದ ಕೃಷ್ಣನು ತನ್ನ ನಿರಾಕಾರ ಬ್ರಹ್ಮಜ್ಯೋತಿಪ್ರಭೆಯಾಗಿ ಮತ್ತು ಅಣುಗಳೂ ಸೇರಿದಂತೆ ಎಲ್ಲ ವಸ್ತುಗಳಲ್ಲಿ ನೆಲೆಸಿರುವ ಸರ್ವಾಂತರ್ಯಾಮಿ ಪರಮಾತ್ಮನಾಗಿ ಭಾಗಶಃ ಸಾಕ್ಷಾತ್ಕಾರವಾಗಿದ್ದಾನೆ. ಆದರೆ ಪರಿಶುದ್ಧ ಭಕ್ತರಿಗೆ ಮಾತ್ರ ಅವನ ಸಂಪೂರ್ಣ ಸಾಕ್ಷಾತ್ಕಾರ ಸಾಧ್ಯ. ಇದರಿಂದ ಕೃಷ್ಣನು ಪ್ರತಿಯೊಬ್ಬರ ಸಾಕ್ಷಾತ್ಕಾರದ ಗುರಿ; ಪ್ರತಿಯೊಬ್ಬರೂ ಅವನನ್ನು ಹೇಗೆ ಬಯಸಿದರೆ ಹಾಗೆ ಅವರಿಗೆ ತೃಪ್ತಿದೊರೆಯುತ್ತದೆ. ಆಧ್ಯಾತ್ಮಿಕ ಜಗತ್ತಿನಲ್ಲಿ ಸಹ ಆಧ್ಯಾತ್ಮಿಕ ನಿಲುವಿನಲ್ಲಿ ಭಕ್ತನು ಬಯಸಿದಂತೆಯೇ ಕೃಷ್ಣನು ಪರಿಶುದ್ಧ ಭಕ್ತರಿಗೆ ತನ್ನನ್ನು ಕೊಟ್ಟುಕೊಳ್ಳುತ್ತಾನೆ. ಒಬ್ಬ ಭಕ್ತನಿಗೆ ಕೃಷ್ಣನು ತನ್ನ ಪರಮ ಪ್ರಭುವಾಗಬೇಕೆಂದು, ಮತ್ತೊಬ್ಬನಿಗೆ ತನ್ನ ಸಖನಾಗಬೇಕೆಂದು, ಇನ್ನೊಬ್ಬನಿಗೆ ತನ್ನ ಮಗನಾಗಬೇಕೆಂದು, ಬೇರೊಬ್ಬನಿಗೆ ತನ್ನ ಪ್ರೇಮಿಯಾಗಬೇಕೆಂದು ಬಯಕೆಯಿರಬಹುದು. ಭಕ್ತರು ಅವನಲ್ಲಿಟ್ಟಿರುವ ಪ್ರೇಮದ ವಿಧವಿಧ ತೀವ್ರತೆಗೆ ಅನುಗುಣವಾಗಿ ಕೃಷ್ಣನು ಎಲ್ಲ ಭಕ್ತರಿಗೂ ಸಮಾನವಾಗಿ ಅನುಗ್ರಹಿಸುತ್ತಾನೆ. ಭೌತಿಕ ಜಗತ್ತಿನಲ್ಲಿ ಸಹ ಭಾವಗಳ ಇದೇ ವಿನಿಮಯ ಇರುತ್ತದೆ. ಭಗವಂತನು ಬೇರೆಬೇರೆ ವಿಧಗಳ ಆರಾಧಕರೊಂದಿಗೆ ಅವುಗಳನ್ನು ಸಮನಾಗಿ ವಿನಿಮಯ ಮಾಡಿಕೊಳ್ಳುತ್ತಾನೆ. ಇಲ್ಲಿಯೂ ಮತ್ತು ದಿವ್ಯಲೋಕದಲ್ಲಿಯೂ ಪರಿಶುದ್ಧ ಭಕ್ತರು ವೈಯಕ್ತಿಕವಾಗಿ ಅವನ ಸಹವಾಸದಲ್ಲಿರುತ್ತಾರೆ; ಭಗವಂತನಿಗೆ ವೈಯಕ್ತಿಕ ಸೇವೆಯನ್ನು ಅರ್ಪಿಸಲು ಸಮರ್ಥರಾಗುತ್ತಾರೆ ಮತ್ತು ಅವನ

ಪ್ರೇಮಪೂರ್ವಕ ಸೇವೆಯಲ್ಲಿ ದಿವ್ಯಾನಂದವನ್ನು ಪಡೆಯುತ್ತಾರೆ. ನಿರಾಕಾರವಾದಿಗಳಾಗಿ ಜೀವಿಯ ಪ್ರತ್ಯೇಕ ಅಸ್ತಿತ್ವವನ್ನು ನಾಶಗೊಳಿಸುವ ಮೂಲಕ ಆಧ್ಯಾತ್ಮಿಕ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಬಯಸುವವರಿದ್ದಾರೆ. ಅವರನ್ನು ತನ್ನ ಪ್ರಭೆಯಲ್ಲಿ ಲೀನಮಾಡಿಕೊಳ್ಳುವ ಮೂಲಕ ಕೃಷ್ಣನು ಅವರಿಗೆ ನೆರವಾಗುತ್ತಾನೆ. ನಿತ್ಯವಾದ ಆನಂದಮಯವಾದ ದೇವೋತ್ತಮ ಪರಮ ಪುರುಷನನ್ನು ಇಂತಹ ನಿರಾಕಾರವಾದಿಗಳು ಒಪ್ಪುವುದಿಲ್ಲ. ಪರಿಣಾಮವಾಗಿ ತಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನು ನಂದಿಸಿದ ಇವರಿಗೆ ಭಗವಂತನ ಅಲೌಕಿಕ ವೈಯಕ್ತಿಕ ಸೇವೆಯ ಆನಂದವು ರುಚಿಸುವುದಿಲ್ಲ. ಅವರಲ್ಲಿ ಕೆಲವರು ನಿರಾಕಾರ ಅಸ್ತಿತ್ವದಲ್ಲಿಯೂ ಗಟ್ಟಿಯಾಗಿ ನೆಲೆಗೊಂಡವರಲ್ಲ. ಕರ್ಮಗಳಲ್ಲಿ ತಮಗಿರುವ ಸುಪ್ತ ಬಯಕೆಗಳನ್ನು ತೋರಿಸಿಕೊಳ್ಳಲು ಅವರು ಐಹಿಕ ರಂಗಕ್ಕೆ ಮರಳುತ್ತಾರೆ. ಅವರಿಗೆ ಆಧ್ಯಾತ್ಮಿಕ ಲೋಕಗಳಲ್ಲಿ ಪ್ರವೇಶವಿಲ್ಲ; ಆದರೆ ಭೌತಿಕ ಲೋಕಗಳಲ್ಲಿ ಕರ್ಮಪ್ರವೃತ್ತರಾಗಲು ಮತ್ತೆ ಅವರಿಗೆ ಅವಕಾಶ ದೊರೆಯುತ್ತದೆ. ಫಲಾಪೇಕ್ಷೆಯಿಂದ ಕರ್ಮಮಾಡುವವರಿಗೆ ಯಜ್ಞೇಶ್ವರನಾಗಿ ಭಗವಂತನು ಅವರ ನಿಯತ ಕರ್ಮಗಳಿಗೆ ಅವರು ಅಪೇಕ್ಷಿಸುವ ಫಲವನ್ನು ಕೊಡುತ್ತಾನೆ. ಯೋಗಸಿದ್ಧಿಯನ್ನು ಬಯಸುವ ಯೋಗಿಗಳಿಗೆ ಅವನ್ನು ಅನುಗ್ರಹಿಸುತ್ತಾನೆ. ಬೇರೆಮಾತುಗಳಲ್ಲಿ ಹೇಳುವುದಾದರೆ, ಪ್ರತಿಯೊಬ್ಬರೂ ಯಶಸ್ಸಿಗೆ ಭಗವಂತನ ಕರುಣೆಯೊಂದನ್ನೇ ಅವಲಂಬಿಸಬೇಕಾಗುತ್ತದೆ. ಎಲ್ಲ ಬಗೆಯ ಆಧ್ಯಾತ್ಮಿಕ ಪ್ರಕ್ರಿಯೆಗಳೂ ಒಂದೇ ಮಾರ್ಗದಲ್ಲಿ ದೊರೆಯುವ ಯಶಸ್ಸಿನ ವಿವಿಧ ಪ್ರಮಾಣಗಳು ಅಷ್ಟೇ. ಆದುದರಿಂದ ಮನುಷ್ಯನು ಕೃಷ್ಣಪ್ರಜ್ಞೆಯ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸದಿದ್ದರೆ ಎಲ್ಲ ಪ್ರಯತ್ನಗಳೂ ಅಪೂರ್ಣವಾಗಿಯೇ ಉಳಿಯುತ್ತವೆ. ಇದನ್ನು ಶ್ರೀಮದ್ಭಾಗವತದಲ್ಲಿ (2.3.10) ಹೀಗೆ ಹೇಳಿದೆ—

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ |**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ||**

"ಒಬ್ಬ ಮನುಷ್ಯನಿಗೆ ಆಸೆಯೇ ಇಲ್ಲದಿರಲಿ (ಇದು ಭಕ್ತರ ಸ್ಥಿತಿ) ಅಥವಾ ಎಲ್ಲ ಫಲಾಪೇಕ್ಷೆಯಿರಲಿ ಇಲ್ಲವೇ ಮುಕ್ತಿಯ ಅಪೇಕ್ಷೆಯಿರಲಿ ಅವನು ಸಂಪೂರ್ಣ ಪರಿಪೂರ್ಣತೆಗಾಗಿ ದೇವೋತ್ತಮ ಪರಮ ಪುರುಷನನ್ನು ಆರಾಧಿಸಲು ಎಲ್ಲ ಪ್ರಯತ್ನಗಳನ್ನು ಮಾಡಬೇಕು. ಈ ಮಾರ್ಗವು ಕೃಷ್ಣಪ್ರಜ್ಞೆಯಲ್ಲಿ ಕೊನೆಗೊಳ್ಳುತ್ತದೆ."

## ಶ್ಲೋಕ - 12

**ಕಾಙ್ಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ |**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ||೧೨||**

**ಕಾಙ್ಕ್ಷನ್ತಃ**—ಅಪೇಕ್ಷಿಸುತ್ತ; **ಕರ್ಮಣಾಮ್**—ಕಾಮ್ಯಕರ್ಮಗಳ; **ಸಿದ್ಧಿಮ್**—ಸಿದ್ಧಿಯನ್ನು; **ಯಜನ್ತೇ**—ಯಜ್ಞಾದಿಗಳಿಂದ ಪೂಜಿಸುತ್ತಾರೆ; **ಇಹ**—ಈ ಐಹಿಕ ಪ್ರಪಂಚದಲ್ಲಿ; **ದೇವತಾಃ**—ದೇವತೆಗಳನ್ನು; **ಕ್ಷಿಪ್ರಮ್**—ಬಹುಬೇಗನೆ; **ಹಿ**—ಖಂಡಿತವಾಗಿಯೂ; **ಮಾನುಷೇ**—ಮಾನವಸಮಾಜದಲ್ಲಿ; **ಲೋಕೇ**—ಈ ಜಗತ್ತಿನಲ್ಲಿ; **ಸಿದ್ಧಿಃ**—ಯಶಸ್ಸು; **ಭವತಿ**—ಉಂಟಾಗುತ್ತದೆ; **ಕರ್ಮಜಾ**—ಕಾಮ್ಯಕರ್ಮದಿಂದ.

## ಅನುವಾದ

**ಈ ಜಗತ್ತಿನಲ್ಲಿ ಜನರು ಫಲಾಪೇಕ್ಷಿತ ಕರ್ಮಗಳಲ್ಲಿ ಸಿದ್ಧಿಯನ್ನು ಬಯಸುತ್ತಾರೆ. ಆದುದರಿಂದ ದೇವತೆಗಳನ್ನು ಪೂಜಿಸುತ್ತಾರೆ. ಈ ಜಗತ್ತಿನಲ್ಲಿ ಫಲಾಪೇಕ್ಷಿತ ಕರ್ಮದಿಂದ ಜನರು ಶೀಘ್ರವಾಗಿ ಸಿದ್ಧಿಯನ್ನು ಪಡೆಯುತ್ತಾರೆ.**

## ಭಾವಾರ್ಥ

ಐಹಿಕ ಜಗತ್ತಿನಲ್ಲಿ ದೇವತೆಗಳ ವಿಷಯವಾಗಿ ದೊಡ್ಡ ತಪ್ಪು ಕಲ್ಪನೆಯಿದೆ. ಬಹು ದೊಡ್ಡ ವಿದ್ವಾಂಸರಂತೆ ತೋರಿಸಿಕೊಳ್ಳುವ ಅಲ್ಪಮತಿಗಳು ಈ ದೇವತೆಗಳನ್ನು ಭಗವಂತನ ವಿವಿಧ ರೂಪಗಳೆಂದು ಭಾವಿಸುತ್ತಾರೆ. ವಾಸ್ತವವಾಗಿ ದೇವತೆಗಳು ಭಗವಂತನ ವಿವಿಧ ರೂಪಗಳಲ್ಲ. ಅವರು ಭಗವಂತನ ವಿಭಿನ್ನಾಂಶಗಳು. ದೇವರು ಒಬ್ಬನೇ, ವಿಭಿನ್ನಾಂಶಗಳು ಹಲವು. ವೇದಗಳು **ನಿತ್ಯೋನಿತ್ಯಾನಾಮ್** ಎಂದರೆ ದೇವರು ಒಬ್ಬನೇ ಎಂದು ಹೇಳುತ್ತವೆ. **ಈಶ್ವರಃ ಪರಮಃ ಕೃಷ್ಣಃ** ಎಂದರೆ ಭಗವಂತನು ಒಬ್ಬನೇ, ಅವನು ಕೃಷ್ಣ; ಈ ಐಹಿಕ ಜಗತ್ತಿನಲ್ಲಿ ದೇವತೆಗಳಿಗೆ ಅಧಿಕಾರವನ್ನು ವಹಿಸಿಕೊಡಲಾಗಿದೆ. ಈ ದೇವತೆಗಳೆಲ್ಲ ಜೀವಿಗಳು (**ನಿತ್ಯಾನಾಮ್**), ಅವರಿಗೆ ಬೇರೆಬೇರೆ ಮಟ್ಟಗಳ ಐಹಿಕ ಅಧಿಕಾರವಿರುತ್ತದೆ. ಅವರೆಲ್ಲ ಭಗವಂತನಿಗೆ — ನಾರಾಯಣ, ವಿಷ್ಣು ಅಥವಾ ಕೃಷ್ಣರಿಗೆ — ಸಮನಾಗಲಾರರು. ಭಗವಂತನೂ ದೇವತೆಗಳೂ ಒಂದೇ ಮಟ್ಟದವರು ಎಂದು ಭಾವಿಸುವವನಿಗೆ ನಾಸ್ತಿಕ ಅಥವಾ ಪಾಷಂಡಿ ಎಂದು ಹೆಸರು. ಬ್ರಹ್ಮ ಮತ್ತು ಶಿವನಂತಹ ಹಿರಿಯ ದೇವತೆಗಳನ್ನು ಭಗವಂತನೊಡನೆ ಹೋಲಿಸಲು ಸಾಧ್ಯವಿಲ್ಲ. ವಾಸ್ತವವಾಗಿ ಬ್ರಹ್ಮ ಮತ್ತು ಶಿವನಂತಹ ದೇವತೆಗಳು ಭಗವಂತನನ್ನು ಪೂಜಿಸುತ್ತಾರೆ (**ಶಿವ ವಿರಿಞ್ಚಿನುತಮ್**). ಆದರೆ ಆಶ್ಚರ್ಯಕರವಾದ ಸಂಗತಿ ಎಂದರೆ ಮನುಷ್ಯತ್ವಾರೋಪಣೆಯ ಅಥವಾ ಪ್ರಾಣಿತ್ವಾರೋಪಣೆಯ ಪ್ರಭಾವದಿಂದ ದಡ್ಡರು ಅನೇಕ ಮಂದಿ ಮಾನವ ನಾಯಕರನ್ನು ಪೂಜಿಸುತ್ತಾರೆ. **ಇಹ ದೇವತಾಃ** ಎಂದರೆ ಇಹಲೋಕದ ಪ್ರಬಲ ಮನುಷ್ಯ ಅಥವಾ ದೇವತೆ. ಆದರೆ ನಾರಾಯಣ, ವಿಷ್ಣು ಅಥವಾ ದೇವೋತ್ತಮ ಪರಮ ಪುರುಷನಾದ ಕೃಷ್ಣನು ಈ ಲೋಕಕ್ಕೆ ಸೇರುವುದಿಲ್ಲ. ಆತನು ಭೌತಿಕ ಸೃಷ್ಟಿಯಿಂದ ಮೇಲಿರುವವನು; ಅದನ್ನು ಮೀರಿದವನು. ನಿರಾಕಾರಿಗಳ ನಾಯಕರಾದ ಶ್ರೀಪಾದ ಶಂಕರಾಚಾರ್ಯರು ಸಹ ನಾರಾಯಣ ಅಥವಾ ಕೃಷ್ಣನು ಭೌತಿಕ ಸೃಷ್ಟಿಯನ್ನು ಮೀರಿದವನು ಎಂದು ವಾದಿಸುತ್ತಾರೆ. ಆದರೆ ಮೂರ್ಖರು (**ಹೃತಜ್ಞಾನ**) ದೇವತೆಗಳನ್ನು ಪೂಜಿಸುತ್ತಾರೆ. ಏಕೆಂದರೆ ಅವರಿಗೆ ತಕ್ಷಣ ಫಲಗಳು ಬೇಕು. ದೊರೆತರೂ, ಅದು ಅಲ್ಪಕಾಲದ್ದು ಮತ್ತು ಸಾಕಷ್ಟು ಬುದ್ಧಿಯಿಲ್ಲದವರಿಗೆ ದೊರೆಯುವಂತಹುದು ಎಂದು ಅವರಿಗೆ ತಿಳಿಯದು. ವಿವೇಕಿಯು ಕೃಷ್ಣಪ್ರಜ್ಞೆಯಲ್ಲಿರುತ್ತಾನೆ. ಆತನು ತಕ್ಷಣದ ಮತ್ತು ಅಲ್ಪಕಾಲದ ಫಲಕ್ಕಾಗಿ ಕ್ಷುದ್ರದೇವತೆಗಳನ್ನು ಪೂಜಿಸುವ ಅಗತ್ಯವಿರುವುದಿಲ್ಲ. ಈ ಭೌತಿಕ ಜಗತ್ತು ನಾಶವಾದಾಗ ಈ ಭೌತಿಕ ಜಗತ್ತಿನ ದೇವತೆಗಳೂ ಅವರ ಆರಾಧಕರೂ ನಾಶ ಹೊಂದುತ್ತಾರೆ. ಈ ದೇವತೆಗಳ ವರಗಳು ಐಹಿಕವಾದವು ಮತ್ತು ಅಲ್ಪಕಾಲದವು. ದೇವತೆಗಳೂ ಅವರ ಆರಾಧಕರೂ ಸೇರಿದಂತೆ ಐಹಿಕ ಜಗತ್ತುಗಳು ಹಾಗೂ ಅವುಗಳ ನಿವಾಸಿಗಳು ವಿಶ್ವಸಾಗರದಲ್ಲಿ ಬರಿಯ ಗುಳ್ಳೆಗಳು. ಆದರೆ ಈ ಜಗತ್ತಿನಲ್ಲಿ ಮನುಷ್ಯರಿಗೆ ಭೂಮಿ, ಕುಟುಂಬ ಮತ್ತು ಭೋಗ ಸಾಮಗ್ರಿಗಳ ಐಹಿಕ ಶ್ರೀಮಂತಿಕೆ — ಇಂತಹ ಅಲ್ಪಕಾಲದ ವಿಷಯಗಳ ಹುಚ್ಚುಹತ್ತಿದೆ. ಇಂತಹ ತಾತ್ಕಾಲಿಕ ವಸ್ತುಗಳನ್ನು ಪಡೆಯಲು ಜನರು ದೇವತೆಗಳನ್ನು ಅಥವಾ ಮನುಷ್ಯ

ಸಮಾಜದ ಬಲಿಷ್ಠರನ್ನು ಪೂಜಿಸುತ್ತಾರೆ. ಒಬ್ಬ ರಾಜಕೀಯ ನಾಯಕನನ್ನು ಪೂಜಿಸಿ ಒಬ್ಬ ಮನುಷ್ಯನು ಸರ್ಕಾರದಲ್ಲಿ ಮಂತ್ರಿಪದವಿಯನ್ನು ಗಿಟ್ಟಿಸಿದರೆ ತಾನು ದೊಡ್ಡ ವರವನ್ನು ಪಡೆದುಕೊಂಡೆ ಎಂದು ಭಾವಿಸುತ್ತಾನೆ. ಆದುದರಿಂದಲೇ ನಾಯಕರು ಅಥವಾ 'ಪ್ರಭಾವೀವ್ಯಕ್ತಿ'ಗಳು ಎನ್ನಿಸಿಕೊಂಡವರಿಗೆ ಅವರೆಲ್ಲ ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ; ಇಂತಹ ಫಲಗಳನ್ನು ಪಡೆದುಕೊಳ್ಳುತ್ತಾರೆ. ಐಹಿಕ ಅಸ್ತಿತ್ವದ ಬವಣೆಗಳಿಗೆ ಶಾಶ್ವತ ಪರಿಹಾರ ನೀಡುವ ಕೃಷ್ಣಪ್ರಜ್ಞೆಯಲ್ಲಿ ಇಂತಹ ದಡ್ಡರಿಗೆ ಆಸಕ್ತಿಯಿಲ್ಲ. ಅವರೆಲ್ಲ ಇಂದ್ರಿಯಭೋಗವನ್ನು ಬಯಸುತ್ತಾರೆ. ಇಂದ್ರಿಯಭೋಗಕ್ಕಾಗಿ ಅಲ್ಪಸೌಲಭ್ಯವನ್ನು ಪಡೆಯಲು, ದೇವತೆಗಳೆಂದು ಕರೆಯಲಾದ ಶಕ್ತಿಸಂಪನ್ನ ಜೀವಿಗಳ ಪೂಜೆಗೆ ಅವರು ಆಕರ್ಷಿತರಾಗುತ್ತಾರೆ. ಜನರಿಗೆ ಕೃಷ್ಣಪ್ರಜ್ಞೆಯಲ್ಲಿ ಆಸಕ್ತಿಯುಂಟಾಗುವುದು ಬಹು ವಿರಳ ಎಂದು ಈ ಶ್ಲೋಕವು ಹೇಳುತ್ತದೆ. ಅವರಿಗೆ ಐಹಿಕ ಸುಖಭೋಗದಲ್ಲಿಯೇ ಬಹುಮಟ್ಟಿಗೆ ಆಸಕ್ತಿ. ಆದುದರಿಂದ ಅವರು ಯಾರಾದರೂ ಬಲಿಷ್ಟ ಜೀವಿಯನ್ನು ಪೂಜಿಸುತ್ತಾರೆ.

## ಶ್ಲೋಕ - 13

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ |**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ||೧೩||**

**ಚಾತುರ್ವರ್ಣ್ಯಮ್**—ಮಾನವ ಸಮಾಜದ ನಾಲ್ಕು ವಿಭಾಗಗಳು; **ಮಯಾ**—ನನ್ನಿಂದ; **ಸೃಷ್ಟಮ್**—ಸೃಷ್ಟಿಯಾಗಿವೆ; **ಗುಣ**—ಗುಣದ; **ಕರ್ಮ**—ಮತ್ತು ಕೆಲಸದ; **ವಿಭಾಗಶಃ**—ವಿಭಾಗದ ಪ್ರಕಾರ; **ತಸ್ಯ**—ಅದರ; **ಕರ್ತಾರಮ್**—ತಂದೆಯು; **ಅಪಿ**—ಆಗಿದ್ದರೂ; **ಮಾಮ್**—ನನ್ನನ್ನು; **ವಿದ್ಧಿ**—ನೀನು ತಿಳಿಯಬಹುದು; **ಅಕರ್ತಾರಮ್**—ಕರ್ತಾರನಲ್ಲವೆಂದು; **ಅವ್ಯಯಮ್**—ಬದಲಾಯಿಸಲಾಗದವನನ್ನು.

## ಅನುವಾದ

**ಐಹಿಕ ನಿಸರ್ಗದ ಗುಣತ್ರಯಗಳಿಗೆ ಅನುಗುಣವಾಗಿ ಮತ್ತು ಅವುಗಳ ಕರ್ಮಗಳಿಗೆ ಅನುಸಾರವಾಗಿ ಮನುಷ್ಯ ಸಮಾಜದ ನಾಲ್ಕು ವರ್ಣಗಳನ್ನು ನಾನು ಸೃಷ್ಟಿಸಿದೆ. ಈ ವ್ಯವಸ್ಥೆಯನ್ನು ನಾನು ಸೃಷ್ಟಿಸಿದ್ದರೂ ನಾನು ಬದಲಾವಣೆಯಿಲ್ಲದವನು, ಅವ್ಯಯನು. ಆದುದರಿಂದ ನಾನು ಕರ್ತಾರನಲ್ಲ ಎಂದು ತಿಳಿ.**

## ಭಾವಾರ್ಥ

ಎಲ್ಲವನ್ನೂ ಸೃಷ್ಟಿಸಿದವನು ಭಗವಂತ. ಎಲ್ಲವೂ ಅವನಿಂದ ಜನಿಸಿದ್ದು, ಅವನೇ ಎಲ್ಲಕ್ಕೂ ಆಧಾರ, ಮತ್ತು ಪ್ರಳಯದನಂತರ ಎಲ್ಲವೂ ಅವನಲ್ಲೇ ಉಳಿಯುತ್ತದೆ. ಆದುದರಿಂದ ಸಾಮಾಜಿಕ ವ್ಯವಸ್ಥೆಯ ನಾಲ್ಕು ವಿಭಾಗಗಳನ್ನು ಸೃಷ್ಟಿಸಿದವನು ಅವನೇ. ಬುದ್ಧಿಶಾಲಿಗಳ ವರ್ಗವಾದ ಮೊದಲ ವಿಭಾಗವನ್ನು ಪಾರಿಭಾಷಿಕವಾಗಿ ಬ್ರಾಹ್ಮಣರು ಎಂದು ಕರೆಯಲಾಗಿದೆ. ಇವರು ಸಾತ್ವಿಕ ಗುಣದವರಾದುದರಿಂದ ಈ ಹೆಸರು. ಅವರ ಅನಂತರದ ವಿಭಾಗದವರು ಆಡಳಿತಗಾರರು. ಇವರಿಗೆ ಪಾರಿಭಾಷಿಕವಾಗಿ ಕ್ಷತ್ರಿಯರು ಎಂದು ಹೆಸರು. ಇವರು ರಜೋಗುಣದವರು. ವೈಶ್ಯರು ಎಂದು

ಕರೆಯುವ ವರ್ತಕರಲ್ಲಿ ರಜೋಗುಣ, ತಮೋಗುಣಗಳು ಬೆರೆತಿರುತ್ತವೆ. ಶೂದ್ರರು ಅಥವಾ ಕಾರ್ಮಿಕ ವರ್ಗದವರು ಐಹಿಕ ನಿಸರ್ಗದ ತಮೋಗುಣದವರು. ಮನುಷ್ಯ ಸಮಾಜದಲ್ಲಿ ಈ ನಾಲ್ಕು ವಿಭಾಗಗಳನ್ನು ಸೃಷ್ಟಿಸಿದರೂ ಶ್ರೀಕೃಷ್ಣನು ಇವುಗಳಲ್ಲಿ ಯಾವ ವಿಭಾಗಕ್ಕೂ ಸೇರಿದವನಲ್ಲ. ಏಕೆಂದರೆ ಮನುಷ್ಯರು ಸಮಾಜದಲ್ಲಿ ಬದ್ಧಜೀವಿಗಳ ಒಂದು ಭಾಗವಾಗಿದ್ದಾರೆ. ಆದರೆ ಕೃಷ್ಣನು ಬದ್ಧಜೀವಿಯಲ್ಲ. ಮನುಷ್ಯ ಸಮಾಜವು ಬೇರೆ ಯಾವುದೇ ಪ್ರಾಣಿ ಸಮಾಜದಂತೆಯೇ ಇದೆ. ಆದರೆ ಮನುಷ್ಯನನ್ನು ಪ್ರಾಣಿಗಳ ಅಂತಸ್ತಿನಿಂದ ಮೇಲಕ್ಕೆತ್ತಲು, ಕೃಷ್ಣಪ್ರಜ್ಞೆಯ ವ್ಯವಸ್ಥಿತ ಬೆಳವಣಿಗೆಗಾಗಿ ಭಗವಂತನು ಮೇಲೆ ಹೇಳಿದ ವಿಭಾಗಗಳನ್ನು ಸೃಷ್ಟಿಸಿದ. ಯಾವುದೇ ಮನುಷ್ಯನಿಗೆ ಕರ್ಮದ ವಿಷಯದಲ್ಲಿ ಇರುವ ಪ್ರವೃತ್ತಿಯು ಅವನು ಗಳಿಸಿಕೊಂಡ ಐಹಿಕ ಪ್ರಕೃತಿಯ ಗುಣಗಳನ್ನು ಅವಲಂಬಿಸುತ್ತದೆ. ಐಹಿಕ ಪ್ರಕೃತಿಯ ಬೇರೆಬೇರೆ ಗುಣಗಳಿಗೆ ಅನುಸಾರವಾಗಿ ಬದುಕಿನ ಲಕ್ಷಣಗಳನ್ನು ಈ ಗ್ರಂಥದ ಹದಿನೆಂಟನೆಯ ಅಧ್ಯಾಯದಲ್ಲಿ ವರ್ಣಿಸಿದೆ. ಆದರೆ ಕೃಷ್ಣಪ್ರಜ್ಞೆಯಲ್ಲಿರುವವನು ಬ್ರಾಹ್ಮಣರಿಗಿಂತ ಉತ್ತಮನು. ಗುಣಕ್ಕೆ ಅನುಸಾರವಾಗಿ ಬ್ರಾಹ್ಮಣರಿಗೆ ಪರಮ ಸತ್ಯವಾದ ಬ್ರಹ್ಮನ ಅರಿವಿರುತ್ತದೆ ಎಂದು ನಿರೀಕ್ಷಿಸಬಹುದು. ಆದರೆ ಅವರಲ್ಲಿ ಬಹುಮಂದಿ ಶ್ರೀಕೃಷ್ಣನ ನಿರಾಕಾರ ಬ್ರಹ್ಮಲಕ್ಷಣದ ಬಳಿಗೇ ಹೋಗುತ್ತಾರೆ. ಬ್ರಾಹ್ಮಣನ ಮಿತವಾದ ಜ್ಞಾನವನ್ನು ಮೀರಿ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನನ್ನು ತಿಳಿದುಕೊಂಡವನು ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯ, ಅಥವಾ ವೈಷ್ಣವ ಆಗುತ್ತಾನೆ. ಕೃಷ್ಣಪ್ರಜ್ಞೆಯು ರಾಮ, ನರಸಿಂಹ, ವರಾಹ ಮೊದಲಾದ ಕೃಷ್ಣನ ಎಲ್ಲ ಸ್ವಾಂಶ ವಿಸ್ತರಣೆಗಳನ್ನೂ ಒಳಗೊಳ್ಳುತ್ತದೆ. ಮಾನವ ಸಮಾಜದ ಈ ನಾಲ್ಕು ವಿಭಾಗಗಳ ವ್ಯವಸ್ಥೆಗೆ ಕೃಷ್ಣನು ಅತೀತನಾದದ್ದರಿಂದ, ಕೃಷ್ಣಪ್ರಜ್ಞೆ ಇರುವ ಮನುಷ್ಯನು ಮಾನವ ಸಮಾಜದ ಎಲ್ಲ ವಿಭಜನೆಗಳಿಗೆ — ಸಮುದಾಯ, ರಾಷ್ಟ್ರ, ಜೀವಿವರ್ಗ ಯಾವುದನ್ನೇ ಪರಿಗಣಿಸಿದರೂ — ಅತೀತನು.

## ಶ್ಲೋಕ - 14

**ನ ಮಾಂ ಕರ್ಮಾಣಿ ಲಿಮ್ಪನ್ತಿ ನ ಮೇ ಕರ್ಮಫಲೇ ಸ್ಪೃಹಾ |**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ||೧೪||**

**ನ**—ಎಂದಿಗೂ ಇಲ್ಲ; **ಮಾಮ್**—ನನ್ನನ್ನು; **ಕರ್ಮಾಣಿ**—ಸಕಲವಿಧ ಕರ್ಮಗಳು; **ಲಿಮ್ಪನ್ತಿ**—ಪರಿಣಾಮಬೀರುತ್ತವೆ; **ನ**—ಇಲ್ಲ; **ಮೇ**—ನನಗೆ; **ಕರ್ಮ ಫಲೇ**—ಕಾಮ್ಯಕರ್ಮದಲ್ಲಿ; **ಸ್ಪೃಹಾ**—ಬಯಕೆಯು; **ಇತಿ**—ಹೀಗೆ; **ಮಾಮ್**—ನನ್ನನ್ನು; **ಯಃ**—ಯಾರು; **ಅಭಿಜಾನಾತಿ**—ತಿಳಿಯುತ್ತಾನೋ; **ಕರ್ಮಭಿಃ**—ಅಂತಹ ಕಾರ್ಯಗಳ ಪ್ರತಿಕ್ರಿಯೆಯಿಂದ; **ನ**—ಎಂದಿಗೂ ಇಲ್ಲ; **ಸಃ**—ಅವನು; **ಬಧ್ಯತೇ**—ಸಿಲುಕಿಕೊಳ್ಳುತ್ತಾನೆ.

## ಅನುವಾದ

**ಯಾವ ಕರ್ಮವೂ ನನ್ನನ್ನು ಅಂಟುವುದಿಲ್ಲ. ನಾನು ಯಾವುದೇ ಕರ್ಮಫಲವನ್ನು ಬಯಸುವುದಿಲ್ಲ. ನನ್ನ ವಿಷಯದಲ್ಲಿ ಈ ಸತ್ಯವನ್ನು ಯಾರು ಅರ್ಥಮಾಡಿಕೊಳ್ಳುವರೋ ಅವರಿಗೂ ಫಲಾಪೇಕ್ಷೆಯ ಕರ್ಮಬಂಧನವಿಲ್ಲ.**

## ಭಾವಾರ್ಥ

ಐಹಿಕ ಜಗತ್ತಿನಲ್ಲಿ ರಾಜನು ತಪ್ಪನ್ನು ಮಾಡುವುದೇ ಇಲ್ಲ ಅಥವಾ ರಾಜನು ರಾಜ್ಯದ ಕಾನೂನಿಗೆ ಬದ್ಧನಲ್ಲ ಎನ್ನುವ ಸಂವಿಧಾನಾತ್ಮಕ ಕಾನೂನುಗಳಿರುವಂತೆ, ಭಗವಂತನು ಈ ಐಹಿಕ ಜಗತ್ತನ್ನು ಸೃಷ್ಟಿಸಿದ್ದರೂ, ಈ ಐಹಿಕ ಜಗತ್ತಿನ ಕರ್ಮಗಳಿಂದ ಅವನ ಮೇಲೆ ಪರಿಣಾಮವಾಗುವುದಿಲ್ಲ. ಅವನು ವಿಶ್ವವನ್ನು ಸೃಷ್ಟಿಮಾಡುತ್ತಾನೆ; ಆದರೆ ಅದರಿಂದ ದೂರವಿರುತ್ತಾನೆ. ಜೀವಿಗಳಿಗೆ ಭೌತಿಕ ಸಂಪನ್ಮೂಲಗಳ ಮೇಲೆ ಪ್ರಭುತ್ವವನ್ನು ನಡೆಸುವ ಪ್ರವೃತ್ತಿ ಇದೆ. ಆದುದರಿಂದ ಅವರು ಐಹಿಕ ಕರ್ಮಗಳ ಫಲಗಳಲ್ಲಿ ಸಿಕ್ಕಿಕೊಳ್ಳುತ್ತಾರೆ. ಒಂದು ಸಂಸ್ಥೆಯ ಒಡೆಯನು ಅಲ್ಲಿನ ಕೆಲಸಗಾರರ ಒಳ್ಳೆಯ ಮತ್ತು ಕೆಟ್ಟಕೆಲಸಗಳಿಗೆ ಹೊಣೆಗಾರನಲ್ಲ; ಕೆಲಸಗಾರರೇ ಹೊಣೆ. ಜೀವಿಗಳು ತಮ್ಮತಮ್ಮ ಇಂದ್ರಿಯತೃಪ್ತಿಯ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಈ ಕಾರ್ಯಗಳನ್ನು ಭಗವಂತನು ವಿಧಿಸಲಿಲ್ಲ. ಇಂದ್ರಿಯಭೋಗವನ್ನು ಬೆಳೆಸಿಕೊಳ್ಳಲು ಜೀವಿಗಳು ಈ ಜಗತ್ತಿನ ಕರ್ಮದಲ್ಲಿ ತೊಡಗುತ್ತಾರೆ. ಸಾವಿನ ಅನಂತರ ಸ್ವರ್ಗಸುಖ ಬೇಕೆಂದು ಆಸೆಪಡುತ್ತಾರೆ. ಸ್ವಯಂಪೂರ್ಣನಾದ ಭಗವಂತನಿಗೆ ಸ್ವರ್ಗಸುಖದ ಆಸೆಯಿಲ್ಲ. ಸ್ವರ್ಗದ ದೇವತೆಗಳು ಅವನು ನೇಮಿಸಿಕೊಂಡ ಸೇವಕರು ಅಷ್ಟೇ. ಕಾರ್ಮಿಕರು ಬಯಸುವ ಕೆಳಮಟ್ಟದ ಸುಖವನ್ನು ಯಜಮಾನನು ಬಯಸುವುದಿಲ್ಲ. ಅವನು ಭೌತಿಕ ಕ್ರಿಯೆಗಳು ಮತ್ತು ಪ್ರತಿಕ್ರಿಯೆಗಳಿಂದ ದೂರವಾಗಿರುತ್ತಾನೆ. ಉದಾಹರಣೆಗೆ, ಮಳೆಯಿಲ್ಲದೆ ಸಸ್ಯಗಳು ಬೆಳೆಯುವುದು ಸಾಧ್ಯವಿಲ್ಲ; ಆದರೂ ಭೂಮಿಯಲ್ಲಿ ಕಾಣಿಸಿಕೊಳ್ಳುವ ಬೇರೆಬೇರೆ ಬಗೆಯ ಸಸ್ಯಗಳ ಹೊಣೆ ಮಳೆಯದಲ್ಲ. ಈ ವಾಸ್ತವಾಂಶವನ್ನು ವೈದಿಕ ಸ್ಮೃತಿಯು ಹೀಗೆ ದೃಢಪಡಿಸುತ್ತದೆ.—

**ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗ ಕರ್ಮಣಿ |**
**ಪ್ರಧಾನ ಕಾರಣೀಭೂತಾ ಯತೋ ವೈ ಸೃಜ್ಯ ಶಕ್ತಯಃ ||**

"ಐಹಿಕ ಸೃಷ್ಟಿಗಳಲ್ಲಿ ಭಗವಂತನು ಪರಮಕಾರಣನು ಮಾತ್ರ. ನಿಕಟ ಕಾರಣವು ಐಹಿಕ ನಿಸರ್ಗ; ಇದರಿಂದ ಐಹಿಕ ಸೃಷ್ಟಿಯು ಗೋಚರವಾಗುತ್ತದೆ." ಸೃಷ್ಟಿಯಾದವರಲ್ಲಿ ದೇವತೆಗಳು, ಮಾನವರು, ಕೆಳಮಟ್ಟದ ಪ್ರಾಣಿಗಳು ಮೊದಲಾಗಿ ಹಲವು ಬಗೆಯ ಜೀವಿಗಳಿದ್ದಾರೆ. ಅವರೆಲ್ಲರೂ ತಮ್ಮ ಹಿಂದಿನ ಸತ್ಕರ್ಮ ಅಥವಾ ದುಷ್ಕರ್ಮಗಳ ಫಲಗಳಿಗೆ ಬದ್ಧರು. ಭಗವಂತನು ಅವರಿಗೆ ಅಂತಹ ಕರ್ಮಗಳಿಗೆ ಯೋಗ್ಯ ಸೌಲಭ್ಯಗಳನ್ನೂ ಪ್ರಕೃತಿಗುಣಗಳ ನಿಯಮಗಳನ್ನೂ ಕೊಡುತ್ತಾನೆ ಅಷ್ಟೆ. ಆದರೆ ಅವರ ಹಿಂದಿನ ಅಥವಾ ಇಂದಿನ ಕರ್ಮಗಳಿಗೆ ಅವನುಗಿ ಹೊಣೆಯಲ್ಲ. ವೇದಾಂತಸೂತ್ರವು (2.1.34) ಇದನ್ನು ದೃಢೀಕರಿಸಿದೆ. **ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್**—ಭಗವಂತನು ಯಾವ ಜೀವಿಯ ವಿಷಯದಲ್ಲಿಯೂ ಪಕ್ಷಪಾತಿಯಲ್ಲ. ತನ್ನ ಕರ್ಮಗಳಿಗೆ ಜೀವಿಯೇ ಹೊಣೆ. ಬಹಿರಂಗ ಶಕ್ತಿಯಾದ ಐಹಿಕ ಪ್ರಕೃತಿಯ ಮೂಲಕ ಭಗವಂತನು ಅವನಿಗೆ ಸೌಲಭ್ಯಗಳನ್ನು ಕೊಡುತ್ತಾನೆ ಅಷ್ಟೆ. ಕರ್ಮದ ಈ ನಿಯಮದ ಜಟಿಲತೆಗಳನ್ನು ಚೆನ್ನಾಗಿ ತಿಳಿದವನು ಯಾರೂ ತನ್ನ ಕರ್ಮಗಳ ಫಲಗಳಿಗೆ ಒಳಗಾಗುವುದಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಭಗವಂತನ ಈ ಅಲೌಕಿಕ ಸ್ವಭಾವವನ್ನು ಅರಿತ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಅನುಭವಿಯಾದವನು. ಅವನು ಎಂದೂ ಕರ್ಮದ ನಿಯಮಗಳಿಗೆ ಒಳಗಾಗುವುದಿಲ್ಲ. ಭಗವಂತನ ಅಲೌಕಿಕ ಸ್ವಭಾವವನ್ನು ತಿಳಿಯದವನು ಮತ್ತು ಸಾಮಾನ್ಯ ಜೀವಿಗಳ ಕರ್ಮಗಳಂತೆ ಭಗವಂತನ

ಕರ್ಮಗಳಿಗೂ ಫಲಾಪೇಕ್ಷೆಯಿರುತ್ತದೆ ಎಂದು ಭಾವಿಸುವವನು ನಿಶ್ಚಯವಾಗಿಯೂ ಕರ್ಮಫಲಗಳಲ್ಲಿ ಸಿಕ್ಕಿಕೊಳ್ಳುತ್ತಾನೆ. ಆದರೆ ಪರಮಸತ್ಯವನ್ನು ಬಲ್ಲವನು ಕೃಷ್ಣಪ್ರಜ್ಞೆಯಲ್ಲಿ ನೆಲೆಗೊಂಡ ಮುಕ್ತಾತ್ಮನು.

## ಶ್ಲೋಕ - 15

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ |**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ||೧೫||**

**ಏವಮ್**—ಹೀಗೆ; **ಜ್ಞಾತ್ವಾ**—ಚೆನ್ನಾಗಿ ತಿಳಿದು; **ಕೃತಮ್**—ಆಚರಿಸಲ್ಪಟ್ಟಿತು; **ಕರ್ಮ**—ಕರ್ಮವು; **ಪೂರ್ವೈಃ**—ಹಿಂದಿನ ಅಧಿಕೃತರಾದ; **ಅಪಿ**—ನಿಜವಾಗಿಯೂ; **ಮುಮುಕ್ಷುಭಿಃ**—ಮೋಕ್ಷಪಡೆದವರಿಂದ; **ಕುರು**—ಆಚರಿಸು; **ಕರ್ಮ**—ವಿಧ್ಯುಕ್ತ ಕರ್ತವ್ಯವನ್ನು; **ಏವ**— ನಿಶ್ಚಿತವಾಗಿಯೂ; **ತಸ್ಮಾತ್**—ಆದ್ದರಿಂದ; **ತ್ವಮ್**—ನೀನು; **ಪೂರ್ವೈಃ**—ಪೂರ್ವಜರಿಂದ; **ಪೂರ್ವ ತರಮ್**—ಪುರಾತನ ಕಾಲದಲ್ಲಿ; **ಕೃತಮ್**—ಆಚರಿಸಲ್ಪಟ್ಟ.

## ಅನುವಾದ

**ಪ್ರಾಚೀನ ಕಾಲದ ಎಲ್ಲ ಮುಕ್ತಾತ್ಮರೂ ನನ್ನ ದಿವ್ಯಸ್ವಭಾವವನ್ನು ಹೀಗೆ ಅರ್ಥಮಾಡಿಕೊಂಡು ಕರ್ಮವನ್ನು ಮಾಡಿದರು. ನೀನೂ ಅವರ ಹೆಜ್ಜೆಯನ್ನು ಅನುಸರಿಸಿ ನಿನ್ನ ಕರ್ತವ್ಯವನ್ನು ಮಾಡಬೇಕು.**

## ಭಾವಾರ್ಥ

ಮನುಷ್ಯರಲ್ಲಿ ಎರಡು ವರ್ಗಗಳು. ಕೆಲವರ ಹೃದಯಗಳು ಕಲುಷಿತವಾದ ಐಹಿಕ ವಿಷಯಗಳಿಂದ ತುಂಬಿಹೋಗಿರುತ್ತವೆ. ಕೆಲವರು ಐಹಿಕವಾಗಿ ಮುಕ್ತರು. ಇವರಿಬ್ಬರಿಗೂ ಕೃಷ್ಣಪ್ರಜ್ಞೆಯು ಸಮಾನವಾಗಿ ಪ್ರಯೋಜನಕರ. ಕಲ್ಮಷಗಳಿಂದ ತುಂಬಿಹೋದವರು ಕ್ರಮಕ್ರಮವಾದ ಶುದ್ಧೀಕರಣ ಪ್ರಕ್ರಿಯೆಗಾಗಿ ಕೃಷ್ಣಪ್ರಜ್ಞೆಯ ಮಾರ್ಗವನ್ನು ಸ್ವೀಕರಿಸಬಹುದು. ಭಕ್ತಿಸೇವೆಯ ನಿಯಂತ್ರಕ ತತ್ವಗಳನ್ನು ಅನುಸರಿಸಬಹುದು. ಆಗಲೇ ಕಶ್ಮಲಗಳಿಂದ ಪರಿಶುದ್ಧರಾದವರು ಇದೇ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯಬಹುದು. ಇದರಿಂದ ಇತರರೂ ತಮ್ಮ ಆದರ್ಶ ಚಟುವಟಿಕೆಗಳನ್ನು ಅನುಸರಿಸಿ ಅದರ ಪ್ರಯೋಜನ ಪಡೆಯುವಂತಾಗುತ್ತದೆ. ಬುದ್ಧಿ ಇಲ್ಲದವರು ಅಥವಾ ಹೊಸದಾಗಿ ಕೃಷ್ಣಪ್ರಜ್ಞೆಯ ದೀಕ್ಷೆಯನ್ನು ಪಡೆದವರು, ಕೃಷ್ಣಪ್ರಜ್ಞೆಯನ್ನು ತಿಳಿದುಕೊಳ್ಳದೆಯೇ ಕ್ರಿಯೆಗಳಿಂದ ನಿವೃತ್ತರಾಗಲು ಬಯಸುತ್ತಾರೆ. ಯುದ್ಧರಂಗದ ಕರ್ತವ್ಯಗಳನ್ನು ನಿರ್ವಹಿಸುವುದಿಲ್ಲ ಎನ್ನುವ ಅರ್ಜುನನ ಅಪೇಕ್ಷೆಯನ್ನು ಭಗವಂತನು ಒಪ್ಪಲಿಲ್ಲ. ಹೇಗೆ ಕರ್ತವ್ಯವನ್ನು ಮಾಡಬೇಕು ಎಂದು ತಿಳಿದಿರಬೇಕು ಅಷ್ಟೇ. ಕೃಷ್ಣಪ್ರಜ್ಞೆಯ ಚಟುವಟಿಕೆಗಳನ್ನು ಬಿಟ್ಟು, ಕೃಷ್ಣಪ್ರಜ್ಞೆಯ ಹೊರಪ್ರದರ್ಶನ ಮಾಡುತ್ತ ದೂರದಲ್ಲಿ ಕುಳಿತುಕೊಳ್ಳುವುದಕ್ಕಿಂತ, ಕೃಷ್ಣನಿಗಾಗಿ ಕಾರ್ಯಕ್ಷೇತ್ರದಲ್ಲಿ ತೊಡಗುವುದು ಹೆಚ್ಚು ಮುಖ್ಯ. ಆಗಲೇ ಹೆಸರಿಸಿದ ಸೂರ್ಯದೇವತೆ ವಿವಸ್ವಾನನಂತಹ ಭಗವಂತನ ಹಿಂದಿನ ಶಿಷ್ಯರನ್ನು ಅನುಸರಿಸಿ, ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡಬೇಕೆಂದು ಇಲ್ಲಿ ಅರ್ಜುನನಿಗೆ ಭಗವಂತನು ಹೇಳುತ್ತಿದ್ದಾನೆ. ತನ್ನ ಹಿಂದಿನ ಕಾರ್ಯಗಳೂ, ಭೂತಕಾಲದಲ್ಲಿ

ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡಿದವರ ಕಾರ್ಯಗಳೂ ಭಗವಂತನಿಗೆ ತಿಳಿದಿವೆ. ಆದುದರಿಂದಲೇ ಆತನು ಕೋಟ್ಯಂತರ ವರ್ಷಗಳ ಹಿಂದೆ ತನ್ನಿಂದ ಈ ಕಲೆಯನ್ನು ಕಲಿತ ಸೂರ್ಯದೇವನ ಕಾರ್ಯಗಳನ್ನು ಆದರ್ಶವಾಗಿ ಹೇಳುತ್ತಾನೆ. ಕೃಷ್ಣನ ಇಂತಹ ಹಿಂದಿನ ಶಿಷ್ಯರನ್ನೆಲ್ಲ, ಕೃಷ್ಣನು ನಿಯಮಿಸಿದ ಕರ್ತವ್ಯಗಳಲ್ಲಿ ನಿರತರಾಗಿದ್ದ ಗತಕಾಲದ ಮುಕ್ತಾತ್ಮರು ಎಂದು ಇಲ್ಲಿ ಹೆಸರಿಸಲಾಗಿದೆ.

## ಶ್ಲೋಕ - 16

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ |**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ||೧೬||**

**ಕಿಮ್**—ಯಾವುದು; **ಕರ್ಮ**—ಕರ್ಮವು; **ಕಿಮ್**—ಯಾವುದು; **ಅಕರ್ಮ**—ಅಕರ್ಮವು; **ಇತಿ**—ಎಂದು; **ಕವಯಃ**—ಬುದ್ಧಿವಂತರು; **ಅಪಿ**—ಕೂಡ; **ಅತ್ರ**—ಈ ವಿಚಾರದಲ್ಲಿ; **ಮೋಹಿತಾಃ**—ದಿಗ್ಭ್ರಮೆಗೊಂಡಿದ್ದಾರೆ; **ತತ್**—ಆ; **ತೇ**—ನಿನಗೆ; **ಕರ್ಮ**—ಕರ್ಮವನ್ನು; **ಪ್ರವಕ್ಷ್ಯಾಮಿ**—ವಿವರಿಸುವೆನು; **ಯತ್**—ಯಾವುದನ್ನು; **ಜ್ಞಾತ್ವಾ**—ತಿಳಿದು; **ಮೋಕ್ಷ್ಯಸೇ**—ಮುಕ್ತನಾಗುವೆ; **ಅಶುಭಾತ್**—ಅಶುಭಗಳಿಂದ.

## ಅನುವಾದ

**ಕರ್ಮವು ಯಾವುದು ಅಕರ್ಮವು ಯಾವುದು ಎಂಬುದನ್ನು ತೀರ್ಮಾನಿಸುವಾಗ ಬುದ್ಧಿವಂತರಿಗೂ ದಿಗ್ಭ್ರಮೆಯಾಗುತ್ತದೆ. ಕರ್ಮವೆಂದರೇನು ಎಂಬುದನ್ನು ಈಗ ನಿನಗೆ ವಿವರಿಸಿ ಹೇಳುತ್ತೇನೆ. ಅದನ್ನು ತಿಳಿದು ನೀನು ಎಲ್ಲ ಅಶುಭದಿಂದ ಬಿಡುಗಡೆ ಹೊಂದುವೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಕರ್ಮವನ್ನು ಹಿಂದಿನ ನಿಜವಾದ ಭಕ್ತರ ಮೇಲ್ಪಂಕ್ತಿಯಂತೆ ಮಾಡಬೇಕು. ಇದನ್ನು 15ನೆಯ ಶ್ಲೋಕದಲ್ಲಿ ಹೇಳಿದೆ. ಇಂತಹ ಕರ್ಮವು ಏಕೆ ಸ್ವತಂತ್ರವಾಗಿರಬಾರದು ಎನ್ನುವುದನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ.

ಈ ಅಧ್ಯಾಯದ ಪ್ರಾರಂಭದಲ್ಲಿ ವಿವರಿಸಿದಂತೆ, ಗುರುಶಿಷ್ಯ ಪರಂಪರೆಯಲ್ಲಿರುವವರಿಗೆ ಅಧಿಕಾರವು ದತ್ತವಾಗಿರುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡಲು ಇಂತಹವರ ಮಾರ್ಗದರ್ಶನವನ್ನು ಅನುಸರಿಸಬೇಕು. ಕೃಷ್ಣಪ್ರಜ್ಞೆಯ ಪದ್ಧತಿಯನ್ನು ಮೊದಲು ತಿಳಿಸಿಕೊಟ್ಟದ್ದು ಸೂರ್ಯದೇವನಿಗೆ. ಸೂರ್ಯದೇವನು ತನ್ನ ಮಗನಾದ ಮನುವಿಗೆ ಇದನ್ನು ವಿವರಿಸಿದನು. ಮನುವು ತನ್ನ ಮಗನಾದ ಇಕ್ಷ್ವಾಕುವಿಗೆ ವಿವರಿಸಿದನು; ಆ ಪ್ರಾಚೀನ ಕಾಲದಿಂದ ಈ ಪದ್ಧತಿಯು ಭೂಮಿಯ ಮೇಲೆ ನಡೆದುಕೊಂಡು ಬಂದಿದೆ. ಆದುದರಿಂದ ನಾವು ಗುರುಶಿಷ್ಯ ಪರಂಪರೆಯಲ್ಲಿನ ಹಿಂದಿನ ಅಧಿಕೃತ ಜನರ ಹೆಜ್ಜೆಯಲ್ಲಿ ನಡೆಯಬೇಕು. ಇಲ್ಲವಾದರೆ ಅತ್ಯಂತ ಬುದ್ಧಿವಂತರಾದವರಿಗೂ ಕೃಷ್ಣಪ್ರಜ್ಞೆಯಲ್ಲಿನ ಕಾರ್ಯಪ್ರಮಾಣಗಳ ವಿಷಯದಲ್ಲಿ ದಿಗ್ಭ್ರಮೆಯಾಗುತ್ತದೆ. ಈ ಕಾರಣಕ್ಕಾಗಿ ಭಗವಂತನು ಅರ್ಜುನನಿಗೆ ನೇರವಾಗಿ ಕೃಷ್ಣಪ್ರಜ್ಞೆಯನ್ನು ಉಪದೇಶಿಸಲು ನಿರ್ಧರಿಸಿದನು. ಭಗವಂತನು ಅರ್ಜುನನಿಗೆ ನೇರವಾಗಿ ಉಪದೇಶ ಮಾಡಿದುದರಿಂದ, ಯಾರು ಅರ್ಜುನನ

ಹೆಜ್ಜೆಗಳಲ್ಲಿ ನಡೆಯುತ್ತಾರೋ ಅವರಿಗೆ ಖಂಡಿತ ದಿಗ್ಭ್ರಮೆಯಾಗುವುದಿಲ್ಲ.

ಧರ್ಮದ ಮಾರ್ಗವನ್ನು ಅಪರಿಪೂರ್ಣವಾದ ಪ್ರಾಯೋಗಿಕ ತಿಳುವಳಿಕೆಯಿಂದ ನಿರ್ಧರಿಸಲು ಸಾಧ್ಯವಿಲ್ಲ ಎಂದು ಹೇಳುತ್ತಾರೆ. ವಾಸ್ತವವಾಗಿ ಧರ್ಮದ ತತ್ವಗಳನ್ನು ಭಗವಂತನು ಮಾತ್ರವೇ ವಿಧಿಸಬಲ್ಲ. **ಧರ್ಮಂ ತು ಸಾಕ್ಷಾದ್ ಭಗವತ್ಪ್ರಣೀತಮ್** (ಭಾಗವತ 6.3.19). ಅಪರಿಪೂರ್ಣವಾದ ಊಹೆಗಳಿಂದ ಧಾರ್ಮಿಕ ತತ್ವವನ್ನು ಯಾರೂ ಸೃಷ್ಟಿಸಲಾರರು. ಬ್ರಹ್ಮ, ಶಿವ, ನಾರದ, ಮನು, ಕುಮಾರರು, ಕಪಿಲ, ಪ್ರಹ್ಲಾದ, ಭೀಷ್ಮ, ಶುಕಮುನಿಗಳು, ಯಮರಾಜ, ಜನಕ ಮತ್ತು ಬಲಿಮಹಾರಾಜ — ಇಂತಹ ಶ್ರೇಷ್ಠ ಅಧಿಕಾರಿಗಳ ಹೆಜ್ಜೆಯನ್ನು ಅನುಸರಿಸಬೇಕು. ಊಹಾತ್ಮಕ ಚಿಂತನೆಯಿಂದ ಧರ್ಮವೆಂದರೇನು ಅಥವಾ ಆತ್ಮಸಾಕ್ಷಾತ್ಕಾರ ಎಂದರೇನು ಎಂದು ತಿಳಿಯಲು ಸಾಧ್ಯವಿಲ್ಲ. ಆದುದರಿಂದ ತನ್ನ ಭಕ್ತರ ಬಗ್ಗೆ ಇರುವ ನಿಷ್ಕಾರಣ ಕಾರುಣ್ಯದಿಂದ ಭಗವಂತನು ಕರ್ಮ ಯಾವುದು ಮತ್ತು ಅಕರ್ಮ ಯಾವುದು ಎಂದು ಅರ್ಜುನನಿಗೆ ನೇರವಾಗಿ ವಿವರಿಸುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಮಾಡಿದ ಕರ್ಮ ಮಾತ್ರವೇ ಮನುಷ್ಯನನ್ನು ಐಹಿಕ ಅಸ್ತಿತ್ವದ ಗೋಜಿನಿಂದ ಬಿಡುಗಡೆ ಮಾಡಬಲ್ಲದು.

## ಶ್ಲೋಕ - 17

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ |**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ||೧೭||**

**ಕರ್ಮಣಃ**—ಕರ್ಮದ; **ಹಿ**—ಖಂಡಿತವಾಗಿಯೂ; **ಅಪಿ**—ಕೂಡ; **ಬೋದ್ಧವ್ಯಮ್**—ತಿಳಿದುಕೊಳ್ಳಬೇಕು; **ಬೋದ್ಧವ್ಯಮ್**—ತಿಳಿದುಕೊಳ್ಳಬೇಕು; **ಚ**—ಕೂಡ; **ವಿಕರ್ಮಣಃ**—ನಿಷಿದ್ಧಕರ್ಮದ; **ಅಕರ್ಮಣಃ**—ಅಕರ್ಮದ; **ಚ**—ಕೂಡ; **ಬೋದ್ಧವ್ಯಮ್**—ತಿಳಿದುಕೊಳ್ಳಬೇಕು; **ಗಹನಾ**—ಬಹಳ ಕಷ್ಟಕರವಾದುದು; **ಕರ್ಮಣಃ**—ಕರ್ಮದ; **ಗತಿಃ**—ಪ್ರವೇಶವು.

## ಅನುವಾದ

**ಕರ್ಮದ ಜಟಿಲತೆಗಳನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ. ಆದುದರಿಂದ ಮನುಷ್ಯನು ಕರ್ಮವು ಯಾವುದು, ವಿಕರ್ಮವು (ನಿಷಿದ್ಧ ಕರ್ಮ) ಯಾವುದು, ಅಕರ್ಮವು ಯಾವುದು ಎನ್ನುವುದನ್ನು ಸರಿಯಾಗಿ ತಿಳಿದುಕೊಳ್ಳಬೇಕು.**

## ಭಾವಾರ್ಥ

ಭೌತಿಕ ಬಂಧನದಿಂದ ಬಿಡುಗಡೆ ಪಡೆಯಬೇಕೆಂದು ಮನುಷ್ಯನಿಗೆ ನಿಜವಾಗಿ ಎನ್ನಿಸಿದ್ದರೆ ಆತನು ಕರ್ಮ, ಅಕರ್ಮ ಮತ್ತು ವಿಕರ್ಮಗಳಲ್ಲಿನ ವ್ಯತ್ಯಾಸಗಳನ್ನು ತಿಳಿದುಕೊಳ್ಳಬೇಕು. ಕ್ರಿಯೆ, ಪ್ರತಿಕ್ರಿಯೆ ಮತ್ತು ವಿಕೃತಕ್ರಿಯೆಯನ್ನು ವಿಶ್ಲೇಷಿಸಲು ಗಮನಕೊಡಬೇಕು. ಇದು ಬಹಳ ಕ್ಲಿಷ್ಟವಾದ ವಿಷಯ. ಕೃಷ್ಣಪ್ರಜ್ಞೆಯನ್ನು ಮತ್ತು ಅದಕ್ಕನುಗುಣವಾಗಿ ಹೇಗೆ ಕಾರ್ಯಮಾಡಬೇಕು ಎಂಬುದನ್ನು ಅರ್ಥಮಾಡಿಕೊಳ್ಳಲು ಮನುಷ್ಯನು ಪರಮ ಪುರುಷನೊಂದಿಗೆ ತನ್ನ ಸಂಬಂಧವನ್ನು ತಿಳಿದುಕೊಳ್ಳಬೇಕು. ಪರಿಪೂರ್ಣನಾದ ಜ್ಞಾನವಿರುವವನಿಗೆ ಪ್ರತಿಯೊಂದು ಜೀವಿಯೂ ಭಗವಂತನ

ನಿತ್ಯಸೇವಕ. ಆದುದರಿಂದ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡಬೇಕು ಎಂದು ತಿಳಿದಿರುತ್ತದೆ. ಇಡೀ ಭಗವದ್ಗೀತೆಯು ಈ ನಿರ್ಣಯದತ್ತ ಸಾಗುತ್ತದೆ. ಈ ಪ್ರಜ್ಞೆಗೆ ಮತ್ತು ಅದಕ್ಕೆ ಸಂಬಂಧಿಸಿದ ಕರ್ಮಗಳಿಗೆ ವಿರುದ್ಧವಾದ ಯಾವುದೇ ನಿರ್ಣಯವು ವಿಕರ್ಮ ಎಂದರೆ ನಿಷೇಧಿಸಿದ ಕರ್ಮ. ಇದನ್ನೆಲ್ಲ ಅರ್ಥಮಾಡಿಕೊಳ್ಳಲು ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಅಧಿಕಾರ ಪಡೆದವರ ಸಹವಾಸ ಮಾಡಬೇಕು ಮತ್ತು ಅವರಿಂದ ರಹಸ್ಯವನ್ನು ತಿಳಿದುಕೊಳ್ಳಬೇಕು. ಇದು ಭಗವಂತನಿಂದ ನೇರವಾಗಿ ಕಲಿತುಕೊಳ್ಳುವುದಕ್ಕೆ ಸಮಾನ. ಇಲ್ಲವಾದರೆ ಅತ್ಯಂತ ಬುದ್ಧಿವಂತರಿಗೂ ದಿಗ್ಭ್ರಮೆಯಾಗುತ್ತದೆ.

## ಶ್ಲೋಕ - 18

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ |**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ||೧೮||**

**ಕರ್ಮಣಿ**—ಕರ್ಮದಲ್ಲಿ; **ಅಕರ್ಮ**—ಅಕರ್ಮವನ್ನು; **ಯಃ**—ಯಾರು; **ಪಶ್ಯೇತ್**—ಕಾಣುತ್ತಾನೋ; **ಅಕರ್ಮಣಿ**—ಅಕರ್ಮದಲ್ಲಿ; **ಚ**—ಕೂಡ; **ಕರ್ಮ**—ಕಾಮ್ಯಕರ್ಮವನ್ನು; **ಯಃ**—ಯಾರು; **ಸಃ**—ಅವನು; **ಬುದ್ಧಿ ಮಾನ್**—ಬುದ್ಧಿವಂತನು; **ಮನುಷ್ಯೇಷು**—ಮಾನವ ಸಮಾಜದಲ್ಲಿ; **ಸಃ**—ಅವನು; **ಯುಕ್ತಃ**—ದಿವ್ಯಸ್ಥಿತಿಯಲ್ಲಿರುತ್ತಾನೆ; **ಕೃತ್ಸ್ನ ಕರ್ಮ ಕೃತ್**—ಎಲ್ಲ ಕಾರ್ಯಗಳಲ್ಲಿ ತೊಡಗಿದ್ದರೂ.

## ಅನುವಾದ

**ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ಕಾಣುವವನು ಮನುಷ್ಯರಲ್ಲಿ ಬುದ್ಧಿವಂತನು. ಅವನು ಎಲ್ಲ ಬಗೆಯ ಕರ್ಮಗಳಲ್ಲಿ ತೊಡಗಿದ್ದರೂ ಆಧ್ಯಾತ್ಮಿಕ ಸ್ಥಿತಿಯಲ್ಲಿರುವವನು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು ಸಹಜವಾಗಿ ಕರ್ಮಬಂಧನದಿಂದ ಮುಕ್ತನಾದವನು. ಅವನು ಮಾಡುವುದೆಲ್ಲ ಕೃಷ್ಣನಿಗಾಗಿಯೇ. ಆದುದರಿಂದ ಅವನಿಗೆ ಕರ್ಮದ ಯಾವುದೇ ಪರಿಣಾಮದ ಸಂತೋಷವೂ ಇಲ್ಲ, ಕಷ್ಟವೂ ಇಲ್ಲ. ಹೀಗಾಗಿ ಅವನು ಕೃಷ್ಣನಿಗಾಗಿ ಎಲ್ಲ ಬಗೆಯ ಕರ್ಮದಲ್ಲಿ ತೊಡಗಿದ್ದರೂ ಮನುಷ್ಯ ಸಮಾಜದಲ್ಲಿ ಬುದ್ಧಿವಂತನು. ಅಕರ್ಮ ಎಂದರೆ ಕೆಲಸಕ್ಕೆ ಪ್ರತಿಕ್ರಿಯೆಯಿಲ್ಲದೆ ಎಂದರ್ಥ. ನಿರಾಕಾರವಾದಿಯು ಭಯದಿಂದ ಫಲಾಪೇಕ್ಷೆಯ ಕರ್ಮವನ್ನು ಬಿಡುತ್ತಾನೆ; ಕರ್ಮಫಲವು ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಅಡ್ಡಿಯಾಗದಿರಲಿ ಎಂದು ಅವನ ಯೋಚನೆ. ಆದರೆ ಸಾಕಾರವಾದಿಗೆ ತನ್ನ ಸ್ಥಾನವು ದೇವೋತ್ತಮ ಪರಮ ಪುರುಷನ ನಿತ್ಯ ಸೇವಕನದು ಎನ್ನುವ ಸರಿಯಾದ ತಿಳುವಳಿಕೆ ಇರುತ್ತದೆ. ಆದುದರಿಂದ ಅವನು ಕೃಷ್ಣಪ್ರಜ್ಞೆಯ ಕಾರ್ಯಗಳಲ್ಲಿ ತೊಡಗುತ್ತಾನೆ. ಎಲ್ಲವನ್ನೂ ಕೃಷ್ಣನಿಗಾಗಿ ಮಾಡುವುದರಿಂದ ಈ ಸೇವಾಕಾರ್ಯದಲ್ಲಿ ಅವನಿಗೆ ಕೇವಲ ಅಲೌಕಿಕ ಸುಖದ ಅನುಭವವಾಗುತ್ತದೆ. ಈ ಪ್ರಕ್ರಿಯೆಯಲ್ಲಿ ತೊಡಗಿದವರಿಗೆ ಸ್ವಂತ ಇಂದ್ರಿಯಸುಖದ ಬಯಕೆ ಇಲ್ಲ ಎಂದು ತಿಳಿಯಲಾಗಿದೆ. ಕೃಷ್ಣನ ನಿತ್ಯಸೇವೆಯ ಭಾವವು

ಮನುಷ್ಯನನ್ನು ಕರ್ಮದ ಎಲ್ಲ ಪ್ರತಿಕ್ರಿಯೆಗಳಿಂದ ತೊಂದರೆಯಾಗದಂತೆ ರಕ್ಷಿಸುತ್ತದೆ.

## ಶ್ಲೋಕ - 19

**ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಙ್ಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥೧೯॥**

**ಯಸ್ಯ**—ಯಾರ; **ಸರ್ವೇ**—ಎಲ್ಲ ಬಗೆಯ; **ಸಮಾರಮ್ಭಾಃ**—ಪ್ರಯತ್ನಗಳು; **ಕಾಮ**—ಇಂದ್ರಿಯತೃಪ್ತಿಯ ಆಸೆಯನ್ನು ಆಧರಿಸಿದ; **ಸಙ್ಕಲ್ಪ**—ನಿರ್ಧಾರದಿಂದ; **ವರ್ಜಿತಾಃ**—ರಹಿತವಾಗಿರುತ್ತವೋ; **ಜ್ಞಾನ**—ಪರಿಪೂರ್ಣಜ್ಞಾನದ; **ಅಗ್ನಿ**—ಬೆಂಕಿಯಿಂದ; **ದಗ್ಧ**—ಸುಟ್ಟುಹೋದ; **ಕರ್ಮಾಣಮ್**—ಕರ್ಮವುಳ್ಳ; **ತಮ್**—ಅವನನ್ನು; **ಆಹುಃ**—ಘೋಷಿಸುತ್ತಾರೆ; **ಪಣ್ಡಿತಮ್**—ವಿದ್ವಾಂಸನೆಂದು; **ಬುಧಾಃ**—ತಿಳಿದವರು.

## ಅನುವಾದ

**ಯಾವ ವ್ಯಕ್ತಿಯ ಪ್ರತಿಯೊಂದು ಕರ್ಮವೂ ಇಂದ್ರಿಯ ತೃಪ್ತಿಯ ಬಯಕೆಯಿಂದ ಮುಕ್ತವಾಗಿರುತ್ತದೆಯೋ ಅಂತಹವನು ಪೂರ್ಣ ಜ್ಞಾನದಲ್ಲಿ ಇರುವನು. ಋಷಿಗಳ ಪ್ರಕಾರ ಅಂತಹವನ ಕರ್ಮದ ಪ್ರತಿಕ್ರಿಯೆಗಳನ್ನು ಪೂರ್ಣಜ್ಞಾನದ ಅಗ್ನಿಯು ಸುಟ್ಟುಹಾಕುತ್ತದೆ.**

## ಭಾವಾರ್ಥ

ಪೂರ್ಣಜ್ಞಾನದಲ್ಲಿರುವವನು ಮಾತ್ರವೇ ಕೃಷ್ಣಪ್ರಜ್ಞೆಯಲ್ಲಿರುವವನ ಕಾರ್ಯಗಳನ್ನು ಅರ್ಥಮಾಡಿಕೊಳ್ಳಬಲ್ಲ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಇಂದ್ರಿಯಭೋಗದ ಪ್ರವೃತ್ತಿಯು ಸ್ವಲ್ಪವೂ ಇರುವುದಿಲ್ಲ. ಆತನು ದೇವೋತ್ತಮ ಪರಮ ಪುರುಷನ ನಿತ್ಯಸೇವಕನಾಗಿ ತನ್ನ ಸ್ವರೂಪಸ್ಥಿತಿಯ ಪರಿಪೂರ್ಣಜ್ಞಾನವನ್ನು ಪಡೆದಿರುತ್ತಾನೆ. ಇದರಿಂದ ಅವನು ತನ್ನ ಕೆಲಸದ ಪ್ರತಿಕ್ರಿಯೆಯನ್ನು ಸುಟ್ಟುಹಾಕಿದ್ದಾನೆ ಎಂದು ಅರ್ಥಮಾಡಿಕೊಳ್ಳಬೇಕು. ಇಂತಹ ಪರಿಪೂರ್ಣ ಜ್ಞಾನವನ್ನು ಪಡೆದವನು ನಿಜವಾಗಿಯೂ ವಿದ್ವಾಂಸನು. ಭಗವಂತನ ನಿತ್ಯಸೇವಕನೆಂಬ ಈ ಜ್ಞಾನದ ಬೆಳವಣಿಗೆಯನ್ನು ಅಗ್ನಿಗೆ ಹೋಲಿಸಿದೆ. ಇಂತಹ ಅಗ್ನಿಯನ್ನು ಒಮ್ಮೆ ಹೊತ್ತಿಸಿದರೆ ಎಲ್ಲ ಬಗೆಯ ಪ್ರತಿಕ್ರಿಯೆಗಳನ್ನು ಅದು ಸುಡಬಲ್ಲದು.

## ಶ್ಲೋಕ - 20

**ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋऽಪಿ ನೈವ ಕಿಞ್ಚಿತ್ ಕರೋತಿ ಸಃ ॥೨೦॥**

**ತ್ಯಕ್ತ್ವಾ**—ತ್ಯಜಿಸಿ; **ಕರ್ಮ ಫಲ ಆಸಙ್ಗಮ್**—ಕಾಮ್ಯಕರ್ಮಗಳ ಫಲಗಳಲ್ಲಿ ಆಸಕ್ತಿಯನ್ನು; **ನಿತ್ಯ**—ಯಾವಾಗಲೂ; **ತೃಪ್ತಃ**—ತೃಪ್ತನಾಗಿ; **ನಿರಾಶ್ರಯಃ**—ಯಾವುದೇ ಆಶ್ರಯವಿಲ್ಲದವನಾಗಿ; **ಕರ್ಮಣಿ**—ಕರ್ಮದಲ್ಲಿ; **ಅಭಿಪ್ರವೃತ್ತಃ**—ಪೂರ್ಣನಿರತನಾಗಿ; **ಅಪಿ**—ಆದರೂ; **ನ**—ಇಲ್ಲ; **ಏವ**—

ಖಂಡಿತವಾಗಿಯೂ; **ಕಿಞ್ಚಿತ್**—ಏನಾದರೂ; **ಕರೋತಿ**—ಮಾಡುತ್ತಾನೆ; **ಸಃ**—ಅವನು.

## ಅನುವಾದ

**ತನ್ನ ಕಾರ್ಯಗಳ ಫಲಗಳ ಬಗ್ಗೆ ಇಂತಹ ಮನುಷ್ಯನು ಎಲ್ಲ ಮೋಹವನ್ನೂ ತ್ಯಜಿಸಿರುತ್ತಾನೆ. ಅವನು ಸದಾ ತೃಪ್ತನು ಮತ್ತು ಸ್ವತಂತ್ರನು. ಅವನು ಎಲ್ಲ ಬಗೆಯ ಕಾರ್ಯಗಳಲ್ಲಿ ನಿರತನಾಗಿದ್ದರೂ ಫಲಾಪೇಕ್ಷೆ ಇರುವ ಕರ್ಮವನ್ನು ಮಾಡುವುದಿಲ್ಲ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಎಲ್ಲವನ್ನೂ ಕೃಷ್ಣನಿಗಾಗಿಯೇ ಮಾಡುತ್ತಿರುವಾಗ ಮಾತ್ರ ಕರ್ಮಬಂಧನದಿಂದ ಬಿಡುಗಡೆ ಸಾಧ್ಯ. ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ದೇವೋತ್ತಮ ಪರಮ ಪುರುಷನಲ್ಲಿ ಶುದ್ಧಪ್ರೇಮವಿರುವುದರಿಂದ ಅವನು ಕರ್ಮ ಮಾಡುತ್ತಾನೆ. ಆದುದರಿಂದ ಕರ್ಮಫಲದಲ್ಲಿ ಅವನಿಗೆ ಆಸಕ್ತಿ ಆಕರ್ಷಣೆಗಳೇ ಇಲ್ಲ. ತನ್ನ ಪೋಷಣೆಯ ವಿಷಯದಲ್ಲಿಯೂ ಅವನಿಗೆ ಆಸಕ್ತಿ ಇರುವುದಿಲ್ಲ. ಏಕೆಂದರೆ ಅವನು ಎಲ್ಲವನ್ನೂ ಕೃಷ್ಣನಿಗೆ ಬಿಟ್ಟಿರುತ್ತಾನೆ. ವಸ್ತುಗಳನ್ನು ಪಡೆಯಬೇಕೆಂಬ ಕಾತರವಾಗಲೀ ಆಗಲೇ ತನ್ನಲ್ಲಿರುವ ವಸ್ತುಗಳನ್ನು ರಕ್ಷಿಸಬೇಕೆಂಬ ಕಾತರವಾಗಲೀ ಅವನಿಗಿಲ್ಲ. ಆದಷ್ಟು ಚೆನ್ನಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಿ ಎಲ್ಲವನ್ನೂ ಅವನು ಕೃಷ್ಣನಿಗೆ ಬಿಟ್ಟುಬಿಡುತ್ತಾನೆ. ಇಂತಹ ನಿರ್ಲಿಪ್ತ ಮನುಷ್ಯನು ಒಳಿತು ಮತ್ತು ಕೆಡುಕು ಕರ್ಮಗಳ ಪ್ರತಿಕ್ರಿಯೆಗಳಿಂದ ಸದಾ ಮುಕ್ತನಾಗಿರುತ್ತಾನೆ; ಅವನು ಏನನ್ನೂ ಮಾಡದೆಯೇ ಇರುವಂತೆ ಇರುತ್ತಾನೆ. ಇದು ಅಕರ್ಮದ ಎಂದರೆ ಪ್ರತಿಕ್ರಿಯೆಗಳ ಫಲಗಳಿಲ್ಲದ ಕರ್ಮದ ಸಂಕೇತ. ಆದುದರಿಂದ ಕೃಷ್ಣಪ್ರಜ್ಞೆ ಇಲ್ಲದ ಬೇರೆ ಯಾವುದೇ ಕರ್ಮವು ಮಾಡುವವನನ್ನು ಬಂಧಿಸುತ್ತದೆ. ಮೊದಲೇ ವಿವರಿಸಿದಂತೆ ಅದು ವಿಕರ್ಮದ ನಿಜವಾದ ಲಕ್ಷಣ.

## ಶ್ಲೋಕ - 21

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ||೨೧||**

**ನಿರಾಶೀಃ**—ಫಲಾಪೇಕ್ಷೆಯಿಲ್ಲದೆ; **ಯತ**—ನಿಯಂತ್ರಿತವಾದ; **ಚಿತ್ತ ಆತ್ಮಾ**—ಮನಸ್ಸು ಮತ್ತು ಬುದ್ಧಿಗಳುಳ್ಳ; **ತ್ಯಕ್ತ**—ತ್ಯಜಿಸಿ; **ಸರ್ವ**—ಎಲ್ಲ; **ಪರಿಗ್ರಹಃ**—ವಸ್ತುಗಳ ಮೇಲಿನ ಒಡೆತನದ ಭಾವವನ್ನು; **ಶಾರೀರಮ್**—ದೇಹ ಮತ್ತು ಆತ್ಮಗಳನ್ನು ಒಟ್ಟಿಗೆ ಇರಿಸಿಕೊಳ್ಳುವುದರಲ್ಲಿ; **ಕೇವಲಮ್** —ಮಾತ್ರವೇ; **ಕರ್ಮ**—ಕಾರ್ಯವನ್ನು; **ಕುರ್ವನ್**—ಮಾಡುತ್ತಾ; **ನ**—ಎಂದಿಗೂ ಇಲ್ಲ; **ಆಪ್ನೋತಿ**—ಹೊಂದುತ್ತಾನೆ; **ಕಿಲ್ಬಿಷಮ್**—ಪಾಪ ಪ್ರತಿಕ್ರಿಯೆಗಳನ್ನು.

## ಅನುವಾದ

**ಹೀಗೆ ತಿಳುವಳಿಕೆಯುಳ್ಳ ಮನುಷ್ಯನು ಮನಸ್ಸು ಮತ್ತು ಬುದ್ಧಿಯನ್ನು ಸಂಪೂರ್ಣವಾಗಿ ನಿಯಂತ್ರಣದಲ್ಲಿಟ್ಟುಕೊಂಡು ಕರ್ಮ ಮಾಡುತ್ತಾನೆ. ತನಗೆ ಸೇರಿದ ಸ್ವತ್ತಿನ ವಿಷಯದಲ್ಲಿ ತಾನೇ**

**ಒಡೆಯನೆಂಬ ಭಾವವನ್ನು ಸಂಪೂರ್ಣವಾಗಿ ಬಿಟ್ಟುಬಿಡುತ್ತಾನೆ, ಮತ್ತು ಶರೀರ ರಕ್ಷಣೆಗೆ ಬೇಕಾದಷ್ಟು ಕರ್ಮವನ್ನು ಮಾತ್ರ ಮಾಡುತ್ತಾನೆ. ಹೀಗೆ ಕೆಲಸ ಮಾಡುವವನ ಮೇಲೆ ಪಾಪಪೂರಿತ ಪ್ರತಿಕ್ರಿಯೆಗಳು ಯಾವುದೇ ಪರಿಣಾಮವನ್ನು ಮಾಡುವುದಿಲ್ಲ.**

## ಭಾವಾರ್ಥ

ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ತನ್ನ ಕಾರ್ಯಗಳಿಂದ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳನ್ನು ನಿರೀಕ್ಷಿಸುವುದಿಲ್ಲ. ಅವನ ಮನಸ್ಸು ಮತ್ತು ಬುದ್ಧಿ ಸಂಪೂರ್ಣವಾಗಿ ಹಿಡಿತದಲ್ಲಿರುತ್ತವೆ. ತಾನು ಪರಮ ಪ್ರಭುವಿನ ವಿಭಿನ್ನಾಂಶನಾದ್ದರಿಂದ ವಿಭಿನ್ನಾಂಶವಾಗಿ ತಾನು ವಹಿಸುವ ಪಾತ್ರ ತನ್ನ ಕಾರ್ಯವಲ್ಲ ಎಂದು ಅವನಿಗೆ ತಿಳಿದಿರುತ್ತದೆ; ಈ ಕಾರ್ಯಯನ್ನು ಪರಮ ಪ್ರಭುವು ತನ್ನ ಮೂಲಕ ಮಾಡುತ್ತಾನೆ ಎಂದು ಅವನಿಗೆ ತಿಳಿದಿರುತ್ತದೆ. ಕೈಯು ಚಲಿಸಿದಾಗ ಅದು ತಾನಾಗಿಯೇ ಚಲಿಸುವುದಿಲ್ಲ. ಇಡೀ ದೇಹದ ಪ್ರಯತ್ನದಿಂದ ಚಲಿಸುತ್ತದೆ. ಕೃಷ್ಣಪ್ರಜ್ಞೆಯಿರುವ ಮನುಷ್ಯನು ಪರಮ ಪ್ರಭುವಿನ ಇಚ್ಛೆಯೊಡನೆ ಸಂಪೂರ್ಣವಾಗಿ ಹೊಂದಿಕೊಳ್ಳುತ್ತಾನೆ. ಏಕೆಂದರೆ ಸ್ವಂತ ಇಂದ್ರಿಯತೃಪ್ತಿಯ ಬಯಕೆ ಅವನಿಗಿಲ್ಲ. ಆತನು ಯಂತ್ರದ ಒಂದು ಭಾಗದಂತೆಯೇ ಚಲಿಸುತ್ತಾನೆ. ಯಂತ್ರದ ಭಾಗವು ಒಳ್ಳೆಯ ಸ್ಥಿತಿಯಲ್ಲಿರಲು ಎಣ್ಣೆ ಹಾಕುವುದು ಮತ್ತು ಸ್ವಚ್ಛಗೊಳಿಸುವುದು ಅಗತ್ಯ. ಹಾಗೆಯೇ ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ತನ್ನ ಕಾರ್ಯದ ಮೂಲಕ ಸುಸ್ಥಿತಿಯಲ್ಲಿ ಉಳಿಯುತ್ತಾನೆ. ಇದು ಭಗವಂತನ ಆಧ್ಯಾತ್ಮಿಕ ಪ್ರೇಮಪೂರ್ವಕ ಸೇವೆಯಲ್ಲಿ ಕೆಲಸಮಾಡುವುದಕ್ಕೆ ಆತನು ಯೋಗ್ಯಸ್ಥಿತಿಯಲ್ಲಿರುವುದಕ್ಕಾಗಿ ಮಾತ್ರ. ಆದುದರಿಂದ ಆತನ ಕೆಲಸಗಳ ಪ್ರತಿಕ್ರಿಯೆಗಳು ಅವನನ್ನು ಬಾಧಿಸಲಾರವು. ಪ್ರಾಣಿಯಂತೆ ಆತನಿಗೆ ತನ್ನ ದೇಹದ ಮೇಲೆ ಸಹ ಒಡೆತನವಿಲ್ಲ. ಕ್ರೂರಿಯಾದ ಯಜಮಾನನು ಕೆಲವು ಸಲ ತನ್ನ ವಶದಲ್ಲಿರುವ ಪ್ರಾಣಿಯನ್ನು ಕೊಂದೇ ಬಿಡುತ್ತಾನೆ. ಆದರೂ ಪ್ರಾಣಿಯು ಪ್ರತಿಭಟಿಸುವುದಿಲ್ಲ. ಅದಕ್ಕೆ ನಿಜವಾದ ಸ್ವಾತಂತ್ರ್ಯವೂ ಇಲ್ಲ. ಆತ್ಮ ಸಾಕ್ಷಾತ್ಕಾರದಲ್ಲಿ ಸಂಪೂರ್ಣವಾಗಿ ಮಗ್ನನಾಗಿರುವ ಕೃಷ್ಣಪ್ರಜ್ಞೆಯ ಮನುಷ್ಯನಿಗೆ ಯಾವುದೇ ಐಹಿಕವಸ್ತುವಿನ ಮೇಲಿನ ಹುಸಿ ಒಡೆತನಕ್ಕೆ ಸಮಯವೇ ಇಲ್ಲ. ದೇಹವನ್ನೂ ಆತ್ಮವನ್ನೂ ರಕ್ಷಿಸಿಕೊಳ್ಳಲು ಅವನು ಹಣವನ್ನು ಅನ್ಯಾಯವಾಗಿ ಸಂಗ್ರಹಿಸಬೇಕಾಗಿಲ್ಲ. ಆದುದರಿಂದ ಆತನಿಗೆ ಇಂತಹ ಐಹಿಕ ಪಾಪಗಳ ಲೇಪವಿಲ್ಲ. ಅವನು ತನ್ನ ಕರ್ಮಗಳ ಎಲ್ಲ ಪ್ರತಿಕ್ರಿಯೆಗಳಿಂದ ಬಿಡುಗಡೆ ಹೊಂದಿದವನು.

## ಶ್ಲೋಕ - 22

**ಯದೃಚ್ಛಾಲಾಭಸನ್ತುಷ್ಟೋ ದ್ವನ್ದ್ವಾತೀತೋ ವಿಮತ್ಸರಃ |**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ||೨೨||**

**ಯದೃಚ್ಛಾ**—ತಾನಾಗಿಯೇ ಒದಗಿದ; **ಲಾಭ**—ಲಾಭದಿಂದ; **ಸಂತುಷ್ಟಃ**—ತೃಪ್ತನು; **ದ್ವನ್ದ್ವ**—ದ್ವಂದ್ವಭಾವವನ್ನು; **ಅತೀತಃ**—ಮೀರಿದವನು; **ವಿಮತ್ಸರಃ**—ಮತ್ಸರವಿಲ್ಲದವನು; **ಸಮಃ**—ಸ್ಥಿರನು; **ಸಿದ್ಧೌ**—ಯಶಸ್ಸಿನಲ್ಲಿ; **ಅಸಿದ್ಧೌ**—ವೈಫಲ್ಯದಲ್ಲಿ; **ಚ**—ಕೂಡ; **ಕೃತ್ವಾ**—ಮಾಡುತ್ತ; **ಅಪಿ**—ಕೂಡ; **ನ ನಿಬಧ್ಯತೇ**—ಬಾಧಿತನಾಗುವುದಿಲ್ಲ.

### ಅನುವಾದ

**ತಾನಾಗಿ ಬಂದುದರಲ್ಲಿ ತೃಪ್ತಿಯಿರುವವನೂ, ದ್ವಂದ್ವಾತೀತನೂ, ಅಸೂಯೆ ಇಲ್ಲದವನೂ, ಗೆಲುವು ಸೋಲುಗಳಲ್ಲಿ ಒಂದೇ ರೀತಿ ಇರುವವನೂ ಆದ ಮನುಷ್ಯನು ಕೆಲಸ ಮಾಡಿದರೂ ಬಂಧನಕ್ಕೆ ಸಿಲುಕುವುದಿಲ್ಲ.**

### ಭಾವಾರ್ಥ

ಕೃಷ್ಣಪ್ರಜ್ಞೆ ಇರುವ ಮನುಷ್ಯನು ತನ್ನ ದೇಹ ರಕ್ಷಣೆಗೂ ಹೆಚ್ಚು ಪ್ರಯತ್ನವನ್ನು ಮಾಡುವುದಿಲ್ಲ, ತಾನಾಗಿ ಬಂದದ್ದರಲ್ಲಿ ತೃಪ್ತಿಪಟ್ಟುಕೊಳ್ಳುತ್ತಾನೆ. ಆತನು ಬೇಡುವುದಿಲ್ಲ. ಸಾಲವನ್ನೂ ಮಾಡುವುದಿಲ್ಲ. ತನ್ನಿಂದಾದಷ್ಟು ಶ್ರಮಪಟ್ಟು ಕೆಲಸಮಾಡುತ್ತಾನೆ. ತನ್ನ ಪ್ರಾಮಾಣಿಕಶ್ರಮದಿಂದ ಎಷ್ಟು ಬಂದರೆ ಅಷ್ಟರಲ್ಲೇ ತೃಪ್ತಿ. ಆದುದರಿಂದ ತನ್ನ ಜೀವನ ನಿರ್ವಹಣೆಯಲ್ಲಿ ಆತನು ಸ್ವತಂತ್ರನು. ಕೃಷ್ಣಪ್ರಜ್ಞೆಯಲ್ಲಿನ ತನ್ನ ಸ್ವಂತ ಸೇವೆಗೆ ಬೇರೆ ಯಾರ ಸೇವೆಯೂ ಅಡ್ಡಬರಲು ಆತನು ಅವಕಾಶ ಕೊಡುವುದಿಲ್ಲ. ಆದರೆ ಭಗವಂತನ ಸೇವೆಗಾಗಿ ಆತನು ಐಹಿಕ ಜಗತ್ತಿನ ದ್ವಂದ್ವದಿಂದ ವಿಚಲಿತನಾಗದೆ ಯಾವ ಬಗೆಯ ಕರ್ಮದಲ್ಲಿಯಾದರೂ ಭಾಗವಹಿಸಬಲ್ಲ. ಐಹಿಕ ಜಗತ್ತಿನ ದ್ವಂದ್ವವು ಶಾಖ ಮತ್ತು ತಂಪು, ದುಃಖ ಮತ್ತು ಸುಖ ಹೀಗೆ ಅನುಭವವಾಗುತ್ತದೆ. ಕೃಷ್ಣಪ್ರಜ್ಞೆಯಿರುವ ಮನುಷ್ಯನು ದ್ವಂದ್ವವನ್ನು ಮೀರುತ್ತಾನೆ. ಏಕೆಂದರೆ ಕೃಷ್ಣನ ತೃಪ್ತಿಗಾಗಿ ಹೇಗೆ ಕೆಲಸ ಮಾಡಲೂ ಆತನು ಹಿಂಜರಿಯುವುದಿಲ್ಲ. ಆತನು ಗೆಲುವು ಸೋಲುಗಳೆರಡರಲ್ಲೂ ಸಮಚಿತ್ತನಾಗಿರುತ್ತಾನೆ. ಮನುಷ್ಯನು ಆಧ್ಯಾತ್ಮಿಕ ಜ್ಞಾನವನ್ನು ಸಂಪೂರ್ಣವಾಗಿ ಪಡೆದಾಗ ಈ ಲಕ್ಷಣಗಳು ಕಾಣುತ್ತವೆ.

## ಶ್ಲೋಕ - 23

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ||೨೩||**

**ಗತ ಸಂಗಸ್ಯ**—ಪ್ರಕೃತಿಗುಣಗಳಲ್ಲಿ ಅನಾಸಕ್ತನಾದವನ; **ಮುಕ್ತಸ್ಯ**—ಮುಕ್ತನಾದವನ; **ಜ್ಞಾನ ಅವಸ್ಥಿತ**—ದಿವ್ಯದಲ್ಲಿ ಸ್ಥಿತವಾದ; **ಚೇತಸಃ**—ಜ್ಞಾನವುಳ್ಳ; **ಯಜ್ಞಾಯ**—ಯಜ್ಞ (ಕೃಷ್ಣ) ನಿಗೋಸ್ಕರ; **ಆಚರತಃ**—ಆಚರಿಸುವವನ; **ಕರ್ಮ**—ಕರ್ಮವು; **ಸಮಗ್ರಮ್**—ಸಮಗ್ರವಾಗಿ; **ಪ್ರವಿಲೀಯತೇ**—ಪೂರ್ಣವಾಗಿ ಲೀನವಾಗುತ್ತದೆ.

### ಅನುವಾದ

**ಐಹಿಕ ಪ್ರಕೃತಿಯ ಗುಣಗಳಿಗೆ ಅಂಟಿಕೊಳ್ಳದವನೂ ಮತ್ತು ಆಧ್ಯಾತ್ಮಿಕ ಜ್ಞಾನದಲ್ಲಿ ಸಂಪೂರ್ಣವಾಗಿ ನೆಲೆಯುಳ್ಳವನೂ ಆದ ಮನುಷ್ಯನ ಕರ್ಮವು ಅಧ್ಯಾತ್ಮದಲ್ಲಿ ಸಂಪೂರ್ಣವಾಗಿ ಲೀನವಾಗುತ್ತದೆ.**

### ಭಾವಾರ್ಥ

ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಪಡೆದಾಗ ಮನುಷ್ಯನು ಎಲ್ಲ ದ್ವಂದ್ವಗಳಿಂದ

ಮುಕ್ತನಾಗುತ್ತಾನೆ. ಹೀಗೆ ಆತನು ಐಹಿಕ ಗುಣಗಳ ಎಲ್ಲ ಕಲ್ಮಷಗಳಿಂದ ಬಿಡುಗಡೆಯಾಗುತ್ತಾನೆ. ಆತನಿಗೆ ಕೃಷ್ಣನ ಸಂಬಂಧದಲ್ಲಿ ತನ್ನ ಸ್ವರೂಪದ ಸ್ಥಿತಿ ತಿಳಿದಿರುತ್ತದೆ. ಆತನ ಮನಸ್ಸನ್ನು ಕೃಷ್ಣಪ್ರಜ್ಞೆಯಿಂದ ಸೆಳೆಯಲು ಸಾಧ್ಯವಿಲ್ಲ. ಈ ಕಾರಣದಿಂದ ಅವನು ಮುಕ್ತನಾಗಬಹುದು. ಆದುದರಿಂದ ಅವನು ಏನು ಮಾಡಿದರೂ ಆದಿವಿಷ್ಣುವಾದ ಕೃಷ್ಣನಿಗಾಗಿಯೇ ಮಾಡುತ್ತಾನೆ. ಆದುದರಿಂದ ವಿಶಿಷ್ಟಾರ್ಥದಲ್ಲಿ ಆತನ ಕರ್ಮಗಳೆಲ್ಲವೂ ಯಜ್ಞಗಳೇ. ಏಕೆಂದರೆ ಯಜ್ಞಗಳ ಉದ್ದೇಶ ಪರಮ ಪುರುಷನಾದ ವಿಷ್ಣುವನ್ನು, ಕೃಷ್ಣನನ್ನು ತೃಪ್ತಿಗೊಳಿಸುವುದು. ಇಂತಹ ಕರ್ಮದ ಪರಿಣಾಮವಾದ ಎಲ್ಲ ಪ್ರತಿಕ್ರಿಯೆಗಳೂ ಅಧ್ಯಾತ್ಮದಲ್ಲಿ ಸೇರಿಹೋಗುತ್ತವೆ. ಆ ಮನುಷ್ಯನಿಗೆ ಐಹಿಕ ಪರಿಣಾಮಗಳ ತೊಂದರೆಯಿಲ್ಲ.

## ಶ್ಲೋಕ - 24

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ |**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ||೨೪||**

**ಬ್ರಹ್ಮ**—ಅಧ್ಯಾತ್ಮ ಸ್ವಭಾವದ; **ಅರ್ಪಣಮ್**—ಅರ್ಪಣೆಯು; **ಬ್ರಹ್ಮ**—ಪರಮೋನ್ನತನಾದ; **ಹವಿಃ**—ಆಜ್ಯವು; **ಬ್ರಹ್ಮ**—ಅಧ್ಯಾತ್ಮನಾದ; **ಅಗ್ನೌ**—ಹುತಾಗ್ನಿಯಲ್ಲಿ; **ಬ್ರಹ್ಮಣಾ**—ಅಧ್ಯಾತ್ಮ ಚೇತನದಿಂದ; **ಹುತಮ್**—ಅರ್ಪಿಸಲ್ಪಟ್ಟ; **ಬ್ರಹ್ಮ**—ಅಧ್ಯಾತ್ಮರಾಜ್ಯವು; **ಏವ**—ಖಂಡಿತವಾಗಿಯೂ; **ತೇನ**—ಅವನಿಂದ; **ಗನ್ತವ್ಯಮ್**—ಹೊಂದಬೇಕಾದುದು; **ಬ್ರಹ್ಮ**—ಆಧ್ಯಾತ್ಮಿಕ; **ಕರ್ಮ**— ಚಟುವಟಿಕೆಗಳಲ್ಲಿ; **ಸಮಾಧಿನಾ**—ಪೂರ್ಣ ತಲ್ಲೀನತೆಯಿಂದ.

### ಅನುವಾದ

**ಕೃಷ್ಣಪ್ರಜ್ಞೆಯಲ್ಲಿ ಸಂಪೂರ್ಣವಾಗಿ ಮಗ್ನನಾದ ಮನುಷ್ಯನು ನಿಶ್ಚಯವಾಗಿಯೂ ಆ ಭಗವದ್ಧಾಮವನ್ನು ಸೇರುವನು. ಏಕೆಂದರೆ ಅವನು ಆಧ್ಯಾತ್ಮಿಕ ಕಾರ್ಯಗಳಿಗೆ ಸಂಪೂರ್ಣವಾಗಿ ಅರ್ಪಿತನಾಗಿರುತ್ತಾನೆ. ಇಂತಹ ಆಧ್ಯಾತ್ಮಿಕ ಕಾರ್ಯಗಳಲ್ಲಿ ಆಹುತಿಯೂ ಪರಾತ್ಪರವಾದದ್ದು ಮತ್ತು ಅರ್ಪಣವೂ ಇದೇ ಆಧ್ಯಾತ್ಮಿಕ ಸ್ವಭಾವದ್ದು.**

### ಭಾವಾರ್ಥ

ಕೃಷ್ಣಪ್ರಜ್ಞೆಯಿಂದ ಕೂಡಿದ ಕಾರ್ಯ ಚಟುವಟಿಕೆಗಳು ಮನುಷ್ಯನನ್ನು ಕಡೆಗೆ ಹೇಗೆ ಆಧ್ಯಾತ್ಮಿಕ ಗುರಿಗೆ ಕೊಂಡೊಯ್ಯಬಹುದು ಎನ್ನುವುದನ್ನು ಇಲ್ಲಿ ಬಣ್ಣಿಸಿದೆ. ಕೃಷ್ಣಪ್ರಜ್ಞೆಯಲ್ಲಿ ಹಲವಾರು ಚಟುವಟಿಕೆಗಳಿವೆ. ಅವೆಲ್ಲವನ್ನೂ ಮುಂದಿನ ಶ್ಲೋಕಗಳಲ್ಲಿ ವರ್ಣಿಸಿದೆ. ಇಲ್ಲಿ ಕೃಷ್ಣಪ್ರಜ್ಞೆಯ ತತ್ವವನ್ನು ಮಾತ್ರ ವರ್ಣಿಸಿದೆ. ಭೌತಿಕ ಕಲ್ಮಷದಲ್ಲಿ ಸಿಕ್ಕಿಕೊಂಡಿರುವ ಬದ್ಧಾತ್ಮನು ಖಂಡಿತವಾಗಿಯೂ ಭೌತಿಕ ವಾತಾವರಣದಲ್ಲಿ ಕರ್ಮ ಮಾಡುತ್ತಾನೆ; ಆದರೂ ಆತನು ಇಂತಹ ಆವರಣದಿಂದ ಹೊರಬರಬೇಕಾಗಿದೆ. ಭೌತಿಕ ಆವರಣದಿಂದ ಬದ್ಧಾತ್ಮವು ಹೊರಬರುವ ಪ್ರಕ್ರಿಯೆಯೇ ಕೃಷ್ಣಪ್ರಜ್ಞೆ. ಉದಾಹರಣೆಗೆ ಹಾಲಿನ ಉತ್ಪನ್ನಗಳನ್ನು ಹೆಚ್ಚಾಗಿ ಸೇವಿಸಿ ಅಜೀರ್ಣದಿಂದ ನರಳುತ್ತಿರುವ ರೋಗಿಗೆ ಹಾಲಿನ ಮತ್ತೊಂದು ಉತ್ಪನ್ನವಾದ ಮೊಸರಿನಿಂದ ಗುಣವಾಗುತ್ತದೆ. ಇಲ್ಲಿ ಗೀತೆಯು ಹೇಳುವಂತೆ ಐಹಿಕದಲ್ಲೆ ಮೈಮರೆತ ಬದ್ಧಾತ್ಮಕ್ಕೆ ಕೃಷ್ಣಪ್ರಜ್ಞೆಯಿಂದ ಗುಣವಾಗಬಹುದು.

ಈ ಪ್ರಕ್ರಿಯೆಗೆ ಯಜ್ಞ ಎಂದು ಹೆಸರು. ಹೀಗೆಂದರೆ ವಿಷ್ಣು ಅಥವಾ ಕೃಷ್ಣನ ತೃಪ್ತಿಗಾಗಿಯೆ ಮಾಡುವ ಕಾರ್ಯಗಳು. ಐಹಿಕ ಜಗತ್ತಿನ ಚಟುವಟಿಕೆಗಳನ್ನು ಕೃಷ್ಣಪ್ರಜ್ಞೆಯಲ್ಲಿ ಅಥವಾ ವಿಷ್ಣುವಿಗಾಗಿ ಮಾತ್ರವೇ ಮಾಡಿದಷ್ಟೂ ಸಮಾಧಿ ಅಥವಾ ಸಂಪೂರ್ಣ ಲೀನತೆಯಿಂದಾಗಿ ವಾತಾವರಣವು ಆಧ್ಯಾತ್ಮಿಕವಾಗುತ್ತದೆ. ಬ್ರಹ್ಮ ಎನ್ನುವ ಪದಕ್ಕೆ 'ಆಧ್ಯಾತ್ಮಿಕ' ಎಂದು ಅರ್ಥ. ಭಗವಂತನು ಆಧ್ಯಾತ್ಮಿಕನು. ಅವನ ಅಲೌಕಿಕ ಶರೀರದ ಕಿರಣಗಳನ್ನು ಬ್ರಹ್ಮಜ್ಯೋತಿ ಎಂದು ಕರೆಯುತ್ತಾರೆ. ಅಸ್ತಿತ್ವದಲ್ಲಿರುವುದೆಲ್ಲ ಬ್ರಹ್ಮಜ್ಯೋತಿಯಲ್ಲಿ ನೆಲೆಗೊಂಡಿದೆ. ಆದರೆ ಮಾಯೆ ಅಥವಾ ಇಂದ್ರಿಯತೃಪ್ತಿಯು ಆ ಜ್ಯೋತಿಯನ್ನು ಮುಸುಕಿದಾಗ ಅದಕ್ಕೆ ಐಹಿಕವೆಂದು ಹೆಸರು. ಕೃಷ್ಣಪ್ರಜ್ಞೆಯು ತಕ್ಷಣವೇ ಈ ಮುಸುಕನ್ನು ಕಿತ್ತುಹಾಕಬಲ್ಲುದು. ಹೀಗೆ ಕೃಷ್ಣಪ್ರಜ್ಞೆಗಾಗಿಯೇ ಅರ್ಪಿಸಿದ್ದು, ಈ ಅರ್ಪಣೆಯನ್ನು ಆಹುತಿಯಾಗಿ ಸ್ವೀಕರಿಸುವ ಪ್ರತಿನಿಧಿ, ಆಹುತಿಗೊಳ್ಳುವ ಪ್ರಕ್ರಿಯೆ, ಅರ್ಪಿಸುವವನು. ಅದರ ಫಲ ಎಲ್ಲ ಸೇರಿ ಬ್ರಹ್ಮನ್ ಅಥವಾ ಪರಮಸತ್ಯ ಎನಿಸುತ್ತದೆ. ಪರಮಸತ್ಯವನ್ನು ಮಾಯೆಯು ಮುಸುಕಿದಾಗ ಅದಕ್ಕೆ ಜಡವಸ್ತುವೆಂದೂ ಹೆಸರು. ಪರಮಸತ್ಯಕ್ಕಾಗಿ ಜೊತೆಗೂಡಿಸಿದ ಜಡವಸ್ತುವು ತನ್ನ ಆಧ್ಯಾತ್ಮಿಕ ಗುಣವನ್ನು ಮರಳಿ ಪಡೆಯುತ್ತದೆ. ಮಾಯಾಪ್ರಜ್ಞೆಯನ್ನು ಬ್ರಹ್ಮನ್ ಆಗಿ ಪರಿವರ್ತಿಸುವ ಪ್ರಕ್ರಿಯೆಯೇ ಕೃಷ್ಣಪ್ರಜ್ಞೆ. ಮನಸ್ಸು ಕೃಷ್ಣಪ್ರಜ್ಞೆಯಲ್ಲಿ ಸಂಪೂರ್ಣವಾಗಿ ತಲ್ಲೀನವಾದಾಗ ಅದು ಸಮಾಧಿಯಲ್ಲಿದೆ ಎನ್ನುತ್ತಾರೆ. ಇಂತಹ ದಿವ್ಯಪ್ರಜ್ಞೆಯಲ್ಲಿ ಮಾಡಿದ ಯಾವುದೇ ಕಾರ್ಯಕ್ಕೆ ಯಜ್ಞ ಎಂದು ಹೆಸರು. ಆಧ್ಯಾತ್ಮಿಕ ಪ್ರಜ್ಞೆಯ ಈ ಸ್ಥಿತಿಯಲ್ಲಿ ಅರ್ಪಿಸಿದವನು, ಅರ್ಪಿಸಿದ್ದು, ಆಹುತಿ ತೆಗೆದುಕೊಳ್ಳುವುದು, ಕರ್ತೃ ಅಥವಾ ಯಜಮಾನ, ಯಜ್ಞದ ಪರಮಫಲ ಎಲ್ಲವೂ ಪರಬ್ರಹ್ಮನಲ್ಲಿ ಒಂದಾಗುತ್ತದೆ. ಇದು ಕೃಷ್ಣಪ್ರಜ್ಞೆಯ ರೀತಿ.

## ಶ್ಲೋಕ - 25

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ |**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ||೨೫||**

**ದೈವಮ್**—ದೇವತೆಗಳ ಅರ್ಚನೆಯಲ್ಲಿ; **ಏವ**—ಇದರಂತೆ; **ಅಪರೇ**—ಇತರರು ಕೆಲವರು; **ಯಜ್ಞಮ್**—ಯಜ್ಞವನ್ನು; **ಯೋಗಿನಃ**—ಯೋಗಿಗಳು; **ಪರ್ಯುಪಾಸತೇ**—ಸಮಂಜಸವಾಗಿ ಆರಾಧಿಸುತ್ತಾರೆ; **ಬ್ರಹ್ಮ**—ಪರಮಸತ್ಯದ; **ಅಗ್ನೌ**—ಅಗ್ನಿಯಲ್ಲಿ; **ಅಪರೇ**—ಉಳಿದವರು; **ಯಜ್ಞಮ್**—ಯಜ್ಞವನ್ನು; **ಯಜ್ಞೇನ**—ಯಜ್ಞದಿಂದ; **ಏವ**—ಹೀಗೆ; **ಉಪಜುಹ್ವತಿ**—ಅರ್ಪಿಸುತ್ತಾರೆ.

## ಅನುವಾದ

**ಕೆಲವರು ಯೋಗಿಗಳು ಬೇರೆಬೇರೆ ಯಜ್ಞಾರ್ಪಣೆಗಳಿಂದ ದೇವತೆಗಳನ್ನು ಪರಿಪೂರ್ಣವಾಗಿ ಆರಾಧಿಸುತ್ತಾರೆ. ಇನ್ನು ಕೆಲವರು ಪರಬ್ರಹ್ಮನ ಅಗ್ನಿಯಲ್ಲಿ ಯಜ್ಞಮಾಡುತ್ತಾರೆ.**

## ಭಾವಾರ್ಥ

ಮೇಲೆ ಹೇಳಿದಂತೆ ಕೃಷ್ಣಪ್ರಜ್ಞೆಯಲ್ಲಿ ಕರ್ತವ್ಯಮಗ್ನನಾದವನನ್ನು ಪರಿಪೂರ್ಣಯೋಗಿ ಎಂದು ಕರೆಯುತ್ತಾರೆ. ಆದರೆ ದೇವತೆಗಳನ್ನು ಪೂಜಿಸುತ್ತಾ ಇಂತಹುದೇ ಯಜ್ಞಗಳನ್ನು ಮಾಡುವ

ಇತರರಿದ್ದಾರೆ. ಪರಬ್ರಹ್ಮನಿಗೆ ಎಂದರೆ ಭಗವಂತನ ನಿರಾಕಾರ ಲಕ್ಷಣಕ್ಕೆ ಯಜ್ಞವನ್ನರ್ಪಿಸುವವರೂ ಇದ್ದಾರೆ. ಆದುದರಿಂದ ಬೇರೆಬೇರೆ ವರ್ಗಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಬಗೆಗಳ ಯಜ್ಞಗಳಿವೆ. ವಿವಿಧ ರೀತಿಗಳ ಕರ್ತೃಗಳು ಅರ್ಪಿಸುವ ಯಜ್ಞದ ಬೇರೆ ಬೇರೆ ಬಗೆಗಳು ಮೇಲ್ನೋಟಕ್ಕೆ ಮಾತ್ರ ಭಿನ್ನತೆಯನ್ನು ತೋರುತ್ತವೆ. ವಾಸ್ತವವಾಗಿ ಯಜ್ಞವೆಂದರೆ ಪರಮ ಪ್ರಭುವಾದ ವಿಷ್ಣುವನ್ನು ತೃಪ್ತಿಪಡಿಸುವುದು; ಆತನಿಗೆ ಯಜ್ಞ ಎಂದೂ ಹೆಸರು. ಬೇರೆಬೇರೆ ರೀತಿಗಳ ಯಜ್ಞಗಳನ್ನು ಎರಡು ಮುಖ್ಯ ವಿಭಾಗಗಳನ್ನಾಗಿ ಮಾಡಬಹುದು; ಪ್ರಾಪಂಚಿಕ ಸ್ವತ್ತಿನ ಯಜ್ಞ ಮತ್ತು ದಿವ್ಯಜ್ಞಾನದ ಅನ್ವೇಷಣೆಯ ಯಜ್ಞ. ಕೃಷ್ಣಪ್ರಜ್ಞೆಯಲ್ಲಿರುವವರು ಎಲ್ಲ ಪ್ರಾಪಂಚಿಕ ಸ್ವತ್ತನ್ನು ಭಗವಂತನ ತೃಪ್ತಿಗಾಗಿ ಅರ್ಪಣ ಮಾಡುತ್ತಾರೆ; ಸ್ವಲ್ಪಕಾಲದ ಪ್ರಾಪಂಚಿಕ ಸುಖವನ್ನು ಬಯಸುವವರು ಇಂದ್ರ, ಸೂರ್ಯದೇವ ಮೊದಲಾದ ದೇವತೆಗಳನ್ನು ತೃಪ್ತಿಪಡಿಸಲು ತಮ್ಮ ಪ್ರಾಪಂಚಿಕ ಸ್ವತ್ತನ್ನು ಅರ್ಪಣ ಮಾಡುತ್ತಾರೆ. ನಿರಾಕಾರವಾದಿಗಳಾದ ಇತರರು ನಿರಾಕಾರ ಬ್ರಹ್ಮನ ಅಸ್ತಿತ್ವದಲ್ಲಿ ಒಂದಾಗಿ ತಮ್ಮ ವ್ಯಕ್ತಿತ್ವವನ್ನು ಅರ್ಪಿಸುತ್ತಾರೆ. ದೇವತೆಗಳು ಅಧಿಕಾರಯುತ ಜೀವಿಗಳು. ವಿಶ್ವಕ್ಕೆ ಶಾಖವನ್ನು ಒದಗಿಸುವುದು, ನೀರನ್ನು ಕೊಡುವುದು, ಬೆಳಕನ್ನು ನೀಡುವುದು ಮೊದಲಾದ ಭೌತಿಕ ಕಾರ್ಯಗಳ ನಿರ್ವಹಣೆ ಮತ್ತು ಮೇಲ್ವಿಚಾರಣೆಗಾಗಿ ಭಗವಂತನು ಅವರನ್ನು ನೇಮಿಸಿದ್ದಾನೆ. ಐಹಿಕ ಲಾಭಗಳಲ್ಲಿ ಆಸಕ್ತಿ ಇರುವವರು ವೈದಿಕ ವಿಧಿಗಳಿಗೆ ಅನುಗುಣವಾಗಿ ಹಲವಾರು ಯಜ್ಞಗಳನ್ನು ಮಾಡಿ ದೇವತೆಗಳನ್ನು ಪೂಜಿಸುತ್ತಾರೆ. ಅವರನ್ನು ಬಹ್ವೀಶ್ವರವಾದಿಗಳು ಅಥವಾ ಹಲವು ದೇವರುಗಳಲ್ಲಿ ನಂಬಿಕೆ ಉಳ್ಳವರು ಎಂದು ಕರೆಯುತ್ತಾರೆ. ಇನ್ನು ಕೆಲವರು ಪರಮಸತ್ಯದ ನಿರಾಕಾರ ಲಕ್ಷಣವನ್ನು ಪೂಜಿಸುತ್ತಾರೆ ಮತ್ತು ದೇವತೆಗಳ ರೂಪಗಳನ್ನು ಅಶಾಶ್ವತವೆಂದು ಭಾವಿಸುತ್ತಾರೆ; ಇಂತಹವರು ತಮ್ಮ ವ್ಯಕ್ತಿತ್ವವನ್ನು ಬ್ರಹ್ಮಾಗ್ನಿಯಲ್ಲಿ ಅರ್ಪಣ ಮಾಡುತ್ತಾರೆ; ಈ ರೀತಿಯಲ್ಲಿ ಪರಬ್ರಹ್ಮದ ಅಸ್ತಿತ್ವದಲ್ಲಿ ಒಂದಾಗಿ ಅವರು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಅಂತ್ಯಗೊಳಿಸುತ್ತಾರೆ. ಇಂತಹ ನಿರಾಕಾರವಾದಿಗಳು ಪರಬ್ರಹ್ಮದ ದಿವ್ಯ ಸ್ವಭಾವವನ್ನು ಅರ್ಥಮಾಡಿಕೊಳ್ಳಲು ತಮ್ಮ ಕಾಲವನ್ನು ತಾತ್ತ್ವಿಕ ಚಿಂತನೆಯಲ್ಲಿ ಕಳೆಯುತ್ತಾರೆ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ, ಫಲಾಪೇಕ್ಷೆಯಿಂದ ಕರ್ಮಮಾಡುವವರು ಐಹಿಕ ಭೋಗಕ್ಕಾಗಿ ತಮ್ಮ ಪ್ರಾಪಂಚಿಕ ಸ್ವತ್ತನ್ನು ಅರ್ಪಣ ಮಾಡುತ್ತಾರೆ; ನಿರಾಕಾರವಾದಿಯು ಪರಮೋನ್ನತವಾದದ್ದರ ಅಸ್ತಿತ್ವದಲ್ಲಿ ಲೀನವಾಗಲು ತನ್ನ ಪ್ರಾಪಂಚಿಕ ಉಪಾಧಿಗಳನ್ನು ಅರ್ಪಣ ಮಾಡುತ್ತಾನೆ. ನಿರಾಕಾರವಾದಿಗೆ ಪರಬ್ರಹ್ಮವೇ ಯಜ್ಞದ ಅಗ್ನಿಕುಂಡ ಮತ್ತು ಆತ್ಮವೇ ಬ್ರಹ್ಮಾಗ್ನಿಗೆ ನೀಡುವ ಅರ್ಪಣ. ಆದರೆ ಅರ್ಜುನನಂತಹ ಕೃಷ್ಣಪ್ರಜ್ಞೆ ಇರುವವನು ಕೃಷ್ಣನ ತೃಪ್ತಿಗಾಗಿ ಎಲ್ಲವನ್ನೂ ಅರ್ಪಿಸುತ್ತಾನೆ; ಅವನ ಐಹಿಕ ಸ್ವತ್ತುಗಳು ಮತ್ತು ಆತ್ಮ ಎಲ್ಲವೂ ಕೃಷ್ಣನಿಗಾಗಿ ಯಜ್ಞದಲ್ಲಿ ಅರ್ಪಿತವಾಗುತ್ತವೆ. ಹೀಗೆ ಅವನು ಶ್ರೇಷ್ಠ ಯೋಗಿ. ಆದರೆ ಅವನು ತನ್ನ ವೈಯಕ್ತಿಕ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ.

## ಶ್ಲೋಕ - 26

**ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ |**
**ಶಬ್ದಾದೀನ್ ವಿಷಯಾನನ್ಯ ಇನ್ದ್ರಿಯಾಗ್ನಿಷು ಜುಹ್ವತಿ ||೨೬||**

**ಶ್ರೋತ್ರ ಆದೀನಿ**—ಶ್ರವಣ ಪ್ರಕ್ರಿಯೆಯಂತಹ; **ಇನ್ದ್ರಿಯಾಣಿ**—ಇಂದ್ರಿಯಗಳನ್ನು; **ಅನ್ಯೇ**—

ಇತರರು; **ಸಂಯಮ**—ಸಂಯಮದ; **ಅಗ್ನಿಷು**—ಅಗ್ನಿಗಳಲ್ಲಿ; **ಜುಹ್ವತಿ**—ಅರ್ಪಿಸುತ್ತಾರೆ; **ಶಬ್ದ ಆದೀನ್**—ಶಬ್ದಕಂಪನವೇ ಮೊದಲಾದ; **ವಿಷಯಾನ್**—ವಿಷಯಗಳನ್ನು; **ಅನ್ಯೇ**—ಇತರರು; **ಇನ್ದ್ರಿಯ** —ಇಂದ್ರಿಯಗಳ; **ಅಗ್ನಿಷು**—ಬೆಂಕಿಗಳಲ್ಲಿ; **ಜುಹ್ವತಿ**—ಅರ್ಪಿಸುತ್ತಾರೆ.

## ಅನುವಾದ

**(ಪರಿಶುದ್ಧ ಬ್ರಹ್ಮಚಾರಿಗಳಾದ) ಕೆಲವರು ಶ್ರವಣ ಪ್ರಕ್ರಿಯೆಯನ್ನು ಮತ್ತು ಇಂದ್ರಿಯಗಳನ್ನು ಮನಸ್ಸಿನ ಸಂಯಮದ ಅಗ್ನಿಯಲ್ಲಿ ಅರ್ಪಿಸುತ್ತಾರೆ; (ನಿಯಮಬದ್ಧ ಗೃಹಸ್ಥರಾದ) ಇತರರು ಇಂದ್ರಿಯ ವಿಷಯಗಳನ್ನೂ ಇಂದ್ರಿಯಾಗ್ನಿಯಲ್ಲಿ ಅರ್ಪಿಸುತ್ತಾರೆ.**

## ಭಾವಾರ್ಥ

ಬದುಕಿನ ನಾಲ್ಕು ವಿಭಾಗಗಳಾದ ಬ್ರಹ್ಮಚರ್ಯಾಶ್ರಮ, ವಾನಪ್ರಸ್ಥಾಶ್ರಮ ಮತ್ತು ಸನ್ಯಾಸಾಶ್ರಮಗಳ ಉದ್ದೇಶವು ಎಲ್ಲರೂ ಪರಿಪೂರ್ಣಯೋಗಿಗಳಾಗಬೇಕೆಂಬುದೇ ಆಗಿದೆ. ಮನುಷ್ಯ ಜನ್ಮದ ಉದ್ದೇಶ ಪ್ರಾಣಿಗಳಂತೆ ಇಂದ್ರಿಯಭೋಗವಲ್ಲ; ಆದುದರಿಂದ ಮನುಷ್ಯನು ಆಧ್ಯಾತ್ಮಿಕ ಜೀವನದಲ್ಲಿ ಪರಿಪೂರ್ಣನಾಗುವಂತೆ ನಾಲ್ಕು ಆಶ್ರಮಗಳನ್ನು ಏರ್ಪಡಿಸಿದೆ. ಒಬ್ಬ ಯೋಗ್ಯ ಗುರುವಿನ ಮಾರ್ಗದರ್ಶನದಲ್ಲಿರುವ ಬ್ರಹ್ಮಚಾರಿಗಳು ಇಂದ್ರಿಯಸುಖದಿಂದ ದೂರವಾಗಿದ್ದು ಮನಸ್ಸನ್ನು ನಿಯಂತ್ರಣದಲ್ಲಿಟ್ಟುಕೊಳ್ಳುತ್ತಾರೆ. ಬ್ರಹ್ಮಚಾರಿಯು ಕೃಷ್ಣಪ್ರಜ್ಞೆಗೆ ಸಂಬಂಧಿಸಿದ ಮಾತುಗಳನ್ನು ಮಾತ್ರ ಕೇಳುತ್ತಾನೆ; ತಿಳುವಳಿಕೆಗೆ ಮೂಲತತ್ವವು ಶ್ರವಣ. ಆದುದರಿಂದ ಶುದ್ಧ ಬ್ರಹ್ಮಚಾರಿಯು **ಹರೇರ್‌ನಾಮಾನುಕೀರ್ತನಮ್** ಅಥವಾ ನಾಮಸಂಕೀರ್ತನೆ ಮತ್ತು ಭಗವಂತನ ಮಹಿಮೆಯನ್ನು ಕೇಳುವುದು ಇವುಗಳಲ್ಲಿಯೇ ಸಂಪೂರ್ಣವಾಗಿ ತೊಡಗುತ್ತಾನೆ. ಅವನು ಪ್ರಾಪಂಚಿಕ ಶಬ್ದಗಳನ್ನು ಆಲಿಸದೆ ಹರೇಕೃಷ್ಣ, ಹರೇಕೃಷ್ಣ ಎಂಬ ಆಧ್ಯಾತ್ಮಿಕ ಶಬ್ದವನ್ನು ಕೇಳುವುದರಲ್ಲಿ ತೊಡಗುತ್ತಾನೆ. ಗೃಹಸ್ಥರಿಗೆ ಇಂದ್ರಿಯಸುಖಕ್ಕಾಗಿ ಸ್ವಲ್ಪ ಅವಕಾಶವನ್ನು ನೀಡಲಾಗಿದೆ. ಅವರು ಇದನ್ನು ಸಂಯಮದಿಂದ ಬಳಸಿಕೊಳ್ಳುತ್ತಾರೆ. ಕಾಮಜೀವನ, ಮದ್ಯಪಾನ ಮತ್ತು ಮಾಂಸಾಹಾರ ಸೇವನೆ ಇವು ಮನುಷ್ಯ ಸಮಾಜದ ಸಾಮಾನ್ಯ ಪ್ರವೃತ್ತಿಗಳು. ಆದರೆ ಸಂಯಮಶೀಲನಾದ ಗೃಹಸ್ಥನು ಕಾಮಜೀವನ ಮತ್ತು ಇತರ ಇಂದ್ರಿಯಸುಖದಲ್ಲಿ ನಿಯಂತ್ರಣವಿಲ್ಲದೆ ತೊಡಗುವುದಿಲ್ಲ. ನಿಯಂತ್ರಿತ ಕಾಮಜೀವನಕ್ಕೆ ಮದುವೆಯೇ ಮಾರ್ಗ; ಆದುದರಿಂದಲೇ ಧಾರ್ಮಿಕ ತತ್ವಗಳನ್ನು ಆಧರಿಸಿದ ವಿವಾಹವು ಎಲ್ಲ ನಾಗರಿಕ ಸಮಾಜಗಳಲ್ಲಿ ಒಪ್ಪಿಗೆಯಾಗಿದೆ. ಇಂತಹ ನಿಯಂತ್ರಿತವಾದ ಅನಾಸಕ್ತ ಕಾಮಜೀವನವು ಒಂದು ಬಗೆಯ ಯಜ್ಞವೇ. ಏಕೆಂದರೆ ಸಂಯಮಶೀಲನಾದ ಗೃಹಸ್ಥನು ತನ್ನ ಇಂದ್ರಿಯಸುಖದ ಸಾಮಾನ್ಯ ಬಯಕೆಯನ್ನು ಉನ್ನತವಾದ ಆಧ್ಯಾತ್ಮಿಕ ಬದುಕಿಗಾಗಿ ತ್ಯಾಗಮಾಡುತ್ತಾನೆ.

## ಶ್ಲೋಕ - 27

**ಸರ್ವಾಣೀನ್ದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ |**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ||೨೭||**

**ಸರ್ವಾಣಿ**—ಎಲ್ಲ; **ಇನ್ದ್ರಿಯ**—ಇಂದ್ರಿಯಗಳ; **ಕರ್ಮಾಣಿ**—ಕ್ರಿಯೆಗಳನ್ನು; **ಪ್ರಾಣಕರ್ಮಾಣಿ**—

ಪ್ರಾಣವಾಯುವಿನ ಕ್ರಿಯೆಗಳನ್ನು; **ಚ**—ಕೂಡ; **ಅಪರೇ**—ಇತರರು; **ಆತ್ಮ ಸಂಯಮ**—ಮನೋನಿಗ್ರಹದ; **ಯೋಗ**—ಸಂಬಂಧಿಸುವ ಪ್ರಕ್ರಿಯೆಯ; **ಅಗ್ನೌ**—ಅಗ್ನಿಯಲ್ಲಿ; **ಜುಹ್ವತಿ**—ಅರ್ಪಿಸುತ್ತಾರೆ; **ಜ್ಞಾನದೀಪಿತೇ**—ಆತ್ಮ ಸಾಕ್ಷಾತ್ಕಾರದ ಒತ್ತಾಸೆಯಿಂದಾಗಿ.

## ಅನುವಾದ

**ಕೆಲವರು ಮನಸ್ಸನ್ನೂ ಇಂದ್ರಿಯಗಳನ್ನೂ ನಿಯಂತ್ರಿಸಿ ಆತ್ಮಸಾಕ್ಷಾತ್ಕಾರವನ್ನು ಸಾಧಿಸಲು ಬಯಸುತ್ತಾರೆ. ಅಂತಹವರು ಎಲ್ಲ ಇಂದ್ರಿಯಗಳ ಮತ್ತು ಪ್ರಾಣವಾಯುವಿನ ಕಾರ್ಯಗಳನ್ನು ಆತ್ಮಸಂಯಮವೆಂಬ ಅಗ್ನಿಗೆ ಅರ್ಪಿಸುತ್ತಾರೆ.**

## ಭಾವಾರ್ಥ

ಪತಂಜಲಿಯ ಯೋಗಪದ್ಧತಿಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಪತಂಜಲಿಯ ಯೋಗಸೂತ್ರದಲ್ಲಿ ಆತ್ಮವನ್ನು **ಪ್ರತ್ಯಗಾತ್ಮಾ** ಮತ್ತು **ಪರಾಗಾತ್ಮಾ** ಎಂದು ಕರೆದಿದೆ. ಆತ್ಮಕ್ಕೆ ಇಂದ್ರಿಯಸುಖದ ಮೋಹವಿದ್ದಾಗ ಅದಕ್ಕೆ **ಪರಾಗಾತ್ಮಾ** ಎಂದು ಹೆಸರು. ಅದೇ ಆತ್ಮವು ಇಂದ್ರಿಯ ಸುಖದಲ್ಲಿ ನಿರಾಸಕ್ತಿಯನ್ನು ಬೆಳೆಸಿಕೊಂಡಾಗ ಅದಕ್ಕೆ **ಪ್ರತ್ಯಗಾತ್ಮಾ** ಎಂದು ಹೆಸರು. ಆತ್ಮವು ದೇಹದೊಳಗೆ ಕ್ರಿಯಾಶೀಲವಾಗಿರುವ ಹತ್ತು ವಿಧದ ವಾಯುವಿನ ಕ್ರಿಯೆಗಳಿಗೆ ಒಳಪಟ್ಟಿದೆ. ಇದನ್ನು ಶ್ವಾಸೋಚ್ಛ್ವಾಸದ ವ್ಯವಸ್ಥೆಯಲ್ಲಿ ಗ್ರಹಿಸಬಹುದು. ದೇಹದೊಳಗಿನ ವಾಯುವಿನ ಎಲ್ಲ ಕ್ರಿಯೆಗಳು ಅಂತಿಮವಾಗಿ ಆತ್ಮದ ಐಹಿಕ ಆಸಕ್ತಿಯನ್ನು ಬಿಡಿಸಲು ನೆರವಾಗಬೇಕು. ಇದು ಸಾಧ್ಯವಾಗುವಂತೆ ದೇಹದ ವಾಯುವನ್ನು ನಿಯಂತ್ರಿಸುವುದು ಹೇಗೆ ಎನ್ನುವುದನ್ನು ಪತಂಜಲಿಯ ಯೋಗಪದ್ಧತಿಯು ಬೋಧಿಸುತ್ತದೆ. ಈ ಯೋಗ ಪದ್ಧತಿಯಂತೆ **ಪ್ರತ್ಯಗಾತ್ಮ**ವೇ ಅಂತಿಮಗುರಿ. ಈ **ಪ್ರತ್ಯಗಾತ್ಮ**ವನ್ನು ಭೌತಿಕ ಕಾರ್ಯಗಳಿಂದ ಹಿಂದಕ್ಕೆ ತೆಗೆದುಕೊಳ್ಳಲಾಗುವುದು. ಇಂದ್ರಿಯಗಳು ಇಂದ್ರಿಯ ವಿಷಯಗಳೊಂದಿಗೆ ಕಾರ್ಯ ಮಾಡುತ್ತವೆ. ಉದಾಹರಣೆಗೆ ಕಿವಿಯು ಕೇಳುತ್ತದೆ, ಕಣ್ಣು ನೋಡುತ್ತದೆ, ಮೂಗು ವಾಸನೆಯನ್ನು ಗ್ರಹಿಸುತ್ತದೆ, ನಾಲಿಗೆಯು ರುಚಿಯನ್ನು ಗ್ರಹಿಸುತ್ತದೆ, ಕೈಯು ಸ್ಪರ್ಶಿಸುತ್ತದೆ. ಹೀಗೆ ಎಲ್ಲ ಇಂದ್ರಿಯಗಳು ಆತ್ಮದ ಹೊರಗಿನ ಕಾರ್ಯಗಳಲ್ಲಿ ತೊಡಗಿರುತ್ತವೆ. ಇವನ್ನು ಪ್ರಾಣವಾಯುವಿನ ಕ್ರಿಯೆಗಳು ಎಂದು ಕರೆಯುತ್ತಾರೆ. ಅಪಾನವಾಯುವು ಕೆಳಗಡೆ ಹೋಗುತ್ತದೆ. ವ್ಯಾನವಾಯುವು ಕುಗ್ಗುತ್ತದೆ ಮತ್ತು ಹಿಗ್ಗುತ್ತದೆ. ಸಮಾನವಾಯುವು ಸಮತೋಲನವನ್ನು ಕಾಪಾಡುತ್ತದೆ. ಉದಾನವಾಯುವು ಮೇಲಕ್ಕೆ ಹೋಗುತ್ತದೆ. ಮನುಷ್ಯನಿಗೆ ಜ್ಞಾನೋದಯವಾದ ಅನಂತರ ಇವೆಲ್ಲವನ್ನೂ ಅವನು ಆತ್ಮಸಾಕ್ಷಾತ್ಕಾರದ ಅನ್ವೇಷಣೆಗಾಗಿ ಬಳಸುತ್ತಾನೆ.

## ಶ್ಲೋಕ - 28

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥**

**ದ್ರವ್ಯ ಯಜ್ಞಾಃ**—ತನ್ನ ಸ್ವತ್ತನ್ನು ತ್ಯಜಿಸುವುದು; **ತಪಃ ಯಜ್ಞಾಃ**—ತಪಸ್ಸಿನ ಯಜ್ಞಗಳು; **ಯೋಗ**

**ಯಜ್ಞಾ**—ಅಷ್ಟಾಂಗಯೋಗದ ಯಜ್ಞಗಳು; **ತಥಾ**—ಹೀಗೆ; **ಅಪರೇ**—ಇತರರು; **ಸ್ವಾಧ್ಯಾಯ**—ವೇದಾಧ್ಯಯನದ ಯಜ್ಞ; **ಜ್ಞಾನ ಯಜ್ಞಾಃ**—ದಿವ್ಯಜ್ಞಾನದ ಪ್ರಗತಿಯ ಯಜ್ಞಗಳು; **ಚ**—ಕೂಡ; **ಯತಯಃ**—ಜ್ಞಾನೋದಯ ಹೊಂದಿರುವ ವ್ಯಕ್ತಿಗಳು; **ಸಂಶಿತ ವ್ರತಾಃ**—ಕಟ್ಟುನಿಟ್ಟಿನ ವ್ರತಗಳನ್ನು ಆಚರಿಸುವವರು.

## ಅನುವಾದ

**ಕಟ್ಟುನಿಟ್ಟಾದ ವ್ರತಗಳನ್ನು ಸ್ವೀಕರಿಸಿ ಕೆಲವರು ತಮ್ಮ ಸ್ವತ್ತನ್ನು ಯಜ್ಞಮಾಡಿ ಜ್ಞಾನೋದಯವನ್ನು ಪಡೆಯುತ್ತಾರೆ. ಕೆಲವರು ತಪಸ್ಸನ್ನು ಮಾಡುವುದರಿಂದ, ಕೆಲವರು ಯೋಗಯಜ್ಞದಿಂದ ಮತ್ತೆ ಕೆಲವರು ವೇದಗಳನ್ನು ಅಭ್ಯಾಸಮಾಡಿ ಜ್ಞಾನಯಜ್ಞವನ್ನು ಮಾಡುವುದರಿಂದ ಜ್ಞಾನೋದಯವನ್ನು ಪಡೆಯುತ್ತಾರೆ.**

## ಭಾವಾರ್ಥ

ಈ ಯಜ್ಞಗಳನ್ನು ಬೇರೆ ಬೇರೆ ವಿಭಾಗಗಳಲ್ಲಿ ವಿಂಗಡಿಸಬಹುದು. ತಮ್ಮ ಆಸ್ತಿಯನ್ನು ಹಲವು ಬಗೆಯ ದಾನಗಳಲ್ಲಿ ಕೆಲವರು ವಿನಿಯೋಗಿಸುತ್ತಾರೆ. ಭಾರತದಲ್ಲಿ ಶ್ರೀಮಂತರಾದ ವ್ಯಾಪಾರಿಗಳ ವರ್ಗವು ಅಥವಾ ರಾಜವರ್ಗವು ಧರ್ಮಶಾಲೆ, ಅನ್ನಕ್ಷೇತ್ರ, ಅತಿಥಿಶಾಲೆ, ಅನಾಥಾಲಯ, ಮತ್ತು ವಿದ್ಯಾಪೀಠಗಳಂತಹ ಅನೇಕ ಬಗೆಗಳ ಧರ್ಮಸಂಸ್ಥೆಗಳನ್ನು ತೆರೆಯುತ್ತದೆ. ಇತರ ದೇಶಗಳಲ್ಲಿ ಸಹ ಬಡವರಿಗೆ ಆಹಾರ, ಶಿಕ್ಷಣ ಮತ್ತು ಔಷಧೋಪಚಾರಗಳನ್ನು ಉಚಿತವಾಗಿ ಒದಗಿಸಲು ಆಸ್ಪತ್ರೆಗಳು, ವೃದ್ಧಾಶ್ರಮಗಳು ಮತ್ತು ಇಂತಹ ಧಾರ್ಮಿಕ ಪ್ರತಿಷ್ಠಾನಗಳು ಇವೆ. ಈ ಎಲ್ಲ ಧರ್ಮಕಾರ್ಯಗಳಿಗೆ ದ್ರವ್ಯಮಯ ಯಜ್ಞ ಎಂದು ಹೆಸರು. ಬದುಕಿನಲ್ಲಿ ಉನ್ನತಿಗಾಗಿ ಅಥವಾ ಸ್ವರ್ಗಪ್ರಾಪ್ತಿಗಾಗಿ ಹಲವರು ಚಂದ್ರಾಯಣ ಮತ್ತು ಚಾತುರ್ಮಾಸ್ಯಗಳಂತಹ ಹಲವು ಬಗೆಯ ಕಠೋರ ವ್ರತಗಳನ್ನು ತಾವಾಗಿಯೇ ಸ್ವೀಕರಿಸುತ್ತಾರೆ. ಈ ಪ್ರಕ್ರಿಯೆಗಳಿಗಾಗಿ ಕೆಲವು ಬಹು ಕಟ್ಟುನಿಟ್ಟಾದ ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಉದಾಹರಣೆಗೆ ಚಾತುರ್ಮಾಸ್ಯವನ್ನು ಕೈಗೊಂಡವನು ವರ್ಷದಲ್ಲಿ ನಾಲ್ಕು ತಿಂಗಳಕಾಲ (ಜುಲೈನಿಂದ ಅಕ್ಟೋಬರ್‌ವರೆಗೆ) ಕ್ಷೌರಮಾಡಿಸಿಕೊಳ್ಳುವುದಿಲ್ಲ, ಕೆಲವು ಬಗೆಯ ಆಹಾರವನ್ನು ತಿನ್ನುವುದಿಲ್ಲ, ದಿನಕ್ಕೆ ಒಂದು ಸಲಕ್ಕಿಂತ ಹೆಚ್ಚಾಗಿ ಊಟಮಾಡುವುದಿಲ್ಲ ಮತ್ತು ಮನೆಯನ್ನು ಬಿಟ್ಟು ಹೊರಕ್ಕೆ ಹೋಗುವುದಿಲ್ಲ. ಹೀಗೆ ಬದುಕಿನ ಸುಖಗಳನ್ನು ತ್ಯಾಗಮಾಡುವುದಕ್ಕೆ ತಪೋಮಯ ಯಜ್ಞ ಎಂದು ಹೆಸರು. ಪರಬ್ರಹ್ಮದಲ್ಲಿ ಲೀನವಾಗುವುದಕ್ಕಾಗಿ ಪತಂಜಲಿ ಯೋಗಸೂತ್ರವನ್ನು ಅಥವಾ ಹಠಯೋಗವನ್ನು ಆಚರಿಸುವವರಿದ್ದಾರೆ. ವಿಶಿಷ್ಟರೀತಿಯ ಸಿದ್ಧಿಗಾಗಿ ಅಷ್ಟಾಂಗಯೋಗದಲ್ಲಿ ತೊಡಗುವವರೂ ಇದ್ದಾರೆ. ಕೆಲವರು ಎಲ್ಲ ಪವಿತ್ರ ಸ್ಥಳಗಳಿಗೆ ಯಾತ್ರೆ ಹೋಗುತ್ತಾರೆ. ಈ ಎಲ್ಲ ಆಚರಣೆಗಳಿಗೆ ಯೋಗಯಜ್ಞ ಎಂದು ಹೆಸರು; ಈ ರೀತಿ ಜನರು ಜಗತ್ತಿನಲ್ಲಿ ಒಂದು ನಿರ್ದಿಷ್ಟ ಬಗೆಯ ಪರಿಪೂರ್ಣತೆಗಾಗಿ ಯಜ್ಞವನ್ನು ಆಚರಿಸುತ್ತಾರೆ. ವಿವಿಧ ವೇದಸಾಹಿತ್ಯದ, ವಿಶೇಷವಾಗಿ ಉಪನಿಷತ್ತು, ವೇದಾಂತಸೂತ್ರ ಅಥವಾ ಸಾಂಖ್ಯ ದರ್ಶನದ ಅಧ್ಯಯನ ಮಾಡುವವರಿದ್ದಾರೆ. ಇವೆಲ್ಲಕ್ಕೂ ಸ್ವಾಧ್ಯಾಯ ಯಜ್ಞ ಎಂದು ಹೆಸರು. ಈ ಯೋಗಿಗಳೆಲ್ಲರೂ ವಿವಿಧ ಯಜ್ಞಗಳಲ್ಲಿ ಶ್ರದ್ಧೆಯಿಂದ ತೊಡಗುತ್ತಾರೆ ಮತ್ತು ಬದುಕಿನಲ್ಲಿ ಇನ್ನೂ ಉತ್ತಮ ಸ್ಥಿತಿಯನ್ನು ಬಯಸುತ್ತಾರೆ. ಆದರೆ ಕೃಷ್ಣಪ್ರಜ್ಞೆಯು ಇವೆಲ್ಲಕ್ಕಿಂತ ಭಿನ್ನವಾದದ್ದು. ಏಕೆಂದರೆ ಅದು ಭಗವಂತನ

ನೇರಸೇವೆಯಾಗಿದೆ. ಮೇಲೆ ಹೇಳಿದ ಯಾವುದೇ ಬಗೆಯ ಯಜ್ಞದಿಂದ ಕೃಷ್ಣಪ್ರಜ್ಞೆಯನ್ನು ಪಡೆಯಲು ಸಾಧ್ಯವಿಲ್ಲ. ಆದರೆ ಭಗವಂತನ ಮತ್ತು ಅವನ ಶುದ್ಧಭಕ್ತರ ಕೃಪೆಯಿಂದ ಅದನ್ನು ಪಡೆಯಬಹುದು. ಆದ್ದರಿಂದ ಕೃಷ್ಣಪ್ರಜ್ಞೆಯು ದಿವ್ಯವಾದುದು.

## ಶ್ಲೋಕ - 29

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇऽಪಾನಂ ತಥಾಪರೇ |**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ |**
**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ||೨೯||**

**ಅಪಾನೇ**—ಅಧೋವಾಯುವಿನಲ್ಲಿ; **ಜುಹ್ವತಿ**—ಅರ್ಪಿಸುತ್ತಾರೆ; **ಪ್ರಾಣಮ್**—ಬಾಹ್ಯವಾಗಿ ವರ್ತಿಸುವ ವಾಯುವನ್ನು; **ಪ್ರಾಣೇ**—ಹೊರಗೆ ಹೋಗುವ ವಾಯುವಿನಲ್ಲಿ; **ಅಪಾನಮ್**—ಅಧೋವಾಯುವನ್ನು; **ತಥಾ**—ಅದರಂತೆಯೇ; **ಅಪರೇ**—ಇತರರು; **ಪ್ರಾಣ**—ಹೊರಗೆ ಹೋಗುವ ವಾಯುವಿನ; **ಅಪಾನ**—ಅಧೋ ವಾಯುವಿನ; **ಗತೀ**—ಚಲನೆಯನ್ನು; **ರುದ್ಧ್ವಾ**—ತಡೆಗಟ್ಟಿ; **ಪ್ರಾಣ ಆಯಾಮ**—ಸಕಲ ಶ್ವಾಸನಿರೋಧದಿಂದ ಉಂಟಾಗುವ ಸಮಾಧಿಯಲ್ಲಿ; **ಪರಾಯಣಾಃ**—ಒಲವುಳ್ಳವರು; **ಅಪರೇ**—ಇತರರು; **ನಿಯತ**—ನಿಯಂತ್ರಿತವಾದ; **ಆಹಾರಾಃ**—ತಿನ್ನುವಿಕೆಯುಳ್ಳ; **ಪ್ರಾಣಾನ್**—ಹೊರಗೆ ಹೋಗುವ ವಾಯುವನ್ನು; **ಪ್ರಾಣೇಷು**—ಹೊರಗೆ ಹೋಗುವ ವಾಯುವಿನಲ್ಲಿ; **ಜುಹ್ವತಿ**—ಅರ್ಪಿಸುತ್ತಾರೆ.

## ಅನುವಾದ

**ಪ್ರಾಣಾಯಾಮದ ಪ್ರಕ್ರಿಯೆಯನ್ನು ಅನುಸರಿಸುವ ಇನ್ನೂ ಕೆಲವರು ಹೊರಹೋಗುವ ವಾಯುವಿನ ಚಲನೆಯನ್ನು ಒಳಕ್ಕೆ ಬರುವ ವಾಯುವಿನ ಚಲನೆಗೆ ಮತ್ತು ಒಳಕ್ಕೆ ಬಿಡುವ ಉಸಿರಿನ ಚಲನೆಯನ್ನು ಹೊರಕ್ಕೆ ಹೋಗುವ ವಾಯುವಿನ ಚಲನೆಗೆ ಅರ್ಪಿಸಿ ಕಡೆಗೆ ಎಲ್ಲ ಉಸಿರಾಟವನ್ನು ನಿಲ್ಲಿಸಿ ಸಮಾಧಿಸ್ಥರಾಗುತ್ತಾರೆ. ಇತರರು ಆಹಾರಸೇವನೆಯನ್ನು ನಿಯಂತ್ರಿಸಿ ಹೊರಹೋಗುವ ಉಸಿರನ್ನೇ ಯಜ್ಞವಾಗಿ ಸಮರ್ಪಿಸುತ್ತಾರೆ.**

## ಭಾವಾರ್ಥ

ಉಸಿರಾಟದ ಪ್ರಕ್ರಿಯೆಯನ್ನು ನಿಯಂತ್ರಿಸುವ ಪದ್ಧತಿಗೆ ಪ್ರಾಣಾಯಾಮ ಎಂದು ಹೆಸರು. ಪ್ರಾರಂಭದಲ್ಲಿ ಇದನ್ನು ಹಠಯೋಗ ಪದ್ಧತಿಯಲ್ಲಿ ಬೇರೆಬೇರೆ ಆಸನಗಳ ಮೂಲಕ ಅಭ್ಯಾಸಮಾಡುತ್ತಾರೆ. ಇಂದ್ರಿಯಗಳನ್ನು ನಿಯಂತ್ರಿಸಿ ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಮುಂದುವರಿಯಲು ಈ ಎಲ್ಲ ಪದ್ಧತಿಗಳನ್ನು ಸೂಚಿಸಲಾಗಿದೆ. ಈ ಪದ್ಧತಿಯಲ್ಲಿ ದೇಹದೊಳಗಿನ ವಾಯುಗಳ ಚಲನೆಯ ದಿಕ್ಕನ್ನು ಬದಲಾಯಿಸುವಂತೆ ಅವನ್ನು ನಿಯಂತ್ರಿಸುವುದೂ ಸೇರಿದೆ. ಅಪಾನವಾಯುವು ಕೆಳಕ್ಕೆ ಹೋಗುತ್ತದೆ. ಪ್ರಾಣವಾಯುವು ಮೇಲಕ್ಕೆ ಹೋಗುತ್ತದೆ. ಈ ವಾಯು ಪ್ರವಾಹಗಳು ಪೂರಕ ಅಥವಾ ಸಮತೋಲನದಲ್ಲಿ ಒಂದಕ್ಕೊಂದು ಸರಿಹೋಗುವವರೆಗೆ ಪ್ರಾಣಾಯಾಮ ಯೋಗಿಯು ಸಹಜವಾದ ರೀತಿಗೆ ವಿರುದ್ಧವಾದ ರೀತಿಯಲ್ಲಿ ಉಸಿರಾಡುವುದನ್ನು

ಅಭ್ಯಾಸಮಾಡುತ್ತಾನೆ. ಉಚ್ಛ್ವಾಸವನ್ನು ನಿಶ್ವಾಸದಲ್ಲಿ ಸೇರಿಸುವುದು ರೇಚಕ. ಎರಡು ವಾಯುಪ್ರವಾಹಗಳನ್ನೂ ಸಂಪೂರ್ಣವಾಗಿ ನಿಲ್ಲಿಸಿದಾಗ ಆ ಮನುಷ್ಯನು ಕುಂಭಕ ಯೋಗದಲ್ಲಿದ್ದಾನೆ ಎಂದು ಹೇಳುತ್ತಾರೆ. ಕುಂಭಕ ಯೋಗವನ್ನು ಅಭ್ಯಾಸ ಮಾಡಿದ ಮನುಷ್ಯನು ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಪರಿಪೂರ್ಣತೆಯನ್ನು ಸಾಧಿಸಲು ಆಯುಸ್ಸನ್ನು ಹೆಚ್ಚಿಸಿಕೊಳ್ಳಬಹುದು. ವಿವೇಕಿಯಾದ ಯೋಗಿಗೆ ಮುಂದಿನ ಜನ್ಮದವರೆಗೆ ಕಾಯದೆ ಒಂದು ಜನ್ಮದಲ್ಲಿಯೇ ಪರಿಪೂರ್ಣತೆಯನ್ನು ಕೈಗೂಡಿಸಿಕೊಳ್ಳುವುದರಲ್ಲಿ ಆಸಕ್ತಿ. ಕುಂಭಕ ಯೋಗವನ್ನು ಅಭ್ಯಾಸಮಾಡುವ ಮನುಷ್ಯನು ತನ್ನ ಆಯುಸ್ಸನ್ನು ಹೆಚ್ಚಿಸಿಕೊಳ್ಳಬಹುದು. ಆದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಭಗವಂತನ ದಿವ್ಯ ಪ್ರೇಮಪೂರ್ವಕ ಸೇವೆಯಲ್ಲಿ ಸದಾ ನಿರತನಾಗಿರುವುದರಿಂದ ಇಂದ್ರಿಯ ನಿಯಂತ್ರಣ ಮಾಡಬಲ್ಲ. ಸದಾ ಕೃಷ್ಣಸೇವೆಯಲ್ಲಿ ಮಗ್ನನಾಗಿರುವುದರಿಂದ ಅವನ ಇಂದ್ರಿಯಗಳು ಬೇರೆ ರೀತಿಯ ಕ್ರಿಯೆಯಲ್ಲಿ ತೊಡಗುವ ಸಾಧ್ಯತೆಯೇ ಇಲ್ಲ. ಆದುದರಿಂದ ಬದುಕಿನ ಅಂತ್ಯದಲ್ಲಿ ಆತನು ಸಹಜವಾಗಿ ಶ್ರೀಕೃಷ್ಣನ ದಿವ್ಯ ನೆಲೆಗೆ ಏರಿಬಿಡುತ್ತಾನೆ; ಆದುದರಿಂದ ಅವನು ತನ್ನ ಆಯುಸ್ಸನ್ನು ಹೆಚ್ಚು ಮಾಡಿಕೊಳ್ಳಲು ಪ್ರಯತ್ನವನ್ನೇ ಮಾಡುವುದಿಲ್ಲ. ಭಗವದ್ಗೀತೆಯಲ್ಲಿ (14.26) ಹೇಳಿರುವಂತೆ ಅವನನ್ನು ತಕ್ಷಣವೇ ಮುಕ್ತಿಯ ಹಂತಕ್ಕೆ ಏರಿಸಲಾಗುತ್ತದೆ—

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ||**

"ಭಗವಂತನ ಪರಿಶುದ್ಧ ಭಕ್ತಿಸೇವೆಯಲ್ಲಿ ನಿರತನಾದವನು ಐಹಿಕ ಪ್ರಕೃತಿಯ ಗುಣಗಳನ್ನು ಮೀರುತ್ತಾನೆ ಮತ್ತು ಕೂಡಲೇ ಆಧ್ಯಾತ್ಮಿಕ ನೆಲೆಗೆ ಏರುತ್ತಾನೆ." ಕೃಷ್ಣಪ್ರಜ್ಞೆ ಇರುವ ಮನುಷ್ಯನು ಆಧ್ಯಾತ್ಮಿಕ ಮಟ್ಟದಿಂದ ಪ್ರಾರಂಭಿಸುತ್ತಾನೆ ಮತ್ತು ಸದಾ ಆ ಪ್ರಜ್ಞೆಯಲ್ಲಿ ಇರುತ್ತಾನೆ. ಆದುದರಿಂದ ಪತನ ಎಂಬುವುದಿಲ್ಲ. ಕಡೆಗೆ ಅವನು ವಿಳಂಬವಿಲ್ಲದೆ ಭಗವಂತನ ಧಾಮವನ್ನು ಪ್ರವೇಶಿಸುತ್ತಾನೆ. ಮನುಷ್ಯನು ಕೃಷ್ಣಪ್ರಸಾದವನ್ನಷ್ಟನ್ನೇ ಸೇವಿಸುತ್ತಿದ್ದರೆ ತಿನ್ನುವ ಆಹಾರದ ಪ್ರಮಾಣ ಸಹಜವಾಗಿಯೇ ಕಡಮೆಯಾಗುತ್ತದೆ. ಆಹಾರಸೇವನೆಯನ್ನು ಕಡಮೆಮಾಡುವುದು ಇಂದ್ರಿಯ ನಿಯಂತ್ರಣಕ್ಕೆ ಬಹಳ ಸಹಕಾರಿ. ಇಂದ್ರಿಯ ನಿಯಂತ್ರಣವಿಲ್ಲದೆ ಐಹಿಕ ತೊಡಕುಗಳಿಂದ ಬಿಡುಗಡೆಯಾಗುವ ಸಾಧ್ಯತೆಯೇ ಇಲ್ಲ.

## ಶ್ಲೋಕ - 30

**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ |**
**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ||೩೦||**

**ಸರ್ವೇ**—ಎಲ್ಲರೂ; **ಅಪಿ**—ಸ್ಪಷ್ಟವಾಗಿ ಭಿನ್ನವಾಗಿದ್ದರೂ; **ಏತೇ**—ಇವರು; **ಯಜ್ಞವಿದಃ**—ಯಜ್ಞಾಚರಣೆಯ ಉದ್ದೇಶದೊಂದಿಗೆ ಪರಿಶ್ರಮವುಳ್ಳ; **ಯಜ್ಞ ಕ್ಷಪಿತ**—ಅಂತಹ ಯಜ್ಞಾಚರಣೆಗಳಿಂದ ಶುದ್ಧವಾದ; **ಕಲ್ಮಷಾಃ**—ಪಾಪಪೂರ್ಣ ಪ್ರತಿಕ್ರಿಯೆಗಳುಳ್ಳವರಾಗಿ; **ಯಜ್ಞ ಶಿಷ್ಟ**—ಅಂತಹ ಯಜ್ಞಾಚರಣೆಗಳ ಫಲವಾದ; **ಅಮೃತ ಭುಜಃ**—ಅಮೃತದ ರುಚಿನೋಡಿದವರಾಗಿ; **ಯಾನ್ತಿ**—ಸೇರುತ್ತಾರೆ; **ಬ್ರಹ್ಮ**—ಪರಮ; **ಸನಾತನಮ್**—ಶಾಶ್ವತ ವಾತಾವರಣವನ್ನು.

## ಅನುವಾದ

**ಯಜ್ಞದ ಅರ್ಥವನ್ನು ಬಲ್ಲ ಇವರೆಲ್ಲರೂ ಪಾಪವನ್ನು ಕಳೆದುಕೊಂಡು ನಿರ್ಮಲರಾಗುತ್ತಾರೆ ಮತ್ತು ಯಜ್ಞಫಲದ ಅಮೃತವನ್ನು ಸವಿದು, ಪರಮ ನಿತ್ಯ ಆವರಣದತ್ತ ಮುನ್ನಡೆಯುತ್ತಾರೆ.**

## ಭಾವಾರ್ಥ

ಬೇರೆಬೇರೆ ವಿಧವಾದ ಯಜ್ಞಗಳ (ದ್ರವ್ಯಮಯ ಯಜ್ಞ, ಸ್ವಾಧ್ಯಾಯ ಯಜ್ಞ ಮತ್ತು ಯೋಗಯಜ್ಞ) ವಿವರಣೆಯಿಂದ ಇವೆಲ್ಲವುಗಳ ಗುರಿಗಿ ಒಂದೇ, ಅದು ಇಂದ್ರಿಯ ನಿಯಂತ್ರಣ ಎಂದು ಅರ್ಥವಾಗುತ್ತದೆ. ಐಹಿಕ ಅಸ್ತಿತ್ವದ ಮೂಲ ಕಾರಣ ಇಂದ್ರಿಯ ತೃಪ್ತಿಯೇ; ಆದುದರಿಂದ ಇಂದ್ರಿಯತೃಪ್ತಿಯಿಂದ ದೂರವಾದ ವೇದಿಕೆಯಲ್ಲಿ ನೆಲೆಸದೆ ಹೋದರೆ, ಸಂಪೂರ್ಣ ಜ್ಞಾನ, ಸಂಪೂರ್ಣ ಆನಂದ ಮತ್ತು ಸಂಪೂರ್ಣ ಬದುಕು ಇವುಗಳ ಶಾಶ್ವತ ನೆಲೆಗೆ ಏರಲು ಸಾಧ್ಯವೇ ಇಲ್ಲ. ಈ ಹಂತವು ಶಾಶ್ವತ ವಾತಾವರಣದ ಅಥವಾ ಬ್ರಹ್ಮನ್ ವಾತಾವರಣದ ನೆಲೆ. ಐಹಿಕ ಅಸ್ತಿತ್ವದ ಪಾಪ ಪ್ರತಿಕ್ರಿಯೆಗಳನ್ನೆಲ್ಲ ಕಳೆದುಕೊಂಡು ಶುಚಿಯಾಗಲು ಮೇಲಿನ ಯಜ್ಞಗಳೆಲ್ಲ ನೆರವಾಗುತ್ತವೆ. ಬದುಕಿನಲ್ಲಿ ಹೀಗೆ ಮುನ್ನಡೆದ ಮನುಷ್ಯನು ಈ ಜನ್ಮದಲ್ಲಿ ಸುಖಿಯೂ ಶ್ರೀಮಂತನೂ ಆಗುವುದು ಮಾತ್ರವಲ್ಲ, ಕಡೆಯಲ್ಲಿ ಆತನು ಭಗವಂತನ ಶಾಶ್ವತ ಸಾಮ್ರಾಜ್ಯವನ್ನು ಪ್ರವೇಶಿಸುವನು, ನಿರಾಕಾರಬ್ರಹ್ಮನಲ್ಲಿ ಲೀನವಾಗುವನು ಇಲ್ಲವೇ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ಸಹವಾಸದಲ್ಲಿರುವನು.

## ಶ್ಲೋಕ - 31

**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ||೩೧||**

**ನ**—ಎಂದಿಗೂ ಇಲ್ಲ; **ಅಯಮ್**—ಈ; **ಲೋಕಃ**—ಲೋಕವು; **ಅಸ್ತಿ**—ಇದೆ; **ಅಯಜ್ಞಸ್ಯ**—ಯಜ್ಞವನ್ನು ಆಚರಿಸದೆ ಇರುವವನಿಗೆ; **ಕುತಃ**—ಎಲ್ಲಿದೆ; **ಅನ್ಯಃ**—ಇನ್ನೊಂದು; **ಕುರು ಸತ್ ತಮ**—ಕುರುಕುಲ ಶ್ರೇಷ್ಠನೇ.

## ಅನುವಾದ

**ಕುರುವಂಶ ಶ್ರೇಷ್ಠನೇ, ಯಜ್ಞಗಳನ್ನು ಮಾಡದ ಮನುಷ್ಯನು ಈ ಭೂಮಿಯ ಮೇಲಾಗಲಿ ಅಥವಾ ಈ ಜನ್ಮದಲ್ಲಾಗಲಿ ಸುಖಿಯಾಗಿ ಬದುಕಲಾರ; ಇನ್ನು ಮುಂದಿನ ಜನ್ಮದ ಮಾತೇನು?**

## ಭಾವಾರ್ಥ

ಮನುಷ್ಯನ ಐಹಿಕ ಅಸ್ತಿತ್ವದ ರೂಪ ಏನೇ ಆಗಿರಲಿ, ಅವನಿಗೆ ತನ್ನ ನಿಜಸ್ಥಿತಿಯ ಅರಿವು ಇರುವುದಿಲ್ಲ. ಎಂದರೆ, ಐಹಿಕ ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವುದಕ್ಕೆ ಕಾರಣ ನಮ್ಮ ಪಾಪಜೀವನಗಳ ಬಹು ಪ್ರತಿಕ್ರಿಯೆಗಳು. ಪಾಪಜೀವನಕ್ಕೆ ಕಾರಣ ಅಜ್ಞಾನ; ಮನುಷ್ಯನ ಐಹಿಕ ಅಸ್ತಿತ್ವವು ಮುಂದುವರಿಯುತ್ತಲೇ ಹೋಗುವುದಕ್ಕೆ ಪಾಪಜೀವನವೇ ಕಾರಣ. ಈ ಗೋಜಿನಿಂದ

ಬಿಡುಗಡೆಯಾಗಲು ಮಾನವಜನ್ಮವೊಂದೇ ಅವಕಾಶ. ಆದುದರಿಂದ ನಾವು ತಪ್ಪಿಸಿಕೊಂಡು ಹೋಗಲು ವೇದಗಳು ಒಂದು ಅವಕಾಶವನ್ನು ಕಲ್ಪಿಸಿಕೊಡುತ್ತವೆ. ಧರ್ಮ, ಆರ್ಥಿಕ ನೆಮ್ಮದಿ, ನಿಯಂತ್ರಿಸಿದ ಇಂದ್ರಿಯತೃಪ್ತಿ ಮತ್ತು ಕಟ್ಟಕಡೆಗೆ, ದುಃಖದ ಸ್ಥಿತಿಯಿಂದ ಸಂಪೂರ್ಣವಾಗಿ ತಪ್ಪಿಸಿಕೊಳ್ಳುವ ರೀತಿ ಇವನ್ನು ವೇದಗಳು ತೋರಿಸಿಕೊಡುತ್ತವೆ. ಧರ್ಮದ ಮಾರ್ಗದಿಂದ ಅಥವಾ ಮೇಲೆ ಸೂಚಿಸಿದ ವಿವಿಧ ಯಜ್ಞಗಳಿಂದ ನಮ್ಮ ಆರ್ಥಿಕ ಸಮಸ್ಯೆಗಳು ತಂತಾನೆ ಪರಿಹಾರವಾಗುತ್ತವೆ. ಯಜ್ಞಾಚರಣೆಯಿಂದ, ಜನಸಂಖ್ಯೆ ಹೆಚ್ಚಾದರೂ ಸಹ, ನಮಗೆ ಅಗತ್ಯವಾದಷ್ಟು ಆಹಾರ, ಹಾಲು ಮೊದಲಾದುವೆಲ್ಲ ದೊರೆಯುತ್ತವೆ. ದೇಹಕ್ಕೆ ಬೇಕಾದುದೆಲ್ಲ ದೊರೆತನಂತರ ಸಹಜವಾಗಿ ಮುಂದಿನ ಘಟ್ಟ ಇಂದ್ರಿಯತೃಪ್ತಿ. ಆದುದರಿಂದ ವೇದಗಳು ನಿಯಂತ್ರಿತ ಇಂದ್ರಿಯ ತೃಪ್ತಿಗಾಗಿ ಪವಿತ್ರ ವಿವಾಹವನ್ನು ವಿಧಿಸಿದೆ. ಇದರಿಂದ ಮನುಷ್ಯನು ಐಹಿಕ ಬಂಧನದಿಂದ ಮುಕ್ತಿಯ ನೆಲೆಗೆ ಕ್ರಮೇಣ ಏರುತ್ತಾನೆ. ಮುಕ್ತ ಜೀವನದ ಅತ್ಯುನ್ನತ ಪರಿಪೂರ್ಣತೆಯೆಂದರೆ ಭಗವಂತನ ಸಹವಾಸ. ಮೇಲೆ ವರ್ಣಿಸಿದಂತೆ ಯಜ್ಞಗಳನ್ನು ಮಾಡುವುದರಿಂದ ಪರಿಪೂರ್ಣತೆಯನ್ನು ಸಾಧಿಸಬಹುದು. ವೇದಗಳು ವಿಧಿಸಿದಂತೆ ಯಜ್ಞಾಚರಣೆ ಮಾಡಲು ಮನುಷ್ಯನಿಗೆ ಒಲವಿಲ್ಲದಿದ್ದರೆ, ಈಗಿನ ದೇಹದಲ್ಲಿ ಸಹ ಅವನು ಸುಖವಾಗಿರುವನೆಂದು ನಿರೀಕ್ಷಿಸುವುದು ಹೇಗೆ? ಇನ್ನೊಂದು ಗ್ರಹದಲ್ಲಿ ಬೇರೊಂದು ದೇಹದ ಪಾಡೇನು? ಬೇರೆಬೇರೆ ಸ್ವರ್ಗಗ್ರಹಗಳಲ್ಲಿ ಬೇರಬೇರೆ ಮಟ್ಟಗಳ ಭೌತಿಕ ನೆಮ್ಮದಿಯುಂಟು; ವಿವಿಧ ಯಜ್ಞಗಳಲ್ಲಿ ನಿರತರಾದವರಿಗೆ ಇವುಗಳಲ್ಲಿ ಬಹು ಸುಖವುಂಟು. ಆದರೆ ಮನುಷ್ಯನಾದವನು ಸಾಧಿಸಬಹುದಾದ ಅತ್ಯಂತ ಉನ್ನತ ರೀತಿಯ ಸುಖ ಎಂದರೆ ಕೃಷ್ಣಪ್ರಜ್ಞೆಯನ್ನು ಅನುಸರಿಸಿ ದಿವ್ಯಗ್ರಹಗಳಿಗೆ ಏರುವುದು. ಆದುದರಿಂದ ಐಹಿಕ ಅಸ್ತಿತ್ವದ ಎಲ್ಲ ಸಮಸ್ಯೆಗಳಿಗೆ ಪರಿಹಾರವೆಂದರೆ ಕೃಷ್ಣಪ್ರಜ್ಞೆಯ ಬದುಕು.

## ಶ್ಲೋಕ - 32

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥

**ಏವಮ್**—ಹೀಗೆ; **ಬಹು ವಿಧಾಃ**—ವಿವಿಧ ಬಗೆಯ; **ಯಜ್ಞಾಃ**—ಯಜ್ಞಗಳು; **ವಿತತಾಃ**—ಹರಡಿವೆ; **ಬ್ರಹ್ಮಣಃ**—ವೇದಗಳ; **ಮುಖೇ**—ಬಾಯಿಯ ಮೂಲಕ; **ಕರ್ಮ ಜಾನ್**—ಕರ್ಮದಿಂದ ಹುಟ್ಟಿದವೆಂದು; **ವಿದ್ಧಿ**—ನೀನು ತಿಳಿದುಕೊಳ್ಳಬೇಕು; **ತಾನ್**—ಅವುಗಳನ್ನು; **ಸರ್ವಾನ್**—ಎಲ್ಲವನ್ನೂ; **ಏವಮ್**—ಹೀಗೆ; **ಜ್ಞಾತ್ವಾ**—ತಿಳಿದು; **ವಿಮೋಕ್ಷ್ಯಸೇ**—ಬಿಡುಗಡೆ ಪಡೆಯುತ್ತೀಯೆ.

## ಅನುವಾದ

**ಈ ಎಲ್ಲ ಬಗೆಯ ಯಜ್ಞಗಳನ್ನು ವೇದಗಳು ಒಪ್ಪುತ್ತವೆ. ಅವೆಲ್ಲ ಬೇರೆ ಬೇರೆ ಬಗೆಗಳ ಕರ್ಮದಿಂದ ಹುಟ್ಟಿದವು. ಹೀಗೆಂದು ತಿಳಿದುಕೊಂಡರೆ ನೀನು ಮೋಕ್ಷವನ್ನು ಪಡೆಯುತ್ತೀಯೆ.**

## ಭಾವಾರ್ಥ

ಮೇಲೆ ವಿವರಿಸಿದಂತೆ ಬೇರೆಬೇರೆ ರೀತಿಗಳ ಯಜ್ಞಗಳನ್ನು ಬೇರೆಬೇರೆ ರೀತಿಗಳ ಕರ್ಮಮಾಡುವವರಿಗೆ ಹೊಂದುವಂತೆ ವೇದಗಳಲ್ಲಿ ಹೇಳಿದೆ. ಮನುಷ್ಯರು ದೇಹದ ಪರಿಕಲ್ಪನೆಯಲ್ಲೇ ಗಾಢವಾಗಿ ಮಗ್ನರಾಗಿರುತ್ತಾರೆ. ಆದುದರಿಂದ ದೇಹದಿಂದ, ಮನಸ್ಸಿನಿಂದ ಅಥವಾ ಬುದ್ಧಿಶಕ್ತಿಯಿಂದ ಕೆಲಸ ಮಾಡಲು ಸಾಧ್ಯವಾಗುವಂತೆ ಈ ಯಜ್ಞಗಳನ್ನು ವ್ಯವಸ್ಥೆಗೊಳಿಸಿದೆ. ಆದರೆ ಕಡೆಗೆ ದೇಹದಿಂದ ಬಿಡುಗಡೆಯನ್ನು ಸಾಧಿಸಲೆಂದೇ ಅವುಗಳನ್ನು ಹೇಳಿದೆ. ಭಗವಂತನು ಆಡುವ ಮಾತೇ ಇದನ್ನು ಇಲ್ಲಿ ಖಚಿತಗೊಳಿಸುತ್ತದೆ.

## ಶ್ಲೋಕ - 33

**ಶ್ರೇಯಾನ್ ದ್ರವ್ಯಮಯಾದ್ ಯಜ್ಞಾಜ್ಞನಯಜ್ಞಃ ಪರನ್ತಪ |**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ||೩೩||**

**ಶ್ರೇಯಾನ್**—ಅತ್ಯುತ್ತಮವಾದುದು; **ದ್ರವ್ಯ ಮಯಾತ್**—ಭೌತಿಕ ವಸ್ತುಗಳ; **ಯಜ್ಞಾತ್**—ಯಜ್ಞಕ್ಕಿಂತಲೂ; **ಜ್ಞಾನ ಯಜ್ಞಃ**—ಜ್ಞಾನದಲ್ಲಿನ ಯಜ್ಞವು; **ಪರನ್ತಪ**—ಶತ್ರುಗಳನ್ನು ದಂಡಿಸುವವನೇ; **ಸರ್ವಮ್**—ಎಲ್ಲವೂ; **ಕರ್ಮ**—ಚಟುವಟಿಕೆಗಳು; **ಅಖಿಲಮ್**—ಸಮಗ್ರತೆಯಲ್ಲಿ; **ಪಾರ್ಥ**—ಪೃಥೆಯಪುತ್ರನೇ; **ಜ್ಞಾನೇ**—ಜ್ಞಾನದಲ್ಲಿ; **ಪರಿಸಮಾಪ್ಯತೇ**—ಕೊನೆಗೊಳ್ಳುತ್ತದೆ.

## ಅನುವಾದ

**ಶತ್ರುಗಳನ್ನು ದಂಡಿಸುವ ಅರ್ಜುನನೇ, ದ್ರವ್ಯಮಯ ಯಜ್ಞ ಮಾಡುವುದಕ್ಕಿಂತ ಜ್ಞಾನಯಜ್ಞವು ಉತ್ತಮವಾದರೂ, ಪಾರ್ಥ, ಎಲ್ಲ ಯಜ್ಞ ಕರ್ಮವೂ ದಿವ್ಯಜ್ಞಾನದಲ್ಲಿ ಪರಿಸಮಾಪ್ತಿಯಾಗುತ್ತದೆ.**

## ಭಾವಾರ್ಥ

ಎಲ್ಲ ಯಜ್ಞಗಳ ಗುರಿಯೂ ಒಂದೇ—ಸಂಪೂರ್ಣ ಜ್ಞಾನ ಸ್ಥಿತಿಯನ್ನು ಮುಟ್ಟಿ ಅನಂತರ ಐಹಿಕ ದುಃಖಗಳಿಂದ ಬಿಡುಗಡೆ ಹೊಂದಿ, ಅಂತಿಮವಾಗಿ ಕೃಷ್ಣಪ್ರಜ್ಞೆಯಲ್ಲಿ ಭಗವಂತನ ಪ್ರೇಮಪೂರ್ವಕ ದಿವ್ಯಸೇವೆಯಲ್ಲಿ ನಿರತವಾಗುವುದು. ಆದರೂ ಈ ವಿವಿಧ ಯಜ್ಞಕ್ರಿಯೆಗಳಲ್ಲಿ ಒಂದು ರಹಸ್ಯವಿದೆ; ಈ ರಹಸ್ಯವನ್ನು ತಿಳಿದುಕೊಳ್ಳಬೇಕು. ಕೆಲವೊಮ್ಮೆ ಯಜ್ಞಗಳು ಯಜ್ಞಮಾಡುವವನ ವಿಶಿಷ್ಟ ಶ್ರದ್ಧೆಗೆ ಅನುಗುಣವಾಗಿ ವಿವಿಧ ರೂಪಗಳನ್ನು ಪಡೆಯುತ್ತವೆ. ಯಜ್ಞ ಮಾಡುವವನ ಶ್ರದ್ಧೆಯು ಆಧ್ಯಾತ್ಮಿಕ ಜ್ಞಾನದ ಘಟ್ಟವನ್ನು ತಲಪಿದಾಗ, ಅವನು ಇಂತಹ ಜ್ಞಾನವಿಲ್ಲದೆ ಐಹಿಕ ವಸ್ತುಗಳ ಯಜ್ಞವಷ್ಟನ್ನೇ ಮಾಡುವವರಿಗಿಂತ ಮುನ್ನಡೆದಿದ್ದಾನೆ ಎಂದು ಭಾವಿಸಬೇಕು. ಏಕೆಂದರೆ ಜ್ಞಾನ ಪಡೆಯದೆ ಮಾಡಿದ ಯಜ್ಞಗಳು ಐಹಿಕ ನೆಲೆಯಲ್ಲೇ ಉಳಿಯುತ್ತವೆ. ಇವುಗಳಿಂದ ಯಾವ ಆಧ್ಯಾತ್ಮಿಕ ಫಲವೂ ಇಲ್ಲ. ನಿಜವಾದ ಜ್ಞಾನವು ಆಧ್ಯಾತ್ಮಿಕ ಜ್ಞಾನದ ಅತ್ಯುನ್ನತ ಹಂತವಾದ ಕೃಷ್ಣಪ್ರಜ್ಞೆಯಲ್ಲಿ ಶಿಖರವನ್ನು ಮುಟ್ಟುತ್ತದೆ. ಯಜ್ಞಮಾಡುವವನ ಜ್ಞಾನವು ಉನ್ನತ ಮಟ್ಟಕ್ಕೇರದಿದ್ದರೆ ಯಜ್ಞಗಳು ಐಹಿಕ ಕರ್ಮಗಳಷ್ಟೇ. ಆದರೆ ಅವನ್ನು ಆಧ್ಯಾತ್ಮಿಕ ಜ್ಞಾನದ ಮಟ್ಟಕ್ಕೇರಿಸಿದಾಗ ಅಂತಹ ಎಲ್ಲ ಕರ್ಮಗಳು ಆಧ್ಯಾತ್ಮಿಕ ನೆಲೆಗೆ ಏರುತ್ತವೆ. ಪ್ರಜ್ಞೆಯಲ್ಲಿನ

ವ್ಯತ್ಯಾಸಗಳಿಗೆ ಅನುಗುಣವಾಗಿ ಯಜ್ಞಕರ್ಮಗಳನ್ನು ಕೆಲವೊಮ್ಮೆ ಕರ್ಮಕಾಂಡಗಳೆಂದೂ ಕೆಲವೊಮ್ಮೆ ಜ್ಞಾನಕಾಂಡಗಳೆಂದೂ ಕರೆಯುತ್ತಾರೆ. ಜ್ಞಾನದ ಗುರಿಯಿಂದ ಮಾಡಿದ ಯಜ್ಞವು ಉತ್ತಮ.

## ಶ್ಲೋಕ - 34

**ತದ್ ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ |**
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ||೩೪||**

**ತತ್**—ವಿವಿಧ ಯಜ್ಞಗಳ ಆ ಜ್ಞಾನವನ್ನು; **ವಿದ್ಧಿ**—ತಿಳಿಯಲು ಪ್ರಯತ್ನಿಸು; **ಪ್ರಣಿಪಾತೇನ**—ಗುರುಗಳ ಬಳಿಗೆ ಹೋಗಿ; **ಪರಿಪ್ರಶ್ನೇನ**—ವಿನಯಪೂರ್ವಕ ವಿಚಾರಣೆಗಳಿಂದ; **ಸೇವಯಾ**—ಸೇವೆಯನ್ನು ಸಲ್ಲಿಸುವುದರಿಂದ; **ಉಪದೇಕ್ಷ್ಯನ್ತಿ**—ಅವರು ದೀಕ್ಷೆನೀಡುವರು; **ತೇ**—ನಿನಗೆ; **ಜ್ಞಾನಮ್**—ಜ್ಞಾನದಲ್ಲಿ; **ಜ್ಞಾನಿನಃ**—ಆತ್ಮಸಾಕ್ಷಾತ್ಕಾರಿಗಳು; **ತತ್ತ್ವ**—ಸತ್ಯದ; **ದರ್ಶಿನಃ**—ದ್ರಷ್ಟಾರರಾದ.

## ಅನುವಾದ

**ಗುರುವಿನ ಬಳಿಗೆ ಹೋಗಿ ಸತ್ಯವನ್ನು ತಿಳಿದುಕೊಳ್ಳಲು ಕಿಪ್ರಯತ್ನಿಸು. ನಮ್ರನಾಗಿ ಅವರಿಗೆ ಪ್ರಶ್ನೆಮಾಡು ಮತ್ತು ಅವರಿಗೆ ಸೇವೆ ಮಾಡು. ಆತ್ಮಸಾಕ್ಷಾತ್ಕಾರ ಪಡೆದ ವ್ಯಕ್ತಿಗಳು ಸತ್ಯವನ್ನು ಕಂಡಿದ್ದಾರೆ. ಆದುದರಿಂದ ಅವರು ನಿನಗೆ ಜ್ಞಾನೋಪದೇಶ ಮಾಡಬಲ್ಲರು.**

## ಭಾವಾರ್ಥ

ಆಧ್ಯಾತ್ಮಿಕ ಸಾಕ್ಷಾತ್ಕಾರದ ಮಾರ್ಗವು ನಿಶ್ಚಯವಾಗಿಯೂ ಕಠಿಣವಾದದ್ದು. ಆದುದರಿಂದ, ಭಗವಂತನಿಂದಲೇ ಬಂದ ಗುರುಪರಂಪರೆಯಲ್ಲಿನ ಒಬ್ಬ ನಿಜವಾದ ಗುರುವಿನ ಬಳಿಗೆ ಹೋಗುವಂತೆ ಭಗವಂತನು ಬುದ್ಧಿಹೇಳುತ್ತಾನೆ. ಈ ಗುರುಪರಂಪರೆಯ ತತ್ವವನ್ನು ಅನುಸರಿಸದೆ ಯಾರೂ ನಿಜವಾದ ಗುರುವಾಗಲು ಸಾಧ್ಯವಿಲ್ಲ. ಭಗವಂತನೇ ಪ್ರಪ್ರಥಮ ಗುರು. ಈ ಪರಂಪರೆಯಲ್ಲಿ ಬಂದವನು ಭಗವಂತನ ಸಂದೇಶವನ್ನು ಯಥಾವತ್ತಾಗಿ ಹೇಳಿಕೊಡಬಲ್ಲ. ಸೋಗುಹಾಗುವ ಮೂರ್ಖರು ಮಾಡುವಂತೆ ತನ್ನ ಪ್ರಕ್ರಿಯೆಯನ್ನು ತಾನೇ ಸೃಷ್ಟಿಸಿಕೊಂಡು ಯಾರೂ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಸಾಧಿಸಲು ಸಾಧ್ಯವಿಲ್ಲ. ಭಾಗವತವು (6.3.19) **ಧರ್ಮಂ ತು ಸಾಕ್ಷಾದ್ ಭಗವತ್ ಪ್ರಣೀತಮ್** ಎಂದರೆ ಧರ್ಮಮಾರ್ಗವನ್ನು ಭಗವಂತನೇ ನೇರವಾಗಿ ತೋರಿಸಿಕೊಡುತ್ತಾನೆ ಎಂದು ಹೇಳುತ್ತದೆ. ಆದುದರಿಂದ ಊಹಾತ್ಮಕ ಚಿಂತನೆಗಳಾಗಲಿ, ಒಣವಾದಗಳಾಗಲಿ, ಮನುಷ್ಯನನ್ನು ಸರಿಯಾದ ದಾರಿಗೆ ಕರೆದೊಯ್ಯಲಾರವು. ವಿದ್ಯಾಗ್ರಂಥಗಳನ್ನು ಸ್ವತಂತ್ರವಾಗಿ ಅಭ್ಯಾಸ ಮಾಡಿಯೂ ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲ. ಈ ಜ್ಞಾನವನ್ನು ಪಡೆದುಕೊಳ್ಳಲು ಒಬ್ಬ ನಿಜವಾದ ಗುರುವಿನ ಬಳಿಗೆ ಹೋಗಬೇಕಾಗುತ್ತದೆ. ಅಂತಹ ಗುರುವಿಗೆ ಸಂಪೂರ್ಣವಾಗಿ ಶರಣಾಗಬೇಕು. ಶಿಷ್ಯನು ಒಣಪ್ರತಿಷ್ಠೆಯಿಲ್ಲದೆ ದಾಸನಂತೆ ಗುರುವಿನ ಸೇವೆ ಮಾಡಬೇಕು. ಆತ್ಮಸಾಕ್ಷಾತ್ಕಾರ ಪಡೆದ ಗುರುವಿನ ತೃಪ್ತಿಯೇ ಆಧ್ಯಾತ್ಮಿಕ ಬದುಕಿನಲ್ಲಿ ಪ್ರಗತಿಯ ಗುಟ್ಟು. ಆಧ್ಯಾತ್ಮಿಕ ಅರಿವಿಗೆ ಪ್ರಶ್ನಿಸುವುದು ಮತ್ತು ವಿಧೇಯತೆಗಳೆರಡೂ ಇರಬೇಕು. ವಿಧೇಯತೆ ಮತ್ತು ಸೇವೆಗಳಿಲ್ಲದಿದ್ದರೆ

ವಿದ್ವಾಂಸನಾದ ಗುರುವನ್ನು ಪ್ರಶ್ನಿಸುವುದರಿಂದ ಪ್ರಯೋಜನವಿಲ್ಲ. ಗುರುವಿನ ಪರೀಕ್ಷೆಯಲ್ಲಿ ಶಿಷ್ಯನು ಉತ್ತೀರ್ಣನಾಗಬೇಕು. ಗುರುವು ಶಿಷ್ಯನ ಪ್ರಾಮಾಣಿಕ ಹಂಬಲವನ್ನು ಕಂಡಾಗ ತಂತಾನೇ ಅವನಿಗೆ ನಿಜವಾದ ಆಧ್ಯಾತ್ಮಿಕ ಅರಿವನ್ನು ಅನುಗ್ರಹಿಸುತ್ತಾನೆ. ಈ ಶ್ಲೋಕದಲ್ಲಿ ಕುರುಡು ಅನುಸರಣೆ ಮತ್ತು ಅಸಂಬದ್ಧ ಪ್ರಶ್ನೆಗಳು ಎರಡನ್ನೂ ಖಂಡಿಸಿದೆ. ಶಿಷ್ಯನು ಗುರುವಿನ ಮಾತುಗಳನ್ನು ವಿಧೇಯತೆಯಿಂದ ಆಲಿಸಬೇಕು. ಅಷ್ಟೇ ಅಲ್ಲದೆ ವಿಧೇಯನಾಗಿ ಸೇವೆ ಸಲ್ಲಿಸಿ ಪ್ರಶ್ನೆಗಳನ್ನು ಕೇಳಿ ಗುರುವಿನಿಂದ ಸ್ಪಷ್ಟವಾದ ಅರಿವನ್ನು ಪಡೆಯಬೇಕು. ನಿಜವಾದ ಗುರುವು ಸ್ವಭಾವದಿಂದಲೇ ಶಿಷ್ಯನ ವಿಷಯದಲ್ಲಿ ದಯೆ ತೋರಿಸುತ್ತಾನೆ. ಆದುದರಿಂದ ವಿದ್ಯಾರ್ಥಿಯು ವಿಧೇಯನಾಗಿ ಸದಾ ಸೇವೆ ಸಲ್ಲಿಸಲು ಸಿದ್ಧನಾಗಿದ್ದರೆ, ಜ್ಞಾನ ಮತ್ತು ವಿಚಾರಗಳ ವಿನಿಮಯವು ಪರಿಪೂರ್ಣವಾಗುತ್ತದೆ.

## ಶ್ಲೋಕ - 35

**ಯಜ್‌ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಣ್ಡವ |**
**ಯೇನ ಭೂತಾನ್ಯಶೇಷಾಣಿ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ||೩೫||**

**ಯತ್**—ಯಾವುದನ್ನು; **ಜ್ಞಾತ್ವಾ**—ತಿಳಿದು; **ನ**—ಎಂದಿಗೂ ಇಲ್ಲ; **ಪುನಃ**—ಮತ್ತೆ; **ಮೋಹಮ್**—ಭ್ರಾಂತಿಗೆ; **ಏವಮ್**—ಇದರಂತೆ; **ಯಾಸ್ಯಸಿ**—ಹೋಗುತ್ತೀಯೆ; **ಪಾಣ್ಡವ**—ಪಾಂಡುಪುತ್ರನೇ; **ಯೇನ**—ಯಾವುದರಿಂದ; **ಭೂತಾನಿ**—ಜೀವಿಗಳನ್ನೂ; **ಅಶೇಷಾಣಿ**—ಎಲ್ಲ; **ದ್ರಕ್ಷ್ಯಸಿ**—ನೋಡುವೆ; **ಆತ್ಮನಿ**—ಪರಮಾತ್ಮನಲ್ಲಿ; **ಅಥ ಉ**—ಅಥವಾ ಬೇರೆ ಶಬ್ದಗಳಲ್ಲಿ; **ಮಯಿ**—ನನ್ನಲ್ಲಿ.

## ಅನುವಾದ

**ಸಾಕ್ಷಾತ್ಕಾರ ಪಡೆದ ಆತ್ಮನಿಂದ ನಿಜವಾದ ಜ್ಞಾನವನ್ನು ನೀನು ಪಡೆದರೆ ಮತ್ತೆ ಇಂತಹ ಮೋಹಕ್ಕೆ ಎಂದೂ ಸಿಲುಕುವುದಿಲ್ಲ. ಏಕೆಂದರೆ ಈ ಜ್ಞಾನವು ಲಭ್ಯವಾದಾಗ ಎಲ್ಲ ಜೀವಿಗಳೂ ಪರಮ ಪ್ರಭುವಿನ ಅಂಶಗಳೇ. ಇತರ ಮಾತುಗಳಲ್ಲಿ ಹೇಳುವುದಾದರೆ, ಅವರೆಲ್ಲ ನನ್ನವರೇ ಎನ್ನುವುದನ್ನು ನೀನು ಕಾಣುತ್ತೀಯೆ.**

## ಭಾವಾರ್ಥ

ಆತ್ಮಸಾಕ್ಷಾತ್ಕಾರ ಪಡೆದ ವ್ಯಕ್ತಿಯು ವಸ್ತುಗಳ ನಿಜವಾದ ಸ್ವರೂಪವನ್ನು ತಿಳಿದಿರುತ್ತಾನೆ. ಅಂತಹ ವ್ಯಕ್ತಿಯಿಂದ ಜ್ಞಾನವನ್ನು ಪಡೆಯುವುದರ ಫಲ ಎಂದರೆ ಎಲ್ಲ ಜೀವಿಗಳೂ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ವಿಭಿನ್ನಾಂಶ ಎಂಬ ಅರಿವು ದೊರೆಯುವುದು. ಕೃಷ್ಣನಿಂದ ಪ್ರತ್ಯೇಕವಾಗಿರುವ ಅಸ್ತಿತ್ವದ ಕಲ್ಪನೆಗೆ ಮಾಯಾ ಎಂದು ಹೆಸರು. (**ಮಾ**—ಅಲ್ಲ, **ಯಾ**—ಇದು). ಕೆಲವರು ನಮಗೂ ಕೃಷ್ಣನಿಗೂ ಸಂಬಂಧವೇ ಇಲ್ಲ, ಕೃಷ್ಣನು ದೊಡ್ಡ ಐತಿಹಾಸಿಕ ವ್ಯಕ್ತಿ ಮಾತ್ರ ಮತ್ತು ಪರಮ ಸತ್ಯವು ನಿರಾಕಾರ ಬ್ರಹ್ಮನ್ ಎಂದು ಯೋಚಿಸುತ್ತಾರೆ. ವಾಸ್ತವವಾಗಿ ಭಗವದ್ಗೀತೆಯಲ್ಲಿ ಹೇಳಿದಂತೆ ಈ ನಿರಾಕಾರ ಬ್ರಹ್ಮನ್ ಎನ್ನುವುದು ಕೃಷ್ಣನ ವೈಯಕ್ತಿಕ ಪ್ರಭೆ. ದೇವೋತ್ತಮ ಪರಮ ಪುರುಷನಾದ ಕೃಷ್ಣನು ಎಲ್ಲಕ್ಕೂ ಕಾರಣನು. ಕೃಷ್ಣನು ದೇವೋತ್ತಮ ಪರಮ

ಪುರುಷ, ಎಲ್ಲ ಕಾರಣಗಳ ಕಾರಣನು ಎಂದು ಬ್ರಹ್ಮಸಂಹಿತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಕೋಟ್ಯಂತರ ಅವತಾರಗಳು ಅವನ ವಿವಿಧ ವಿಸ್ತರಣೆಗಳು ಮಾತ್ರ. ಹಾಗೆಯೇ ಜೀವಿಗಳೂ ಕೃಷ್ಣನ ವಿಸ್ತರಣೆಗಳೇ. ತನ್ನ ಹಲವು ವಿಸ್ತರಣೆಗಳಲ್ಲಿ ಕೃಷ್ಣನು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾನೆ ಎಂದು ಮಾಯಾವಾದಿ ತತ್ವಶಾಸ್ತ್ರಜ್ಞರು ತಪ್ಪಾಗಿ ಯೋಚಿಸುತ್ತಾರೆ. ಈ ಯೋಚನೆಯು ಭೌತಿಕ ಜಗತ್ತಿನ ಅನುಭವದಿಂದ ಬಂದದ್ದು. ಒಂದು ವಸ್ತುವನ್ನು ಚೂರುಚೂರಾಗಿ ಮಾಡಿ ಹಂಚಿದರೆ ಅದು ಸ್ವಂತದ ಮೂಲವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತದೆ ಎಂದು ಐಹಿಕ ಜಗತ್ತಿನಲ್ಲಿ ನಮ್ಮ ಅನುಭವ. ಆದರೆ ಪರಾತ್ಪರ ಎಂದರೆ ಒಂದಕ್ಕೆ ಒಂದು ಸೇರಿದರೂ ಒಂದೇ, ಮತ್ತು ಒಂದರಲ್ಲಿ ಒಂದನ್ನು ಕಳೆದರೂ ಒಂದೇ. ಮಾಯಾವಾದಿ ತತ್ವಶಾಸ್ತ್ರಜ್ಞರಿಗೆ ಇದು ಅರ್ಥವಾಗುವುದಿಲ್ಲ. ಪರಾತ್ಪರ ಜಗತ್ತಿನಲ್ಲಿ ಇದೇ ವಾಸ್ತವ ಸ್ಥಿತಿ.

ಆಧ್ಯಾತ್ಮಿಕ ವಿಜ್ಞಾನದಲ್ಲಿ ಸಾಕಷ್ಟು ತಿಳುವಳಿಕೆ ಇಲ್ಲದಿರುವುದರಿಂದ ಈಗ ನಮ್ಮನ್ನು ಮಾಯೆ ಆವರಿಸಿದೆ. ಆದುದರಿಂದ ನಾವು ಕೃಷ್ಣನಿಂದ ಪ್ರತ್ಯೇಕ ಎಂದು ಯೋಚಿಸುತ್ತೇವೆ. ನಾವು ಕೃಷ್ಣನಿಂದ ಪ್ರತ್ಯೇಕಗೊಂಡ ಭಾಗಗಳಾದರೂ ನಾವು ಅವನಿಂದ ಭಿನ್ನವಲ್ಲ. ಜೀವಿಗಳ ಶಾರೀರಕ ವ್ಯತ್ಯಾಸವೆನ್ನುವುದು ಮಾಯಾ. ಕೃಷ್ಣನನ್ನು ತೃಪ್ತಿಪಡಿಸುವುದಕ್ಕಾಗಿಯೇ ನಾವಿರುವುದು. ಮಾಯೆಯ ದೆಸೆಯಿಂದಾಗಿ ಅರ್ಜುನನು ತನ್ನ ಬಂಧುಗಳೊಡನೆ ಇರುವ ಅಲ್ಪಕಾಲದ ದೈಹಿಕ ಬಾಂಧವ್ಯವೇ ಕೃಷ್ಣನೊಡನೆ ಇರುವ ಶಾಶ್ವತವಾದ ಆಧ್ಯಾತ್ಮಿಕ ಬಾಂಧವ್ಯಕ್ಕಿಂತ ಹೆಚ್ಚು ಮುಖ್ಯ ಎಂದು ಭಾವಿಸಿದ. ಗೀತೆಯ ಇಡೀ ಉಪದೇಶದ ಧ್ಯೇಯವು ಹೀಗಿದೆ—ಕೃಷ್ಣನ ನಿತ್ಯಸೇವಕನಾದ ಜೀವಿಯನ್ನು ಕೃಷ್ಣನಿಂದ ಬೇರ್ಪಡಿಸಲು ಸಾಧ್ಯವಿಲ್ಲ ಮತ್ತು ಕೃಷ್ಣನಿಂದ ಪ್ರತ್ಯೇಕವಾಗಿ ತನಗೆ ಅಸ್ತಿತ್ವವಿದೆ ಎಂಬ ಜೀವಿಯ ಭಾವನೆಯು ಮಾಯೆ. ಪರಮ ಪ್ರಭುವಿನ ವಿಭಿನ್ನಾಂಶಗಳಾಗಿ ಜೀವಿಗಳು ಸಾಧಿಸಬೇಕಾದ ಒಂದು ಗುರಿ ಇದೆ. ನೆನಪಿಗೂ ಎಟುಕದಷ್ಟು ಕಾಲದಿಂದ ಈ ಗುರಿಯನ್ನು ಅವರು ಮರೆತಿದ್ದಾರೆ. ಈ ಕಾರಣದಿಂದ ಮನುಷ್ಯರು, ಪ್ರಾಣಿಗಳು, ದೇವತೆಗಳು ಬೇರೆ ಬೇರೆ ದೇಹಗಳಲ್ಲಿ ನೆಲೆಸಿದ್ದಾರೆ. ಭಗವಂತನ ಆಧ್ಯಾತ್ಮಿಕ ಸೇವೆಯನ್ನು ಮರೆತದ್ದರಿಂದಲೇ ಇಂತಹ ದೈಹಿಕ ವ್ಯತ್ಯಾಸಗಳು ಉದ್ಭವಿಸಿವೆ. ಆದರೆ ಕೃಷ್ಣಪ್ರಜ್ಞೆಯಿಂದ ಆಧ್ಯಾತ್ಮಿಕ ಸೇವೆಯಲ್ಲಿ ತೊಡಗಿರುವವನು ಈ ಮಾಯೆಯಿಂದ ಕೂಡಲೇ ಬಿಡುಗಡೆ ಹೊಂದುತ್ತಾನೆ. ಇಂತಹ ಶುದ್ಧಜ್ಞಾನವನ್ನು ನಿಜವಾದ ಗುರುವಿನಿಂದ ಮಾತ್ರ ಪಡೆಯಬಹುದು. ಹೀಗೆ ಪಡೆದುಕೊಂಡು ಜೀವಿಯು ಕೃಷ್ಣನಿಗೆ ಸರಿಸಮಾನ ಎನ್ನುವ ಭ್ರಮೆಯನ್ನು ನಿವಾರಿಸಿಕೊಳ್ಳಬಹುದು. ಪರಿಪೂರ್ಣ ಜ್ಞಾನವು ಇದು — ಪರಿಪೂರ್ಣನಾದ ಕೃಷ್ಣನು ಎಲ್ಲ ಜೀವಿಗಳಿಗೂ ಪರಮ ಆಶ್ರಯನು ಮತ್ತು ಇಂತಹ ಆಶ್ರಯವನ್ನು ತ್ಯಜಿಸಿದರೆ ಜೀವಿಗಳು ಭೌತಿಕ ವ್ಯಕ್ತಿಯಿಂದ ಭ್ರಾಂತಿಗೊಳಗಾಗಿ ತಮಗೆ ಪ್ರತ್ಯೇಕ ಅಸ್ತಿತ್ವವಿದೆ ಎಂದು ಕಲ್ಪಿಸಿಕೊಳ್ಳುತ್ತಾರೆ. ಹೀಗೆ ಬೇರೆಬೇರೆ ಹಂತದ ಭೌತಿಕ ಕಲ್ಪನೆಯಿಂದಾಗಿ ಅವರು ಕೃಷ್ಣನನ್ನು ಮರೆತುಬಿಡುತ್ತಾರೆ. ಆದರೆ ಹೀಗೆ ಭ್ರಮೆಗೊಂಡ ಜೀವಿಗಳು ಕೃಷ್ಣಪ್ರಜ್ಞೆಯಲ್ಲಿ ನೆಲೆಗೊಂಡರೆ ಅವರು ಮುಖ್ಯಮಾರ್ಗದಲ್ಲಿದ್ದಾರೆ ಎಂದು ಅರ್ಥ ಮಾಡಿಕೊಳ್ಳಬೇಕು. ಇದನ್ನು ಭಾಗವತವು (2.10.6) **ಮುಕ್ತಿರ್‌ಹಿತ್ವಾನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ** ಎಂದು ದೃಢಪಡಿಸುತ್ತದೆ. ಮುಕ್ತಿ ಎಂದರೆ (ಕೃಷ್ಣಪ್ರಜ್ಞೆಯಲ್ಲಿ) ಕೃಷ್ಣನ ನಿತ್ಯ ಸೇವಕನಾಗಿ ತನ್ನ ನಿಜಸ್ವರೂಪದಲ್ಲಿರುವುದು.

## ಶ್ಲೋಕ - 36

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸನ್ತರಿಷ್ಯಸಿ ||೩೬||**

**ಅಪಿ**—ಕೂಡ; **ಚೇತ್**—ಆದರೆ; **ಅಸಿ**—ಇದ್ದೀಯೆ; **ಪಾಪೇಭ್ಯಃ**—ಪಾಪಿಗಳ; **ಸರ್ವೇ ಭ್ಯಃ**—ಎಲ್ಲ; **ಪಾಪ ಕೃತ್ ತಮಃ**—ಮಹಾ ಪಾಪಿಯು; **ಸರ್ವಮ್**—ಅಂತಹ ಎಲ್ಲ ಪಾಪಪೂರ್ಣ ಪ್ರತಿಕ್ರಿಯೆಗಳನ್ನು; **ಜ್ಞಾನ ಪ್ಲವೇನ**—ದಿವ್ಯಜ್ಞಾನದ ನೌಕೆಯಿಂದ; **ಏವ**—ಖಂಡಿತವಾಗಿಯೂ; **ವೃಜಿನಮ್**—ಕ್ಲೇಶಗಳ ಸಾಗರವನ್ನು; **ಸನ್ತರಿಷ್ಯಸಿ**—ಪೂರ್ತಿಯಾಗಿ ದಾಟುತ್ತೀಯೆ.

### ಅನುವಾದ

**ಪಾಪಿಗಳಲ್ಲಿ ಪರಮಪಾಪಿಯೆಂದು ಪರಿಗಣಿತನಾಗಿದ್ದರೂ ನೀನು ಆಧ್ಯಾತ್ಮಿಕ ಜ್ಞಾನದ ದೋಣಿಯಲ್ಲಿದ್ದಾಗ ದುಃಖಸಾಗರವನ್ನು ದಾಟಬಲ್ಲೆ.**

### ಭಾವಾರ್ಥ

ಮನುಷ್ಯನಿಗೆ ಕೃಷ್ಣ ಸಂಬಂಧದಲ್ಲಿ ತನ್ನ ನಿಜಸ್ವರೂಪದ ಅರಿವು ಎಷ್ಟು ಒಳ್ಳೆಯದೆಂದರೆ ಅದು ಅವನನ್ನು ಅಜ್ಞಾನಸಾಗರದಲ್ಲಿ ನಡೆಯುವ ಅಸ್ತಿತ್ವದ ಹೋರಾಟದಿಂದ ಕೂಡಲೇ ಮೇಲೆತ್ತುತ್ತದೆ. ಈ ಐಹಿಕ ಜಗತ್ತನ್ನು ಕೆಲವೊಮ್ಮೆ ಅಜ್ಞಾನ ಸಾಗರವೆಂದು, ಕೆಲವೊಮ್ಮೆ ಉರಿಯುತ್ತಿರುವ ಅರಣ್ಯವೆಂದು ಭಾವಿಸುತ್ತಾರೆ. ಎಂತಹ ನಿಪುಣ ಈಜುಗಾರನೂ ಸಮುದ್ರದಲ್ಲಿ ಉಳಿದುಕೊಳ್ಳಲು ತುಂಬ ಸೆಣಸಬೇಕಾಗುತ್ತದೆ. ಪಾಡುಪಡುತ್ತಿರುವ ಈಜುಗಾರನನ್ನು ಯಾರಾದರೂ ಬಂದು ಸಮುದ್ರದಿಂದ ಮೇಲೆತ್ತಿದರೆ ಆತನೇ ಬಹು ದೊಡ್ಡ ರಕ್ಷಕ. ದೇವೋತ್ತಮ ಪರಮ ಪುರುಷನಿಂದ ಬಂದ ಪರಿಪೂರ್ಣಜ್ಞಾನವು ಮುಕ್ತಿಮಾರ್ಗ. ಕೃಷ್ಣಪ್ರಜ್ಞೆಯ ದೋಣಿಯು ಬಹು ಸರಳವಾದದ್ದು, ಜೊತೆಗೇ ಅತ್ಯಂತ ಭವ್ಯವಾದದ್ದು.

## ಶ್ಲೋಕ - 37

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ |**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ||೩೭||**

**ಯಥಾ**—ಹೇಗೆ; **ಏಧಾಂಸಿ**—ಕಟ್ಟಿಗೆಗಳನ್ನು; **ಸಮಿದ್ಧಃ**—ಉರಿಯುತ್ತಿರುವ; **ಅಗ್ನಿಃ**—ಬೆಂಕಿಯು; **ಭಸ್ಮ ಸಾತ್**—ಬೂದಿಯಾಗಿ; **ಕುರುತೇ**—ಮಾಡುತ್ತದೋ; **ಅರ್ಜುನ**—ಅರ್ಜುನನೇ; **ಜ್ಞಾನಾಗ್ನಿಃ**—ಜ್ಞಾನಾಗ್ನಿಯು; **ಸರ್ವ ಕರ್ಮಾಣಿ**—ಐಹಿಕ ಕಾರ್ಯಗಳ ಎಲ್ಲ ಪ್ರತಿಕ್ರಿಯೆಗಳನ್ನು; **ಭಸ್ಮ ಸಾತ್**—ಬೂದಿಯಾಗಿ; **ಕುರುತೇ**—ಪರಿವರ್ತಿಸುತ್ತದೆ; **ತಥಾ**—ಹಾಗೆಯೇ.

### ಅನುವಾದ

**ಅರ್ಜುನನೆ, ಪ್ರಜ್ವಲಿಸುತ್ತಿರುವ ಬೆಂಕಿಯು ಕಟ್ಟಿಗೆಯನ್ನು ಹೇಗೆ ಬೂದಿ ಮಾಡುತ್ತದೆಯೋ ಹಾಗೆ**

**ಜ್ಞಾನವೆಂಬ ಅಗ್ನಿಯು ಎಲ್ಲ ಐಹಿಕ ಕರ್ಮಗಳ ಪ್ರತಿಕ್ರಿಯೆಗಳನ್ನೂ ಸುಟ್ಟು ಬೂದಿಮಾಡುವುದು.**

## ಭಾವಾರ್ಥ

ಆತ್ಮ ಪರಮಾತ್ಮ ಮತ್ತು ಇವುಗಳ ಸಂಬಂಧದ ಪರಿಪೂರ್ಣ ಜ್ಞಾನವನ್ನು ಇಲ್ಲಿ ಅಗ್ನಿಗೆ ಹೋಲಿಸಿದೆ. ಈ ಅಗ್ನಿಯು ಎಲ್ಲ ಪಾಪ ಕರ್ಮಗಳ ಪ್ರತಿಕ್ರಿಯೆಗಳನ್ನು ಸುಟ್ಟುಹಾಕುವುದಲ್ಲದೆ ಎಲ್ಲ ಪುಣ್ಯ ಕರ್ಮಗಳನ್ನೂ ಸುಟ್ಟು ಬೂದಿ ಮಾಡುತ್ತದೆ. ಕರ್ಮದ ಪ್ರತಿಕ್ರಿಯೆಗಳ ಹಲವು ಹಂತಗಳಿವೆ; ರೂಪಗೊಳ್ಳುತ್ತಿರುವ ಕರ್ಮದ ಪ್ರತಿಕ್ರಿಯೆ, ಫಲಿಸುತ್ತಿರುವ ಕರ್ಮದ ಪ್ರತಿಕ್ರಿಯೆ, ಆಗಲೇ ಸಾಧಿಸಿದ ಕರ್ಮದ ಪ್ರತಿಕ್ರಿಯೆ ಮತ್ತು ಕಾರಣಪೂರ್ವಕ ಕರ್ಮದ ಪ್ರತಿಕ್ರಿಯೆ. ಆದರೆ ಜೀವಿಯ ನಿಜಸ್ವರೂಪದ ಜ್ಞಾನವು ಎಲ್ಲವನ್ನೂ ಸುಟ್ಟು ಭಸ್ಮ ಮಾಡುವುದು. ಮನುಷ್ಯನಿಗೆ ಸಂಪೂರ್ಣ ಜ್ಞಾನವು ಲಭ್ಯವಾದಾಗ ಕರ್ಮಗಳ ಎಲ್ಲ ಪ್ರತಿಕ್ರಿಯೆಗಳೂ ಸುಟ್ಟುಹೋಗುತ್ತವೆ. ವೇದಗಳಲ್ಲಿ (ಬೃಹದಾರಣ್ಯಕ ಉಪನಿಷತ್ತು 4.4.22) **ಉಭೇ ಉಹೈವೈಷ ಏತೇ ತರತ್ಯಮೃತಃ ಸಾಧ್ವಸಾಧೂನೀ** ಎಂದರೆ ಮನುಷ್ಯನು ಧಾರ್ಮಿಕ ಮತ್ತು ಅಧಾರ್ಮಿಕ ಕರ್ಮಗಳ ಪ್ರತಿಕ್ರಿಯೆಗಳೆರಡನ್ನೂ ನಿವಾರಿಸಿಕೊಳ್ಳುತ್ತಾನೆ ಎಂದು ಹೇಳಿದೆ.

## ಶ್ಲೋಕ - 38

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ |**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ||೩೮||**

**ನ**—ಯಾವುದೂ ಇಲ್ಲ; **ಹಿ**—ಖಂಡಿತವಾಗಿಯೂ; **ಜ್ಞಾನೇನ**—ಜ್ಞಾನದೊಂದಿಗೆ; **ಸದೃಶಮ್**—ಸಮನಾದದ್ದು; **ಪವಿತ್ರಮ್**—ಪವಿತ್ರವಾದುದು; **ಇಹ**—ಈ ಜಗತ್ತಿನಲ್ಲಿ; **ವಿದ್ಯತೇ**—ಇರುತ್ತದೆ; **ತತ್**—ಅದನ್ನು; **ಸ್ವಯಮ್**—ಸ್ವತಃ; **ಯೋಗ**—ಭಕ್ತಿಯಲ್ಲಿ; **ಸಂಸಿದ್ಧಃ**—ಪರಿಪಕ್ವನಾದವನು; **ಕಾಲೇನ**—ಕಾಲಕ್ರಮದಲ್ಲಿ; **ಆತ್ಮನಿ**—ತನ್ನಲ್ಲಿಯೇ; **ವಿಂದತಿ**—ಅನುಭವಿಸುತ್ತಾನೆ.

## ಅನುವಾದ

**ಈ ಜಗತ್ತಿನಲ್ಲಿ ಆಧ್ಯಾತ್ಮಿಕ ಜ್ಞಾನದಷ್ಟು ಭವ್ಯವಾದದ್ದು ಮತ್ತು ಪರಿಶುದ್ಧವಾದದ್ದು ಬೇರೆ ಯಾವುದೂ ಇಲ್ಲ. ಇಂತಹ ಜ್ಞಾನವು ಎಲ್ಲ ಅನುಭಾವದ ಪರಿಪಕ್ವ ಫಲ. ಭಕ್ತಿಪೂರ್ವಕ ಸೇವೆಯ ಆಚರಣೆಯಲ್ಲಿ ನಿಪುಣನಾದವನು ಕಾಲಕ್ರಮದಲ್ಲಿ ತನ್ನಲ್ಲಿಯೇ ಈ ಜ್ಞಾನವನ್ನು ಸವಿಯುವನು.**

## ಭಾವಾರ್ಥ

ನಾವು ದಿವ್ಯಜ್ಞಾನವನ್ನು ಕುರಿತು ಮಾತನಾಡಿದಾಗ ಆಧ್ಯಾತ್ಮಿಕ ಅರಿವಿಗೆ ಸಂಬಂಧಿಸಿದಂತೆ ಮಾತನಾಡುತ್ತೇವೆ. ಆದುದರಿಂದ ದಿವ್ಯಜ್ಞಾನದಷ್ಟು ಭವ್ಯವಾದದ್ದು ಮತ್ತು ಪರಿಶುದ್ಧವಾದದ್ದು ಬೇರೇನೂ ಇಲ್ಲ. ಅಜ್ಞಾನವೇ ನಮ್ಮ ಬಂಧನದ ಕಾರಣ. ಜ್ಞಾನವೇ ನಮ್ಮ ಮುಕ್ತಿಯ ಕಾರಣ. ಈ ಅರಿವು ಭಕ್ತಿಪೂರ್ವಕ ಸೇವೆಯ ಪರಿಪಕ್ವ ಫಲ. ದಿವ್ಯಜ್ಞಾನದಲ್ಲಿ ನೆಲೆಯನ್ನು ಪಡೆದವನು ಶಾಂತಿಗಾಗಿ ಬೇರೆಲ್ಲೂ ಹುಡುಕಬೇಕಾಗಿಲ್ಲ. ಏಕೆಂದರೆ ಅವನು ತನ್ನಲ್ಲಿಯೇ ಶಾಂತಿಯನ್ನೂ

ಸವಿಯುತ್ತಾನೆ. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ ಈ ಅರಿವೂ ಶಾಂತಿಯೂ ಕೃಷ್ಣಪ್ರಜ್ಞೆಯಲ್ಲಿ ತುತ್ತತುದಿಗೇರುತ್ತವೆ. ಭಗವದ್ಗೀತೆಯಲ್ಲಿ ಇದೇ ಕಡೆಯ ಮಾತು.

## ಶ್ಲೋಕ - 39

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ |**
**ಜ್ಞಾನಂ ಲಬ್ಧ್ವಾ ಪರಾಂ ಶಾನ್ತಿಮಚಿರೇಣಾಧಿಗಚ್ಛತಿ ||೩೯||**

**ಶ್ರದ್ಧಾವಾನ್**—ಶ್ರದ್ಧಾವಂತನು; **ಲಭತೇ**—ಹೊಂದುತ್ತಾನೆ; **ಜ್ಞಾನಮ್**—ಜ್ಞಾನವನ್ನು; **ತತ್ ಪರಃ**—ಅದಕ್ಕೆ ಬಹು ಆಸಕ್ತನಾಗಿ; **ಸಂಯತ**—ನಿಯಂತ್ರಿತವಾದ; **ಇಂದ್ರಿಯಃ**—ಇಂದ್ರಿಯಗಳುಳ್ಳವನಾಗಿ; **ಜ್ಞಾನಮ್**—ಜ್ಞಾನವನ್ನು; **ಲಬ್ಧ್ವಾ**—ಪಡೆದು; **ಪರಾಮ್**—ದಿವ್ಯವಾದ; **ಶಾನ್ತಿಮ್**—ಶಾಂತಿಯನ್ನು; **ಅಚಿರೇಣ**—ಅತಿಶೀಘ್ರವಾಗಿ; **ಅಧಿಗಚ್ಛತಿ**—ಪಡೆಯುತ್ತಾನೆ.

## ಅನುವಾದ

**ದಿವ್ಯಜ್ಞಾನಕ್ಕೆ ಮುಡಿಪಾದ ಮತ್ತು ಇಂದ್ರಿಯ ನಿಗ್ರಹ ಮಾಡಿದ ಶ್ರದ್ಧಾವಂತನಿಗೆ ಇಂತಹ ಜ್ಞಾನವನ್ನು ಪಡೆಯುವ ಅರ್ಹತೆಯಿರುತ್ತದೆ. ಅದನ್ನು ಪಡೆದು ಅವನು ಶೀಘ್ರವಾಗಿ ಪರಮ ಆಧ್ಯಾತ್ಮಿಕ ಶಾಂತಿಯನ್ನು ಪಡೆಯುವನು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಇಂತಹ ಜ್ಞಾನವನ್ನು, ಕೃಷ್ಣನಲ್ಲಿ ದೃಢನಂಬಿಕೆಯಿರುವ ಶ್ರದ್ಧಾವಂತನು ಪಡೆದುಕೊಳ್ಳಬಲ್ಲ. ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡಿದರೆ ಸಾಕು, ತಾನು ಉನ್ನತೋನ್ನತ ಪರಿಪೂರ್ಣತೆಯನ್ನು ಪಡೆಯಬಲ್ಲೆ ಎಂದು ಯೋಚಿಸುವವನೇ ಶ್ರದ್ಧಾವಂತ. ಈ ಶ್ರದ್ಧೆಯನ್ನು ಪಡೆದುಕೊಳ್ಳುವ ಮಾರ್ಗ ಭಕ್ತಿಪೂರ್ವಕ ಸೇವೆಯನ್ನು ಮಾಡುವುದು ಮತ್ತು ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಎಂದು ನಾಮ ಸಂಕೀರ್ತನೆ ಮಾಡುವುದು. ಇದು ಹೃದಯದಲ್ಲಿನ ಐಹಿಕ ಕೊಳೆಯನ್ನೆಲ್ಲ ತೊಳೆದುಹಾಕುವುದು. ಇದಕ್ಕಿಂತ ಮುಖ್ಯವಾಗಿ ಮನುಷ್ಯನು ಇಂದ್ರಿಯಗಳನ್ನು ನಿಯಂತ್ರಿಸಬೇಕು. ಕೃಷ್ಣನಲ್ಲಿ ನಿಷ್ಠೆಯನ್ನಿಟ್ಟುಕೊಂಡು ಇಂದ್ರಿಯಗಳನ್ನು ನಿಯಂತ್ರಣ ಮಾಡಿದವನು ಸುಲಭವಾಗಿ ಮತ್ತು ವಿಳಂಬವಿಲ್ಲದೆ ಕೃಷ್ಣಪ್ರಜ್ಞೆಯ ಅರಿವಿನಲ್ಲಿ ಪರಿಪೂರ್ಣನಾಗುವನು.

## ಶ್ಲೋಕ - 40

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ||೪೦||**

**ಅಜ್ಞಃ**—ಪ್ರಮಾಣಿತ ಧರ್ಮಗ್ರಂಥಗಳ ಜ್ಞಾನವಿಲ್ಲದ ಮೂಢನು; **ಚ**—ಮತ್ತು; **ಅಶ್ರದ್ದಧಾನಃ**—ಅಪೌರುಷೇಯ ಧರ್ಮಗ್ರಂಥಗಳಲ್ಲಿ ಶ್ರದ್ಧೆಯಿಲ್ಲದವನು; **ಚ**—ಕೂಡ; **ಸಂಶಯ**—ಸಂಶಯಗಳ;

**ಆತ್ಮಾ**—ವ್ಯಕ್ತಿಯು; **ವಿನಶ್ಯತಿ**—ಪತನಗೊಳ್ಳುತ್ತಾನೆ; **ನ**—ಎಂದಿಗೂ ಇಲ್ಲ; **ಅಯಮ್**—ಈ; **ಲೋಕಃ**—ಜಗತ್ತು; **ಅಸ್ತಿ**—ಇದೆ; **ನ**—ಇಲ್ಲ; **ಪರಃ**—ಮುಂದಿನ ಜನ್ಮವೂ; **ನ**—ಇಲ್ಲ; **ಸುಖಮ್**—ಸುಖವು; **ಸಂಶಯ**—ಸಂದೇಹವುಳ್ಳ; **ಆತ್ಮನಃ**—ವ್ಯಕ್ತಿಗೆ.

## ಅನುವಾದ

**ಅಜ್ಞಾನಿಗಳೂ ಶ್ರದ್ಧೆಯಿಲ್ಲದವರೂ ಅಪೌರುಷೇಯ ಧರ್ಮಗ್ರಂಥಗಳಲ್ಲಿ ಸಂಶಯಪಡುತ್ತಾರೆ. ಇಂತಹವರಿಗೆ ಭಗವಂತನ ಪ್ರಜ್ಞೆ ಲಭ್ಯವಾಗುವುದಿಲ್ಲ. ಅವರು ನಾಶ ಹೊಂದುವರು. ಸಂಶಯಾತ್ಮನಾದವನಿಗೆ ಈ ಲೋಕದಲ್ಲಿ ಸುಖವಿಲ್ಲ. ಮುಂದಿನ ಲೋಕದಲ್ಲಿಯೂ ಸುಖವಿಲ್ಲ.**

## ಭಾವಾರ್ಥ

ಹಲವಾರು ಪ್ರಮಾಣ ಮತ್ತು ಅಧಿಕೃತ ಅಪೌರುಷೇಯ ಧರ್ಮಗ್ರಂಥಗಳಲ್ಲಿ ಭಗವದ್ಗೀತೆಯೇ ಶ್ರೇಷ್ಠವಾದದ್ದು. ಸ್ವಲ್ಪ ಹೆಚ್ಚು ಕಡಮೆ ಪ್ರಾಣಿಗಳಂತೆಯೇ ಇರುವವರಿಗೆ ಪ್ರಮಾಣ ಪೂರ್ವಕವಾದ ಅಪೌರುಷೇಯ ಧರ್ಮಗ್ರಂಥಗಳಲ್ಲಿ ಶ್ರದ್ಧೆಯೂ ಇಲ್ಲ, ಅವುಗಳ ತಿಳುವಳಿಕೆಯೂ ಇಲ್ಲ. ಕೆಲವರಿಗೆ ಅಪೌರುಷೇಯ ಧರ್ಮಗ್ರಂಥಗಳ ತಿಳುವಳಿಕೆಯಿದೆ. ಅವರು ಅವುಗಳಿಂದ ಭಾಗಗಳನ್ನು ಉದ್ಧರಿಸಿ ಹೇಳಬಲ್ಲರು. ಆದರೆ ಈ ಮಾತುಗಳಲ್ಲಿ ಅವರಿಗೆ ಶ್ರದ್ಧೆಯಿಲ್ಲ. ಇತರರಿಗೆ ಭಗವದ್ಗೀತೆಯಂತಹ ಧರ್ಮಗ್ರಂಥಗಳಲ್ಲಿ ಶ್ರದ್ಧೆಯಿರಬಹುದು. ಆದರೆ ಅವರಿಗೆ ಪರಮ ಪುರುಷನಾದ ಶ್ರೀಕೃಷ್ಣನಲ್ಲಿ ನಂಬಿಕೆಯಿಲ್ಲ ಅಥವಾ ಅವನನ್ನು ಪೂಜಿಸುವುದಿಲ್ಲ. ಅಂತಹವರಿಗೆ ಕೃಷ್ಣಪ್ರಜ್ಞೆಯಲ್ಲಿ ಯಾವ ಸ್ಥಾನವೂ ಇಲ್ಲ. ಅವರು ನಾಶಹೊಂದುತ್ತಾರೆ. ಮೇಲೆ ಹೇಳಿದ ಜನರಲ್ಲಿ ಯಾರಿಗೆ ಶ್ರದ್ಧೆಯಿಲ್ಲವೋ ಮತ್ತು ಸದಾ ಸಂಶಯದಲ್ಲಿರುವರೋ ಅವರು ಮುನ್ನಡೆಯುವುದೇ ಇಲ್ಲ. ಭಗವಂತನಲ್ಲಿ ಮತ್ತು ಅವನು ತಿಳಿಸಿಕೊಟ್ಟ ಮಾತಿನಲ್ಲಿ ನಂಬಿಕೆ ಇಲ್ಲದಿರುವವರಿಗೆ ಈ ಲೋಕದಲ್ಲಾಗಲೀ ಮುಂದಿನ ಲೋಕದಲ್ಲಾಗಲೀ ಒಳ್ಳೆಯದಾಗುವುದಿಲ್ಲ. ಅವರಿಗೆ ಸುಖವೆಂಬುದೇ ಇಲ್ಲ. ಆದುದರಿಂದ ಅಪೌರುಷೇಯ ಧರ್ಮಗ್ರಂಥಗಳ ತತ್ವಗಳನ್ನು ಶ್ರದ್ಧೆಯಿಂದ ಅನುಸರಿಸಬೇಕು; ಇದರಿಂದ ಜ್ಞಾನವೇದಿಕೆಗೆ ಏರಬಹುದು. ಆಧ್ಯಾತ್ಮಿಕ ತಿಳುವಳಿಕೆಯ ದಿವ್ಯವೇದಿಕೆಗೆ ಏರಲು ಈ ಜ್ಞಾನವು ಮಾತ್ರ ನೆರವಾಗುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆಧ್ಯಾತ್ಮಿಕ ಮುಕ್ತಿಯಲ್ಲಿ ಸಂಶಯಾತ್ಮರಿಗೆ ಸ್ಥಾನವೇ ಇಲ್ಲ. ಆದುದರಿಂದ ಗುರುಶಿಷ್ಯ ಪರಂಪರೆಯಲ್ಲಿ ಬಂದ ಹಿರಿಯ ಆಚಾರ್ಯರ ಹೆಜ್ಜೆಗಳನ್ನು ಅನುಸರಿಸಿ ಯಶಸ್ಸನ್ನು ಪಡೆಯಬೇಕು.

## ಶ್ಲೋಕ - 41

**ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಞ್ಛಿನ್ನಸಂಶಯಮ್ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥೪೧॥**

**ಯೋಗ**—ಕರ್ಮಯೋಗದಲ್ಲಿ ಭಕ್ತಿಸೇವೆಯಿಂದ; **ಸನ್ನ್ಯಸ್ತ**—ವಿರಕ್ತನಾದವನು; **ಕರ್ಮಾಣಮ್**—ಕರ್ಮಫಲಗಳುಳ್ಳ; **ಜ್ಞಾನ**—ಜ್ಞಾನದಿಂದ; **ಸಞ್ಛಿನ್ನ**—ಕತ್ತರಿಸಿ; **ಸಂಶಯಮ್**—ಸಂಶಯಗಳುಳ್ಳ; **ಆತ್ಮವನ್ತಮ್**—ಆತ್ಮಸ್ಥಿತನಾದವನನ್ನು; **ನ**—ಎಂದಿಗೂ ಇಲ್ಲ; **ಕರ್ಮಾಣಿ**—ಕರ್ಮಗಳು; **ನಿಬಧ್ನಂತಿ**—ಬಂಧಿಸುತ್ತವೆ; **ಧನಂಜಯ**—ಧನಂಜಯನೇ.

## ಅನುವಾದ

**ಯಾರು ತನ್ನ ಕರ್ಮದ ಫಲಗಳನ್ನು ತ್ಯಜಿಸಿ ಭಕ್ತಿಪೂರ್ವಕ ಸೇವೆಯಲ್ಲಿ ಕರ್ಮಮಾಡುವನೋ ಮತ್ತು ಆಧ್ಯಾತ್ಮಿಕ ಜ್ಞಾನದಿಂದ ಸಂಶಯಗಳನ್ನು ನಾಶ ಮಾಡಿರುವನೋ ಅವನು ವಾಸ್ತವವಾಗಿ ಆತ್ಮದಲ್ಲಿ ನೆಲೆಸಿರುತ್ತಾನೆ. ಧನಂಜಯ, ಇಂತಹ ಮನುಷ್ಯನನ್ನು ಕರ್ಮಫಲಗಳು ಬಂಧಿಸಲಾರವು.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಭಗವಂತನೇ ಉಪದೇಶಿಸಿದ ರೀತಿಯಲ್ಲಿ ಭಗವದ್ಗೀತೆಯ ಬೋಧನೆಯನ್ನು ಅನುಸರಿಸುವವನು ಆಧ್ಯಾತ್ಮಿಕ ಜ್ಞಾನದ ಕೃಪೆಯಿಂದ ಎಲ್ಲ ಸಂಶಯಗಳಿಂದ ಮುಕ್ತನಾಗುತ್ತಾನೆ. ಭಗವಂತನ ವಿಭಿನ್ನಾಂಶವಾಗಿ ಆತನು ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿರುತ್ತ ಆಗಲೇ ಆತ್ಮಜ್ಞಾನದಲ್ಲಿ ನೆಲೆಗೊಂಡಿರುತ್ತಾನೆ. ಆದುದರಿಂದ ನಿಸ್ಸಂಶಯವಾಗಿ ಆತನಿಗೆ ಕರ್ಮಬಂಧನವಿಲ್ಲ.

## ಶ್ಲೋಕ - 42

**ತಸ್ಮಾದಜ್ಞಾನಸಮ್ಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥೪೨॥**

**ತಸ್ಮಾತ್**—ಆದ್ದರಿಂದ; **ಅಜ್ಞಾನ ಸಮ್ಭೂತಂ**—ಅಜ್ಞಾನದಿಂದ ಹುಟ್ಟಿದ; **ಹೃತ್ಸ್ಥಮ್** —ಹೃದಯಸ್ಥಿತವಾದ; **ಜ್ಞಾನ**—ಜ್ಞಾನದ; **ಅಸಿನಾ**—ಆಯುಧದಿಂದ; **ಆತ್ಮನಃ**—ತನ್ನ; **ಛಿತ್ತ್ವಾ**—ಕತ್ತರಿಸಿ; **ಏನಮ್**—ಈ; **ಸಂಶಯಮ್**—ಸಂದೇಹವನ್ನು; **ಯೋಗಮ್**— ಯೋಗದಲ್ಲಿ; **ಆತಿಷ್ಠ**—ನೆಲೆಸು; **ಉತ್ತಿಷ್ಠ**—ಹೋರಾಡಲು ಎದ್ದೇಳು; **ಭಾರತ**—ಭರತ ಕುಲದವನೇ.

## ಅನುವಾದ

**ಆದ್ದರಿಂದ ಅಜ್ಞಾನದಿಂದ ನಿನ್ನ ಹೃದಯದಲ್ಲಿ ಉದ್ಭವವಾಗಿರುವ ಸಂದೇಹಗಳನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸು. ಅರ್ಜುನ, ಯೋಗದಿಂದ ಸನ್ನದ್ಧನಾಗಿ ಯುದ್ಧಕ್ಕೆ ಏಳು.**

## ಭಾವಾರ್ಥ

ಈ ಅಧ್ಯಾಯದಲ್ಲಿ ಉಪದೇಶಿಸಿರುವ ಯೋಗಪದ್ಧತಿಯನ್ನು ಸನಾತನ ಯೋಗ ಅಥವಾ ಜೀವಿಯು ಮಾಡುವ ನಿರಂತರ ಕಾರ್ಯಗಳು ಎಂದು ಕರೆಯುತ್ತಾರೆ. ಈ ಯೋಗದಲ್ಲಿ, ಯಜ್ಞಕಾರ್ಯದ ಎರಡು ಭಾಗಗಳಿವೆ — ಮೊದಲನೆಯದು ಮನುಷ್ಯನ ಪ್ರಾಪಂಚಿಕ ಸಂಪತ್ತಿನ ಯಜ್ಞ. ಇನ್ನೊಂದಕ್ಕೆ ಆತ್ಮಜ್ಞಾನವೆಂದು ಹೆಸರು. ಆತ್ಮಜ್ಞಾನಕ್ಕಾಗಿ ಮಾಡುವ ಯಜ್ಞವು ಸಂಪೂರ್ಣವಾಗಿ ಆಧ್ಯಾತ್ಮಿಕ ಕ್ರಿಯೆ. ಮನುಷ್ಯನ ಸಂಪತ್ತಿನ ಯಜ್ಞವನ್ನು ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಹೊಂದಿಸದಿದ್ದರೆ ಅಂತಹ ಯಜ್ಞವು ಪ್ರಾಪಂಚಿಕವೇ ಆಗುತ್ತದೆ. ಆದರೆ ಒಂದು ಆಧ್ಯಾತ್ಮಿಕ ಗುರಿಯಿಂದ ಅಥವಾ ಭಕ್ತಿಪೂರ್ವಕ ಸೇವೆಯಾಗಿ ತನ್ನ ಪ್ರಾಪಂಚಿಕ ಸ್ವತ್ತನ್ನು ಯಜ್ಞಮಾಡುವವನು ಪರಿಪೂರ್ಣ ಯಜ್ಞವನ್ನು ಮಾಡುತ್ತಾನೆ. ಆಧ್ಯಾತ್ಮಿಕ ಕಾರ್ಯಗಳ ವಿಷಯ ಹೇಳುವುದಾದರೆ ಇವು ಎರಡು

ಬಗೆಯವು — ಮೊದಲನೆಯದು ತನ್ನ ಆತ್ಮವನ್ನು ಅಥವಾ ಸಹಜಸ್ವರೂಪವನ್ನು ಅರ್ಥಮಾಡಿಕೊಳ್ಳುವುದು. ಎರಡನೆಯದು ದೇವೋತ್ತಮ ಪರಮ ಪುರುಷನನ್ನು ಕುರಿತ ಸತ್ಯವನ್ನು ಅರ್ಥಮಾಡಿಕೊಳ್ಳುವುದು. ಭಗವದ್ಗೀತೆಯು ವಾಸ್ತವವಾಗಿ ಇರುವಂತೆ ಅದರ ಮಾರ್ಗವನ್ನು ಅನುಸರಿಸುವವನು ಆಧ್ಯಾತ್ಮಿಕ ಜ್ಞಾನದ ಈ ಎರಡು ಭಾಗಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಭಗವಂತನ ವಿಭಿನ್ನಾಂಶವಾಗಿ ಆತ್ಮದ ಪರಿಪೂರ್ಣಜ್ಞಾನವನ್ನು ಪಡೆಯುವುದು ಅವನಿಗೆ ಕಷ್ಟವಾಗುವುದಿಲ್ಲ. ಇಂತಹ ಅರಿವು ತುಂಬ ಉಪಯುಕ್ತವಾದದ್ದು. ಏಕೆಂದರೆ ಆತನು ಭಗವಂತನ ಆಧ್ಯಾತ್ಮಿಕ ಕಾರ್ಯಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ. ಈ ಅಧ್ಯಾಯದ ಪ್ರಾರಂಭದಲ್ಲಿ ಭಗವಂತನೇ ತನ್ನ ಆಧ್ಯಾತ್ಮಿಕ ಕಾರ್ಯಗಳನ್ನು ಚರ್ಚಿಸಿದ್ದಾನೆ. ಗೀತೆಯ ಉಪದೇಶವನ್ನು ಅರ್ಥಮಾಡಿಕೊಳ್ಳದವನು ಶ್ರದ್ಧಾಹೀನನು. ಭಗವಂತನು ಅವನಿಗೆ ನೀಡಿದ ಅಲ್ಪ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಳ್ಳುತ್ತಿದ್ದಾನೆ ಎಂದು ಭಾವಿಸಬೇಕು. ಇಂತಹ ಉಪದೇಶವು ಲಭ್ಯವಿದ್ದರೂ, ಭಗವಂತನ ನಿಜಸ್ವರೂಪವು ನಿತ್ಯಜ್ಞಾನಾನಂದಕರವಾದ ದೇವೋತ್ತಮ ಪರಮ ಪುರುಷನೆಂದು ಅರ್ಥಮಾಡಿಕೊಳ್ಳದಿರುವವನು ಮೂರ್ಖರಲ್ಲಿ ಮೂರ್ಖನು. ಕೃಷ್ಣಪ್ರಜ್ಞೆಯ ತತ್ವಗಳನ್ನು ಕ್ರಮಕ್ರಮವಾಗಿ ಸ್ವೀಕರಿಸಿ ಅಜ್ಞಾನವನ್ನು ಕಳೆದುಕೊಳ್ಳಬಹುದು. ದೇವತೆಗಳಿಗೆ ಮಾಡುವ ವಿವಿಧ ಯಜ್ಞಗಳು, ಬ್ರಹ್ಮನ್‌ಗೆ ಮಾಡುವ ಯಜ್ಞ, ಬ್ರಹ್ಮಚರ್ಯ ಯಜ್ಞ, ಕೌಟುಂಬಿಕ ಜೀವನದಲ್ಲಿ, ಇಂದ್ರಿಯನಿಗ್ರಹದಲ್ಲಿ, ಹಠಯೋಗದ ಆಚರಣೆಯಲ್ಲಿ, ತಪಸ್ಸಿನಲ್ಲಿ, ಐಹಿಕ ಸಂಪತ್ತನ್ನು ತ್ಯಜಿಸುವುದರಲ್ಲಿ, ವೇದಾಧ್ಯಯನದಲ್ಲಿ ಮತ್ತು ವರ್ಣಾಶ್ರಮಧರ್ಮದಲ್ಲಿ ನಿರತನಾಗುವುದರಲ್ಲಿ— ಇವೆಲ್ಲವುಗಳಲ್ಲಿ ಮಾಡುವ ಯಜ್ಞ, ಇಂತಹ ವಿವಿಧ ರೀತಿಗಳ ಯಜ್ಞಗಳು ಕೃಷ್ಣಪ್ರಜ್ಞೆಯನ್ನು ಎಚ್ಚರಿಸುತ್ತವೆ. ಇವೆಲ್ಲಕ್ಕೂ ಯಜ್ಞವೆಂದೇ ಹೆಸರು ಮತ್ತು ಇವೆಲ್ಲಕ್ಕೂ ನಿಯಂತ್ರಿತ ಕರ್ಮವೇ ಆಧಾರ. ಆದರೆ ಈ ಎಲ್ಲ ಕಾರ್ಯಗಳಲ್ಲಿ ಆತ್ಮಸಾಕ್ಷಾತ್ಕಾರವೇ ಮುಖ್ಯವಾದ ಅಂಶ. ಆ ಗುರಿಯನ್ನು ಅರಸುವವನೇ ಭಗವದ್ಗೀತೆಯ ನಿಜವಾದ ವಿದ್ಯಾರ್ಥಿ. ಆದರೆ ಕೃಷ್ಣನ ಅಧಿಕಾರದಲ್ಲಿ ಸಂಶಯ ಪಡುವವನು ಪತನ ಹೊಂದುತ್ತಾನೆ. ಆದುದರಿಂದ ಭಗವದ್ಗೀತೆಯನ್ನಾಗಲೀ ಬೇರೆ ಯಾವುದೇ ಧರ್ಮಗ್ರಂಥವನ್ನಾಗಲೀ ನಿಜವಾದ ಗುರುವಿನಿಂದ ಸೇವೆ ಮತ್ತು ಶರಣಾಗತಿಯ ಮನೋಧರ್ಮದಲ್ಲಿ ಕಲಿತುಕೊಳ್ಳಬೇಕೆಂದು ಸೂಚಿಸಲಾಗಿದೆ. ನಿಜವಾದ ಗುರುವು ಅನಾದಿಕಾಲದಿಂದ ಬಂದ ಗುರುಶಿಷ್ಯಪರಂಪರೆಗೆ ಸೇರಿರುತ್ತಾನೆ; ಲಕ್ಷಾಂತರ ವರ್ಷಗಳ ಹಿಂದೆ ಸೂರ್ಯದೇವನಿಗೆ ಉಪದೇಶಿತವಾಗಿ ಅವನಿಂದ ಭೂಲೋಕಕ್ಕೆ ಬಂದಿರುವ ಭಗವದ್ಗೀತೆಯ ಉಪದೇಶದಿಂದ ನಿಜವಾದ ಗುರುವು ತಪ್ಪಿಹೋಗುವುದಿಲ್ಲ. ಆದುದರಿಂದ ಗೀತೆಯಲ್ಲೇ ಅಭಿವ್ಯಕ್ತವಾಗಿರುವಂತೆ ಭಗವದ್ಗೀತೆಯ ಮಾರ್ಗವನ್ನು ಅನುಸರಿಸಬೇಕು. ಸ್ವಾರ್ಥ ಆಕಾಂಕ್ಷೆಗಳಿಂದಾಗಿ ಇತರರನ್ನು ಸರಿಯಾದ ದಾರಿಯಿಂದ ತಪ್ಪಿಸುವವರ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕು. ನಿಶ್ಚಯವಾಗಿಯೂ ಭಗವಂತನೇ ಪರಮ ಪುರುಷ. ಅವನ ಕಾರ್ಯಗಳು ಆಧ್ಯಾತ್ಮಿಕವಾದವು. ಇದನ್ನು ಅರ್ಥಮಾಡಿಕೊಂಡ ಮನುಷ್ಯನು ಭಗವದ್ಗೀತೆಯ ಅಧ್ಯಯನದ ಪ್ರಾರಂಭದಿಂದಲೂ ಮುಕ್ತನಾದವನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ದಿವ್ಯ ಜ್ಞಾನ" ಎಂಬ ನಾಲ್ಕನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 5

# ಕರ್ಮಯೋಗ - ಕೃಷ್ಣಪ್ರಜ್ಞೆಯಲ್ಲಿ ಕಾರ್ಯ

## ಶ್ಲೋಕ - 1

**ಅರ್ಜುನ ಉವಾಚ**

**ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ |**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ||೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಸನ್ನ್ಯಾಸಮ್**—ವಿರಕ್ತಿಯನ್ನು; **ಕರ್ಮಣಾಮ್**—ಎಲ್ಲ ಕಾರ್ಯಗಳ; **ಕೃಷ್ಣ**—ಕೃಷ್ಣನೇ; **ಪುನಃ**—ಮತ್ತೆ; **ಯೋಗಮ್**—ಭಕ್ತಿಸೇವೆಯನ್ನು; **ಚ**—ಕೂಡ; **ಶಂಸಸಿ**—ಹೊಗಳುತ್ತಿದ್ದೀಯೆ; **ಯತ್**—ಯಾವುದು; **ಶ್ರೇಯಃ**—ಹೆಚ್ಚು ಪ್ರಯೋಜನಕರ; **ಏತಯೋಃ**—ಇವೆರಡರಲ್ಲಿ; **ಏಕಮ್**—ಒಂದನ್ನು; **ತತ್**—ಅದನ್ನು; **ಮೇ**—ನನಗೆ; **ಬ್ರೂಹಿ**—ದಯವಿಟ್ಟು ಹೇಳು; **ಸುನಿಶ್ಚಿತಮ್**—ನಿರ್ಧಾರವಾಗಿ.

## ಅನುವಾದ

**ಅರ್ಜುನನು ಕೇಳಿದನು — ಹೇ ಕೃಷ್ಣ, ಮೊದಲು ನೀನು ಕರ್ಮವನ್ನು ಬಿಡಬೇಕೆಂದು ಹೇಳುತ್ತೀಯೆ. ಅನಂತರ ನೀನು ಭಕ್ತಿಪೂರ್ವಕ ಕರ್ಮವನ್ನು ಮಾಡಬೇಕೆಂದೂ ಹೇಳುತ್ತೀಯೆ. ಇವೆರಡರಲ್ಲಿ ಯಾವುದು ಹೆಚ್ಚು ಶ್ರೇಯಸ್ಕರ ಎಂದು ನನಗೆ ಖಚಿತವಾಗಿ ಹೇಳುವೆಯ?**

## ಭಾವಾರ್ಥ

ಭಗವದ್ಗೀತೆಯ ಈ ಐದನೆಯ ಅಧ್ಯಾಯದಲ್ಲಿ ಭಗವಂತನು ಭಕ್ತಿಸೇವೆಯು ಒಣ ಊಹಾತ್ಮಕ ಚಿಂತನೆಗಿಂತ ಉತ್ತಮ ಎಂದು ಹೇಳುತ್ತಾನೆ. ಊಹಾತ್ಮಕ ಚಿಂತನೆಗಿಂತ ಭಕ್ತಿಸೇವೆಯು ಸುಲಭ ಕೂಡ. ಏಕೆಂದರೆ ಅದು ಆಧ್ಯಾತ್ಮಿಕ ಸ್ವಭಾವದ್ದು. ಆದ್ದರಿಂದ ಅದು ನಮ್ಮನ್ನು ಕರ್ಮಬಂಧನದಿಂದ ಬಿಡುಗಡೆ ಮಾಡುತ್ತದೆ. ಎರಡನೆಯ ಅಧ್ಯಾಯದಲ್ಲಿ ಆತ್ಮದ ಸ್ವರೂಪವನ್ನು ಮತ್ತು ಭೌತಿಕ ಶರೀರದಲ್ಲಿ ಅದು ಬಂಧಿತವಾಗಿರುವುದನ್ನು ಕುರಿತು ಪ್ರಾಥಮಿಕವಾದ ಸಂಗತಿಗಳನ್ನು ವಿವರಿಸಲಾಯಿತು. **ಬುದ್ಧಿಯೋಗ** ಅಥವಾ ಭಕ್ತಿಸೇವೆಯ ಮೂಲಕ ಈ ಭೌತಿಕ ಸೆರೆಯಿಂದ ಬಿಡುಗಡೆ ಹೊಂದುವುದು ಹೇಗೆ ಎಂದು ವಿವರಿಸಲಾಯಿತು. ಮೂರನೆಯ ಅಧ್ಯಾಯದಲ್ಲಿ ಜ್ಞಾನದ ನೆಲೆಗೆ ಏರಿದವನು ಯಾವ ಕರ್ತವ್ಯಗಳನ್ನೂ ಮಾಡಬೇಕಾಗಿಲ್ಲ ಎಂದು ವಿವರಿಸಲಾಯಿತು. ನಾಲ್ಕನೆಯ ಅಧ್ಯಾಯದಲ್ಲಿ ಯಜ್ಞರೂಪದ ಎಲ್ಲ ಕರ್ಮವೂ ಜ್ಞಾನದಲ್ಲಿ ಕೊನೆಗೊಳ್ಳುತ್ತದೆ ಎಂದು ಭಗವಂತನು ಅರ್ಜುನನಿಗೆ ಹೇಳಿದನು. ಆದರೆ ನಾಲ್ಕನೆಯ ಅಧ್ಯಾಯದ ಅಂತ್ಯದಲ್ಲಿ ಭಗವಂತನು ಅರ್ಜುನನಿಗೆ, ಪರಿಪೂರ್ಣಜ್ಞಾನದಲ್ಲಿ ನೆಲೆಗೊಂಡಿದ್ದು, ಜಾಗೃತನಾಗಿ ಯುದ್ಧಮಾಡಬೇಕೆಂದು

ಹೇಳಿದನು. ಹೀಗೆ ಕೃಷ್ಣನು ಏಕಕಾಲದಲ್ಲಿ ಭಕ್ತಿಪೂರ್ವಕವಾದ ಕರ್ಮದ ಮಹತ್ವವನ್ನೂ ಮತ್ತು ಜ್ಞಾನದ ನೆಲೆಯಲ್ಲಿ ಕರ್ಮವನ್ನು ಆಚರಿಸದೆ ಇರುವುದರ ಮಹತ್ವವನ್ನೂ ಒತ್ತಿ ಹೇಳಿದನು. ಕೃಷ್ಣನ ಈ ಮಾತುಗಳಿಂದ ಅರ್ಜುನನು ಗಲಿಬಿಲಿಗೊಂಡದ್ದಲ್ಲದೆ ಅವನ ಸಂಕಲ್ಪಶಕ್ತಿಯೇ ಗೊಂದಲಕ್ಕೀಡಾಯಿತು. ಜ್ಞಾನದ ನೆಲೆಯಲ್ಲಿ ನಿಂತು ತ್ಯಾಗಮಾಡುವುದು ಎಂದರೆ ಎಲ್ಲ ಬಗೆಯ ಇಂದ್ರಿಯ ಕಾರ್ಯಗಳನ್ನು ನಿಲ್ಲಿಸಿಬಿಡುವುದು ಎಂದು ಅರ್ಜುನ ಅರ್ಥ ಮಾಡಿಕೊಂಡ. ಆದರೆ ಭಕ್ತಿಸೇವೆಯಲ್ಲಿರುವಾತ ಕಾರ್ಯಮಾಡುವಾಗ ಅದು ನಿಷ್ಕ್ರಿಯೆ ಹೇಗಾಗುತ್ತದೆ? ಇದನ್ನೇ ಬೇರೆ ಮಾತುಗಳಲ್ಲಿ ಹೀಗೆ ಹೇಳಬಹುದು — ಜ್ಞಾನಪೂರ್ವಕವಾದ ತ್ಯಾಗವೆಂದರೆ ಎಲ್ಲ ಕಾರ್ಯ ಚಟುವಟಿಕೆಗಳನ್ನು ನಿಲ್ಲಿಸಿಬಿಡುವುದು ಎಂದು ಅರ್ಜುನನಿಗೆ ತೋರಿತು. ಏಕೆಂದರೆ ಕರ್ಮ ಮತ್ತು ಸನ್ಯಾಸಗಳು ಒಂದಕ್ಕೊಂದು ಹೊಂದುವುದಿಲ್ಲ. ಆದರೆ ಸಂಪೂರ್ಣವಾದ ಜ್ಞಾನದಲ್ಲಿ ಮಾಡುವ ಕರ್ಮವು ಪ್ರತಿಕ್ರಿಯೆಯನ್ನು ಉಂಟುಮಾಡುವುದಿಲ್ಲ. ಆದುದರಿಂದ ಅದು ಅಕರ್ಮದಂತೆಯೇ. ಇದು ಅರ್ಜುನನಿಗೆ ತಿಳಿದಂತೆ ಕಾಣುವುದಿಲ್ಲ. ಆದ್ದರಿಂದ ತಾನು ಪೂರ್ತಿಯಾಗಿ ಕರ್ಮವನ್ನು ಬಿಟ್ಟುಬಿಡಬೇಕೇ ಅಥವಾ ಪೂರ್ಣಜ್ಞಾನದ ನೆಲೆಯಲ್ಲಿ ನಿಂತು ಕರ್ಮಮಾಡಬೇಕೆ ಎಂದು ಕೇಳುತ್ತಾನೆ.

## ಶ್ಲೋಕ - 2

**ಶ್ರೀ ಭಗವಾನುವಾಚ**

**ಸನ್ನ್ಯಾಸಃ ಕರ್ಮಯೋಗಶ್ಚ ನಿಃ ಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸನ್ನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥೨॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪುರುಷನು ಹೇಳಿದನು; **ಸನ್ನ್ಯಾಸಃ**—ಕಾರ್ಯಗಳ ಪರಿತ್ಯಾಗ; **ಕರ್ಮಯೋಗಃ**—ಭಕ್ತಿಯಲ್ಲಿ ಕಾರ್ಯವು; **ಚ**—ಕೂಡ; **ನಿಃಶ್ರೇಯಸ ಕರೌ**—ಮೋಕ್ಷಮಾರ್ಗಕ್ಕೆ ಒಯ್ಯುವಂತಹವು; **ಉಭೌ**—ಎರಡೂ; **ತಯೋಃ**—ಎರಡರಲ್ಲಿ; **ತು**—ಆದರೆ; **ಕರ್ಮ ಸನ್ನ್ಯಾಸಾತ್**—ಕಾಮ್ಯಕರ್ಮಪರಿತ್ಯಾಗಕ್ಕೆ ಹೋಲಿಸಿದಲ್ಲಿ; **ಕರ್ಮಯೋಗಃ**—ಭಕ್ತಿಯಲ್ಲಿ ಕಾರ್ಯವು; **ವಿಶಿಷ್ಯತೇ**—ಉತ್ತಮವಾದುದು.

## ಅನುವಾದ

**ದೇವೋತ್ತಮ ಪುರುಷನು ಹೀಗೆ ಉತ್ತರಿಸಿದನು—ಕರ್ಮ ಸನ್ಯಾಸ ಮತ್ತು ಭಕ್ತಿಸೇವಾಕರ್ಮ ಎರಡೂ ಮುಕ್ತಿಪಥಕ್ಕೆ ಕೊಂಡೊಯ್ಯುತ್ತವೆ. ಆದರೆ ಇವೆರಡರಲ್ಲಿ ಭಕ್ತಿಸೇವಾಕರ್ಮವು ಕರ್ಮಸನ್ಯಾಸಕ್ಕಿಂತ ಉತ್ತಮ.**

## ಭಾವಾರ್ಥ

ಫಲಾಪೇಕ್ಷೆಯಿಂದ ಕೂಡಿದ (ಇಂದ್ರಿಯ ತೃಪ್ತಿಯನ್ನು ಬಯಸುವ) ಕರ್ಮಗಳು ಐಹಿಕ ಬಂಧನಕ್ಕೆ ಕಾರಣ. ದೈಹಿಕ ಸುಖದ ಮಟ್ಟವನ್ನು ಹೆಚ್ಚಿಸಿಕೊಳ್ಳುವ ಕಾರ್ಯಗಳಲ್ಲಿ ಮನುಷ್ಯನು ತೊಡಗಿರುವಷ್ಟು ಕಾಲವೂ ಆತನು ಒಂದು ಬಗೆಯ ದೇಹದಿಂದ ಇನ್ನೊಂದು ಬಗೆಯ ದೇಹಕ್ಕೆ

ಸಾಗುತ್ತಿರುವುದು ಖಂಡಿತ. ಇದರಿಂದ ಐಹಿಕ ಬಂಧನವು ನಿರಂತರವಾಗಿ ಮುಂದುವರಿಯುತ್ತಿರುವುದು. ಶ್ರೀಮದ್ಭಾಗವತವು (5.5.4-6) ಇದನ್ನು ಹೀಗೆ ದೃಢಪಡಿಸುತ್ತದೆ.

ನೂನಂ ಪ್ರಮತ್ತಃ ಕುರುತೇ ವಿಕರ್ಮ
ಯದಿನ್ದ್ರಿಯಪ್ರೀತಯ ಆಪೃಣೋತಿ ।
ನ ಸಾಧು ಮನ್ಯೇ ಯತ ಆತ್ಮನೋಽಯಮ್
ಆಸನ್ನಪಿ ಕ್ಲೇಶದ ಆಸ ದೇಹಃ ॥

ಪರಾಭವಸ್ತಾವದಬೋಧಜಾತೋ
ಯಾವನ್ನ ಜಿಜ್ಞಾಸತ ಆತ್ಮತತ್ತ್ವಮ್ ।
ಯಾವತ್ಕ್ರಿಯಾಸ್ತಾವದಿದಂ ಮನೋ ವೈ
ಕರ್ಮಾತ್ಮಕಂ ಯೇನ ಶರೀರಬನ್ಧಃ ॥

ಏವಂ ಮನಃ ಕರ್ಮವಶಂ ಪ್ರಯುಂಕ್ತೇ
ಅವಿದ್ಯಯಾತ್ಮನ್ಯುಪಧೀಯಮಾನೇ ।
ಪ್ರೀತಿರ್ನಯಾವನ್ಮಯಿ ವಾಸುದೇವೇ
ನ ಮುಚ್ಯತೇ ದೇಹಯೋಗೇನ ತಾವತ್ ॥

"ಇಂದ್ರಿಯ ತೃಪ್ತಿಗಾಗಿ ಜನರು ಉನ್ಮತ್ತರಾಗುತ್ತಾರೆ. ಯಾತನೆಗಳಿಂದ ತುಂಬಿದ ಈಗಿನ ಶರೀರವು ಹಿಂದಿನ ಜನ್ಮಗಳಲ್ಲಿ ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡಿದ್ದರ ಪರಿಣಾಮ ಎಂದು ಅವರಿಗೆ ತಿಳಿಯದು. ದೇಹವು ಅಲ್ಪಕಾಲದ್ದಾದರೂ ಅನೇಕ ರೀತಿಗಳಲ್ಲಿ ತೊಂದರೆ ಕೊಡುತ್ತದೆ. ಆದುದರಿಂದ ಇಂದ್ರಿಯ ತೃಪ್ತಿಗಾಗಿ ಕರ್ಮಮಾಡುವುದು ಒಳ್ಳೆಯದಲ್ಲ. ಒಬ್ಬ ಮನುಷ್ಯನು ತನ್ನ ನಿಜವಾದ ಸ್ವರೂಪವನ್ನು ಕುರಿತು ಜಿಜ್ಞಾಸೆ ಮಾಡದೆ ಇರುವವರೆಗೆ ಅವನು ಬದುಕಿನಲ್ಲಿ ವಿಫಲನಾದವನು ಎಂದು ಭಾವಿಸಬೇಕು. ನಿಜವಾದ ಸ್ವರೂಪವು ತಿಳಿಯುವವರೆಗೆ ಅವನು ಇಂದ್ರಿಯತೃಪ್ತಿಗಾಗಿ ಫಲಾಪೇಕ್ಷೆಯಿಂದ ಕರ್ಮವನ್ನು ಮಾಡಬೇಕಾಗುತ್ತದೆ; ಇಂದ್ರಿಯತೃಪ್ತಿಯ ಪ್ರಜ್ಞೆಯಲ್ಲಿ ಮುಳುಗಿರುವವರೆಗೆ ಮನುಷ್ಯನು ದೇಹದಿಂದ ದೇಹಕ್ಕೆ ಸಾಗುತ್ತಿರಬೇಕಾಗುತ್ತದೆ. ಮನಸ್ಸು ಕಾಮ್ಯಕರ್ಮವಶವಾಗಿದ್ದು ಅಜ್ಞಾನದ ಪ್ರಭಾವಕ್ಕೆ ಒಳಗಾಗಿದ್ದರೂ ಮನುಷ್ಯನು ವಾಸುದೇವನ ಭಕ್ತಿಸೇವೆಯಲ್ಲಿ ಪ್ರೀತಿಯನ್ನು ಬೆಳೆಸಿಕೊಳ್ಳಬೇಕು. ಆಗ ಮಾತ್ರ ಮನುಷ್ಯನಿಗೆ ಐಹಿಕ ಅಸ್ತಿತ್ವದ ಬಂಧನದಿಂದ ಮುಕ್ತನಾಗುವ ಅವಕಾಶ ಲಭ್ಯವಾಗುತ್ತದೆ."

ಆದುದರಿಂದ ಜ್ಞಾನವು (ನಾನು ಈ ಜಡಶರೀರವಲ್ಲ, ಆತ್ಮ ಎಂಬ ಅರಿವು) ಮುಕ್ತಿಗೆ ಸಾಲದು. ಚೇತನಾತ್ಮನ ನೆಲೆಯಿಂದ ಮನುಷ್ಯನು ಕ್ರಿಯಾಶೀಲನಾಗಬೇಕಾಗುತ್ತದೆ. ಇಲ್ಲವಾದರೆ ಐಹಿಕ ಬಂಧನದಿಂದ ಮುಕ್ತಿಯಿಲ್ಲ. ಕೃಷ್ಣಪ್ರಜ್ಞೆಯಿಂದ ಕೂಡಿದ ಕರ್ಮವು ಮಾತ್ರ ಫಲಾಪೇಕ್ಷೆಯಿಂದ ಮಾಡಿದ ಕರ್ಮವಲ್ಲ. ಪೂರ್ಣಜ್ಞಾನದಿಂದ ಮಾಡಿದ ಕಾರ್ಯಚಟುವಟಿಕೆಗಳು ಮನುಷ್ಯನು ನಿಜವಾದ ಜ್ಞಾನವನ್ನು ಬೆಳೆಸಿಕೊಳ್ಳಲು ನೆರವಾಗುತ್ತವೆ. ಕೃಷ್ಣಪ್ರಜ್ಞೆಯಿಲ್ಲದೆ, ಫಲಾಪೇಕ್ಷೆಯಿರುವ ಕೆಲಸಗಳನ್ನು ತ್ಯಜಿಸಿದ ಮಾತ್ರಕ್ಕೆ ಹೃದಯವು ಪರಿಶುದ್ಧವಾಗುವುದಿಲ್ಲ. ಹೃದಯವು ಪರಿಶುದ್ಧವಾಗುವವರೆಗೆ ಮನುಷ್ಯನು ಫಲಾಪೇಕ್ಷೆಯ ನೆಲೆಯಲ್ಲಿಯೇ

ಕಾರ್ಯಮಾಡಬೇಕಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಮಾಡಿದ ಕರ್ಮವು ತಂತಾನೇ ಕರ್ಮಫಲದಿಂದ ಮನುಷ್ಯನು ಬಿಡುಗಡೆ ಹೊಂದಲು ನೆರವಾಗುತ್ತದೆ. ಇದರಿಂದ ಮನುಷ್ಯನು ಐಹಿಕ ನೆಲೆಗೆ ಇಳಿಯುವ ಅಗತ್ಯವಿರುವುದಿಲ್ಲ. ಕರ್ಮತ್ಯಾಗದಲ್ಲಿ ವ್ಯಕ್ತಿಯು ವಿಫಲನಾಗುವ ಅಪಾಯ ಇದ್ದೇ ಇದೆ. ಆದ್ದರಿಂದ ಕೃಷ್ಣಪ್ರಜ್ಞೆಯಿಂದ ಕೂಡಿ ಕರ್ಮಾಚರಣೆ ಮಾಡುವುದು ಯಾವಾಗಲೂ ಕರ್ಮತ್ಯಾಗಕ್ಕಿಂತ ಉತ್ತಮವಾದದ್ದು. ಕೃಷ್ಣಪ್ರಜ್ಞೆ ಇಲ್ಲದ ಕರ್ಮತ್ಯಾಗವು ಅಪೂರ್ಣವಾದದ್ದು; ಶ್ರೀಲ ರೂಪಗೋಸ್ವಾಮಿಯವರು ತಮ್ಮ ಭಕ್ತಿರಸಾಮೃತಸಿಂಧುವಿನಲ್ಲಿ (1.2.258) ಇದನ್ನು ದೃಢಪಡಿಸಿದ್ದಾರೆ—

ಪ್ರಾಪಞ್ಚಿಕತಯಾ ಬುದ್ಧ್ಯಾ ಹರಿಸಮ್ಬನ್ಧಿವಸ್ತುನಃ |
ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ ||

"ಮುಕ್ತಿಯನ್ನು ಸಾಧಿಸಲು ಕಾತರರಾಗಿರುವ ವ್ಯಕ್ತಿಗಳು ದೇವೋತ್ತಮ ಪರಮ ಪುರುಷನಿಗೆ ಸಂಬಂಧಿಸಿದ ವಿಷಯಗಳನ್ನು ಐಹಿಕವೆಂದು ಭಾವಿಸಿ ತ್ಯಜಿಸಿದರೆ ಅವರ ತ್ಯಾಗವನ್ನು ಅಪೂರ್ಣ ಎಂದು ಹೇಳಲಾಗುತ್ತದೆ." ಅಸ್ತಿತ್ವದಲ್ಲಿರುವ ಪ್ರತಿಯೊಂದು ವಸ್ತುವೂ ಭಗವಂತನಿಗೆ ಸೇರಿದ್ದು. ಯಾರೂ ಯಾವ ವಸ್ತುವಿನ ಮೇಲೂ ತಮ್ಮ ಒಡೆತನವನ್ನು ಸಾಧಿಸಬಾರದು ಎನ್ನುವ ಅರಿವಿನಿಂದ ಮಾಡಿದ ತ್ಯಾಗವು ಸಂಪೂರ್ಣವಾದದ್ದು. ವಾಸ್ತವವಾಗಿ ಯಾವುದೂ ಯಾರಿಗೂ ಸೇರಿದ್ದಲ್ಲ ಎನ್ನುವುದನ್ನು ತಿಳಿದುಕೊಳ್ಳಬೇಕು. ಹಾಗಿರುವಾಗ ತ್ಯಾಗದ ಪ್ರಶ್ನೆ ಎಲ್ಲಿ ಬಂತು? ಎಲ್ಲವೂ ಕೃಷ್ಣನಿಗೆ ಸೇರಿದ್ದು ಎನ್ನುವ ಅರಿವಿರುವ ವ್ಯಕ್ತಿಯು ಸದಾ ತ್ಯಾಗದಲ್ಲಿಯೇ ನೆಲೆಸಿರುತ್ತಾನೆ. ಎಲ್ಲವೂ ಕೃಷ್ಣನಿಗೆ ಸೇರಿದ್ದಾದ್ದರಿಂದ ಎಲ್ಲವನ್ನೂ ಕೃಷ್ಣನ ಸೇವೆಗೆ ಬಳಸಬೇಕು. ಮಾಯಾವಾದಿ ಪಂಥದ ಸನ್ಯಾಸಿಯು ಕೃತಕವಾಗಿ ಎಷ್ಟೇ ತ್ಯಾಗಮಾಡಿದರೂ ಕೃಷ್ಣಪ್ರಜ್ಞೆಯಲ್ಲಿ ಮಾಡುವ ಪರಿಪೂರ್ಣ ಕರ್ಮವು ಅದಕ್ಕಿಂತ ಬಹುಶ್ರೇಷ್ಠವಾದದ್ದು.

## ಶ್ಲೋಕ - 3

ಜ್ಞೇಯಃ ಸ ನಿತ್ಯಸನ್ನ್ಯಾಸೀ ಯೋ ನ ದ್ವೇಷ್ಟಿ ನ ಕಾಙ್ಕ್ಷತಿ |
ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ ಪ್ರಮುಚ್ಯತೇ ||೩||

ಜ್ಞೇಯಃ—ತಿಳಿಯಬೇಕು; ಸಃ—ಅವನು; ನಿತ್ಯ—ಯಾವಾಗಲೂ; ಸನ್ನ್ಯಾಸೀ—ತ್ಯಾಗಿಯು ಎಂದು; ಯಃ—ಯಾರು; ನ ದ್ವೇಷ್ಟಿ—ದ್ವೇಷಿಸುವುದಿಲ್ಲವೋ; ನ ಕಾಙ್ಕ್ಷತಿ—ಇಚ್ಛಿಸುವುದಿಲ್ಲವೋ; ನಿರ್ದ್ವನ್ದ್ವಃ—ಸಕಲದ್ವಂದ್ವಗಳಿಂದ ಮುಕ್ತನಾದವನು; ಹಿ—ಖಂಡಿತವಾಗಿಯೂ; ಮಹಾ ಬಾಹೋ—ಮಹಾಬಾಹುವೇ; ಸುಖಮ್—ಸುಖವಾಗಿ; ಬನ್ಧಾತ್—ಬಂಧನದಿಂದ; ಪ್ರಮುಚ್ಯತೇ—ಪೂರ್ಣವಾಗಿ ಮುಕ್ತನಾಗುವನು.

## ಅನುವಾದ

**ಕರ್ಮಫಲದಲ್ಲಿ ತಿರಸ್ಕಾರವಾಗಲೀ ಅಪೇಕ್ಷೆಯಾಗಲೀ ಇಲ್ಲದವನನ್ನು ನಿತ್ಯ ಸನ್ಯಾಸಿ ಎಂದು ತಿಳಿಯಬೇಕು. ಮಹಾಬಾಹುವಾದ ಅರ್ಜುನನೇ, ದ್ವಂದ್ವಗಳಿಂದ ಮುಕ್ತನಾದ ಇಂತಹ ಮನುಷ್ಯನು ಸುಲಭವಾಗಿ ಐಹಿಕ ಬಂಧನದಿಂದ ಪಾರಾಗುತ್ತಾನೆ ಮತ್ತು ಸಂಪೂರ್ಣವಾಗಿ ಮುಕ್ತನಾಗುತ್ತಾನೆ.**

## ಭಾವಾರ್ಥ

ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿರುವ ವ್ಯಕ್ತಿಯು ಸದಾ ಸನ್ಯಾಸಿ. ಏಕೆಂದರೆ ಅವನಿಗೆ ಕರ್ಮಫಲದಲ್ಲಿ ತಿರಸ್ಕಾರವೂ ಇಲ್ಲ, ಅಪೇಕ್ಷೆಯೂ ಇಲ್ಲ, ಭಗವಂತನ ದಿವ್ಯ ಪ್ರೀತಿಪೂರ್ವಕ ಸೇವೆಗೆ ಮುಡಿಪಾದ ಇಂತಹ ತ್ಯಾಗಿಯು ಸಂಪೂರ್ಣ ಜ್ಞಾನವುಳ್ಳವನು. ಏಕೆಂದರೆ ಅವನಿಗೆ ಕೃಷ್ಣನೊಡನೆ ತನ್ನ ಸಂಬಂಧದ ನಿಜಸ್ವರೂಪದ ಅರಿವಿರುತ್ತದೆ. ಕೃಷ್ಣನು ಪೂರ್ಣನು, ತಾನು ಕೃಷ್ಣನ ವಿಭಿನ್ನಾಂಶ ಎಂದು ಅವನಿಗೆ ಸಂಪೂರ್ಣವಾಗಿ ತಿಳಿದಿರುತ್ತದೆ. ಇಂತಹ ಜ್ಞಾನವು ಗುಣಾತ್ಮಕವಾಗಿ ಮತ್ತು ಪರಿಮಾಣಾತ್ಮಕವಾಗಿ ಸರಿಯಾಗಿರುತ್ತದೆ. ಆದುದರಿಂದ ಅದು ಪರಿಪೂರ್ಣ. ಕೃಷ್ಣನೊಂದಿಗೆ ಒಂದಾಗಿರುವ ಪರಿಕಲ್ಪನೆಯು ಸರಿಯಲ್ಲ. ಏಕೆಂದರೆ ಭಾಗವು ಪೂರ್ಣಕ್ಕೆ ಸಮನಾಗಲು ಸಾಧ್ಯವಿಲ್ಲ. ಗುಣದಲ್ಲಿ ಒಂದೇ ಆದರೂ ಪರಿಮಾಣದಲ್ಲಿ ಬೇರೆ ಎನ್ನುವ ತಿಳುವಳಿಕೆಯು ಸರಿಯಾದ ಆಧ್ಯಾತ್ಮಿಕ ಜ್ಞಾನ. ಇದರಿಂದ ಮನುಷ್ಯನು ತನ್ನಲ್ಲಿಯೇ ಪೂರ್ಣನಾಗುತ್ತಾನೆ. ಆಗ ಅವನು ಯಾವುದಕ್ಕಾಗಿಯೂ ಆಸೆಪಡಬೇಕಾಗಿಯೂ ಇಲ್ಲ, ವಿಷಾದಿಸಬೇಕಾಗಿಯೂ ಇಲ್ಲ. ಅವನ ಮನಸ್ಸಿನಲ್ಲಿ ದ್ವಂದ್ವವಿಲ್ಲ. ಏಕೆಂದರೆ ಅವನು ಏನು ಮಾಡಿದರೂ ಅದು ಕೃಷ್ಣನಿಗಾಗಿ. ಹೀಗೆ ದ್ವಂದ್ವಗಳ ನೆಲೆಯಿಂದ ಬಿಡುಗಡೆ ಹೊಂದಿ ಅವನು ಈ ಐಹಿಕ ಜಗತ್ತಿನಲ್ಲಿರುವಂತೆಯೇ ಮುಕ್ತನಾಗುತ್ತಾನೆ.

## ಶ್ಲೋಕ - 4

**ಸಾನ್ಖ್ಯಯೋಗೌ ಪೃಥಗ್ ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿನ್ದತೇ ಫಲಮ್ ॥೪॥**

**ಸನ್ಖ್ಯ**—ಭೌತಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನ; **ಯೋಗೌ**—ಭಕ್ತಿಸೇವೆಯಲ್ಲಿ ಕಾರ್ಯಗಳು; **ಪೃಥಕ್**—ವಿಭಿನ್ನವು ಎಂದು; **ಬಾಲಾಃ**—ಮಂದಮತಿಗಳು; **ಪ್ರವದನ್ತಿ**—ಹೇಳುತ್ತಾರೆ; **ನ**—ಎಂದಿಗೂ ಅಲ್ಲ; **ಪಣ್ಡಿತಾಃ**—ವಿದ್ವಾಂಸರು; **ಏಕಮ್**—ಒಂದರಲ್ಲಿ; **ಅಪಿ**—ಕೂಡ; **ಆಸ್ಥಿತಃ**—ಸ್ಥಿತರಾಗಿ; **ಸಮ್ಯಕ್**—ಪೂರ್ತಿಯಾಗಿ; **ಉಭಯೋಃ**—ಎರಡರ; **ವಿನ್ದತೇ**—ಅನುಭವಿಸುತ್ತಾರೆ; **ಫಲಮ್**—ಫಲವನ್ನು;

## ಅನುವಾದ

**ಭಕ್ತಿಸೇವೆಯು (ಕರ್ಮಯೋಗ) ಐಹಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನ (ಸಾಂಖ್ಯ)ದಿಂದ ಭಿನ್ನವಾದದ್ದು ಎಂದು ಅಜ್ಞಾನಿಗಳು ಮಾತ್ರ ಹೇಳುತ್ತಾರೆ. ಇವೆರಡರಲ್ಲಿ ಯಾವುದನ್ನಾದರೂ ಮನಃಪೂರ್ವಕವಾಗಿ ಅನುಷ್ಠಾನ ಮಾಡಿದವನು ಎರಡು ಮಾರ್ಗಗಳ ಫಲವನ್ನೂ ಹೊಂದುತ್ತಾನೆ ಎಂದು ನಿಜವಾದ ವಿದ್ವಾಂಸರು ಹೇಳುತ್ತಾರೆ.**

## ಭಾವಾರ್ಥ

ಸಾಂಖ್ಯದ (ಎಂದರೆ ಐಹಿಕ ಜಗತ್ತಿನ ವಿಶ್ಲೇಷಣಾತ್ಮಕ ಅಧ್ಯಯನದ) ಗುರಿಯು ಜಗತ್ತಿನ ಆತ್ಮವನ್ನು ಕಂಡುಕೊಳ್ಳುವುದು. ಐಹಿಕ ಜಗತ್ತಿನ ಆತ್ಮವು ವಿಷ್ಣು ಅಥವಾ ಪರಮಾತ್ಮ.

ಭಗವಂತನ ಭಕ್ತಿಪೂರ್ವಕ ಸೇವೆ ಎಂದರೆ ಪರಮಾತ್ಮನ ಸೇವೆ. ಒಂದು ಪ್ರಕ್ರಿಯೆಯು ಮರದ ಬೇರನ್ನು ಹುಡುಕುವುದಾಗಿದೆ; ಮತ್ತೊಂದು, ಬೇರಿಗೆ ನೀರೆರೆಯುವುದಾಗಿದೆ. ಸಾಂಖ್ಯದ ಸಿದ್ಧಾಂತದ ನಿಜವಾದ ವಿದ್ಯಾರ್ಥಿಯು ಐಹಿಕ ಜಗತ್ತಿನ ಬೇರಾದ ವಿಷ್ಣುವನ್ನು ಕಾಣುತ್ತಾನೆ. ಅನಂತರ ಸಂಪೂರ್ಣಜ್ಞಾನದಲ್ಲಿ ಭಗವಂತನ ಸೇವೆಗೆ ಮುಡಿಪಾಗುತ್ತಾನೆ. ಆದುದರಿಂದ ಇವೆರಡರ ಸಾರದಲ್ಲಿಯೂ ವ್ಯತ್ಯಾಸವಿಲ್ಲ. ಏಕೆಂದರೆ ಎರಡರ ಗುರಿಯೂ ವಿಷ್ಣುವೇ. ಕಟ್ಟಕಡೆಯ ಗುರಿಯನ್ನು ತಿಳಿಯದವರು ಸಾಂಖ್ಯ ಮತ್ತು ಕರ್ಮಯೋಗಗಳ ಉದ್ದೇಶಗಳು ಒಂದೇ ಅಲ್ಲ ಎನ್ನುತ್ತಾರೆ. ಆದರೆ ವಿದ್ವಾಂಸನು ಈ ಭಿನ್ನಪ್ರಕ್ರಿಯೆಗಳ ಗುರಿಯು ಒಂದೇ ಎಂಬುದನ್ನು ತಿಳಿದಿರುತ್ತಾನೆ.

## ಶ್ಲೋಕ - 5

**ಯತ್ ಸಾಙ್ಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ ಯೋಗೈರಪಿ ಗಮ್ಯತೇ ।**
**ಏಕಂ ಸಾಙ್ಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥೫॥**

**ಯತ್**—ಯಾವುದು; **ಸಾಂಖ್ಯೈಃ**—ಸಾಂಖ್ಯದರ್ಶನದಿಂದ; **ಪ್ರಾಪ್ಯತೇ**—ಹೊಂದಲ್ಪಡುವುದೋ; **ಸ್ಥಾನಮ್**—ಸ್ಥಾನವು; **ತತ್**—ಆ; **ಯೋಗೈಃ**—ಭಕ್ತಿಸೇವೆಯಿಂದ; **ಅಪಿ**—ಕೂಡ; **ಗಮ್ಯತೇ**—ಹೊಂದಲ್ಪಡುವುದು; **ಏಕಮ್**—ಒಂದು; **ಸಾಙ್ಖ್ಯಮ್**—ವಿಶ್ಲೇಷಣಾತ್ಮಕ ಅಧ್ಯಯನವನ್ನೂ; **ಚ**—ಮತ್ತು; **ಯೋಗಮ್**—ಭಕ್ತಿಯಲ್ಲಿ ಕಾರ್ಯವನ್ನೂ; **ಚ**—ಮತ್ತು; **ಯಃ**—ಯಾರು; **ಪಶ್ಯತಿ**—ನೋಡುತ್ತಾನೋ; **ಸಃ**—ಅವನು; **ಪಶ್ಯತಿ**—ವಾಸ್ತವವಾಗಿ ಕಾಣುತ್ತಾನೆ.

## ಅನುವಾದ

**ಸಾಂಖ್ಯದಿಂದ ಯಾವ ಸ್ಥಾನವನ್ನು ಪಡೆಯಬಹುದೋ ಅದೇ ಸ್ಥಾನವನ್ನು ಭಕ್ತಿಸೇವೆಯಿಂದ ಪಡೆಯಬಹುದು ಎಂದು ತಿಳಿದುಕೊಂಡು, ಸಾಂಖ್ಯವೂ ಭಕ್ತಿಸೇವೆಯೂ ಒಂದೇ ಮಟ್ಟದಲ್ಲಿವೆ ಎನ್ನುವುದನ್ನು ಕಂಡುಕೊಳ್ಳುವವನು ವಿಷಯಗಳನ್ನು ಯಥಾವತ್ತಾಗಿ ಕಾಣುತ್ತಾನೆ.**

## ಭಾವಾರ್ಥ

ತತ್ವಶಾಸ್ತ್ರದ ಸಂಶೋಧನೆಯ ನಿಜವಾದ ಉದ್ದೇಶವು ಬದುಕಿನ ಅಂತಿಮ ಗುರಿಯನ್ನು ಕಂಡುಕೊಳ್ಳುವುದು. ಆತ್ಮಸಾಕ್ಷಾತ್ಕಾರವೇ ಬದುಕಿನ ಅಂತಿಮಗುರಿಯಾದದ್ದರಿಂದ ಈ ಎರಡು ಪ್ರಕ್ರಿಯೆಗಳ ನಿರ್ಣಯಗಳಲ್ಲಿ ವ್ಯತ್ಯಾಸವಿಲ್ಲ. ಸಾಂಖ್ಯ ಸಿದ್ಧಾಂತದ ಸಂಶೋಧನೆಯ ಫಲವಾಗಿ ಜೀವಿಯು ಐಹಿಕ ಜಗತ್ತಿನ ವಿಭಿನ್ನಾಂಶವಲ್ಲ, ಆದರೆ ಪೂರ್ಣ ಪರಮ ಚೇತನದ ಭಾಗ ಎನ್ನುವ ನಿರ್ಣಯಕ್ಕೆ ಬರುತ್ತೇವೆ. ಆದ್ದರಿಂದ ಆತ್ಮಕ್ಕೂ ಐಹಿಕ ಜಗತ್ತಿಗೂ ಸಂಬಂಧವಿಲ್ಲ. ಆತ್ಮನ ಕ್ರಿಯೆಗಳು ಪರಮ ಚೇತನದೊಂದಿಗೆ ಯಾವುದಾದರೂ ಸಂಬಂಧ ಹೊಂದಿರಬೇಕು. ಆತ್ಮನು ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡಿದಾಗ ಅವನು ವಾಸ್ತವವಾಗಿ ತನ್ನ ನಿಜಸ್ವರೂಪದಲ್ಲಿರುತ್ತಾನೆ. ಮೊದಲನೆಯ ಪ್ರಕ್ರಿಯೆಯಾದ ಸಾಂಖ್ಯದಲ್ಲಿ ಮನುಷ್ಯನು ಜಡವಸ್ತುವಿನಿಂದ ಬೇರೆಯಾಗಬೇಕು. ಭಕ್ತಿಯೋಗದ ಪ್ರಕ್ರಿಯೆಯಲ್ಲಿ ಅವನು ಕೃಷ್ಣಪ್ರಜ್ಞೆಯ ಕಾರ್ಯದಲ್ಲಿ ಆಸಕ್ತನಾಗಬೇಕು. ಒಂದು ಪ್ರಕ್ರಿಯೆಯಲ್ಲಿ ನಿರಾಸಕ್ತಿಯೂ ಇನ್ನೊಂದು ಪ್ರಕ್ರಿಯೆಯಲ್ಲಿ ಆಸಕ್ತಿಯೂ ಅಗತ್ಯವಾಗಿರುವಂತೆ ಮೇಲ್ನೋಟಕ್ಕೆ

ತೋರಿದರೂ ವಾಸ್ತವವಾಗಿ ಎರಡು ಪ್ರಕ್ರಿಯೆಗಳೂ ಒಂದೇ. ಜಡವಸ್ತುವಿನಲ್ಲಿ ನಿರಾಸಕ್ತಿ ಮತ್ತು ಕೃಷ್ಣನಲ್ಲಿ ಆಸಕ್ತಿ ಎರಡೂ ಒಂದೇ. ಇದನ್ನು ಕಾಣಬಲ್ಲ ವ್ಯಕ್ತಿ, ವಿಷಯಗಳನ್ನು ಯಥಾವತ್ತಾಗಿ ಕಾಣುತ್ತಾನೆ.

## ಶ್ಲೋಕ - 6

**ಸನ್ನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ |**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ||೬||**

**ಸನ್ನ್ಯಾಸಃ**—ಸನ್ಯಾಸಾಶ್ರಮವು; **ತು**—ಆದರೆ; **ಮಹಾ ಬಾಹೋ**—ಮಹಾಬಾಹುವೇ; **ದುಃಖಮ್**—ದುಃಖವನ್ನು; **ಆಪ್ತುಮ್**—ಉಂಟುಮಾಡುತ್ತದೆ; **ಅಯೋಗತಃ**—ಭಕ್ತಿಸೇವೆ ಇಲ್ಲದೆ; **ಯೋಗ ಯುಕ್ತಃ**—ಭಕ್ತಿಸೇವೆಯಲ್ಲಿ ತೊಡಗಿದ; **ಮುನಿಃ**—ಚಿಂತಕನು; **ಬ್ರಹ್ಮ**—ಪರಮೋನ್ನತನನ್ನು; **ನ ಚಿರೇಣ**—ವಿಳಂಬವಿಲ್ಲದೆ; **ಅಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗದೆ ಎಲ್ಲ ಬಗೆಯ ಕರ್ಮಗಳನ್ನು ತ್ಯಜಿಸಿದ ಮಾತ್ರಕ್ಕೆ ಮನುಷ್ಯನು ಸುಖಿಯಾಗಲಾರ. ಆದರೆ ಭಕ್ತಿಸೇವೆಯಲ್ಲಿ ನಿರತನಾದ ವಿಚಾರವಂತನು ಶೀಘ್ರವಾಗಿ ಪರಮ ಪ್ರಭುವನ್ನು ಪಡೆಯುತ್ತಾನೆ.**

## ಭಾವಾರ್ಥ

ಸನ್ಯಾಸಿಗಳಲ್ಲಿ ಎರಡು ವರ್ಗಗಳಿವೆ. ಮಾಯಾವಾದಿ ಸನ್ಯಾಸಿಗಳು ಸಾಂಖ್ಯ ಸಿದ್ಧಾಂತದ ಅಧ್ಯಯನದಲ್ಲಿ ತೊಡಗಿರುತ್ತಾರೆ. ವೈಷ್ಣವ ಸನ್ಯಾಸಿಗಳಾದರೋ ಭಾಗವತದ ಸಿದ್ಧಾಂತದ ಅಧ್ಯಯನದಲ್ಲಿ ತೊಡಗಿರುತ್ತಾರೆ. ಭಾಗವತವು ವೇದಾಂತಸೂತ್ರಗಳಿಗೆ ಸರಿಯಾದ ಭಾಷ್ಯವನ್ನು ನೀಡುತ್ತದೆ. ಮಾಯಾವಾದಿ ಸನ್ಯಾಸಿಗಳೂ ವೇದಾಂತ ಸೂತ್ರಗಳನ್ನು ಅಧ್ಯಯನ ಮಾಡುತ್ತಾರೆ. ಆದರೆ ಅವರು ಶಂಕರಾಚಾರ್ಯರು ಬರೆದ ಶಾರೀರಕಭಾಷ್ಯ ಎನ್ನುವ ತಮ್ಮದೇ ಆದ ಭಾಷ್ಯವನ್ನು ಉಪಯೋಗಿಸುತ್ತಾರೆ. ಭಾಗವತ ಪಂಥದ ವಿದ್ಯಾರ್ಥಿಗಳು ಪಾಂಚರಾತ್ರಿಕೀ ನಿಯಮಗಳಿಗೆ ಅನುಗುಣವಾಗಿ ಭಗವಂತನ ಭಕ್ತಿಸೇವೆಯಲ್ಲಿ ನಿರತರಾಗಿರುತ್ತಾರೆ; ಆದುದರಿಂದ ವೈಷ್ಣವ ಸನ್ಯಾಸಿಗಳಿಗೆ ಭಗವಂತನ ದಿವ್ಯ ಸೇವೆಯಲ್ಲಿ ಹಲವು ಬಗೆಯ ಕೆಲಸಗಳಿರುತ್ತವೆ. ವೈಷ್ಣವ ಸನ್ಯಾಸಿಗೂ ಐಹಿಕ ಕಾರ್ಯಗಳಿಗೂ ಯಾವುದೇ ಸಂಬಂಧವಿಲ್ಲ; ಆದರೂ ಭಗವಂತನ ಭಕ್ತಿಸೇವೆಯಲ್ಲಿ ಅವನು ಹಲವಾರು ಕೆಲಸಕಾರ್ಯಗಳನ್ನು ಮಾಡುತ್ತಾನೆ. ಆದರೆ ಸಾಂಖ್ಯ ಮತ್ತು ವೇದಾಂತಿಕ ಅಧ್ಯಯನದಲ್ಲಿ ಹಾಗೂ ಊಹಾತ್ಮಕ ಚಿಂತನೆಯಲ್ಲಿ ಮಗ್ನರಾದ ಮಾಯಾವಾದಿ ಸನ್ಯಾಸಿಗಳಿಗೆ ಭಗವಂತನ ದಿವ್ಯಸೇವೆಯು ರುಚಿಸುವುದಿಲ್ಲ. ಅವರ ಅಧ್ಯಯನವು ನೀರಸವಾಗುವುದರಿಂದ ಅವರು ಕೆಲವೊಮ್ಮೆ ಬ್ರಹ್ಮನ್ ಕುರಿತು ಊಹಾತ್ಮಕ ಚಿಂತನೆ ಮಾಡುವುದರಲ್ಲಿ ಬೇಸರಗೊಳ್ಳುತ್ತಾರೆ. ಆದುದರಿಂದ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಭಾಗವತವನ್ನು ಆಶ್ರಯಿಸುತ್ತಾರೆ. ಇದರ ಪರಿಣಾಮವಾಗಿ ಅವರ ಶ್ರೀಮದ್ಭಾಗವತದ ಅಧ್ಯಯನವು ಕಷ್ಟದಾಯಕವಾಗುತ್ತದೆ. ಒಣಚಿಂತನೆಗಳೂ

ಕೃತಕವಾಗಿ ಮಾಡಿದ ನಿರಾಕಾರದ ವ್ಯಾಖ್ಯಾನಗಳೂ ಮಾಯಾವಾದಿ ಸನ್ಯಾಸಿಗಳಿಗೆ ನಿಷ್ಪ್ರಯೋಜಕವಾಗುತ್ತವೆ. ಭಕ್ತಿಪೂರ್ವಕ ಸೇವೆಯಲ್ಲಿ ನಿರತರಾಗಿರುವ ವೈಷ್ಣವ ಸನ್ಯಾಸಿಗಳು ತಮ್ಮ ಆಧ್ಯಾತ್ಮಿಕ ಕರ್ತವ್ಯಗಳ ನಿರ್ವಹಣೆಯಲ್ಲಿ ಸುಖಿಗಳಾಗಿರುತ್ತಾರೆ. ಅವರಿಗೆ ಅಂತಿಮವಾಗಿ ಭಗವಂತನ ಸಾಮ್ರಾಜ್ಯವನ್ನು ಪ್ರವೇಶಿಸುವ ದೃಢ ಭರವಸೆ ಇರುತ್ತದೆ. ಮಾಯಾವಾದಿ ಸನ್ಯಾಸಿಗಳು ಒಮ್ಮೊಮ್ಮೆ ಆತ್ಮಸಾಕ್ಷಾತ್ಕಾರದ ಮಾರ್ಗದಿಂದ ಪತನಹೊಂದುತ್ತಾರೆ ಮತ್ತು ಪರೋಪಕಾರದ ಮತ್ತು ನಿಸ್ವಾರ್ಥವಾದ ಲೌಕಿಕ ಕಾರ್ಯಗಳಲ್ಲಿ ತೊಡಗುತ್ತಾರೆ. ಇವು ಐಹಿಕ ಕಾರ್ಯಗಳಲ್ಲದೆ ಬೇರೇನೂ ಅಲ್ಲ. ಆದುದರಿಂದ ನಿರ್ಣಯವು ಹೀಗಿದೆ — ಬ್ರಹ್ಮನ್ ಯಾವುದು, ಬ್ರಹ್ಮನ್ ಯಾವುದಲ್ಲ ಎನ್ನುವ ಚಿಂತನೆಯಲ್ಲಿ ಮಾತ್ರ ನಿರತರಾಗಿರುವ ಸನ್ಯಾಸಿಗಳಿಗಿಂತ ಕೃಷ್ಣಪ್ರಜ್ಞೆಯಲ್ಲಿ ಕೆಲಸಕಾರ್ಯಗಳಲ್ಲಿ ತೊಡಗಿರುವವರು ಉತ್ತಮ ಸ್ಥಿತಿಯಲ್ಲಿರುತ್ತಾರೆ. ಈ ಸನ್ಯಾಸಿಗಳೂ ಸಹ ಅನೇಕ ಜನ್ಮಗಳನಂತರ ಕೃಷ್ಣಪ್ರಜ್ಞೆಗೆ ಬರುತ್ತಾರೆ.

## ಶ್ಲೋಕ - 7

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇನ್ದ್ರಿಯಃ |**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ||೭||**

**ಯೋಗಯುಕ್ತಃ**—ಭಕ್ತಿಸೇವೆಯಲ್ಲಿ ತೊಡಗಿದ; **ವಿಶುದ್ಧ ಆತ್ಮಾ**—ಪರಿಶುದ್ಧ ಆತ್ಮನು; **ವಿಜಿತ ಆತ್ಮಾ**—ಆತ್ಮ ನಿಗ್ರಹಿಯಾದ; **ಜಿತ ಇನ್ದ್ರಿಯಃ**—ಇಂದ್ರಿಯಗಳನ್ನು ಜಯಿಸಿದ; **ಸರ್ವಭೂತ**—ಎಲ್ಲ ಜೀವಿಗಳಿಗೂ; **ಆತ್ಮ ಭೂತ ಆತ್ಮಾ**—ಕರುಣೆಯುಳ್ಳವನು; **ಕುರ್ವನ್ ಅಪಿ**—ಕಾರ್ಯನಿರತನಾಗಿದ್ದರೂ; **ನ ಲಿಪ್ಯತೇ**—ಸಿಲುಕುವುದಿಲ್ಲ.

## ಅನುವಾದ

**ಯಾರು ಭಕ್ತಿಯಿಂದ ಕರ್ಮವನ್ನು ಮಾಡುವನೋ, ಶುದ್ಧಆತ್ಮನೋ ಮತ್ತು ಮನಸ್ಸನ್ನೂ ಇಂದ್ರಿಯಗಳನ್ನೂ ನಿಯಂತ್ರಿಸುವನೋ ಅವನು ಎಲ್ಲರಿಗೂ ಪ್ರಿಯನಾದವನು ಮತ್ತು ಅವನಿಗೆ ಎಲ್ಲರೂ ಪ್ರಿಯರಾದವರು. ಅವನು ಕರ್ಮವನ್ನು ಮಾಡುತ್ತಿದ್ದರೂ ಅವುಗಳಲ್ಲಿ ಸಿಲುಕಿಕೊಳ್ಳುವುದಿಲ್ಲ.**

## ಭಾವಾರ್ಥ

ಕೃಷ್ಣಪ್ರಜ್ಞೆಯಿಂದ ಮುಕ್ತಿಮಾರ್ಗದಲ್ಲಿರುವವನು ಎಲ್ಲ ಜೀವಿಗಳಿಗೂ ಪ್ರಿಯನಾದವನು ಮತ್ತು ಎಲ್ಲ ಜೀವಿಗಳೂ ಅವನಿಗೆ ಪ್ರಿಯರು. ಇದಕ್ಕೆ ಅವನ ಕೃಷ್ಣಪ್ರಜ್ಞೆಯೇ ಕಾರಣ. ಮರದ ಎಲೆಗಳೂ ಮತ್ತು ಕೊಂಬೆಗಳೂ ಹೇಗೆ ಮರದಿಂದ ಬೇರೆಯಲ್ಲವೋ ಹಾಗೆ ಕೃಷ್ಣಪ್ರಜ್ಞೆಯಲ್ಲಿರುವವನಿಗೆ ಯಾವಜೀವಿಯೂ ಕೃಷ್ಣನಿಂದ ಬೇರೆಯಲ್ಲ. ಮರದ ಬೇರಿಗೆ ನೀರನ್ನೆರೆದರೆ ಎಲ್ಲ ಎಲೆಗಳಿಗೂ ಕೊಂಬೆಗಳಿಗೂ ನೀರು ದೊರೆಯುತ್ತದೆ ಅಥವಾ ಹೊಟ್ಟೆಗೆ ಆಹಾರವನ್ನು ನೀಡಿದರೆ ಚೈತನ್ಯವು ತಂತಾನೇ ದೇಹಕ್ಕೆಲ್ಲ ಲಭ್ಯವಾಗುತ್ತದೆ ಎಂದು ಅವನಿಗೆ ಚೆನ್ನಾಗಿ ಗೊತ್ತು. ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡುವವನು ಎಲ್ಲರಿಗೂ ಸೇವಕನಾದದ್ದರಿಂದ ಎಲ್ಲರಿಗೂ ಅವನಲ್ಲಿ

ಬಹುಪ್ರೀತಿ. ಪ್ರತಿಯೊಬ್ಬರಿಗೂ ಅವನ ಕೆಲಸದಲ್ಲಿ ತೃಪ್ತಿಯಾಗುವುದರಿಂದ ಅವನ ಪ್ರಜ್ಞೆಯು ಪರಿಶುದ್ಧವಾಗಿರುತ್ತದೆ. ಅವನ ಪ್ರಜ್ಞೆಯು ಪರಿಶುದ್ಧವಾದದ್ದರಿಂದ, ಹಿಡಿತದಲ್ಲಿರುವುದರಿಂದ ಅವನ ಇಂದ್ರಿಯಗಳೂ ಹಿಡಿತದಲ್ಲಿರುತ್ತವೆ. ಅವನ ಮನಸ್ಸು ಯಾವಾಗಲೂ ಕೃಷ್ಣನಲ್ಲಿ ನೆಲೆಸಿರುವುದರಿಂದ ಅವನು ಕೃಷ್ಣನನ್ನು ಬಿಟ್ಟು ಬೇರೆಡೆಗೆ ತಿರುಗುವ ಸಾಧ್ಯತೆಯೇ ಇಲ್ಲ. ಅವನ ಇಂದ್ರಿಯಗಳು ಭಗವಂತನ ಸೇವೆಯನ್ನು ಬಿಟ್ಟು ಬೇರೆ ವಿಷಯಗಳಲ್ಲಿ ತೊಡಗುವ ಸಾಧ್ಯತೆಯೇ ಇಲ್ಲ. ಕೃಷ್ಣನನ್ನು ಕುರಿತ ವಿಷಯಗಳನ್ನು ಬಿಟ್ಟು ಬೇರೇನನ್ನು ಕೇಳಲೂ ಅವನು ಇಷ್ಟಪಡುವುದಿಲ್ಲ. ಕೃಷ್ಣನ ಪ್ರಸಾದವನ್ನು ಬಿಟ್ಟು ಬೇರೇನನ್ನೂ ತಿನ್ನಲು ಇಷ್ಟಪಡುವುದಿಲ್ಲ. ಕೃಷ್ಣನಿಗೆ ಸಂಬಂಧವಿಲ್ಲದಿರುವ ಯಾವ ಸ್ಥಳಕ್ಕೂ ಅವನು ಹೋಗಲು ಇಷ್ಟಪಡುವುದಿಲ್ಲ. ಆದುದರಿಂದ ಅವನ ಇಂದ್ರಿಯಗಳು ಹತೋಟಿಯಲ್ಲಿರುತ್ತವೆ. ಇಂದ್ರಿಯಗಳನ್ನು ನಿಯಂತ್ರಿಸುವವನು ಯಾರನ್ನೂ ನೋಯಿಸಲು ಸಾಧ್ಯವಿಲ್ಲ. "ಹಾಗಾದರೆ ಅರ್ಜುನನು (ಯುದ್ಧದಲ್ಲಿ) ಇತರರನ್ನು ಏಕೆ ನೋಯಿಸಿದ, ಅವನು ಕೃಷ್ಣಪ್ರಜ್ಞೆಯಲ್ಲಿ ಇರಲಿಲ್ಲವೇ?" ಎಂದು ಕೇಳಬಹುದು. ಅರ್ಜುನನು ಮೇಲ್ನೋಟಕ್ಕೆ ಮಾತ್ರ ಇತರರನ್ನು ನೋಯಿಸಿದಂತೆ ಕಾಣುತ್ತಾನೆ. ಏಕೆಂದರೆ (ಆಗಲೇ ಎರಡನೆಯ ಅಧ್ಯಾಯದಲ್ಲಿ ಹೇಳಿರುವಂತೆ) ರಣರಂಗದಲ್ಲಿ ನೆರೆದಿದ್ದವರೆಲ್ಲರೂ ಪ್ರತ್ಯೇಕ ವ್ಯಕ್ತಿಗಳಾಗಿ ಬದುಕಿಯೇ ಇರುತ್ತಾರೆ. ಏಕೆಂದರೆ ಆತ್ಮವನ್ನು ನಾಶಮಾಡುವುದು ಸಾಧ್ಯವಿಲ್ಲ. ಆದುದರಿಂದ ಆತ್ಮದ ದೃಷ್ಟಿಯಿಂದ ಕುರುಕ್ಷೇತ್ರದ ರಣಭೂಮಿಯಲ್ಲಿ ಯಾರೂ ಸಾಯಲಿಲ್ಲ. ಸ್ವತಃ ಅಲ್ಲಿದ್ದ ಕೃಷ್ಣನ ಆಜ್ಞೆಯಂತೆ ಅವರ ಉಡುಪುಗಳು ಮಾತ್ರ ಬದಲಾದವು. ಆದುದರಿಂದ ಕುರುಕ್ಷೇತ್ರದ ಯುದ್ಧಭೂಮಿಯಲ್ಲಿ ಹೋರಾಡಿದಾಗ ಅರ್ಜುನನು ನಿಜವಾಗಿಯೂ ಹೋರಾಡುತ್ತಿರಲಿಲ್ಲ. ಆತನು ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಇರುತ್ತ ಕೃಷ್ಣನ ಆಜ್ಞೆಯನ್ನು ನಿರ್ವಹಿಸುತ್ತಿದ್ದ ಮಾತ್ರ. ಇಂತಹ ಮನುಷ್ಯನು ಕರ್ಮದ ಪ್ರತಿಕ್ರಿಯೆಗಳಲ್ಲಿ ಸಿಕ್ಕಿಕೊಳ್ಳುವುದೇ ಇಲ್ಲ.

## ಶ್ಲೋಕ 8-9

**ನೈವ ಕಿಞ್ಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ |**
**ಪಶ್ಯಞ್ ಶೃಣ್ವನ್ ಸ್ಪೃಶಞ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ||೮||**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ |**
**ಇಂದ್ರಿಯಾಣೀನ್ದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ||೯||**

**ನ**—ಎಂದಿಗೂ ಇಲ್ಲ; **ಏವ**—ಖಂಡಿತವಾಗಿಯೂ; **ಕಿಞ್ಚಿತ್**—ಯಾವುದೊಂದನ್ನೂ; **ಕರೋಮಿ**—ಮಾಡುತ್ತೇನೆ; **ಇತಿ**—ಎಂದು; **ಯುಕ್ತಃ**—ದೈವಿಕ ಪ್ರಜ್ಞೆಯಲ್ಲಿ ನಿರತನಾಗಿ; **ಮನ್ಯೇತ**—ಯೋಚಿಸುತ್ತಾನೆ; **ತತ್ತ್ವ ವಿತ್**—ಸತ್ಯವನ್ನರಿತವನು; **ಪಶ್ಯನ್**—ನೋಡುತ್ತಾ; **ಶೃಣ್ವನ್**—ಕೇಳುತ್ತಾ; **ಸ್ಪೃಶನ್**—ಸ್ಪರ್ಶಿಸುತ್ತಾ; **ಜಿಘ್ರನ್**—ಮೂಸುತ್ತಾ; **ಅಶ್ನನ್**—ತಿನ್ನುತ್ತಾ; **ಗಚ್ಛನ್**—ಹೋಗುತ್ತಾ; **ಸ್ವಪನ್**—ಕನಸುಕಾಣುತ್ತಾ; **ಶ್ವಸನ್**—ಉಸಿರಾಡುತ್ತಾ; **ಪ್ರಲಪನ್**—ಮಾತನಾಡುತ್ತಾ; **ವಿಸೃಜನ್**—ವಿಸರ್ಜಿಸುತ್ತ; **ಗೃಹ್ಣನ್**—ಸ್ವೀಕರಿಸುತ್ತಾ; **ಉನ್ಮಿಷನ್**—ತೆರೆಯುತ್ತ; **ನಿಮಿಷನ್**—ಮುಚ್ಚುತ್ತ; **ಅಪಿ**—ಆದರೂ; **ಇನ್ದ್ರಿಯಾಣಿ**—ಇಂದ್ರಿಯಗಳು; **ಇಂದ್ರಿಯ ಅರ್ಥೇಷು**—ಇಂದ್ರಿಯ ತೃಪ್ತಿಯಲ್ಲಿ; **ವರ್ತಂತೇ**—ನಿರತವಾಗಿರಲಿ; **ಇತಿ**—ಎಂದು; **ಧಾರಯನ್**—ಪರಿಗಣಿಸುತ್ತಾ.

## ಅನುವಾದ

**ದೈವೀಪ್ರಜ್ಞೆಯಲ್ಲಿರುವ ಮನುಷ್ಯನು ನೋಡುತ್ತಿರಬಹುದು, ಕೇಳುತ್ತಿರಬಹುದು, ಸ್ಪರ್ಶಿಸುತ್ತಿರಬಹುದು, ಆಘ್ರಾಣಿಸುತ್ತಿರಬಹುದು, ತಿನ್ನುತ್ತಿರಬಹುದು, ನಡೆಯುತ್ತಿರಬಹುದು, ನಿದ್ರೆಮಾಡುತ್ತಿರಬಹುದು, ಉಸಿರಾಡುತ್ತಿರಬಹುದು. ಆದರೆ ತಾನು ಏನನ್ನೂ ಮಾಡುತ್ತಿಲ್ಲ ಎಂದು ಅವನಿಗೆ ಒಳಗಿನ ಅರಿವು ಇರುತ್ತದೆ. ಏಕೆಂದರೆ ಮಾತನಾಡುವಾಗ, ವಿಸರ್ಜಿಸುವಾಗ, ಸ್ವೀಕರಿಸುವಾಗ, ಕಣ್ಣನ್ನು ತೆರೆಯುವಾಗ ಅಥವಾ ಮುಚ್ಚುವಾಗ ಇಂದ್ರಿಯಗಳು ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತಿವೆ, ತಾನು ಅವುಗಳಿಂದ ದೂರ ಇದ್ದೇನೆ ಎಂದು ಅವನಿಗೆ ತಿಳಿದಿರುತ್ತದೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ತನ್ನ ಅಸ್ತಿತ್ವದಲ್ಲಿ ಪರಿಶುದ್ಧನಾಗಿರುತ್ತಾನೆ. ಪರಿಣಾಮವಾಗಿ ಕರ್ತೃ, ಕಾರ್ಯ, ಸನ್ನಿವೇಶ, ಪ್ರಯತ್ನ ಮತ್ತು ಅದೃಷ್ಟ, ಈ ಐದು ನಿಕಟ ಮತ್ತು ದೂರ ಕಾರಣಗಳನ್ನು ಅವಲಂಬಿಸುವ ಯಾವುದೇ ಕೆಲಸಕ್ಕೂ ಆತನಿಗೂ ಸಂಬಂಧವಿರುವುದಿಲ್ಲ. ಇದಕ್ಕೆ ಕಾರಣವೆಂದರೆ ಅವನು ಕೃಷ್ಣನ ಪ್ರೀತಿಪೂರ್ವಕ ಅಲೌಕಿಕ ಸೇವೆಯಲ್ಲಿ ನಿರತನಾಗಿರುವುದು. ಆತನು ತನ್ನ ದೇಹ ಮತ್ತು ಇಂದ್ರಿಯಗಳಿಂದ ಕೆಲಸ ಮಾಡುತ್ತಿರುವಂತೆ ಕಂಡರೂ ಆತನಿಗೆ ತನ್ನ ನಿಜವಾದ ಸ್ಥಿತಿಯ ಅರಿವಿರುತ್ತದೆ. ಆಧ್ಯಾತ್ಮಿಕ ಕರ್ತವ್ಯದಲ್ಲಿ ನಿರತನಾಗಿರುವುದೇ ಆ ಸ್ಥಿತಿ. ಐಹಿಕ ಪ್ರಜ್ಞೆಯಲ್ಲಿ ಇಂದ್ರಿಯಗಳು ಇಂದ್ರಿಯ ತೃಪ್ತಿಯನ್ನು ಪಡೆಯುವ ಯತ್ನದಲ್ಲಿ ತೊಡಗಿರುತ್ತವೆ, ಪಡೆಯುತ್ತವೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಇಂದ್ರಿಯಗಳು ಕೃಷ್ಣನ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿ ನಿರತವಾಗಿರುತ್ತವೆ. ಆದುದರಿಂದ ಕೃಷ್ಣಪ್ರಜ್ಞೆಯಿರುವ ಮನುಷ್ಯನು ಇಂದ್ರಿಯಗಳ ವ್ಯಾಪಾರಗಳಲ್ಲಿ ತೊಡಗಿರುವಂತೆ ಕಂಡರೂ ಅವನು ಸದಾ ಮುಕ್ತನು. ನೋಡುವುದು ಮತ್ತು ಕೇಳುವುದು ಇಂತಹ ಕ್ರಿಯೆಗಳು ಜ್ಞಾನೇಂದ್ರಿಯಗಳಿಗೆ ಸಂಬಂಧಪಟ್ಟವು. ನಡೆಯುವುದು, ಮಾತನಾಡುವುದು, ವಿಸರ್ಜನೆ ಮೊದಲಾದವು ಕರ್ಮೇಂದ್ರಿಯ ಕಾರ್ಯಗಳು. ಕೃಷ್ಣಪ್ರಜ್ಞೆ ಇರುವ ಮನುಷ್ಯನ ಮೇಲೆ ಇಂದ್ರಿಯಗಳ ಕಾರ್ಯಗಳು ಯಾವುದೇ ಪರಿಣಾಮವನ್ನು ಮಾಡುವುದಿಲ್ಲ. ತಾನು ಭಗವಂತನ ನಿರಂತರ ಸೇವಕನೆಂದು ಅವನಿಗೆ ಗೊತ್ತು. ಆದುದರಿಂದ ಭಗವಂತನ ಸೇವೆಯನ್ನು ಬಿಟ್ಟು ಬೇರೆ ಯಾವುದೇ ಕೆಲಸವನ್ನು ಅವನು ಮಾಡಲಾರ.

## ಶ್ಲೋಕ - 10

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ ||೧೦||**

**ಬ್ರಹ್ಮಣಿ**—ದೇವೋತ್ತಮ ಪರಮ ಪುರುಷನಿಗೆ; **ಆಧಾಯ**—ಸಮರ್ಪಿಸಿ; **ಕರ್ಮಾಣಿ**—ಎಲ್ಲಾ ಕಾರ್ಯಗಳನ್ನು; **ಸಂಗಮ್**—ಆಸಕ್ತಿಯನ್ನು; **ತ್ಯಕ್ತ್ವಾ**—ತ್ಯಜಿಸಿ; **ಕರೋತಿ**—ಆಚರಿಸುತ್ತಾನೋ; **ಯಃ**—ಯಾರು; **ಲಿಪ್ಯತೇ ನ**—ಎಂದಿಗೂ ಬಾಧಿಸಲ್ಪಡುವುದಿಲ್ಲ; **ಸಃ**—ಅವನು; **ಪಾಪೇನ**—ಪಾಪದಿಂದ; **ಪದ್ಮ ಪತ್ರಮ್**—ತಾವರೆಯ ಎಲೆಯ; **ಇವ**—ಹಾಗೆ; **ಅಮ್ಭಸಾ**—ನೀರಿನಿಂದ.

## ಅನುವಾದ

**ಫಲಗಳನ್ನು ಭಗವಂತನಿಗೆ ಅರ್ಪಿಸಿ ಯಾರು ನಿರ್ಲಿಪ್ತನಾಗಿ ಕರ್ತವ್ಯಗಳನ್ನು ಮಾಡುವನೋ ಆತನಿಗೆ, ತಾವರೆಯ ಎಲೆಗೆ ಹೇಗೆ ನೀರಿನ ಲೇಪವಿಲ್ಲವೋ ಹಾಗೆ, ಪಾಪದ ಲೇಪವಿಲ್ಲ.**

## ಭಾವಾರ್ಥ

ಇಲ್ಲಿ **ಬ್ರಹ್ಮಣಿ** ಎಂದರೆ ಕೃಷ್ಣಪ್ರಜ್ಞೆಯಲ್ಲಿ ಎಂದರ್ಥ. ಭೌತಿಕ ಜಗತ್ತು, ಪಾರಿಭಾಷಿಕವಾಗಿ **ಪ್ರಧಾನ** ಎಂದು ಕರೆಯುವ ಐಹಿಕ ಪ್ರಕೃತಿಯ ಮೂರುಗುಣಗಳ ಅಭಿವ್ಯಕ್ತಿಯ ಮೊತ್ತ. **ಸರ್ವಮ್ ಹ್ಯೇತದ್ ಬ್ರಹ್ಮ**(ಮಾಂಡೂಕ್ಯ ಉಪನಿಷತ್ತು 2) **ತಸ್ಮಾದ್ ಏತದ್ ಬ್ರಹ್ಮ ನಾಮರೂಪಮ್ ಅನ್ನಂ ಚ ಜಾಯತೇ** (ಮುಂಡಕ ಉಪನಿಷತ್ತು 1.2.10) ಈ ವೇದ ಸ್ತೋತ್ರಗಳು ಮತ್ತು ಭಗವದ್ಗೀತೆಯಲ್ಲಿನ (14.3) **ಮಮ ಯೋನಿರ್ ಮಹದ್‌ಬ್ರಹ್ಮ** ಎನ್ನುವ ಮಾತುಗಳು ಭೌತಿಕ ಜಗತ್ತಿನಲ್ಲಿ ಇರುವುದೆಲ್ಲ ಬ್ರಹ್ಮನ್‌ನ ಅಭಿವ್ಯಕ್ತಿ ಎಂದು ಸೂಚಿಸುತ್ತವೆ; ಕಾರ್ಯಗಳು ಭಿನ್ನಭಿನ್ನವಾಗಿ ತೋರಿಬಂದರೂ ಕಾರಣದಿಂದ ಅವು ಬೇರೆಯಲ್ಲ. ಈಶೋಪನಿಷತ್ತಿನಲ್ಲಿ ಎಲ್ಲವೂ ಪರಬ್ರಹ್ಮನಿಗೆ ಅಥವಾ ಕೃಷ್ಣನಿಗೆ ಸಂಬಂಧಿಸಿದ್ದು, ಎಲ್ಲವೂ ಅವನಿಗೇ ಸೇರಿದ್ದು ಎಂದು ಹೇಳಿದೆ. ಎಲ್ಲವೂ ಕೃಷ್ಣನಿಗೆ ಸೇರಿದ್ದು, ಎಲ್ಲಕ್ಕೂ ಅವನೇ ಒಡೆಯ, ಆದ್ದರಿಂದ ಎಲ್ಲವನ್ನೂ ಭಗವಂತನ ಸೇವೆಯಲ್ಲಿ ನಿಯೋಜಿಸಬೇಕು ಎಂದು ಚೆನ್ನಾಗಿ ತಿಳಿದವನ ಕಾರ್ಯಗಳ ಫಲಗಳು ಪುಣ್ಯಕರವಾಗಲಿ, ಪಾಪಕರವಾಗಲಿ, ಅವುಗಳೊಡನೆ ಅವನಿಗೆ ಸಂಬಂಧವೇ ಇಲ್ಲ. ಜಡದೇಹವು ಒಂದು ಬಗೆಯ ಕೆಲಸವನ್ನು ನಿರ್ವಹಿಸಲು ಭಗವಂತನು ಕೊಟ್ಟ ವರವಾಗಿದೆ. ಅದನ್ನೂ ಸಹ ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಬಹುದು. ಆಗ ಹೇಗೆ ತಾವರೆ ಎಲೆಯು ನೀರಿನಲ್ಲಿಯೇ ಇದ್ದರೂ ಒದ್ದೆಯಾಗುವುದಿಲ್ಲವೋ ಹಾಗೆ ದೇಹವು ಪಾಪಫಲಗಳಿಂದ ಕಲುಷಿತವಾಗುವುದಿಲ್ಲ. ಭಗವಂತನು ಗೀತೆಯಲ್ಲಿ (3.30) **ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯ**, "ಎಲ್ಲ ಕರ್ಮಗಳನ್ನೂ ನನಗೆ (ಕೃಷ್ಣನಿಗೆ) ಒಪ್ಪಿಸು" ಎಂದು ಹೇಳುತ್ತಾನೆ. ಇದರಿಂದ ನಿರ್ಣಯಿಸಬಹುದಾದುದೇನೆಂದರೆ ಕೃಷ್ಣಪ್ರಜ್ಞೆ ಇಲ್ಲದಿರುವ ಮನುಷ್ಯನು ಐಹಿಕ ಶರೀರ ಮತ್ತು ಇಂದ್ರಿಯಗಳ ಕಲ್ಪನೆಗೆ ಅನುಗುಣವಾಗಿ ಕರ್ಮಮಾಡುತ್ತಾನೆ. ಆದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನ ದೇಹವು ಕೃಷ್ಣನ ಸ್ವತ್ತು ಮತ್ತು ಅದು ಕೃಷ್ಣನ ಸೇವೆಯಲ್ಲಿ ನಿರತವಾಗಿರಬೇಕು ಎನ್ನುವ ತಿಳುವಳಿಕೆಯಿಂದ ಕರ್ಮಮಾಡುತ್ತಾನೆ.

## ಶ್ಲೋಕ - 11

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ |**
**ಯೋಗಿನಃ ಕರ್ಮ ಕುರ್ವನ್ತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ||೧೧||**

**ಕಾಯೇನ**—ಶರೀರದಿಂದ; **ಮನಸಾ**—ಮನಸ್ಸಿನಿಂದ; **ಬುದ್ಧ್ಯಾ**—ಬುದ್ಧಿಯಿಂದ; **ಕೇವಲೈಃ**—ಶುದ್ಧವಾದ; **ಇನ್ದ್ರಿಯೈಃ**—ಇಂದ್ರಿಯಗಳಿಂದ; **ಅಪಿ**—ಕೂಡ; **ಯೋಗಿನಃ**—ಕೃಷ್ಣಪ್ರಜ್ಞೆಯುಳ್ಳ ವ್ಯಕ್ತಿಗಳು; **ಕರ್ಮ**—ಕಾರ್ಯವನ್ನು; **ಕುರ್ವನ್ತಿ**—ಮಾಡುತ್ತಾರೆ; **ಸಂಗಮ್**—ಆಸಕ್ತಿಯನ್ನು; **ತ್ಯಕ್ತ್ವಾ**—ತ್ಯಜಿಸಿ; **ಆತ್ಮ**—ತನ್ನ; **ಶುದ್ಧಯೇ**—ಶುದ್ಧಿಯ ಉದ್ದೇಶಕ್ಕಾಗಿ.

## ಅನುವಾದ

**ಯೋಗಿಗಳು ಮೋಹವನ್ನು ಬಿಟ್ಟು ಕೇವಲ ಶುದ್ಧಿಗಾಗಿ ದೇಹ, ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳಿಂದ ಸಹ ಕರ್ಮವನ್ನು ಮಾಡುತ್ತಾರೆ.**

## ಭಾವಾರ್ಥ

ಕೃಷ್ಣನ ಇಂದ್ರಿಯಗಳ ತೃಪ್ತಿಗಾಗಿಯೇ ಕೃಷ್ಣಪ್ರಜ್ಞೆಯಲ್ಲಿ ಮನುಷ್ಯನು ಕೆಲಸ ಮಾಡಿದಾಗ ದೇಹ, ಮನಸ್ಸು, ಬುದ್ಧಿ ಅಥವಾ ಇಂದ್ರಿಯಗಳಿಂದ ಮಾಡಿದ ಯಾವುದೇ ಕೆಲಸವಾಗಲಿ ಅದು ಐಹಿಕ ಕಶ್ಮಲವಿಲ್ಲದೆ ಪರಿಶುದ್ಧವಾಗುತ್ತದೆ. ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ಮಾಡುವ ಕಾರ್ಯಗಳು ಪ್ರತಿಕ್ರಿಯೆಗಳನ್ನು ಉಂಟುಮಾಡುವುದಿಲ್ಲ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದರ ಮೂಲಕ ಸದಾಚಾರ ಎಂದು ಕರೆಯುವ ಪರಿಶುದ್ಧ ಕಾರ್ಯಗಳನ್ನು ಸುಲಭವಾಗಿ ಮಾಡಬಹುದು. ಶ್ರೀಲ ರೂಪ ಗೋಸ್ವಾಮಿಯವರು ತಮ್ಮ ಭಕ್ತಿರಸಾಮೃತಸಿಂಧು (1.2.187) ವಿನಲ್ಲಿ ಇದನ್ನು ಹೀಗೆ ವರ್ಣಿಸುತ್ತಾರೆ—

**ಈಹಾ ಯಸ್ಯ ಹರೇರ್ದಾಸ್ಯೇ ಕರ್ಮಣಾ ಮನಸಾ ಗಿರಾ |**
**ನಿಖಿಲಾಸ್ವಪ್ಯವಸ್ಥಾಸು ಜೀವನ್ಮುಕ್ತಃ ಸ ಉಚ್ಯತೇ ||**

"ಕೃಷ್ಣಪ್ರಜ್ಞೆಯಲ್ಲಿ (ಅಥವಾ ಬೇರೆ ಮಾತುಗಳಲ್ಲಿ ಹೇಳುವುದಾದರೆ ಕೃಷ್ಣಸೇವೆಯಲ್ಲಿ) ತನ್ನ ದೇಹ, ಮನಸ್ಸು, ಬುದ್ಧಿ ಮತ್ತು ಮಾತುಗಳಿಂದ ಕೆಲಸ ಮಾಡುವವನು ಲೌಕಿಕ ಚಟುವಟಿಕೆಗಳು ಎನ್ನಿಸಿಕೊಳ್ಳುವ ಕಾರ್ಯಗಳಲ್ಲಿ ತೊಡಗಿದ್ದರೂ ಐಹಿಕ ಜಗತ್ತಿನಲ್ಲಿ ಇರುವಂತೆಯೇ ಮುಕ್ತನಾದವನು." ಅವನಿಗೆ ಅಹಂಕಾರವಿಲ್ಲ. ಏಕೆಂದರೆ ಅವನು ಈ ಐಹಿಕ ಶರೀರವೇ ತಾನು ಎಂದಾಗಲೀ, ಶರೀರವು ತನ್ನದು ಎಂದಾಗಲೀ ನಂಬುವುದಿಲ್ಲ. ಈ ದೇಹವು ತಾನಲ್ಲ ಮತ್ತು ಈ ದೇಹವು ತನ್ನದಲ್ಲ ಎಂದು ಅವನಿಗೆ ಗೊತ್ತು. ಅವನು ಕೃಷ್ಣನಿಗೆ ಸೇರಿದವನು ಮತ್ತು ದೇಹವೂ ಕೃಷ್ಣನಿಗೆ ಸೇರಿದ್ದು. ತನಗೆ ಸೇರಿರಬಹುದಾದ ಸ್ವತ್ತೆಲ್ಲವನ್ನೂ, ದೇಹ, ಮನಸ್ಸು, ಬುದ್ಧಿ, ಮಾತು, ಪ್ರಾಣ, ಐಶ್ವರ್ಯ ಇವುಗಳಿಂದ ಉತ್ಪಾದಿಸಿದ ಎಲ್ಲವನ್ನೂ ಕೃಷ್ಣನ ಸೇವೆಯಲ್ಲಿ ಬಳಸಿದರೆ ಅವನು ಕೂಡಲೇ ಕೃಷ್ಣನೊಂದಿಗೆ ಹೊಂದಿಕೊಂಡು ಬಿಡುತ್ತಾನೆ. ಅವನು ಕೃಷ್ಣನೊಂದಿಗೆ ಒಂದಾಗಿದ್ದಾನೆ; ತಾನು ದೇಹ ಇತ್ಯಾದಿಯಾಗಿ ನಂಬುವಂತೆ ಮಾಡುವ ಅಹಂಕಾರ ಅವನಿಗಿಲ್ಲ. ಇದು ಕೃಷ್ಣಪ್ರಜ್ಞೆಯ ಪರಿಪೂರ್ಣ ಹಂತ.

## ಶ್ಲೋಕ - 12

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ |**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ||೧೨||**

**ಯುಕ್ತಃ**—ಭಕ್ತಿಸೇವೆಯಲ್ಲಿ ನಿರತನಾದವನು; **ಕರ್ಮಫಲಮ್**—ಎಲ್ಲ ಕಾರ್ಯಗಳ ಫಲವನ್ನೂ; **ತ್ಯಕ್ತ್ವಾ**—ತ್ಯಜಿಸಿ; **ಶಾನ್ತಿಮ್**—ಪರಿಪೂರ್ಣಶಾಂತಿಯನ್ನು; **ಆಪ್ನೋತಿ**—ಹೊಂದುತ್ತಾನೆ; **ನೈಷ್ಠಿಕೀಮ್**—ದೃಢವಾದ; **ಅಯುಕ್ತಃ**—ಕೃಷ್ಣಪ್ರಜ್ಞೆಯಲ್ಲಿ ಇಲ್ಲದವನು; **ಕಾಮ ಕಾರೇಣ**—

ಕರ್ಮಫಲವನ್ನು ಭೋಗಿಸಲು; **ಫಲೇ**—ಫಲದಲ್ಲಿ; **ಸಕ್ತಃ**—ಆಸಕ್ತನಾದ; **ನಿಬಧ್ಯತೇ**—ಸಿಲುಕಿಕೊಳ್ಳುತ್ತಾನೆ.

## ಅನುವಾದ

**ಒಂದೇ ರೀತಿಯಾಗಿ ನಿಷ್ಠೆಯಿಂದಿರುವ ಆತ್ಮನು ಪರಿಶುದ್ಧ ಶಾಂತಿಯನ್ನು ಹೊಂದುತ್ತಾನೆ. ಏಕೆಂದರೆ ಅವನು ಎಲ್ಲ ಕರ್ಮಫಲಗಳನ್ನು ನನಗೆ ಒಪ್ಪಿಸುತ್ತಾನೆ; ದೈವಯುಕ್ತನಲ್ಲದವನು ಕರ್ಮಫಲಕ್ಕಾಗಿ ಆಸೆಪಡುವುದರಿಂದ ತೊಡಕಿನಲ್ಲಿ ಸಿಕ್ಕಿಕೊಳ್ಳುತ್ತಾನೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೂ ದೇಹಪ್ರಜ್ಞೆಯಲ್ಲಿರುವ ಮನುಷ್ಯನಿಗೂ ವ್ಯತ್ಯಾಸವೆಂದರೆ ಮೊದಲನೆಯವನಿಗೆ ಕೃಷ್ಣನಲ್ಲಿ ಆಸಕ್ತಿ, ಎರಡನೆಯವನಿಗೆ ತನ್ನ ಕರ್ಮಗಳ ಫಲಗಳಲ್ಲಿ ಆಸಕ್ತಿ. ಕೃಷ್ಣನಲ್ಲಿ ಆಸಕ್ತಿಯಿದ್ದು ಅವನಿಗಾಗಿಯೇ ಕೆಲಸ ಮಾಡುವವನು ನಿಶ್ಚಯವಾಗಿಯೂ ಮುಕ್ತನಾದವನು. ಆತನಿಗೆ ತನ್ನ ಕರ್ಮಫಲದ ವಿಷಯದಲ್ಲಿ ಆತಂಕವಿಲ್ಲ. ದ್ವಂದ್ವದ ಕಲ್ಪನೆಯಲ್ಲಿ ಎಂದರೆ ಪರಮಸತ್ಯದ ಅರಿವಿಲ್ಲದೆ ಕೆಲಸ ಮಾಡುವುದೇ ಕರ್ಮಫಲದ ವಿಷಯದಲ್ಲಿ ಆತಂಕವಾಗುವುದಕ್ಕೆ ಕಾರಣ ಎಂದು ಭಾಗವತದಲ್ಲಿ ವಿವರಿಸಿದೆ. ಕೃಷ್ಣನು ಪರಮ ಸತ್ಯ, ದೇವೋತ್ತಮ ಪುರುಷ. ಕೃಷ್ಣಪ್ರಜ್ಞೆಯಲ್ಲಿ ದ್ವಂದ್ವವಿಲ್ಲ, ಇರುವುದೆಲ್ಲವೂ ಕೃಷ್ಣನ ಶಕ್ತಿಯ ಉತ್ಪತ್ತಿಯೇ. ಕೃಷ್ಣನು ಸರ್ವಮಂಗಳನು. ಆದ್ದರಿಂದ ಕೃಷ್ಣಪ್ರಜ್ಞೆಯ ಕರ್ಮವೆಲ್ಲ ಪರಿಪೂರ್ಣ ಮಟ್ಟದ್ದು. ಈ ಕೆಲಸವೆಲ್ಲ ಆಧ್ಯಾತ್ಮಿಕವಾದದ್ದು. ಇದಕ್ಕೆ ಐಹಿಕ ಫಲವಿಲ್ಲ. ಆದ್ದರಿಂದ ಕೃಷ್ಣಪ್ರಜ್ಞೆಯು ಸಂಪೂರ್ಣ ಶಾಂತಿಯನ್ನು ತರುತ್ತದೆ. ಆದರೆ ಇಂದ್ರಿಯತೃಪ್ತಿಗಾಗಿಯೇ ಲಾಭದ ಲೆಕ್ಕಾಚಾರದಲ್ಲಿ ಸಿಕ್ಕಿಕೊಂಡಿರುವವನಿಗೆ ಈ ಶಾಂತಿ ದೊರಕುವುದಿಲ್ಲ. ಇದೇ ಕೃಷ್ಣಪ್ರಜ್ಞೆಯ ಗುಟ್ಟು—ಕೃಷ್ಣನನ್ನು ಬಿಟ್ಟು ಅಸ್ತಿತ್ವವಿಲ್ಲ ಎನ್ನುವ ಅರಿವೇ ಶಾಂತಿ ಮತ್ತು ನಿರ್ಭಯಗಳ ನೆಲೆ.

## ಶ್ಲೋಕ - 13

**ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಸ್ತೇ ಸುಖಂ ವಶೀ |**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ||೧೩||**

**ಸರ್ವ**—ಎಲ್ಲ; **ಕರ್ಮಾಣಿ**—ಕಾರ್ಯಗಳನ್ನು; **ಮನಸಾ**—ಮನಸ್ಸಿನಿಂದ; **ಸನ್ನ್ಯಸ್ಯ**—ತ್ಯಜಿಸಿ; **ಆಸ್ತೇ**—ಇರುತ್ತಾನೆ; **ಸುಖಮ್**—ಆನಂದದಲ್ಲಿ; **ವಶೀ**—ನಿಯಂತ್ರಿತನಾದವನು; **ನವ ದ್ವಾರೇ**—ನವದ್ವಾರಗಳಿರುವ; **ಪುರೇ**—ಪಟ್ಟಣದಲ್ಲಿ; **ದೇಹೀ**—ದೇಹಧಾರಿ ಆತ್ಮನು; **ನ**—ಎಂದಿಗೂ ಇಲ್ಲ; **ಏವ**—ಖಂಡಿತವಾಗಿಯೂ; **ಕುರ್ವನ್**—ಏನನ್ನಾದರೂ ಮಾಡುತ್ತ; **ನ**—ಇಲ್ಲ; **ಕಾರಯನ್**—ಮಾಡಿಸುತ್ತ.

## ಅನುವಾದ

**ದೇಹಸ್ಥ ಜೀವಿಯು ಸ್ವಭಾವವನ್ನು ನಿಯಂತ್ರಿಸಿ ಮಾನಸಿಕವಾಗಿ ಎಲ್ಲ ಕರ್ಮಗಳನ್ನೂ ತ್ಯಜಿಸಿದಾಗ ಅವನು ನವದ್ವಾರಗಳ ನಗರದಲ್ಲಿ (ಐಹಿಕ ಶರೀರದಲ್ಲಿ) ಸುಖವಾಗಿ ವಾಸಿಸುತ್ತಾನೆ. ಅವನು ಕಾರ್ಯಮಾಡುವುದೂ ಇಲ್ಲ, ಕಾರ್ಯ ಮಾಡಿಸುವುದೂ ಇಲ್ಲ.**

## ಭಾವಾರ್ಥ

ದೇಹಸ್ಥ ಆತ್ಮನು ನವದ್ವಾರಗಳ ನಗರದಲ್ಲಿ ವಾಸಿಸುತ್ತಾನೆ. ದೇಹದ, ಅಥವಾ ಆಲಂಕಾರಿಕವಾಗಿ ವರ್ಣಿಸಿದ ದೇಹ ನಗರದ, ಕಾರ್ಯಗಳನ್ನು ಅದರ ಪ್ರಕೃತಿ ಗುಣಗಳು ತಂತಾವೇ ನಿರ್ವಹಿಸಿಕೊಂಡು ಹೋಗುತ್ತವೆ. ಆತ್ಮನು ದೇಹದ ಸ್ಥಿತಿಗೆ ತನ್ನನ್ನು ಒಳಪಡಿಸಿಕೊಂಡಿದ್ದರೂ ಬಯಸಿದಾಗ ಆ ಸ್ಥಿತಿಯನ್ನು ಮೀರಬಲ್ಲನು. ತನ್ನ ಉತ್ತಮ ಸ್ವಭಾವವನ್ನು ಮರೆತ ಕಾರಣದಿಂದಲೇ ಆತನು ತನ್ನನ್ನು ಜಡದೇಹದೊಂದಿಗೆ ಗುರುತಿಸಿಕೊಳ್ಳುತ್ತಾನೆ. ಇದರಿಂದಾಗಿ ಕಷ್ಟಪಡುತ್ತಾನೆ. ಕೃಷ್ಣಪ್ರಜ್ಞೆಯಿಂದ ಆತನು ತನ್ನ ನಿಜವಾದ ಸ್ಥಿತಿಯನ್ನು ಮರಳಿ ಪಡೆಯಬಲ್ಲ ಮತ್ತು ಆ ಮೂಲಕ ದೇಹದ ಬಂಧನದಿಂದ ಹೊರಕ್ಕೆ ಬರಬಲ್ಲ. ಆದುದರಿಂದ ಕೃಷ್ಣಪ್ರಜ್ಞೆಯನ್ನು ಒಪ್ಪಿಕೊಂಡ ಮನುಷ್ಯನು ಕೂಡಲೇ ದೇಹದ ಕಾರ್ಯಗಳಿಂದ ದೂರನಾಗುತ್ತಾನೆ. ಇಂತಹ ನಿಯಂತ್ರಿತ ಬದುಕಿನಲ್ಲಿ ಅವನ ವಿಚಾರಗಳು ಬದಲಾಗುತ್ತವೆ; ಅವನು ನವದ್ವಾರಗಳ ನಗರದಲ್ಲಿ ಸುಖವಾಗಿರುತ್ತಾನೆ. ಒಂಬತ್ತು ದ್ವಾರಗಳನ್ನು ಹೀಗೆ ಹೆಸರಿಸಲಾಗಿದೆ—

**ನವದ್ವಾರೇ ಪುರೇ ದೇಹೀ ಹಂಸೋ ಲೇಲಾಯತೇ ಬಹಿಃ |**
**ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ ||**

"ಜೀವಿಯ ದೇಹದಲ್ಲಿ ವಾಸಿಸುತ್ತಿರುವ ದೇವೋತ್ತಮ ಪರಮ ಪುರುಷನು ವಿಶ್ವದ ಎಲ್ಲ ಜೀವಿಗಳನ್ನೂ ನಿಯಂತ್ರಿಸುತ್ತಾನೆ. ದೇಹಕ್ಕೆ ನವದ್ವಾರಗಳುಂಟು (ಎರಡು ಕಣ್ಣುಗಳು, ಮೂಗಿನ ಎರಡು ಹೊಳ್ಳೆಗಳು, ಎರಡು ಕಿವಿಗಳು, ಒಂದು ಬಾಯಿ, ಗುದ, ಜನನೇಂದ್ರಿಯ) ತನ್ನ ಬದ್ಧ ನೆಲೆಯಲ್ಲಿ ಜೀವಿಯು ತನ್ನನ್ನು ದೇಹದೊಂದಿಗೆ ಗುರುತಿಸಿಕೊಳ್ಳುತ್ತಾನೆ. ಆದರೆ ಅವನು ತನ್ನನ್ನು ತನ್ನೊಳಗಿರುವ ಭಗವಂತನೊಡನೆ ಗುರುತಿಸಿಕೊಂಡಾಗ ದೇಹದಲ್ಲಿ ಇರುವಾಗಲೇ ಭಗವಂತನಷ್ಟೇ ಸ್ವತಂತ್ರನಾಗುತ್ತಾನೆ" (ಶ್ವೇತಾಶ್ವತರ ಉಪನಿಷತ್ತು 3.18).

ಆದ್ದರಿಂದ ಕೃಷ್ಣಪ್ರಜ್ಞೆಯುಳ್ಳ ಮನುಷ್ಯನು ಐಹಿಕ ದೇಹದ ಹೊರಗಿನ ಮತ್ತು ಒಳಗಿನ ಎರಡು ಕಾರ್ಯಗಳಿಂದಲೂ ಸ್ವತಂತ್ರನು.

## ಶ್ಲೋಕ - 14

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ |**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ||೧೪||**

**ನ**—ಎಂದಿಗೂ ಇಲ್ಲ; **ಕರ್ತೃತ್ವಮ್**—ಒಡೆತನವನ್ನು; **ನ**—ಇಲ್ಲ; **ಕರ್ಮಾಣಿ**— ಕಾರ್ಯಗಳನ್ನು; **ಲೋಕಸ್ಯ**—ಜನರ; **ಸೃಜತಿ**—ಸೃಷ್ಟಿಸುತ್ತಾನೆ; **ಪ್ರಭುಃ**—ದೇಹವೆಂಬ ನಗರದ ಒಡೆಯನು; **ನ**—

ಇಲ್ಲ; **ಕರ್ಮ ಫಲ**—ಕಾರ್ಯಗಳ ಫಲಗಳೊಂದಿಗೆ; **ಸಂಯೋಗಮ್**—ಸಂಪರ್ಕವನ್ನು; **ಸ್ವಭಾವಃ**—ಪ್ರಕೃತಿಗುಣಗಳು; **ತು**—ಆದರೆ; **ಪ್ರವರ್ತತೇ**—ವರ್ತಿಸುತ್ತವೆ.

## ಅನುವಾದ

**ತನ್ನ ದೇಹವೆಂಬ ನಗರದ ಒಡೆಯನಾದ ದೇಹಸ್ಥ ಆತ್ಮನು ಕರ್ಮಗಳನ್ನು ಸೃಷ್ಟಿಸುವುದಿಲ್ಲ, ಜನರಿಗೆ ಕರ್ಮ ಮಾಡುವಂತೆ ಮನ ಒಲಿಸುವುದಿಲ್ಲ ಮತ್ತು ಕರ್ಮಫಲವನ್ನು ಸೃಷ್ಟಿಸುವುದಿಲ್ಲ. ಇವೆಲ್ಲವನ್ನೂ ಐಹಿಕ ಪ್ರಕೃತಿಯ ಗುಣಗಳೇ ಸೃಷ್ಟಿಮಾಡುತ್ತವೆ.**

## ಭಾವಾರ್ಥ

ಏಳನೆಯ ಅಧ್ಯಾಯದಲ್ಲಿ ವಿವರಿಸುವಂತೆ ಜೀವಿಯು ಭಗವಂತನ ಶಕ್ತಿಗಳಲ್ಲಿ ಅಥವಾ ಪ್ರಕೃತಿಗಳಲ್ಲಿ ಒಂದು. ಇದು ಜಡವಸ್ತುವಿನಿಂದ ಭಿನ್ನವಾದದ್ದು. ಜಡವಸ್ತುವು ಭಗವಂತನ ಇನ್ನೊಂದು ಪ್ರಕೃತಿ. ಇದನ್ನು ಕನಿಷ್ಠ ಎನ್ನುತ್ತಾರೆ. ಉತ್ತಮ ಪ್ರಕೃತಿಯ ಜೀವಿಯು ಅನಾದಿ ಕಾಲದಿಂದ ಹೇಗೋ ಐಹಿಕ ಪ್ರಕೃತಿಯೊಂದಿಗೆ ಸಂಬಂಧ ಹೊಂದಿದೆ. ಜೀವಿಗೆ ದೊರೆಯುವ ಅಲ್ಪಕಾಲದ ದೇಹವು ಅಥವಾ ಐಹಿಕ ವಾಸಸ್ಥಳವು ವಿವಿಧ ಕಾರ್ಯಗಳ ಮತ್ತು ಆ ಕರ್ಮಫಲಗಳ ಕಾರಣವಾಗುತ್ತದೆ. ಇಂತಹ ಬದ್ಧವಾತಾವರಣದಲ್ಲಿ ವಾಸಿಸುವುದರಿಂದ ಮನುಷ್ಯನು (ಅಜ್ಞಾನದಿಂದ) ತನ್ನನ್ನು ದೇಹದೊಂದಿಗೆ ಗುರುತಿಸಿಕೊಂಡು ದೇಹದ ಕರ್ಮಫಲಗಳಿಂದ ಕಷ್ಟಪಡುತ್ತಾನೆ. ಅನಾದಿ ಕಾಲದಿಂದ ಬಂದ ಅಜ್ಞಾನವೇ ದೇಹದ ಕಷ್ಟ ಮತ್ತು ಯಾತನೆಗಳಿಗೆ ಕಾರಣ. ಜೀವಿಯು ದೇಹದ ಕಾರ್ಯಗಳಿಂದ ದೂರವಾಗುತ್ತಲೇ ಆತನು ಪ್ರತಿಕ್ರಿಯೆಗಳಿಂದಲೂ ಬಿಡುಗಡೆಗೊಳ್ಳುತ್ತಾನೆ. ಅವನು ದೇಹವೆಂಬ ನಗರದಲ್ಲಿರುವತನಕ ಅದರ ಯಜಮಾನನಂತೆ ಕಾಣುತ್ತಾನೆ. ಆದರೆ ವಾಸ್ತವವಾಗಿ ಅವನು ಅದರ ಒಡೆಯನೂ ಅಲ್ಲ ಮತ್ತು ಅದರ ಕರ್ಮಗಳನ್ನೂ ಕರ್ಮಫಲಗಳನ್ನೂ ನಿಯಂತ್ರಿಸಬಲ್ಲವನೂ ಅಲ್ಲ. ಅವನು ತನ್ನ ಉಳಿವಿಗಾಗಿ ಸೆಣಸುತ್ತ ಭವಸಾಗರದಲ್ಲಿದ್ದಾನೆ, ಅಷ್ಟೇ. ಸಾಗರದ ಅಲೆಗಳು ಅವನನ್ನು ಎತ್ತಿ ಹಾಕುತ್ತಿವೆ. ಅವುಗಳ ಮೇಲೆ ಅವನಿಗೆ ಯಾವ ಹತೋಟಿಯೂ ಇಲ್ಲ. ಅಲೌಕಿಕವಾದ ಕೃಷ್ಣಪ್ರಜ್ಞೆಯಿಂದಾಗಿ ಸಾಗರದಿಂದ ಹೊರಬರುವುದೇ ಅವನ ಮಟ್ಟಿಗೆ ಅತ್ಯುತ್ತಮ ಪರಿಹಾರ. ಇದೊಂದೇ ಅವನನ್ನು ಎಲ್ಲ ಕ್ಷೋಭೆಯಿಂದ ರಕ್ಷಿಸಬಲ್ಲುದು.

## ಶ್ಲೋಕ - 15

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ |**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ||೧೫||**

**ನ ಆದತ್ತೇ**—ಸ್ವೀಕರಿಸುವುದಿಲ್ಲ; **ಕಸ್ಯಚಿತ್**—ಯಾರೊಬ್ಬನ; **ಪಾಪಮ್**—ಪಾಪವನ್ನು; **ನ**—ಇಲ್ಲ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಸು ಕೃತಮ್**—ಪುಣ್ಯಕಾರ್ಯಗಳನ್ನು; **ವಿಭುಃ**—ಪರಮ ಪ್ರಭುವು; **ಅಜ್ಞಾನೇನ**—ಅಜ್ಞಾನದಿಂದ; **ಆವೃತಮ್**—ಆವೃತವಾಗಿದೆ; **ಜ್ಞಾನಮ್**— ಜ್ಞಾನವು; **ತೇನ**—ಅದರಿಂದ; **ಮುಹ್ಯನ್ತಿ**—ದಿಗ್ಭ್ರಮೆಗೊಳ್ಳುತ್ತಾರೆ; **ಜನ್ತವಃ**—ಜೀವಿಗಳು.

## ಅನುವಾದ

**ಭಗವಂತನು ಯಾರ ಪಾಪವನ್ನಾಗಲೀ ಪುಣ್ಯವನ್ನಾಗಲೀ ಸ್ವೀಕರಿಸುವುದಿಲ್ಲ. ದೇಹಸ್ಥ ಜೀವಿಗಳ ನಿಜವಾದ ಜ್ಞಾನವನ್ನು ಅಜ್ಞಾನವು ಮುಚ್ಚಿರುವುದರಿಂದ ಅವರು ದಿಗ್ಭ್ರಮೆಗೊಳ್ಳುತ್ತಾರೆ.**

## ಭಾವಾರ್ಥ

ಸಂಸ್ಕೃತದ *ವಿಭು* ಎನ್ನುವ ಪದಕ್ಕೆ ಭಗವಂತ ಎಂದು ಅರ್ಥ. ಅವನದು ಅಮಿತವಾದ ಜ್ಞಾನ, ಸಂಪತ್ತು, ಶಕ್ತಿ, ಕೀರ್ತಿ, ಸೌಂದರ್ಯ ಮತ್ತು ತ್ಯಾಗ. ಅವನು ಸದಾ ಆತ್ಮತೃಪ್ತ. ಪಾಪಕರ್ಮಗಳು ಅಥವಾ ಪುಣ್ಯಕರ್ಮಗಳು ಅವನನ್ನು ಕದಡುವುದಿಲ್ಲ. ಅವನು ಯಾವ ಜೀವಿಗೂ ಒಂದು ವಿಶಿಷ್ಟವಾದ ಸನ್ನಿವೇಶವನ್ನು ಸೃಷ್ಟಿಸುವುದಿಲ್ಲ. ಆದರೆ ಜೀವಿಯು ಅಜ್ಞಾನದಿಂದ ದಿಗ್ಭ್ರಮೆಗೊಳ್ಳುತ್ತಾನೆ ಮತ್ತು ಬದುಕಿನಲ್ಲಿ ಯಾವುದೋ ಒಂದು ಸ್ಥಿತಿಯಲ್ಲಿರಲು ಬಯಸುತ್ತಾನೆ. ಇದರಿಂದ ಅವನ ಕ್ರಿಯೆ-ಪ್ರತಿಕ್ರಿಯೆಗಳ ಸರಪಳಿ ಪ್ರಾರಂಭವಾಗುತ್ತದೆ. ಜೀವಿಯು ಶ್ರೇಷ್ಠ ಸ್ವಭಾವದವನಾದದ್ದರಿಂದ ಅವನಲ್ಲಿ ಜ್ಞಾನವು ತುಂಬಿದೆ. ಆದರೂ ತನ್ನ ಮಿತವಾದ ಶಕ್ತಿಯ ದೆಸೆಯಿಂದ ಅಜ್ಞಾನದ ಪ್ರಭಾವಕ್ಕೆ ಒಳಗಾಗುತ್ತಾನೆ. ಭಗವಂತನು ಸರ್ವಶಕ್ತನು; ಜೀವಿಯು ಸರ್ವಶಕ್ತನಲ್ಲ. ಭಗವಂತನು *ವಿಭು* ಅಥವಾ ಸರ್ವಜ್ಞ. ಜೀವಿಯು *ಅಣು*. ಅವನು ಜೀವಂತ ಆತ್ಮನಾದದ್ದರಿಂದ ಸ್ವತಂತ್ರ ಸಂಕಲ್ಪದಿಂದ ಏನನ್ನಾದರೂ ಅಪೇಕ್ಷಿಸುವ ಶಕ್ತಿ ಇದೆ. ಇಂತಹ ಅಪೇಕ್ಷೆಯನ್ನು ಸರ್ವಶಕ್ತನಾದ ಭಗವಂತನು ಮಾತ್ರ ಪೂರೈಸಬಲ್ಲ. ಆದುದರಿಂದ ಜೀವಿಯು ತನ್ನ ಬಯಕೆಗಳಿಂದ ದಿಗ್ಭ್ರಮೆಗೊಂಡಾಗ ಭಗವಂತನು ಆ ಬಯಕೆಗಳನ್ನು ಪೂರೈಸಿಕೊಳ್ಳಲು ಅವನಿಗೆ ಅವಕಾಶವನ್ನು ನೀಡುತ್ತಾನೆ. ಆದರೆ ಜೀವಿಯು ಬಯಸಿದ ಆ ನಿರ್ದಿಷ್ಟ ಸನ್ನಿವೇಶದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಿಗೆ ಭಗವಂತನು ಹೊಣೆಯಲ್ಲ. ಆದುದರಿಂದ ದಿಗ್ಭ್ರಮೆಯ ಸ್ಥಿತಿಯಲ್ಲಿರುವಾಗ ದೇಹಸ್ಥ ಆತ್ಮನು ತನ್ನನ್ನು ಸಂದರ್ಭಾನುಸಾರವಾಗಿ ಒದಗಿದ ಐಹಿಕದೇಹದೊಂದಿಗೆ ಗುರುತಿಸಿಕೊಳ್ಳುತ್ತಾನೆ. ಇದರಿಂದ ಬದುಕಿನ ತಾತ್ಕಾಲಿಕ ಸುಖದುಃಖಗಳಿಗೆ ಒಳಗಾಗುತ್ತಾನೆ. ಪರಮಾತ್ಮನಾಗಿ ಭಗವಂತನು ಜೀವಿಯ ನಿರಂತರ ಸಖ. ಹೂವಿನ ಹತ್ತಿರ ಇದ್ದಾಗ ಹೂವಿನ ಪರಿಮಳವನ್ನು ಗ್ರಹಿಸುವುದು ಸಾಧ್ಯವಾಗುವಂತೆ ಭಗವಂತನು ಆತ್ಮದ ಆಸೆಗಳನ್ನು ಅರ್ಥಮಾಡಿಕೊಳ್ಳಬಲ್ಲ. ಆಸೆಯು ಜೀವಿಯ ಬದ್ಧತೆಯ ಒಂದು ಸೂಕ್ಷ್ಮರೂಪ. ಜೀವಿಯ ಯೋಗ್ಯತೆಗೆ ಅನುಗುಣವಾಗಿ ಭಗವಂತನು ಅವನ ಆಸೆಯನ್ನು ನೆರವೇರಿಸಿಕೊಡುತ್ತಾನೆ — ಮನುಷ್ಯನು ಒಂದು ರೀತಿಯಲ್ಲಿ ಬಗೆದರೆ ಭಗವಂತನು ಮತ್ತೊಂದು ರೀತಿಯಲ್ಲಿ ತೀರ್ಮಾನ ಮಾಡುತ್ತಾನೆ. ಆದುದರಿಂದ ವ್ಯಕ್ತಿಯು ತನ್ನ ಬಯಕೆಗಳನ್ನು ಪೂರೈಸಿಕೊಳ್ಳುವಷ್ಟು ಶಕ್ತನಲ್ಲ. ಭಗವಂತನಾದರೋ ಎಲ್ಲ ಆಸೆಗಳನ್ನೂ ಪೂರೈಸಬಲ್ಲ. ಭಗವಂತನು ಎಲ್ಲರ ವಿಷಯದಲ್ಲಿಯೂ ತಟಸ್ಥನಾಗಿರುವುದರಿಂದ ಅತ್ಯಲ್ಪ ಸ್ವಾತಂತ್ರ್ಯವುಳ್ಳ ಜೀವಿಗಳ ಆಸೆಗಳಲ್ಲಿ ಕೈಹಾಕುವುದಿಲ್ಲ. ಆದರೆ ಯಾವಾಗ ಮನುಷ್ಯನು ಕೃಷ್ಣನನ್ನು ಬಯಸುತ್ತಾನೋ ಆಗ ಭಗವಂತನು ಅವನನ್ನು ವಿಶೇಷ ರೀತಿಯಲ್ಲಿ ನೋಡಿಕೊಳ್ಳುತ್ತಾನೆ. ಕೃಷ್ಣನನ್ನು ಪಡೆದು ನಿರಂತರವಾಗಿ ಸುಖವಾಗಿರುವ ರೀತಿಯಲ್ಲಿ ಬಯಸುವಂತೆ ಆ ಮನುಷ್ಯನನ್ನು ಪ್ರೋತ್ಸಾಹಿಸುತ್ತಾನೆ. ಆದ್ದರಿಂದ ವೇದಮಂತ್ರಗಳು **ಏಷ ಉ ಹಿ ಏವ ಸಾಧು ಕರ್ಮ ಕಾರಯತಿ ತಂ ಯಮ್ ಏಭ್ಯೋ ಲೋಕೇಭ್ಯ ಉನ್ನಿನೀಷತೇ. ಏಷ ಉ ಏವಾಸಾಧು ಕರ್ಮ ಕಾರಯತಿ ಯಮ್ ಅಧೋ ನಿನೀಷತೇ**; "ಜೀವಿಯು ಮೇಲೇರಲು

ಸಾಧ್ಯವಾಗುವಂತೆ ಭಗವಂತನು ಅವನನ್ನು ಪುಣ್ಯಕಾರ್ಯಗಳಲ್ಲಿ ತೊಡಗಿಸುತ್ತಾನೆ. ಅವನು ನರಕಕ್ಕೆ ಹೋಗುವಂತೆ ಭಗವಂತನು ಅವನನ್ನು ಪಾಪ ಕಾರ್ಯಗಳಲ್ಲಿ ತೊಡಗಿಸುತ್ತಾನೆ" ಎಂದು ಸ್ಪಷ್ಟವಾಗಿ ಹೇಳುತ್ತವೆ (ಕೌಷೀತಕೀ ಉಪನಿಷತ್ತು 3.8).

**ಅಜ್ಞೋ ಜನ್ತುರನೀಶೋऽಯಮ್ ಆತ್ಮನಃ ಸುಖದುಃಖಯೋಃ |**
**ಈಶ್ವರಪ್ರೇರಿತೋ ಗಚ್ಛೇತ್ ಸ್ವರ್ಗಂ ವಾಶ್ವಭ್ರಮೇವ ಚ ||**

"ತನ್ನ ಸುಖದುಃಖಗಳಲ್ಲಿ ಜೀವಿಯು ಸಂಪೂರ್ಣವಾಗಿ ಅಸ್ವತಂತ್ರನು. ಗಾಳಿಯಿಂದ ಅಟ್ಟಲ್ಪಡುವ ಮೋಡದಂತೆ ಅವನು ಪ್ರಭುವಿನ ಪರಮ ಸಂಕಲ್ಪಕ್ಕನುಸಾರವಾಗಿ ಸ್ವರ್ಗಕ್ಕೆ ಅಥವಾ ನರಕಕ್ಕೆ ಹೋಗಬಹುದು."

ಆದುದರಿಂದ ಕೃಷ್ಣಪ್ರಜ್ಞೆಯನ್ನು ತಪ್ಪಿಸಿಕೊಳ್ಳುವ ಅನಾದಿಕಾಲದ ಅಪೇಕ್ಷೆಯಿಂದ ದೇಹಸ್ಥ ಆತ್ಮನು ದಿಗ್ಭ್ರಮೆಯನ್ನು ಉಂಟುಮಾಡಿಕೊಳ್ಳುತ್ತಾನೆ. ಪರಿಣಾಮವಾಗಿ ಆತನು ನಿತ್ಯಾನಂದ ಜ್ಞಾನಸ್ವರೂಪನಾದರೂ ತನ್ನ ಅಸ್ತಿತ್ವದ ಸಣ್ಣತನದಿಂದ ಭಗವಂತನ ಸೇವಕನಾದ ತನ್ನ ನಿಜಸ್ವರೂಪವನ್ನು ಮರೆಯುತ್ತಾನೆ. ಇದರಿಂದ ಅಜ್ಞಾನದಲ್ಲಿ ಸಿಕ್ಕಿಕೊಳ್ಳುತ್ತಾನೆ. ಅಜ್ಞಾನದ ಪ್ರಭಾವದಿಂದ ಜೀವಿಯು ತನ್ನ ಬದ್ಧ ಅಸ್ತಿತ್ವಕ್ಕೆ ಭಗವಂತನೇ ಹೊಣೆ ಎಂದು ಸಾಧಿಸಲು ಪ್ರಯತ್ನಿಸುತ್ತಾನೆ. ವೇದಾಂತಸೂತ್ರಗಳು (2.1.34) ಇದನ್ನೇ ದೃಢಪಡಿಸುತ್ತವೆ. **ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ** "ಭಗವಂತನು ಹಾಗೆ ತೋರಿದರೂ ಯಾರನ್ನೂ ದ್ವೇಷಿಸುವುದಿಲ್ಲ ಮತ್ತು ಯಾರನ್ನೂ ಇಷ್ಟಪಡುವುದಿಲ್ಲ".

## ಶ್ಲೋಕ - 16

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ |**
**ತೇಷಾಮಾದಿತ್ಯವಜ್ ಜ್ಞಾನಂ ಪ್ರಕಾಶಯತಿ ತತ್ ಪರಮ್ ||೧೬||**

**ಜ್ಞಾನೇನ**—ಜ್ಞಾನದಿಂದ; **ತು**—ಆದರೆ; **ತತ್**—ಆ; **ಅಜ್ಞಾನಮ್**—ಅಜ್ಞಾನವು; **ಯೇಷಾಮ್**—ಯಾರ; **ನಾಶಿತಮ್**—ನಾಶಮಾಡಲ್ಪಟ್ಟಿತು; **ಆತ್ಮನಃ**—ಜೀವಿಯ; **ತೇಷಾಮ್**—ಅವರ; **ಆದಿತ್ಯವತ್**—ಉದಯಿಸುವ ಸೂರ್ಯನಂತೆ; **ಜ್ಞಾನಮ್**—ಜ್ಞಾನವು; **ಪ್ರಕಾಶಯತಿ**—ಪ್ರಕಟವಾಗುತ್ತದೆ; **ತತ್ ಪರಮ್**—ಕೃಷ್ಣಪ್ರಜ್ಞೆಯನ್ನು.

## ಅನುವಾದ

**ಅಜ್ಞಾನವನ್ನು ನಾಶಮಾಡುವ ಜ್ಞಾನದ ಬೆಳಕನ್ನು ಮನುಷ್ಯನು ಪಡೆದುಕೊಂಡಾಗ ಹಗಲು ಹೊತ್ತಿನಲ್ಲಿ ಸೂರ್ಯನು ಎಲ್ಲದರ ಮೇಲೂ ಬೆಳಕು ಹರಿಸುವಂತೆ ಅವನ ಜ್ಞಾನವು ಎಲ್ಲವನ್ನೂ ಪ್ರಕಾಶಗೊಳಿಸುತ್ತದೆ.**

## ಭಾವಾರ್ಥ

ಕೃಷ್ಣನನ್ನು ಮರೆತವರು ದಿಗ್ಭ್ರಮೆಗೊಳ್ಳಲೇಬೇಕು. ಆದರೆ ಕೃಷ್ಣಪ್ರಜ್ಞೆಯಲ್ಲಿರುವವರಿಗೆ

ದಿಗ್ಭ್ರಮೆಯೇ ಇಲ್ಲ. ಭಗವದ್ಗೀತೆಯಲ್ಲಿ, **ಸರ್ವಂ ಜ್ಞಾನ ಪ್ಲವೇನ, ಜ್ಞಾನಾಗ್ನಿಃ ಸರ್ವಕರ್ಮಾಣಿ** ಎಂದೂ **ನ ಹಿ ಜ್ಞಾನೇನ ಸದೃಶಮ್** ಎಂದೂ ಹೇಳಿದೆ. ಜ್ಞಾನಕ್ಕೆ ಯಾವಾಗಲೂ ಬಹು ಗೌರವ. ಆ ಜ್ಞಾನ ಯಾವುದು? ಕೃಷ್ಣನಿಗೆ ಶರಣಾದಾಗ ಪರಿಪೂರ್ಣ ಜ್ಞಾನವು ಲಭಿಸುತ್ತದೆ. ಭಗವದ್ಗೀತೆಯ ಏಳನೆಯ ಅಧ್ಯಾಯದ 19ನೆಯ ಶ್ಲೋಕದಲ್ಲಿ ಹೇಳಿರುವಂತೆ—**ಬಹೂನಾಂ ಜನ್ಮನಾಮ್ ಅನ್ತೇ ಜ್ಞಾನವಾನ್ ಮಾಂ ಪ್ರಪದ್ಯತೇ.** ಅನೇಕಾನೇಕ ಜನ್ಮಗಳು ಕಳೆದನಂತರ ಮನುಷ್ಯನು ಪರಿಪೂರ್ಣ ಜ್ಞಾನದಲ್ಲಿ ಕೃಷ್ಣನಿಗೆ ಶರಣಾಗತನಾದಾಗ ಅಥವಾ ಕೃಷ್ಣಪ್ರಜ್ಞೆಯನ್ನು ಗಳಿಸಿದಾಗ, ಸೂರ್ಯನು ಹಗಲಿನಲ್ಲಿ ಎಲ್ಲವನ್ನು ತೋರಿಸಿಕೊಡುವಂತೆ, ಅವನಿಗೆ ಎಲ್ಲ ತೆರೆದಿಟ್ಟಂತಾಗುತ್ತದೆ. ಜೀವಿಯು ಹಲವಾರು ರೀತಿಗಳಲ್ಲಿ ದಿಗ್ಭ್ರಮೆ ಹೊಂದುತ್ತಾನೆ. ಉದಾಹರಣೆಗೆ ಅವಿನಯದಿಂದ ಆತನು ತಾನೇ ದೇವರು ಎಂದುಕೊಂಡಾಗ ಅವನು ಅಜ್ಞಾನದ ಕಟ್ಟಕಡೆಯ ಬಲೆಗೆ ಬೀಳುತ್ತಾನೆ. ಜೀವಿಯೊಬ್ಬನು ದೇವರಾದರೆ ಅವನು ಅಜ್ಞಾನದಿಂದ ದಿಗ್ಭ್ರಮೆಗೊಳ್ಳುವುದು ಹೇಗೆ? ಅಜ್ಞಾನದಿಂದ ದೇವರು ದಿಗ್ಭ್ರಮೆಗೊಳ್ಳುವನೆ? ಹಾಗಿದ್ದರೆ, ಅಜ್ಞಾನ ಅಥವಾ ಸೈತಾನ ದೇವರಿಗಿಂತ ದೊಡ್ಡವನೆಂದಾಯಿತು. ನಿಜವಾದ ಜ್ಞಾನವನ್ನು ಕೃಷ್ಣಪ್ರಜ್ಞೆಯಲ್ಲಿ ಪರಿಪೂರ್ಣನಾದವನಿಂದ ಪಡೆದುಕೊಳ್ಳಬಹುದು. ಆದುದರಿಂದ ಮನುಷ್ಯನು ನಿಜವಾದ ಗುರುವನ್ನು ಹುಡುಕಿ ಪಡೆಯಬೇಕು. ಅವನಿಂದ ಕೃಷ್ಣಪ್ರಜ್ಞೆ ಎಂದರೇನು ಎಂದು ಕಲಿಯಬೇಕು. ಏಕೆಂದರೆ, ಸೂರ್ಯನು ಕತ್ತಲನ್ನೆಲ್ಲ ಹೊಡೆದಟ್ಟುವಂತೆ ಕೃಷ್ಣಪ್ರಜ್ಞೆಯು ಎಲ್ಲ ಅಜ್ಞಾನವನ್ನು ಹೊಡೆದಟ್ಟುವುದು. ತಾನು ಈ ದೇಹವಲ್ಲ, ದೇಹವನ್ನು ಮೀರಿದವನು ಎಂದು ಸಂಪೂರ್ಣವಾಗಿ ತಿಳಿದವನೂ ಕೂಡ ಆತ್ಮಕ್ಕೂ ಪರಮಾತ್ಮನಿಗೂ ಇರುವ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳದೆ ಹೋಗಬಹುದು. ಆದರೆ ಆತನು ಪರಿಪೂರ್ಣನಾದ ನಿಜವಾದ ಕೃಷ್ಣಪ್ರಜ್ಞೆಯುಳ್ಳ ಗುರುವಿನ ಆಶ್ರಯ ಪಡೆಯುವ ಮನಸ್ಸು ಮಾಡಿದರೆ ಎಲ್ಲವನ್ನೂ ಚೆನ್ನಾಗಿ ತಿಳಿದುಕೊಳ್ಳಬಹುದು. ಭಗವಂತನ ಪ್ರತಿನಿಧಿಯನ್ನು ಭೇಟಿಯಾದಾಗ ಮಾತ್ರ ಭಗವಂತನನ್ನೂ ಭಗವಂತನೊಡನೆ ತನ್ನ ಸಂಬಂಧವನ್ನೂ ತಿಳಿಯಲು ಸಾಧ್ಯ. ಭಗವಂತನ ಪ್ರತಿನಿಧಿಗೆ ಸಾಮಾನ್ಯವಾಗಿ ಭಗವಂತನಿಗೆ ಸಲ್ಲಿಸುವ ಎಲ್ಲ ಗೌರವವೂ ಸಲ್ಲುತ್ತದೆ. ಏಕೆಂದರೆ ಆತನಿಗೆ ದೇವರ ವಿಷಯ ಗೊತ್ತು. ಆದರೆ ಆತನು ತಾನೇ ದೇವರೆಂದು ಎಂದೂ ಹೇಳಿಕೊಳ್ಳುವುದಿಲ್ಲ. ದೇವರಿಗೂ ಜೀವಿಗೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು. ಆದ್ದರಿಂದಲೇ ಶ್ರೀಕೃಷ್ಣನು ಎರಡನೆಯ ಅಧ್ಯಾಯದಲ್ಲಿ (2.12) ಪ್ರತಿಯೊಂದು ಜೀವಿಯೂ ಪ್ರತ್ಯೇಕ ವ್ಯಕ್ತಿಯೇ ಮತ್ತು ಭಗವಂತನೂ ಪ್ರತ್ಯೇಕ ಪುರುಷನೇ ಎಂದು ಹೇಳಿದನು. ಅವರೆಲ್ಲರೂ ಹಿಂದೆ ಪ್ರತ್ಯೇಕ ವ್ಯಕ್ತಿಗಳಾಗಿದ್ದರು; ಈಗ ಪ್ರತ್ಯೇಕ ವ್ಯಕ್ತಿಗಳಾಗಿದ್ದಾರೆ; ಮತ್ತು ಮುಕ್ತಿಯನ್ನು ಪಡೆದ ಅನಂತರವೂ ಭವಿಷ್ಯದಲ್ಲಿ ಪ್ರತ್ಯೇಕ ವ್ಯಕ್ತಿಗಳಾಗಿರುತ್ತಾರೆ. ರಾತ್ರಿಯ ಕತ್ತಲಿನಲ್ಲಿ ಎಲ್ಲವೂ ಒಂದೇ ಆಗಿ ಕಾಣುತ್ತದೆ. ಆದರೆ ಹಗಲಿನಲ್ಲಿ ಸೂರ್ಯನು ಮೇಲೇರಿದಾಗ ಪ್ರತಿಯೊಂದು ವಸ್ತುವನ್ನು ಅದರ ನಿಜವಾದ ಸ್ವರೂಪದಲ್ಲಿ ಕಾಣುತ್ತೇವೆ. ಅಧ್ಯಾತ್ಮ ಜೀವನದಲ್ಲಿ ವ್ಯಕ್ತಿಗತ ಅಸ್ತಿತ್ವದ ಜ್ಞಾನವೇ ನಿಜವಾದ ಜ್ಞಾನ.

## ಶ್ಲೋಕ - 17

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ |**
**ಗಚ್ಛನ್ತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ||೧೭||**

**ತತ್ ಬುದ್ಧಯಃ**—ಪರಮೋನ್ನತನಲ್ಲಿಯೇ ಸದಾ ಬುದ್ಧಿ ಉಳ್ಳವರು; **ತತ್ ಆತ್ಮಾನಃ**—ಪರಮೋನ್ನತನಲ್ಲಿಯೇ ಸದಾ ಮನಸ್ಸಿಟ್ಟವರು; **ತತ್ ನಿಷ್ಠಾಃ**—ಪರಮೋನ್ನತನಲ್ಲಿ ಮಾತ್ರ ಶ್ರದ್ಧೆಯುಳ್ಳವರು; **ತತ್ ಪರಾಯಣಾಃ**—ಪರಮೋನ್ನತನಲ್ಲಿಯೇ ಪೂರ್ಣಆಶ್ರಯ ಹೊಂದಿದವರು; **ಗಚ್ಛನ್ತಿ**—ಹೋಗುತ್ತಾರೆ; **ಅಪುನಃಆವೃತ್ತಿಮ್**—ಮೋಕ್ಷಕ್ಕೆ; **ಜ್ಞಾನ**—ಜ್ಞಾನದಿಂದ; **ನಿರ್ಧೂತ**—ಶುದ್ಧವಾಗಿ; **ಕಲ್ಮಷಾಃ**— ಸಂಶಯಗಳು.

## ಅನುವಾದ

**ಮನುಷ್ಯನ ಬುದ್ಧಿ, ಮನಸ್ಸು, ಶ್ರದ್ಧೆ ಮತ್ತು ಆಶ್ರಯ ಎಲ್ಲವೂ ಪರಮ ಪ್ರಭುವಿನಲ್ಲಿ ನೆಲೆನಿಂತಾಗ ಪೂರ್ಣಜ್ಞಾನವು ಆತನ ಸಂಶಯಗಳೆಲ್ಲವನ್ನೂ ತೊಳೆದು ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತದೆ. ಹೀಗೆ ಆತನು ಮುಕ್ತಿಮಾರ್ಗದಲ್ಲಿ ನೇರವಾಗಿ ಮುನ್ನಡೆಯುತ್ತಾನೆ.**

## ಭಾವಾರ್ಥ

ಪರಮ ದಿವ್ಯ ಸತ್ಯವು ಶ್ರೀಕೃಷ್ಣನೇ. ಇಡೀ ಭಗವದ್ಗೀತೆಯು ಕೃಷ್ಣನು ದೇವೋತ್ತಮ ಪರಮ ಪುರುಷ ಎನ್ನುವ ದೃಢವಾದ ಹೇಳಿಕೆಯ ಸುತ್ತ ಕೇಂದ್ರೀಕೃತವಾಗಿದೆ. ಎಲ್ಲ ವೈದಿಕ ಸಾಹಿತ್ಯವೂ ಇದನ್ನೇ ಹೇಳುತ್ತದೆ. **ಪರತತ್ತ್ವ** ಎಂದರೆ ಪರಮಸತ್ಯ. ಪರಮಸತ್ಯವನ್ನು ತಿಳಿದವರು ಅದನ್ನು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂದು ತಿಳಿಯುತ್ತಾರೆ. ಭಗವಾನ್ ಅಥವಾ ದೇವೋತ್ತಮ ಪರಮ ಪುರುಷನು ಪರಮಸತ್ಯದ ಅಂತಿಮ ಸಿದ್ಧಾಂತ. ಇದಕ್ಕಿಂತ ಮಿಗಿಲಾದುದು ಏನೂ ಇಲ್ಲ. ಭಗವಂತನು **ಮತ್ತಃ ಪರತರಂ ನಾನ್ಯತ್ ಕಂಚಿದಸ್ತಿ ಧನಂಜಯ** ಎಂದು ಹೇಳುತ್ತಾನೆ. ಕೃಷ್ಣನು ನಿರಾಕಾರ ಬ್ರಹ್ಮನನ್ನು ಸಮರ್ಥಿಸುತ್ತಾನೆ. **ಬ್ರಹ್ಮಣೋ ಹಿ ಪ್ರತಿಷ್ಠಾಹಮ್**. ಆದುದರಿಂದ ಎಲ್ಲ ರೀತಿಗಳಲ್ಲಿ ಕೃಷ್ಣನು ಪರಮಸತ್ಯ. ಯಾರ ಮನಸ್ಸು, ಬುದ್ಧಿ, ಶ್ರದ್ಧೆ ಮತ್ತು ಆಶ್ರಯಗಳು ಯಾವಾಗಲೂ ಕೃಷ್ಣನಲ್ಲಿರುತ್ತವೆಯೋ, ಅಥವಾ ಬೇರೆ ಮಾತುಗಳಲ್ಲಿ ಹೇಳುವುದಾದರೆ ಯಾರು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿರುವರೋ ಅವರ ಎಲ್ಲ ಸಂದೇಹಗಳು ನಿಶ್ಚಯವಾಗಿಯೂ ಸಂಪೂರ್ಣವಾಗಿ ತೊಡೆದುಹೋಗುತ್ತವೆ. ಆತನಿಗೆ ಅಧ್ಯಾತ್ಮವನ್ನು ಕುರಿತ ಪ್ರತಿಯೊಂದು ಸಂಗತಿಯೂ ಪರಿಪೂರ್ಣವಾಗಿ ತಿಳಿಯುತ್ತದೆ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಕೃಷ್ಣನಲ್ಲಿ ದ್ವಂದ್ವ (ಒಂದೇ ಕಾಲದಲ್ಲಿ ಏಕತೆ ಮತ್ತು ಪ್ರತ್ಯೇಕತೆ)ಇದೆ ಎನ್ನುವುದನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ. ಇಂತಹ ಆಧ್ಯಾತ್ಮಿಕ ಜ್ಞಾನದ ಬಲದಿಂದ ಆತನು ಮುಕ್ತಿಮಾರ್ಗದಲ್ಲಿ ದೃಢವಾಗಿ ಮುನ್ನಡೆಯಬಲ್ಲ.

## ಶ್ಲೋಕ - 18

**ವಿದ್ಯಾವಿನಯಸಮ್ಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ||೧೮||**

**ವಿದ್ಯಾ**—ವಿದ್ಯೆ; **ವಿನಯ**—ಮತ್ತು ವಿನಯಗಳನ್ನು; **ಸಮ್ಪನ್ನೇ**—ಪೂರ್ಣವಾಗಿ ಹೊಂದಿದ; **ಬ್ರಾಹ್ಮಣೇ**—ಬ್ರಾಹ್ಮಣನಲ್ಲಿ; **ಗವಿ**—ಹಸುವಿನಲ್ಲಿ; **ಹಸ್ತಿನಿ**—ಆನೆಯಲ್ಲಿ; **ಶುನಿ**—ನಾಯಿಯಲ್ಲಿ; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಶ್ವಪಾಕೇ**—ನಾಯಿಯನ್ನು ತಿನ್ನುವವನಲ್ಲಿ (ಅಂತ್ಯಜನಲ್ಲಿ);

**ಚ**—ಕ್ರಮವಾಗಿ; **ಪಣ್ಡಿತಾಃ**—ಬುದ್ಧಿವಂತರಾದವರು; **ಸಮದರ್ಶಿನಃ**—ಸಮದರ್ಶಿಗಳಾಗಿರುತ್ತಾರೆ.

## ಅನುವಾದ

**ನಮ್ರರಾದ ಜ್ಞಾನಿಗಳು, ನಿಜವಾದ ಜ್ಞಾನವನ್ನು ಪಡೆದವರಾದುದರಿಂದ, ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನನ್ನೂ, ಹಸುವನ್ನೂ, ಆನೆಯನ್ನೂ, ನಾಯಿಯನ್ನೂ, ನಾಯಿಯ ಮಾಂಸವನ್ನು ತಿನ್ನುವವನನ್ನೂ (ಅಂತ್ಯಜನನ್ನೂ) ಒಂದೇ ರೀತಿ ಕಾಣುತ್ತಾರೆ.**

## ಭಾವಾರ್ಥ

ಕೃಷ್ಣಪ್ರಜ್ಞೆ ಇರುವ ಮನುಷ್ಯನು ಯಾವುದೇ ವರ್ಗಗಳಲ್ಲಿ ಅಥವಾ ಜಾತಿಗಳಲ್ಲಿ ವ್ಯತ್ಯಾಸವನ್ನು ಮಾಡುವುದಿಲ್ಲ. ಸಾಮಾಜಿಕ ದೃಷ್ಟಿಯಿಂದ ಬ್ರಾಹ್ಮಣನೂ, ಅಂತ್ಯಜನೂ ಬೇರೆಬೇರೆ ಇರಬಹುದು. ನಾಯಿ, ಹಸು ಮತ್ತು ಆನೆಗಳು ಪ್ರಾಣಿವರ್ಗದ ದೃಷ್ಟಿಯಿಂದ ಬೇರೆಬೇರೆ ಇರಬಹುದು. ಆದರೆ ದೇಹದ ಈ ವ್ಯತ್ಯಾಸಗಳು ವಿದ್ವಾಂಸನಾದ ಅಧ್ಯಾತ್ಮವಾದಿಯ ದೃಷ್ಟಿಯಿಂದ ಅರ್ಥವಿಲ್ಲದವು. ಇದಕ್ಕೆ ಪರಮ ಪ್ರಭುವಿನೊಂದಿಗೆ ಅವುಗಳ ಸಂಬಂಧವೇ ಕಾರಣ. ಏಕೆಂದರೆ ಭಗವಂತನು ಸ್ವಾಂಶವಾದ ಪರಮಾತ್ಮನಾಗಿ ಎಲ್ಲರ ಹೃದಯಗಳಲ್ಲಿದ್ದಾನೆ. ಪರಮ ಸತ್ಯವನ್ನು ಹೀಗೆ ಅರ್ಥಮಾಡಿಕೊಳ್ಳುವುದೇ ನಿಜವಾದ ವಿದ್ವತ್ತು. ಬೇರೆಬೇರೆ ಜಾತಿಗಳ ಅಥವಾ ಬೇರೆ ಬೇರೆ ಜೀವವರ್ಗಗಳ ದೇಹಗಳ ಮಟ್ಟಿಗೆ ಹೇಳುವುದಾದರೆ ಭಗವಂತನು ಎಲ್ಲರ ವಿಷಯದಲ್ಲಿಯೂ ಒಂದೇರೀತಿ ದಯೆಯನ್ನು ತೋರಿಸುತ್ತಾನೆ. ಏಕೆಂದರೆ ಅವನು ಪ್ರತಿಯೊಂದು ಜೀವಿಯನ್ನೂ ಸ್ನೇಹಿತನೆಂದೇ ಕಾಣುತ್ತಾನೆ. ಜೀವಿಗಳ ಸನ್ನಿವೇಶಗಳು ಏನೇ ಇರಲಿ ತಾನು ಪರಮಾತ್ಮನಾಗಿಯೇ ಇರುತ್ತಾನೆ. ಬ್ರಾಹ್ಮಣನ ದೇಹವೂ ಅಂತ್ಯಜನ ದೇಹವೂ ಒಂದೇ ಅಲ್ಲ. ಆದರೂ ಪರಮಾತ್ಮನಾಗಿ ಭಗವಂತನು ಅಂತ್ಯಜನಲ್ಲಿಯೂ ಬ್ರಾಹ್ಮಣನಲ್ಲಿಯೂ ಇದ್ದಾನೆ. ದೇಹಗಳು ಐಹಿಕ ಪ್ರಕೃತಿಯ ಬೇರೆಬೇರೆ ಗುಣಗಳಿಂದಾದ ಜಡವಸ್ತುವಿನ ಉತ್ಪನ್ನಗಳು. ಆದರೆ ದೇಹದೊಳಗಿರುವ ಆತ್ಮನೂ ಪರಮಾತ್ಮನೂ ಒಂದೇ ಆಧ್ಯಾತ್ಮಿಕ ಗುಣದವರು. ಆತ್ಮನೂ ಪರಮಾತ್ಮನೂ ಗುಣದಲ್ಲಿ ಒಂದೇ ಆಗಿದ್ದರೂ ಪ್ರಮಾಣದಲ್ಲಿ ಒಂದೇ ಅಲ್ಲ. ಏಕೆಂದರೆ ಜೀವಾತ್ಮನು ಆ ನಿರ್ದಿಷ್ಟ ದೇಹದಲ್ಲಿ ಮಾತ್ರ ಇದ್ದಾನೆ. ಆದರೆ ಪರಮಾತ್ಮನು ಪ್ರತಿಯೊಂದು ದೇಹದಲ್ಲಿಯೂ ಇದ್ದಾನೆ. ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಇದರ ಸಂಪೂರ್ಣ ತಿಳುವಳಿಕೆ ಇದೆ. ಆದುದರಿಂದ ಅವನು ನಿಜವಾದ ಪಂಡಿತ ಮತ್ತು ಸಮದರ್ಶಿ. ಆತ್ಮ ಮತ್ತು ಪರಮಾತ್ಮರ ಸದೃಶ ಲಕ್ಷಣಗಳೆಂದರೆ ಅವರಿಬ್ಬರಿಗೂ ಪ್ರಜ್ಞೆಯುಂಟು. ಇಬ್ಬರೂ ನಿತ್ಯರು ಮತ್ತು ಆನಂದಮಯರು. ಆದರೆ ವ್ಯತ್ಯಾಸವೆಂದರೆ ಜೀವಾತ್ಮನ ಪ್ರಜ್ಞೆಯು ದೇಹದ ವ್ಯಾಪ್ತಿಗೆ ಸೀಮಿತವಾಗಿದೆ. ಆದರೆ ಪರಮಾತ್ಮನಿಗೆ ಎಲ್ಲ ದೇಹಗಳ ಪ್ರಜ್ಞೆ ಇದೆ. ಪರಮಾತ್ಮನು ವ್ಯತ್ಯಾಸ ಮಾಡದೆ ಎಲ್ಲ ಶರೀರಗಳಲ್ಲೂ ಇದ್ದಾನೆ.

## ಶ್ಲೋಕ - 19

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥೧೯॥**

**ಇಹ**—ಈ ಜನ್ಮದಲ್ಲಿ; **ಏವ**—ಖಂಡಿತವಾಗಿಯೂ; **ತೈಃ**—ಅವರಿಂದ; **ಜಿತಃ**—ಗೆಲ್ಲಲ್ಪಡುವುದು; **ಸರ್ಗಃ**—ಜನನ ಮತ್ತು ಮರಣವು; **ಯೇಷಾಮ್**—ಯಾರ; **ಸಾಮ್ಯೇ**—ಸಮಭಾವದಲ್ಲಿ; **ಸ್ಥಿತಮ್**—ನೆಲೆಸಿರುತ್ತದೋ; **ಮನಃ**—ಮನಸ್ಸು; **ನಿರ್ದೋಷಮ್**—ದೋಷರಹಿತವಾಗಿರುತ್ತದೆ; **ಹಿ**—ನಿಶ್ಚಿತವಾಗಿಯೂ; **ಸಮಮ್**—ಸಮಭಾವದಲ್ಲಿ; **ಬ್ರಹ್ಮ**—ಪರಮೋನ್ನತನಂತೆ; **ತಸ್ಮಾತ್**—ಆದ್ದರಿಂದ; **ಬ್ರಹ್ಮಣಿ**—ಪರಮೋನ್ನತನಲ್ಲಿ; **ತೇ**—ಅವರು; **ಸ್ಥಿತಾಃ**—ನೆಲೆಸಿರುತ್ತಾರೆ.

## ಅನುವಾದ

**ಯಾರ ಮನಸ್ಸು ಸ್ಥಿರವಾಗಿದ್ದು ಸಮಭಾವದಲ್ಲಿ ನೆಲೆಸಿರುವುದೋ ಅವರು ಆಗಲೇ ಹುಟ್ಟು ಸಾವುಗಳ ಸ್ಥಿತಿಯನ್ನು ಗೆದ್ದಿರುತ್ತಾರೆ. ಅವರು ಬ್ರಹ್ಮನ್‌ನಂತೆ ದೋಷರಹಿತರು. ಆದುದರಿಂದ ಅವರು ಆಗಲೇ ಬ್ರಹ್ಮನ್‌ನಲ್ಲಿ ಇರುತ್ತಾರೆ.**

## ಭಾವಾರ್ಥ

ಮೇಲೆ ಹೇಳಿದಂತೆ ಸಮಚಿತ್ತವು ಆತ್ಮಸಾಕ್ಷಾತ್ಕಾರದ ಗುರುತು. ಇಂತಹ ಸ್ಥಿತಿಯನ್ನು ತಲಪಿರುವ ವ್ಯಕ್ತಿಗಳು ಲೌಕಿಕ ಸ್ಥಿತಿಗಳನ್ನು, ಮುಖ್ಯವಾಗಿ ಹುಟ್ಟು ಸಾವುಗಳನ್ನು ಗೆದ್ದಿದ್ದಾರೆ ಎಂದು ಭಾವಿಸಬೇಕು. ಮನುಷ್ಯನು ತನ್ನನ್ನು ಈ ದೇಹದೊಂದಿಗೆ ಗುರುತಿಸಿಕೊಂಡಷ್ಟು ಕಾಲವೂ ಆತನನ್ನು ಬದ್ಧಾತ್ಮ ಎಂದೇ ಪರಿಗಣಿಸಬೇಕು. ಆದರೆ ಆತ್ಮಸಾಕ್ಷಾತ್ಕಾರದಿಂದ ಅವನು ಸಮಚಿತ್ತದ ನೆಲೆಗೆ ಏರಿದಾಗ ಅವನು ಬದ್ಧ ಬದುಕಿನಿಂದ ಮುಕ್ತನಾಗುತ್ತಾನೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆತನು ಐಹಿಕ ಜಗತ್ತಿನಲ್ಲಿ ಹುಟ್ಟುವ ಅಗತ್ಯವಿಲ್ಲ. ಅವನು ಮರಣಾನಂತರ ಆಧ್ಯಾತ್ಮಿಕ ವ್ಯೋಮವನ್ನು ಪ್ರವೇಶಿಸಬಲ್ಲನು. ಭಗವಂತನಿಗೆ ಆಕರ್ಷಣೆಯೂ ದ್ವೇಷವೂ ಇಲ್ಲವಾದುದರಿಂದ ಅವನು ದೋಷರಹಿತನು. ಹೀಗೆಯೇ ಜೀವಿಗೆ ಆಕರ್ಷಣೆಯಾಗಲಿ ದ್ವೇಷವಾಗಲಿ ಇಲ್ಲವಾದಾಗ ಆತನೂ ದೋಷರಹಿತನಾಗುತ್ತಾನೆ. ಆಧ್ಯಾತ್ಮಿಕ ವ್ಯೋಮವನ್ನು ಪ್ರವೇಶಿಸಲು ಅರ್ಹನಾಗುತ್ತಾನೆ. ಇಂತಹವರನ್ನು ಆಗಲೇ ಮುಕ್ತರು ಎಂದು ಪರಿಗಣಿಸಲಾಗುತ್ತದೆ. ಅವರ ಲಕ್ಷಣಗಳನ್ನು ಮುಂದೆ ವರ್ಣಿಸಿದೆ.

## ಶ್ಲೋಕ - 20

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ |**
**ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ||೨೦||**

**ನ ಪ್ರಹೃಷ್ಯೇತ್**—ಸಂತೋಷಪಡುವುದಿಲ್ಲ; **ಪ್ರಿಯಮ್**—ಪ್ರಿಯವಾದುದನ್ನು; **ಪ್ರಾಪ್ಯ**—ಪಡೆದು; **ನ ಉದ್ವಿಜೇತ್**—ಉದ್ವಿಗ್ನನಾಗುವುದಿಲ್ಲ; **ಪ್ರಾಪ್ಯ**—ಹೊಂದಿ; **ಚ**—ಕೂಡ; **ಅಪ್ರಿಯಮ್**—ಪ್ರಿಯವಲ್ಲದುದನ್ನು; **ಸ್ಥಿರ ಬುದ್ಧಿಃ**—ಸ್ವಯಂ ಬುದ್ಧಿವಂತನು; **ಅಸಮ್ಮೂಢಃ**—ದಿಗ್ಭ್ರಾಂತನಾಗದವನು; **ಬ್ರಹ್ಮ ವಿತ್**—ಪರಮೋನ್ನತನನ್ನು ಪೂರ್ಣವಾಗಿ ತಿಳಿದವನು; **ಬ್ರಹ್ಮಣಿ**—ದಿವ್ಯದಲ್ಲಿ; **ಸ್ಥಿತಃ**—ನೆಲೆಸಿದವನು.

## ಅನುವಾದ

**ಪ್ರಿಯವಾದುದನ್ನು ಸಾಧಿಸಿದಾಗ ಹರ್ಷಿಸದಿರುವವನೂ, ಅಪ್ರಿಯವಾದುದು ಘಟಿಸಿದಾಗ ಶೋಕಿಸದಿರುವವನೂ, ಸ್ಥಿರಬುದ್ಧಿಯುಳ್ಳವನೂ, ದಿಗ್ಭ್ರಮೆ ಹೊಂದದವನೂ ಭಗವದ್ವಿಜ್ಞಾನವನ್ನು ತಿಳಿದವನೂ ಆದ ಮನುಷ್ಯನು ಆಗಲೇ ಆಧ್ಯಾತ್ಮಿಕ ನೆಲೆಯನ್ನು ಹೊಂದಿದ್ದಾನೆ.**

## ಭಾವಾರ್ಥ

ಆತ್ಮಸಾಕ್ಷಾತ್ಕಾರವನ್ನು ಸಾಧಿಸಿದ ಮನುಷ್ಯನ ಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ. ದೇಹವನ್ನೇ ಆತ್ಮವೆಂದು ತಪ್ಪಾಗಿ ಗುರುತಿಸುವ ಮಾಯೆಗೆ ಒಳಗಾಗುವುದಿಲ್ಲ ಎನ್ನುವುದು ಮೊದಲನೆಯ ಲಕ್ಷಣ. ತಾನು ದೇಹವಲ್ಲ, ದೇವೋತ್ತಮ ಪರಮ ಪುರುಷನ ಒಂದು ಪ್ರತ್ಯೇಕ ಭಾಗ ಎಂದು ಅವನಿಗೆ ಸಂಪೂರ್ಣವಾಗಿ ತಿಳಿದಿರುತ್ತದೆ. ಆದುದರಿಂದ ಆತನು ಏನನ್ನಾದರೂ ಸಾಧಿಸಿದಾಗ ಹಿಗ್ಗುವುದಿಲ್ಲ. ತನ್ನ ದೇಹಕ್ಕೆ ಸಂಬಂಧಿಸಿದ ಏನನ್ನಾದರೂ ಕಳೆದುಕೊಂಡಾಗ ಕುಗ್ಗುವುದಿಲ್ಲ. ಇದಕ್ಕೆ **ಸ್ಥಿರಬುದ್ಧಿಃ** ಎಂದು ಹೆಸರು. ಆದುದರಿಂದ ಅವನು ಜಡದೇಹವನ್ನು ಆತ್ಮವೆಂದು ತಪ್ಪಾಗಿ ತಿಳಿದು ದಿಗ್ಭ್ರಮೆ ಹೊಂದುವುದಿಲ್ಲ; ದೇಹವು ಶಾಶ್ವತವೆಂದು ಭಾವಿಸುವುದಿಲ್ಲ ಮತ್ತು ಆತ್ಮನ ಅಸ್ತಿತ್ವವನ್ನು ಕಡೆಗಣಿಸುವುದಿಲ್ಲ. ಇದರಿಂದ ಅವನು ಪರಮಸತ್ಯದ ಸಂಪೂರ್ಣ ವಿಜ್ಞಾನವನ್ನು ಎಂದರೆ ಬ್ರಹ್ಮನ್, ಪರಮಾತ್ಮ ಮತ್ತು ಭಗವಂತನನ್ನು ತಿಳಿದುಕೊಳ್ಳುವ ಮಟ್ಟಕ್ಕೇರುತ್ತಾನೆ. ಆತನು ಪರಮಸತ್ಯದೊಂದಿಗೆ ಎಲ್ಲ ರೀತಿಗಳಲ್ಲೂ ಒಂದಾಗುವ ಹುಸಿ ಪ್ರಯತ್ನವನ್ನು ಮಾಡದೆ ತನ್ನ ನಿಜಸ್ವರೂಪವನ್ನು ತಿಳಿದಿರುತ್ತಾನೆ. ಇದಕ್ಕೆ ಬ್ರಹ್ಮನ್ ಸಾಕ್ಷಾತ್ಕಾರ ಅಥವಾ ಆತ್ಮಸಾಕ್ಷಾತ್ಕಾರ ಎಂದು ಹೆಸರು. ಇಂತಹ ಸ್ಥಿರಪ್ರಜ್ಞೆಯನ್ನು ಕೃಷ್ಣಪ್ರಜ್ಞೆ ಎಂದು ಕರೆಯುತ್ತಾರೆ.

## ಶ್ಲೋಕ - 21

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ ಸುಖಮ್ |**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ||೨೧||**

**ಬಾಹ್ಯಸ್ಪರ್ಶೇಷು**—ಬಾಹ್ಯೇಂದ್ರಿಯ ಆನಂದದಲ್ಲಿ; **ಅಸಕ್ತ ಆತ್ಮಾ**—ಆಸಕ್ತನಲ್ಲದವನು; **ವಿಂದತಿ**—ಅನುಭೋಗಿಸುತ್ತಾನೆ; **ಆತ್ಮನಿ**—ಆತ್ಮನಲ್ಲಿ; **ಯತ್**—ಯಾವ; **ಸುಖಮ್**—ಸುಖವನ್ನು; **ಸಃ**—ಅವನು; **ಬ್ರಹ್ಮ ಯೋಗ**—ಬ್ರಹ್ಮನಲ್ಲಿ ಏಕಾಗ್ರತೆ ಹೊಂದುವುದರಿಂದ; **ಯುಕ್ತ ಆತ್ಮಾ**—ಆತ್ಮ ಸಂಬಂಧಿಯಾದ; **ಸುಖಮ್**—ಸುಖವನ್ನು; **ಅಕ್ಷಯಮ್**—ಅಪರಿಮಿತವಾದ; **ಅಶ್ನುತೇ**—ಸವಿಯುತ್ತಾನೆ.

## ಅನುವಾದ

**ಹೀಗೆ ಮುಕ್ತನಾದ ಮನುಷ್ಯನಿಗೆ ಐಹಿಕ ಇಂದ್ರಿಯಸುಖದ ಆಕರ್ಷಣೆಯಿಲ್ಲ. ಅವನು ಯಾವಾಗಲೂ ಅಂತರ್ಯದಲ್ಲಿ ಸುಖವನ್ನು ಅನುಭವಿಸುತ್ತಾ ಸಮಾಧಿಸ್ಥಿತಿಯಲ್ಲಿರುತ್ತಾನೆ. ಈ ರೀತಿಯಲ್ಲಿ ಆತ್ಮಸಾಕ್ಷಾತ್ಕಾರ ಪಡೆದ ಮನುಷ್ಯನು ಪರಮಸತ್ಯದಲ್ಲಿ ಮಗ್ನನಾಗಿರುವುದರಿಂದ ಅಮಿತಾನಂದವನ್ನು ಸವಿಯುತ್ತಾನೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯುಳ್ಳ ಶ್ರೇಷ್ಠ ಭಕ್ತರಾದ ಶ್ರೀ ಯಾಮುನಾಚಾರ್ಯರು ಹೀಗೆ ಹೇಳಿದ್ದಾರೆ—

**ಯದವಧಿ ಮಮ ಚೇತಃ ಕೃಷ್ಣಪಾದಾರವಿನ್ದೇ**
**ನವನವರಸಧಾಮ್ನಿ ಉದ್ಯತಂ ರನ್ತುಮಾಸೀತ್ |**
**ತದವಧಿ ಬತ ನಾರೀಸನ್ಗಮೇ ಸ್ಮರ್ಯಮಾನೇ**
**ಭವತಿ ಮುಖವಿಕಾರಃ ಸುಷ್ಠು ನಿಷ್ಠೀವನಂ ಚ ||**

"ಕೃಷ್ಣನ ದಿವ್ಯಪ್ರೇಮಸೇವೆಯಲ್ಲಿ ನಿರತನಾಗಿ ಅವನಲ್ಲಿ ಹೊಸಹೊಸ ಸಂತೋಷವನ್ನು ಅನುಭವಿಸುತ್ತಿರುವಾಗಿನಿಂದ, ಕಾಮಸುಖವನ್ನು ಯೋಚಿಸಿದಾಗಲೆಲ್ಲ ಜುಗುಪ್ಸೆ ಪಡುತ್ತೇನೆ ಮತ್ತು ನನ್ನ ಮುಖದಲ್ಲಿ ಅಸಹ್ಯಭಾವವುಂಟಾಗುತ್ತದೆ." **ಬ್ರಹ್ಮಯೋಗದಲ್ಲಿ** ಅಥವಾ ಕೃಷ್ಣಪ್ರಜ್ಞೆಯಲ್ಲಿ ಇರುವ ಮನುಷ್ಯನು ಭಗವಂತನ ಪ್ರೇಮಪೂರ್ವಕ ಸೇವೆಯಲ್ಲಿ ಎಷ್ಟು ಮೈಮರೆತಿರುತ್ತಾನೆಂದರೆ ಆತನಿಗೆ ಐಹಿಕ ಇಂದ್ರಿಯ ಸುಖದಲ್ಲಿ ಆಸಕ್ತಿಯೇ ಹೋಗಿಬಿಡುತ್ತದೆ. ಜಡವಸ್ತುವಿಗೆ ಸಂಬಂಧಿಸಿದಂತೆ ಅತ್ಯುನ್ನತ ಸುಖವೆಂದರೆ ಕಾಮಸುಖ. ಇಡೀ ಪ್ರಪಂಚವೇ ಅದರ ಮೋಡಿಗೆ ಸಿಲುಕಿ ನಡೆಯುತ್ತಿದೆ. ಪ್ರಾಪಂಚಿಕನಾದವನು ಈ ಪ್ರೇರಣೆಯಿಲ್ಲದೆ ಕೆಲಸವನ್ನೇ ಮಾಡಲಾರ. ಆದರೆ ಕೃಷ್ಣಪ್ರಜ್ಞೆಯಲ್ಲಿ ತೊಡಗಿರುವವನು ಲೈಂಗಿಕಸುಖವನ್ನು ದೂರವಿಡುತ್ತಾನೆ. ಅವನು ಅದಿಲ್ಲದೆಯೇ ಹೆಚ್ಚು ಚೈತನ್ಯಪೂರ್ಣವಾಗಿ ಕೆಲಸಮಾಡಬಲ್ಲ. ಆತ್ಮಸಾಕ್ಷಾತ್ಕಾರಕ್ಕೆ ಇದೇ ಪರೀಕ್ಷೆ. ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೂ ರತಿಸುಖಕ್ಕೂ ಹೊಂದಾಣಿಕೆಯಾಗುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಮುಕ್ತಾತ್ಮನಾಗಿರುವುದರಿಂದ ಅವನಿಗೆ ಯಾವುದೇ ಇಂದ್ರಿಯಸುಖದ ಆಕರ್ಷಣೆಯಿರುವುದಿಲ್ಲ.

## ಶ್ಲೋಕ - 22

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ |**
**ಆದ್ಯಂತವಂತಃ ಕೌನ್ತೇಯ ನ ತೇಷು ರಮತೇ ಬುಧಃ ||೨೨||**

**ಯೇ**—ಯಾವುವು; **ಹಿ**—ಖಂಡಿತವಾಗಿಯೂ; **ಸಂಸ್ಪರ್ಶ ಜಾಃ**—ಭೌತಿಕ ಇಂದ್ರಿಯಗಳೊಡನೆ ಸಂಪರ್ಕದಿಂದ ಉಂಟಾದ; **ಭೋಗಾಃ**—ಭೋಗಗಳೋ; **ದುಃಖ**—ದುಃಖ; **ಯೋನಯಃ**—ಮೂಲಗಳು; **ಏವ**—ಖಂಡಿತವಾಗಿಯೂ; **ತೇ**—ಅವುಗಳು; **ಆದಿ**—ಪ್ರಾರಂಭ; **ಅಂತ**—ಕೊನೆಗಳಿಗೆ; **ವಂತಃ**—ಒಳಪಟ್ಟವು; **ಕೌನ್ತೇಯ**—ಕುಂತೀಪುತ್ರನೇ; **ನ**—ಎಂದಿಗೂ ಇಲ್ಲ; **ತೇಷು**—ಅವುಗಳಲ್ಲಿ; **ರಮತೇ**—ಆಸ್ವಾದಿಸುತ್ತಾನೆ; **ಬುಧಃ**—ಬುದ್ಧಿವಂತ ವ್ಯಕ್ತಿಯು.

## ಅನುವಾದ

**ವಿಷಯೇಂದ್ರಿಗಳ ಸಂಪರ್ಕವು ದುಃಖವನ್ನುಂಟುಮಾಡುವುದರಿಂದ ವಿವೇಕಿಯಾದವನು ಅದರಲ್ಲಿ ತೊಡಗುವುದಿಲ್ಲ. ಕುಂತೀಪುತ್ರನಾದ ಅರ್ಜುನನೆ, ಇಂತಹ ಸುಖಗಳಿಗೆ ಆದಿಯೂ ಅಂತ್ಯವೂ ಉಂಟು. ಆದುದರಿಂದ ವಿವೇಕಿಯಾದವನು ಅವುಗಳಲ್ಲಿ ಸಂತೋಷಪಡುವುದಿಲ್ಲ.**

### ಭಾವಾರ್ಥ

ಐಹಿಕ ಇಂದ್ರಿಯ ಸುಖಗಳು ಐಹಿಕ ಇಂದ್ರಿಯಗಳ ಸಂಪರ್ಕದಿಂದ ಉಂಟಾಗುತ್ತವೆ. ಇವೆಲ್ಲ ಅಲ್ಪಕಾಲದವು. ಏಕೆಂದರೆ ದೇಹವೇ ಅಲ್ಪಕಾಲದ್ದು. ಅಲ್ಪಕಾಲದ್ದಾದ ಯಾವುದರಲ್ಲಿಯೂ ಮುಕ್ತಾತ್ಮನಿಗೆ ಆಸಕ್ತಿಯಿಲ್ಲ. ಅಲೌಕಿಕವಾದ ಸುಖಗಳನ್ನು ಚೆನ್ನಾಗಿ ಬಲ್ಲ ಮುಕ್ತಾತ್ಮನು ಹುಸಿ ಸಂತೋಷವನ್ನು ಸವಿಯಲು ಒಪ್ಪುವುದಾದರೂ ಹೇಗೆ? ಪದ್ಮಪುರಾಣದಲ್ಲಿ ಹೀಗೆ ಹೇಳಿದೆ —

**ರಮನ್ತೇ ಯೋಗಿನೋಽನನ್ತೇ ಸತ್ಯಾನನ್ದೇ ಚಿದಾತ್ಮನಿ |**
**ಇತಿ ರಾಮಪದೇನಾಸೌ ಪರಂ ಬ್ರಹ್ಮಾಭಿಧೀಯತೇ ||**

"ಯೋಗಿಗಳು ಪರಮ ಸತ್ಯದಿಂದ ಅಮಿತವಾದ ದಿವ್ಯಾನಂದವನ್ನು ಪಡೆಯುತ್ತಾರೆ. ಆದುದರಿಂದ ಪರಮ ಸತ್ಯನಾದ ದೇವೋತ್ತಮ ಪುರುಷನಿಗೆ ರಾಮ ಎಂದೂ ಹೆಸರು."

ಶ್ರೀಮದ್ಭಾಗವತದಲ್ಲಿ ಸಹ (5.5.1) ಹೀಗೆ ಹೇಳಿದೆ —

**ನಾಯಂ ದೇಹೋ ದೇಹಭಾಜಾಂ ನೃಲೋಕೇ**
**ಕಷ್ಟಾನ್ ಕಾಮಾನ್ ಅರ್ಹತೇ ವಿಡ್ಭುಜಾಂ ಯೇ |**
**ತಪೋ ದಿವ್ಯಂ ಪುತ್ರಕಾ ಯೇನ ಸತ್ತ್ವಂ**
**ಶುದ್ಧ್ಯೇದ್ಯಸ್ಮಾದ್ ಬ್ರಹ್ಮಸೌಖ್ಯಂ ತ್ವನನ್ತಮ್ ||**

"ನನ್ನ ಪ್ರೀತಿಯ ಪುತ್ರರೇ, ಈ ಮಾನವ ರೂಪದಲ್ಲಿರುವಾಗ ಇಂದ್ರಿಯ ಸಂತೋಷಕ್ಕಾಗಿ ಬಹಳ ಕಷ್ಟಪಡುವ ಅಗತ್ಯವಿಲ್ಲ. ಮಲಭಕ್ಷಕಗಳೂ (ಹಂದಿಗಳು) ಇಂತಹ ಸುಖವನ್ನು ಅನುಭವಿಸುತ್ತವೆ. ಇದರ ಬದಲು ನೀವು ಈ ಜನ್ಮದಲ್ಲಿ ತಪಸ್ಸನ್ನು ಆಚರಿಸಬೇಕು. ಇದರಿಂದ ನಿಮ್ಮ ಅಸ್ತಿತ್ವವು ಪರಿಶುದ್ಧವಾಗುವುದು; ಇದರ ಫಲವಾಗಿ ನೀವು ಅನಂತವಾದ ದಿವ್ಯಾನಂದವನ್ನು ಸವಿಯುವಿರಿ."

ಆದುದರಿಂದ ನಿಜವಾದ ಯೋಗಿಗಳಿಗೆ ಅಥವಾ ವಿದ್ವಜ್ಜನರಾದ ಆಧ್ಯಾತ್ಮಿಕವಾದಿಗಳಿಗೆ ಇಂದ್ರಿಯಸುಖಗಳ ಆಕರ್ಷಣೆಯಿರುವುದಿಲ್ಲ. ಈ ಇಂದ್ರಿಯ ಸುಖಗಳು ನಿರಂತರವಾದ ಐಹಿಕ ಅಸ್ತಿತ್ವಕ್ಕೆ ಕಾರಣವಾಗುತ್ತವೆ. ಮನುಷ್ಯನು ಐಹಿಕ ಸುಖಕ್ಕೆ ಅಂಟಿಕೊಂಡಷ್ಟೂ ಐಹಿಕ ದುಃಖಗಳಲ್ಲಿ ಸಿಕ್ಕಿಕೊಳ್ಳುತ್ತಾನೆ.

### ಶ್ಲೋಕ - 23

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ |**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ||೨೩||**

**ಶಕ್ನೋತಿ**—ಸಮರ್ಥನಾಗುತ್ತಾನೋ; **ಇಹ ಏವ**—ಸದ್ಯದ ಶರೀರದಲ್ಲಿಯೇ; **ಯಃ**—ಯಾರು; **ಸೋಢುಮ್**—ಸಹಿಸಲು; **ಪ್ರಾಕ್**—ಮುಂಚೆ; **ಶರೀರ**—ದೇಹದ; **ವಿಮೋಕ್ಷಣಾತ್**—ತ್ಯಾಗಕ್ಕೆ; **ಕಾಮ**—ಆಸೆ; **ಕ್ರೋಧ**—ಕೋಪ; **ಉದ್ಭವಮ್**—ಜನ್ಯವಾದ; **ವೇಗಮ್**—ಒತ್ತಡವನ್ನು; **ಸಃ**—ಅವನು; **ಯುಕ್ತಃ**—ಸಮಾಧಿಯಲ್ಲಿರುವವನು; **ಸಃ**—ಆ; **ಸುಖೀ**—ಸುಖಿಯು; **ನರಃ**—ಮನುಷ್ಯನು.

## ಅನುವಾದ

**ಈ ದೇಹವನ್ನು ಬಿಡುವುದಕ್ಕೆ ಮೊದಲೇ ಐಹಿಕ ಇಂದ್ರಿಯಗಳ ಬಯಕೆಗಳನ್ನು ಸಹಿಸಿಕೊಂಡು ಕಾಮ ಕ್ರೋಧಗಳ ಆವೇಗವನ್ನು ತಡೆಯಲು ಶಕ್ತನಾದ ಮನುಷ್ಯನು ಈ ಲೋಕದಲ್ಲಿ ಒಳ್ಳೆಯ ಸ್ಥಿತಿಯಲ್ಲಿರುತ್ತಾನೆ ಮತ್ತು ಸುಖಿಯಾಗಿರುತ್ತಾನೆ.**

## ಭಾವಾರ್ಥ

ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ತಡೆಯಿಲ್ಲದ ಮುನ್ನಡೆಯನ್ನು ಬಯಸುವವನು ಐಹಿಕ ಇಂದ್ರಿಯಗಳ ಆವೇಗವನ್ನು ಹತೋಟಿಯಲ್ಲಿಡಲು ಪ್ರಯತ್ನಿಸಬೇಕು. ಮಾತು, ಕೋಪ, ಮನಸ್ಸು, ಉದರ, ಜನನೇಂದ್ರಿಯ, ನಾಲಿಗೆ, ಇವುಗಳ ಒತ್ತಡವಿರುತ್ತದೆ. ನಾನಾ ಇಂದ್ರಿಯಗಳ ಮತ್ತು ಮನಸ್ಸಿನ ಒತ್ತಡಗಳನ್ನು ಹತೋಟಿಯಲ್ಲಿಡಬಲ್ಲವನಿಗೆ ಗೋಸ್ವಾಮಿ ಅಥವಾ ಸ್ವಾಮಿ ಎಂದು ಹೆಸರು. ಇಂತಹ ಗೋಸ್ವಾಮಿಗಳು ಕಟ್ಟುನಿಟ್ಟಾಗಿ ನಿಯಂತ್ರಿಸಿದ ಜೀವನವನ್ನು ನಡೆಸುತ್ತಾರೆ ಮತ್ತು ಇಂದ್ರಿಯಗಳ ಒತ್ತಡಕ್ಕೆ ಒಳಗಾಗುವುದಿಲ್ಲ. ಐಹಿಕ ಬಯಕೆಗಳು ಪೂರ್ಣಗೊಳ್ಳದಿದ್ದರೆ ಅವು ಕ್ರೋಧವನ್ನುಂಟು ಮಾಡುತ್ತವೆ. ಇದರಿಂದ ಮನಸ್ಸು, ಕಣ್ಣು ಮತ್ತು ಹೃದಯಗಳು ಕ್ಷೋಭೆಗೆ ಒಳಗಾಗುತ್ತವೆ. ಆದುದರಿಂದ ಈ ಐಹಿಕ ದೇಹವನ್ನು ಬಿಡುವ ಮೊದಲೇ ಇವನ್ನು ನಿಯಂತ್ರಿಸುವುದನ್ನು ಮನುಷ್ಯನು ಅಭ್ಯಾಸ ಮಾಡಬೇಕು. ಇದನ್ನು ಮಾಡಬಲ್ಲವನು ಆತ್ಮ ಸಾಕ್ಷಾತ್ಕಾರವನ್ನು ಪಡೆದವನು ಎಂದು ತಿಳಿಯಬಹುದು. ಹೀಗೆ ಆತ್ಮಸಾಕ್ಷಾತ್ಕಾರದ ಸ್ಥಿತಿಯಲ್ಲಿ ಆತನು ಸುಖವಾಗಿರುತ್ತಾನೆ. ಕಾಮಕ್ರೋಧಗಳನ್ನು ನಿಯಂತ್ರಿಸಲು ಶ್ರಮಿಸುವುದು ಆಧ್ಯಾತ್ಮಿಕವಾದಿಗಳ ಕರ್ತವ್ಯ.

## ಶ್ಲೋಕ - 24

**ಯೋಽನ್ತಃಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ |**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ||೨೪||**

**ಯಃ**—ಯಾರು; **ಅಂತಃ ಸುಖಃ**—ಅಂತರಂಗದಲ್ಲಿ ಸುಖಿಯೋ; **ಅಂತಃ ಆರಾಮಃ**—ಕ್ರಿಯಾಶೀಲನಾಗಿ ಅಂತರಂಗದಲ್ಲಿ ಆನಂದಿಸುವವನೋ; **ತಥಾ**—ಹಾಗೆಯೇ; **ಅಂತಃ ಜ್ಯೋತಿಃ**—ಅಂತರಂಗದಲ್ಲಿ ಗುರಿಯನ್ನಿರಿಸಿಕೊಂಡವನೋ; **ಏವ**—ಖಂಡಿತವಾಗಿಯೂ; **ಯಃ**—ಯಾರು; **ಸಃ**—ಆ; **ಯೋಗೀ**—ಯೋಗಿಯು; **ಬ್ರಹ್ಮ ನಿರ್ವಾಣಮ್**—ಪರಮೋನ್ನತನಲ್ಲಿ ಮೋಕ್ಷವನ್ನು; **ಬ್ರಹ್ಮಭೂತಃ**—ಆತ್ಮಸಾಕ್ಷಾತ್ಕಾರವನ್ನು ಹೊಂದಿ; **ಅಧಿಗಚ್ಛತಿ**—ಪಡೆಯುತ್ತಾನೆ.

## ಅನುವಾದ

**ಯಾರು ಅಂತರ್ಯದಲ್ಲಿಯೇ ಸುಖಪಡುತ್ತಾನೋ, ಯಾರು ಅಂತರ್ಯದಲ್ಲಿಯೇ ಕ್ರಿಯಾಶೀಲನಾಗಿದ್ದು ಸಂತೋಷಿಸುತ್ತಾನೋ ಮತ್ತು ಯಾರ ಗುರಿಯು ಅಂತರ್ಮುಖಿ ಯಾಗಿದೆಯೋ ಅಂತಹವನು ವಾಸ್ತವವಾಗಿ ಪರಿಪೂರ್ಣ ಯೋಗಿ. ಆತನು ಬ್ರಹ್ಮನ್‌ನಲ್ಲಿ ಮುಕ್ತನು ಮತ್ತು ಕಟ್ಟಕಡೆಗೆ ಪರಮ ಪ್ರಭುವನ್ನು ಹೊಂದುತ್ತಾನೆ.**

## ಭಾವಾರ್ಥ

ಬಹಿರಂಗದ ಕ್ರಿಯೆಗಳು ಬಾಹ್ಯ ಸುಖವನ್ನು ಪಡೆಯುವುದಕ್ಕಾಗಿಯೇ ಇವೆ. ಮನುಷ್ಯನು ಅಂತರಂಗದಲ್ಲಿ ಸುಖವನ್ನು ಸವಿಯಲು ಅಸಮರ್ಥನಾದರೆ ಬಾಹ್ಯ ಸುಖ ನೀಡುವ ಈ ಕ್ರಿಯೆಗಳನ್ನು ಹೇಗೆ ತಾನೇ ಬಿಡಬಲ್ಲನು? ಮುಕ್ತನಾದ ಮನುಷ್ಯನು ವಾಸ್ತವವಾದ ಅನುಭವದಿಂದ ಸುಖವನ್ನು ಸವಿಯುತ್ತಾನೆ. ಆದುದರಿಂದ ಆತನು ಯಾವ ಸ್ಥಳದಲ್ಲಿಯೇ ಆಗಲಿ ಮೌನವಾಗಿ ಕುಳಿತು ತನ್ನೊಳಗೆ ಬದುಕಿನ ಚಟುವಟಿಕೆಗಳನ್ನು ಸವಿಯಬಲ್ಲ. ಇಂತಹ ಮುಕ್ತನಾದ ಮನುಷ್ಯನು ಬಾಹ್ಯ ಐಹಿಕ ಸುಖವನ್ನು ಬಯಸುವುದಿಲ್ಲ. ಈ ಸ್ಥಿತಿಗೆ **ಬ್ರಹ್ಮಭೂತ** ಎಂದು ಹೆಸರು. ಇದನ್ನು ಸಾಧಿಸಿದರೆ ಭಗವದ್ಧಾಮಕ್ಕೆ ಮರಳುವುದು ಖಂಡಿತ.

## ಶ್ಲೋಕ - 25

**ಲಭನ್ತೇ ಬ್ರಹ್ಮನಿರ್ವಾಣಮ್ ಋಷಯಃ ಕ್ಷೀಣಕಲ್ಮಷಾಃ |**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ||೨೫||**

**ಲಭನ್ತೇ**—ಪಡೆಯುತ್ತಾರೆ; **ಬ್ರಹ್ಮ ನಿರ್ವಾಣಮ್**—ಪರಮೋನ್ನತನಲ್ಲಿ ಮೋಕ್ಷವನ್ನು; **ಋಷಯಃ** — ಅಂತರಂಗದಲ್ಲಿ ಕ್ರಿಯಾಶೀಲರು; **ಕ್ಷೀಣ ಕಲ್ಮಷಾಃ**—ಸಕಲ ಪಾಪರಹಿತರು; **ಛಿನ್ನ**—ಹರಿದೆಸೆದವರು; **ದ್ವೈಧಾಃ**—ದ್ವಂದ್ವವನ್ನು; **ಯತ ಆತ್ಮಾನಃ**—ಆತ್ಮ ಸಾಕ್ಷಾತ್ಕಾರದಲ್ಲಿ ನಿರತರಾದವರು; **ಸರ್ವ ಭೂತ** —ಸಕಲ ಜೀವಿಗಳ; **ಹಿತೇ**—ಕಲ್ಯಾಣಕಾರ್ಯದಲ್ಲಿ; **ರತಾಃ**—ತೊಡಗಿದವರು.

## ಅನುವಾದ

**ಯಾರು ಸಂದೇಹಗಳಿಂದ ಉದ್ಭವವಾಗುವ ದ್ವಂದ್ವಗಳನ್ನು ಮೀರಿರುವರೋ, ಅಂತರಂಗದಲ್ಲಿ ಮನಸ್ಸನ್ನು ತೊಡಗಿಸಿರುತ್ತಾರೋ, ಎಲ್ಲ ಜೀವಿಗಳ ಹಿತಕ್ಕಾಗಿ ಸದಾ ಶ್ರಮಿಸುವರೋ, ಮತ್ತು ಎಲ್ಲ ಪಾಪಗಳಿಂದ ಮುಕ್ತರಾಗಿರುವರೋ ಅವರು ಬ್ರಹ್ಮ ನಿರ್ವಾಣವನ್ನು ಪಡೆಯುತ್ತಾರೆ.**

## ಭಾವಾರ್ಥ

ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಮಾತ್ರ ಎಲ್ಲ ಜೀವಿಗಳ ಕಲ್ಯಾಣಕಾರ್ಯದಲ್ಲಿ ನಿರತನಾಗಿದ್ದಾನೆ ಎಂದು ಹೇಳಬಹುದು. ಎಲ್ಲ ವಸ್ತುಗಳ ಆದಿಮೂಲವು ಕೃಷ್ಣನೆಂಬ ವಾಸ್ತವ ಜ್ಞಾನ ಹೊಂದಿದ್ದು ಆ ಮನೋಧರ್ಮದಲ್ಲಿ ಕೆಲಸ ಮಾಡುವ ಮನುಷ್ಯನು ಎಲ್ಲರಿಗಾಗಿ ಕೆಲಸ ಮಾಡುತ್ತಾನೆ. ಕೃಷ್ಣನೇ ಪರಮ ಭೋಕ್ತಾರ, ಪರಮ ಪ್ರಭು ಮತ್ತು ಪರಮಮಿತ್ರ ಎನ್ನುವುದನ್ನು ಮರೆತಿರುವುದೇ ಮಾನವ ಕುಲದ ದುಃಖಗಳಿಗೆ ಕಾರಣ. ಆದುದರಿಂದ ಇಡೀ ಮಾನವ ಸಮಾಜದಲ್ಲಿ ಈ ಪ್ರಜ್ಞೆಯನ್ನು ಪುನಃಶ್ಚೇತನಗೊಳಿಸಲು ಶ್ರಮಿಸುವುದೇ ಅತ್ಯುನ್ನತ ಕಲ್ಯಾಣ ಕಾರ್ಯ. ಬ್ರಹ್ಮನಿರ್ವಾಣವಾಗದೆ ಇಂತಹ ಶ್ರೇಷ್ಠ ಕಲ್ಯಾಣಕಾರ್ಯದಲ್ಲಿ ತೊಡಗುವುದು ಸಾಧ್ಯವಿಲ್ಲ. ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಕೃಷ್ಣನ ಪರಮಾಧಿಕಾರದ ವಿಷಯದಲ್ಲಿ ಯಾವುದೇ ಸಂದೇಹವಿರುವುದಿಲ್ಲ. ಆತನು ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದಿದವನು. ಆದುದರಿಂದ ಆತನಿಗೆ ಸಂದೇಹವೇ ಇಲ್ಲ. ಇದೇ ದೈವೀಪ್ರೇಮದ ಸ್ಥಿತಿ.

ಮಾನವ ಸಮಾಜದ ಭೌತಿಕ ಹಿತಕ್ಕಾಗಿ ಮಾತ್ರ ಶ್ರಮಿಸುತ್ತಿರುವವನು ವಾಸ್ತವವಾಗಿ ಯಾರಿಗೂ ಸಹಾಯ ಮಾಡಲಾರ. ಬಾಹ್ಯ ಶರೀರಕ್ಕೆ ಮತ್ತು ಮನಸ್ಸಿಗೆ ತಾತ್ಕಾಲಿಕ ಪರಿಹಾರವನ್ನು ಕೊಡುವುದು ತೃಪ್ತಿಕರವಲ್ಲ. ಮನುಷ್ಯ ಭಗವಂತನೊಡನೆ ತನ್ನ ಸಂಬಂಧವನ್ನು ಮರೆತಿರುವುದೇ ಬದುಕಿನ ಕಠಿಣ ಹೋರಾಟದಲ್ಲಿ ಅವನ ಕ್ಲೇಶಗಳಿಗೆ ಕಾರಣ. ಮನುಷ್ಯನಿಗೆ ಕೃಷ್ಣನೊಡನೆ ತನ್ನ ಸಂಬಂಧದ ಸಂಪೂರ್ಣಪ್ರಜ್ಞೆ ಇರುವಾಗ ಆತನು ಅಶಾಶ್ವತ ಐಹಿಕ ದೇಹದಲ್ಲಿ ಇದ್ದರೂ ವಾಸ್ತವವಾಗಿ ಮುಕ್ತಾತ್ಮನೇ.

## ಶ್ಲೋಕ - 26

**ಕಾಮಕ್ರೋಧವಿಮುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥**

**ಕಾಮ**—ಆಸೆ; **ಕ್ರೋಧ**—ಕೋಪಗಳಿಂದ; **ವಿಮುಕ್ತಾನಾಮ್**—ಮುಕ್ತರಾದ; **ಯತೀನಾಮ್** — ಸಾಧುಪುರುಷರ; **ಯತ ಚೇತಸಾಮ್**—ಪೂರ್ಣವಾಗಿ ಮನಸ್ಸನ್ನು ನಿಗ್ರಹಿಸಿದವರ; **ಅಭಿತಃ**— ಶೀಘ್ರವಾಗಿಯೇ; **ಬ್ರಹ್ಮ ನಿರ್ವಾಣಮ್**—ಪರಮೋನ್ನತನಲ್ಲಿ ಮೋಕ್ಷವು; **ವರ್ತತೇ**—ಇದೆ; **ವಿದಿತ ಆತ್ಮನಾಮ್**—ಆತ್ಮಸಾಕ್ಷಾತ್ಕಾರ ಹೊಂದಿದ.

## ಅನುವಾದ

**ಕಾಮಕ್ರೋಧಗಳಿಂದ ಬಿಡುಗಡೆ ಹೊಂದಿರುವವರೂ ಆತ್ಮಸಾಕ್ಷಾತ್ಕಾರವನ್ನು ಪಡೆದವರೂ ಸ್ವಯಂ ಶಿಸ್ತಿರುವವರೂ ಮತ್ತು ನಿರಂತರವಾಗಿ ಪರಿಪೂರ್ಣತೆಗಾಗಿ ಶ್ರಮಿಸುತ್ತಿರುವವರೂ ಆದವರಿಗೆ ಶೀಘ್ರವಾಗಿ ಬ್ರಹ್ಮನಿರ್ವಾಣವು ದೊರೆಯುವುದು ಖಂಡಿತ.**

## ಭಾವಾರ್ಥ

ಸದಾ ಮುಕ್ತಿಗಾಗಿ ಶ್ರಮಿಸುತ್ತಿರುವ ಸಂತರಲ್ಲಿ ಕೃಷ್ಣಪ್ರಜ್ಞೆ ಇರುವವನೇ ಶ್ರೇಷ್ಠನಾದವನು. ಭಾಗವತವು (4.22-39) ಈ ಅಂಶವನ್ನು ಹೀಗೆ ದೃಢಪಡಿಸುತ್ತದೆ—

**ಯತ್ಪಾದಪಙ್ಕಜಪಲಾಶವಿಲಾಸಭಕ್ತ್ಯಾ**
**ಕರ್ಮಾಶಯಂ ಗ್ರಥಿತಮ್ ಉದ್ಗ್ರಥಯನ್ತಿ ಸನ್ತಃ ।**
**ತದ್ವನ್ನ ರಿಕ್ತಮತಯೋ ಯತಯೋಽಪಿ ರುದ್ಧ —**
**ಸ್ರೋತೋಗಣಾಸ್ತಮ್ ಅರಣಂ ಭಜ ವಾಸುದೇವಮ್ ॥**

"ದೇವೋತ್ತಮ ಪರಮ ಪುರುಷನಾದ ವಾಸುದೇವನನ್ನು ಭಕ್ತಿ ಸೇವೆಯಿಂದ ಪೂಜಿಸಲು ಪ್ರಯತ್ನಿಸು, ಸಾಕು. ಭಗವಂತನ ಪಾದಕಮಲಗಳ ಸೇವೆಯಿಂದ ದಿವ್ಯಾನಂದದಲ್ಲಿ ನಿರತರಾದವರು ಕಾಮ್ಯ ಕರ್ಮಗಳಿಗಾಗಿ ಬೇರೂರಿರುವ ಬಯಕೆಯನ್ನು ಬುಡಸಹಿತ ಕಿತ್ತುಹಾಕಬಲ್ಲರು. ಅವರು ಇಂದ್ರಿಯಗಳ ಆವೇಗವನ್ನು ನಿಯಂತ್ರಿಸುವಷ್ಟರ ಮಟ್ಟಿಗೆ ಮಹಾಸಂತರು ಕೂಡ ನಿಯಂತ್ರಿಸಲಾರರು."

ಬದ್ಧ ಆತ್ಮನಲ್ಲಿ ಕರ್ಮಫಲವನ್ನು ಸವಿಯುವ ಬಯಕೆಯು ಎಷ್ಟು ಆಳವಾಗಿದೆಯೆಂದರೆ ಮಹಾಸಂತರಿಗೂ ಕೂಡ ತುಂಬ ಶ್ರಮಪಟ್ಟರೂ ಇಂತಹ ಬಯಕೆಗಳನ್ನು ನಿಯಂತ್ರಿಸಲು ಸಾಧ್ಯವಾಗುವುದಿಲ್ಲ. ಕೃಷ್ಣಪ್ರಜ್ಞೆಯಿಂದ ಕೂಡಿ ಭಕ್ತಿಸೇವೆಯಲ್ಲಿ ಸದಾನಿರತನಾಗಿರುವ ಮತ್ತು ಆತ್ಮಸಾಕ್ಷಾತ್ಕಾರದಲ್ಲಿ ಪರಿಪೂರ್ಣನಾದ ಭಗವದ್ಭಕ್ತನು ಬಹುಬೇಗ ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆ. ಆತ್ಮಸಾಕ್ಷಾತ್ಕಾರದಲ್ಲಿ ಸಂಪೂರ್ಣಜ್ಞಾನವಿರುವುದರಿಂದ ಆತನು ಸದಾ ಸಮಾಧಿಸ್ಥಿತಿಯಲ್ಲಿರುತ್ತಾನೆ. ಇದೇ ತೆರನಾದ ಒಂದು ನಿದರ್ಶನವನ್ನು ಇಲ್ಲಿ ಕೊಡಬಹುದು—

ದರ್ಶನಧ್ಯಾನಸಂಸ್ಪರ್ಶೈರ್ ಮತ್ಸ್ಯಕೂರ್ಮವಿಹಙ್ಗಮಾಃ |
ಸ್ವಾನ್ಯಪತ್ಯಾನಿ ಪುಷ್ಣನ್ತಿ ತಥಾಹಮ್ ಅಪಿ ಪದ್ಮಜ ||

"ನೋಟ, ಧ್ಯಾನ ಮತ್ತು ಸ್ಪರ್ಶ ಇವುಗಳಿಂದ ಮಾತ್ರವೇ ಮೀನು, ಆಮೆ ಮತ್ತು ಪಕ್ಷಿಗಳು ತಮ್ಮ ಸಂತತಿಯನ್ನು ಸಂರಕ್ಷಿಸುತ್ತವೆ. ಹೇ ಪದ್ಮಜ, ನಾನೂ ಹಾಗೆಯೇ ಮಾಡುತ್ತೇನೆ."

ಮೀನು ತನ್ನ ಮರಿಗಳತ್ತ ನೋಡುವುದರಿಂದಲೇ ಅವುಗಳನ್ನು ಪೋಷಿಸುತ್ತದೆ. ಆಮೆಯು ಧ್ಯಾನಮಾತ್ರದಿಂದಲೇ ತನ್ನ ಮರಿಗಳನ್ನು ಸಂರಕ್ಷಿಸುತ್ತದೆ. ಆಮೆಯು ತನ್ನ ಮೊಟ್ಟೆಗಳನ್ನು ಭೂಮಿಯ ಮೇಲಿಡುತ್ತದೆ ಮತ್ತು ತಾನು ನೀರಿನಲ್ಲಿದ್ದು ಮೊಟ್ಟೆಗಳನ್ನು ಕುರಿತು ಧ್ಯಾನಿಸುತ್ತದೆ. ಹಾಗೆಯೇ ಕೃಷ್ಣಪ್ರಜ್ಞೆಯಲ್ಲಿರುವ ಭಕ್ತನು ಭಗವಂತನ ನಿವಾಸದಿಂದ ದೂರವಿರಬಹುದು. ಆದರೂ ಅವನು ಭಗವಂತನನ್ನು ಕುರಿತು ಸದಾ ಚಿಂತಿಸುವುದರಿಂದ, ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿದ್ದು ಭಗವಂತನ ನಿವಾಸಕ್ಕೆ ಏರಬಲ್ಲ. ಆತನು ಐಹಿಕ ಕ್ಲೇಶಗಳ ನೋವನ್ನು ಅನುಭವಿಸುವುದಿಲ್ಲ. ಈ ಸ್ಥಿತಿಯನ್ನು ಬ್ರಹ್ಮನಿರ್ವಾಣ ಎಂದು ಕರೆಯಲಾಗುತ್ತದೆ. ಸದಾ ಭಗವಂತನಲ್ಲಿ ಮಗ್ನನಾಗಿರುವುದರಿಂದ ಐಹಿಕ ಕ್ಲೇಶಗಳು ಇಲ್ಲದಿರುವುದೇ ಈ ಸ್ಥಿತಿ.

## ಶ್ಲೋಕ 27-28

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ |
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರಚಾರಿಣೌ ||೨೭||

ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ |
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ||೨೮||

**ಸ್ಪರ್ಶಾನ್**—ಶಬ್ದದಂತಹ ಇಂದ್ರಿಯ ವಿಷಯಗಳನ್ನು; **ಕೃತ್ವಾ**—ಇರಿಸಿ; **ಬಹಿಃ**—ಹೊರಗೆ; **ಬಾಹ್ಯಾನ್**—ಅನವಶ್ಯಕವಾದ; **ಚಕ್ಷುಃ**—ಕಣ್ಣುಗಳನ್ನು; **ಚ**—ಕೂಡಾ; **ಏವ**—ಖಂಡಿತವಾಗಿಯೂ; **ಅನ್ತರೇ**—ಮಧ್ಯದಲ್ಲಿ; **ಭ್ರುವೋಃ**—ಹುಬ್ಬುಗಳ; **ಪ್ರಾಣ ಅಪಾನೌ**—ಮೇಲೆ ಮತ್ತು ಕೆಳಕ್ಕೆ ಚಲಿಸುವ ವಾಯುವನ್ನು; **ಸಮೌ**—ತಡೆಹಿಡಿಯುವುದರಲ್ಲಿ; **ಕೃತ್ವಾ**—ಇರಿಸಿ; **ನಾಸ ಅಭ್ಯನ್ತರ**— ಮೂಗಿನ ಹೊಳ್ಳೆಗಳಲ್ಲಿ; **ಚಾರಿಣೌ**—ಉಸಿರಾಡುವ; **ಯತ**—ನಿಯಂತ್ರಿಸಿದ; **ಇನ್ದ್ರಿಯ**—ಇಂದ್ರಿಯಗಳು; **ಮನಃ**—ಮನಸ್ಸು; **ಬುದ್ಧಿಃ**—ಬುದ್ಧಿಶಕ್ತಿ; **ಮುನಿಃ**—ದಿವ್ಯವಾದಿಯು; **ಮೋಕ್ಷ**—ಮುಕ್ತಿಗಾಗಿ; **ಪರಾಯಣಃ**—ಉದ್ದೇಶಿತನಾಗಿ; **ವಿಗತ**—ವಿಸರ್ಜಿಸಿದ; **ಇಚ್ಛಾ**—ಅಪೇಕ್ಷೆಗಳುಳ್ಳ; **ಭಯ**—ಭೀತಿ; **ಕ್ರೋಧಃ**—ಕೋಪಗಳುಳ್ಳವನಾಗುವನೋ; **ಯಃ**—ಯಾರು; **ಸದಾ**—ಯಾವಾಗಲೂ; **ಮುಕ್ತಃ**—

ಮುಕ್ತನು; ಏವ—ಖಂಡಿತವಾಗಿಯೂ; ಸಃ—ಅವನು.

## ಅನುವಾದ

**ಅಧ್ಯಾತ್ಮವಾದಿಯು ಹೊರಗಿರುವ ಇಂದ್ರಿಯ ವಿಷಯಗಳನ್ನು ದೂರಮಾಡಿ, ಕಣ್ಣುಗಳನ್ನೂ ದೃಷ್ಟಿಯನ್ನೂ ಎರಡು ಹುಬ್ಬುಗಳ ನಡುವೆ ಕೇಂದ್ರೀಕರಿಸಿ, ಶ್ವಾಸೋಚ್ಛ್ವಾಸಗಳನ್ನು ಮೂಗಿನ ಹೊಳ್ಳೆಗಳಲ್ಲಿ ನಿಲ್ಲಿಸಿ ಆ ಮೂಲಕ ಮನಸ್ಸನ್ನೂ ಇಂದ್ರಿಯಗಳನ್ನೂ ಬುದ್ಧಿಯನ್ನೂ ನಿಯಂತ್ರಿಸಿ ಮೋಕ್ಷವನ್ನೇ ಗುರಿಯನ್ನಾಗಿ ಮಾಡಿಕೊಂಡಿರುತ್ತಾನೆ. ಇಂತಹ ಅಧ್ಯಾತ್ಮವಾದಿಯು ಆಸೆ, ಭಯ ಮತ್ತು ಕ್ರೋಧಗಳಿಂದ ಮುಕ್ತನಾಗುತ್ತಾನೆ. ಸದಾ ಈ ಸ್ಥಿತಿಯಲ್ಲಿರುವವನು ನಿಶ್ಚಯವಾಗಿಯೂ ಮುಕ್ತನಾದವನು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ನಿರತನಾದವನು ಕೂಡಲೇ ತನ್ನ ಆಧ್ಯಾತ್ಮಿಕ ಗುರುತನ್ನು ಕಂಡುಕೊಳ್ಳಬಹುದು. ಆಗ ಆತನು ಭಕ್ತಿಸೇವೆಯಿಂದ ಭಗವಂತನನ್ನು ಅರಿಯಬಹುದು. ಭಕ್ತಿಸೇವೆಯಲ್ಲಿ ಚೆನ್ನಾಗಿ ನೆಲೆಯನ್ನು ಕಂಡುಕೊಂಡ ಮನುಷ್ಯನು ಅಲೌಕಿಕ ಸ್ಥಿತಿಗೆ ಏರುತ್ತಾನೆ. ಆಗ ಆತನು ತನ್ನ ಕಾರ್ಯಕ್ಷೇತ್ರದಲ್ಲಿ ಭಗವಂತನ ಸಾನ್ನಿಧ್ಯವನ್ನು ಅನುಭವಿಸುವ ಯೋಗ್ಯತೆಯನ್ನು ಪಡೆದುಕೊಳ್ಳುತ್ತಾನೆ. ಈ ವಿಶಿಷ್ಟ ಸ್ಥಿತಿಯನ್ನು ಬ್ರಹ್ಮನಿರ್ವಾಣ ಎಂದು ಕರೆಯುತ್ತಾರೆ.

ಬ್ರಹ್ಮನಿರ್ವಾಣದ ತತ್ವಗಳನ್ನು ವಿವರಿಸಿದನಂತರ ಭಗವಂತನು ಅಷ್ಟಾಂಗ ಯೋಗ ಎನ್ನುವ ಯೋಗಾಭ್ಯಾಸದಿಂದ ಆ ಸ್ಥಿತಿಯನ್ನು ತಲಪುವುದು ಹೇಗೆ ಎಂದು ಅರ್ಜುನನಿಗೆ ಬೋಧಿಸುತ್ತಾನೆ. ಅಷ್ಟಾಂಗ ಯೋಗವನ್ನು ಎಂಟು ಬಗೆಯ ಕ್ರಮಗಳಲ್ಲಿ ವಿಭಾಗಿಸಬಹುದು. ಆ ಕ್ರಮಗಳಿಗೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಎಂದು ಹೆಸರು. ಆರನೆಯ ಅಧ್ಯಾಯದಲ್ಲಿ ಯೋಗದ ವಿಷಯವನ್ನು ಸ್ಪಷ್ಟವಾಗಿ ವಿವರಿಸಿದೆ. ಐದನೆಯ ಅಧ್ಯಾಯದ ಕೊನೆಯಲ್ಲಿ ಅದನ್ನು ಪೂರ್ವಭಾವಿಯಾಗಿ ಅಷ್ಟೆ ವಿವರಿಸಿದೆ. ಯೋಗದಲ್ಲಿ ಪ್ರತ್ಯಾಹಾರ ಪ್ರಕ್ರಿಯೆಯಿಂದ ಶಬ್ದ, ಸ್ಪರ್ಶ, ರೂಪ, ರುಚಿ ಮತ್ತು ವಾಸನೆ ಮೊದಲಾದ ಇಂದ್ರಿಯ ವಿಷಯಗಳನ್ನು ದೂರವಿಡಬೇಕು; ಅನಂತರ ಕಣ್ಣಿನ ನೋಟವನ್ನು ಎರಡು ಹುಬ್ಬುಗಳ ಮಧ್ಯೆ ನಿಲ್ಲಿಸಿ ಕಣ್ಣನ್ನು ಅರ್ಧಮುಚ್ಚಿ ಮೂಗಿನ ಕೊನೆಯಲ್ಲಿ ಕೇಂದ್ರೀಕರಿಸಬೇಕು. ಕಣ್ಣನ್ನು ಸಂಪೂರ್ಣವಾಗಿ ಮುಚ್ಚಿ ಪ್ರಯೋಜನವಿಲ್ಲ. ಏಕೆಂದರೆ ಆಗ ನಿದ್ರೆಮಾಡಿಬಿಡುವ ಸಂಭವವಿದೆ. ಕಣ್ಣನ್ನು ಸಂಪೂರ್ಣವಾಗಿ ತೆರೆದು ಪ್ರಯೋಜನವಿಲ್ಲ. ಏಕೆಂದರೆ ಆಗ ಇಂದ್ರಿಯವಸ್ತುಗಳಿಂದ ಆಕರ್ಷಿತರಾಗುವ ಅಪಾಯವಿದೆ. ದೇಹದಲ್ಲಿ ಮೇಲಕ್ಕೆ ಹೋಗುವ ಮತ್ತು ಕೆಳಕ್ಕೆ ಹೋಗುವ ಗಾಳಿಯನ್ನು ತಟಸ್ಥಗೊಳಿಸಿ ಉಸಿರಾಟವನ್ನು ಹೊಳ್ಳೆಗಳಲ್ಲಿ ನಿಯಂತ್ರಿಸಬೇಕು. ಇಂತಹ ಯೋಗಾಭ್ಯಾಸದಿಂದ ಮನುಷ್ಯನು ಇಂದ್ರಿಯಗಳ ಮೇಲೆ ಹತೋಟಿಯನ್ನು ಪಡೆಯಬಹುದು. ಬಾಹ್ಯ ಇಂದ್ರಿಯವಸ್ತುಗಳಿಂದ ದೂರವಿರಬಹುದು. ಹೀಗೆ ಬ್ರಹ್ಮನಲ್ಲಿ ಮುಕ್ತಿಪಡೆಯಲು ಸಿದ್ಧಮಾಡಿಕೊಳ್ಳಬಹುದು.

ಈ ಯೋಗ ಪ್ರಕ್ರಿಯೆಯು ಮನುಷ್ಯನು ಎಲ್ಲ ಬಗೆಯ ಭಯ ಮತ್ತು ಕ್ರೋಧಗಳಿಂದ

ಮುಕ್ತನಾಗಲು ಸಹಾಯಮಾಡುತ್ತದೆ. ಹೀಗೆ ಆಧ್ಯಾತ್ಮಿಕ ಸನ್ನಿವೇಶದಲ್ಲಿ ಪರಮಾತ್ಮನ ಸಾನ್ನಿಧ್ಯವನ್ನು ಅನುಭವಿಸಲು ನೆರವಾಗುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಯೋಗತತ್ವಗಳ ಆಚರಣೆಗೆ ಕೃಷ್ಣಪ್ರಜ್ಞೆಯೇ ಅತ್ಯಂತ ಸುಲಭವಾದ ಪ್ರಕ್ರಿಯೆ. ಇದನ್ನು ಮುಂದಿನ ಅಧ್ಯಾಯದಲ್ಲಿ ಸಂಪೂರ್ಣವಾಗಿ ವಿವರಿಸಲಾಗಿದೆ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಸದಾ ಭಕ್ತಿಸೇವೆಯಲ್ಲಿ ನಿರತನಾಗಿರುವನು. ಇದರಿಂದ ತನ್ನ ಇಂದ್ರಿಯಗಳನ್ನು ಬೇರೆ ಯಾವುದೇ ಕಾರ್ಯದಲ್ಲಿ ತೊಡಗಿಸುವ ಅಪಾಯವನ್ನು ದೂರ ಇಡುವನು. ಇಂದ್ರಿಯಗಳ ನಿಯಂತ್ರಣಕ್ಕೆ ಅಷ್ಟಾಂಗಯೋಗಕ್ಕಿಂತ ಇದೇ ಉತ್ತಮಮಾರ್ಗ.

## ಶ್ಲೋಕ - 29

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥**

**ಭೋಕ್ತಾರಮ್**—ಭೋಕ್ತಾರನು; **ಯಜ್ಞ**—ಯಜ್ಞ; **ತಪಸಾಮ್**—ತಪಸ್ಸು ಮತ್ತು ವ್ರತಗಳ; **ಸರ್ವಲೋಕ**—ಎಲ್ಲ ಲೋಕಗಳ ಮತ್ತು ಅವುಗಳ ದೇವತೆಗಳ; **ಮಹಾ ಈಶ್ವರಮ್**—ಪರಮ ಪ್ರಭು; **ಸುಹೃದಮ್**—ಆಶ್ರಯದಾತನು; **ಸರ್ವ**—ಎಲ್ಲ; **ಭೂತಾನಾಮ್**—ಜೀವಿಗಳ; **ಜ್ಞಾತ್ವಾ**— ತಿಳಿದು; **ಮಾಮ್**—ಎಂದು ನನ್ನನ್ನು(ಶ್ರೀಕೃಷ್ಣನನ್ನು); **ಶಾಂತಿಮ್**—ಭೌತಿಕವೇದನೆಗಳಿಂದ ಪರಿಹಾರವನ್ನು; **ಋಚ್ಛತಿ**—ಪಡೆಯುತ್ತಾನೆ.

## ಅನುವಾದ

**ನನ್ನ ವಿಷಯವಾಗಿ ಸಂಪೂರ್ಣ ಪ್ರಜ್ಞೆಯನ್ನಿಟ್ಟುಕೊಂಡು ಎಲ್ಲ ಯಜ್ಞಗಳ ಮತ್ತು ತಪಸ್ಸುಗಳ ಕಟ್ಟಕಡೆಯ ಭೋಕ್ತೃ ನಾನೇ, ಎಲ್ಲ ಲೋಕಗಳ ಮತ್ತು ದೇವತೆಗಳ ಪರಮ ಪ್ರಭು ನಾನೇ ಮತ್ತು ಎಲ್ಲ ಜೀವಿಗಳ ಉಪಕಾರಿಯೂ, ಹಿತೈಷಿಯೂ ನಾನೇ ಎಂದು ಅರಿತ ಮನುಷ್ಯನು ಐಹಿಕ ದುಃಖಗಳ ಯಾತನೆಯಿಂದ ಮುಕ್ತನಾಗಿ ಶಾಂತಿಯನ್ನು ಪಡೆಯುವನು.**

## ಭಾವಾರ್ಥ

ಮಾಯಾ ಶಕ್ತಿಯ ಹಿಡಿತಕ್ಕೆ ಸಿಕ್ಕ ಎಲ್ಲ ಬದ್ಧ ಆತ್ಮಗಳಿಗೂ ಐಹಿಕ ಜಗತ್ತಿನಲ್ಲಿ ಶಾಂತಿಯನ್ನು ಪಡೆಯುವ ಕಾತರವಿರುತ್ತದೆ. ಆದರೆ ಅವರಿಗೆ ಶಾಂತಿಯ ಸೂತ್ರವು ಗೊತ್ತಿರುವುದಿಲ್ಲ. ಅದನ್ನು ಭಗವದ್ಗೀತೆಯ ಈ ಭಾಗದಲ್ಲಿ ವಿವರಿಸಲಾಗಿದೆ. ಅತ್ಯಂತ ಶ್ರೇಷ್ಠ ಶಾಂತಿ ಸೂತ್ರ ಇದಿಷ್ಟೇ — ಎಲ್ಲ ಮನುಷ್ಯರ ಕಾರ್ಯಗಳ ಫಲವು ಶ್ರೀಕೃಷ್ಣನದೇ. ಅವನೇ ಎಲ್ಲ ಲೋಕಗಳ ಮತ್ತು ಎಲ್ಲ ದೇವತೆಗಳ ಒಡೆಯ. ಆದುದರಿಂದ ಮಾನವರು ಸರ್ವಸ್ವವನ್ನೂ ಭಗವಂತನ ದಿವ್ಯಸೇವೆಗೆ ಅರ್ಪಿಸಬೇಕು. ಅವನಿಗಿಂತ ಯಾರೂ ಶ್ರೇಷ್ಠರಲ್ಲ. ದೇವತೆಗಳಲ್ಲಿ ಶ್ರೇಷ್ಠರಾದ ಶಿವ ಮತ್ತು ಬ್ರಹ್ಮರಿಗಿಂತ ಅವನು ಶ್ರೇಷ್ಠನು. ವೇದಗಳಲ್ಲಿ (ಶ್ವೇತಾಶ್ವತರ ಉಪನಿಷತ್ತು 6.7) ಭಗವಂತನನ್ನು **ತಮ್ ಈಶ್ವರಾಣಾಂ ಪರಮಂ ಮಹೇಶ್ವರಮ್** ಎಂದು ವರ್ಣಿಸಿದೆ. ಮಾಯೆಯ ಪ್ರಭಾವದಿಂದ ಜೀವಿಗಳು ತಾವು ಕಂಡದ್ದಕ್ಕೆಲ್ಲ ಒಡೆಯರಾಗಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಆದರೆ ವಾಸ್ತವವಾಗಿ ಅವರು ಭಗವಂತನ ಮಾಯಾಶಕ್ತಿಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಭಗವಂತನು ಐಹಿಕ ಪ್ರಕೃತಿಯ

ಒಡೆಯ; ಬದ್ಧ ಆತ್ಮರು ಐಹಿಕ ಪ್ರಕೃತಿಯ ಅತ್ಯಂತ ಕಟ್ಟುನಿಟ್ಟಿನ ನಿಯಮಗಳಿಗೆ ಒಳಗಾಗಿದ್ದಾರೆ; ಈ ವಾಸ್ತವಾಂಶಗಳನ್ನಾದರೂ ಮನುಷ್ಯನು ಅರ್ಥ ಮಾಡಿಕೊಳ್ಳದಿದ್ದರೆ ಪ್ರಪಂಚದಲ್ಲಿ ವೈಯಕ್ತಿಕವಾಗಿ ಆಗಲಿ, ಸಾಮೂಹಿಕವಾಗಿ ಆಗಲಿ, ಶಾಂತಿಯನ್ನು ಸಾಧಿಸುವುದು ಸಾಧ್ಯವಿಲ್ಲ. ಕೃಷ್ಣಪ್ರಜ್ಞೆಯ ಅರ್ಥ ಇದು. ಶ್ರೀಕೃಷ್ಣನೇ ಪರಮಾಧಿಕಾರಿ. ಮಹಾನ್ ದೇವತೆಗಳೂ ಸೇರಿದಂತೆ ಎಲ್ಲ ಜೀವಿಗಳೂ ಅವನ ಅಧಿಕಾರಕ್ಕೆ ಒಳಪಟ್ಟವರು. ಕೃಷ್ಣಪ್ರಜ್ಞೆಯಲ್ಲಿ ಮಾತ್ರ ಮನುಷ್ಯನಿಗೆ ಸಂಪೂರ್ಣ ಶಾಂತಿಯು ಸಾಧ್ಯ.

ಐದನೆಯ ಅಧ್ಯಾಯವು ಕೃಷ್ಣಪ್ರಜ್ಞೆಯ ಕಾರ್ಯ ಸಾಧ್ಯ ವಿವರಣೆ. ಇದು ಸಾಮಾನ್ಯವಾಗಿ ಕರ್ಮಯೋಗ ಎಂದೇ ಪರಿಚಿತವಾಗಿದೆ. ಕರ್ಮಯೋಗವು ಮುಕ್ತಿಯನ್ನು ತಂದುಕೊಡಲು ಹೇಗೆ ಸಾಧ್ಯ ಎನ್ನುವ ಪ್ರಶ್ನೆಗೆ ಉತ್ತರ ಇಲ್ಲಿದೆ. ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದೆಂದರೆ ಭಗವಂತನೇ ಪರಮಾಧಿಕಾರಿ ಎನ್ನುವ ಸಂಪೂರ್ಣ ಅರಿವಿನಲ್ಲಿ ಕೆಲಸ ಮಾಡುವುದು. ಇಂತಹ ಕೆಲಸವು ಆಧ್ಯಾತ್ಮಿಕ ಅರಿವಿನಿಂದ ಭಿನ್ನವೇನಲ್ಲ. ನೇರವಾದ ಕೃಷ್ಣಪ್ರಜ್ಞೆಯು ಭಕ್ತಿಯೋಗ; ಜ್ಞಾನಯೋಗವು ಭಕ್ತಿಯೋಗಕ್ಕೆ ದಾರಿ. ಕೃಷ್ಣಪ್ರಜ್ಞೆ ಎಂದರೆ ಪರಮಸತ್ಯದೊಂದಿಗೆ ತನ್ನ ಸಂಬಂಧದ ಸಂಪೂರ್ಣ ತಿಳಿವಳಿಕೆಯನ್ನು ಇಟ್ಟುಕೊಂಡು ಕೆಲಸ ಮಾಡುವುದು. ಈ ಅರಿವಿನ ಪರಿಪೂರ್ಣತೆಯು ಸಂಪೂರ್ಣ ಕೃಷ್ಣಜ್ಞಾನ ಅಥವಾ ದೇವೋತ್ತಮ ಪರಮ ಪುರುಷನ ಜ್ಞಾನ. ಪರಿಶುದ್ಧವಾದ ಆತ್ಮನು ಭಗವಂತನ ವಿಭಿನ್ನಾಂಶವೇ ಆಗಿ ಅವನ ನಿರಂತರ ಸೇವಕ. ಮಾಯೆಯ ಮೇಲೆ ಪ್ರಭುತ್ವ ನಡೆಸುವ ಬಯಕೆಯಿಂದಾಗಿ ಆತ್ಮನಿಗೆ ಮಾಯೆಯ ಸಂಪರ್ಕವಾಗುತ್ತದೆ. ಅವನ ಹಲವು ಕಷ್ಟಗಳಿಗೆ ಇದೇ ಕಾರಣ. ಜಡವಸ್ತುವಿನೊಡನೆ ಸಂಪರ್ಕವಿರುವಷ್ಟು ಕಾಲವೂ ಆತನು ಭೌತಿಕ ಅಗತ್ಯಗಳ ಪ್ರಕಾರ ಕೆಲಸ ಮಾಡಬೇಕಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯು ಮನುಷ್ಯನು ಜಡವಸ್ತುವಿನ ವ್ಯಾಪ್ತಿಯಲ್ಲಿದ್ದಾಗಲೇ ಆಧ್ಯಾತ್ಮಿಕ ಜೀವನಕ್ಕೆ ಅವನನ್ನು ಕೊಂಡೊಯ್ಯುತ್ತದೆ. ಏಕೆಂದರೆ ಅದು ಐಹಿಕ ಜಗತ್ತಿನಲ್ಲಿ ಕಾರ್ಯ ಮಾಡುತ್ತಿರುವಾಗಲೇ ಆಧ್ಯಾತ್ಮಿಕ ಪ್ರಜ್ಞೆಯನ್ನು ಎಚ್ಚರಗೊಳಿಸುತ್ತದೆ. ಮನುಷ್ಯನು ಮುನ್ನಡೆದಷ್ಟೂ ಅವನು ಜಡವಸ್ತುವಿನ ಹಿಡಿತದಿಂದ ಪಾರಾಗುತ್ತಾನೆ. ಭಗವಂತನು ಯಾರ ವಿಷಯದಲ್ಲಿಯೂ ಪಕ್ಷಪಾತಿಯಲ್ಲ. ಎಲ್ಲವೂ ಕೃಷ್ಣಪ್ರಜ್ಞೆಯಲ್ಲಿ ಮನುಷ್ಯನು ಕರ್ತವ್ಯಗಳನ್ನು ಕಾರ್ಯಶೀಲವಾಗಿ ನಿರ್ವಹಿಸುವುದನ್ನೇ ಅವಲಂಬಿಸಿದೆ. ಕೃಷ್ಣಪ್ರಜ್ಞೆಯು ಮನುಷ್ಯನಿಗೆ ಎಲ್ಲ ರೀತಿಗಳಲ್ಲಿ ಇಂದ್ರಿಯಗಳನ್ನು ನಿಯಂತ್ರಿಸಿ ಕಾಮಕ್ರೋಧಗಳ ಪರಿಣಾಮವನ್ನು ಗೆಲ್ಲುವುದಕ್ಕೆ ನೆರವಾಗುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಸ್ಥಿರವಾಗಿ ನಿಂತು ಕಾಮಕ್ರೋಧಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ಮನುಷ್ಯನು ವಾಸ್ತವಿಕವಾಗಿ ಆಧ್ಯಾತ್ಮಿಕ ಘಟ್ಟದಲ್ಲಿ ಬ್ರಹ್ಮನಿರ್ವಾಣದಲ್ಲಿ ಉಳಿಯುತ್ತಾನೆ. ಅಷ್ಟಾಂಗ ಯೋಗದ ಅಭ್ಯಾಸವು ಕೃಷ್ಣಪ್ರಜ್ಞೆಯಲ್ಲಿ ತಂತಾನೆ ಆಗುತ್ತದೆ. ಏಕೆಂದರೆ ಅಂತಿಮಗುರಿಯ ಸಾಧನೆಯಾಗುತ್ತದೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳ ಅಭ್ಯಾಸದಲ್ಲಿ ಕ್ರಮಕ್ರಮವಾದ ಏರಿಕೆ ಇದೆ. ಆದರೆ ಇವೆಲ್ಲ ಭಕ್ತಿಪೂರ್ವಕ ಸೇವೆಯಿಂದ ಪರಿಪೂರ್ಣತೆಯನ್ನು ಪಡೆಯಲು ಪೂರ್ವಭಾವಿ ಸಿದ್ಧತೆ, ಅಷ್ಟೇ. ಭಕ್ತಿಪೂರ್ವಕ ಸೇವೆಯು ಮಾತ್ರವೇ ಮನುಷ್ಯನಿಗೆ ಶಾಂತಿಯನ್ನು ನೀಡಬಲ್ಲದು. ಇದು ಬದುಕಿನ ಅತ್ಯುನ್ನತ ಪರಿಪೂರ್ಣತೆಯಾಗಿದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಕರ್ಮಯೋಗ - ಕೃಷ್ಣಪ್ರಜ್ಞೆಯಲ್ಲಿ ಕಾರ್ಯ" ಎಂಬ ಐದನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

ಅಧ್ಯಾಯ - 6

# ಧ್ಯಾನ ಯೋಗ

## ಶ್ಲೋಕ - 1

**ಶ್ರೀ ಭಗವಾನುವಾಚ**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ |**
**ಸ ಸನ್ನ್ಯಾಸೀ ಚ ಯೋಗಿ ಚ ನ ನಿರಗ್ನಿರ್ನ ಚಾಕ್ರಿಯಃ ||೧||**

**ಶ್ರೀ ಭಗವಾನ್ ಉವಾಚ**—ಭಗವಂತನು ಹೇಳಿದನು; **ಅನಾಶ್ರಿತಃ**—ಆಶ್ರಯಿಸದೆ; **ಕರ್ಮ ಫಲಮ್**—ಕರ್ಮಫಲವನ್ನು; **ಕಾರ್ಯಮ್**—ಮಾಡಲೇಬೇಕಾದ; **ಕರ್ಮ**—ಕಾರ್ಯವನ್ನು; **ಕರೋತಿ**—ಆಚರಿಸುತ್ತಾನೋ; **ಯಃ**—ಯಾರು; **ಸಃ**—ಅವನು; **ಸನ್ನ್ಯಾಸೀ**—ಸನ್ಯಾಸಾಶ್ರಮದಲ್ಲಿರುವವನು; **ಚ**—ಕೂಡ; **ಯೋಗೀ**—ಯೋಗಿಯು; **ಚ**—ಕೂಡ; **ನ**—ಅಲ್ಲ; **ನಿಃ**—ಇಲ್ಲದವನು; **ಅಗ್ನಿಃ**—ಬೆಂಕಿಯು; **ನ**—ಅಲ್ಲ; **ಚ**—ಸಹ; **ಅಕ್ರಿಯಃ**—ಕರ್ತವ್ಯವಿಲ್ಲದವನು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೇಳಿದನು—ಕರ್ಮಫಲಕ್ಕೆ ಅಂಟಿಕೊಳ್ಳದೆ ತಾನು ಮಾಡಬೇಕಾದ ಕರ್ಮವನ್ನು ಮಾಡುವವನೇ ಸನ್ಯಾಸಿ. ಅವನೇ ನಿಜವಾದ ಅನುಭಾವಿ. ಅಗ್ನಿಯನ್ನು ಹೊತ್ತಿಸದೆ ಕರ್ತವ್ಯವನ್ನು ಮಾಡದಿರುವವನು ಸನ್ಯಾಸಿಯಲ್ಲ, ಯೋಗಿಯಲ್ಲ.**

## ಭಾವಾರ್ಥ

ಈ ಅಧ್ಯಾಯದಲ್ಲಿ, ಅಷ್ಟಾಂಗಯೋಗ ಪದ್ಧತಿಯು ಮನಸ್ಸನ್ನೂ ಇಂದ್ರಿಯಗಳನ್ನೂ ನಿಯಂತ್ರಿಸಲು ಒಂದು ಸಾಧನ ಎಂದು ಭಗವಂತನು ವಿವರಿಸುತ್ತಾನೆ. ಆದರೆ ಸಾಮಾನ್ಯ ಜನರಿಗೆ, ಅದರಲ್ಲಿಯೂ ಕಲಿಯುಗದಲ್ಲಿ ಇದನ್ನು ಅನುಷ್ಠಾನ ಮಾಡುವುದು ಬಹಳ ಕಷ್ಟ. ಅಷ್ಟಾಂಗ ಯೋಗ ಪದ್ಧತಿಯನ್ನು ಆಶ್ರಯಿಸಬೇಕೆಂದು ಈ ಅಧ್ಯಾಯದಲ್ಲಿ ಹೇಳಿದ್ದರೂ ಕರ್ಮಯೋಗವು ಅಥವಾ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವುದು ಉತ್ತಮ ಎಂದು ಭಗವಂತನು ಒತ್ತಿ ಹೇಳುತ್ತಾನೆ. ಈ ಜಗತ್ತಿನಲ್ಲಿ ಪ್ರತಿಯೊಬ್ಬನೂ ತನ್ನ ಸಂಸಾರ, ಅದರ ಸಾಮಾನು ಸರಂಜಾಮು ಇವನ್ನು ಪೋಷಿಸಿಕೊಂಡು ಬರಲು ಕೆಲಸ ಮಾಡುತ್ತಾನೆ; ಕೇಂದ್ರೀಕೃತವಾದ ಅಥವಾ ವಿಸ್ತೃತವಾದ ಸ್ವಾರ್ಥ ಮತ್ತು ವೈಯಕ್ತಿಕ ಭೋಗ ಇಲ್ಲದೆ ಯಾರೂ ಕೆಲಸ ಮಾಡುವುದಿಲ್ಲ. ಫಲಾಪೇಕ್ಷೆಯಿಂದ ಕರ್ಮ ಮಾಡದೆ ಕೇವಲ ಕೃಷ್ಣಪ್ರಜ್ಞೆಯಿಂದ ಕರ್ಮನಿರತನಾಗುವುದೇ ಪರಿಪೂರ್ಣತೆಯ ಅಳತೆಗೋಲು. ಎಲ್ಲರೂ ಸಹಜಸ್ಥಿತಿಯಲ್ಲಿ ಪರಮ ಪ್ರಭುವಿನ ವಿಭಿನ್ನಾಂಶಗಳು. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವುದು ಪ್ರತಿಯೊಬ್ಬ ಜೀವಿಯ ಕರ್ತವ್ಯ. ದೇಹದ ಭಾಗಗಳು ಇಡೀ ದೇಹದ ತೃಪ್ತಿಗಾಗಿ ಕೆಲಸಮಾಡುತ್ತವೆ. ದೇಹದ ಅಂಗಾಂಗಗಳು ಸ್ವಂತ ತೃಪ್ತಿಗಾಗಿ ಕೆಲಸ ಮಾಡುವುದಿಲ್ಲ. ಇಡೀ

ದೇಹದ ತೃಪ್ತಿಗಾಗಿ ಕೆಲಸಮಾಡುತ್ತವೆ. ಹಾಗೆಯೇ ವೈಯಕ್ತಿಕ ತೃಪ್ತಿಗಾಗಿ ಅಲ್ಲದೆ ಪರಮ ಪುರುಷನಿಗಾಗಿ ದುಡಿಯುವ ಜೀವಿಯೇ ಪರಿಪೂರ್ಣ ಸನ್ಯಾಸಿ, ಪರಿಪೂರ್ಣ ಯೋಗಿ.

ಕೆಲವೊಮ್ಮೆ ಸನ್ಯಾಸಿಗಳು ತಾವು ಎಲ್ಲ ಐಹಿಕ ಕರ್ತವ್ಯಗಳಿಂದಲೂ ಬಿಡುಗಡೆಯಾಗಿದ್ದೇವೆ ಎಂದು ಕೃತಕವಾಗಿ ಭಾವಿಸುತ್ತಾರೆ. ಅಗ್ನಿಹೋತ್ರವನ್ನು ಬಿಟ್ಟುಬಿಡುತ್ತಾರೆ. ಆದರೆ ವಾಸ್ತವವಾಗಿ ಅವರು ಸ್ವಾರ್ಥಿಗಳು. ಏಕೆಂದರೆ ಅವರ ಗುರಿಯು ನಿರಾಕಾರ ಬ್ರಹ್ಮನೊಂದಿಗೆ ಒಂದಾಗುವುದು. ಇಂತಹ ಬಯಕೆಯು ಯಾವುದೇ ಐಹಿಕ ಬಯಕೆಗಿಂತ ಹಿರಿಯದು. ಆದರೂ ಇದರಲ್ಲಿ ಸ್ವಾರ್ಥವಿಲ್ಲದೆ ಇಲ್ಲ. ಇದೇ ರೀತಿಯಲ್ಲಿ ಎಲ್ಲ ಐಹಿಕ ಕಾರ್ಯಗಳನ್ನು ನಿಲ್ಲಿಸಿ ಕಣ್ಣುಗಳನ್ನು ಅರೆತೆರೆದು ಯೋಗಾಭ್ಯಾಸ ಮಾಡುವ ಹಠಯೋಗಿಯು ವ್ಯಕ್ತಿಗತವಾಗಿ ತೃಪ್ತಿಯನ್ನು ಬಯಸುತ್ತಾನೆ. ಆದರೆ ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು ಸ್ವಾರ್ಥವಿಲ್ಲದೆ ಪರಮ ಪುರುಷನ ತೃಪ್ತಿಗಾಗಿ ಕೆಲಸ ಮಾಡುತ್ತಾನೆ. ಕೃಷ್ಣಪ್ರಜ್ಞೆಯ ಮನುಷ್ಯನಿಗೆ ತನ್ನ ತೃಪ್ತಿಯ ಬಯಕೆಯೇ ಇಲ್ಲ. ಯಶಸ್ಸನ್ನು ತೀರ್ಮಾನಿಸಲು ಅವನ ಒರೆಗಲ್ಲು ಕೃಷ್ಣನ ತೃಪ್ತಿ. ಈ ರೀತಿಯಲ್ಲಿ ಆತನು ಪರಿಪೂರ್ಣ ಸನ್ಯಾಸಿ ಅಥವಾ ಪರಿಪೂರ್ಣಯೋಗಿ. ಅತ್ಯುನ್ನತ ಪರಿಪೂರ್ಣ ಸನ್ಯಾಸಿಗಳಾದ ಚೈತನ್ಯ ಮಹಾಪ್ರಭುಗಳು ಈ ರೀತಿಯಲ್ಲಿ ಪ್ರಾರ್ಥನೆ ಮಾಡುತ್ತಾರೆ—

**ನ ಧನಂ ನ ಜನಂ ನ ಸುಂದರೀಂ**
**ಕವಿತಾಂ ವಾ ಜಗದೀಶ ಕಾಮಯೇ ।**
**ಮಮ ಜನ್ಮನಿ ಜನ್ಮನೀಶ್ವರೇ**
**ಭವತಾದ್ಭಕ್ತಿರಹೈತುಕೀ ತ್ವಯಿ ॥**

"ಸರ್ವಶಕ್ತನಾದ ಭಗವಂತನೇ, ನನಗೆ ಧನ ಸಂಚಯದ ಆಸೆಯಿಲ್ಲ ಅಥವಾ ಸುಂದರಿಯರೊಡನೆ ಸುಖಿಸುವ ಆಸೆಯಿಲ್ಲ. ನನಗೆ ಬಹುಮಂದಿ ಅನುಯಾಯಿಗಳು ಬೇಡ. ಜನ್ಮ ಜನ್ಮಾಂತರಗಳಲ್ಲಿಯೂ ನನ್ನ ಜೀವನದಲ್ಲಿ ನಿನ್ನ ಭಕ್ತಿಸೇವೆಯ ಕಾರಣರಹಿತ ಕೃಪೆಯೊಂದೇ ನನಗೆ ಬೇಕಾದದ್ದು."

## ಶ್ಲೋಕ - 2

**ಯಂ ಸನ್ನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ ।**
**ನ ಹ್ಯಸನ್ನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥೨॥**

**ಯಮ್**—ಯಾವುದನ್ನು; **ಸನ್ನ್ಯಾಸಮ್**—ಸನ್ಯಾಸವು; **ಇತಿ**—ಎಂದೂ; **ಪ್ರಾಹುಃ**—ಹೇಳುತ್ತಾರೋ; **ಯೋಗಮ್**—ಪರಮೋನ್ನತನೊಂದಿಗೆ ಸಂಬಂಧಿಸುವ ಯೋಗವೆಂದು; **ತಮ್**—ಅದನ್ನು; **ವಿದ್ಧಿ**—ನೀನು ತಿಳಿಯಬೇಕು; **ಪಾಣ್ಡವ**—ಪಾಂಡು ಪುತ್ರನೇ; **ನ**—ಎಂದಿಗೂ ಇಲ್ಲ; **ಹಿ**—ಖಂಡಿತವಾಗಿಯೂ; **ಅಸನ್ನ್ಯಸ್ತ**— ತ್ಯಜಿಸದ; **ಸಂಕಲ್ಪಃ**—ಸ್ವತೃಪ್ತಿಯ ಆಸೆಯುಳ್ಳ; **ಯೋಗೀ**—ಆಧ್ಯಾತ್ಮಿಕವಾದಿಯಾದ ಯೋಗಿಯು; **ಭವತಿ**—ಆಗುತ್ತಾನೆ; **ಕಶ್ಚನ**—ಯಾರೊಬ್ಬನೂ.

## ಅನುವಾದ

**ಪಾಂಡುಪುತ್ರನಾದ ಅರ್ಜುನನೆ, ಯಾವುದನ್ನು ಸನ್ಯಾಸವೆಂದು ಕರೆಯುವರೋ ಅದೇ ಯೋಗ**

**ಅಥವಾ ಪರಮ ಪ್ರಭುವಿನೊಂದಿಗೆ ಸಂಪರ್ಕವನ್ನು ಹೊಂದುವುದು ಎಂದು ತಿಳಿ. ಏಕೆಂದರೆ ಇಂದ್ರಿಯ ತೃಪ್ತಿಯ ಆಸೆಯನ್ನು ತ್ಯಾಗಮಾಡದಿದ್ದರೆ ಯಾರೂ ಯೋಗಿಯಾಗಲಾರರು.**

## ಭಾವಾರ್ಥ

ನಿಜವಾದ ಸನ್ಯಾಸಯೋಗ ಅಥವಾ ಭಕ್ತಿಯೆಂದರೆ ಮನುಷ್ಯನು ಜೀವಿಯಾಗಿ ತನ್ನ ಸಹಜ ಸ್ವರೂಪವನ್ನು ತಿಳಿದುಕೊಂಡು ಅದಕ್ಕನುಗುಣವಾಗಿ ಕೆಲಸಮಾಡುವುದು ಎಂದರ್ಥ. ಜೀವಿಗೆ ಪ್ರತ್ಯೇಕ ಸ್ವತಂತ್ರ ವ್ಯಕ್ತಿತ್ವವಿಲ್ಲ. ಅವನು ಪರಮ ಪ್ರಭುವಿನ ತಟಸ್ಥ ಶಕ್ತಿ. ಐಹಿಕ ಶಕ್ತಿಯ ಬಲೆಗೆ ಸಿಲುಕಿದಾಗ ಅವನು ಬದ್ಧನಾಗುತ್ತಾನೆ. ಕೃಷ್ಣಪ್ರಜ್ಞೆ ಇದ್ದಾಗ ಅಥವಾ ಆಧ್ಯಾತ್ಮಿಕ ಚೈತನ್ಯದ ಅರಿವು ಇದ್ದಾಗ ಅವನು ತನ್ನ ನಿಜವಾದ ಮತ್ತು ಸಹಜವಾದ ಬದುಕಿನ ಸ್ಥಿತಿಯಲ್ಲಿರುತ್ತಾನೆ. ಆದುದರಿಂದ ಮನುಷ್ಯನಿಗೆ ಸಂಪೂರ್ಣಜ್ಞಾನವಿದ್ದಾಗ ಎಲ್ಲ ಐಹಿಕ ಇಂದ್ರಿಯತೃಪ್ತಿಯು ನಿಂತು ಹೋಗುತ್ತದೆ; ಆತನು ಎಲ್ಲ ಇಂದ್ರಿಯ ತೃಪ್ತಿಯ ಕಾರ್ಯಗಳನ್ನು ತ್ಯಜಿಸುತ್ತಾನೆ. ಇಂದ್ರಿಯಗಳನ್ನು ಐಹಿಕ ಮೋಹದಿಂದ ತಡೆಯುವ ಎಲ್ಲಾ ಯೋಗಿಗಳೂ ಇದನ್ನು ಅನುಷ್ಠಾನ ಮಾಡುತ್ತಾರೆ. ಆದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಕೃಷ್ಣರಹಿತವಾದುದರಲ್ಲಿ ತನ್ನ ಇಂದ್ರಿಯಗಳನ್ನು ತೊಡಗಿಸುವ ಅವಕಾಶವೇ ಇರುವುದಿಲ್ಲ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಏಕಕಾಲದಲ್ಲಿ ಸನ್ಯಾಸಿ ಮತ್ತು ಯೋಗಿ. ಜ್ಞಾನ ಮತ್ತು ಯೋಗ ಪ್ರಕ್ರಿಯೆಗಳಲ್ಲಿ ವಿಧಿಸಿರುವ ಪ್ರಕಾರ ಜ್ಞಾನ ಮತ್ತು ಇಂದ್ರಿಯ ನಿಗ್ರಹಗಳ ಉದ್ದೇಶವು ಕೃಷ್ಣಪ್ರಜ್ಞೆಯಲ್ಲಿ ತಂತಾನೇ ನೆರವೇರುತ್ತದೆ. ಮನುಷ್ಯನು ಸ್ವಾರ್ಥದ ಕ್ರಿಯೆಗಳನ್ನು ಬಿಟ್ಟುಬಿಡಲು ಶಕ್ತನಾಗದಿದ್ದರೆ ಜ್ಞಾನ ಮತ್ತು ಯೋಗಗಳು ನಿರರ್ಥಕ. ಎಲ್ಲ ಸ್ವಾರ್ಥತೃಪ್ತಿಯನ್ನೂ ತ್ಯಜಿಸಿ ಪರಮ ಪ್ರಭುವನ್ನು ತೃಪ್ತಿಗೊಳಿಸಲು ಸಿದ್ಧವಾಗಿರುವುದೇ ಜೀವಿಯ ನಿಜವಾದ ಗುರಿ. ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಯಾವುದೇ ಬಗೆಯ ಸ್ವಂತಭೋಗದ ಆಸೆ ಇರುವುದಿಲ್ಲ. ಅವನು ಸದಾಕಾಲದಲ್ಲಿಯೂ ಪರಮ ಪ್ರಭುವನ್ನು ತೃಪ್ತಿಪಡಿಸುವುದರಲ್ಲಿಯೇ ನಿರತನಾಗಿರುತ್ತಾನೆ. ಪರಮೋನ್ನತನ ಬಗ್ಗೆ ಏನೂ ತಿಳಿಯದವನು ಸ್ವಂತ ತೃಪ್ತಿಯಲ್ಲಿ ತೊಡಗಬೇಕಾಗುತ್ತದೆ. ಏಕೆಂದರೆ ಯಾರೂ ನಿಷ್ಕ್ರಿಯೆಯ ನೆಲೆಯಲ್ಲಿ ನಿಲ್ಲಲು ಸಾಧ್ಯವಿಲ್ಲ. ಕೃಷ್ಣಪ್ರಜ್ಞೆಯ ಅನುಷ್ಠಾನದಿಂದ ಎಲ್ಲ ಉದ್ದೇಶಗಳೂ ಪರಿಪೂರ್ಣವಾಗಿ ಈಡೇರುತ್ತವೆ.

## ಶ್ಲೋಕ - 3

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ |**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ||೩||**

**ಆರುರುಕ್ಷೋಃ**—ಈಗಷ್ಟೇ ಯೋಗವನ್ನು ಆರಂಭಿಸಿದ; **ಮುನೇಃ**—ಮುನಿಗೆ; **ಯೋಗಮ್**—ಅಷ್ಟಾಂಗ ಯೋಗಪದ್ಧತಿಯನ್ನು; **ಕರ್ಮ**—ಕಾರ್ಯವು; **ಕಾರಣಮ್**—ಸಾಧನೆಯೆಂದು; **ಉಚ್ಯತೇ**—ಹೇಳಲಾಗಿದೆ; **ಯೋಗ**—ಅಷ್ಟಾಂಗಯೋಗದಲ್ಲಿ; **ಆರೂಢಸ್ಯ**—ಉನ್ನತಿಯನ್ನು ಹೊಂದಿದ; **ತಸ್ಯ**—ಅವನಿಗೆ; **ಏವ**—ನಿಶ್ಚಿತವಾಗಿಯೂ; **ಶಮಃ**—ಎಲ್ಲ ಭೌತಿಕ ಕಾರ್ಯಗಳ ನಿಲ್ಲಿಸುವಿಕೆಯು; **ಕಾರಣಮ್**—ಸಾಧನವೆಂದು; **ಉಚ್ಯತೇ**—ಹೇಳಲಾಗಿದೆ.

## ಅನುವಾದ

**ಅಷ್ಟಾಂಗ ಯೋಗ ಪದ್ಧತಿಯಲ್ಲಿ ಹೊಸದಾಗಿ ದೀಕ್ಷೆ ಪಡೆದವನಿಗೆ ಕರ್ಮವೇ ಸಾಧನ ಎಂದು ಹೇಳಿದೆ; ಯೋಗದಲ್ಲಿ ಆಗಲೇ ಬಹು ಮುಂದುವರಿದವನಿಗೆ ಎಲ್ಲ ಐಹಿಕ ಕಾರ್ಯಗಳನ್ನು ನಿಲ್ಲಿಸುವುದೇ ಸಾಧನ ಎಂದು ಹೇಳಿದೆ.**

## ಭಾವಾರ್ಥ

ಮನುಷ್ಯನು ಪರಮೋನ್ನತನೊಂದಿಗೆ ಸಂಬಂಧ ಪಡೆಯುವ ಪ್ರಕ್ರಿಯೆಗೆ ಯೋಗವೆಂದು ಹೆಸರು. ಅತ್ಯುನ್ನತ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಸಾಧಿಸುವ ಏಣಿಗೆ ಇದನ್ನು ಹೋಲಿಸಬಹುದು. ಏಣಿಯು ಜೀವಿಯ ಅತ್ಯಂತ ಕೆಳಗಿನ ಐಹಿಕ ಸ್ಥಿತಿಯಿಂದ ಪ್ರಾರಂಭವಾಗಿ ಪರಿಶುದ್ಧ ಆಧ್ಯಾತ್ಮಿಕ ಜೀವನದಲ್ಲಿ ಪರಿಪೂರ್ಣ ಆತ್ಮ ಸಾಕ್ಷಾತ್ಕಾರದವರೆಗೆ ಏರುತ್ತದೆ. ವಿವಿಧ ಎತ್ತರಗಳಿಗೆ ಅನುಗುಣವಾಗಿ ಏಣಿಯ ಬೇರೆ ಬೇರೆ ಭಾಗಗಳಿಗೆ ಬೇರೆ ಬೇರೆ ಹೆಸರುಗಳುಂಟು. ಆದರೆ ಒಟ್ಟಾಗಿ ಇಡೀ ಏಣಿಗೆ ಯೋಗ ಎಂದು ಹೆಸರು. ಇದನ್ನು ಜ್ಞಾನಯೋಗ, ಧ್ಯಾನಯೋಗ ಮತ್ತು ಭಕ್ತಿಯೋಗ ಎಂದು ವಿಂಗಡಿಸಬಹುದು. ಏಣಿಯ ಪ್ರಾರಂಭವನ್ನು **ಯೋಗಾರುರುಕ್ಷು** ಹಂತವೆಂದೂ ಅತ್ಯಂತ ಮೇಲಿನ ಮಟ್ಟವನ್ನು **ಯೋಗಾರೂಢ**ವೆಂದೂ ಕರೆಯುತ್ತಾರೆ.

ಬದುಕಿನ ನಿಯಂತ್ರಕ ತತ್ವಗಳ ಮೂಲಕ ಮತ್ತು ವಿವಿಧ ಯೋಗಾಸನಗಳ ಮೂಲಕ ಧ್ಯಾನದಲ್ಲಿ ತೊಡಗಲು ಪ್ರಯತ್ನಿಸಬಹುದು (ಈ ಯೋಗಾಸನಗಳು ಸ್ವಲ್ಪ ಹೆಚ್ಚು ಕಡಮೆ ದೈಹಿಕ ವ್ಯಾಯಾಮಗಳೇ). ಅಷ್ಟಾಂಗ ಯೋಗ ಪದ್ಧತಿಯನ್ನು ಕುರಿತು ಹೇಳುವುದಾದರೆ, ಇಂತಹ ಪ್ರಾರಂಭದ ಪ್ರಯತ್ನಗಳನ್ನು ಫಲಾಪೇಕ್ಷೆಯ ಐಹಿಕ ಕರ್ಮಗಳು ಎಂದು ಪರಿಗಣಿಸಲಾಗುತ್ತದೆ. ಇಂತಹ ಎಲ್ಲ ಕಾರ್ಯಗಳೂ ಇಂದ್ರಿಯ ನಿಯಂತ್ರಣಕ್ಕಾಗಿ ಪರಿಪೂರ್ಣ ಮಾನಸಿಕ ಸಮತೋಲನವನ್ನು ಸಾಧಿಸುವತ್ತ ಕರೆದೊಯ್ಯುತ್ತವೆ. ಧ್ಯಾನಾಭ್ಯಾಸದಲ್ಲಿ ಮನುಷ್ಯನು ಸಿದ್ಧಿ ಪಡೆದಾಗ ಅವನು ಮನಸ್ಸನ್ನು ಕಲಕುವ ಎಲ್ಲ ಕಾರ್ಯಗಳನ್ನು ನಿಲ್ಲಿಸುತ್ತಾನೆ.

ಆದರೆ ಕೃಷ್ಣಪ್ರಜ್ಞೆಯ ಮನುಷ್ಯನು ಸದಾ ಕೃಷ್ಣನನ್ನೇ ಕುರಿತು ಚಿಂತಿಸುತ್ತಿರುವುದರಿಂದ ಅವನು ಪ್ರಾರಂಭದಿಂದಲೇ ಧ್ಯಾನದ ನೆಲೆಯ ಮೇಲಿರುತ್ತಾನೆ. ಸದಾ ಕೃಷ್ಣಸೇವೆಯಲ್ಲಿ ನಿರತನಾಗಿರುವುದರಿಂದ ಎಲ್ಲ ಐಹಿಕ ಕಾರ್ಯಗಳನ್ನು ನಿಲ್ಲಿಸಿದ್ದಾನೆ ಎಂದು ಪರಿಗಣಿಸಲಾಗುತ್ತದೆ.

## ಶ್ಲೋಕ - 4

**ಯದಾ ಹಿ ನೇನ್ದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ |**
**ಸರ್ವಸನ್ಕಲ್ಪಸನ್ನ್ಯಾಸೀ ಯೋಗಾರೂಢಸ್ತದೋಚ್ಯತೇ ||೪||**

**ಯದಾ**—ಯಾವಾಗ; **ಹಿ**—ಖಂಡಿತವಾಗಿಯೂ; **ನ**—ಇಲ್ಲ; **ಇನ್ದ್ರಿಯ ಅರ್ಥೇಷು**—ಇಂದ್ರಿಯ ತೃಪ್ತಿಯಲ್ಲಿ; **ನ**—ಎಂದಿಗೂ ಇಲ್ಲ; **ಕರ್ಮಸು**—ಕಾಮ್ಯಕರ್ಮಗಳಲ್ಲಿ; **ಅನುಷಜ್ಜತೇ**—ಅಗತ್ಯವಾಗಿ ತೊಡಗುತ್ತಾನೆ; **ಸರ್ವ ಸನ್ಕಲ್ಪ**—ಸಕಲ ಭೌತಿಕಾಪೇಕ್ಷೆಗಳ; **ಸನ್ನ್ಯಾಸೀ**—ಪರಿತ್ಯಾಗಿಯು; **ಯೋಗ ಆರೂಢಃ**—ಯೋಗದಲ್ಲಿ ಉನ್ನತಿಹೊಂದಿದವನು; **ತದಾ**—ಆಗ; **ಉಚ್ಯತೇ**—ಎಂದು ಹೇಳಲ್ಪಡುತ್ತಾನೆ.

## ಅನುವಾದ

**ಒಬ್ಬ ಮನುಷ್ಯನು ಎಲ್ಲ ಐಹಿಕ ಬಯಕೆಗಳನ್ನೂ ತ್ಯಜಿಸಬಹುದು. ಇಂದ್ರಿಯ ತೃಪ್ತಿಗಾಗಿ ಕರ್ಮ ಮಾಡದೆ ಫಲಾಪೇಕ್ಷೆಯ ಕರ್ಮದಲ್ಲಿ ತೊಡಗದೆ ಇರಬಹುದು; ಇಂತಹ ಮನುಷ್ಯನನ್ನು ಯೋಗಾರೂಢ ಎಂದು ಹೇಳುತ್ತಾರೆ.**

## ಭಾವಾರ್ಥ

ಮನುಷ್ಯನು ಭಗವಂತನ ಆಧ್ಯಾತ್ಮಿಕ ಪ್ರೇಮಪೂರ್ವಕ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗಿದ್ದಾಗ ಅವನು ತನ್ನಲ್ಲಿಯೇ ಸಂತೃಪ್ತನಾಗಿರುತ್ತಾನೆ. ಆದುದರಿಂದ ಆತನು ಇಂದ್ರಿಯತೃಪ್ತಿಯಲ್ಲಾಗಲೀ ಕಾಮ್ಯ ಕರ್ಮಗಳಲ್ಲಾಗಲೀ ತೊಡಗುವುದಿಲ್ಲ. ಇಲ್ಲವಾದರೆ, ಮನುಷ್ಯನು ಕೆಲಸಮಾಡದೆ ಬದುಕಲು ಸಾಧ್ಯವಿಲ್ಲವಾದುದರಿಂದ ಆತನು ಇಂದ್ರಿಯ ತೃಪ್ತಿಯಲ್ಲೇ ತೊಡಗಬೇಕು. ಕೃಷ್ಣಪ್ರಜ್ಞೆ ಇಲ್ಲದಿದ್ದರೆ ಮನುಷ್ಯನು ಸದಾ ಸ್ವಾರ್ಥಪರ ಕಾರ್ಯಗಳಲ್ಲಿ ಅಥವಾ ವಿಸ್ತೃತವಾದ ಸ್ವಾರ್ಥ ಕಾರ್ಯಗಳಲ್ಲಿ ತೊಡಗಬೇಕಾಗುತ್ತದೆ. ಆದರೆ ಕೃಷ್ಣಪ್ರಜ್ಞೆಯಿರುವ ಮನುಷ್ಯನು ಎಲ್ಲವನ್ನೂ ಕೃಷ್ಣನ ತೃಪ್ತಿಗಾಗಿ ಮಾಡಬಹುದು. ಹೀಗೆ ಆತನು ಇಂದ್ರಿಯತೃಪ್ತಿಯಿಂದ ಸಂಪೂರ್ಣವಾಗಿ ನಿರ್ಲಿಪ್ತನಾಗಬಹುದು. ಇಂತಹ ಸಾಕ್ಷಾತ್ಕಾರವಿಲ್ಲದವನು ಯೋಗದ ಏಣಿಯ ಅತ್ಯುನ್ನತ ಮೆಟ್ಟಲಿಗೆ ಏರುವ ಮುನ್ನ ಐಹಿಕ ಬಯಕೆಗಳಿಂದ ತಪ್ಪಿಸಿಕೊಳ್ಳಲು ಯಾಂತ್ರಿಕವಾಗಿ ಪ್ರಯತ್ನಿಸಬೇಕಾಗುತ್ತದೆ.

## ಶ್ಲೋಕ - 5

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ |**
**ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ||೫||**

**ಉದ್ಧರೇತ್**—ಉದ್ಧರಿಸಬೇಕು; **ಆತ್ಮನಾ**—ಮನಸ್ಸಿನಿಂದ; **ಆತ್ಮಾನಮ್**—ಬದ್ಧಾತ್ಮನನ್ನು; **ನ**—ಇಲ್ಲ; **ಆತ್ಮಾನಮ್**—ಬದ್ಧಾತ್ಮನನ್ನು; **ಅವಸಾದಯೇತ್**—ಅವನತಿಗೊಳಿಸಬೇಕು; **ಆತ್ಮಾ**—ಮನಸ್ಸು; **ಏವ**—ಖಂಡಿತವಾಗಿಯೂ; **ಹಿ**—ನಿಜವಾಗಿ; **ಆತ್ಮನಃ**—ಬದ್ಧಾತ್ಮನ; **ಬನ್ಧುಃ**—ಸ್ನೇಹಿತನು; **ಆತ್ಮಾ**—ಮನಸ್ಸು; **ಏವ**—ಖಂಡಿತವಾಗಿಯೂ; **ರಿಪುಃ**—ಶತ್ರುವು; **ಆತ್ಮನಃ**— ಬದ್ಧಾತ್ಮನ.

## ಅನುವಾದ

**ಮನುಷ್ಯನು ತನ್ನ ಮನಸ್ಸಿನ ಸಹಾಯದಿಂದಲೇ ತನ್ನನ್ನು ಉದ್ಧಾರ ಮಾಡಿಕೊಳ್ಳಬೇಕು, ತನ್ನನ್ನು ಹೀನೈಸಿಕೊಳ್ಳಬಾರದು. ಬದ್ಧಜೀವಿಗೆ ಮನಸ್ಸೇ ಬಂಧು, ಮನಸ್ಸೇ ಶತ್ರು.**

## ಭಾವಾರ್ಥ

ಸನ್ನಿವೇಶಕ್ಕೆ ಅನುಗುಣವಾಗಿ ಆತ್ಮ ಎನ್ನುವ ಪದವು ದೇಹವನ್ನೂ, ಮನಸ್ಸನ್ನೂ, ಆತ್ಮವನ್ನೂ, ಸೂಚಿಸುತ್ತದೆ. ಯೋಗಪದ್ಧತಿಯಲ್ಲಿ ಮನಸ್ಸು ಮತ್ತು ಬದ್ಧ ಆತ್ಮನೂ ಬಹು ಮುಖ್ಯ. ಯೋಗಾಭ್ಯಾಸದಲ್ಲಿ ಮನಸ್ಸೇ ಕೇಂದ್ರ ಬಿಂದುವಾದದ್ದರಿಂದ, ಇಲ್ಲಿ ಆತ್ಮ ಎಂದರೆ

ಮನಸ್ಸು. ಯೋಗ ಪದ್ಧತಿಯ ಗುರಿ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಅದನ್ನು ಇಂದ್ರಿಯ ವಸ್ತುಗಳ ಮೋಹದಿಂದ ವಿಮುಖಗೊಳಿಸುವುದು. ಬದ್ಧ ಆತ್ಮವನ್ನು ಅಜ್ಞಾನದ ಕೆಸರಿನಿಂದ ಬಿಡುಗಡೆ ಮಾಡಲು ಸಾಧ್ಯವಾಗುವಂತೆ ಮನಸ್ಸಿಗೆ ಶಿಕ್ಷಣವನ್ನು ನೀಡಬೇಕು ಎಂದು ಇಲ್ಲಿ ಒತ್ತಿ ಹೇಳಿದೆ. ಐಹಿಕ ಅಸ್ತಿತ್ವದಲ್ಲಿ ಮನುಷ್ಯನು ಮನಸ್ಸಿನ ಮತ್ತು ಇಂದ್ರಿಯಗಳ ಪ್ರಭಾವಕ್ಕೆ ಒಳಗಾಗುತ್ತಾನೆ. ವಾಸ್ತವವಾಗಿ, ಅಹಂಕಾರವು ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆಯನ್ನು ನಡೆಸಲು ಬಯಸುತ್ತದೆ. ಮನಸ್ಸು ಅಹಂಕಾರದೊಡನೆ ಸಿಕ್ಕಿಕೊಂಡಿರುತ್ತದೆ; ಇದರಿಂದಲೇ ಪರಿಶುದ್ಧ ಆತ್ಮನು ಈ ಐಹಿಕ ಜಗತ್ತಿನಲ್ಲಿ ಸಿಕ್ಕಿಬಿದ್ದಿದ್ದಾನೆ. ಆದುದರಿಂದ ಐಹಿಕ ಥಳುಕಿಗೆ ಮೋಹಗೊಳ್ಳದಂತೆ ಮನಸ್ಸಿಗೆ ಶಿಕ್ಷಣವನ್ನು ನೀಡಬೇಕು; ಹೀಗೆ ಬದ್ಧ ಆತ್ಮವನ್ನು ಉದ್ಧಾರಮಾಡಬಹುದು. ಇಂದ್ರಿಯ ವಸ್ತುಗಳ ಆಕರ್ಷಣೆಗಾಗಿ ಮನುಷ್ಯನು ತನ್ನನ್ನು ಕೀಳುಮಾಡಿಕೊಳ್ಳಬಾರದು. ಇಂದ್ರಿಯ ವಸ್ತುಗಳಿಂದ ಮನುಷ್ಯನು ಆಕರ್ಷಿತನಾದಷ್ಟು ಐಹಿಕ ಅಸ್ತಿತ್ವದಲ್ಲಿ ಸಿಲುಕಿಕೊಳ್ಳುತ್ತಾನೆ. ಬಿಡಿಸಿಕೊಳ್ಳುವುದಕ್ಕೆ ಅತ್ಯುತ್ತಮ ಮಾರ್ಗವೆಂದರೆ ಮನಸ್ಸನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸುವುದು. **ಹಿ** ಎನ್ನುವ ಪದವನ್ನು ಈ ಅಂಶವನ್ನು ಒತ್ತಿ ಹೇಳಲು ಬಳಸಿದೆ. ಹೀಗೆಂದೂ ಹೇಳಿದೆ—

**ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ |**
**ಬನ್ಧಾಯ ವಿಷಯಾಸಙ್ಗೋ ಮುಕ್ತ್ಯೈನಿರ್ವಿಷಯಂ ಮನಃ ||**

"ಮನುಷ್ಯನ ಬಂಧನಕ್ಕೆ ಮನಸ್ಸೇ ಕಾರಣ, ಮೋಕ್ಷಕ್ಕೂ ಮನಸ್ಸೇ ಕಾರಣ. ಇಂದ್ರಿಯ ವಸ್ತುಗಳಲ್ಲಿ ಮುಳುಗಿದ ಮನಸ್ಸು ಬಂಧನಕ್ಕೆ ಕಾರಣ. ಇಂದ್ರಿಯ ವಸ್ತುಗಳಿಂದ ದೂರವಾದ ಮನಸ್ಸು ಮುಕ್ತಿಗೆ ಕಾರಣ." (ಅಮೃತಬಿಂದು ಉಪನಿಷತ್ತು 2). ಆದುದರಿಂದ ಸದಾ ಕೃಷ್ಣಪ್ರಜ್ಞೆಯಲ್ಲಿ ತೊಡಗಿರುವ ಮನಸ್ಸು ಪರಮ ಮೋಕ್ಷಕ್ಕೆ ಕಾರಣ.

## ಶ್ಲೋಕ - 6

**ಬನ್ಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ |**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ||೬||**

**ಬಂಧುಃ**—ಮಿತ್ರನು; **ಆತ್ಮಾ**—ಮನಸ್ಸು; **ಆತ್ಮನಃ**—ಜೀವಿಯ; **ತಸ್ಯ**—ಅ; **ಯೇನ**—ಯಾವ; **ಆತ್ಮಾ**—ಮನಸ್ಸು; **ಏವ**—ಖಂಡಿತವಾಗಿಯೂ; **ಆತ್ಮನಾ**—ಜೀವಿಯಿಂದ; **ಜಿತಃ**—ಗೆಲ್ಲಲ್ಪಟ್ಟಿರುವುದೋ; **ಅನಾತ್ಮನಃ**—ಮನಸ್ಸನ್ನು ನಿಯಂತ್ರಿಸಲು ವಿಫಲನಾದವನಿಗೆ; **ತು**—ಆದರೆ; **ಶತ್ರುತ್ವೇ**—ವೈರತ್ವದ ಕಾರಣದಿಂದ; **ವರ್ತೇತ**—ಇರುತ್ತಾನೆ; **ಆತ್ಮಾ ಏವ**—ಮನಸ್ಸೇ; **ಶತ್ರುವತ್**—ವೈರಿಯ ಹಾಗೆ.

## ಅನುವಾದ

**ಯಾರು ಮನಸ್ಸನ್ನು ಗೆದ್ದಿದ್ದಾನೋ ಅವನಿಗೆ ಮನಸ್ಸು ಬಂಧುವಾಗುತ್ತದೆ. ಆದರೆ ಹಾಗೆ ಮಾಡದಿರುವವನಿಗೆ ಅವನ ಮನಸ್ಸೇ ಅತ್ಯಂತ ದೊಡ್ಡ ಶತ್ರುವಾಗುತ್ತದೆ.**

## ಭಾವಾರ್ಥ

ಮಾನವ ಜನ್ಮದ ಧ್ಯೇಯವನ್ನು ನಿರ್ವಹಿಸುವ ಕಾರ್ಯದಲ್ಲಿ ಮನಸ್ಸನ್ನು ಸ್ನೇಹಿತನನ್ನಾಗಿ ಮಾಡಲು ಅದನ್ನು ನಿಯಂತ್ರಿಸುವುದೇ ಅಷ್ಟಾಂಗಯೋಗದ ಆಚರಣೆಯ ಉದ್ದೇಶ. ಮನಸ್ಸನ್ನು ನಿಯಂತ್ರಿಸದಿದ್ದರೆ (ಬರಿಯ ತೋರಿಕೆಗಾಗಿ) ಯೋಗಾಭ್ಯಾಸ ಮಾಡುವುದು ವ್ಯರ್ಥ ಕಾಲಕ್ಷೇಪ. ತನ್ನ ಮನಸ್ಸನ್ನು ನಿಯಂತ್ರಿಸಲಾರದವನು ಸದಾ ಅತ್ಯಂತ ದೊಡ್ಡ ಶತ್ರುವಿನೊಡನೆಯೇ ಬಾಳುತ್ತಾನೆ. ಹೀಗೆ ಅವನ ಬದುಕೂ ಅದರ ಧ್ಯೇಯವೂ ಹಾಳಾಗುತ್ತವೆ. ಜೀವಿಯ ಸಹಜ ಸ್ವರೂಪವು ತನ್ನ ಮೇಲಿನವರ ಅಪ್ಪಣೆಯನ್ನು ಪರಿಪಾಲಿಸುವುದು. ಎಷ್ಟು ಕಾಲ ಮನಸ್ಸು ಇನ್ನೂ ಗೆಲ್ಲಲಾಗದ ಶತ್ರುವಾಗಿ ಉಳಿದಿರುವುದೋ ಅಷ್ಟು ಕಾಲ ಮನುಷ್ಯನು ಕಾಮ, ಕ್ರೋಧ, ಲೋಭ, ಮೋಹ ಮೊದಲಾದವುಗಳ ಪ್ರೇರಣೆಯಂತೆ ನಡೆದುಕೊಳ್ಳಬೇಕಾಗುತ್ತದೆ. ಆದರೆ ಮನಸ್ಸನ್ನು ಗೆದ್ದಾಗ, ಎಲ್ಲರ ಹೃದಯಗಳಲ್ಲಿ ಪರಮಾತ್ಮನಾಗಿ ನೆಲೆಸಿರುವ ದೇವೋತ್ತಮ ಪರಮ ಪುರುಷನ ಅನುಜ್ಞೆಯಂತೆ ನಡೆಯಲು ಮನುಷ್ಯನು ತಾನಾಗಿ ಒಪ್ಪಿಕೊಳ್ಳುತ್ತಾನೆ. ನಿಜವಾದ ಯೋಗಾಭ್ಯಾಸಕ್ಕೆ ಹೃದಯದೊಳಗಿರುವ ಪರಮಾತ್ಮನನ್ನು ಕಂಡು ಅವನ ಅನುಜ್ಞೆಯಂತೆ ನಡೆದುಕೊಳ್ಳುವುದು ಅಗತ್ಯ. ಕೃಷ್ಣಪ್ರಜ್ಞೆಯನ್ನು ನೇರವಾಗಿ ಸ್ವೀಕರಿಸಿದರೆ ಭಗವಂತನ ಪ್ರೇರಣೆಗೆ ಸಂಪೂರ್ಣ ಶರಣಾಗತಿಯು ತಂತಾನೇ ಬರುತ್ತದೆ.

## ಶ್ಲೋಕ - 7

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ |**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ||೭||**

**ಜಿತ ಆತ್ಮನಃ**—ತನ್ನ ಮನಸ್ಸನ್ನು ಗೆದ್ದವನ; **ಪ್ರಶಾಂತಸ್ಯ**—ಮನಸ್ಸಿನ ಮೇಲಿನ ಅಂತಹ ನಿಯಂತ್ರಣದಿಂದ ಶಾಂತಿಯನ್ನು ಹೊಂದಿರುವವನ; **ಪರಮ ಆತ್ಮಾ**—ಪರಮಾತ್ಮನು; **ಸಮಾಹಿತಃ**—ಸಂಪೂರ್ಣವಾಗಿ ತಲಪಿದ; **ಶೀತ**—ಶೀತ; **ಉಷ್ಣ**—ಉಷ್ಣ; **ಸುಖ**—ಸುಖ; **ದುಃಖೇಷು**—ಮತ್ತು ದುಃಖಗಳಲ್ಲಿ; **ತಥಾ**—ಕೂಡ; **ಮಾನ**—ಗೌರವದಲ್ಲಿ; **ಅಪಮಾನಯೋಃ**—ಮತ್ತು ಅಗೌರವದಲ್ಲಿಯೂ.

## ಅನುವಾದ

**ಮನಸ್ಸನ್ನು ಗೆದ್ದವನು ಆಗಲೇ ಪರಮಾತ್ಮನನ್ನು ಮುಟ್ಟಿದಂತೆ. ಏಕೆಂದರೆ ಅವನು ಶಾಂತಿಯನ್ನು ಸಾಧಿಸಿದ್ದಾನೆ. ಅಂತಹ ಮನುಷ್ಯನಿಗೆ ಸುಖದುಃಖಗಳು, ಶೀತೋಷ್ಣಗಳು, ಮಾನಾಪಮಾನಗಳು ಎಲ್ಲವೂ ಒಂದೇ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನು ಪರಮಾತ್ಮನಾಗಿ ಎಲ್ಲರ ಹೃದಯಗಳಲ್ಲಿ ನೆಲೆಸಿದ್ದಾನೆ. ಪ್ರತಿಯೊಂದು ಜೀವಿಯೂ ಆತನ ಪ್ರೇರಣೆಯಂತೆ ನಡೆದುಕೊಳ್ಳಬೇಕೆಂಬುದೇ ಉದ್ದೇಶ. ಹೊರಗಿನ ಮಾಯಾಶಕ್ತಿಯು ಮನಸ್ಸಿಗೆ ದಾರಿತಪ್ಪಿಸಿದಾಗ ಮನುಷ್ಯನು ಐಹಿಕ ಕಾರ್ಯಗಳಲ್ಲಿ ಸಿಕ್ಕಿಕೊಳ್ಳುತ್ತಾನೆ. ಆದುದರಿಂದ ಯೋಗಪದ್ಧತಿಗಳಲ್ಲಿ ಯಾವುದಾದರೂ ಒಂದರ ಮೂಲಕ ಮನುಷ್ಯನ ಮನಸ್ಸನ್ನು

ನಿಯಂತ್ರಿಸುತ್ತಲೇ ಆತನು ಗುರಿಯನ್ನು ಮುಟ್ಟಿದ್ದಾನೆ ಎಂದು ಭಾವಿಸಬೇಕು. ಮನುಷ್ಯನು ತನಗಿಂತ ಮೇಲಿನಿಂದ ಬಂದ ಅನುಜ್ಞೆಯಂತೆ ನಡೆದುಕೊಳ್ಳಬೇಕು. ಮನುಷ್ಯನ ಮನಸ್ಸು ಪರಾಪ್ರಕೃತಿಯಲ್ಲಿ ನೆಲೆಸಿದಾಗ ಪರಮ ಪ್ರಭುವಿನ ಅನುಜ್ಞೆಯನ್ನು ಅನುಸರಿಸುವುದನ್ನು ಬಿಟ್ಟು ಆತನಿಗೆ ಬೇರೆ ಮಾರ್ಗವೇ ಇಲ್ಲ. ಮನಸ್ಸು ತನಗಿಂತ ಶ್ರೇಷ್ಠವಾದದ್ದರ ಅನುಜ್ಞೆಯನ್ನು ಒಪ್ಪಿಕೊಂಡು ಅದರಂತೆ ನಡೆಯಬೇಕು. ಮನಸ್ಸನ್ನು ನಿಯಂತ್ರಿಸುವುದರ ಪರಿಣಾಮವೆಂದರೆ ಮನುಷ್ಯನು ತಾನಾಗಿಯೇ ಪರಮಾತ್ಮನ ಪ್ರೇರಣೆಯಂತೆ ನಡೆಯುತ್ತಾನೆ. ಕೃಷ್ಣಪ್ರಜ್ಞೆಯಲ್ಲಿರುವವನು ಈ ದಿವ್ಯಸ್ಥಿತಿಯನ್ನು ಕೂಡಲೇ ಸಾಧಿಸುವುದರಿಂದ ದುಃಖ-ಸುಖ, ಶೀತ-ಉಷ್ಣ ಮೊದಲಾದ ಐಹಿಕ ಅಸ್ತಿತ್ವದ ದ್ವಂದ್ವಗಳು ಭಗವಂತನ ಭಕ್ತನನ್ನು ಬಾಧಿಸಲಾರವು. ಈ ಸ್ಥಿತಿಯೇ ವಾಸ್ತವಿಕ ಸಮಾಧಿ ಅಥವಾ ಪರಮ ಪುರುಷನಲ್ಲಿ ತಲ್ಲೀನನಾಗುವುದು.

## ಶ್ಲೋಕ - 8

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ |**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟ್ರಾಶ್ಮಕಾಞ್ಚನಃ ||೮||**

**ಜ್ಞಾನ**—ಆರ್ಜಿತ ಜ್ಞಾನ; **ವಿಜ್ಞಾನ**—ಮತ್ತು ಸಾಕ್ಷಾತ್ಕಾರ ಜ್ಞಾನಗಳಿಂದ; **ತೃಪ್ತ**—ತೃಪ್ತನಾದ; **ಆತ್ಮಾ**—ಜೀವಿಯು; **ಕೂಟಸ್ಥಃ**—ಆಧ್ಯಾತ್ಮಿಕವಾಗಿ ನೆಲೆಸಿದ; **ವಿಜಿತ ಇನ್ದ್ರಿಯಃ**—ಇಂದ್ರಿಯಗಳನ್ನು ನಿಯಂತ್ರಿಸಿದ; **ಯುಕ್ತಃ**—ಆತ್ಮ ಸಾಕ್ಷಾತ್ಕಾರಕ್ಕೆ ಅರ್ಹನು; **ಇತಿ**—ಎಂದು; **ಉಚ್ಯತೇ**—ಹೇಳಲಾಗಿದೆ; **ಯೋಗೀ**—ಯೋಗಿಯು; **ಸಮ**—ಸಮಚಿತ್ತನು; **ಲೋಷ್ಟ್ರ**—ಮಣ್ಣಿನ ಹೆಂಟೆಗಳು; **ಅಶ್ಮ**—ಕಲ್ಲು; **ಕಾಞ್ಚನಃ**—ಚಿನ್ನವು.

## ಅನುವಾದ

**ಒಬ್ಬ ಮನುಷ್ಯನು ತಾನು ಗಳಿಸಿದ ಜ್ಞಾನ ಮತ್ತು ಸಾಕ್ಷಾತ್ಕಾರಗಳಿಂದ ಸಂಪೂರ್ಣ ತೃಪ್ತಿಯನ್ನು ಪಡೆದಿದ್ದರೆ ಆತನು ಆತ್ಮ ಸಾಕ್ಷಾತ್ಕಾರದಲ್ಲಿ ಸ್ಥಿರನಾಗಿರುವನೆಂದೂ ಮತ್ತು ಯೋಗಿಯೆಂದೂ ಹೇಳುತ್ತಾರೆ. ಇಂತಹ ಮನುಷ್ಯನು ಸಮಾಧಿಯಲ್ಲಿದ್ದು ಇಂದ್ರಿಯಗಳನ್ನು ಗೆದ್ದಿರುತ್ತಾನೆ. ಮಣ್ಣಾಗಲೀ, ಕಲ್ಲಾಗಲೀ ಅಥವಾ ಚಿನ್ನವಾಗಲಿ ಎಲ್ಲವನ್ನೂ ಆತನು ಒಂದೇ ರೀತಿಯಾಗಿ ಕಾಣುತ್ತಾನೆ.**

## ಭಾವಾರ್ಥ

ಪರಮಸತ್ಯದ ಸಾಕ್ಷಾತ್ಕಾರವಿಲ್ಲದ ಪುಸ್ತಕಜ್ಞಾನದಿಂದ ಪ್ರಯೋಜನವಿಲ್ಲ. ಇದನ್ನು ಹೀಗೆ ಹೇಳಿದೆ—

**ಅತಃ ಶ್ರೀಕೃಷ್ಣನಾಮಾದಿ ನ ಭವೇದ್ ಗ್ರಾಹ್ಯಮ್ ಇನ್ದ್ರಿಯೈಃ |**
**ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ ||**

"ಐಹಿಕವಾಗಿ ಕಲುಷಿತಗೊಂಡ ತನ್ನ ಇಂದ್ರಿಯಗಳ ಮೂಲಕ ಯಾರೂ ಶ್ರೀಕೃಷ್ಣನ ನಾಮ, ರೂಪ, ಗುಣ ಮತ್ತು ಲೀಲೆಗಳ ಆಧ್ಯಾತ್ಮಿಕ ಸ್ವಭಾವವನ್ನು ತಿಳಿಯಲಾರರು. ಭಗವಂತನ ದಿವ್ಯಸೇವೆಯಿಂದ ಮನುಷ್ಯನು ಆಧ್ಯಾತ್ಮಿಕದಲ್ಲಿ ಮಗ್ನನಾದಾಗ ಮಾತ್ರ ಭಗವಂತನ ಅಲೌಕಿಕ

ನಾಮ, ರೂಪ, ಗುಣ ಮತ್ತು ಲೀಲೆಗಳು ಅವನ ಮುಂದೆ ತೆರೆದುಕೊಳ್ಳುತ್ತವೆ." (ಭಕ್ತಿರಸಾಮೃತಸಿಂಧು 1.2.234).

ಭಗವದ್ಗೀತೆಯು ಕೃಷ್ಣಪ್ರಜ್ಞೆಯ ವಿಜ್ಞಾನ. ಐಹಿಕ ಪಾಂಡಿತ್ಯ ಮಾತ್ರದಿಂದಲೇ ಯಾರೂ ಕೃಷ್ಣಪ್ರಜ್ಞೆಯನ್ನು ಪಡೆಯಲಾರರು. ಪರಿಶುದ್ಧ ಪ್ರಜ್ಞೆಯಲ್ಲಿರುವವನ ಸಹವಾಸಭಾಗ್ಯವು ದೊರೆಯಬೇಕು. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಕೃಷ್ಣನ ಕೃಪೆಯಿಂದ ಜ್ಞಾನವನ್ನು ಪಡೆದಿದ್ದಾನೆ. ಏಕೆಂದರೆ ಪರಿಶುದ್ಧ ಭಕ್ತಿಸೇವೆಯಿಂದ ಅವನಿಗೆ ತೃಪ್ತಿ. ಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡು ಮನುಷ್ಯನು ಪರಿಪೂರ್ಣನಾಗುತ್ತಾನೆ. ಆಧ್ಯಾತ್ಮಿಕ ಜ್ಞಾನದಿಂದ ಮನುಷ್ಯನು ತನ್ನ ದೃಢನಂಬಿಕೆಗಳಲ್ಲಿ ಅಚಲನಾಗಿರಬಹುದು. ಆದರೆ ಬರಿಯ ಪಾಂಡಿತ್ಯದಿಂದ ಮನುಷ್ಯನು ಭ್ರಮೆಗೆ ಒಳಗಾಗಬಹುದು. ಹೊರಗೆ ತೋರುವ ಪರಸ್ಪರ ದ್ವಂದ್ವಗಳಿಂದ ಗೊಂದಲಕ್ಕೆ ಒಳಗಾಗಬಹುದು. ಸಾಕ್ಷಾತ್ಕಾರ ಪಡೆದ ಆತ್ಮನಿಗೆ ಮಾತ್ರವೇ ವಾಸ್ತವವಾಗಿ ಸಂಯಮವು ಸಾಧ್ಯ. ಏಕೆಂದರೆ ಇಂತಹ ಮನುಷ್ಯನು ಕೃಷ್ಣನಿಗೆ ಶರಣಾಗಿರುತ್ತಾನೆ. ಐಹಿಕ ಪಾಂಡಿತ್ಯದೊಂದಿಗೆ ಯಾವ ಸಂಬಂಧವನ್ನೂ ಇಟ್ಟುಕೊಂಡಿಲ್ಲದಿರುವುದರಿಂದ ಅವನು ದಿವ್ಯಸ್ಥಿತಿಯಲ್ಲಿರುತ್ತಾನೆ. ಐಹಿಕ ಪಾಂಡಿತ್ಯ ಮತ್ತು ಊಹಾತ್ಮಕ ಚಿಂತನೆ ಇತರರಿಗೆ ಬಂಗಾರಕ್ಕೆ ಸಮಾನ. ಆದರೆ ಈ ಮನುಷ್ಯನಿಗೆ ಅವು ಬರಿಯ ಕಲ್ಲಿನ ಚೂರುಗಳಿಗೆ ಸಮಾನ.

## ಶ್ಲೋಕ - 9

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥೯॥**

**ಸುಹೃತ್**—ಸ್ವಭಾವತಃ ಹಿತೈಷಿ; **ಮಿತ್ರ**—ವಾತ್ಸಲ್ಯಯುತ ಉಪಕಾರಿ; **ಅರಿ**—ಶತ್ರು; **ಉದಾಸೀನ**—ವಿರೋಧಿಗಳ ನಡುವೆ ಅಲಿಪ್ತ; **ಮಧ್ಯಸ್ಥ**—ವಿರೋಧಿಗಳ ನಡುವೆ ಮಧ್ಯವರ್ತಿ; **ದ್ವೇಷ್ಯ**—ಅಸೂಯಾಪರರು,; **ಬನ್ಧುಷು**—ಬಂಧುಗಳು ಮತ್ತು ಹಿತೈಷಿಗಳಲ್ಲಿ; **ಸಾಧುಷು**—ಧರ್ಮಶ್ರದ್ಧೆಯುಳ್ಳವರಲ್ಲಿ; **ಅಪಿ**—ಹಾಗೆಯೇ; **ಚ**—ಮತ್ತು; **ಪಾಪೇಷು**—ಪಾಪಿಗಳಲ್ಲಿ; **ಸಮಬುದ್ಧಿಃ**—ಸಮಬುದ್ಧಿಯುಳ್ಳವನು; **ವಿಶಿಷ್ಯತೇ**—ಬಹು ಪ್ರಗತಿಶೀಲನಾಗಿರುತ್ತಾನೆ.

### ಅನುವಾದ

**ಪ್ರಾಮಾಣಿಕ ಹಿತೈಷಿಗಳು, ಪ್ರೀತಿಯ ಮಿತ್ರರು, ಉದಾಸೀನದಿಂದ ಇರುವವರು, ಮಧ್ಯವರ್ತಿಗಳು, ಅಸೂಯಾಪರರು, ಬಂಧುಗಳು, ಶತ್ರುಗಳು, ಸಾಧುಗಳು ಎಲ್ಲರನ್ನೂ ಸಮಭಾವನೆಯಿಂದ ಮನುಷ್ಯನು ಕಾಣಬಲ್ಲವನಾದಾಗ ಆತನನ್ನು ವಿಶೇಷವಾಗಿ ಉನ್ನತನೆಂದು ಪರಿಗಣಿಸುತ್ತಾರೆ.**

## ಶ್ಲೋಕ - 10

**ಯೋಗೀ ಯುಞ್ಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥**

**ಯೋಗೀ**—ಆಧ್ಯಾತ್ಮಿಕವಾದಿಯು; **ಯುಞ್ಜೀತ**—ಕೃಷ್ಣಪ್ರಜ್ಞೆಯಲ್ಲಿ ಏಕಾಗ್ರಗೊಳಿಸಬೇಕು;

**ಸತತಮ್**—ನಿರಂತರವಾಗಿ; **ಆತ್ಮಾನಮ್**—ತನ್ನನ್ನು (ದೇಹ, ಮನಸ್ಸು ಮತ್ತು ಆತ್ಮಗಳಿಂದ); **ರಹಸಿ**—ಏಕಾಂತಸ್ಥಳದಲ್ಲಿ; **ಸ್ಥಿತಃ**—ನೆಲೆಸಿದವನಾಗಿ; **ಏಕಾಕೀ**—ಒಬ್ಬನೇ; **ಯತ ಚಿತ್ತ ಆತ್ಮಾ** —ಮನಸ್ಸಿನಲ್ಲಿ ಸದಾ ಜಾಗ್ರತನಾಗಿ; **ನಿರಾಶೀಃ**—ಬೇರೆಯಾವುದರಿಂದಲೂ ಆಕರ್ಷಿತನಾಗದೆ; **ಅಪರಿಗ್ರಹಃ** —ಸ್ವಾಧೀನತಾಭಾವದಿಂದ ಮುಕ್ತನಾಗಿ.

## ಅನುವಾದ

**ಯೋಗಿಯು ತನ್ನ ದೇಹ, ಮನಸ್ಸು ಮತ್ತು ಆತ್ಮಗಳನ್ನು ಪರಮ ಪ್ರಭುವಿನ ಸಂಬಂಧದಲ್ಲಿ ಸದಾ ತೊಡಗಿಸಬೇಕು. ಆತನು ಏಕಾಂತದಲ್ಲಿ ವಾಸಮಾಡಬೇಕು ಮತ್ತು ಯಾವಾಗಲೂ ಎಚ್ಚರದಿಂದ ತನ್ನ ಮನಸ್ಸನ್ನು ನಿಯಂತ್ರಣದಲ್ಲಿಡಬೇಕು. ಆತನು ಬಯಕೆಗಳಿಂದ ಮತ್ತು ಗಳಿಕೆಯ ಆಸೆಯಿಂದ ಮುಕ್ತನಾಗಿರಬೇಕು.**

## ಭಾವಾರ್ಥ

ಬ್ರಹ್ಮನ್, ಪರಮಾತ್ಮ ಮತ್ತು ದೇವೋತ್ತಮ ಪರಮ ಪುರುಷ ಎಂದು ಬೇರೆಬೇರೆ ಪ್ರಮಾಣಗಳಲ್ಲಿ ಕೃಷ್ಣಸಾಕ್ಷಾತ್ಕಾರವಾಗುತ್ತದೆ. ಸಂಗ್ರಹವಾಗಿ ಹೇಳುವುದಾದರೆ ಕೃಷ್ಣಪ್ರಜ್ಞೆಯೆಂದರೆ ಸದಾ ಭಗವಂತನ ಆಧ್ಯಾತ್ಮಿಕ ಪ್ರೇಮಪೂರ್ವಕ ಸೇವೆಯಲ್ಲಿ ನಿರತನಾಗಿರುವುದು. ಆದರೆ ನಿರಾಕಾರ ಬ್ರಹ್ಮನಲ್ಲಿ ಅಥವಾ ಅಂತರ್ಯಾಮಿ ಪರಮಾತ್ಮನಲ್ಲಿ ಆಸಕ್ತಿ ಇರುವವರೂ ಸಹ ಭಾಗಶಃ ಕೃಷ್ಣಪ್ರಜ್ಞೆ ಇರುವವರೇ. ಏಕೆಂದರೆ ನಿರಾಕಾರ ಬ್ರಹ್ಮವು ಕೃಷ್ಣನ ಆಧ್ಯಾತ್ಮಿಕ ಕಿರಣ ಮತ್ತು ಪರಮಾತ್ಮನು ಕೃಷ್ಣನ ಸರ್ವಾಂತರ್ಯಾಮಿಯಾದ ಸ್ವಾಂಶ ವಿಸ್ತರಣ. ಹೀಗೆ ನಿರಾಕಾರವಾದಿಯೂ ಮತ್ತು ಧ್ಯಾನಯೋಗಿಯೂ ಪರೋಕ್ಷವಾಗಿ ಕೃಷ್ಣಪ್ರಜ್ಞೆ ಇರುವವರೇ. ನೇರವಾಗಿ ಕೃಷ್ಣಪ್ರಜ್ಞೆ ಇರುವ ಮನುಷ್ಯನು ಅತ್ಯುನ್ನತ ಆಧ್ಯಾತ್ಮಿಕವಾದಿ. ಏಕೆಂದರೆ ಇಂತಹ ಭಕ್ತನಿಗೆ ಬ್ರಹ್ಮನ್ ಎಂದರೇನು, ಪರಮಾತ್ಮ ಎಂದರೇನು, ಎಂದು ತಿಳಿದಿದೆ. ಪರಮ ಸತ್ಯದ ಅವನ ಜ್ಞಾನ ಪರಿಪೂರ್ಣವಾಗಿದೆ; ಆದರೆ ನಿರಾಕಾರವಾದಿಯ ಮತ್ತು ಧ್ಯಾನಯೋಗಿಯ ಕೃಷ್ಣಪ್ರಜ್ಞೆಯು ಅಪರಿಪೂರ್ಣವಾಗಿದೆ.

ಆದರೂ ಇಲ್ಲಿ ಇವರೆಲ್ಲರಿಗೂ ತಮ್ಮ ವಿಶಿಷ್ಟ ಅನ್ವೇಷಣೆಗಳಲ್ಲಿ ಸತತವಾಗಿ ತೊಡಗಿರುವಂತೆ ಹೇಳಲಾಗಿದೆ. ಏಕೆಂದರೆ ಅವರು ಶೀಘ್ರವಾಗಿಯೋ ಅಥವಾ ವಿಳಂಬವಾಗಿಯೋ ಅತ್ಯುನ್ನತ ಪರಿಪೂರ್ಣತೆಯನ್ನು ಮುಟ್ಟಲು ಸಾಧ್ಯವಾಗುತ್ತದೆ. ಆಧ್ಯಾತ್ಮಿಕವಾದಿಯ ಮೊದಲನೆಯ ಕೆಲಸವೆಂದರೆ ಮನಸ್ಸನ್ನು ಸದಾ ಕೃಷ್ಣನಲ್ಲಿ ನೆಲೆಗೊಳಿಸುವುದು. ಮನುಷ್ಯನು ನಿರಂತರವಾಗಿ ಕೃಷ್ಣನನ್ನು ಕುರಿತು ಯೋಚಿಸಬೇಕು. ಅವನನ್ನು ಒಂದು ಕ್ಷಣವೂ ಮರೆಯಲಾಗದು. ಪರಮ ಪುರುಷನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದಕ್ಕೆ ಸಮಾಧಿ ಎಂದು ಹೆಸರು. ಮನಸ್ಸನ್ನು ಕೇಂದ್ರೀಕರಿಸಲು ಮನುಷ್ಯನು ಯಾವಾಗಲೂ ಏಕಾಂತವಾಸಿಯಾಗಿರಬೇಕು. ಹೊರಗಿನ ವಸ್ತುಗಳಿಂದ ಕ್ಷೋಭೆಯುಂಟಾಗದಂತೆ ನೋಡಿಕೊಳ್ಳಬೇಕು. ತನ್ನ ಸಾಕ್ಷಾತ್ಕಾರಕ್ಕೆ ಸಹಕಾರಿಯಾದದ್ದನ್ನು ಸ್ವೀಕರಿಸಲು ಮತ್ತು ಅನನುಕೂಲವಾದದ್ದನ್ನು ತಿರಸ್ಕರಿಸಲು ಅವನು ಸದಾ ಎಚ್ಚರದಿಂದಿರಬೇಕು. ಹಲವು ಅನಗತ್ಯವಾದ ಐಹಿಕ ವಸ್ತುಗಳು ಮನುಷ್ಯನಲ್ಲಿ ಒಡೆತನದ ಭಾವನೆಗಳನ್ನು ಉಂಟುಮಾಡುತ್ತವೆ. ಪರಿಪೂರ್ಣ ದೃಢ ಸಂಕಲ್ಪ ಮಾಡಿ ಆತನು ಇವುಗಳ ಬಯಕೆಯನ್ನು ದೂರವಿಡಬೇಕು.

ಈ ಎಲ್ಲ ಪರಿಪೂರ್ಣತೆಗಳನ್ನೂ ಮುನ್ನೆಚ್ಚರಿಕೆಗಳನ್ನೂ ಮನುಷ್ಯನು ನೇರವಾಗಿ ಕೃಷ್ಣಪ್ರಜ್ಞೆಯಲ್ಲಿದ್ದಾಗ ಸಂಪೂರ್ಣವಾಗಿ ಕಾರ್ಯಗತಮಾಡಬಹುದು. ಏಕೆಂದರೆ ನೇರ ಕೃಷ್ಣಪ್ರಜ್ಞೆ ಎಂದರೆ ಆತ್ಮತ್ಯಾಗ; ಇದರಲ್ಲಿ ಐಹಿಕ ಗಳಿಕೆಯ ಬಯಕೆಗೆ ಅವಕಾಶವೇ ಇಲ್ಲ. ಶ್ರೀ ರೂಪ ಗೋಸ್ವಾಮಿಯವರು ಕೃಷ್ಣಪ್ರಜ್ಞೆಯ ಲಕ್ಷಣಗಳನ್ನು ಹೀಗೆ ಹೇಳುತ್ತಾರೆ —

**ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ |**
**ನಿರ್ಬನ್ಧಃ ಕೃಷ್ಣಸಂಬನ್ಧೇ ಯುಕ್ತಂ ವೈರಾಗ್ಯಮುಚ್ಯತೇ ||**

**ಪ್ರಾಪಞ್ಚಿಕತಯಾ ಬುದ್ಧ್ಯಾ ಹರಿಸಮ್ಬನ್ಧಿ ವಸ್ತುನಃ |**
**ಮುಮುಕ್ಷುಭಿಃ ಪರಿತ್ಯಾಗೋ ವೈರಾಗ್ಯಂ ಫಲ್ಗು ಕಥ್ಯತೇ ||**

"ಮನುಷ್ಯನು ಯಾವುದಕ್ಕೂ ಅಂಟಿಕೊಳ್ಳದಿದ್ದಾಗ ಆದರೆ ಎಲ್ಲವನ್ನೂ ಕೃಷ್ಣಸಂಬಂಧದಲ್ಲಿ ಸ್ವೀಕರಿಸಿದಾಗ ಆತನು ಸರಿಯಾದ ರೀತಿಯಲ್ಲಿ ಗಳಿಕೆಯ ಹಂಬಲವನ್ನು ಮೀರಿದವನಾಗುತ್ತಾನೆ. ಅದರ ಬದಲು ಪ್ರತಿಯೊಂದನ್ನೂ ಅದಕ್ಕೆ ಕೃಷ್ಣನೊಡನಿರುವ ಸಂಬಂಧವನ್ನು ತಿಳಿಯದೆ ತಿರಸ್ಕರಿಸುವವನು ತ್ಯಾಗದಲ್ಲಿ ಅಷ್ಟು ಪರಿಪೂರ್ಣನಲ್ಲ." (ಭಕ್ತಿರಸಾಮೃತಸಿಂಧು 2.255-256)

ಕೃಷ್ಣಪ್ರಜ್ಞೆಯಿರುವ ಮನುಷ್ಯನಿಗೆ ಎಲ್ಲವೂ ಕೃಷ್ಣನಿಗೆ ಸೇರಿದ್ದು ಎನ್ನುವುದು ಚೆನ್ನಾಗಿ ತಿಳಿದಿರುತ್ತದೆ. ಆದ್ದರಿಂದ ಯಾವ ವಸ್ತುವೇ ಆದರೂ ತನಗೆ ಸೇರಿದ್ದು ಎನ್ನುವ ಭಾವನೆಗಳಿಂದ ಮುಕ್ತನಾಗಿರುತ್ತಾನೆ. ಹೀಗಿರುವಾಗ ತನಗೆ ಬೇಕೆಂಬ ಕಾರಣಕ್ಕಾಗಿ ಆತನು ಯಾವುದಕ್ಕೂ ಹಂಬಲಿಸುವುದಿಲ್ಲ. ಕೃಷ್ಣಪ್ರಜ್ಞೆಗೆ ಅನುಕೂಲವಾದ ವಸ್ತುಗಳನ್ನು ಹೇಗೆ ಸ್ವೀಕರಿಸಬೇಕು ಮತ್ತು ಕೃಷ್ಣಪ್ರಜ್ಞೆಗೆ ಪ್ರತಿಕೂಲವಾದ ವಸ್ತುಗಳನ್ನು ಹೇಗೆ ತಿರಸ್ಕರಿಸಬೇಕು ಎಂದು ಆತನಿಗೆ ತಿಳಿದಿರುತ್ತದೆ. ಆತನು ಐಹಿಕ ವಸ್ತುಗಳಿಂದ ಸದಾ ದೂರವಾಗಿರುತ್ತಾನೆ. ಏಕೆಂದರೆ ಆತನು ಸದಾ ಆಧ್ಯಾತ್ಮಿಕ ಸ್ಥಿತಿಯಲ್ಲಿರುತ್ತಾನೆ. ಕೃಷ್ಣಪ್ರಜ್ಞೆ ಇಲ್ಲದಿರುವವರೊಂದಿಗೆ ಅವನಿಗೆ ಯಾವುದೇ ಸಂಬಂಧವಿಲ್ಲದಿರುವುದರಿಂದ ಅವನು ಯಾವಾಗಲೂ ಏಕಾಕಿ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಪರಿಪೂರ್ಣ ಯೋಗಿ.

## ಶ್ಲೋಕ 11-12

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ |**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ||೧೧||**

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇನ್ದ್ರಿಯಕ್ರಿಯಃ |**
**ಉಪವಿಶ್ಯಾಸನೇ ಯುಞ್ಜ್ಯಾದ್ ಯೋಗಮಾತ್ಮವಿಶುದ್ಧಯೇ ||೧೨||**

**ಶುಚೌ**—ಶುದ್ಧವಾದ; **ದೇಶೇ**—ಭೂಮಿಯಲ್ಲಿ; **ಪ್ರತಿಷ್ಠಾಪ್ಯ**—ಇರಿಸಿ; **ಸ್ಥಿರಮ್**—ಸ್ಥಿರವಾಗಿ; **ಆಸನಮ್**—ಆಸನವನ್ನು; **ಆತ್ಮನಃ**—ತನ್ನ; **ನ**—ಅಲ್ಲದ; **ಅತಿ**—ಬಹಳ; **ಉಚ್ಛ್ರಿತಮ್**—ಎತ್ತರವಾದದ್ದು; **ನ**—ಅಲ್ಲದ; **ಅತಿ**—ಬಹಳ; **ನೀಚಮ್**—ತಗ್ಗಾದದ್ದು; **ಚೈಲ ಅಜಿನ**—ಮೃದುವಾದ ಬಟ್ಟೆ ಮತ್ತು ಜಿಂಕೆಯ ಚರ್ಮ; **ಕುಶ**—ಮತ್ತು ದರ್ಭೆಗಳನ್ನು; **ಉತ್ತರಮ್**— ಹೊದಿಸಿದ; **ತತ್ರ**—

ಅದರ ಮೇಲೆ; **ಏಕ ಅಗ್ರಮ್**—ಏಕಾಗ್ರವಾಗಿ; **ಮನಃ**—ಮನಸ್ಸನ್ನು; **ಕೃತ್ವಾ**— ಮಾಡಿ; **ಯತ ಚಿತ್ತ**—ನಿಯಂತ್ರಿಸಿದ ಮನಸ್ಸು; **ಇನ್ದ್ರಿಯ**—ಇಂದ್ರಿಯಗಳ; **ಕ್ರಿಯಃ**— ಕ್ರಿಯೆಗಳುಳ್ಳವನಾಗಿ; **ಉಪವಿಶ್ಯ**—ಕುಳಿತು; **ಆಸನೇ**—ಆಸನದಲ್ಲಿ; **ಯುಞ್ಜ್ಯಾತ್**—ಆಚರಿಸಬೇಕು; **ಯೋಗಮ್**—ಯೋಗಾಭ್ಯಾಸವನ್ನು; **ಆತ್ಮ**—ಹೃದಯ; **ವಿಶುದ್ಧಯೇ**—ಶುದ್ಧಿಗಾಗಿ.

## ಅನುವಾದ

**ಯೋಗಾಭ್ಯಾಸ ಮಾಡಲು ಏಕಾಂತವಾದ ಸ್ಥಳಕ್ಕೆ ಹೋಗಬೇಕು. ನೆಲದ ಮೇಲೆ ದರ್ಭೆಯನ್ನು ಇಟ್ಟು, ಅದನ್ನು ಜಿಂಕೆಯ ಚರ್ಮ ಮತ್ತು ಮೃದುವಾದ ಬಟ್ಟೆಯಿಂದ ಮುಚ್ಚಬೇಕು. ಪೀಠವು ಬಹಳ ಎತ್ತರವಾಗಿಯೂ ಇರಬಾರದು, ಬಹಳ ತಗ್ಗಾಗಿಯೂ ಇರಬಾರದು ಮತ್ತು ಅದು ಪವಿತ್ರವಾದ ಸ್ಥಳದಲ್ಲಿರಬೇಕು. ಯೋಗಿಯು ಅದರ ಮೇಲೆ ದೃಢವಾಗಿ ಕುಳಿತು ತನ್ನ ಮನಸ್ಸನ್ನೂ ಇಂದ್ರಿಯಗಳನ್ನೂ ಮತ್ತು ಕಾರ್ಯಗಳನ್ನು ನಿಗ್ರಹಿಸಿ ಮನಸ್ಸನ್ನು ಒಂದು ಬಿಂದುವಿನಲ್ಲಿ ಕೇಂದ್ರೀಕರಿಸಿ ಹೃದಯವನ್ನು ಶುದ್ಧೀಕರಿಸಲು ಯೋಗಾಭ್ಯಾಸ ಮಾಡಬೇಕು.**

## ಭಾವಾರ್ಥ

ಪವಿತ್ರಸ್ಥಳ ಎಂದರೆ ಯಾತ್ರಾಸ್ಥಳಗಳು. ಭಾರತದಲ್ಲಿ ಯೋಗಿಗಳು, ಆಧ್ಯಾತ್ಮಿಕವಾದಿಗಳು ಅಥವಾ ಭಕ್ತರು ಎಲ್ಲರೂ ಮನೆಯನ್ನು ಬಿಟ್ಟು ಪ್ರಯಾಗ, ಮಥುರಾ, ವೃಂದಾವನ, ಹೃಷೀಕೇಶ ಮತ್ತು ಹರಿದ್ವಾರಗಳಂತಹ ಪುಣ್ಯಕ್ಷೇತ್ರಗಳಲ್ಲಿ ವಾಸಮಾಡುತ್ತಾರೆ. ಯಮುನಾ ಮತ್ತು ಗಂಗಾಗಳಂತಹ ಪವಿತ್ರ ನದಿಗಳು ಹರಿಯುವೆಡೆ ಏಕಾಂತದಲ್ಲಿ ಯೋಗಾಭ್ಯಾಸ ಮಾಡುತ್ತಾರೆ. ಆದರೆ ಬಹುಬಾರಿ ಅದರಲ್ಲಿಯೂ ಪಾಶ್ಚಾತ್ಯರಿಗೆ ಇದು ಸಾಧ್ಯವಾಗುವುದಿಲ್ಲ. ದೊಡ್ಡನಗರಗಳಲ್ಲಿ ಯೋಗಸಂಸ್ಥೆಗಳೆಂದು ಕರೆದುಕೊಳ್ಳುವ ಸಂಸ್ಥೆಗಳು ಪ್ರಾಪಂಚಿಕ ಲಾಭ ಪಡೆಯುವುದರಲ್ಲಿ ಯಶಸ್ವಿಯಾಗಬಹುದು. ಆದರೆ ವಾಸ್ತವವಾಗಿ ಯೋಗಾಭ್ಯಾಸ ಮಾಡಲು ಅವು ಸಮರ್ಪಕವಲ್ಲ. ಮನೋನಿಗ್ರಹವಿಲ್ಲದವರು, ಮನೋಕ್ಷೋಭೆಯುಳ್ಳವರು ಧ್ಯಾನವನ್ನು ಮಾಡಲಾರರು. ಈಗಿನ ಕಲಿಯುಗದಲ್ಲಿ ಸಾಮಾನ್ಯವಾಗಿ ಜನರ ಆಯುಸ್ಸು ಕಡಮೆಯಾಗಿರುತ್ತದೆ. ಅವರು ಆಧ್ಯಾತ್ಮಿಕ ಸಾಕ್ಷಾತ್ಕಾರ ಪಡೆಯುವುದರಲ್ಲಿ ಸೋಮಾರಿಗಳು ಮತ್ತು ಹಲವಾರು ಆತಂಕಗಳು ಸದಾ ಅವರ ಮನಸ್ಸನ್ನು ಕಲಕುತ್ತಿರುತ್ತವೆ. ಇಂತಹ ಯುಗದಲ್ಲಿ ಆತ್ಮಸಾಕ್ಷಾತ್ಕಾರಕ್ಕೆ ಅತ್ಯುತ್ತಮ ಮಾರ್ಗ ಭಗವಂತನ ಪವಿತ್ರನಾಮದ ಸಂಕೀರ್ತನೆ ಎಂದು ಬೃಹನ್ನಾರದೀಯ ಪುರಾಣದಲ್ಲಿ ಹೇಳಿದೆ.

**ಹರೇರ್ ನಾಮ ಹರೇರ್ ನಾಮ ಹರೇರ್ ನಾಮೈವ ಕೇವಲಮ್ |**
**ಕಲೌ ನಾಸ್ತಿ ಏವ ನಾಸ್ತಿ ಏವ ನಾಸ್ತಿ ಏವ ಗತಿರ್ ಅನ್ಯಥಾ ||**

"ಕಲಹ ಮತ್ತು ಕಪಟದ ಈ ಯುಗದಲ್ಲಿ ಭಗವಂತನ ಪವಿತ್ರನಾಮ ಸಂಕೀರ್ತನೆಯೊಂದೇ ಉದ್ಧಾರದ ಮಾರ್ಗ. ಬೇರೆ ಮಾರ್ಗವೇ ಇಲ್ಲ, ಬೇರೆ ಮಾರ್ಗವೇ ಇಲ್ಲ, ಬೇರೆ ಮಾರ್ಗವೇ ಇಲ್ಲ."

## ಶ್ಲೋಕ 13-14

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ |**
**ಸಮ್ಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ||೧೩||**

**ಪ್ರಶಾನ್ತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ |**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ||೧೪||**

**ಸಮಮ್**—ನೇರವಾಗಿ; **ಕಾಯ**—ಶರೀರ; **ಶಿರಃ**—ತಲೆ; **ಗ್ರೀವಮ್**—ಮತ್ತು ಕತ್ತನ್ನು; **ಧಾರಯನ್**—ನಿಲ್ಲಿಸಿ; **ಅಚಲಮ್**—ಚಲಿಸದೆ; **ಸ್ಥಿರಃ**—ನಿಶ್ಚಲವಾಗಿ; **ಸಮ್ಪ್ರೇಕ್ಷ್ಯ**—ನೋಡುತ್ತಾ; **ನಾಸಿಕಾ**—ಮೂಗಿನ; **ಅಗ್ರಮ್**—ತುದಿಯನ್ನು; **ಸ್ವಮ್**—ತನ್ನ; **ದಿಶಃ**—ಎಲ್ಲ ದಿಕ್ಕುಗಳನ್ನು; **ಚ**—ಕೂಡಾ; **ಅನವಲೋಕಯನ್**—ನೋಡದೆ; **ಪ್ರಶಾನ್ತ**—ಅನುದ್ವಿಗ್ನವಾದ; **ಆತ್ಮಾ**— ಮನಸ್ಸುಳ್ಳವನಾಗಿ; **ವಿಗತ ಭೀಃ**—ಭಯರಹಿತನಾಗಿ; **ಬ್ರಹ್ಮಚಾರಿವ್ರತೇ**—ಬ್ರಹ್ಮಚರ್ಯವ್ರತದಲ್ಲಿ; **ಸ್ಥಿತಃ**—ನೆಲೆಸಿದವನಾಗಿ; **ಮನಃ**—ಮನಸ್ಸನ್ನು; **ಸಂಯಮ್ಯ**—ಸಂಪೂರ್ಣವಾಗಿ ನಿಗ್ರಹಿಸಿ; **ಮತ್**—ನನ್ನ ಮೇಲೆ (ಕೃಷ್ಣನ ಮೇಲೆ); **ಚಿತ್ತಃ**—ಮನಸ್ಸನ್ನು ಕೇಂದ್ರೀಕರಿಸಿದವನಾಗಿ; **ಯುಕ್ತಃ**—ವಾಸ್ತವಿಕ ಯೋಗಿಯು; **ಆಸೀತ್**—ಕುಳಿತುಕೊಳ್ಳಬೇಕು; **ಮತ್**—ನನ್ನನ್ನು; **ಪರಃ**—ಅಂತಿಮ ಗುರಿಯಾಗಿರಿಸಿದವನಾಗಿ.

### ಅನುವಾದ

**ದೇಹ, ಕುತ್ತಿಗೆ ಮತ್ತು ಶಿರಸ್ಸುಗಳನ್ನು ಒಂದು ಪಂಕ್ತಿಯಲ್ಲಿ ಸ್ಥಿರವಾಗಿರಿಸಿಕೊಂಡು ಮೂಗಿನ ತುದಿಯನ್ನು ಒಂದೇ ಸಮನೆ ದೃಷ್ಟಿಸಬೇಕು. ಪ್ರಶಾಂತಾತ್ಮನಾಗಿ, ನಿರ್ಭಯವಾಗಿ, ಬ್ರಹ್ಮಚಾರಿಯಾಗಿ ಹೃದಯದಲ್ಲಿ ನನ್ನನ್ನೇ ಧ್ಯಾನ ಮಾಡಬೇಕು ಮತ್ತು ನನ್ನನ್ನೇ ಜೀವನದ ಅಂತಿಮ ಗುರಿಯಾಗಿ ಮಾಡಿಕೊಳ್ಳಬೇಕು.**

### ಭಾವಾರ್ಥ

ಕೃಷ್ಣನನ್ನು ತಿಳಿದುಕೊಳ್ಳುವುದೇ ಬದುಕಿನ ಗುರಿ. ಆತನು ಪರಮಾತ್ಮನಾಗಿ, ಚತುರ್ಭುಜನಾದ ವಿಷ್ಣುವಿನ ರೂಪದಲ್ಲಿ ಪ್ರತಿಯೊಂದು ಜೀವಿಯ ಹೃದಯದಲ್ಲಿಯೂ ನೆಲೆಸಿದ್ದಾನೆ. ಯೋಗ ಪ್ರಕ್ರಿಯೆಯನ್ನು ಅಭ್ಯಾಸ ಮಾಡುವುದರ ಉದ್ದೇಶವು ಹೃದಯಸ್ಥನಾದ ಈ ವಿಷ್ಣುವಿನ ಅಂತರ್ಯಾಮಿ ರೂಪವನ್ನು ಕಂಡುಕೊಂಡು ನೋಡುವುದು, ಮತ್ತೇನೂ ಅಲ್ಲ. ಈ ವಿಷ್ಣುಮೂರ್ತಿಯು ಮನುಷ್ಯನ ಹೃದಯದಲ್ಲಿರುವ ಕೃಷ್ಣನ ಸ್ವಾಂಶ ಪ್ರತಿನಿಧಿ. ಈ ವಿಷ್ಣುಮೂರ್ತಿಯ ಸಾಕ್ಷಾತ್ಕಾರದ ಉದ್ದೇಶವಿಲ್ಲದವನು ಅಣಕು ಯೋಗಾಭ್ಯಾಸದಲ್ಲಿ ತೊಡಗಿರುತ್ತಾನೆ, ನಿಶ್ಚಯವಾಗಿಯೂ ಕಾಲವನ್ನು ವ್ಯರ್ಥಮಾಡುತ್ತಿದ್ದಾನೆ. ಕೃಷ್ಣನೇ ಬದುಕಿನ ಕಟ್ಟಕಡೆಯ ಗುರಿ. ಹೃದಯದಲ್ಲಿ ನೆಲೆಸಿರುವ ವಿಷ್ಣುಮೂರ್ತಿಯು ಯೋಗಾಭ್ಯಾಸದ ಗುರಿ. ಹೃದಯದೊಳಗಿರುವ ಈ ವಿಷ್ಣುಮೂರ್ತಿಯ ಸಾಕ್ಷಾತ್ಕಾರವನ್ನು ಸಾಧಿಸಲು ಮನುಷ್ಯನು ಸಂಪೂರ್ಣವಾಗಿ ಲೈಂಗಿಕ ಜೀವನದಿಂದ ಮುಕ್ತನಾಗಿರಬೇಕು. ಆದುದರಿಂದ ಮನುಷ್ಯನು ತನ್ನ ಮನೆಯನ್ನು ಬಿಟ್ಟು ಒಬ್ಬನೇ ಏಕಾಂತ ಸ್ಥಳದಲ್ಲಿ ವಾಸಿಸಬೇಕು. ಮೇಲೆ ಹೇಳಿರುವಂತೆ ಕುಳಿತುಕೊಳ್ಳಬೇಕು. ಮನುಷ್ಯನು ಮನೆಯಲ್ಲಿ ಅಥವಾ ಬೇರೆಲ್ಲಿಯಾದರೂ ಕಾಮಸುಖವನ್ನು

ಪಡೆದುಕೊಂಡು ಯೋಗ ತರಗತಿ ಎಂದು ಕರೆಸಿಕೊಳ್ಳುವ ತರಗತಿಗೆ ಹಾಜರಾಗಿ ಯೋಗಿಯಾಗುವುದು ಸಾಧ್ಯವಿಲ್ಲ. ಮನುಷ್ಯನು ಮನಸ್ಸಿನ ನಿಯಂತ್ರಣವನ್ನು ಮತ್ತು ಎಲ್ಲ ಬಗೆಯ ಇಂದ್ರಿಯತೃಪ್ತಿಯನ್ನು — ಇದರಲ್ಲಿ ಕಾಮ ಜೀವನವೇ ಮುಖ್ಯವಾದದ್ದು — ತಪ್ಪಿಸುವುದನ್ನು ಅಭ್ಯಾಸಮಾಡಬೇಕು. ಮಹರ್ಷಿ ಯಾಜ್ಞವಲ್ಕ್ಯ ಬರೆದ ಬ್ರಹ್ಮಚರ್ಯದ ನಿಯಮಗಳಲ್ಲಿ ಹೀಗೆ ಹೇಳಿದೆ —

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ |**
**ಸರ್ವತ್ರ ಮೈಥುನತ್ಯಾಗೋ ಬ್ರಹ್ಮಚರ್ಯಂ ಪ್ರಚಕ್ಷತೇ ||**

"ಮನುಷ್ಯನು ಎಲ್ಲ ಕಾಲಗಳಲ್ಲಿಯೂ, ಎಲ್ಲ ಸನ್ನಿವೇಶಗಳಲ್ಲಿಯೂ, ಎಲ್ಲ ಸ್ಥಳಗಳಲ್ಲಿಯೂ ಕಾಯಾ ವಾಚಾ ಮನಸಾ ಕಾಮಭೋಗವನ್ನು ಸಂಪೂರ್ಣವಾಗಿ ವರ್ಜಿಸಲು ನೆರವಾಗುವುದು ಬ್ರಹ್ಮಚರ್ಯ ವ್ರತದ ಉದ್ದೇಶ." ಕಾಮಲಂಪಟತೆಯ ಮೂಲಕ ಯಾರೂ ಸರಿಯಾಗಿ ಯೋಗಾಭ್ಯಾಸ ಮಾಡಲು ಸಾಧ್ಯವಿಲ್ಲ. ಆದ್ದರಿಂದಲೇ, ಕಾಮ ಜೀವನದ ಅರಿವೇ ಇಲ್ಲದ ಬಾಲ್ಯದಿಂದಲೂ ಬ್ರಹ್ಮಚರ್ಯವನ್ನು ಬೋಧಿಸಲಾಗುತ್ತದೆ. ಐದು ವರ್ಷದ ಮಕ್ಕಳನ್ನು ಗುರುಕುಲಕ್ಕೆ ಕಳುಹಿಸಿಕೊಡುತ್ತಾರೆ. ಗುರುವು ಪುಟ್ಟ ಬಾಲಕರಿಗೆ ಬ್ರಹ್ಮಚರ್ಯದ ಕಟ್ಟುನಿಟ್ಟಿನ ಶಿಸ್ತನ್ನು ಕಲಿಸುತ್ತಾನೆ. ಇಂತಹ ಅಭ್ಯಾಸವಿಲ್ಲದೆ ಧ್ಯಾನ, ಜ್ಞಾನ ಅಥವಾ ಭಕ್ತಿ — ಯಾವುದೇ ಯೋಗದಲ್ಲಿ ಪ್ರಗತಿ ಸಾಧ್ಯವಿಲ್ಲ. ಆದರೆ ವಿವಾಹಿತ ಜೀವನದ ನಿಯಮ ನಿಬಂಧನೆಗಳನ್ನು ಅನುಸರಿಸುತ್ತ ತನ್ನ ಹೆಂಡತಿಯೊಡನೆ ಮಾತ್ರ (ಅದೂ ನಿಯಮಕ್ಕನುಗುಣವಾಗಿ) ಲೈಂಗಿಕ ಜೀವನವನ್ನು ಹೊಂದಿರುವವನನ್ನು ಬ್ರಹ್ಮಚಾರಿ ಎಂದೇ ಕರೆಯುತ್ತಾರೆ. ಇಂತಹ ಸಂಯಮಯುತ ಗೃಹಸ್ಥ ಬ್ರಹ್ಮಚಾರಿಯನ್ನು ಭಕ್ತಿಪಂಥದಲ್ಲಿ ಒಪ್ಪಿಕೊಳ್ಳಬಹುದು. ಆದರೆ ಜ್ಞಾನ ಮತ್ತು ಧ್ಯಾನಪಂಥಗಳು ಗೃಹಸ್ಥ ಬ್ರಹ್ಮಚಾರಿಗಳನ್ನು ಸೇರಿಸಿಕೊಳ್ಳುವುದಿಲ್ಲ. ಅವು ಸ್ವಲ್ಪವೂ ರಾಜಿಯಿಲ್ಲದೆ ಸಂಪೂರ್ಣ ವರ್ಜನೆಯನ್ನು ಬಯಸುತ್ತವೆ. ಭಕ್ತಿಪಂಥದಲ್ಲಿ ಗೃಹಸ್ಥ ಬ್ರಹ್ಮಚಾರಿಗೆ ನಿಯಂತ್ರಿತ ಕಾಮಜೀವನಕ್ಕೆ ಅವಕಾಶವುಂಟು. ಏಕೆಂದರೆ ಭಕ್ತಿಯೋಗವು ಎಷ್ಟು ಶಕ್ತಿಶಾಲಿಯೆಂದರೆ ಮನುಷ್ಯನು ಶ್ರೇಷ್ಠನಾದ ಪರಮಾತ್ಮನ ಸೇವೆಯಲ್ಲಿ ತೊಡಗಿರುವುದರಿಂದ ತಂತಾನೇ ಕಾಮದ ಆಕರ್ಷಣೆಯನ್ನು ಕಳೆದುಕೊಳ್ಳುತ್ತಾನೆ. ಭಗವದ್ಗೀತೆಯಲ್ಲಿ (2.59) ಹೀಗೆ ಹೇಳಿದೆ —

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ |**
**ರಸವರ್ಜಂ ರಸೋऽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ||**

ಇತರರು ಕಷ್ಟಪಟ್ಟು ಇಂದ್ರಿಯಭೋಗವನ್ನು ತಡೆಹಿಡಿಯಬೇಕಾಗಿರುತ್ತದೆ. ಪರಮಾತ್ಮನ ಭಕ್ತನು ತನ್ನ ಶ್ರೇಷ್ಠ ಅಭಿರುಚಿಯಿಂದ ನಿರಾಯಾಸವಾಗಿ ಅದನ್ನು ದೂರವಿಡುತ್ತಾನೆ. ಭಕ್ತನಲ್ಲದೆ ಬೇರಾರಿಗೂ ಆ ಶ್ರೇಷ್ಠ ಸವಿಯ ತಿಳುವಳಿಕೆ ಒಂದಿಷ್ಟೂ ಇರುವುದಿಲ್ಲ.

**ವಿಗತಭೀಃ** ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ಇಲ್ಲದಿರುವ ಮನುಷ್ಯನು ನಿರ್ಭಯನಾಗಿರಲು ಸಾಧ್ಯವಿಲ್ಲ. ತನ್ನ ವಕ್ರ ಸ್ಮರಣೆಯಿಂದಾಗಿ, ಕೃಷ್ಣನೊಡನೆ ತನ್ನ ನಿರಂತರ ಸಂಬಂಧವನ್ನು ಮರೆತಿದ್ದರಿಂದಾಗಿ ಬದ್ಧ ಆತ್ಮವು ಭಯದಿಂದ ತುಂಬಿರುತ್ತದೆ. ಭಾಗವತವು (11.2.37) **ಭಯಂ ದ್ವಿತೀಯಾಭಿನಿವೇಶತಃ ಸ್ಯಾದೀಶಾದ್ ಅಪೇತಸ್ಯ ವಿಪರ್ಯಯೋऽಸ್ಮೃತಿಃ** ಎಂದು ಹೇಳುತ್ತದೆ. ನಿರ್ಭೀತಿಗೆ ಕೃಷ್ಣಪ್ರಜ್ಞೆಯೊಂದೇ ಆಧಾರ. ಆದುದರಿಂದ ಕೃಷ್ಣಪ್ರಜ್ಞೆ ಇರುವವನಿಗೆ ಪರಿಪೂರ್ಣ ಅಭ್ಯಾಸವು ಸಾಧ್ಯ. ಯೋಗಾಭ್ಯಾಸದ ಅಂತಿಮಗುರಿಯು ಒಳಗಿರುವ ಭಗವಂತನನ್ನು

ಕಾಣುವುದಾದ್ದರಿಂದ ಕೃಷ್ಣಪ್ರಜ್ಞೆಯಿರುವವನು ಆಗಲೇ ಯೋಗಿಶ್ರೇಷ್ಠನಾಗಿದ್ದಾನೆ. ಇಲ್ಲಿ ಹೇಳಿರುವ ಯೋಗ ಪದ್ಧತಿಯ ತತ್ವಗಳು ಯೋಗ ಸಂಘಗಳೆಂದು ಕರೆಸಿಕೊಳ್ಳುವ ಸಂಸ್ಥೆಗಳ ತತ್ವಗಳಿಂದ ಭಿನ್ನವಾಗಿವೆ.

## ಶ್ಲೋಕ - 15

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ |**
**ಶಾನ್ತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ||೧೫||**

**ಯುಞ್ಜನ್**—ಅಭ್ಯಾಸಮಾಡುತ್ತಾ; **ಏವಮ್**—ಮೇಲೆ ಹೇಳಿದಂತೆ; **ಸದಾ**—ನಿರಂತರವಾಗಿ; **ಆತ್ಮಾನಮ್**—ದೇಹ, ಮನಸ್ಸು ಮತ್ತು ಆತ್ಮವನ್ನು; **ಯೋಗೀ**—ಆಧ್ಯಾತ್ಮಿಕವಾದಿಯು; **ನಿಯತ ಮಾನಸಃ**—ನಿಯಂತ್ರಿತ ಮನಸ್ಸುಳ್ಳ; **ಶಾನ್ತಿಮ್**—ಶಾಂತಿಯನ್ನು; **ನಿರ್ವಾಣಪರಮಾಮ್** —ಭೌತಿಕ ಅಸ್ತಿತ್ವದ ನಿಲುಗಡೆಯನ್ನು; **ಮತ್ ಸಂಸ್ಥಾಮ್**—ಪರವ್ಯೋಮ (ಭಗವದ್ಧಾಮ)ವನ್ನು; **ಅಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಹೀಗೆ ದೇಹ, ಮನಸ್ಸು ಮತ್ತು ಕಾರ್ಯಗಳ ನಿರಂತರ ನಿಯಂತ್ರಣವನ್ನು ಅಭ್ಯಾಸ ಮಾಡುತ್ತ ಯೋಗಿಯು ತನ್ನ ಮನಸ್ಸನ್ನು ನಿಯತಗೊಳಿಸಿಕೊಂಡು ಭಗವಂತನ ರಾಜ್ಯವನ್ನು (ಅಥವಾ ಕೃಷ್ಣನ ನಿವಾಸವನ್ನು) ಐಹಿಕ ಅಸ್ತಿತ್ವದ ಅಂತ್ಯದ ಮೂಲಕ ಪಡೆಯುತ್ತಾನೆ.**

## ಭಾವಾರ್ಥ

ಯೋಗಾಭ್ಯಾಸದ ಅಂತಿಮ ಗುರಿಯನ್ನು ಈಗ ಸ್ಪಷ್ಟವಾಗಿ ವಿವರಿಸಿದೆ. ಯೋಗಾಭ್ಯಾಸದ ಗುರಿ ಯಾವುದೇ ಐಹಿಕ ಸೌಲಭ್ಯವಲ್ಲ . ಅದರ ಗುರಿ ಎಲ್ಲ ಐಹಿಕ ಅಸ್ತಿತ್ವವನ್ನು ಕೊನೆಗಾಣಿಸುವುದು. ಭಗವದ್ಗೀತೆಯ ಪ್ರಕಾರ, ಆರೋಗ್ಯವನ್ನು ಉತ್ತಮಗೊಳಿಸಿಕೊಳ್ಳಲು ಬಯಸುವವನು ಅಥವಾ ಐಹಿಕ ಪರಿಪೂರ್ಣತೆಯನ್ನು ಬಯಸುವವನು ಯೋಗಿಯಲ್ಲ. ಐಹಿಕ ಅಸ್ತಿತ್ವವು ಕೊನೆಗಾಣುವುದೆಂದರೆ ಶೂನ್ಯವನ್ನು ಪ್ರವೇಶಿಸುವುದು ಅಲ್ಲ; ಶೂನ್ಯವು ಬರಿಯ ಕಟ್ಟುಕತೆ. ಭಗವಂತನ ಸೃಷ್ಟಿಯಲ್ಲಿ ಎಲ್ಲಿಯೂ ಶೂನ್ಯವಿಲ್ಲ. ಐಹಿಕ ಅಸ್ತಿತ್ವದ ಅಂತ್ಯದಿಂದ ಮನುಷ್ಯನು ಭಗವಂತನ ನಿವಾಸವಾದ ಆಧ್ಯಾತ್ಮಿಕ ಗಗನವನ್ನು ಪ್ರವೇಶಿಸುವುದು ಸಾಧ್ಯವಾಗುತ್ತದೆ. ಭಗವದ್ಗೀತೆಯು ಭಗವಂತನ ನಿವಾಸವನ್ನು ಸೂರ್ಯ, ಚಂದ್ರ ಅಥವಾ ವಿದ್ಯುಚ್ಛಕ್ತಿ ಯಾವುದರ ಅಗತ್ಯವೂ ಇಲ್ಲದ ಸ್ಥಳ ಎಂದು ಸ್ಪಷ್ಟವಾಗಿ ವರ್ಣಿಸಿದೆ. ಆಧ್ಯಾತ್ಮಿಕ ರಾಜ್ಯದಲ್ಲಿ ಎಲ್ಲ ಗ್ರಹಗಳಿಗೂ, ಐಹಿಕ ಗಗನದಲ್ಲಿ ಸೂರ್ಯನಿಗಿರುವಂತೆ, ಸ್ವಯಂಪ್ರಕಾಶವಿದೆ. ಭಗವಂತನ ರಾಜ್ಯವು ಎಲ್ಲೆಲ್ಲಿಯೂ ಇದೆ. ಆದರೆ ಆಧ್ಯಾತ್ಮಿಕ ಗಗನವನ್ನು ಮತ್ತು ಗ್ರಹಗಳನ್ನು **ಪರಂಧಾಮ** ಎಂದು ಕರೆಯುತ್ತಾರೆ.

ಇಲ್ಲಿ ಭಗವಂತನೇ ಸ್ಪಷ್ಟವಾಗಿ ಹೇಳಿರುವಂತೆ (**ಮತ್‌ಚಿತ್ತಃ ಮತ್‌ಪರಃ, ಮತ್‌ಸ್ಥಾನಮ್**) ಶ್ರೀಕೃಷ್ಣನನ್ನು ಅರ್ಥಮಾಡಿಕೊಳ್ಳುವುದರಲ್ಲಿ ಪರಿಪೂರ್ಣನಾದ ಯೋಗಿಯು ನಿಜವಾದ ಶಾಂತಿಯನ್ನು ಪಡೆಯಬಲ್ಲ ಮತ್ತು ಅವನ ಪರಂಧಾಮವಾದ ಕೃಷ್ಣಲೋಕವನ್ನು ಅಥವಾ

ಗೋಲೋಕ ವೃಂದಾವನವನ್ನು ಕಟ್ಟಕಡೆಗೆ ತಲಪಬಲ್ಲ. ಬ್ರಹ್ಮ ಸಂಹಿತೆಯಲ್ಲಿ (5.37) **ಗೋಲೋಕ ಏವ ನಿವಸತಿ ಅಖಿಲಾತ್ಮಭೂತಃ** ಎಂದು ಸ್ಪಷ್ಟವಾಗಿ ಹೇಳಿದೆ. ಭಗವಂತನು ಗೋಲೋಕವೆಂಬ ಹೆಸರಿನ ತನ್ನ ನಿವಾಸದಲ್ಲಿ ಸದಾ ವಾಸಿಸುತ್ತಾನೆ. ಆದರೂ ತನ್ನ ಶ್ರೇಷ್ಠ ಆಧ್ಯಾತ್ಮಿಕ ಚೈತನ್ಯಗಳಿಂದ ಅವನು ಸರ್ವವ್ಯಾಪಿ ಬ್ರಹ್ಮನ್ ಅಲ್ಲದೆ ಅಂತರ್ಯಾಮಿ ಪರಮಾತ್ಮನೂ ಆಗಿದ್ದಾನೆ. ಕೃಷ್ಣನನ್ನು ಮತ್ತು ಅವನ ಸ್ವಾಂಶ ವಿಸ್ತರಣವಾದ ವಿಷ್ಣುವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಯಾರೂ ಆಧ್ಯಾತ್ಮಿಕ ಗಗನವನ್ನು (ವೈಕುಂಠ) ತಲಪಲಾರರು, ಭಗವಂತನ ನಿರಂತರ ಆವಾಸವನ್ನು (ಗೋಲೋಕ ವೃಂದಾವನ) ಪ್ರವೇಶಿಸಲಾರರು. ಆದುದರಿಂದ, ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವವನ ಮನಸ್ಸು ಕೃಷ್ಣನ ಕಾರ್ಯಗಳಲ್ಲಿ ಸದಾ ಮಗ್ನವಾಗಿರುವುದರಿಂದ (**ಸ ವೈ ಮನಃ ಕೃಷ್ಣಪದಾರವಿನ್ದಯೋಃ**) ಅವನು ಪರಿಪೂರ್ಣ ಯೋಗಿಯು. ವೇದಗಳಲ್ಲಿ ಸಹ (ಶ್ವೇತಾಶ್ವತರ ಉಪನಿಷತ್ತು 3.8) **ತಮ್ ಏವ ವಿದಿತ್ವಾತಿ ಮೃತ್ಯುಮ್ ಏತಿ**—ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದರಿಂದ ಮಾತ್ರವೇ ಹುಟ್ಟು ಸಾವುಗಳ ಮಾರ್ಗದಿಂದ ಬಿಡುಗಡೆಯಾಗಬಹುದು ಎಂದು ಹೇಳಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಯೋಗಪದ್ಧತಿಯ ಪರಿಪೂರ್ಣತೆ ಎಂದರೆ ಐಹಿಕ ಅಸ್ತಿತ್ವದಿಂದ ಬಿಡುಗಡೆಯನ್ನು ಹೊಂದುವುದು; ಅದು ಮುಗ್ಧಜನರಿಗೆ ಮೋಸಮಾಡುವ ಯಕ್ಷಿಣಿಯಲ್ಲ; ಅಂಗಸಾಧನೆಯ ಕಸರತ್ತುಗಳೂ ಅಲ್ಲ.

## ಶ್ಲೋಕ - 16

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ |**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ||೧೬||**

**ನ**—ಎಂದಿಗೂ ಇಲ್ಲ; **ಅತಿ**—ಅತಿ ಹೆಚ್ಚಾಗಿ; **ಅಶ್ನತಃ**—ತಿನ್ನುವವನಿಗೆ; **ತು**—ಆದರೆ; **ಯೋಗಃ**—ಪರಮೋನ್ನತನೊಂದಿಗೆ ಸಂಬಂಧವು; **ಅಸ್ತಿ**—ಇರುತ್ತದೆ; **ನ**—ಇಲ್ಲ; **ಚ**—ಕೂಡ; **ಏಕಾನ್ತಮ್**—ತೀರ; **ಅನಶ್ನತಃ**—ತಿನ್ನದಿರುವವನಿಗೂ; **ನ**—ಇಲ್ಲ; **ಚ**—ಕೂಡ; **ಅತಿ**—ಅತಿಯಾಗಿ; **ಸ್ವಪ್ನ ಶೀಲಸ್ಯ**—ನಿದ್ರಿಸುವವನಿಗೂ; **ಜಾಗ್ರತಃ**—ಅಥವಾ ಅತಿಯಾಗಿ ರಾತ್ರಿಯೆಲ್ಲಾ ಜಾಗರಣೆ ಮಾಡುವವನಿಗೂ; **ನ**—ಇಲ್ಲ; **ಏವ**—ಯಾವಾಗಲೂ; **ಚ**—ಮತ್ತು; **ಅರ್ಜುನ**—ಅರ್ಜುನನೇ.

## ಅನುವಾದ

**ಅರ್ಜುನನೆ, ಮನುಷ್ಯನು ಅತಿಹೆಚ್ಚಾಗಿ ತಿಂದರೂ ಅಥವಾ ಅತಿಸ್ವಲ್ಪ ತಿಂದರೂ, ಅತಿ ಹೆಚ್ಚಾಗಿ ನಿದ್ದೆ ಮಾಡಿದರೂ ಅಥವಾ ತಕ್ಕಷ್ಟು ನಿದ್ದೆ ಮಾಡದಿದ್ದರೂ ಯೋಗಿಯಾಗಲು ಸಾಧ್ಯವಿಲ್ಲ.**

## ಭಾವಾರ್ಥ

ಇಲ್ಲಿ ಯೋಗಿಗಳು ಊಟ ಮತ್ತು ನಿದ್ರೆಗಳ ವಿಷಯದಲ್ಲಿ ನಿಯಂತ್ರಣವನ್ನು ಅನುಸರಿಸಬೇಕೆಂದು ಸಲಹೆ ಮಾಡಿದೆ. ಅತಿಯಾಗಿ ತಿನ್ನುವುದೆಂದರೆ ದೇಹ ಮತ್ತು ಆತ್ಮಗಳನ್ನು ಒಟ್ಟಿಗಿಡಲು ಆಗತ್ಯವಾದದ್ದಕ್ಕಿಂತ ಹೆಚ್ಚು ತಿನ್ನುವುದು. ಮನುಷ್ಯರು ಪ್ರಾಣಿಗಳನ್ನು ತಿನ್ನುವ ಅಗತ್ಯವೇ ಇಲ್ಲ. ಏಕೆಂದರೆ ಧಾನ್ಯಗಳು, ತರಕಾರಿಗಳು, ಹಣ್ಣು ಮತ್ತು ಹಾಲು ಸಮೃದ್ಧಿಯಾಗಿ ಸಿಕ್ಕುತ್ತವೆ.

ಇಂತಹ ಸರಳವಾದ ಆಹಾರವು ಸಾತ್ವಿಕ ಗುಣಕ್ಕೆ ಹೊಂದಿಕೊಂಡದ್ದು ಎಂದು ಭಗವದ್ಗೀತೆಯಲ್ಲಿ ಪರಿಗಣಿಸಿದೆ. ಮಾಂಸಾಹಾರವು ತಾಮಸ ಗುಣದವರಿಗೆ ಮಾತ್ರ. ಆದುದರಿಂದ ಪ್ರಾಣಿಗಳ ಮಾಂಸವನ್ನು ತಿನ್ನುವುದು, ಮದ್ಯಪಾನ, ಧೂಮಪಾನ ಮತ್ತು ಕೃಷ್ಣಪ್ರಸಾದವಲ್ಲದ ಆಹಾರವನ್ನು ತಿನ್ನುವುದು ಇವುಗಳನ್ನು ಅಭ್ಯಾಸಮಾಡಿದವರು ಪಾಪಪೂರಿತ ಪ್ರತಿಕ್ರಿಯೆಗಳಿಂದ ಕಷ್ಟಪಡುತ್ತಾರೆ. **ಭುಞ್ಜತೇ ತೇ ತ್ವಘಂ ಪಾಪಾ ಯೇ ಪಚನ್ತಿ ಆತ್ಮಕಾರಣಾತ್.** ಇಂದ್ರಿಯ ಸಂತೋಷಕ್ಕಾಗಿ ತಿನ್ನುವವನು ಅಥವಾ ತನ್ನ ಆಹಾರವನ್ನು ಕೃಷ್ಣನಿಗೆ ನೈವೇದ್ಯ ಮಾಡದೆ ತನಗಾಗಿ ಅಡಿಗೆ ಮಾಡಿಕೊಳ್ಳುವವನು ಪಾಪವನ್ನೇ ತಿನ್ನುತ್ತಾನೆ. ಪಾಪವನ್ನು ತಿನ್ನುವವನು ಮತ್ತು ತನ್ನ ಪಾಲಿಗೆ ಕೊಟ್ಟದ್ದಕ್ಕಿಂತ ಹೆಚ್ಚು ತಿನ್ನುವವನು ಪರಿಪೂರ್ಣ ಯೋಗವನ್ನು ಮಾಡಲಾರ. ಕೃಷ್ಣಪ್ರಸಾದದ ಶೇಷವನ್ನಷ್ಟೇ ತಿನ್ನುವುದು ಅತ್ಯಂತ ಉತ್ತಮ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಕೃಷ್ಣನಿಗೆ ನೈವೇದ್ಯ ಮಾಡದಿರುವ ಯಾವ ಆಹಾರವನ್ನೂ ತಿನ್ನುವುದಿಲ್ಲ. ಆದ್ದರಿಂದ ಕೃಷ್ಣಪ್ರಜ್ಞೆಯಿರುವ ಮನುಷ್ಯನು ಮಾತ್ರ ಯೋಗಾಭ್ಯಾಸದಲ್ಲಿ ಪರಿಪೂರ್ಣನಾಗಬಲ್ಲ. ತನ್ನ ವೈಯಕ್ತಿಕ ಉಪವಾಸ ರೀತಿಯನ್ನು ರಚಿಸಿಕೊಂಡು ಕೃತಕ ರೀತಿಯಲ್ಲಿ ಆಹಾರವನ್ನು ಬಿಡುವವನು ಯೋಗಾಭ್ಯಾಸ ಮಾಡಲಾರ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಶಾಸ್ತ್ರ ಗ್ರಂಥಗಳಲ್ಲಿ ಸೂಚಿಸಿರುವ ರೀತಿಯಲ್ಲಿ ಉಪವಾಸ ಮಾಡುತ್ತಾನೆ. ಆತನು ಅಗತ್ಯವಾದದ್ದಕ್ಕಿಂತ ಹೆಚ್ಚು ಉಪವಾಸವನ್ನು ಮಾಡುವುದಿಲ್ಲ. ಹೆಚ್ಚು ಆಹಾರವನ್ನೂ ತಿನ್ನುವುದಿಲ್ಲ. ಆದುದರಿಂದ ಆತನು ಯೋಗಾಭ್ಯಾಸ ಮಾಡಲು ಸಮರ್ಥನು. ಅಗತ್ಯವಾದದ್ದಕ್ಕಿಂತ ಹೆಚ್ಚು ತಿನ್ನುವವನು ನಿದ್ರೆ ಮಾಡುವಾಗ ಬಹಳ ಕನಸು ಕಾಣುತ್ತಾನೆ. ಪರಿಣಾಮವಾಗಿ ಅವನು ಅಗತ್ಯವಾದದ್ದಕ್ಕಿಂತ ಹೆಚ್ಚು ನಿದ್ರೆ ಮಾಡಬೇಕಾಗುತ್ತದೆ. ದಿನಕ್ಕೆ ಆರು ಗಂಟೆಗಳಿಗಿಂತ ಹೆಚ್ಚು ನಿದ್ರೆಮಾಡುವವನು ನಿಶ್ಚಯವಾಗಿಯೂ ತಾಮಸ ಗುಣದಿಂದ ಪ್ರಭಾವಿತನಾದವನು. ತಾಮಸಗುಣದ ಮನುಷ್ಯನು ಸೋಮಾರಿ ಮತ್ತು ಬಹಳ ನಿದ್ರೆ ಮಾಡುವ ಪ್ರವೃತ್ತಿಯವನು. ಇಂತಹ ಮನುಷ್ಯನು ಯೋಗಾಭ್ಯಾಸ ಮಾಡಲಾರನು.

## ಶ್ಲೋಕ - 17

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥**

**ಯುಕ್ತ**—ನಿಯಂತ್ರಿತವಾದ; **ಆಹಾರ**—ತಿನ್ನುವಿಕೆ; **ವಿಹಾರಸ್ಯ**—ವಿಹಾರ ಇರುವವನಿಗೆ; **ಯುಕ್ತ**—ನಿಯಂತ್ರಿತವಾದ; **ಚೇಷ್ಟಸ್ಯ**—ಪೋಷಣೆಗಾಗಿ ಕೆಲಸ ಮಾಡುವವನಿಗೆ; **ಕರ್ಮಸು**—ಕರ್ತವ್ಯ ನಿರ್ವಹಣೆಯಲ್ಲಿ; **ಯುಕ್ತ**—ನಿಯಂತ್ರಿತವಾದ; **ಸ್ವಪ್ನ ಅವಬೋಧಸ್ಯ**—ನಿದ್ರೆ ಮತ್ತು ಎಚ್ಚರಗಳುಳ್ಳವನಿಗೆ; **ಯೋಗಃ**—ಯೋಗಾಭ್ಯಾಸವು; **ಭವತಿ**—ಆಗುತ್ತದೆ; **ದುಃಖ ಹಾ**—ನೋವುಗಳನ್ನು ಕಡಮೆಮಾಡುವಂತಹುದು.

## ಅನುವಾದ

**ಆಹಾರ, ನಿದ್ರೆ, ವಿಹಾರ ಮತ್ತು ಕೆಲಸಗಳ ಅಭ್ಯಾಸಗಳಲ್ಲಿ ಮಿತವಾಗಿರುವವನಿಗೆ ಯೋಗ ಪದ್ಧತಿಯ ಅಭ್ಯಾಸವು ಎಲ್ಲ ಐಹಿಕ ದುಃಖಗಳನ್ನು ಕಡಮೆ ಮಾಡಬಲ್ಲದು.**

## ಭಾವಾರ್ಥ

ತಿನ್ನುವುದು, ನಿದ್ರೆ, ರಕ್ಷಣೆ ಮತ್ತು ಮೈಥುನ ಇವು ದೇಹದ ಅಗತ್ಯಗಳು. ಇವುಗಳು ಅತಿಯಾದರೆ ಯೋಗಾಭ್ಯಾಸದ ಪ್ರಗತಿಯಲ್ಲಿ ಅಡ್ಡಿಯಾಗಬಹುದು. ಆಹಾರದ ವಿಷಯ ಹೇಳುವುದಾದರೆ ಪ್ರಸಾದವನ್ನು ತೆಗೆದುಕೊಳ್ಳುವ ಅಭ್ಯಾಸಮಾಡಿದಾಗ ಮಾತ್ರ ಇದನ್ನು ಹತೋಟಿಯಲ್ಲಿಡಬಹುದು. ಭಗವದ್ಗೀತೆಯ ಪ್ರಕಾರ (9.26) ಕೃಷ್ಣನಿಗೆ ತರಕಾರಿ, ಹಣ್ಣುಗಳು, ಧಾನ್ಯಗಳು, ಹಾಲು ಮೊದಲಾದುವನ್ನು ನೈವೇದ್ಯ ಮಾಡಬಹುದು. ಈ ರೀತಿಯಲ್ಲಿ ಕೃಷ್ಣಪ್ರಜ್ಞೆಯಿರುವವನಿಗೆ ಮನುಷ್ಯನು ತಿನ್ನಬಾರದ ಅಥವಾ ಸಾತ್ವಿಕ ವರ್ಗಕ್ಕೆ ಸೇರದ ಆಹಾರವನ್ನು ಸ್ವೀಕರಿಸದಂತೆ ತಂತಾನೇ ಶಿಕ್ಷಣ ದೊರೆಯುತ್ತದೆ. ನಿದ್ರೆಯ ವಿಷಯ ಹೇಳುವುದಾದರೆ, ಕೃಷ್ಣಪ್ರಜ್ಞೆ ಇರುವ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ಸದಾ ಎಚ್ಚರವಾಗಿರುತ್ತಾನೆ. ಆದುದರಿಂದ ಅನಗತ್ಯವಾಗಿ ನಿದ್ರೆಯಲ್ಲಿ ಕಳೆದ ಕಾಲವನ್ನು ದೊಡ್ಡ ನಷ್ಟ ಎಂದು ಭಾವಿಸುತ್ತಾನೆ. **ಅವ್ಯರ್ಥ ಕಾಲತ್ವಮ್** ಕೃಷ್ಣಪ್ರಜ್ಞೆ ಇರುವ ಮನುಷ್ಯನು ಭಗವಂತನ ಸೇವೆಯಲ್ಲಿ ನಿರತನಾಗದೆ ಒಂದು ನಿಮಿಷವನ್ನು ಕಳೆಯುವುದನ್ನೂ ತಡೆದುಕೊಳ್ಳಲಾರ. ಆದುದರಿಂದ ಆದಷ್ಟು ಕಡಮೆ ನಿದ್ರೆ ಮಾಡುತ್ತಾನೆ. ಈ ವಿಷಯದಲ್ಲಿ ಅವನ ಆದರ್ಶ ಶ್ರೀ ರೂಪ ಗೋಸ್ವಾಮಿ; ಅವರು ಸದಾ ಕೃಷ್ಣನ ಸೇವೆಯಲ್ಲಿ ತೊಡಗಿರುತ್ತಿದ್ದರು. ದಿನಕ್ಕೆ ಎರಡು ಗಂಟೆಗಳಿಗಿಂತ ಹೆಚ್ಚು ನಿದ್ರೆ ಮಾಡುತ್ತಿರಲಿಲ್ಲ. ಕೆಲವೊಮ್ಮೆ ಅಷ್ಟೂ ಇಲ್ಲ. ತನ್ನ ಜಪಮಣಿಗಳನ್ನು ಬಳಸಿ ದಿನಕ್ಕೆ ಮೂರುಲಕ್ಷ ಬಾರಿ ನಾಮಸಂಕೀರ್ತನೆಯ ಕರ್ತವ್ಯವನ್ನು ಮಾಡಿ ಮುಗಿಸುವ ತನಕ ಠಾಕೂರ ಹರಿದಾಸರು ಪ್ರಸಾದವನ್ನು ಸ್ವೀಕರಿಸುತ್ತಿರಲಿಲ್ಲ; ನಿದ್ರೆ ಮಾಡುತ್ತಿರಲಿಲ್ಲ. ಕೆಲಸದ ವಿಷಯವಾದರೆ, ಕೃಷ್ಣಪ್ರಜ್ಞೆ ಇರುವ ಮನುಷ್ಯನು ಕೃಷ್ಣ ಆಸಕ್ತಿಗೆ ಸಂಬಂಧಿಸಿಲ್ಲದ ಏನನ್ನೂ ಮಾಡುವುದಿಲ್ಲ. ಆದುದರಿಂದ ಅವನ ಕೆಲಸವು ಯಾವಾಗಲೂ ಕ್ರಮಕ್ಕೊಳಪಟ್ಟಿರುತ್ತದೆ. ಅದಕ್ಕೆ ಇಂದ್ರಿಯ ತೃಪ್ತಿಯ ಸೋಂಕಿರುವುದಿಲ್ಲ. ಇಂದ್ರಿಯತೃಪ್ತಿಯ ಪ್ರಶ್ನೆಯೇ ಇಲ್ಲದಿರುವುದರಿಂದ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಐಹಿಕ ವಿರಾಮ ಎಂಬುದೇ ಇಲ್ಲ. ಆತನು ತನ್ನ ಎಲ್ಲ ಕೆಲಸಕಾರ್ಯಗಳಲ್ಲಿ, ಮಾತಿನಲ್ಲಿ, ನಿದ್ರೆಯಲ್ಲಿ, ಎಚ್ಚರಾವಸ್ಥೆಯಲ್ಲಿ ಮತ್ತು ಇತರ ಎಲ್ಲ ದೈಹಿಕ ಕ್ರಿಯೆಗಳಲ್ಲಿ ಒಂದು ಕ್ರಮಕ್ಕೆ ಒಳಪಟ್ಟಿರುವುದರಿಂದ, ಆತನಿಗೆ ಐಹಿಕ ದುಃಖವೇ ಇಲ್ಲ.

## ಶ್ಲೋಕ - 18

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ |**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ||೧೮||**

**ಯದಾ**—ಯಾವಾಗ; **ವಿನಿಯತಮ್**—ವಿಶಿಷ್ಟವಾಗಿ ಶಿಸ್ತಿಗೊಳಪಟ್ಟ; **ಚಿತ್ತಮ್**—ಮನಸ್ಸು ಮತ್ತು ಅದರ ಚಟುವಟಿಕೆಗಳು; **ಆತ್ಮನಿ**—ದಿವ್ಯದಲ್ಲಿ; **ಏವ**—ಖಂಡಿತವಾಗಿಯೂ; **ಅವತಿಷ್ಠತೇ**—ನೆಲೆಸುವುದೋ; **ನಿಸ್ಪೃಹಃ**—ಆಸೆಗಳಿಲ್ಲದವನು; **ಸರ್ವ**—ಎಲ್ಲ ಬಗೆಯ; **ಕಾಮೇಭ್ಯಃ**—ಭೌತಿಕ ಇಂದ್ರಿಯ ತೃಪ್ತಿಗಳಲ್ಲಿ; **ಯುಕ್ತಃ**—ಯೋಗದಲ್ಲಿ ಚೆನ್ನಾಗಿ ನೆಲೆಸಿದವನು; **ಇತಿ**—ಎಂದು; **ಉಚ್ಯತೇ**—ಹೇಳಲ್ಪಡುತ್ತಾನೆ; **ತದಾ**—ಆಗ.

## ಅನುವಾದ

**ಯೋಗಾಭ್ಯಾಸದಿಂದ ಯೋಗಿಯು ತನ್ನ ಮಾನಸಿಕ ಚಟುವಟಿಕೆಗಳನ್ನು ಶಿಸ್ತಿಗೆ ಒಳಪಡಿಸಿ, ಯಾವುದೇ ಐಹಿಕ ಬಯಕೆಗಳಿಲ್ಲದೆ ಆಧ್ಯಾತ್ಮಿಕತೆಯಲ್ಲಿ ನೆಲೆಸಿದಾಗ ಆತನನ್ನು ಯೋಗದಲ್ಲಿ ವ್ಯವಸ್ಥಿತವಾಗಿರುವವನೆಂದು ಹೇಳುತ್ತಾರೆ.**

## ಭಾವಾರ್ಥ

ಸಾಮಾನ್ಯ ಮನುಷ್ಯನ ಕಾರ್ಯಗಳಿಗೂ ಯೋಗಿಯ ಕಾರ್ಯಗಳಿಗೂ ವ್ಯತ್ಯಾಸವೆಂದರೆ ಯೋಗಿಗೆ ಯಾವುದೇ ಬಗೆಯ ಐಹಿಕ ಬಯಕೆಗಳು — ಇವುಗಳಲ್ಲಿ ಲೈಂಗಿಕ ಬಯಕೆಯೇ ಮುಖ್ಯವಾದದ್ದು — ಇರುವುದಿಲ್ಲ ಎನ್ನುವುದು. ಪರಿಪೂರ್ಣ ಯೋಗಿಯು ಮಾನಸಿಕ ಚಟುವಟಿಕೆಗಳಲ್ಲಿ ಎಂತಹ ಶಿಸ್ತನ್ನು ಸಾಧಿಸಿರುತ್ತಾನೆ ಎಂದರೆ ಯಾವುದೇ ಬಗೆಯ ಐಹಿಕ ಬಯಕೆಯು ಅವನನ್ನು ಕಲಕಲಾರದು. ಈ ಪರಿಪೂರ್ಣ ಹಂತವನ್ನು ಕೃಷ್ಣಪ್ರಜ್ಞೆಯಲ್ಲಿರುವವರು ತಂತಾವೇ ಮುಟ್ಟಬಲ್ಲರು. ಇದನ್ನು ಶ್ರೀಮದ್ಭಾಗವತದಲ್ಲಿ (9.4.18-20) ಹೀಗೆ ಹೇಳಿದೆ—

**ಸ ವೈ ಮನಃ ಕೃಷ್ಣಪದಾರವಿನ್ದಯೋರ್**
**ವಚಾಂಸಿ ವೈಕುಣ್ಠ ಗುಣಾನುವರ್ಣನೇ ।**
**ಕರೌ ಹರೇರ್ ಮನ್ದಿರಮಾರ್ಜನಾದಿಷು**
**ಶ್ರುತಿಂ ಚಕಾರಾಚ್ಯುತ ಸತ್ಕಥೋದಯೇ ॥**

**ಮುಕುನ್ದಲಿನ್ಗಾಲಯದರ್ಶನೇ ದೃಶೌ**
**ತದ್‌ಭೃತ್ಯಗಾತ್ರಸ್ಪರ್ಶೇಽಂಗಸಂಗಮಮ್ ।**
**ಘ್ರಾಣಂ ಚ ತತ್ಪಾದ ಸರೋಜ ಸೌರಭೇ**
**ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ ॥**

**ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ**
**ಶಿರೋ ಹೃಷೀಕೇಶಪದಾಭಿವನ್ದನೇ ।**
**ಕಾಮಂ ಚ ದಾಸ್ಯೇ ನ ತು ಕಾಮಕಾಮ್ಯಯಾ**
**ಯಥೋತ್ತಮಶ್ಲೋಕಜನಾಶ್ರಯಾ ರತಿಃ ॥**

"ರಾಜ ಅಂಬರೀಷನು ಮೊಟ್ಟಮೊದಲು ತನ್ನ ಮನಸ್ಸನ್ನು ಶ್ರೀಕೃಷ್ಣನ ಪಾದಕಮಲಗಳಲ್ಲಿ ನಿಲ್ಲಿಸಿದನು. ಅನಂತರ ಒಂದರ ಅನಂತರ ಒಂದರಂತೆ ತನ್ನ ಮಾತುಗಳನ್ನು ಭಗವಂತನ ದಿವ್ಯಗುಣಗಳನ್ನು ವರ್ಣಿಸುವುದರಲ್ಲಿಯೂ, ತನ್ನ ಕೈಗಳನ್ನು ಭಗವಂತನ ದೇವಾಲಯವನ್ನು ಒರಸುವುದರಲ್ಲಿಯೂ, ತನ್ನ ಕಿವಿಗಳನ್ನು ಭಗವಂತನ ಲೀಲೆಗಳನ್ನು ಕೇಳುವುದರಲ್ಲಿಯೂ, ತನ್ನ ಕಣ್ಣುಗಳನ್ನು ಭಗವಂತನ ದಿವ್ಯ ರೂಪಗಳ ದರ್ಶನದಲ್ಲಿಯೂ, ತನ್ನ ದೇಹವನ್ನು ಭಕ್ತರ ದೇಹಗಳ ಸ್ಪರ್ಶದಲ್ಲಿಯೂ, ತನ್ನ ಘ್ರಾಣೇಂದ್ರಿಯವನ್ನು ಭಗವಂತನಿಗೆ ಅರ್ಪಿಸಿದ ಕಮಲಗಳ ಕಂಪನ್ನು ಆಸ್ವಾದಿಸುವುದರಲ್ಲಿಯೂ, ತನ್ನ ನಾಲಿಗೆಯನ್ನು ಭಗವಂತನ ಪಾದಪದ್ಮಗಳಿಗೆ ಅರ್ಪಿಸಿದ ತುಳಸೀದಳವನ್ನು ಸವಿಯುವುದರಲ್ಲಿಯೂ, ತನ್ನ ಕಾಲುಗಳನ್ನು ಪುಣ್ಯಕ್ಷೇತ್ರಗಳಿಗೂ ಭಗವಂತನ

ದೇವಾಲಯಕ್ಕೂ ಹೋಗುವುದರಲ್ಲಿಯೂ, ತನ್ನ ಶಿರವನ್ನು ಭಗವಂತನಿಗೆ ಪ್ರಣಾಮ ಮಾಡುವುದರಲ್ಲಿಯೂ ಮತ್ತು ತನ್ನ ಬಯಕೆಗಳನ್ನು ಭಗವಂತನ ಮಹತ್ಕಾರ್ಯವನ್ನು ಮಾಡುವುದರಲ್ಲಿಯೂ ತೊಡಗಿಸಿದನು. ಈ ಎಲ್ಲ ಅಲೌಕಿಕ ಕಾರ್ಯಗಳು ಪರಿಶುದ್ಧ ಭಕ್ತರಿಗೆ ಯೋಗ್ಯವಾದವು."

ನಿರಾಕಾರ ಮಾರ್ಗವನ್ನು ಅನುಸರಿಸುವವರಿಗೆ ಈ ಆಧ್ಯಾತ್ಮಿಕ ಹಂತವನ್ನು ವ್ಯಕ್ತಿನಿಷ್ಠವಾಗಿ ನಿರೂಪಿಸಲು ಸಾಧ್ಯವಿಲ್ಲದಿರಬಹುದು. ಆದರೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಇದು ಬಹು ಸುಲಭ ಮತ್ತು ಕಾರ್ಯಸಾಧ್ಯ; ಮೇಲೆ ಹೇಳಿರುವ ಮಹಾರಾಜ ಅಂಬರೀಷನ ಕಾರ್ಯಗಳ ಮೇಲಿನ ವರ್ಣನೆಯಿಂದ ಇದು ಸ್ಪಷ್ಟವಾಗುತ್ತದೆ. ನಿರಂತರ ಸ್ಮರಣೆಯಿಂದ ಮನಸ್ಸನ್ನು ಭಗವಂತನ ಪಾದಕಮಲಗಳಲ್ಲಿ ನಿಲ್ಲಿಸದಿದ್ದರೆ ಇಂತಹ ಅಲೌಕಿಕ ಕಾರ್ಯಗಳು ಸಾಧ್ಯವಾಗುವುದಿಲ್ಲ. ಆದುದರಿಂದ ಭಗವಂತನ ಭಕ್ತಿಸೇವೆಯಲ್ಲಿ ಈ ವಿಧಿತ ಕಾರ್ಯಗಳಿಗೆ **ಅರ್ಚನೆ** ಎಂದು ಹೆಸರು. ಹೀಗೆಂದರೆ ಎಲ್ಲ ಇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿ ತೊಡಗಿಸುವುದು. ಇಂದ್ರಿಯಗಳಿಗೂ ಮನಸ್ಸಿಗೂ ಕೆಲಸಬೇಕು. ಬರಿಯ ನಿರಾಕರಣೆ ಕಾರ್ಯಸಾಧ್ಯವಲ್ಲ. ಆದುದರಿಂದ ಜನಸಾಮಾನ್ಯರಿಗೆ — ಅದರಲ್ಲಿಯೂ ವಿಶೇಷವಾಗಿ ಸನ್ಯಾಸಾಶ್ರಮದಲ್ಲಿ ಇಲ್ಲದಿರುವವರಿಗೆ — ಮೇಲೆ ವರ್ಣಿಸಿದಂತೆ ಇಂದ್ರಿಯಗಳ ಮತ್ತು ಮನಸ್ಸಿನ ಆಧ್ಯಾತ್ಮಿಕ ಕರ್ತವ್ಯಮಗ್ನತೆಯು ಆಧ್ಯಾತ್ಮಿಕ ಸಾಧನೆಗೆ ಪರಿಪೂರ್ಣವಾದ ಪ್ರಕ್ರಿಯೆ; ಭಗವದ್ಗೀತೆಯಲ್ಲಿ ಇದನ್ನು **ಯುಕ್ತ** ಎಂದು ಕರೆದಿದೆ.

## ಶ್ಲೋಕ - 19

**ಯಥಾ ದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಞ್ಜತೋ ಯೋಗಮಾತ್ಮನಃ ॥೧೯॥**

**ಯಥಾ**—ಹೇಗೆ; **ದೀಪಃ**—ದೀಪವು; **ನಿವಾತ ಸ್ಥಃ**—ಗಾಳಿಯಿಲ್ಲದ ಸ್ಥಳದಲ್ಲಿರುವ; **ನ ಇಙ್ಗತೇ**—ಹೊಯ್ದಾಡುವುದಿಲ್ಲವೋ; **ಸಾ**—ಈ; **ಉಪಮಾ**—ಹೋಲಿಕೆ; **ಸ್ಮೃತಾ**— ಪರಿಗಣಿಸಲ್ಪಟ್ಟಿದೆ; **ಯೋಗಿನಃ**—ಯೋಗಿಯ; **ಯತ ಚಿತ್ತಸ್ಯ**—ನಿಯಂತ್ರಿತ ಮನಸ್ಸಿನ; **ಯುಞ್ಜತಃ**—ಸತತವಾಗಿ ನಿರತನಾಗಿರುವ; **ಯೋಗಮ್**—ಧ್ಯಾನದಲ್ಲಿ; **ಆತ್ಮನಃ**—ದಿವ್ಯತೆಯ.

### ಅನುವಾದ

**ಗಾಳಿ ಬೀಸದ ಸ್ಥಳದಲ್ಲಿ ದೀಪವು ಹೇಗೆ ನಿಶ್ಚಲವಾಗಿರುವುದೋ ಹಾಗೆಯೇ ಮನಸ್ಸನ್ನು ನಿಯಂತ್ರಿಸಿರುವ ಅಧ್ಯಾತ್ಮವಾದಿಯು ಆಧ್ಯಾತ್ಮಿಕ ಆತ್ಮದ ಧ್ಯಾನದಲ್ಲಿ ನಿಶ್ಚಲನಾಗಿರುತ್ತಾನೆ.**

### ಭಾವಾರ್ಥ

ಸದಾ ಆಧ್ಯಾತ್ಮಿಕತೆಯಲ್ಲಿ ಮಗ್ನನಾಗಿದ್ದು ತಾನು ಆರಾಧಿಸುವ ಭಗವಂತನ ನಿರಂತರ ನಿಶ್ಚಲ ಧ್ಯಾನದಲ್ಲಿ ನಿಜವಾಗಿ ಕೃಷ್ಣಪ್ರಜ್ಞೆಯಲ್ಲಿರುವವನು, ತನ್ಮಯನಾಗಿ ಗಾಳಿ ಬೀಸದ ಸ್ಥಳದಲ್ಲಿ ಅಲುಗದ ದೀಪದಂತಿರುತ್ತಾನೆ.

## ಶ್ಲೋಕ 20-23

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥**

**ಸುಖಮಾತ್ಯನ್ತಿಕಂ ಯತ್ತದ್ ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥**

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥**

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ॥೨೩॥**

**ಯತ್ರ**—ಯಾವ ಸ್ಥಿತಿಯಲ್ಲಿ; **ಉಪರಮತೇ**—ನಿಲ್ಲಿಸುತ್ತಾನೋ (ಏಕೆಂದರೆ ದಿವ್ಯಾನಂದವನ್ನು ಅನುಭವಿಸುತ್ತಾನೆ); **ಚಿತ್ತಮ್**—ಮಾನಸಿಕ ಕಾರ್ಯಗಳನ್ನು; **ನಿರುದ್ಧಮ್**—ಜಡದಿಂದ ನಿರ್ಬಂಧಿತವಾದ; **ಯೋಗ ಸೇವಯಾ**—ಯೋಗಾಚರಣೆಯಿಂದ; **ಯತ್ರ**—ಯಾವುದರಲ್ಲಿ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಆತ್ಮನಾ**—ಶುದ್ಧಮನಸ್ಸಿನಿಂದ; **ಆತ್ಮಾನಮ್**—ತನ್ನ; **ಪಶ್ಯನ್**—ಸ್ಥಾನವನ್ನು ಸಾಕ್ಷಾತ್ಕರಿಸಿಕೊಂಡು; **ಆತ್ಮನಿ**—ಆತ್ಮನಲ್ಲಿ; **ತುಷ್ಯತಿ**—ತೃಪ್ತನಾಗುತ್ತಾನೋ; **ಸುಖಮ್**—ಸುಖವು; **ಆತ್ಯನ್ತಿಕಮ್**—ಪರಮೋನ್ನತವಾದ; **ಯತ್**—ಯಾವುದಿದೆಯೋ; **ತತ್**—ಅದನ್ನು; **ಬುದ್ಧಿ**—ಬುದ್ಧಿಯಿಂದ; **ಗ್ರಾಹ್ಯಮ್**—ಪಡೆಯಲು ಸಾಧ್ಯವಾದ; **ಅತೀನ್ದ್ರಿಯಮ್** —ಅಲೌಕಿಕವಾದುದನ್ನು; **ವೇತ್ತಿ**—ತಿಳಿಯುತ್ತಾನೋ; **ಯತ್ರ**—ಎಲ್ಲಿ; **ನ**—ಎಂದಿಗೂ ಇಲ್ಲ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಅಯಮ್**—ಅವನು; **ಸ್ಥಿತಃ**—ನೆಲೆಸಿದ್ದಾನೋ; **ಚಲತಿ**—ಚಲಿಸುತ್ತಾನೋ; **ತತ್ತ್ವತಃ**—ಸತ್ಯದಿಂದ; **ಯಮ್**—ಯಾವುದನ್ನು; **ಲಬ್ಧ್ವಾ**—ಪಡೆದು; **ಚ**—ಕೂಡ; **ಅಪರಮ್**—ಇತರ ಯಾವುದೇ; **ಲಾಭಮ್**—ಲಾಭವನ್ನು; **ಮನ್ಯತೇ**—ಪರಿಗಣಿಸುತ್ತಾನೋ; **ನ**—ಎಂದಿಗೂ ಇಲ್ಲ; **ಅಧಿಕಮ್**—ಹೆಚ್ಚಾಗಿ; **ತತಃ**—ಅದಕ್ಕಿಂತ; **ಯಸ್ಮಿನ್**—ಯಾವುದರಲ್ಲಿ; **ಸ್ಥಿತಃ**—ನೆಲೆಸಿದ್ದಾನೋ; **ನ**—ಎಂದಿಗೂ ಇಲ್ಲ; **ದುಃಖೇನ**—ದುಃಖದಿಂದ; **ಗುರುಣಾ ಅಪಿ**—ಬಹು ಕಷ್ಟಕರವಾಗಿದ್ದರೂ ಕೂಡ; **ವಿಚಾಲ್ಯತೇ**—ವಿಚಲಿತನಾಗುತ್ತಾನೋ; **ತಮ್**—ಅದನ್ನು; **ವಿದ್ಯಾತ್**—ನೀನು ತಿಳಿಯಬೇಕು; **ದುಃಖಸಂಯೋಗ**—ಭೌತಿಕ ಸಂಪರ್ಕದ ಕ್ಲೇಶಗಳ; **ವಿಯೋಗಮ್**—ನಿರ್ಮೂಲನವನ್ನು; **ಯೋಗ ಸಂಜ್ಞಿತಮ್**—ಯೋಗದಲ್ಲಿ ಸಮಾಧಿ ಎಂದು ಕರೆಯಲ್ಪಟ್ಟ.

## ಅನುವಾದ

**ಸಮಾಧಿ ಎಂದು ಕರೆಯುವ ಪರಿಪೂರ್ಣತೆಯ ಹಂತದಲ್ಲಿ ಮನಸ್ಸು ಯೋಗಾಭ್ಯಾಸದಿಂದ ಇಹಲೋಕದ ಮಾನಸಿಕ ಚಟುವಟಿಕೆಗಳಲ್ಲಿ ತೊಡಗದಂತೆ ನಿರ್ಬಂಧದಲ್ಲಿ ಇರುತ್ತದೆ. ಈ ಪರಿಪೂರ್ಣತೆಯ ಲಕ್ಷಣವೆಂದರೆ ಶುದ್ಧ ಮನಸ್ಸಿನಿಂದ ಆತ್ಮವನ್ನು ಕಾಣುವ ಶಕ್ತಿ ಮತ್ತು ಆತ್ಮನನ್ನು ಪ್ರೀತಿಸಿ ಸಂತೋಷಪಡುವ ಶಕ್ತಿ. ಈ ಆನಂದ ಸ್ಥಿತಿಯಲ್ಲಿ ಮನುಷ್ಯನು ದಿವ್ಯ ಇಂದ್ರಿಯಗಳ ಮೂಲಕ ಸಾಧಿಸಿದ ಅಮಿತ ಅಲೌಕಿಕ ಸುಖದಲ್ಲಿ ನೆಲೆಯಾಗಿರುತ್ತಾನೆ. ಹೀಗೆ ನೆಲೆಯನ್ನು ಪಡೆದವನು ಸತ್ಯವನ್ನು ಬಿಡುವುದೇ ಇಲ್ಲ. ಇದನ್ನು ಪಡೆದನಂತರ ಇದಕ್ಕಿಂತ ಹೆಚ್ಚಿನ ಗಳಿಕೆ ಯಾವುದೂ ಇಲ್ಲ**

**ಎಂದು ಯೋಚಿಸುತ್ತಾನೆ. ಇಂತಹ ಸ್ಥಾನದಲ್ಲಿ ನಿಂತವನು ಅತ್ಯಂತ ತೀವ್ರವಾದ ಕಷ್ಟಗಳಲ್ಲಿಯೂ ವಿಚಲಿತನಾಗುವುದಿಲ್ಲ. ಐಹಿಕ ಸಂಪರ್ಕದಿಂದಾಗುವ ಎಲ್ಲ ದುಃಖಗಳಿಂದ ವಾಸ್ತವವಾದ ಸ್ವಾತಂತ್ರ್ಯವೆಂದರೆ ಇದೇ.**

## ಭಾವಾರ್ಥ

ಯೋಗಾಭ್ಯಾಸದಿಂದ ಮನುಷ್ಯನು ಕ್ರಮೇಣ ಐಹಿಕ ಪರಿಕಲ್ಪನೆಗಳಿಂದ ದೂರವಾಗುತ್ತಾನೆ. ಯೋಗತತ್ವದ ಮುಖ್ಯ ಲಕ್ಷಣವೇ ಇದು. ಇದರನಂತರ ಮನುಷ್ಯನು ಸಮಾಧಿಸ್ಥಿತಿಗೇರುತ್ತಾನೆ. ಎಂದರೆ ಅಲೌಕಿಕ ಮನಸ್ಸು ಮತ್ತು ಬುದ್ಧಿಶಕ್ತಿಗಳಿಂದ ಯೋಗಿಯು ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಇದರಲ್ಲಿ ಆತ್ಮವನ್ನು ಪರಮಾತ್ಮನೊಂದಿಗೆ ಒಂದಾಗಿ ಕಾಣುವ ಸಂದೇಹಗಳಿರುವುದಿಲ್ಲ. ಯೋಗಾಭ್ಯಾಸಕ್ಕೆ ಬಹುಮಟ್ಟಿಗೆ ಪತಂಜಲಿ ಪದ್ಧತಿಯ ತತ್ವಗಳೇ ಆಧಾರ. ಅಧಿಕಾರವಿಲ್ಲದ ಕೆಲವರು ಭಾಷ್ಯಕಾರರು ವ್ಯಕ್ತಿಗತ ಆತ್ಮವನ್ನು ಪರಮಾತ್ಮನೊಂದಿಗೆ ಗುರುತಿಸಲು ಪ್ರಯತ್ನಿಸುತ್ತಾರೆ. ಅದ್ವೈತಿಗಳು ಇದೇ ಮುಕ್ತಿ ಎಂದು ಭಾವಿಸುತ್ತಾರೆ. ಅವರಿಗೆ ಪತಂಜಲಿ ಯೋಗಪದ್ಧತಿಯ ನಿಜವಾದ ಉದ್ದೇಶವು ಅರ್ಥವಾಗುವುದಿಲ್ಲ. ಪತಂಜಲಿ ಪದ್ಧತಿಯು ದಿವ್ಯಾನಂದವನ್ನು ಒಪ್ಪುತ್ತದೆ. ಆದರೆ ಅದ್ವೈತ ಸಿದ್ಧಾಂತಕ್ಕೆ ಭಂಗಬರುವುದೆಂಬ ಭಯದಿಂದ ಅದ್ವೈತಿಗಳು ಈ ದಿವ್ಯ ಆನಂದವನ್ನು ಒಪ್ಪುವುದಿಲ್ಲ. ಅದ್ವೈತಿಯು ಜ್ಞಾನ ಮತ್ತು ಜ್ಞಾನಿಯ ಭಿನ್ನತೆಯನ್ನು ಒಪ್ಪುವುದಿಲ್ಲ. ಆದರೆ ಈ ಶ್ಲೋಕದಲ್ಲಿ ಅಲೌಕಿಕ ಇಂದ್ರಿಯಗಳ ಮೂಲಕ ಸಾಧಿಸಿದ ದಿವ್ಯಾನಂದವನ್ನು ಒಪ್ಪಿಕೊಂಡಿದೆ. ಯೋಗಪದ್ಧತಿಯ ಪ್ರಸಿದ್ಧ ಪ್ರತಿಪಾದಕರಾದ ಪತಂಜಲಿ ಮುನಿಗಳು ಇದನ್ನು ಸಮರ್ಥಿಸಿದ್ದಾರೆ. ಆ ಮಹರ್ಷಿಗಳು ತಮ್ಮ ಯೋಗಸೂತ್ರಗಳಲ್ಲಿ (3.34)ಹೀಗೆ ಹೇಳಿದ್ದಾರೆ—**ಪುರುಷಾರ್ಥಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಂ ಸ್ವರೂಪಪ್ರತಿಷ್ಠಾ ವಾ ಚಿತಿಶಕ್ತಿರಿತಿ.**

ಈ **ಚಿತಿಶಕ್ತಿ** ಅಥವಾ ಅಂತರಂಗಶಕ್ತಿ ಆಧ್ಯಾತ್ಮಿಕವಾದದ್ದು. **ಪುರುಷಾರ್ಥ** ಎಂದರೆ ಐಹಿಕ ಧಾರ್ಮಿಕತೆ, ಆರ್ಥಿಕ ಬೆಳವಣಿಗೆ, ಇಂದ್ರಿಯ ತೃಪ್ತಿ ಮತ್ತು ಕಡೆಯಲ್ಲಿ, ಪರಮೋನ್ನತನೊಂದಿಗೆ ಒಂದಾಗುವ ಪ್ರಯತ್ನ. ಈ 'ಪರಮೋನ್ನತನೊಂದಿಗೆ ಒಂದಾಗುವುದ'ನ್ನು ಅದ್ವೈತಿಗಳು ಕೈವಲ್ಯ ಎಂದು ಕರೆಯುತ್ತಾರೆ. ಆದರೆ ಪತಂಜಲಿಗಳ ಪ್ರಕಾರ ಕೈವಲ್ಯವು ಒಳಗಿನ ಅಥವಾ ಅಂತರಂಗ ಶಕ್ತಿ; ಇದರಿಂದ ಜೀವಿಯು ತನ್ನ ಸಹಜ ಸ್ವರೂಪದ ಅರಿವನ್ನು ಪಡೆಯುತ್ತಾನೆ. ಚೈತನ್ಯಮಹಾಪ್ರಭುಗಳ ಮಾತುಗಳಲ್ಲಿ ಹೇಳುವುದಾದರೆ ಈ ಪರಿಸ್ಥಿತಿಯನ್ನು **ಚೇತೋ ದರ್ಪಣ ಮಾರ್ಜನಮ್** ಅಥವಾ ಧೂಳುಹಿಡಿದ ಮನಸ್ಸಿನ ಕನ್ನಡಿಯನ್ನು ಸ್ವಚ್ಛಗೊಳಿಸುವಿಕೆ ಎಂದು ಕರೆಯುತ್ತಾರೆ. ಈ ಸ್ವಚ್ಛಗೊಳಿಸುವಿಕೆಯು ವಾಸ್ತವವಾಗಿ ಮುಕ್ತಿಯೇ, ಅಥವಾ **ಭವ ಮಹಾದಾವಾಗ್ನಿ ನಿರ್ವಾಪಣಮ್.** ನಿರ್ವಾಣ ಸಿದ್ಧಾಂತವೂ — ಇದೂ ಪೂರ್ವಭಾವಿಯೇ—ಈ ತತ್ವಕ್ಕೆ ಸಂವಾದಿ. ಭಾಗವತದಲ್ಲಿ (2.10.6) ಇದನ್ನು **ಸ್ವರೂಪೇಣ ವ್ಯವಸ್ಥಿತಿಃ** ಎಂದು ಕರೆದಿದೆ. ಭಗವದ್ಗೀತೆಯೂ ಈ ಶ್ಲೋಕದಲ್ಲಿ ಈ ಸ್ಥಿತಿಯನ್ನು ದೃಢಗೊಳಿಸುತ್ತದೆ.

ನಿರ್ವಾಣ ಅಥವಾ ಐಹಿಕ ಅಂತ್ಯದನಂತರ ಆಧ್ಯಾತ್ಮಿಕ ಕಾರ್ಯಗಳು ಅಥವಾ ಭಗವಂತನ ಸೇವೆಯು ಪ್ರಕಟವಾಗುವುದು; ಇದಕ್ಕೆ ಕೃಷ್ಣಪ್ರಜ್ಞೆ ಎಂದು ಹೆಸರು. ಭಾಗವತದ ಮಾತುಗಳಲ್ಲಿ, **ಸ್ವರೂಪೇಣ ವ್ಯವಸ್ಥಿತಿಃ** — ಇದು ಜೀವಿಯ ನಿಜವಾದ ಬದುಕು. ಐಹಿಕ ಸೋಂಕಿನಿಂದ ಮಲಿನಗೊಂಡ

ಆಧ್ಯಾತ್ಮಿಕ ಬದುಕಿನ ಸ್ಥಿತಿಯೇ ಮಾಯೆ. ಈ ಐಹಿಕ ಸೋಂಕಿನಿಂದ ಬಿಡುಗಡೆ ಎಂದರೆ ಜೀವಿಯ ಮೂಲ ನಿರಂತರ ಸ್ಥಿತಿಯ ವಿನಾಶ ಎಂದು ಅರ್ಥವಲ್ಲ. ಪತಂಜಲಿಮುನಿ **ಕೈವಲ್ಯಂ ಸ್ವರೂಪಪ್ರತಿಷ್ಠಾ ವಾ ಚಿತಿಶಕ್ತಿರಿತಿ** ಎನ್ನುವ ಮಾತುಗಳಲ್ಲಿ ಇದನ್ನು ಒಪ್ಪಿದ್ದಾರೆ. ಈ **ಚಿತಿಶಕ್ತಿಯು** ಅಥವಾ ಅಲೌಕಿಕ ಆನಂದವು ನಿಜವಾದ ಬದುಕು. ಇದನ್ನು ವೇದಾಂತ ಸೂತ್ರದಲ್ಲಿ (1.1.12) **ಆನನ್ದಮಯೋಽಭ್ಯಾಸಾತ್** ಎನ್ನುವ ಮಾತುಗಳಲ್ಲಿ ದೃಢಪಡಿಸಿದೆ. ಈ ಸಹಜವಾದ ದಿವ್ಯಾನಂದವು ಯೋಗದ ಅಂತಿಮಗುರಿ. ಭಕ್ತಿಯೋಗದ ಅನುಷ್ಠಾನದಿಂದ ಇದನ್ನು ಸುಲಭವಾಗಿ ಸಾಧಿಸಬಹುದು. ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಭಕ್ತಿಯೋಗವನ್ನು ಸ್ಪಷ್ಟವಾಗಿ ವಿವರಿಸಲಾಗುತ್ತದೆ.

ಈ ಅಧ್ಯಾಯದಲ್ಲಿ ವಿವರಿಸಿರುವಂತೆ ಯೋಗಪದ್ಧತಿಯು ಹೇಳುವ ಸಮಾಧಿಯಲ್ಲಿ ಎರಡು ಬಗೆಗಳು — **ಸಮ್ಪ್ರಜ್ಞಾತ ಸಮಾಧಿ** ಮತ್ತು **ಅಸಮ್ಪ್ರಜ್ಞಾತ ಸಮಾಧಿ.** ತತ್ವಜ್ಞಾನದ ವಿವಿಧ ಸಂಶೋಧನೆಗಳಿಂದ ಮನುಷ್ಯನು ಆಧ್ಯಾತ್ಮಿಕ ಸ್ಥಾನದಲ್ಲಿ ನೆಲೆಗೊಂಡಾಗ ಆತನು **ಸಮ್ಪ್ರಜ್ಞಾತ ಸಮಾಧಿ**ಯನ್ನು ಸಾಧಿಸಿದ್ದಾನೆ ಎಂದು ಹೇಳುತ್ತಾರೆ. **ಅಸಮ್ಪ್ರಜ್ಞಾತ ಸಮಾಧಿ**ಯಲ್ಲಿ ಐಹಿಕ ಸಂತೋಷದೊಂದಿಗೆ ಸಂಬಂಧವೇ ಇಲ್ಲ. ಏಕೆಂದರೆ ಮನುಷ್ಯನು ಆಗ ಇಂದ್ರಿಯ ಮೂಲವಾದ ಎಲ್ಲ ಸುಖವನ್ನು ಮೀರಿರುತ್ತಾನೆ. ಯೋಗಿಯು ಒಮ್ಮೆ ಆಧ್ಯಾತ್ಮಿಕ ಸ್ಥಾನದಲ್ಲಿ ನೆಲೆಗೊಂಡನೆಂದರೆ ಎಂದಿಗೂ ಅದರಿಂದ ವಿಚಲಿತನಾಗುವುದಿಲ್ಲ. ಯೋಗಿಯು ಈ ಸ್ಥಾನವನ್ನು ತಲಪುವವರೆಗೆ ಯಶಸ್ವಿಯಲ್ಲ. ಇವತ್ತು ಯೋಗಾಭ್ಯಾಸವೆಂದು ಕರೆಸಿಕೊಳ್ಳುವ ಅಭ್ಯಾಸದಲ್ಲಿ ಹಲವು ಇಂದ್ರಿಯಸುಖಗಳು ಸೇರಿವೆ; ಅದು ವಿರುದ್ಧವಾದದ್ದು. ಕಾಮ ಮತ್ತು ಮದ್ಯಪಾನಗಳಲ್ಲಿ ನಿರತನಾದ ಯೋಗಿ ಬರಿಯ ಪರಿಹಾಸ್ಯವಷ್ಟೆ. ಯೋಗಸಾಧನೆಯಲ್ಲಿ ಸಿದ್ಧಿಗಳಿಂದ ಆಕರ್ಷಿತರಾಗುವ ಯೋಗಿಗಳು ಸಹ ಪರಿಪೂರ್ಣ ಸ್ಥಿತಿಗೆ ತಲಪಿದವರಲ್ಲ. ಯೋಗದ ಉಪ ಉತ್ಪನ್ನಗಳಿಂದ ಯೋಗಿಗಳು ಆಕರ್ಷಿತರಾದರೆ ಈ ಶ್ಲೋಕದಲ್ಲಿ ಹೇಳಿರುವಂತೆ ಅವರು ಪರಿಪೂರ್ಣತೆಯ ಹಂತವನ್ನು ಮುಟ್ಟಲಾರರು. ಕಸರತ್ತಿನ ಸಾಹಸಗಳ ಅಥವಾ ಸಿದ್ಧಿಗಳ ಪ್ರದರ್ಶನದಲ್ಲಿ ನಿರತರಾಗುವ ವ್ಯಕ್ತಿಗಳು ಹಾಗೆ ಮಾಡಿದರೆ ಯೋಗದ ಉದ್ದೇಶವೇ ನಷ್ಟವಾಗುತ್ತದೆ ಎನ್ನುವುದನ್ನು ತಿಳಿದುಕೊಳ್ಳಬೇಕು.

ಈ ಯುಗದಲ್ಲಿ ಅತ್ಯುತ್ತಮ ಯೋಗಾಭ್ಯಾಸ ಎಂದರೆ ಕೃಷ್ಣಪ್ರಜ್ಞೆ. ಇದು ಅರ್ಥವಾಗದ ಸಂಗತಿ ಏನೂ ಅಲ್ಲ. ಕೃಷ್ಣಪ್ರಜ್ಞೆ ಇರುವವನಿಗೆ ತನ್ನ ಕಾರ್ಯದಲ್ಲಿಯೇ ಎಷ್ಟು ಸುಖ ಎಂದರೆ ಆತನು ಬೇರೆ ಯಾವ ಸುಖವನ್ನೂ ಬಯಸುವುದಿಲ್ಲ. ಹಠಯೋಗ, ಧ್ಯಾನಯೋಗ ಮತ್ತು ಜ್ಞಾನಯೋಗಗಳನ್ನು ಅನುಷ್ಠಾನ ಮಾಡಲು — ಈ ವಂಚನೆಯ ಕಾಲದಲ್ಲಂತೂ — ಹಲವಾರು ಅಡ್ಡಿಗಳಿವೆ. ಆದರೆ ಕರ್ಮಯೋಗ ಅಥವಾ ಭಕ್ತಿಯೋಗವನ್ನು ಆಚರಿಸುವುದರಲ್ಲಿ ಇಂತಹ ಸಮಸ್ಯೆಗಳಿಲ್ಲ.

ಐಹಿಕ ದೇಹವು ಇರುವವರೆಗೆ, ಆಹಾರ, ನಿದ್ರೆ, ರಕ್ಷಣೆ ಮತ್ತು ಮೈಥುನ ಇಂತಹ ಅದರ ಅಗತ್ಯಗಳನ್ನು ಮನುಷ್ಯನು ಪೂರೈಸಲೇಬೇಕು. ಆದರೆ ಪರಿಶುದ್ಧ ಭಕ್ತಿಯೋಗ ಅಥವಾ ಕೃಷ್ಣಪ್ರಜ್ಞೆಯಲ್ಲಿರುವವನು ದೇಹದ ಅಗತ್ಯಗಳನ್ನು ಪೂರೈಸುವಾಗ ಇಂದ್ರಿಯಗಳನ್ನು ಉದ್ರೇಕಗೊಳಿಸುವುದಿಲ್ಲ. ಪಾಲಿಗೆ ಬಂದದ್ದು ಪಂಚಾಮೃತವೆಂದು ಆತನು ಬದುಕಿನ ಕನಿಷ್ಠ ಅಗತ್ಯಗಳನ್ನು ಸ್ವೀಕರಿಸುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಅಲೌಕಿಕ ಆನಂದವನ್ನು ಅನುಭವಿಸುತ್ತಾನೆ. ಅಪಘಾತಗಳು, ರೋಗ, ಕೊರತೆ ಬಹು ಹತ್ತಿರದ ಬಂಧುವಿನ ಸಾವು ಮುಂತಾದ ಹೊರಜಗತ್ತಿನ

ಆಗುಹೋಗುಗಳಿಗೆ ಆತನು ಲಕ್ಷ್ಯವನ್ನೇ ಕೊಡುವುದಿಲ್ಲ. ಆದರೆ ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಕ್ತಿಯೋಗದಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸುವ ಬಗೆಗೆ ಅವನು ಸದಾ ಎಚ್ಚರದಿಂದಿರುತ್ತಾನೆ. ಆಕಸ್ಮಿಕಗಳು ಅವನ ಮನಸ್ಸನ್ನು ತನ್ನ ಕರ್ತವ್ಯದಿಂದ ಬೇರೆಡೆಗೆ ತಿರುಗಿಸಲಾರವು. ಭಗವದ್ಗೀತೆಯಲ್ಲಿ (2.14) ಹೇಳಿರುವಂತೆ, **ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ**. ಇಂತಹ ಪ್ರಾಸಂಗಿಕ ಆಗುಹೋಗುಗಳನ್ನು ಅವನು ಸಹಿಸಿಕೊಳ್ಳುತ್ತಾನೆ. ಏಕೆಂದರೆ ಇವೆಲ್ಲ ಬರುತ್ತವೆ, ಹೋಗುತ್ತವೆ, ಆದರೆ ತನ್ನ ಕರ್ತವ್ಯಗಳ ಮೇಲೆ ಪ್ರಭಾವ ಬೀರುವುದಿಲ್ಲ ಎಂದು ಅವನಿಗೆ ಗೊತ್ತು. ಈ ರೀತಿಯಲ್ಲಿ ಆತನು ಯೋಗಾಭ್ಯಾಸದಲ್ಲಿ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುತ್ತಾನೆ.

## ಶ್ಲೋಕ - 24

**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ |**
**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ |**
**ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ||೨೪||**

**ಸಃ**—ಆ; **ನಿಶ್ಚಯೇನ**—ದೃಢ ನಿರ್ಧಾರದಿಂದ; **ಯೋಕ್ತವ್ಯಃ**—ಅಭ್ಯಾಸಮಾಡಲ್ಪಡಬೇಕು; **ಯೋಗಃ**—ಯೋಗ ಪದ್ಧತಿಯು; **ಅನಿರ್ವಿಣ್ಣ ಚೇತಸಾ**—ವಿಚಲತೆಯಿಲ್ಲದೆ; **ಸಂಕಲ್ಪ**—ಊಹಾತ್ಮಕ ಚಿಂತನೆಗಳಿಂದ; **ಪ್ರಭವಾನ್**—ಹುಟ್ಟಿದ; **ಕಾಮಾನ್**—ಭೌತಿಕ ಅಪೇಕ್ಷೆಗಳನ್ನು; **ತ್ಯಕ್ತ್ವಾ**—ತ್ಯಜಿಸಿ; **ಸರ್ವಾನ್**—ಎಲ್ಲ; **ಅಶೇಷತಃ**—ಸಂಪೂರ್ಣವಾಗಿ; **ಮನಸಾ**—ಮನಸ್ಸಿನಿಂದ; **ಏವ**—ಖಂಡಿತವಾಗಿಯೂ; **ಇನ್ದ್ರಿಯ ಗ್ರಾಮಮ್**—ಇಂದ್ರಿಯಗಳ ಸಮೂಹವನ್ನು; **ವಿನಿಯಮ್ಯ**—ನಿಯಂತ್ರಿಸುತ್ತ; **ಸಮನ್ತತಃ**—ಎಲ್ಲ ಕಡೆಗಳಿಂದಲೂ.

## ಅನುವಾದ

**ಯೋಗಾಭ್ಯಾಸದಲ್ಲಿ ದೃಢಸಂಕಲ್ಪದಿಂದ ಮತ್ತು ಶ್ರದ್ಧೆಯಿಂದ ತೊಡಗಬೇಕು. ಆ ದಾರಿಯಿಂದ ಬೇರೆಡೆ ಹೋಗಬಾರದು. ಊಹಾತ್ಮಕ ಚಿಂತನೆಯಿಂದ ಹುಟ್ಟಿದ ಬಯಕೆಗಳಲ್ಲಿ ಒಂದನ್ನೂ ಬಿಡದೆ ದೂರ ಮಾಡಬೇಕು. ಹೀಗೆ ಎಲ್ಲ ದಿಕ್ಕುಗಳಲ್ಲಿಯೂ ಇಂದ್ರಿಯಗಳನ್ನು ನಿಯಂತ್ರಣ ಮಾಡಬೇಕು.**

## ಭಾವಾರ್ಥ

ಯೋಗಾಭ್ಯಾಸಿಯು ದೃಢಸಂಕಲ್ಪಮಾಡಿರಬೇಕು ಮತ್ತು ವಿಚಲಿತನಾಗದೆ ತಾಳ್ಮೆಯಿಂದ ಅಭ್ಯಾಸವನ್ನು ಮುಂದುವರಿಸಬೇಕು. ಕಡೆಗೆ ಯಶಸ್ಸು ಸಿಕ್ಕುವುದೆಂಬ ದೃಢನಂಬಿಕೆ ಇರಬೇಕು. ಯಶಸ್ಸಿನ ಸಾಧನೆಯಲ್ಲಿ ವಿಳಂಬವಾದರೂ ಧೈರ್ಯಗೆಡದೆ ಇದೇ ದಾರಿಯಲ್ಲಿ ವಿಶೇಷ ಅಭ್ಯಾಸದಿಂದ ಮುಂದುವರಿಯಬೇಕು. ಕಡು ನಿಷ್ಠಾವಂತ ಅಭ್ಯಾಸಿಗೆ ಯಶಸ್ಸು ದೊರೆತೇ ದೊರಕುತ್ತದೆ. ಭಕ್ತಿಯೋಗವನ್ನು ಕುರಿತು ರೂಪ ಗೋಸ್ವಾಮಿಯವರು ಹೀಗೆ ಹೇಳಿದ್ದಾರೆ —

**ಉತ್ಸಾಹಾನ್ ನಿಶ್ಚಯಾದ್ಧೈರ್ಯಾತ್ ತತ್‌ತತ್‌ಕರ್ಮಪ್ರವರ್ತನಾತ್ |**
**ಸಙ್ಗತ್ಯಾಗಾತ್ ಸತೋ ವೃತ್ತೇಃ ಷಡ್ಭಿರ್ ಭಕ್ತಿಃ ಪ್ರಸಿದ್ಧ್ಯತಿ ||**

"ಭಕ್ತರ ಸಹವಾಸದಲ್ಲಿ ವಿಧಿತ ಕರ್ತವ್ಯಗಳನ್ನು ಮಾಡಬೇಕು ಮತ್ತು ಸಾತ್ವಿಕ

ಕಾರ್ಯಗಳಲ್ಲಿಯೇ ಸಂಪೂರ್ಣವಾಗಿ ತೊಡಗಬೇಕು; ಹೀಗೆ ಮಾಡುವ ಮನುಷ್ಯನು ಭಕ್ತಿಯೋಗದ ಪ್ರಕ್ರಿಯೆಯನ್ನು ಯಶಸ್ವಿಯಾಗಿ, ಹೃದಯವನ್ನು ತುಂಬಿದ ಉತ್ಸಾಹ, ನಿರಂತರ ಪ್ರಯತ್ನ ಮತ್ತು ದೃಢಸಂಕಲ್ಪಗಳಿಂದ ಕಾರ್ಯಗತ ಮಾಡಬಹುದು." (ಉಪದೇಶಾಮೃತ 3).

ದೃಢಸಂಕಲ್ಪದ ವಿಷಯ ಹೇಳಬೇಕೆಂದರೆ ಸಮುದ್ರದ ಅಲೆಗಳಲ್ಲಿ ಮೊಟ್ಟೆಗಳನ್ನು ಕಳೆದುಕೊಂಡ ಗುಬ್ಬಚ್ಚಿಯ ಮೇಲ್ಪಂಕ್ತಿಯನ್ನು ಅನುಸರಿಸಬೇಕು. ಗುಬ್ಬಚ್ಚಿಯು ಸಮುದ್ರ ತೀರದಲ್ಲಿ ಮೊಟ್ಟೆಗಳನ್ನಿಟ್ಟಿತು. ದೊಡ್ಡ ಸಮುದ್ರವು ತನ್ನ ಅಲೆಗಳಲ್ಲಿ ಮೊಟ್ಟೆಗಳನ್ನು ಕೊಚ್ಚಿಕೊಂಡು ಹೋಯಿತು. ಗುಬ್ಬಚ್ಚಿಯ ಮನಸ್ಸು ಕದಡಿಹೋಯಿತು. ತನ್ನ ಮೊಟ್ಟೆಗಳನ್ನು ಹಿಂದಿರುಗಿಸುವಂತೆ ಸಮುದ್ರವನ್ನು ಕೇಳಿತು. ಸಮುದ್ರವು ಈ ಮನವಿಗೆ ಕಿವಿ ಕೊಡಲೇ ಇಲ್ಲ. ಆದ್ದರಿಂದ ಗುಬ್ಬಚ್ಚಿಯು ಸಮುದ್ರವನ್ನು ಬತ್ತಿಸಿಬಿಡಲು ತೀರ್ಮಾನಿಸಿತು. ಅದು ತನ್ನ ಪುಟ್ಟಕೊಕ್ಕಿನಿಂದ ನೀರನ್ನು ತೆಗೆದುಹಾಕಲು ಪ್ರಾರಂಭಿಸಿತು. ಅಸಾಧ್ಯವಾದುದನ್ನು ಸಾಧಿಸಬೇಕೆಂಬ ಈ ಸಂಕಲ್ಪವನ್ನು ಕಂಡು ಎಲ್ಲರೂ ನಕ್ಕರು. ಗುಬ್ಬಚ್ಚಿಯ ಕೆಲಸದ ಸುದ್ದಿ ಹಬ್ಬಿತು. ಕಡೆಗೆ ಶ್ರೀವಿಷ್ಣುವಿನ ಬೃಹದಾಕಾರದ ವಾಹನ ಗರುಡನಿಗೆ ಇದು ತಿಳಿಯಿತು. ಅವನಿಗೆ ತನ್ನ ಈ ಪುಟ್ಟಸೋದರಿ ಹಕ್ಕಿಯ ವಿಷಯದಲ್ಲಿ ಅನುಕಂಪವಾಯಿತು. ಅವನು ಗುಬ್ಬಚ್ಚಿಯನ್ನು ನೋಡಲು ಬಂದನು. ಪುಟ್ಟ ಗುಬ್ಬಚ್ಚಿಯ ಸಂಕಲ್ಪವನ್ನು ನೋಡಿ ಅವನಿಗೆ ತುಂಬ ಸಂತೋಷವಾಯಿತು. ಅವನು ನೆರವಾಗುವೆನೆಂದು ಮಾತುಕೊಟ್ಟ. ಸಮುದ್ರವು ಗುಬ್ಬಚ್ಚಿಯ ಮೊಟ್ಟೆಗಳನ್ನು ಹಿಂದಿರುಗಿಸದಿದ್ದರೆ ತಾನೇ ಗುಬ್ಬಚ್ಚಿಯ ಕೆಲಸವನ್ನು ಕೈಗೊಳ್ಳಬೇಕಾಗುತ್ತದೆ ಎಂದು ಎಚ್ಚರಿಕೆ ಕೊಟ್ಟ. ಸಮುದ್ರವು ಹೆದರಿ ಮೊಟ್ಟೆಗಳನ್ನು ಹಿಂದಕ್ಕೆ ಕೊಟ್ಟಿತು ಹೀಗೆ ಗರುಡನ ಕೃಪೆಯಿಂದ ಗುಬ್ಬಚ್ಚಿಗೆ ಸುಖವಾಯಿತು.

ಹೀಗೆಯೇ ಯೋಗಾಭ್ಯಾಸವು, ಅದರಲ್ಲಿಯೂ ಕೃಷ್ಣಪ್ರಜ್ಞೆಯಲ್ಲಿನ ಭಕ್ತಿಯೋಗವು, ತುಂಬ ಕಠಿಣವಾದದ್ದು ಎಂದು ತೋರಬಹುದು. ಆದರೆ ಯಾರಾದರೂ ಗಟ್ಟಿಸಂಕಲ್ಪದಿಂದ ತತ್ವಗಳನ್ನು ಅನುಸರಿಸಿದರೆ ನಿಶ್ಚಯವಾಗಿಯೂ ಭಗವಂತನು ಸಹಾಯ ಮಾಡುತ್ತಾನೆ. ಏಕೆಂದರೆ ತಮಗೆ ತಾವೇ ನೆರವಾಗುವವರಿಗೆ ಭಗವಂತನು ನೆರವಾಗುತ್ತಾನೆ.

## ಶ್ಲೋಕ - 25

ಶನೈಃ ಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ |
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್ ||೨೫||

ಶನೈಃ—ಕ್ರಮೇಣ; ಶನೈಃ—ಹಂತಹಂತವಾಗಿ; ಪರಮೇತ್—ತಡೆಗಟ್ಟಬೇಕು; ಬುದ್ಧ್ಯಾ —ಬುದ್ಧಿಯಿಂದ; ಧೃತಿ ಗೃಹೀತಯಾ—ದೃಢ ನಿರ್ಧಾರದಿಂದ; ಆತ್ಮ ಸಂಸ್ಥಮ್—ದಿವ್ಯತೆಯಲ್ಲಿ ಇರಿಸಿದ್ದನ್ನಾಗಿ; ಮನಃ—ಮನಸ್ಸನ್ನು; ಕೃತ್ವಾ—ಮಾಡಿ; ನ—ಇಲ್ಲ; ಕಿಞ್ಚಿತ್—ಬೇರೆಯಾವುದನ್ನು; ಅಪಿ—ಕೂಡ; ಚಿನ್ತಯೇತ್—ಚಿಂತಿಸಬೇಕು.

## ಅನುವಾದ

**ಕ್ರಮಕ್ರಮವಾಗಿ, ಹೆಜ್ಜೆಹೆಜ್ಜೆಯಾಗಿ, ಸಂಪೂರ್ಣ ಸ್ಥೈರ್ಯವನ್ನು ಆಧಾರಮಾಡಿಕೊಂಡ**

**ಬುದ್ಧಿಶಕ್ತಿಯ ಮೂಲಕ ಮನುಷ್ಯನು ಸಮಾಧಿಸ್ಥಿತಿಯಲ್ಲಿ ನಿಲ್ಲಬೇಕು. ಹೀಗೆ ಮನಸ್ಸನ್ನು ಆತ್ಮದಲ್ಲಿಯೇ ಸ್ಥಿರವಾಗಿ ನಿಲ್ಲಿಸಬೇಕು, ಬೇರೇನನ್ನೂ ಕುರಿತು ಯೋಚಿಸಬಾರದು.**

### ಭಾವಾರ್ಥ

ಸೂಕ್ತವಾದ ದೃಢನಂಬಿಕೆ ಮತ್ತು ಬುದ್ಧಿಶಕ್ತಿಗಳ ಮೂಲಕ ಮನುಷ್ಯನು ಕ್ರಮಕ್ರಮವಾಗಿ ಇಂದ್ರಿಯಗಳ ಕಾರ್ಯಗಳನ್ನು ನಿಲ್ಲಿಸಬೇಕು. ಇದಕ್ಕೆ **ಪ್ರತ್ಯಾಹಾರ** ಎಂದು ಹೆಸರು. ದೃಢನಂಬಿಕೆ, ಧ್ಯಾನ ಮತ್ತು ಇಂದ್ರಿಯಗಳ ಕಾರ್ಯಗಳನ್ನು ಕೊನೆಗಾಣಿಸುವುದರಿಂದ ನಿಯಂತ್ರಿತವಾದ ಮನಸ್ಸನ್ನು ಸಮಾಧಿಯಲ್ಲಿ ನೆಲೆಗೊಳಿಸಬೇಕು. ಆಗ ಬದುಕಿನ ಐಹಿಕ ಪರಿಕಲ್ಪನೆಯಲ್ಲಿ ತೊಡಗಿಕೊಳ್ಳುವ ಅಪಾಯವಿರುವುದಿಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ, ಐಹಿಕ ದೇಹವಿರುವಷ್ಟು ಕಾಲವೂ ಮನುಷ್ಯನು ಜಡವಸ್ತುವಿನೊಡನೆ ಸಂಬಂಧ ಹೊಂದಿದ್ದರೂ ಇಂದ್ರಿಯ ತೃಪ್ತಿಯ ವಿಷಯವನ್ನು ಯೋಚಿಸಲೇಬಾರದು. ಪರಮಾತ್ಮನ ಆನಂದವನ್ನು ಬಿಟ್ಟು ಬೇರೆ ಯಾವುದೇ ಸಂತೋಷವನ್ನು ಕುರಿತು ಯೋಚಿಸಬಾರದು. ನೇರವಾಗಿ ಕೃಷ್ಣಪ್ರಜ್ಞೆಯನ್ನು ಅಭ್ಯಾಸಮಾಡುವುದರಿಂದ ಸುಲಭವಾಗಿ ಈ ಸ್ಥಿತಿಯನ್ನು ಮುಟ್ಟಬಹುದು.

### ಶ್ಲೋಕ - 26

**ಯತೋ ಯತೋ ನಿಶ್ಚಲತಿ ಮನಶ್ಚಂಚಲಮಸ್ಥಿರಮ್ |**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ||೨೬||**

**ಯತಃ ಯತಃ**—ಎಲ್ಲೆಲ್ಲಿ; **ನಿಶ್ಚಲತಿ**—ನಿಜವಾಗಿಯೂ ಉದ್ವಿಗ್ನವಾಗುತ್ತದೋ; **ಮನಃ**—ಮನಸ್ಸು; **ಚಂಚಲಮ್**—ಚಂಚಲವಾದ; **ಅಸ್ಥಿರಮ್**—ಅಸ್ಥಿರವಾದ; **ತತಃ ತತಃ**—ಅಲ್ಲಿಂದ; **ನಿಯಮ್ಯ**—ನಿಯಂತ್ರಿಸಿ; **ಏತತ್**—ಇದನ್ನು; **ಆತ್ಮನಿ**—ಆತ್ಮನಲ್ಲಿ; **ಏವ**—ಖಂಡಿತವಾಗಿಯೂ; **ವಶಮ್**—ನಿಯಂತ್ರಣಕ್ಕೆ; **ನಯೇತ್**—ತರಬೇಕು.

### ಅನುವಾದ

**ಮನಸ್ಸು ತನ್ನ ಚಂಚಲವಾದ ಮತ್ತು ಅಸ್ಥಿರವಾದ ಸ್ವಭಾವದ ದೆಸೆಯಿಂದ ಎಲ್ಲೆಲ್ಲೇ ಅಲೆದಾಡಲಿ ಮನುಷ್ಯನು ಅದನ್ನು ಹಿಂದಕ್ಕೆ ಸೆಳೆದು ಆತ್ಮದ ನಿಯಂತ್ರಣಕ್ಕೆ ಒಳಪಡಿಸಬೇಕು.**

### ಭಾವಾರ್ಥ

ಮನಸ್ಸಿನ ಸ್ವಭಾವ ಚಂಚಲವಾದದ್ದು ಮತ್ತು ಅಸ್ಥಿರವಾದದ್ದು. ಆದರೆ ಆತ್ಮಸಾಕ್ಷಾತ್ಕಾರವಾದ ಯೋಗಿಯು ಮನಸ್ಸನ್ನು ನಿಯಂತ್ರಿಸಬೇಕು. ಅವನನ್ನು ಮನಸ್ಸು ನಿಯಂತ್ರಿಸಬಾರದು. ಮನಸ್ಸನ್ನು (ಮತ್ತು ಇಂದ್ರಿಯಗಳನ್ನು ಸಹ) ನಿಯಂತ್ರಿಸುವವನನ್ನು ಗೋಸ್ವಾಮಿ ಅಥವಾ ಸ್ವಾಮಿ ಎಂದು ಕರೆಯುತ್ತಾರೆ. ಮನಸ್ಸಿನ ನಿಯಂತ್ರಣಕ್ಕೆ ಒಳಗಾದವನನ್ನು ಗೋದಾಸ ಅಥವಾ ಇಂದ್ರಿಯಗಳ ದಾಸ ಎಂದು ಕರೆಯುತ್ತಾರೆ. ಗೋಸ್ವಾಮಿಯಾದವನಿಗೆ ಇಂದ್ರಿಯಸುಖದ ಮಟ್ಟವು ತಿಳಿದಿರುತ್ತದೆ. ಆಧ್ಯಾತ್ಮಿಕ ಇಂದ್ರಿಯ ಸುಖದಲ್ಲಿ ಇಂದ್ರಿಯಗಳು ಹೃಷೀಕೇಶನ ಅಥವಾ

ಇಂದ್ರಿಯಗಳ ಪರಮ ಸ್ವಾಮಿಯಾದ ಕೃಷ್ಣನ ಸೇವೆಯಲ್ಲಿ ತೊಡಗಿರುತ್ತವೆ. ಪರಿಶುದ್ಧಗೊಂಡ ಇಂದ್ರಿಯಗಳಿಂದ ಕೃಷ್ಣ ಸೇವೆ ಮಾಡುವುದನ್ನು ಕೃಷ್ಣಪ್ರಜ್ಞೆ ಎಂದು ಕರೆಯುತ್ತಾರೆ. ಇಂದ್ರಿಯಗಳನ್ನು ಸಂಪೂರ್ಣ ನಿಯಂತ್ರಣಕ್ಕೆ ಒಳಪಡಿಸುವ ರೀತಿ ಇದೇ. ಇನ್ನೂ ಮುಖ್ಯವಾದ ಸಂಗತಿ ಎಂದರೆ, ಇದೇ ಯೋಗಾಭ್ಯಾಸದ ಅತ್ಯುನ್ನತ ಪರಿಪೂರ್ಣತೆ.

## ಶ್ಲೋಕ - 27

**ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ |**
**ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ||೨೭||**

**ಪ್ರಶಾನ್ತ**—ಶಾಂತಿಯುತನಾದ, ಕೃಷ್ಣನ ಪಾದಕಮಲಗಳ ಮೇಲೆ ಸ್ಥಾಪಿತವಾದ; **ಮನಸಮ್**—ಮನಸ್ಸುಳ್ಳ; **ಹಿ**—ಖಂಡಿತವಾಗಿಯೂ; **ಏನಮ್**—ಈ; **ಯೋಗಿನಮ್**—ಯೋಗಿಯನ್ನು; **ಸುಖಮ್**—ಸುಖವು; **ಉತ್ತಮಮ್**—ಅತ್ಯುತ್ತಮವಾದ; **ಉಪೈತಿ**—ಹೊಂದುವುದು; **ಶಾನ್ತ ರಜಸಮ್**—ರಜೋಗುಣವು ಶಾಂತವಾದ; **ಬ್ರಹ್ಮ ಭೂತಮ್**—ಪರತರನೊಂದಿಗೆ ಗುರುತಿಸಿಕೊಳ್ಳುವುದರಿಂದ ಮೋಕ್ಷವನ್ನು ಪಡೆದ; **ಅಕಲ್ಮಷಮ್**—ಪೂರ್ವದ ಎಲ್ಲ ಪಾಪಫಲಗಳಿಂದ ಮುಕ್ತನಾದ.

### ಅನುವಾದ

**ನನ್ನಲ್ಲಿ ಮನಸ್ಸನ್ನು ನಿಲ್ಲಿಸಿದ ಯೋಗಿಯು ನಿಶ್ಚಯವಾಗಿಯೂ ಅಲೌಕಿಕ ಸುಖದ ಅತ್ಯುನ್ನತ ಪರಿಪೂರ್ಣತೆಯನ್ನು ಮುಟ್ಟುತ್ತಾನೆ. ಆತನು ರಜೋಗುಣವನ್ನು ಮೀರಿದವನು. ಆತನು ಪರಮೋನ್ನತನೊಂದಿಗೆ ತನ್ನ ಗುಣಾತ್ಮಕ ಏಕತ್ವವನ್ನು ಸಾಧಿಸುತ್ತಾನೆ. ಹೀಗೆ ಅವನು ಹಿಂದಿನ ಕರ್ಮಗಳ ಫಲಗಳಿಂದ ಬಿಡುಗಡೆ ಹೊಂದುತ್ತಾನೆ.**

### ಭಾವಾರ್ಥ

**ಬ್ರಹ್ಮಭೂತ** ಎಂದರೆ ಐಹಿಕ ಕಶ್ಮಲ ಸಂಪರ್ಕದಿಂದ ಮುಕ್ತನಾಗಿ ಭಗವಂತನ ಅಲೌಕಿಕ ಸೇವೆಯಲ್ಲಿ ಸ್ಥಿರವಾಗಿರುವುದು. **ಮದ್‌ಭಕ್ತಿಂ ಲಭತೇ ಪರಾಮ್** (ಗೀತಾ 18.54) — ಮನುಷ್ಯನ ಮನಸ್ಸು ಭಗವಂತನ ಚರಣಕಮಲಗಳಲ್ಲಿ ಸ್ಥಿರವಾಗಿ ನಿಲ್ಲುವವರೆಗೆ ಬ್ರಹ್ಮನ್‌ನ ಗುಣದಲ್ಲಿ ಅವನು ನಿಲ್ಲಲಾರನು. **ಸ ವೈ ಮನಃ ಕೃಷ್ಣಪದಾರವಿಂದಯೋಃ** ಸದಾ ಭಗವಂತನ ಅಲೌಕಿಕ ಪ್ರೇಮ ಸೇವೆಯಲ್ಲಿ ನಿರತವಾಗಿರುವುದು ಅಥವಾ ಕೃಷ್ಣಪ್ರಜ್ಞೆಯಲ್ಲಿರುವುದು ಎಂದರೆ ವಾಸ್ತವವಾಗಿ ರಜೋಗುಣದಿಂದ ಮತ್ತು ಎಲ್ಲ ಐಹಿಕ ಕಲ್ಮಷದಿಂದ ಬಿಡುಗಡೆ ಹೊಂದುವುದು.

## ಶ್ಲೋಕ - 28

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ |**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ ||೨೮||**

**ಯುಞ್ಜನ್**—ಯೋಗಾಭ್ಯಾಸದಲ್ಲಿ ತೊಡಗಿಸಿ; **ಏವಮ್**—ಹೀಗೆ; **ಸದಾ**—ಯಾವಾಗಲೂ;

**ಆತ್ಮಾನಮ್**—ತನ್ನನ್ನು; **ಯೋಗೀ**—ಪರಮೋನ್ನತ ಆತ್ಮನೊಂದಿಗೆ ಸಂಪರ್ಕ ಉಳ್ಳವನು; **ವಿಗತ**—ಮುಕ್ತವಾದ; **ಕಲ್ಮಷಃ**—ಸಕಲ ಭೌತಿಕ ಕಲ್ಮಷಗಳುಳ್ಳವನಾಗಿ; **ಸುಖೇನ**—ದಿವ್ಯ ಸುಖದಿಂದ; **ಬ್ರಹ್ಮಸಂಸ್ಪರ್ಶಮ್**—ಪರಮೋನ್ನತನೊಂದಿಗೆ ಸತತ ಸಂಪರ್ಕವನ್ನು; **ಅತ್ಯನ್ತಮ್**—ಅತ್ಯುನ್ನತ; **ಸುಖಮ್**—ಸುಖವನ್ನು; **ಅಶ್ನುತೇ**—ಹೊಂದುತ್ತಾನೆ.

## ಅನುವಾದ

**ಸದಾ ಯೋಗಾಭ್ಯಾಸದಲ್ಲಿ ನಿರತನಾದ ಆತ್ಮಸಂಯಮಿಯಾದ ಯೋಗಿಯು ಎಲ್ಲ ಐಹಿಕ ಕಲ್ಮಷದಿಂದ ಮುಕ್ತನಾಗಿ, ಭಗವಂತನ ಅಲೌಕಿಕ ಪ್ರೇಮಸೇವೆಯಲ್ಲಿ ಪರಿಪೂರ್ಣ ಸುಖದ ಅತ್ಯುನ್ನತ ಹಂತವನ್ನು ತಲಪುತ್ತಾನೆ.**

## ಭಾವಾರ್ಥ

ಆತ್ಮಸಾಕ್ಷಾತ್ಕಾರ ಎಂದರೆ ಪರಮ ಪ್ರಭುವಿನೊಂದಿಗೆ ಮನುಷ್ಯನಿಗೆ ಇರುವ ಸಂಬಂಧದ ಸಹಜ ಸ್ವರೂಪವನ್ನು ತಿಳಿದುಕೊಳ್ಳುವುದು. ವೈಯಕ್ತಿಕ ಆತ್ಮವು ಪರಮ ಪ್ರಭುವಿನ ವಿಭಿನ್ನಾಂಶ. ಅದರ ಸ್ಥಾನವೆಂದರೆ ಭಗವಂತನಿಗೆ ಅಲೌಕಿಕ ಸೇವೆಯನ್ನು ಮಾಡುವುದು. ಪರಮ ಪ್ರಭುವಿನೊಂದಿಗೆ ಈ ದಿವ್ಯಸಂಪರ್ಕಕ್ಕೆ ಬ್ರಹ್ಮಸಂಸ್ಪರ್ಶ ಎಂದು ಹೆಸರು.

## ಶ್ಲೋಕ - 29

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥೨೯॥**

**ಸರ್ವ ಭೂತ ಸ್ಥಮ್**—ಎಲ್ಲ ಜೀವಿಗಳಲ್ಲಿಯೂ ಇರುವ; **ಆತ್ಮಾನಮ್**—ಪರಮಾತ್ಮನನ್ನು; **ಸರ್ವ**—ಎಲ್ಲ; **ಭೂತಾನಿ**—ಜೀವಿಗಳನ್ನು; **ಚ**—ಕೂಡ; **ಆತ್ಮನಿ**—ಆತ್ಮನಲ್ಲಿ; **ಈಕ್ಷತೇ**—ನೋಡುತ್ತಾನೆ; **ಯೋಗ ಯುಕ್ತ ಆತ್ಮಾ**—ಕೃಷ್ಣಪ್ರಜ್ಞೆಯಲ್ಲಿ ಯುಕ್ತನಾಗಿರುವವನು; **ಸರ್ವತ್ರ**— ಎಲ್ಲಕಡೆಗಳಲ್ಲಿ; **ಸಮದರ್ಶನಃ**—ಸಮಾನವಾದ ನೋಟವುಳ್ಳ.

## ಅನುವಾದ

**ನಿಜವಾದ ಯೋಗಿಯು ಎಲ್ಲ ಜೀವಿಗಳಲ್ಲಿಯೂ ನನ್ನನ್ನು ಕಾಣುತ್ತಾನೆ ಮತ್ತು ನನ್ನಲ್ಲಿ ಎಲ್ಲ ಜೀವಿಗಳನ್ನೂ ಕಾಣುತ್ತಾನೆ. ವಾಸ್ತವವಾಗಿ, ಆತ್ಮಸಾಕ್ಷಾತ್ಕಾರವನ್ನು ಪಡೆದ ಮನುಷ್ಯನು ಪರಮ ಪ್ರಭುವಾದ ನನ್ನನ್ನೇ ಎಲ್ಲೆಲ್ಲಿಯೂ ಕಾಣುತ್ತಾನೆ.**

## ಭಾವಾರ್ಥ

ಕೃಷ್ಣಪ್ರಜ್ಞೆ ಇರುವ ಯೋಗಿಯು ಪರಿಪೂರ್ಣ ದ್ರಷ್ಟಾರನು. ಏಕೆಂದರೆ ಅವನು ಪರಮ ಪ್ರಭುವಾದ ಕೃಷ್ಣನು ಪರಮಾತ್ಮನಾಗಿ ಎಲ್ಲರ ಹೃದಯಗಳಲ್ಲಿ ನೆಲೆಸಿರುವುದನ್ನು ಕಾಣುತ್ತಾನೆ. **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ.** ಪರಮಾತ್ಮ ಸ್ವರೂಪನಾದ ಭಗವಂತನು

ಒಂದು ನಾಯಿಯ ಹೃದಯದಲ್ಲಿಯೂ ಒಬ್ಬ ಬ್ರಾಹ್ಮಣನ ಹೃದಯದಲ್ಲಿಯೂ ನೆಲೆಸಿರುತ್ತಾನೆ. ಪರಿಪೂರ್ಣಯೋಗಿಗೆ ಭಗವಂತನು ನಿರಂತರನಾಗಿ ಅಲೌಕಿಕನಾದವನು ಮತ್ತು ನಾಯಿಯಲ್ಲಾಗಲೀ ಬ್ರಾಹ್ಮಣನಲ್ಲಾಗಲೀ ಇರುವುದರಿಂದ ಅವನಿಗೆ ಯಾವ ಪರಿಣಾಮವೂ ಇಲ್ಲ ಎನ್ನುವುದು ತಿಳಿದಿರುತ್ತದೆ. ಇದು ಭಗವಂತನ ಪರಮ ತಾಟಸ್ಥ್ಯ. ವ್ಯಕ್ತಿಗತ ಆತ್ಮವು ವ್ಯಕ್ತಿಯ ಹೃದಯದಲ್ಲಿ ನೆಲೆಸಿರುತ್ತದೆ. ಆದರೆ ಅದು ಎಲ್ಲ ಹೃದಯಗಳಲ್ಲಿ ಇರುವುದಿಲ್ಲ. ವೈಯಕ್ತಿಕ ಆತ್ಮಕ್ಕೂ ಪರಮಾತ್ಮನಿಗೂ ಇದೇ ವ್ಯತ್ಯಾಸ. ವಾಸ್ತವವಾಗಿ, ಯೋಗಾಭ್ಯಾಸದಲ್ಲಿ ಇಲ್ಲದವನು ಇದನ್ನು ಅಷ್ಟು ಸ್ಪಷ್ಟವಾಗಿ ಕಾಣಲಾರ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಆಸ್ತಿಕನ ಹೃದಯದಲ್ಲಿಯೂ ನಾಸ್ತಿಕನ ಹೃದಯದಲ್ಲಿಯೂ ಕೃಷ್ಣನನ್ನು ಕಾಣಬಲ್ಲ. ಸ್ಮೃತಿಯಲ್ಲಿ ಇದನ್ನು ಹೀಗೆ ದೃಢಪಡಿಸಿದೆ — **ಆತತತ್ವಾಚ್ಚ ಮಾತೃತ್ವಾಚ್ಚ ಆತ್ಮಾ ಹಿ ಪರಮೋ ಹರಿಃ** ಭಗವಂತನು ಎಲ್ಲ ಜೀವಿಗಳ ಆಕರನಾದದ್ದರಿಂದ ಅವನು ತಾಯಿಯಂತೆ ಮತ್ತು ಪಾಲಕನಂತೆ. ತಾಯಿಯು ಬೇರೆಬೇರೆ ಬಗೆಯ ಮಕ್ಕಳಿಗೆ ಹೇಗೆ ತಟಸ್ಥಳೋ ಹಾಗೆ ಪರಮ ಪಿತನು (ಅಥವಾ ಮಾತೆಯು) ತಟಸ್ಥ. ಇದರ ಪರಿಣಾಮವಾಗಿ ಪರಮಾತ್ಮನು ಸದಾ ಪ್ರತಿಯೊಂದು ಜೀವಿಯಲ್ಲಿಯೂ ಇದ್ದಾನೆ.

ಅಲ್ಲದೆ ಬಾಹ್ಯದಲ್ಲಿಯೂ ಪ್ರತಿಯೊಂದು ಜೀವಿಯೂ ಭಗವಂತನ ಶಕ್ತಿಯಲ್ಲಿ ನೆಲೆಗೊಂಡಿದೆ. ಏಳನೆಯ ಅಧ್ಯಾಯದಲ್ಲಿ ವಿವರಿಸಿರುವಂತೆ ಭಗವಂತನಿಗೆ ಮುಖ್ಯವಾಗಿ ಎರಡು ಶಕ್ತಿಗಳಿವೆ — ಆಧ್ಯಾತ್ಮಿಕವಾದ (ಅಥವಾ ಶ್ರೇಷ್ಠವಾದ) ಮತ್ತು ಐಹಿಕವಾದ (ಅಥವಾ ಕೆಳಮಟ್ಟದ) ಶಕ್ತಿಗಳು. ಜೀವಿಯು ಶ್ರೇಷ್ಠಶಕ್ತಿಯ ಭಾಗವಾದರೂ ಕೆಳಮಟ್ಟದ ಶಕ್ತಿಯಿಂದ ಬದ್ಧವಾಗಿದ್ದಾನೆ. ಜೀವಿಯು ಸದಾ ಭಗವಂತನ ಶಕ್ತಿಯಲ್ಲಿದ್ದಾನೆ. ಪ್ರತಿಯೊಂದು ಜೀವಿಯೂ ಒಂದಲ್ಲ ಒಂದು ರೀತಿಯಲ್ಲಿ ಭಗವಂತನಲ್ಲಿ ನೆಲೆಸಿದ್ದಾನೆ.

ಯೋಗಿಯು ಎಲ್ಲರನ್ನೂ ಒಂದೇ ಸಮನೆ ಕಾಣುತ್ತಾನೆ. ಏಕೆಂದರೆ ಎಲ್ಲ ಜೀವಿಗಳೂ ಕರ್ಮಫಲಕ್ಕನುಗುಣವಾಗಿ ಬೇರೆಬೇರೆ ಸನ್ನಿವೇಶಗಳಲ್ಲಿದ್ದರೂ ಅವರೆಲ್ಲ ಎಲ್ಲ ಸನ್ನಿವೇಶಗಳಲ್ಲಿಯೂ ಭಗವಂತನ ಸೇವಕರಾಗೇ ಇರುತ್ತಾರೆ ಎನ್ನುವುದನ್ನು ಆತನು ಕಾಣುತ್ತಾನೆ. ಐಹಿಕ ಶಕ್ತಿಯಲ್ಲಿದ್ದಾಗ ಜೀವಿಯು ಐಹಿಕ ಇಂದ್ರಿಯಗಳ ಸೇವೆ ಮಾಡುತ್ತಾನೆ. ಆಧ್ಯಾತ್ಮಿಕ ಶಕ್ತಿಯಲ್ಲಿದ್ದಾಗ ಅವನು ಭಗವಂತನನ್ನು ನೇರವಾಗಿ ಸೇವೆ ಮಾಡುತ್ತಾನೆ. ಹೇಗೇ ಆದರೂ ಜೀವಿಯು ಭಗವಂತನ ಸೇವಕ. ಈ ಸಮಾನತೆಯ ದೃಷ್ಟಿಯು ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಪರಿಪೂರ್ಣವಾಗಿರುತ್ತದೆ.

## ಶ್ಲೋಕ - 30

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ |**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ||೩೦||**

**ಯಃ**—ಯಾರು; **ಮಾಮ್**—ನನ್ನನ್ನು; **ಪಶ್ಯತಿ**—ನೋಡುತ್ತಾನೋ; **ಸರ್ವತ್ರ**—ಎಲ್ಲ ಕಡೆಗಳಲ್ಲಿಯೂ; **ಸರ್ವಮ್**—ಪ್ರತಿಯೊಂದನ್ನೂ; **ಚ**—ಮತ್ತು; **ಮಯಿ**—ನನ್ನಲ್ಲಿ; **ಪಶ್ಯತಿ**— ನೋಡುತ್ತಾನೋ; **ತಸ್ಯ**—ಅವನಿಗೆ; **ಅಹಮ್**—ನಾನು; **ನ ಪ್ರಣಶ್ಯಾಮಿ**—ನಷ್ಟವಾಗುವುದಿಲ್ಲ; **ಸಃ**—ಅವನು; **ಚ**—ಸಹ; **ಮೇ**—ನನಗೆ; **ನ ಪ್ರಣಶ್ಯತಿ**—ನಷ್ಟವಾಗುವುದಿಲ್ಲ.

## ಅನುವಾದ

**ಯಾರು ನನ್ನನ್ನು ಎಲ್ಲೆಲ್ಲಿಯೂ ಕಾಣುತ್ತಾನೆಯೋ ಮತ್ತು ನನ್ನಲ್ಲಿ ಎಲ್ಲವನ್ನೂ ಕಾಣುತ್ತಾನೋ ಅವನು ನನ್ನನ್ನು ಯಾವಾಗಲೂ ಕಳೆದುಕೊಳ್ಳುವುದಿಲ್ಲ. ನಾನು ಅವನನ್ನು ಯಾವಾಗಲೂ ಕಳೆದುಕೊಳ್ಳುವುದಿಲ್ಲ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ನಿಶ್ಚಯವಾಗಿಯೂ ಎಲ್ಲೆಲ್ಲಿಯೂ ಕೃಷ್ಣನನ್ನು ಕಾಣುತ್ತಾನೆ ಮತ್ತು ಕೃಷ್ಣನಲ್ಲಿ ಎಲ್ಲವನ್ನೂ ಕಾಣುತ್ತಾನೆ. ಇಂತಹ ಮನುಷ್ಯನು ಐಹಿಕ ಪ್ರಕೃತಿಯ ಪ್ರತ್ಯೇಕ ಅಭಿವ್ಯಕ್ತಿಗಳನ್ನು ನೋಡುವಂತೆ ತೋರಬಹುದು. ಆದರೆ ಪ್ರತಿಯೊಂದು ಬಾರಿಯೂ ಆತನಿಗೆ ಕೃಷ್ಣನ ಅರಿವಿರುತ್ತದೆ. ಏಕೆಂದರೆ ಪ್ರತಿಯೊಂದೂ ಕೃಷ್ಣನ ಶಕ್ತಿಯ ಅಭಿವ್ಯಕ್ತಿ ಎಂದು ಅವನಿಗೆ ತಿಳಿದಿರುತ್ತದೆ. ಕೃಷ್ಣನಿಲ್ಲದೆ ಯಾವುದೂ ಇರುವಂತಿಲ್ಲ, ಕೃಷ್ಣನು ಎಲ್ಲದರ ಒಡೆಯ. ಇದು ಕೃಷ್ಣಪ್ರಜ್ಞೆಯ ಮೂಲತತ್ತ್ವ. ಕೃಷ್ಣಪ್ರಜ್ಞೆಯು ಕೃಷ್ಣಪ್ರೇಮದ ವರ್ಧನೆ. ಈ ಸ್ಥಿತಿಯು ಐಹಿಕ ಮೋಕ್ಷವನ್ನು ಮೀರಿದ ಸ್ಥಿತಿ. ಆತ್ಮಸಾಕ್ಷಾತ್ಕಾರವನ್ನು ಮೀರಿದ ಕೃಷ್ಣಪ್ರಜ್ಞೆಯ ಈ ಹಂತದಲ್ಲಿ ಭಕ್ತನು ಕೃಷ್ಣನೊಂದಿಗೆ ಒಂದಾಗುತ್ತಾನೆ. ಇದು ಹೇಗೆಂದರೆ ಭಕ್ತನಿಗೆ ಕೃಷ್ಣನೇ ಸರ್ವಸ್ವವಾಗುತ್ತಾನೆ ಮತ್ತು ಕೃಷ್ಣಪ್ರೇಮದಲ್ಲಿ ಭಕ್ತನು ಸಂಪೂರ್ಣನಾಗುತ್ತಾನೆ. ಆಗ ಭಗವಂತ ಭಕ್ತರ ನಡುವೆ ಒಂದು ಆತ್ಮೀಯ ಸಂಬಂಧವಿರುತ್ತದೆ. ಈ ಘಟ್ಟದಲ್ಲಿ ಜೀವಿಯನ್ನು ನಾಶಮಾಡಲು ಸಾಧ್ಯವೇ ಇಲ್ಲ. ದೇವೋತ್ತಮ ಪುರುಷನು ಭಕ್ತನ ದೃಷ್ಟಿಯಿಂದ ಮರೆಯಾಗುವುದೇ ಇಲ್ಲ. ಕೃಷ್ಣನಲ್ಲಿ ಲೀನವಾಗುವುದೆಂದರೆ ಆಧ್ಯಾತ್ಮಿಕ ವಿನಾಶ. ಭಕ್ತನು ಇಂತಹ ಅಪಾಯಕ್ಕೆ ಅವಕಾಶ ಕೊಡುವುದೇ ಇಲ್ಲ. ಬ್ರಹ್ಮಸಂಹಿತೆಯಲ್ಲಿ (5.28) ಹೀಗೆ ಹೇಳಿದೆ—

**ಪ್ರೇಮಾಂಜನಚ್ಛುರಿತಭಕ್ತಿವಿಲೋಚನೇನ**
**ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ ।**
**ಯಂ ಶ್ಯಾಮಸುನ್ದರಮ್ ಅಚಿಂತ್ಯಗುಣಸ್ವರೂಪಂ**
**ಗೋವಿನ್ದಮಾದಿಪುರುಷಂ ತಮಹಂ ಭಜಾಮಿ ॥**

"ಆದಿಪುರುಷನಾದ ಗೋವಿಂದನನ್ನು ನಾನು ಪೂಜಿಸುತ್ತೇನೆ. ಪ್ರೇಮಾಂಜನವನ್ನು ಕಣ್ಣಿಗೆ ಲೇಪಿಸಿಕೊಂಡ ಭಕ್ತನು ಸದಾ ಅವನನ್ನು ನೋಡುತ್ತಾನೆ. ಭಕ್ತನ ಹೃದಯದಲ್ಲಿ ನೆಲೆಸಿರುವ ಅವನು ಶ್ಯಾಮಸುಂದರ ನಿತ್ಯಸ್ವರೂಪದಲ್ಲಿ ಕಾಣಿಸುತ್ತಾನೆ."

ಈ ಘಟ್ಟದಲ್ಲಿ ಕೃಷ್ಣನು ಭಕ್ತನ ದೃಷ್ಟಿಯಿಂದ ಮರೆಯಾಗುವುದೇ ಇಲ್ಲ. ಭಕ್ತನು ಭಗವಂತನನ್ನು ಕಾಣದೆ ಹೋಗುವುದೇ ಇಲ್ಲ. ಭಗವಂತನನ್ನು ಹೃದಯದಲ್ಲಿರುವ ಪರಮಾತ್ಮನೆಂದು ಕಾಣುವ ಯೋಗಿಗೂ ಈ ಮಾತು ಅನ್ವಯಿಸುತ್ತದೆ. ಇಂತಹ ಯೋಗಿಯು ಪರಿಶುದ್ಧ ಭಕ್ತನಾಗುತ್ತಾನೆ. ಅವನು ತನ್ನೊಳಗಿನ ಭಗವಂತನನ್ನು ಕಾಣದೆ ಒಂದು ನಿಮಿಷವೂ ಬದುಕಲಾರ.

## ಶ್ಲೋಕ - 31

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ |**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ||೩೧||**

**ಸರ್ವಭೂತಸ್ಥಿತಮ್**—ಪ್ರತಿಯೊಬ್ಬನ ಹೃದಯದಲ್ಲಿ ನೆಲೆಸಿರುವ; **ಯಃ**—ಯಾರು; **ಮಾಮ್**—ನನ್ನನ್ನು; **ಭಜತಿ**—ಭಕ್ತಿಸೇವೆಯಲ್ಲಿ ಸೇವಿಸುತ್ತಾನೋ; **ಏಕತ್ವಮ್**—ಏಕತ್ವದಲ್ಲಿ; **ಆಸ್ಥಿತಃ**—ನೆಲೆಸಿದವನಾಗಿ; **ಸರ್ವಥಾ**—ಎಲ್ಲ ವಿಚಾರಗಳಲ್ಲೂ; **ವರ್ತಮಾನಃ**—ಇರುವವನಾಗಿ; **ಅಪಿ**—ಆದರೂ; **ಸಃ**—ಆ; **ಯೋಗೀ**—ಆಧ್ಯಾತ್ಮಿಕವಾದಿಯು; **ಮಯಿ**—ನನ್ನಲ್ಲಿ; **ವರ್ತತೇ**—ಇರುತ್ತಾನೆ.

## ಅನುವಾದ

**ನಾನು ಮತ್ತು ಪರಮಾತ್ಮನು ಒಂದೇ ಎಂದು ತಿಳಿದು ಸದಾ ಪರಮಾತ್ಮನ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿರುವ ಯೋಗಿಯು ಎಲ್ಲ ಸನ್ನಿವೇಶಗಳಲ್ಲಿಯೂ ನನ್ನಲ್ಲಿಯೇ ಇರುತ್ತಾನೆ.**

## ಭಾವಾರ್ಥ

ಪರಮಾತ್ಮನ ಧ್ಯಾನದಲ್ಲಿ ಮಗ್ನನಾದ ಯೋಗಿಯು ಶಂಖ, ಚಕ್ರ, ಗದೆ ಮತ್ತು ಪದ್ಮಗಳನ್ನು ನಾಲ್ಕು ಕೈಗಳಲ್ಲಿ ಹಿಡಿದ ವಿಷ್ಣುವನ್ನು ಕೃಷ್ಣನ ಸ್ವಾಂಶ ಭಾಗವಾಗಿ ತನ್ನಲ್ಲಿ ಕಾಣುತ್ತಾನೆ. ವಿಷ್ಣುವು ಕೃಷ್ಣನಿಂದ ಭಿನ್ನವಲ್ಲ ಎಂದು ಯೋಗಿಗೆ ತಿಳಿದಿರಬೇಕು. ಪರಮಾತ್ಮನ ಸ್ವರೂಪದಲ್ಲಿ ಕೃಷ್ಣನು ಪ್ರತಿಯೊಬ್ಬರ ಹೃದಯದಲ್ಲಿಯೂ ನೆಲೆಸಿದ್ದಾನೆ. ಅಲ್ಲದೆ ಜೀವಿಗಳ ಅಸಂಖ್ಯಾತ ಹೃದಯಗಳಲ್ಲಿ ಇರುವ ಅಸಂಖ್ಯಾತ ಪರಮಾತ್ಮರಲ್ಲಿ ವ್ಯತ್ಯಾಸವಿಲ್ಲ. ಸದಾ ಕೃಷ್ಣನ ದಿವ್ಯಪ್ರೇಮ ಸೇವೆಯಲ್ಲಿ ತೊಡಗಿರುವ ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೂ ಪರಮಾತ್ಮನ ಧ್ಯಾನದಲ್ಲಿ ತೊಡಗಿರುವ ಪರಿಪೂರ್ಣ ಯೋಗಿಗೂ ವ್ಯತ್ಯಾಸವಿಲ್ಲ. ಕೃಷ್ಣಪ್ರಜ್ಞೆ ಇರುವ ಯೋಗಿಯು ಐಹಿಕ ಅಸ್ತಿತ್ವದಲ್ಲಿರುವಾಗ ವಿವಿಧ ಚಟುವಟಿಕೆಗಳಲ್ಲಿ ತೊಡಗಿರಬಹುದು, ಆದರೂ ಅವನು ಸದಾ ಕೃಷ್ಣನಲ್ಲಿ ನೆಲೆಸಿರುತ್ತಾನೆ. ಶ್ರೀ ರೂಪ ಗೋಸ್ವಾಮಿಯವರ ಭಕ್ತಿರಸಾಮೃತಸಿಂಧುವಿನಲ್ಲಿ (1.2.187) ಇದನ್ನು ದೃಢಪಡಿಸಿದೆ. **ನಿಖಿಲಾಸ್ವಪ್ಯವಸ್ಥಾಸು ಜೀವನ್ಮುಕ್ತಃ ಸ ಉಚ್ಯತೇ.** ಸದಾ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವ ಭಗವಂತನ ಭಕ್ತನು ಸಹಜವಾಗಿಯೇ ಮುಕ್ತನಾಗಿರುತ್ತಾನೆ. ನಾರದ ಪಂಚರಾತ್ರದಲ್ಲಿ ಇದನ್ನು ಹೀಗೆ ದೃಢಪಡಿಸಿದೆ—

**ದಿಕ್ಕಾಲಾದ್ಯನವಚ್ಛಿನ್ನೇ ಕೃಷ್ಣೇ ಚೇತೋ ವಿಧಾಯ ಚ |**
**ತನ್ಮಯೋ ಭವತಿ ಕ್ಷಿಪ್ರಂ ಜೀವೋ ಬ್ರಹ್ಮಣಿ ಯೋಜಯೇತ್ ||**

"ಕೃಷ್ಣನು ಸರ್ವಾಂತರ್ಯಾಮಿ ಮತ್ತು ಕಾಲ ದೇಶಗಳನ್ನು ಮೀರಿದವನು. ಅವನ ದಿವ್ಯರೂಪದಲ್ಲಿ ಗಮನವನ್ನು ಕೇಂದ್ರೀಕರಿಸುವುದರಿಂದ ಮನುಷ್ಯನು ಕೃಷ್ಣ ಚಿಂತನೆಯಲ್ಲಿ ಮಗ್ನನಾಗುತ್ತಾನೆ. ಅನಂತರ ಕೃಷ್ಣನ ದಿವ್ಯ ಸಹವಾಸದ ಆನಂದ ಸ್ಥಿತಿಯನ್ನು ಪಡೆಯುತ್ತಾನೆ."

ಯೋಗಾಭ್ಯಾಸದಲ್ಲಿ ಕೃಷ್ಣಪ್ರಜ್ಞೆಯು ಸಮಾಧಿಯ ಅತ್ಯುನ್ನತ ಹಂತ. ಕೃಷ್ಣನು ಪ್ರತಿಯೊಬ್ಬರ ಹೃದಯದಲ್ಲಿಯೂ ಪರಮಾತ್ಮನಾಗಿ ನೆಲೆಸಿದ್ದಾನೆ ಎನ್ನುವ ಅರಿವೇ ಯೋಗಿಯನ್ನು

ದೋಷರಹಿತನನ್ನಾಗಿ ಮಾಡುತ್ತದೆ. ಭಗವಂತನ ಈ ಗ್ರಹಿಕೆಗೆ ಮೀರಿದ ಶಕ್ತಿಯನ್ನು ವೇದಗಳು (ಗೋಪಾಲ ತಾಪನೀ ಉಪನಿಷತ್ತು 1.21) ಹೀಗೆ ದೃಢಪಡಿಸುತ್ತವೆ — **ಏಕೋಽಪಿ ಸನ್ ಬಹುಧಾ ಯೋಽವಭಾತಿ** " ಭಗವಂತನು ಒಬ್ಬನೇ ಆದರೂ ಅಸಂಖ್ಯಾತ ಹೃದಯಗಳಲ್ಲಿ ಬಹುವಾಗಿ ಅವನು ಇದ್ದಾನೆ." ಹಾಗೆಯೇ ಸ್ಮೃತಿಶಾಸ್ತ್ರದಲ್ಲಿ ಹೀಗೆ ಹೇಳಿದೆ—

**ಏಕ ಏವ ಪರೋ ವಿಷ್ಣುಃ ಸರ್ವವ್ಯಾಪೀ ನ ಸಂಶಯಃ |**
**ಐಶ್ವರ್ಯಾದ್ ರೂಪಮ್ ಏಕಂ ಚ ಸೂರ್ಯವತ್ ಬಹುಧೇಯತೇ ||**

"ವಿಷ್ಣುವು ಒಬ್ಬನೇ, ಆದರೂ ಅವನು ನಿಶ್ಚಯವಾಗಿಯೂ ಸರ್ವವ್ಯಾಪಿ. ಗ್ರಹಿಕೆಗೆ ಮೀರಿದ ಅವನ ಶಕ್ತಿಯಿಂದ, ಸೂರ್ಯನು ಬಹುಸ್ಥಳಗಳಲ್ಲಿ ಒಂದೇ ಕಾಲದಲ್ಲಿ ಕಾಣಿಸುವಂತೆ, ತನಗೆ ಒಂದೇ ರೂಪವಿದ್ದರೂ ಎಲ್ಲೆಲ್ಲೂ ಇದ್ದಾನೆ."

## ಶ್ಲೋಕ - 32

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ |**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ||೩೨||**

**ಆತ್ಮ**—ತನ್ನ ಆತ್ಮನೊಂದಿಗೆ; **ಔಪಮ್ಯೇನ**—ಹೋಲಿಕೆಯಿಂದ; **ಸರ್ವತ್ರ**—ಎಲ್ಲ ಕಡೆಗಳಲ್ಲಿ; **ಸಮಮ್**—ಸಮಾನವಾಗಿ; **ಪಶ್ಯತಿ**—ನೋಡುತ್ತಾನೋ; **ಯಃ**—ಯಾರು; **ಅರ್ಜುನ**—ಅರ್ಜುನನೇ **ಸುಖಮ್**—ಸುಖವನ್ನೋ; **ವಾ**—ಅಥವಾ; **ಯದಿ**—ಆದರೆ; **ವಾ**—ಅಥವಾ; **ದುಃಖಮ್**—ದುಃಖವನ್ನೋ; **ಸಃ**—ಅಂತಹ; **ಯೋಗೀ**—ಆಧ್ಯಾತ್ಮಿಕವಾದಿಯು; **ಪರಮಃ**—ಪರಿಪೂರ್ಣನೆಂದು; **ಮತಃ**—ಪರಿಗಣಿತನಾಗಿದ್ದಾನೆ.

## ಅನುವಾದ

**ಅರ್ಜುನ, ಎಲ್ಲ ಜೀವಿಗಳನ್ನೂ ತನ್ನೊಡನೆ ಹೋಲಿಸಿಕೊಂಡು ಅವರ ಸುಖ-ದುಃಖಗಳಲ್ಲಿ ನಿಜವಾಗಿ ಯಾರು ಸಮತ್ವವನ್ನು ಕಾಣುವನೋ ಅವನೇ ಪರಿಪೂರ್ಣ ಯೋಗಿ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಇರುವವನು ಪರಿಪೂರ್ಣ ಯೋಗಿ . ತನ್ನ ವೈಯಕ್ತಿಕ ಅನುಭವದಿಂದಾಗಿ ಅವನಿಗೆ ಪ್ರತಿಯೊಬ್ಬರ ಸುಖ ಮತ್ತು ದುಃಖದ ಅರಿವಿದೆ. ಜೀವಿಯ ಯಾತನೆಯ ಕಾರಣವೆಂದರೆ ಭಗವಂತನೊಡನೆ ತನ್ನ ಬಾಂಧವ್ಯವನ್ನು ಮರೆತಿರುವುದು. ಸುಖದ ಕಾರಣವೆಂದರೆ, ಕೃಷ್ಣನೇ ಮನುಷ್ಯನ ಎಲ್ಲ ಚಟುವಟಿಕೆಗಳ ಪರಮ ಭೋಕ್ತಾರನು, ಎಲ್ಲ ಲೋಕಗಳ ಮತ್ತು ಗ್ರಹಗಳ ಒಡೆಯನು, ಎಲ್ಲ ಜೀವಿಗಳ ಅತ್ಯಂತ ಪ್ರಾಮಾಣಿಕ ಮಿತ್ರನು ಎನ್ನುವ ಅರಿವು ಇರುವುದು. ಐಹಿಕ ಪ್ರಕೃತಿಯ ತ್ರಿಗುಣಗಳಿಂದ ಬದ್ಧನಾದ ಜೀವಿಯು ಕೃಷ್ಣನೊಡನೆ ತನ್ನ ಬಾಂಧವ್ಯವನ್ನು ಮರೆಯುತ್ತಾನೆ. ಇದರಿಂದ ತ್ರಿವಿಧ ಐಹಿಕ ದುಃಖಗಳಿಗೆ ಗುರಿಯಾಗುತ್ತಾನೆ. ಈ ಸಂಗತಿಯನ್ನು ಪರಿಪೂರ್ಣ ಯೋಗಿಯು ತಿಳಿದಿರುತ್ತಾನೆ. ಕೃಷ್ಣಪ್ರಜ್ಞೆಯಲ್ಲಿರುವವನು ಸುಖವಾಗಿರುತ್ತಾನೆ. ಆದುದರಿಂದ ಕೃಷ್ಣಜ್ಞಾನವನ್ನು ಎಲ್ಲರಿಗೆ ಹಂಚಲು ಪ್ರಯತ್ನಿಸುತ್ತಾನೆ.

ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವುದರ ಮಹತ್ವವನ್ನು ಪ್ರಸಾರಮಾಡಲು ಸಂಪೂರ್ಣಯೋಗಿಯು ಪ್ರಯತ್ನಿಸುವುದರಿಂದ ಜಗತ್ತಿನಲ್ಲಿ ಅವನೇ ಅತ್ಯಂತ ಶ್ರೇಷ್ಠ ಪರೋಪಕಾರಿ; ಅವನೇ ಭಗವಂತನಿಗೆ ಅತ್ಯಂತ ಪ್ರೀತಿ ಪಾತ್ರನಾದ ಸೇವಕ. **ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ** (ಗೀತಾ 18.69) ಎಂದರೆ ಭಗವಂತನ ಭಕ್ತನು ಸದಾ ಎಲ್ಲ ಜೀವಿಗಳ ಕಲ್ಯಾಣಕ್ಕೆ ಗಮನಕೊಡುತ್ತಾನೆ. ಈ ರೀತಿಯಲ್ಲಿ ಅವನು ನಿಜವಾಗಿ ಎಲ್ಲರ ಸ್ನೇಹಿತ. ಅವನು ಯೋಗದಲ್ಲಿ ಪರಿಪೂರ್ಣತೆಯನ್ನು ಬಯಸುವುದು ತನ್ನ ವೈಯಕ್ತಿಕ ಲಾಭಕ್ಕಾಗಿ ಅಲ್ಲ, ಇತರರಿಗೆ ನೆರವಾಗಲೂ ಪ್ರಯತ್ನಿಸುತ್ತಾನೆ. ಆದ್ದರಿಂದ ಅವನು ಶ್ರೇಷ್ಠ ಯೋಗಿ. ಆತನಿಗೆ ಸಹಜೀವಿಗಳಲ್ಲಿ ಅಸೂಯೆಯಿಲ್ಲ. ಭಗವಂತನ ಪರಿಪೂರ್ಣ ಭಕ್ತನಿಗೂ ತನ್ನ ವೈಯಕ್ತಿಕ ಮೇಲ್ಮೆಯಲ್ಲಿ ಮಾತ್ರ ಆಸಕ್ತನಾದ ಯೋಗಿಗೂ ವ್ಯತ್ಯಾಸ ಇಲ್ಲಿದೆ. ಪರಿಪೂರ್ಣ ಧ್ಯಾನಕ್ಕಾಗಿ ಏಕಾಂತ ಸ್ಥಳಕ್ಕೆ ಹೊರಟುಹೋದ ಯೋಗಿಯು, ಪ್ರತಿಯೊಬ್ಬ ಮನುಷ್ಯನ ಮನಸ್ಸನ್ನು ಕೃಷ್ಣಪ್ರಜ್ಞೆಯತ್ತ ತಿರುಗಿಸಲು ತನ್ನಿಂದಾದಷ್ಟು ಶ್ರಮಿಸುವ ಭಕ್ತನಷ್ಟು ಪರಿಪೂರ್ಣನಾಗಿಲ್ಲದಿರಬಹುದು.

## ಶ್ಲೋಕ - 33

**ಅರ್ಜುನ ಉವಾಚ**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ |**
**ಏತಸ್ಯಾಹಂ ನ ಪಶ್ಯಾಮಿ ಚಞ್ಚಲತ್ವಾತ್ ಸ್ಥಿತಿಂ ಸ್ಥಿರಾಮ್ ||೩೩||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಯಃ ಅಯಮ್**—ಯಾವ ಈ; **ಯೋಗಃ**—ಯೋಗವು; **ತ್ವಯಾ**—ನಿನ್ನಿಂದ; **ಪ್ರೋಕ್ತಃ**—ವಿವರಿಸಲ್ಪಟ್ಟಿತೋ; **ಸಾಮ್ಯೇನ**—ಸಾಮಾನ್ಯವಾಗಿ; **ಮಧುಸೂದನ**—ಮಧುದೈತ್ಯನನ್ನು ಕೊಂದವನೇ; **ಏತಸ್ಯ**—ಇದರ; **ಅಹಮ್**—ನಾನು; **ನ ಪಶ್ಯಾಮಿ**—ಕಾಣಲಾರೆ; **ಚಞ್ಚಲತ್ವಾತ್**—ಚಾಂಚಲ್ಯದ ಕಾರಣದಿಂದ; **ಸ್ಥಿತಿಮ್**—ಸ್ಥಿತಿಯನ್ನು; **ಸ್ಥಿರಾಮ್**—ಸ್ಥಿರವಾದ.

## ಅನುವಾದ

**ಅರ್ಜುನನು ಹೀಗೆ ಹೇಳಿದನು — ಮಧುಸೂದನನೇ, ನೀನು ಸಂಗ್ರಹವಾಗಿ ಹೇಳಿದ ಈ ಯೋಗಪದ್ಧತಿಯು ಕಾರ್ಯಸಾಧ್ಯವಲ್ಲ ಮತ್ತು ಇದು ಸಹಿಸಲಸಾಧ್ಯವಾದದ್ದು ಎಂದು ನನಗೆ ತೋರುತ್ತದೆ. ಏಕೆಂದರೆ ಮನಸ್ಸು ಪ್ರಕ್ಷುಬ್ಧವಾದದ್ದು ಮತ್ತು ಚಂಚಲವಾದದ್ದು.**

## ಭಾವಾರ್ಥ

**ಶುಚೌ ದೇಶೇ** ಎಂಬ ಮಾತುಗಳಿಂದ ಪ್ರಾರಂಭಿಸಿ **ಯೋಗೀ ಪರಮಃ** ಎಂಬ ಮಾತುಗಳಿಂದ ಮುಕ್ತಾಯ ಮಾಡಿ ಶ್ರೀಕೃಷ್ಣನು ಅರ್ಜುನನಿಗೆ ವರ್ಣಿಸಿದ ಯೋಗ ಪದ್ಧತಿಯನ್ನು ಅರ್ಜುನನು ಇಲ್ಲಿ ತನ್ನ ಅಸಾಮರ್ಥ್ಯದ ಭಾವದಿಂದ ತಿರಸ್ಕರಿಸುತ್ತಿದ್ದಾನೆ. ಈ ಕಲಿಯುಗದಲ್ಲಿ ಸಾಮಾನ್ಯ ಮನುಷ್ಯನು ಯೋಗಾಭ್ಯಾಸಕ್ಕಾಗಿ ಮನೆಯನ್ನು ಬಿಟ್ಟು ಬೆಟ್ಟಗಳ ನಡುವೆ ಅಥವಾ ಕಾಡಿನಲ್ಲಿ ಏಕಾಂತ ಸ್ಥಳಕ್ಕೆ ಹೋಗುವುದು ಸಾಧ್ಯವಿಲ್ಲ. ಅಲ್ಪಾಯುಸ್ಸಿನ ಬದುಕಿನಲ್ಲಿ ಕಠಿಣ ಹೋರಾಟವು

ಈಗಿನ ಯುಗದ ಲಕ್ಷಣ. ಸರಳವಾದ ಕಾರ್ಯಸಾಧ್ಯವಾದ ವಿಧಾನಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ವಿಷಯದಲ್ಲಿಯೂ ಜನರಿಗೆ ಗಂಭೀರ ಆಸಕ್ತಿಯಿಲ್ಲ. ಇನ್ನು ಜೀವನ ವಿಧಾನ, ಆಸನದ ರೀತಿ, ಸ್ಥಳದ ಆಯ್ಕೆ ಮತ್ತು ಐಹಿಕ ಚಟುವಟಿಕೆಗಳಿಂದ ಮನಸ್ಸನ್ನು ದೂರಮಾಡುವುದು ಇವೆಲ್ಲವನ್ನೂ ನಿಯಂತ್ರಿಸುವ ಈ ಕಷ್ಟಸಾಧ್ಯವಾದ ಯೋಗಪದ್ಧತಿಯನ್ನು ಕುರಿತು ಹೇಳುವುದೇನು? ಹಲವು ರೀತಿಗಳಲ್ಲಿ ಅರ್ಜುನನಿಗೆ ಅನುಕೂಲಗಳೇ ಇದ್ದರೂ ಕಾರ್ಯಶೀಲ ಮನುಷ್ಯನಾಗಿ ಅವನು ಈ ಯೋಗಪದ್ಧತಿಯನ್ನು ಅನುಸರಿಸುವುದು ಸಾಧ್ಯವಿಲ್ಲ ಎಂದು ಯೋಚಿಸಿದನು. ಆತನು ರಾಜವಂಶಕ್ಕೆ ಸೇರಿದವನು ಮತ್ತು ಹಲವು ಗುಣಗಳಲ್ಲಿ ಶ್ರೇಷ್ಠನು. ಅವನು ಮಹಾಯೋಧ, ಮತ್ತು ದೀರ್ಘಾಯುಷಿ. ಎಲ್ಲಕ್ಕಿಂತ ಮಿಗಿಲಾಗಿ, ಅವನು ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ಆತ್ಮೀಯ ಸ್ನೇಹಿತ. ಐದು ಸಾವಿರ ವರ್ಷಗಳ ಹಿಂದೆ ಅರ್ಜುನನಿಗೆ ಈಗ ನಮಗಿರುವುದಕ್ಕಿಂತ ಹೆಚ್ಚಿನ ಸೌಲಭ್ಯಗಳಿದ್ದವು. ಆದರೂ ಅವನು ಈ ಯೋಗಪದ್ಧತಿಯನ್ನು ತಿರಸ್ಕರಿಸಿದ. ವಾಸ್ತವವಾಗಿ ಅವನು ಇದನ್ನು ಅನುಷ್ಠಾನಮಾಡಿದುದನ್ನು ಚರಿತ್ರೆಯಲ್ಲಿ ಎಲ್ಲೂ ನಾವು ಕಾಣುವುದಿಲ್ಲ. ಆದುದರಿಂದ ಈ ಕಲಿಯುಗದಲ್ಲಿ ಸಾಮಾನ್ಯವಾಗಿ ಈ ಪದ್ಧತಿಯು ಕಾರ್ಯಸಾಧ್ಯವಲ್ಲ ಎಂದು ಭಾವಿಸಬೇಕಾಗಿದೆ. ಕೆಲವೇ ಕೆಲವರು ವಿರಳವಾದ ಮನುಷ್ಯರಿಗೆ ಇದು ಕಾರ್ಯಸಾಧ್ಯವಾಗಬಹುದು. ಆದರೆ ಜನಸಾಮಾನ್ಯರಿಗೆ ಇದು ಸಾಧ್ಯವಲ್ಲದ ಸಲಹೆ. ಐದು ಸಾವಿರ ವರ್ಷಗಳ ಹಿಂದೆಯೇ ಹೀಗಿದ್ದರೆ ಇಂದಿನ ಮಾತೇನು? ಶಾಲೆಗಳು ಮತ್ತು ಸಂಘಗಳು ಎನ್ನಿಸಿಕೊಂಡ ವಿವಿಧ ಸಂಸ್ಥೆಗಳಲ್ಲಿ ಈ ಯೋಗ ಪದ್ಧತಿಯನ್ನು ಅನುಕರಿಸುತ್ತಿರುವವರು ತಮ್ಮಲ್ಲಿಯೇ ತೃಪ್ತರಾಗಿದ್ದರೂ ನಿಶ್ಚಯವಾಗಿ ಅವರು ವ್ಯರ್ಥ ಕಾಲಹರಣ ಮಾಡುತ್ತಿದ್ದಾರೆ. ಅಪೇಕ್ಷಿತ ಗುರಿಯ ವಿಷಯದಲ್ಲಿ ಅವರು ಸಂಪೂರ್ಣವಾಗಿ ಅಜ್ಞಾನಿಗಳು.

## ಶ್ಲೋಕ - 34

**ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ |**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ||೩೪||**

**ಚಞ್ಚಲಮ್**—ಚಂಚಲವು; **ಹಿ**—ಖಂಡಿತವಾಗಿಯೂ; **ಮನಃ**—ಮನಸ್ಸು; **ಕೃಷ್ಣ**—ಕೃಷ್ಣನೇ; **ಪ್ರಮಾಥಿ**—ಉದ್ವಿಗ್ನಗೊಳ್ಳುವಂತಹುದು; **ಬಲ ವತ್**—ಬಲವಾದುದು; **ದೃಢಮ್**—ಜಗ್ಗದಿರುವಂತಹುದು; **ತಸ್ಯ**—ಅದರ; **ಅಹಮ್**—ನಾನು; **ನಿಗ್ರಹಮ್**—ನಿಗ್ರಹವನ್ನು; **ಮನ್ಯೇ**—ಯೋಚಿಸುತ್ತೇನೆ; **ವಾಯೋಃ**—ಗಾಳಿಯ; **ಇವ**—ಹಾಗೆ; **ಸು ದುಷ್ಕರಮ್**— ಕಷ್ಟಕರವೆಂದು.

## ಅನುವಾದ

**ಕೃಷ್ಣನೆ, ಮನಸ್ಸು ಚಂಚಲವಾದದ್ದು, ಪ್ರಕ್ಷುಬ್ಧವಾದದ್ದು, ಹಠಮಾರಿ ಮತ್ತು ಬಲವಾದದ್ದು. ಅದನ್ನು ನಿಗ್ರಹಿಸುವುದು ಗಾಳಿಯನ್ನು ನಿಯಂತ್ರಿಸುವುದಕ್ಕಿಂತ ಕಷ್ಟ ಎಂದು ನನಗೆ ತೋರುತ್ತದೆ.**

## ಭಾವಾರ್ಥ

ಮನಸ್ಸು ಎಷ್ಟು ಗಟ್ಟಿ ಮತ್ತು ಹಠಮಾರಿ ಎಂದರೆ ಮನಸ್ಸು ಬುದ್ಧಿಶಕ್ತಿಗೆ

ವಿಧೇಯವಾಗಿರುತ್ತದೆ ಎಂಬ ನಿರೀಕ್ಷಣೆ ಇದ್ದರೂ ಕೆಲವೊಮ್ಮೆ ಅದು ಬುದ್ಧಿಶಕ್ತಿಯನ್ನೂ ಮಣಿಸುತ್ತದೆ. ವ್ಯಾವಹಾರಿಕ ಜಗತ್ತಿನಲ್ಲಿದ್ದು ಹಲವು ವಿರುದ್ಧ ಅಂಶಗಳೊಡನೆ ಸೆಣಸಬೇಕಾದ ಮನುಷ್ಯನಿಗೆ ಮನಸ್ಸನ್ನು ನಿಯಂತ್ರಣದಲ್ಲಿಡುವುದು ನಿಶ್ಚಯವಾಗಿಯೂ ಬಹುಕಷ್ಟ. ಕೃತಕವಾಗಿ ಮನುಷ್ಯನು ಮಿತ್ರ ಮತ್ತು ಶತ್ರು ಇವರ ವಿಷಯದಲ್ಲಿ ಒಂದು ಮಾನಸಿಕ ಸಮತೋಲನವನ್ನು ಸ್ಥಾಪಿಸಿಕೊಳ್ಳಬಹುದು. ಆದರೆ ಕಟ್ಟಕಡೆಗೆ ಪ್ರಾಪಂಚಿಕ ವ್ಯವಸ್ಥೆಯಲ್ಲಿರುವ ಯಾವ ಮನುಷ್ಯನೂ ಹೀಗೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಇದು ಪ್ರಚಂಡವಾದ ಗಾಳಿಯನ್ನು ಹತೋಟಿಯಲ್ಲಿ ಇಡುವುದಕ್ಕಿಂತ ಕಷ್ಟವಾದದ್ದು. ವೈದಿಕ ಸಾಹಿತ್ಯದಲ್ಲಿ (ಕಠೋಪನಿಷತ್ತು1.3.3-4) ಹೀಗೆ ಹೇಳಿದೆ—

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮ್ ಏವ ಚ |
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮ್ ಏವ ಚ ||

ಇನ್ದ್ರಿಯಾಣಿ ಹಯಾನಾಹುರ್ ವಿಷಯಾಂಸ್ತೇಷು ಗೋಚರಾನ್ |
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ ಮನೀಷಿಣಃ ||

" " ಬುದ್ಧಿಶಕ್ತಿಯು ಮನಸ್ಸನ್ನು ನಿರ್ದೇಶಿಸಬೇಕು. ಆದರೆ ಮನಸ್ಸು ಎಷ್ಟು ಗಟ್ಟಿ ಮತ್ತು ಹಠಮಾರಿಯೆಂದರೆ, ಒಂದು ತೀವ್ರವಾದ ರೋಗಾಣು ಸೋಂಕು ಔಷಧಿಯ ಪರಿಣಾಮವನ್ನು ಮೀರಿಸುವಂತೆ, ಮನಸ್ಸು ಬಹುಬಾರಿ ಮನುಷ್ಯನ ಬುದ್ಧಿಶಕ್ತಿಯನ್ನು ಸಹ ಅಧೀನಮಾಡಿಕೊಳ್ಳುತ್ತದೆ. ಯೋಗಾಭ್ಯಾಸವು ಇಂತಹ ಗಟ್ಟಿ ಮನಸ್ಸನ್ನು ನಿಯಂತ್ರಿಸುತ್ತದೆ ಎಂದು ನಂಬಿಕೆ. ಆದರೆ ಅರ್ಜುನನಂತಹ ಲೌಕಿಕ ವ್ಯಕ್ತಿಗೆ ಇಂತಹ ಅಭ್ಯಾಸವು ಕಾರ್ಯಸಾಧ್ಯವಲ್ಲ. ಇನ್ನು ಆಧುನಿಕ ಮನುಷ್ಯನ ವಿಷಯ ಏನು ಹೇಳಬಹುದು? ಇಲ್ಲಿ ಬಳಸಿದ ಉಪಮಾನ ಸೂಕ್ತವಾಗಿದೆ; ಬೀಸುತ್ತಿರುವ ಗಾಳಿಯನ್ನು ಹಿಡಿದುಕೊಳ್ಳಲು ಸಾಧ್ಯವಿಲ್ಲ. ಚೈತನ್ಯ ಮಹಾಪ್ರಭುಗಳು ಸೂಚಿಸಿದಂತೆ ಮನಸ್ಸನ್ನು ಹತೋಟಿಯಲ್ಲಿಡಲು ಅತ್ಯಂತ ಸುಲಭವಾದ ಮಾರ್ಗವೆಂದರೆ ಸಂಪೂರ್ಣ ದೀನತೆಯಿಂದ ಮುಕ್ತಿಯ ಮಹಾಮಂತ್ರ 'ಹರೇಕೃಷ್ಣ' ಸಂಕೀರ್ತನೆ ಮಾಡುವುದು. ಇದಕ್ಕೆ ವಿಧಿಸಿರುವ ವಿಧಾನವು ಇದು; ಸ ವೈ ಮನಃ ಕೃಷ್ಣಪದಾರವಿಂದಯೋಃ ಮನುಷ್ಯನು ತನ್ನ ಮನಸ್ಸನ್ನು ಸಂಪೂರ್ಣವಾಗಿ ಕೃಷ್ಣನಲ್ಲಿ ತೊಡಗಿಸಬೇಕು. ಆಗ ಮಾತ್ರ ಮನಸ್ಸನ್ನು ಕ್ಷೋಭೆಗೊಳಿಸುವ ಬೇರೆ ಯಾವ ಕಾರ್ಯಗಳು ಉಳಿಯುವುದಿಲ್ಲ.

## ಶ್ಲೋಕ - 35

ಶ್ರೀ ಭಗವಾನುವಾಚ

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ |
ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ||೩೫||

ಶ್ರೀ ಭಗವಾನ್ ಉವಾಚ—ದೇವೋತ್ತಮ ಪುರುಷನು ಹೇಳಿದನು; ಅಸಂಶಯಮ್—ನಿಸ್ಸಂಶಯವಾಗಿಯೂ; ಮಹಾ ಬಾಹೋ—ಮಹಾಬಾಹುವೇ; ಮನಃ—ಮನಸ್ಸು; ದುರ್ನಿಗ್ರಹಮ್—ನಿಗ್ರಹಿಸುವುದು ಕಷ್ಟ; ಚಲಮ್—ಚಂಚಲವು; ಅಭ್ಯಾಸೇನ—ಅಭ್ಯಾಸದಿಂದ; ತು—ಆದರೆ;

**ಕೌನ್ತೇಯ**—ಕುಂತೀಪುತ್ರನೇ; **ವೈರಾಗ್ಯೇಣ**—ವೈರಾಗ್ಯದಿಂದ; **ಚ**—ಕೂಡಾ; **ಗೃಹ್ಯತೇ**—ನಿಯಂತ್ರಿಸಲ್ಪಡುವುದು.

## ಅನುವಾದ

**ಶ್ರೀಕೃಷ್ಣನು ಹೀಗೆ ಹೇಳಿದನು — ಮಹಾಬಾಹುವೂ ಕುಂತಿಯ ಮಗನೂ ಆದ ಅರ್ಜುನನೇ, ಚಂಚಲವಾದ ಮನಸ್ಸನ್ನು ನಿಗ್ರಹಿಸುವುದು ಬಹುಕಷ್ಟ. ಆದರೂ ಯೋಗ್ಯವಾದ ವೈರಾಗ್ಯದಿಂದ ಮತ್ತು ಅಭ್ಯಾಸದಿಂದ ಅದನ್ನು ನಿಗ್ರಹಿಸಬಹುದು.**

## ಭಾವಾರ್ಥ

ಹಠಮಾರಿಯಾದ ಮನಸ್ಸನ್ನು ಗೆಲ್ಲುವುದು ಕಷ್ಟ ಎನ್ನುವುದನ್ನು ಅರ್ಜುನನು ಹೇಳಿದ್ದನ್ನು ದೇವೋತ್ತಮ ಪುರುಷನು ಒಪ್ಪಿಕೊಳ್ಳುತ್ತಾನೆ. ಆದರೆ ಅಭ್ಯಾಸ ಮತ್ತು ವೈರಾಗ್ಯಗಳಿಂದ ಇದನ್ನು ಸಾಧಿಸಬಹುದು ಎಂದು ಹೇಳುತ್ತಾನೆ. ಈ ಅಭ್ಯಾಸವು ಯಾವುದು? ಒಂದು ಪವಿತ್ರವಾದ ಸ್ಥಳದಲ್ಲಿ ನೆಲೆಸುವುದು; ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸುವುದು, ಇಂದ್ರಿಯಗಳನ್ನೂ ಮನಸ್ಸನ್ನೂ ನಿಯಂತ್ರಿಸುವುದು. ಬ್ರಹ್ಮಚರ್ಯ, ಏಕಾಂತಜೀವನ ಮೊದಲಾದವುಗಳ ನಿಯಮ ನಿಬಂಧನೆಗಳನ್ನು ಈ ಯುಗದಲ್ಲಿ ಯಾರೂ ಅನುಸರಿಸಲಾರರು. ಆದರೆ ಕೃಷ್ಣಪ್ರಜ್ಞೆಯ ಅನುಷ್ಠಾನದಿಂದ ಮನುಷ್ಯನು ಒಂಬತ್ತು ರೀತಿಗಳಲ್ಲಿ ಭಗವಂತನ ಭಕ್ತಿಪೂರ್ವಕ ಸೇವೆಯನ್ನು ಮಾಡುತ್ತಾನೆ. ಇಂತಹ ಭಕ್ತಿಪೂರ್ವಕ ಕಾರ್ಯಗಳಲ್ಲಿ ಮೊದಲನೆಯದು ಮತ್ತು ಬಹುಮುಖ್ಯವಾದದ್ದು ಕೃಷ್ಣನ ವಿಷಯವನ್ನು ಕೇಳುವುದು. ಮನಸ್ಸಿನಿಂದ ಎಲ್ಲ ಆತಂಕಗಳನ್ನು ಕಳೆಯುವುದಕ್ಕೆ ಇದು ಬಹುಶಕ್ತಿಶಾಲಿಯಾದ ಆಧ್ಯಾತ್ಮಿಕ ಮಾರ್ಗ. ಕೃಷ್ಣನ ವಿಷಯವನ್ನು ಕೇಳಿದಷ್ಟೂ ವ್ಯಕ್ತಿಯು ಜ್ಞಾನೋದಯ ಹೊಂದುತ್ತಾನೆ. ಮನಸ್ಸಿಗೆ ಬೆಳಕಾಗುತ್ತದೆ. ಕೃಷ್ಣನಿಂದ ಮನಸ್ಸನ್ನು ಸೆಳೆಯುವ ಎಲ್ಲ ವಿಷಯಗಳಿಂದಲೂ ಮನಸ್ಸು ದೂರವಾಗುತ್ತದೆ. ಭಗವಂತನಿಗೆ ಸಮರ್ಪಣೆಯಾಗದ ಚಟುವಟಿಕೆಗಳಿಂದ ದೂರವಾಗಿದ್ದರೆ ವೈರಾಗ್ಯವನ್ನು ಕಲಿಯುವುದು ಬಹುಸುಲಭ. ವೈರಾಗ್ಯವೆಂದರೆ ಜಡವಸ್ತುವಿನಿಂದ ದೂರವಾಗುವುದು ಮತ್ತು ಮನಸ್ಸನ್ನು ಆತ್ಮದಲ್ಲಿ ನೆಲೆಗೊಳಿಸುವುದು. ನಿರಾಕಾರ ಆಧ್ಯಾತ್ಮಿಕ ವೈರಾಗ್ಯವು ಮನಸ್ಸನ್ನು ಕೃಷ್ಣನ ಚಟುವಟಿಕೆಗಳಿಗೆ ಜೋಡಿಸುವುದಕ್ಕಿಂತ ಕಷ್ಟ. ಕೃಷ್ಣನಲ್ಲಿ ಮನಸ್ಸನ್ನು ನೆಡುವುದು ಕಾರ್ಯಸಾಧ್ಯ. ಏಕೆಂದರೆ ಕೃಷ್ಣನ ವಿಷಯ ಕೇಳುವುದರಿಂದ ಮನುಷ್ಯನು ತಾನಾಗಿಯೇ ಭಗವಂತನಲ್ಲಿ ಆಸಕ್ತಿ ಹೊಂದುತ್ತಾನೆ. ಈ ಆಸಕ್ತಿಗೆ **ಪರೇಶಾನುಭವ**, ಆಧ್ಯಾತ್ಮಿಕ ತೃಪ್ತಿ ಎಂದು ಹೆಸರು. ಇದು ಹಸಿದ ಮನುಷ್ಯನು ಪ್ರತಿಯೊಂದು ತುತ್ತನ್ನು ತಿನ್ನುವಾಗಲೂ ಅನುಭವಿಸುವ ತೃಪ್ತಿಯ ಭಾವದಂತಹುದು. ಮನುಷ್ಯನಿಗೆ ಹಸಿವಾಗಿದ್ದಾಗ ಎಷ್ಟು ತಿಂದರೆ ಅಷ್ಟು ತೃಪ್ತಿ ಮತ್ತು ಶಕ್ತಿಗಳ ಭಾವನೆ ಬರುತ್ತದೆ. ಹಾಗೆಯೇ ಭಕ್ತಿಪೂರ್ವಕ ಸೇವೆಯನ್ನು ಮಾಡುವುದರಿಂದ ಮನಸ್ಸು ಐಹಿಕ ಗುರಿಗಳಿಂದ ದೂರವಾದಂತೆ ಮನುಷ್ಯನಿಗೆ ದಿವ್ಯತೃಪ್ತಿಯಾಗುತ್ತದೆ. ಇದು ತಜ್ಞ ಚಿಕಿತ್ಸೆಯಿಂದ ಮತ್ತು ಸೂಕ್ತ ಆಹಾರದಿಂದ ಕಾಯಿಲೆಯನ್ನು ವಾಸಿಮಾಡುವಂತೆ — ಶ್ರೀಕೃಷ್ಣನ ದಿವ್ಯ ಲೀಲೆಗಳನ್ನು ಕೇಳುವುದು ಹುಚ್ಚು ಮನಸ್ಸಿಗೆ ತಜ್ಞ ಚಿಕಿತ್ಸೆ ಮಾಡಿದಂತೆ ಮತ್ತು ಕೃಷ್ಣ ಪ್ರಸಾದವನ್ನು ಸ್ವೀಕರಿಸುವುದು, ಕಾಯಿಲೆಯಿಂದ ನರಳುತ್ತಿರುವ ರೋಗಿಗೆ ಸೂಕ್ತವಾದ ಆಹಾರವನ್ನು ಕೊಟ್ಟಂತೆ. ಕೃಷ್ಣಪ್ರಜ್ಞೆಯ ಪ್ರಕ್ರಿಯೆಯೇ ಚಿಕಿತ್ಸೆ.

## ಶ್ಲೋಕ - 36

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ |**
**ವಶ್ಯಾತ್ಮನಾ ತು ಯತತಾ ಶಕ್ಯೋऽವಾಪ್ತುಮುಪಾಯತಃ ||೩೬||**

**ಅಸಂಯತ**—ಸಂಯಮವಿಲ್ಲದ; **ಆತ್ಮನಾ**—ಮನಸ್ಸಿನವನಿಂದ; **ಯೋಗಃ**—ಆತ್ಮಸಾಕ್ಷಾತ್ಕಾರವು; **ದುಷ್ಪ್ರಾಪಃ**—ಪಡೆಯಲು ಕಷ್ಟಕರ; **ಇತಿ**—ಹೀಗೆ; **ಮೇ**—ನನ್ನ; **ಮತಿಃ**—ಅಭಿಪ್ರಾಯವು; **ವಶ್ಯ**—ನಿಯಂತ್ರಿತವಾದ; **ಆತ್ಮನಾ**—ಮನಸ್ಸಿನವನಿಂದ; **ತು**—ಆದರೆ; **ಯತತಾ**—ಪ್ರಯತ್ನಿಸುವವನಿಂದ; **ಶಕ್ಯಃ**—ಸಾಧ್ಯವು; **ಅವಾಪ್ತುಮ್**—ಪಡೆಯಲು; **ಉಪಾಯತಃ**—ಯೋಗ್ಯ ವಿಧಾನಗಳಿಂದ.

### ಅನುವಾದ

**ಮನಸ್ಸಿಗೆ ಕಡಿವಾಣ ಹಾಕಲಾರದವನಿಗೆ ಆತ್ಮಸಾಕ್ಷಾತ್ಕಾರವು ಕಷ್ಟ. ಆದರೆ ಯಾರ ಮನಸ್ಸು ನಿಯಂತ್ರಣದಲ್ಲಿರುತ್ತದೋ ಮತ್ತು ಯಾರು ಯೋಗ್ಯವಾದ ರೀತಿಗಳಲ್ಲಿ ಪ್ರಯತ್ನಿಸುವರೋ ಅವರಿಗೆ ಯಶಸ್ಸು ಖಂಡಿತ. ಇದು ನನ್ನ ಅಭಿಪ್ರಾಯ.**

### ಭಾವಾರ್ಥ

ಯಾರು ಐಹಿಕ ಕೆಲಸಗಳಿಂದ ಮನಸ್ಸನ್ನು ದೂರ ಮಾಡಲು ಸರಿಯಾದ ರೀತಿಯನ್ನು ಅನುಸರಿಸುವುದಿಲ್ಲವೋ ಆತನು ಆತ್ಮಸಾಕ್ಷಾತ್ಕಾರದಲ್ಲಿ ಯಶಸ್ವಿಯಾಗಲಾರ ಎಂದು ದೇವೋತ್ತಮ ಪರಮ ಪುರುಷನು ಹೇಳುತ್ತಾನೆ. ಮನಸ್ಸನ್ನು ಐಹಿಕ ಸುಖದಲ್ಲಿ ತೊಡಗಿಸಿ ಯೋಗಾಭ್ಯಾಸ ಮಾಡಲು ಪ್ರಯತ್ನಿಸುವುದೆಂದರೆ ಬೆಂಕಿಯ ಮೇಲೆ ನೀರನ್ನು ಹೊಯ್ಯುತ್ತ ಅದನ್ನು ಹೊತ್ತಿಸಲು ಪ್ರಯತ್ನಿಸಿದಂತೆ. ಮನಸ್ಸಿನ ಸಂಯಮವಿಲ್ಲದ ಯೋಗಾಭ್ಯಾಸವೆಂದರೆ ವ್ಯರ್ಥ ಕಾಲಹರಣ. ಯೋಗದ ಇಂತಹ ಹೊರತೋರಿಕೆಯು ಪ್ರಾಪಂಚಿಕವಾಗಿ ಲಾಭದಾಯಕವಾಗಿರಬಹುದು. ಆದರೆ ಆತ್ಮಸಾಕ್ಷಾತ್ಕಾರದ ಮಟ್ಟಿಗೆ ಅದು ನಿಷ್ಪ್ರಯೋಜಕ. ಆದುದರಿಂದ ಭಗವಂತನ ಆಧ್ಯಾತ್ಮಿಕ ಪ್ರೀತಿಪೂರ್ವಕ ಸೇವೆಯಲ್ಲಿ ಮನಸ್ಸನ್ನು ನಿರಂತರವಾಗಿ ತೊಡಗಿಸಿ ಅದನ್ನು ನಿಯಂತ್ರಿಸಬೇಕು. ಕೃಷ್ಣಪ್ರಜ್ಞೆಯಲ್ಲಿ ತೊಡಗದಿರುವ ಮನುಷ್ಯನು ಮನಸ್ಸನ್ನು ಒಂದೇ ಸಮನೆ ಹತೋಟಿಯಲ್ಲಿಡಲಾರ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ವಿಶೇಷ ಪ್ರಯತ್ನವಿಲ್ಲದೆ ಯೋಗಾಭ್ಯಾಸದ ಪ್ರಯೋಜನವನ್ನು ಪಡೆದುಕೊಳ್ಳುತ್ತಾನೆ. ಆದರೆ ಕೃಷ್ಣಪ್ರಜ್ಞೆಯಿಲ್ಲದೆ ಯೋಗಾಭ್ಯಾಸಿಯು ಯಶಸ್ವಿಯಾಗಲಾರ.

## ಶ್ಲೋಕ - 37

**ಅರ್ಜುನ ಉವಾಚ**

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ |**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ||೩೭||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಅಯತಿಃ**—ಅಯಶಸ್ವಿಯಾದ ಆಧ್ಯಾತ್ಮಿಕವಾದಿಯು; **ಶ್ರದ್ಧಯಾ**—ಶ್ರದ್ಧೆಯಿಂದ; **ಉಪೇತಃ**—ತೊಡಗಿದವನಾದ; **ಯೋಗಾತ್**—ಯೋಗ ಸಂಬಂಧದಿಂದ; **ಚಲಿತ**—ದಾರಿತಪ್ಪಿದ; **ಮಾನಸಃ**—ಮನಸ್ಸುಳ್ಳ; **ಅಪ್ರಾಪ್ಯ**—ಹೊಂದಲು ವಿಫಲನಾಗಿ; **ಯೋಗ**

**ಸಂಸಿದ್ಧಿಮ್**—ಯೋಗದಲ್ಲಿ ಅತ್ಯುನ್ನತ ಪರಿಪೂರ್ಣತೆಯನ್ನು; **ಕಾಮ್**—ಯಾವ; **ಗತಿಮ್**—ಗತಿಯನ್ನು; **ಕೃಷ್ಣ**—ಕೃಷ್ಣನೇ; **ಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಅರ್ಜುನನು ಹೀಗೆಂದನು — ಕೃಷ್ಣನೇ, ಪ್ರಾರಂಭದಲ್ಲಿ ಶ್ರದ್ಧೆಯಿಂದ ಆತ್ಮಸಾಕ್ಷಾತ್ಕಾರದ ಸಾಧನೆಯನ್ನು ಸ್ವೀಕರಿಸಿ ಅನಂತರ ಪ್ರಾಪಂಚಿಕ ಮನೋಧರ್ಮದಿಂದ ಪ್ರಯತ್ನವನ್ನು ನಿಲ್ಲಿಸಿ ಯೋಗ ಸಂಸಿದ್ಧಿಯನ್ನು ಪಡೆಯದಿರುವ ಮನುಷ್ಯನ ಗತಿಯೇನು ?**

## ಭಾವಾರ್ಥ

ಆತ್ಮಸಾಕ್ಷಾತ್ಕಾರದ ಅಥವಾ ಯೋಗದ ಮಾರ್ಗವನ್ನು ಭಗವದ್ಗೀತೆಯಲ್ಲಿ ಹೇಳಿದೆ. ಜೀವಿಯು ಈ ಜಡದೇಹವಲ್ಲ, ಅವನು ದೇಹದಿಂದ ಬೇರೆಯಾಗಿದ್ದಾನೆ. ಶಾಶ್ವತ ಜೀವನ, ಆನಂದ ಮತ್ತು ಜ್ಞಾನದಲ್ಲಿರುವ ಅವನ ಸುಖವು ಅಲೌಕಿಕವಾದುದು. ಅದು ಶರೀರ ಮತ್ತು ಮನಸ್ಸಿಗೆ ಅತೀತವಾದುದಾಗಿದೆ. ಈ ಅರಿವೇ ಆತ್ಮಸಾಕ್ಷಾತ್ಕಾರದ ಮೂಲತತ್ವವಾಗಿದೆ. ಆತ್ಮಸಾಕ್ಷಾತ್ಕಾರವನ್ನು ಜ್ಞಾನಮಾರ್ಗದಿಂದಲೂ ಅಷ್ಟಾಂಗ ಯೋಗ ಪದ್ಧತಿಯ ಅಭ್ಯಾಸದಿಂದಲೂ ಅಥವಾ ಭಕ್ತಿಯೋಗದಿಂದಲೂ ಸಾಧಿಸಲು ಜನರು ಪ್ರಯತ್ನಿಸುತ್ತಾರೆ. ಈ ಒಂದೊಂದು ಪ್ರಕ್ರಿಯೆಯಲ್ಲಿಯೂ ಮನುಷ್ಯನು ಹಲವು ವಿಷಯಗಳನ್ನು ಅರ್ಥಮಾಡಿಕೊಳ್ಳಬೇಕು; ಜೀವಿಯ ಸಹಜ ಸ್ವರೂಪ, ಭಗವಂತನೊಡನೆ ಅವನ ಸಂಬಂಧ ಮತ್ತು ಕಳೆದುಹೋದ ಕೊಂಡಿಯನ್ನು ಮತ್ತೆ ಪಡೆದುಕೊಂಡು ಕೃಷ್ಣಪ್ರಜ್ಞೆಯ ಅತ್ಯುನ್ನತ ಹಂತವನ್ನು ಸಾಧಿಸಲು ಅಗತ್ಯವಾದ ಕರ್ಮಗಳು — ಇವನ್ನು ಅರಿಯಬೇಕು. ಮೇಲೆ ಹೇಳಿದ ಮೂರು ರೀತಿಗಳಲ್ಲಿ ಯಾವುದನ್ನು ಅನುಸರಿಸಿದರೂ ಶೀಘ್ರವಾಗಿಯೋ—ತಡವಾಗಿಯೋ ಅಂತೂ ಪರಮ ಗುರಿಯನ್ನು ಮುಟ್ಟುವುದು ಖಂಡಿತ. ಇದನ್ನು ಭಗವಂತನು ಎರಡನೆಯ ಅಧ್ಯಾಯದಲ್ಲಿ ಹೇಳಿದ್ದಾನೆ. ಆಧ್ಯಾತ್ಮಿಕ ಮಾರ್ಗದಲ್ಲಿ ಸ್ವಲ್ಪ ಪ್ರಯತ್ನ ಪಟ್ಟರೂ ಬಿಡುಗಡೆಯ ಹೆಚ್ಚಿನ ಭರವಸೆಯುಂಟು. ಈ ಮೂರು ವಿಧಾನಗಳಲ್ಲಿ ಈ ಯುಗಕ್ಕೆ ಭಕ್ತಿಯೋಗವು ವಿಶೇಷವಾಗಿ ಸೂಕ್ತವಾದದ್ದು. ಏಕೆಂದರೆ ಭಗವಂತನ ಸಾಕ್ಷಾತ್ಕಾರಕ್ಕೆ ಅದು ಅತ್ಯಂತ ನೇರವಾದ ಮಾರ್ಗ. ಇದನ್ನು ಇನ್ನೂ ಖಚಿತಮಾಡಿಕೊಳ್ಳಲು ಅರ್ಜನನು ಕೃಷ್ಣನನ್ನು ಅವನ ಹಿಂದಿನ ಮಾತನ್ನು ದೃಢಪಡಿಸುವಂತೆ ಕೇಳುತ್ತಾನೆ. ಒಬ್ಬ ಮನುಷ್ಯ ಆತ್ಮಸಾಕ್ಷಾತ್ಕಾರದ ಮಾರ್ಗವನ್ನು ಮನಃಪೂರ್ತಿಯಾಗಿ ಒಪ್ಪಿಕೊಳ್ಳಬಹುದು. ಆದರೆ ಈ ಯುಗದಲ್ಲಿ ಜ್ಞಾನವನ್ನು ಬೆಳೆಸಿಕೊಳ್ಳುವುದು ಮತ್ತು ಅಷ್ಟಾಂಗ ಯೋಗ ಪದ್ಧತಿಯ ಅಭ್ಯಾಸವು ಬಹು ಕಷ್ಟ. ಆದುದರಿಂದ ಸತತ ಪರಿಶ್ರಮ ಪಟ್ಟರೂ ಅನೇಕ ಕಾರಣಗಳಿಂದ ಮನುಷ್ಯನು ವಿಫಲನಾಗಬಹುದು. ಮೊಟ್ಟಮೊದಲನೆಯದಾಗಿ ಈ ಪ್ರಕ್ರಿಯೆಯನ್ನು ಅನುಸರಿಸುವುದರಲ್ಲಿ ಮನಸ್ಸು ಸಾಕಷ್ಟು ತೊಡಗದೆ ಇರಬಹುದು. ಆಧ್ಯಾತ್ಮಿಕ ಮಾರ್ಗದಲ್ಲಿ ನಡೆಯುವುದೆಂದರೆ ಸ್ವಲ್ಪ ಹೆಚ್ಚೊ ಕಡಮೆ ಮಾಯಾಶಕ್ತಿಯೊಡನೆ ಯುದ್ಧ ಪ್ರಾರಂಭಿಸಿದಂತೆ. ಮನುಷ್ಯನು ಮಾಯೆಯ ಶಕ್ತಿಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗಲೆಲ್ಲ ಅವಳು ಹಲವು ಆಮಿಷಗಳನ್ನು ಒಡ್ಡಿ ಸಾಧಕನನ್ನು ಸೋಲಿಸಲು ಪ್ರಯತ್ನಿಸುತ್ತಾಳೆ. ಐಹಿಕಶಕ್ತಿಯ ಗುಣಗಳಿಂದ ಬದ್ಧವಾದ ಆತ್ಮವು ಆಗಲೇ ಆಧ್ಯಾತ್ಮಿಕ ಶಿಸ್ತುಗಳನ್ನು ಆಚರಿಸುವಾಗಲೂ ಮತ್ತೆ ಆಕರ್ಷಣೆಗೆ ಒಳಗಾಗುವ ಸಾಧ್ಯತೆ ಇದ್ದೇ ಇದೆ. ಇದನ್ನು **ಯೋಗಾಚ್ಚಲಿತ ಮಾನಸಃ** ಎನ್ನುತ್ತಾರೆ. ಹೀಗೆಂದರೆ

ಆಧ್ಯಾತ್ಮಿಕ ಮಾರ್ಗದಿಂದ ದೂರವಾಗುವುದು. ಆತ್ಮಸಾಕ್ಷಾತ್ಕಾರದ ಮಾರ್ಗದಿಂದ ಬೇರೆಯಾದರೆ ಪರಿಣಾಮವೇನು ಎಂದು ತಿಳಿಯಲು ಅರ್ಜುನನು ಕುತೂಹಲಿಯಾಗಿದ್ದಾನೆ.

## ಶ್ಲೋಕ - 38

**ಕಚ್ಚಿನ್ನೋಭಯವಿಭ್ರಷ್ಟಶ್ ಛಿನ್ನಾಭ್ರಮಿವ ನಶ್ಯತಿ |**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ||೩೮||**

**ಕಚ್ಚಿತ್**—ಒಂದು ವೇಳೆ; **ನ**—ಇಲ್ಲ; **ಉಭಯ**—ಎರಡರಿಂದಲೂ; **ವಿಭ್ರಷ್ಟಃ**—ವಿಚಲಿತನಾಗಿ; **ಛಿನ್ನ**—ಹರಿದ; **ಅಭ್ರಮ್**—ಮೋಡದ; **ಇವ**—ಹಾಗೆ; **ನಶ್ಯತಿ**—ನಾಶವಾಗುತ್ತಾನೆ; **ಅಪ್ರತಿಷ್ಠಃ**—ಯಾವುದೇ ಸ್ಥಾನವಿಲ್ಲದ; **ಮಹಾಬಾಹೋ**—ಹೇ ಮಹಾಬಾಹುವಾದ ಕೃಷ್ಣನೇ; **ವಿಮೂಢಃ**—ದಿಗ್ಭ್ರಮಿತನಾಗಿ; **ಬ್ರಹ್ಮಣಃ**—ದಿವ್ಯತೆಯ; **ಪಥಿ**—ಮಾರ್ಗದಲ್ಲಿ.

## ಅನುವಾದ

**ಮಹಾಬಾಹುವಾದ ಕೃಷ್ಣನೇ, ಆಧ್ಯಾತ್ಮಿಕ ಪಥದಿಂದ ದಿಗ್ಭ್ರಮೆಗೊಂಡು ದೂರನಾದವನು ಆಧ್ಯಾತ್ಮಿಕ ಯಶಸ್ಸು ಮತ್ತು ಐಹಿಕ ಯಶಸ್ಸು ಎರಡರಿಂದಲೂ ಭ್ರಷ್ಟನಾಗಿ, ಯಾವ ಲೋಕದಲ್ಲಿಯೂ ಸ್ಥಳವಿಲ್ಲದೆ, ತುಂಡಾದ ಮೋಡದಂತೆ ನಾಶವಾಗುವುದಿಲ್ಲವೆ?**

## ಭಾವಾರ್ಥ

ಪ್ರಗತಿಗೆ ಎರಡು ಮಾರ್ಗಗಳುಂಟು. ಪ್ರಾಪಂಚಿಕವಾದಿಗಳಿಗೆ ಆಧ್ಯಾತ್ಮಿಕದಲ್ಲಿ ಆಸಕ್ತಿಯಿಲ್ಲ. ಆರ್ಥಿಕ ಬೆಳವಣಿಗೆಯ ಮೂಲಕ ಪ್ರಾಪಂಚಿಕ ಪ್ರಗತಿ ಅಥವಾ ಸೂಕ್ತವಾದ ಕೆಲಸದಿಂದ ಉನ್ನತ ಗ್ರಹಗಳಿಗೆ ಏರುವುದು — ಇವುಗಳಲ್ಲಿ ಅವರಿಗೆ ಆಸಕ್ತಿ. ಆದರೆ ಯೋಗಮಾರ್ಗವನ್ನು ಒಪ್ಪಿಕೊಂಡವನು ಎಲ್ಲ ಐಹಿಕ ಚಟುವಟಿಕೆಗಳನ್ನು ನಿಲ್ಲಿಸಬೇಕು ಮತ್ತು ಸುಖ ಎಂದು ಕರೆಯಲ್ಪಡುವ ಸುಖದ ಎಲ್ಲ ರೂಪಗಳನ್ನು ತ್ಯಾಗಮಾಡಬೇಕು. ಉತ್ಕಾಂಕ್ಷೆಯಿರುವ ಆಧ್ಯಾತ್ಮಿಕವಾದಿಯು ವಿಫಲನಾದರೆ ಎರಡು ರೀತಿಗಳಲ್ಲೂ ಸೋಲುತ್ತಾನೆ ಎನ್ನುವುದು ಸ್ಪಷ್ಟ; ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ, ಆತನಿಗೆ ಐಹಿಕ ಸುಖದ ಸವಿಯೂ ಇಲ್ಲ; ಆಧ್ಯಾತ್ಮಿಕ ಯಶಸ್ಸಿನ ಸವಿಯೂ ಇಲ್ಲ. ಆತನಿಗೆ ಒಂದು ಸ್ಥಾನವೇ ಇಲ್ಲ. ಆತನು ತುಂಡಾದ ಮೋಡದಂತೆ. ಒಮ್ಮೊಮ್ಮೆ ಆಕಾಶದಲ್ಲಿ ಒಂದು ಮೋಡವು ಒಂದು ಸಣ್ಣ ಮೋಡವನ್ನು ಬಿಟ್ಟು ದೊಡ್ಡ ಮೋಡವನ್ನು ಸೇರಿಕೊಳ್ಳುತ್ತದೆ. ಆದರೆ ಅದು ದೊಡ್ಡ ಮೋಡವನ್ನು ಸೇರಲಾರದೆ ಹೋದರೆ ಗಾಳಿಯು ಅದನ್ನು ಹೊಡೆದುಕೊಂಡು ಹೋಗುತ್ತದೆ ಮತ್ತು ಅದು ವಿಶಾಲವಾದ ಆಕಾಶದಲ್ಲಿ ಅಸ್ತಿತ್ವವೇ ಇಲ್ಲದಂತೆ ಆಗುತ್ತದೆ. **ಬ್ರಹ್ಮಣಃ ಪಥಿ** ಎನ್ನುವುದರ ಅರ್ಥ ಇದು. ಭಗವಂತನು ಬ್ರಹ್ಮನಾಗಿ, ಪರಮಾತ್ಮನಾಗಿ ಮತ್ತು ಭಗವಾನ್ ಆಗಿ ಪ್ರಕಟವಾಗುತ್ತಾನೆ. ಮನುಷ್ಯನು ತನ್ನದು ಆಧ್ಯಾತ್ಮಿಕ ಸತ್ವ, ತಾನು ಭಗವಂತನ ವಿಭಿನ್ನಾಂಶ ಎಂಬ ದಿವ್ಯಜ್ಞಾನವನ್ನು ತಂದುಕೊಳ್ಳಬೇಕು. ಶ್ರೀಕೃಷ್ಣನು ಅತ್ಯುನ್ನತ ಪರಮಸತ್ಯದ ಸಂಪೂರ್ಣ ಅಭಿವ್ಯಕ್ತಿ. ಆದುದರಿಂದ ಪರಮ ಪುರುಷನಿಗೆ ಶರಣಾಗತನಾದವನು ಯಶಸ್ವಿಯಾದ ಯೋಗಿ. ಬ್ರಹ್ಮನ್ ಮತ್ತು ಪರಮಾತ್ಮನ ಸಾಕ್ಷಾತ್ಕಾರದಿಂದ

ಬದುಕಿನ ಈ ಗುರಿಯನ್ನು ತಲಪಲು ಅಧಿಕ ಸಂಖ್ಯೆಯ ಜನ್ಮಗಳನ್ನು ಎತ್ತಬೇಕಾಗುತ್ತದೆ. (**ಬಹೂನಾಂ ಜನ್ಮನಾಂ ಅಂತೆ**). ಆದುದರಿಂದ ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಅತ್ಯುನ್ನತ ಮಾರ್ಗವೆಂದರೆ ನೇರಮಾರ್ಗವಾದ ಭಕ್ತಿಯೋಗ ಅಥವಾ ಕೃಷ್ಣಪ್ರಜ್ಞೆ.

## ಶ್ಲೋಕ - 39

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ |**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ||೩೯||**

**ಏತತ್**—ಈ; **ಮೇ**—ನನ್ನ; **ಸಂಶಯಮ್**—ಸಂದೇಹವನ್ನು; **ಕೃಷ್ಣ**—ಕೃಷ್ಣನೇ; **ಛೇತ್ತುಮ್**—ನಿವಾರಿಸಲು; **ಅರ್ಹಸಿ**—ನಿನ್ನನ್ನು ಪ್ರಾರ್ಥಿಸುತ್ತೇನೆ; **ಅಶೇಷತಃ**—ಸಂಪೂರ್ಣವಾಗಿ; **ತ್ವತ್**—ನಿನಗಿಂತಲೂ; **ಅನ್ಯಃ**—ಇತರರು; **ಸಂಶಯಸ್ಯ**—ಸಂದೇಹದ; **ಅಸ್ಯ**—ಈ; **ಛೇತ್ತಾ**—ನಿವಾರಕನು; **ನ**—ಎಂದಿಗೂ ಇಲ್ಲ; **ಹಿ**—ಖಂಡಿತವಾಗಿಯೂ; **ಉಪಪದ್ಯತೇ**—ಸಿಗುವನು.

## ಅನುವಾದ

**ಕೃಷ್ಣನೆ, ಇದು ನನ್ನ ಸಂದೇಹ. ಅದನ್ನು ಸಂಪೂರ್ಣವಾಗಿ ಹೋಗಲಾಡಿಸಬೇಕೆಂದು ನಿನ್ನನ್ನು ಬೇಡುತ್ತೇನೆ. ನಿನ್ನನ್ನು ಬಿಟ್ಟರೆ ಈ ಸಂದೇಹವನ್ನು ಹೋಗಲಾಡಿಸಬಲ್ಲವರು ಯಾರೂ ಇಲ್ಲ.**

## ಭಾವಾರ್ಥ

ಭೂತ, ವರ್ತಮಾನ ಮತ್ತು ಭವಿಷ್ಯತ್‌ಗಳ ಪರಿಪೂರ್ಣ ಜ್ಞಾನವಿರುವವನು ಕೃಷ್ಣ. ಭಗವದ್ಗೀತೆಯ ಪ್ರಾರಂಭದಲ್ಲಿ ಭಗವಂತನು ಒಂದು ಮಾತನ್ನು ಹೇಳಿದ. ಎಲ್ಲ ಜೀವಿಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಹಿಂದೆ ಇದ್ದರು, ಈಗ ಇದ್ದಾರೆ ಮತ್ತು ಐಹಿಕ ಸಿಕ್ಕಿನಿಂದ ಬಿಡುಗಡೆಯಾದ ಮೇಲೂ ಭವಿಷ್ಯದಲ್ಲಿಯೂ ಅವರಿಗೆ ಪ್ರತ್ಯೇಕ ವ್ಯಕ್ತಿತ್ವವಿರುತ್ತದೆ. ಪ್ರತ್ಯೇಕ ಜೀವಿಯ ಭವಿಷ್ಯದ ಪ್ರಶ್ನೆಗೆ ಕೃಷ್ಣನು ಆಗಲೇ ಸ್ಪಷ್ಟವಾದ ಉತ್ತರ ಕೊಟ್ಟಿದ್ದಾನೆ. ಈಗ ಅರ್ಜುನನು ವಿಫಲವಾದ ಯೋಗಿಯ ಭವಿಷ್ಯವನ್ನು ತಿಳಿಯಲು ಬಯಸುತ್ತಾನೆ. ಯಾರೂ ಕೃಷ್ಣನಿಗೆ ಸಮಾನರಲ್ಲ ಮತ್ತು ಅವನನ್ನು ಮೀರಿದವರಲ್ಲ. ಐಹಿಕ ಪ್ರಕೃತಿಗೆ ಸಂಪೂರ್ಣವಾಗಿ ವಿಧೇಯರಾಗಿರುವ ಮಹಾಋುಷಿಗಳು ಮತ್ತು ತತ್ವಜ್ಞಾನಿಗಳು ಎನ್ನಿಸಿಕೊಂಡವರು ಕೃಷ್ಣನಿಗೆ ಸಮಾನವಾಗಲಾರರು. ಕೃಷ್ಣನಿಗೆ ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳು ಪರಿಪೂರ್ಣವಾಗಿ ತಿಳಿದಿವೆ. ಆದರೆ ಅವನನ್ನು ಯಾರೂ ತಿಳಿಯಲಾರರು. ಆದುದರಿಂದ ಎಲ್ಲ ಸಂದೇಹಗಳಿಗೆ ಕೃಷ್ಣನ ತೀರ್ಮಾನವೇ ಕಟ್ಟಕಡೆಯ ಮತ್ತು ಸಂಪೂರ್ಣವಾದ ಉತ್ತರ. ಕೃಷ್ಣ ಮತ್ತು ಕೃಷ್ಣಪ್ರಜ್ಞೆಯ ಭಕ್ತರು ಮಾತ್ರ ಯಾವುದು ಏನು ಎಂದು ತಿಳಿಯಬಲ್ಲರು.

## ಶ್ಲೋಕ - 40

**ಶ್ರೀ ಭಗವಾನುವಾಚ**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ |**
**ನ ಹಿ ಕಲ್ಯಾಣಕೃತ್ಕಶ್ಚಿದ್ ದುರ್ಗತಿಂ ತಾತ ಗಚ್ಛತಿ ||೪೦||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಪಾರ್ಥ**—ಪೃಥೆಯ ಮಗನೇ; **ನ ಏವ**—ಎಂದಿಗೂ ಅದು ಹಾಗಲ್ಲ; **ಇಹ**—ಈ ಭೌತಿಕ ಜಗತ್ತಿನಲ್ಲಿ; **ನ**—ಎಂದಿಗೂ ಇಲ್ಲ; **ಅಮುತ್ರ**—ಮುಂದಿನ ಜನ್ಮದಲ್ಲಿ; **ವಿನಾಶಃ**—ನಾಶವು; **ತಸ್ಯ**—ಅವನ; **ವಿದ್ಯತೇ**—ಇರುತ್ತದೆ; **ನ**—ಎಂದಿಗೂ ಇಲ್ಲ; **ಹಿ**—ಖಂಡಿತವಾಗಿಯೂ; **ಕಲ್ಯಾಣಕೃತ್**—ಮಂಗಲಕರ ಕಾರ್ಯದಲ್ಲಿ ತೊಡಗಿದ; **ಕಶ್ಚಿತ್**—ಯಾರೊಬ್ಬನೂ; **ದುರ್ಗತಿಮ್**—ದುರ್ಗತಿಯನ್ನು; **ತಾತ**—ನನ್ನ ಮಿತ್ರನೇ; **ಗಚ್ಛತಿ**—ಹೋಗುತ್ತಾನೆ.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಪಾರ್ಥ, ಕಲ್ಯಾಣಕಾರ್ಯಗಳನ್ನು ಮಾಡುವ ಅಧ್ಯಾತ್ಮವಾದಿಗೆ ಈ ಲೋಕದಲ್ಲಾಗಲೀ ಆಧ್ಯಾತ್ಮಿಕ ಲೋಕದಲ್ಲಾಗಲೀ ನಾಶವೆಂಬುದಿಲ್ಲ. ಗೆಳೆಯ, ಕಲ್ಯಾಣಕಾರ್ಯಗಳನ್ನು ಮಾಡುವವನನ್ನು ದುಷ್ಟತನವು ಗೆಲ್ಲಲಾರದು.**

### ಭಾವಾರ್ಥ

ಶ್ರೀಮದ್ಭಾಗವತದಲ್ಲಿ (1.5.17) ಶ್ರೀ ನಾರದ ಮುನಿಗಳು ವ್ಯಾಸದೇವರಿಗೆ ಹೀಗೆ ಉಪದೇಶ ಮಾಡುತ್ತಾರೆ—

**ತ್ಯಕ್ತ್ವಾ ಸ್ವಧರ್ಮಂ ಚರಣಾಮ್ಬುಜಂ ಹರೇರ್**
**ಭಜನ್ನಪಕ್ವೋಽಥ ಪತೇತ್ ತತೋ ಯದಿ |**
**ಯತ್ರ ಕ್ವ ವಾಭದ್ರಮಭೂದ್ ಅಮುಷ್ಯ ಕಿಂ**
**ಕೋ ವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ ||**

"ಯಾರಾದರೂ ಎಲ್ಲ ಐಹಿಕ ಭವಿಷ್ಯ ನಿರೀಕ್ಷೆಗಳನ್ನು ತ್ಯಜಿಸಿ ದೇವೋತ್ತಮ ಪರಮ ಪುರುಷನಲ್ಲಿ ಸಂಪೂರ್ಣ ಆಶ್ರಯವನ್ನು ಪಡೆದರೆ ಅವರಿಗೆ ಯಾವುದೇ ರೀತಿಯಲ್ಲಿ ನಷ್ಟವಾಗಲೀ ದುರ್ಗತಿಯಾಗಲೀ ಇಲ್ಲ. ಆದರೆ ಭಕ್ತನಲ್ಲದವನು ತನ್ನ ವೃತ್ತಿಯ ಕರ್ತವ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿದರೂ ಏನನ್ನೂ ಪಡೆಯದೆ ಹೋಗಬಹುದು." ಐಹಿಕ ಭವಿಷ್ಯ ನಿರೀಕ್ಷೆಗಾಗಿ ಶಾಸ್ತ್ರದ ಪ್ರಕಾರವಾಗಿಯೂ ರೂಢಿಗನುಗುಣವಾಗಿಯೂ ಹಲವಾರು ಚಟುವಟಿಕೆಗಳುಂಟು. ಆಧ್ಯಾತ್ಮಿಕವಾದಿಯು ಬದುಕಿನಲ್ಲಿ ಆಧ್ಯಾತ್ಮಿಕ ಪ್ರಗತಿಗಾಗಿ, ಕೃಷ್ಣಪ್ರಜ್ಞೆಗಾಗಿ ಎಲ್ಲ ಐಹಿಕ ಚಟುವಟಿಕೆಗಳನ್ನು ತ್ಯಜಿಸುತ್ತಾನೆ ಎಂದು ನಿರೀಕ್ಷೆಯುಂಟು. ಕೃಷ್ಣಪ್ರಜ್ಞೆಯನ್ನು ಸಂಪೂರ್ಣಗೊಳಿಸಿದರೆ ಮನುಷ್ಯನು ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸಬಹುದು. ಆದರೆ ಇಂತಹ ಪರಿಪೂರ್ಣ ಹಂತವನ್ನು ತಲಪದೇ ಹೋದವನು ಐಹಿಕವಾಗಿಯೂ ಆಧ್ಯಾತ್ಮಿಕವಾಗಿಯೂ ನಷ್ಟಕ್ಕೆ ಒಳಗಾಗುತ್ತಾನೆ

ಎಂದು ವಾದಿಸಬಹುದು. ವಿಧಿತ ಕರ್ತವ್ಯಗಳನ್ನು ನಿರ್ವಹಿಸದಿದ್ದರೆ ಮನುಷ್ಯನು ಅದರ ಪ್ರತಿಕ್ರಿಯೆಯನ್ನು ಅನುಭವಿಸಬೇಕಾಗುತ್ತದೆ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಆದುದರಿಂದ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಯೋಗ್ಯರೀತಿಯಲ್ಲಿ ತೊಡಗದಿದ್ದವನು ಈ ಪ್ರತಿಕ್ರಿಯೆಗಳಿಗೆ ಒಳಗಾಗುತ್ತಾನೆ. ಯಶಸ್ವಿಯಾಗದ ಆಧ್ಯಾತ್ಮಿಕವಾದಿಗೆ ಅವನು ಆತಂಕಪಡುವ ಕಾರಣವಿಲ್ಲ ಎಂದು ಭಾಗವತವು ಭರವಸೆ ನೀಡುತ್ತದೆ. ವಿಧಿತ ಕರ್ತವ್ಯಗಳನ್ನು ಪರಿಪೂರ್ಣವಾಗಿ ನಿರ್ವಹಿಸಲಿಲ್ಲ ಎನ್ನುವ ಕಾರಣಕ್ಕಾಗಿ ಆತನು ಪ್ರತಿಕ್ರಿಯೆಗೆ ಒಳಗಾಗಬಹುದಾದರೂ ಅವನಿಗೆ ನಷ್ಟವಿಲ್ಲ. ಏಕೆಂದರೆ ಮಂಗಳಕರವಾದ ಕೃಷ್ಣಪ್ರಜ್ಞೆಯನ್ನು ಮರೆಯುವುದು ಎನ್ನುವುದೇ ಇಲ್ಲ. ಇದರಲ್ಲಿ ತೊಡಗಿರುವವನು ಮುಂದಿನ ಜನ್ಮದಲ್ಲಿ ಕೆಳವರ್ಗದಲ್ಲಿ ಹುಟ್ಟಿದರೂ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯುತ್ತಾನೆ. ಆದರೆ ವಿಧಿತ ಕರ್ತವ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದಷ್ಟನ್ನೇ ಮಾಡುವವನಿಗೆ ಕೃಷ್ಣಪ್ರಜ್ಞೆ ಇಲ್ಲದಿದ್ದರೆ ಕಲ್ಯಾಣವೇ ಆಗುತ್ತದೆ ಎಂದು ಹೇಳುವಂತಿಲ್ಲ.

ಭಾವಾರ್ಥವನ್ನು ಮುಂದೆ ಹೇಳಿದಂತೆ ಅರ್ಥ ಮಾಡಿಕೊಳ್ಳಬಹುದು. ಮಾನವಕುಲವನ್ನು ಸಂಯಮವಿರುವವರು ಮತ್ತು ಸಂಯಮರಹಿತರು ಎಂದು ಎರಡು ವರ್ಗಗಳಾಗಿ ವಿಭಾಗಿಸಬಹುದು. ತಮ್ಮ ಮುಂದಿನ ಜನ್ಮದ ಅಥವಾ ಆಧ್ಯಾತ್ಮಿಕ ಮೋಕ್ಷದ ತಿಳುವಳಿಕೆಯೇ ಇಲ್ಲದೆ ಮೃಗಗಳಂತೆ ಇಂದ್ರಿಯಭೋಗದಲ್ಲಷ್ಟೇ ತೊಡಗಿರುವವರು ಸಂಯಮರಹಿತರ ವಿಭಾಗಕ್ಕೆ ಸೇರಿದವರು. ಶಾಸ್ತ್ರಗಳು ವಿಧಿಸಿದ ಕರ್ತವ್ಯಗಳನ್ನು ಅನುಸರಿಸುವವರು ಸಂಯಮಶೀಲರ ವಿಭಾಗಕ್ಕೆ ಸೇರುತ್ತಾರೆ. ನಾಗರಿಕರಾಗಲಿ ಅನಾಗರಿಕರಾಗಿರಲಿ, ವಿದ್ಯಾವಂತರಾಗಿರಲಿ ಅವಿದ್ಯಾವಂತರಾಗಿರಲಿ, ಬಲಶಾಲಿಗಳಾಗಿರಲಿ ದುರ್ಬಲರಾಗಿರಲಿ, ಸಂಯಮರಹಿತರ ವಿಭಾಗದವರು ಪಶುಪ್ರವೃತ್ತಿಗಳಿಂದ ತುಂಬಿಹೋಗಿರುತ್ತಾರೆ. ಅವರ ಚಟುವಟಿಕೆಗಳು ಎಂದೂ ಕಲ್ಯಾಣಕರವಾಗಿರುವುದಿಲ್ಲ. ಏಕೆಂದರೆ ತಿನ್ನುವುದು, ನಿದ್ರಿಸುವುದು, ರಕ್ಷಣೆ ಮತ್ತು ಮೈಥುನ ಈ ಪಶುಪ್ರವೃತ್ತಿಗಳನ್ನು ಸವಿಯುತ್ತಿರುವಾಗ ಅವರು ಸದಾ ಐಹಿಕ ಅಸ್ತಿತ್ವದಲ್ಲಿಯೇ ಉಳಿಯುತ್ತಾರೆ. ಈ ಅಸ್ತಿತ್ವವು ಯಾವಾಗಲೂ ದುಃಖಮಯವಾದದ್ದು. ಇದಕ್ಕೆ ಪ್ರತಿಯಾಗಿ ಶಾಸ್ತ್ರದ ವಿಧಿಗಳಿಂದ ನಿಯಂತ್ರಿತರಾಗಿ ಕ್ರಮೇಣ ಕೃಷ್ಣಪ್ರಜ್ಞೆಗೆ ಏರುವವರು ನಿಶ್ಚಯವಾಗಿಯೂ ಬದುಕಿನಲ್ಲಿ ಪ್ರಗತಿಯನ್ನು ಹೊಂದುವರು.

ಕಲ್ಯಾಣಕರ ಮಾರ್ಗದಲ್ಲಿ ನಡೆಯುವವರನ್ನು ಮೂರು ವರ್ಗಗಳಾಗಿ ವಿಭಾಗಿಸಬಹುದು. (1) ಶಾಸ್ತ್ರದ ನಿಯಮ ನಿಬಂಧನೆಗಳನ್ನು ಅನುಸರಿಸಿ ಐಹಿಕ ಅಭ್ಯುದಯವನ್ನು ಸವಿಯುತ್ತಿರುವವರು. (2) ಐಹಿಕ ಅಸ್ತಿತ್ವದಿಂದ ಪರಮ ಮುಕ್ತಿಯನ್ನು ಪಡೆಯಲು ಪ್ರಯತ್ನಿಸುತ್ತಿರುವವರು ಮತ್ತು (3) ಕೃಷ್ಣಪ್ರಜ್ಞೆಯಲ್ಲಿ ಭಕ್ತರಾದವರು. ಪ್ರಾಪಂಚಿಕ ಸುಖಕ್ಕಾಗಿ ಶಾಸ್ತ್ರಗಳ ನಿಯಮ, ನಿಬಂಧನೆಗಳನ್ನು ಅನುಸರಿಸುವವರನ್ನು ಇನ್ನೂ ಎರಡು ವರ್ಗಗಳಾಗಿ ವಿಭಾಗಿಸಬಹುದು — ಕರ್ಮಫಲಾಪೇಕ್ಷಿಗಳು ಮತ್ತು ಇಂದ್ರಿಯ ತೃಪ್ತಿಗಾಗಿ ಫಲವನ್ನು ಬಯಸದವರು. ಇಂದ್ರಿಯ ತೃಪ್ತಿಗಾಗಿ ಫಲವನ್ನು ಅಪೇಕ್ಷಿಸುವವರು ಇನ್ನೂ ಉನ್ನತವಾದ ಜೀವನಮಟ್ಟಕ್ಕೆ ಏರಬಹುದು. ಉನ್ನತ ಲೋಕಗಳಿಗೂ ಏರಬಹುದು. ಆದರೂ ಅವರು ಐಹಿಕ ಅಸ್ತಿತ್ವದಿಂದ ಬಿಡುಗಡೆಯಾಗದಿರುವುದರಿಂದ ಅವರು ನಿಜವಾಗಿ ಕಲ್ಯಾಣಕರ ಮಾರ್ಗವನ್ನು ಅನುಸರಿಸುತ್ತಿಲ್ಲ. ಮುಕ್ತಿಗೊಯ್ಯುವ ಚಟುವಟಿಕೆಗಳು ಮಾತ್ರವೇ ಕಲ್ಯಾಣಕರ ಚಟುವಟಿಕೆಗಳು. ಕಟ್ಟಕಡೆಗೆ ಆತ್ಮಸಾಕ್ಷಾತ್ಕಾರ ಅಥವಾ ಬದುಕಿನ ಐಹಿಕ ಶಾರೀರಕ ಪರಿಕಲ್ಪನೆಯಿಂದ ಬಿಡುಗಡೆ ಪಡೆಯುವುದೇ ಗುರಿಯಾಗಿಲ್ಲದ ಯಾವುದೇ ಚಟುವಟಿಕೆಯು ಮಂಗಳಕರವಲ್ಲ. ಕೃಷ್ಣಪ್ರಜ್ಞೆಯಿಂದ

ಮಾಡುವ ಕೆಲಸವಷ್ಟೇ ಮಂಗಳಕರ ಕೆಲಸ. ಕೃಷ್ಣಪ್ರಜ್ಞೆಯ ಮಾರ್ಗದಲ್ಲಿ ಮುಂದುವರಿಯುವುದಕ್ಕಾಗಿ ದೈಹಿಕ ಬಾಧೆಗಳನ್ನು ಸ್ವಇಚ್ಛೆಯಿಂದ ಸ್ವೀಕರಿಸುವವನನ್ನು ಕಠಿಣ ವೈರಾಗ್ಯದ ಪರಿಪೂರ್ಣ ಯೋಗಿ ಎಂದು ಕರೆಯಬಹುದು. ಅಷ್ಟಾಂಗಯೋಗ ಪದ್ಧತಿಯ ಗುರಿ ಕೃಷ್ಣಪ್ರಜ್ಞೆಯ ಅಂತಿಮ ಸಾಕ್ಷಾತ್ಕಾರ. ಇಂತಹ ಅಭ್ಯಾಸವೂ ಸಹ ಮಂಗಳಕರವಾದದ್ದು ಮತ್ತು ಈ ವಿಷಯದಲ್ಲಿ ತನ್ನಿಂದಾದಷ್ಟು ಪ್ರಯತ್ನಿಸುವವನು ತನಗೆ ದುರ್ಗತಿಯಾಗುವುದೆಂದು ಹೆದರಬೇಕಾಗಿಲ್ಲ.

## ಶ್ಲೋಕ - 41

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ |**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ||೪೧||**

**ಪ್ರಾಪ್ಯ**—ಪಡೆದ ಮೇಲೆ; **ಪುಣ್ಯ ಕೃತಾಮ್**—ಪುಣ್ಯಕಾರ್ಯಗಳನ್ನು ಆಚರಿಸಿದವರ; **ಲೋಕಾನ್**—ಲೋಕಗಳನ್ನು; **ಉಷಿತ್ವಾ**—ವಾಸಿಸಿದನಂತರ; **ಶಾಶ್ವತೀಃ**—ಅನೇಕ; **ಸಮಾಃ**—ವರ್ಷಗಳು; **ಶುಚೀನಾಮ್**—ಪುಣ್ಯವಂತರ; **ಶ್ರೀಮತಾಮ್**—ಶ್ರೀಮಂತರ; **ಗೇಹೇ**—ಮನೆಯಲ್ಲಿ; **ಯೋಗ ಭ್ರಷ್ಟಃ**—ಆತ್ಮಸಾಕ್ಷಾತ್ಕಾರ ಮಾರ್ಗದಿಂದ ಪತನಗೊಂಡವನು; **ಅಭಿಜಾಯತೇ**—ಜನ್ಮ ತಾಳುತ್ತಾನೆ.

## ಅನುವಾದ

**ಯೋಗಭ್ರಷ್ಟನು ಪುಣ್ಯಜೀವಿಗಳ ಲೋಕಗಳಲ್ಲಿ ಬಹುಕಾಲ ಸಂತೋಷವಾಗಿದ್ದು ಅನಂತರ ಧರ್ಮಾತ್ಮರ ಮನೆಯಲ್ಲಿ ಅಥವಾ ಶ್ರೀಮಂತ ಕುಟುಂಬದಲ್ಲಿ ಹುಟ್ಟುವನು.**

## ಭಾವಾರ್ಥ

ಯಶಸ್ಸನ್ನು ಸಾಧಿಸುವ ಯೋಗಿಗಳಲ್ಲಿ ಎರಡು ವರ್ಗಗಳು — ಒಂದು ವರ್ಗದವರು ಅತ್ಯಲ್ಪ ಪ್ರಗತಿಯನಂತರ ಭ್ರಷ್ಟರಾದವರು, ಇನ್ನೊಂದು ವರ್ಗದವರು ದೀರ್ಘಕಾಲ ಯೋಗಾಭ್ಯಾಸ ಮಾಡಿ ಭ್ರಷ್ಟರಾದವರು. ಸ್ವಲ್ಪಕಾಲ ಅಭ್ಯಾಸ ಮಾಡಿ ಭ್ರಷ್ಟನಾದ ಯೋಗಿಯು ಪುಣ್ಯಜೀವಿಗಳು ಪ್ರವೇಶಿಸಬಹುದಾದ ಉತ್ತಮಲೋಕಗಳಿಗೆ ಹೋಗುತ್ತಾನೆ. ಅಲ್ಲಿ ಬಹುಕಾಲ ಇದ್ದನಂತರ ಅವನನ್ನು ಮತ್ತೆ ಈ ಲೋಕಕ್ಕೆ ಕಳಿಸಲಾಗುತ್ತದೆ. ಅವನು ಧರ್ಮಿಷ್ಠನಾದ ಬ್ರಾಹ್ಮಣನ ಅಥವಾ ವೈಷ್ಣವನ ಸಂಸಾರದಲ್ಲಾಗಲೀ, ಶ್ರೀಮಂತ ವರ್ತಕರ ಮನೆಯಲ್ಲಾಗಲೀ ಹುಟ್ಟುತ್ತಾನೆ.

ಈ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ವಿವರಿಸಿರುವಂತೆ ಯೋಗಾಭ್ಯಾಸದ ನಿಜವಾದ ಉದ್ದೇಶ ಕೃಷ್ಣಪ್ರಜ್ಞೆಯ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುವುದು. ಆದರೆ ಇಷ್ಟರಮಟ್ಟಿಗೆ ಪಟ್ಟುಹಿಡಿದು ಶ್ರಮಪಡದೆ ಇರುವವರಿಗೆ ಮತ್ತು ಐಹಿಕ ಪ್ರಲೋಭನೆಗಳ ದೆಸೆಯಿಂದ ವಿಫಲರಾಗುವವರಿಗೆ ಭಗವಂತನ ಕೃಪೆಯಿಂದ ತಮ್ಮ ಐಹಿಕ ಪ್ರವೃತ್ತಿಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಅವಕಾಶವು ಲಭ್ಯವಾಗುತ್ತದೆ. ಅನಂತರ ಅವರಿಗೆ ಧರ್ಮಿಷ್ಠ ಅಥವಾ ಶ್ರೀಮಂತ ಕುಟುಂಬಗಳಲ್ಲಿ ಅನುಕೂಲಸ್ಥಿತಿಯಲ್ಲಿ ಬಾಳಲು ಅವಕಾಶಗಳು ಲಭ್ಯವಾಗುತ್ತವೆ. ಇಂತಹ ಸಂಸಾರಗಳಲ್ಲಿ ಹುಟ್ಟಿದವರು ಸೌಲಭ್ಯಗಳನ್ನು ಸದುಪಯೋಗಮಾಡಿಕೊಂಡು ಪೂರ್ಣ ಕೃಷ್ಣಪ್ರಜ್ಞೆಗೆ ಏರಲು ಪ್ರಯತ್ನಿಸಬಹುದು.

## ಶ್ಲೋಕ - 42

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥೪೨॥**

**ಅಥವಾ**—ಅಥವಾ; **ಯೋಗಿನಾಮ್**—ವಿದ್ವಾಂಸರಾದ ಅಧ್ಯಾತ್ಮವಾದಿಗಳ; **ಏವ**—ಖಂಡಿತವಾಗಿಯೂ; **ಕುಲೇ**—ವಂಶದಲ್ಲಿ; **ಭವತಿ**—ಹುಟ್ಟುತ್ತಾನೆ; **ಧೀಮತಾಮ್**—ಮಹಾಜ್ಞಾನಿಗಳಾದ; **ಏತತ್**—ಇದು; **ಹಿ**—ಖಂಡಿತವಾಗಿಯೂ; **ದುರ್ಲಭ ತರಮ್**—ಬಹಳ ಅಪರೂಪವು; **ಲೋಕೇ**—ಈ ಪ್ರಪಂಚದಲ್ಲಿ; **ಜನ್ಮ**—ಹುಟ್ಟು; **ಯತ್**—ಯಾವ; **ಈದೃಶಮ್**—ಈ ಬಗೆಯ.

## ಅನುವಾದ

**ಅಥವಾ (ದೀರ್ಘಕಾಲದ ಯೋಗಾಭ್ಯಾಸದ ಅನಂತರ ವಿಫಲನಾಗಿದ್ದಲ್ಲಿ) ಅವನು ಧೀಮಂತರಾದ ಆಧ್ಯಾತ್ಮಿಕವಾದಿಗಳ ಕುಟುಂಬದಲ್ಲಿ ಜನಿಸುವನು. ನಿಶ್ಚಯವಾಗಿಯೂ ಈ ಜಗತ್ತಿನಲ್ಲಿ ಇಂತಹ ಜನ್ಮವು ದುರ್ಲಭತರವಾದದ್ದು.**

## ಭಾವಾರ್ಥ

ಧೀಮಂತರಾದ ಯೋಗಿಗಳ ಕುಟುಂಬದಲ್ಲಿ ಜನ್ಮತಾಳುವುದನ್ನು ಇಲ್ಲಿ ಹೊಗಳಿದೆ. ಏಕೆಂದರೆ ಇಂತಹ ಸಂಸಾರದಲ್ಲಿ ಹುಟ್ಟಿದ ಮಗುವಿಗೆ ಅವನ ಬಾಳಿನ ಪ್ರಾರಂಭದಿಂದಲೇ ಒಂದು ಆಧ್ಯಾತ್ಮಿಕ ಚಾಲನ ಶಕ್ತಿಯು ದೊರೆಯುತ್ತದೆ. ವಿಶೇಷವಾಗಿ ಆಚಾರ್ಯರ ಅಥವಾ ಗೋಸ್ವಾಮಿಗಳ ಕುಟುಂಬಗಳಲ್ಲಿ ಹೀಗಾಗುತ್ತದೆ. ಪರಂಪರೆಯಿಂದಲೂ ಶಿಕ್ಷಣದಿಂದಲೂ ಇಂತಹ ಸಂಸಾರಗಳಲ್ಲಿ ವಿದ್ವತ್ತು, ದೈವಭಕ್ತಿ ಇರುತ್ತವೆ. ಆದುದರಿಂದ ಅವರು ಗುರುಗಳಾಗುತ್ತಾರೆ. ಭಾರತದಲ್ಲಿ ಇಂತಹ ಆಚಾರ್ಯರ ಕುಟುಂಬಗಳು ಹಲವಾರು ಇವೆ. ಆದರೆ ಸಾಕಷ್ಟು ವಿದ್ಯೆ ಮತ್ತು ತರಬೇತಿ ಇಲ್ಲದೆ ಅವು ಹೀನಸ್ಥಿತಿಗೆ ಬಂದಿವೆ. ಭಗವಂತನ ಕೃಪೆಯಿಂದ ಪ್ರತಿ ಪೀಳಿಗೆಯಲ್ಲೂ ಯೋಗಿಗಳನ್ನು ಬೆಳೆಸುವ ಇಂತಹ ಕುಟುಂಬಗಳು ಇನ್ನೂ ಇವೆ. ಇಂತಹ ಸಂಸಾರಗಳಲ್ಲಿ ಜನ್ಮತಾಳುವುದು ಒಂದು ಸೌಭಾಗ್ಯ. ನಮ್ಮ ಗುರುಗಳಾದ, ಓಂ ವಿಷ್ಣುಪಾದ ಶ್ರೀ ಶ್ರೀಮದ್ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿ ಮಹಾರಾಜರು ಮತ್ತು ನಾವು ಇಬ್ಬರೂ ಭಗವಂತನ ಕೃಪೆಯಿಂದ ಇಂತಹ ಕುಟುಂಬಗಳಲ್ಲಿ ಹುಟ್ಟುವ ಭಾಗ್ಯವನ್ನು ಪಡೆದಿದ್ದೆವು ಮತ್ತು ಇಬ್ಬರೂ ನಮ್ಮ ಬಾಳಿನ ಪ್ರಾರಂಭದಿಂದಲೇ ಭಗವಂತನ ಭಕ್ತಿಪೂರ್ವಕ ಸೇವೆಯಲ್ಲಿ ಶಿಕ್ಷಣವನ್ನು ಪಡೆದೆವು. ಮುಂದೆ ಆಧ್ಯಾತ್ಮಿಕ ವ್ಯವಸ್ಥೆಯಲ್ಲಿ ನಾವು ಸಂಧಿಸಿದೆವು.

## ಶ್ಲೋಕ - 43

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥೪೩॥**

**ತತ್ರ**—ಆಮೇಲೆ; **ತಮ್**—ಆ; **ಬುದ್ಧಿ ಸಂಯೋಗಮ್**—ಪ್ರಜ್ಞೆಯ ಪುನರುಜ್ಜೀವನವನ್ನು; **ಲಭತೇ**—ಪಡೆಯುತ್ತಾನೆ; **ಪೌರ್ವ ದೇಹಿಕಮ್**—ಹಿಂದಿನ ದೇಹದಿಂದ; **ಯತತೇ**—ಪ್ರಯತ್ನಿಸುತ್ತಾನೆ; **ಚ**—ಕೂಡ; **ತತಃ**—ಅನಂತರ; **ಭೂಯಃ**—ಮತ್ತೆ; **ಸಂಸಿದ್ಧೌ**—ಪರಿಪೂರ್ಣತೆಗಾಗಿ; **ಕುರು ನನ್ದನ**—ಕುರುಪುತ್ರನೇ.

## ಅನುವಾದ

**ಕುರುನಂದನನೆ, ಇಂತಹ ಜನ್ಮವನ್ನು ತಳೆದ ಮೇಲೆ ಆತನು ತನ್ನ ಪೂರ್ವಜನ್ಮದ ದೈವೀಪ್ರಜ್ಞೆಯನ್ನು ಮತ್ತೆ ಎಚ್ಚರಿಸಿಕೊಳ್ಳುತ್ತಾನೆ ಮತ್ತು ಸಂಪೂರ್ಣ ಯಶಸ್ಸನ್ನು ಗಳಿಸುವುದಕ್ಕಾಗಿ ಇನ್ನೂ ಪ್ರಗತಿಯನ್ನು ಸಾಧಿಸಲು ಪ್ರಯತ್ನಿಸುತ್ತಾನೆ.**

## ಭಾವಾರ್ಥ

ಒಬ್ಬ ಸದ್ಬ್ರಾಹ್ಮಣನ ಸಂಸಾರದಲ್ಲಿ ಅರಸ ಭರತನು ತನ್ನ ಮೂರನೆಯ ಜನ್ಮವನ್ನು ತಾಳಿದ. ಹಿಂದಿನ ದಿವ್ಯಪ್ರಜ್ಞೆಯನ್ನು ಪುನಶ್ಚೇತನಗೊಳಿಸಲು ಉತ್ತಮ ಜನ್ಮತಾಳುವುದಕ್ಕೆ ಇದು ಒಂದು ಒಳ್ಳೆಯ ಉದಾಹರಣೆ. ರಾಜ ಭರತನು ಜಗತ್ತಿನ ಚಕ್ರವರ್ತಿ. ಅವನ ಕಾಲದಿಂದ ದೇವತೆಗಳು ಈ ಲೋಕವನ್ನು ಭರತವರ್ಷ ಎಂದು ಕರೆಯಲು ಪ್ರಾರಂಭಿಸಿದರು. ಅದಕ್ಕೆ ಮೊದಲು ಈ ಲೋಕಕ್ಕೆ ಇಳಾವೃತ ವರ್ಷ ಎಂದು ಹೆಸರಿತ್ತು. ಚಕ್ರವರ್ತಿಯು ಚಿಕ್ಕ ವಯಸ್ಸಿನಲ್ಲೇ ಆಧ್ಯಾತ್ಮಿಕ ಪರಿಪೂರ್ಣತೆಗಾಗಿ ಪ್ರಾಪಂಚಿಕ ವ್ಯವಹಾರದಿಂದ ದೂರವಾದನು; ಆದರೆ ಯಶಸ್ವಿಯಾಗಲಿಲ್ಲ. ಮುಂದಿನ ಜನ್ಮದಲ್ಲಿ ಆತನು ಒಬ್ಬ ಒಳ್ಳೆಯ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ. ಅವನು ಯಾವಾಗಲೂ ಒಬ್ಬನೇ ಇದ್ದು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಆದುದರಿಂದ ಅವನಿಗೆ ಜಡ ಭರತ ಎಂದು ಹೆಸರು ಬಂದಿತು. ಮುಂದೆ ಅರಸ ರಹೂಗಣನು ಅವನನ್ನು ಅತಿಶ್ರೇಷ್ಠ ಯೋಗಿಯೆಂದು ಕಂಡನು. ಅವನ ಜೀವನದಿಂದ, ಆಧ್ಯಾತ್ಮಿಕ ಪ್ರಯತ್ನಗಳು ಅಥವಾ ಯೋಗಾಭ್ಯಾಸವು ವ್ಯರ್ಥವಾಗುವುದೇ ಇಲ್ಲ ಎಂದು ತಿಳಿಯುತ್ತದೆ. ಭಗವಂತನ ಕೃಪೆಯಿಂದ ಯೋಗಿಗೆ ಕೃಷ್ಣಪ್ರಜ್ಞೆಯಲ್ಲಿ ಪರಿಪೂರ್ಣತೆಯನ್ನು ಪಡೆದುಕೊಳ್ಳಲು ಮತ್ತೆ ಮತ್ತೆ ಅವಕಾಶಗಳು ಲಭ್ಯವಾಗುತ್ತವೆ.

## ಶ್ಲೋಕ - 44

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ |**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ||೪೪||**

**ಪೂರ್ವ**—ಹಿಂದಿನ; **ಅಭ್ಯಾಸೇನ**—ಅಭ್ಯಾಸದಿಂದ; **ತೇನ**—ಆ; **ಏವ**—ಖಂಡಿತವಾಗಿಯೂ; **ಹ್ರಿಯತೇ**—ಆಕರ್ಷಿತನಾಗುತ್ತಾನೆ; **ಹಿ**—ಖಂಡಿತವಾಗಿಯು; **ಅವಶಃ**—ತನ್ನಷ್ಟಕ್ಕೆ ತಾನೇ; **ಅಪಿ**—ಕೂಡ; **ಸಃ**—ಅವನು; **ಜಿಜ್ಞಾಸುಃ**—ತಿಳಿಯಲು ಬಯಸುವ; **ಅಪಿ**—ಕೂಡ; **ಯೋಗಸ್ಯ**— ಯೋಗದ ವಿಚಾರದ; **ಶಬ್ದ ಬ್ರಹ್ಮ**—ಧರ್ಮಗ್ರಂಥಗಳ ವಿಧ್ಯುಕ್ತ ಆಚರಣೆಗಳನ್ನು; **ಅತಿವರ್ತತೇ**—ಮೀರುತ್ತಾನೆ.

## ಅನುವಾದ

**ತನ್ನ ಹಿಂದಿನ ಜನ್ಮದ ದೈವೀ ಪ್ರಜ್ಞೆಯ ಪ್ರಭಾವದಿಂದ ಆತನು ಯೋಗದ ತತ್ವಗಳನ್ನು ಅರಸದಿದ್ದರೂ ತಂತಾನೇ ಅವುಗಳಿಂದ ಆಕರ್ಷಿತನಾಗುತ್ತಾನೆ. ಇಂತಹ ಜಿಜ್ಞಾಸುವಾದ ಆಧ್ಯಾತ್ಮಿಕವಾದಿಯು ಯಾವಾಗಲೂ ಶಾಸ್ತ್ರಗ್ರಂಥಗಳ ವಿಧಿಗಳ ತತ್ವಗಳನ್ನು ಮೀರಿರುತ್ತಾನೆ.**

## ಭಾವಾರ್ಥ

ಪ್ರಬುದ್ಧ ಯೋಗಿಗಳಿಗೆ ಶಾಸ್ತ್ರಗ್ರಂಥಗಳ ವಿಧಿಗಳ ಆಕರ್ಷಣೆ ಹೆಚ್ಚಿರುವುದಿಲ್ಲ; ಆದರೆ ಅವರನ್ನು ಯೋಗತತ್ವಗಳು ಆಕರ್ಷಿಸುತ್ತವೆ. ಈ ತತ್ವಗಳು ಅವರನ್ನು ಯೋಗದ ಅತ್ಯುನ್ನತ ಪರಿಪೂರ್ಣತೆಯಾದ ಪೂರ್ಣ ಕೃಷ್ಣಪ್ರಜ್ಞೆಗೆ ಏರಿಸಬಲ್ಲವು; ಶ್ರೀಮದ್ಭಾಗವತದಲ್ಲಿ (3.33.7) ಪ್ರಬುದ್ಧ ಆಧ್ಯಾತ್ಮಿಕವಾದಿಗಳು ವೈದಿಕ ವಿಧಿಗಳನ್ನು ಕಡೆಗಣಿಸುವುದನ್ನು ಹೀಗೆ ವಿವರಿಸಿದೆ —

ಅಹೋ ಬತ ಶ್ವಪಚೋऽತೋ ಗರೀಯಾನ್
ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್ ।
ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ
ಬ್ರಹ್ಮಾನೂಚುರ್ನಾಮ ಗೃಣನ್ತಿ ಯೇ ತೇ ॥

"ಪ್ರಭುವೇ, ನಿನ್ನ ಪಾವನನಾಮಗಳನ್ನು ಸಂಕೀರ್ತನೆ ಮಾಡುವವರು ನಾಯಿಯನ್ನು ತಿನ್ನುವ ಕುಟುಂಬದಲ್ಲಿಯೇ ಹುಟ್ಟಿರಬಹುದು, ಆದರೂ ಆಧ್ಯಾತ್ಮಿಕ ಜೀವನದಲ್ಲಿ ಅವರು ತುಂಬ ಮುಂದುವರಿದವರು. ಹೀಗೆ ಸಂಕೀರ್ತನೆ ಮಾಡುವವರು ನಿಶ್ಚಯವಾಗಿಯೂ ಎಲ್ಲ ಬಗೆಯ ವ್ರತಗಳನ್ನೂ ಮತ್ತು ಯಜ್ಞಗಳನ್ನೂ ನಡೆಸಿರುವವರು, ಎಲ್ಲ ಪವಿತ್ರಸ್ಥಳಗಳಲ್ಲಿ ಸ್ನಾನ ಮಾಡಿರುವವರು ಮತ್ತು ಎಲ್ಲ ಶಾಸ್ತ್ರಾಧ್ಯಯನವನ್ನು ಮುಗಿಸಿರುವವರು."

ಇದರ ಪ್ರಸಿದ್ಧ ನಿದರ್ಶನವನ್ನು ಚೈತನ್ಯ ಮಹಾಪ್ರಭುಗಳು ತೋರಿಸಿ ಕೊಟ್ಟರು. ಅವರು ಠಾಕೂರ ಹರಿದಾಸರನ್ನು ತಮ್ಮ ಅತ್ಯಂತ ಪ್ರಮುಖ ಶಿಷ್ಯರಲ್ಲಿ ಒಬ್ಬರನ್ನಾಗಿ ಸ್ವೀಕರಿಸಿದರು. ಠಾಕೂರ ಹರಿದಾಸರು ಮುಸ್ಲಿಂ ಕುಟುಂಬದಲ್ಲಿ ಹುಟ್ಟಿದ್ದರೂ ಅವರು ಭಗವಂತನ ಪವಿತ್ರವಾದ ಹೆಸರುಗಳನ್ನು ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಎಂದು ಪ್ರತಿನಿತ್ಯ ಮೂರುಲಕ್ಷಬಾರಿ ಜಪಮಾಡುವ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದರು. ಈ ಕಾರಣಕ್ಕಾಗಿ ಚೈತನ್ಯ ಮಹಾಪ್ರಭುಗಳು ಅವರನ್ನು ನಾಮಾಚಾರ್ಯರ ಸ್ಥಾನಕ್ಕೆ ಏರಿಸಿದರು. ಅವರು ಸದಾ ಭಗವಂತನ ಪವಿತ್ರನಾಮವನ್ನು ಸಂಕೀರ್ತನ ಮಾಡುತ್ತಿದ್ದುದರಿಂದ ಅವರು ಶಬ್ದಬ್ರಹ್ಮ ಎಂದು ಹೆಸರಾದ ವೈದಿಕ ವಿಧ್ಯುಕ್ತ ವಿಧಾನಗಳನ್ನೆಲ್ಲ ಹಿಂದಿನ ಜನ್ಮದಲ್ಲಿ ಮಾಡಿ ಮುಗಿಸಿರಬೇಕೆಂದು ತಿಳಿಯಲಾಗಿತ್ತು. ಪರಿಶುದ್ಧನಾಗದೆ ಯಾವ ಮನುಷ್ಯನೂ ಕೃಷ್ಣಪ್ರಜ್ಞೆಯ ತತ್ವಗಳನ್ನು ಇಷ್ಟಪಡಲಾರ ಅಥವಾ ಭಗವಂತನ ಪುಣ್ಯನಾಮವಾದ ಹರೇ ಕೃಷ್ಣ ಮಂತ್ರದ ಸಂಕೀರ್ತನೆಯಲ್ಲಿ ತೊಡಗಲಾರ.

## ಶ್ಲೋಕ - 45

**ಪ್ರಯತ್ನಾದ್ ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ |**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ||೪೫||**

**ಪ್ರಯತ್ನಾತ್**—ಕಟ್ಟುನಿಟ್ಟಾದ ಅಭ್ಯಾಸದಿಂದ; **ಯತಮಾನಃ**—ಯತ್ನಿಸುವ; **ತು**—ಮತ್ತು; **ಯೋಗೀ**—ಅಂತಹ ಆಧ್ಯಾತ್ಮಿಕವಾದಿಯು; **ಸಂಶುದ್ಧ**—ಶುದ್ಧವಾದ; **ಕಿಲ್ಬಿಷಃ**—ಸಕಲ ಪಾಪಗಳುಳ್ಳ; **ಅನೇಕ**—ಅನೇಕಾನೇಕ; **ಜನ್ಮ**—ಜನ್ಮಗಳಲ್ಲಿ; **ಸಂಸಿದ್ಧಃ**—ಪರಿಪೂರ್ಣತೆಯನ್ನು ಹೊಂದಿದವನಾಗಿ; **ತತಃ**—ಅನಂತರ; **ಯಾತಿ**—ಹೊಂದುತ್ತಾನೆ; **ಪರಾಮ್**—ಅತ್ಯುನ್ನತವಾದ; **ಗತಿಮ್**—ಗತಿಯನ್ನು.

### ಅನುವಾದ

**ಯೋಗಿಯು ಎಲ್ಲ ಕಲ್ಮಷಗಳನ್ನು ತೊಳೆದುಕೊಂಡು ಶುದ್ಧನಾಗಿ ಇನ್ನಷ್ಟು ಪ್ರಗತಿಯನ್ನು ಸಾಧಿಸಲು ಶ್ರದ್ಧಾಪೂರ್ವಕ ಪ್ರಯತ್ನವನ್ನು ಮಾಡುತ್ತಾನೆ. ಹೀಗೆ ಅನೇಕಾನೇಕ ಜನ್ಮಗಳಲ್ಲಿ ಅಭ್ಯಾಸಮಾಡಿದನಂತರ ಪರಿಪೂರ್ಣತೆಯನ್ನು ಪಡೆದು ಪರಮಗುರಿಯನ್ನು ಸಾಧಿಸುತ್ತಾನೆ.**

### ಭಾವಾರ್ಥ

ವಿಶೇಷವಾಗಿ ಧಾರ್ಮಿಕವಾದ ಅಥವಾ ಶ್ರೀಮಂತವಾದ ಅಥವಾ ಪವಿತ್ರವಾದ ಸಂಸಾರದಲ್ಲಿ ಹುಟ್ಟಿದವನಿಗೆ ಯೋಗಾಭ್ಯಾಸಕ್ಕೆ ಅನುಕೂಲವಾದ ವಾತಾವರಣವಿದೆ ಎಂಬುದರ ಅರಿವಾಗುತ್ತದೆ. ಆದುದರಿಂದ ಆತನು ಅಪೂರ್ಣವಾದ ತನ್ನ ಕಾರ್ಯವನ್ನು ದೃಢಸಂಕಲ್ಪದಿಂದ ಮುಂದುವರಿಸುತ್ತಾನೆ. ಹೀಗೆ ಆತನು ಐಹಿಕ ಕಲ್ಮಷಗಳನ್ನು ತೊಡೆದುಹಾಕಿ ಪರಿಶುದ್ಧನಾಗುತ್ತಾನೆ. ಅವನು ಕಡೆಗೆ ಎಲ್ಲ ಕಲ್ಮಷಗಳಿಂದ ಬಿಡುಗಡೆಯಾಗಿ ಅತ್ಯುನ್ನತ ಪರಿಪೂರ್ಣತೆಯಾದ ಕೃಷ್ಣಪ್ರಜ್ಞೆಯನ್ನು ಸಾಧಿಸುತ್ತಾನೆ. ಎಲ್ಲ ಕಲ್ಮಷಗಳಿಂದ ಮುಕ್ತನಾದ ಪರಿಪೂರ್ಣ ಹಂತ ಕೃಷ್ಣಪ್ರಜ್ಞೆ. ಇದನ್ನು ಭಗವದ್ಗೀತೆಯು (7.28) ದೃಢಪಡಿಸುತ್ತದೆ —

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ |**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ||**

"ಹಲವಾರು ಜನ್ಮಗಳಲ್ಲಿ ಪುಣ್ಯಕಾರ್ಯಗಳನ್ನು ಮಾಡಿ ಎಲ್ಲ ಕಲ್ಮಷಗಳಿಂದ ಮತ್ತು ಎಲ್ಲ ಮಾಯಾ ದ್ವಂದ್ವಗಳಿಂದ ಸಂಪೂರ್ಣವಾಗಿ ಬಿಡುಗಡೆಯನ್ನು ಪಡೆದ ನಂತರ ಮನುಷ್ಯನು ಭಗವಂತನ ದಿವ್ಯ ಪ್ರೇಮ ಪೂರ್ವಕ ಸೇವೆಯಲ್ಲಿ ತೊಡಗುತ್ತಾನೆ."

## ಶ್ಲೋಕ - 46

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ |**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ||೪೬||**

**ತಪಸ್ವಿಭ್ಯಃ**—ತಪಸ್ವಿಗಳಿಗಿಂತ; **ಅಧಿಕಃ**—ದೊಡ್ಡವನು; **ಯೋಗೀ**—ಯೋಗಿಯು; **ಜ್ಞಾನಿಭ್ಯಃ**—ಜ್ಞಾನಿಗಿಂತ; **ಅಪಿ**—ಕೂಡ; **ಮತಃ**—ತಿಳಿಯಲ್ಪಡುತ್ತಾನೆ; **ಅಧಿಕಃ**—ದೊಡ್ಡವನು; **ಕರ್ಮಿಭ್ಯಃ**—

ಕಾಮ್ಯಕರ್ಮಿಗಳಿಗಿಂತ; **ಚ**—ಸಹಾ; **ಅಧಿಕಃ**—ದೊಡ್ಡವನು; **ಯೋಗೀ**—ಯೋಗಿಯು; **ತಸ್ಮಾತ್**—ಆದ್ದರಿಂದ; **ಯೋಗೀ**—ಆಧ್ಯಾತ್ಮಿಕವಾದಿಯು; **ಭವ**—ಆಗು; **ಅರ್ಜುನ**—ಅರ್ಜುನನೇ.

## ಅನುವಾದ

**ಯೋಗಿಯು ತಪಸ್ವಿಗಳಿಗಿಂತಲೂ, ಜ್ಞಾನಿಗಳಿಗಿಂತಲೂ ಮತ್ತು ಫಲಾಪೇಕ್ಷಿತ ಕರ್ಮದಲ್ಲಿ ತೊಡಗುವವರಿಗಿಂತಲೂ ಶ್ರೇಷ್ಠನಾದವನು. ಆದುದರಿಂದ ಅರ್ಜುನ, ಎಲ್ಲ ಸನ್ನಿವೇಶಗಳಲ್ಲಿಯೂ ಯೋಗಿಯಾಗು.**

## ಭಾವಾರ್ಥ

ಯೋಗದ ವಿಷಯ ಮಾತನಾಡುವಾಗ ನಮ್ಮ ಪ್ರಜ್ಞೆಗೆ ಪರಮ ಪರಿಪೂರ್ಣ ಸತ್ಯದೊಂದಿಗೆ ಸಂಪರ್ಕವನ್ನು ಕಲ್ಪಿಸುವ ವಿಷಯವನ್ನು ಕುರಿತು ಮಾತನಾಡುತ್ತೇವೆ. ಅನುಸರಿಸುವ ವಿಶಿಷ್ಟ ವಿಧಾನಕ್ಕೆ ಅನುಗುಣವಾಗಿ ಈ ಪ್ರಕ್ರಿಯೆಗೆ ಬೇರೆ ಬೇರೆ ಸಾಧಕರು ಬೇರೆಬೇರೆ ಹೆಸರುಗಳನ್ನು ಕೊಡುತ್ತಾರೆ. ಸಂಪರ್ಕ ಸಾಧಿಸುವ ಪ್ರಕ್ರಿಯೆಯು ಪ್ರಧಾನವಾಗಿ ಕಾಮ್ಯಕರ್ಮಾಚರಣೆಯಾಗಿದ್ದರೆ ಅದನ್ನು ಕರ್ಮಯೋಗವೆಂದೂ, ಅದು ಪ್ರಧಾನವಾಗಿ ಅನುಭವಗಮ್ಯವಾಗಿದ್ದರೆ ಜ್ಞಾನಯೋಗವೆಂದೂ, ಪ್ರಧಾನವಾಗಿ ಭಗವಂತನೊಡನೆ ಭಕ್ತಿಯ ಬಾಂಧವ್ಯವನ್ನು ಸಾಧಿಸುವುದಾದರೆ ಭಕ್ತಿಯೋಗವೆಂದೂ ಅದಕ್ಕೆ ಹೆಸರು. ಮುಂದಿನ ಶ್ಲೋಕದಲ್ಲಿ ವಿವರಿಸುವಂತೆ ಭಕ್ತಿಯೋಗ ಅಥವಾ ಕೃಷ್ಣಪ್ರಜ್ಞೆಯು ಎಲ್ಲ ಯೋಗಗಳ ಅಂತಿಮ ಪರಿಪೂರ್ಣ ಸ್ವರೂಪ. ಭಗವಂತನು ಇಲ್ಲಿ ಯೋಗದ ಉತ್ಕೃಷ್ಟತೆಯನ್ನು ದೃಢಪಡಿಸಿದ್ದಾನೆ. ಆದರೆ ಅದು ಭಕ್ತಿಯೋಗಕ್ಕಿಂತ ಉತ್ತಮ ಎಂದು ಹೇಳಿಲ್ಲ. ಭಕ್ತಿಯೋಗವು ಪೂರ್ಣ ಆಧ್ಯಾತ್ಮಿಕಜ್ಞಾನ. ಆದುದರಿಂದ ಯಾವುದೂ ಅದನ್ನು ಮೀರಿಸಲಾರದು. ಆತ್ಮಜ್ಞಾನವಿಲ್ಲದ ತಪಸ್ಸು ಅಪರಿಪೂರ್ಣ. ಪರಮ ಪ್ರಭುವಿಗೆ ಶರಣಾಗತವಾಗದ ಅನುಭವಗಮ್ಯ ಜ್ಞಾನವು ಅಪರಿಪೂರ್ಣ. ಕೃಷ್ಣಪ್ರಜ್ಞೆಯಿಲ್ಲದ ಕಾಮ್ಯಕರ್ಮದಿಂದಲೂ ಕಾಲಹರಣವಾಗುತ್ತದೆ. ಆದುದರಿಂದ ಇಲ್ಲಿ ಹೇಳಿರುವಂತೆ ಯೋಗಾಭ್ಯಾಸದ ಅತ್ಯಂತ ಪ್ರಶಂಸನೀಯ ರೂಪವು ಭಕ್ತಿಯೋಗವೇ. ಇದನ್ನು ಮುಂದಿನ ಶ್ಲೋಕದಲ್ಲಿ ಇನ್ನೂ ಸ್ಪಷ್ಟವಾಗಿ ವಿವರಿಸಿದೆ.

## ಶ್ಲೋಕ - 47

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ |**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ||೪೭||**

**ಯೋಗಿನಾಮ್**—ಯೋಗಿಗಳ; **ಅಪಿ**—ಕೂಡ; **ಸರ್ವೇಷಾಮ್**—ಎಲ್ಲ ಬಗೆಯ; **ಮತ್ ಗತೇನ**—ನನ್ನಲ್ಲಿ ನೆಲೆಸಿ, ನನ್ನನ್ನೇ ಸದಾ ಚಿಂತಿಸುತ್ತಾ; **ಅಂತಃ ಆತ್ಮನಾ**—ತನ್ನೊಳಗೇ; **ಶ್ರದ್ಧಾವಾನ್**—ಪೂರ್ಣಶ್ರದ್ಧೆಯಲ್ಲಿ ಇರುವ; **ಭಜತೇ**—ದಿವ್ಯವಾದ ಪ್ರೇಮಯುತ ಸೇವೆಯನ್ನು ಸಲ್ಲಿಸುವನೋ; **ಯಃ**—ಯಾರು; **ಮಾಮ್**—ನನ್ನನ್ನು (ಪರಮ ಪ್ರಭು); **ಸಃ**—ಅವನು; **ಮೇ**—ನನ್ನಿಂದ; **ಯುಕ್ತ ತಮಃ**—ಅತ್ಯುನ್ನತಯೋಗಿಯೆಂದು; **ಮತಃ**—ಪರಿಗಣಿಸಲ್ಪಡುತ್ತಾನೆ.

## ಅನುವಾದ

**ಯಾರು ಸದಾ ನನ್ನಲ್ಲಿಯೇ ಇರುವನೋ, ತನ್ನಲ್ಲಿರುವ ನನ್ನನ್ನು ಕುರಿತು ಚಿಂತಿಸುವನೋ, ನನ್ನನ್ನು ಭಜಿಸುವನೋ ಅವನೇ ಎಲ್ಲ ಯೋಗಿಗಳಲ್ಲಿ ಯೋಗದಲ್ಲಿ ನನ್ನೊಡನೆ ಅತ್ಯಂತ ಆತ್ಮೀಯವಾಗಿ ಒಂದಾಗಿರುವವನು ಮತ್ತು ಅವನೇ ಎಲ್ಲರಿಗಿಂತ ಶ್ರೇಷ್ಠನಾದವನು. ಇದು ನನ್ನ ಅಭಿಪ್ರಾಯ.**

## ಭಾವಾರ್ಥ

ಇಲ್ಲಿ **ಭಜತೇ** ಎನ್ನುವ ಶಬ್ದವು ಮಹತ್ವಪೂರ್ಣವಾದದ್ದು. **ಭಜತೇ** ಎನ್ನುವ ಶಬ್ದದ ಮೂಲ **ಭಜ್** ಎನ್ನುವ ಕ್ರಿಯಾಪದ. ಸೇವೆಯ ಅಗತ್ಯವಿರುವಾಗ ಇದನ್ನು ಬಳಸುತ್ತಾರೆ. ವರ್ಷಿಪ್ ಎನ್ನುವ ಇಂಗ್ಲಿಷ್ ಪದವನ್ನು **ಭಜ್** ಎನ್ನುವ ಅರ್ಥದಲ್ಲಿ ಬಳಸಲು ಸಾಧ್ಯವಿಲ್ಲ. ವರ್ಷಿಪ್ ಎಂದರೆ ಪೂಜಿಸುವುದು ಅಥವಾ ಯೋಗ್ಯರಾದವರಿಗೆ ಗೌರವವನ್ನು ತೋರಿಸುವುದು. ಆದರೆ ದೇವೋತ್ತಮ ಪರಮ ಪುರುಷನ ವಿಷಯದಲ್ಲಿ ಪ್ರೀತಿ ಮತ್ತು ಶ್ರದ್ಧೆಗಳಿಂದ ಕೂಡಿದ ಸೇವೆಯನ್ನೇ ಹೇಳಲಾಗುತ್ತದೆ. ಒಬ್ಬ ಗೌರವಾರ್ಹ ಮನುಷ್ಯನ ಅಥವಾ ದೇವತೆಯ ಪೂಜೆಯನ್ನು ಬಿಡುವುದು ಸೌಜನ್ಯರಹಿತ ಎನ್ನಬಹುದು. ಆದರೆ ಪರಮ ಪ್ರಭುವಿನ ಸೇವೆಯನ್ನು ಬಿಟ್ಟರೆ ಕಟುವಾದ ಖಂಡನೆಗೆ ಗುರಿಯಾಗಬೇಕಾಗುತ್ತದೆ. ಪ್ರತಿಯೊಂದು ಜೀವಿಯೂ ದೇವೋತ್ತಮ ಪರಮ ಪುರುಷನ ವಿಭಿನ್ನಾಂಶ. ತನ್ನ ಸ್ವರೂಪದ ಕಾರಣದಿಂದ ಪ್ರತಿಯೊಂದು ಜೀವಿಯೂ ಪರಮ ಪ್ರಭುವನ್ನು ಸೇವಿಸಬೇಕೆಂಬುದೇ ಉದ್ದೇಶ. ಹೀಗೆ ಮಾಡದೆ ಹೋದರೆ ಆತನು ಪತನ ಹೊಂದುತ್ತಾನೆ. ಭಾಗವತವು (11.5.3) ಇದನ್ನು ಹೀಗೆ ದೃಢಪಡಿಸುತ್ತದೆ —

**ಯ ಏಷಾಂ ಪುರುಷಂ ಸಾಕ್ಷಾದ್ ಆತ್ಮಪ್ರಭವಮ್ ಈಶ್ವರಮ್ |**
**ನ ಭಜನ್ತ್ಯವಜಾನನ್ತಿ ಸ್ಥಾನಾದ್ ಭ್ರಷ್ಟಾಃ ಪತನ್ತ್ಯಧಃ ||**

"ಯಾರು ಎಲ್ಲ ಜೀವಿಗಳ ಮೂಲನಾದ ಆದಿ ಪುರುಷನಿಗೆ ಸೇವೆಯನ್ನು ಸಲ್ಲಿಸುವುದಿಲ್ಲವೋ ಮತ್ತು ಈ ವಿಷಯದಲ್ಲಿ ತನ್ನ ಕರ್ತವ್ಯವನ್ನು ನಿರ್ಲಕ್ಷಿಸುವನೋ ಅವನು ನಿಶ್ಚಯವಾಗಿಯೂ ತನ್ನ ಸಹಜ ಸ್ವರೂಪದಿಂದ ಪತನ ಹೊಂದುವನು."

ಈ ಶ್ಲೋಕದಲ್ಲಿ ಸಹ **ಭಜನ್ತಿ** ಎನ್ನುವ ಶಬ್ದವನ್ನು ಬಳಸಿದೆ. ಆದುದರಿಂದ **ಭಜನ್ತಿ** ಎನ್ನುವ ಶಬ್ದವನ್ನು ಪರಮ ಪ್ರಭುವಿನ ವಿಷಯದಲ್ಲಿ ಮಾತ್ರ ಬಳಸಬಹುದು. ಆದರೆ ವರ್ಷಿಪ್ ಎನ್ನುವ ಪದವನ್ನು ದೇವತೆಗಳ ಅಥವಾ ಯಾವುದೇ ಸಾಮಾನ್ಯ ಜೀವಿಯ ವಿಷಯದಲ್ಲಿಯೂ ಬಳಸಬಹುದು. ಶ್ರೀಮದ್ಭಾಗವತದಿಂದ ತೆಗೆದುಕೊಂಡ ಶ್ಲೋಕದಲ್ಲಿ **ಅವಜಾನನ್ತಿ** ಎನ್ನುವ ಶಬ್ದವನ್ನು ಭಗವದ್ಗೀತೆಯಲ್ಲೂ ಬಳಸಿದೆ. **ಅವಜಾನನ್ತಿ ಮಾಂ ಮೂಢಾಃ** — "ಮೂರ್ಖರು ಮತ್ತು ದುಷ್ಟರು ಮಾತ್ರ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನನ್ನು ನಿಂದಿಸುತ್ತಾರೆ." ಇಂತಹ ಮೂರ್ಖರು ಭಗವಂತನ ವಿಷಯದಲ್ಲಿ ಸೇವಾಮನೋಭಾವವಿಲ್ಲದೆ ಭಗವದ್ಗೀತೆಯನ್ನು ಕುರಿತು ವ್ಯಾಖ್ಯಾನ ಬರೆಯಲು ಹೊರಡುತ್ತಾರೆ. ಇದರ ಪರಿಣಾಮವಾಗಿ ಅವರಿಗೆ **ಭಜನ್ತಿ** ಎನ್ನುವ ಶಬ್ದಕ್ಕೂ, ವರ್ಷಿಪ್ ಎನ್ನುವ ಶಬ್ದಕ್ಕೂ ಇರುವ ವ್ಯತ್ಯಾಸವು ಸರಿಯಾಗಿ ಅರ್ಥವಾಗುವುದಿಲ್ಲ.

ಎಲ್ಲ ಬಗೆಯ ಯೋಗಾಭ್ಯಾಸಗಳ ಶಿಖರ ಭಕ್ತಿಯೋಗ. ಬೇರೆಲ್ಲ ಯೋಗಗಳೂ

ಭಕ್ತಿಯೋಗದಲ್ಲಿ ಭಕ್ತಿಯನ್ನು ತಲಪಲು ಸಾಧನೆಗಳು ಮಾತ್ರ. ವಾಸ್ತವವಾಗಿ ಯೋಗ ಎಂದರೆ ಭಕ್ತಿಯೋಗ ಎಂದರ್ಥ. ಉಳಿದೆಲ್ಲ ಯೋಗಗಳೂ ಭಕ್ತಿಯೋಗದ ಗುರಿಯನ್ನು ಮುಟ್ಟುವ ಮಾರ್ಗಗಳು ಮಾತ್ರ. ಕರ್ಮಯೋಗದ ಪ್ರಾರಂಭದಿಂದ ಭಕ್ತಿಯೋಗದ ಅಂತ್ಯದವರೆಗೆ ಆತ್ಮಸಾಕ್ಷಾತ್ಕಾರಕ್ಕೆ ಇರುವ ಮಾರ್ಗ ದೀರ್ಘವಾದದ್ದು. ಫಲಾಪೇಕ್ಷೆಯಿಲ್ಲದ ಕರ್ಮವು ಅಥವಾ ಕರ್ಮಯೋಗವು ಈ ಮಾರ್ಗದ ಪ್ರಾರಂಭ. ಕರ್ಮಯೋಗದಲ್ಲಿ ಜ್ಞಾನವೂ ವೈರಾಗ್ಯವೂ ಹೆಚ್ಚಿದಾಗ ಆ ಹಂತವನ್ನು ಜ್ಞಾನಯೋಗ ಎಂದು ಕರೆಯುತ್ತಾರೆ. ಬೇರೆಬೇರೆ ದೈಹಿಕ ಪ್ರಕ್ರಿಯೆಗಳಿಂದ ಜ್ಞಾನಯೋಗದಲ್ಲಿ ಪರಮಾತ್ಮನ ಧ್ಯಾನವು ಹೆಚ್ಚಿ ಮನಸ್ಸು ಅವನಲ್ಲಿ ನೆಲೆಸಿದಾಗ ಅದಕ್ಕೆ ಅಷ್ಟಾಂಗಯೋಗ ಎಂದು ಹೆಸರು. ಅಷ್ಟಾಂಗಯೋಗವನ್ನು ದಾಟಿ ದೇವೋತ್ತಮ ಪರಮ ಪುರುಷನಾದ ಕೃಷ್ಣನ ಬಳಿಗೆ ಬಂದಾಗ ಇದಕ್ಕೆ ಭಕ್ತಿಯೋಗವೆಂದು ಹೆಸರು; ಇದೇ ಶಿಖರ. ವಾಸ್ತವವಾಗಿ ಭಕ್ತಿಯೋಗವೇ ಅಂತಿಮ ಗುರಿ. ಆದರೆ ಭಕ್ತಿಯೋಗವನ್ನು ಸೂಕ್ಷ್ಮವಾಗಿ ವಿಶ್ಲೇಷಿಸಲು ಇತರ ಯೋಗಗಳ ತಿಳುವಳಿಕೆ ಅಗತ್ಯ. ಮುನ್ನಡೆಯುತ್ತಿರುವ ಯೋಗಿಯು ನಿರಂತರ ಭಾಗ್ಯದ ನಿಜವಾದ ಹಾದಿಯಲ್ಲಿದ್ದಾನೆ. ಒಂದು ನಿರ್ದಿಷ್ಟ ಹಂತದಲ್ಲಿ ನಿಂತು ಮುಂದಕ್ಕೆ ಹೋಗದವನನ್ನು ಕರ್ಮಯೋಗಿ, ಜ್ಞಾನಯೋಗಿ ಅಥವಾ ಧ್ಯಾನಯೋಗಿ, ರಾಜಯೋಗಿ, ಹಠಯೋಗಿ ಮೊದಲಾದ ಒಂದು ನಿರ್ದಿಷ್ಟ ಹೆಸರಿನಿಂದ ಕರೆಯುತ್ತಾರೆ. ಭಕ್ತಿಯೋಗದವರೆಗೆ ಬರುವ ಅದೃಷ್ಟ ಮನುಷ್ಯನಿಗಿದ್ದರೆ ಅವನು ಎಲ್ಲ ಯೋಗಗಳನ್ನೂ ಮೀರಿದವನು ಎಂದು ತಿಳಿಯಬೇಕು. ನಾವು ಹಿಮಾಲಯ ಎಂದಾಗ ಜಗತ್ತಿನ ಅತಿ ಎತ್ತರದ ಪರ್ವತಗಳನ್ನು ಹೆಸರಿಸುತ್ತೇವೆ. ಅದರ ಅತ್ಯುನ್ನತ ಶಿಖರವಾದ ಮೌಂಟ್ ಎವರೆಸ್ಟ್ ಅತ್ಯುನ್ನತ ಬಿಂದು ಎಂದು ಪರಿಗಣಿಸುತ್ತೇವೆ; ಹಾಗೆಯೇ ಕೃಷ್ಣಪ್ರಜ್ಞೆಯು ಯೋಗದ ಅತ್ಯುನ್ನತ ಹಂತ.

ವೈದಿಕ ಮಾರ್ಗದರ್ಶನಕ್ಕನುಗುಣವಾಗಿ ಯೋಗ್ಯ ನೆಲೆಯನ್ನು ಪಡೆದುಕೊಳ್ಳಲು ಭಕ್ತಿಯೋಗದ ಮಾರ್ಗವಾಗಿ ಕೃಷ್ಣಪ್ರಜ್ಞೆಗೆ ಬರುವುದು ಒಂದು ದೊಡ್ಡ ಭಾಗ್ಯ. ಆದರ್ಶಯೋಗಿಯು ತನ್ನ ಮನಸ್ಸನ್ನು ಕೃಷ್ಣನಲ್ಲಿ ಕೇಂದ್ರೀಕರಿಸುತ್ತಾನೆ. ಕೃಷ್ಣನಿಗೆ ಶ್ಯಾಮಸುಂದರನೆಂದು ಹೆಸರು. ಆತನದು ಮೋಡದ ಬಣ್ಣದಂತಹ ಸುಂದರ ಮೈಬಣ್ಣ. ಅವನ ತಾವರೆಯಂತಹ ಮುಖವು ಸೂರ್ಯನಂತೆ ಪ್ರಕಾಶಿಸುತ್ತದೆ. ಅವನ ಉಡುಪು ಆಭರಣಗಳಿಂದ ಹೊಳೆಹೊಳೆಯುತ್ತದೆ. ಅವನ ದೇಹವು ಮಾಲೆಯನ್ನು ಧರಿಸಿದೆ. ಅವನ ಸುತ್ತ ಜಾಜ್ವಲ್ಯಮಾನವಾದ ಪ್ರಭೆ. ಅದಕ್ಕೆ ಬ್ರಹ್ಮಜ್ಯೋತಿ ಎಂದು ಹೆಸರು. ಆತನು ರಾಮ, ನರಸಿಂಹ, ವರಾಹ ಮತ್ತು ದೇವೋತ್ತಮ ಪರಮ ಪುರುಷನಾದ ಕೃಷ್ಣನಾಗಿ ಅವತಾರವೆತ್ತುತ್ತಾನೆ. ಯಶೋದೆಯ ಮಗನಾಗಿ ಮಾನವರೂಪದಲ್ಲಿ ಭೂಮಿಗಿಳಿದು ಬರುತ್ತಾನೆ. ಜನರು ಅವನನ್ನು ಕೃಷ್ಣ, ಗೋವಿಂದ ಮತ್ತು ವಾಸುದೇವ ಎಂದು ಕರೆಯುತ್ತಾರೆ. ಅವನು ಪರಿಪೂರ್ಣನಾದ ಮಗು, ಪತಿ, ಗೆಳೆಯ ಮತ್ತು ಪ್ರಭು. ಆತನು ಎಲ್ಲ ಐಶ್ವರ್ಯಗಳಿಂದ ಮತ್ತು ದಿವ್ಯಗುಣಗಳಿಂದ ತುಂಬಿದ್ದಾನೆ. ಭಗವಂತನ ಈ ಲಕ್ಷಣಗಳ ಸಂಪೂರ್ಣ ಅರಿವು ಸದಾ ಇರುವ ಮನುಷ್ಯನನ್ನು ಅತ್ಯಂತ ಶ್ರೇಷ್ಠಯೋಗಿ ಎಂದು ಕರೆಯುತ್ತಾರೆ.

ಯೋಗದಲ್ಲಿ ಈ ಅತ್ಯುನ್ನತ ಪರಿಪೂರ್ಣತೆಯ ಹಂತವನ್ನು ಭಕ್ತಿಯೋಗದಿಂದ ಮಾತ್ರ ಸಾಧಿಸಬಹುದು. ಇದನ್ನು ಎಲ್ಲ ವೈದಿಕ ಸಾಹಿತ್ಯವು ದೃಢಪಡಿಸುತ್ತದೆ —

**ಯಸ್ಯ ದೇವೇ ಪರಾಭಕ್ತಿರ್ ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ॥**

"ಭಗವಂತನಲ್ಲಿಯೂ ಗುರುವಿನಲ್ಲಿಯೂ ಪ್ರಶ್ನಾತೀತ ವಿಶ್ವಾಸವಿರುವ ಮಹಾ ಆತ್ಮಗಳಿಗೆ ಮಾತ್ರ ವೈದಿಕ ಜ್ಞಾನದ ಸಕಲಾರ್ಥಗಳು ತಾವಾಗಿಯೇ ಪ್ರಕಟವಾಗುತ್ತವೆ." (ಶ್ವೇತಾಶ್ವತರ ಉಪನಿಷತ್ತು 6.23)

**ಭಕ್ತಿರ್ ಅಸ್ಯ ಭಜನಂ ತದ್ ಇಹಾಮುತ್ರೋಪಾಧಿ ನೈರಾಸ್ಯೇನಾಮುಷ್ಮಿನ್ ಮನಃ ಕಲ್ಪನಮ್, ಏತದ್ ಏವ ನೈಷ್ಕರ್ಮ್ಯಮ್.** "ಭಕ್ತಿಯೆಂದರೆ ಈ ಜನ್ಮದಲ್ಲಾಗಲೀ ಮುಂದಿನ ಜನ್ಮದಲ್ಲಾಗಲೀ ಐಹಿಕ ಲಾಭದ ಅಪೇಕ್ಷೆಯಿಲ್ಲದ ಭಗವಂತನ ಭಕ್ತಿಪೂರ್ವಕವಾದ ಸೇವೆ. ಇಂತಹ ಆಸೆಗಳನ್ನು ಬಿಟ್ಟು ಮನುಷ್ಯನು ಮನಸ್ಸನ್ನು ಪರಮ ಪ್ರಭುವಿನಲ್ಲಿ ಸಂಪೂರ್ಣವಾಗಿ ಲೀನಗೊಳಿಸಬೇಕು. ಇದೇ ನೈಷ್ಕರ್ಮ್ಯದ ಉದ್ದೇಶ." (ಗೋಪಾಲ ತಾಪನೀ ಉಪನಿಷತ್ತು 1.15)

ಯೋಗ ಪದ್ಧತಿಯ ಅತ್ಯುನ್ನತ ಪರಿಪೂರ್ಣ ಘಟ್ಟವಾದ ಭಕ್ತಿ ಅಥವಾ ಕೃಷ್ಣಪ್ರಜ್ಞೆಯ ಅನುಷ್ಠಾನಕ್ಕೆ ಇವು ಕೆಲವು ಸಾಧನಗಳು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಧ್ಯಾನ ಯೋಗ" ಎಂಬ ಆರನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 7

# ಪರಾತ್ಪರ ಜ್ಞಾನ

## ಶ್ಲೋಕ - 1

**ಶ್ರೀ ಭಗವಾನುವಾಚ**
**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪುರುಷನು ಹೇಳಿದನು; **ಮಯಿ**—ನನ್ನಲ್ಲಿ; **ಆಸಕ್ತ ಮನಾಃ**—ಮನಸ್ಸನ್ನು ಆಸಕ್ತವಾಗಿಸಿ; **ಪಾರ್ಥ**—ಪೃಥೆಯ ಕುಮಾರನೇ; **ಯೋಗಮ್**—ಆತ್ಮಸಾಕ್ಷಾತ್ಕಾರವನ್ನು; **ಯುಂಜನ್**—ಅಭ್ಯಸಿಸುತ್ತ; **ಮತ್ ಆಶ್ರಯಃ**—ನನ್ನ ಪ್ರಜ್ಞೆಯಲ್ಲಿ, (ಕೃಷ್ಣ ಪ್ರಜ್ಞೆಯಲ್ಲಿ); **ಅಸಂಶಯಮ್**—ಸಂಶಯವಿಲ್ಲದೆ; **ಸಮಗ್ರಮ್**—ಸಂಪೂರ್ಣವಾಗಿ; **ಮಾಮ್**—ನನ್ನನ್ನು; **ಯಥಾ**—ಹೇಗೆ; **ಜ್ಞಾಸ್ಯಸಿ**—ನೀನು ತಿಳಿಯಬಲ್ಲೆ; **ತತ್**—ಅದನ್ನು; **ಶೃಣು**—ಆಲಿಸಲು ಪ್ರಯತ್ನಿಸು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಪಾರ್ಥ, ನನ್ನಲ್ಲಿ ಆಸಕ್ತವಾದ ಮನಸ್ಸಿನಿಂದ ನನ್ನನ್ನೊಳಗೊಂಡ ಸಂಪೂರ್ಣ ಪ್ರಜ್ಞೆಯಲ್ಲಿ ಯೋಗಾಭ್ಯಾಸವನ್ನು ಮಾಡುವುದರಿಂದ, ನೀನು ನನ್ನನ್ನು ಸಂಪೂರ್ಣವಾಗಿಯೂ, ಸಂಶಯವಿಲ್ಲದಂತೆಯೂ ತಿಳಿದುಕೊಳ್ಳಬಹುದು. ಅದು ಹೇಗೆ ಎನ್ನುವುದನ್ನು ಕೇಳು.**

## ಭಾವಾರ್ಥ

ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಕೃಷ್ಣಪ್ರಜ್ಞೆಯ ಸ್ವರೂಪವನ್ನು ಸಂಪೂರ್ಣವಾಗಿ ವಿವರಿಸಿದೆ. ಕೃಷ್ಣನು ಎಲ್ಲ ಭಾಗ್ಯಗಳಲ್ಲಿ ಪೂರ್ಣನಾದವನು. ಇಂತಹ ಭಾಗ್ಯಗಳನ್ನು ಅವನು ಹೇಗೆ ಪ್ರಕಟಿಸುತ್ತಾನೆ ಎನ್ನುವುದನ್ನು ಇಲ್ಲಿ ವರ್ಣಿಸಿದೆ. ಅಲ್ಲದೆ ಕೃಷ್ಣನಲ್ಲಿ ಆಸಕ್ತರಾಗುವ ನಾಲ್ಕು ಬಗೆಯ ಭಾಗ್ಯಶಾಲಿಗಳನ್ನೂ, ಕೃಷ್ಣನಲ್ಲಿ ಯಾವಾಗಲೂ ಆಸಕ್ತಿಯನ್ನು ತಳೆಯದ ನಾಲ್ಕು ಬಗೆಯ ನಿರ್ಭಾಗ್ಯರನ್ನೂ ಈ ಅಧ್ಯಾಯದಲ್ಲಿ ವರ್ಣಿಸಿದೆ.

ಭಗವದ್ಗೀತೆಯ ಮೊದಲ ಆರು ಅಧ್ಯಾಯಗಳಲ್ಲಿ ಜೀವಿಯನ್ನು ಬೇರೆ ಬೇರೆ ಬಗೆಯ ಯೋಗಗಳಿಂದ ಆತ್ಮಸಾಕ್ಷಾತ್ಕಾರಕ್ಕೆ ಏರಬಲ್ಲ ಭೌತಿಕವಲ್ಲದ ಆತ್ಮವೆಂದು ವರ್ಣಿಸಿದೆ. ಮನಸ್ಸನ್ನು ಸ್ಥಿರವಾಗಿ ಕೃಷ್ಣನಲ್ಲಿ ನಿಲ್ಲಿಸುವುದು, ಎಂದರೆ ಕೃಷ್ಣಪ್ರಜ್ಞೆಯು ಎಲ್ಲ ಯೋಗದಲ್ಲಿ ಅತ್ಯುನ್ನತ ಸ್ವರೂಪದ್ದು ಎಂದು ಆರನೆಯ ಅಧ್ಯಾಯದ ಕೊನೆಯಲ್ಲಿ ಹೇಳಿದೆ. ಮನಸ್ಸನ್ನು ಕೃಷ್ಣನಲ್ಲಿ

ಕೇಂದ್ರೀಕರಿಸಿದರೆ ಮನುಷ್ಯನು ಪರಮ ಸತ್ಯವನ್ನು ಅರಿತುಕೊಳ್ಳಬಲ್ಲ, ಇಲ್ಲವಾದರೆ ಅರಿತುಕೊಳ್ಳಲಾರ ಎಂದು ಹೇಳಿದೆ. ನಿರಾಕಾರ ಬ್ರಹ್ಮಜ್ಯೋತಿಯ ಅಥವಾ ಅಂತರ್ಯಾಮಿ ಪರಮಾತ್ಮನ ಸಾಕ್ಷಾತ್ಕಾರವು ಪರಮ ಸತ್ಯದ ಪರಿಪೂರ್ಣ ಅರಿವಲ್ಲ, ಅದು ಭಾಗಶಃವಾದದ್ದು. ಸಂಪೂರ್ಣವಾದ ಮತ್ತು ವೈಜ್ಞಾನಿಕವಾದ ಜ್ಞಾನವೇ ಕೃಷ್ಣ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಎಲ್ಲವೂ ತಂತಾನೇ ಪ್ರಕಟವಾಗುತ್ತದೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ, ಯಾವ ಸಂಶಯವೂ ಇಲ್ಲದೆ ಕೃಷ್ಣನೇ ಅಂತಿಮ ಜ್ಞಾನ ಎಂದು ಮನುಷ್ಯನಿಗೆ ಗೊತ್ತಾಗುತ್ತದೆ. ಯೋಗದ ಬೇರೆ ಬೇರೆ ಬಗೆಗಳು ಕೃಷ್ಣಪ್ರಜ್ಞೆಯ ಮಾರ್ಗದಲ್ಲಿ ಮೆಟ್ಟುಗಲ್ಲುಗಳು ಮಾತ್ರ. ನೇರವಾಗಿ ಕೃಷ್ಣಪ್ರಜ್ಞೆಯಲ್ಲಿ ನಿರತನಾಗುವವನಿಗೆ ಬ್ರಹ್ಮಜ್ಯೋತಿಯ ಮತ್ತು ಪರಮಾತ್ಮನ ಸಂಪೂರ್ಣ ಅರಿವು ಪ್ರಯತ್ನವಿಲ್ಲದೆಯೇ ಆಗುತ್ತದೆ. ಕೃಷ್ಣಪ್ರಜ್ಞೆಯ ಯೋಗಾಭ್ಯಾಸದಿಂದ ಮನುಷ್ಯನು ಎಲ್ಲವನ್ನೂ ಸಂಪೂರ್ಣವಾಗಿ ತಿಳಿದುಕೊಳ್ಳಬಹುದು. ಪರಮ ಸತ್ಯ, ಜೀವಿಗಳು, ಭೌತಿಕ ಪ್ರಕೃತಿ ಮತ್ತು ಸಾಧನ ಸಾಮಗ್ರಿಗಳೊಡನೆ ಅವುಗಳ ಅಭಿವ್ಯಕ್ತಿ ಎಲ್ಲವನ್ನೂ ತಿಳಿದುಕೊಳ್ಳಬಹುದು.

ಆದ್ದರಿಂದ ಆರನೆಯ ಅಧ್ಯಾಯದ ಕಡೆಯ ಶ್ಲೋಕದಲ್ಲಿ ನಿರ್ದೇಶಿಸಿದಂತೆ ಯೋಗಾಭ್ಯಾಸವನ್ನು ಪ್ರಾರಂಭಿಸಬೇಕು. ಒಂಬತ್ತು ಬೇರೆ ಬೇರೆ ರೂಪಗಳ ನಿಗದಿತ ಭಕ್ತಿಸೇವೆಯಿಂದ ಪರಮ ಪ್ರಭುವಾದ ಕೃಷ್ಣನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು ಸಾಧ್ಯವಾಗುತ್ತದೆ. ಈ ಒಂಬತ್ತು ರೂಪಗಳಲ್ಲಿ ಮೊದಲನೆಯದು ಮತ್ತು ಅತ್ಯಂತ ಮುಖ್ಯವಾದದ್ದು ಶ್ರವಣಮ್. ಆದುದರಿಂದ ಭಗವಂತನು ಅರ್ಜುನನಿಗೆ, **ತಚ್ಛೃಣು** ಎಂದರೆ, 'ನನ್ನಿಂದ ಕೇಳು' ಎಂದು ಹೇಳುತ್ತಾನೆ. ಕೃಷ್ಣನಿಗಿಂತ ಶ್ರೇಷ್ಠನಾದ ಅಧಿಕಾರಿಯಿಲ್ಲ; ಆದುದರಿಂದ ಅವನಿಂದ ಕೇಳಿದವನು ಪರಿಪೂರ್ಣ ಕೃಷ್ಣಪ್ರಜ್ಞೆಯ ಮನುಷ್ಯನಾಗಲು ಅತ್ಯುತ್ತಮ ಅವಕಾಶವನ್ನು ಪಡೆಯುತ್ತಾನೆ. ಆದುದರಿಂದ ನೇರವಾಗಿ ಕೃಷ್ಣನಿಂದ ಅಥವಾ ಒಬ್ಬ ಪರಿಶುದ್ಧ ಕೃಷ್ಣಭಕ್ತನಿಂದ ತಿಳಿಯಬೇಕು. ಬರಿಯ ಪಾಂಡಿತ್ಯಪೂರ್ಣ ಶಿಕ್ಷಣಹೊಂದಿದ್ದು ಅಹಂಕಾರದಿಂದ ಬೀಗುವ, ಭಕ್ತನಲ್ಲದವನಿಂದ ಕಲಿಯಬಾರದು.

ಶ್ರೀಮದ್ಭಾಗವತದಲ್ಲಿ ದೇವೋತ್ತಮ ಪರಮ ಪುರುಷನೂ ಪರಮ ಸತ್ಯವೂ ಆದ ಶ್ರೀಕೃಷ್ಣನನ್ನು ಅರ್ಥಮಾಡಿಕೊಳ್ಳುವ ವಿಧಾನವನ್ನು ಪ್ರಥಮ ಸ್ಕಂಧದ ಎರಡನೆಯ ಅಧ್ಯಾಯದಲ್ಲಿ ಹೀಗೆ ವರ್ಣಿಸಿದೆ —

**ಶೃಣ್ವತಾಂ ಸ್ವಕಥಾಃ ಕೃಷ್ಣಃ ಪುಣ್ಯ ಶ್ರವಣಕೀರ್ತನಃ |**
**ಹೃದ್ಯನ್ತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ||**

**ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ |**
**ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ||**

**ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ |**
**ಚೇತ ಏತೈರ್ ಅನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ ||**

**ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ |**
**ಭಗವತ್ತತ್ತ್ವವಿಜ್ಞಾನಂ ಮುಕ್ತಸಙ್ಗಸ್ಯ ಜಾಯತೇ ||**

**ಭಿದ್ಯತೇ ಹೃದಯಗ್ರಂಥಿಃ ಛಿದ್ಯನ್ತೇ ಸರ್ವಸಂಶಯಾಃ |**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ||**

"ಕೃಷ್ಣನ ವಿಷಯವನ್ನು ವೇದ ಸಾಹಿತ್ಯದಿಂದ ಕೇಳುವುದು ಅಥವಾ ಭಗವದ್ಗೀತೆಯ ಮೂಲಕ ನೇರವಾಗಿ ಅವನಿಂದಲೇ ಕೇಳುವುದೇ ಪುಣ್ಯಕಾರ್ಯ. ತನ್ನ ವಿಷಯ ಕೇಳುವವನಿಗೆ ಎಲ್ಲರ ಹೃದಯಗಳಲ್ಲಿ ನೆಲೆಸಿರುವ ಶ್ರೀಕೃಷ್ಣನು ಪರಮ ಹಿತೈಷಿಯಾದ ಸ್ನೇಹಿತನಾಗಿ ನಡೆದುಕೊಳ್ಳುತ್ತಾನೆ. ಸದಾ ಕೃಷ್ಣನ ವಿಷಯ ಕೇಳುವುದರಲ್ಲಿ ನಿರತನಾದ ಭಕ್ತನನ್ನು ಪರಿಶುದ್ಧಗೊಳಿಸುತ್ತಾನೆ. ಈ ರೀತಿಯಲ್ಲಿ ಭಕ್ತನು ತನ್ನಲ್ಲಿ ಸುಪ್ತವಾಗಿರುವ ದಿವ್ಯಜ್ಞಾನವನ್ನು ಸಹಜ ರೀತಿಯಲ್ಲಿ ಬೆಳೆಸಿಕೊಳ್ಳುತ್ತಾನೆ. ಭಾಗವತದಿಂದಲೂ ಭಕ್ತರಿಂದಲೂ ಕೃಷ್ಣನ ವಿಷಯ ಇನ್ನಷ್ಟು ಕೇಳಿದಂತೆ ವ್ಯಕ್ತಿಯು ಭಗವಂತನ ಭಕ್ತಿಸೇವೆಯಲ್ಲಿಯೇ ನಿಶ್ಚಲವಾಗಿ ಉಳಿಯುತ್ತಾನೆ. ಭಕ್ತಿಸೇವೆಯನ್ನು ಬೆಳೆಸಿಕೊಂಡಾಗ ಮನುಷ್ಯನು ರಜೋಗುಣ ಮತ್ತು ತಮೋಗುಣಗಳಿಂದ ಬಿಡುಗಡೆಹೊಂದುತ್ತಾನೆ. ಹೀಗೆ ಐಹಿಕ ಕಾಮ ಮತ್ತು ಲೋಭಗಳು ಕ್ಷಯಿಸುತ್ತವೆ. ಈ ಮಾಲಿನ್ಯಗಳು ತೊಡೆದುಹೋದಾಗ ಸಾಧಕನು ಪರಿಶುದ್ಧ ಸತ್ವಸ್ಥಿತಿಯಲ್ಲಿ ಸ್ಥಿರನಾಗುತ್ತಾನೆ, ಭಕ್ತಿಸೇವೆಯಿಂದ ಚುರುಕಾಗುತ್ತಾನೆ ಮತ್ತು ಭಗವಂತನ ವಿಜ್ಞಾನವನ್ನು ಪರಿಪೂರ್ಣವಾಗಿ ತಿಳಿದುಕೊಳ್ಳುತ್ತಾನೆ. ಹೀಗೆ ಭಕ್ತಿಯೋಗವು ಭೌತಿಕ ವ್ಯಾಮೋಹದ ಗಂಟನ್ನು ಕತ್ತರಿಸಿಹಾಕುತ್ತದೆ ಮತ್ತು ಮನುಷ್ಯನು ಕೂಡಲೇ **ಅಸಂಶಯಂ ಸಮಗ್ರಮ್** ಸ್ಥಿತಿಗೆ ಅಥವಾ ಪರಮ ಸತ್ಯನಾದ ದೇವೋತ್ತಮ ಪುರುಷನನ್ನು ಅರ್ಥಮಾಡಿಕೊಳ್ಳುವ ಸ್ಥಿತಿಗೆ ಬರುವುದು ಸಾಧ್ಯವಾಗುತ್ತದೆ" (ಭಾಗವತ 1.2.17-21).

ಆದುದರಿಂದ ಕೃಷ್ಣನಿಂದ ಅಥವಾ ಕೃಷ್ಣಪ್ರಜ್ಞೆಯಲ್ಲಿರುವ ಅವನ ಭಕ್ತರಿಂದ ಶ್ರವಣ ಮಾಡುವುದೇ ಕೃಷ್ಣವಿಜ್ಞಾನವನ್ನು ಅರ್ಥಮಾಡಿಕೊಳ್ಳುವ ಸರಿಯಾದ ದಾರಿ.

## ಶ್ಲೋಕ - 2

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ |**
**ಯಜ್‌ಜ್ಞಾತ್ವಾ ನೇಹ ಭೂಯೋಽನ್ಯಜ್‌ಜ್ಞಾತವ್ಯಮವಶಿಷ್ಯತೇ ||೨||**

**ಜ್ಞಾನಮ್**—ಇಂದ್ರಿಯಗೋಚರ ಜ್ಞಾನವನ್ನು; **ತೇ**—ನಿನಗೆ; **ಅಹಮ್**—ನಾನು; **ಸ**—ಜೊತೆಗೆ; **ವಿಜ್ಞಾನಮ್**—ಆಧ್ಯಾತ್ಮಿಕ ಜ್ಞಾನದ; **ಇದಮ್**—ಈ; **ವಕ್ಷ್ಯಾಮಿ**—ವಿವರಿಸುತ್ತೇನೆ; **ಅಶೇಷತಃ**—ಪೂರ್ಣವಾಗಿ; **ಯತ್**—ಯಾವುದನ್ನು; **ಜ್ಞಾತ್ವಾ**—ತಿಳಿದು; **ನ**—ಇಲ್ಲ; **ಇಹ**—ಈ ಪ್ರಪಂಚದಲ್ಲಿ; **ಭೂಯಃ**—ಮತ್ತೆ; **ಅನ್ಯತ್**—ಏನೊಂದನ್ನು ಹೆಚ್ಚಾಗಿ; **ಜ್ಞಾತವ್ಯಮ್**—ತಿಳಿಯಬೇಕಾದುದು; **ಅವಶಿಷ್ಯತೇ**—ಉಳಿಯುತ್ತದೆ.

## ಅನುವಾದ

**ಈಗ ನಾನು ನಿನಗೆ ಇಂದ್ರಿಯಗೋಚರವಾದ ಜ್ಞಾನವನ್ನೂ ಆಧ್ಯಾತ್ಮಿಕ ಜ್ಞಾನವನ್ನೂ ಸಂಪೂರ್ಣವಾಗಿ ತಿಳಿಸಿಕೊಡುತ್ತೇನೆ. ಇದನ್ನು ತಿಳಿದುಕೊಂಡಮೇಲೆ ನೀನು ತಿಳಿದುಕೊಳ್ಳಬೇಕಾದದ್ದು ಏನೂ ಇರುವುದಿಲ್ಲ.**

## ಭಾವಾರ್ಥ

ಸಂಪೂರ್ಣ ಜ್ಞಾನದಲ್ಲಿ ಇಂದ್ರಿಯಗ್ರಾಹ್ಯ ಪ್ರಪಂಚ, ಅದರ ಹಿಂದೆ ಇರುವ ಚೇತನ ಮತ್ತು ಇವೆರಡರ ಮೂಲ — ಇವುಗಳ ತಿಳುವಳಿಕೆಯೂ ಸೇರಿದೆ. ಇದೇ ಆಧ್ಯಾತ್ಮಿಕ ಜ್ಞಾನ. ಅರ್ಜುನನು ಕೃಷ್ಣನ ಅಂತರಂಗ ಭಕ್ತ ಮತ್ತು ಸ್ನೇಹಿತ. ಆದುದರಿಂದ ಭಗವಂತನು ಮೇಲಿನ ಜ್ಞಾನ ವಿಧಾನವನ್ನು ವಿವರಿಸಲು ಬಯಸುತ್ತಾನೆ. ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ ಭಗವಂತನು ಈ ವಿವರಣೆಯನ್ನು ಕೊಟ್ಟಿದ್ದಾನೆ. ಅದನ್ನು ಇಲ್ಲಿ ಮತ್ತೆ ದೃಢಪಡಿಸಿದೆ. ಭಗವಂತನಿಂದ ನೇರವಾಗಿ ಬಂದ ಗುರುಶಿಷ್ಯ ಪರಂಪರೆಯಲ್ಲಿರುವ ಭಗವದ್ಭಕ್ತನು ಮಾತ್ರ ಸಂಪೂರ್ಣಜ್ಞಾನವನ್ನು ಪಡೆದುಕೊಳ್ಳಬಲ್ಲ. ಆದುದರಿಂದ ಎಲ್ಲ ಕಾರಣಗಳ ಕಾರಣನಾದ ಮತ್ತು ಎಲ್ಲ ಯೋಗಾಭ್ಯಾಸ ರೀತಿಗಳಲ್ಲಿಯೂ ಧ್ಯಾನದ ಗುರಿಯಾದ ಎಲ್ಲ ಜ್ಞಾನದ ಮೂಲವನ್ನು ಅರ್ಥಮಾಡಿಕೊಳ್ಳುವಷ್ಟು ಬುದ್ಧಿಯು ಮನುಷ್ಯನಿಗಿರಬೇಕು. ಎಲ್ಲ ಕಾರಣಗಳ ಕಾರಣವು ತಿಳಿದಾಗ ತಿಳಿದುಕೊಳ್ಳಬಹುದಾದದ್ದೆಲ್ಲ ತಿಳಿಯುತ್ತದೆ ಮತ್ತು ಯಾವುದೂ ತಿಳಿಯದೆ ಉಳಿಯುವುದಿಲ್ಲ. ವೇದಗಳು (ಮುಂಡಕ ಉಪನಿಷತ್ತು 1.3) **ಕಸ್ಮಿನ್ ಭಗವೋ ವಿಜ್ಞಾತೇ ಸರ್ವಮ್ ಇದಂ ವಿಜ್ಞಾತಂ ಭವತಿ** ಎಂದು ಹೇಳುತ್ತವೆ.

## ಶ್ಲೋಕ - 3

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ |**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ||೩||**

**ಮನುಷ್ಯಾಣಾಮ್**—ಮನುಷ್ಯರ; **ಸಹಸ್ರೇಷು**—ಅನೇಕ ಸಾವಿರಗಳಲ್ಲಿ; **ಕಶ್ಚಿತ್**—ಯಾರೋ ಒಬ್ಬನು; **ಯತತಿ**—ಪ್ರಯತ್ನಿಸುತ್ತಾನೆ; **ಸಿದ್ಧಯೇ**—ಪರಿಪೂರ್ಣತೆಗಾಗಿ; **ಯತತಾಮ್**—ಹಾಗೆ ಪ್ರಯತ್ನಿಸುವವರಲ್ಲಿ; **ಅಪಿ**—ನಿಜವಾಗಿಯೂ; **ಸಿದ್ಧಾನಾಮ್**—ಪರಿಪೂರ್ಣತೆಯನ್ನು ಸಾಧಿಸಿದವರಲ್ಲಿ; **ಕಶ್ಚಿತ್**—ಯಾರೋ ಒಬ್ಬನು; **ಮಾಮ್**—ನನ್ನನ್ನು; **ವೇತ್ತಿ**—ತಿಳಿಯುತ್ತಾನೆ; **ತತ್ತ್ವತಃ**—ವಾಸ್ತವಿಕವಾಗಿ.

## ಅನುವಾದ

**ಸಾವಿರಾರು ಜನರಲ್ಲಿ ಒಬ್ಬನು ಪರಿಪೂರ್ಣತೆಗಾಗಿ ಪ್ರಯತ್ನಿಸಬಹುದು; ಪರಿಪೂರ್ಣತೆಯನ್ನು ಸಾಧಿಸಿರುವವರಲ್ಲಿ ಒಬ್ಬನು ನನ್ನನ್ನು ನಿಜವಾಗಿ ಅರ್ಥಮಾಡಿಕೊಂಡಿದ್ದಾನೆ ಎಂದು ಹೇಳುವುದೂ ಕಷ್ಟ.**

## ಭಾವಾರ್ಥ

ಮನುಷ್ಯರಲ್ಲಿ ಬೇರೆ ಬೇರೆ ಮಟ್ಟಗಳಿವೆ. ಆತ್ಮವೆಂದರೇನು, ದೇಹವೆಂದರೇನು, ಪರಮ ಸತ್ಯವೆಂದರೇನು ಇವೆಲ್ಲವನ್ನೂ ತಿಳಿದುಕೊಳ್ಳಲು ದಿವ್ಯ ಸಾಕ್ಷಾತ್ಕಾರದಲ್ಲಿ ಸಾವಿರ ಜನರಲ್ಲಿ ಒಬ್ಬನಿಗೆ ತಕ್ಕಷ್ಟು ಆಸಕ್ತಿಯಿರಬಹುದು. ತಿನ್ನುವುದು, ನಿದ್ರೆ, ರಕ್ಷಣೆ ಮತ್ತು ಮೈಥುನ ಈ ಪಶುಪ್ರವೃತ್ತಿಗಳಲ್ಲೇ ಸಾಮಾನ್ಯವಾಗಿ ಮನುಷ್ಯರು ತನ್ಮಯರಾಗಿರುತ್ತಾರೆ. ಸಾಮಾನ್ಯವಾಗಿ ದಿವ್ಯಜ್ಞಾನದಲ್ಲಿ ಯಾರಿಗೂ

ಆಸಕ್ತಿಯಿರುವುದಿಲ್ಲ. 'ಗೀತೆ'ಯ ಮೊದಲ ಆರು ಅಧ್ಯಾಯಗಳನ್ನು ದಿವ್ಯಜ್ಞಾನದಲ್ಲಿ ವಿಶಿಷ್ಟವಾದ ಆಸಕ್ತಿ ಇರುವವರಿಗಾಗಿ ಹೇಳಿದೆ. ದಿವ್ಯಜ್ಞಾನ, ಆತ್ಮ, ಪರಮಾತ್ಮ, ಜ್ಞಾನಯೋಗ ಮತ್ತು ಧ್ಯಾನಯೋಗಗಳ ಮೂಲಕ ಸಾಕ್ಷಾತ್ಕಾರದ ಪ್ರಕ್ರಿಯೆ ಆತ್ಮನನ್ನು ಜಡವಸ್ತುವಿನಿಂದ ಪ್ರತ್ಯೇಕಿಸುವುದು — ಇದೇ ಆ ವಿಶಿಷ್ಟವಾದ ದಿವ್ಯ ಜ್ಞಾನವಾಗಿದೆ. ಕೃಷ್ಣಪ್ರಜ್ಞೆ ಇರುವವರು ಮಾತ್ರ ಕೃಷ್ಣನನ್ನು ಅರಿಯಬಲ್ಲರು. ನಿರಾಕಾರ ಬ್ರಹ್ಮನ್ ಸಾಕ್ಷಾತ್ಕಾರವು ಕೃಷ್ಣನನ್ನು ಅರಿಯುವುದಕ್ಕಿಂತ ಸುಲಭ. ಆದುದರಿಂದ ಇತರ ಆಧ್ಯಾತ್ಮಿಕವಾದಿಗಳು ನಿರಾಕಾರ ಬ್ರಹ್ಮ ಸಾಕ್ಷಾತ್ಕಾರವನ್ನು ಸಾಧಿಸಬಹುದು. ಕೃಷ್ಣನು ಪರಮ ಪುರುಷ; ಆದರೆ ಅವನು ಬ್ರಹ್ಮನ್ ಮತ್ತು ಪರಮಾತ್ಮರ ಅರಿವನ್ನು ಮೀರಿದವನು. ಕೃಷ್ಣನನ್ನು ಅರಿಯುವ ಪ್ರಯತ್ನದಲ್ಲಿ ಯೋಗಿಗಳೂ ಜ್ಞಾನಿಗಳೂ ಗೊಂದಲಕ್ಕೆ ಒಳಗಾಗುತ್ತಾರೆ. ನಿರಾಕಾರವಾದಿಗಳಲ್ಲಿ ಅತ್ಯಂತ ಶ್ರೇಷ್ಠರಾದ ಶ್ರೀಪಾದ ಶಂಕರಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಕೃಷ್ಣನು ದೇವೋತ್ತಮ ಪರಮ ಪುರುಷನೆಂದು ಒಪ್ಪಿಕೊಂಡರೂ ಅವರ ಅನುಯಾಯಿಗಳು ಕೃಷ್ಣನನ್ನು ಹೀಗೆ ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ನಿರಾಕಾರ ಬ್ರಹ್ಮನ್ ದಿವ್ಯ ಸಾಕ್ಷಾತ್ಕಾರವನ್ನು ಸಾಧಿಸಿದವರಿಗೂ ಕೃಷ್ಣನನ್ನು ಅರಿಯುವುದು ಬಹು ಕಠಿಣ.

ಕೃಷ್ಣನು ದೇವೋತ್ತಮ ಪರಮ ಪುರುಷ, ಎಲ್ಲ ಕಾರಣಗಳ ಕಾರಣ, ಆದಿಪುರುಷನಾದ ಶ್ರೀ ಗೋವಿಂದ. **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನನ್ದವಿಗ್ರಹಃ / ಅನಾದಿರ್ ಆದಿರ್ ಗೋವಿನ್ದಃ ಸರ್ವಕಾರಣಕಾರಣಮ್.** ಭಕ್ತರಲ್ಲದವರಿಗೆ ಕೃಷ್ಣನನ್ನು ಅರಿಯುವುದು ಕಷ್ಟ. ಭಕ್ತರಲ್ಲದವರು ಭಕ್ತಿಮಾರ್ಗವು ಬಹು ಸುಲಭ ಎಂದು ಹೇಳಿದರೂ ಅವರಿಗೆ ಅದನ್ನು ಅಭ್ಯಾಸಮಾಡುವುದು ಸಾಧ್ಯವಾಗುವುದಿಲ್ಲ. ಭಕ್ತಿಮಾರ್ಗವು ಭಕ್ತರಲ್ಲದವರು ಹೇಳುವಷ್ಟು ಸುಲಭವಾಗಿದ್ದರೆ ಅವರು ಕಷ್ಟವಾದ ಮಾರ್ಗವನ್ನೇಕೆ ಆರಿಸುತ್ತಾರೆ? ವಾಸ್ತವವಾಗಿ ಭಕ್ತಿಮಾರ್ಗವು ಸುಲಭವಲ್ಲ. ಭಕ್ತಿಯನ್ನು ತಿಳಿಯದ, ಅಧಿಕಾರವಿಲ್ಲದ ಜನ ಭಕ್ತಿಮಾರ್ಗ ಎಂದು ಕರೆದು ಅನುಸರಿಸುವ ಮಾರ್ಗವು ಸುಲಭವಾಗಿರಬಹುದು. ಆದರೆ ನಿಯಮ ನಿಬಂಧನೆಗಳಿಗನುಗುಣವಾಗಿ ಅದನ್ನು ಅನುಸರಿಸಿದಾಗ ಊಹಾತ್ಮಕ ಚಿಂತನೆಯಲ್ಲಿ ತೊಡಗುವ ಪಂಡಿತರೂ ತತ್ವಶಾಸ್ತ್ರಜ್ಞರೂ ಆ ಮಾರ್ಗದಿಂದ ದೂರವಾಗುವರು. ಶ್ರೀಲ ರೂಪ ಗೋಸ್ವಾಮಿಯವರು ತಮ್ಮ ಭಕ್ತಿರಸಾಮೃತಸಿಂಧು (1.2.101)ವಿನಲ್ಲಿ ಹೀಗೆ ಬರೆಯುತ್ತಾರೆ —

**ಶ್ರುತಿಸ್ಮೃತಿಪುರಾಣಾದಿ ಪಞ್ಚರಾತ್ರವಿಧಿಂ ವಿನಾ |**
**ಐಕಾನ್ತಿಕೀ ಹರೇರ್ ಭಕ್ತಿರ್ ಉತ್ಪಾತಾಯೈವ ಕಲ್ಪತೇ ||**

"ಉಪನಿಷತ್ತುಗಳು, ಪುರಾಣಗಳು ಮತ್ತು ನಾರದ ಪಂಚರಾತ್ರಗಳಂತಹ ಅಧಿಕೃತ ವೇದ ಸಾಹಿತ್ಯವನ್ನು ಅಲಕ್ಷ್ಯಮಾಡುವ ಭಕ್ತಿಸೇವೆಯು ಸಮಾಜದಲ್ಲಿ ಅನಗತ್ಯವಾದ ಸದ್ದುಗದ್ದಲ."

ಬ್ರಹ್ಮನ್ ಸಾಕ್ಷಾತ್ಕಾರವನ್ನು ಪಡೆದ ನಿರಾಕಾರವಾದಿಗಾಗಲಿ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆದ ಯೋಗಿಗಾಗಲಿ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಯಶೋದೆಯ ಮಗನಾಗಿ ಅಥವಾ ಅರ್ಜುನನ ಸಾರಥಿಯಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಮಹಾನ್ ದೇವತೆಗಳಿಗೂ ಕೆಲವೊಮ್ಮೆ ಕೃಷ್ಣನ ವಿಷಯದಲ್ಲಿ ಗೊಂದಲವಾಗುತ್ತದೆ (**ಮುಹ್ಯನ್ತಿ ಯತ್ ಸೂರಯಃ**). ಭಗವಂತನು **ಮಾಂ ತು ವೇದ ನ ಕಶ್ಚನ** "ನಾನಿರುವಂತೆ ಯಾರೂ ನನ್ನನ್ನು

ಅರಿಯರು" ಎಂದು ಹೇಳುತ್ತಾನೆ. ಆತನನ್ನು ಅರಿತಿದ್ದರೆ, ಆಗ **ಸ ಮಹಾತ್ಮಾ ಸುದುರ್ಲಭಃ,** "ಅಂತಹ ಮಹಾತ್ಮನು ದೊರೆಯುವುದು ಬಹು ಕಷ್ಟ." ದೊಡ್ಡ ವಿದ್ವಾಂಸನೋ ತತ್ವಶಾಸ್ತ್ರಜ್ಞನೋ ಆಗಿರುವವನು ಸಹ, ಭಗವಂತನ ಪ್ರೇಮ ಪೂರ್ವಕ ಸೇವೆಯನ್ನು ಅಭ್ಯಾಸಮಾಡದಿದ್ದರೆ ಕೃಷ್ಣನು ಇರುವಂತೆ (**ತತ್ತ್ವತಃ**) ಅವನನ್ನು ಅರಿಯಲಾರ. ಕೃಷ್ಣನು ಎಲ್ಲ ಕಾರಣಗಳ ಕಾರಣನು; ಅವನು ಸರ್ವವ್ಯಾಪಿ ಮತ್ತು ಸಿರಿವಂತ. ಅವನಲ್ಲಿ ಶ್ರೀಮಂತಿಕೆ, ಕೀರ್ತಿ, ಶಕ್ತಿ, ಸೌಂದರ್ಯ, ಜ್ಞಾನ ಮತ್ತು ವೈರಾಗ್ಯ ಈ ಎಲ್ಲ ಊಹಾತೀತ ದಿವ್ಯಗುಣಗಳಿವೆ. ಪರಿಶುದ್ಧ ಭಕ್ತರು ಮಾತ್ರ ಈ ಗುಣಗಳನ್ನು ಸ್ವಲ್ಪಮಟ್ಟಿಗೆ ಅರಿಯಬಲ್ಲರು. ಏಕೆಂದರೆ ಕೃಷ್ಣನು ಭಕ್ತರ ಬಗ್ಗೆ ದಯಾಳುವಾಗಿದ್ದಾನೆ. ಬ್ರಹ್ಮನ್ ಸಾಕ್ಷಾತ್ಕಾರದಲ್ಲಿ ಅವನೇ ಕಡೆಯ ಮಾತು. ಭಕ್ತರು ಮಾತ್ರ ಅವನು ಇರುವಂತೆ ಅವನ ಸಾಕ್ಷಾತ್ಕಾರವನ್ನು ಪಡೆಯಬಲ್ಲರು. ಆದ್ದರಿಂದ ಹೀಗೆ ಹೇಳಿದೆ —

**ಅತಃ ಶ್ರೀಕೃಷ್ಣನಾಮಾದಿ ನ ಭವೇದ್ಗ್ರಾಹ್ಯಮಿನ್ದ್ರಿಯೈಃ |**
**ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ ||**

"ಜಡ ಭೌತಿಕ ಇಂದ್ರಿಯಗಳ ಮೂಲಕ ಯಾರೂ ಕೃಷ್ಣನು ಇರುವಂತೆ ಅವನನ್ನು ಗ್ರಹಿಸಲಾರರು. ಆದರೆ ಆತನು, ಭಕ್ತರು ತನಗೆ ಅರ್ಪಿಸುವ ಪ್ರೇಮಪೂರ್ವಕ ಸೇವೆಯಿಂದ ಸುಪ್ರೀತನಾಗಿ ಅವರಿಗೆ ಪ್ರತ್ಯಕ್ಷವಾಗುತ್ತಾನೆ" (ಭಕ್ತಿರಸಾಮೃತ ಸಿಂಧು, 1.2.234).

## ಶ್ಲೋಕ - 4

**ಭೂಮಿರಾಪೋऽನಲೋ ವಾಯುಃ ಖಂ ಮನೋ ಬುದ್ಧಿರೇವ ಚ |**
**ಅಹಙ್ಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ||೪||**

**ಭೂಮಿಃ**—ಭೂಮಿ; **ಆಪಃ**—ನೀರು; **ಅನಲಃ**—ಅಗ್ನಿ; **ವಾಯುಃ**—ಗಾಳಿ; **ಖಮ್**—ಆಕಾಶ; **ಮನಃ**—ಮನಸ್ಸು; **ಬುದ್ಧಿಃ**—ಬುದ್ಧಿಯು; **ಏವ**—ಖಂಡಿತವಾಗಿಯೂ; **ಚ**—ಮತ್ತು; **ಅಹಂಕಾರಃ**—ಅಹಂಕಾರವು; **ಇತಿ**—ಹೀಗೆ; **ಇಯಮ್**—ಇವೆಲ್ಲವೂ; **ಮೇ**—ನನ್ನ; **ಭಿನ್ನಾ**—ಬೇರೆಯಾದ; **ಪ್ರಕೃತಿಃ**—ಶಕ್ತಿಗಳು; **ಅಷ್ಟಧಾ**—ಎಂಟು ವಿಧ.

## ಅನುವಾದ

**ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ — ಈ ಎಂಟು ನನ್ನ ಪ್ರತ್ಯೇಕಗೊಂಡ ಭೌತಿಕ ಶಕ್ತಿಗಳಾಗಿವೆ.**

## ಭಾವಾರ್ಥ

ದೇವರ ವಿಜ್ಞಾನವು ಭಗವಂತನ ಸಹಜ ಸ್ವರೂಪವನ್ನೂ ಅವನ ವಿವಿಧ ಶಕ್ತಿಗಳನ್ನೂ ವಿಶ್ಲೇಷಿಸುತ್ತದೆ. ಐಹಿಕ ಪ್ರಕೃತಿ ಅಥವಾ ಭಗವಂತನ ವಿವಿಧ ಪುರುಷ ವಿಸ್ತರಣಗಳಲ್ಲಿ ಅವನ ಶಕ್ತಿ ಯಾವ ರೀತಿ ಇರುತ್ತದೆಂಬುದನ್ನು **ಸಾತ್ವತ ತನ್ತ್ರದಲ್ಲಿ** ಹೀಗೆ ವರ್ಣಿಸಿದೆ —

**ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಾಖ್ಯಾನ್ಯಥೋ ವಿದುಃ |**
**ಏಕಂ ತು ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡಸಂಸ್ಥಿತಮ್ ||**

**ತೃತೀಯಂ ಸರ್ವಭೂತಸ್ಥಂ ತಾನಿ ಜ್ಞಾತ್ವಾ ವಿಮುಚ್ಯತೇ |**

"ಐಹಿಕ ಸೃಷ್ಟಿಗೆ ಶ್ರೀಕೃಷ್ಣನ ಸ್ವಾಂಶ ವಿಸ್ತರಣೆಯು ಮೂರು ವಿಷ್ಣು ರೂಪಗಳನ್ನು ತಳೆಯುತ್ತದೆ. ಮೊದಲನೆಯದಾದ ಮಹಾವಿಷ್ಣುವು **ಮಹತ್ ತತ್ತ್ವ** ಎಂದು ಕರೆಯುವ ಒಟ್ಟು ಐಹಿಕ ಶಕ್ತಿಯನ್ನು ಸೃಷ್ಟಿಸುತ್ತಾನೆ. ಗರ್ಭೋದಕಶಾಯೀ ವಿಷ್ಣು ಎರಡನೆಯವನು. ಅವನು ಎಲ್ಲ ಲೋಕಗಳಲ್ಲಿ ವೈವಿಧ್ಯವನ್ನು ಸೃಷ್ಟಿಸಲು ಅವುಗಳನ್ನು ಪ್ರವೇಶಿಸುತ್ತಾನೆ. ಮೂರನೆಯದಾದ ಕ್ಷೀರೋದಕಶಾಯೀ ವಿಷ್ಣುವು ಸರ್ವಾಂತರ್ಯಾಮಿ ಪರಮಾತ್ಮನಾಗಿ ಎಲ್ಲ ಲೋಕಗಳಲ್ಲಿಯೂ ಹಬ್ಬಿದ್ದಾನೆ. ಅವನಿಗೆ ಪರಮಾತ್ಮನೆಂದು ಹೆಸರು. ಆತನು ಅಣುಗಳಲ್ಲಿಯೂ ಇದ್ದಾನೆ. ಈ ಮೂರು ವಿಷ್ಣು ರೂಪಗಳನ್ನು ಅರಿತವನು ಐಹಿಕ ಬಂಧನದಿಂದ ಮುಕ್ತನಾಗಬಲ್ಲ."

ಐಹಿಕ ಜಗತ್ತು ಭಗವಂತನ ಶಕ್ತಿಗಳಲ್ಲಿ ಒಂದರ ತಾತ್ಕಾಲಿಕ ಅಭಿವ್ಯಕ್ತಿ. ಶ್ರೀಕೃಷ್ಣನ ಮೂರು ವಿಷ್ಣು ವಿಸ್ತರಣಗಳು ಐಹಿಕ ಜಗತ್ತಿನ ಎಲ್ಲ ಚಟುವಟಿಕೆಗಳನ್ನು ನಿರ್ದೇಶಿಸುತ್ತವೆ. ಈ **ಪುರುಷ**ರಿಗೆ ಅವತಾರಗಳೆಂದು ಹೆಸರು. ಸಾಮಾನ್ಯವಾಗಿ ಭಗವಂತನ (ಕೃಷ್ಣನ) ವಿಜ್ಞಾನವನ್ನು ತಿಳಿಯದವನು ಜೀವಿಗಳೇ ಪುರುಷರೆಂದೂ ಮತ್ತು ಐಹಿಕ ಜಗತ್ತು ಇರುವುದೇ ಜೀವಿಗಳ ಭೋಗಕ್ಕಾಗಿ ಎಂದೂ ಭಾವಿಸುತ್ತಾನೆ. ಪುರುಷ ಎಂಬ ಶಬ್ದದ ಅರ್ಥ ಐಹಿಕ ಶಕ್ತಿಯ ಮೂಲ, ನಿಯಂತ್ರಕ ಮತ್ತು ಭೋಗಿ ಎಂಬುದಾಗಿದೆ. ಭಗವದ್ಗೀತೆಯ ಪ್ರಕಾರ ಈ ನಾಸ್ತಿಕ ನಿರ್ಣಯವು ಸುಳ್ಳು. ಪ್ರಸ್ತುತ ಶ್ಲೋಕದಲ್ಲಿ ಕೃಷ್ಣನು ಐಹಿಕ ಅಭಿವ್ಯಕ್ತಿಯ ಮೂಲಕಾರಣ ಎಂದು ಹೇಳಿದೆ. ಶ್ರೀಮದ್ಭಾಗವತವು ಇದನ್ನು ದೃಢಪಡಿಸುತ್ತದೆ. ಐಹಿಕ ಅಭಿವ್ಯಕ್ತಿಯಲ್ಲಿ ಸೇರಿರುವ ಅಂಶಗಳು ಭಗವಂತನ ಪ್ರತ್ಯೇಕಗೊಂಡ ಶಕ್ತಿಗಳು. ನಿರಾಕಾರವಾದಿಗಳ ಅಂತಿಮ ಗುರಿಯಾದ ಬ್ರಹ್ಮಜ್ಯೋತಿಯು ಸಹ ಆಧ್ಯಾತ್ಮಿಕ ಗಗನದಲ್ಲಿ ಪ್ರಕಟಗೊಂಡ ಆಧ್ಯಾತ್ಮಿಕ ಶಕ್ತಿ. ವೈಕುಂಠ ಲೋಕಗಳಲ್ಲಿರುವಂತೆ ಬ್ರಹ್ಮಜ್ಯೋತಿಯಲ್ಲಿ ಆಧ್ಯಾತ್ಮಿಕ ಭಿನ್ನತೆಗಳಿಲ್ಲ. ನಿರಾಕಾರವಾದಿಯು ಈ ಬ್ರಹ್ಮಜ್ಯೋತಿಯನ್ನು ಅಂತಿಮ ನಿರಂತರ ಗುರಿಯೆಂದು ಸ್ವೀಕರಿಸುತ್ತಾನೆ. ಪರಮಾತ್ಮ ರೂಪವು ಸಹ ಕ್ಷೀರೋದಕಶಾಯಿ ವಿಷ್ಣುವಿನ ತಾತ್ಕಾಲಿಕ ಸರ್ವಾಂತರ್ಯಾಮಿ ರೂಪ. ಪರಮಾತ್ಮರೂಪವು ಆಧ್ಯಾತ್ಮಿಕ ಜಗತ್ತಿನಲ್ಲಿ ನಿರಂತರವಾದುದಲ್ಲ. ಆದುದರಿಂದ ದೇವೋತ್ತಮ ಪರಮ ಪುರುಷ ಕೃಷ್ಣನೇ ವಾಸ್ತವವಾಗಿ ಪರಮ ಸತ್ಯ. ಆತನು ಪೂರ್ಣ ಚೈತನ್ಯ ಪುರುಷ. ಅವನಿಗೆ ಬೇರೆ ಬೇರೆ ಪ್ರತ್ಯೇಕಗೊಂಡ ಶಕ್ತಿಗಳು ಮತ್ತು ಅಂತರಂಗ ಶಕ್ತಿಗಳು ಇವೆ.

ಮೇಲೆ ಹೇಳಿದಂತೆ ಐಹಿಕ ಶಕ್ತಿಯ ಪ್ರಧಾನರೂಪಗಳು ಎಂಟು. ಇವುಗಳಲ್ಲಿ ಮೊದಲನೆಯ ಐದಾದ ಭೂಮಿ, ನೀರು, ಅಗ್ನಿ, ಗಾಳಿ ಮತ್ತು ಆಕಾಶಗಳನ್ನು ಐದು ಮಹಾಸೃಷ್ಟಿಗಳು ಅಥವಾ ಸ್ಥೂಲ ಸೃಷ್ಟಿಗಳು ಎಂದು ಕರೆಯುತ್ತಾರೆ. ಅವುಗಳಲ್ಲಿ ಐದು ಇಂದ್ರಿಯ ವಸ್ತುಗಳೂ ಸೇರಿವೆ. ಇವು ಭೌತಿಕ ಶಬ್ದ, ಸ್ಪರ್ಶ, ರೂಪ, ರುಚಿ ಮತ್ತು ವಾಸನೆಗಳು. ಐಹಿಕ ವಿಜ್ಞಾನದಲ್ಲಿ ಇರುವುದು ಈ ಹತ್ತು ಅಂಶಗಳು, ಬೇರೇನೂ ಇಲ್ಲ. ಆದರೆ ಪ್ರಾಪಂಚಿಕವಾದಿಗಳು ಇನ್ನು ಮೂರು ಅಂಶಗಳಾದ ಮನಸ್ಸು, ಬುದ್ಧಿಶಕ್ತಿ ಮತ್ತು ಅಹಂಕಾರಗಳನ್ನು ಸಂಪೂರ್ಣವಾಗಿ ಅಲಕ್ಷ್ಯಮಾಡುತ್ತಾರೆ. ಮಾನಸಿಕ ಚಟುವಟಿಕೆಗಳಲ್ಲಿ ವಿವೇಚಿಸುವ ತತ್ತ್ವಜ್ಞಾನಿಗಳಿಗೂ ಸಹ ಪರಿಪೂರ್ಣ ಜ್ಞಾನವಿರುವುದಿಲ್ಲ. ಏಕೆಂದರೆ ಅವರಿಗೆ ಕಟ್ಟಕಡೆಯ ಮೂಲವಾದ ಕೃಷ್ಣನು ತಿಳಿದಿಲ್ಲ. 'ನಾನು ಇದ್ದೇನೆ' ಮತ್ತು 'ಇದು ನನ್ನದು' — ಇವು ಐಹಿಕ ಅಸ್ತಿತ್ವದ ಮೂಲ ತತ್ತ್ವ; ಇದು

ಮಿಥ್ಯಾಹಂಕಾರ. ಈ ಮಿಥ್ಯಾಹಂಕಾರದಲ್ಲಿ ಐಹಿಕ ಚಟುವಟಿಕೆಗಳ ಹತ್ತು ಇಂದ್ರಿಯಗಳು ಇವೆ. ಬುದ್ಧಿಶಕ್ತಿಯು **ಮಹತ್ ತತ್ತ್ವ** ಎಂದು ಕರೆಯುವ ಒಟ್ಟು ಭೌತಿಕ ಸೃಷ್ಟಿಗೆ ಸಂಬಂಧಿಸಿದ್ದು. ಆದುದರಿಂದ ಭಗವಂತನ ಎಂಟು ಪ್ರತ್ಯೇಕಗೊಂಡ ಶಕ್ತಿಗಳಿಂದ ಐಹಿಕ ಜಗತ್ತಿನ ಇಪ್ಪತ್ತನಾಲ್ಕು ಅಂಶಗಳು ಪ್ರಕಟಗೊಂಡಿವೆ. ಈ ಅಂಶಗಳು ಸಾಂಖ್ಯನಾಸ್ತಿಕ ದರ್ಶನದ ವಸ್ತು ವಿಷಯ. ಅವು ಮೂಲತಃ ಕೃಷ್ಣನ ಶಕ್ತಿಗಳಿಂದ ಉದ್ಭವಿಸಿದವು ಮತ್ತು ಅವನಿಂದ ಪ್ರತ್ಯೇಕವಾದವು. ಆದರೆ ಅಲ್ಪಜ್ಞಾನಿಗಳಾದ ನಾಸ್ತಿಕ ಸಾಂಖ್ಯತತ್ವಶಾಸ್ತ್ರಜ್ಞರಿಗೆ ಕೃಷ್ಣನು ಎಲ್ಲ ಕಾರಣಗಳ ಕಾರಣ ಎಂದು ತಿಳಿದಿಲ್ಲ. ಸಾಂಖ್ಯ ತತ್ವಶಾಸ್ತ್ರದ ಚರ್ಚೆಯ ವಸ್ತು, ಭಗವದ್ಗೀತೆಯಲ್ಲಿ ವರ್ಣಿತವಾಗಿರುವಂತೆ, ಕೃಷ್ಣನ ಬಹಿರಂಗ ಶಕ್ತಿಯ ಅಭಿವ್ಯಕ್ತಿ ಮಾತ್ರ.

## ಶ್ಲೋಕ - 5

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ |**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ||೫||**

**ಅಪರಾ**—ಕೆಳಮಟ್ಟದ; **ಇಯಮ್**—ಈ; **ಇತಃ**—ಇದನ್ನುಳಿದು; **ತು**—ಆದರೆ; **ಅನ್ಯಾಮ್**—ಇನ್ನೊಂದು; **ಪ್ರಕೃತಿಮ್**—ಶಕ್ತಿಯನ್ನು; **ವಿದ್ಧಿ**—ತಿಳಿದುಕೊಳ್ಳಲು ಪ್ರಯತ್ನಿಸು; **ಮೇ**—ನನ್ನ; **ಪರಾಮ್**—ಶ್ರೇಷ್ಠವಾದ; **ಜೀವ ಭೂತಾಮ್**—ಜೀವಗಳನ್ನು ಒಳಗೊಂಡ; ಮಹಾ ಬಾಹೋ—ಮಹಾಬಾಹುವೇ; **ಯಯಾ**—ಯಾವುದರಿಂದ; **ಇದಮ್**—ಈ; **ಧಾರ್ಯತೇ**—ಬಳಸಲ್ಪಟ್ಟಿದೆ ಅಥವಾ ಸ್ವಪ್ರಯೋಜನಕ್ಕಾಗಿ ಉಪಯೋಗಿಸಲ್ಪಟ್ಟಿದೆ; **ಜಗತ್**—ಭೌತಿಕ ಪ್ರಪಂಚವು.

## ಅನುವಾದ

**ಮಹಾಬಾಹುವಾದ ಅರ್ಜುನನೆ, ಇವಲ್ಲದೆ ನನ್ನ ಇನ್ನೂ ಶ್ರೇಷ್ಠವಾದ ಮತ್ತೊಂದು ಶಕ್ತಿಯಿದೆ. ಅದು ಈ ಭೌತಿಕ ಮತ್ತು ಕೆಳಮಟ್ಟದ ಪ್ರಕೃತಿಯ ಸಂಪನ್ಮೂಲಗಳನ್ನು ಬಳಸಿಕೊಳ್ಳುತ್ತಿರುವ ಜೀವಿಗಳಿಂದ ಆದದ್ದು.**

## ಭಾವಾರ್ಥ

ಜೀವಿಗಳು ಪರಮ ಪ್ರಭುವಿನ ಶ್ರೇಷ್ಠ ಪ್ರಕೃತಿಗೆ (ಅಥವಾ ಶಕ್ತಿಗೆ) ಸೇರಿದವರು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿಶಕ್ತಿ ಮತ್ತು ಅಹಂಕಾರ ಈ ಎಂಟು ಅಂಶಗಳಲ್ಲಿ ಪ್ರಕಟವಾಗುವ ಜಡವಸ್ತುವೇ ಕೆಳಮಟ್ಟದ ಶಕ್ತಿ. ಸ್ಥೂಲ (ಭೂಮಿ ಇತ್ಯಾದಿ) ಮತ್ತು ಸೂಕ್ಷ್ಮ (ಮನಸ್ಸು ಇತ್ಯಾದಿ) — ಐಹಿಕ ಪ್ರಕೃತಿಯ ಈ ಎರಡು ರೂಪಗಳು ಕೆಳಮಟ್ಟದ ಶಕ್ತಿಯ ಎರಡು ಉತ್ಪನ್ನಗಳು. ಈ ಕೆಳಮಟ್ಟದ ಶಕ್ತಿಗಳನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಬಳಸಿಕೊಳ್ಳುವ ಜೀವಿಗಳು ಪರಮ ಪ್ರಭುವಿನ ಶ್ರೇಷ್ಠ ಶಕ್ತಿ. ಇಡೀ ಐಹಿಕ ಪ್ರಪಂಚವು ಕೆಲಸ ಮಾಡುವುದು ಈ ಶಕ್ತಿಯಿಂದಲೇ. ವಿಶ್ವದ ಅಭಿವ್ಯಕ್ತಿಯನ್ನು ಶ್ರೇಷ್ಠಶಕ್ತಿಯಾದ ಜೀವಿಯು ಚಾಲನೆಗೊಳಿಸದಿದ್ದರೆ ಅದಕ್ಕೆ ಕೆಲಸಮಾಡುವ ಶಕ್ತಿಯೇ ಇಲ್ಲ. ಯಾವಾಗಲೂ ಶಕ್ತಿಯನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಬಲ್ಲವರು ಶಕ್ತಿಶಾಲಿಗಳು. ಆದುದರಿಂದ

ಜೀವಿಗಳನ್ನು ಯಾವಾಗಲೂ ಭಗವಂತನೇ ನಿಯಂತ್ರಿಸುತ್ತಾನೆ — ಜೀವಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ. ಬುದ್ಧಿಹೀನರು ಯೋಚಿಸುವಂತೆ ಅದಕ್ಕೆ ಎಂದೂ ಸಮಾನಶಕ್ತಿ ಇರುವುದಿಲ್ಲ. ಜೀವಿಗಳಿಗೂ ಭಗವಂತನಿಗೂ ಇರುವ ವ್ಯತ್ಯಾಸವನ್ನು ಶ್ರೀಮದ್ಭಾಗವತದಲ್ಲಿ (10.87.30) ಹೀಗೆ ವರ್ಣಿಸಿದೆ—

ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವಗತಾಸ್
ತರ್ಹಿ ನ ಶಾಸ್ಯತೇತಿ ನಿಯಮೋ ಧ್ರುವ ನೇತರಥಾ |
ಅಜನಿ ಚ ಯನ್ಮಯಂ ತದ್ ಅವಿಮುಚ್ಯ ನಿಯನ್ತೃ ಭವೇತ್
ಸಮಮ್ ಅನುಜಾನತಾಂ ಯದ್ ಅಮತಂ ಮತದುಷ್ಟತಯಾ ||

"ಓ ನಿತ್ಯ ಪರಮ ಪ್ರಭುವೇ! ದೇಹಸ್ಥ ಜೀವಿಗಳು ನಿನ್ನಂತೆ ನಿತ್ಯರೂ ಸರ್ವಾಂತರ್ಯಾಮಿಗಳೂ ಆಗಿದ್ದಲ್ಲಿ ಅವರು ನಿನ್ನ ಹತೋಟಿಯಲ್ಲಿರುತ್ತಿರಲಿಲ್ಲ. ಆದರೆ ಜೀವಿಗಳನ್ನು ನಿನ್ನ ಸೂಕ್ಷ್ಮ ಶಕ್ತಿಗಳೆಂದು ಪರಿಗಣಿಸಿದರೆ ಅವರು ಕೂಡಲೇ ನಿನ್ನ ಪರಮಾಧಿಕಾರಕ್ಕೆ ಒಳಗಾಗುತ್ತಾರೆ. ಆದುದರಿಂದ ನಿಜವಾದ ಮುಕ್ತಿಯನ್ನು ಪಡೆಯಲು ಜೀವಿಗಳು ನಿನ್ನ ನಿಯಂತ್ರಣಕ್ಕೆ ಶರಣಾಗುವುದು ಅಗತ್ಯ. ಆ ಶರಣಾಗತಿಯು ಅವರಿಗೆ ಸುಖವನ್ನು ತರುತ್ತದೆ. ಆ ಸಹಜ ಸ್ಥಿತಿಯಲ್ಲಿ ಮಾತ್ರ ಅವರು ನಿಯಂತ್ರಕರಾಗುವುದು ಸಾಧ್ಯ. ಆದುದರಿಂದ, ಮಿತವಾದ ಜ್ಞಾನ ಪಡೆದು ದೇವರು ಮತ್ತು ಜೀವಿಗಳು ಎಲ್ಲ ರೀತಿಗಳಲ್ಲಿಯೂ ಸರಿಸಮಾನರು ಎನ್ನುವ ಅದ್ವೈತ ಸಿದ್ಧಾಂತ ಪ್ರತಿಪಾದಕರು ವಾಸ್ತವವಾಗಿ ತಪ್ಪಾದ ಮತ್ತು ಕಲುಷಿತವಾದ ಅಭಿಪ್ರಾಯವನ್ನು ಅನುಸರಿಸುತ್ತಾರೆ."

ಪರಮ ಪ್ರಭುವಾದ ಕೃಷ್ಣನೊಬ್ಬನೇ ನಿಯಂತ್ರಿಸುವವನು. ಎಲ್ಲ ಜೀವಾತ್ಮರೂ ಅವನ ಆಜ್ಞಾಬದ್ಧರು. ಈ ಜೀವಾತ್ಮರು ಅವನ ಶ್ರೇಷ್ಠ ಶಕ್ತಿ. ಏಕೆಂದರೆ ಅವರ ಅಸ್ತಿತ್ವದ ಗುಣವು ಪರಮ ಪ್ರಭುವಿನ ಗುಣವೇ. ಆದರೆ ಶಕ್ತಿಯ ಪ್ರಮಾಣದಲ್ಲಿ ಅವರು ಎಂದೂ ಭಗವಂತನಿಗೆ ಸಮರಲ್ಲ. ಸ್ಥೂಲವೂ ಸೂಕ್ಷ್ಮವೂ ಆದ ಕೆಳಮಟ್ಟದ ಶಕ್ತಿಯನ್ನು (ಜಡವಸ್ತುವನ್ನು) ಬಳಸಿಕೊಳ್ಳುವಾಗ ಶ್ರೇಷ್ಠಶಕ್ತಿಯು (ಜೀವಾತ್ಮವು) ತನ್ನ ನಿಜವಾದ ಆಧ್ಯಾತ್ಮಿಕ ಮನಸ್ಸನ್ನೂ ಬುದ್ಧಿಶಕ್ತಿಯನ್ನೂ ಮರೆತು ಬಿಡುತ್ತದೆ. ಈ ಮರೆವಿಗೆ ಕಾರಣ, ಜೀವಾತ್ಮದ ಮೇಲೆ ಜಡವಸ್ತುವಿನ ಪ್ರಭಾವ. ಆದರೆ ಮಾಯಾ ಐಹಿಕ ಶಕ್ತಿಯ ಪ್ರಭಾವದಿಂದ ಜೀವಿಯು ಬಿಡುಗಡೆಯನ್ನು ಹೊಂದಿದಾಗ ಅದು ಮುಕ್ತಿಯನ್ನು ಪಡೆಯುತ್ತದೆ. ಅಹಂಕಾರವು ಭೌತಿಕ ಮಾಯೆಯ ಪ್ರಭಾವದಿಂದ, "ನಾನು ಜಡವಸ್ತು, ಐಹಿಕ ಗಳಿಕೆಯೆಲ್ಲ ನನ್ನದು", ಎಂದು ಯೋಚಿಸುತ್ತದೆ. ಅದಕ್ಕೆ ತನ್ನ ಸಹಜ ಸ್ವರೂಪದ ಅರಿವಾದಾಗ, ತಾನು ಎಲ್ಲ ರೀತಿಗಳಲ್ಲೂ ಭಗವಂತನೊಡನೆ ಒಂದಾಗುತ್ತೇನೆ ಎನ್ನುವ ಭಾವನೆಯೂ ಸೇರಿದಂತೆ ಎಲ್ಲ ಐಹಿಕ ಯೋಚನೆಗಳಿಂದಲೂ ಮುಕ್ತವಾಗುತ್ತದೆ. ಜೀವಿಯು ಕೃಷ್ಣನ ಹಲವು ಶಕ್ತಿಗಳಲ್ಲಿ ಒಂದು ಮಾತ್ರ. ಈ ಶಕ್ತಿಯು ಐಹಿಕ ಕಲ್ಮಷದಿಂದ ಬಿಡುಗಡೆಯಾದಾಗ ಅದು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಪಡೆಯುತ್ತದೆ ಅಥವಾ ಮುಕ್ತವಾಗುತ್ತದೆ. ಗೀತೆಯು ಇದನ್ನು ದೃಢಪಡಿಸುತ್ತದೆ ಎಂದು ನಾವು ನಿರ್ಣಯಿಸಬಹುದು.

## ಶ್ಲೋಕ - 6

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ |
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ||೬||

**ಏತತ್**—ಈ ಎರಡು ಪ್ರಕೃತಿಗಳೇ; **ಯೋನೀನಿ**—ಜನ್ಮದ ಆಕರವಾಗಿರುವಂತಹವು; **ಭೂತಾನಿ**—ಸೃಷ್ಟಿಯಾದ ಎಲ್ಲ ಜೀವಿಗಳು; **ಸರ್ವಾಣಿ**—ಎಲ್ಲ; **ಇತಿ**—ಎಂದು; ಉಪಧಾರಯ—ತಿಳಿದುಕೊ; **ಅಹಮ್**—ನಾನು; **ಕೃತ್ಸ್ನಸ್ಯ**—ಎಲ್ಲವನ್ನೊಳಗೊಂಡ; **ಜಗತಃ**—ಪ್ರಪಂಚದ; **ಪ್ರಭವಃ**—ಅಭಿವ್ಯಕ್ತಿಯ ಆಕರ; **ಪ್ರಲಯಃ**—ಲಯವೂ; ತಥಾ—ಹಾಗೆಯೇ.

## ಅನುವಾದ

**ಸೃಷ್ಟಿಯಾದ ಎಲ್ಲ ಜೀವಿಗಳಿಗೂ ಈ ಎರಡು ಪ್ರಕೃತಿಗಳೇ ಮೂಲ. ಈ ಜಗತ್ತಿನಲ್ಲಿ ಭೌತಿಕವಾದ ಮತ್ತು ಆಧ್ಯಾತ್ಮಿಕವಾದ ಎಲ್ಲದರ ಮೂಲವೂ ಅಂತ್ಯವೂ ನಾನೇ ಎಂದು ತಿಳಿದುಕೊ.**

## ಭಾವಾರ್ಥ

ಅಸ್ತಿತ್ವದಲ್ಲಿರುವುದೆಲ್ಲ ಜಡ ಮತ್ತು ಚೇತನಗಳಿಂದ ಉತ್ಪನ್ನವಾದದ್ದು. ಚೇತನವು ಸೃಷ್ಟಿಯ ಮೂಲ ಕ್ಷೇತ್ರ. ಚೇತನವು ಜಡವಸ್ತುವನ್ನು ಸೃಷ್ಟಿಸುತ್ತದೆ. ಚೇತನವು ಜಡವಸ್ತುವಿನ ಬೆಳವಣಿಗೆಯ ಒಂದು ನಿರ್ದಿಷ್ಟ ಘಟ್ಟದಲ್ಲಿ ಸೃಷ್ಟಿಯಾದದ್ದಲ್ಲ. ಈ ಐಹಿಕ ಜಗತ್ತು ಆಧ್ಯಾತ್ಮಿಕ ಚೈತನ್ಯದ ಆಧಾರದ ಮೇಲೆಯೇ ವ್ಯಕ್ತವಾದದ್ದು. ಜಡವಸ್ತುವಿನಿಂದಾದ ದೇಹವು ಬೆಳೆಯುವುದಕ್ಕೆ ಕಾರಣ ಜಡವಸ್ತುವಿನಲ್ಲಿ ಚೇತನವಿರುವುದೇ. ಮಗುವು ಕ್ರಮಕ್ರಮವಾಗಿ ಬಾಲ್ಯ ಮತ್ತು ಯೌವನಗಳಿಗೆ ಬೆಳೆಯುತ್ತದೆ. ಇದಕ್ಕೆ ಕಾರಣ ಶ್ರೇಷ್ಠಶಕ್ತಿಯಾದ ಆತ್ಮವು ಇರುವುದೇ. ಇದೇ ರೀತಿಯಲ್ಲಿ ಈ ಬೃಹತ್ ವಿಶ್ವದ ಅಭಿವ್ಯಕ್ತಿಯು ಬೆಳೆಯುವುದು ಪರಮಾತ್ಮನಾದ ವಿಷ್ಣುವು ಇರುವುದರಿಂದ. ಆದುದರಿಂದ ಈ ಬೃಹದಾಕಾರದ ವಿಶ್ವದ ಆವಿರ್ಭಾವಕ್ಕೆ ಒಂದುಗೂಡುವ ಚೇತನವೂ ಜಡವಸ್ತುವೂ ಮೂಲತಃ ಭಗವಂತನ ಎರಡು ಶಕ್ತಿಗಳು. ಆದುದರಿಂದ ಎಲ್ಲ ವಸ್ತುಗಳ ಮೂಲ ಕಾರಣನು ಭಗವಂತನೇ. ಭಗವಂತನ ವಿಭಿನ್ನಾಂಶವಾದ ಜೀವಿಯು ದೊಡ್ಡ ಗಗನ ಚುಂಬಿಕಟ್ಟಡ, ದೊಡ್ಡ ಕಾರ್ಖಾನೆ ಮತ್ತು ದೊಡ್ಡ ನಗರ ಎಲ್ಲಕ್ಕೂ ಕಾರಣನಾಗಬಹುದು. ಆದರೆ ಅವನು ದೊಡ್ಡ ವಿಶ್ವದ ಕಾರಣನಾಗಲಾರನು. ಬೃಹತ್ತಾದ ವಿಶ್ವಕ್ಕೆ ಕಾರಣ ಬೃಹತ್ತಾದ ಆತ್ಮ ಅಥವಾ ಪರಮಾತ್ಮ. ಪರಮೋನ್ನತನಾದ ಕೃಷ್ಣನು ದೊಡ್ಡ ಮತ್ತು ಸಣ್ಣ ಆತ್ಮಗಳೆರಡಕ್ಕೂ ಕಾರಣನು. ಆದುದರಿಂದ ಪರಮೋನ್ನತನಾದ ಕೃಷ್ಣನೇ ಎಲ್ಲ ಕಾರಣಗಳ ಮೂಲಕಾರಣನು. ಇದನ್ನು ಕಠ ಉಪನಿಷತ್ತು (2.2.13) ಹೀಗೆ ದೃಢಪಡಿಸಿದೆ — **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್.**

## ಶ್ಲೋಕ - 7

**ಮತ್ತಃ ಪರತರಂ ನಾನ್ಯತ್ ಕಿಞ್ಚಿದಸ್ತಿ ಧನಞ್ಜಯ |**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ||೭||**

**ಮತ್ತಃ**—ನನಗಿಂತ; **ಪರತರಮ್**—ಶ್ರೇಷ್ಠತರವಾದುದು; **ನ**—ಇಲ್ಲ; **ಅನ್ಯತ್ ಕಿಞ್ಚಿತ್**—ಬೇರೆ ಯಾವುದೂ; **ಅಸ್ತಿ**—ಇದೆ; **ಧನಞ್ಜಯ**—ಧನಂಜಯನೇ; **ಮಯಿ**—ನನ್ನಲ್ಲಿ; **ಸರ್ವಮ್**—ಎಲ್ಲವೂ; **ಇದಮ್**—ಈ; **ಪ್ರೋತಮ್**—ಪೋಣಿಸಲ್ಪಟ್ಟಿವೆ; **ಸೂತ್ರೇ**—ದಾರದಲ್ಲಿ; **ಮಣಿಗಣಾಃ**—ಮುತ್ತುಗಳ; **ಇವ**—ಹಾಗೆ.

## ಅನುವಾದ

**ಧನಂಜಯ, ನನಗಿಂತ ಶ್ರೇಷ್ಠವಾದ ಸತ್ಯವಿಲ್ಲ. ಮಣಿಗಳನ್ನು ದಾರದಲ್ಲಿ ಪೋಣಿಸಿದ ಹಾಗೆ ಎಲ್ಲವೂ ನನ್ನನ್ನೇ ಅವಲಂಬಿಸಿದೆ.**

## ಭಾವಾರ್ಥ

ಪರಮ ಪರಾತ್ಪರ ಸತ್ಯವು ಸಾಕಾರ ರೂಪವೇ ಅಥವಾ ನಿರಾಕಾರ ರೂಪವೇ ಎನ್ನುವ ವಿಷಯದಲ್ಲಿ ಸಾಮಾನ್ಯವಾಗಿ ವಿವಾದವಿದೆ. ಭಗವದ್ಗೀತೆಯ ಮಟ್ಟಿಗೆ ಪರಾತ್ಪರ ಸತ್ಯವು ದೇವೋತ್ತಮ ಪುರುಷನಾದ ಶ್ರೀಕೃಷ್ಣನು. ಈ ಅಂಶವನ್ನು ಅದು ಹೆಚ್ಚೆ ಹೆಚ್ಚೆಗೂ ದೃಢಪಡಿಸಿದೆ. ಅದರಲ್ಲಿಯೂ ಈ ಶ್ಲೋಕದಲ್ಲಿ ಪರಾತ್ಪರ ಸತ್ಯವು ಒಬ್ಬ ವ್ಯಕ್ತಿ ಎನ್ನುವುದನ್ನು ಒತ್ತಿ ಹೇಳಿದೆ. ದೇವೋತ್ತಮ ಪರಮ ಪುರುಷನೇ ಪರಮ ಪರಾತ್ಪರ ಸತ್ಯ ಎಂದೇ ಬ್ರಹ್ಮಸಂಹಿತೆಯು ಸಾರಿದೆ — **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನನ್ದವಿಗ್ರಹಃ,** ಎಂದರೆ ಪರಮ ಪರಾತ್ಪರ ಸತ್ಯನಾದ ದೇವೋತ್ತಮ ಪುರುಷನು ಶ್ರೀಕೃಷ್ಣ, ಅವನೇ ಆದಿಪುರುಷ. ಅವನೇ ಎಲ್ಲ ಆನಂದದ ಭಂಡಾರವಾದ ಗೋವಿಂದ ಮತ್ತು ಪೂರ್ಣ ಜ್ಞಾನಾನಂದದ ನಿತ್ಯ ಸ್ವರೂಪ. ಪರಮ ಪುರುಷನೇ ಪರಾತ್ಪರ ಸತ್ಯವು, ಎಲ್ಲ ಕಾರಣಗಳ ಕಾರಣನು ಎನ್ನುವ ವಿಷಯದಲ್ಲಿ ಈ ಆಚಾರ್ಯರು ಸಂಶಯಕ್ಕೆ ಎಡೆಯನ್ನೇ ಕೊಡುವುದಿಲ್ಲ. ಆದರೆ ನಿರಾಕಾರವಾದಿಗಳು ಶ್ವೇತಾಶ್ವತರ ಉಪನಿಷತ್ತಿನಲ್ಲಿ (3.10) ಹೇಳಿರುವ ವೇದದ ಪಾಠದ ಆಧಾರದ ಮೇಲೆ ಹೀಗೆ ವಾದಿಸುತ್ತಾರೆ — **ತತೋ ಯದ್ ಉತ್ತರತರಂ ತದ್ ಅರೂಪಮ್ ಅನಾಮಯಮ್ / ಯ ಏತದ್ ವಿದುರ್ ಅಮೃತಾಸ್ ತೇ ಭವಂತಿ ಅಥೇತರೇ ದುಃಖಮ್ ಏವಾಪಿಯನ್ತಿ.** "ಐಹಿಕ ಜಗತ್ತಿನಲ್ಲಿ, ವಿಶ್ವದಲ್ಲಿರುವ ಆದಿ ಜೀವಿಯಾದ ಬ್ರಹ್ಮನನ್ನು ದೇವತೆಗಳು, ಮನುಷ್ಯರು ಮತ್ತು ಕೆಳವರ್ಗದ ಪ್ರಾಣಿಗಳಲ್ಲಿ ಅತಿ ಶ್ರೇಷ್ಠ ಎಂದು ತಿಳಿಯುತ್ತಾರೆ. ಆದರೆ ಬ್ರಹ್ಮನ ಆಚೆ ದಿವ್ಯನಿದ್ದಾನೆ. ಅವನಿಗೆ ಭೌತಿಕ ರೂಪವಿಲ್ಲ. ಅವನು ಎಲ್ಲ ಐಹಿಕ ಕಲ್ಮಷದ ಅಂಟಿನಿಂದ ಮುಕ್ತನು. ಯಾರು ಅವನನ್ನು ಅರಿಯುತ್ತಾರೋ ಅವರು ಅಲೌಕಿಕರಾಗುತ್ತಾರೆ. ಆದರೆ ಅವನನ್ನು ಅರಿಯದವರು ಐಹಿಕ ಜಗತ್ತಿನ ಕ್ಲೇಶಗಳನ್ನು ಅನುಭವಿಸುತ್ತಾರೆ."

ನಿರಾಕಾರವಾದಿಯು **ಅರೂಪಮ್** ಎನ್ನುವ ಶಬ್ದಕ್ಕೆ ಹೆಚ್ಚು ಒತ್ತು ಕೊಡುತ್ತಾನೆ. ಆದರೆ ಈ **ಅರೂಪಮ್** ನಿರಾಕಾರವಲ್ಲ. ಅದು ಬ್ರಹ್ಮಸಂಹಿತೆಯನ್ನು ಉದ್ಧರಿಸಿ ಮೇಲೆ ಹೇಳಿದ ಮಾತುಗಳಲ್ಲಿ ವರ್ಣಿಸಿದಂತೆ, ನಿತ್ಯಾನಂದ ಸ್ವರೂಪದ ದಿವ್ಯರೂಪವನ್ನು ವರ್ಣಿಸುತ್ತದೆ. ಶ್ವೇತಾಶ್ವತರ ಉಪನಿಷತ್ತಿನ (3.8.9) ಇತರ ಶ್ಲೋಕಗಳು ಇದನ್ನು ಹೀಗೆ ಸಮರ್ಥಿಸುತ್ತವೆ —

**ವೇದಾಹಮ್ ಏತಂ ಪುರುಷಂ ಮಹಾನ್ತಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್ |**
**ತಮ್ ಏವ ವಿದ್ವಾನ್ ಅತಿ ಮೃತ್ಯುಮ್ ಏತಿ**
**ನಾನ್ಯಃ ಪನ್ಥಾ ವಿದ್ಯತೇಽಯನಾಯ ||**

**ಯಸ್ಮಾತ್ ಪರಂ ನಾಪರಮ್ ಅಸ್ತಿ ಕಿಂಚಿದ್**
**ಯಸ್ಮಾನ್ ನಾಣೀಯೋ ನೋ ಜ್ಯಾಯೋಽಸ್ತಿ ಕಿಂಚಿತ್ |**

**ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತಿ ಏಕಸ್**
**ತೇನೇದಂ ಪೂರ್ಣಂ ಪುರುಷೇಣ ಸರ್ವಮ್ ||**

"ತಮಸ್ಸಿನ ಎಲ್ಲ ಐಹಿಕ ಪರಿಕಲ್ಪನೆಗಳನ್ನು ಮೀರಿದ ಆ ದೇವೋತ್ತಮ ಪರಮ ಪುರುಷನನ್ನು ನಾನು ಬಲ್ಲೆ. ಅವನನ್ನು ಅರಿತವನು ಮಾತ್ರ ಹುಟ್ಟುಸಾವುಗಳ ಬಂಧನದಿಂದ ಬಿಡಿಸಿಕೊಳ್ಳಬಲ್ಲ. ಮೋಕ್ಷಕ್ಕೆ ಪರಮ ಪುರುಷನ ಈ ಅರಿವನ್ನು ಬಿಟ್ಟು ಬೇರೆ ದಾರಿಯೇ ಇಲ್ಲ.

"ಆ ಪರಮ ಪುರುಷನೇ ಅತ್ಯಂತ ಪರಮೋನ್ನತನು. ಆದ್ದರಿಂದ ಅವನಿಗಿಂತ ಶ್ರೇಷ್ಠವಾದ ಸತ್ಯವಿಲ್ಲ. ಅವನು ಅತ್ಯಂತ ಸಣ್ಣದಾದುದಕ್ಕಿಂತ ಸಣ್ಣವನು, ಬೃಹತ್ತಮವಾದುದಕ್ಕಿಂತ ಬೃಹತ್ತಾದವನು. ಆತನು ಮೌನವೃಕ್ಷದಂತೆ ನೆಲೆಯಾಗಿರುತ್ತಾನೆ, ದಿವ್ಯಾಕಾಶವನ್ನು ಬೆಳಗುತ್ತಾನೆ ಮತ್ತು ಮರವು ತನ್ನ ಬೇರುಗಳನ್ನು ಹರಡುವಂತೆ ಆತನು ವಿಶಾಲವಾದ ತನ್ನ ಶಕ್ತಿಗಳನ್ನು ಹರಡುತ್ತಾನೆ."

ಈ ಶ್ಲೋಕಗಳಿಂದ ದೇವೋತ್ತಮ ಪರಮ ಪುರುಷನು ಪರಮ ಪರಾತ್ಪರ ಸತ್ಯ, ಐಹಿಕವೂ ಆಧ್ಯಾತ್ಮಿಕವೂ ಆದ ಅವನ ವಿವಿಧ ಶಕ್ತಿಗಳಲ್ಲಿ ಆತನು ಸರ್ವವ್ಯಾಪಕನು ಎಂದು ನಿರ್ಣಯಿಸಬಹುದು.

## ಶ್ಲೋಕ - 8

**ರಸೋऽಹಮಪ್ಸು ಕೌನ್ತೇಯ ಪ್ರಭಾಸ್ಮಿ ಶಶಿಸೂರ್ಯಯೋಃ |**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ||೮||**

**ರಸಃ**—ರುಚಿಯು; **ಅಹಮ್**—ನಾನು; **ಅಪ್ಸು**—ನೀರಿನಲ್ಲಿ; **ಕೌನ್ತೇಯ**—ಕುಂತೀ ಪುತ್ರನೇ; **ಪ್ರಭಾ**—ಬೆಳಕು; **ಅಸ್ಮಿ**—ಆಗಿದ್ದೇನೆ; **ಶಶಿ ಸೂರ್ಯಯೋಃ**—ಚಂದ್ರ ಮತ್ತು ಸೂರ್ಯರಲ್ಲಿ; **ಪ್ರಣವಃ**—ಅ, ಉ, ಮ ಎಂಬ ಮೂರು ಅಕ್ಷರಗಳು; **ಸರ್ವ**—ಎಲ್ಲ; **ವೇದೇಷು**—ವೇದಗಳಲ್ಲಿ; **ಶಬ್ದಃ**—ಶಬ್ದ ಕಂಪನವು; **ಖೇ**—ಆಕಾಶದಲ್ಲಿ; **ಪೌರುಷಮ್**—ಸಾಮರ್ಥ್ಯವು; **ನೃಷು**—ಮಾನವರಲ್ಲಿ.

## ಅನುವಾದ

**ಹೇ ಅರ್ಜುನ, ನಾನು ನೀರಿನಲ್ಲಿ ರುಚಿಯೂ ಸೂರ್ಯಚಂದ್ರರಲ್ಲಿ ಬೆಳಕೂ ವೇದದ ಮಂತ್ರಗಳಲ್ಲಿ ಓಂಕಾರವೂ ಆಗಿದ್ದೇನೆ. ನಾನು ಆಕಾಶದಲ್ಲಿ ಶಬ್ದವೂ ಪುರುಷರಲ್ಲಿ ಪೌರುಷವೂ ಆಗಿದ್ದೇನೆ.**

## ಭಾವಾರ್ಥ

ತನ್ನ ವಿವಿಧ ಐಹಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳಿಂದ ಭಗವಂತನು ಹೇಗೆ ಸರ್ವವ್ಯಾಪಿ ಎಂದು ಈ ಶ್ಲೋಕವು ವಿವರಿಸುತ್ತದೆ. ಪರಮ ಪ್ರಭುವನ್ನು ಮೊದಲು ಅವನ ವಿವಿಧ ಶಕ್ತಿಗಳಿಂದ ಗ್ರಹಿಸಬಹುದು. ಇದು ನಿರಾಕಾರವಾಗಿ ಅವನನ್ನು ಗ್ರಹಿಸುವ ರೀತಿ. ಸೂರ್ಯನಲ್ಲಿರುವ ದೇವತೆಯು ವ್ಯಕ್ತಿಯಾಗಿದ್ದು ಸರ್ವವ್ಯಾಪಿಯಾದ ಅವನ ಶಕ್ತಿ ಸೂರ್ಯಪ್ರಭೆಯಿಂದ ಅವನನ್ನು ಗ್ರಹಿಸುವ ಹಾಗೆ ಭಗವಂತನು ತನ್ನ ನಿತ್ಯನಿವಾಸದಲ್ಲಿದ್ದರೂ ಅವನ ಸರ್ವವ್ಯಾಪಿಯಾಗಿ ಹರಡಿಕೊಂಡ ಶಕ್ತಿಗಳಿಂದ ಗ್ರಹಿಸಲ್ಪಡುತ್ತಾನೆ. ನೀರಿನ ರುಚಿಯು ನೀರಿನ ಕ್ರಿಯಾಶಾಲಿ ತತ್ವ. ಯಾರೂ ಸಮುದ್ರದ ನೀರನ್ನು ಕುಡಿಯಲು ಇಷ್ಟಪಡುವುದಿಲ್ಲ. ಏಕೆಂದರೆ ನೀರಿನ ಶುದ್ಧ ರುಚಿಯೊಡನೆ

ಉಪ್ಪು ಸೇರಿರುತ್ತದೆ. ನೀರಿನ ಆಕರ್ಷಣೆಯು ಅದರ ರುಚಿಯ ಪರಿಶುದ್ಧತೆಯನ್ನು ಅವಲಂಬಿಸಿರುತ್ತದೆ. ಈ ಶುದ್ಧ ರುಚಿಯು ಭಗವಂತನ ಶಕ್ತಿಗಳಲ್ಲಿ ಒಂದು. ನಿರಾಕಾರವಾದಿಯು ನೀರಿನಲ್ಲಿ ಭಗವಂತನು ಇರುವುದನ್ನು ಅದರ ರುಚಿಯಿಂದ ಕಾಣುತ್ತಾನೆ. ಸಾಕಾರವಾದಿಯೂ ಸಹ ಭಗವಂತನು ದಯಮಾಡಿ ಮನುಷ್ಯನ ಬಾಯಾರಿಕೆಯನ್ನು ತಣಿಸಲು ರುಚಿಯಾದ ನೀರನ್ನು ಅನುಗ್ರಹಿಸಿದುದಕ್ಕಾಗಿ ಭಗವಂತನನ್ನು ಕೀರ್ತಿಸುತ್ತಾನೆ. ಪರಮೋನ್ನತನನ್ನು ಕಂಡುಕೊಳ್ಳುವ ರೀತಿಯು ಇದು. ವಾಸ್ತವವಾಗಿ ಹೇಳಬೇಕೆಂದರೆ ಸಾಕಾರವಾದಕ್ಕೂ ನಿರಾಕಾರವಾದಕ್ಕೂ ಘರ್ಷಣೆಯಿಲ್ಲ. ಭಗವಂತನನ್ನು ಬಲ್ಲವನಿಗೆ ಪ್ರತಿಯೊಂದರಲ್ಲೂ ಏಕಕಾಲದಲ್ಲಿ ನಿರಾಕಾರ ಕಲ್ಪನೆಯೂ ಸಾಕಾರ ಕಲ್ಪನೆಯೂ ಇವೆ ಮತ್ತು ಪರಸ್ಪರ ವಿರೋಧವೇನೂ ಇಲ್ಲ ಎನ್ನುವುದು ತಿಳಿದಿರುತ್ತದೆ. ಆದುದರಿಂದ ಚೈತನ್ಯ ಮಹಾಪ್ರಭುಗಳು ತಮ್ಮ ಭವ್ಯ ಸಿದ್ಧಾಂತವನ್ನು ಸ್ಥಾಪಿಸಿದರು; ಅದು **ಅಚಿನ್ತ್ಯ ಭೇದ** ಮತ್ತು **ಅಭೇದ ತತ್ತ್ವ.** ಏಕಕಾಲದಲ್ಲಿ ಏಕತೆ ಮತ್ತು ಭೇದ.

ಬ್ರಹ್ಮಜ್ಯೋತಿಯು ಭಗವಂತನ ನಿರಾಕಾರ ಪ್ರಭೆ. ಸೂರ್ಯ ಮತ್ತು ಚಂದ್ರರ ಬೆಳಕು ಮೂಲತಃ ಬ್ರಹ್ಮಜ್ಯೋತಿಯಿಂದ ಹೊರಸೂಸುತ್ತವೆ. ವೇದದ ಪ್ರತಿಯೊಂದು ಶ್ಲೋಕವೂ ಪ್ರಣವ ಅಥವಾ ಓಂಕಾರದ ದಿವ್ಯನಾದದಿಂದ ಪ್ರಾರಂಭವಾಗುತ್ತದೆ. ಇದು ಭಗವಂತನನ್ನು ಸಂಬೋಧಿಸುತ್ತದೆ. ಪರಮೋನ್ನತನಾದ ಶ್ರೀಕೃಷ್ಣನನ್ನು ಅವನ ಅಸಂಖ್ಯಾತ ಹೆಸರುಗಳಿಂದ ಸಂಬೋಧಿಸಲು ನಿರಾಕಾರವಾದಿಗಳು ಬಹಳ ಹೆದರಿಕೊಳ್ಳುತ್ತಾರೆ. ಅವರು ಓಂಕಾರ ದಿವ್ಯಶಬ್ದವನ್ನು ಉಚ್ಚರಿಸಲು ಬಯಸುತ್ತಾರೆ. ಆದರೆ ಓಂಕಾರವು ಕೃಷ್ಣನ ನಾದಸಂಕೇತವೆನ್ನುವುದನ್ನು ಅವರು ಅರ್ಥಮಾಡಿಕೊಳ್ಳುವುದಿಲ್ಲ. ಕೃಷ್ಣಪ್ರಜ್ಞೆಯ ವ್ಯಾಪ್ತಿಯು ಎಲ್ಲೆಡೆಯೂ ಹಬ್ಬಿರುತ್ತದೆ. ಕೃಷ್ಣಪ್ರಜ್ಞೆಯನ್ನು ಅರಿತವನು ಧನ್ಯನು. ಕೃಷ್ಣನನ್ನು ತಿಳಿಯದವರು ಮಾಯೆಯಲ್ಲಿದ್ದಾರೆ. ಆದುದರಿಂದ ಕೃಷ್ಣಜ್ಞಾನವೇ ಮುಕ್ತಿ ಮತ್ತು ಅವನನ್ನು ತಿಳಿಯದಿರುವುದೇ ಬಂಧನ.

## ಶ್ಲೋಕ - 9

**ಪುಣ್ಯೋ ಗನ್ಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥**

**ಪುಣ್ಯಃ**—ಮೂಲ; **ಗನ್ಧಃ**—ಸುವಾಸನೆಯು; **ಪೃಥಿವ್ಯಾಮ್**—ಭೂಮಿಯಲ್ಲಿ; **ಚ**—ಕೂಡ; **ತೇಜಃ**—ಶಾಖವು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ವಿಭಾವಸೌ**—ಅಗ್ನಿಯಲ್ಲಿ; **ಜೀವನಮ್**—ಜೀವನವು; **ಸರ್ವ**—ಎಲ್ಲ; **ಭೂತೇಷು**—ಜೀವಿಗಳಲ್ಲಿ; **ತಪಃ**—ತಪಸ್ಸು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ತಪಸ್ವಿಷು**—ತಪಸ್ವಿಗಳಲ್ಲಿ.

## ಅನುವಾದ

**ನಾನು ಭೂಮಿಯ ಮೂಲ ಪರಿಮಳ. ನಾನು ಅಗ್ನಿಯಲ್ಲಿ ತೇಜಸ್ಸು. ಎಲ್ಲ ಜೀವಿಗಳಲ್ಲಿ ನಾನೇ ಜೀವ, ಎಲ್ಲ ತಪಸ್ವಿಗಳ ತಪಸ್ಸೂ ನಾನೇ.**

### ಭಾವಾರ್ಥ

**ಪುಣ್ಯ** ಎಂದರೆ ಕೊಳೆಯದಿರುವುದು; ಪುಣ್ಯವು ಮೂಲವಾಗಿದೆ. ಐಹಿಕ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವಿಗೂ ಒಂದು ಕಂಪು ಅಥವಾ ಸುವಾಸನೆ ಇರುತ್ತದೆ — ಒಂದು ಹೂವಿನಲ್ಲಿ ಅಥವಾ ಭೂಮಿಯಲ್ಲಿ, ನೀರಿನಲ್ಲಿ, ಅಗ್ನಿಯಲ್ಲಿ, ವಾಯು ಮೊದಲಾದವುಗಳಲ್ಲಿ ಇರುವಂತೆ. ನಿರ್ಮಲವಾದ ಸುಗಂಧ, ಎಲ್ಲವನ್ನೂ ವ್ಯಾಪಿಸುವ ಮೂಲ ಸುಗಂಧ, ಕೃಷ್ಣ. ಹಾಗೆಯೇ, ಪ್ರತಿಯೊಂದು ವಸ್ತುವಿಗೂ ಒಂದು ಮೂಲ ರುಚಿ ಇರುತ್ತದೆ. ರಸಾಯನಗಳನ್ನು ಬೆರೆಸಿ ಈ ರುಚಿಯನ್ನು ಬದಲಾಯಿಸಬಹುದು. ಹೀಗೆ ಪ್ರತಿಯೊಂದು ಮೂಲ ವಸ್ತುವಿಗೂ ಒಂದು ವಾಸನೆ, ಒಂದು ಕಂಪು, ಒಂದು ರುಚಿ ಇರುತ್ತದೆ. **ವಿಭಾವಸು** ಎಂದರೆ ಅಗ್ನಿ. ಅಗ್ನಿ ಇಲ್ಲದೆ ನಾವು ಕಾರ್ಖಾನೆಗಳನ್ನು ನಡೆಸಲಾರೆವು, ಅಡಿಗೆಯನ್ನು ಮಾಡಲಾರೆವು. ಆ ಅಗ್ನಿಯೇ ಕೃಷ್ಣ. ಅಗ್ನಿಯಲ್ಲಿನ ತೇಜಸ್ಸು ಕೃಷ್ಣ. ವೇದ ವೈದ್ಯದ ಪ್ರಕಾರ, ಅಜೀರ್ಣಕ್ಕೆ ಹೊಟ್ಟೆಯೊಳಗೆ ಶಾಖವು ಕಡಮೆಯಾಗುವುದೇ ಕಾರಣ. ಆದುದರಿಂದ ಜೀರ್ಣಶಕ್ತಿಗೂ ಅಗ್ನಿಯು ಅಗತ್ಯ. ಕೃಷ್ಣಪ್ರಜ್ಞೆಯಲ್ಲಿ ಭೂಮಿ, ನೀರು, ಅಗ್ನಿ, ವಾಯು ಮತ್ತು ಪ್ರತಿಯೊಂದು ಕ್ರಿಯಾಶೀಲ ತತ್ವವೂ, ಎಲ್ಲ ರಾಸಾಯನಿಕಗಳೂ ಮತ್ತು ಎಲ್ಲ ಐಹಿಕ ಅಂಶಗಳೂ ಕೃಷ್ಣನಿಂದ ಆದುವು ಎನ್ನುವ ಅರಿವು ನಮಗೆ ಬರುತ್ತದೆ. ಮನುಷ್ಯನ ಆಯುಸ್ಸನ್ನು ನಿರ್ಧರಿಸುವವನೂ ಕೃಷ್ಣನೇ. ಕೃಷ್ಣನ ಕೃಪೆಯಿಂದ ಮನುಷ್ಯನು ತನ್ನ ಆಯುಸ್ಸನ್ನು ಹೆಚ್ಚಿಸಿಕೊಳ್ಳಬಹುದು ಅಥವಾ ಕಡಮೆಮಾಡಿಕೊಳ್ಳಬಹುದು. ಆದುದರಿಂದ ಕೃಷ್ಣಪ್ರಜ್ಞೆಯು ಪ್ರತಿಯೊಂದು ರಂಗದಲ್ಲಿಯೂ ಕ್ರಿಯಾಶಾಲಿಯಾಗಿರುತ್ತದೆ.

## ಶ್ಲೋಕ - 10

**ಬೀಜ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ |**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ||೧೦||**

**ಬೀಜಮ್**—ಬೀಜವು; **ಮಾಮ್**—ನನ್ನನ್ನು; **ಸರ್ವ ಭೂತಾನಾಮ್**—ಜೀವಿಗಳೆಲ್ಲರ; **ವಿದ್ಧಿ**—ಎಂದು ಅರಿಯಲು ಪ್ರಯತ್ನಿಸು; **ಪಾರ್ಥ**—ಪೃಥೆಯ ಮಗನೇ; **ಸನಾತನಮ್**—ಮೂಲವಾದ, ಶಾಶ್ವತವಾದ; **ಬುದ್ಧಿಃ**—ಬುದ್ಧಿಯು; **ಬುದ್ಧಿಮತಾಮ್**—ಬುದ್ಧಿವಂತರ; **ಅಸ್ಮಿ**—ಆಗಿದ್ದೇನೆ; **ತೇಜಃ**—ಶೌರ್ಯವು; **ತೇಜಸ್ವಿನಾಮ್**—ಬಲಿಷ್ಠರ; **ಅಹಮ್**—ನಾನು.

### ಅನುವಾದ

**ಪಾರ್ಥ, ನಾನು ಎಲ್ಲ ಅಸ್ತಿತ್ವಗಳ ಮೂಲ ಬೀಜ, ಬುದ್ಧಿವಂತರ ಬುದ್ಧಿಶಕ್ತಿ ಮತ್ತು ಎಲ್ಲ ಶಕ್ತಿಶಾಲಿಗಳ ಶಕ್ತಿ ಎಂದು ತಿಳಿದುಕೊ.**

### ಭಾವಾರ್ಥ

ಕೃಷ್ಣನು ಎಲ್ಲ ವಸ್ತುಗಳ ಬೀಜ. ಚರಾಚರ ಜೀವಿಗಳು ಹಲವಿವೆ. ಪಕ್ಷಿಗಳು, ಪ್ರಾಣಿಗಳು, ಮನುಷ್ಯರು ಮತ್ತು ಇತರ ಅನೇಕ ಪ್ರಾಣಿಗಳು ಚಲಿಸುವ ಜೀವಿಗಳು; ಸಸ್ಯಗಳು ಮತ್ತು ಮರಗಳು ಚಲಿಸಲಾರವು, ನಿಂತಿರುತ್ತವೆ ಅಷ್ಟೆ. ಪ್ರತಿಯೊಂದು ಜೀವಿಯು 84,00,000

ಜೀವವರ್ಗಗಳ ವ್ಯಾಪ್ತಿಯಲ್ಲಿ ಸೇರುತ್ತದೆ. ಇವುಗಳಲ್ಲಿ ಕೆಲವು ಚಲಿಸುತ್ತವೆ, ಕೆಲವು ಚಲಿಸುವುದಿಲ್ಲ. ಆದರೆ ಇವೆಲ್ಲವುಗಳ ಜೀವದ ಬೀಜ ಕೃಷ್ಣ. ವೇದ ಸಾಹಿತ್ಯದಲ್ಲಿ ಹೇಳಿರುವಂತೆ ಬ್ರಹ್ಮನ್ ಅಥವಾ ಪರಮ ಪರಾತ್ಪರ ಸತ್ಯದಿಂದಲೇ ಪ್ರತಿಯೊಂದೂ ಮೂಡುತ್ತದೆ. ಕೃಷ್ಣನು ಪರಬ್ರಹ್ಮ, ಪರಮಾತ್ಮ. ಬ್ರಹ್ಮನ್ ನಿರಾಕಾರವಾದದ್ದು, ಪರಬ್ರಹ್ಮನು ಸಾಕಾರ. ನಿರಾಕಾರ ಬ್ರಹ್ಮನ್ ಸಾಕಾರ ರೂಪದಲ್ಲಿ ನೆಲೆಸಿದ್ದಾನೆ. ಹೀಗೆಂದು ಭಗವದ್ಗೀತೆಯಲ್ಲಿ ಹೇಳಿದೆ. ಆದ್ದರಿಂದ ಪ್ರಾರಂಭದಲ್ಲಿ ಕೃಷ್ಣನು ಪ್ರತಿಯೊಂದು ವಸ್ತುವಿನ ಮೂಲ. ಅವನು ಬೇರು. ಮರದ ಬೇರು ಇಡೀ ಮರವನ್ನು ಪೋಷಿಸುವಂತೆ ಕೃಷ್ಣನು ಎಲ್ಲ ವಸ್ತುಗಳ ತಾಯಿ ಬೇರಾದದ್ದರಿಂದ ಈ ಐಹಿಕ ಅಭಿವ್ಯಕ್ತಿಯಲ್ಲಿ ಪ್ರತಿಯೊಂದನ್ನೂ ಪೋಷಿಸುತ್ತಾನೆ. ಇದು ವೇದ ಸಾಹಿತ್ಯದಲ್ಲಿಯೂ (ಕಠ ಉಪನಿಷತ್ತು 2.2.13) ದೃಢಪಟ್ಟಿದೆ —

**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್ |**
**ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ||**

ಅವನು ಎಲ್ಲ ನಿತ್ಯದಲ್ಲಿ ಪ್ರಧಾನ ನಿತ್ಯನು, ಎಲ್ಲ ಜೀವಿಗಳಲ್ಲಿ ಪರಮ ಪುರುಷನು, ಅವನೊಬ್ಬನೇ ಸಮಸ್ತ ಜೀವವನ್ನು ಪೋಷಿಸುವವನು. ಬುದ್ಧಿಶಕ್ತಿಯಿಲ್ಲದೆ ಮನುಷ್ಯನು ಏನನ್ನೂ ಮಾಡಲಾರ; ಕೃಷ್ಣನು ತಾನು ಎಲ್ಲ ಬುದ್ಧಿಶಕ್ತಿಯ ಮೂಲ ಎಂದೂ ಹೇಳುತ್ತಾನೆ. ಮನುಷ್ಯನು ಬುದ್ಧಿವಂತನಲ್ಲದಿದ್ದರೆ ಅವನು ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಅರ್ಥಮಾಡಿಕೊಳ್ಳಲಾರ.

## ಶ್ಲೋಕ - 11

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ |**
**ಧರ್ಮಾವಿರುದ್ಧೋ ಭೂತೇಷು ಕಾಮೋऽಸ್ಮಿ ಭರತರ್ಷಭ ||೧೧||**

**ಬಲಮ್**—ಬಲವು; **ಬಲ ವತಾಮ್**—ಬಲಿಷ್ಠರ; **ಚ**—ಮತ್ತು; **ಅಹಮ್**—ನಾನು; **ಕಾಮ**—ಕಾಮ; **ರಾಗ**—ಆಸಕ್ತಿ; **ವಿವರ್ಜಿತಮ್**—ರಹಿತವಾದ; **ಧರ್ಮ ಅವಿರುದ್ಧಃ**—ಧರ್ಮತತ್ವಗಳಿಗೆ ವಿರುದ್ಧವಲ್ಲದ; **ಭೂತೇಷು**—ಎಲ್ಲ ಜೀವಿಗಳಲ್ಲಿ; **ಕಾಮಃ**—ಲೈಂಗಿಕ ಜೀವನವು; **ಅಸ್ಮಿ**—ಆಗಿದ್ದೇನೆ; **ಭರತ ಋಷಭ**—ಭರತ ಶ್ರೇಷ್ಠನೇ.

## ಅನುವಾದ

**ನಾನು ರಾಗ ಮತ್ತು ಕಾಮಗಳಿಲ್ಲದ ಬಲಶಾಲಿಗಳ ಬಲ. ನಾನು ಧರ್ಮವಿರುದ್ಧವಲ್ಲದ ಕಾಮ.**

## ಭಾವಾರ್ಥ

ಬಲಶಾಲಿಯು ಬಲವನ್ನು ವೈಯಕ್ತಿಕ ಆಕ್ರಮಣಕ್ಕಾಗಿ ಬಳಸಬಾರದು. ದುರ್ಬಲರ ರಕ್ಷಣೆಗಾಗಿ ಬಳಸಬೇಕು. ಹೀಗೆಯೇ ಧರ್ಮಕ್ಕನುಗುಣವಾಗಿ ಕಾಮವು ಮಕ್ಕಳನ್ನು ಪಡೆಯುವುದಕ್ಕೆ ಮಾತ್ರ ಇರಬೇಕು, ಬೇರೆ ಕಾರಣಕ್ಕಾಗಲ್ಲ. ತಮ್ಮ ಮಕ್ಕಳಲ್ಲಿ ಕೃಷ್ಣಪ್ರಜ್ಞೆಯನ್ನು ಬೆಳೆಸುವುದು

ತಂದೆ ತಾಯಿಯರ ಹೊಣೆ.

## ಶ್ಲೋಕ - 12

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ |**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ||೧೨||**

**ಯೇ**—ಯಾವುದೆಲ್ಲ; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಸಾತ್ತ್ವಿಕಾಃ**—ಸಾತ್ವಿಕ; **ಭಾವಾಃ**—ಸ್ಥಿತಿಗಳು; **ರಾಜಸಾಃ**—ರಾಜಸ; **ತಾಮಸಾಃ**—ತಾಮಸ; **ಚ**—ಕೂಡ; **ಯೇ**—ಯಾವುದೆಲ್ಲ; **ಮತ್ತಃ**—ನನ್ನಿಂದ; **ಏವ**—ಖಂಡಿತವಾಗಿಯೂ; **ಇತಿ**—ಎಂದು; **ತಾನ್**—ಅವುಗಳನ್ನು; **ವಿದ್ಧಿ**—ತಿಳಿಯಲು ಪ್ರಯತ್ನಿಸು; **ನ**—ಇಲ್ಲ; **ತು**—ಆದರೆ; **ಅಹಮ್**—ನಾನು; **ತೇಷು**—ಅವುಗಳಲ್ಲಿ; **ತೇ** —ಅವು; **ಮಯಿ**—ನನ್ನಲ್ಲಿ.

## ಅನುವಾದ

**ಇದನ್ನು ತಿಳಿದುಕೊ. ಸಾತ್ವಿಕ, ರಾಜಸ, ತಾಮಸ ಸ್ಥಿತಿಗಳೆಲ್ಲ ನನ್ನ ಶಕ್ತಿಯಿಂದ ಪ್ರಕಟವಾದವು. ಒಂದು ಅರ್ಥದಲ್ಲಿ ಪ್ರತಿಯೊಂದು ವಸ್ತುವೂ ನಾನೇ, ಆದರೆ ನಾನು ಸ್ವತಂತ್ರನು. ನಾನು ಐಹಿಕ ಪ್ರಕೃತಿಯ ಗುಣಗಳಿಗೆ ಒಳಪಟ್ಟಿಲ್ಲ, ಬದಲಿಗೆ ಅವು ನನ್ನಲ್ಲಿರುವುವು.**

## ಭಾವಾರ್ಥ

ಈ ಜಗತ್ತಿನ ಎಲ್ಲ ಐಹಿಕ ಚಟುವಟಿಕೆಗಳೂ ಐಹಿಕ ಪ್ರಕೃತಿಯ ತ್ರಿಗುಣಗಳಿಗೆ ಅನುಗುಣವಾಗಿ ನಡೆಯುತ್ತವೆ. ಈ ಪ್ರಕೃತಿಯ ಐಹಿಕ ಗುಣಗಳು ಪರಮ ಪ್ರಭು ಕೃಷ್ಣನಿಂದ ಹೊರಸೂಸಿದರೂ ಆತನು ಅದಕ್ಕೆ ಒಳಪಟ್ಟವನಲ್ಲ. ಉದಾಹರಣೆಗೆ ರಾಜ್ಯದ ಕಾನೂನಿಗನುಗುಣವಾಗಿ ಒಬ್ಬ ಮನುಷ್ಯನನ್ನು ಶಿಕ್ಷಿಸಬಹುದು. ಆದರೆ ಕಾನೂನನ್ನು ಮಾಡುವ ರಾಜನು ಆ ಕಾನೂನಿಗೆ ಅಧೀನನಲ್ಲ. ಇದೇ ರೀತಿಯಲ್ಲಿ ಐಹಿಕ ನಿಸರ್ಗದ ಗುಣಗಳಾದ ಸತ್ವ, ರಜಸ್ಸು ಮತ್ತು ತಮಸ್ಸುಗಳು ಪರಮ ಪ್ರಭು ಕೃಷ್ಣನಿಂದ ಹೊರಸೂಸಿದವು. ಆದರೆ ಕೃಷ್ಣನು ಐಹಿಕ ಪ್ರಕೃತಿಗೆ ಅಧೀನನಲ್ಲ. ಆತನು ನಿರ್ಗುಣನು. ಎಂದರೆ ಈ ಗುಣಗಳು ಅವನಿಂದಲೇ ಮೂಡಿಬಂದರೂ ಅವನನ್ನು ಬಾಧಿಸುವುದಿಲ್ಲ. ಇದು ಭಗವಂತನ ಅಥವಾ ದೇವೋತ್ತಮ ಪರಮ ಪುರುಷನ ವಿಶಿಷ್ಟ ಗುಣಗಳಲ್ಲಿ ಒಂದು.

## ಶ್ಲೋಕ - 13

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ |**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ||೧೩||**

**ತ್ರಿಭಿಃ**—ಮೂರು; **ಗುಣ ಮಯೈಃ**—ಗುಣಗಳಿಂದ ಕೂಡಿದ; **ಭಾವೈಃ**—ಸ್ಥಿತಿಗಳಿಂದ; **ಏಭಿಃ**—ಈ; **ಸರ್ವಮ್**—ಎಲ್ಲವೂ; **ಇದಮ್**—ಈ; **ಜಗತ್**—ವಿಶ್ವವು; **ಮೋಹಿತಮ್**—ಭ್ರಾಂತವಾಗಿದೆ; **ನ**

**ಅಭಿಜಾನಾತಿ**—ತಿಳಿಯುವುದಿಲ್ಲ; **ಮಾಮ್**—ನನ್ನನ್ನು; **ಏಭ್ಯಃ**—ಇವೆಲ್ಲವುಗಳಿಗಿಂತ; **ಪರಮ್**—ಪರಮೋನ್ನತನಾದ; **ಅವ್ಯಯಮ್**—ಅವ್ಯಯನಾದ.

## ಅನುವಾದ

**(ಸಾತ್ವಿಕ, ರಾಜಸ ಮತ್ತು ತಾಮಸವೆನ್ನುವ) ಮೂರು ಗುಣಗಳಿಂದ ಮೋಹಿತವಾಗಿ ಈ ಸಮಸ್ತ ಜಗತ್ತು ನನ್ನನ್ನು ಅರಿಯದೆ ಇದೆ. ನಾನು ಈ ಗುಣಗಳನ್ನು ಮೀರಿದವನು ಮತ್ತು ಅವ್ಯಯನು.**

## ಭಾವಾರ್ಥ

ಇಡೀ ಜಗತ್ತು ಐಹಿಕ ಪ್ರಕೃತಿಯ ಮೂರು ಗುಣಗಳಿಂದ ಮೋಹಗೊಂಡಿದೆ. ಈ ಮೂರು ಗುಣಗಳಿಂದ ಗೊಂದಲಕ್ಕೆ ಸಿಕ್ಕಿರುವವರು ಈ ಐಹಿಕ ಪ್ರಕೃತಿಯನ್ನು ಮೀರಿದ ಪರಮ ಪ್ರಭು ಕೃಷ್ಣನಿದ್ದಾನೆ ಎಂದು ಅರ್ಥಮಾಡಿಕೊಳ್ಳಲಾರರು.

ಐಹಿಕ ಪ್ರಕೃತಿಯ ಪ್ರಭಾವಕ್ಕೆ ಸಿಕ್ಕಿರುವ ಪ್ರತಿಯೊಂದು ಜೀವಿಗೂ ಒಂದು ವಿಶಿಷ್ಟ ದೇಹವೂ ಅದಕ್ಕನುಗುಣವಾಗಿ ಒಂದು ವಿಶಿಷ್ಟ ರೀತಿಯ ಮಾನಸಿಕ ಮತ್ತು ದೈಹಿಕ ಚಟುವಟಿಕೆಗಳೂ ಇರುತ್ತವೆ. ಪ್ರಕೃತಿಯ ತ್ರಿಗುಣಗಳಲ್ಲಿ ನಾಲ್ಕು ವರ್ಗಗಳ ಜನರು ಕಾರ್ಯಪ್ರವೃತ್ತರಾಗಿದ್ದಾರೆ. ಸಂಪೂರ್ಣವಾಗಿ ಸಾತ್ವಿಕ ಗುಣದವರನ್ನು ಬ್ರಾಹ್ಮಣರು ಎಂದು ಕರೆಯುತ್ತಾರೆ. ಸಂಪೂರ್ಣವಾಗಿ ರಾಜಸ ಗುಣದವರನ್ನು ಕ್ಷತ್ರಿಯರು ಎಂದು ಕರೆಯುತ್ತಾರೆ. ರಾಜಸ ಮತ್ತು ತಾಮಸ ಎರಡೂ ಗುಣಗಳಿರುವವರನ್ನು ವೈಶ್ಯರು ಎಂದು ಕರೆಯುತ್ತಾರೆ. ಸಂಪೂರ್ಣವಾಗಿ ತಾಮಸದಲ್ಲಿರುವವರಿಗೆ ಶೂದ್ರರು ಎಂದು ಹೆಸರು. ಅದಕ್ಕೂ ಕೀಳಾಗಿರುವವರು ಪ್ರಾಣಿಗಳು. ಆದರೆ ಈ ಉಪಾಧಿಗಳು ಶಾಶ್ವತವಾದುವಲ್ಲ. ನಾವು ಬ್ರಾಹ್ಮಣರೋ, ಕ್ಷತ್ರಿಯರೋ, ವೈಶ್ಯರೋ ಅಥವಾ ಏನಾದರೂ ಆಗಿರಬಹುದು. ಏನಿದ್ದರೂ ಈ ಜನ್ಮವು ತಾತ್ಕಾಲಿಕ. ಬದುಕು ತಾತ್ಕಾಲಿಕವಾದರೂ ಮತ್ತು ಮುಂದಿನ ಜನ್ಮದಲ್ಲಿ ಏನಾಗುತ್ತೇವೆ ಎಂದು ತಿಳಿಯದಿದ್ದರೂ ಮಾಯಾಶಕ್ತಿಯ ಸಮ್ಮೋಹನದಿಂದ ನಾವು ಬದುಕಿನ ದೈಹಿಕ ಪರಿಕಲ್ಪನೆಯಲ್ಲಿಯೇ ನಮ್ಮ ವಿಷಯವನ್ನು ಯೋಚನೆ ಮಾಡುತ್ತೇವೆ. ನಾವು ಅಮೆರಿಕನ್ನರು, ಭಾರತೀಯರು, ರಷ್ಯನರು ಅಥವಾ ಬ್ರಾಹ್ಮಣ, ಹಿಂದೂ, ಮುಸ್ಲಿಂ ಇತ್ಯಾದಿಯಾಗಿ ಯೋಚಿಸುತ್ತೇವೆ. ನಾವು ಐಹಿಕ ಪ್ರಕೃತಿಯ ಗುಣಗಳಲ್ಲಿ ಸಿಕ್ಕಿಬಿದ್ದರೆ ದೇವೋತ್ತಮ ಪರಮ ಪುರುಷನನ್ನು ಮರೆತುಬಿಡುತ್ತೇವೆ. ಆತನು ಎಲ್ಲ ಗುಣಗಳ ಹಿಂದಿದ್ದಾನೆ. ಪ್ರಕೃತಿಯ ಈ ಮೂರು ಗುಣಗಳಿಂದ ಭ್ರಮೆಗೊಳಗಾದ ಜೀವಿಗಳು ಈ ಐಹಿಕ ಹಿನ್ನೆಲೆಯ ಹಿಂದೆ ದೇವೋತ್ತಮ ಪರಮ ಪುರುಷನು ಇದ್ದಾನೆ ಎಂದು ಅರ್ಥಮಾಡಿಕೊಳ್ಳುವುದಿಲ್ಲ ಎಂದು ಶ್ರೀಕೃಷ್ಣನು ಹೇಳುತ್ತಾನೆ.

ಮನುಷ್ಯರು, ದೇವತೆಗಳು, ಪ್ರಾಣಿಗಳು ಇತ್ಯಾದಿ ಹಲವಾರು ಬೇರೆ ಬೇರೆ ವರ್ಗಗಳ ಜೀವಿಗಳಿದ್ದಾರೆ. ಪ್ರತಿಯೊಬ್ಬರೂ ಐಹಿಕ ಪ್ರಕೃತಿಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಅವರೆಲ್ಲರೂ ದಿವ್ಯನಾದ ದೇವೋತ್ತಮ ಪುರುಷನನ್ನು ಮರೆತಿದ್ದಾರೆ. ರಾಜಸ ಮತ್ತು ತಾಮಸ ಗುಣದವರು ಮತ್ತು ಸಾತ್ವಿಕ ಗುಣದವರು ಸಹ ಪರಾತ್ಪರ ಸತ್ಯದ ನಿರಾಕಾರ ಬ್ರಹ್ಮನ್ ಪರಿಕಲ್ಪನೆಯಾಚೆ ಹೋಗಲಾರರು. ಪರಮ ಪ್ರಭುವಿನ ವೈಯಕ್ತಿಕ ಸ್ವರೂಪದಲ್ಲಿ ಎಲ್ಲ ಸೌಂದರ್ಯ, ಶ್ರೀಮಂತಿಕೆ, ಜ್ಞಾನ, ಶಕ್ತಿ, ಕೀರ್ತಿ ಮತ್ತು ತ್ಯಾಗಗಳು ಸೇರಿವೆ; ಜೀವಿಗಳು ಪ್ರಭುವಿನ ಸನ್ನಿಧಿಯಲ್ಲಿ

ಗೊಂದಲಕ್ಕೊಳಗಾಗುತ್ತಾರೆ. ಸಾತ್ವಿಕ ಗುಣದವರಿಗೆ ಸಹ ಅರ್ಥವಾಗದಿದ್ದರೆ ರಾಜಸ ಮತ್ತು ತಾಮಸ ಗುಣದವರ ಪಾಡೇನು? ಕೃಷ್ಣಪ್ರಜ್ಞೆಯು ಐಹಿಕ ಪ್ರಕೃತಿಯ ಈ ಮೂರು ಗುಣಗಳನ್ನೂ ಮೀರಿದ್ದು; ಕೃಷ್ಣಪ್ರಜ್ಞೆಯಲ್ಲಿ ನೆಲೆಸಿರುವವರು ವಾಸ್ತವವಾಗಿ ಮುಕ್ತಿಯನ್ನು ಪಡೆಯುತ್ತಾರೆ.

## ಶ್ಲೋಕ - 14

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ||೧೪||**

**ದೈವೀ**—ದಿವ್ಯವಾದ; **ಹಿ**—ನಿಶ್ಚಿತವಾಗಿಯೂ; **ಏಷಾ**—ಈ; **ಗುಣಮಯೀ**—ಭೌತಿಕ ಪ್ರಕೃತಿಯ ಮೂರು ಗುಣಗಳಿಂದ ಕೂಡಿರುವ; **ಮಮ**—ನನ್ನ; **ಮಾಯಾ**—ಶಕ್ತಿಯು; **ದುರತ್ಯಯಾ**—ಮೀರಲು, ಬಹಳ ಕಷ್ಟಕರವಾದದ್ದು; **ಮಾಮ್**—ನನಗೆ; **ಏವ**—ಖಂಡಿತವಾಗಿಯೂ; **ಯೇ**—ಯಾರು; **ಪ್ರಪದ್ಯನ್ತೇ**—ಶರಣಾಗತರಾಗುತ್ತಾರೋ; **ಮಾಯಾಮ್ ಏತಾಮ್**—ಈ ಮಾಯಾಶಕ್ತಿಯನ್ನು; **ತರನ್ತಿ**—ದಾಟುತ್ತಾರೆ; **ತೇ**—ಅವರು.

## ಅನುವಾದ

**ಐಹಿಕ ಪ್ರಕೃತಿಯ ತ್ರಿಗುಣಗಳಿಂದ ಆದ ಈ ನನ್ನ ದೈವೀಶಕ್ತಿಯನ್ನು ಮೀರುವುದು ಬಹಳ ಕಷ್ಟ. ಆದರೆ ನನಗೆ ಶರಣಾಗತರಾದವರು ಸುಲಭವಾಗಿ ಅದನ್ನು ದಾಟಿ ಹೋಗಬಲ್ಲರು.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಿಗೆ ಅಸಂಖ್ಯಾತ ಶಕ್ತಿಗಳಿವೆ. ಈ ಶಕ್ತಿಗಳೆಲ್ಲವೂ ದೈವಿಕವಾದವು. ಜೀವಿಗಳು ಭಗವಂತನ ಭಾಗವಾದುದರಿಂದ ಅವು ದೈವಿಕವೇ. ಆದರೂ ಐಹಿಕ ಶಕ್ತಿಯ ಸಂಪರ್ಕದಿಂದ ಅವುಗಳ ಮೂಲ ಶ್ರೇಷ್ಠಶಕ್ತಿಯು ಮುಚ್ಚಿಹೋಗುತ್ತದೆ. ಐಹಿಕ ಶಕ್ತಿಯು ಹೀಗೆ ತನ್ನನ್ನು ಮುಸುಕಿರುವುದರಿಂದ ಅದರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಜೀವಿಗೆ ಸಾಧ್ಯವೇ ಆಗುವುದಿಲ್ಲ. ಆಗಲೇ ಹೇಳಿದಂತೆ ಐಹಿಕ ಮತ್ತು ಆಧ್ಯಾತ್ಮಿಕ ಪ್ರಕೃತಿಗಳೆರಡೂ ದೇವೋತ್ತಮ ಪರಮ ಪುರುಷನಿಂದ ಹೊರಸೂಸುವುದರಿಂದ ಅವು ನಿತ್ಯವಾದವು. ಜೀವಿಗಳು ಭಗವಂತನ ಮೇಲ್ತರಗತಿಯ ಪ್ರಕೃತಿಗೆ ಸೇರಿವೆ. ಆದರೆ ಕೆಳತರಗತಿಯ ಪ್ರಕೃತಿಯಾದ ಜಡವಸ್ತುವಿನ ಕಲ್ಮಷದಿಂದಾಗಿ ಜೀವಿಗಳ ಭ್ರಮೆಯೂ ನಿತ್ಯವಾದದ್ದು. ಆದುದರಿಂದ ಬದ್ಧ ಆತ್ಮವನ್ನು ನಿತ್ಯ ಬದ್ಧ ಎಂದು ಕರೆಯುತ್ತಾರೆ. ಐಹಿಕ ಚರಿತ್ರೆಯಲ್ಲಿ ತಾನು ಬದ್ಧಸ್ಥಿತಿಗೆ ಬಂದ ಒಂದು ನಿಶ್ಚಿತ ದಿನವನ್ನು ಯಾರೂ ಗುರುತಿಸಲು ಸಾಧ್ಯವಿಲ್ಲ. ಐಹಿಕ ಪ್ರಕೃತಿಯು ಕೆಳತರಗತಿಯ ಶಕ್ತಿಯಾದರೂ ಐಹಿಕ ಶಕ್ತಿಯನ್ನು ಕಟ್ಟಕಡೆಗೆ ಪರಮ ಸಂಕಲ್ಪವೇ ನಿಯಂತ್ರಿಸುತ್ತದೆ. ಇದನ್ನು ಜೀವಿಯು ಸೋಲಿಸಲಾರನು. ಆದುದರಿಂದ ಐಹಿಕ ಪ್ರಕೃತಿಯ ಮುಷ್ಟಿಯಿಂದ ತಪ್ಪಿಸಿಕೊಳ್ಳಲು ಮನುಷ್ಯನಿಗೆ ಬಹಳ ಕಷ್ಟ. ಕೆಳತರಗತಿಯ ಐಹಿಕ ಪ್ರಕೃತಿಯನ್ನು ಇಲ್ಲಿ ದೈವಿಕ ಪ್ರಕೃತಿ ಎಂದು ವಿವರಿಸಿದೆ. ಅದರ ದೈವಿಕ ಸಂಬಂಧ ಮತ್ತು ದೈವಿಕ ಸಂಕಲ್ಪವು ಅದರ ಚಲನೆಯನ್ನು ನಿಯಂತ್ರಿಸುತ್ತದೆ ಎನ್ನುವುದು ಇದಕ್ಕೆ ಕಾರಣ. ದೈವೀಸಂಕಲ್ಪವು ನಿರ್ದೇಶಿಸುವುದರಿಂದ ಐಹಿಕ ಪ್ರಕೃತಿಯು ಕೆಳತರಗತಿಯದಾದರೂ

ಸೃಷ್ಟಿರೂಪದ ಅಭಿವ್ಯಕ್ತಿಯಲ್ಲಿ, ನಿರ್ಮಾಣ ಮತ್ತು ನಾಶದಲ್ಲಿ ಬಹು ಬೆರಗಾಗುವಂತೆ ಕೆಲಸಮಾಡುತ್ತದೆ. ಇದನ್ನು ವೇದಗಳು ಹೀಗೆ ದೃಢಪಡಿಸುತ್ತವೆ — **ಮಾಯಾಂ ತು ಪ್ರಕೃತಿಂ ವಿದ್ಯಾನ್ ಮಾಯಿನಂ ತು ಮಹೇಶ್ವರಮ್.** "ಮಾಯೆಯು ಅಸತ್ಯ ಅಥವಾ ತಾತ್ಕಾಲಿಕವಾದರೂ ಪರಮ ಮಾಂತ್ರಿಕನಾದ ದೇವೋತ್ತಮ ಪರಮ ಪುರುಷನು ಹಿನ್ನಲೆಯಲ್ಲಿದ್ದಾನೆ; ಅವನು ಮಹೇಶ್ವರನು, ಪರಮ ನಿಯಂತ್ರಕನು" (ಶ್ವೇತಾಶ್ವತರ ಉಪನಿಷತ್ತು 4.10).

ಗುಣ ಎನ್ನುವ ಶಬ್ದದ ಇನ್ನೊಂದು ಅರ್ಥ ಹಗ್ಗ; ಬದ್ಧ ಆತ್ಮವನ್ನು ಮಾಯೆಯ ಸೂತ್ರಗಳು ಬಲವಾಗಿ ಕಟ್ಟಿವೆ ಎಂದು ಅರ್ಥಮಾಡಿಕೊಳ್ಳಬೇಕು. ಕೈಕಾಲುಗಳನ್ನು ಕಟ್ಟಿಹಾಕಿದ ಮನುಷ್ಯನು ತನ್ನನ್ನು ತಾನೇ ಬಿಡಿಸಿಕೊಳ್ಳಲಾರ. ಬಂಧನಕ್ಕೆ ಸಿಕ್ಕಿಲ್ಲದ ಯಾರಾದರೂ ಅವನಿಗೆ ನೆರವಾಗಬೇಕು. ತಾನೇ ಕಟ್ಟಿಹಾಕಲ್ಪಟ್ಟವನು ಕಟ್ಟಿಹಾಕಲ್ಪಟ್ಟ ಮತ್ತೊಬ್ಬನಿಗೆ ಸಹಾಯ ಮಾಡಲಾರ. ನೆರವಾಗುವವನು ಮುಕ್ತನಾಗಿರಬೇಕು. ಆದುದರಿಂದ ಶ್ರೀಕೃಷ್ಣ ಅಥವಾ ಅವನ ನಿಜ ಪ್ರತಿನಿಧಿಯಾದ ಗುರುವು ಬದ್ಧ ಆತ್ಮವನ್ನು ಬಿಡಿಸಬಲ್ಲರು. ಇಂತಹ ಶ್ರೇಷ್ಠ ಸಹಾಯವಿಲ್ಲದೆ ಐಹಿಕ ಪ್ರಕೃತಿಯ ಬಂಧನದಿಂದ ಮನುಷ್ಯನು ಬಿಡಿಸಿಕೊಳ್ಳಲಾರ. ಭಕ್ತಿಸೇವೆ ಅಥವಾ ಕೃಷ್ಣಪ್ರಜ್ಞೆಯು ಇಂತಹ ಬಿಡುಗಡೆಯನ್ನು ಪಡೆಯಲು ನೆರವಾಗಬಲ್ಲದು. ಮಾಯಾಶಕ್ತಿಯ ಪ್ರಭುವಾದ ಕೃಷ್ಣನು ಹೀಗೆ ದುಸ್ತರವಾದ ಶಕ್ತಿಗೆ, ಬದ್ಧ ಆತ್ಮವನ್ನು ಬಿಟ್ಟುಬಿಡುವಂತೆ ಆಜ್ಞಾಪಿಸಬಲ್ಲ. ಜೀವಿಯು ಮೂಲತಃ ಭಗವಂತನ ಪ್ರೀತಿಯ ಮಗು. ಶರಣಾಗತವಾದ ಆತ್ಮದ ವಿಷಯದಲ್ಲಿ ಅವನು ತನ್ನ ಅವ್ಯಾಜ ಕರುಣೆಯಿಂದ ಮತ್ತು ಪಿತೃವಾತ್ಸಲ್ಯದಿಂದ ಬಿಡುಗಡೆಗೆ ಅಪ್ಪಣೆ ಮಾಡುತ್ತಾನೆ. ಆದುದರಿಂದ ಐಹಿಕ ಪ್ರಕೃತಿಯ ಕಠಿಣ ಮುಷ್ಟಿಯಿಂದ ಬಿಡುಗಡೆ ಹೊಂದಲು ಭಗವಂತನ ಪಾದಕಮಲಗಳಿಗೆ ಶರಣಾಗುವುದೊಂದೇ ಮಾರ್ಗ.

**ಮಾಮ್ ಏವ** ಎನ್ನುವ ಪದಗಳೂ ಅರ್ಥವತ್ತಾದವು. **ಮಾಮ್** ಎಂದರೆ ಕೃಷ್ಣನಿಗೆ (ವಿಷ್ಣುವಿಗೆ) ಮಾತ್ರ, ಬ್ರಹ್ಮನಿಗೆ ಅಥವಾ ಶಿವನಿಗೆ ಅಲ್ಲ ಎಂದರ್ಥ. ಬ್ರಹ್ಮ ಮತ್ತು ಶಿವ ಉಚ್ಚಸ್ಥಾನದಲ್ಲಿದ್ದು ಸ್ವಲ್ಪ ಹೆಚ್ಚೂಕಡಮೆ ವಿಷ್ಣುವಿನ ಮಟ್ಟದಲ್ಲೇ ಇದ್ದರೂ ಅವರು ರಜೋಗುಣ ಮತ್ತು ತಮೋಗುಣಗಳ ಅವತಾರಗಳು. ಆದುದರಿಂದ ಅವರು ಬದ್ಧ ಆತ್ಮವನ್ನು ಮಾಯೆಯ ಹಿಡಿತದಿಂದ ಬಿಡಿಸಲಾರರು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಬ್ರಹ್ಮ ಮತ್ತು ಶಿವರು ಸಹ ಮಾಯೆಯ ಪ್ರಭಾವದಲ್ಲಿದ್ದಾರೆ. ವಿಷ್ಣುವು ಮಾತ್ರ ಮಾಯೆಯ ಪ್ರಭು; ಬದ್ಧ ಆತ್ಮಕ್ಕೆ ಮುಕ್ತಿಯನ್ನು ಕೊಡಬಲ್ಲವನು ಅವನೊಬ್ಬನೇ. ವೇದಗಳು (ಶ್ವೇತಾಶ್ವತರ ಉಪನಿಷತ್ತು 3.8) ಇದನ್ನು ತಮ್ ಏವ ವಿದಿತ್ವಾ ಅಥವಾ "ಕೃಷ್ಣನನ್ನು ಅರಿಯುವುದರಿಂದ ಮಾತ್ರವೇ ಸ್ವಾತಂತ್ರ್ಯವು ಸಾಧ್ಯ" ಎನ್ನುವ ಮಾತುಗಳಲ್ಲಿ ದೃಢಪಡಿಸಿವೆ. ಶಿವನೂ ಸಹ ವಿಷ್ಣುವಿನ ಕರುಣೆಯಿಂದ ಮಾತ್ರ ಮುಕ್ತಿಯನ್ನು ಪಡೆಯುವುದು ಸಾಧ್ಯ ಎಂದು ಹೇಳಿದ್ದಾನೆ. **ಮುಕ್ತಿಪ್ರದಾತಾ ಸರ್ವೇಷಾಂ ವಿಷ್ಣುರೇವ ನ ಸಂಶಯಃ** — "ಪ್ರತಿಯೊಬ್ಬರಿಗೂ ಮುಕ್ತಿಯನ್ನು ಅನುಗ್ರಹಿಸಬಲ್ಲವನು ವಿಷ್ಣು ಎನ್ನುವುದರಲ್ಲಿ ಸಂಶಯವಿಲ್ಲ" ಎಂದು ಶಿವನು ಹೇಳುತ್ತಾನೆ.

## ಶ್ಲೋಕ - 15

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ |**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ||೧೫||**

**ನ**—ಇಲ್ಲ; **ಮಾಮ್**—ನನಗೆ; **ದುಷ್ಕೃತಿನಃ**—ದುಷ್ಟರು; **ಮೂಢಾಃ**—ಮೂಢರು; **ಪ್ರಪದ್ಯನ್ತೇ**—ಶರಣಾಗತರಾಗುತ್ತಾರೆ; **ನರ ಅಧಮಾಃ**—ಮಾನವರಲ್ಲಿ ಅತಿನೀಚರು; **ಮಾಯಯಾ**—ಮಾಯಾಶಕ್ತಿಯಿಂದ; **ಅಪಹೃತ**—ಅಪಹರಿಸಲ್ಪಟ್ಟ; **ಜ್ಞಾನಾಃ**—ಜ್ಞಾನವುಳ್ಳ; **ಆಸುರಮ್**— ಆಸುರೀ; **ಭಾವಮ್**—ಸ್ವಭಾವವನ್ನು; **ಆಶ್ರಿತಾಃ**—ಸ್ವೀಕರಿಸಿರುವ.

## ಅನುವಾದ

**ಅತ್ಯಂತ ಮೂರ್ಖರು, ನರಾಧಮರು, ಮಾಯೆಯಿಂದ ಜ್ಞಾನನಷ್ಟವಾದವರು, ಆಸುರೀ ಸ್ವಭಾವದವರು, ಈ ಬಗೆಯ ದುಷ್ಟರು ನನಗೆ ಶರಣಾಗುವುದಿಲ್ಲ.**

## ಭಾವಾರ್ಥ

ಪರಮ ಪುರುಷ ಕೃಷ್ಣನ ಅಡಿದಾವರೆಗಳಿಗೆ ಶರಣಾಗತನಾಗಿ ಮನುಷ್ಯನು ಐಹಿಕ ಪ್ರಕೃತಿಯ ಕಠಿಣ ನಿಯಮಗಳನ್ನು ನಿವಾರಿಸಿಕೊಳ್ಳಬಲ್ಲ ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಇಲ್ಲಿ ಒಂದು ಪ್ರಶ್ನೆಯು ಉದ್ಭವಿಸುತ್ತದೆ — ಸರ್ವಶಕ್ತ ದೇವೋತ್ತಮ ಪುರುಷನಾದ ಶ್ರೀಕೃಷ್ಣನ ಅಡಿದಾವರೆಗಳಿಗೆ ವಿದ್ಯಾವಂತರಾದ ತತ್ವಶಾಸ್ತ್ರಜ್ಞರು, ವಿಜ್ಞಾನಿಗಳು, ಉದ್ಯಮಿಗಳು, ಆಡಳಿತಗಾರರು ಮತ್ತು ಜನಸಾಮಾನ್ಯರ ನಾಯಕರು ಏಕೆ ಶರಣಾಗತರಾಗುವುದಿಲ್ಲ? ಮಾನವ ಕುಲದ ನಾಯಕರು ಹಲವಾರು ರೀತಿಗಳಲ್ಲಿ, ಮಹತ್ವದ ಯೋಜನೆಗಳನ್ನನುಸರಿಸಿ ಹಲವು ವರ್ಷಗಳ ಮತ್ತು ಜನ್ಮಗಳ ಕಾಲ ಸಂತತ ಪ್ರಯತ್ನಮಾಡಿ ಮುಕ್ತಿಯನ್ನು ಅಥವಾ ಐಹಿಕ ಪ್ರಕೃತಿಯಿಂದ ಬಿಡುಗಡೆಯನ್ನು ಅರಸುತ್ತಾರೆ. ದೇವೋತ್ತಮ ಪರಮ ಪುರುಷನ ಚರಣಕಮಲಗಳಿಗೆ ಶರಣಾಗುವ ಮೂಲಕ ಇದೇ ಮುಕ್ತಿಯನ್ನು ಸಾಧಿಸಬಹುದಾದರೆ ಬುದ್ಧಿವಂತರೂ, ಕಷ್ಟಪಡುವವರೂ ಆದ ನಾಯಕರು ಈ ಸರಳ ವಿಧಾನವನ್ನು ಏಕೆ ಅನುಸರಿಸುವುದಿಲ್ಲ?

ಗೀತೆಯು ಈ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರ ಕೊಡುತ್ತದೆ. ಬ್ರಹ್ಮ, ಶಿವ, ಕಪಿಲ, ಕುಮಾರರು, ಮನು, ವ್ಯಾಸ, ದೇವಲ, ಅಸಿತ, ಜನಕ, ಪ್ರಹ್ಲಾದ, ಬಲಿ ಮತ್ತು ಮಧ್ವಾಚಾರ್ಯ, ರಾಮಾನುಜಾಚಾರ್ಯ, ಶ್ರೀ ಚೈತನ್ಯ ಮತ್ತು ಇವರಂತಹ ಅನೇಕ ನಿಜವಾದ ವಿದ್ವಾಂಸರು ಸಮಾಜ ನಾಯಕರು. ಇವರು — ನಿಷ್ಠ ತತ್ವಜ್ಞಾನಿಗಳು, ರಾಜಕಾರಣಿಗಳು, ಶಿಕ್ಷಣ ತಜ್ಞರು, ಜ್ಞಾನಿಗಳು ಮೊದಲಾದವರು — ಸರ್ವಶಕ್ತ ಅಧಿಕಾರಿಯಾದ ಪರಮ ಪುರುಷನ ಪಾದಕಮಲಗಳಿಗೆ ಶರಣಾಗುತ್ತಾರೆ. ಆದರೆ ವಾಸ್ತವವಾಗಿ ತತ್ವಜ್ಞಾನಿಗಳು, ವಿಜ್ಞಾನಿಗಳು, ಶಿಕ್ಷಣತಜ್ಞರು, ಆಡಳಿತಗಾರರು ಇತ್ಯಾದಿ ಅಲ್ಲದವರು, ಆದರೆ ಪ್ರಾಪಂಚಿಕ ಲಾಭಕ್ಕಾಗಿ ಹಾಗೆ ಸೋಗು ಹಾಕುವವರು ಪರಮ ಪ್ರಭುವಿನ ಯೋಜನೆಯನ್ನಾಗಲೀ ಮಾರ್ಗವನ್ನಾಗಲೀ ಒಪ್ಪಿಕೊಳ್ಳುವುದಿಲ್ಲ. ಅವರಿಗೆ ದೇವರೆಂದರೆ ಏನೂ ತಿಳಿಯದು. ಅವರು ತಮ್ಮದೇ ಪ್ರಾಪಂಚಿಕ ಯೋಜನೆಗಳನ್ನಷ್ಟೇ ಸೃಷ್ಟಿಮಾಡುತ್ತಾರೆ. ಇದರ ಪರಿಣಾಮವಾಗಿ ಐಹಿಕ ಅಸ್ತಿತ್ವದ ಸಮಸ್ಯೆಗಳನ್ನು ಬಿಡಿಸಲು ವ್ಯರ್ಥಪ್ರಯತ್ನ ಮಾಡಿ ಅವುಗಳನ್ನು ಜಟಿಲಗೊಳಿಸುತ್ತಾರೆ. ಐಹಿಕ ಶಕ್ತಿಯು (ಪ್ರಕೃತಿಯು) ಅತ್ಯಂತ ಬಲಶಾಲಿಯಾದದ್ದು. ಆದ್ದರಿಂದ ಅದು ನಾಸ್ತಿಕರ ಅನಧಿಕೃತ ಯೋಜನೆಗಳನ್ನು ವಿರೋಧಿಸಬಲ್ಲುದು ಮತ್ತು 'ಯೋಜನಾ ಆಯೋಗ'ಗಳ ಜ್ಞಾನವನ್ನು ಗೊಂದಲದಲ್ಲಿ ಕೆಡವಬಲ್ಲುದು.

ನಾಸ್ತಿಕ ಯೋಜನಾಕರ್ತರನ್ನು ಇಲ್ಲಿ **ದುಷ್ಕೃತಿನಃ** ಅಥವಾ 'ದುಷ್ಕರ್ಮಿಗಳು' ಎಂದು ವರ್ಣಿಸಲಾಗಿದೆ. **ಕೃತೀ** ಎಂದರೆ ಮೆಚ್ಚಬೇಕಾದ ಕಾರ್ಯವನ್ನು ಮಾಡಿದವನು. ನಾಸ್ತಿಕ ಯೋಜನಾಕರ್ತನು ಒಮ್ಮೊಮ್ಮೆ ಬುದ್ಧಿವಂತನೂ ಮೆಚ್ಚುವಂತಹ ಕೆಲಸ ಮಾಡಿದವನೂ ಆಗಿರುತ್ತಾನೆ. ಏಕೆಂದರೆ ಒಳ್ಳೆಯದಿರಲಿ ಕೆಟ್ಟದ್ದಿರಲಿ ಯಾವುದೇ ಬೃಹತ್ತಾದ ಯೋಜನೆಯನ್ನು ಕಾರ್ಯಗತ ಮಾಡಲು ಬುದ್ಧಿಶಕ್ತಿ ಬೇಕು. ನಾಸ್ತಿಕನು ಪರಮ ಪ್ರಭುವಿನ ಯೋಜನೆಯನ್ನು ವಿರೋಧಿಸಲೆಂದೇ ತನ್ನ ಬುದ್ಧಿಶಕ್ತಿಯನ್ನು ಬಳಸಿಕೊಳ್ಳುತ್ತಾನೆ. ಆದುದರಿಂದ ನಾಸ್ತಿಕ ಯೋಜನಾಕರ್ತನನ್ನು **ದುಷ್ಕೃತೀ** ಎಂದು ಕರೆದಿದೆ. ಅವನ ಬುದ್ಧಿಶಕ್ತಿಯೂ ಪ್ರಯತ್ನಗಳೂ ತಪ್ಪು ದಾರಿಯನ್ನು ಹಿಡಿದಿವೆ ಎಂಬುದನ್ನು ಇದು ತೋರಿಸುತ್ತದೆ.

ಐಹಿಕ ಶಕ್ತಿಯು ಸಂಪೂರ್ಣವಾಗಿ ಪರಮ ಪ್ರಭುವಿನ ಮಾರ್ಗದರ್ಶನದಲ್ಲಿ ಕೆಲಸ ಮಾಡುತ್ತದೆ ಎಂದು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಅದಕ್ಕೆ ಪ್ರತ್ಯೇಕ ಅಧಿಕಾರವಿಲ್ಲ. ವಸ್ತುವು ಚಲಿಸಿದಂತೆಯೇ ಚಲಿಸುವ ನೆರಳಿನ ಹಾಗೆ ಅದು ಕೆಲಸಮಾಡುತ್ತದೆ. ಆದರೂ ಐಹಿಕ ಶಕ್ತಿಯು ಬಹು ಬಲಶಾಲಿಯಾದದ್ದು. ತನ್ನ ನಾಸ್ತಿಕ ಮನೋಧರ್ಮದಿಂದಾಗಿ ನಾಸ್ತಿಕನಿಗೆ ಅದು ಹೇಗೆ ಕೆಲಸ ಮಾಡುತ್ತದೆ ಎನ್ನುವುದು ತಿಳಿಯುವುದಿಲ್ಲ. ಅವನು ಪರಮ ಪ್ರಭುವಿನ ಯೋಜನೆಯನ್ನು ತಿಳಿದುಕೊಳ್ಳಲಾರ. ರಾಜಸ ಮತ್ತು ತಾಮಸ ಗುಣಗಳ ಪ್ರಭಾವಕ್ಕೆ ಒಳಗಾಗಿ ಮಾಯೆಗೆ ಬಲಿ ಬಿದ್ದು ಅವನ ಯೋಜನೆಗಳೆಲ್ಲ ವಿಫಲವಾಗುತ್ತವೆ. ಇದಕ್ಕೆ ಹಿರಣ್ಯಕಶಿಪು ಮತ್ತು ರಾವಣರು ಉದಾಹರಣೆಗಳು. ಅವರಿಬ್ಬರೂ ವಿಜ್ಞಾನಿಗಳು, ತತ್ವಶಾಸ್ತ್ರಜ್ಞರು, ಆಡಳಿತಗಾರರು, ಶಿಕ್ಷಣ ತಜ್ಞರು, ಐಹಿಕವಾಗಿ ವಿದ್ವಾಂಸರು. ಆದರೆ ಅವರ ಯೋಜನೆಗಳು ನುಚ್ಚುನೂರಾಗಿ ಮಣ್ಣಿನಲ್ಲಿ ಸೇರಿಹೋದವು. ಈ **ದುಷ್ಕೃತಿನಸ್** ಅಥವಾ ದುಷ್ಕರ್ಮಿಗಳು ಕೆಳಗೆ ಹೇಳಿದಂತೆ ನಾಲ್ಕು ಬಗೆಯಾಗಿರುತ್ತಾರೆ.

**1) ಮೂಢರು** ಅಂದರೆ ಅತ್ಯಂತ ಮೂರ್ಖರು. ಇವರು ಹೊರೆಗಳನ್ನು ಸಾಗಿಸುವ ಪ್ರಾಣಿಗಳಂತೆ. ಇವರು ತಮ್ಮ ಶ್ರಮದ ಫಲವನ್ನು ತಾವೇ ಸವಿಯಲು ಬಯಸುತ್ತಾರೆ; ಪರಮ ಪ್ರಭುವಿಗಾಗಿ ಅದನ್ನು ಬಿಟ್ಟುಕೊಡಲು ಸಿದ್ಧರಿರುವುದಿಲ್ಲ. ಹೊರೆಸಾಗಿಸುವ ಪ್ರಾಣಿಗಳ ಪ್ರಾತಿನಿಧಿಕ ಉದಾಹರಣೆಯೆಂದರೆ ಕತ್ತೆ. ಯಜಮಾನನು ಈ ದೀನ ಪ್ರಾಣಿಯನ್ನು ಬಹಳ ದುಡಿಸುತ್ತಾನೆ. ಯಾರಿಗಾಗಿ ತಾನು ಹಗಲು ರಾತ್ರಿ ದುಡಿಯುತ್ತೇನೆ ಎನ್ನುವುದು ಕತ್ತೆಗೆ ನಿಜವಾಗಿ ತಿಳಿಯುವುದಿಲ್ಲ. ಒಂದು ಹುಲ್ಲಿನ ಕಟ್ಟನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುವುದು, ಯಜಮಾನನು ಬಡಿಯುತ್ತಾನೆ ಎನ್ನುವ ಭಯದಲ್ಲೇ ಸ್ವಲ್ಪ ನಿದ್ರೆಮಾಡುವುದು, ಹೆಣ್ಣು ಕತ್ತೆಯಿಂದ ಮತ್ತೆ ಮತ್ತೆ ಒದೆಸಿಕೊಳ್ಳುವ ಅಪಾಯವಿದ್ದರೂ ತನ್ನ ಲೈಂಗಿಕ ಬಯಕೆಯನ್ನು ತೀರಿಸಿಕೊಳ್ಳುವುದು — ಇಷ್ಟರಿಂದಲೇ ಅದು ತೃಪ್ತಿಪಟ್ಟುಕೊಳ್ಳುತ್ತದೆ. ಕತ್ತೆಯು ಒಮ್ಮೊಮ್ಮೆ ಕಾವ್ಯವನ್ನೂ ತತ್ವಶಾಸ್ತ್ರವನ್ನೂ ಹಾಡುತ್ತದೆ. ಆದರೆ ಈ ಅರಚುವಿಕೆಯು ಇತರರಿಗೆ ತೊಂದರೆಯನ್ನೇ ಮಾಡುತ್ತದೆ. ತಾನು ಯಾರಿಗಾಗಿ ಕೆಲಸ ಮಾಡಬೇಕು ಎಂದು ತಿಳಿಯದ ಮೂರ್ಖ ಫಲಾಪೇಕ್ಷಿ ಮನುಷ್ಯನ ಸ್ಥಿತಿಯೂ ಇದೇ. ಕರ್ಮದ ಉದ್ದೇಶವು ಯಜ್ಞ ಎಂದು ಅವನಿಗೆ ತಿಳಿಯದು.

ಅನೇಕ ಸಲ ತಾವೇ ಸೃಷ್ಟಿಸಿಕೊಂಡ ಕರ್ತವ್ಯಗಳ ಹೊರೆಯನ್ನು ನೀಗುವುದಕ್ಕಾಗಿ ಹಗಲು ರಾತ್ರಿ ದುಡಿಯುವವರು ಜೀವಿಯ ಅಮರ್ತ್ಯತ್ವದ ವಿಷಯ ಕೇಳಲು ತಮಗೆ ಸಮಯವೇ ಇಲ್ಲ

ಎನ್ನುತ್ತಾರೆ. ಈ ಮೂಢರು ತಮ್ಮ ಶ್ರಮದ ಬಹು ಸ್ವಲ್ಪ ಭಾಗವನ್ನು ಮಾತ್ರ ಸವಿಯುತ್ತಾರೆ. ಆದರೂ ಅವರಿಗೆ ನಾಶವಾಗಿ ಹೋಗುವ ಐಹಿಕ ಗಳಿಕೆಯೇ ಜೀವನ ಸರ್ವಸ್ವ. ಕೆಲವೊಮ್ಮೆ ಅವರಿಗೆ ಕರುಳಿನ ಹುಣ್ಣು ಅಥವಾ ಅಜೀರ್ಣ ಇದ್ದರೂ ಕರ್ಮಫಲಕ್ಕಾಗಿ ನಿದ್ರೆ ಇಲ್ಲದೆ ಹಗಲು ರಾತ್ರಿಗಳನ್ನು ಕಳೆಯುತ್ತಾರೆ. ಆಹಾರವನ್ನೇ ತಿನ್ನದಿದ್ದರೂ ಅವರಿಗೆ ತೃಪ್ತಿಯೆ. ಭ್ರಾಮಕ ಒಡೆಯರ ಲಾಭಕ್ಕಾಗಿ ಹಗಲು ರಾತ್ರಿ ದುಡಿಯುವುದರಲ್ಲೇ ತನ್ಮಯರಾಗಿರುತ್ತಾರೆ. ತಮ್ಮ ನಿಜವಾದ ಪ್ರಭು ಯಾರೆಂದು ತಿಳಿಯದ ಈ ಮೂರ್ಖ ಕೆಲಸಗಾರರು ಧನಪಿಶಾಚಿಯ ಸೇವೆಯಲ್ಲಿ ತಮ್ಮ ಮೌಲಿಕವಾದ ಕಾಲವನ್ನು ವ್ಯರ್ಥಮಾಡುತ್ತಾರೆ. ದುರದೃಷ್ಟದಿಂದಾಗಿ ಅವರು ಎಲ್ಲ ಪ್ರಭುಗಳ ಪ್ರಭುವಿಗೆ ಶರಣಾಗುವುದಿಲ್ಲ. ಯೋಗ್ಯವಾದ ಮೂಲಗಳಿಂದ ಅವನ ವಿಷಯವನ್ನು ಕೇಳಲು ಬಿಡುವು ಮಾಡಿಕೊಳ್ಳುವುದೂ ಇಲ್ಲ. ಹೊಲಸನ್ನು ತಿನ್ನುವ ಹಂದಿಗಳಿಗೆ ಸಕ್ಕರೆ ತುಪ್ಪದಿಂದ ಮಾಡಿದ ಸಿಹಿ ತಿಂಡಿಗಳು ಬೇಕಾಗುವುದಿಲ್ಲ. ಇದೇ ರೀತಿಯಲ್ಲಿ ಮೂರ್ಖ ಶ್ರಮಜೀವಿಯು ಕ್ಷಣಭಂಗುರವಾದ ಐಹಿಕ ಜಗತ್ತಿನ ಇಂದ್ರಿಯ ಭೋಗಗಳ ಸುದ್ದಿಯನ್ನು ಆಯಾಸವೆನ್ನುವುದೇ ಇಲ್ಲದೆ ಕೇಳುತ್ತಲೇ ಇರುತ್ತಾನೆ. ಆದರೆ ಐಹಿಕ ಜಗತ್ತನ್ನು ಚಲಿಸುವ ಶಾಶ್ವತ ಜೀವಂತ ಶಕ್ತಿಯ ವಿಷಯವನ್ನು ಕೇಳಲು ಅವನಿಗೆ ಸಮಯವೇ ಇರುವುದಿಲ್ಲ.

**2)** ಇನ್ನೊಂದು ಬಗೆಯ **ದುಷ್ಕೃತೀ** ಅಥವಾ ದುಷ್ಕರ್ಮಿಗೆ **ನರಾಧಮ** ಎಂದು ಹೆಸರು. **ನರ** ಎಂದರೆ ಮನುಷ್ಯ, **ಅಧಮ** ಎಂದರೆ ಅತ್ಯಂತ ಕೀಳುಮಟ್ಟದವನು. ಜೀವಿಗಳ 84,00,000 ಬಗೆಗಳಲ್ಲಿ 4,00,000 ಮನುಷ್ಯರ ಬಗೆಗಳಿವೆ. ಇವುಗಳಲ್ಲಿ ಬಹುಮಟ್ಟಿಗೆ ಅನಾಗರಿಕರಾದ ಮನುಷ್ಯರ ಬಹು ಸಂಖ್ಯೆಯ ರೂಪಗಳಿವೆ. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಬದುಕನ್ನು ನಿಯಂತ್ರಿಸುವ ತತ್ವಗಳನ್ನು ಹೊಂದಿರುವವರು ನಾಗರಿಕ ಮನುಷ್ಯರು. ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಬೆಳೆದಿದ್ದರೂ ಧಾರ್ಮಿಕ ತತ್ವಗಳು ಇಲ್ಲದಿರುವವರನ್ನು **ನರಾಧಮರು** ಎಂದು ಪರಿಗಣಿಸಬೇಕಾಗುತ್ತದೆ. ದೇವರಿಲ್ಲದ ಧರ್ಮವು ಧರ್ಮವೇ ಅಲ್ಲ. ಏಕೆಂದರೆ ಧಾರ್ಮಿಕ ತತ್ವಗಳನ್ನು ಅನುಸರಿಸುವುದರ ಉದ್ದೇಶವೇ ಪರಮ ಸತ್ಯವನ್ನೂ, ಅವನೊಡನೆ ನಮ್ಮ ಸಂಬಂಧವನ್ನೂ ಅರಿತುಕೊಳ್ಳುವುದು. ಗೀತೆಯಲ್ಲಿ ದೇವೋತ್ತಮ ಪುರುಷನು ತನಗಿಂತ ಮೇಲಿನ ಅಧಿಕಾರಿ ಇಲ್ಲ, ತಾನೇ ಪರಮ ಸತ್ಯ ಎಂದು ಹೇಳಿದ್ದಾನೆ. ಪರಮ ಸತ್ಯದೊಡನೆ ತನ್ನ ನಿತ್ಯ ಬಾಂಧವ್ಯದ ಪ್ರಜ್ಞೆಯನ್ನು ಮನುಷ್ಯನು ಕಳೆದುಕೊಂಡಿದ್ದಾನೆ. ನಾಗರಿಕ ಮಾನವ ಜೀವನದ ಗುರಿಯು **ಕಳೆದುಕೊಂಡ ಈ ಪ್ರಜ್ಞೆಯ ಪುನಶ್ಚೇತನ;** ಪರಮ ಸತ್ಯವು ದೇವೋತ್ತಮ ಪುರುಷನಾದ ಶ್ರೀಕೃಷ್ಣನೇ ಆಗಿದ್ದಾನೆ. ಅವನು ಸರ್ವಶಕ್ತನು. ಈ ಅವಕಾಶವನ್ನು ಕಳೆದುಕೊಂಡವನನ್ನು **ನರಾಧಮ**ನೆಂಬ ವರ್ಗಕ್ಕೆ ಸೇರಿಸಬೇಕು. ಮಗುವು ತಾಯಿಯ ಗರ್ಭದಲ್ಲಿದ್ದಾಗ (ಇದು ಬಹು ಮುಜುಗರದ ಸ್ಥಿತಿ) ಅದು, ತನ್ನನ್ನು ಬಿಡುಗಡೆ ಮಾಡಬೇಕೆಂದೂ ತಾನು ಹೊರಗೆ ಬಂದ ಕ್ಷಣದಿಂದ ಅವನನ್ನು ಮಾತ್ರವೇ ಪೂಜಿಸುವುದಾಗಿಯೂ ದೇವರನ್ನು ಬೇಡಿಕೊಳ್ಳುತ್ತದೆ ಎಂದು ಅಪೌರುಷೇಯ ಪವಿತ್ರ ಗ್ರಂಥಗಳು ತಿಳಿಸುತ್ತವೆ. ತಾನು ಕಷ್ಟದಲ್ಲಿರುವಾಗ ದೇವರಿಗೆ ಪ್ರಾರ್ಥನೆ ಮಾಡುವುದು ಜೀವಿಗೆ ಸಹಜವಾದ ಪ್ರವೃತ್ತಿ. ಏಕೆಂದರೆ ಅದಕ್ಕೆ ಭಗವಂತನೊಡನೆ ನಿರಂತರ ಬಾಂಧವ್ಯವಿದೆ. ಆದರೆ ಗರ್ಭದಿಂದ ಹೊರ ಬಂದ ಮೇಲೆ ಮಗುವು ಮಾಯೆಯ ಪ್ರಭಾವದಿಂದ ಜನನದ ಕಷ್ಟಗಳನ್ನು ಮರೆತು ಬಿಡುತ್ತದೆ. ತನ್ನ ಉದ್ಧಾರಕನನ್ನೂ ಮರೆತು ಬಿಡುತ್ತದೆ.

ಮಕ್ಕಳಲ್ಲಿ ಸುಪ್ತವಾಗಿರುವ ದೈವಿಕ ಪ್ರಜ್ಞೆಯನ್ನು ಪುನಶ್ಚೇತನಗೊಳಿಸುವುದು ಅವರ ಪೋಷಕರ ಕರ್ತವ್ಯ. ಧಾರ್ಮಿಕ ತತ್ವಗಳ ಮಾರ್ಗದರ್ಶನವು **ಮನುಸ್ಮೃತಿ**ಯಲ್ಲಿ ದೊರಕುತ್ತದೆ. ಇದರಲ್ಲಿ ವಿಧಿಸಿರುವ ಹತ್ತು ಸಂಸ್ಕಾರಗಳ ಉದ್ದೇಶವು ವರ್ಣಾಶ್ರಮ ವ್ಯವಸ್ಥೆಯಲ್ಲಿ ದೈವಿಕ ಪ್ರಜ್ಞೆಯನ್ನು ಪುನಶ್ಚೇತನಗೊಳಿಸುವುದು. ಆದರೆ ಈಗ ಜಗತ್ತಿನ ಯಾವುದೇ ಭಾಗದಲ್ಲಿ ಯಾವ ಪ್ರಕ್ರಿಯೆಯನ್ನೂ ಕಟ್ಟುನಿಟ್ಟಾಗಿ ಅನುಸರಿಸುವುದಿಲ್ಲ. ಆದುದರಿಂದ ಜನತೆಯಲ್ಲಿ ಶೇಕಡಾ 99.9ರಷ್ಟು ನರಾಧಮರೇ.

ಇಡೀ ಜನಸ್ತೋಮವೇ **ನರಾಧಮ**ವಾದಾಗ ಶಿಕ್ಷಣವೆಂದು ಕರೆಯುವ ಪ್ರಕ್ರಿಯೆಯು ಭೌತಿಕ ಪ್ರಕೃತಿಯ ಸರ್ವಶಕ್ತ ಚೈತನ್ಯದಿಂದ ಸಹಜವಾಗಿಯೇ ನಿಷ್ಫಲವಾಗುತ್ತದೆ. ಗೀತೆಯ ಮಾನದಂಡದ ಪ್ರಕಾರ, ವಿದ್ವಾಂಸನಾದ ಬ್ರಾಹ್ಮಣನನ್ನೂ, ನಾಯಿಯನ್ನೂ, ಹಸುವನ್ನೂ, ಆನೆಯನ್ನೂ, ನಾಯಿ ತಿನ್ನುವವನನ್ನೂ ಒಂದೇ ರೀತಿಯಲ್ಲಿ ಕಾಣುವವನೇ ವಿದ್ವಾಂಸನು. ಇದು ನಿಜವಾದ ಭಕ್ತನ ದರ್ಶನ. ಭಗವಂತನ ಅವತಾರರಾದ ಶ್ರೀ ನಿತ್ಯಾನಂದ ಪ್ರಭುಗಳು ಆಚಾರ್ಯರ ರೂಪದಲ್ಲಿ ನರಾಧಮರ ಮಾದರಿ ಎನಿಸಿದ ಜಗಾಯಿ ಮತ್ತು ಮಾಧಾಯಿ ಸಹೋದರರನ್ನು ಉದ್ಧರಿಸಿದರು. ಮನುಷ್ಯ ಕುಲದಲ್ಲಿ ಅತ್ಯಂತ ಕೀಳಾದವರಿಗೂ ನಿಜವಾದ ಭಕ್ತನು ತನ್ನ ಕೃಪೆಯನ್ನು ಹೇಗೆ ಅನುಗ್ರಹಿಸುತ್ತಾನೆ ಎನ್ನುವುದನ್ನು ತೋರಿಸಿಕೊಟ್ಟರು. ಆದುದರಿಂದ ದೇವೋತ್ತಮ ಪುರುಷನು ದೋಷಪೂರಿತನೆಂದು ತೀರ್ಮಾನಿಸಿದ ನರಾಧಮನು ಭಕ್ತನೊಬ್ಬನ ಕೃಪೆಯಿಂದ ಮಾತ್ರವೇ ತನ್ನ ಆಧ್ಯಾತ್ಮಿಕ ಪ್ರಜ್ಞೆಯನ್ನು ಪುನಶ್ಚೇತನಗೊಳಿಸಿಕೊಳ್ಳಲು ಸಾಧ್ಯ.

ಭಾಗವತ ಧರ್ಮವನ್ನು ಅಥವಾ ಭಕ್ತರ ಚಟುವಟಿಕೆಗಳನ್ನು ಪ್ರಸಾರಗೊಳಿಸುತ್ತ ಶ್ರೀ ಚೈತನ್ಯ ಮಹಾಪ್ರಭುಗಳು ಜನರು ವಿನಮ್ರರಾಗಿ ದೇವೋತ್ತಮ ಪುರುಷನ ಸಂದೇಶವನ್ನು ಆಲಿಸಬೇಕೆಂದು ಸಲಹೆ ಮಾಡಿದ್ದಾರೆ. ಈ ಸಂದೇಶದ ತಿರುಳು ಭಗವದ್ಗೀತೆ. ನರಾಧಮರು ಈ ಸಂದೇಶವನ್ನು ಆಲಿಸಿದರೆ ಸಾಕು, ಉದ್ಧಾರವಾಗಬಲ್ಲರು. ಆದರೆ ದುರದೃಷ್ಟದಿಂದ, ಪರಮ ಪ್ರಭುವಿನ ಇಚ್ಛೆಗೆ ಶರಣಾಗುವುದಿರಲಿ, ಅವರು ಈ ಸಂದೇಶಗಳನ್ನು ಕಿವಿಯಿಂದ ಕೇಳಿಸಿಕೊಳ್ಳುವುದಕ್ಕೂ ಒಪ್ಪುವುದಿಲ್ಲ. **ನರಾಧಮರು** ಮನುಷ್ಯನ ಮುಖ್ಯ ಕರ್ತವ್ಯವನ್ನು ಸಂಪೂರ್ಣವಾಗಿ ಕಡೆಗಣಿಸುತ್ತಾರೆ.

**3) ದುಷ್ಕೃತೀ**ಗಳಲ್ಲಿ ಮತ್ತೊಂದು ವರ್ಗಕ್ಕೆ **ಮಾಯಯಾಪಹೃತಜ್ಞಾನಾಃ** ಎಂದು ಹೆಸರು. ಇವರ ವಿದ್ವತ್ತು ಮಾಯೆಯ ಐಹಿಕ ಶಕ್ತಿಯ ಪ್ರಭಾವದಿಂದ ನಿಷ್ಫಲವಾಗಿರುತ್ತದೆ. ಸಾಮಾನ್ಯವಾಗಿ ಅವರು ತುಂಬ ಪಾಂಡಿತ್ಯವಿರುವವರು — ಹಿರಿಯ ತತ್ವಜ್ಞಾನಿಗಳು, ಕವಿಗಳು, ಸಾಹಿತಿಗಳು, ವಿಜ್ಞಾನಿಗಳು ಇತ್ಯಾದಿ. ಆದರೆ ಮಾಯಾಶಕ್ತಿಯು ಅವರನ್ನು ತಪ್ಪುದಾರಿಗೆಳೆಯುತ್ತದೆ. ಆದುದರಿಂದ ಅವರು ಭಗವಂತನಿಗೆ ಅವಿಧೇಯರಾಗುತ್ತಾರೆ.

**ಮಾಯಯಾಪಹೃತಜ್ಞಾನಾಃ** ಎನ್ನಿಸಿಕೊಳ್ಳುವ ಜನರ ಸಂಖ್ಯೆ ಈಗ ಬಹುದೊಡ್ಡದು. ಭಗವದ್ಗೀತೆಯ ವಿದ್ವಾಂಸರಲ್ಲಿ ಸಹ ಇವರ ಸಂಖ್ಯೆ ದೊಡ್ಡದು. ಗೀತೆಯಲ್ಲಿ ಸ್ಪಷ್ಟವಾದ ಮತ್ತು ಸರಳವಾದ ಭಾಷೆಯಲ್ಲಿ ಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ಹೇಳಿದೆ. ಅವನಿಗೆ ಸರಿಸಮಾನರಾದವರು ಅಥವಾ ಅವನಿಗಿಂತ ಹಿರಿಯರಾದವರು ಯಾರೂ ಇಲ್ಲ. ಎಲ್ಲ ಮನುಷ್ಯರ ಮೂಲ ಜನಕನಾದ ಬ್ರಹ್ಮನ ತಂದೆ ಕೃಷ್ಣ ಎಂದು ಹೇಳಿದೆ. ವಾಸ್ತವವಾಗಿ ಕೃಷ್ಣನು ಬ್ರಹ್ಮನ

ತಂದೆ ಎಂದು ಮಾತ್ರವೇ ಹೇಳಿಲ್ಲ, ಅವನು ಜೀವದ ಎಲ್ಲ ವರ್ಗಗಳ ತಂದೆ ಎಂದೂ ಹೇಳಿದೆ. ಅವನು ನಿರಾಕಾರ ಬ್ರಹ್ಮನ ಮತ್ತು ಪರಮಾತ್ಮನ ಬೇರು. ಪ್ರತಿ ಜೀವಿಯಲ್ಲಿನ ಪರಮಾತ್ಮನು ಅವನ ಸ್ವಾಂಶ. ಅವನು ಎಲ್ಲದರ ಆದಿಮೂಲ, ಪ್ರತಿಯೊಬ್ಬರೂ ಅವನ ಚರಣಕಮಲಗಳಿಗೆ ಶರಣಾಗಬೇಕೆಂದು ಬುದ್ಧಿವಾದ ಹೇಳಲಾಗಿದೆ. ಈ ಎಲ್ಲ ಸ್ಪಷ್ಟ ಹೇಳಿಕೆಗಳಿದ್ದರೂ **ಮಾಯಯಾಪಹೃತಜ್ಞಾನಾಃ** ವರ್ಗದವರು ಪರಮ ಪ್ರಭುವಿನ ವ್ಯಕ್ತಿತ್ವವನ್ನು ಹಾಸ್ಯಮಾಡುತ್ತಾರೆ ಮತ್ತು ಅವನು ಇನ್ನೊಬ್ಬ ಮನುಷ್ಯ ಮಾತ್ರ ಎಂದು ಭಾವಿಸುತ್ತಾರೆ. ಭಗವಂತನ ಅನುಗ್ರಹ ಪಡೆದಿರುವ ಮಾನವ ಜನ್ಮದ ರೂಪವನ್ನು ಪರಮ ಪ್ರಭುವಿನ ನಿತ್ಯವಾದ ಮತ್ತು ದಿವ್ಯವಾದ ರೂಪವನ್ನು ಅನುಸರಿಸಿ ರೂಪಿಸಿದೆ ಎನ್ನುವುದು ಇವರಿಗೆ ತಿಳಿದಿಲ್ಲ.

ಪರಂಪರಾ ಪದ್ಧತಿಯ ವ್ಯಾಪ್ತಿಯ ಆಚೆಗಿರುವ **ಮಾಯಯಾಪಹೃತಜ್ಞಾನಾಃ** ವರ್ಗದವರು ಅಧಿಕಾರವಿಲ್ಲದೆಯೇ ಕೊಡುವ ಗೀತೆಯ ವ್ಯಾಖ್ಯಾನಗಳು ಆಧ್ಯಾತ್ಮಿಕ ಅರಿವಿನ ಹಾದಿಯಲ್ಲಿ ಅಡಚಣೆಗಳು. ಭ್ರಮೆಗೊಳಗಾದ ವ್ಯಾಖ್ಯಾನಕಾರರು ಶ್ರೀಕೃಷ್ಣನ ಪಾದಪದ್ಮಗಳಿಗೆ ಶರಣಾಗುವುದಿಲ್ಲ. ಈ ತತ್ವವನ್ನು ಅನುಸರಿಸಬೇಕೆಂದು ಬೋಧಿಸುವುದೂ ಇಲ್ಲ.

**4) ದುಷ್ಕೃತೀ**ಗಳ ಕಡೆಯ ವರ್ಗಕ್ಕೆ **ಆಸುರಂ ಭಾವಮ್ ಆಶ್ರಿತಾಃ** ಅಥವಾ ರಾಕ್ಷಸೀ ತತ್ವಗಳವರು ಎಂದು ಹೆಸರು. ಈ ವರ್ಗದವರು ಬಹಿರಂಗವಾಗಿಯೇ ನಾಸ್ತಿಕರು. ಅವರಲ್ಲಿ ಕೆಲವರು ಈ ಭೌತಿಕ ಜಗತ್ತಿಗೆ ಪರಮ ಪ್ರಭುವು ಇಳಿದು ಬರಲಾರ ಎಂದು ವಾದಮಾಡುತ್ತಾರೆ. ಆದರೆ ಏಕೆ ಬರಲಾರ ಎನ್ನುವುದಕ್ಕೆ ಸ್ಪಷ್ಟವಾದ ಕಾರಣಗಳನ್ನು ಅವರು ಕೊಡಲಾರರು. ಭಗವಂತನು ನಿರಾಕಾರ ರೂಪಕ್ಕಿಂತ ಶ್ರೇಷ್ಠನಾದವನು ಎಂದು ಗೀತೆಯಲ್ಲಿ ಘೋಷಿಸಿದ್ದರೂ ಅವನನ್ನು ನಿರಾಕಾರ ರೂಪಕ್ಕೆ ಅಧೀನನನ್ನಾಗಿ ಮಾಡುವ ಕೆಲವರು ಇದ್ದಾರೆ. ದೇವೋತ್ತಮ ಪರಮ ಪುರುಷನ ಬಗ್ಗೆ ಅಸೂಯೆಯಿಂದಾಗಿ ನಾಸ್ತಿಕನಾದವನು ತನ್ನ ಮೆದುಳೆಂಬ ಕಾರ್ಖಾನೆಯಲ್ಲಿ ತಯಾರು ಮಾಡಿದ ಅನೇಕ ನಿಷಿದ್ಧ ಅವತಾರಗಳನ್ನು ಮುಂದಿಡುತ್ತಾನೆ. ಬದುಕಿನಲ್ಲಿ ಇಂತಹವರ ತತ್ವವೇ ದೇವೋತ್ತಮ ಪುರುಷನನ್ನು ನಿಂದಿಸುವುದು; ಇಂತಹವರು ಶ್ರೀಕೃಷ್ಣನ ಪಾದಕಮಲಗಳಿಗೆ ಶರಣಾಗತರಾಗಲು ಸಾಧ್ಯವಿಲ್ಲ.

ದಕ್ಷಿಣ ಭಾರತದ ಶ್ರೀ ಯಾಮುನಾಚಾರ್ಯ ಆಳವಂದಾರರು ಹೀಗೆ ಹೇಳಿದ್ದಾರೆ — "ನನ್ನ ಪ್ರಭುವೇ! ನಿನ್ನದು ಅಸಾಧಾರಣ ಗುಣ, ಲಕ್ಷಣ, ಲೀಲೆಗಳು. ಎಲ್ಲ ಸಾತ್ವಿಕ ಶಾಸ್ತ್ರಗಳಲ್ಲಿಯೂ ನೀನೇ ಪರಮ ಪುರುಷ ಎಂದು ದೃಢಪಡಿಸಲಾಗಿದೆ. ಆಧ್ಯಾತ್ಮಿಕ ವಿಜ್ಞಾನದಲ್ಲಿ ತಮ್ಮ ಆಳವಾದ ಜ್ಞಾನಕ್ಕಾಗಿ ಪ್ರಸಿದ್ಧರಾದವರು ಮತ್ತು ದೈವೀ ಗುಣಗಳಲ್ಲಿ ನೆಲೆಸಿದವರೂ ಆದ ಪ್ರಸಿದ್ಧ ಆಚಾರ್ಯರು ನಿನ್ನ ಹಿರಿಮೆಯನ್ನು ಒಪ್ಪಿಕೊಂಡಿದ್ದಾರೆ. ಇಷ್ಟಾದರೂ ನಾಸ್ತಿಕ ತತ್ವಗಳಲ್ಲಿ ಸಿಲುಕಿ ಕೊಂಡಿರುವವರು ನಿನ್ನನ್ನು ಅರಿಯಲಾರರು."

ಆದುದರಿಂದ ಮೇಲೆ ಹೇಳಿದಂತೆ (1) ಅತ್ಯಂತ ಮೂಢರಾದವರು, (2) ನರಾಧಮರು, (3) ಭ್ರಮಿತರಾದ ಊಹಾತ್ಮಕ ಚಿಂತಕರು ಮತ್ತು (4) ಬಹಿರಂಗ ನಾಸ್ತಿಕರು — ಇವರು ಎಲ್ಲ ಶಾಸ್ತ್ರಗಳು ಮತ್ತು ಅಧಿಕಾರವಾಣಿಗಳು ಬುದ್ಧಿವಾದ ಹೇಳಿದರೂ ದೇವೋತ್ತಮ ಪುರುಷನ ಚರಣಕಮಲಗಳಿಗೆ ಶರಣಾಗತರಾಗುವುದೇ ಇಲ್ಲ.

## ಶ್ಲೋಕ - 16

**ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ |**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||೧೬||**

**ಚತುರ್ವಿಧಾಃ**—ನಾಲ್ಕು ಬಗೆಯ; **ಭಜನ್ತೇ**—ಸೇವೆಗಳನ್ನು ಸಲ್ಲಿಸುತ್ತಾರೆ; **ಮಾಮ್**—ನನಗೆ; **ಜನಾಃ**—ಜನರು; **ಸುಕೃತಿನಃ**—ಪುಣ್ಯವಂತರಾದ; **ಅರ್ಜುನ**—ಅರ್ಜುನನೇ; **ಆರ್ತಃ**—ದುಃಖಿಯು; **ಜಿಜ್ಞಾಸುಃ**—ವಿಚಾರ ಶೀಲನು; **ಅರ್ಥ ಅರ್ಥೀ**—ಭೌತಿಕ ಲಾಭಾಪೇಕ್ಷಿಯು; **ಜ್ಞಾನೀ**—ವಿಷಯಗಳನ್ನು ಯಥಾಸ್ಥಿತಿಯಲ್ಲಿ ಅರಿತವನು; **ಚ**—ಕೂಡ; **ಭರತ ಋಷಭ**—ಭರತ ಕುಲದಲ್ಲಿ ಶ್ರೇಷ್ಠನಾದವನೇ.

## ಅನುವಾದ

**ಭರತ ವಂಶಜರಲ್ಲಿ ಶ್ರೇಷ್ಠನಾದ ಅರ್ಜುನನೆ, ನಾಲ್ಕು ವಿಧಗಳ ಪುಣ್ಯವಂತರು ನನಗೆ ಭಕ್ತಿಸೇವೆಯನ್ನು ಮಾಡಲು ಪ್ರಾರಂಭಿಸುತ್ತಾರೆ. ದುಃಖಿಗಳು, ಜಿಜ್ಞಾಸುಗಳು, ಐಶ್ವರ್ಯವನ್ನು ಬಯಸುವವರು ಮತ್ತು ಪರಾತ್ಪರದ ಜ್ಞಾನದ ಅನ್ವೇಷಣೆ ಮಾಡುವವರು — ಇವರೇ ಈ ನಾಲ್ಕು ಬಗೆಯ ಜನರು.**

## ಭಾವಾರ್ಥ

ಶಾಸ್ತ್ರಗಳ ನಿಯಂತ್ರಕ ತತ್ವಗಳನ್ನೂ ನೈತಿಕ ಮತ್ತು ಸಾಮಾಜಿಕ ನಿಯಮಗಳನ್ನೂ ಅನುಸರಿಸುವವರಿಗೆ **ಸುಕೃತಿನಃ** ಎಂದು ಹೆಸರು. ದುಷ್ಕರ್ಮಿಗಳಂತಲ್ಲದೆ ಸುಕೃತಿಗಳಾದ ಜನರು ಬಹುಮಟ್ಟಿಗೆ ಭಗವದ್ಭಕ್ತರಾಗಿರುತ್ತಾರೆ. ಇವರಲ್ಲಿ ನಾಲ್ಕು ವಿಧ — ಕೆಲವೊಮ್ಮೆ ದುಃಖಿಗಳಾಗಿರುವವರು, ಹಣದ ಅಗತ್ಯವಿರುವವರು, ಕೆಲವೊಮ್ಮೆ ಕುತೂಹಲಿಗಳಾಗಿರುವವರು ಮತ್ತು ಪರಮ ಸತ್ಯದ ಜ್ಞಾನವನ್ನು ಅನ್ವೇಷಿಸುವವರು. ಇವರು ಭಗವಂತನ ಭಕ್ತಿಸೇವೆಗೆ ಬೇರೆ ಬೇರೆ ಸ್ಥಿತಿಗಳಲ್ಲಿ ಬರುತ್ತಾರೆ. ಇವರು ಪರಿಶುದ್ಧ ಭಕ್ತರಲ್ಲ. ಏಕೆಂದರೆ ಭಕ್ತಿಸೇವೆಗೆ ಬದಲಾಗಿ ಯಾವುದೋ ಆಕಾಂಕ್ಷೆಯು ನೆರವೇರಬೇಕೆಂದು ಇವರು ಬಯಸುತ್ತಾರೆ. ಪರಿಶುದ್ಧ ಭಕ್ತಿಗೆ ಯಾವುದೇ ಆಕಾಂಕ್ಷೆ ಇರುವುದಿಲ್ಲ ಮತ್ತು ಯಾವುದೇ ಐಹಿಕ ಲಾಭದ ಬಯಕೆಯಿರುವುದಿಲ್ಲ. ಪರಿಶುದ್ಧ ಭಕ್ತಿಯನ್ನು ಭಕ್ತಿರಸಾಮೃತ ಸಿಂಧು (1.1.11) ಹೀಗೆ ವಿವರಿಸುತ್ತದೆ —

**ಅನ್ಯಾಭಿಲಾಷಿತಾ ಶೂನ್ಯಂ ಜ್ಞಾನ ಕರ್ಮಾದ್ಯನಾವೃತಮ್ |**
**ಆನುಕೂಲ್ಯೇನ ಕೃಷ್ಣಾನು ಶೀಲನಂ ಭಕ್ತಿರುತ್ತಮಾ ||**

"ಪರಮ ಪ್ರಭು ಶ್ರೀಕೃಷ್ಣನಿಗೆ ದಿವ್ಯ ಪ್ರೇಮ ಸೇವೆಯನ್ನು ಸ್ನೇಹಭಾವದಿಂದ ಸಲ್ಲಿಸಬೇಕು. ಇಂತಹ ಸೇವೆ ಮಾಡುವಾಗ, ಕಾಮ್ಯ ಕರ್ಮದಿಂದ ಅಥವಾ ಊಹಾತ್ಮಕ ಚಿಂತನೆಯಿಂದ, ಐಹಿಕ ಲಾಭ ಪಡೆಯುವ ಆಸೆ ಇರಬಾರದು. ಅಂತಹುದನ್ನು ಶುದ್ಧ ಭಕ್ತಿಸೇವೆ ಎಂದು ಕರೆಯುತ್ತಾರೆ."

ಈ ನಾಲ್ಕು ಬಗೆಯ ಜನರು ಭಕ್ತಿಸೇವೆ ಮಾಡಲೆಂದು ಭಗವಂತನ ಬಳಿಗೆ ಬಂದು ಪರಿಶುದ್ಧ ಭಕ್ತನೊಬ್ಬನ ಸಹಯೋಗದಿಂದ ಸಂಪೂರ್ಣವಾಗಿ ಪರಿಶುದ್ಧರಾದಾಗ ತಾವೂ ಪರಿಶುದ್ಧ ಭಕ್ತರಾಗುತ್ತಾರೆ. ದುಷ್ಕರ್ಮಿಗಳ ವಿಷಯ ಹೇಳುವುದಾದರೆ, ಅವರ ಬದುಕು ಸ್ವಾರ್ಥಪರ, ಅದರಲ್ಲಿ ನಿಯಮವಿಲ್ಲ ಮತ್ತು ಆಧ್ಯಾತ್ಮಿಕ ಗುರಿಗಳೂ ಇಲ್ಲ. ಆದುದರಿಂದ ಅವರಿಗೆ

ಭಕ್ತಿಸೇವೆಯನ್ನು ಮಾಡುವುದು ಬಹಳ ಕಷ್ಟ. ಆದರೆ ಅವರಲ್ಲಿಯೂ ಸಹ ಕೆಲವರು ಅಕಸ್ಮಾತ್ತಾಗಿ ಪರಿಶುದ್ಧ ಭಕ್ತನ ಸಂಪರ್ಕಕ್ಕೆ ಬಂದಾಗ ಪರಿಶುದ್ಧ ಭಕ್ತರಾಗುತ್ತಾರೆ.

ಫಲಾಪೇಕ್ಷಿತ ಕರ್ಮಗಳಲ್ಲಿ ಸದಾ ಮುಳುಗಿರುವವರು ಐಹಿಕವಾಗಿ ಕಷ್ಟದಲ್ಲಿರುವಾಗ ಭಗವಂತನ ಬಳಿಗೆ ಬರುತ್ತಾರೆ ಮತ್ತು ಆಗ ಪರಿಶುದ್ಧ ಭಕ್ತರೊಡನೆ ಸೇರುತ್ತಾರೆ. ಅವರು ತಮ್ಮ ನೋವಿನ ಕಾರಣದಿಂದಾಗಿ ಭಗವದ್ಭಕ್ತರಾಗುತ್ತಾರೆ. ಹತಾಶರಾದವರೂ ಸಹ ಕೆಲವೊಮ್ಮೆ ಪರಿಶುದ್ಧ ಭಕ್ತರ ಸಹವಾಸವನ್ನು ಪಡೆಯುತ್ತಾರೆ ಮತ್ತು ಭಗವಂತನ ವಿಷಯವನ್ನು ತಿಳಿದುಕೊಳ್ಳಲು ಕುತೂಹಲಿಗಳಾಗುತ್ತಾರೆ. ಇದೇ ರೀತಿಯಲ್ಲಿ ಒಣ ತತ್ವಶಾಸ್ತ್ರಜ್ಞರು ಜ್ಞಾನದ ಎಲ್ಲ ಕ್ಷೇತ್ರಗಳಲ್ಲಿ ನಿರಾಶರಾದಾಗ ಕೆಲವೊಮ್ಮೆ ಭಗವಂತನ ವಿಷಯವನ್ನು ತಿಳಿದುಕೊಳ್ಳಲು ಬಯಸುತ್ತಾರೆ. ಅವರು ಪರಮ ಪ್ರಭುವಿನ ಭಕ್ತಿಸೇವೆಗೆ ಬರುತ್ತಾರೆ. ನಿರಾಕಾರ ಬ್ರಹ್ಮನ ತಿಳುವಳಿಕೆಯನ್ನು, ಅಂತರ್ಯಾಮಿ ಪರಮಾತ್ಮನ ತಿಳುವಳಿಕೆಯನ್ನು ಮೀರಿ ಪರಮ ಪ್ರಭುವಿನ ಅಥವಾ ಅವನ ಪರಿಶುದ್ಧ ಭಕ್ತನ ಕೃಪೆಯಿಂದ ದೇವತ್ವದ ಸಾಕಾರ ಕಲ್ಪನೆಗೆ ಬರುತ್ತಾರೆ. ಒಟ್ಟಿನಲ್ಲಿ ದುಃಖಿಗಳು, ಜಿಜ್ಞಾಸುಗಳು, ಜ್ಞಾನಿಗಳು ಮತ್ತು ಹಣವನ್ನು ಬಯಸುವವರು — ಇವರೆಲ್ಲ ಐಹಿಕ ಬಯಕೆಗಳಿಂದ ದೂರವಾಗಿ, ಐಹಿಕ ಪ್ರತಿಫಲಕ್ಕೂ ಆಧ್ಯಾತ್ಮಿಕ ಉತ್ಕರ್ಷಕ್ಕೂ ಸಂಬಂಧವಿಲ್ಲ ಎನ್ನುವುದನ್ನು ಅರ್ಥ ಮಾಡಿಕೊಂಡಾಗ ಪರಿಶುದ್ಧ ಭಕ್ತರಾಗುತ್ತಾರೆ. ಇಂತಹ ಶುದ್ಧ ಹಂತವನ್ನು ತಲಪುವವರೆಗೆ ಭಗವಂತನ ಆಧ್ಯಾತ್ಮಿಕ ಸೇವೆಯಲ್ಲಿ ನಿರತರಾದ ಭಕ್ತರಿಗೆ ಫಲಾಪೇಕ್ಷೆಯ ಕರ್ಮಗಳು, ಐಹಿಕ ವಿದ್ಯೆಯ ಅನ್ವೇಷಣೆ ಇಂತಹವುಗಳ ಮಾಲಿನ್ಯ ಇದ್ದೇ ಇರುತ್ತದೆ. ಮನುಷ್ಯನು ಪರಿಶುದ್ಧ ಭಕ್ತಿಸೇವೆಯ ಹಂತಕ್ಕೆ ಬರಲು ಸಾಧ್ಯವಾಗುವ ಮೊದಲು ಇವೆಲ್ಲವನ್ನೂ ದಾಟಬೇಕಾಗುತ್ತದೆ.

## ಶ್ಲೋಕ - 17

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋऽತ್ಯರ್ಥಮಹಂ ಸ ಚ ಮಮ ಪ್ರಿಯಃ ॥೧೭॥**

**ತೇಷಾಮ್**—ಅವರಲ್ಲಿ; **ಜ್ಞಾನೀ**—ಪೂರ್ಣಜ್ಞಾನವುಳ್ಳ; **ನಿತ್ಯ ಯುಕ್ತಃ**—ಸದಾ ನಿರತನಾಗಿರುವ; **ಏಕ**—ಒಂದೇ ಒಂದಾದ; **ಭಕ್ತಿಃ**—ಭಕ್ತಿಸೇವೆಯಲ್ಲಿರುವವನು; **ವಿಶಿಷ್ಯತೇ**—ವಿಶಿಷ್ಟನಾಗಿರುತ್ತಾನೆ; **ಪ್ರಿಯಃ**—ಬಹಳ ಪ್ರಿಯನು; **ಹಿ**—ಖಂಡಿತವಾಗಿಯೂ; **ಜ್ಞಾನಿನಃ**—ಜ್ಞಾನಿಗೆ; **ಅತ್ಯರ್ಥಮ್**—ಅತ್ಯಂತ; **ಅಹಮ್**—ನಾನು ಆಗಿದ್ದೇನೆ; **ಸಃ**—ಅವನು; **ಚ**—ಕೂಡ; **ಮಮ**—ನನಗೆ; **ಪ್ರಿಯಃ**—ಪ್ರೀತಿಪಾತ್ರನು.

## ಅನುವಾದ

**ಇವರಲ್ಲಿ ಪೂರ್ಣಜ್ಞಾನವಿರುವವನು ಮತ್ತು ಸದಾ ಶುದ್ಧ ಭಕ್ತಿಸೇವೆಯಲ್ಲಿ ನಿರತನಾಗಿರುವವನು ಶ್ರೇಷ್ಠನು. ಅವನಿಗೆ ನಾನು ಬಹಳ ಪ್ರಿಯನಾದವನು ಮತ್ತು ನನಗೆ ಅವನು ಪ್ರಿಯನಾದವನು.**

## ಭಾವಾರ್ಥ

ದುಃಖದಲ್ಲಿರುವವರು, ಕುತೂಹಲಿಗಳು, ಹಣವಿಲ್ಲದವರು ಮತ್ತು ಪರಮ ಜ್ಞಾನವನ್ನು ಅನ್ವೇಷಿಸುವವರು ಎಲ್ಲರೂ ಐಹಿಕ ಅಪೇಕ್ಷೆಗಳ ಎಲ್ಲ ಕಶ್ಮಲದಿಂದ ದೂರವಾಗಿ ಪರಿಶುದ್ಧ

ಭಕ್ತರಾಗಲು ಸಾಧ್ಯ. ಆದರೆ ಅವರಲ್ಲಿ ಪರಮೋನ್ನತ ಸತ್ಯದ ಜ್ಞಾನವುಳ್ಳವನು ಮತ್ತು ಎಲ್ಲ ಐಹಿಕ ಅಪೇಕ್ಷೆಗಳಿಂದ ಮುಕ್ತನಾದವನು ನಿಜವಾಗಿಯೂ ಭಗವಂತನ ಪರಿಶುದ್ಧ ಭಕ್ತನಾಗುತ್ತಾನೆ. ಈ ನಾಲ್ಕು ವರ್ಗಗಳಲ್ಲಿ ಸಂಪೂರ್ಣ ಜ್ಞಾನವುಳ್ಳವನು ಮತ್ತು ಅದೇ ಕಾಲದಲ್ಲಿ ಭಕ್ತಿಸೇವೆಯಲ್ಲಿ ನಿರತನಾದವನು ಅತ್ಯಂತ ಶ್ರೇಷ್ಠನಾದವನು ಎಂದು ಭಗವಂತನು ಹೇಳುತ್ತಾನೆ. ಜ್ಞಾನಾನ್ವೇಷಣೆಯಲ್ಲಿ ಮನುಷ್ಯನಿಗೆ ತಾನು ತನ್ನ ಐಹಿಕ ದೇಹದಿಂದ ಬೇರೆ ಎನ್ನುವುದು ಅರ್ಥವಾಗುತ್ತದೆ. ಇನ್ನೂ ಮುಂದಕ್ಕೆ ಸಾಗಿದಾಗ ಅವನಿಗೆ ನಿರಾಕಾರ ಬ್ರಹ್ಮನ ಮತ್ತು ಪರಮಾತ್ಮನ ಅರಿವುಂಟಾಗುತ್ತದೆ. ಸಂಪೂರ್ಣವಾಗಿ ಪರಿಶುದ್ಧನಾದಾಗ ಭಗವಂತನ ನಿರಂತರ ಸೇವಕನಾಗಿರುವುದೇ ತನ್ನ ಸಹಜ ಸ್ವರೂಪ ಎನ್ನುವ ಜ್ಞಾನವನ್ನು ಅವನು ಪಡೆಯುತ್ತಾನೆ. ಹೀಗೆ ಪರಿಶುದ್ಧ ಭಕ್ತರ ಸಹಯೋಗದಿಂದ ಕುತೂಹಲಿಯಾದವನು, ದುಃಖಿಯಾದವನು, ಪ್ರಾಪಂಚಿಕ ಏಳಿಗೆಯನ್ನು ಅರಸುವವನು ಮತ್ತು ಜ್ಞಾನಿ ಎಲ್ಲರೂ ತಾವೇ ಪರಿಶುದ್ಧರಾಗುತ್ತಾರೆ. ಆದರೆ ಸಿದ್ಧತೆಯ ಹಂತದಲ್ಲಿ ಭಗವಂತನ ಸಂಪೂರ್ಣ ಜ್ಞಾನವನ್ನು ಪಡೆದು ಅದೇ ಕಾಲದಲ್ಲಿ ಪರಮ ಪ್ರಭುವಿನ ಭಕ್ತಿಸೇವೆಯನ್ನು ಮಾಡುವವನು ಪ್ರಭುವಿಗೆ ಅತ್ಯಂತ ಪ್ರಿಯನಾಗುತ್ತಾನೆ. ದೇವೋತ್ತಮ ಪರಮ ಪುರುಷನ ಅಲೌಕಿಕತೆಯ ಪರಿಶುದ್ಧ ಭಕ್ತಿಸೇವೆಯಲ್ಲಿ ನೆಲೆಸಿರುವವನನ್ನು ಅವನ ಭಕ್ತಿಸೇವೆಯು ಎಷ್ಟರಮಟ್ಟಿಗೆ ರಕ್ಷಿಸುತ್ತದೆ ಎಂದರೆ ಐಹಿಕ ಕಲ್ಮಷವು ಅವನನ್ನು ಮುಟ್ಟಲಾರದು.

## ಶ್ಲೋಕ - 18

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ |**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ||೧೮||**

**ಉದಾರಾಃ**—ಉದಾರ ಹೃದಯದವರು; **ಸರ್ವೇ**—ಎಲ್ಲರೂ; **ಏವ**—ಖಂಡಿತವಾಗಿಯೂ; **ಏತೇ**—ಈ; **ಜ್ಞಾನೀ**—ಜ್ಞಾನದಲ್ಲಿರುವವನು; **ತು**—ಆದರೆ; **ಆತ್ಮಾ ಏವ**—ನನ್ನಂತೆಯೇ ಎಂದು; **ಮೇ**—ನನ್ನ; **ಮತಮ್**—ಅಭಿಪ್ರಾಯ; **ಆಸ್ಥಿತಃ**—ನೆಲೆಸಿದವನು; **ಸಃ**—ಅವನು; **ಹಿ**—ಖಂಡಿತವಾಗಿಯೂ; **ಯುಕ್ತ ಆತ್ಮಾ**—ಭಕ್ತಿಸೇವೆಯಲ್ಲಿ ನಿರತನಾದ; **ಮಾಮ್**—ನನ್ನಲ್ಲಿ; **ಏವ**—ಖಂಡಿತವಾಗಿಯೂ; **ಅನುತ್ತಮಾಮ್**—ಅತ್ಯುತ್ತಮ; **ಗತಿಮ್**—ಗತಿಯಾದ.

## ಅನುವಾದ

**ಈ ಎಲ್ಲ ಭಕ್ತರು ನಿಸ್ಸಂದೇಹವಾಗಿ ಉದಾರ ಆತ್ಮಗಳೇ ನಿಜ. ಆದರೆ ನನ್ನ ಅರಿವಿನಲ್ಲಿ ನೆಲೆಸಿರುವವನನ್ನು ನನ್ನಂತೆಯೇ ಎಂದು ಭಾವಿಸುತ್ತೇನೆ. ನನ್ನ ಅಲೌಕಿಕ ಸೇವೆಯಲ್ಲಿ ನಿರತನಾಗಿದ್ದು ಅವನು ಅತ್ಯುನ್ನತ ಮತ್ತು ಅತ್ಯಂತ ಪರಿಪೂರ್ಣ ಗುರಿಯಾದ ನನ್ನನ್ನೇ ಸೇರುತ್ತಾನೆ.**

## ಭಾವಾರ್ಥ

ಅಷ್ಟೊಂದು ಪರಿಪೂರ್ಣ ಅರಿವಿಲ್ಲದವರು ಭಗವಂತನಿಗೆ ಪ್ರಿಯರಲ್ಲ ಎಂದಲ್ಲ. ಪ್ರಭುವು ಅವರೆಲ್ಲರೂ ಉದಾರರು ಎಂದು ಹೇಳುತ್ತಾನೆ. ಏಕೆಂದರೆ ಯಾವುದೇ ಉದ್ದೇಶದಿಂದಲಾದರೂ ಪ್ರಭುವಿನ ಬಳಿಗೆ ಬರುವವನನ್ನು ಮಹಾತ್ಮ ಎಂದು ಕರೆಯುತ್ತಾರೆ.

ಭಕ್ತಿಸೇವೆಯಿಂದ ಏನಾದರೂ ಪ್ರಯೋಜನ ಪಡೆಯಲು ಬರುವ ಭಕ್ತರನ್ನು ಪ್ರಭುವು ಸ್ವೀಕರಿಸುತ್ತಾನೆ. ಏಕೆಂದರೆ ಇಲ್ಲಿ ಪ್ರೀತಿಯ ವಿನಿಮಯವಿದೆ. ಪ್ರಭುವನ್ನು ಪ್ರೀತಿಸುವುದರಿಂದ ಅವರು ಪ್ರಭುವನ್ನು ಯಾವುದಾದರೂ ಐಹಿಕ ಲಾಭಕ್ಕಾಗಿ ಬೇಡುತ್ತಾರೆ ಮತ್ತು ಅದನ್ನು ಪಡೆದಾಗ ಅವರಿಗೆ ಎಷ್ಟು ತೃಪ್ತಿಯಾಗುತ್ತದೆಂದರೆ ಅವರೂ ಭಕ್ತಿಸೇವೆಯಲ್ಲಿ ಮುನ್ನಡೆಯುತ್ತಾರೆ. ಆದರೆ ಪರಿಪೂರ್ಣ ಜ್ಞಾನದಲ್ಲಿರುವ ಭಕ್ತನು ಭಗವಂತನಿಗೆ ಬಹಳ ಪ್ರಿಯನಾದವನು. ಏಕೆಂದರೆ ಪರಮ ಪ್ರಭುವನ್ನು ಪ್ರೀತಿ ಮತ್ತು ಭಕ್ತಿಗಳಿಂದ ಸೇವಿಸುವುದೊಂದೇ ಅವನ ಉದ್ದೇಶ. ಇಂತಹ ಭಕ್ತನು ಪರಮ ಪ್ರಭುವಿನೊಡನೆ ಸಂಪರ್ಕವನ್ನು ಪಡೆಯದೆ ಅಥವಾ ಅವನನ್ನು ಸೇವಿಸದೆ ಒಂದು ಕ್ಷಣವೂ ಬದುಕಿರಲಾರ. ಇದೇ ರೀತಿಯಲ್ಲಿ ಪರಮ ಪ್ರಭುವಿಗೂ ಭಕ್ತನಲ್ಲಿ ಅತಿಶಯವಾದ ಪ್ರೀತಿ. ಭಗವಂತನು ಅಂತಹ ಭಕ್ತರನ್ನು ಬಿಟ್ಟಿರಲಾರ.

ಶ್ರೀಮದ್ಭಾಗವತದಲ್ಲಿ (9.4.68) ಭಗವಂತನು ಹೀಗೆ ಹೇಳುತ್ತಾನೆ —

**ಸಾಧವೋ ಹೃದಯಂ ಮಹ್ಯಂ ಸಾಧೂನಾಂ ಹೃದಯಂ ತ್ವಹಮ್ |**
**ಮದನ್ಯತ್ ತೇ ನ ಜಾನನ್ತಿ ನಾಹಂ ತೇಭ್ಯೋ ಮನಾಗಪಿ ||**

"ಭಕ್ತರು ಸದಾ ನನ್ನ ಹೃದಯದಲ್ಲಿರುತ್ತಾರೆ ಮತ್ತು ನಾನು ಯಾವಾಗಲೂ ಭಕ್ತರ ಹೃದಯಗಳಲ್ಲಿ ಇರುತ್ತೇನೆ. ಭಕ್ತನಿಗೆ ನನ್ನ ಆಚೆ ಏನೂ ತಿಳಿಯದು; ನಾನು ಭಕ್ತನನ್ನು ಮರೆಯಲಾರೆ. ನನ್ನ ಮತ್ತು ಪರಿಶುದ್ಧಭಕ್ತನ ನಡುವೆ ಒಂದು ಆತ್ಮೀಯ ಬಾಂಧವ್ಯವಿದೆ. ಪೂರ್ಣ ಜ್ಞಾನದಲ್ಲಿರುವ ಪರಿಶುದ್ಧ ಭಕ್ತರಿಗೆ ಎಂದೂ ಆಧ್ಯಾತ್ಮಿಕ ಸ್ಪರ್ಶವು ತಪ್ಪುವುದಿಲ್ಲ. ಆದುದರಿಂದ ಅವರು ನನಗೆ ಬಹಳ ಪ್ರಿಯರಾದವರು."

## ಶ್ಲೋಕ - 19

**ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೇ |**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ||೧೯||**

**ಬಹೂನಾಮ್**—ಅನೇಕ; **ಜನ್ಮನಾಮ್**—ಜನನ, ಮರಣಗಳ ಪುನರಾವರ್ತನೆಯ; **ಅನ್ತೇ**—ತರುವಾಯ; **ಜ್ಞಾನವಾನ್**—ಪೂರ್ಣಜ್ಞಾನದಲ್ಲಿರುವವನು; **ಮಾಮ್**—ನನಗೆ; **ಪ್ರಪದ್ಯತೇ**—ಶರಣಾಗತನಾಗುತ್ತಾನೆ; **ವಾಸುದೇವಃ**—ದೇವೋತ್ತಮ ಪುರುಷನಾದ ಕೃಷ್ಣನು; **ಸರ್ವಮ್**—ಎಲ್ಲವೂ; **ಇತಿ**—ಎಂದು; **ಸಃ**—ಆ; **ಮಹಾ ಆತ್ಮಾ**—ಮಹಾತ್ಮನು; **ಸು ದುರ್ಲಭಃ**—ಕಾಣಲು ಬಲು ವಿರಳನು.

## ಅನುವಾದ

**ಅನೇಕ ಬಾರಿ ಹುಟ್ಟಿ ಸತ್ತನಂತರ ವಾಸ್ತವವಾಗಿ ಜ್ಞಾನದಲ್ಲಿರುವವನಿಗೆ ನಾನು ಎಲ್ಲ ಕಾರಣಗಳ ಕಾರಣ ಮತ್ತು ಅಸ್ತಿತ್ವದಲ್ಲಿರುವ ಎಲ್ಲದರ ಕಾರಣ ಎನ್ನುವುದು ತಿಳಿಯುತ್ತದೆ. ಆದುದರಿಂದ ಅವನು ನನಗೆ ಶರಣಾಗುತ್ತಾನೆ. ಅಂತಹ ಮಹಾತ್ಮನು ದುರ್ಲಭ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನು ಆಧ್ಯಾತ್ಮಿಕ ಸಾಕ್ಷಾತ್ಕಾರದ ಕಟ್ಟಕಡೆಯ ಗುರಿ. ಬಹು ಜನ್ಮಗಳ ಅನಂತರ ಭಕ್ತಿಸೇವೆಯನ್ನಾಗಲಿ ಆಧ್ಯಾತ್ಮಿಕ ವಿಧಿಗಳನ್ನಾಗಲಿ ಮಾಡುವಾಗ ಜೀವಿಯು ದಿವ್ಯ ಪರಿಶುದ್ಧ ಜ್ಞಾನದಲ್ಲಿ ಈ ಅರಿವನ್ನು ಪಡೆಯಬಹುದು. ಆಧ್ಯಾತ್ಮಿಕ ಸಾಕ್ಷಾತ್ಕಾರದ ಪ್ರಾರಂಭದಲ್ಲಿ ಸಾಧಕನು ಪ್ರಾಪಂಚಿಕತೆಯ ಮೋಹವನ್ನು ಕಳೆದುಕೊಳ್ಳಲು ಪ್ರಯತ್ನಿಸುತ್ತಿರುವಾಗ ನಿರಾಕಾರತ್ವದ ಕಡೆಗೆ ಸ್ವಲ್ಪ ಒಲವಿರುತ್ತದೆ. ಆದರೆ ಇನ್ನೂ ಪ್ರಗತಿಯನ್ನು ಸಾಧಿಸಿದಾಗ ಆತನಿಗೆ ಆಧ್ಯಾತ್ಮಿಕ ಬದುಕಿನಲ್ಲಿ ಚಟುವಟಿಕೆಗಳುಂಟು ಮತ್ತು ಈ ಚಟುವಟಿಕೆಗಳೇ ಭಕ್ತಿಸೇವೆ ಎಂದು ಅರ್ಥವಾಗುತ್ತದೆ. ಇದನ್ನು ಅರ್ಥಮಾಡಿಕೊಂಡು ಆತನು ದೇವೋತ್ತಮ ಪರಮ ಪುರುಷನಿಂದ ಆಕರ್ಷಿತನಾಗುತ್ತಾನೆ ಮತ್ತು ಆತನಿಗೆ ಶರಣಾಗುತ್ತಾನೆ. ಇಂತಹ ಸಮಯದಲ್ಲಿ ಮನುಷ್ಯನಿಗೆ ಪ್ರಭು ಶ್ರೀಕೃಷ್ಣನ ದಯೆಯೇ ಸರ್ವಸ್ವ, ಅವನೇ ಎಲ್ಲ ಕಾರಣಗಳ ಕಾರಣನು ಮತ್ತು ಈ ಐಹಿಕ ಅಭಿವ್ಯಕ್ತಿಯು ಆತನಿಂದ ಸ್ವತಂತ್ರವಲ್ಲ ಎನ್ನುವ ಅರಿವಾಗುತ್ತದೆ. ಐಹಿಕ ಜಗತ್ತು ಆಧ್ಯಾತ್ಮಿಕ ವೈವಿಧ್ಯದ ವಕ್ರಪ್ರತಿಬಿಂಬ ಎಂದೂ, ಪ್ರತಿಯೊಂದಕ್ಕೂ ಪರಮ ಪ್ರಭು ಕೃಷ್ಣನೊಂದಿಗೆ ಸಂಬಂಧವಿದೆ ಎಂದೂ ಅವನಿಗೆ ಅರ್ಥವಾಗುತ್ತದೆ. ಹೀಗೆ ಆತನು ಪ್ರತಿಯೊಂದನ್ನೂ ವಾಸುದೇವ ಅಥವಾ ಶ್ರೀಕೃಷ್ಣನಿಗೆ ಸಂಬಂಧಿಸಿದಂತೆಯೇ ಯೋಚಿಸುತ್ತಾನೆ. ವಾಸುದೇವನನ್ನು ಕುರಿತ ಇಂತಹ ವಿಶ್ವದೃಷ್ಟಿಯಿಂದ ವ್ಯಕ್ತಿಯು ಪರಮ ಪ್ರಭು ಶ್ರೀಕೃಷ್ಣನನ್ನೇ ಅತ್ಯುನ್ನತ ಗುರಿಯೆಂದು ತಿಳಿದು ಅವನಿಗೆ ಕೂಡಲೇ ಶರಣಾಗುತ್ತಾನೆ. ಹೀಗೆ ಶರಣಾಗತವಾದ ಮಹಾ ಆತ್ಮಗಳು ಅಪೂರ್ವ.

ಈ ಶ್ಲೋಕವನ್ನು ಶ್ವೇತಾಶ್ವತರ ಉಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿ (14 ಮತ್ತು 15ನೆ ಶ್ಲೋಕಗಳು) ಬಹು ಸೊಗಸಾಗಿ ವಿವರಿಸಿದೆ —

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**
**ಸ ಭೂಮಿಂ ವಿಶ್ವತೋ ವೃತ್ವಾತ್ಯಾತಿಷ್ಠದ್ದಶಾಙ್ಗುಲಮ್ ॥**

**ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಮ್ ।**
**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥**

ಛಾಂದೋಗ್ಯ ಉಪನಿಷತ್ತಿನಲ್ಲಿ (5.1.15), **ನ ವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತಿ ಆಚಕ್ಷತೇ ಪ್ರಾಣ ಇತಿ ಏವಾಚಕ್ಷತೇ ಪ್ರಾಣೋ ಹಿ ಏವೈತಾನಿ ಸರ್ವಾಣಿ ಭವನ್ತಿ** ಎಂದು ಹೇಳಿದೆ. "ಜೀವಂತ ಪ್ರಾಣಿಯ ದೇಹದಲ್ಲಿ ಮಾತನಾಡುವ ಶಕ್ತಿ, ನೋಡುವ ಶಕ್ತಿ, ಕೇಳುವ ಶಕ್ತಿ, ಯೋಚನೆ ಮಾಡುವ ಶಕ್ತಿ ಇವುಗಳಲ್ಲಿ ಯಾವುದೂ ಮುಖ್ಯ ಅಂಶವಲ್ಲ; ಎಲ್ಲ ಚಟುವಟಿಕೆಗಳ ಕೇಂದ್ರವೂ ಜೀವವೇ." ಇದೇ ರೀತಿಯಲ್ಲಿ ವಾಸುದೇವನು, ಅಥವಾ ದೇವೋತ್ತಮ ಪುರುಷನಾದ ಶ್ರೀಕೃಷ್ಣನು, ಎಲ್ಲದರಲ್ಲಿಯೂ ಮುಖ್ಯ ಅಸ್ತಿತ್ವಾಂಶ. ದೇಹದಲ್ಲಿ ಮಾತನಾಡುವ, ನೋಡುವ, ಕೇಳುವ, ಯೋಚನೆ ಮಾಡುವ ಶಕ್ತಿಗಳುಂಟು. ಆದರೆ ಪರಮ ಪ್ರಭುವಿನೊಂದಿಗೆ ಇವಕ್ಕೆ ಸಂಬಂಧವನ್ನು ಕಲ್ಪಿಸದಿದ್ದರೆ ಇವು ಮುಖ್ಯವಾಗುವುದಿಲ್ಲ. ವಾಸುದೇವನು ಸರ್ವಾಂತರ್ಯಾಮಿಯೂ ಸಮಸ್ತವೂ ಆಗಿರುವುದರಿಂದ ಭಕ್ತನು ಪರಿಪೂರ್ಣ ಜ್ಞಾನದಲ್ಲಿ ಶರಣಾಗತನಾಗುತ್ತಾನೆ (ಗೀತಾ 7.17 ಮತ್ತು 11.40 ಶ್ಲೋಕಗಳನ್ನು ಹೋಲಿಸಿ ನೋಡಿ).

## ಶ್ಲೋಕ - 20

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ |**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ||೨೦||**

**ಕಾಮೈಃ**—ಆಸೆಗಳಿಂದ; **ತೈಃ ತೈಃ**—ವಿವಿಧವಾದ; **ಹೃತ**—ಇಲ್ಲದಂತೆ ಮಾಡಲ್ಪಟ್ಟ; **ಜ್ಞಾನಾಃ**—ಜ್ಞಾನಗಳುಳ್ಳವರು; **ಪ್ರಪದ್ಯನ್ತೇ**—ಶರಣುಹೋಗುತ್ತಾರೆ; **ಅನ್ಯ**—ಇತರ; **ದೇವತಾಃ**—ದೇವತೆಗಳಿಗೆ; **ತಮ್ ತಮ್**—ಅದಕ್ಕೆ ಅನುಗುಣವಾಗಿ; **ನಿಯಮಮ್**—ನಿಯಮಗಳನ್ನು; **ಆಸ್ಥಾಯ**—ಅನುಸರಿಸಿ; **ಪ್ರಕೃತ್ಯಾ**—ಸ್ವಭಾವದಿಂದ; **ನಿಯತಾಃ**—ನಿಯಂತ್ರಿತರಾಗುವವರು; **ಸ್ವಯಾ**—ತಮ್ಮದೇ ಆದ.

## ಅನುವಾದ

**ಐಹಿಕ ಬಯಕೆಗಳು ಯಾರ ಬುದ್ಧಿಶಕ್ತಿಯನ್ನು ಕದ್ದಿವೆಯೋ ಅಂತಹವರು ದೇವತೆಗಳಿಗೆ ಶರಣಾಗುತ್ತಾರೆ ಮತ್ತು ತಮ್ಮ ಸ್ವಭಾವಗಳಿಗೆ ಅನುಗುಣವಾಗಿ ಪೂಜೆಯ ನಿರ್ದಿಷ್ಟ ನಿಯಮ ನಿಬಂಧನೆಗಳನ್ನು ಅನುಸರಿಸುತ್ತಾರೆ.**

## ಭಾವಾರ್ಥ

ಎಲ್ಲ ಐಹಿಕ ಕಶ್ಮಲಗಳಿಂದ ಬಿಡುಗಡೆಯಾದವರು ಪರಮ ಪ್ರಭುವಿಗೆ ಶರಣಾಗಿ ಅವನ ಭಕ್ತಿಸೇವೆಯಲ್ಲಿ ನಿರತರಾಗುತ್ತಾರೆ. ಐಹಿಕ ಕಶ್ಮಲವು ಸಂಪೂರ್ಣವಾಗಿ ತೊಳೆದು ಹೋಗುವವರೆಗೆ ಸ್ವಭಾವದಿಂದ ಅವರು ಭಕ್ತರಲ್ಲ. ಆದರೆ ಐಹಿಕ ಬಯಕೆಗಳಿದ್ದು ಪರಮ ಪ್ರಭುವಿನ ಬಳಿಸಾರುವವರೂ ಸಹ ಹೊರ ಪ್ರಕೃತಿಯಿಂದ ಅಷ್ಟಾಗಿ ಆಕರ್ಷಿತರಾಗುವುದಿಲ್ಲ. ಏಕೆಂದರೆ ಸರಿಯಾದ ಗುರಿಯನ್ನು ಸಮೀಪಿಸುತ್ತಲೇ ಶೀಘ್ರವಾಗಿ ಅವರು ಎಲ್ಲ ಐಹಿಕ ಕಾಮದಿಂದ ಬಿಡುಗಡೆ ಹೊಂದುತ್ತಾರೆ. ಮನುಷ್ಯನು ಪರಿಶುದ್ಧ ಭಕ್ತನಾಗಿದ್ದು ಎಲ್ಲ ಐಹಿಕ ಬಯಕೆಗಳಿಂದ ಮುಕ್ತನಾಗಿರಲಿ, ಅಥವಾ ಐಹಿಕ ಬಯಕೆಗಳು ಅವನಲ್ಲಿ ತುಂಬಿರಲಿ, ಇಲ್ಲವೇ ಐಹಿಕ ಕಶ್ಮಲದ ಸೋಂಕಿನಿಂದ ಬಿಡುಗಡೆಯನ್ನು ಬಯಸಲಿ — ಯಾವುದೇ ಸ್ಥಿತಿಯಲ್ಲಿದ್ದರೂ ಆತನು ವಾಸುದೇವನಿಗೆ ಶರಣಾಗಿ ಆತನನ್ನು ಪೂಜಿಸಬೇಕು ಎಂದು ಶ್ರೀಮದ್ಭಾಗವತದಲ್ಲಿ ಸಲಹೆಮಾಡಿದೆ. ಭಾಗವತದಲ್ಲಿ ಹೇಳಿದಂತೆ (2.3.10) —

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ |**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ||**

ತಮ್ಮ ಆಧ್ಯಾತ್ಮಿಕ ಅರಿವನ್ನು ಕಳೆದುಕೊಂಡ ಅಷ್ಟು ಬುದ್ಧಿಶಾಲಿಗಳಲ್ಲದವರು ಐಹಿಕ ಬಯಕೆಗಳ ಶೀಘ್ರ ಪೂರೈಕೆಗಾಗಿ ದೇವತೆಗಳ ಆಶ್ರಯ ಪಡೆಯುತ್ತಾರೆ. ಸಾಮಾನ್ಯವಾಗಿ ಇಂತಹವರು ದೇವೋತ್ತಮ ಪರಮ ಪುರುಷನ ಬಳಿಗೆ ಹೋಗುವುದಿಲ್ಲ. ಏಕೆಂದರೆ ಅವರು ಕೆಳಮಟ್ಟದ ಪ್ರಕೃತಿ ಗುಣಗಳಲ್ಲಿದ್ದಾರೆ (ರಜಸ್ಸು ಮತ್ತು ತಮಸ್ಸು). ಈ ಕಾರಣದಿಂದ ಅವರು ವಿವಿಧ ದೇವತೆಗಳನ್ನು ಪೂಜಿಸುತ್ತಾರೆ. ಆ ಪೂಜೆಯ ಹಲವು ನಿಯಮ ನಿಬಂಧನೆಗಳನ್ನು ಅನುಸರಿಸಿ ತೃಪ್ತರಾಗುತ್ತಾರೆ. ದೇವತೆಗಳನ್ನು ಪೂಜಿಸುವವರು ಸಣ್ಣಪುಟ್ಟ ಅಪೇಕ್ಷೆಗಳಿಂದ ಪ್ರೇರಿತರಾಗಿರುತ್ತಾರೆ.

ಪರಮ ಗುರಿಯನ್ನು ಮುಟ್ಟುವುದು ಹೇಗೆ ಎಂದು ಅವರಿಗೆ ತಿಳಿಯದು. ಆದರೆ ಪರಮ ಪ್ರಭುವಿನ ಭಕ್ತನು ದಾರಿ ತಪ್ಪುವುದಿಲ್ಲ. ವೈದಿಕ ಸಾಹಿತ್ಯದಲ್ಲಿ ಬೇರೆ ಬೇರೆ ಉದ್ದೇಶಗಳಿಗೆ ಬೇರೆ ಬೇರೆ ದೇವತೆಗಳನ್ನು ಪೂಜಿಸಬೇಕೆಂದು ಸೂಚಿಸಿದೆ. (ಉದಾಹರಣೆಗೆ, ರೋಗಿಯು ಸೂರ್ಯನನ್ನು ಪೂಜಿಸಬೇಕೆಂದು ಸೂಚಿಸಿದೆ). ಈ ಕಾರಣದಿಂದ ಭಗವಂತನ ಭಕ್ತರಲ್ಲದವರು ಕೆಲವು ಉದ್ದೇಶಗಳ ಸಾಧನೆಗೆ ಪರಮ ಪ್ರಭುವಿಗಿಂತ ದೇವತೆಗಳೇ ಉತ್ತಮ ಎಂದು ಭಾವಿಸುತ್ತಾರೆ. ಆದರೆ ಪರಿಶುದ್ಧ ಭಕ್ತನಿಗೆ ಪರಮ ಪ್ರಭು ಕೃಷ್ಣನೇ ಎಲ್ಲರ ಪ್ರಭು ಎಂದು ಗೊತ್ತು. ಚೈತನ್ಯ ಚರಿತಾಮೃತದಲ್ಲಿ (ಆದಿ 5.142) ಹೀಗೆ ಹೇಳಿದೆ — **ಏಕಲೇ ಈಶ್ವರ ಕೃಷ್ಣ ಆರ ಸಬ ಭೃತ್ಯ.** ದೇವೋತ್ತಮ ಪರಮ ಪುರುಷನಾದ ಕೃಷ್ಣನು ಮಾತ್ರ ಪ್ರಭು, ಉಳಿದೆಲ್ಲರೂ ಸೇವಕರು. ಆದುದರಿಂದ ಪರಿಶುದ್ಧ ಭಕ್ತನು ತನ್ನ ಐಹಿಕ ಅಗತ್ಯಗಳನ್ನು ಪೂರೈಸಿಕೊಳ್ಳಲು ದೇವತೆಗಳ ಬಳಿಗೆ ಹೋಗುವುದೇ ಇಲ್ಲ. ಪರಿಶುದ್ಧ ಭಕ್ತನು ಭಗವಂತನು ಅನುಗ್ರಹಿಸಿದುದರಲ್ಲಿಯೇ ತೃಪ್ತಿಪಡುತ್ತಾನೆ.

## ಶ್ಲೋಕ - 21

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ |**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ||೨೧||**

**ಯಃ ಯಃ**—ಯಾವ ಯಾವ; **ಯಾಮ್ ಯಾಮ್**—ಯಾವ ಯಾವ; **ತನುಮ್**—ದೇವತಾ ರೂಪವನ್ನು; **ಭಕ್ತಃ**—ಭಕ್ತನು; **ಶ್ರದ್ಧಯಾ**—ಶ್ರದ್ಧೆಯಿಂದ; **ಅರ್ಚಿತುಮ್**—ಪೂಜಿಸಲು; **ಇಚ್ಛತಿ**—ಅಪೇಕ್ಷಿಸುತ್ತಾನೋ; **ತಸ್ಯ ತಸ್ಯ**—ಅವರವರಿಗೆ; **ಅಚಲಾಮ್**—ಸ್ಥಿರವಾದ; **ಶ್ರದ್ಧಾಮ್**—ಶ್ರದ್ಧೆಯನ್ನು; **ತಾಮ್**—ಆ; **ಏವ**—ಖಂಡಿತವಾಗಿಯೂ; **ವಿದಧಾಮಿ**—ಕೊಡುತ್ತೇನೆ; **ಅಹಮ್**— ನಾನು.

## ಅನುವಾದ

**ನಾನು ಪರಮಾತ್ಮನಾಗಿ ಪ್ರತಿಯೊಬ್ಬರ ಹೃದಯದಲ್ಲಿದ್ದೇನೆ. ಯಾರಾದರೂ ಯಾವುದಾದರೂ ದೇವತೆಯನ್ನು ಪೂಜಿಸಲು ಇಚ್ಛಿಸುತ್ತಲೇ, ಆತನು ಆ ದೇವತೆಗೆ ಮುಡಿಪಾಗುವಂತೆ ಅವನ ಶ್ರದ್ಧೆಯನ್ನು ಸ್ಥಿರಗೊಳಿಸುತ್ತೇನೆ.**

## ಭಾವಾರ್ಥ

ಭಗವಂತನು ಪ್ರತಿಯೊಬ್ಬರಿಗೂ ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. ಆದುದರಿಂದ ಯಾವುದೇ ಮನುಷ್ಯನು ಐಹಿಕ ಭೋಗವನ್ನು ಬಯಸಿ ಅಂತಹ ಸೌಲಭ್ಯಗಳನ್ನು ಐಹಿಕ ದೇವತೆಗಳಿಂದ ಪಡೆಯಲು ಮನಃಪೂರ್ವಕವಾಗಿ ಅಪೇಕ್ಷಿಸಿದರೆ ಎಲ್ಲರ ಹೃದಯಗಳಲ್ಲಿರುವ ಪರಮಾತ್ಮನಾಗಿ ಪರಮ ಪ್ರಭುವು ಅವರ ಅಪೇಕ್ಷೆಯನ್ನು ಅರ್ಥಮಾಡಿಕೊಂಡು ಸೌಲಭ್ಯಗಳನ್ನು ನೀಡುತ್ತಾನೆ. ಎಲ್ಲ ಜೀವಿಗಳ ಪರಮ ಜನಕನಾಗಿ ಆತನು ಅವರ ಸ್ವಾತಂತ್ರ್ಯಕ್ಕೆ ಅಡ್ಡಬರುವುದಿಲ್ಲ. ಅವರು ತಮ್ಮ ಐಹಿಕ ಅಪೇಕ್ಷೆಗಳನ್ನು ಪಡೆದುಕೊಳ್ಳುವಂತೆ ಎಲ್ಲ ಸೌಲಭ್ಯಗಳನ್ನು ನೀಡುತ್ತಾನೆ. ಸರ್ವಶಕ್ತನಾದ ದೇವರು ಈ ಐಹಿಕ ಜಗತ್ತಿನಲ್ಲಿ ಜೀವಿಗಳಿಗೆ ಭೋಗಕ್ಕೆ ಸೌಲಭ್ಯಗಳನ್ನು ಕೊಟ್ಟು

ಅವರು ಮಾಯಾಶಕ್ತಿಯ ಬಲೆಗೆ ಬೀಳಲು ಅವಕಾಶ ಕೊಡುವುದೇಕೆ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಇದು — ಪರಮಾತ್ಮನಾದ ಪರಮ ಪ್ರಭುವು ಇಂತಹ ಸೌಲಭ್ಯಗಳನ್ನು ಕೊಡದಿದ್ದರೆ ಸ್ವಾತಂತ್ರ್ಯಕ್ಕೆ ಅರ್ಥವೇ ಇಲ್ಲ. ಆದುದರಿಂದ ಆತನು ಪ್ರತಿಯೊಬ್ಬರಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು, ಅವರು ಬಯಸಿದುದನ್ನು ಕೊಡುತ್ತಾನೆ. ಆದರೆ ಅವನ ಕೊನೆಯ ಬುದ್ಧಿವಾದವನ್ನು ಭಗವದ್ಗೀತೆಯಲ್ಲಿ ಕಾಣುತ್ತೇವೆ — ಮನುಷ್ಯನು ಬೇರೆ ಯಾತರಲ್ಲಿಯೂ ಮನಸ್ಸನ್ನು ತೊಡಗಿಸದೆ ಅವನಿಗೆ ಸಂಪೂರ್ಣವಾಗಿ ಶರಣಾಗಬೇಕು. ಅದು ಮನುಷ್ಯನಿಗೆ ಸುಖವನ್ನು ತರುತ್ತದೆ.

ಜೀವಿಯೂ ದೇವತೆಗಳೂ ದೇವೋತ್ತಮ ಪರಮ ಪುರುಷನ ಇಚ್ಛೆಗೆ ಅಧೀನರು. ಆದುದರಿಂದ ಜೀವಿಯು ಸ್ವಂತ ಇಚ್ಛೆಯಿಂದ ದೇವತೆಯನ್ನು ಪೂಜಿಸುವುದೂ ಸಾಧ್ಯವಿಲ್ಲ, ಪರಮ ಸಂಕಲ್ಪಕ್ಕೆ ಹೊರತಾಗಿ ದೇವತೆಯೂ ಯಾವ ವರವನ್ನೂ ಕೊಡುವಂತೆಯೂ ಇಲ್ಲ. ಸಾಮಾನ್ಯವಾಗಿ ಐಹಿಕ ಜಗತ್ತಿನಲ್ಲಿ ದುಃಖಕ್ಕೊಳಗಾದವರು ವೈದಿಕ ಸಾಹಿತ್ಯದಲ್ಲಿ ಸೂಚಿಸಿರುವಂತೆ ದೇವತೆಗಳ ಬಳಿಸಾರುತ್ತಾರೆ. ಯಾವುದೋ ಒಂದು ವಸ್ತುವನ್ನು ಬಯಸುವವರು ಒಬ್ಬ ನಿರ್ದಿಷ್ಟ ದೇವತೆಯನ್ನು ಪೂಜಿಸಬಹುದು. ವಿದ್ಯೆ ಬಯಸುವವನು ಸರಸ್ವತಿಯನ್ನು ಪೂಜಿಸಬಹುದು. ಸುಂದರಿಯಾದ ಹೆಂಡತಿಯನ್ನು ಬಯಸುವವನು ಶಿವನ ಪತ್ನಿಯಾದ ಉಮಾದೇವಿಯನ್ನು ಪೂಜಿಸಬಹುದು. ಹೀಗೆ ಶಾಸ್ತ್ರಗಳಲ್ಲಿ ಬೇರೆ ಬೇರೆ ದೇವತೆಗಳ ಆರಾಧನೆಗೆ ಬೇರೆ ಬೇರೆ ಪೂಜಾಮಾರ್ಗಗಳನ್ನು ಹೇಳಿದೆ. ಒಂದು ಜೀವಿಯು ಯಾವುದೋ ಒಂದು ನಿರ್ದಿಷ್ಟ ಸೌಲಭ್ಯವನ್ನು ಬಯಸುವುದರಿಂದ, ಆ ನಿರ್ದಿಷ್ಟ ದೇವತೆಯಿಂದ ಆ ಅನುಗ್ರಹವನ್ನು ಪಡೆಯುವಂತೆ ಪರಮ ಪ್ರಭುವು ಆ ಜೀವಿಗೆ ಪ್ರಬಲವಾದ ಪ್ರೇರಣೆಯನ್ನು ನೀಡುತ್ತಾನೆ. ಆದುದರಿಂದ ಆತನು ಆ ಅನುಗ್ರಹವನ್ನು ಪಡೆಯುತ್ತಾನೆ. ಆ ಜೀವಿಯು ಆ ನಿರ್ದಿಷ್ಟ ದೇವತೆಯ ಬಗ್ಗೆ ತಳೆಯುವ ವಿಶಿಷ್ಟ ಭಕ್ತಿಯ ಮನೋಭಾವವನ್ನು ಪರಮ ಪ್ರಭುವು ನಿರ್ಧರಿಸುತ್ತಾನೆ. ದೇವತೆಗಳು ಜೀವಿಯಲ್ಲಿ ಇಂತಹ ಬಾಂಧವ್ಯವನ್ನು ತುಂಬಲಾರರು. ಏಕೆಂದರೆ ಅವನೇ ಪರಮ ಪ್ರಭು ಅಥವಾ ಎಲ್ಲ ಜೀವಿಗಳ ಹೃದಯಗಳಲ್ಲಿರುವ ಪರಮಾತ್ಮನು. ದೇವತೆಗಳು ವಾಸ್ತವವಾಗಿ ಪರಮ ಪ್ರಭುವಿನ ವಿಶ್ವರೂಪದ ಬೇರೆ ಬೇರೆ ಭಾಗಗಳು. ಆದುದರಿಂದ ಅವರಿಗೆ ಸ್ವಾತಂತ್ರ್ಯವಿಲ್ಲ. "ಪರಮಾತ್ಮನಾಗಿ ದೇವೋತ್ತಮ ಪರಮ ಪುರುಷನು ದೇವತೆಯ ಹೃದಯದಲ್ಲಿಯೂ ಇದ್ದಾನೆ; ಆದುದರಿಂದ ಆತನು ಜೀವಿಯ ಅಪೇಕ್ಷೆಯನ್ನು ದೇವತೆಯ ಮೂಲಕ ಪೂರೈಸಲು ವ್ಯವಸ್ಥೆಮಾಡುತ್ತಾನೆ. ಆದರೆ ದೇವತೆಯೂ ಜೀವಿಯೂ ಪರಮ ಸಂಕಲ್ಪವನ್ನು ಅವಲಂಬಿಸಿದವರು, ಅವರಿಗೆ ಸ್ವಾತಂತ್ರ್ಯವಿಲ್ಲ" ಎಂದು ವೈದಿಕ ಸಾಹಿತ್ಯದಲ್ಲಿ ಹೇಳಿದೆ.

## ಶ್ಲೋಕ - 22

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ |**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ||೨೨||**

**ಸಃ**—ಅವನು; **ತಯಾ**—ಆ; **ಶ್ರದ್ಧಯಾ**—ಪ್ರೇರಣೆಯಿಂದ; **ಯುಕ್ತಃ**—ಕೂಡಿದವನಾಗಿ; **ತಸ್ಯ**—ಆ ದೇವತೆಯ; **ಆರಾಧನಮ್**—ಪೂಜೆಗೆ; **ಈಹತೇ**—ಬಯಸುತ್ತಾನೆ; **ಲಭತೇ**—ಪಡೆಯುತ್ತಾನೆ; **ಚ**—

ಮತ್ತು; **ತತಃ**—ಅದರಿಂದ; **ಕಾಮಾನ್**—ಅವನ ಆಸೆಗಳನ್ನು; **ಮಯಾ**—ನನ್ನಿಂದ; **ಏವ**—ಮಾತ್ರವೇ; **ವಿಹಿತಾನ್**—ವ್ಯವಸ್ಥೆಗೊಳಿಸಲ್ಪಟ್ಟ; **ಹಿ**—ಖಂಡಿತವಾಗಿಯೂ; **ತಾನ್**—ಆ.

## ಅನುವಾದ

**ಇಂತಹ ಶ್ರದ್ಧೆಯನ್ನು ಪಡೆದು ಆತನು ಒಬ್ಬ ನಿರ್ದಿಷ್ಟ ದೇವತೆಯನ್ನು ಪೂಜಿಸಿ ತನ್ನ ಅಭೀಷ್ಟಗಳನ್ನು ಪಡೆಯಲು ಪ್ರಯತ್ನಿಸುತ್ತಾನೆ. ಆದರೆ ವಾಸ್ತವವಾಗಿ ಈ ಅನುಗ್ರಹಗಳನ್ನೆಲ್ಲ ನೀಡುವವನು ನಾನೊಬ್ಬನೇ.**

## ಭಾವಾರ್ಥ

ಪರಮ ಪ್ರಭುವಿನ ಅನುಮತಿ ಇಲ್ಲದೆ ದೇವತೆಗಳು ತಮ್ಮ ಭಕ್ತರಿಗೆ ವರಗಳನ್ನು ಅನುಗ್ರಹಿಸುವಂತಿಲ್ಲ. ಎಲ್ಲವೂ ಪರಮ ಪ್ರಭುವಿನ ಸ್ವತ್ತು ಎಂಬುದನ್ನು ಜೀವಿಯು ಮರೆಯಬಹುದು, ಆದರೆ ದೇವತೆಗಳು ಮರೆಯುವುದಿಲ್ಲ. ಆದುದರಿಂದ ದೇವತೆಗಳ ಪೂಜೆ ಮತ್ತು ಇಷ್ಟಾರ್ಥಸಿದ್ಧಿಗಳಿಗೆ ಕಾರಣರು ದೇವತೆಗಳಲ್ಲ, ವ್ಯವಸ್ಥೆಗೊಳಿಸಿದ ದೇವೋತ್ತಮ ಪರಮ ಪುರುಷನು ಕಾರಣ. ಮಂದಬುದ್ಧಿಯ ಜೀವಿಗೆ ಇದು ತಿಳಿಯದು. ಆದುದರಿಂದ ಆತನು ಮೂರ್ಖತನದಿಂದ ಯಾವುದೋ ಪ್ರಯೋಜನಕ್ಕಾಗಿ ದೇವತೆಗಳ ಬಳಿಗೆ ಹೋಗುತ್ತಾನೆ. ಆದರೆ ಪರಿಶುದ್ಧ ಭಕ್ತನಿಗೆ ಏನಾದರೂ ಬೇಕೆನ್ನಿಸಿದಾಗ ಪರಮ ಪ್ರಭುವಿಗೆ ಮಾತ್ರ ಪ್ರಾರ್ಥನೆ ಮಾಡುತ್ತಾನೆ. ಆದರೆ ಐಹಿಕ ಲಾಭಕ್ಕಾಗಿ ಬೇಡುವುದು ಪರಿಶುದ್ಧ ಭಕ್ತನ ಲಕ್ಷಣವಲ್ಲ. ಸಾಮಾನ್ಯವಾಗಿ, ಜೀವಿಯು ತನ್ನ ಕಾಮವನ್ನು ಪೂರೈಸಿಕೊಳ್ಳುವ ಹುಚ್ಚಿನಿಂದ ದೇವತೆಗಳ ಬಳಿಗೆ ಹೋಗುತ್ತಾನೆ. ಜೀವಿಯು ಏನಾದರೂ ಅನುಚಿತವಾದುದನ್ನು ಬಯಸಿ ಭಗವಂತನೇ ಅದನ್ನು ನೀಡದಿದ್ದಾಗ ಹೀಗಾಗುತ್ತದೆ. ಪರಮ ಪ್ರಭುವನ್ನು ಪೂಜಿಸುವಾಗಲೇ ಭೌತಿಕ ಭೋಗವನ್ನು ಬಯಸುವವನ ಅಪೇಕ್ಷೆಗಳಲ್ಲಿ ವಿರೋಧಾಭಾಸವಿದೆ ಎಂದು ಚೈತನ್ಯ ಚರಿತಾಮೃತದಲ್ಲಿ ಹೇಳಿದೆ. ಪರಮ ಪ್ರಭುವಿನ ಭಕ್ತಿಸೇವೆ ಮತ್ತು ಒಬ್ಬ ದೇವತೆಯ ಪೂಜೆ ಇವೆರಡೂ ಒಂದೇ ನೆಲೆಯಲ್ಲಿ ಇರಲು ಸಾಧ್ಯವಿಲ್ಲ. ಏಕೆಂದರೆ ದೇವತೆಯ ಪೂಜೆಯು ಪ್ರಾಪಂಚಿಕವಾದದ್ದು ಮತ್ತು ಪರಮ ಪ್ರಭುವಿನ ಭಕ್ತಿಸೇವೆಯು ಸಂಪೂರ್ಣವಾಗಿ ಆಧ್ಯಾತ್ಮಿಕವಾದದ್ದು.

ಭಗವದ್ಧಾಮಕ್ಕೆ ಹಿಂದಿರುಗಲು ಬಯಸುವ ಜೀವಿಗೆ ಪ್ರಾಪಂಚಿಕ ಬಯಕೆಗಳೇ ತೊಡಕುಗಳು. ಆದುದರಿಂದ ಮಂದಬುದ್ಧಿಯವರು ಬಯಸುವ ಪ್ರಾಪಂಚಿಕ ಲಾಭಗಳನ್ನು ಭಗವಂತನ ಪರಿಶುದ್ಧ ಭಕ್ತನಿಗೆ ಕೊಡಲಾಗುವುದಿಲ್ಲ. ಈ ಮಂದಬುದ್ಧಿಯವರು ಪರಮ ಪ್ರಭುವಿನ ಭಕ್ತಿಸೇವೆಗಿಂತ ಐಹಿಕ ಜಗತ್ತಿನ ದೇವತೆಗಳ ಪೂಜೆಯಲ್ಲಿ ಒಲವನ್ನು ತೋರಬಹುದು.

## ಶ್ಲೋಕ - 23

**ಅನ್ತವತ್ತು ಫಲಂ ತೇಷಾಂ ತದ್ ಭವತ್ಯಲ್ಪಮೇಧಸಾಮ್ |**
**ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾನ್ತಿ ಮಾಮಪಿ ||೨೩||**

**ಅನ್ತವತ್**—ನಾಶಶೀಲವಾದದ್ದು; **ತು**—ಆದರೆ; **ಫಲಮ್**—ಫಲವು; **ತೇಷಾಮ್**—ಅವರ; **ತತ್**—ಆ; **ಭವತಿ**—ಆಗುತ್ತದೆ; **ಅಲ್ಪ ಮೇಧಸಾಮ್**—ಅಲ್ಪಬುದ್ಧಿಯುಳ್ಳ; **ದೇವಾನ್**—ದೇವತೆಗಳನ್ನು;

**ದೇವ ಯಜಃ**—ದೇವತೆಗಳ ಆರಾಧಕರು; **ಯಾಂತಿ**—ಹೋಗುತ್ತಾರೆ; **ಮತ್**—ನನ್ನ; **ಭಕ್ತಾಃ**—ಭಕ್ತರು; **ಯಾನ್ತಿ**—ಹೋಗುತ್ತಾರೆ; **ಮಾಮ್**—ನನ್ನಲ್ಲಿಗೆ; **ಅಪಿ**—ಕೂಡ.

## ಅನುವಾದ

**ಅಲ್ಪಬುದ್ಧಿಯವರು ದೇವತೆಗಳನ್ನು ಪೂಜಿಸುತ್ತಾರೆ. ಅವರು ಪಡೆಯುವ ಫಲವು ಮಿತವಾದದ್ದು ಮತ್ತು ಅಲ್ಪಕಾಲದ್ದು. ದೇವತೆಗಳನ್ನು ಪೂಜಿಸುವವರು ದೇವತೆಗಳ ಲೋಕಕ್ಕೆ ಹೋಗುತ್ತಾರೆ. ಆದರೆ ನನ್ನ ಭಕ್ತರು ಕಡೆಗೆ ನನ್ನ ಪರಮ ಲೋಕವನ್ನು ಮುಟ್ಟುವರು.**

## ಭಾವಾರ್ಥ

ಭಗವದ್ಗೀತೆಯ ಕೆಲವು ವ್ಯಾಖ್ಯಾನಕಾರರು ದೇವತೆಯೊಬ್ಬನನ್ನು ಪೂಜಿಸುವವರು ಪರಮ ಪ್ರಭುವನ್ನು ಮುಟ್ಟಬಹುದು ಎಂದು ಹೇಳುತ್ತಾರೆ. ಆದರೆ ದೇವತೆಗಳನ್ನು ಪೂಜಿಸುವವರು ವಿವಿಧ ದೇವತೆಗಳು ನೆಲೆಸಿರುವ ಬೇರೆ ಬೇರೆ ಗ್ರಹಗಳಿಗೆ ಹೋಗುವರೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಉದಾಹರಣೆಗೆ ಸೂರ್ಯ ದೇವತೆಯನ್ನು ಪೂಜೆಮಾಡುವವನು ಸೂರ್ಯನನ್ನು ಪಡೆಯುತ್ತಾನೆ ಮತ್ತು ಚಂದ್ರ ದೇವತೆಯನ್ನು ಪೂಜೆಮಾಡುವವನು ಚಂದ್ರನನ್ನು ಪಡೆಯುತ್ತಾನೆ. ಹೀಗೆಯೇ ಯಾರಾದರೂ ಇಂದ್ರನಂತಹ ದೇವತೆಯನ್ನು ಪೂಜೆಮಾಡಲು ಬಯಸಿದರೆ ಆತನು ಆ ನಿರ್ದಿಷ್ಟ ದೇವತೆಯ ಲೋಕಕ್ಕೆ ಹೋಗುವನು. ಯಾವ ದೇವತೆಯನ್ನು ಪೂಜಿಸಿದರೂ ಪ್ರತಿಯೊಬ್ಬನೂ ದೇವೋತ್ತಮ ಪರಮ ಪುರುಷನನ್ನು ಮುಟ್ಟುವನೆಂಬುದು ಸರಿಯಲ್ಲ. ಅದನ್ನು ಇಲ್ಲಿ ನಿರಾಕರಿಸಿದೆ. ದೇವತೆಗಳನ್ನು ಪೂಜಿಸುವವರು ಐಹಿಕ ಜಗತ್ತಿನಲ್ಲಿ ಬೇರೆ ಲೋಕಗಳಿಗೆ ಹೋಗುತ್ತಾರೆ. ಆದರೆ ಪರಮ ಪ್ರಭುವಿನ ಭಕ್ತನು ದೇವೋತ್ತಮ ಪುರುಷನ ಪರಮ ಲೋಕಕ್ಕೆ ನೇರವಾಗಿ ಹೋಗುತ್ತಾನೆ.

ದೇವತೆಗಳು ಪರಮ ಪ್ರಭುವಿನ ದೇಹದ ಬೇರೆ ಬೇರೆ ಭಾಗಗಳಾದರೆ ಅವರನ್ನು ಪೂಜಿಸಿದರೂ ಅದೇ ಗುರಿಯನ್ನು ಸಾಧಿಸಲು ಸಾಧ್ಯವಾಗಬೇಕು ಎಂದು ವಾದ ಹೂಡಬಹುದು. ಆದರೆ ದೇವತೆಗಳನ್ನು ಪೂಜಿಸುವವರು ಅಷ್ಟು ಬುದ್ಧಿವಂತರಲ್ಲ. ಏಕೆಂದರೆ ದೇಹದ ಯಾವ ಭಾಗಕ್ಕೆ ಆಹಾರವನ್ನು ಕೊಡಬೇಕು ಎನ್ನುವುದು ಅವರಿಗೆ ತಿಳಿದಿಲ್ಲ. ಅವರಲ್ಲಿ ಕೆಲವರು ಎಷ್ಟು ದಡ್ಡರೆಂದರೆ ಅವರು ಅನೇಕ ಭಾಗಗಳಿವೆ ಮತ್ತು ಆಹಾರವನ್ನು ಒದಗಿಸಲು ಅನೇಕ ರೀತಿಗಳಿವೆ ಎಂದು ವಾದಿಸುತ್ತಾರೆ. ಇದು ಅಷ್ಟೇನೂ ಸರಿಯಾದುದಲ್ಲ. ಕಿವಿಗಳ ಮೂಲಕ ಅಥವಾ ಕಣ್ಣುಗಳ ಮೂಲಕ ದೇಹಕ್ಕೆ ಆಹಾರವನ್ನು ಕೊಡಲು ಯಾರಿಗಾದರೂ ಸಾಧ್ಯವೆ? ದೇವತೆಗಳು ಪರಮ ಪ್ರಭುವಿನ ವಿಶ್ವದೇಹದ ವಿವಿಧ ಭಾಗಗಳು ಎಂದು ಅವರಿಗೆ ತಿಳಿದಿಲ್ಲ; ಅಂತಹವರು ತಮ್ಮ ಅಜ್ಞಾನದಿಂದ ಪ್ರತಿಯೊಬ್ಬ ದೇವತೆಯೂ ಒಬ್ಬ ದೇವರು ಮತ್ತು ಪರಮ ಪ್ರಭುವಿಗೆ ಪ್ರತಿಸ್ಪರ್ಧಿ ಎಂದು ನಂಬುತ್ತಾರೆ.

ದೇವತೆಗಳಷ್ಟೇ ಪರಮ ಪ್ರಭುವಿನ ಭಾಗಗಳಲ್ಲ, ಸಾಮಾನ್ಯ ಜೀವಿಗಳೂ ಹೀಗೆ ಭಾಗಗಳೇ ಹೌದು. ಶ್ರೀಮದ್ಭಾಗವತದಲ್ಲಿ, ಬ್ರಾಹ್ಮಣರು ಪರಮ ಪ್ರಭುವಿನ ತಲೆ, ಕ್ಷತ್ರಿಯರು ಅವನ ತೋಳುಗಳು, ವೈಶ್ಯರು ಅವನ ನಡು, ಶೂದ್ರರು ಅವನ ಕಾಲುಗಳು ಮತ್ತು ಎಲ್ಲರೂ ಬೇರೆ ಬೇರೆ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ ಎಂದು ಹೇಳಿದೆ. ಸನ್ನಿವೇಶ ಏನೇ ಇರಲಿ, ದೇವತೆಗಳೂ

ತಾನೂ ಪರಮ ಪ್ರಭುವಿನ ವಿಭಿನ್ನಾಂಶಗಳು ಎಂದು ಮನುಷ್ಯನು ತಿಳಿದಿದ್ದರೆ ಅವನ ಜ್ಞಾನವು ಪರಿಪೂರ್ಣ. ಆದರೆ ಇದು ಅವನಿಗೆ ಅರ್ಥವಾಗದಿದ್ದರೆ, ಅವನು ದೇವತೆಗಳು ವಾಸಿಸುವ ಬೇರೆ ಲೋಕಗಳಿಗೆ ಹೋಗುತ್ತಾನೆ. ಭಕ್ತನು ತಲಪುವ ಗುರಿಯು ಇದಲ್ಲ.

ದೇವತೆಗಳ ವರಗಳಿಂದ ಪಡೆದ ಫಲಗಳು ನಾಶವಾಗುವಂತಹವು. ಏಕೆಂದರೆ ಐಹಿಕ ಜಗತ್ತಿನಲ್ಲಿ ಲೋಕಗಳು, ದೇವತೆಗಳು ಮತ್ತು ಅವರನ್ನು ಪೂಜಿಸುವವರು ಎಲ್ಲಕ್ಕೂ ನಾಶವುಂಟು. ಆದುದರಿಂದ ಈ ಶ್ಲೋಕದಲ್ಲಿ ದೇವತೆಗಳನ್ನು ಪೂಜಿಸಿ ಪಡೆಯುವ ಫಲಗಳೆಲ್ಲ ನಾಶವಾಗುತ್ತವೆ. ಆದುದರಿಂದ ಇಂತಹ ಪೂಜೆಯನ್ನು ಕಡಮೆ ಬುದ್ಧಿಯ ಜೀವಿಗಳು ಮಾಡುತ್ತಾರೆ ಎಂದು ಸ್ಪಷ್ಟವಾಗಿ ಹೇಳಿದೆ. ಕೃಷ್ಣಪ್ರಜ್ಞೆಯಲ್ಲಿ ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾದ ಪರಿಶುದ್ಧ ಭಕ್ತನು ನಿತ್ಯಜ್ಞಾನಾನಂದವನ್ನು ಸಾಧಿಸುವುದರಿಂದ ಅವನ ಸಾಧನೆಗಳು ಮತ್ತು ದೇವತೆಗಳ ಸಾಮಾನ್ಯ ಆರಾಧಕನ ಸಾಧನೆಗಳು ಬೇರೆ ಬೇರೆಯಾಗಿರುತ್ತವೆ. ಪರಮ ಪ್ರಭು ಅಮಿತನಾದವನು. ಅವನ ಕೃಪೆಯೂ ಅಮಿತ, ಅವನ ಕರುಣೆಯೂ ಅಮಿತ. ಆದುದರಿಂದ ಪರಮ ಪ್ರಭು ತನ್ನ ಪರಿಶುದ್ಧ ಭಕ್ತನಿಗೆ ತೋರುವ ಕರುಣೆಗೆ ಮಿತಿಯಿಲ್ಲ.

## ಶ್ಲೋಕ - 24

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ |**
**ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ||೨೪||**

**ಅವ್ಯಕ್ತಮ್**—ಅವ್ಯಕ್ತವಾಗಿದ್ದವನು; **ವ್ಯಕ್ತಿಮ್**—ವ್ಯಕ್ತಿತ್ವವನ್ನು; **ಆಪನ್ನಮ್**—ಹೊಂದಿದವನು; **ಮನ್ಯನ್ತೇ**—ಎಂದು ತಿಳಿಯುತ್ತಾರೆ; **ಮಾಮ್**—ನನ್ನನ್ನು; **ಅಬುದ್ಧಯಃ**—ಬುದ್ಧಿಹೀನರು; **ಪರಮ್**—ಪರಮೋನ್ನತವಾದ; **ಭಾವಮ್**—ಅಸ್ತಿತ್ವವನ್ನು; **ಅಜಾನನ್ತಃ**—ತಿಳಿಯದವರಾಗಿ; **ಮಮ**—ನನ್ನ; **ಅವ್ಯಯಮ್**—ಅವಿನಾಶಿಯಾದ; **ಅನುತ್ತಮಮ್**—ಅತ್ಯುತ್ಕೃಷ್ಟವಾದ.

## ಅನುವಾದ

**ನನ್ನನ್ನು ಪರಿಪೂರ್ಣವಾಗಿ ಅರಿಯದ ಬುದ್ಧಿಹೀನರು ದೇವೋತ್ತಮ ಪರಮ ಪುರುಷನಾದ ನಾನು, ಕೃಷ್ಣನು, ಮೊದಲು ನಿರಾಕಾರನಾಗಿದ್ದು ಅನಂತರ ಈ ವ್ಯಕ್ತಿತ್ವವನ್ನು ಪಡೆದುಕೊಂಡೆ ಎಂದು ಭಾವಿಸುತ್ತಾರೆ. ಅವರ ಅಲ್ಪ ತಿಳುವಳಿಕೆಯ ಕಾರಣದಿಂದ ಅವರಿಗೆ ನಾಶವಿಲ್ಲದ್ದೂ ಪರಮೋಚ್ಚವೂ ಆದ ನನ್ನ ಉನ್ನತ ಸ್ವರೂಪವು ಅರ್ಥವಾಗುವುದಿಲ್ಲ.**

## ಭಾವಾರ್ಥ

ದೇವತೆಗಳನ್ನು ಪೂಜಿಸುವವರನ್ನು ಮಂದಮತಿಗಳೆಂದು ವರ್ಣಿಸಿದೆ. ಇಲ್ಲಿ ನಿರಾಕಾರವಾದಿಗಳನ್ನು ಹಾಗೆಯೇ ವರ್ಣಿಸಿದೆ. ತನ್ನ ವೈಯಕ್ತಿಕ ಸ್ವರೂಪದಲ್ಲಿ ಶ್ರೀಕೃಷ್ಣನು ಇಲ್ಲಿ ಅರ್ಜುನನ ಮುಂದೆ ಮಾತನಾಡುತ್ತಿದ್ದಾನೆ. ಆದರೂ ಜ್ಞಾನದ ಕಾರಣದಿಂದ ನಿರಾಕಾರವಾದಿಗಳು ಪರಮ ಪ್ರಭುವಿಗೆ ಅಂತಿಮವಾಗಿ ರೂಪವೇ ಇಲ್ಲ ಎಂದು ವಾದಿಸುತ್ತಾರೆ. ರಾಮಾನುಜಾಚಾರ್ಯರ ಶಿಷ್ಯ ಪರಂಪರೆಯಲ್ಲಿ ಬಂದ ಯಾಮುನಾಚಾರ್ಯರು ಭಗವಂತನ ಶ್ರೇಷ್ಠ ಭಕ್ತರು. ಅವರು

ಈ ವಿಷಯದಲ್ಲಿ ಒಂದು ಬಹು ಸೂಕ್ತವಾದ ಪದ್ಯವನ್ನು ಬರೆದಿದ್ದಾರೆ. ಅವರು ಹೀಗೆ ಹೇಳುತ್ತಾರೆ—

**ತ್ವಾಂ ಶೀಲರೂಪಚರಿತೈಃ ಪರಮಪ್ರಕೃಷ್ಟೈಃ**
**ಸತ್ತ್ವೇನ ಸಾತ್ತ್ವಿಕತಯಾ ಪ್ರಬಲೈಶ್ಚ ಶಾಸ್ತ್ರೈಃ |**
**ಪ್ರಖ್ಯಾತದೈವಪರಮಾರ್ಥವಿದಾಂ ಮತೈಶ್ಚ**
**ನೈವಾಸುರ ಪ್ರಕೃತಯಃ ಪ್ರಭವನ್ತಿ ಬೋದ್ಧುಮ್ ||**

"ನನ್ನ ಪ್ರೀತಿಯ ಪ್ರಭುವೇ, ವೇದವ್ಯಾಸ ಮತ್ತು ನಾರದರಂತಹ ಭಕ್ತರಿಗೆ ನೀನು ದೇವೋತ್ತಮ ಪುರುಷನೆಂದು ತಿಳಿದಿದೆ. ಬೇರೆ ಬೇರೆ ವೈದಿಕ ಸಾಹಿತ್ಯವನ್ನು ತಿಳಿದರೆ ನಿನ್ನ ಲಕ್ಷಣಗಳನ್ನೂ ನಿನ್ನ ರೂಪವನ್ನೂ ಚಟುವಟಿಕೆಗಳನ್ನೂ ತಿಳಿಯಬಹುದು. ಆದರೆ ರಾಜಸ ತಾಮಸ ಪ್ರಕೃತಿಗಳಲ್ಲಿರುವವರು, ರಾಕ್ಷಸರು, ಭಕ್ತರಲ್ಲದವರು ನಿನ್ನನ್ನು ಅರಿಯಲಾರರು. ನಿನ್ನನ್ನು ತಿಳಿದುಕೊಳ್ಳಲು ಅವರು ಅಸಮರ್ಥರು. ಇಂತಹ ಭಕ್ತರಲ್ಲದವರು ವೇದಾಂತವನ್ನೂ ಉಪನಿಷತ್ತುಗಳನ್ನೂ ಇತರ ವೈದಿಕ ಸಾಹಿತ್ಯವನ್ನೂ ವಿವೇಚಿಸುವುದರಲ್ಲಿ ಎಷ್ಟೇ ನಿಪುಣರಾದರೂ ಅವರಿಗೆ ದೇವೋತ್ತಮ ಪುರುಷನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ" (ಸ್ತೋತ್ರರತ್ನ 12).

ವೇದಾಂತ ಸಾಹಿತ್ಯವನ್ನು ಅಧ್ಯಯನ ಮಾಡಿದ ಮಾತ್ರಕ್ಕೇ ದೇವೋತ್ತಮ ಪುರುಷನನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ ಎಂದು ಬ್ರಹ್ಮಸಂಹಿತೆಯಲ್ಲಿ ಹೇಳಿದೆ. ಪರಮ ಪ್ರಭುವಿನ ಕರುಣೆಯಿಂದ ಮಾತ್ರ ಪರಮೋನ್ನತನ ವ್ಯಕ್ತಿತ್ವವನ್ನು ತಿಳಿಯಬಹುದು. ಆದುದರಿಂದ, ದೇವತೆಗಳನ್ನು ಪೂಜಿಸುವವರಿಗೆ ಬುದ್ಧಿ ಸಾಲದು. ಅಷ್ಟೇ ಅಲ್ಲ, ನಿಜವಾದ ಕೃಷ್ಣಪ್ರಜ್ಞೆಯ ಛಾಯೆಯೂ ಇಲ್ಲದೆ, ವೇದಾಂತ ಮತ್ತು ಊಹಾತ್ಮಕ ಚಿಂತನೆಯಲ್ಲಿ ತೊಡಗುವ ಈ ಭಕ್ತರಲ್ಲದವರಿಗೆ ಸಹ ಬುದ್ಧಿ ಸಾಲದು. ಭಗವಂತನ ವೈಯಕ್ತಿಕ ಸ್ವಭಾವವನ್ನು ತಿಳಿದುಕೊಳ್ಳಲು ಅವರಿಗೆ ಸಾಧ್ಯವಿಲ್ಲ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಪರಮ ಸತ್ಯವು ನಿರಾಕಾರ ಎಂಬ ಭಾವನೆ ಇರುವವರನ್ನು **ಅಬುದ್ಧಯಃ** ಎಂದು ವರ್ಣಿಸಿದೆ. ಹೀಗೆಂದರೆ ಪರಮ ಸತ್ಯದ ಕಟ್ಟಕಡೆಯ ಲಕ್ಷಣವನ್ನು ತಿಳಿಯದವರು ಎಂದರ್ಥ. ಶ್ರೀಮದ್ಭಾಗವತದಲ್ಲಿ ಪರಮ ಸಾಕ್ಷಾತ್ಕಾರವು ನಿರಾಕಾರ ಬ್ರಹ್ಮನಿಂದ ಪ್ರಾರಂಭವಾಗುತ್ತದೆ. ಅನಂತರ ಅಂತರ್ಯಾಮಿ ಪರಮಾತ್ಮನ ಬಳಿಗೆ ಏರುತ್ತದೆ. ಆದರೆ ಪರಮ ಸತ್ಯದಲ್ಲಿ ಕಡೆಯ ಮಾತೆಂದರೆ ದೇವೋತ್ತಮ ಪುರುಷನು ಎಂದು ಹೇಳಿದೆ. ಆಧುನಿಕ ನಿರಾಕಾರವಾದಿಗಳು ಇನ್ನೂ ಮಂದಬುದ್ಧಿಯವರು. ಏಕೆಂದರೆ ಅವರು ತಮ್ಮ ಮಹಾಪೂರ್ವಜರಾದ ಶ್ರೀ ಶಂಕರಾಚಾರ್ಯರನ್ನು ಸಹ ಅನುಸರಿಸುವುದಿಲ್ಲ. ಶಂಕರಾಚಾರ್ಯರು ಕೃಷ್ಣನು ದೇವೋತ್ತಮ ಪರಮ ಪುರುಷನು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದುದರಿಂದ ಪರಮ ಸತ್ಯವನ್ನು ಅರಿಯದ ನಿರಾಕಾರವಾದಿಗಳು ಕೃಷ್ಣನು ದೇವಕಿ ಮತ್ತು ವಸುದೇವರ ಮಗ ಅಷ್ಟೇ ಅಥವಾ ಒಬ್ಬ ರಾಜ ಅಥವಾ ಒಬ್ಬ ಪ್ರಬಲ ವ್ಯಕ್ತಿ ಎಂದು ಯೋಚಿಸುತ್ತಾರೆ. ಭಗವದ್ಗೀತೆಯಲ್ಲಿ (9.11) ಇದನ್ನು ಖಂಡಿಸಿದೆ — **ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮ್ ಆಶ್ರಿತಮ್.** "ಮೂರ್ಖರು ಮಾತ್ರವೇ ನಾನೊಬ್ಬ ಸಾಮಾನ್ಯ ಮನುಷ್ಯ ಎಂದು ಭಾವಿಸುತ್ತಾರೆ."

ವಾಸ್ತವಾಂಶವೆಂದರೆ ಭಕ್ತಿಸೇವೆಯನ್ನು ಸಲ್ಲಿಸದೆ ಮತ್ತು ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳದೆ ಯಾರೂ ಕೃಷ್ಣನನ್ನು ಅರ್ಥಮಾಡಿಕೊಳ್ಳಲಾರರು. ಭಾಗವತವು (10.14.29) ಇದನ್ನು ಹೀಗೆ

ದೃಢಪಡಿಸುತ್ತದೆ —

**ಅಥಾಪಿ ತೇ ದೇವ ಪದಾಮ್ಬುಜದ್ವಯ-**
**ಪ್ರಸಾದಲೇಶಾನುಗೃಹೀತ ಏವ ಹಿ |**
**ಜಾನಾತಿ ತತ್ತ್ವಂ ಭಗವನ್ ಮಹಿಮ್ನೋ**
**ನ ಚಾನ್ಯ ಏಕೋಽಪಿ ಚಿರಂ ವಿಚಿನ್ವನ್ ||**

"ಪ್ರಭುವೇ, ಯಾರಿಗಾದರೂ ನಿನ್ನ ಚರಣಕಮಲದ ಕರುಣೆಯ ಕೃಪೆಯು ಕಿಂಚಿತ್ತಾದರೂ ದೊರಕುವ ಭಾಗ್ಯವಾದರೆ ಅವನು ನಿನ್ನ ವ್ಯಕ್ತಿತ್ವದ ಘನತೆಯನ್ನು ಅರ್ಥಮಾಡಿಕೊಳ್ಳಬಲ್ಲ. ಆದರೆ ದೇವೋತ್ತಮ ಪರಮ ಪುರುಷನ ಘನತೆಯನ್ನು ಅರ್ಥಮಾಡಿಕೊಳ್ಳಲು ಊಹಾತ್ಮಕ ಚಿಂತನೆ ಮಾಡುವವರು ವೇದಗಳನ್ನು ಹಲವಾರು ವರ್ಷ ಅಧ್ಯಯನಮಾಡಿದರೂ ನಿನ್ನನ್ನು ಅರಿಯಲಾರರು." ಬರಿಯ ಮಾನಸಿಕ ಊಹಾತ್ಮಕ ಚಿಂತನೆಗಳಿಂದ ಅಥವಾ ವೈದಿಕ ಸಾಹಿತ್ಯವನ್ನು ಚರ್ಚೆಮಾಡುವುದರಿಂದ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನಾಗಲೀ, ಅವನ ರೂಪವನ್ನಾಗಲೀ, ಗುಣವನ್ನಾಗಲೀ ಅಥವಾ ನಾಮವನ್ನಾಗಲೀ ತಿಳಿಯಲು ಸಾಧ್ಯವಿಲ್ಲ. ಭಕ್ತಿಸೇವೆಯಿಂದ ಮಾತ್ರವೇ ಅವನನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎನ್ನುವ ಮಹಾಮಂತ್ರದಿಂದ ಪ್ರಾರಂಭಿಸಿ ಮನುಷ್ಯನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ತೊಡಗಿದಾಗ ಮಾತ್ರ ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಬಹುದು. ಭಕ್ತರಲ್ಲದ ನಿರಾಕಾರವಾದಿಗಳು ಕೃಷ್ಣನಿಗೆ ಈ ಭೌತಿಕ ಪ್ರಕೃತಿಯಿಂದಾದ ಶರೀರವಿದ್ದು, ಅವನ ಎಲ್ಲ ಚಟುವಟಿಕೆಗಳು, ಅವನ ರೂಪ ಎಲ್ಲವೂ ಮಾಯೆ ಎಂದು ಭಾವಿಸುತ್ತಾರೆ. ಈ ನಿರಾಕಾರವಾದಿಗಳಿಗೆ ಮಾಯಾವಾದಿಗಳೆಂದು ಹೆಸರು. ಅವರಿಗೆ ಅಂತಿಮ ಸತ್ಯ ತಿಳಿಯದು.

ಇಪ್ಪತ್ತನೆಯ ಶ್ಲೋಕವು ಸ್ಪಷ್ಟವಾಗಿ ಹೀಗೆ ಹೇಳುತ್ತದೆ — **ಕಾಮೈಸ್ತೈಸ್ತೈರ್ ಹೃತ-ಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ.** "ಕಾಮಾಭಿಲಾಷೆಗಳಿಂದ ಕುರುಡರಾದವರು ಬೇರೆ ಬೇರೆ ದೇವತೆಗಳಿಗೆ ಶರಣಾಗುತ್ತಾರೆ." ದೇವೋತ್ತಮ ಪರಮ ಪುರುಷನಲ್ಲದೆ ಬೇರೆ ಬೇರೆ ಲೋಕಗಳನ್ನು ಪಡೆದ ದೇವತೆಗಳಿದ್ದಾರೆ. ಭಗವಂತನಿಗೂ ಒಂದು ಲೋಕವಿದೆ ಎನ್ನುವುದನ್ನು ಒಪ್ಪಲಾಗಿದೆ. ಇಪ್ಪತ್ತಮೂರನೆಯ ಶ್ಲೋಕದಲ್ಲಿ ಹೇಳಿದಂತೆ, **ದೇವಾನ್ ದೇವಯಜೋ ಯಾನ್ತಿ ಮದ್ ಭಕ್ತಾ ಯಾಂತಿ ಮಾಮ್ ಅಪಿ** — ಎಂದರೆ ದೇವತೆಗಳನ್ನು ಪೂಜಿಸುವವರು ದೇವತೆಗಳ ಬೇರೆ ಬೇರೆ ಲೋಕಗಳಿಗೆ ಹೋಗುತ್ತಾರೆ ಮತ್ತು ಶ್ರೀಕೃಷ್ಣನ ಭಕ್ತರು ಕೃಷ್ಣಲೋಕಕ್ಕೆ ಹೋಗುತ್ತಾರೆ. ಇದನ್ನು ಸ್ಪಷ್ಟವಾಗಿ ಹೇಳಿದ್ದರೂ ಮೂರ್ಖ ನಿರಾಕಾರವಾದಿಗಳು ಭಗವಂತನಿಗೆ ರೂಪವಿಲ್ಲ ಮತ್ತು ಈ ರೂಪಗಳನ್ನು ಆರೋಪಿಸಲಾಗಿದೆ ಅಷ್ಟೇ ಎಂದು ವಾದಿಸುತ್ತಾರೆ. ಗೀತೆಯನ್ನು ಅಧ್ಯಯನ ಮಾಡಿದರೆ ದೇವತೆಗಳೂ ಅವರ ನಿವಾಸಗಳೂ ನಿರಾಕಾರ ಎಂದು ತೋರುತ್ತದೆಯೆ? ದೇವತೆಗಳಾಗಲೀ ದೇವೋತ್ತಮ ಪರಮ ಪುರುಷನಾದ ಕೃಷ್ಣನಾಗಲೀ ನಿರಾಕಾರರಲ್ಲ ಎನ್ನುವುದು ಸ್ಪಷ್ಟ. ಅವರೆಲ್ಲ ವ್ಯಕ್ತಿಗಳು. ಶ್ರೀಕೃಷ್ಣನು ದೇವೋತ್ತಮ ಪರಮ ಪುರುಷ. ಅವನಿಗೆ ತನ್ನದೇ ಲೋಕವಿದೆ. ದೇವತೆಗಳಿಗೆ ಅವರ ಲೋಕಗಳಿವೆ.

ಆದುದರಿಂದ ಪರಮ ಸತ್ಯಕ್ಕೆ ರೂಪವಿಲ್ಲ, ರೂಪವನ್ನು ಆರೋಪಿಸಲಾಗಿದೆ ಎನ್ನುವ ಅದ್ವೈತಿಗಳ ವಾದವು ನಿಲ್ಲುವುದಿಲ್ಲ. ದೇವತೆಗಳ ರೂಪಗಳೂ ಪರಮ ಪ್ರಭುವಿನ ರೂಪವೂ ಏಕಕಾಲದಲ್ಲಿ ಇವೆ ಮತ್ತು ಶ್ರೀಕೃಷ್ಣನು **ಸಚ್ಚಿದಾನನ್ದ** ಎಂದು ಭಗವದ್ಗೀತೆಯಿಂದ ನಾವು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬಹುದು. ಪರಾತ್ಪರ ಸತ್ಯವು **ಆನಂದಮಯೋಽಭ್ಯಾಸಾತ್** ಅಥವಾ ಸ್ವಭಾವತಃ ಆನಂದಮಯ ಎನ್ನುವುದನ್ನೂ ಮತ್ತು ಭಗವಂತನು ಅಪರಿಮಿತ ಮಂಗಳ ಗುಣಗಳ ಭಂಡಾರ ಎನ್ನುವುದನ್ನೂ ವೇದಗಳು ದೃಢಪಡಿಸುತ್ತವೆ. ತಾನು **ಅಜ** (ಹುಟ್ಟಿಲ್ಲದವನು) ಆದರೂ ಕಾಣಿಸಿಕೊಳ್ಳುತ್ತೇನೆ ಎಂದು ಗೀತೆಯಲ್ಲಿ ಭಗವಂತನು ಹೇಳುತ್ತಾನೆ. ಭಗವದ್ಗೀತೆಯಿಂದ ನಾವು ತಿಳಿದುಕೊಳ್ಳಬೇಕಾದ ವಾಸ್ತವಾಂಶಗಳು ಇವು. ದೇವೋತ್ತಮ ಪರಮ ಪುರುಷನು ನಿರಾಕಾರನಾಗಿರುವುದು ಹೇಗೆ ಸಾಧ್ಯ ಎಂದು ಅರ್ಥವಾಗುವುದಿಲ್ಲ. ನಿರಾಕಾರವಾದಿಯಾದ ಅದ್ವೈತಿಯು, ರೂಪವನ್ನು ಆರೋಪಿಸಿದೆ ಎಂದು ಹೇಳುವುದು ಗೀತೆಯ ಹೇಳಿಕೆಗಳ ಮಟ್ಟಿಗೆ ಸುಳ್ಳು. ಪರಾತ್ಪರ ಸತ್ಯವಾದ ಶ್ರೀಕೃಷ್ಣನಿಗೆ ರೂಪವೂ ಉಂಟು, ವ್ಯಕ್ತಿತ್ವವೂ ಉಂಟು ಎಂದು ಇಲ್ಲಿ ಸ್ಪಷ್ಟವಾಗುತ್ತದೆ.

## ಶ್ಲೋಕ - 25

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ |**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ||೨೫||**

**ನ**—ಅಲ್ಲ; **ಅಹಮ್**—ನಾನು; **ಪ್ರಕಾಶಃ**—ವ್ಯಕ್ತನು; **ಸರ್ವಸ್ಯ**—ಪ್ರತಿಯೊಬ್ಬರಿಗೆ; **ಯೋಗಮಾಯಾ**—ಅಂತರಂಗ ಶಕ್ತಿಯಿಂದ; **ಸಮಾವೃತಃ**—ಆವೃತನು; **ಮೂಢಃ**—ಮೂಢನು; **ಅಯಮ್**—ಇವುಗಳನ್ನು; **ನ ಅಭಿಜಾನಾತಿ**—ತಿಳಿಯುವುದಿಲ್ಲ; **ಲೋಕಃ**—ಜನರು; **ಮಾಮ್**—ನನ್ನನ್ನು; **ಅಜಮ್**—ಜನ್ಮರಹಿತನು; **ಅವ್ಯಯಮ್**—ಅಕ್ಷಯನು ಎಂದು.

## ಅನುವಾದ

**ಮೂಢರಿಗೆ ಬುದ್ಧಿಹೀನರಿಗೆ ನಾನು ಎಂದೂ ಕಾಣಿಸಿಕೊಳ್ಳುವುದಿಲ್ಲ. ಅವರ ಮಟ್ಟಿಗೆ ನಾನು ಅಂತರಂಗ ಶಕ್ತಿಯಿಂದ ಆವೃತನಾಗಿರುತ್ತೇನೆ. ಆದುದರಿಂದ ನನಗೆ ಹುಟ್ಟು ಇಲ್ಲ, ನಾನು ಅವ್ಯಯನು ಎಂದು ಅವರು ತಿಳಿಯರು.**

## ಭಾವಾರ್ಥ

ಕೃಷ್ಣನು ಈ ಭೂಮಿಯ ಮೇಲಿದ್ದ ಎಲ್ಲರಿಗೂ ಕಾಣಿಸುತ್ತಿದ್ದ. ಹಾಗಿರುವಾಗ ಆತನು ಈಗ ಎಲ್ಲರಿಗೂ ಕಾಣಿಸುವುದಿಲ್ಲವೇಕೆ ಎಂದು ಪ್ರಶ್ನಿಸಬಹುದು. ಆದರೆ ವಾಸ್ತವವಾಗಿ ಕೃಷ್ಣನು ಎಲ್ಲರಿಗೂ ವ್ಯಕ್ತನಾಗಲಿಲ್ಲ. ಕೃಷ್ಣನು ಭೂಮಿಯ ಮೇಲಿದ್ದಾಗ ಅವನು ದೇವೋತ್ತಮ ಪರಮ ಪುರುಷ ಎಂದು ಅರ್ಥಮಾಡಿಕೊಂಡವರು ಕೆಲವರೇ. ಕುರುಸಭೆಯಲ್ಲಿ ಕೃಷ್ಣನಿಗೆ ಅಗ್ರಮರ್ಯಾದೆ ಮಾಡುವುದನ್ನು ಶಿಶುಪಾಲನು ವಿರೋಧಿಸಿದಾಗ, ಭೀಷ್ಮನು ಕೃಷ್ಣನನ್ನು ಬೆಂಬಲಿಸಿ ಅವನು ಪರಮ ಪ್ರಭುವೆಂದು ಸಾರಿದ. ಹಾಗೆಯೇ, ಪಾಂಡವರು ಮತ್ತೆ ಬೇರೆ ಕೆಲವರಿಗೆ ಮಾತ್ರ ಅವನೇ ಪರಮ ಪ್ರಭು ಎಂದು ತಿಳಿದಿತ್ತು. ಎಲ್ಲರಿಗೂ ತಿಳಿದಿರಲಿಲ್ಲ. ಭಕ್ತರಲ್ಲದವರಿಗೂ ಸಾಮಾನ್ಯ ಮನುಷ್ಯರಿಗೂ

ಅವನು ವ್ಯಕ್ತನಾಗಲಿಲ್ಲ. ಆದುದರಿಂದ ಭಗವದ್ಗೀತೆಯಲ್ಲಿ ಕೃಷ್ಣನು ಹೀಗೆ ಹೇಳುತ್ತಾನೆ — ಪರಿಶುದ್ಧ ಭಕ್ತರನ್ನು ಬಿಟ್ಟು ಉಳಿದವರು ಕೃಷ್ಣನು ಅವರಂತೆಯೇ ಒಬ್ಬನು ಎಂದು ಭಾವಿಸುತ್ತಾರೆ. ಅವನ ಭಕ್ತರು ಮಾತ್ರ ಅವನನ್ನು ಎಲ್ಲ ಆನಂದದ ಆಗರವಾಗಿ ಕಂಡರು. ಭಕ್ತರಲ್ಲದ ಇತರ ಮಂದಮತಿಗಳಿಗೆ ಅವನು ಯೋಗಮಾಯೆಯಿಂದ ಮುಚ್ಚಿಹೋಗಿದ್ದ.

ಶ್ರೀಮದ್ಭಾಗವತದಲ್ಲಿ (1.8.19) ಕುಂತಿಯ ಪ್ರಾರ್ಥನೆಯಲ್ಲಿ ಯೋಗ ಮಾಯೆಯ ಪರದೆಯು ಕೃಷ್ಣನನ್ನು ಮುಚ್ಚಿದೆ, ಆದುದರಿಂದ ಆತನನ್ನು ಎಲ್ಲರೂ ಕಾಣಲಾರರು ಎಂದು ಹೇಳಿದೆ. ಈ ಯೋಗ ಮಾಯೆಯ ಪರದೆಯನ್ನು ಈಶೋಪನಿಷತ್ತು (ಮಂತ್ರ 15) ಸಹ ದೃಢಪಡಿಸುತ್ತದೆ. ಈ ಮಂತ್ರದಲ್ಲಿ ಭಕ್ತನು ಹೀಗೆ ಪ್ರಾರ್ಥನೆ ಮಾಡುತ್ತಾನೆ —

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ |
ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ||

"ಪ್ರಭುವೇ, ವಿಶ್ವಪಾಲಕನು ನೀನೇ, ನಿನ್ನ ಭಕ್ತಿಸೇವೆಯೇ ಅತ್ಯುನ್ನತ ಧಾರ್ಮಿಕ ತತ್ವವು. ಆದುದರಿಂದ ನೀನು ನನ್ನನ್ನು ಕಾಪಾಡು ಎಂದು ಪ್ರಾರ್ಥಿಸುತ್ತೇನೆ. ನಿನ್ನ ದಿವ್ಯ ರೂಪವನ್ನು ಯೋಗ ಮಾಯೆಯು ಮುಚ್ಚಿದೆ. ಯೋಗ ಮಾಯೆಯ ಅಥವಾ ಅಂತರಂಗ ಶಕ್ತಿಯ ತೆರೆಯು ಬ್ರಹ್ಮಜ್ಯೋತಿಯೇ ಆಗಿದೆ. ನಿನ್ನ ಸಚ್ಚಿದಾನಂದ ವಿಗ್ರಹವನ್ನು ನಾನು ಕಾಣದಂತೆ ಅಡ್ಡಿಮಾಡುವ ಈ ಮಹಾಪ್ರಭೆಯನ್ನು ದಯಮಾಡಿ ನಿವಾರಿಸು." ತನ್ನ ದಿವ್ಯ ಜ್ಞಾನಾನಂದ ರೂಪದಲ್ಲಿ ದೇವೋತ್ತಮ ಪರಮ ಪುರುಷನನ್ನು ಬ್ರಹ್ಮಜ್ಯೋತಿಯ ಅಂತರಂಗ ಶಕ್ತಿಯು ಮುಚ್ಚಿರುತ್ತದೆ. ಮಂದ ಬುದ್ಧಿಯ ನಿರಾಕಾರವಾದಿಗಳು ಈ ಕಾರಣದಿಂದ ಪರಮ ಪ್ರಭುವನ್ನು ಕಾಣಲಾರರು.

ಶ್ರೀಮದ್ಭಾಗವತದಲ್ಲಿ (10.14.7) ಬ್ರಹ್ಮನು ಮಾಡುವ ಒಂದು ಪ್ರಾರ್ಥನೆ ಇದೆ. "ಹೇ ದೇವೋತ್ತಮ ಪರಮ ಪುರುಷನೇ, ಹೇ ಪರಮಾತ್ಮನೇ, ಎಲ್ಲ ರಹಸ್ಯಗಳ ಪ್ರಭುವೇ, ಈ ಜಗತ್ತಿನಲ್ಲಿ ನಿನ್ನ ಶಕ್ತಿಯನ್ನೂ, ಲೀಲೆಗಳನ್ನೂ ಗಣಿಸಬಲ್ಲವರು ಯಾರು? ನೀನು ನಿರಂತರವೂ ನಿನ್ನ ಅಂತರಂಗ ಶಕ್ತಿಯನ್ನು ವಿಸ್ತರಿಸುತ್ತಿರುವೆ. ಆದುದರಿಂದ ಯಾರೂ ನಿನ್ನನ್ನು ತಿಳಿಯಲಾರರು. ವಿಜ್ಞಾನಿಗಳು ಮತ್ತು ವಿದ್ವಾಂಸರಾದವರು ಐಹಿಕ ಜಗತ್ತಿನ ಪರಮಾಣುರಚನೆಯನ್ನು, ಅಂದರೆ ಗ್ರಹಗಳ ಪರಮಾಣು ರಚನೆಯನ್ನು ಸಹ ಪರೀಕ್ಷಿಸಬಹುದು. ಆದರೆ ನೀನೇ ಅವರ ಎದುರಿಗಿದ್ದರೂ ಅವರು ನಿನ್ನ ಚೈತನ್ಯ ಮತ್ತು ಶಕ್ತಿಗಳನ್ನು ಎಣಿಸಲಾರರು." ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನಿಗೆ ಹುಟ್ಟು ಎನ್ನುವುದು ಇಲ್ಲ. ಮಾತ್ರವಲ್ಲ ಅವನು **ಅವ್ಯಯ,** ಕ್ಷೀಣನಾಗದವನು. ಅವನ ನಿತ್ಯರೂಪವು ಜ್ಞಾನಾನಂದ ಪೂರ್ಣವಾಗಿದೆ. ಅವನ ಶಕ್ತಿಗಳಿಗೆ ಕೊನೆ ಎನ್ನುವುದಿಲ್ಲ.

## ಶ್ಲೋಕ - 26

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ |
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ||೨೬||

**ವೇದ**—ತಿಳಿದಿದ್ದೇನೆ; **ಅಹಮ್**—ನಾನು; **ಸಮತೀತಾನಿ**—ಸಂಪೂರ್ಣವಾಗಿ ಗತಿಸಿದ; **ವರ್ತಮಾನಾನಿ**

—ಈಗಿನ; **ಚ**—ಮತ್ತು; **ಅರ್ಜುನ**—ಅರ್ಜುನನೇ; **ಭವಿಷ್ಯಾಣಿ**—ಭವಿಷ್ಯದ; **ಚ**—ಕೂಡ; **ಭೂತಾನಿ**—ಹಿಂದಿನ; **ಮಾಮ್**—ನನ್ನನ್ನು; **ತು**—ಆದರೆ; **ವೇದ ನ**—ತಿಳಿದಿಲ್ಲ; **ಕಶ್ಚನ**— ಯಾರೊಬ್ಬನೂ.

## ಅನುವಾದ

**ಅರ್ಜುನಾ, ದೇವೋತ್ತಮ ಪರಮ ಪುರುಷನಾಗಿ ನಾನು ಹಿಂದೆ ಆದದ್ದನ್ನು, ಈಗ ಆಗುತ್ತಿರುವುದನ್ನು, ಇನ್ನು ಮುಂದೆ ಬರುವುದನ್ನೂ ಬಲ್ಲೆ. ನಾನು ಎಲ್ಲ ಜೀವಿಗಳನ್ನೂ ಬಲ್ಲೆ; ಆದರೆ ನನ್ನನ್ನು ಬಲ್ಲವರು ಯಾರೂ ಇಲ್ಲ.**

## ಭಾವಾರ್ಥ

ಇಲ್ಲಿ ಸಾಕಾರ ಮತ್ತು ನಿರಾಕಾರಗಳ ಪ್ರಶ್ನೆಯನ್ನು ಸ್ಪಷ್ಟವಾಗಿ ಹೇಳಿದೆ. ನಿರಾಕಾರವಾದಿಗಳು ಪರಿಗಣಿಸುವಂತೆ, ದೇವೋತ್ತಮ ಪರಮ ಪುರುಷನ ರೂಪವಾದ ಕೃಷ್ಣನು ಮಾಯೆಯಾಗಿದ್ದಿದ್ದರೆ, ಆತನು ಜೀವಿಯಂತೆ ತನ್ನ ದೇಹವನ್ನು ಬದಲಾಯಿಸುತ್ತಿದ್ದನು, ತನ್ನ ಭೂತಕಾಲವನ್ನು ಸಂಪೂರ್ಣವಾಗಿ ಮರೆತು ಬಿಡುತ್ತಿದ್ದನು. ಭೌತಿಕ ಶರೀರವಿರುವವನು ಹಿಂದಿನ ಜನ್ಮವನ್ನು ನೆನಪಿಟ್ಟುಕೊಳ್ಳಲಾರ, ಮುಂದಿನ ಜನ್ಮವನ್ನು ಹೇಳಲಾರ, ಈ ಜನ್ಮದ ಫಲವನ್ನು ಮೊದಲೇ ಹೇಳಲಾರ. ಆದುದರಿಂದ ಆತನು ಭೂತ, ವರ್ತಮಾನ ಮತ್ತು ಭವಿಷ್ಯಗಳನ್ನು ತಿಳಿಯಲಾರ.

ಸಾಮಾನ್ಯ ಮನುಷ್ಯನಂತಲ್ಲದೆ ಶ್ರೀಕೃಷ್ಣನು ಹಿಂದೆ ಏನಾಯಿತು, ವರ್ತಮಾನ ಕಾಲದಲ್ಲಿ ಏನಾಗುತ್ತಿದೆ ಮತ್ತು ಮುಂದೆ ಏನಾಗುವುದು ಎನ್ನುವುದು ತನಗೆ ಸಂಪೂರ್ಣವಾಗಿ ತಿಳಿದಿದೆ ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಲಕ್ಷಾಂತರ ವರ್ಷಗಳ ಹಿಂದೆ ಸೂರ್ಯದೇವನಾದ ವಿವಸ್ವಾನನಿಗೆ ಉಪದೇಶ ಮಾಡಿದುದು ಶ್ರೀಕೃಷ್ಣನಿಗೆ ನೆನಪಿದೆ ಎನ್ನುವುದನ್ನು ನಾಲ್ಕನೆಯ ಅಧ್ಯಾಯದಲ್ಲಿ ನೋಡಿದ್ದೇವೆ. ಪರಮಾತ್ಮನಾಗಿ ಶ್ರೀಕೃಷ್ಣನು ಪ್ರತಿಯೊಬ್ಬ ಜೀವಿಯ ಹೃದಯದಲ್ಲಿ ಇರುವುದರಿಂದ ಆತನು ಪ್ರತಿಯೊಂದು ಜೀವಿಯನ್ನೂ ಬಲ್ಲ. ಆದರೆ ಪರಮಾತ್ಮನಾಗಿ ಆತನು ಪ್ರತಿಯೊಂದು ಜೀವಿಯಲ್ಲಿ ನೆಲೆಸಿದ್ದರೂ ಮತ್ತು ದೇವೋತ್ತಮ ಪರಮ ಪುರುಷನಾಗಿ ಆತನ ಸನ್ನಿಧಿಯಿದ್ದರೂ ಮಂದಬುದ್ಧಿಯವರು ಮಾತ್ರ ನಿರಾಕಾರ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡೂ ಶ್ರೀಕೃಷ್ಣನನ್ನು ಪರಮ ಪುರುಷನೆಂದು ತಿಳಿಯಲಾರರು. ನಿಶ್ಚಯವಾಗಿಯೂ ಶ್ರೀಕೃಷ್ಣನ ದಿವ್ಯ ಶರೀರವು ನಾಶವಾಗುವುದಿಲ್ಲ. ಆತನು ಸೂರ್ಯನಂತೆ ಇದ್ದಾನೆ, ಮಾಯೆಯು ಮೋಡದಂತೆ ಇದೆ. ಐಹಿಕ ಜಗತ್ತಿನಲ್ಲಿ ಸೂರ್ಯನೂ, ಮೋಡಗಳೂ, ಬೇರೆ ಬೇರೆ ನಕ್ಷತ್ರಗಳೂ, ಗ್ರಹಗಳೂ ಇರುವುದನ್ನು ಕಾಣುತ್ತೇವೆ. ಆಕಾಶದಲ್ಲಿ ಇವುಗಳೆಲ್ಲವನ್ನೂ ಮೋಡಗಳು ಸ್ವಲ್ಪಕಾಲ ಮುಚ್ಚಬಹುದು. ಆದರೆ ನಮ್ಮ ಪರಿಮಿತವಾದ ದೃಷ್ಟಿಗೆ ಮಾತ್ರ ಹೀಗೆ ಮುಚ್ಚಿದ್ದು ಕಾಣುತ್ತದೆ. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ನಿಜವಾಗಿ ಮುಚ್ಚಿಹೋಗಿರುವುದಿಲ್ಲ. ಹಾಗೆಯೇ ಮಾಯೆಯು ಪರಮ ಪ್ರಭುವನ್ನು ಮರೆಮಾಡಲಾರದು. ಆತನ ಅಂತರಂಗ ಶಕ್ತಿಯ ಕಾರಣದಿಂದ ಮಂದಮತಿಗಳಾದ ಮನುಷ್ಯರು ಅವನನ್ನು ಕಾಣಲಾರರು. ಈ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ ಹೇಳಿದಂತೆ ಲಕ್ಷಲಕ್ಷ ಮಂದಿ ಮನುಷ್ಯರಲ್ಲಿ ಕೆಲವರು ಮಾತ್ರ ಮನುಷ್ಯ ಜನ್ಮದಲ್ಲಿ ಪರಿಪೂರ್ಣರಾಗಲು ಪ್ರಯತ್ನಿಸುತ್ತಾರೆ. ಹೀಗೆ ಪರಿಪೂರ್ಣರಾದ ಸಹಸ್ರಾರು ಮಂದಿಯಲ್ಲಿ ಒಬ್ಬನಿಗೆ ಸಹ ಕೃಷ್ಣನು

ಅರ್ಥವಾಗುವುದು ವಿರಳ. ನಿರಾಕಾರ ಬ್ರಹ್ಮನ್ ಅಥವಾ ಅಂತರ್ಯಾಮಿ ಪರಮಾತ್ಮನ ಸಾಕ್ಷಾತ್ಕಾರದಿಂದ ಒಬ್ಬ ಮನುಷ್ಯನು ಪರಿಪೂರ್ಣನಾದರೂ ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನನ್ನು, ಕೃಷ್ಣಪ್ರಜ್ಞೆಯಿಲ್ಲದೆ ಅರ್ಥಮಾಡಿಕೊಳ್ಳಲಾರ.

## ಶ್ಲೋಕ - 27

**ಇಚ್ಛಾದ್ವೇಷಸಮುತ್ಥೇನ ದ್ವನ್ದ್ವಮೋಹೇನ ಭಾರತ |**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾನ್ತಿ ಪರನ್ತಪ ||೨೭||**

**ಇಚ್ಛಾ**—ಇಚ್ಛೆ; **ದ್ವೇಷ**—ಮತ್ತು ದ್ವೇಷಗಳಿಂದ; **ಸಮುತ್ಥೇನ**—ಉತ್ಪನ್ನವಾದ; **ದ್ವನ್ದ್ವ**—ದ್ವಂದ್ವಗಳ; **ಮೋಹೇನ**—ಭ್ರಾಂತಿಯಿಂದ; **ಭಾರತ**—ಭರತ ವಂಶದವನೇ; **ಸರ್ವ**—ಎಲ್ಲ; **ಭೂತಾನಿ**—ಜೀವಿಗಳು; **ಸಮ್ಮೋಹಮ್**—ಭ್ರಮೆಯನ್ನು; **ಸರ್ಗೇ**—ಜನಿಸುವಾಗ; **ಯಾನ್ತಿ**—ಹೊಂದುವರು; **ಪರನ್ತಪ**—ಶತ್ರುಗಳನ್ನು ಜಯಿಸುವವನೇ.

## ಅನುವಾದ

**ಭರತವಂಶಜನಾದ ಅರ್ಜುನನೆ, ಶತ್ರುಗಳನ್ನು ಜಯಿಸುವವನೆ, ಆಸೆ ದ್ವೇಷಗಳಿಂದ ಹುಟ್ಟಿದ ದ್ವಂದ್ವಗಳಿಂದಾಗಿ ಎಲ್ಲ ಜೀವಿಗಳೂ ಹುಟ್ಟುವಾಗಲೇ ಭ್ರಾಂತಿಯನ್ನು ಹೊಂದಿರುತ್ತವೆ.**

## ಭಾವಾರ್ಥ

ಪರಿಶುದ್ಧ ಜ್ಞಾನನಾದ ಪರಮ ಪ್ರಭುವಿಗೆ ಅಧೀನನಾಗಿರುವುದೇ ಜೀವಿಯ ಸಹಜ ಸ್ವರೂಪ. ಭ್ರಾಂತಿಯಿಂದ ಮನುಷ್ಯನು ಈ ಪರಿಶುದ್ಧ ಜ್ಞಾನದಿಂದ ಬೇರೆಯಾದಾಗ ಮಾಯಾಶಕ್ತಿಯು ಅವನನ್ನು ನಿಯಂತ್ರಿಸುತ್ತದೆ. ಆತನು ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲಾರ. ಈ ಮಾಯಾಶಕ್ತಿಯು ಬಯಕೆ ಮತ್ತು ದ್ವೇಷಗಳ ದ್ವಂದ್ವದಲ್ಲಿ ಪ್ರಕಟವಾಗುತ್ತದೆ. ಬಯಕೆ ಮತ್ತು ದ್ವೇಷಗಳಿಂದ ಅಜ್ಞಾನಿಯು ಪರಮ ಪ್ರಭುವಿನೊಡನೆ ಒಂದಾಗಲು ಬಯಸುತ್ತಾನೆ ಮತ್ತು ದೇವೋತ್ತಮ ಪರಮ ಪುರುಷನಾದ ಕೃಷ್ಣನ ವಿಷಯದಲ್ಲಿ ಅಸೂಯೆ ಪಡುತ್ತಾನೆ. ಭ್ರಾಂತಿಗೆ ಒಳಗಾಗದ ಮತ್ತು ಬಯಕೆ, ದ್ವೇಷಗಳಿಂದ ಕಲುಷಿತರಾಗದ ಪರಿಶುದ್ಧಭಕ್ತರು, ಪ್ರಭು ಶ್ರೀಕೃಷ್ಣನು ತನ್ನ ಒಳಗಿನ ಶಕ್ತಿಗಳಿಂದ ಕಾಣಿಸಿಕೊಳ್ಳುತ್ತಾನೆ ಎಂದು ಅರ್ಥಮಾಡಿಕೊಳ್ಳಬಲ್ಲರು. ಆದರೆ ದ್ವಂದ್ವ ಮತ್ತು ಅಜ್ಞಾನಗಳಿಂದ ಭ್ರಮೆಗೊಳಗಾದವರು ದೇವೋತ್ತಮ ಪರಮ ಪುರುಷನು ಐಹಿಕ ಶಕ್ತಿಗಳಿಂದ ಸೃಷ್ಟಿಯಾಗಿದ್ದಾನೆ ಎಂದು ಯೋಚಿಸುತ್ತಾರೆ. ಅದು ಅವರ ದುರದೃಷ್ಟ. ಹೀಗೆ ಭ್ರಾಂತಿಗೊಳಗಾದವರಿಗೆ ಕೆಲವು ಲಕ್ಷಣಗಳಿರುತ್ತವೆ. ಅವರು,"ಇವಳು ನನ್ನ ಹೆಂಡತಿ; ಇದು ನನ್ನ ಮನೆ; ನಾನು ಈ ಮನೆಯ ಯಜಮಾನ; ಈ ಹೆಂಡತಿಯ ಗಂಡ", ಎಂದೆಲ್ಲ ಯೋಚಿಸುತ್ತಾರೆ. ಇದರಿಂದ ಅವರು ಅಪಕೀರ್ತಿ ಮತ್ತು ಕೀರ್ತಿ, ದುಃಖ ಮತ್ತು ಸುಖ, ಹೆಂಗಸು ಮತ್ತು ಗಂಡಸು, ಸಂತೋಷ ಮತ್ತು ನೋವು ಮೊದಲಾದ ದ್ವಂದ್ವಗಳಲ್ಲಿ ಉಳಿಯುತ್ತಾರೆ. ಇವು ಭ್ರಾಂತಿಯಿಂದಾದ ದ್ವಂದ್ವಗಳು. ಹೀಗೆ ದ್ವಂದ್ವಗಳಿಂದ ಭ್ರಮಿತರಾದವರು ಸಂಪೂರ್ಣವಾಗಿ ದಡ್ಡರು. ಆದುದರಿಂದ ಅವರು ದೇವೋತ್ತಮ ಪರಮ ಪುರುಷನನ್ನು ಅರಿಯಲಾರರು.

## ಶ್ಲೋಕ - 28

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ |**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ||೨೮||**

**ಯೇಷಾಮ್**—ಯಾವ; **ತು**—ಆದರೆ; **ಅನ್ತಗತಮ್**—ಸಂಪೂರ್ಣವಾಗಿ ನಿರ್ಮೂಲವಾಗಿದೆಯೋ; **ಪಾಪಮ್**—ಪಾಪವು; **ಜನಾನಾಮ್**—ಜನರ; **ಪುಣ್ಯ**—ಪುಣ್ಯದ; **ಕರ್ಮಣಾಮ್**—ಪೂರ್ವಕರ್ಮಗಳುಳ್ಳ; **ತೇ**—ಅವರು; **ದ್ವನ್ದ್ವ**—ದ್ವಂದ್ವದ; **ಮೋಹ**—ಮೋಹದಿಂದ; **ನಿರ್ಮುಕ್ತಾಃ**—ಮುಕ್ತರಾಗಿ; **ಭಜನ್ತೇ**—ಭಕ್ತಿಸೇವಾ ನಿರತರಾಗುವರು; **ಮಾಮ್**—ನನ್ನಲ್ಲಿ; **ದೃಢ ವ್ರತಾಃ**—ದೃಢ ನಿರ್ಧಾರದೊಂದಿಗೆ.

## ಅನುವಾದ

**ಯಾರು ತಮ್ಮ ಹಿಂದಿನ ಜನ್ಮಗಳಲ್ಲಿ ಮತ್ತು ಈ ಜನ್ಮದಲ್ಲಿ ಪುಣ್ಯ ಕರ್ಮಗಳನ್ನು ಮಾಡಿದ್ದಾರೆಯೋ ಮತ್ತು ಯಾರ ಪಾಪಕಾರ್ಯಗಳು ಸಂಪೂರ್ಣವಾಗಿ ನಿರ್ಮೂಲವಾಗಿವೆಯೋ ಅವರು ಭ್ರಾಂತಿಯ ದ್ವಂದ್ವಗಳಿಂದ ಮುಕ್ತರಾಗುತ್ತಾರೆ. ಅವರು ದೃಢ ಮನಸ್ಸಿನಿಂದ ನನ್ನ ಸೇವೆಯಲ್ಲಿ ನಿರತರಾಗುತ್ತಾರೆ.**

## ಭಾವಾರ್ಥ

ಈ ಶ್ಲೋಕದಲ್ಲಿ ದಿವ್ಯ ಸ್ಥಿತಿಗೆ ಏರಲು ಅರ್ಹರಾದವರು ಯಾರು ಎಂದು ಹೇಳಿದೆ. ಪಾಪಿಗಳಾದವರು, ನಾಸ್ತಿಕರು, ಮೂರ್ಖರು ಮತ್ತು ಮೋಸಗಾರರಿಗೆ ಆಸೆ ಮತ್ತು ದ್ವೇಷಗಳ ದ್ವಂದ್ವವನ್ನು ದಾಟುವುದು ಬಹಳ ಕಷ್ಟ. ಯಾರು ಧರ್ಮದ ನಿಯಂತ್ರಕ ತತ್ವಗಳನ್ನು ಅನುಷ್ಠಾನಕ್ಕೆ ತಂದಿದ್ದಾರೋ, ದೈವಭಕ್ತರಾಗಿ ನಡೆದುಕೊಂಡಿದ್ದಾರೋ ಮತ್ತು ಪಾಪಕರ ಪ್ರತಿಕ್ರಿಯೆಗಳನ್ನು ಜಯಿಸಿದ್ದಾರೋ ಅವರು ಮಾತ್ರ ಭಕ್ತಿಸೇವೆಯನ್ನು ಸ್ವೀಕರಿಸಬಲ್ಲರು ಮತ್ತು ಕ್ರಮ ಕ್ರಮವಾಗಿ ದೇವೋತ್ತಮ ಪರಮ ಪುರುಷನ ಪರಿಶುದ್ಧ ಜ್ಞಾನದ ಮಟ್ಟಕ್ಕೆ ಏರಬಲ್ಲರು. ಅನಂತರ ಕ್ರಮೇಣ ಅವರು ಸಮಾಧಿಸ್ಥಿತಿಯಲ್ಲಿ ದೇವೋತ್ತಮ ಪರಮ ಪುರುಷನನ್ನು ಧ್ಯಾನಿಸಬಲ್ಲರು. ಇದು ಆಧ್ಯಾತ್ಮಿಕ ನೆಲೆಯಲ್ಲಿ ನೆಲೆಸುವ ಪ್ರಕ್ರಿಯೆ. ಪರಿಶುದ್ಧ ಭಕ್ತರ ಸಹವಾಸದಲ್ಲಿ ಕೃಷ್ಣಪ್ರಜ್ಞೆಯಲ್ಲಿ ಈ ಉತ್ಕರ್ಷ ಸಾಧ್ಯ. ಏಕೆಂದರೆ ಶ್ರೇಷ್ಠ ಭಕ್ತರ ಸಹವಾಸದಲ್ಲಿ ಮನುಷ್ಯನು ಮಾಯೆಯಿಂದ ಬಿಡುಗಡೆ ಹೊಂದಬಲ್ಲ.

ಮನುಷ್ಯನಿಗೆ ವಾಸ್ತವವಾಗಿ ಮುಕ್ತಿ ಬೇಕೆಂದರೆ ಆತನು ಭಕ್ತರ ಸೇವೆಯನ್ನು ಮಾಡಬೇಕು. **(ಮಹತ್ಸೇವಾಂ ದ್ವಾರಮ್ ಆಹುರ್ ವಿಮುಕ್ತೇಃ)** ಆದರೆ ಪ್ರಾಪಂಚಿಕ ಮನೋಧರ್ಮದ ಜನರೊಂದಿಗೆ ಸೇರುವವನು ಅಸ್ತಿತ್ವದ ಅತ್ಯಂತ ಕತ್ತಲೆಗೆ ಹೋಗುವ ದಾರಿಯಲ್ಲಿದ್ದಾನೆ **(ತಮೋದ್ವಾರಂ ಯೋಷಿತಾಂ ಸಙ್ಗಿಸಙ್ಗಮ್)** ಎಂದು ಶ್ರೀಮದ್ಭಾಗವತದಲ್ಲಿ (5.5.2) ಹೇಳಿದೆ. ಭಗವಂತನ ಭಕ್ತರೆಲ್ಲ ಬದ್ಧ ಆತ್ಮಗಳನ್ನು ಅವರ ಭ್ರಾಂತಿಯಿಂದ ಬಿಡಿಸಲೆಂದೇ ಈ ಭೂಮಿಯಲ್ಲಿ ಸಂಚಾರಮಾಡುತ್ತಾರೆ. ಪರಮ ಪ್ರಭುವಿನ ಅಧೀನರಾಗಿರುವ ತಮ್ಮ ಸಹಜ ಸ್ವರೂಪವನ್ನು ಮರೆಯುವುದು ಭಗವಂತನ ನಿಯಮದ ಮಹಾ ಉಲ್ಲಂಘನೆ ಎಂದು ನಿರಾಕಾರವಾದಿಗಳಿಗೆ ತಿಳಿಯದು. ತನ್ನ ಸಹಜ ಸ್ವರೂಪದಲ್ಲಿ ಮತ್ತೆ ಸ್ಥಾಪಿತನಾಗದೆ ಯಾವ ಮನುಷ್ಯನಿಗೂ ಪರಮ

ಪುರುಷನನ್ನು ಅರ್ಥಮಾಡಿಕೊಳ್ಳುವುದಾಗಲೀ ಅಥವಾ ದೃಢಸಂಕಲ್ಪದಿಂದ ಅವನ ದಿವ್ಯಪ್ರೇಮಪೂರ್ವಕ ಸೇವೆಯಲ್ಲಿ ತೊಡಗುವುದಾಗಲೀ ಸಾಧ್ಯವಿಲ್ಲ.

## ಶ್ಲೋಕ - 29

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ |**
**ತೇ ಬ್ರಹ್ಮ ತದ್ ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ||೨೯||**

**ಜರಾ**—ಮುಪ್ಪು; **ಮರಣ**—ಸಾವುಗಳಿಂದ; **ಮೋಕ್ಷಾಯ**—ಬಿಡುಗಡೆಗಾಗಿ; **ಮಾಮ್**—ನನ್ನನ್ನು; **ಆಶ್ರಿತ್ಯ**—ಆಶ್ರಯಿಸಿ; **ಯತನ್ತಿ**—ಪ್ರಯತ್ನಿಸುತ್ತಾರೋ; **ಯೇ**—ಯಾರು; **ತೇ**—ಅಂತಹ ವ್ಯಕ್ತಿಗಳು; **ಬ್ರಹ್ಮ**—ಬ್ರಹ್ಮನ್; **ತತ್**—ವಾಸ್ತವಿಕವಾಗಿ ಅದನ್ನು; **ವಿದುಃ**—ತಿಳಿಯುತ್ತಾರೆ; **ಕೃತ್ಸ್ನಮ್**—ಪ್ರತಿಯೊಂದನ್ನು; **ಅಧ್ಯಾತ್ಮಮ್**—ದಿವ್ಯವಾದುದನ್ನು; **ಕರ್ಮ**—ಕಾರ್ಯಗಳನ್ನು; **ಚ**—ಕೂಡ; **ಅಖಿಲಮ್**—ಸಂಪೂರ್ಣವಾಗಿ.

## ಅನುವಾದ

**ಮುಪ್ಪು, ಸಾವುಗಳಿಂದ ಬಿಡುಗಡೆ ಹೊಂದುವುದಕ್ಕಾಗಿ ಶ್ರಮಿಸುತ್ತಿರುವ ಬುದ್ಧಿವಂತರು ಭಕ್ತಿಸೇವೆಯನ್ನು ಮಾಡುತ್ತ ನನ್ನಲ್ಲಿ ಆಶ್ರಯವನ್ನು ಪಡೆಯುವರು. ನಿಜವಾಗಿ ಅವರು ಬ್ರಹ್ಮನ್, ಏಕೆಂದರೆ ಅವರು ದಿವ್ಯಕರ್ಮಗಳ ವಿಷಯದಲ್ಲಿ ಪ್ರತಿಯೊಂದು ಸಂಗತಿಯನ್ನೂ ಸಮಗ್ರವಾಗಿ ಬಲ್ಲರು.**

## ಭಾವಾರ್ಥ

ಹುಟ್ಟು, ಸಾವು, ಮುಪ್ಪು ಮತ್ತು ರೋಗಗಳು ಈ ಜಡ ದೇಹವನ್ನು ಕಾಡುತ್ತವೆ. ಆಧ್ಯಾತ್ಮಿಕ ದೇಹವನ್ನಲ್ಲ. ಆಧ್ಯಾತ್ಮಿಕ ಶರೀರಕ್ಕೆ ಹುಟ್ಟು, ಸಾವು, ಮುಪ್ಪು, ರೋಗ ಯಾವುದೂ ಇಲ್ಲ. ಆದುದರಿಂದ ಆಧ್ಯಾತ್ಮಿಕ ಶರೀರವನ್ನು ಪಡೆದು ದೇವೋತ್ತಮ ಪರಮ ಪುರುಷನ ಜೊತೆಯವರಲ್ಲಿ ಒಬ್ಬನಾಗಿ ನಿತ್ಯವಾದ ಭಕ್ತಿಸೇವೆಯಲ್ಲಿ ತೊಡಗುವವನು ನಿಜವಾಗಿ ಮುಕ್ತನಾದವನು. **ಅಹಂ ಬ್ರಹ್ಮಾಸ್ಮಿ.** ನಾನು ಚೇತನಾತ್ಮನು. ತಾನು ಬ್ರಹ್ಮನ್ ಅಥವಾ ಚೇತನಾತ್ಮ ಎನ್ನುವುದನ್ನು ಮನುಷ್ಯನು ಅರ್ಥಮಾಡಿಕೊಳ್ಳಬೇಕೆಂದು ಹೇಳಿದೆ. ಈ ಶ್ಲೋಕದಲ್ಲಿ ವರ್ಣಿಸಿರುವಂತೆ, ಬದುಕಿನ ಈ ಬ್ರಹ್ಮನ್ ಪರಿಕಲ್ಪನೆಯು ಭಕ್ತಿಸೇವೆಯಲ್ಲಿಯೂ ಇದೆ. ಪರಿಶುದ್ಧ ಭಕ್ತರು ಆಧ್ಯಾತ್ಮಿಕವಾಗಿ ಬ್ರಹ್ಮನ್ ನೆಲೆಯಲ್ಲಿದ್ದಾರೆ. ಅವರಿಗೆ ಆಧ್ಯಾತ್ಮಿಕ ಕರ್ಮಗಳ ವಿಷಯವಾಗಿ ಎಲ್ಲವೂ ತಿಳಿದಿವೆ.

ಭಗವಂತನ ದಿವ್ಯ ಸೇವೆಯಲ್ಲಿ ನಿರತರಾಗುವ ನಾಲ್ಕು ಬಗೆಯ ಅಶುದ್ಧ ಭಕ್ತರು ತಮ್ಮ ತಮ್ಮ ಗುರಿಗಳನ್ನು ತಲಪುತ್ತಾರೆ ಮತ್ತು ಪರಮ ಪ್ರಭುವಿನ ಕೃಪೆಯಿಂದ ಅವರು ಸಂಪೂರ್ಣ ಕೃಷ್ಣಪ್ರಜ್ಞೆಯನ್ನು ಪಡೆದಾಗ, ಪರಮ ಪ್ರಭುವಿನೊಡನೆ ಆಧ್ಯಾತ್ಮಿಕ ಸಹವಾಸವನ್ನು ಸವಿಯುತ್ತಾರೆ.

ಆದರೆ ದೇವತೆಗಳನ್ನು ಪೂಜೆ ಮಾಡುವವರು ಪರಮ ಪ್ರಭುವನ್ನು ಅವನ ಲೋಕದಲ್ಲಿ ತಲಪುವುದೇ ಇಲ್ಲ. ಬ್ರಹ್ಮನ್ ಸಾಕ್ಷಾತ್ಕಾರವಾಗಿದ್ದರೂ ಅಷ್ಟು ಬುದ್ಧಿವಂತರಲ್ಲದವರು ಸಹ, ಗೋಲೋಕ, ವೃಂದಾವನ ಎನ್ನುವ ಹೆಸರಿನ ಕೃಷ್ಣನ ಪರಮ ಲೋಕವನ್ನು ಸೇರಲಾರರು. ಕೃಷ್ಣಪ್ರಜ್ಞೆಯಲ್ಲಿ **(ಮಾಮ್ ಆಶ್ರಿತ್ಯ)** ಕರ್ಮಮಾಡುವವರು ಮಾತ್ರ ಬ್ರಹ್ಮನ್ ಎಂದು ಕರೆಸಿಕೊಳ್ಳುವುದಕ್ಕೆ ಅರ್ಹರು, ಏಕೆಂದರೆ ಅವರು ಕೃಷ್ಣ ಲೋಕವನ್ನು ಸೇರಲು ವಾಸ್ತವವಾಗಿ ಪ್ರಯತ್ನಿಸುತ್ತಿದ್ದಾರೆ. ಇಂತಹವರಿಗೆ ಕೃಷ್ಣನ ವಿಷಯವಾಗಿ ಯಾವ ಸಂಶಯವೂ ಇಲ್ಲ. ಆದುದರಿಂದ ಅವರು ವಾಸ್ತವವಾಗಿ ಬ್ರಹ್ಮನ್.

ಭಗವಂತನ ರೂಪ ಅಥವಾ **ಅರ್ಚಾ**ವನ್ನು ಪೂಜಿಸುವುದರಲ್ಲಿ ನಿರತರಾದವರಿಗೆ ಅಥವಾ ಐಹಿಕ ಬಂಧನದಿಂದ ಮುಕ್ತಿ ಪಡೆಯಲು ಮಾತ್ರವೇ ಭಗವಂತನ ಧ್ಯಾನದಲ್ಲಿ ನಿರತರಾದವರಿಗೆ ಸಹ, ಭಗವಂತನ ಕೃಪೆಯಿಂದ ಬ್ರಹ್ಮನ್ ಅಥವಾ **ಅಧಿಭೂತ** ಮೊದಲಾದವುಗಳ ಭಾವಾರ್ಥವು ತಿಳಿಯುತ್ತದೆ.

## ಶ್ಲೋಕ - 30

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ |**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ||೩೦||**

**ಸ ಅಧಿಭೂತ**—ಮತ್ತು ಭೌತಿಕ ಅಭಿವ್ಯಕ್ತಿಯ ಪ್ರಶಾಸನ ತತ್ವ; **ಅಧಿದೈವಮ್**—ಸಕಲ ದೇವತೆಗಳನ್ನು ಆಳುವವನು; **ಮಾಮ್**—ನನ್ನನ್ನು; **ಸ ಅಧಿಯಜ್ಞಮ್**—ಸಕಲ ಯಜ್ಞಗಳ ಆಧಿಪತಿ ಎಂದು; **ಚ**—ಕೂಡ; **ಯೇ**—ಯಾರು; **ವಿದುಃ**—ತಿಳಿಯುತ್ತಾರೋ; **ಪ್ರಯಾಣ**—ಮರಣದ; **ಕಾಲೇ**—ಸಮಯದಲ್ಲಿ; **ಅಪಿ**—ಕೂಡ; **ಚ**—ಮತ್ತು; **ಮಾಮ್**—ನನ್ನನ್ನು; **ತೇ**—ಅವರು; **ವಿದುಃ**—ತಿಳಿಯುತ್ತಾರೆ; **ಯುಕ್ತ ಚೇತಸಃ**—ನನ್ನಲ್ಲಿ ಮನಸ್ಸನ್ನು ತೊಡಗಿಸಿದವರಾಗಿ.

## ಅನುವಾದ

**ನನ್ನ ಸಂಪೂರ್ಣ ಪ್ರಜ್ಞೆ ಇರುವವರು, ಪರಮ ಪ್ರಭುವಾದ ನಾನೇ ಎಲ್ಲ ಐಹಿಕ ಅಭಿವ್ಯಕ್ತಿಯ, ದೇವತೆಗಳ, ಯಜ್ಞ ರೀತಿಗಳ, ನಿಯಂತ್ರಕ ತತ್ವ ಎಂದು ಬಲ್ಲವರು, ದೇವೋತ್ತಮ ಪರಮ ಪುರುಷನಾದ ನನ್ನನ್ನು ಮರಣಕಾಲದಲ್ಲಿಯೂ ಅರ್ಥಮಾಡಿಕೊಳ್ಳಬಲ್ಲರು ಮತ್ತು ಅರಿಯಬಲ್ಲರು.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಕರ್ಮವನ್ನು ಮಾಡುವವರು ದೇವೋತ್ತಮ ಪರಮ ಪುರುಷನ ಸಂಪೂರ್ಣ ಅರಿವಿನ ಮಾರ್ಗವನ್ನು ಯಾವಾಗಲೂ ಬಿಡುವುದಿಲ್ಲ. ಕೃಷ್ಣಪ್ರಜ್ಞೆಯ ದಿವ್ಯ ಸಹಯೋಗದಲ್ಲಿರುವ ಮನುಷ್ಯನು, ಪರಮ ಪ್ರಭುವು ಹೇಗೆ ಐಹಿಕ ಅಭಿವ್ಯಕ್ತಿಯನ್ನು ಮತ್ತು ದೇವತೆಗಳನ್ನು ಆಳುವ ತತ್ವ ಎನ್ನುವುದನ್ನು ತಿಳಿಯಬಲ್ಲ. ಇಂತಹ ದಿವ್ಯ ಸಹಯೋಗದಿಂದ ಮನುಷ್ಯನು ಕ್ರಮೇಣ ದೇವೋತ್ತಮ ಪರಮ ಪುರುಷನ ವಿಷಯವನ್ನು ಮನಗಾಣುತ್ತಾನೆ. ಮರಣಕಾಲದಲ್ಲಿ ಕೃಷ್ಣಪ್ರಜ್ಞೆ ಇರುವ ಇಂತಹ ಮನುಷ್ಯನು ಕೃಷ್ಣನನ್ನು ಮರೆಯಲು ಸಾಧ್ಯವೇ ಇಲ್ಲ. ಸಹಜವಾಗಿ ಆತನು

ಪರಮ ಪ್ರಭುವಿನ ಲೋಕವಾದ ಗೋಲೋಕ ವೃಂದಾವನಕ್ಕೆ ಏರಿಸಲ್ಪಡುತ್ತಾನೆ.

ಮನುಷ್ಯನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯನ್ನು ಪಡೆಯಲು ಹೇಗೆ ಸಾಧ್ಯ ಎನ್ನುವುದನ್ನು ಈ ಏಳನೆಯ ಅಧ್ಯಾಯವು ವಿಶೇಷವಾಗಿ ವಿವರಿಸುತ್ತದೆ. ಕೃಷ್ಣಪ್ರಜ್ಞೆಯ ಪ್ರಾರಂಭವೆಂದರೆ ಕೃಷ್ಣಪ್ರಜ್ಞೆ ಇರುವವರ ಸಹವಾಸ. ಇಂತಹ ಸಹವಾಸವು ಆಧ್ಯಾತ್ಮಿಕವಾದದ್ದು ಮತ್ತು ಮನುಷ್ಯನಿಗೆ ಪರಮ ಪ್ರಭುವಿನೊಡನೆ ನೇರ ಸಂಪರ್ಕವನ್ನು ಕಲ್ಪಿಸುತ್ತದೆ. ಅವನ ಪ್ರಜ್ಞೆಯಿಂದ ಮನುಷ್ಯನಿಗೆ ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದೇ ಕಾಲದಲ್ಲಿ ಮನುಷ್ಯನಿಗೆ ಜೀವಿಯ ಸಹಜ ಸ್ವರೂಪವೂ ಮತ್ತು ಜೀವಿಯು ಕೃಷ್ಣನನ್ನು ಹೇಗೆ ಮರೆತು ಬಿಡುತ್ತಾನೆ ಮತ್ತು ಐಹಿಕ ಚಟುವಟಿಕೆಗಳಲ್ಲಿ ತನ್ಮಯವಾಗಿಬಿಡುತ್ತಾನೆ ಎನ್ನುವುದೂ ನಿಜವಾಗಿ ಅರ್ಥವಾಗುತ್ತದೆ. ಸತ್ಸಹವಾಸದಲ್ಲಿ ಕ್ರಮೇಣ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡ ಜೀವಿಯು, ಕೃಷ್ಣನನ್ನು ಮರೆತದ್ದರಿಂದ ತಾನು ಭೌತಿಕ ಪ್ರಕೃತಿಯ ನಿಯಮಗಳಿಂದ ಬಂಧಿತನಾದೆ ಎನ್ನುವುದನ್ನು ಅರ್ಥಮಾಡಿಕೊಳ್ಳುತ್ತಾನೆ. ಈ ಮನುಷ್ಯರೂಪದ ಜನ್ಮವು ಕೃಷ್ಣಪ್ರಜ್ಞೆಯನ್ನು ಮತ್ತೆ ಪಡೆಯಲು ಲಭಿಸಿದ ಒಂದು ಅವಕಾಶ. ಪರಮ ಪ್ರಭುವಿನ ಅವ್ಯಾಜ ಕರುಣೆಯನ್ನು ಪಡೆದುಕೊಳ್ಳಲು ಇದನ್ನು ಸಂಪೂರ್ಣವಾಗಿ ಬಳಸಿಕೊಳ್ಳಬೇಕು ಎಂದು ಜೀವಿಯು ಅರ್ಥಮಾಡಿಕೊಳ್ಳಬಲ್ಲ.

ಕಷ್ಟದಲ್ಲಿರುವ ಮನುಷ್ಯ, ಕುತೂಹಲಿಯಾದ ಮನುಷ್ಯ, ಪ್ರಾಪಂಚಿಕ ಅಗತ್ಯಗಳನ್ನು ಹೊಂದಿಲ್ಲದ ಮನುಷ್ಯ, ಬ್ರಹ್ಮನ್ ಜ್ಞಾನ, ಪರಮಾತ್ಮನ ಜ್ಞಾನ, ಹುಟ್ಟು, ಸಾವು, ರೋಗಗಳಿಂದ ಬಿಡುಗಡೆ ಮತ್ತು ಪರಮ ಪ್ರಭುವಿನ ಪೂಜೆ ಈ ಎಲ್ಲ ವಿಷಯಗಳನ್ನು ಈ ಅಧ್ಯಾಯದಲ್ಲಿ ಚರ್ಚೆಮಾಡಿದೆ. ಆದರೂ ಕೃಷ್ಣಪ್ರಜ್ಞೆಯಲ್ಲಿ ವಾಸ್ತವವಾಗಿ ಮೇಲೇರಿದವನಿಗೆ ಈ ಭಿನ್ನಭಿನ್ನ ಪ್ರಕ್ರಿಯೆಗಳಲ್ಲಿ ಆಸಕ್ತಿ ಇರುವುದಿಲ್ಲ. ಆತನು ನೇರವಾಗಿ ಕೃಷ್ಣಪ್ರಜ್ಞೆಯ ಕರ್ಮಗಳಲ್ಲಿ ತೊಡಗುತ್ತಾನೆ. ಹೀಗೆಮಾಡಿ ಶ್ರೀಕೃಷ್ಣನ ನಿತ್ಯಸೇವಕನೆನ್ನುವ ತನ್ನ ಸಹಜ ಸ್ವರೂಪವನ್ನು ವಾಸ್ತವವಾಗಿ ಪಡೆಯುತ್ತಾನೆ. ಇಂತಹ ಸ್ಥಿತಿಯಲ್ಲಿ ಆತನು ಪರಿಶುದ್ಧ ಭಕ್ತಿಸೇವೆಯಲ್ಲಿ ಪರಮ ಪ್ರಭುವಿನ ಶ್ರವಣ ಮತ್ತು ಕೀರ್ತನೆಯಲ್ಲಿ ಆನಂದ ಪಡುತ್ತಾನೆ. ಹೀಗೆ ಮಾಡುವುದರಿಂದ ತನ್ನ ಎಲ್ಲ ಇಷ್ಟಾರ್ಥಗಳು ಕೈಗೂಡುತ್ತವೆ ಎಂದು ಆತನಿಗೆ ದೃಢ ವಿಶ್ವಾಸ. ಈ ದೃಢಶ್ರದ್ಧೆಗೆ **ದೃಢವ್ರತ** ಎಂದು ಹೆಸರು; ಇದು ಭಕ್ತಿಯೋಗದ ಪ್ರಾರಂಭ. ಇದೇ ಎಲ್ಲ ಶಾಸ್ತ್ರಗಳ ತೀರ್ಮಾನ. ಭಗವದ್ಗೀತೆಯ ಈ ಏಳನೆಯ ಅಧ್ಯಾಯವು ಈ ದೃಢ ನಂಬಿಕೆಯ ಸಾರ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಪರಾತ್ಪರ ಜ್ಞಾನ" ಎಂಬ ಏಳನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 8

# ಭಗವತ್‌ಪ್ರಾಪ್ತಿ

## ಶ್ಲೋಕ - 1

**ಅರ್ಜುನ ಉವಾಚ**

**ಕಿಂ ತದ್ ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥೧॥**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಕಿಮ್**—ಯಾವುದು; **ತತ್**—ಅದು; **ಬ್ರಹ್ಮ**—ಬ್ರಹ್ಮ; **ಕಿಮ್**—ಯಾವುದು; **ಅಧ್ಯಾತ್ಮಮ್**—ಆತ್ಮವು; **ಕಿಮ್**—ಯಾವುದು; **ಕರ್ಮ**—ಕಾಮ್ಯ ಕರ್ಮಗಳು; **ಪುರುಷ ಉತ್ತಮ**—ಪರಮ ಪುರುಷನೇ; **ಅಧಿಭೂತಮ್**—ಭೌತಿಕ ಅಭಿವ್ಯಕ್ತಿಯು; **ಚ**—ಮತ್ತು; **ಕಿಮ್**—ಯಾವುದು; **ಪ್ರೋಕ್ತಮ್**—ಎಂದು ಕರೆಯಲ್ಪಡುತ್ತದೆ; **ಅಧಿದೈವಮ್**—ದೇವತೆಗಳು; **ಕಿಮ್**—ಯಾವುದು; **ಉಚ್ಯತೇ**—ಎಂದು ಕರೆಯಲ್ಪಡುತ್ತದೆ.

## ಅನುವಾದ

**ಅರ್ಜುನನು ಹೀಗೆ ಪ್ರಶ್ನಿಸಿದನು — ಪ್ರಭುವೆ, ಪರಮ ಪುರುಷನೆ, ಯಾವುದು ಬ್ರಹ್ಮನ್? ಯಾವುದು ಆತ್ಮ? ಕರ್ಮ ಯಾವುದು? ಈ ಐಹಿಕ ಅಭಿವ್ಯಕ್ತಿ ಯಾವುದು? ದೇವತೆಗಳು ಯಾರು? ದಯೆಯಿಟ್ಟು ಇದನ್ನು ನನಗೆ ವಿವರಿಸು.**

## ಭಾವಾರ್ಥ

ಈ ಅಧ್ಯಾಯದಲ್ಲಿ ಶ್ರೀಕೃಷ್ಣನು, ಯಾವುದು ಬ್ರಹ್ಮನ್ ಎನ್ನುವುದರಿಂದ ಪ್ರಾರಂಭಿಸಿ ಅರ್ಜುನನ ವಿವಿಧ ಪ್ರಶ್ನೆಗಳಿಗೆ ಉತ್ತರ ಹೇಳುತ್ತಾನೆ. ಪ್ರಭುವು ಕಾಮ್ಯಕರ್ಮಗಳನ್ನು ಯೋಗತತ್ವಗಳನ್ನು ಮತ್ತು ಪರಿಶುದ್ಧ ಭಕ್ತಿಸೇವೆಯನ್ನು ವಿವರಿಸುತ್ತಾನೆ. ಪರಾತ್ಪರ ಸತ್ಯಕ್ಕೆ ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಎಂದೂ ಹೆಸರು ಎಂಬುದಾಗಿ ಶ್ರೀಮದ್ಭಾಗವತವು ವಿವರಿಸುತ್ತದೆ. ಅಲ್ಲದೆ ಜೀವಿಗೂ, ವ್ಯಕ್ತಿಗತ ಆತ್ಮಕ್ಕೂ ಬ್ರಹ್ಮನ್ ಎಂದು ಹೆಸರು. ಆತ್ಮವು ದೇಹ, ಆತ್ಮ ಮತ್ತು ಮನಸ್ಸುಗಳನ್ನು ಸೂಚಿಸುತ್ತದೆ; ಅರ್ಜುನನು ಆತ್ಮವನ್ನು ಕುರಿತೂ ಪ್ರಶ್ನಿಸುತ್ತಾನೆ. ವೈದಿಕ ನಿಘಂಟಿನ ಪ್ರಕಾರ ಆತ್ಮ ಶಬ್ದವು ಮನಸ್ಸು, ಆತ್ಮ,ದೇಹ ಮತ್ತು ಇಂದ್ರಿಯಗಳನ್ನು ಸೂಚಿಸುತ್ತದೆ.

ಅರ್ಜುನನು ಪರಮ ಪ್ರಭುವನ್ನು ಪುರುಷೋತ್ತಮ ಎಂದು ಸಂಬೋಧಿಸಿದ್ದಾನೆ. ಇದರ ಅರ್ಥ ಆತನು ಪ್ರಶ್ನೆಗಳನ್ನು ಒಬ್ಬ ಸ್ನೇಹಿತನಿಗೆ ಮಾತ್ರ ಕೇಳುತ್ತಿರಲಿಲ್ಲ; ಪರಮ ಪುರುಷನು ಖಚಿತವಾದ ಉತ್ತರಗಳನ್ನು ಕೊಡಬಲ್ಲ ಪರಮಾಧಿಕಾರಿ ಎಂದು ತಿಳಿದು ಅವನನ್ನು ಪ್ರಶ್ನಿಸುತ್ತಿದ್ದ.

## ಶ್ಲೋಕ - 2

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ |**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ||೨||**

**ಅಧಿಯಜ್ಞಃ**—ಯಜ್ಞಪತಿಯು; **ಕಥಮ್**—ಹೇಗೆ; **ಕಃ**—ಯಾರು; **ಅತ್ರ**—ಇಲ್ಲಿ; **ದೇಹೇ**—ಶರೀರದಲ್ಲಿ; **ಅಸ್ಮಿನ್**—ಈ; **ಮಧುಸೂದನ**—ಮಧುಸೂದನನೇ; **ಪ್ರಯಾಣ ಕಾಲೇ**—ಮರಣಕಾಲದಲ್ಲಿ; **ಚ**—ಮತ್ತು; **ಕಥಮ್**—ಹೇಗೆ; **ಜ್ಞೇಯಃ ಅಸಿ**—ನೀನು ತಿಳಿಯಲ್ಪಡುತ್ತೀಯೆ; **ನಿಯತ ಆತ್ಮಭಿಃ**—ಆತ್ಮ ಸಂಯಮಿಗಳಿಂದ.

## ಅನುವಾದ

**ಮಧುಸೂದನನೆ, ಯಜ್ಞದ ಪ್ರಭುವು ಯಾರು? ಅವನು ದೇಹದಲ್ಲಿ ವಾಸಿಸುವುದು ಹೇಗೆ? ಭಕ್ತಿಸೇವೆಯಲ್ಲಿ ತೊಡಗಿರುವವರು ಮರಣಕಾಲದಲ್ಲಿ ನಿನ್ನನ್ನು ತಿಳಿಯುವುದು ಹೇಗೆ?**

## ಭಾವಾರ್ಥ

'ಯಜ್ಞದ ಪ್ರಭು' ಎಂದರೆ ಇಂದ್ರನಾದರೂ ಆಗಬಹುದು, ವಿಷ್ಣುವಾದರೂ ಆಗಬಹುದು. ಬ್ರಹ್ಮನೂ ಶಿವನೂ ಸೇರಿದಂತೆ ಪ್ರಧಾನ ದೇವತೆಗಳ ಮುಖ್ಯಸ್ಥ ವಿಷ್ಣು. ಇಂದ್ರನು ಆಡಳಿತವನ್ನು ನಡೆಸುವ ದೇವತೆಗಳ ಮುಖ್ಯಸ್ಥ. ಯಜ್ಞ ಮಾಡುವವರು ಇಬ್ಬರನ್ನೂ ಪೂಜಿಸುತ್ತಾರೆ. ಇಲ್ಲಿ ಅರ್ಜುನನು ವಾಸ್ತವವಾಗಿ ಯಜ್ಞದ ಪ್ರಭುವು ಯಾರು ಮತ್ತು ಜೀವಿಯ ದೇಹದಲ್ಲಿ ಭಗವಂತನು ಹೇಗೆ ವಾಸಿಸುತ್ತಾನೆ ಎಂದು ಕೇಳುತ್ತಾನೆ.

ಅರ್ಜುನನು ಭಗವಂತನನ್ನು ಮಧುಸೂದನ ಎಂದು ಸಂಬೋಧಿಸುತ್ತಾನೆ. ಏಕೆಂದರೆ ಒಮ್ಮೆ ಕೃಷ್ಣನು ಮಧು ಎಂಬ ರಾಕ್ಷಸನನ್ನು ಕೊಂದ. ವಾಸ್ತವವಾಗಿ, ಸಂದೇಹಗಳೇ ಆದ ಈ ಪ್ರಶ್ನೆಗಳು ಅರ್ಜುನನ ಮನಸ್ಸಿನಲ್ಲಿ ಉದ್ಭವಿಸಲೇಬೇಕಾಗಿರಲಿಲ್ಲ. ಏಕೆಂದರೆ ಅರ್ಜುನನು ಕೃಷ್ಣಪ್ರಜ್ಞೆ ಇರುವ ಭಕ್ತ. ಈ ಸಂದೇಹಗಳು ರಾಕ್ಷಸರಂತೆ. ಕೃಷ್ಣನು ರಾಕ್ಷಸರನ್ನು ಕೊಲ್ಲುವುದರಲ್ಲಿ ನಿಪುಣನಾದದ್ದರಿಂದ ಅರ್ಜುನನು ಇಲ್ಲಿ ಕೃಷ್ಣನನ್ನು 'ಮಧುಸೂದನ' ಎಂದು ಸಂಬೋಧಿಸುತ್ತಾನೆ. ಅರ್ಜುನನ ಮನಸ್ಸಿನಲ್ಲಿ ಕಾಣಿಸಿಕೊಳ್ಳುವ ರಾಕ್ಷಸೀ ಸಂದೇಹಗಳನ್ನು ಕೃಷ್ಣನು ಸಂಹರಿಸಲಿ ಎಂಬುದು ಇದಕ್ಕೆ ಕಾರಣ.

ಈ ಶ್ಲೋಕದಲ್ಲಿ **ಪ್ರಯಾಣ ಕಾಲೇ** ಎನ್ನುವ ಮಾತು ಬಹು ಮಹತ್ವದ್ದು. ಏಕೆಂದರೆ ಬದುಕಿನಲ್ಲಿ ನಾವು ಮಾಡಿದುದೆಲ್ಲ ಸಾವಿನ ಸಮಯದಲ್ಲಿ ಪರೀಕ್ಷೆಗೆ ಒಳಗಾಗುತ್ತದೆ. ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತರಾದವರು ಯಾರು ಎಂದು ತಿಳಿಯಲು ಅರ್ಜುನನು ಬಹು ಕಾತರನಾಗಿದ್ದಾನೆ. ಆ ಕಡೆಯ ಕ್ಷಣದಲ್ಲಿ ಅವರ ಸ್ಥಿತಿ ಹೇಗಿರಬೇಕು? ಸಾವಿನ ಕ್ಷಣದಲ್ಲಿ ದೇಹದ ಕ್ರಿಯೆಗಳೆಲ್ಲ ಅಸ್ತವ್ಯಸ್ತವಾಗುತ್ತವೆ. ಮನಸ್ಸು ಯೋಗ್ಯ ಸ್ಥಿತಿಯಲ್ಲಿ ಇರುವುದಿಲ್ಲ. ದೇಹದ ಈ ಸ್ಥಿತಿಯಿಂದ ಅಲ್ಲೋಲ ಕಲ್ಲೋಲವಾದ ಮನಸ್ಸಿಗೆ ಪರಮ ಪ್ರಭುವನ್ನು ಸ್ಮರಿಸುವುದು ಸಾಧ್ಯವಾಗದೆ ಹೋಗಬಹುದು. ಒಬ್ಬ ಮಹಾಭಕ್ತರಾದ ಮಹಾರಾಜ ಕುಲಶೇಖರರು ಹೀಗೆ ಪ್ರಾರ್ಥಿಸುತ್ತಾರೆ. "ನನ್ನ ಪ್ರೀತಿಯ ಪ್ರಭುವೇ, ಈಗ ನಾನು ಸಂಪೂರ್ಣವಾಗಿ ಆರೋಗ್ಯದಿಂದ

ಇದ್ದೇನೆ. ಈಗಲೇ ನಾನು ಸಾಯುವುದು ಉತ್ತಮ. ಏಕೆಂದರೆ ಆಗ ನನ್ನ ಮನಸ್ಸಿನ ಹಂಸವು ನಿನ್ನ ಪಾದಕಮಲದ ನಾಳವನ್ನು ಪ್ರವೇಶಿಸಲು ಪ್ರಯತ್ನಿಸಬಹುದು." ಈ ಉಪಮಾನವನ್ನು ಬಳಸಲು ಕಾರಣ, ನೀರಿನ ಪಕ್ಷಿಯಾದ ಹಂಸಕ್ಕೆ ಕಮಲದ ಹೂವನ್ನು ಅಗೆಯುವುದೆಂದರೆ ಸಂತಸ. ಕಮಲವನ್ನು ಪ್ರವೇಶಿಸುವುದು ಅದಕ್ಕೆ ಒಲವಿನ ಆಟ. ಮಹಾರಾಜ ಕುಲಶೇಖರರು ಭಗವಂತನಿಗೆ ಹೀಗೆ ಹೇಳುತ್ತಾರೆ. "ಈಗ ನನ್ನ ಮನಸ್ಸಿಗೆ ಕ್ಷೋಭೆ ಇಲ್ಲ. ನಾನು ಸಂಪೂರ್ಣವಾಗಿ ಆರೋಗ್ಯವಾಗಿದ್ದೇನೆ. ನಿನ್ನ ಚರಣ ಕಮಲವನ್ನು ಧ್ಯಾನಿಸುತ್ತ ನಾನು ಈಗಲೇ ಸತ್ತರೆ, ನನ್ನ ಭಕ್ತಿಪೂರ್ವಕ ಸೇವೆಯು ಪರಿಪೂರ್ಣವಾಗುವುದೆಂದು ನನಗೆ ನಿಶ್ಚಯ. ಆದರೆ ಸಹಜವಾಗಿ ಸಾವು ಬರುವ ತನಕ ನಾನು ಕಾಯಬೇಕಾದರೆ ಏನಾಗುವುದೋ ಕಾಣೆ. ಏಕೆಂದರೆ ಆ ಹೊತ್ತಿಗೆ ನನ್ನ ದೈಹಿಕ ಕ್ರಿಯೆಗಳೆಲ್ಲ ಅಸ್ತವ್ಯಸ್ತವಾಗುತ್ತವೆ. ನನ್ನ ಗಂಟಲಿನಲ್ಲಿ ಉಸಿರು ಸಿಕ್ಕಿಕೊಳ್ಳುತ್ತದೆ. ನಿನ್ನ ಹೆಸರನ್ನು ಉಚ್ಚರಿಸಲು ನನಗೆ ಸಾಧ್ಯವಾಗುವುದೇ ಎಂದು ತಿಳಿಯದು. ಕೂಡಲೇ ಸತ್ತುಹೋಗುವುದೇ ಉತ್ತಮ." ಇಂತಹ ಸಮಯದಲ್ಲಿ ಮನುಷ್ಯನು ತನ್ನ ಮನಸ್ಸನ್ನು ಕೃಷ್ಣನ ಚರಣಕಮಲಗಳಲ್ಲಿ ನಿಲ್ಲಿಸುವುದು ಹೇಗೆ ಎಂದು ಅರ್ಜುನನು ಪ್ರಶ್ನಿಸುತ್ತಾನೆ.

## ಶ್ಲೋಕ - 3

**ಶ್ರೀ ಭಗವಾನುವಾಚ**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋऽಧ್ಯಾತ್ಮಮುಚ್ಯತೇ |**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ||೩||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಅಕ್ಷರಮ್**—ಅವಿನಾಶಿಯಾದ; **ಬ್ರಹ್ಮ**—ಬ್ರಹ್ಮನ್; **ಪರಮಮ್**—ದಿವ್ಯನು; **ಸ್ವಭಾವಃ**—ನಿತ್ಯಸ್ವಭಾವವು; **ಅಧ್ಯಾತ್ಮಮ್**—ಆತ್ಮವು; **ಉಚ್ಯತೇ**—ಎಂದು ಕರೆಯಲಾಗಿದೆ; **ಭೂತ ಭಾವ ಉದ್ಭವ ಕರಃ**—ಜೀವಿಗಳ ಭೌತಿಕ ಶರೀರವನ್ನು ಉತ್ಪಾದಿಸುವ; **ವಿಸರ್ಗಃ**—ಸೃಷ್ಟಿಯು; **ಕರ್ಮ**—ಕಾಮ್ಯಕರ್ಮಗಳು; **ಸಂಜ್ಞಿತಃ**—ಎಂದು ಕರೆಯಲ್ಪಟ್ಟವು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು—ಅವಿನಾಶಿಯಾದ ದಿವ್ಯಜೀವಿಗೆ ಬ್ರಹ್ಮನ್ ಎಂದು ಹೆಸರು. ಅವನ ನಿತ್ಯಸ್ವಭಾವವನ್ನು ಅಧ್ಯಾತ್ಮ ಅಥವಾ ಆತ್ಮ ಎಂದು ಕರೆಯುತ್ತಾರೆ. ಜೀವಿಗಳ ಭೌತಿಕ ಶರೀರಗಳ ಬೆಳವಣಿಗೆಗೆ ಸಂಬಂಧಿಸಿದ ಕ್ರಿಯೆಗೆ ಕರ್ಮ ಎಂದು ಹೆಸರು.**

## ಭಾವಾರ್ಥ

ಬ್ರಹ್ಮನ್ ನಾಶವಾಗುವುದಿಲ್ಲ. ಅದು ನಿರಂತರವಾಗಿ ಅಸ್ತಿತ್ವದಲ್ಲಿರುತ್ತದೆ. ಅದರ ರಚನೆಯು ಯಾವ ಕಾಲದಲ್ಲಿಯೂ ಬದಲಾಗುವುದಿಲ್ಲ. ಆದರೆ ಬ್ರಹ್ಮನ್‍ನ ಆಚೆ ಪರಬ್ರಹ್ಮವಿದೆ. ಬ್ರಹ್ಮನ್ ಎನ್ನುವುದು ಜೀವಿಯನ್ನು ಸೂಚಿಸುತ್ತದೆ ಮತ್ತು ಪರಬ್ರಹ್ಮನ್ ಎನ್ನುವುದು ದೇವೋತ್ತಮ ಪರಮ ಪುರುಷನನ್ನು ಸೂಚಿಸುತ್ತದೆ. ಜೀವಿಯ ಸಹಜ ಸ್ವರೂಪವು ಅವನು ಐಹಿಕ ಜಗತ್ತಿನಲ್ಲಿ

ಸ್ವೀಕರಿಸುವ ಸ್ಥಾನಕ್ಕಿಂತ ಬೇರೆಯಾದುದು. ಐಹಿಕ ಪ್ರಜ್ಞೆಯಲ್ಲಿ ವಸ್ತುವಿನ ಪ್ರಭುವಾಗಲು ಪ್ರಯತ್ನಿಸುವುದು ಅವನ ಸ್ವಭಾವ. ಆದರೆ ಆಧ್ಯಾತ್ಮಿಕ ಪ್ರಜ್ಞೆಯಲ್ಲಿ, ಕೃಷ್ಣಪ್ರಜ್ಞೆಯಲ್ಲಿ ಪರಮ ಪ್ರಭುವನ್ನು ಸೇವಿಸುವುದೇ ಅವನ ಸ್ಥಾನ. ಜೀವಿಯು ಐಹಿಕ ಪ್ರಜ್ಞೆಯಲ್ಲಿದ್ದಾಗ ಐಹಿಕ ಜಗತ್ತಿನಲ್ಲಿ ಅವನು ಹಲವು ದೇಹಗಳನ್ನು ಧರಿಸಬೇಕಾಗುತ್ತದೆ. ಇದಕ್ಕೆ ಕರ್ಮ ಅಥವಾ ಐಹಿಕ ಪ್ರಜ್ಞೆಯ ಶಕ್ತಿಯಿಂದ ಘಟಿಸುವ ವೈವಿಧ್ಯಮಯ ಸೃಷ್ಟಿ ಎಂದು ಹೆಸರು.

ವೈದಿಕ ಸಾಹಿತ್ಯದಲ್ಲಿ ಜೀವಿಯನ್ನು ಜೀವಾತ್ಮ ಮತ್ತು ಬ್ರಹ್ಮನ್ ಎಂದು ಕರೆದಿದೆ. ಆದರೆ ಎಲ್ಲಿಯೂ ಅದನ್ನು ಪರಬ್ರಹ್ಮನೆಂದು ಕರೆದಿಲ್ಲ. ಜೀವಾತ್ಮನು ಬೇರೆಬೇರೆ ಸ್ಥಿತಿಗಳನ್ನು ಸ್ವೀಕರಿಸುತ್ತಾನೆ. ಒಮ್ಮೊಮ್ಮೆ ಆತನು ಅಜ್ಞಾನವು ತುಂಬಿದ ಭೌತಿಕ ಪ್ರಕೃತಿಯಲ್ಲಿ ಒಂದಾಗಿ ತನ್ನನ್ನು ಜಡವಸ್ತುವಿನೊಂದಿಗೆ ಗುರುತಿಸಿಕೊಳ್ಳುತ್ತಾನೆ. ಒಮ್ಮೊಮ್ಮೆ ತನ್ನನ್ನು ಉತ್ತಮವಾದ ಆಧ್ಯಾತ್ಮಿಕ ಪ್ರಕೃತಿಯೊಂದಿಗೆ ಗುರುತಿಸಿಕೊಳ್ಳುತ್ತಾನೆ. ಆದುದರಿಂದ ಆತನನ್ನು ಪರಮ ಪ್ರಭುವಿನ ಅಲ್ಪಪ್ರಮಾಣದ ಶಕ್ತಿ ಎಂದು ಕರೆಯುತ್ತಾರೆ. ಆತನು ಭೌತಿಕ ಪ್ರಕೃತಿಯೊಂದಿಗೆ ಗುರುತಿಸಿಕೊಳ್ಳುತ್ತಾನೆಯೇ ಅಥವಾ ಆಧ್ಯಾತ್ಮಿಕ ಪ್ರಕೃತಿಯೊಂದಿಗೆ ಗುರುತಿಸಿಕೊಳ್ಳುತ್ತಾನೆಯೇ ಎನ್ನುವುದನ್ನು ಅವಲಂಬಿಸಿ, ಅವನಿಗೆ ಭೌತಿಕ ಅಥವಾ ಆಧ್ಯಾತ್ಮಿಕ ಶರೀರವು ಲಭಿಸುತ್ತದೆ. ಭೌತಿಕ ಪ್ರಕೃತಿಯಲ್ಲಿ ಆತನು ಜೀವದ 84,00,000 ವರ್ಗಗಳಲ್ಲಿ ಯಾವುದಾದರೂ ಒಂದರಿಂದ ಶರೀರವನ್ನು ಪಡೆಯಬಹುದು. ಆದರೆ ಆಧ್ಯಾತ್ಮಿಕ ಪ್ರಕೃತಿಯಲ್ಲಿ ಆತನಿಗೆ ಇರುವುದು ಒಂದೇ ಶರೀರ. ಭೌತಿಕ ಪ್ರಕೃತಿಯಲ್ಲಿ ಆತನ ಕರ್ಮಕ್ಕನುಗುಣವಾಗಿ ಆತನು ಮನುಷ್ಯನಾಗಿ, ದೇವತೆಯಾಗಿ, ಪ್ರಾಣಿಯಾಗಿ, ಪಶುವಾಗಿ, ಪಕ್ಷಿಯಾಗಿ ಇತ್ಯಾದಿ ರೂಪತಾಳುತ್ತಾನೆ. ಐಹಿಕ ಸ್ವರ್ಗಲೋಕಗಳನ್ನು ಸೇರಿ ಅಲ್ಲಿನ ಭೋಗಗಳನ್ನು ಪಡೆಯಲು ಆತನು ಒಮ್ಮೊಮ್ಮೆ ಯಜ್ಞಗಳನ್ನು ಮಾಡುತ್ತಾನೆ. ಆದರೆ ಅವನ ಪುಣ್ಯವು ತೀರಿದಾಗ ಆತನು ಮನುಷ್ಯ ರೂಪದಲ್ಲಿ ಮತ್ತೆ ಭೂಮಿಗೆ ಬರುತ್ತಾನೆ. ಈ ಪ್ರಕ್ರಿಯೆಗೆ ಕರ್ಮ ಎಂದು ಹೆಸರು.

ಛಾಂದೋಗ್ಯ ಉಪನಿಷತ್ತು ವೈದಿಕ ಯಜ್ಞಗಳ ಕ್ರಮವನ್ನು ವರ್ಣಿಸುತ್ತದೆ. ಬಲಿಪೀಠದ ಮೇಲೆ ಐದು ಬಗೆಯ ಅಗ್ನಿಗಳಲ್ಲಿ ಐದು ಬಗೆಯ ಆಹುತಿಗಳನ್ನು ಅರ್ಪಿಸುತ್ತಾರೆ. ಐದು ಬಗೆಯ ಅಗ್ನಿಗಳನ್ನು ಸ್ವರ್ಗಲೋಕಗಳು, ಮೋಡಗಳು, ಭೂಮಿ, ಪುರುಷ ಮತ್ತು ಸ್ತ್ರೀ ಎಂದು ಭಾವಿಸುತ್ತಾರೆ. ಐದು ಬಗೆಯ ಆಹುತಿಗಳೆಂದರೆ ಶ್ರದ್ಧೆ, ಚಂದ್ರಲೋಕದ ಭೋಕ್ತಾರ, ಮಳೆ, ಧಾನ್ಯಗಳು ಮತ್ತು ವೀರ್ಯ.

ಯಜ್ಞದ ಪ್ರಕ್ರಿಯೆಯಲ್ಲಿ ನಿರ್ದಿಷ್ಟ ಸ್ವರ್ಗಲೋಕಗಳನ್ನು ಸೇರುವುದಕ್ಕಾಗಿ ಜೀವಿಯು ನಿರ್ದಿಷ್ಟ ಯಜ್ಞಗಳನ್ನು ಮಾಡುತ್ತಾನೆ; ಆದುದರಿಂದ ಅವುಗಳನ್ನು ಸೇರುತ್ತಾನೆ. ಯಜ್ಞದ ಪುಣ್ಯವು ಕ್ಷಯಿಸಿದಾಗ ಜೀವಿಯು ಮಳೆಯ ರೂಪದಲ್ಲಿ ಭೂಮಿಗೆ ಹಿಂದಿರುಗುತ್ತಾನೆ. ಅನಂತರ ಧಾನ್ಯಗಳ ರೂಪವನ್ನು ಪಡೆಯುತ್ತಾನೆ; ಧಾನ್ಯಗಳನ್ನು ಪುರುಷನು ತಿನ್ನುತ್ತಾನೆ. ಅವು ವೀರ್ಯವಾಗಿ ಮಾರ್ಪಡುತ್ತವೆ; ವೀರ್ಯವು ಹೆಂಗಸಿಗೆ ಗರ್ಭಾಧಾನ ಮಾಡುತ್ತದೆ. ಜೀವಿಯು ಮತ್ತೆ ಮನುಷ್ಯ ರೂಪವನ್ನು ಪಡೆಯುತ್ತಾನೆ; ಯಜ್ಞವನ್ನು ಮಾಡುತ್ತಾನೆ; ಹೀಗೆ ಚಕ್ರದ ಪುನರಾವರ್ತನೆಯಾಗುತ್ತದೆ. ಈ ರೀತಿಯಲ್ಲಿ ಜೀವಿಯು ಸಂಸಾರ ಮಾರ್ಗದಲ್ಲಿ ಬಂದು ನಿರ್ಗಮಿಸುತ್ತಿರುತ್ತಾನೆ. ಆದರೆ ಕೃಷ್ಣಪ್ರಜ್ಞೆ ಇರುವ ಮನುಷ್ಯನು ಇಂತಹ ಯಜ್ಞಗಳಿಂದ ದೂರವಿರುತ್ತಾನೆ. ಆತನು ನೇರವಾಗಿ ಕೃಷ್ಣಪ್ರಜ್ಞೆಯನ್ನು

ಸ್ವೀಕರಿಸುತ್ತಾನೆ; ಹೀಗೆ ಭಗವದ್ಧಾಮಕ್ಕೆ ಹಿಂದಿರುಗಲು ಸಿದ್ಧಮಾಡಿಕೊಳ್ಳುತ್ತಾನೆ.

ಭಗವದ್ಗೀತೆಯ ನಿರಾಕಾರವಾದಿ ವ್ಯಾಖ್ಯಾನಕಾರರು ಬ್ರಹ್ಮನ್ ಐಹಿಕ ಜಗತ್ತಿನಲ್ಲಿ ಜೀವಿಯ ರೂಪವನ್ನು ಪಡೆಯುತ್ತದೆ ಎಂದು ಕಾರಣವೇ ಇಲ್ಲದೆ ಭಾವಿಸುತ್ತಾರೆ; ಇದನ್ನು ಸಮರ್ಥಿಸಲು ಅವರು ಗೀತೆಯ ಹದಿನೈದನೆಯ ಅಧ್ಯಾಯದ ಏಳನೆಯ ಶ್ಲೋಕವನ್ನು ಪ್ರಸ್ತಾಪಿಸುತ್ತಾರೆ. ಆದರೆ ಈ ಶ್ಲೋಕದಲ್ಲಿ ಸಹ ಭಗವಂತನು ಜೀವಿಯನ್ನು 'ನನ್ನ ನಿತ್ಯವಾದ ಒಂದು ಭಾಗ' ಎಂದು ವರ್ಣಿಸುತ್ತಾನೆ. ಭಗವಂತನ ಒಂದು ಭಾಗವಾದ ಜೀವಿಯು ಐಹಿಕ ಜಗತ್ತಿಗೆ ಪತನ ಹೊಂದಬಹುದು. ಆದರೆ ಪರಮ ಪ್ರಭುವಿಗೆ (ಅಚ್ಯುತ) ಎಂದಿಗೂ ಪತನವಿಲ್ಲ. ಆದುದರಿಂದ ಪರಬ್ರಹ್ಮನ್ ಜೀವಿಯ ರೂಪವನ್ನು ಪಡೆಯುತ್ತಾನೆ ಎನ್ನುವ ಸ್ವೀಕೃತ ಭಾವನೆಯನ್ನು ಒಪ್ಪಲು ಸಾಧ್ಯವಿಲ್ಲ. ವೈದಿಕ ಸಾಹಿತ್ಯದಲ್ಲಿ ಬ್ರಹ್ಮನ್ (ಜೀವಿ) ಮತ್ತು ಪರಬ್ರಹ್ಮನ್ (ಪರಮ ಪ್ರಭು) ಇವರು ಬೇರೆ ಬೇರೆ ಎಂದು ನೆನಪಿಡುವುದು ಮುಖ್ಯವಾದದ್ದು.

## ಶ್ಲೋಕ - 4

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ |**
**ಅಧಿಯಜ್ಞೋऽಹಮೇವಾತ್ರ ದೇಹೇ ದೇಹಭೃತಾಂ ವರ ||೪||**

**ಅಧಿಭೂತಮ್**—ಭೌತಿಕ ಅಭಿವ್ಯಕ್ತಿಯು; **ಕ್ಷರಃ**—ನಿರಂತರವಾಗಿ ಬದಲಾಯಿಸುವ; **ಭಾವಃ**—ಪ್ರಕೃತಿಯು; **ಪುರುಷಃ**—ವಿರಾಟ್‌ರೂಪವು; ಸೂರ್ಯ, ಚಂದ್ರರಂತಹ ಸಕಲದೇವತೆಗಳನ್ನೊಳಗೊಂಡ ವಿಶ್ವರೂಪವು; **ಚ**—ಮತ್ತು; **ಅಧಿದೈವತಮ್**—ಅಧಿದೈವವು; **ಅಧಿಯಜ್ಞಃ**—ಪರಮಾತ್ಮನು; **ಅಹಮ್**—ನಾನು (ಕೃಷ್ಣನು); **ಏವ**—ಖಂಡಿತವಾಗಿಯೂ; **ಅತ್ರ**—ಈ; **ದೇಹೇ**—ಶರೀರದಲ್ಲಿ; **ದೇಹಭೃತಾಮ್**—ದೇಹಧಾರಿಗಳಲ್ಲಿ; **ವರ**—ಶ್ರೇಷ್ಠನಾದವನೇ.

## ಅನುವಾದ

**ಶರೀರಧಾರಿಗಳಲ್ಲಿ ಅತ್ಯಂತ ಶ್ರೇಷ್ಠನಾದ ಅರ್ಜುನನೆ, ಸದಾ ಬದಲಾಗುತ್ತಿರುವ ಭೌತಿಕ ಪ್ರಕೃತಿಗೆ ಅಧಿಭೂತ ಎಂದು ಹೆಸರು. ಸೂರ್ಯ ಚಂದ್ರರಂತಹ ದೇವತೆಗಳನ್ನು ಒಳಗೊಳ್ಳುವ ಭಗವಂತನ ವಿರಾಟ್‌ರೂಪಕ್ಕೆ ಅಧಿದೈವ ಎಂದು ಹೆಸರು. ಎಲ್ಲ ಶರೀರಧಾರಿಗಳ ಹೃದಯಗಳಲ್ಲಿ ಪರಮಾತ್ಮನಿಂದ ಪ್ರತಿನಿಧಿತನಾದ ನನಗೆ, ಪರಮ ಪ್ರಭುವಿಗೆ, ಅಧಿಯಜ್ಞ[ಯಜ್ಞದ ಪ್ರಭು] ಎಂದು ಹೆಸರು.**

## ಭಾವಾರ್ಥ

ಭೌತಿಕ ಪ್ರಕೃತಿಯು ಸದಾ ಬದಲಾಗುತ್ತಿರುತ್ತದೆ. ಭೌತಿಕ ಶರೀರಗಳು ಸಾಮಾನ್ಯವಾಗಿ ಆರು ಹಂತಗಳನ್ನು ದಾಟುತ್ತವೆ—ಅವು ಹುಟ್ಟುತ್ತವೆ, ಬೆಳೆಯುತ್ತವೆ, ಒಂದಿಷ್ಟು ಕಾಲ ಉಳಿಯುತ್ತವೆ. ಕೆಲವು ಉಪ ಉತ್ಪನ್ನಗಳನ್ನು ಸೃಷ್ಟಿಸುತ್ತವೆ; ಕ್ಷಯಿಸುತ್ತವೆ; ಅನಂತರ ಮಾಯವಾಗುತ್ತವೆ. ಈ ಭೌತಿಕ ಪ್ರಕೃತಿಗೆ ಅಧಿಭೂತ ಎಂದು ಹೆಸರು. ಅದು ಒಂದು ನಿರ್ದಿಷ್ಟ ಸಮಯದಲ್ಲಿ ಸೃಷ್ಟಿಯಾಗಿದೆ. ಒಂದು ನಿರ್ದಿಷ್ಟ ಸಮಯದಲ್ಲಿ ನಾಶವಾಗುತ್ತದೆ. ಎಲ್ಲ ದೇವತೆಗಳನ್ನೂ ಅವರ ವಿಭಿನ್ನ ಲೋಕಗಳನ್ನೂ ಒಳಗೊಳ್ಳುವ ಪರಮ ಪ್ರಭುವಿನ ಈ

ವಿರಾಟ್‌ರೂಪಕ್ಕೆ ಅಧಿದೈವತ ಎಂದು ಹೆಸರು. ವ್ಯಕ್ತಿಗತ ಆತ್ಮನ ಜೊತೆಗೆ ದೇಹದಲ್ಲಿ ಪರಮಾತ್ಮನಿದ್ದಾನೆ. ಪರಮಾತ್ಮನು ಶ್ರೀಕೃಷ್ಣನ ಪರಿಪೂರ್ಣ ಆಕೃತಿ. ಪರಮಾತ್ಮನು ಅಥವಾ ಅಧಿಯಜ್ಞನು ಹೃದಯದಲ್ಲಿ ನೆಲೆಸಿರುತ್ತಾನೆ. ಈ ಶ್ಲೋಕದ ಸಂದರ್ಭದಲ್ಲಿ ಏವ ಶಬ್ದವು ತುಂಬ ಮುಖ್ಯವಾದದ್ದು. ಏಕೆಂದರೆ ಈ ಪದವನ್ನು ಬಳಸಿ ಭಗವಂತನು ಪರಮಾತ್ಮನು ತನ್ನಿಂದ ಬೇರೆಯಲ್ಲ ಎಂದು ಒತ್ತಿಹೇಳುತ್ತಾನೆ. ವ್ಯಕ್ತಿಗತ ಆತ್ಮದ ಪಕ್ಕದಲ್ಲಿ ಕುಳಿತ ಪರಮಾತ್ಮನು, ದೇವೋತ್ತಮ ಪರಮ ಪುರುಷನು, ವ್ಯಕ್ತಿಗತ ಆತ್ಮಗಳ ಕರ್ಮದ ಸಾಕ್ಷಿ ಮತ್ತು ಆತ್ಮದ ಪ್ರಜ್ಞೆಯ ವಿವಿಧ ಬಗೆಗಳಿಗೆ ಅವನೇ ಮೂಲ. ಪರಮಾತ್ಮನು ವ್ಯಕ್ತಿಗತ ಆತ್ಮಕ್ಕೆ ಸ್ವತಂತ್ರವಾಗಿ ಕಾರ್ಯಮಾಡಲು ಅವಕಾಶ ನೀಡಿ ವ್ಯಕ್ತಿಗತ ಆತ್ಮನ ಕರ್ಮಗಳನ್ನು ನೋಡುತ್ತಿರುತ್ತಾನೆ. ಭಗವಂತನ ದಿವ್ಯಸೇವೆಯಲ್ಲಿ ನಿರತನಾದ ಕೃಷ್ಣಪ್ರಜ್ಞೆಯ ಪರಿಶುದ್ಧ ಭಕ್ತನಿಗೆ ಪರಮ ಪ್ರಭುವಿನ ಈ ವಿವಿಧ ಅಭಿವ್ಯಕ್ತಿಗಳು ತಂತಾವೇ ಸ್ಪಷ್ಟವಾಗುತ್ತವೆ. ಹೊಸದಾಗಿ ದೀಕ್ಷೆ ಸ್ವೀಕರಿಸಿದವನಿಗೆ ಪರಮ ಪ್ರಭುವಿನ ಪರಮಾತ್ಮ ಸ್ವರೂಪದ ಬಳಿ ಸಾರಲು ಸಾಧ್ಯವಿಲ್ಲ; ಆತನು ಪ್ರಭುವಿನ ಬೃಹತ್ ವಿರಾಟ್‌ಸ್ವರೂಪವನ್ನು ಧ್ಯಾನಿಸುತ್ತಾನೆ. ವಿರಾಟ್‌ಪುರುಷನ ಕಾಲುಗಳು ಅಧೋಲೋಕಗಳು; ಸೂರ್ಯಚಂದ್ರರು ಅವನ ಕಣ್ಣುಗಳು; ಊರ್ಧ್ವಲೋಕ ವ್ಯೂಹವು ಆತನ ಶಿರಸ್ಸು. ಈ ವಿರಾಟ್‌ಪುರುಷನನ್ನು ಧ್ಯಾನಿಸುವಂತೆ ನವದೀಕ್ಷಿತನಿಗೆ ಬೋಧಿಸಲಾಗುತ್ತದೆ.

## ಶ್ಲೋಕ - 5

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥೫॥**

**ಅಂತಕಾಲೇ**—ಬದುಕಿನ ಅಂತಿಮ ಸಮಯದಲ್ಲಿ; **ಚ**—ಕೂಡ; **ಮಾಮ್**—ನನ್ನನ್ನು; **ಏವ**—ಖಂಡಿತವಾಗಿಯೂ; **ಸ್ಮರನ್**—ಸ್ಮರಿಸುತ್ತಾ; **ಮುಕ್ತ್ವಾ**—ತ್ಯಜಿಸಿ; **ಕಲೇವರಮ್**— ಶರೀರವನ್ನು; **ಯಃ**—ಯಾರು; **ಪ್ರಯಾತಿ**—ಹೋಗುತ್ತಾನೋ; **ಸಃ**—ಅವನು; **ಮತ್ ಭಾವಮ್**—ನನ್ನ ಭಾವವನ್ನು; **ಯಾತಿ**—ಹೊಂದುತ್ತಾನೆ; **ನ ಅಸ್ತಿ**—ಇರುವುದಿಲ್ಲ; **ಅತ್ರ**—ಇಲ್ಲಿ; **ಸಂಶಯಃ**— ಸಂದೇಹವು.

## ಅನುವಾದ

**ಅಂತ್ಯಕಾಲದಲ್ಲಿ ನನ್ನನ್ನು ಸ್ಮರಿಸುತ್ತ ಯಾವನು ದೇಹವನ್ನು ಬಿಡುವನೋ ಅವನು ಕೂಡಲೇ ನನ್ನ ಸ್ವಭಾವವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ.**

## ಭಾವಾರ್ಥ

ಈ ಶ್ಲೋಕದಲ್ಲಿ ಕೃಷ್ಣಪ್ರಜ್ಞೆಯ ಮಹತ್ವವನ್ನು ಒತ್ತಿಹೇಳಿದೆ. ಕೃಷ್ಣಪ್ರಜ್ಞೆಯಲ್ಲಿ ಯಾವಾತನು ದೇಹವನ್ನು ಬಿಡುತ್ತಾನೋ ಆತನನ್ನು ಕೂಡಲೇ ಪರಮ ಪ್ರಭುವಿನ ದಿವ್ಯಭಾವಕ್ಕೆ ಕೊಂಡೊಯ್ಯಲಾಗುತ್ತದೆ. ಪರಮ ಪ್ರಭುವು ಪರಿಶುದ್ಧರಲ್ಲಿ ಪರಿಶುದ್ಧನು. ಆದುದರಿಂದ ಸದಾ ಕೃಷ್ಣಪ್ರಜ್ಞೆಯಿರುವವನೂ ಸಹ ಪರಿಶುದ್ಧರಲ್ಲಿ ಪರಿಶುದ್ಧನು. ಸ್ಮರನ್ ಎನ್ನುವ ಶಬ್ದ ಮುಖ್ಯವಾದದ್ದು. ಭಕ್ತಿಪೂರ್ವಕ ಸೇವೆಯಲ್ಲಿ ಕೃಷ್ಣಪ್ರಜ್ಞೆಯ ಸಾಧನೆಯನ್ನು ಮಾಡದಿರುವ ಅಪರಿಶುದ್ಧ

ಆತ್ಮಕ್ಕೆ ಕೃಷ್ಣಸ್ಮರಣೆಯು ಸಾಧ್ಯವಿಲ್ಲ. ಆದುದರಿಂದ ಮನುಷ್ಯನಾದವನು ಬದುಕಿನ ಪ್ರಾರಂಭದಿಂದಲೇ ಕೃಷ್ಣಪ್ರಜ್ಞೆಯ ಸಾಧನೆಯನ್ನು ಮಾಡಬೇಕು. ತನ್ನ ಬದುಕಿನ ಅಂತ್ಯದಲ್ಲಿ ಜಯವನ್ನು ಸಾಧಿಸಬಯಸುವವನಿಗೆ ಕೃಷ್ಣಸ್ಮರಣೆಯ ಪ್ರಕ್ರಿಯೆಯು ಅತ್ಯಗತ್ಯ. ಆದುದರಿಂದ ಮನುಷ್ಯನಾದವನು ಸದಾ ಒಂದೇ ಸಮನೆ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂಬ ಮಹಾಮಂತ್ರವನ್ನು ಜಪಿಸಬೇಕು. ಮನುಷ್ಯನಿಗೆ ಮರದಷ್ಟು ಸಹನೆಯಿರಬೇಕು (**ತರೋರ್ ಇವ ಸಹಿಷ್ಣುನಾ**) ಎಂದು ಚೈತನ್ಯ ಮಹಾಪ್ರಭುಗಳು ಬೋಧಿಸಿದ್ದಾರೆ. ಹರೇ ಕೃಷ್ಣ ಸಂಕೀರ್ತನೆಯನ್ನು ಮಾಡುವವನಿಗೆ ಅನೇಕ ಅಡ್ಡಿಗಳು ಎದುರಾಗಬಹುದು. ಆದರೂ ಎಲ್ಲ ಅಡ್ಡಿಗಳನ್ನೂ ಸಹಿಸಿಕೊಂಡು ಆತನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂದು ಸಂಕೀರ್ತನೆ ಮಾಡುತ್ತಲೇ ಇರಬೇಕು. ಆಗ ತನ್ನ ಜೀವನದ ಅಂತ್ಯದಲ್ಲಿ ಮನುಷ್ಯನಿಗೆ ಕೃಷ್ಣಪ್ರಜ್ಞೆಯ ಸಂಪೂರ್ಣ ಫಲವು ದೊರೆಯುವುದು.

## ಶ್ಲೋಕ - 6

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ |**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ||೬||**

**ಯಮ್‌ಯಮ್**—ಯಾವಯಾವ; **ವಾ ಅಪಿ**—ಒಂದು ವೇಳೆ; **ಸ್ಮರನ್**—ಸ್ಮರಿಸುತ್ತ; **ಭಾವಮ್**—ಭಾವವನ್ನು; **ತ್ಯಜತಿ**—ತ್ಯಜಿಸುತ್ತಾನೋ; **ಅನ್ತೇ**—ಕೊನೆಯಲ್ಲಿ; **ಕಲೇವರಮ್**—ಈ ಶರೀರವನ್ನು; **ತಮ್‌ತಮ್**—ಅದೇ ಪ್ರಕಾರವನ್ನು; **ಏವ**—ಖಂಡಿತವಾಗಿಯೂ; **ಏತಿ**—ಹೊಂದುತ್ತಾನೆ; **ಕೌನ್ತೇಯ**—ಕುಂತಿಯ ಮಗನೇ; **ಸದಾ**—ಯಾವಾಗಲೂ; **ತತ್**—ಆ; **ಭಾವ**—ಇರುವ ಸ್ಥಿತಿಯನ್ನು; **ಭಾವಿತಃ**—ಸ್ಮರಿಸುವವನು.

## ಅನುವಾದ

**ಕುಂತಿಯ ಮಗನಾದ ಅರ್ಜುನನೇ, ವ್ಯಕ್ತಿಯು ತನ್ನ ದೇಹವನ್ನು ಬಿಡುವಾಗ ಯಾವ ಭಾವವನ್ನು ಸ್ಮರಿಸುವನೋ ಅದೇ ಭಾವವನ್ನು ನಿಶ್ಚಯವಾಗಿಯೂ ಪಡೆಯುವನು.**

## ಭಾವಾರ್ಥ

ಸಾವಿನ ವಿಷಮ ಗಳಿಗೆಯಲ್ಲಿ ಮನುಷ್ಯನು ತನ್ನ ಸ್ವಭಾವವನ್ನು ಬದಲಾಯಿಸುವ ಪ್ರಕ್ರಿಯೆಯನ್ನು ಇಲ್ಲಿ ವಿವರಿಸಿದೆ. ತನ್ನ ಜೀವನದ ಅಂತ್ಯದಲ್ಲಿ ಕೃಷ್ಣನನ್ನು ಕುರಿತು ಯೋಚಿಸುತ್ತ ದೇಹವನ್ನು ಬಿಡುವವನು ಪರಮ ಪ್ರಭುವಿನ ದಿವ್ಯಭಾವವನ್ನು ಪಡೆಯುತ್ತಾನೆ. ಆದರೆ ಕೃಷ್ಣನನ್ನು ಬಿಟ್ಟು ಬೇರೆ ಏನನ್ನೋ ಯೋಚಿಸುವ ಅವನು ಆ ದಿವ್ಯಸ್ಥಿತಿಯನ್ನು ಪಡೆಯುತ್ತಾನೆ ಎನ್ನುವುದು ನಿಜವಲ್ಲ. ಈ ಅಂಶವನ್ನು ನಾವು ಎಚ್ಚರದಿಂದ ಗಮನಿಸಬೇಕು. ಮನುಷ್ಯನು ಯೋಗ್ಯವಾದ ಮಾನಸಿಕ ಸ್ಥಿತಿಯಲ್ಲಿ ಸಾಯುವುದು ಹೇಗೆ? ಭರತ ಮಹಾರಾಜನು ಶ್ರೇಷ್ಠ ವ್ಯಕ್ತಿ; ಆದರೆ ತನ್ನ ಅಂತ್ಯ ಕಾಲದಲ್ಲಿ ಆತನು ಒಂದು ಜಿಂಕೆಯನ್ನು ಕುರಿತು ಯೋಚಿಸಿದನು. ಆದುದರಿಂದ ಅವನ

ಮುಂದಿನ ಜನ್ಮದಲ್ಲಿ ಆತನು ಒಂದು ಜಿಂಕೆಯ ಶರೀರವನ್ನು ಪ್ರವೇಶಿಸುವಂತಾಯಿತು. ಜಿಂಕೆಯರೂಪದಲ್ಲಿ ಆತನು ತನ್ನ ಹಿಂದಿನ ಕೆಲಸಕಾರ್ಯಗಳನ್ನು ಸ್ಮರಿಸಿದರೂ ಆತನು ಪ್ರಾಣಿಯ ದೇಹವನ್ನು ಸ್ವೀಕರಿಸಬೇಕಾಯಿತು. ಇದು ನಿಜ, ಮನುಷ್ಯನಿಗೆ ತನ್ನ ಜೀವಿತಕಾಲದಲ್ಲಿ ಬಂದ ಯೋಚನೆಗಳು ಒಟ್ಟಾಗಿ, ಸಾವಿನ ಕ್ಷಣದಲ್ಲಿ ಅವನ ಯೋಚನೆಗಳ ಮೇಲೆ ಪ್ರಭಾವ ಬೀರುತ್ತದೆ. ಆದುದರಿಂದ ಈ ಜನ್ಮವು ಮುಂದಿನ ಜನ್ಮವನ್ನು ಸೃಷ್ಟಿಸುತ್ತದೆ. ಈ ಜನ್ಮದಲ್ಲಿ ಮನುಷ್ಯನು ಸತ್ವಗುಣದಲ್ಲಿ ಬಾಳಿದರೆ ಮತ್ತು ಸದಾ ಕೃಷ್ಣನ ಚಿಂತನೆ ಮಾಡಿದರೆ ತನ್ನ ಅಂತ್ಯಕಾಲದಲ್ಲಿ ಕೃಷ್ಣನನ್ನು ಸ್ಮರಿಸುವುದು ಸಾಧ್ಯವಾಗುತ್ತದೆ. ಇದರಿಂದ ಅವನಿಗೆ ಕೃಷ್ಣನ ದಿವ್ಯಭಾವಕ್ಕೆ ಸಾಗಿ ಹೋಗಲು ನೆರವಾಗುತ್ತದೆ. ಮನುಷ್ಯನು ಕೃಷ್ಣಸೇವೆಯಲ್ಲಿ ಅಲೌಕಿಕವಾಗಿ ತನ್ಮಯನಾಗಿದ್ದರೆ ಅವನ ಮುಂದಿನ ಜನ್ಮದ ಶರೀರವು ಆಧ್ಯಾತ್ಮಿಕವಾಗಿರುತ್ತದೆ; ಭೌತಿಕವಾಗಿರುವುದಿಲ್ಲ. ಆದುದರಿಂದ ಈ ಜನ್ಮದ ಅಂತ್ಯದಲ್ಲಿ ತನ್ನ ಭಾವವನ್ನು ಯಶಸ್ವಿಯಾಗಿ ಬದಲಾವಣೆ ಮಾಡಲು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂದು ಸಂಕೀರ್ತನೆ ಮಾಡುವುದೇ ಅತ್ಯುತ್ತಮ ಪ್ರಕ್ರಿಯೆ.

## ಶ್ಲೋಕ - 7

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ |**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ||೭||**

**ತಸ್ಮಾತ್**—ಆದ್ದರಿಂದ; **ಸರ್ವೇಷು**—ಎಲ್ಲ; **ಕಾಲೇಷು**—ಸಮಯಗಳಲ್ಲಿಯೂ; **ಮಾಮ್**—ನನ್ನನ್ನು; **ಅನುಸ್ಮರ**—ನೆನೆಸುತ್ತಿರು; **ಯುಧ್ಯ**—ಯುದ್ಧಮಾಡು; **ಚ**—ಕೂಡ; **ಮಯಿ**—ನನ್ನಲ್ಲಿ; **ಅರ್ಪಿತ**—ಅರ್ಪಿಸಿದ; **ಮನಃ**—ಮನಸ್ಸು; **ಬುದ್ಧಿಃ**—ಬುದ್ಧಿಯುಳ್ಳವನಾಗಿ; **ಮಾಮ್**—ನನ್ನನ್ನು; **ಏವ**—ಖಂಡಿತವಾಗಿಯೂ; **ಏಷ್ಯಸಿ**—ಹೊಂದುತ್ತೀಯೆ; **ಅಸಂಶಯಃ**—ನಿಸ್ಸಂದೇಹವಾಗಿಯೂ.

## ಅನುವಾದ

**ಆದುದರಿಂದ, ಅರ್ಜುನನೆ, ನೀನು ಯಾವಾಗಲೂ ನನ್ನನ್ನು ಕೃಷ್ಣನ ರೂಪದಲ್ಲಿ ಸ್ಮರಿಸುತ್ತಿರಬೇಕು. ಅದೇಕಾಲದಲ್ಲಿ ಯುದ್ಧಮಾಡುವ ನಿನ್ನ ವಿಧಿತ ಕರ್ತವ್ಯವನ್ನು ಮಾಡಬೇಕು. ನಿನ್ನ ಚಟುವಟಿಕೆಗಳನ್ನು ನನಗೆ ಅರ್ಪಿಸಿ ನಿನ್ನ ಮನಸ್ಸು ಮತ್ತು ಬುದ್ಧಿಶಕ್ತಿಗಳು ನನ್ನಲ್ಲಿ ನೆಲೆಸಿದ್ದರೆ ನಿಸ್ಸಂಶಯವಾಗಿಯೂ ನೀನು ನನ್ನನ್ನೇ ಹೊಂದುವೆ.**

## ಭಾವಾರ್ಥ

ಪ್ರಾಪಂಚಿಕ ಕೆಲಸಕಾರ್ಯಗಳಲ್ಲಿ ತೊಡಗಿರುವ ಎಲ್ಲರಿಗೆ ಅರ್ಜುನನಿಗೆ ಮಾಡಿದ ಈ ಉಪದೇಶವು ಬಹುಮುಖ್ಯವಾದದ್ದು. ಮನುಷ್ಯನು ತನ್ನ ವಿಧಿತ ಕರ್ತವ್ಯಗಳನ್ನಾಗಲೀ ಕಾರ್ಯಕ್ರಮಗಳನ್ನಾಗಲೀ ಬಿಟ್ಟುಬಿಡಬೇಕೆಂದು ಭಗವಂತನು ಹೇಳುವುದಿಲ್ಲ. ಅವುಗಳನ್ನು ಮುಂದುವರಿಸುತ್ತಲೇ ಹರೇ ಕೃಷ್ಣ ಸಂಕೀರ್ತನೆಯಿಂದ ಕೃಷ್ಣನನ್ನು ಧ್ಯಾನಿಸಬಹುದು. ಇದು ಮನುಷ್ಯನನ್ನು ಐಹಿಕ ಕಶ್ಮಲದ ಸೋಂಕಿನಿಂದ ಬಿಡಿಸಿ ಮನಸ್ಸನ್ನೂ ಬುದ್ಧಿಯನ್ನೂ ಕೃಷ್ಣನಲ್ಲಿ

ನಿಲ್ಲಿಸುತ್ತದೆ. ಕೃಷ್ಣನ ಹೆಸರುಗಳ ಸಂಕೀರ್ತನೆಯಿಂದ ಆತನು ನಿಶ್ಚಯವಾಗಿ ಕೃಷ್ಣಲೋಕಕ್ಕೆ ತೆರಳುತ್ತಾನೆ.

## ಶ್ಲೋಕ - 8

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ |**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ||೮||**

**ಅಭ್ಯಾಸ ಯೋಗ**—ಅಭ್ಯಾಸದಿಂದ; **ಯುಕ್ತೇನ**—ಧ್ಯಾನದಲ್ಲಿ ತೊಡಗಿದ; **ಚೇತಸಾ**—ಮನಸ್ಸು ಮತ್ತು ಬುದ್ಧಿಯಿಂದ; **ನ ಅನ್ಯ ಗಾಮಿನಾ**—ವಿಚಲಿತವಾಗದ; **ಪರಮಮ್**—ಪರಮೋನ್ನತನಾದ; **ಪುರುಷಮ್**—ದೇವೋತ್ತಮ ಪುರುಷನನ್ನು; **ದಿವ್ಯಮ್**—ದಿವ್ಯನಾದ; **ಯಾತಿ**—ಹೊಂದುತ್ತಾನೆ; **ಪಾರ್ಥ**—ಪೃಥೆಯ ಪುತ್ರನೇ; **ಅನುಚಿನ್ತಯನ್**—ನಿರಂತರವಾಗಿ ಚಿಂತಿಸುತ್ತಾ.

## ಅನುವಾದ

**ಪಾರ್ಥನೇ, ದೇವೋತ್ತಮ ಪರಮ ಪುರುಷನಂತೆ ನನ್ನನ್ನು ಯಾರು ಧ್ಯಾನಿಸುತ್ತಾರೋ, ಬೇರೆ ಯಾವ ಕಡೆಗೂ ಮನಸ್ಸು ಚಲಿಸದಂತೆ ಯಾರ ಮನಸ್ಸು ಸದಾ ನನ್ನಲ್ಲಿ ತನ್ಮಯವಾಗಿರುವುದೋ ಅವನು ಖಂಡಿತವಾಗಿಯೂ ನನ್ನ ಬಳಿಗೆ ಬರುವನು.**

## ಭಾವಾರ್ಥ

ಈ ಶ್ಲೋಕದಲ್ಲಿ ಕೃಷ್ಣನು ಆತನ ಸ್ಮರಣೆಯ ಮಹತ್ವವನ್ನು ಒತ್ತಿ ಹೇಳುತ್ತಾನೆ. ಮನುಷ್ಯನ ಕೃಷ್ಣಸ್ಮರಣೆಯು ಹರೇ ಕೃಷ್ಣ ಮಹಾಮಂತ್ರದ ಸಂಕೀರ್ತನೆಯಿಂದ ಪುನಶ್ಚೇತನ ಪಡೆಯುತ್ತದೆ. ಈ ಅಭ್ಯಾಸದಿಂದ ಸಂಕೀರ್ತನೆ ಮಾಡುವ ಮತ್ತು ಪರಮ ಪ್ರಭುವಿನ ಶಬ್ದಸ್ಪಂದನವನ್ನು ಆಲಿಸುವ ಸಾಧನೆಯಿಂದ ಮನುಷ್ಯನ ಕಿವಿ, ನಾಲಿಗೆ ಮತ್ತು ಮನಸ್ಸು ಕಾರ್ಯನಿರತವಾಗಿರುತ್ತವೆ. ಈ ಅನುಭಾವಧ್ಯಾನವನ್ನು ಅಭ್ಯಾಸ ಮಾಡುವುದು ಬಹು ಸುಲಭ; ಪರಮ ಪ್ರಭುವನ್ನು ಮುಟ್ಟಲು ಇದು ನೆರವಾಗುತ್ತದೆ. **ಪುರುಷಮ್** ಎಂದರೆ ಭೋಗಿಸುವವನು. ಜೀವಿಗಳು ಪರಮ ಪ್ರಭುವಿನ ಶಕ್ತಿಯ ಅಲ್ಪಾಂಶಕ್ಕೆ ಸೇರಿದ್ದರೂ ಅವರಿಗೆ ಐಹಿಕ ಕಲ್ಮಷದ ಸೋಂಕಿದೆ. ಭೋಕ್ತಾರರು ತಾವೇ ಎಂದು ಅವರು ಭಾವಿಸುತ್ತಾರೆ. ಆದರೆ ಪರಮ ಭೋಕ್ತಾರರು ಅವರಲ್ಲ. ನಾರಾಯಣ, ವಾಸುದೇವ ಮುಂತಾಗಿ ದೇವೋತ್ತಮ ಪರಮ ಪುರುಷನ ಬೇರೆ ಬೇರೆ ಅಭಿವ್ಯಕ್ತಿಗಳಲ್ಲಿ ಮತ್ತು ಸ್ವಾಂಶ ವಿಸ್ತರಣೆಗಳಲ್ಲಿ ಕಟ್ಟಕಡೆಯ ಭೋಕ್ತಾರನು ದೇವೋತ್ತಮ ಪರಮ ಪುರುಷನೇ ಎಂದು ಈ ಶ್ಲೋಕವು ಸ್ಪಷ್ಟವಾಗಿ ಹೇಳುತ್ತದೆ.

ತನ್ನ ಆರಾಧನೆಯ ವಸ್ತುವಾದ ಪರಮ ಪ್ರಭುವನ್ನು ಭಕ್ತನು ಹರೇ ಕೃಷ್ಣ ಸಂಕೀರ್ತನೆಯ ಮೂಲಕ ನಾರಾಯಣ, ಕೃಷ್ಣ, ರಾಮ ಮೊದಲಾದ ಯಾವುದೇ ಸ್ವರೂಪದಲ್ಲಿ ಸದಾ ಯೋಚಿಸಬಹುದು. ಈ ಸಾಧನೆಯು ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತದೆ. ಅವನ ನಿರಂತರ ಸಂಕೀರ್ತನೆಯಿಂದಾಗಿ ತನ್ನ ಜೀವನದ ಅಂತ್ಯದಲ್ಲಿ ಅವನು ದೇವರ ಲೋಕಕ್ಕೆ ಸಾಗಿಹೋಗುತ್ತಾನೆ. ಒಳಗಿರುವ ಪರಮಾತ್ಮನ ಧ್ಯಾನವೇ ಯೋಗಸಾಧನೆ; ಇದೇ ರೀತಿಯಲ್ಲಿ ಹರೇ ಕೃಷ್ಣ ಸಂಕೀರ್ತನೆಯಿಂದ ಮನುಷ್ಯನು ತನ್ನ ಮನಸ್ಸನ್ನು ಸದಾ ಪರಮ ಪ್ರಭುವಿನಲ್ಲಿ ನಿಲ್ಲಿಸುತ್ತಾನೆ.

ಮನಸ್ಸು ಚಂಚಲವಾದದ್ದು. ಆದುದರಿಂದ ಬಲತ್ಕಾರವಾಗಿ ಮನಸ್ಸನ್ನು ಕೃಷ್ಣನ ಯೋಚನೆಯಲ್ಲಿ ತೊಡಗಿಸುವುದು ಅಗತ್ಯ. ಮತ್ತೆ ಮತ್ತೆ ಕೊಡುವ ಒಂದು ಉದಾಹರಣೆಯೆಂದರೆ ಕಂಬಳಿಹುಳುವಿನದು; ಅದು ಚಿಟ್ಟೆಯಾಗಬೇಕೆಂದು ಚಿಂತಿಸುತ್ತದೆ ಮತ್ತು ಅದೇ ಜನ್ಮದಲ್ಲಿಯೇ ಚಿಟ್ಟೆಯಾಗಿ ಮಾರ್ಪಡುತ್ತದೆ. ಇದೇ ರೀತಿಯಲ್ಲಿ, ನಾವು ಸದಾ ಕೃಷ್ಣನನ್ನು ಕುರಿತು ಚಿಂತಿಸಿದರೆ ನಮ್ಮ ಜೀವನದ ಕೊನೆಯಲ್ಲಿ ಖಂಡಿತವಾಗಿಯೂ ಕೃಷ್ಣ ದೇಹರಚನೆಯಂತಹ ದೇಹರಚನೆಯನ್ನೇ ಪಡೆಯುತ್ತೇವೆ.

## ಶ್ಲೋಕ - 9

**ಕವಿಂ ಪುರಾಣಮನುಶಾಸಿತಾರಮ್**
**ಅಣೋರಣೀಯಾಂಸಮನುಸ್ಮರೇದ್ ಯಃ ।**
**ಸರ್ವಸ್ಯ ಧಾತಾರಮಚಿನ್ತ್ಯರೂಪಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್ ॥೯॥**

**ಕವಿಮ್**—ಪ್ರತಿಯೊಂದನ್ನೂ ತಿಳಿದ; **ಪುರಾಣಮ್**—ಅತಿ ಪುರಾತನನಾದ; **ಅನುಶಾಸಿತಾರಮ್**—ನಿಯಂತ್ರಕನಾದ; **ಅಣೋಃ**—ಪರಮಾಣುವಿಗಿಂತ; **ಅಣೀಯಾಂಸಮ್**—ಚಿಕ್ಕವನಾದ; **ಅನುಸ್ಮರೇತ್**—ಸದಾ ಚಿಂತಿಸುವವನಾದ ; **ಯಃ**—ಯಾರು; **ಸರ್ವಸ್ಯ**—ಪ್ರತಿಯೊಂದರ; **ಧಾತಾರಮ್**—ಪಾಲಕನಾದ; **ಅಚಿನ್ತ್ಯ**—ಗ್ರಹಿಸಲಾಗದ; **ರೂಪಮ್**—ರೂಪವುಳ್ಳವನನ್ನೂ; **ಆದಿತ್ಯ ವರ್ಣಮ್**—ಸೂರ್ಯನಂತೆ ಪ್ರಕಾಶಮಾನನಾದ; **ತಮಸಃ**—ಅಂಧಕಾರಕ್ಕೆ; **ಪರಸ್ತಾತ್**—ಅತೀತನಾದ.

## ಅನುವಾದ

**ಪರಮ ಪುರುಷನು ಎಲ್ಲವನ್ನೂ ಬಲ್ಲವನು, ಅತಿ ಪುರಾತನನು, ನಿಯಂತ್ರಕನು, ಅತ್ಯಂತ ಸಣ್ಣದಕ್ಕಿಂತ ಸಣ್ಣಗಿರುವವನು, ಎಲ್ಲವನ್ನೂ ಪಾಲಿಸುವವನು, ಎಲ್ಲ ಐಹಿಕ ಕಲ್ಪನೆಯನ್ನೂ ಮೀರಿದವನು, ಚಿಂತನೆಯನ್ನು ಮೀರಿದವನು ಮತ್ತು ಸದಾ ಒಬ್ಬ ಪುರುಷನು ಎಂದು ನಾವು ಧ್ಯಾನಿಸಬೇಕು. ಅವನು ಸೂರ್ಯನಂತೆ ಪ್ರಕಾಶಿಸುವವನು ಮತ್ತು ದಿವ್ಯನಾಗಿದ್ದು ಈ ಐಹಿಕ ಪ್ರಕೃತಿಗೆ ಅತೀತನಾಗಿರುವವನು.**

## ಭಾವಾರ್ಥ

ಪರಮೋನ್ನತನನ್ನು ಚಿಂತಿಸುವ ಪ್ರಕ್ರಿಯೆಯನ್ನು ಈ ಶ್ಲೋಕದಲ್ಲಿ ಹೇಳಿದೆ. ಅತ್ಯಂತ ಮುಖ್ಯವಾದ ಅಂಶವೆಂದರೆ ಆತನು ನಿರಾಕಾರನಲ್ಲ ಮತ್ತು ಶೂನ್ಯನಲ್ಲ. ನಿರಾಕಾರವಾದದ್ದನ್ನು ಅಥವಾ ಶೂನ್ಯವನ್ನು ಧ್ಯಾನಿಸುವುದು ಸಾಧ್ಯವಿಲ್ಲ. ಅದು ಬಹಳ ಕಷ್ಟ. ಆದರೆ ಕೃಷ್ಣನನ್ನು ಚಿಂತಿಸುವ ಪ್ರಕ್ರಿಯೆ ಬಹು ಸುಲಭವಾದದ್ದು. ಅದನ್ನು ಇಲ್ಲಿ ವಾಸ್ತವಿಕವಾಗಿ ಹೇಳಿದೆ. ಮೊಟ್ಟಮೊದಲನೆಯದಾಗಿ ಪ್ರಭುವು ಪುರುಷ, ಒಬ್ಬ ವ್ಯಕ್ತಿ — ನಾವು ರಾಮ ಮತ್ತು ಕೃಷ್ಣ ಎನ್ನುವ ವ್ಯಕ್ತಿಗಳನ್ನು ಕುರಿತು ಯೋಚಿಸಬಹುದು. ನಾವು ರಾಮನನ್ನು ಕುರಿತೇ ಯೋಚಿಸಲಿ, ಕೃಷ್ಣನನ್ನು ಕುರಿತೇ ಯೋಚಿಸಲಿ ಭಗವದ್ಗೀತೆಯ ಈ ಶ್ಲೋಕದಲ್ಲಿ ಅವನು ಹೇಗಿದ್ದಾನೆ ಎನ್ನುವುದನ್ನು

ವರ್ಣಿಸಿದೆ. ಭಗವಂತನು ಕವಿ; ಎಂದರೆ ಆತನಿಗೆ ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳು ತಿಳಿದಿವೆ. ಆದುದರಿಂದ ಅವನು ಎಲ್ಲವನ್ನೂ ಬಲ್ಲವನು. ಅವನು ಅತಿ ಪುರಾತನನು. ಏಕೆಂದರೆ ಅವನೇ ಎಲ್ಲದರ ಮೂಲ; ಎಲ್ಲವೂ ಹುಟ್ಟುವುದು ಅವನಿಂದಲೇ; ಅವನು ವಿಶ್ವದ ಪರಮ ನಿಯಂತ್ರಕ; ಮಾನವ ಕುಲದ ಪಾಲಕ ಮತ್ತು ಅದರ ಮಾರ್ಗದರ್ಶಕ. ಅವನು ಅತ್ಯಂತ ಸಣ್ಣವಸ್ತುವಿಗಿಂತ ಸಣ್ಣವನು. ಜೀವಿಯು ಕೂದಲಿನ ಮೊನೆಯ ಹತ್ತು ಸಾವಿರದಲ್ಲಿ ಒಂದು ಭಾಗದಷ್ಟಿದೆ; ಭಗವಂತನು ಎಷ್ಟರಮಟ್ಟಿಗೆ ಕಲ್ಪನೆಯನ್ನೂ ಮೀರಿ ಸಣ್ಣವನೆಂದರೆ ಅವನು ಈ ಕಣದ ಹೃದಯವನ್ನು ಪ್ರವೇಶಿಸುತ್ತಾನೆ. ಆದುದರಿಂದ ಆತನನ್ನು ಅತ್ಯಂತ ಸಣ್ಣವಸ್ತುವಿಗಿಂತ ಸಣ್ಣವನು ಎಂದು ಹೇಳಿದೆ. ಪರಮೋನ್ನತನಾಗಿ ಅವನು ಪರಮಾಣುವನ್ನು ಪ್ರವೇಶಿಸಬಲ್ಲ; ಪರಮಾತ್ಮನಾಗಿ ಅತ್ಯಂತ ಸಣ್ಣದರ ಹೃದಯವನ್ನು ಹೊಕ್ಕು ಅವನನ್ನು ನಿಯಂತ್ರಿಸಬಲ್ಲ. ಇಷ್ಟೊಂದು ಸಣ್ಣವನಾದರೂ ಅವನು ಎಲ್ಲೆಲ್ಲೂ ಇದ್ದಾನೆ ಮತ್ತು ಎಲ್ಲವನ್ನೂ ಪಾಲಿಸುತ್ತಾನೆ. ಎಲ್ಲ ಗ್ರಹವ್ಯೂಹಗಳಿಗೂ ಅವನೇ ಆಧಾರ. ಇಂತಹ ಬೃಹತ್‌ಗಾತ್ರದ ಗ್ರಹಗಳು ಗಾಳಿಯಲ್ಲಿ ಹೇಗೆ ತೇಲಾಡುತ್ತವೆ ಎಂದು ನಾವು ಬಹುಬಾರಿ ಆಶ್ಚರ್ಯಪಡುತ್ತೇವೆ. ತನ್ನ ಕಲ್ಪನೆಗೆ ಮೀರಿದ ಶಕ್ತಿಯಿಂದ ಪರಮ ಪ್ರಭುವು ಈ ಎಲ್ಲ ಬೃಹದಾಕಾರದ ಗ್ರಹಗಳನ್ನು ನಕ್ಷತ್ರಪುಂಜಗಳ ವ್ಯವಸ್ಥೆಗಳನ್ನು ಹಿಡಿದಿರುತ್ತಾನೆ ಎಂದು ಈ ಶ್ಲೋಕದಲ್ಲಿ ಹೇಳಿದೆ. ಅಚಿಂತ್ಯ ಎನ್ನುವ ಪದವು ಈ ಸಂದರ್ಭದಲ್ಲಿ ಬಹು ಅರ್ಥವತ್ತಾದದ್ದು. ಭಗವಂತನ ಶಕ್ತಿಯು ನಮ್ಮ ಕಲ್ಪನೆಯನ್ನು ಮೀರಿದ್ದು; ನಮ್ಮ ಚಿಂತನೆಯ ವ್ಯಾಪ್ತಿಯಾಚೆ ಇರುವುದು. ಆದುದರಿಂದ ಅದನ್ನು ಅಚಿಂತ್ಯ ಎಂದು ಕರೆದಿದೆ. ಈ ಅಂಶವನ್ನು ಕುರಿತು ಯಾರು ವಾದ ಮಾಡಬಹುದು? ಆತನು ಈ ಜಗತ್ತಿನಲ್ಲಿ ಎಲ್ಲ ಕಡೆ ಇದ್ದಾನೆ; ಆದರೂ ಅದರಾಚೆ ಇದ್ದಾನೆ. ಆಧ್ಯಾತ್ಮಿಕ ಜಗತ್ತಿಗೆ ಹೋಲಿಸಿದರೆ ಈ ಐಹಿಕ ಜಗತ್ತು ಲೆಕ್ಕಕ್ಕೆ ಬಾರದ್ದು; ಅದನ್ನೇ ನಾವು ತಿಳಿಯಲಾರೆವು. ಅದರಾಚೆ ಇರುವುದನ್ನು ನಾವು ಹೇಗೆ ತಿಳಿಯಬಲ್ಲೆವು? ಅಚಿಂತ್ಯ ಎಂದರೆ ಈ ಐಹಿಕ ಜಗತ್ತಿನಾಚೆ ಇರುವುದು; ನಮ್ಮ ವಾದ, ತರ್ಕ ಮತ್ತು ತಾತ್ವಿಕ ಊಹಾತ್ಮಕ ಚಿಂತನೆಗಳಿಗೂ ನಿಲುಕಲಾರದ್ದು; ಕಲ್ಪನೆಗೆ ಮೀರಿದ್ದು. ಆದುದರಿಂದ ಬುದ್ಧಿವಂತರಾದವರು ವ್ಯರ್ಥವಾದ ಮತ್ತು ಊಹಾತ್ಮಕವಾದ ಚಿಂತನೆಗಳನ್ನು ಬಿಟ್ಟು ವೇದಗಳು, ಭಗವದ್ಗೀತೆ ಮತ್ತು ಶ್ರೀಮದ್ಭಾಗವತದಂತಹ ಪವಿತ್ರಗ್ರಂಥಗಳಲ್ಲಿ ಹೇಳಿರುವುದನ್ನು ಒಪ್ಪಿಕೊಂಡು ಅವು ಹೇಳಿರುವ ತತ್ವಗಳನ್ನು ಅನುಸರಿಸಬೇಕು. ಇದರಿಂದ ಮನುಷ್ಯನಿಗೆ ಅರಿವು ಬರುತ್ತದೆ.

## ಶ್ಲೋಕ - 10

ಪ್ರಯಾಣಕಾಲೇ ಮನಸಾಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥

**ಪ್ರಯಾಣ ಕಾಲೇ**—ಮರಣದ ಸಮಯದಲ್ಲಿ; **ಮನಸಾ**—ಮನಸ್ಸಿನಿಂದ; **ಅಚಲೇನ**—ವಿಚಲಿತವಾಗದ; **ಭಕ್ತ್ಯಾ**—ಪೂರ್ಣ ಭಕ್ತಿಯಿಂದ; **ಯುಕ್ತಃ**—ತೊಡಗಿದವನಾಗಿ; **ಯೋಗಬಲೇನ**—

ಯೋಗಶಕ್ತಿಯಿಂದ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಭ್ರುವೋಃ**—ಎರಡು ಹುಬ್ಬುಗಳ; **ಮಧ್ಯೇ**—ನಡುವೆ; **ಪ್ರಾಣಮ್**—ಪ್ರಾಣವಾಯುವನ್ನು; **ಆವೇಶ್ಯ**—ಸ್ಥಾಪಿಸಿ; **ಸಮ್ಯಕ್**—ಸಂಪೂರ್ಣವಾಗಿ; **ಸಃ**—ಅವನು; **ತಮ್**—ಆ; **ಪರಮ್**—ದಿವ್ಯವಾದ; **ಪುರುಷಮ್**—ದೇವೋತ್ತಮ ಪುರುಷನನ್ನು; **ಉಪೈತಿ**—ಹೊಂದುತ್ತಾನೆ; **ದಿವ್ಯಮ್**—ಆಧ್ಯಾತ್ಮಿಕ ಸಾಮ್ರಾಜ್ಯದಲ್ಲಿರುವ.

## ಅನುವಾದ

**ಮರಣಕಾಲದಲ್ಲಿ ತನ್ನ ಪ್ರಾಣವಾಯುವನ್ನು ಹುಬ್ಬುಗಳ ನಡುವೆ ನಿಲ್ಲಿಸಿ ಯೋಗಶಕ್ತಿಯಿಂದ, ನಿಶ್ಚಲಮನಸ್ಸಿನಿಂದ, ನಿಶ್ಚಲಭಕ್ತಿಯಿಂದ ಪರಮ ಪ್ರಭುವನ್ನು ಸ್ಮರಿಸುವುದರಲ್ಲಿ ತೊಡಗುವವನು ನಿಶ್ಚಯವಾಗಿಯೂ ದೇವೋತ್ತಮ ಪರಮ ಪುರುಷನನ್ನು ಹೊಂದುವನು.**

## ಭಾವಾರ್ಥ

ಮರಣಕಾಲದಲ್ಲಿ ಮನಸ್ಸನ್ನು ಭಕ್ತಿಪೂರ್ವಕವಾಗಿ ದೇವೋತ್ತಮ ಪರಮ ಪುರುಷನಲ್ಲಿ ನಿಲ್ಲಿಸಬೇಕೆಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಯೋಗಸಾಧಕರು ಜೀವಶಕ್ತಿಯನ್ನು ಹುಬ್ಬುಗಳ ಮಧ್ಯದವರೆಗೆ (ಆಜ್ಞಾ ಚಕ್ರದವರೆಗೆ) ಏರಿಸಬೇಕೆಂದು ಸೂಚಿಸಲಾಗಿದೆ. ಆರು ಚಕ್ರಗಳ ಧ್ಯಾನದಲ್ಲಿ ತೊಡಗಿಸುವ **ಷಟ್‌ಚಕ್ರಯೋಗ**ವನ್ನು ಇಲ್ಲಿ ಸೂಚಿಸಲಾಗಿದೆ. ಪರಿಶುದ್ಧ ಭಕ್ತನು ಇಂತಹ ಯೋಗವನ್ನು ಅಭ್ಯಾಸಮಾಡುವುದಿಲ್ಲ; ಆದರೆ ಆತನು ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವುದರಿಂದ ಮರಣಕಾಲದಲ್ಲಿ ದೇವೋತ್ತಮ ಪರಮ ಪುರುಷನ ಕೃಪೆಯಿಂದ ಅವನನ್ನು ಸ್ಮರಿಸುತ್ತಾನೆ. ಇದನ್ನು ಹದಿನಾಲ್ಕನೆಯ ಶ್ಲೋಕದಲ್ಲಿ ಹೇಳಿದೆ.

ಈ ಶ್ಲೋಕದಲ್ಲಿ **ಯೋಗಬಲೇನ** ಎಂಬ ಶಬ್ದವನ್ನು ವಿಶಿಷ್ಟವಾಗಿ ಬಳಸಿರುವುದು ಅರ್ಥವತ್ತಾದದ್ದು; ಏಕೆಂದರೆ **ಷಟ್‌ಚಕ್ರಯೋಗದ** ಅಥವಾ ಭಕ್ತಿಯೋಗದ ಯೋಗಾಭ್ಯಾಸವಿಲ್ಲದೆ ಮನುಷ್ಯನು ಮರಣಕಾಲದಲ್ಲಿ ಇಂತಹ ದಿವ್ಯಸ್ಥಿತಿಗೆ ಬರಲಾರನು. ಮರಣಕಾಲದಲ್ಲಿ ಮನುಷ್ಯನು ಇದ್ದಕ್ಕಿದ್ದಂತೆ ಪರಮ ಪ್ರಭುವನ್ನು ಜ್ಞಾಪಿಸಿಕೊಳ್ಳಲಾರ. ಮನುಷ್ಯನು ಯಾವುದಾದರೂ ಯೋಗಪದ್ಧತಿಯನ್ನು, ಮುಖ್ಯವಾಗಿ ಭಕ್ತಿಯೋಗವನ್ನು, ಅಭ್ಯಾಸ ಮಾಡಿರಬೇಕು. ಸಾವಿನ ಸಮಯದಲ್ಲಿ ಮನಸ್ಸು ತುಂಬ ಅಶಾಂತಿಯಲ್ಲಿರುವುದರಿಂದ ಮನುಷ್ಯನು ಯೋಗದ ಮೂಲಕ ತನ್ನ ಜೀವಿತ ಕಾಲದಲ್ಲಿಯೇ ಆಧ್ಯಾತ್ಮಿಕತೆಯನ್ನು ಅಭ್ಯಾಸ ಮಾಡಬೇಕು.

## ಶ್ಲೋಕ - 11

**ಯದಕ್ಷರಂ ವೇದವಿದೋ ವದನ್ತಿ**
**ವಿಶನ್ತಿ ಯದ್ ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಙ್ಗ್ರಹೇಣ ಪ್ರವಕ್ಷ್ಯೇ ॥೧೧॥**

**ಯತ್**—ಯಾವ; **ಅಕ್ಷರಮ್**—ಓಂಕಾರವನ್ನು; **ವೇದ ವಿದಃ**—ವೇದಗಳನ್ನು ಅರಿತವರು; **ವದನ್ತಿ**—

ಹೇಳುತ್ತಾರೋ; **ವಿಶನ್ತಿ**—ಪ್ರವೇಶಿಸುತ್ತಾರೋ; **ಯತ್**—ಯಾವುದರಲ್ಲಿ; **ಯತಯಃ**—ಮಹರ್ಷಿಗಳು; **ವೀತ ರಾಗಾಃ**—ಸನ್ಯಾಸಾಶ್ರಮದಲ್ಲಿರುವವರು; **ಯತ್**—ಯಾವುದನ್ನು; **ಇಚ್ಛನ್ತಃ**—ಅಪೇಕ್ಷಿಸುತ್ತ; **ಬ್ರಹ್ಮಚರ್ಯಮ್**—ಬ್ರಹ್ಮಚರ್ಯವನ್ನು; **ಚರನ್ತಿ**—ಅಭ್ಯಾಸ ಮಾಡುತ್ತಾರೆ; **ತತ್**—ಆ; **ತೇ**—ನಿನಗೆ; **ಪದಮ್**—ಸನ್ನಿವೇಶವನ್ನು; **ಸಙ್ಗ್ರಹೇಣ**—ಸಂಗ್ರಹವಾಗಿ; **ಪ್ರವಕ್ಷ್ಯೇ**—ವಿವರಿಸುತ್ತೇನೆ.

## ಅನುವಾದ

**ವೇದಗಳಲ್ಲಿ ಪಾರಂಗತರು, ಓಂಕಾರವನ್ನು ಜಪಿಸುವವರು ಮತ್ತು ಸನ್ಯಾಸದಲ್ಲಿ ಮಹಾಯತಿಗಳಾದವರು ಬ್ರಹ್ಮನ್‌ನನ್ನು ಸೇರುತ್ತಾರೆ. ಇಂತಹ ಪರಿಪೂರ್ಣತೆಯನ್ನು ಬಯಸಿ ಮನುಷ್ಯನು ಬ್ರಹ್ಮಚರ್ಯವನ್ನು ಆಚರಿಸುತ್ತಾನೆ. ಮೋಕ್ಷವನ್ನು ಪಡೆಯಬಹುದಾದ ಈ ಪ್ರಕ್ರಿಯೆಯನ್ನು ನಾನು ನಿನಗೆ ಈಗ ಸಂಗ್ರಹವಾಗಿ ವಿವರಿಸುವೆನು.**

## ಭಾವಾರ್ಥ

ಶ್ರೀಕೃಷ್ಣನು ಅರ್ಜುನನಿಗೆ **ಷಟ್‌ಚಕ್ರಯೋಗ**ವನ್ನು ಅಭ್ಯಾಸ ಮಾಡುವಂತೆ ಸಲಹೆ ಮಾಡಿದ್ದಾನೆ. ಈ ಯೋಗದಲ್ಲಿ ಸಾಧಕನು ಪ್ರಾಣವಾಯುವನ್ನು ಹುಬ್ಬುಗಳ ಮಧ್ಯೆ ನಿಲ್ಲಿಸುತ್ತಾನೆ. ಷಟ್‌ಚಕ್ರಯೋಗವನ್ನು ಅಭ್ಯಾಸ ಮಾಡುವುದು ಹೇಗೆ ಎನ್ನುವುದು ಅರ್ಜುನನಿಗೆ ತಿಳಿಯದೆ ಇರಬಹುದು ಎಂದು ಭಾವಿಸಿ ಪ್ರಭುವು ಮುಂದಿನ ಶ್ಲೋಕಗಳಲ್ಲಿ ಈ ಪ್ರಕ್ರಿಯೆಯನ್ನು ವಿವರಿಸುತ್ತಾನೆ. ಬ್ರಹ್ಮನ್ ಅದ್ವಿತೀಯನಾದರೂ ಅವನಿಗೆ ಹಲವು ಅಭಿವ್ಯಕ್ತಿಗಳು, ಲಕ್ಷಣಗಳು ಉಂಟು ಎಂದು ಪ್ರಭುವು ಹೇಳುತ್ತಾನೆ. ವಿಶೇಷವಾಗಿ ನಿರಾಕಾರವಾದಿಗಳಿಗೆ **ಅಕ್ಷರ** ಅಥವಾ **ಓಂಕಾರವೂ** ಬ್ರಹ್ಮನ್‌ನೂ ಒಂದೇ. ಕೃಷ್ಣನು ಇಲ್ಲಿ ಸನ್ಯಾಸಿ ಯತಿಗಳು ಪ್ರವೇಶಿಸುವ ನಿರಾಕಾರ ಬ್ರಹ್ಮನನ್ನು ವಿವರಿಸುತ್ತಾನೆ.

ವೈದಿಕ ಶಿಕ್ಷಣ ಪದ್ಧತಿಯಲ್ಲಿ ವಿದ್ಯಾರ್ಥಿಗಳಿಗೆ, ಪ್ರಾರಂಭದಿಂದ ಗುರುವಿನೊಂದಿಗೆ ಸಂಪೂರ್ಣ ಬ್ರಹ್ಮಚರ್ಯದಲ್ಲಿ ವಾಸಿಸುತ್ತ ಓಂಕಾರದ ಅನುಸಂಧಾನವನ್ನು ಮಾಡಲು ಮತ್ತು ಕಟ್ಟಕಡೆಯ ನಿರಾಕಾರ ಬ್ರಹ್ಮನ್‌ನನ್ನು ತಿಳಿದುಕೊಳ್ಳಲು ಹೇಳಿಕೊಡುತ್ತಾರೆ. ಈ ರೀತಿಯಲ್ಲಿ ಅವರು ಬ್ರಹ್ಮನ್‌ನ ಎರಡು ಲಕ್ಷಣಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಶಿಷ್ಯನು ಆಧ್ಯಾತ್ಮಿಕ ಬಾಳಿನಲ್ಲಿ ಮುಂದುವರಿಯಲು ಈ ಅಭ್ಯಾಸವು ಬಹಳ ಅಗತ್ಯ; ಆದರೆ ಈಗ ಇಂತಹ ಬ್ರಹ್ಮಚರ್ಯದ ಬದುಕು ತೀರ ಅಸಾಧ್ಯ. ಜಗತ್ತಿನ ಸಾಮಾಜಿಕ ರಚನೆಯು ಎಷ್ಟೊಂದು ಬದಲಾವಣೆ ಹೊಂದಿದೆ ಎಂದರೆ ವಿದ್ಯಾರ್ಥಿಜೀವನದ ಪ್ರಾರಂಭದಿಂದ ಬ್ರಹ್ಮಚರ್ಯವನ್ನು ಅಭ್ಯಾಸಮಾಡುವ ಸಾಧ್ಯತೆಯೇ ಇಲ್ಲ. ವಿದ್ಯೆಯ ಬೇರೆ ಬೇರೆ ವಿಭಾಗಗಳಿಗೆ ಜಗತ್ತಿನಾದ್ಯಂತ ಹಲವಾರು ಸಂಸ್ಥೆಗಳಿವೆ. ಆದರೆ ವಿದ್ಯಾರ್ಥಿಗಳಿಗೆ ಬ್ರಹ್ಮಚರ್ಯ ತತ್ವಗಳಲ್ಲಿ ಶಿಕ್ಷಣ ಕೊಡಲು ಮನ್ನಣೆ ಪಡೆದ ಸಂಸ್ಥೆಯೇ ಇಲ್ಲ. ಬ್ರಹ್ಮಚರ್ಯವನ್ನು ಪಾಲಿಸದಿದ್ದರೆ ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿ ಸಾಧ್ಯವೇ ಇಲ್ಲ. ಆದುದರಿಂದ ಕಲಿಯುಗಕ್ಕೆ ಶಾಸ್ತ್ರಗಳು ನೀಡಿರುವ ಆದೇಶಗಳಿಗೆ ಅನುಗುಣವಾಗಿ ಚೈತನ್ಯ ಮಹಾಪ್ರಭುಗಳು ಪರಮೋನ್ನತನ ಸಾಕ್ಷಾತ್ಕಾರಕ್ಕೆ ಶ್ರೀಕೃಷ್ಣನ ಪಾವನ ನಾಮವನ್ನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ

ಎಂದು ಸಂಕೀರ್ತನ ಮಾಡುವುದನ್ನು ಬಿಟ್ಟು ಬೇರೆ ಮಾರ್ಗವೇ ಇಲ್ಲ ಎಂದು ಹೇಳಿದ್ದಾರೆ.

## ಶ್ಲೋಕ - 12

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ |**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ||೧೨||**

**ಸರ್ವದ್ವಾರಾಣಿ**—ದೇಹದ ಎಲ್ಲ ದ್ವಾರಗಳನ್ನು; **ಸಂಯಮ್ಯ**—ನಿಯಂತ್ರಿಸಿ; **ಮನಃ**—ಮನಸ್ಸನ್ನು; **ಹೃದಿ**—ಹೃದಯದಲ್ಲಿ; **ನಿರುಧ್ಯ**—ಬಂಧಿಸಿ; **ಚ**—ಮತ್ತು; **ಮೂರ್ಧ್ನಿ**—ಶಿರಸ್ಸಿನಲ್ಲಿ; **ಆಧಾಯ**—ಸ್ಥಿರಗೊಳಿಸಿ; **ಆತ್ಮನಃ**—ಆತ್ಮನ; **ಪ್ರಾಣಮ್**—ಪ್ರಾಣವಾಯುವನ್ನು; **ಆಸ್ಥಿತಃ**—ನೆಲೆಸಿರುವನು; **ಯೋಗ ಧಾರಣಾಮ್**—ಯೋಗಸ್ಥಿತಿಯನ್ನು.

## ಅನುವಾದ

**ಎಲ್ಲ ಇಂದ್ರಿಯಗಳ ಚಟುವಟಿಕೆಗಳ ವಿಷಯದಲ್ಲಿ ನಿರ್ಲಿಪ್ತನಾಗಿರುವುದೇ ಯೋಗಸ್ಥಿತಿ. ಎಲ್ಲ ಇಂದ್ರಿಯದ್ವಾರಗಳನ್ನು ಮುಚ್ಚಿ, ಮನಸ್ಸನ್ನು ಹೃದಯದಲ್ಲಿ ನಿಲ್ಲಿಸಿ ಪ್ರಾಣವಾಯುವನ್ನು ಶಿರಸ್ಸಿನಲ್ಲಿ ನಿಲ್ಲಿಸಿ ಮನುಷ್ಯನು ಯೋಗಧಾರಣೆ ಮಾಡುತ್ತಾನೆ.**

## ಭಾವಾರ್ಥ

ಇಲ್ಲಿ ಸೂಚಿಸಿರುವಂತೆ ಯೋಗಾಭ್ಯಾಸವನ್ನು ಮಾಡಲು ಮೊದಲು ಎಲ್ಲ ಇಂದ್ರಿಯಭೋಗದ ಬಾಗಿಲುಗಳನ್ನೂ ಮುಚ್ಚಬೇಕು. ಇದಕ್ಕೆ **ಪ್ರತ್ಯಾಹಾರ** ಎಂದು ಹೆಸರು. ಹೀಗೆಂದರೆ ಇಂದ್ರಿಯಗಳನ್ನು ಅವುಗಳ ವಸ್ತುಗಳಿಂದ ಹಿಂದಕ್ಕೆ ಎಳೆದುಕೊಳ್ಳುವುದು. ಜಗತ್ತನ್ನು ಗ್ರಹಿಸಲು ನೆರವಾಗುವ ಇಂದ್ರಿಯಗಳಾದ ಕಣ್ಣುಗಳು, ಕಿವಿಗಳು, ಮೂಗು, ನಾಲಿಗೆ ಮತ್ತು ಸ್ಪರ್ಶ ಇವನ್ನು ಸಂಪೂರ್ಣವಾಗಿ ನಿಯಂತ್ರಿಸಬೇಕು; ಅವು ತಮ್ಮ ತೃಪ್ತಿಯಲ್ಲಿ ತೊಡಗದಂತೆ ನೋಡಿಕೊಳ್ಳಬೇಕು. ಹೀಗೆ ಮನಸ್ಸು ಹೃದಯದಲ್ಲಿರುವ ಪರಮಾತ್ಮನಲ್ಲಿ ಕೇಂದ್ರೀಕೃತವಾಗುತ್ತದೆ; ಜೀವಶಕ್ತಿಯು ಶಿರಸ್ಸಿನ ತುದಿಗೆ ಏರುತ್ತದೆ. ಆರನೆಯ ಅಧ್ಯಾಯದಲ್ಲಿ ಈ ಪ್ರಕ್ರಿಯೆಯನ್ನು ವಿವರವಾಗಿ ವರ್ಣಿಸಿದೆ. ಆದರೆ ಹಿಂದೆಯೇ ಹೇಳಿದಂತೆ ಈ ಅಭ್ಯಾಸವು ಈ ಯುಗದಲ್ಲಿ ಕಾರ್ಯಸಾಧ್ಯವಲ್ಲ. ಅತ್ಯುತ್ತಮ ರೀತಿ ಎಂದರೆ ಕೃಷ್ಣಪ್ರಜ್ಞೆ. ಮನುಷ್ಯನು ತನ್ನ ಮನಸ್ಸನ್ನು ಭಕ್ತಿಪೂರ್ವಕ ಸೇವೆಯಲ್ಲಿ — ಸದಾ ಕೃಷ್ಣನಲ್ಲಿ — ನಿಲ್ಲಿಸಲು ಸಾಧ್ಯವಾದರೆ ಆತನಿಗೆ ಸಮಾಧಿಸ್ಥಿತಿಯಲ್ಲಿ ನಿಲ್ಲುವುದು ಬಹಳ ಸುಲಭವಾಗುತ್ತದೆ.

## ಶ್ಲೋಕ - 13

**ಓಂ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ |**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ||೧೩||**

**ಓಂ**—ಅಕ್ಷರಗಳ ಸಂಯೋಜನೆಯಾದ ಓಂಕಾರ; **ಇತಿ**—ಎಂಬ; **ಏಕಾಕ್ಷರಮ್**—ಒಂದು ಅಕ್ಷರದ;

**ಬ್ರಹ್ಮ**—ಪರತತ್ವವನ್ನು; **ವ್ಯಾಹರನ್**—ಉಚ್ಚರಿಸುತ್ತ; **ಮಾಮ್**—ನನ್ನನ್ನು (ಕೃಷ್ಣನನ್ನು); **ಅನುಸ್ಮರನ್**—ಸ್ಮರಿಸುತ್ತ; **ಯಃ**—ಯಾರು; **ಪ್ರಯಾತಿ**—ಹೋಗುತ್ತಾನೋ; **ತ್ಯಜನ್**—ತ್ಯಜಿಸಿ; **ದೇಹಮ್**—ಈ ದೇಹವನ್ನು; **ಸಃ**—ಅವನು; **ಯಾತಿ**—ಹೊಂದುತ್ತಾನೆ; **ಪರಮಾಮ್**—ಪರಮೋನ್ನತವಾದ; **ಗತಿಮ್**—ಗತಿಯನ್ನು.

## ಅನುವಾದ

**ಈ ಯೋಗಧಾರಣೆಯ ಸ್ಥಿತಿಯನ್ನು ಸಾಧಿಸಿ ವರ್ಣಗಳ ಪರಮ ಸಂಯೋಜನೆಯಾದ ಓಂ ಎಂಬ ಅಕ್ಷರವನ್ನು ಉಚ್ಚರಿಸುತ್ತ, ದೇವೋತ್ತಮ ಪರಮ ಪುರುಷನನ್ನು ಕುರಿತು ಧ್ಯಾನಿಸುತ್ತ ದೇಹವನ್ನು ಬಿಟ್ಟವನು ನಿಶ್ಚಯವಾಗಿಯೂ ಆಧ್ಯಾತ್ಮಿಕ ಲೋಕಗಳನ್ನು ಹೊಂದುವನು.**

## ಭಾವಾರ್ಥ

**ಓಂ,** ಬ್ರಹ್ಮನ್ ಮತ್ತು ಶ್ರೀಕೃಷ್ಣ ಬೇರೆ ಬೇರೆಯಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಕೃಷ್ಣನ ನಿರಾಕಾರ ಶಬ್ದವೇ **ಓಂ**; ಹರೇ ಕೃಷ್ಣ ಶಬ್ದದಲ್ಲಿ **ಓಂ** ಸೇರಿದೆ. ಈ ಯುಗದಲ್ಲಿ ಹರೇ ಕೃಷ್ಣ ಮಂತ್ರದ ಜಪವನ್ನು ಮಾಡಬೇಕೆಂದು ಸ್ಪಷ್ಟವಾಗಿ ಸೂಚನೆ ಮಾಡಿದೆ. ಆದುದರಿಂದ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಮಂತ್ರವನ್ನು ಉಚ್ಚರಿಸುತ್ತ ಮನುಷ್ಯನು ದೇಹವನ್ನು ಬಿಟ್ಟರೆ, ಅವನ ಅಭ್ಯಾಸ ರೀತಿಗೆ ಅನುಗುಣವಾಗಿ ಅವನು ಖಂಡಿತವಾಗಿಯೂ ದಿವ್ಯಲೋಕಗಳಲ್ಲಿ ಒಂದನ್ನು ಸೇರುವನು. ಕೃಷ್ಣನ ಭಕ್ತರು ಕೃಷ್ಣ ಲೋಕವಾದ ಗೋಲೋಕ ವೃಂದಾವನವನ್ನು ಸೇರುವರು. ಸಾಕಾರವಾದಿಗಳಿಗೆ ಆಧ್ಯಾತ್ಮಿಕ ಗಗನದಲ್ಲಿ ವೈಕುಂಠಲೋಕಗಳೆಂಬ ಹೆಸರಿನ ಇತರ ಅಸಂಖ್ಯಾತ ಲೋಕಗಳಿವೆ. ನಿರಾಕಾರವಾದಿಗಳು ಬ್ರಹ್ಮಜ್ಯೋತಿಯಲ್ಲೇ ಉಳಿಯುವರು.

## ಶ್ಲೋಕ - 14

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ |**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ||೧೪||**

**ಅನನ್ಯ ಚೇತಾಃ**—ಮನಸ್ಸಿನ ವಿಚಲತೆಯಿಲ್ಲದೆ; **ಸತತಮ್**—ಯಾವಾಗಲೂ; **ಯಃ**—ಯಾರು; **ಮಾಮ್**—ನನ್ನನ್ನು (ಕೃಷ್ಣನನ್ನು); **ಸ್ಮರತಿ**—ಸ್ಮರಿಸುತ್ತಾನೋ; **ನಿತ್ಯಶಃ**—ತಪ್ಪದೆ; **ತಸ್ಯ**—ಅವನಿಗೆ; **ಅಹಮ್**—ನಾನು; **ಸು ಲಭಃ**—ಹೊಂದಲು ಬಹುಸುಲಭನಾಗಿದ್ದೇನೆ; **ಪಾರ್ಥ**—ಪೃಥೆಯ ಪುತ್ರನೇ; **ನಿತ್ಯ**—ತಪ್ಪದೇ; **ಯುಕ್ತಸ್ಯ**—ನಿರತನಾದ; **ಯೋಗಿನಃ**—ಭಕ್ತನಿಗೆ.

## ಅನುವಾದ

**ಪಾರ್ಥ, ಅನನ್ಯಚಿತ್ತನಾಗಿ ಸದಾ ನನ್ನನ್ನು ಸ್ಮರಿಸುವವನಿಗೆ ನಾನು ಸುಲಭವಾಗಿ ಲಭ್ಯನು; ಭಕ್ತಿಸೇವೆಯಲ್ಲಿ ಅವನು ಸದಾ ನಿರತನಾಗಿರುವುದೇ ಇದಕ್ಕೆ ಕಾರಣ.**

## ಭಾವಾರ್ಥ

ಭಕ್ತಿಯೋಗದಲ್ಲಿ ದೇವೋತ್ತಮ ಪರಮ ಪುರುಷನನ್ನು ಸೇವಿಸುವ ಪರಿಶುದ್ಧ ಭಕ್ತನು ಕಡೆಗೆ ಸೇರುವ ಗುರಿಯನ್ನು ಈ ಶ್ಲೋಕವು ವಿಶೇಷವಾಗಿ ವರ್ಣಿಸುತ್ತದೆ. ಹಿಂದಿನ ಶ್ಲೋಕಗಳು ನಾಲ್ಕು ಬಗೆಯ ಭಕ್ತರನ್ನು ವರ್ಣಿಸಿವೆ — ಸಂಕಟದಲ್ಲಿರುವವರು, ಕುತೂಹಲಿಗಳು, ಪ್ರಾಪಂಚಿಕ ಲಾಭವನ್ನು ಬಯಸುವವರು ಮತ್ತು ಊಹಾತ್ಮಕ ಚಿಂತನೆಯಲ್ಲಿ ತೊಡಗುವ ತತ್ವಶಾಸ್ತ್ರಜ್ಞರು. ಮುಕ್ತಿಯ ವಿವಿಧ ಪ್ರಕ್ರಿಯೆಗಳನ್ನು ವರ್ಣಿಸಿದೆ — ಕರ್ಮಯೋಗ, ಜ್ಞಾನಯೋಗ ಮತ್ತು ಹಠಯೋಗ. ಈ ಯೋಗಪದ್ಧತಿಗಳಲ್ಲಿ ಭಕ್ತಿಯನ್ನು ಸ್ವಲ್ಪಮಟ್ಟಿಗೆ ಸೇರಿಸಿದೆ. ಆದರೆ ಈ ಶ್ಲೋಕವು ವಿಶೇಷವಾಗಿ ಜ್ಞಾನ, ಕರ್ಮ, ಹಠ ಇವುಗಳ ಮಿಶ್ರಣವಿಲ್ಲದ ಪರಿಶುದ್ಧ ಭಕ್ತಿಯನ್ನೇ ಹೇಳಿದೆ. **ಅನನ್ಯಚೇತಾಃ** ಎನ್ನುವ ಶಬ್ದದಲ್ಲಿ ಸೂಚಿಸಿದಂತೆ, ಪರಿಶುದ್ಧ ಭಕ್ತಿಯಲ್ಲಿ ಭಕ್ತನು ಕೃಷ್ಣನನ್ನು ಬಿಟ್ಟು ಬೇರೆ ಏನನ್ನೂ ಬಯಸುವುದಿಲ್ಲ. ಪರಿಶುದ್ಧ ಭಕ್ತನು ಸ್ವರ್ಗಲೋಕಗಳಿಗೆ ಏರಬೇಕೆಂದು ಅಪೇಕ್ಷಿಸುವುದಿಲ್ಲ. ಅವನಿಗೆ ಬ್ರಹ್ಮಜ್ಯೋತಿಯಲ್ಲಿ ಲೀನವಾಗುವುದಾಗಲಿ, ಮೋಕ್ಷವಾಗಲಿ, ಐಹಿಕ ತೊಡಕುಗಳಿಂದ ಬಿಡುಗಡೆಯಾಗಲಿ ಬೇಕಿಲ್ಲ. ಪರಿಶುದ್ಧ ಭಕ್ತನಿಗೆ ಬಯಕೆಯೂ ಇಲ್ಲ. ಚೈತನ್ಯ ಚರಿತಾಮೃತದಲ್ಲಿ ಪರಿಶುದ್ಧ ಭಕ್ತನನ್ನು ನಿಷ್ಕಾಮ ಎಂದರೆ ಸ್ವಹಿತದಲ್ಲಿ ಆಸಕ್ತಿ ಇಲ್ಲದವನು ಎಂದು ಕರೆದಿದೆ. ಅವನೊಬ್ಬನಿಗೇ ಪರಿಪೂರ್ಣ ಶಾಂತಿಯು ದೊರೆಯುತ್ತದೆ. ವೈಯಕ್ತಿಕ ಲಾಭಕ್ಕಾಗಿ ಶ್ರಮಿಸುವವರಿಗೆ ಶಾಂತಿ ದೊರೆಯುವುದಿಲ್ಲ. ಜ್ಞಾನಯೋಗಿ, ಕರ್ಮಯೋಗಿ ಅಥವಾ ಹಠಯೋಗಿಗಳಿಗೆ ಸ್ವಾರ್ಥ ಆಸಕ್ತಿಗಳಿರುತ್ತವೆ. ಪರಿಶುದ್ಧ ಭಕ್ತನಿಗೆ ದೇವೋತ್ತಮ ಪರಮ ಪುರುಷನನ್ನು ಪ್ರಸನ್ನಗೊಳಿಸುವುದಲ್ಲದೆ ಬೇರೆ ಯಾವ ಅಪೇಕ್ಷೆಯೂ ಇರುವುದಿಲ್ಲ. ಆದುದರಿಂದ ಅವಿಚಲಿತ ಭಕ್ತಿ ಇರಿಸಿದವನಿಗೆ ತಾನು ಸುಲಭನು ಎಂದು ಭಗವಂತನು ಹೇಳುತ್ತಾನೆ.

ಪರಿಶುದ್ಧ ಭಕ್ತನು, ರಾಮ, ನರಸಿಂಹರಂತೆ ಕೃಷ್ಣನ ಹಲವು ವೈಯಕ್ತಿಕ ರೂಪಗಳಲ್ಲಿ ಒಂದರ ಭಕ್ತಿಪೂರ್ವಕ ಸೇವೆಯಲ್ಲಿ ನಿರತನಾಗುತ್ತಾನೆ. ಕೃಷ್ಣನು ಶ್ರೀರಾಮ, ನರಸಿಂಹ ಮುಂತಾದ ವಿವಿಧ ಸ್ವಾಂಶ ವಿಸ್ತರಣೆಗಳನ್ನು ಹೊಂದಿದ್ದಾನೆ. ಭಕ್ತನು ಈ ಯಾವುದೇ ದಿವ್ಯರೂಪಗಳಲ್ಲಿ ಭಕ್ತಿ ಸೇವೆಯ ಮೂಲಕ ತನ್ನ ಮನಸ್ಸನ್ನು ಸ್ಥಿರಗೊಳಿಸಬಹುದು. ಇಂತಹ ಭಕ್ತರಿಗೆ ಇತರ ಯೋಗಗಳ ಅಭ್ಯಾಸಿಗಳನ್ನು ಪೀಡಿಸುವ ಸಮಸ್ಯೆಗಳ ಕಾಟವಿಲ್ಲ. ಭಕ್ತಿಯೋಗವು ಬಹು ಸರಳವಾದದ್ದು, ಪರಿಶುದ್ಧವಾದದ್ದು ಮತ್ತು ಅಭ್ಯಾಸ ಮಾಡಲು ಸುಲಭವಾದದ್ದು. ಹರೇಕೃಷ್ಣ ಸಂಕೀರ್ತನೆಯಿಂದಲೇ ಪ್ರಾರಂಭ ಮಾಡಬಹುದು. ಭಗವಂತನು ಎಲ್ಲರ ವಿಷಯದಲ್ಲಿಯೂ ಕರುಣಾಮಯನು. ಆದರೆ ನಾವು ಆಗಲೇ ವಿವರಿಸಿದಂತೆ, ಅತ್ತಿತ್ತ ಚಲಿಸದೆ ಸದಾ ತನ್ನನ್ನೇ ಸೇವಿಸುವವರ ವಿಷಯದಲ್ಲಿ ಆತನಿಗೆ ವಿಶೇಷ ಒಲವು. ಇಂತಹ ಭಕ್ತರಿಗೆ ಭಗವಂತನು ಅನೇಕ ರೀತಿಗಳಲ್ಲಿ ನೆರವಾಗುತ್ತಾನೆ. ವೇದಗಳಲ್ಲಿ ಹೇಳಿದಂತೆ (ಕಠ ಉಪನಿಷತ್ತು), **ಯಮ್ ಏವೈಷ ವೃಣುತೇ ತೇನ ಲಭ್ಯಸ್** / **ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಮ್**, ಸಂಪೂರ್ಣವಾಗಿ ಶರಣಾಗತನಾಗಿ ಪರಮ ಪ್ರಭುವಿನ ಭಕ್ತಿಪೂರ್ವಕ ಸೇವೆಯಲ್ಲಿ ನಿರತನಾದವನು ಪರಮ ಪ್ರಭುವನ್ನು ವಾಸ್ತವವಾಗಿ ಅವನು ಇರುವಂತೆ ಅರಿಯಬಲ್ಲ. ಭಗವದ್ಗೀತೆಯಲ್ಲಿ (10.10) ಹೇಳಿರುವಂತೆ **ದದಾಮಿ ಬುದ್ಧಿಯೋಗಂ ತಮ್.** ಅಂತಿಮವಾಗಿ ತನ್ನ ದಿವ್ಯರಾಜ್ಯದಲ್ಲಿ ಸೇರುವಂತೆ ಭಗವಂತನು ಇಂತಹ ಭಕ್ತನಿಗೆ ಅಗತ್ಯವಾದ ಬುದ್ಧಿಯನ್ನು ದಯಪಾಲಿಸುತ್ತಾನೆ.

ಪರಿಶುದ್ಧ ಭಕ್ತನಿಗೆ ಇರಬೇಕಾದ ವಿಶೇಷ ಅರ್ಹತೆ ಎಂದರೆ ನಿಶ್ಚಲವಾಗಿ ಮತ್ತು ಕಾಲ ಅಥವಾ ದೇಶಗಳನ್ನು ಗಮನಿಸದೆ ಸದಾ ಕೃಷ್ಣನನ್ನು ಕುರಿತು ಯೋಚನೆ ಮಾಡುವುದು. ಯಾವ ಅಡೆತಡೆಗಳೂ ಇರಬಾರದು. ಎಲ್ಲೇ ಆಗಲಿ, ಯಾವ ಕಾಲದಲ್ಲಿಯೇ ಆಗಲಿ ಆತನು ತನ್ನ ಸೇವೆಯನ್ನು ಸಲ್ಲಿಸಲು ಸಮರ್ಥನಾಗಿರಬೇಕು. ವೃಂದಾವನದಂತಹ ಪವಿತ್ರ ಸ್ಥಳದಲ್ಲಿ ಅಥವಾ ಪ್ರಭುವು ವಾಸಮಾಡಿದ ಪವಿತ್ರ ಊರಿನಲ್ಲಿ ಭಕ್ತನು ವಾಸಮಾಡಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಪರಿಶುದ್ಧ ಭಕ್ತನು ಎಲ್ಲಿಯೇ ಆದರೂ ವಾಸಮಾಡಿ ತನ್ನ ಪರಿಶುದ್ಧ ಭಕ್ತಿಯಿಂದ ವೃಂದಾವನದ ವಾತಾವರಣವನ್ನು ಸೃಷ್ಟಿಸಬಲ್ಲ. ಶ್ರೀ ಅದ್ವೈತರು ಚೈತನ್ಯ ಮಹಾಪ್ರಭುಗಳಿಗೆ, "ಪ್ರಭುವೇ, ತಾವು ಎಲ್ಲಿದ್ದರೆ ವೃಂದಾವನವು ಅಲ್ಲಿಯೇ ಇರುತ್ತದೆ," ಎಂದು ಹೇಳಿದರು.

**ಸತತಮ್** ಮತ್ತು **ನಿತ್ಯಶಃ**, ಎಂದರೆ 'ಸದಾ', 'ಕ್ರಮತಪ್ಪಿಸದೆ' ಅಥವಾ 'ಪ್ರತಿನಿತ್ಯವೂ' ಎಂದರ್ಥ. ಪರಿಶುದ್ಧ ಭಕ್ತನು ಸದಾ ಕೃಷ್ಣನನ್ನು ಸ್ಮರಿಸುತ್ತ ಅವನನ್ನೆ ಧ್ಯಾನ ಮಾಡುತ್ತಾನೆ. ಭಗವಂತನನ್ನು ಬಹು ಸುಲಭವಾಗಿ ತಲಪಬಲ್ಲ ಶುದ್ಧಭಕ್ತನ ಅರ್ಹತೆಗಳು ಇವು. ಎಲ್ಲ ಪದ್ಧತಿಗಳಿಗಿಂತ ಗೀತೆಯು ಹೆಚ್ಚಾಗಿ ಸೂಚಿಸುವ ಪದ್ಧತಿ ಭಕ್ತಿಯೋಗ. ಸಾಮಾನ್ಯವಾಗಿ ಭಕ್ತಿಯೋಗಿಗಳು ಐದು ರೀತಿಗಳಲ್ಲಿ ತೊಡಗಿರುತ್ತಾರೆ; (1) **ಶಾನ್ತ ಭಕ್ತ,** ತಟಸ್ಥನಾಗಿ ಭಕ್ತಿಪೂರ್ವಕ ಸೇವೆಯಲ್ಲಿ ತೊಡಗಿರುವವನು; (2) **ದಾಸ್ಯಭಕ್ತ**, ಸೇವಕನಾಗಿ ಭಕ್ತಿಪೂರ್ವಕ ಸೇವೆಯನ್ನು ಮಾಡುವವನು; (3) **ಸಾಖ್ಯಭಕ್ತ**, ಸ್ನೇಹಿತನಾಗಿ ಇರುವವನು; (4) **ವಾತ್ಸಲ್ಯಭಕ್ತ,** ತಂದೆ ತಾಯಿಯ ಭಾವ ಇರುವವನು; (5) **ಮಾಧುರ್ಯಭಕ್ತ**; ಪರಮ ಪ್ರಭುವಿನಲ್ಲಿ ದಾಂಪತ್ಯ ಪ್ರೇಮಭಾವವಿರುವವನು. ಇವುಗಳಲ್ಲಿ ಯಾವುದಾದರೊಂದು ರೀತಿಯಲ್ಲಿ ಪರಿಶುದ್ಧ ಭಕ್ತನು ಪರಮ ಪ್ರಭುವಿನ ದಿವ್ಯ ಪ್ರೇಮಪೂರ್ವಕ ಸೇವೆಯಲ್ಲಿ ನಿರತನಾಗಿದ್ದು ಪರಮ ಪ್ರಭುವನ್ನು ಮರೆಯಲಾರ. ಆದುದರಿಂದ ಅವನಿಗೆ ಪ್ರಭುವು ಸುಲಭವಾಗಿ ಲಭ್ಯನು. ಪರಿಶುದ್ಧ ಭಕ್ತನು ಪರಮ ಪ್ರಭುವನ್ನು ಒಂದು ಕ್ಷಣವೂ ಮರೆಯಲಾರ. ಹಾಗೆಯೇ ಪರಮ ಪ್ರಭುವು ಶುದ್ಧಭಕ್ತನನ್ನು ಒಂದು ಕ್ಷಣವೂ ಮರೆಯಲಾರ. ಮಹಾಮಂತ್ರವಾದ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎನ್ನುವ ಸಂಕೀರ್ತನೆಯು, ಕೃಷ್ಣಪ್ರಜ್ಞಾ ಪ್ರಕ್ರಿಯೆಯ ಮಹಾ ಆಶೀರ್ವಾದವು ಇದೇ.

## ಶ್ಲೋಕ - 15

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥೧೫॥**

**ಮಾಮ್**—ನನ್ನನ್ನು; **ಉಪೇತ್ಯ**—ಹೊಂದಿ; **ಪುನಃ**—ಮತ್ತೆ; **ಜನ್ಮ**—ಜನನವನ್ನೂ; **ದುಃಖ ಆಲಯಮ್**—ಕ್ಲೇಶಗಳ ಸ್ಥಾನವಾದ; **ಅಶಾಶ್ವತಮ್**—ತಾತ್ಕಾಲಿಕವಾದ; **ನ ಆಪ್ನುವನ್ತಿ**—ಹೊಂದುವುದಿಲ್ಲ; **ಮಹಾ ಆತ್ಮಾನಃ**—ಮಹಾತ್ಮರು; **ಸಂಸಿದ್ಧಿಮ್**—ಪರಿಪೂರ್ಣತೆಯನ್ನು; **ಪರಮಾಮ್**—ಅಂತಿಮವಾದ; **ಗತಾಃ**—ಹೊಂದಿದವರಾಗಿ.

## ಅನುವಾದ

**ಭಕ್ತಿಪೂರ್ವಕ ಯೋಗಿಗಳಾದ ಮಹಾತ್ಮರು ನನ್ನನ್ನು ಸೇರಿದ ಮೇಲೆ ದುಃಖಗಳ ತವರಾದ ಈ ಅಶಾಶ್ವತ ಪ್ರಪಂಚಕ್ಕೆ ಹಿಂದಿರುಗುವುದಿಲ್ಲ. ಏಕೆಂದರೆ ಅವರು ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸಿದ್ದಾರೆ.**

## ಭಾವಾರ್ಥ

ಈ ಅಶಾಶ್ವತ ಐಹಿಕ ಪ್ರಪಂಚವು ಜನನ, ಮುಪ್ಪು, ರೋಗ ಮತ್ತು ಸಾವುಗಳ ಸಂಕಟಗಳಿಂದ ತುಂಬಿರುವುದರಿಂದ, ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸಿ ಪರಮಲೋಕವಾದ ಕೃಷ್ಣಲೋಕ ಅಥವಾ ಗೋಲೋಕ ವೃಂದಾವನವನ್ನು ಸೇರಿದವನು, ಹಿಂದಿರುಗಲು ಬಯಸುವುದಿಲ್ಲ. ವೈದಿಕ ಸಾಹಿತ್ಯವು ಪರಮಲೋಕವನ್ನು **ಅವ್ಯಕ್ತ, ಅಕ್ಷರ** ಮತ್ತು **ಪರಮಾ ಗತಿ** ಎಂದು ವರ್ಣಿಸುತ್ತದೆ; ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆ ಲೋಕವು ನಮ್ಮ ಐಹಿಕ ದೃಷ್ಟಿಯನ್ನು ಮೀರಿದೆ ಮತ್ತು ವಿವರಣೆಗೆ ಸಿಲುಕದು. ಆದರೆ ಅದೇ ಅತ್ಯುನ್ನತ ಗುರಿ. ಮಹಾತ್ಮರು ಆ ಸ್ಥಳವನ್ನು ಸೇರಬಯಸುತ್ತಾರೆ. ಮಹಾತ್ಮರಿಗೆ ಸಾಕ್ಷಾತ್ಕಾರ ಪಡೆದ ಭಕ್ತರಿಂದ ಅಲೌಕಿಕ ಸಂದೇಶಗಳು ಬರುತ್ತವೆ. ಇದರಿಂದ ಅವರು ಕ್ರಮೇಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಪೂರ್ವಕ ಸೇವೆಯನ್ನು ಬೆಳೆಸಿಕೊಳ್ಳುತ್ತಾರೆ. ಅವರು ಅಲೌಕಿಕ ಸೇವೆಯಲ್ಲಿ ಎಷ್ಟು ತನ್ಮಯರಾಗುತ್ತಾರೆ ಎಂದರೆ ಯಾವುದೇ ಐಹಿಕ ಲೋಕಕ್ಕೆ ಏರಲು ಅವರು ಬಯಸುವುದಿಲ್ಲ ಮತ್ತು ಯಾವುದೇ ಆಧ್ಯಾತ್ಮಿಕ ಲೋಕಕ್ಕೆ ಹೋಗಬಯಸುವುದಿಲ್ಲ. ಅವರಿಗೆ ಕೃಷ್ಣ ಮತ್ತು ಕೃಷ್ಣನ ಸಹವಾಸ ಇಷ್ಟೇ ಬೇಕು; ಬೇರೇನೂ ಬೇಡ. ಇದು ಬದುಕಿನ ಪರಿಪೂರ್ಣತೆಯ ಪರಮಾವಧಿ. ಈ ಶ್ಲೋಕವು ಪರಮ ಪ್ರಭು ಕೃಷ್ಣನ ಸಾಕಾರವಾದಿ ಭಕ್ತರನ್ನು ಖಚಿತವಾಗಿ ಪ್ರಸ್ತಾಪಿಸುತ್ತದೆ. ಕೃಷ್ಣಪ್ರಜ್ಞೆಯಲ್ಲಿನ ಈ ಭಕ್ತರು ಬದುಕಿನ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುತ್ತಾರೆ — ಎಂದರೆ ಅವರು ಮಹಾತ್ಮರು.

## ಶ್ಲೋಕ - 16

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋऽರ್ಜುನ |**
**ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ||೧೬||**

**ಆ ಬ್ರಹ್ಮಭುವನಾತ್**—ಬ್ರಹ್ಮಲೋಕದವರೆಗೆ; **ಲೋಕಾಃ**—ಲೋಕಗಳು; **ಪುನಃ**—ಮತ್ತೆ; **ಆವರ್ತಿನಃ**—ಹಿಂದಿರುಗುವಂತಹವು; **ಅರ್ಜುನ**—ಅರ್ಜುನನೇ; **ಮಾಮ್**—ನನ್ನನ್ನು; **ಉಪೇತ್ಯ**—ತಲಪಿ; **ತು**—ಆದರೆ; **ಕೌನ್ತೇಯ**—ಕುಂತೀಪುತ್ರನೇ; **ಪುನಃ ಜನ್ಮ**—ಮರುಹುಟ್ಟು; **ನ ವಿದ್ಯತೇ**—ಎಂದಿಗೂ ಇರುವುದಿಲ್ಲ.

## ಅನುವಾದ

**ಐಹಿಕ ಜಗತ್ತಿನ ಅತ್ಯುನ್ನತ ಲೋಕದಿಂದ ಅತಿ ಕೆಳಗಿನ ಲೋಕದವರೆಗೆ ಎಲ್ಲ ಲೋಕಗಳೂ ದುಃಖದ ಆವಾಸಗಳೇ. ಇವುಗಳಲ್ಲಿ ಜನನ ಮರಣಗಳು ಮತ್ತೆ ಮತ್ತೆ ಆಗುತ್ತವೆ. ಆದರೆ ಕುಂತಿಯ ಪುತ್ರನಾದ ಅರ್ಜುನನೆ, ನನ್ನ ನಿವಾಸವನ್ನು ಸೇರಿದವನಿಗೆ ಪುನರ್ಜನ್ಮವಿಲ್ಲ.**

## ಭಾವಾರ್ಥ

ಕರ್ಮಯೋಗಿಗಳು, ಜ್ಞಾನಯೋಗಿಗಳು, ಹಠಯೋಗಿಗಳು ಮೊದಲಾದ ಎಲ್ಲ ಬಗೆಯ ಯೋಗಿಗಳು ಕೃಷ್ಣನ ದಿವ್ಯ ಆವಾಸಕ್ಕೆ ಹೋಗಿ ಮತ್ತೆ ಬರದಂತೆ ಆಗಬೇಕಾದರೆ ಕಡೆಗೆ ಅವರು ಭಕ್ತಿಯೋಗದಲ್ಲಿ ಅಥವಾ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಯ ಪರಿಪೂರ್ಣತೆಯನ್ನು ಪಡೆದುಕೊಳ್ಳಬೇಕಾಗುತ್ತದೆ. ದೇವತೆಗಳ ಲೋಕಗಳು ಅತ್ಯುನ್ನತ ಐಹಿಕ ಲೋಕಗಳು; ಅವುಗಳನ್ನು ತಲಪಿದವರು ಮತ್ತೆ ಮತ್ತೆ ಹುಟ್ಟು ಸಾವುಗಳನ್ನು ಅನುಭವಿಸಬೇಕಾಗುತ್ತದೆ. ಭೂಲೋಕದ ಜನರು ಮೇಲಿನ ಲೋಕಗಳಿಗೆ ಏರಿದಂತೆ ಬ್ರಹ್ಮಲೋಕ, ಚಂದ್ರಲೋಕ ಮತ್ತು ಇಂದ್ರಲೋಕಗಳಂತಹ ಮೇಲಿನ ಲೋಕಗಳಲ್ಲಿರುವವರು ಭೂಮಿಗೆ ಬೀಳುತ್ತಾರೆ. ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ ಪಂಚಾಗ್ನಿವಿದ್ಯಾ ಎನ್ನುವ ಯಜ್ಞವು ಮನುಷ್ಯನು ಬ್ರಹ್ಮಲೋಕವನ್ನು ತಲಪುವುದನ್ನು ಸಾಧ್ಯಮಾಡುತ್ತದೆ; ಆದರೆ ಬ್ರಹ್ಮಲೋಕದಲ್ಲಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳದಿದ್ದರೆ ಅವನು ಮತ್ತೆ ಭೂಮಿಗೆ ಹಿಂದಿರುಗಬೇಕಾಗುತ್ತದೆ. ಮೇಲಿನ ಲೋಕಗಳಲ್ಲಿ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿದವರನ್ನು ಕ್ರಮೇಣ ಇನ್ನೂ ಮೇಲಿನ ಲೋಕಗಳಿಗೆ ಏರಿಸಲಾಗುವುದು. ವಿಶ್ವಪ್ರಳಯದ ಕಾಲದಲ್ಲಿ ಅವರನ್ನು ನಿತ್ಯ ಆಧ್ಯಾತ್ಮಿಕ ರಾಜ್ಯಕ್ಕೆ ವರ್ಗಾಯಿಸಲಾಗುವುದು. ಭಗವದ್ಗೀತೆಯ ಮೇಲಿನ ಭಾಷ್ಯದಲ್ಲಿ ಶ್ರೀಧರಸ್ವಾಮಿಗಳು ಈ ಶ್ಲೋಕವನ್ನು ಉಲ್ಲೇಖಿಸುತ್ತಾರೆ —

**ಬ್ರಹ್ಮಣಾ ಸಹ ತೇ ಸರ್ವೇ ಸಮ್ಪ್ರಾಪ್ತೇ ಪ್ರತಿಸಞ್ಚರೇ ।**
**ಪರಸ್ಯಾನ್ತೇ ಕೃತಾತ್ಮಾನಃ ಪ್ರವಿಶನ್ತಿ ಪರಂ ಪದಮ್ ॥**

"ಈ ಐಹಿಕ ಜಗತ್ತು ನಾಶವಾಗುವಾಗ ಕೃಷ್ಣಪ್ರಜ್ಞೆಯಲ್ಲಿ ಸದಾ ನಿರತರಾದ ಬ್ರಹ್ಮ ಮತ್ತು ಅವನ ಭಕ್ತರನ್ನು ಅವರವರ ಬಯಕೆಗಳಿಗನುಗುಣವಾಗಿ ಆಧ್ಯಾತ್ಮಿಕ ವಿಶ್ವಕ್ಕೆ ಮತ್ತು ನಿರ್ದಿಷ್ಟ ಆಧ್ಯಾತ್ಮಿಕ ಲೋಕಗಳಿಗೆ ವರ್ಗಾಯಿಸಲಾಗುವುದು."

## ಶ್ಲೋಕ - 17

**ಸಹಸ್ರಯುಗಪರ್ಯನ್ತಮಹರ್ಯದ್ ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾನ್ತಾಂ ತೇಽಹೋರಾತ್ರವಿದೋ ಜನಾಃ ॥೧೭॥**

**ಸಹಸ್ರ**—ಒಂದು ಸಾವಿರ; **ಯುಗ**—ಯುಗಗಳು; **ಪರ್ಯನ್ತಮ್**—ಸೇರಿದಂತೆ; **ಅಹಃ**—ಹಗಲು; **ಯತ್**—ಯಾವುದು; **ಬ್ರಹ್ಮಣಃ**—ಬ್ರಹ್ಮನ; **ವಿದುಃ**—ಎಂದು ತಿಳಿಯುತ್ತಾರೆ; **ರಾತ್ರಿಮ್**— ರಾತ್ರಿಯು; **ಯುಗ**—ಯುಗಗಳು; **ಸಹಸ್ರಾನ್ತಾಮ್**—ಅದೇ ಪ್ರಕಾರ ಒಂದು ಸಾವಿರದ ಅನಂತರ ಮುಗಿಯುವ; **ತೇ**—ಅವರು; **ಅಹಃ ರಾತ್ರ**—ಹಗಲು ಮತ್ತು ರಾತ್ರಿಗಳನ್ನು; **ವಿದಃ**—ತಿಳಿಯುವ; **ಜನಾಃ**—ಜನರು.

## ಅನುವಾದ

**ಮನುಷ್ಯರ ಲೆಕ್ಕದ ಪ್ರಕಾರ ಒಂದು ಸಾವಿರ ಯುಗಗಳು ಸೇರಿ ಬ್ರಹ್ಮನ ಒಂದು ದಿನ. ಅವನ ರಾತ್ರಿಗೂ ಇಷ್ಟೇ ಅವಧಿ.**

## ಭಾವಾರ್ಥ

ಐಹಿಕ ವಿಶ್ವದ ಅವಧಿಯು ಮಿತವಾದದ್ದು. ಅದು ಕಲ್ಪಗಳ ಚಕ್ರಗಳಲ್ಲಿ ಅಭಿವ್ಯಕ್ತವಾಗುತ್ತದೆ. ಒಂದು ಕಲ್ಪವೆಂದರೆ ಬ್ರಹ್ಮನ ಒಂದು ಹಗಲು; ಬ್ರಹ್ಮನ ಒಂದು ಹಗಲೆಂದರೆ ಸತ್ಯ, ತ್ರೇತಾ, ದ್ವಾಪರ ಮತ್ತು ಕಲಿ ಎನ್ನುವ ನಾಲ್ಕುಯುಗಗಳ ಒಂದು ಸಾವಿರ ಚಕ್ರಗಳು. ಪುಣ್ಯ, ಜ್ಞಾನ ಮತ್ತು ಧರ್ಮಗಳು ಸತ್ಯಯುಗದ ಲಕ್ಷಣಗಳು; ಆಗ ಅಜ್ಞಾನ ಮತ್ತು ಪಾಪ ಇರುವುದಿಲ್ಲ . ಈ ಯುಗದ ಅವಧಿ 17,28,000 ವರ್ಷಗಳು. ತ್ರೇತಾಯುಗದಲ್ಲಿ ಪಾಪವು ಕಾಲಿಡುತ್ತದೆ; ಈ ಯುಗದ ಅವಧಿ 12,96,000 ವರ್ಷಗಳು. ದ್ವಾಪರ ಯುಗದಲ್ಲಿ ಪುಣ್ಯ ಮತ್ತು ಧರ್ಮಗಳು ಇನ್ನೂ ಕ್ಷೀಣವಾಗುತ್ತವೆ; ಪಾಪವು ಹೆಚ್ಚುತ್ತದೆ; ಈ ಯುಗದ ಅವಧಿ 8,64,000 ವರ್ಷಗಳು. ಕಡೆಯದಾಗಿ (ನಾವು ಕಳೆದ 5000 ವರ್ಷಗಳಿಂದ ಅನುಭವಿಸುತ್ತಿರುವ) ಕಲಿಯುಗದಲ್ಲಿ ಪುಣ್ಯವು ಸ್ವಲ್ಪ ಹೆಚ್ಚು ಕಡಮೆ ಇಲ್ಲವೇ ಇಲ್ಲ ಎನ್ನುವಂತಾಗಿ ಕಲಹ, ಅಜ್ಞಾನ, ಅಧರ್ಮ ಮತ್ತು ಪಾಪಗಳು ಸಮೃದ್ಧವಾಗುತ್ತವೆ; ಈ ಯುಗದ ಅವಧಿ 4,32,000 ವರ್ಷಗಳು. ಕಲಿಯುಗದಲ್ಲಿ ಪಾಪವು ಎಷ್ಟುರಮಟ್ಟಿಗೆ ಹೆಚ್ಚುತ್ತದೆ ಎಂದರೆ ಈ ಯುಗದ ಅಂತ್ಯದಲ್ಲಿ ಪರಮ ಪ್ರಭುವೇ ಕಲ್ಕಿಯ ಅವತಾರವಾಗಿ ಕಾಣಿಸಿಕೊಳ್ಳುತ್ತಾನೆ. ರಾಕ್ಷಸರನ್ನು ಕೊಲ್ಲುತ್ತಾನೆ. ತನ್ನ ಭಕ್ತರನ್ನು ರಕ್ಷಿಸುತ್ತಾನೆ ಮತ್ತು ಇನ್ನೊಂದು ಸತ್ಯ ಯುಗವನ್ನು ಪ್ರಾರಂಭಿಸುತ್ತಾನೆ. ಆಗ ಪ್ರಕ್ರಿಯೆಯು ಮತ್ತೆ ಪ್ರಾರಂಭವಾಗುತ್ತದೆ. ಈ ನಾಲ್ಕು ಯುಗಗಳು ಒಂದು ಸಾವಿರ ಬಾರಿ ಆವರ್ತವಾದರೆ ಬ್ರಹ್ಮನ ಒಂದು ಹಗಲು. ಅವನ ಒಂದು ರಾತ್ರಿಯೂ ಇಷ್ಟೇ ದೀರ್ಘವಾದದ್ದು. ಬ್ರಹ್ಮನು ಇಂತಹ ಒಂದು ನೂರು ವರ್ಷಗಳ ಕಾಲ ಬದುಕಿದ್ದು ಅನಂತರ ಸಾಯುತ್ತಾನೆ. ಈ 'ಒಂದು ನೂರು ವರ್ಷಗಳೆಂದರೆ' ಭೂಲೋಕದ ಲೆಕ್ಕಾಚಾರದಂತೆ 311 ಟ್ರಿಲಿಯನ್ ಮತ್ತು 40 ಬಿಲಿಯನ್ ಭೂಮಿಯ ವರ್ಷಗಳಷ್ಟಾಗುತ್ತದೆ. ಈ ಲೆಕ್ಕಾಚಾರದ ಪ್ರಕಾರ ಬ್ರಹ್ಮನ ಆಯುಷ್ಯವು ಪರಮಾಶ್ಚರ್ಯಕರವೂ ಅಂತ್ಯವಿಲ್ಲದ್ದೂ ಆಗಿ ತೋರುತ್ತದೆ; ಆದರೆ ಅನಂತತೆಯ ದೃಷ್ಟಿಯಿಂದ ಅದು ಮಿಂಚು ಹೊಳೆಯುವಷ್ಟು ಕಾಲದಷ್ಟು ಹ್ರಸ್ವ. ಕಾರಣಸಾಗರದಲ್ಲಿ ಅಸಂಖ್ಯಾತ ಬ್ರಹ್ಮರಿದ್ದಾರೆ. ಅಟ್ಲಾಂಟಿಕ್ ಸಾಗರದಲ್ಲಿ ಗುಳ್ಳೆಗಳು ಮೇಲೆದ್ದು ಮರೆಯಾಗುವಂತೆ ಇವರೂ ಮೇಲೆದ್ದು ಮರೆಯಾಗುತ್ತಾರೆ. ಬ್ರಹ್ಮನೂ ಅವನ ಸೃಷ್ಟಿಯೂ ಐಹಿಕ ವಿಶ್ವದ ಭಾಗಗಳು. ಆದುದರಿಂದ ಅವರು ನಿರಂತರ ಪರಿವರ್ತನೆಯಲ್ಲಿರುತ್ತಾರೆ.

ಐಹಿಕ ವಿಶ್ವದಲ್ಲಿ ಬ್ರಹ್ಮನಿಗೂ ಸಹ ಹುಟ್ಟು, ಮುಪ್ಪು, ರೋಗ ಮತ್ತು ಸಾವುಗಳ ಪ್ರಕ್ರಿಯೆಯಿಂದ ಬಿಡುಗಡೆಯಿಲ್ಲ. ಆದರೆ ಈ ವಿಶ್ವದ ನಿರ್ವಹಣೆಯಲ್ಲಿ ಅವನು ನೇರವಾಗಿ ಪರಮ ಪ್ರಭುವಿನ ಸೇವೆಯಲ್ಲಿ ನಿರತನಾಗಿರುತ್ತಾನೆ — ಆದುದರಿಂದ ಅವನಿಗೆ ಕೂಡಲೆ ಮುಕ್ತಿ ದೊರೆಯುತ್ತದೆ. ಉನ್ನತ ಸನ್ಯಾಸಿಗಳನ್ನು ಬ್ರಹ್ಮನ ವಿಶಿಷ್ಟ ಲೋಕವಾದ ಬ್ರಹ್ಮಲೋಕಕ್ಕೆ ಮೇಲೇರಿಸಲಾಗುತ್ತದೆ; ಐಹಿಕ ವಿಶ್ವದಲ್ಲಿ ಬ್ರಹ್ಮಲೋಕವೇ ಅತ್ಯುನ್ನತ ಲೋಕ ಮತ್ತು ಎಲ್ಲ ಸ್ವರ್ಗಲೋಕಗಳ ವ್ಯೂಹ ನಾಶವಾದಾಗಲೂ ಬ್ರಹ್ಮಲೋಕವು ಉಳಿಯುತ್ತದೆ. ಆದರೆ ಭೌತಿಕ ಪ್ರಕೃತಿಯ ನಿಯಮಕ್ಕನುಗುಣವಾಗಿ ಕಾಲಕ್ರಮದಲ್ಲಿ ಬ್ರಹ್ಮನೂ, ಬ್ರಹ್ಮಲೋಕದ ಎಲ್ಲ ನಿವಾಸಿಗಳೂ ಸಾವಿನ ವಶವಾಗುತ್ತಾರೆ.

## ಶ್ಲೋಕ - 18

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥೧೮॥**

**ಅವ್ಯಕ್ತಾತ್**—ಅವ್ಯಕ್ತದಿಂದ; **ವ್ಯಕ್ತಯಃ**—ಜೀವಿಗಳು; **ಸರ್ವಾಃ**—ಎಲ್ಲ; **ಪ್ರಭವನ್ತಿ**—ವ್ಯಕ್ತವಾಗುತ್ತಾರೆ; **ಅಹಃ ಆಗಮೇ**—ಹಗಲಿನ ಪ್ರಾರಂಭದಲ್ಲಿ; **ರಾತ್ರಿ ಆಗಮೇ**—ರಾತ್ರಿಯಾಗುವಾಗ; **ಪ್ರಲೀಯನ್ತೇ**—ನಾಶವಾಗುತ್ತಾರೆ; **ತತ್ರ**—ಅದರಲ್ಲಿ; **ಏವ**—ಖಂಡಿತವಾಗಿಯೂ; **ಅವ್ಯಕ್ತ**—ಅವ್ಯಕ್ತ; **ಸಂಜ್ಞಕೇ**—ಎಂದು ಕರೆಯಲಾಗಿರುವುದರಲ್ಲಿ.

### ಅನುವಾದ

**ಬ್ರಹ್ಮನ ಹಗಲಿನ ಪ್ರಾರಂಭದಲ್ಲಿ ಎಲ್ಲ ಜೀವಿಗಳು ಅವ್ಯಕ್ತಸ್ಥಿತಿಯಿಂದ ಅಭಿವ್ಯಕ್ತಿ ಪಡೆಯುತ್ತಾರೆ; ಅನಂತರ ರಾತ್ರಿಯಾದಾಗ ಅವರು ಮತ್ತೆ ಅವ್ಯಕ್ತದಲ್ಲಿ ಲೀನವಾಗುತ್ತಾರೆ.**

## ಶ್ಲೋಕ - 19

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥೧೯॥**

**ಭೂತ ಗ್ರಾಮಃ**—ಎಲ್ಲ ಜೀವಿಗಳ ಸಮುದಾಯವು; **ಸಃ**—ಅ; **ಏವ**—ಖಂಡಿತವಾಗಿಯೂ; **ಅಯಮ್**—ಈ; **ಭೂತ್ವಾ ಭೂತ್ವಾ**—ಪುನಃ ಪುನಃ ಜನಿಸಿ; **ಪ್ರಲೀಯತೇ**—ನಾಶವಾಗುತ್ತದೆ; **ರಾತ್ರಿ**—ರಾತ್ರಿಯ; **ಆಗಮೇ**—ಆಗಮನದಲ್ಲಿ; **ಅವಶಃ**—ತಾನೇ ತಾನಾಗಿ; **ಪಾರ್ಥ**—ಪೃಥೆಯ ಪುತ್ರನೇ; **ಪ್ರಭವತಿ**— ವ್ಯಕ್ತವಾಗುತ್ತದೆ; **ಅಹಃ**—ಹಗಲಿನ ಸಮಯದ; **ಆಗಮೇ**—ಬರುವಿಕೆಯಲ್ಲಿ.

### ಅನುವಾದ

**ಮತ್ತೆ ಮತ್ತೆ ಬ್ರಹ್ಮನಿಗೆ ಹಗಲಾದಾಗ ಈ ಎಲ್ಲ ಜೀವಿಗಳು ಮತ್ತೆ ಹುಟ್ಟುತ್ತವೆ; ಬ್ರಹ್ಮನಿಗೆ ರಾತ್ರಿಯಾದಾಗ, ಅವೆಲ್ಲ ನಿಸ್ಸಹಾಯಕವಾಗಿ ನಾಶವಾಗುತ್ತವೆ.**

### ಭಾವಾರ್ಥ

ಈ ಐಹಿಕ ಜಗತ್ತಿನೊಳಗೆ ಉಳಿಯಲು ಪ್ರಯತ್ನಿಸುವ ಹೆಚ್ಚು ಬುದ್ಧಿಯಿಲ್ಲದವರು ಮೇಲಿನ ಲೋಕಗಳಿಗೆ ಏರಬಹುದು. ಆದರೆ ಮತ್ತೆ ಈ ಭೂಲೋಕಕ್ಕೆ ಬರಲೇಬೇಕು. ಬ್ರಹ್ಮನ ಹಗಲಿನ ಕಾಲದಲ್ಲಿ ಈ ಐಹಿಕ ಜಗತ್ತಿನೊಳಗೆ ಮೇಲಿನ ಲೋಕಗಳಲ್ಲಿ ಮತ್ತು ಕೆಳಗಿನ ಲೋಕಗಳಲ್ಲಿ ಅವರು ತಮ್ಮ ಚಟುವಟಿಕೆಗಳನ್ನು ಪ್ರದರ್ಶಿಸಬಹುದು; ಆದರೆ ಬ್ರಹ್ಮನಿಗೆ ರಾತ್ರಿಯಾದಾಗ ಅವರು ನಾಶವಾಗುತ್ತಾರೆ. ಹಗಲಿನಲ್ಲಿ ಐಹಿಕ ಚಟುವಟಿಕೆಗಳನ್ನು ನಡೆಸಲು ಅವರಿಗೆ ಹಲವಾರು ಶರೀರಗಳು ಲಭಿಸುತ್ತವೆ. ರಾತ್ರಿಯಲ್ಲಿ ಅವರಿಗೆ ದೇಹಗಳಿರುವುದಿಲ್ಲ; ಅವರು ವಿಷ್ಣುವಿನ ದೇಹದಲ್ಲಿ ಅಡಕವಾಗಿಯೇ ಉಳಿದಿರುತ್ತಾರೆ. ಮತ್ತೆ ಬ್ರಹ್ಮನ ಹಗಲು

ಬಂದಾಗ ಅವರು ಪ್ರಕಟವಾಗುತ್ತಾರೆ. **ಭೂತ್ವಾ ಭೂತ್ವಾ ಪ್ರಲೀಯತೆ** — ಹಗಲಿನಲ್ಲಿ ಅವರು ಕಾಣಿಸಿಕೊಂಡು ರಾತ್ರಿ ಮತ್ತೆ ನಾಶವಾಗುತ್ತಾರೆ. ಕಟ್ಟಕಡೆಗೆ ಬ್ರಹ್ಮನ ಆಯುಸ್ಸು ಮುಗಿದಾಗ ಅವರೆಲ್ಲ ನಾಶವಾಗುತ್ತಾರೆ ಮತ್ತು ಕೋಟ್ಯಂತರ ವರ್ಷಗಳ ಕಾಲ ಕಾಣಿಸಿಕೊಳ್ಳದೆ ಇರುತ್ತಾರೆ. ಇನ್ನೊಂದು ಯುಗದಲ್ಲಿ ಬ್ರಹ್ಮನು ಮತ್ತೆ ಹುಟ್ಟಿದಾಗ ಅವರು ಮತ್ತೆ ಪ್ರಕಟವಾಗುತ್ತಾರೆ. ಹೀಗೆ ಅವರು ಐಹಿಕ ಜಗತ್ತಿನ ಮಾಂತ್ರಿಕತೆಗೆ ಸಿಕ್ಕಿ ಬೀಳುತ್ತಾರೆ. ಆದರೆ ಕೃಷ್ಣಪ್ರಜ್ಞೆಯನ್ನು ಸ್ವೀಕರಿಸುವ ಬುದ್ಧಿವಂತರು, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂದು ಸಂಕೀರ್ತನ ಮಾಡುತ್ತ ಮಾನವ ಜೀವನವನ್ನು ಪ್ರಭುವಿನ ಭಕ್ತಿಸೇವೆಯಲ್ಲಿ ಸಂಪೂರ್ಣವಾಗಿ ಬಳಸುತ್ತಾರೆ. ಅವರು ಈ ಜನ್ಮದಲ್ಲಿಯೇ ಕೃಷ್ಣನ ದಿವ್ಯ ಲೋಕಕ್ಕೆ ಸಾಗಿಹೋಗುತ್ತಾರೆ ಮತ್ತು ಪುನರ್ಜನ್ಮಕ್ಕೆ ಒಳಗಾಗದೆ ಅಲ್ಲಿ ನಿತ್ಯಾನಂದದಲ್ಲಿ ಇರುತ್ತಾರೆ.

## ಶ್ಲೋಕ - 20

**ಪರಸ್ತಸ್ಮಾತ್ತು ಭಾವೋऽನ್ಯೋऽವ್ಯಕ್ತೋऽವ್ಯಕ್ತಾತ್ಸನಾತನಃ |**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ||೨೦||**

**ಪರಃ**—ಮೀರಿದ; **ತಸ್ಮಾತ್**—ಅದನ್ನು; **ತು**—ಆದರೆ; **ಭಾವಃ**—ಪ್ರಕೃತಿಯು; **ಅನ್ಯಃ**—ಇನ್ನೊಂದು; **ಅವ್ಯಕ್ತಃ**—ಅವ್ಯಕ್ತವಾದ; **ಅವ್ಯಕ್ತಾತ್**—ಅವ್ಯಕ್ತವಾದುದಕ್ಕಿಂತ; **ಸನಾತನಃ**—ಶಾಶ್ವತವು; **ಯಃ ಸಃ**—ಯಾವ ಅದು; **ಸರ್ವೇಷು**—ಎಲ್ಲ; **ಭೂತೇಷು**—ಪ್ರಕಟವಾದವುಗಳಲ್ಲಿ; **ನಶ್ಯತ್ಸು**—ನಾಶವಾಗುವ; **ನ ವಿನಶ್ಯತಿ**—ನಾಶವಾಗುವುದಿಲ್ಲ.

## ಅನುವಾದ

**ಆದರೆ ಇನ್ನೊಂದು ಅವ್ಯಕ್ತವಾದ ಪ್ರಕೃತಿಯಿದೆ; ಅದು ನಿತ್ಯವಾದದ್ದು ಮತ್ತು ಈ ವ್ಯಕ್ತ ಮತ್ತು ಅವ್ಯಕ್ತ ಜಡವಸ್ತುವನ್ನು ಮೀರಿದ್ದು. ಅದು ಪರಮೋನ್ನತವಾದದ್ದು ಮತ್ತು ಎಂದೂ ನಾಶವಾಗುವುದಿಲ್ಲ. ಈ ಜಗತ್ತಿನಲ್ಲಿರುವ ಎಲ್ಲವೂ ನಾಶವಾದಾಗ ಆ ಭಾಗವು ಇದ್ದಂತೆಯೇ ಇರುತ್ತದೆ.**

## ಭಾವಾರ್ಥ

ಕೃಷ್ಣನ ಶ್ರೇಷ್ಠ ಆಧ್ಯಾತ್ಮಿಕ ಶಕ್ತಿಯು ದಿವ್ಯವಾದದ್ದು ಮತ್ತು ಶಾಶ್ವತವಾದದ್ದು. ಐಹಿಕ ಪ್ರಕೃತಿಯು ವ್ಯಕ್ತವಾದದ್ದು ಮತ್ತು ಬ್ರಹ್ಮನ ಹಗಲುರಾತ್ರಿಗಳಲ್ಲಿ ನಾಶವಾಗತಕ್ಕದ್ದು; ಆದರೆ ಕೃಷ್ಣನ ಶ್ರೇಷ್ಠ ಶಕ್ತಿಯು ಗುಣದಲ್ಲಿ ಐಹಿಕ ಪ್ರಕೃತಿಗೆ ಸಂಪೂರ್ಣವಾಗಿ ವಿರುದ್ಧವಾದದ್ದು. ಶ್ರೇಷ್ಠ ಮತ್ತು ಕೆಳಮಟ್ಟದ ಪ್ರಕೃತಿಗಳನ್ನು ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ.

## ಶ್ಲೋಕ - 21

**ಅವ್ಯಕ್ತೋऽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ |**
**ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ||೨೧||**

**ಅವ್ಯಕ್ತಃ**—ಅವ್ಯಕ್ತವು; **ಅಕ್ಷರಃ**—ಅಚ್ಯುತವು; **ಇತಿ**—ಎಂದು; **ಉಕ್ತಃ**—ಹೇಳಲ್ಪಟ್ಟಿದೆ; **ತಮ್**—ಅದನ್ನು; **ಆಹುಃ**—ತಿಳಿಯಲಾಗಿದೆ; **ಪರಮಾಮ್**—ಅಂತಿಮವಾದ; **ಗತಿಮ್**—ಗಮ್ಯಸ್ಥಾನವೆಂದು; **ಯಮ್**—ಯಾವುದನ್ನು; **ಪ್ರಾಪ್ಯ**—ಹೊಂದಿ; **ನ ನಿವರ್ತನ್ತೇ**—ಹಿಂದಿರುಗುವುದಿಲ್ಲವೋ; **ತತ್**—ಅದು; **ಧಾಮ**—ವಾಸಸ್ಥಾನವು; **ಪರಮಮ್**—ಪರಮೋನ್ನತವಾದ; **ಮಮ**—ನನ್ನ.

## ಅನುವಾದ

**ಯಾವುದನ್ನು ವೇದಾಂತಿಗಳು ಅವ್ಯಕ್ತ ಮತ್ತು ಅಕ್ಷರ (ಚ್ಯುತಿ ರಹಿತ) ಎಂದು ವರ್ಣಿಸುತ್ತಾರೋ, ಯಾವುದನ್ನು ಪರಮಗತಿ ಎಂದು ತಿಳಿಯುತ್ತಾರೋ, ಯಾವ ಸ್ಥಾನವನ್ನು ಒಮ್ಮೆ ಸೇರಿದರೆ ಮನುಷ್ಯನು ಎಂದೂ ಹಿಂದಿರುಗುವುದಿಲ್ಲವೋ ಅದು ನನ್ನ ಪರಮ ನಿವಾಸ.**

## ಭಾವಾರ್ಥ

ಬ್ರಹ್ಮಸಂಹಿತೆಯಲ್ಲಿ ದೇವೋತ್ತಮ ಪರಮ ಪುರುಷನಾದ ಕೃಷ್ಣನ ಪರಮ ನಿವಾಸವನ್ನು **ಚಿಂತಾಮಣಿಧಾಮ** ಎಂದು ವರ್ಣಿಸಿದೆ; ಹೀಗೆಂದರೆ ಎಲ್ಲ ಇಷ್ಟಾರ್ಥಗಳೂ ಕೈಗೂಡುವ ಸ್ಥಳ ಎಂದು ಅರ್ಥ. ಗೋಲೋಕ ವೃಂದಾವನ ಎಂಬ ಹೆಸರಿನ ಶ್ರೀಕೃಷ್ಣನ ಲೋಕವು ಚಿಂತಾಮಣಿಯಿಂದ ನಿರ್ಮಿಸಿದ ಅರಮನೆಗಳಿಂದ ತುಂಬಿಹೋಗಿದೆ. ಕಲ್ಪವೃಕ್ಷಗಳೆಂಬ ಮರಗಳು ಬಯಸಿದ ಭಕ್ಷ್ಯವನ್ನು ನೀಡುತ್ತವೆ. **ಸುರಭಿ** ಹಸುಗಳು ಅಪರಿಮಿತವಾಗಿ ಹಾಲನ್ನು ಕೊಡುತ್ತವೆ. ಈ ನಿವಾಸದಲ್ಲಿ ಲಕ್ಷಾಂತರ ಮಂದಿ ಲಕ್ಷ್ಮಿಯರು ಭಗವಂತನನ್ನು ಸೇವಿಸುತ್ತಾರೆ; ಅವನಿಗೆ ಗೋವಿಂದನೆಂದು ಹೆಸರು. ಅವನೇ ಆದಿಪ್ರಭು; ಎಲ್ಲ ಕಾರಣಗಳ ಕಾರಣನು. ಪ್ರಭುವು ತನ್ನ ಕೊಳಲನ್ನು (**ವೇಣುಂ ಕ್ವಣನ್ತಮ್**) ನುಡಿಸುವ ಅಭ್ಯಾಸ ಉಂಟು. ಅವನ ದಿವ್ಯ ರೂಪವು ಎಲ್ಲ ಲೋಕಗಳಲ್ಲಿ ಅತ್ಯಂತ ಮೋಹಕವಾದದ್ದು — ಅವನ ಕಣ್ಣುಗಳು ತಾವರೆಯ ದಳಗಳಂತಿವೆ. ಅವನ ದೇಹದ ಬಣ್ಣವು ಮೇಘಗಳ ವರ್ಣದಂತಿದೆ. ಸಹಸ್ರಾರು ಮನ್ಮಥರ ರೂಪವನ್ನು ಮೀರಿಸುವ ಸೌಂದರ್ಯ ಅವನದು. ಆತನು ಕೇಸರಿ ಬಣ್ಣದ ಉಡುಪನ್ನೂ ಕೊರಳಿನಲ್ಲಿ ಹಾರವನ್ನೂ ಕೂದಲಲ್ಲಿ ನವಿಲುಗರಿಯನ್ನೂ ಧರಿಸಿರುತ್ತಾನೆ. ಗೋಲೋಕ ವೃಂದಾವನವು ಆಧ್ಯಾತ್ಮಿಕ ಜಗತ್ತಿನಲ್ಲಿ ಪರಮೋಚ್ಚ ಲೋಕ; ಭಗವದ್ಗೀತೆಯಲ್ಲಿ ಕೃಷ್ಣನು ತನ್ನ ಲೋಕದ ಒಂದು ಸೂಚನೆಯನ್ನಷ್ಟೇ ನೀಡಿದ್ದಾನೆ. ಬ್ರಹ್ಮಸಂಹಿತೆಯಲ್ಲಿ ವಿವರವಾದ ವರ್ಣನೆ ಇದೆ. ವೈದಿಕ ಸಾಹಿತ್ಯವು (ಕಠ ಉಪನಿಷತ್ತು 1.3.11), ದೇವೋತ್ತಮನ ನಿವಾಸವನ್ನು ಮೀರಿಸಿದ್ದು ಯಾವುದೂ ಇಲ್ಲ, ಆ ನಿವಾಸವು (ಮನುಷ್ಯನ ಆತ್ಮದ) ಅಂತಿಮ ಗುರಿ (**ಪುರುಷಾನ್ ನ ಪರಂ ಕಿಞ್ಚಿತ್ ಸಾ ಕಾಷ್ಠಾ ಪರಮಾ ಗತಿಃ**) ಎಂದು ಹೇಳುತ್ತದೆ. ಅದನ್ನು ಸೇರಿದವನು ಮತ್ತೆ ಐಹಿಕ ಜಗತ್ತಿಗೆ ಹಿಂದಿರುಗುವುದಿಲ್ಲ. ಕೃಷ್ಣನ ಮತ್ತು ಕೃಷ್ಣನ ಪರಮ ನಿವಾಸದ ಗುಣ ಒಂದೇ, ಆದುದರಿಂದ ಅವು ಬೇರೆಬೇರೆಯಲ್ಲ. ಭೂಮಿಯಲ್ಲಿ, ದೆಹಲಿಯಿಂದ ಆಗ್ನೇಯಕ್ಕೆ ತೊಂಬತ್ತು ಮೈಲಿ ದೂರದಲ್ಲಿರುವ ವೃಂದಾವನವು ಆಧ್ಯಾತ್ಮಿಕ ಗಗನದಲ್ಲಿರುವ ಪರಮ ಗೋಲೋಕ ವೃಂದಾವನದ ಯಥಾಪ್ರತಿ. ಕೃಷ್ಣನು ಭೂಮಿಗಿಳಿದು ಬಂದಾಗ ಭಾರತದ ಮಥುರಾ ಜಿಲ್ಲೆಯಲ್ಲಿರುವ ಸುಮಾರು ಎಂಬತ್ತನಾಲ್ಕು ಚದರ ಮೈಲಿಗಳ ವೃಂದಾವನ ಎನ್ನುವ ಪ್ರದೇಶದಲ್ಲಿ ತನ್ನ ಲೀಲೆಗಳನ್ನು ಮೆರೆದನು.

## ಶ್ಲೋಕ - 22

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥೨೨॥**

**ಪುರುಷಃ**—ಪರಮ ಪುರುಷನು; **ಸಃ**—ಆ; **ಪರಃ**—ಅವನಿಗಿಂತ ದೊಡ್ಡವರಿಲ್ಲದ; **ಪಾರ್ಥ**—ಪಾರ್ಥನೇ; **ಭಕ್ತ್ಯಾ**—ಭಕ್ತಿಸೇವೆಯಿಂದ; **ಲಭ್ಯಃ**—ದೊರಕಬಲ್ಲನು; **ತು**—ಆದರೆ; **ಅನನ್ಯ ಯಾ**—ಶುದ್ಧವಾದ; ಅವಿಚಲಿತವಾದ; **ಯಸ್ಯ**—ಯಾರ; **ಅನ್ತಃಸ್ಥಾನಿ**—ಒಳಗೆ; **ಭೂತಾನಿ**—ಈ ಎಲ್ಲ ಭೌತಿಕ ಅಭಿವ್ಯಕ್ತಿಗಳೋ; **ಯೇನ**—ಯಾರಿಂದ; **ಸರ್ವಮ್**—ಎಲ್ಲವೂ; **ಇದಮ್**—ನಾವು ಕಾಣುವ ಈ; **ತತಮ್**—ವ್ಯಾಪ್ತವಾಗಿದೆಯೋ.

## ಅನುವಾದ

**ಪಾರ್ಥನೇ, ಎಲ್ಲಕ್ಕಿಂತ ಶ್ರೇಷ್ಠನಾದ ದೇವೋತ್ತಮ ಪುರುಷನನ್ನು ಪರಿಶುದ್ಧ ಭಕ್ತಿಯಿಂದ ಸೇರಬಹುದು. ತನ್ನ ನಿವಾಸದಲ್ಲಿದ್ದರೂ ಆತನು ಸರ್ವಾಂತರ್ಯಾಮಿ ಮತ್ತು ಎಲ್ಲ ವಸ್ತುಗಳೂ ಅವನ ಒಳಗೇ ಇವೆ.**

## ಭಾವಾರ್ಥ

ಸೇರಿದನಂತರ ಹಿಂದಿರುಗಿ ಬಾರದ ಪರಮಗುರಿಯು ಪರಮ ಪುರುಷನಾದ ಕೃಷ್ಣನ ನಿವಾಸವೇ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಬ್ರಹ್ಮಸಂಹಿತೆಯು ಈ ಪರಮನಿವಾಸವನ್ನು **ಆನಂದ ಚಿನ್ಮಯ ರಸ,** ಎಲ್ಲವೂ ದಿವ್ಯಾನಂದದಿಂದ ತುಂಬಿರುವ ಸ್ಥಳ ಎಂದು ವರ್ಣಿಸಿದೆ. ಅಲ್ಲಿ ಪ್ರಕಟವಾಗುವ ವೈವಿಧ್ಯವೆಲ್ಲ ದಿವ್ಯಾನಂದದ ಗುಣವನ್ನೇ ಹೊಂದಿವೆ. ಐಹಿಕವಾದದ್ದು ಅಲ್ಲಿ ಏನೂ ಇಲ್ಲ. ಆ ವೈವಿಧ್ಯವು ಸ್ವತಃ ಪರಮ ದೇವನ ಆಧ್ಯಾತ್ಮಿಕ ವಿಸ್ತರಣೆಯಾಗಿದೆ. ಏಕೆಂದರೆ ಏಳನೆಯ ಅಧ್ಯಾಯವೇ ಹೇಳಿದಂತೆ ಅಲ್ಲಿ ಅಭಿವ್ಯಕ್ತಿಯು ಸಂಪೂರ್ಣವಾಗಿ ಆಧ್ಯಾತ್ಮಿಕ ಶಕ್ತಿಯದು. ಐಹಿಕ ಜಗತ್ತಿನ ಮಟ್ಟಿಗೆ, ಪ್ರಭುವು ಸದಾ ತನ್ನ ಪರಮನಿವಾಸದಲ್ಲಿಯೇ ಇದ್ದರೂ, ತನ್ನ ಐಹಿಕ ಶಕ್ತಿಯಿಂದ ಆತನು ಸರ್ವಾಂತರ್ಯಾಮಿ. ಆದುದರಿಂದ ತನ್ನ ಆಧ್ಯಾತ್ಮಿಕ ಮತ್ತು ಐಹಿಕ ಶಕ್ತಿಗಳಿಂದ ಆತನು ಎಲ್ಲೆಲ್ಲಿಯೂ ಇದ್ದಾನೆ — ಐಹಿಕ ಜಗತ್ತು ಮತ್ತು ಆಧ್ಯಾತ್ಮಿಕ ಜಗತ್ತು ಎರಡರಲ್ಲಿಯೂ ಇದ್ದಾನೆ. **ಯಸ್ಯಾನ್ತಃಸ್ಥಾನಿ** ಎಂದರೆ ಎಲ್ಲವನ್ನೂ ಆತನು ತನ್ನೊಳಗೆ, ತನ್ನ ಆಧ್ಯಾತ್ಮಿಕ ಶಕ್ತಿ ಅಥವಾ ಐಹಿಕ ಶಕ್ತಿಯಲ್ಲಿ, ಪೋಷಿಸುತ್ತಾನೆ ಎಂದರ್ಥ. ಈ ಎರಡು ಶಕ್ತಿಗಳಿಂದಾಗಿ ಭಗವಂತನು ಎಲ್ಲೆಲ್ಲೂ ಇದ್ದಾನೆ.

ಇಲ್ಲಿ **ಭಕ್ತ್ಯಾ** ಎಂಬ ಪದವು ಸ್ಪಷ್ಟವಾಗಿ ಸೂಚಿಸುವಂತೆ, ಕೃಷ್ಣನ ಪರಮ ನಿವಾಸವನ್ನು ಅಥವಾ ಅಸಂಖ್ಯಾತ ವೈಕುಂಠ ಲೋಕಗಳನ್ನು ಭಕ್ತಿಯಿಂದ ಮಾತ್ರ ಪ್ರವೇಶಿಸಲು ಸಾಧ್ಯ. ಆ ಪರಮ ನಿವಾಸವನ್ನು ಸೇರಲು ಬೇರಾವ ಮಾರ್ಗವೂ ಇಲ್ಲ. ವೇದಗಳು ಸಹ (ಗೋಪಾಲ ತಾಪನೀ ಉಪನಿಷತ್ತು 3.2) ಪರಮನಿವಾಸವನ್ನೂ, ದೇವೋತ್ತಮ ಪರಮ ಪುರುಷನನ್ನೂ ವರ್ಣಿಸುತ್ತವೆ. **ಏಕೋ ವಶೀ ಸರ್ವಗಃ ಕೃಷ್ಣಃ.** ಆ ನಿವಾಸದಲ್ಲಿ ಒಬ್ಬನೇ ದೇವೋತ್ತಮ ಪರಮ ಪುರುಷನಿದ್ದಾನೆ; ಅವನ ಹೆಸರು ಕೃಷ್ಣ. ಅವನು ಪರಮ ದಯಾಪರ. ಭಗವಂತನು ಅಲ್ಲಿ ಏಕವಾಗಿ ವಾಸಿಸುತ್ತಿದ್ದರೂ

ತನ್ನನ್ನು ಲಕ್ಷಲಕ್ಷ ಸಂಪೂರ್ಣ ವಿಸ್ತರಣೆಗಳನ್ನಾಗಿ ವಿಸ್ತರಿಸಿಕೊಂಡಿದ್ದಾನೆ. ವೇದಗಳು ಪ್ರಭುವನ್ನು, ಒಂದೆಡೆಯೇ ಇದ್ದರೂ ಹಲವು ಬಗೆಗಳ ಫಲಪುಷ್ಪಗಳಿಂದ ತುಂಬಿ ಎಲೆಗಳನ್ನು ಬದಲಾಯಿಸುವ ವೃಕ್ಷಕ್ಕೆ ಹೋಲಿಸುತ್ತವೆ. ವೈಕುಂಠ ಲೋಕಗಳಲ್ಲಿ ಅಧ್ಯಕ್ಷರಾಗಿರುವ ಭಗವಂತನ ಸ್ವಾಂಶ ವಿಸ್ತರಣೆಗಳು ಚತುರ್ಭುಜರು ಮತ್ತು ಅವರಿಗೆ ವಿವಿಧ ಹೆಸರುಗಳಿವೆ — ಪುರುಷೋತ್ತಮ, ತ್ರಿವಿಕ್ರಮ, ಕೇಶವ, ಮಾಧವ, ಅನಿರುದ್ಧ, ಹೃಷೀಕೇಶ, ಸಂಕರ್ಷಣ, ಪ್ರದ್ಯುಮ್ನ, ಶ್ರೀಧರ, ವಾಸುದೇವ, ದಾಮೋದರ, ಜನಾರ್ದನ, ನಾರಾಯಣ, ವಾಮನ, ಪದ್ಮನಾಭ ಇತ್ಯಾದಿ.

ಪ್ರಭುವು ಯಾವಾಗಲೂ ಪರಮನಿವಾಸವಾದ ಗೋಲೋಕ ವೃಂದಾವನದಲ್ಲಿಯೇ ಇದ್ದರೂ, ಎಲ್ಲವೂ ಯೋಗ್ಯ ರೀತಿಯಲ್ಲಿ ನಡೆದುಕೊಂಡು ಹೋಗುವಂತೆ ಆತನು ಸರ್ವವ್ಯಾಪಿಯಾಗಿದ್ದಾನೆ (**ಗೋಲೋಕ ಏವ ನಿವಸತಿ ಅಖಿಲಾತ್ಮಭೂತಾಃ**) ಎಂದು ಬ್ರಹ್ಮ ಸಂಹಿತೆಯು (5.37) ದೃಢಪಡಿಸುತ್ತದೆ. ವೇದಗಳಲ್ಲಿ (ಶ್ವೇತಾಶ್ವತರ ಉಪನಿಷತ್ತು, 6.8) ಹೇಳಿರುವಂತೆ, **ಪರಾಸ್ಯ ಶಕ್ತಿರ್ ವಿವಿಧೈವ ಶ್ರೂಯತೇ / ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ** — ಆತನ ಶಕ್ತಿಗಳು ಎಷ್ಟು ವಿಸ್ತಾರ ಎಂದರೆ, ಪರಮ ಪ್ರಭು ಬಹುದೂರ ಇದ್ದರೂ, ವಿಶ್ವದ ಅಭಿವ್ಯಕ್ತಿಯು ಒಂದೇ ಒಂದು ಕುಂದೂ ಇಲ್ಲದಂತೆ ಆ ಶಕ್ತಿಗಳು ವ್ಯವಸ್ಥಿತವಾಗಿ ಎಲ್ಲವನ್ನೂ ನಿರ್ವಹಿಸುತ್ತವೆ.

## ಶ್ಲೋಕ - 23

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ |**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತವರ್ಷಭ ||೨೩||**

**ಯತ್ರ**—ಯಾವ; **ಕಾಲೇ**—ಸಮಯದಲ್ಲಿ; **ತು**—ಮತ್ತು; **ಅನಾವೃತ್ತಿಮ್**—ಹಿಂದಿರುಗದೇ ಇರುವುದನ್ನು; **ಆವೃತ್ತಿಮ್**—ಹಿಂದಿರುಗುವುದನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಯೋಗಿನಃ**—ನಾನಾ ಬಗೆಯ ಯೋಗಿಗಳು; **ಪ್ರಯಾತಾಃ**—ಹೊರಟು ಹೋದ; **ಯಾನ್ತಿ**—ಹೊಂದುತ್ತಾರೆ; **ತಮ್**—ಆ; **ಕಾಲಮ್**—ಕಾಲವನ್ನು; **ವಕ್ಷ್ಯಾಮಿ**—ವಿವರಿಸುತ್ತೇನೆ; **ಭರತ ಋಷಭ**—ಭರತ ಶ್ರೇಷ್ಠನೇ.

## ಅನುವಾದ

**ಭರತ ವಂಶದಲ್ಲಿ ಶ್ರೇಷ್ಠನಾದ ಅರ್ಜುನನೇ, ಯೋಗಿಯು ಈ ಜಗತ್ತನ್ನು ಯಾವ ಸಮಯದಲ್ಲಿ ಬಿಟ್ಟರೆ ಹಿಂದಕ್ಕೆ ಬರುತ್ತಾನೆ ಅಥವಾ ಬರುವುದಿಲ್ಲ ಎನ್ನುವುದನ್ನು ಈಗ ವಿವರಿಸುತ್ತೇನೆ.**

## ಭಾವಾರ್ಥ

ಸಂಪೂರ್ಣವಾಗಿ ಭಗವಂತನಿಗೆ ಶರಣಾಗತರಾದ ಪರಮ ಪ್ರಭುವಿನ ಪರಿಶುದ್ಧ ಭಕ್ತರು ತಮ್ಮ ದೇಹಗಳನ್ನು ಯಾವಾಗ, ಹೇಗೆ ತ್ಯಜಿಸುತ್ತೇವೆ ಎಂದು ಚಿಂತಿಸುವುದೇ ಇಲ್ಲ. ಅವರು ಎಲ್ಲವನ್ನೂ ಕೃಷ್ಣನ ಕೈಗಳಿಗೆ ಒಪ್ಪಿಸಿದ್ದಾರೆ. ಆದುದರಿಂದ ಸುಲಭವಾಗಿ, ಸಂತಸದಿಂದ ಭಗವದ್ಧಾಮಕ್ಕೆ ಹಿಂದಿರುಗುತ್ತಾರೆ. ಆದರೆ ಪರಿಶುದ್ಧ ಭಕ್ತರಾಗಿಲ್ಲದೆ **ಕರ್ಮಯೋಗ, ಜ್ಞಾನಯೋಗ** ಮತ್ತು ಹಠಯೋಗಗಳಂತಹ ಸಾಧನಗಳನ್ನು ಅವಲಂಬಿಸಿದವರು ದೇಹವನ್ನು ಸೂಕ್ತವಾದ

ಸಮಯದಲ್ಲಿ ತ್ಯಜಿಸಬೇಕು; ಆ ಮೂಲಕ ಜನನ ಮರಣಗಳ ಲೋಕಕ್ಕೆ ಹಿಂದಿರುಗುತ್ತಾರೆಯೇ ಇಲ್ಲವೇ ಎನ್ನುವುದನ್ನು ಖಚಿತಮಾಡಿಕೊಳ್ಳಬೇಕು.

ಯೋಗಿಯು ಪರಿಪೂರ್ಣನಾದರೆ ಈ ಐಹಿಕ ಜಗತ್ತನ್ನು ಬಿಡುವ ಕಾಲವನ್ನೂ ಸನ್ನಿವೇಶವನ್ನೂ ಆರಿಸಿಕೊಳ್ಳಬಹುದು. ಆದರೆ ಆತನು ಅಷ್ಟು ಪ್ರವೀಣನಲ್ಲದಿದ್ದರೆ, ಅಕಸ್ಮಾತ್ತಾಗಿ ಆತನು ಸೂಕ್ತವಾದ ಸಮಯದಲ್ಲಿ ಮರಣಹೊಂದುವುದನ್ನೆ ಅವನ ಯಶಸ್ಸು ಅವಲಂಬಿಸುತ್ತದೆ. ಮನುಷ್ಯನು ಮರಣ ಹೊಂದಿ ಮತ್ತೆ ಬಾರದಂತಾಗಬೇಕಾದರೆ ಮರಣಕ್ಕೆ ಸೂಕ್ತ ಸಮಯಗಳನ್ನು ಪ್ರಭುವು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾನೆ. ಆಚಾರ್ಯ ಬಲದೇವ ವಿದ್ಯಾಭೂಷಣರ ಅಭಿಪ್ರಾಯದಲ್ಲಿ, ಇಲ್ಲಿ ಬಳಸಿರುವ **ಕಾಲ** ಎನ್ನುವ ಸಂಸ್ಕೃತ ಪದವು ಕಾಲದ ದೇವತೆಯನ್ನು ಸೂಚಿಸುತ್ತದೆ.

## ಶ್ಲೋಕ - 24

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥**

**ಅಗ್ನಿಃ**—ಅಗ್ನಿ; **ಜ್ಯೋತಿಃ**—ಪ್ರಕಾಶ; **ಅಹಃ**—ಹಗಲು; **ಶುಕ್ಲಃ**—ಶುಕ್ಲಪಕ್ಷ; **ಷಟ್ ಮಾಸಾಃ**—ಆರುತಿಂಗಳುಗಳು; **ಉತ್ತರ ಅಯಣಮ್**—ಸೂರ್ಯನು ಉತ್ತರದಲ್ಲಿ ಹೋಗುವಾಗ; **ತತ್ರ**—ಅಲ್ಲಿ; **ಪ್ರಯಾತಾಃ**—ಗತಿಸುವವರು; **ಗಚ್ಛನ್ತಿ**—ಹೋಗುತ್ತಾರೆ; **ಬ್ರಹ್ಮ**—ಪರತರನಲ್ಲಿಗೆ; **ಬ್ರಹ್ಮ ವಿದಃ**—ಪರಾತ್ಪರನನ್ನು ತಿಳಿದ; **ಜನಾಃ**—ಜನರು.

## ಅನುವಾದ

**ಪರಬ್ರಹ್ಮನನ್ನು ಬಲ್ಲವರು ಅಗ್ನಿದೇವತೆಯ ಪ್ರಭಾವದ ಕಾಲದಲ್ಲಿ, ಬೆಳಕಿನಲ್ಲಿ, ಹಗಲು ಶುಭಕ್ಷಣದಲ್ಲಿ, ಶುಕ್ಲಪಕ್ಷದಲ್ಲಿ, ಉತ್ತರಾಯಣದ ಆರು ಮಾಸಗಳಲ್ಲಿ ಈ ಜಗತ್ತನ್ನು ಬಿಟ್ಟು ಪರಬ್ರಹ್ಮನನ್ನು ಸೇರುತ್ತಾರೆ.**

## ಭಾವಾರ್ಥ

ಅಗ್ನಿ, ಬೆಳಕು, ಹಗಲು ಮತ್ತು ಶುಕ್ಲಪಕ್ಷಗಳನ್ನು ಹೆಸರಿಸಿದಾಗ ಆತ್ಮದ ಪ್ರಯಾಣಕ್ಕೆ ವ್ಯವಸ್ಥೆಮಾಡುವ ಅಧಿದೇವತೆಗಳು ಇವುಗಳ ಮೇಲಿದ್ದಾರೆ ಎಂದು ಅರ್ಥ ಮಾಡಿಕೊಳ್ಳಬೇಕು. ಮರಣಕಾಲದಲ್ಲಿ ಮನಸ್ಸು ಮನುಷ್ಯನನ್ನು ಒಂದು ಹೊಸ ಬದುಕಿನ ಮಾರ್ಗಕ್ಕೆ ಕೊಂಡೊಯ್ಯುತ್ತದೆ. ಆಕಸ್ಮಿಕವಾಗಿ ಆಗಲಿ, ವ್ಯವಸ್ಥೆ ಮಾಡಿಕೊಂಡಾಗಲಿ ಮೇಲೆ ಹೇಳಿದ ಕಾಲದಲ್ಲಿ ದೇಹವನ್ನು ಬಿಟ್ಟ ಮನುಷ್ಯನಿಗೆ ನಿರಾಕಾರ ಬ್ರಹ್ಮಜ್ಯೋತಿಯನ್ನು ಸೇರುವುದು ಸಾಧ್ಯವಾಗುತ್ತದೆ. ಯೋಗಾಭ್ಯಾಸದಲ್ಲಿ ಮುಂದುವರಿದ ಯೋಗಿಗಳು ದೇಹವನ್ನು ಬಿಡುವ ಕಾಲವನ್ನು, ಸ್ಥಳವನ್ನು ನಿರ್ಧರಿಸಬಲ್ಲರು. ಇತರರಿಗೆ ನಿಯಂತ್ರಣವಿಲ್ಲ; ಆಕಸ್ಮಿಕವಾಗಿ ಶುಭಕ್ಷಣದಲ್ಲಿ ದೇಹವನ್ನು ಬಿಟ್ಟರೆ ಅವರು ಜನನ ಮರಣಗಳ ಚಕ್ರಕ್ಕೆ ಹಿಂದಿರುಗುವುದಿಲ್ಲ. ಹಾಗೆ ಆಗದಿದ್ದರೆ ಅವರು ಹಿಂದಿರುಗಬೇಕಾದ ಸಾಧ್ಯತೆಯೇ ಬಹು ಹೆಚ್ಚು. ಆದರೆ ಕೃಷ್ಣಪ್ರಜ್ಞೆ ಇರುವ ಪರಿಶುದ್ಧ

ಭಕ್ತನು ದೇಹವನ್ನು ಶುಭಗಳಿಗೆಯಲ್ಲಿ ಬಿಡಲಿ, ಅಶುಭಗಳಿಗೆಯಲ್ಲಿ ಬಿಡಲಿ, ಆಕಸ್ಮಿಕವಾಗಿ ಬಿಡಲಿ, ಏರ್ಪಾಟುಮಾಡಿಕೊಂಡು ಬಿಡಲಿ, ಆತನಿಗೆ ಜನನ ಮರಣದ ಚಕ್ರಕ್ಕೆ ಹಿಂತಿರುಗುವ ಭಯವಿಲ್ಲ.

## ಶ್ಲೋಕ - 25

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ |**
**ತತ್ರ ಚಾನ್ದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ||೨೫||**

**ಧೂಮಃ**—ಹೊಗೆಯು; **ರಾತ್ರಿಃ**—ರಾತ್ರಿಯು; **ತಥಾ ಕೃಷ್ಣಃ**—ಕೃಷ್ಣಪಕ್ಷವು; **ಷಟ್ ಮಾಸಾ**—ಆರುತಿಂಗಳುಗಳು; **ದಕ್ಷಿಣ ಅಯನಮ್**—ಸೂರ್ಯನು ದಕ್ಷಿಣಭಾಗವನ್ನು ದಾಟುವಾಗ; **ತತ್ರ**—ಅಲ್ಲಿ; **ಚಾನ್ದ್ರಮಸಮ್**—ಚಂದ್ರಲೋಕದ; **ಜ್ಯೋತಿಃ**—ಬೆಳಕನ್ನು; **ಯೋಗೀ**—ಯೋಗಿಯು; **ಪ್ರಾಪ್ಯ**—ಸೇರಿ; **ನಿವರ್ತತೇ**—ಹಿಂದಿರುಗುತ್ತಾನೆ.

## ಅನುವಾದ

**ಧೂಮಕಾಲದಲ್ಲಿ, ರಾತ್ರಿಯಲ್ಲಿ, ಕೃಷ್ಣಪಕ್ಷದಲ್ಲಿ, ದಕ್ಷಿಣಾಯನದ ಆರು ತಿಂಗಳಲ್ಲಿ ಮರಣ ಹೊಂದುವ ಯೋಗಿಯು ಚಂದ್ರಲೋಕವನ್ನು ಸೇರುತ್ತಾನೆ; ಆದರೆ ಮರಳಿ ಬರುತ್ತಾನೆ.**

## ಭಾವಾರ್ಥ

ಶ್ರೀಮದ್ಭಾಗವತದ ಮೂರನೆಯ ಸ್ಕಂಧದಲ್ಲಿ ಕಪಿಲಮುನಿಯು ಭೂಲೋಕದಲ್ಲಿ ಕರ್ಮಾಚರಣೆಯಲ್ಲಿ ಮತ್ತು ಯಜ್ಞಮಾರ್ಗಗಳಲ್ಲಿ ಪರಿಣತರಾದವರು ಮರಣದ ಅನಂತರ ಚಂದ್ರನನ್ನು ಸೇರುತ್ತಾರೆ ಎಂದು ಹೇಳಿದ್ದಾನೆ. ಹೀಗೆ ಮೇಲಿನ ಲೋಕಕ್ಕೆ ಹೋದ ಆತ್ಮಗಳು ಚಂದ್ರಲೋಕದಲ್ಲಿ (ದೇವತೆಗಳ ಲೆಕ್ಕದಂತೆ) ಸುಮಾರು 10,000 ವರ್ಷಗಳು ಇದ್ದು ಸೋಮರಸ ಪಾನಮಾಡಿ ಸುಖಿಸುತ್ತಾರೆ. ಅವರು ಕಟ್ಟಕಡೆಗೆ ಭೂಮಿಗೆ ಹಿಂದಿರುತ್ತಾರೆ. ಜಡ ಇಂದ್ರಿಯಗಳು ಅವರ ಅಸ್ತಿತ್ವವನ್ನು ಗ್ರಹಿಸಲಾರದೆ ಹೋದರೂ ಚಂದ್ರಲೋಕದಲ್ಲಿ ಉನ್ನತವರ್ಗದ ಜೀವಿಗಳಿದ್ದಾರೆ ಎಂದು ಇದರ ಅರ್ಥ.

## ಶ್ಲೋಕ - 26

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ |**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ||೨೬||**

**ಶುಕ್ಲ**—ಶುಕ್ಲಪಕ್ಷ; **ಕೃಷ್ಣೇ**—ಕೃಷ್ಣಪಕ್ಷ ಎಂಬ; **ಗತೀ**—ಗತಿಸುವ ದಾರಿಗಳು; **ಹಿ**—ಖಂಡಿತವಾಗಿಯೂ; **ಏತೇ**—ಈ ಎರಡು; **ಜಗತಃ**—ಭೌತಿಕ ಜಗತ್ತಿನ; **ಶಾಶ್ವತೇ**—ವೇದಗಳ; **ಮತೇ**—ಅಭಿಪ್ರಾಯದಲ್ಲಿ; **ಏಕಯಾ**—ಒಂದರಿಂದ; **ಯಾತಿ**—ಹೋಗುತ್ತಾನೆ; **ಅನಾವೃತ್ತಿಮ್**—ಮರಳಿಬಾರದ್ದಕ್ಕೆ; **ಅನ್ಯಯಾ**—ಇನ್ನೊಂದರಿಂದ; **ಆವರ್ತತೇ**—ಹಿಂದಿರುಗುತ್ತಾನೆ; **ಪುನಃ**—ಮತ್ತೆ.

## ಅನುವಾದ

**ವೈದಿಕ ಅಭಿಪ್ರಾಯದಂತೆ ಈ ಜಗತ್ತನ್ನು ಬಿಡಲು ಎರಡು ರೀತಿಗಳಿವೆ — ಒಂದು ಬೆಳಕಿನಲ್ಲಿ, ಎರಡನೆಯದು ಕತ್ತಲಿನಲ್ಲಿ. ಬೆಳಕಿನಲ್ಲಿ ನಿರ್ಗಮಿಸಿದವನು ಹಿಂದಕ್ಕೆ ಬರುವುದಿಲ್ಲ; ಆದರೆ ಕತ್ತಲೆಯಲ್ಲಿ ನಿರ್ಗಮಿಸಿದವನು ಹಿಂದಕ್ಕೆ ಬರುತ್ತಾನೆ.**

## ಭಾವಾರ್ಥ

ಆಚಾರ್ಯ ಬಲದೇವ ವಿದ್ಯಾಭೂಷಣರು ಛಾಂದೋಗ್ಯ ಉಪನಿಷತ್ತಿನಿಂದ (5.10.35) ನಿರ್ಗಮನ ಮತ್ತು ಪುನರಾಗಮನಗಳ ಇದೇ ವರ್ಣನೆಯನ್ನು ಉದ್ಧರಿಸುತ್ತಾರೆ. ನೆನಪಿಗೆ ನಿಲುಕದ ಕಾಲದಿಂದ ಕಾಮ್ಯಕರ್ಮಿಗಳು ಮತ್ತು ತತ್ವಶಾಸ್ತ್ರದ ಊಹಾತ್ಮಕ ಚಿಂತನೆಗಳಲ್ಲಿ ತೊಡಗುವವರು ನಿರಂತರವಾಗಿ ಹೋಗುತ್ತಲಿದ್ದಾರೆ ಮತ್ತು ಬರುತ್ತಲಿದ್ದಾರೆ. ವಾಸ್ತವವಾಗಿ ಅವರಿಗೆ ಮೋಕ್ಷವು ದೊರಕುವುದಿಲ್ಲ. ಏಕೆಂದರೆ ಅವರು ಕೃಷ್ಣನಿಗೆ ಶರಣಾಗಿರುವುದಿಲ್ಲ.

## ಶ್ಲೋಕ - 27

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ |**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ||೨೭||**

**ನ**—ಎಂದಿಗೂ ಇಲ್ಲ; **ಏತೇ**—ಈ ಎರಡೂ; **ಸೃತೀ**—ಭಿನ್ನಮಾರ್ಗಗಳನ್ನು; **ಪಾರ್ಥ**—ಪೃಥೆಯ ಮಗನೇ; **ಜಾನನ್**—ಅವನು ತಿಳಿದಿದ್ದರೂ ಕೂಡ; **ಯೋಗೀ**—ಭಗವದ್ಭಕ್ತನು; **ಮುಹ್ಯತಿ**—ಭ್ರಾಂತಿಗೊಳ್ಳುತ್ತಾನೆ; **ಕಶ್ಚನ**—ಯಾವುದೇ; **ತಸ್ಮಾತ್**—ಆದ್ದರಿಂದ; **ಸರ್ವೇಷು ಕಾಲೇಷು**—ಯಾವಾಗಲೂ; **ಯೋಗ ಯುಕ್ತಃ**—ಕೃಷ್ಣಪ್ರಜ್ಞೆಯಲ್ಲಿ ತೊಡಗಿದವನು; **ಭವ**—ಆಗು; **ಅರ್ಜುನ**—ಅರ್ಜುನನೇ.

## ಅನುವಾದ

**ಅರ್ಜುನ, ಭಕ್ತರಿಗೆ ಈ ಎರಡು ಮಾರ್ಗಗಳು ತಿಳಿದಿದ್ದರೂ ಅವರು ಗೊಂದಲಕ್ಕೀಡಾಗುವುದಿಲ್ಲ. ಆದುದರಿಂದ ಸದಾ ಯೋಗಯುಕ್ತನಾಗಿರು.**

## ಭಾವಾರ್ಥ

ಐಹಿಕ ಜಗತ್ತನ್ನು ಬಿಡುವಾಗ ಆತ್ಮನು ಬಳಸುವ ವಿವಿಧ ಮಾರ್ಗಗಳಿಂದ ಅರ್ಜುನನ ಮನಸ್ಸು ಕಲಕಬಾರದೆಂದು ಕೃಷ್ಣನು ಇಲ್ಲಿ ಉಪದೇಶ ಮಾಡುತ್ತಿದ್ದಾನೆ. ಏರ್ಪಾಟಿನಿಂದ ನಿರ್ಗಮಿಸುತ್ತಾನೋ ಅಥವಾ ಅಕಸ್ಮಿಕವಾಗಿ ನಿರ್ಗಮಿಸುತ್ತಾನೋ ಎಂಬುದರ ಬಗ್ಗೆ ಪರಮ ಪ್ರಭುವಿನ ಭಕ್ತನು ಆತಂಕಪಡಬಾರದು. ಭಕ್ತನ ಮನಸ್ಸು ಕೃಷ್ಣನಲ್ಲಿ ದೃಢವಾಗಿರಬೇಕು. ಅವನು ಹರೇ ಕೃಷ್ಣ ಸಂಕೀರ್ತನೆ ಮಾಡಬೇಕು. ಈ ಎರಡು ಮಾರ್ಗಗಳ ವಿಷಯವಾಗಿ ಚಿಂತಿಸುವುದು ಕ್ಲೇಶದಾಯಕ ಎಂದು ಅವನು ತಿಳಿಯಬೇಕು. ಕೃಷ್ಣಪ್ರಜ್ಞೆಯಲ್ಲಿ ತನ್ಮಯನಾಗುವುದಕ್ಕೆ ಅತ್ಯುತ್ತಮ ಮಾರ್ಗವೆಂದರೆ ಕೃಷ್ಣನ ಸೇವೆಯಲ್ಲಿ ಹೊಂದಿಕೊಳ್ಳುವುದು; ಇದರಿಂದ ಆಧ್ಯಾತ್ಮಿಕ

ರಾಜ್ಯಕ್ಕೆ ಮನುಷ್ಯನ ಮಾರ್ಗವು ಸುರಕ್ಷಿತ, ಖಚಿತ ಮತ್ತು ನೇರವಾಗುತ್ತದೆ. ಈ ಶ್ಲೋಕದಲ್ಲಿ **ಯೋಗಯುಕ್ತ** ಎಂಬ ಪದವು ಅರ್ಥವತ್ತಾದದ್ದು. ಯೋಗದಲ್ಲಿ ದೃಢವಾಗಿರುವ ಮನುಷ್ಯನು ತನ್ನ ಎಲ್ಲ ಚಟುವಟಿಕೆಗಳಲ್ಲಿ ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುತ್ತಾನೆ. ಶ್ರೀ ರೂಪ ಗೋಸ್ವಾಮಿಯವರು, **ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ** — ಮನುಷ್ಯನು ಪ್ರಾಪಂಚಿಕ ವ್ಯವಹಾರಗಳಲ್ಲಿ ನಿರ್ಲಿಪ್ತನಾಗಿರಬೇಕು ಮತ್ತು ಎಲ್ಲವನ್ನು ಕೃಷ್ಣಪ್ರಜ್ಞೆಯಲ್ಲಿ ಮಾಡಬೇಕು ಎಂದು ಉಪದೇಶಿಸಿದ್ದಾರೆ. ಯುಕ್ತವೈರಾಗ್ಯ ಎನ್ನುವ ಈ ರೀತಿಯಿಂದ ಮನುಷ್ಯನು ಪರಿಪೂರ್ಣತೆಯನ್ನು ಪಡೆಯುತ್ತಾನೆ. ಭಕ್ತನಿಗೆ ಪರಮ ನಿವಾಸಕ್ಕೆ ತನ್ನ ಮಾರ್ಗವನ್ನು ಭಕ್ತಿಪೂರ್ವಕ ಸೇವೆಯು ಖಚಿತಮಾಡಿದೆ ಎಂದು ತಿಳಿದಿರುತ್ತದೆ; ಆದುದರಿಂದ ಈ ವರ್ಣನೆಗಳಿಂದ ಆತನು ಮನಶ್ಶಾಂತಿಯನ್ನು ಕಳೆದುಕೊಳ್ಳಬಾರದು.

## ಶ್ಲೋಕ - 28

**ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥**

**ವೇದೇಷು**—ವೇದಗಳ ಅಧ್ಯಯನದಲ್ಲಿ; **ಯಜ್ಞೇಷು**—ಯಜ್ಞಾಚರಣೆಗಳಲ್ಲಿ; **ತಪಃಸು**—ನಾನಾ ವಿಧದ ತಪಸ್ಸುಗಳಲ್ಲಿ ತೊಡಗುವುದರಲ್ಲಿ; **ಚ**—ಕೂಡ; **ಏವ**—ಖಂಡಿತವಾಗಿಯೂ; **ದಾನೇಷು**—ದಾನಗಳನ್ನು ನೀಡುವುದರಲ್ಲಿ; **ಯತ್**—ಯಾವ; **ಪುಣ್ಯ ಫಲಮ್**—ಪುಣ್ಯಕಾರ್ಯದ ಫಲವು; **ಪ್ರದಿಷ್ಟಮ್**—ಸೂಚಿಸಲ್ಪಟ್ಟಿದೆಯೋ; **ಅತ್ಯೇತಿ**—ದಾಟುತ್ತಾನೆ; **ತತ್ ಸರ್ವಮ್**—ಅವೆಲ್ಲವನ್ನೂ; **ಇದಮ್**—ಇದನ್ನು; **ವಿದಿತ್ವಾ**—ತಿಳಿದು; **ಯೋಗೀ**—ಭಕ್ತನು; **ಪರಮ್**—ಪರಮ; **ಸ್ಥಾನಮ್**—ಧಾಮವನ್ನು; **ಉಪೈತಿ**—ಹೊಂದುತ್ತಾನೆ; **ಚ**—ಕೂಡ; **ಆದ್ಯಮ್**—ಮೂಲವಾದ.

## ಅನುವಾದ

**ಭಕ್ತಿಪೂರ್ವಕ ಸೇವೆಯ ಮಾರ್ಗವನ್ನು ಸ್ವೀಕರಿಸುವವನು ವೇದಾಧ್ಯಯನ, ಯಜ್ಞಗಳ ಆಚರಣೆ, ದಾನ ಮಾಡುವುದು ಅಥವಾ ತಾತ್ವಿಕ ಮತ್ತು ಕಾಮ್ಯಕರ್ಮಗಳಿಂದ ಬರುವ ಫಲಗಳನ್ನು ಕಳೆದುಕೊಳ್ಳಬೇಕಾಗಿಲ್ಲ. ಭಕ್ತಿಸೇವೆ ಮಾಡಿದರೆ ಸಾಕು, ಆತನು ಇವೆಲ್ಲವನ್ನೂ ಪಡೆಯುತ್ತಾನೆ ಮತ್ತು ಕಡೆಯಲ್ಲಿ ಪರಮ ಶಾಶ್ವತ ನಿವಾಸವನ್ನು ಸೇರುತ್ತಾನೆ.**

## ಭಾವಾರ್ಥ

ಏಳು ಮತ್ತು ಎಂಟನೆಯ ಅಧ್ಯಾಯಗಳು ವಿಶೇಷವಾಗಿ ಕೃಷ್ಣಪ್ರಜ್ಞೆ ಮತ್ತು ಭಕ್ತಿಸೇವೆಗಳನ್ನು ಕುರಿತವು; ಈ ಶ್ಲೋಕವು ಈ ಅಧ್ಯಾಯಗಳ ಸಾರಸಂಗ್ರಹ. ಮನುಷ್ಯನು ಒಬ್ಬ ಗುರುವಿನ ಮಾರ್ಗದರ್ಶನದಲ್ಲಿ ವೇದಾಧ್ಯಯನ ಮಾಡಬೇಕು ಮತ್ತು ಗುರುವಿನ ರಕ್ಷಣೆಯಲ್ಲಿರುವಾಗ ಕಠಿಣ ವ್ರತಗಳನ್ನೂ, ತಪಸ್ಸನ್ನೂ ಆಚರಿಸಬೇಕು. ಬ್ರಹ್ಮಚಾರಿಯು ಗುರುವಿನ

ಮನೆಯಲ್ಲಿ ಸೇವಕನಂತೆ ಇರಬೇಕು ಮತ್ತು ಮನೆಮನೆಗೆ ಹೋಗಿ ಭಿಕ್ಷೆ ಬೇಡಿ ಗುರುವಿಗೆ ಒಪ್ಪಿಸಬೇಕು. ಗುರುವಿನ ಅಪ್ಪಣೆಯಂತೆ ಆತನು ಆಹಾರವನ್ನು ಸೇವಿಸುತ್ತಾನೆ; ಎಂದಾದರೂ ಗುರುವು ಶಿಷ್ಯನನ್ನು ಊಟಕ್ಕೆ ಕರೆಯುವುದನ್ನು ಮರೆತರೆ ಶಿಷ್ಯನು ಉಪವಾಸ ಮಾಡುತ್ತಾನೆ. ಬ್ರಹ್ಮಚರ್ಯದ ಆಚರಣೆಗೆ ಇವು ಕೆಲವು ವೈದಿಕ ತತ್ತ್ವಗಳಾಗಿವೆ.

ಶಿಷ್ಯನು ಗುರುವಿನ ಬಳಿ ಐದರಿಂದ ಇಪ್ಪತ್ತು ವರ್ಷಗಳವರೆಗೆ ವೇದಾಭ್ಯಾಸ ಮಾಡಿದ ಅನಂತರ ಅವನು ಪರಿಪೂರ್ಣ ಸ್ವಭಾವದ ಮನುಷ್ಯನಾಗಬಹುದು. ವೇದಾಭ್ಯಾಸವು ಆರಾಮಕುರ್ಚಿಯಲ್ಲಿ ಕುಳಿತು ಊಹಾತ್ಮಕ ಚಿಂತನೆಗಳಲ್ಲಿ ತೊಡಗುವವರ ಮನರಂಜನೆಗಾಗಿ ಇಲ್ಲ; ಅದರ ಉದ್ದೇಶ ಶೀಲವನ್ನು ರೂಪಿಸುವುದು. ಈ ಶಿಕ್ಷಣದ ಅನಂತರ ಬ್ರಹ್ಮಚಾರಿಗೆ ಗೃಹಸ್ಥಾಶ್ರಮವನ್ನು ಪ್ರವೇಶಿಸಿ ಮದುವೆಯಾಗಲು ಅನುಮತಿ ದೊರೆಯುತ್ತದೆ. ಗೃಹಸ್ಥನಾಗಿದ್ದಾಗ ಆತನು ಇನ್ನೂ ಹೆಚ್ಚಿನ ಜ್ಞಾನವನ್ನು ಪಡೆಯಲು ಅನೇಕ ಯಜ್ಞಗಳನ್ನು ಮಾಡಬೇಕು. ದೇಶ, ಕಾಲ ಮತ್ತು ಪಾತ್ರಗಳಿಗೆ ಅನುಗುಣವಾಗಿ ಸಾತ್ತ್ವಿಕ, ರಾಜಸ, ತಾಮಸಗಳಲ್ಲಿನ ದಾನಗಳಲ್ಲಿ ವಿವೇಚನೆ ಇಟ್ಟುಕೊಂಡು, ಭಗವದ್ಗೀತೆಯಲ್ಲಿ ಹೇಳಿದಂತೆ ದಾನ ಮಾಡಬೇಕು. ಗೃಹಸ್ಥ ಜೀವನವನ್ನು ಬಿಟ್ಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದಾಗ ಕಾಡುಗಳಲ್ಲಿ ವಾಸಮಾಡುವುದು, ಮರದ ತೊಗಟೆಗಳನ್ನು ಉಡುಪಾಗಿ ಧರಿಸುವುದು, ಕ್ಷೌರಮಾಡಿಕೊಳ್ಳದಿರುವುದು ಮೊದಲಾದ ರೀತಿಯಲ್ಲಿದ್ದು ಕಠಿಣ ತಪಸ್ಸುಗಳನ್ನು ಮಾಡಬೇಕು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮಗಳನ್ನು ಆಚರಿಸಿ ಮನುಷ್ಯನು ಬದುಕಿನ ಪರಿಪೂರ್ಣತೆಯ ಹಂತಕ್ಕೆ ಏರುತ್ತಾನೆ. ಕೆಲವರನ್ನು ಅನಂತರ ಸ್ವರ್ಗಲೋಕಗಳಿಗೆ ಏರಿಸಲಾಗುತ್ತದೆ; ಅವರು ಇನ್ನೂ ಮುಂದುವರಿದಾಗ ನಿರಾಕಾರ ಬ್ರಹ್ಮಜ್ಯೋತಿಯಲ್ಲಿ ಅಥವಾ ವೈಕುಂಠಲೋಕಗಳಲ್ಲಿ ಇಲ್ಲವೇ ಕೃಷ್ಣಲೋಕದಲ್ಲಿ ಮುಕ್ತಿಯನ್ನು ಪಡೆಯುತ್ತಾರೆ. ವೈದಿಕ ಸಾಹಿತ್ಯದಲ್ಲಿ ರೂಪಿಸಿರುವ ಮಾರ್ಗ ಇದು.

ಕೃಷ್ಣಪ್ರಜ್ಞೆಯ ಸೊಗಸೆಂದರೆ, ಭಕ್ತಿಸೇವೆಯಲ್ಲಿ ನಿರತನಾಗುವುದರ ಮೂಲಕ ಒಂದೇ ಸಲಕ್ಕೆ ಮನುಷ್ಯನು ಬೇರೆ ಬೇರೆ ಆಶ್ರಮಗಳ ವಿವಿಧ ವಿಧಿಕರ್ಮಗಳನ್ನು ದಾಟಿಹೋಗಬಹುದು.

**ಇದಂ ವಿದಿತ್ವಾ** ಎನ್ನುವ ಮಾತುಗಳು, ಭಗವದ್ಗೀತೆಯ ಈ ಅಧ್ಯಾಯದಲ್ಲಿಯೂ, ಏಳನೆಯ ಅಧ್ಯಾಯದಲ್ಲಿಯೂ ಶ್ರೀಕೃಷ್ಣನು ಕೊಟ್ಟಿರುವ ಆದೇಶಗಳನ್ನು ಅರ್ಥ ಮಾಡಿಕೊಳ್ಳಬೇಕು ಎಂದು ಸೂಚಿಸುತ್ತವೆ. ವಿದ್ವತ್ತಿನಿಂದ ಅಥವಾ ಊಹಾತ್ಮಕ ಚಿಂತನೆಗಳಿಂದ ಇವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಾರದು; ಇವನ್ನು ಭಕ್ತರ ಜೊತೆಗೆ ಕೇಳಿ ಅರ್ಥ ಮಾಡಿಕೊಳ್ಳಬೇಕು. ಏಳನೆಯ ಅಧ್ಯಾಯದಿಂದ ಹನ್ನೆರಡನೆಯ ಅಧ್ಯಾಯದವರೆಗಿನ ಭಾಗ ಭಗವದ್ಗೀತೆಯ ತಿರುಳು. ಮೊದಲನೆಯ ಆರು ಅಧ್ಯಾಯಗಳು ಮತ್ತು ಕಡೆಯ ಆರು ಅಧ್ಯಾಯಗಳು, ಭಗವಂತನು ವಿಶೇಷವಾಗಿ ರಕ್ಷಿಸುವ ಮಧ್ಯದ ಆರು ಅಧ್ಯಾಯಗಳಿಗೆ ಕವಚವಿದ್ದಂತೆ. ಭಗವದ್ಗೀತೆಯನ್ನು — ಅದರಲ್ಲಿಯೂ ಮಧ್ಯದ ಆರು ಅಧ್ಯಾಯಗಳನ್ನು — ಭಕ್ತರ ಸಹವಾಸದಲ್ಲಿ ಅರ್ಥ ಮಾಡಿಕೊಳ್ಳುವ ಸುಯೋಗವು ಮನುಷ್ಯನಿಗೆ ಪ್ರಾಪ್ತವಾದರೆ ಅವನ ಬದುಕು ಎಲ್ಲ ತಪಸ್ಸು, ಯಜ್ಞಗಳು, ದಾನಗಳು, ಊಹೆಗಳು, ಮೊದಲಾದುವನ್ನೆಲ್ಲ ಮೀರಿ ಭವ್ಯವಾಗುತ್ತದೆ. ಏಕೆಂದರೆ ಈ ಚಟುವಟಿಕೆಗಳ ಎಲ್ಲ ಫಲಗಳನ್ನೂ ಕೃಷ್ಣಪ್ರಜ್ಞೆಯೊಂದರಿಂದಲೇ ಪಡೆಯಬಹುದು.

ಭಗವದ್ಗೀತೆಯಲ್ಲಿ ಸ್ವಲ್ಪ ಮಟ್ಟಿಗೆ ಶ್ರದ್ಧೆ ಇರುವಾತನು ಒಬ್ಬ ಭಕ್ತರಿಂದ ಭಗವದ್ಗೀತೆಯನ್ನು ಕಲಿಯಬೇಕು. ಏಕೆಂದರೆ ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿ, ಭಗವದ್ಗೀತೆಯನ್ನು ಭಕ್ತರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು ಎಂದು ಸ್ಪಷ್ಟವಾಗಿ ಹೇಳಿದೆ. ಬೇರೆ ಯಾರಿಗೂ ಭಗವದ್ಗೀತೆಯ ಉದ್ದೇಶವು ಪರಿಪೂರ್ಣವಾಗಿ ಅರ್ಥವಾಗುವುದಿಲ್ಲ. ಆದುದರಿಂದ ಭಗವದ್ಗೀತೆಯನ್ನು ಕೃಷ್ಣನ ಒಬ್ಬ ಭಕ್ತರಿಂದ ಕಲಿಯಬೇಕು; ಊಹಾತ್ಮಕ ಚಿಂತನೆಗಳಲ್ಲಿ ತೊಡಗುವವರಿಂದ ಅಲ್ಲ. ಇದು ಶ್ರದ್ಧೆಯ ಗುರುತು. ವ್ಯಕ್ತಿಯು ಭಕ್ತನಿಗಾಗಿ ಹುಡುಕಿ ಕಡೆಗೆ ಭಕ್ತನ ಸಹವಾಸವು ದೊರೆತಾಗ ಆತನು ಭಗವದ್ಗೀತೆಯನ್ನು ಅಧ್ಯಯನ ಮಾಡಿ ಅರ್ಥಮಾಡಿಕೊಳ್ಳಲು ಪ್ರಾರಂಭಿಸುತ್ತಾನೆ. ಭಕ್ತನ ಸಹವಾಸದಲ್ಲಿ ಮುನ್ನಡೆದ ವ್ಯಕ್ತಿಯು ಭಕ್ತಿಸೇವೆಯಲ್ಲಿ ತೊಡಗುತ್ತಾನೆ; ಈ ಸೇವೆಯು ಕೃಷ್ಣನನ್ನು ಅಥವಾ ದೇವರನ್ನು ಕುರಿತು, ಕೃಷ್ಣನ ಲೀಲೆ, ರೂಪ, ವಿನೋದ, ಹೆಸರು ಮತ್ತು ಇತರ ಲಕ್ಷಣಗಳನ್ನು ಕುರಿತು ಆ ಮನುಷ್ಯನಿಗೆ ಇರಬಹುದಾದ ಎಲ್ಲ ಸಂದೇಹಗಳನ್ನೂ ದೂರಮಾಡುತ್ತದೆ. ಈ ಸಂದೇಹಗಳು ನಿವಾರಣೆಯಾದ ಮೇಲೆ ಆತನು ಸ್ಥಿರವಾದ ಅಧ್ಯಯನದಲ್ಲಿ ತೊಡಗುತ್ತಾನೆ. ಅನಂತರ ಆತನು ಭಗವದ್ಗೀತೆಯ ಅಧ್ಯಯನವನ್ನು ಸವಿಯುತ್ತಾನೆ ಮತ್ತು ಸದಾ ಕೃಷ್ಣಪ್ರಜ್ಞೆಯನ್ನು ಅನುಭವಿಸುವ ಸ್ಥಿತಿಯನ್ನು ಪಡೆಯುತ್ತಾನೆ. ಮುಂದುವರಿದ ಹಂತದಲ್ಲಿ ಆತನು ಕೃಷ್ಣನನ್ನು ಪ್ರೇಮಿಸಲು ತೊಡಗುತ್ತಾನೆ. ಬದುಕಿನ ಅತ್ಯುನ್ನತ ಪರಿಪೂರ್ಣತೆಯ ಈ ಹಂತವು ಭಕ್ತನನ್ನು ಆಧ್ಯಾತ್ಮಿಕ ಗಗನದಲ್ಲಿ ಕೃಷ್ಣನ ನಿವಾಸವಾದ ಗೋಲೋಕ ವೃಂದಾವನಕ್ಕೆ ಹೋಗುವುದನ್ನು ಸಾಧ್ಯಮಾಡುತ್ತದೆ; ಅಲ್ಲಿ ಭಕ್ತನು ಶಾಶ್ವತವಾಗಿ ಸುಖಿಯಾಗಿರುತ್ತಾನೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಭಗವತ್‌ಪ್ರಾಪ್ತಿ" ಎಂಬ ಎಂಟನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 9

# ರಹಸ್ಯತಮ ಜ್ಞಾನ

## ಶ್ಲೋಕ - 1

**ಶ್ರೀ ಭಗವಾನುವಾಚ**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಇದಮ್**—ಇದನ್ನು; **ತು**—ಆದರೆ; **ತೇ**—ನಿನಗೆ; **ಗುಹ್ಯತಮಮ್**—ಅತ್ಯಂತ ರಹಸ್ಯವಾದ; **ಪ್ರವಕ್ಷ್ಯಾಮಿ**—ಹೇಳುತ್ತಿದ್ದೇನೆ; **ಅನಸೂಯವೇ**—ಅಸೂಯಾರಹಿತನಾದ; **ಜ್ಞಾನಮ್**—ಜ್ಞಾನವನ್ನು; **ವಿಜ್ಞಾನ**—ಸಾಕ್ಷಾತ್ಕಾರದ ಜ್ಞಾನದ; **ಸಹಿತಮ್**—ಜೊತೆಗೆ; **ಯತ್**—ಯಾವ; **ಜ್ಞಾತ್ವಾ**—ತಿಳಿದು; **ಮೋಕ್ಷ್ಯಸೇ**—ಮುಕ್ತನಾಗುವೆ **ಅಶುಭಾತ್**—ಈ ಕ್ಲೇಶಮಯ ಭೌತಿಕ ಅಸ್ತಿತ್ವದಿಂದ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು—ಪ್ರಿಯ ಅರ್ಜುನನೆ, ನಿನಗೆ ನನ್ನ ವಿಷಯದಲ್ಲಿ ಎಂದೂ ಅಸೂಯೆ ಇಲ್ಲವಾದುದರಿಂದ ನಿನಗೆ ಈ ಗುಹ್ಯತಮ ಜ್ಞಾನವನ್ನೂ ಸಾಕ್ಷಾತ್ಕಾರವನ್ನೂ ತಿಳಿಸಿಕೊಡುತ್ತೇನೆ. ಇದನ್ನು ತಿಳಿದು ನೀನು ಐಹಿಕ ಬದುಕಿನ ಸಂಕಟಗಳಿಂದ ಪಾರಾಗುತ್ತೀಯೆ.**

## ಭಾವಾರ್ಥ

ಭಕ್ತನು ಪರಮ ಪ್ರಭುವಿನ ವಿಷಯವನ್ನು ಕೇಳಿದಷ್ಟೂ ಜ್ಞಾನವನ್ನು ಪಡೆಯುತ್ತಾನೆ. ಶ್ರೀಮದ್ಭಾಗವತವು ಈ ಶ್ರವಣಪ್ರಕ್ರಿಯೆಯನ್ನು ಸಲಹೆ ಮಾಡುತ್ತದೆ — "ದೇವೋತ್ತಮ ಪರಮ ಪುರುಷನ ಸಂದೇಶಗಳಲ್ಲಿ ಶಕ್ತಿಗಳು ತುಂಬಿರುತ್ತವೆ. ದೇವೋತ್ತಮ ಪರಮ ಪುರುಷನನ್ನು ಕುರಿತ ವಿಷಯಗಳನ್ನು ಭಕ್ತರು ತಮ್ಮತಮ್ಮಲ್ಲಿ ಚರ್ಚೆ ಮಾಡಿಕೊಂಡರೆ ಈ ಶಕ್ತಿಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಊಹಾತ್ಮಕ ಚಿಂತನೆಯಲ್ಲಿ ತೊಡಗುವವರ ಅಥವಾ ಪ್ರೌಢ ವಿದ್ವಾಂಸರ ಸಹವಾಸದಿಂದ ಇದನ್ನು ಸಾಧಿಸುವುದು ಸಾಧ್ಯವಿಲ್ಲ. ಏಕೆಂದರೆ ಇದು ಸಾಕ್ಷಾತ್ಕಾರ ಮಾಡಿಕೊಂಡ ಜ್ಞಾನ."

ಭಕ್ತರು ಪರಮ ಪ್ರಭುವಿನ ಸೇವೆಯಲ್ಲಿ ಸದಾ ನಿರತರಾಗಿರುತ್ತಾರೆ. ಕೃಷ್ಣಪ್ರಜ್ಞೆಯಲ್ಲಿ ತೊಡಗಿರುವ ಯಾವುದೇ ಒಬ್ಬ ಜೀವಿಯ ಮನೋಧರ್ಮವನ್ನೂ, ಶ್ರದ್ಧೆಯನ್ನೂ ಪ್ರಭುವು ಅರ್ಥಮಾಡಿಕೊಳ್ಳುತ್ತಾನೆ ಮತ್ತು ಭಕ್ತರ ಸಹವಾಸದಲ್ಲಿ ಕೃಷ್ಣವಿಜ್ಞಾನವನ್ನು ಅರ್ಥಮಾಡಿಕೊಳ್ಳಲು ಆತನಿಗೆ ಬುದ್ಧಿಶಕ್ತಿಯನ್ನು ಕೊಡುತ್ತಾನೆ. ಕೃಷ್ಣನನ್ನು ಕುರಿತ ಚರ್ಚೆಯು ಬಹು ಶಕ್ತಿಯುತವಾದದ್ದು;

ಒಬ್ಬ ಭಾಗ್ಯಶಾಲಿಗೆ ಇಂತಹ ಸಹವಾಸವು ದೊರೆತು ಆತನು ಈ ಜ್ಞಾನವನ್ನು ಅರಗಿಸಿಕೊಳ್ಳಲು ಪ್ರಯತ್ನಿಸಿದರೆ ನಿಶ್ಚಯವಾಗಿಯೂ ಆತನು ಆಧ್ಯಾತ್ಮಿಕ ಸಾಕ್ಷಾತ್ಕಾರದತ್ತ ಮುನ್ನಡೆಯುತ್ತಾನೆ. ತನ್ನ ಭಕ್ತಿಸೇವೆಯಲ್ಲಿ ಅರ್ಜುನನು ಇನ್ನೂ ಎತ್ತರ ಎತ್ತರವಾಗಿ ಏರುವಂತೆ ಪ್ರೋತ್ಸಾಹಿಸಲು ಕೃಷ್ಣನು ಈ ಒಂಬತ್ತನೆಯ ಅಧ್ಯಾಯದಲ್ಲಿ ಈವರೆಗೆ ತಿಳಿಸಿಕೊಟ್ಟ ವಿಷಯಗಳಿಗಿಂತ ಹೆಚ್ಚು ಗೋಪ್ಯವಾದ ವಿಷಯಗಳನ್ನು ವರ್ಣಿಸುತ್ತಾನೆ.

ಭಗವದ್ಗೀತೆಯ ಮೊದಲನೆಯ ಅಧ್ಯಾಯವೇ ಗ್ರಂಥದ ಉಳಿದ ಭಾಗಕ್ಕೆ ಒಂದು ಪ್ರವೇಶ. ಎರಡನೆಯ ಮತ್ತು ಮೂರನೆಯ ಅಧ್ಯಾಯಗಳಲ್ಲಿ ಆಧ್ಯಾತ್ಮಿಕ ಜ್ಞಾನವನ್ನು ರಹಸ್ಯ ಎಂದು ವರ್ಣಿಸಲಾಗಿದೆ. ಏಳನೆಯ ಮತ್ತು ಎಂಟನೆಯ ಅಧ್ಯಾಯಗಳಲ್ಲಿ ಚರ್ಚಿಸಿರುವ ವಿಷಯಗಳು ವಿಶೇಷವಾಗಿ ಭಕ್ತಿಸೇವೆಗೆ ಸಂಬಂಧಿಸಿದವು. ಅವು ಕೃಷ್ಣಪ್ರಜ್ಞೆಯಲ್ಲಿ ಜ್ಞಾನೋದಯವನ್ನು ತರುವುದರಿಂದ ಅವನ್ನು ಇನ್ನೂ ರಹಸ್ಯ ಎಂದು ಕರೆಯಲಾಗಿದೆ. ಆದರೆ ಒಂಬತ್ತನೆಯ ಅಧ್ಯಾಯದಲ್ಲಿ ವರ್ಣಿಸಿರುವ ವಿಷಯಗಳು ಮಿಶ್ರವಿಲ್ಲದ ಪರಿಶುದ್ಧ ಭಕ್ತಿಗೆ ಸಂಬಂಧಿಸಿದವು. ಆದುದರಿಂದ ಇದನ್ನು ಗುಹ್ಯತಮ ಎಂದು ಕರೆದಿದೆ. ಕೃಷ್ಣನು ಗುಹ್ಯತಮ ಜ್ಞಾನದಲ್ಲಿ ನೆಲೆಸಿದವನು. ಸಹಜವಾಗಿ ಆಧ್ಯಾತ್ಮಿಕ ಸ್ಥಿತಿಯಲ್ಲಿರುವವನು. ಆದುದರಿಂದ ಐಹಿಕ ಜಗತ್ತಿನಲ್ಲಿ ಇದ್ದರೂ ಆತನಿಗೆ ಯಾವುದೇ ಐಹಿಕ ನೋವುಗಳಿಲ್ಲ. ಭಕ್ತಿರಸಾಮೃತಸಿಂಧುವಿನಲ್ಲಿ, ಪರಮ ಪ್ರಭುವಿಗೆ ಪ್ರೇಮಪೂರ್ವಕ ಸೇವೆಯನ್ನು ಸಲ್ಲಿಸಲು ಬಯಸುವವನು ಐಹಿಕ ಬದುಕಿನಲ್ಲಿ ಬದ್ಧಸ್ಥಿತಿಯಲ್ಲಿ ಇದ್ದರೂ ಆತನನ್ನು ಮುಕ್ತನೆಂದೇ ಪರಿಗಣಿಸಬೇಕೆಂದು ಹೇಳಿದೆ. ಹೀಗೆಯೇ ಈ ರೀತಿಯಲ್ಲಿ ಕಾರ್ಯನಿರತನಾಗಿರುವವನನ್ನೂ ಮುಕ್ತನೆಂದೇ ಪರಿಗಣಿಸಬೇಕು ಎನ್ನುವುದನ್ನು ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ನೋಡುತ್ತೇವೆ.

ಮೊದಲನೆಯ ಈ ಶ್ಲೋಕಕ್ಕೆ ನಿರ್ದಿಷ್ಟ ಮಹತ್ವವುಂಟು. **ಇದಂ ಜ್ಞಾನಮ್** (ಈ ಜ್ಞಾನವು) ಎನ್ನುವ ಪದಗಳು ಪರಿಶುದ್ಧ ಭಕ್ತಿಸೇವೆಯನ್ನು ಸೂಚಿಸುತ್ತವೆ; ಇದರಲ್ಲಿ ಶ್ರವಣ, ಕೀರ್ತನ, ಸ್ಮರಣ, ಸೇವೆ, ಪೂಜೆ, ವಿಧೇಯತೆ, ಸ್ನೇಹವನ್ನು ಪಾಲಿಸಿಕೊಂಡು ಬರುವುದು ಮತ್ತು ಸರ್ವಸಮರ್ಪಣ — ಈ ಒಂಬತ್ತು ಚಟುವಟಿಕೆಗಳು ಸೇರಿವೆ. ಭಕ್ತಿಸೇವೆಯ ಈ ಒಂಬತ್ತು ಅಂಶಗಳನ್ನು ಅನುಷ್ಠಾನ ಮಾಡಿದವನು ಆಧ್ಯಾತ್ಮಿಕ ಪ್ರಜ್ಞೆಗೆ, ಕೃಷ್ಣಪ್ರಜ್ಞೆಗೆ ಏರಿಸಲ್ಪಡುತ್ತಾನೆ. ಮನುಷ್ಯನ ಹೃದಯವು ಹೀಗೆ ಐಹಿಕ ಕಶ್ಮಲದ ಸೋಂಕನ್ನು ಕಳೆದುಕೊಂಡ ಮೇಲೆ ಆತನಿಗೆ ಕೃಷ್ಣವಿಜ್ಞಾನವು ಅರ್ಥವಾಗುತ್ತದೆ. ಜೀವಿಯು ತಾನು ಜಡವಸ್ತುವಲ್ಲ ಎಂದು ಅರ್ಥಮಾಡಿಕೊಂಡ ಮಾತ್ರಕ್ಕೆ ಸಾಲದು. ಇದು ಆಧ್ಯಾತ್ಮಿಕ ಸಾಕ್ಷಾತ್ಕಾರದ ಪ್ರಾರಂಭವಿರಬಹುದು. ಆದರೆ ದೇಹದ ಚಟುವಟಿಕೆಗಳಿಗೂ, ತಾನು ದೇಹವಲ್ಲ ಎಂದು ಅರಿತವನ ಆಧ್ಯಾತ್ಮಿಕ ಚಟುವಟಿಕೆಗಳಿಗೂ ವ್ಯತ್ಯಾಸವನ್ನು ಗುರುತಿಸಬೇಕು.

ಏಳನೆಯ ಅಧ್ಯಾಯದಲ್ಲಿ ನಾವು ಆಗಲೇ ದೇವೋತ್ತಮ ಪುರುಷನ ಐಶ್ವರ್ಯ ಶಕ್ತಿ, ಅವನ ವಿವಿಧ ಶಕ್ತಿಗಳು, ಕೆಳಮಟ್ಟದ ಮತ್ತು ಉತ್ತಮ ಪ್ರಕೃತಿಗಳು, ಹಾಗೂ ಎಲ್ಲ ಐಹಿಕ ಅಭಿವ್ಯಕ್ತಿಯನ್ನು ಚರ್ಚಿಸಿದ್ದೇವೆ. ಒಂಬತ್ತನೆಯ ಅಧ್ಯಾಯದಲ್ಲಿ ಭಗವಂತನ ವೈಭವಗಳನ್ನು ಚಿತ್ರಿಸಿದೆ.

ಈ ಶ್ಲೋಕದಲ್ಲಿ **ಅನಸೂಯವೇ** ಎನ್ನುವ ಸಂಸ್ಕೃತ ಪದವೂ ಅರ್ಥವತ್ತಾದದ್ದು.

ಸಾಮಾನ್ಯವಾಗಿ ವ್ಯಾಖ್ಯಾನಕಾರರು, ಅವರು ಉತ್ತಮ ವಿದ್ವಾಂಸರಾಗಿದ್ದರೂ, ದೇವೋತ್ತಮ ಪರಮ ಪುರುಷನ ವಿಷಯದಲ್ಲಿ ಅಸೂಯೆ ಪಡುತ್ತಾರೆ. ಅತ್ಯಂತ ಪ್ರಗಲ್ಭ ಪಂಡಿತರೂ ಭಗವದ್ಗೀತೆಯನ್ನು ಕುರಿತು ಬಹು ತಪ್ಪುತಪ್ಪಾಗಿ ಬರೆಯುತ್ತಾರೆ. ಅವರಿಗೆ ಕೃಷ್ಣನ ವಿಷಯದಲ್ಲಿ ಅಸೂಯೆ ಇರುವುದರಿಂದ ಅವರ ವ್ಯಾಖ್ಯಾನಗಳೆಲ್ಲ ನಿಷ್ಪ್ರಯೋಜಕವಾಗುತ್ತವೆ. ಪ್ರಭುವಿನ ಪ್ರಾಮಾಣಿಕ ಭಕ್ತರ ವ್ಯಾಖ್ಯಾನಗಳು ನೆಚ್ಚಲು ಅರ್ಹವಾದವು. ಅಸೂಯಾಪರನಾದವನು ಭಗವದ್ಗೀತೆಯನ್ನು ವಿವರಿಸಲಾರ; ಕೃಷ್ಣನ ಬಗ್ಗೆ ಪರಿಪೂರ್ಣಜ್ಞಾನವನ್ನು ನೀಡಲಾರ. ಕೃಷ್ಣನನ್ನು ಅರಿಯದೆಯೇ ಅವನ ಗುಣವನ್ನು ಟೀಕಿಸುವವನು ಶುದ್ಧ ಮೂರ್ಖ. ಆದುದರಿಂದ ಇಂತಹ ವ್ಯಾಖ್ಯಾನಗಳನ್ನು ದೂರ ಇಡಬೇಕು. ಕೃಷ್ಣನು ದೇವೋತ್ತಮ ಪರಮ ಪುರುಷ, ಪರಿಶುದ್ಧ ದಿವ್ಯ ಪುರುಷ ಎಂದು ಅರ್ಥಮಾಡಿಕೊಂಡವನಿಗೆ ಈ ಅಧ್ಯಾಯಗಳಿಂದ ಬಹು ಪ್ರಯೋಜನ ಉಂಟು.

## ಶ್ಲೋಕ - 2

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥೨॥**

**ರಾಜ ವಿದ್ಯಾ**—ವಿದ್ಯೆಯ ರಾಜ; **ರಾಜ ಗುಹ್ಯಮ್**—ರಹಸ್ಯಜ್ಞಾನದ ರಾಜ; **ಪವಿತ್ರಮ್**—ಅತ್ಯಂತ ಪವಿತ್ರವಾದದ್ದು; **ಇದಮ್**—ಇದು; **ಉತ್ತಮಮ್**—ದಿವ್ಯವಾದುದು; **ಪ್ರತ್ಯಕ್ಷ**—ನೇರ ಅನುಭವದಿಂದ; **ಅವಗಮಮ್**—ತಿಳಿಯಲ್ಪಡುವುದು; **ಧರ್ಮ್ಯಮ್**—ಧರ್ಮದ ತತ್ವವನ್ನು; **ಸು ಸುಖಮ್**—ಅತಿ ಸಂತೋಷಕರವಾದ; **ಕರ್ತುಮ್**—ಆಚರಿಸಲು; **ಅವ್ಯಯಮ್**—ಶಾಶ್ವತವಾದ.

## ಅನುವಾದ

**ಇದು ರಾಜವಿದ್ಯೆ. ಎಲ್ಲ ರಹಸ್ಯಗಳಲ್ಲಿ ಅತ್ಯಂತ ರಹಸ್ಯವಾದದ್ದು. ಇದು ಅತ್ಯಂತ ಪರಿಶುದ್ಧ ಜ್ಞಾನ. ಸಾಕ್ಷಾತ್ಕಾರದಿಂದ ಆತ್ಮದ ನೇರ ತಿಳಿವಳಿಕೆಯನ್ನು ಕೊಡುವುದರಿಂದ ಇದು ಧರ್ಮದ ಪರಿಪೂರ್ಣತೆ. ಇದು ಶಾಶ್ವತವಾದದ್ದು ಮತ್ತು ಸಂತೋಷದಿಂದ ಅನುಷ್ಠಾನ ಮಾಡುವಂತಹದು.**

## ಭಾವಾರ್ಥ

ಭಗವದ್ಗೀತೆಯ ಈ ಅಧ್ಯಾಯವನ್ನು ರಾಜವಿದ್ಯೆ ಎಂದು ಕರೆದಿದೆ. ಏಕೆಂದರೆ ಇದು ಹಿಂದೆ ಹೇಳಿದ ಎಲ್ಲ ಸಿದ್ಧಾಂತಗಳ ಮತ್ತು ತತ್ವ ಚಿಂತನೆಗಳ ಸಾರ. ಭಾರತದ ಮುಖ್ಯ ತತ್ವಜ್ಞಾನಿಗಳಲ್ಲಿ ಗೌತಮ, ಕಣಾದ, ಕಪಿಲ, ಯಾಜ್ಞವಲ್ಕ್ಯ, ಶಾಂಡಿಲ್ಯ ಮತ್ತು ವೈಶ್ವಾನರರು ಇದ್ದಾರೆ. ಕಡೆಯಲ್ಲಿ ವೇದಾಂತ ಸೂತ್ರವನ್ನು ರಚಿಸಿದ ವ್ಯಾಸದೇವರಿದ್ದಾರೆ. ಆದುದರಿಂದ ತತ್ವಜ್ಞಾನ ಅಥವಾ ಆಧ್ಯಾತ್ಮಿಕ ಜ್ಞಾನದಲ್ಲಿ ಜ್ಞಾನಕ್ಕೇನೂ ಕೊರತೆ ಇಲ್ಲ. ಈ ಒಂಬತ್ತನೆಯ ಅಧ್ಯಾಯವು ಇಂತಹ ಎಲ್ಲ ವಿದ್ಯೆಯ ರಾಜ; ವೇದಗಳ ಮತ್ತು ವಿವಿಧ ಬಗೆಗಳ ತತ್ವಜ್ಞಾನದ ಅಧ್ಯಯನದಿಂದ ಪಡೆಯಬಹುದಾದ ಎಲ್ಲ ಜ್ಞಾನದ ತಿರುಳು ಎಂದು ಪ್ರಭುವು ಹೇಳುತ್ತಾನೆ. ಅದು ಅತ್ಯಂತ ರಹಸ್ಯವಾದದ್ದು. ಏಕೆಂದರೆ ರಹಸ್ಯವಾದ ಅಥವಾ ಆಧ್ಯಾತ್ಮಿಕ ಜ್ಞಾನಕ್ಕೆ ಆತ್ಮ ಮತ್ತು ದೇಹಗಳ ವ್ಯತ್ಯಾಸದ ಅರಿವು ಅಗತ್ಯ. ಶ್ರೇಷ್ಠವಾದ ರಹಸ್ಯವಿದ್ಯೆಯು ಭಕ್ತಿಸೇವೆಯಲ್ಲಿ ಶಿಖರವನ್ನು ತಲಪುತ್ತದೆ.

ಸಾಮಾನ್ಯವಾಗಿ ಜನರಿಗೆ ಈ ರಹಸ್ಯಜ್ಞಾನದಲ್ಲಿ ವಿದ್ಯಾಭ್ಯಾಸವು ದೊರೆಯುವುದಿಲ್ಲ; ಅವರಿಗೆ ಬಹಿರ್ವಿದ್ಯೆಯಲ್ಲಿ ಶಿಕ್ಷಣ ದೊರೆಯುತ್ತದೆ. ಸಾಮಾನ್ಯ ಶಿಕ್ಷಣದ ಮಟ್ಟಿಗೆ ಜನರು ರಾಜನೀತಿ ಶಾಸ್ತ್ರ, ಸಮಾಜ ವಿಜ್ಞಾನ, ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ, ಖಗೋಳಶಾಸ್ತ್ರ, ಶಿಲ್ಪಶಾಸ್ತ್ರ — ಹೀಗೆ ಹಲವಾರು ವಿಭಾಗಗಳಲ್ಲಿ ಶ್ರಮಿಸುತ್ತಾರೆ. ಪ್ರಪಂಚಾದ್ಯಂತ ಜ್ಞಾನದ ಹಲವು ಶಾಖೆಗಳಿವೆ ಮತ್ತು ಅನೇಕ ದೊಡ್ಡ ವಿಶ್ವವಿದ್ಯಾಲಯಗಳಿವೆ. ಆದರೆ ದುರದೃಷ್ಟದಿಂದ, ಚೇತನಾತ್ಮದ ಶಾಸ್ತ್ರವನ್ನು ಹೇಳಿಕೊಡುವ ಗಣನೀಯ ವಿಶ್ವವಿದ್ಯಾಲಯ ಅಥವಾ ವಿದ್ಯಾಸಂಸ್ಥೆ ಒಂದೂ ಇಲ್ಲ. ಆತ್ಮವೇ ದೇಹದ ಅತ್ಯಂತ ಮುಖ್ಯ ಭಾಗ. ಆತ್ಮವಿಲ್ಲದಿದ್ದರೆ ದೇಹವು ನಿಷ್ಪ್ರಯೋಜಕ. ಆದರೂ ಜನರು ಬದುಕಿನಲ್ಲಿ ದೇಹದ ಅಗತ್ಯಗಳಿಗೆ ಪ್ರಾಮುಖ್ಯ ನೀಡುತ್ತಿದ್ದಾರೆ. ಬಹುಮುಖ್ಯವಾದ ಆತ್ಮದ ಕಡೆಗೆ ಅವರಿಗೆ ಗಮನವೇ ಇಲ್ಲ.

ಭಗವದ್ಗೀತೆಯು, ಮುಖ್ಯವಾಗಿ ಎರಡನೆಯ ಅಧ್ಯಾಯದಿಂದ, ಆತ್ಮದ ಮಹತ್ವವನ್ನು ಒತ್ತಿಹೇಳಿದೆ. ಪ್ರಾರಂಭದಲ್ಲಿಯೇ ಪ್ರಭುವು ದೇಹವು ನಾಶವಾಗುತ್ತದೆ, ಆತ್ಮಕ್ಕೆ ನಾಶವಿಲ್ಲ (ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ) ಎಂದು ಹೇಳುತ್ತಾನೆ. ಚೇತನಾತ್ಮವು ಈ ದೇಹದಿಂದ ಭಿನ್ನ, ಸ್ವಭಾವದಿಂದ ನಿರ್ವಿಕಲ್ಪ, ನಾಶವಿಲ್ಲದ್ದು ಮತ್ತು ಶಾಶ್ವತವಾದದ್ದು ಎಂಬ ತಿಳಿವಳಿಕೆಯೇ ಜ್ಞಾನದ ರಹಸ್ಯಭಾಗ. ಆದರೆ ಇದು ಆತ್ಮವನ್ನು ಕುರಿತು ಇತ್ಯಾತ್ಮಕ ಜ್ಞಾನವೇನನ್ನೂ ಕೊಡುವುದಿಲ್ಲ. ಆತ್ಮವು ದೇಹದಿಂದ ಬೇರೆ. ದೇಹವು ಮುಗಿದನಂತರ ಅಥವಾ ಮನುಷ್ಯನು ದೇಹದಿಂದ ಬಿಡುಗಡೆ ಹೊಂದಿದ ಮೇಲೆ ಆತ್ಮವು ಶೂನ್ಯದಲ್ಲಿ ಉಳಿಯುತ್ತದೆ ಇಲ್ಲವೇ ನಿರಾಕಾರವಾಗುತ್ತದೆ ಎಂದು ಕೆಲವೊಮ್ಮೆ ಜನರು ಭಾವಿಸುತ್ತಾರೆ. ಆದರೆ ಇದು ವಾಸ್ತವವಲ್ಲ. ದೇಹದೊಳಗಿದ್ದಾಗ ಅಷ್ಟೊಂದು ಚಟುವಟಿಕೆಯಿಂದ ಇರುವ ಆತ್ಮವು ದೇಹದಿಂದ ಬಿಡುಗಡೆ ಹೊಂದಿದ ಮೇಲೆ ನಿಷ್ಕ್ರಿಯವಾಗುವುದು ಹೇಗೆ? ಅದು ಯಾವಾಗಲೂ ಚಟುವಟಿಕೆಯಿಂದ ಕೂಡಿದ್ದು. ಅದು ಶಾಶ್ವತವಾದರೆ, ಅದರ ಚಟುವಟಿಕೆಗಳೂ ಶಾಶ್ವತ. ಆಧ್ಯಾತ್ಮಿಕ ರಾಜ್ಯದಲ್ಲಿ ಅದರ ಚಟುವಟಿಕೆಗಳು ಆಧ್ಯಾತ್ಮಿಕ ಜ್ಞಾನದ ಅತ್ಯಂತ ರಹಸ್ಯ ಭಾಗ. ಆದುದರಿಂದ ಚೇತನಾತ್ಮದ ಈ ಚಟುವಟಿಕೆಗಳು ಎಲ್ಲ ವಿದ್ಯೆಯ ರಾಜ, ಎಲ್ಲ ಜ್ಞಾನದ ಅತ್ಯಂತ ರಹಸ್ಯ ಭಾಗ ಎಂದು ಇಲ್ಲಿ ಸೂಚಿಸಲಾಗಿದೆ.

ವೈದಿಕ ಸಾಹಿತ್ಯದಲ್ಲಿ ವಿವರಿಸಿರುವಂತೆ, ಈ ವಿದ್ಯೆಯು ಎಲ್ಲ ಚಟುವಟಿಕೆಗಳ ಅತ್ಯಂತ ಪರಿಶುದ್ಧ ರೂಪ. ಪದ್ಮಪುರಾಣದಲ್ಲಿ ಮನುಷ್ಯನ ಪಾಪಕರ್ಮಗಳನ್ನು ವಿಶ್ಲೇಷಿಸಿ ಒಂದು ಪಾಪದ ಅನಂತರ ಮತ್ತೊಂದು ಪಾಪ ಮಾಡುತ್ತ ಹೋಗುವುದರ ಪರಿಣಾಮ ಇದು ಎಂದು ತೋರಿಸಿಕೊಟ್ಟಿದೆ. ಫಲಾಪೇಕ್ಷಿತ ಕರ್ಮಗಳಲ್ಲಿ ತೊಡಗಿರುವವರು ಪಾಪದ ಪ್ರತಿಕ್ರಿಯೆಗಳ ವಿವಿಧ ಹಂತಗಳಲ್ಲಿ ಮತ್ತು ರೂಪಗಳಲ್ಲಿ ಸಿಲುಕಿಕೊಂಡಿರುತ್ತಾರೆ. ಉದಾಹರಣೆಗೆ, ಒಂದು ವಿಶಿಷ್ಟ ಮರದ ಬೀಜವನ್ನು ಬಿತ್ತಿದಾಗ ಮರವು ಬೆಳೆಯುವುದು ಕೂಡಲೇ ಕಾಣುವುದಿಲ್ಲ; ಅದು ಬೆಳೆಯಲು ಒಂದಿಷ್ಟು ಕಾಲವನ್ನು ತೆಗೆದುಕೊಳ್ಳುತ್ತದೆ. ಮೊದಲು ಅದು ಸಣ್ಣ ಸಸಿ. ಅನಂತರ ಮರದ ರೂಪವನ್ನು ಪಡೆಯುತ್ತದೆ. ಅನಂತರ ಹೂವು ಹಣ್ಣುಗಳನ್ನು ಪಡೆಯುತ್ತದೆ. ಅದು ಸಂಪೂರ್ಣವಾಗಿ ಬೆಳೆದಾಗ, ಬೀಜವನ್ನು ಬಿತ್ತಿದವರು ಹೂವು ಹಣ್ಣುಗಳನ್ನು ಸವಿಯುತ್ತಾರೆ. ಹಾಗೆಯೇ ಮನುಷ್ಯನು ಪಾಪಕೆಲಸವನ್ನು ಮಾಡುತ್ತಾನೆ. ಬೀಜದಂತೆಯೇ ಅದೂ ಫಲವನ್ನು ನೀಡಲು ಕಾಲವನ್ನು

ತೆಗೆದುಕೊಳ್ಳುತ್ತದೆ. ಬೇರೆ ಬೇರೆ ಹಂತಗಳಿವೆ. ಪಾಪಕರ್ಮವು ಮನುಷ್ಯನೊಳಗಡೆ ಆಗಲೇ ನಿಂತುಹೋಗಿರಬಹುದು. ಆದರೆ ಆ ಪಾಪಕರ್ಮದ ಫಲವನ್ನು ಇನ್ನೂ ಅನುಭವಿಸಬೇಕಾಗಿದೆ. ಇನ್ನೂ ಬೀಜರೂಪದಲ್ಲಿರುವ ಪಾಪಗಳಿರುತ್ತವೆ. ಆಗಲೇ ಫಲಿತವಾಗಿರುವ ಇತರ ಪಾಪಕರ್ಮಗಳಿವೆ. ಇವುಗಳನ್ನು ನಾವು ಸಂಕಟ ಮತ್ತು ನೋವುಗಳ ರೂಪದಲ್ಲಿ ಅನುಭವಿಸುತ್ತೇವೆ.

ಏಳನೆಯ ಅಧ್ಯಾಯದ ಇಪ್ಪತ್ತೆಂಟನೆಯ ಶ್ಲೋಕದಲ್ಲಿ ವಿವರಿಸಿದಂತೆ ಎಲ್ಲ ಪಾಪಕರ್ಮಗಳ ಪ್ರತಿಕ್ರಿಯೆಗಳನ್ನು ಕೊನೆಗಾಣಿಸಿ ಪುಣ್ಯಕಾರ್ಯಗಳಲ್ಲಿ ಸಂಪೂರ್ಣವಾಗಿ ನಿರತನಾಗಿರುವವನು ಈ ಐಹಿಕ ಜಗತ್ತಿನ ದ್ವಂದ್ವದಿಂದ ಬಿಡುಗಡೆ ಹೊಂದುತ್ತಾನೆ; ದೇವೋತ್ತಮ ಪರಮ ಪುರುಷನಾದ ಕೃಷ್ಣನ ಭಕ್ತಿಸೇವೆಯಲ್ಲಿ ತೊಡಗುತ್ತಾನೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ವಾಸ್ತವವಾಗಿ ನಿರತರಾಗಿರುವವರು ಆಗಲೇ ಎಲ್ಲ ಪ್ರತಿಕ್ರಿಯೆಗಳಿಂದ ಬಿಡುಗಡೆ ಹೊಂದಿರುತ್ತಾರೆ. ಈ ಮಾತನ್ನು ಪದ್ಮಪುರಾಣವು ದೃಢಪಡಿಸುತ್ತದೆ.

**ಅಪ್ರಾರಬ್ಧಫಲಂ ಪಾಪಂ ಕೂಟಂ ಬೀಜಂ ಫಲೋನ್ಮುಖಮ್ |**
**ಕ್ರಮೇಣೈವ ಪ್ರಲೀಯೇತ ವಿಷ್ಣುಭಕ್ತಿರತಾತ್ಮನಾಮ್ ||**

ದೇವೋತ್ತಮ ಪರಮ ಪುರುಷನ ಭಕ್ತಿಸೇವೆಯಲ್ಲಿ ನಿರತರಾದವರ ಮಟ್ಟಿಗೆ, ಎಲ್ಲ ಪಾಪಗಳ ಪ್ರತಿಕ್ರಿಯೆಗಳು, ಅವು ಫಲ ನೀಡುತ್ತಿರಲಿ, ಸಂಗ್ರಹದಲ್ಲಿರಲಿ ಅಥವಾ ಬೀಜರೂಪದಲ್ಲಿರಲಿ ಕ್ರಮೇಣ ಅದೃಶ್ಯವಾಗುತ್ತವೆ. ಆದುದರಿಂದ ಭಕ್ತಿಸೇವೆಯ ಪರಿಶುದ್ಧಗೊಳಿಸುವ ಶಕ್ತಿಯು ಬಲವತ್ತರವಾದದ್ದು; ಅದಕ್ಕೆ **ಪವಿತ್ರಮ್ ಉತ್ತಮಮ್**, ಅತ್ಯಂತ ಪರಿಶುದ್ಧವಾದದ್ದು, ಎಂದು ಹೆಸರು. **ಉತ್ತಮ** ಎಂದರೆ ಆಧ್ಯಾತ್ಮಿಕ. **ತಮಸ್** ಎಂದರೆ ಈ ಐಹಿಕ ಜಗತ್ತು ಅಥವಾ ಕತ್ತಲೆ. **ಉತ್ತಮ** ಎಂದರೆ ಐಹಿಕ ಚಟುವಟಿಕೆಗಳನ್ನು ಮೀರಿದ್ದು. ಕೆಲವೊಮ್ಮೆ ಭಕ್ತನು ಸಾಮಾನ್ಯ ಮನುಷ್ಯರಂತೆಯೇ ಕೆಲಸದಲ್ಲಿ ತೊಡಗಿದ್ದಾನೆ ಎಂದು ಕಂಡರೂ ಭಕ್ತಿಸೇವೆಯನ್ನು ಐಹಿಕ ಎಂದು ಪರಿಗಣಿಸಲೇಬಾರದು. ಭಕ್ತಿಸೇವೆಯನ್ನು ಕಂಡು ಅದರ ಪರಿಚಯವನ್ನು ಹೊಂದಿರುವವನು ಅವು ಐಹಿಕ ಚಟುವಟಿಕೆಗಳಲ್ಲ ಎಂದು ತಿಳಿಯುತ್ತಾನೆ. ಅವೆಲ್ಲ ಭಕ್ತಿಪೂರ್ವಕ ಮತ್ತು ಆಧ್ಯಾತ್ಮಿಕ; ಅವಕ್ಕೆ ಐಹಿಕ ಪ್ರಕೃತಿಯ ಗುಣಗಳ ಕಲ್ಮಷದ ಸೋಂಕಿಲ್ಲ.

ಭಕ್ತಿಸೇವೆಯ ನಿರ್ವಹಣೆಯು ಎಷ್ಟು ಪರಿಪೂರ್ಣವೆಂದರೆ ಅದರ ಪರಿಣಾಮಗಳನ್ನು ನೇರವಾಗಿ ಕಾಣಬಹುದು. ನೇರ ಪರಿಣಾಮವನ್ನು ವಾಸ್ತವವಾಗಿ ಕಾಣುತ್ತೇವೆ; ಯಾವ ಮನುಷ್ಯನೇ ಆಗಲಿ ಕೃಷ್ಣನ ಪವಿತ್ರನಾಮಗಳನ್ನು (ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ) ಸಂಕೀರ್ತನೆ ಮಾಡುವಾಗ ಯಾವುದೋ ದಿವ್ಯಾನಂದವನ್ನು ಅನುಭವಿಸುತ್ತಾನೆ ಮತ್ತು ಬಹು ಶೀಘ್ರವಾಗಿ ಎಲ್ಲ ಐಹಿಕ ಸೋಂಕಿನಿಂದ ಪರಿಶುದ್ಧನಾಗುತ್ತಾನೆ ಎನ್ನುವುದು ನಮ್ಮ ವಾಸ್ತವ ಅನುಭವ. ಇದನ್ನು ವಾಸ್ತವವಾಗಿ ನೋಡುತ್ತೇವೆ, ಇಷ್ಟೇ ಅಲ್ಲದೆ ಶ್ರವಣದಲ್ಲಿ ತೊಡಗುವುದು ಮಾತ್ರವಲ್ಲದೆ ಭಕ್ತಿ ಚಟುವಟಿಕೆಗಳ ಸಂದೇಶವನ್ನು ಪ್ರಸಾರ ಮಾಡಲು ಪ್ರಯತ್ನಿಸಿದರೆ ಅಥವಾ ಕೃಷ್ಣಪ್ರಜ್ಞೆಯ ಪ್ರಸಾರದ ಚಟುವಟಿಕೆಗಳಿಗೆ ನೆರವಾಗುವುದರಲ್ಲಿ ತೊಡಗಿದರೆ ಅಂತಹ ಮನುಷ್ಯನಿಗೆ ಕ್ರಮೇಣ ತಾನು ಆಧ್ಯಾತ್ಮಿಕವಾಗಿ ಮುನ್ನಡೆಯುತ್ತಿದ್ದೇನೆ ಎನ್ನುವ ಭಾವವು ಬರುತ್ತದೆ. ಆಧ್ಯಾತ್ಮಿಕ ಬದುಕಿನಲ್ಲಿ ಈ ಮುನ್ನಡೆಯು ಯಾವುದೇ ಬಗೆಯ ಹಿಂದಿನ ಶಿಕ್ಷಣವನ್ನಾಗಲಿ, ಅರ್ಹತೆಯನ್ನಾಗಲಿ ಅವಲಂಬಿಸುವುದಿಲ್ಲ.

ಈ ವಿಧಾನ ಎಷ್ಟು ಪರಿಶುದ್ಧ ಎಂದರೆ ಅದರಲ್ಲಿ ತೊಡಗುವುದರಿಂದಲೇ ಮನುಷ್ಯನು ಪರಿಶುದ್ಧನಾಗುತ್ತಾನೆ.

ವೇದಾಂತ ಸೂತ್ರದಲ್ಲಿ (3.2.26) ಇದನ್ನು ಹೀಗೆ ವರ್ಣಿಸಿದೆ—**ಪ್ರಕಾಶಶ್ಚ ಕರ್ಮಣಿ ಅಭ್ಯಾಸಾತ್.** "ಭಕ್ತಿಸೇವೆಯ ಶಕ್ತಿಯು ಎಷ್ಟೆಂದರೆ ಭಕ್ತಿಸೇವೆಯ ಚಟುವಟಿಕೆಗಳಲ್ಲಿ ತೊಡಗುವುದರಿಂದ ನಿಶ್ಚಯವಾಗಿಯೂ ಮನುಷ್ಯನಿಗೆ ಜ್ಞಾನೋದಯವಾಗುತ್ತದೆ." ಇದರ ವಾಸ್ತವ ಉದಾಹರಣೆಯನ್ನು ನಾರದರ ಹಿಂದಿನ ಜನ್ಮದಲ್ಲಿ ನೋಡಬಹುದು. ಆ ಜನ್ಮದಲ್ಲಿ ಅವರು ಒಬ್ಬ ದಾಸಿಯ ಮಗನಾಗಿದ್ದರು. ಅವರಿಗೆ ವಿದ್ಯೆಯೂ ಇರಲಿಲ್ಲ ಮತ್ತು ಅವರು ಉತ್ತಮ ಕುಟುಂಬದಲ್ಲಿ ಜನಿಸಿಯೂ ಇರಲಿಲ್ಲ. ಆದರೆ ಅವರ ತಾಯಿಯು ಮಹಾಭಕ್ತರ ಸೇವೆಯಲ್ಲಿ ತೊಡಗಿದ್ದಾಗ ನಾರದರೂ ಅದರಲ್ಲಿ ನಿರತರಾದರು ಮತ್ತು ಕೆಲವೊಮ್ಮೆ ತಾಯಿಯು ಇಲ್ಲದಿದ್ದಾಗ ಸ್ವತಃ ನಾರದರೇ ಆ ಮಹಾಭಕ್ತರ ಸೇವೆಯನ್ನೂ ಮಾಡುತ್ತಿದ್ದರು. ನಾರದರೇ ಹೀಗೆ ಹೇಳಿದ್ದಾರೆ—

**ಉಚ್ಛಿಷ್ಟಲೇಪಾನ್ ಅನುಮೋದಿತೋ ದ್ವಿಜೈಃ**
**ಸಕೃತ್ ಸ್ಮ ಭುಞ್ಜೇ ತದಪಾಸ್ತಕಿಲ್ಬಿಷಃ ।**
**ಏವಂ ಪ್ರವೃತ್ತಸ್ಯ ವಿಶುದ್ಧ ಚೇತಸಸ್**
**ತದ್ಧರ್ಮ ಏವಾತ್ಮರುಚಿಃ ಪ್ರಜಾಯತೇ ॥**

ಶ್ರೀಮದ್ಭಾಗವತದ (1.5.25) ಈ ಶ್ಲೋಕದಲ್ಲಿ ನಾರದರು ತಮ್ಮ ಹಿಂದಿನ ಜನ್ಮವನ್ನು ತಮ್ಮ ಶಿಷ್ಯರಾದ ವ್ಯಾಸದೇವರಿಗೆ ವರ್ಣಿಸುತ್ತಾರೆ. ಆ ಪರಿಶುದ್ಧ ಭಕ್ತರು ನಾಲ್ಕು ತಿಂಗಳ ಕಾಲ ಇದ್ದಾಗ ಹುಡುಗನಾಗಿದ್ದ ನಾರದರು ಅವರ ಸೇವೆಯಲ್ಲಿ ತೊಡಗಿದ್ದರು ಮತ್ತು ಅವರ ಆತ್ಮೀಯ ಸಹವಾಸದಲ್ಲಿದ್ದರು. ಕೆಲವೊಮ್ಮೆ ಆ ಋಷಿಗಳು ತಮ್ಮ ತಟ್ಟೆಯಲ್ಲಿ ಆಹಾರದ ತುಣುಕುಗಳನ್ನು ಉಳಿಸಿರುತ್ತಿದ್ದರು. ಅವರ ತಟ್ಟೆಗಳನ್ನು ತೊಳೆಯುತ್ತಿದ್ದ ಹುಡುಗನು ಆ ತುಣಕುಗಳ ರುಚಿಯನ್ನು ನೋಡಲು ಬಯಸಿದ. ಆತನು ಆ ಮಹಾಭಕ್ತರ ಅನುಮತಿಯನ್ನು ಬೇಡಿದ. ಅವರು ಅನುಮತಿಯನ್ನು ನೀಡಿದಾಗ ನಾರದರು ಉಳಿದಿದ್ದ ಆ ತುಣುಕುಗಳನ್ನು ತಿಂದರು. ಇದರ ಪರಿಣಾಮವಾಗಿ ಅವರು ಎಲ್ಲ ಪಾಪಪೂರಿತ ಪ್ರತಿಕ್ರಿಯೆಗಳಿಂದ ಬಿಡುಗಡೆ ಹೊಂದಿದರು. ಅವರು ಆಹಾರದ ಶೇಷವನ್ನು ತಿನ್ನುತ್ತಹೋದಂತೆ ಋಷಿಗಳಷ್ಟೇ ಪರಿಶುದ್ಧ ಹೃದಯರಾದರು. ಮಹಾಭಕ್ತರು ಶ್ರವಣದಿಂದ ಮತ್ತು ಸಂಕೀರ್ತನೆಯಿಂದ ಪ್ರಭುವಿನ ನಿರಂತರ ಭಕ್ತಿಸೇವೆಯನ್ನು ಸವಿಯುತ್ತಿದ್ದರು. ಕ್ರಮೇಣ ನಾರದರೂ ಅದೇ ಅಭಿರುಚಿಯನ್ನು ಬೆಳೆಸಿಕೊಂಡರು. ನಾರದರು ಮುಂದೆ ಹೀಗೆ ಹೇಳುತ್ತಾರೆ —

**ತತ್ರಾನ್ವಹಂ ಕೃಷ್ಣಕಥಾಃ ಪ್ರಗಾಯತಾಮ್**
**ಅನುಗ್ರಹೇಣಾಶೃಣವಂ ಮನೋಹರಾಃ ।**
**ತಾಃ ಶ್ರದ್ಧಯಾ ಮೇನುಪದಂ ವಿಶೃಣ್ವತಃ**
**ಪ್ರಿಯಶ್ರವಸ್ಯಙ್ಗ ಮಮಾಭವದ್ ರುಚಿಃ ॥**

ಋಷಿಗಳ ಸಹವಾಸದಿಂದ ನಾರದರಿಗೆ ಪ್ರಭುವಿನ ದಿವ್ಯ ಮಹಿಮೆಯನ್ನು ಕೇಳುವುದರಲ್ಲಿ ಮತ್ತು ಸಂಕೀರ್ತನೆ ಮಾಡುವುದರಲ್ಲಿ ಅಭಿರುಚಿಯು ಬಂದಿತು; ಅವರು ಭಕ್ತಿಸೇವೆಗಾಗಿ

ಹಂಬಲಿಸಿದರು. ಆದುದರಿಂದ ವೇದಾಂತ ಸೂತ್ರದಲ್ಲಿ ಹೇಳಿದಂತೆ **ಪ್ರಕಾಶಶ್ಚ ಕರ್ಮಣಿ ಅಭ್ಯಾಸಾತ್** ಎಂದರೆ ಒಬ್ಬ ಮನುಷ್ಯನು ಭಕ್ತಿ ಸೇವೆಯಲ್ಲಿ ನಿರತನಾಗಿದ್ದರೆ ಸಾಕು, ಎಲ್ಲವೂ ಅವನಿಗೆ ತಂತಾನೇ ಪ್ರಕಟವಾಗುತ್ತದೆ ಮತ್ತು ಆತನು ಅವನ್ನೆಲ್ಲ ಅರ್ಥಮಾಡಿಕೊಳ್ಳುತ್ತಾನೆ. ಇದಕ್ಕೆ **ಪ್ರತ್ಯಕ್ಷ** ಎಂದರೆ ನೇರವಾಗಿ ಗ್ರಹಿಸಿದ್ದು ಎಂದು ಅರ್ಥ.

ಧರ್ಮ್ಯಮ್ ಎಂದರೆ 'ಧರ್ಮ ಮಾರ್ಗ' ಎಂದರ್ಥ. ನಾರದರು ವಾಸ್ತವವಾಗಿ ಒಬ್ಬ ದಾಸಿಯ ಮಗ. ಅವರಿಗೆ ಶಾಲೆಗೆ ಹೋಗುವ ಅವಕಾಶ ಇರಲಿಲ್ಲ. ಅವರು ತಾಯಿಗೆ ನೆರವಾಗುತ್ತಿದ್ದರು ಅಷ್ಟೇ; ಸುದೈವದಿಂದ ಅವರ ತಾಯಿಯು ಭಕ್ತರಿಗೆ ಒಂದಿಷ್ಟು ಸೇವೆ ಮಾಡಿದಳು. ಮಗು ನಾರದರಿಗೂ ಆ ಅವಕಾಶ ದೊರೆಯಿತು. ಸಹವಾಸ ಮಾತ್ರದಿಂದಲೇ ಅವರು ಎಲ್ಲ ಧರ್ಮದ ಅತ್ಯುನ್ನತ ಗುರಿಯನ್ನು ಸಾಧಿಸಿದರು. ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ ಎಲ್ಲ ಧರ್ಮದ ಅತ್ಯುನ್ನತ ಗುರಿ ಎಂದರೆ ಭಕ್ತಿಸೇವೆ (**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರ್ ಅಧೋಕ್ಷಜೇ**). ಧಾರ್ಮಿಕ ಜನರಿಗೆ, ಭಕ್ತಿಸೇವೆಯೇ ಧರ್ಮದ ಅತ್ಯುನ್ನತ ಪರಿಪೂರ್ಣತೆ ಎನ್ನುವುದು ತಿಳಿದಿರುವುದಿಲ್ಲ. ಎಂಟನೆಯ ಅಧ್ಯಾಯದ ಕಡೆಯ ಶ್ಲೋಕಕ್ಕೆ ಸಂಬಂಧಿಸಿ ನಾವು ಆಗಲೇ ಚರ್ಚಿಸಿದಂತೆ (**ವೇದೇಷು ಯಜ್ಞೇಷು ತಪಃಸು ಚೈವ**) ಸಾಮಾನ್ಯವಾಗಿ ಆತ್ಮಸಾಕ್ಷಾತ್ಕಾರಕ್ಕೆ ವೇದಗಳ ಜ್ಞಾನ ಅಗತ್ಯ. ಆದರೆ ಇಲ್ಲಿ ನಾರದರು ಯಾವುದೇ ಗುರುವಿನ ಪಾಠಶಾಲೆಗೂ ಹೋಗದಿದ್ದರೂ, ವೈದಿಕತತ್ವಗಳಲ್ಲಿ ಶಿಕ್ಷಣ ಪಡೆಯದಿದ್ದರೂ, ವೇದಗಳ ಅಭ್ಯಾಸದಿಂದ ಬರುವ ಅತ್ಯುನ್ನತ ಫಲಗಳನ್ನು ಪಡೆದರು. ಈ ಪ್ರಕ್ರಿಯೆಯ ಶಕ್ತಿಯು ಎಷ್ಟು ಎಂದರೆ ಧಾರ್ಮಿಕ ಪ್ರಕ್ರಿಯೆಯನ್ನು ಕ್ರಮವಾಗಿ ಆಚರಿಸದೆಯೂ ಮನುಷ್ಯನು ಅತ್ಯುನ್ನತ ಪರಿಪೂರ್ಣತೆಗೆ ಏರಬಹುದು. ಇದು ಹೇಗೆ ಸಾಧ್ಯ? ಇದನ್ನು ವೈದಿಕ ಸಾಹಿತ್ಯವೂ ದೃಢಪಡಿಸುತ್ತದೆ—**ಆಚಾರ್ಯವಾನ್ ಪುರುಷೋ ವೇದ.** ಶ್ರೇಷ್ಠ ಆಚಾರ್ಯರ ಸಹವಾಸದಲ್ಲಿ ಇರುವವನು ವಿದ್ಯಾಭ್ಯಾಸವಿಲ್ಲದಿದ್ದರೂ ಮತ್ತು ವೇದಗಳನ್ನು ಎಂದೂ ಅಧ್ಯಯನ ಮಾಡದಿದ್ದರೂ ಸಾಕ್ಷಾತ್ಕಾರಕ್ಕೆ ಅಗತ್ಯವಾದ ಎಲ್ಲ ವಿದ್ಯೆಯ ಪರಿಚಯವನ್ನೂ ಪಡೆಯಬಲ್ಲನು.

ಭಕ್ತಿಸೇವೆಯ ಪ್ರಕ್ರಿಯೆಯು ಬಹು ಸುಖಕರವಾದದ್ದು (**ಸುಸುಖಮ್**). ಏಕೆ? ಭಕ್ತಿಸೇವೆ ಎಂದರೆ **ಶ್ರವಣಂ ಕೀರ್ತನಂ ವಿಷ್ಣೋಃ.** ಆದುದರಿಂದ ಮನುಷ್ಯನು ಪ್ರಭುವಿನ ಮಹಿಮೆಯ ಸಂಕೀರ್ತನೆಯನ್ನು ಕೇಳಬಹುದು ಅಥವಾ ಅಧಿಕಾರ ಪಡೆದ ಆಚಾರ್ಯರು ದಿವ್ಯಜ್ಞಾನವನ್ನು ಕುರಿತು ನೀಡುವ ತಾತ್ವಿಕ ಉಪನ್ಯಾಸಗಳಿಗೆ ಹೋದರೆ ಸಾಕು; ಸುಮ್ಮನೆ ಕುಳಿತೇ ಭಕ್ತನು ಕಲಿಯಬಹುದು; ಅನಂತರ ದೇವರ ಪ್ರಸಾದವನ್ನು, ರುಚಿಯಾದ ತಿಂಡಿಗಳನ್ನು ತಿನ್ನಬಹುದು. ಪ್ರತಿಯೊಂದು ಸ್ಥಿತಿಯಲ್ಲಿಯೂ ಭಕ್ತಿಸೇವೆಯು ಆನಂದದಾಯಕವಾದದ್ದು. ಅತ್ಯಂತ ದಾರಿದ್ರ್ಯದ ಸ್ಥಿತಿಯಲ್ಲಿಯೂ ಭಕ್ತಿಸೇವೆಯನ್ನು ಮಾಡಬಹುದು. ಪ್ರಭುವು, **ಪತ್ರಂ ಪುಷ್ಪಂ ಫಲಂ ತೋಯಮ್** ಎನ್ನುತ್ತಾನೆ. ಭಕ್ತನು ಯಾವುದೇ ಕಾಣಿಕೆಯನ್ನು ಕೊಡಲಿ, ಸ್ವೀಕರಿಸಲು ಪ್ರಭುವು ಸಿದ್ಧನಾಗಿದ್ದಾನೆ. ಒಂದು ಎಲೆ, ಒಂದು ಹೂವು, ಹಣ್ಣಿನ ಒಂದು ಚೂರು, ಅಥವಾ ಒಂದಿಷ್ಟು ನೀರು, ಇವು ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ದೊರೆಯುತ್ತವೆ. ಮನುಷ್ಯನ ಸಾಮಾಜಿಕ ಸ್ಥಾನವೇನೇ ಇರಲಿ, ಯಾವ ಮನುಷ್ಯನೇ ಆಗಲಿ ಇದನ್ನು ಅರ್ಪಿಸಬಹುದು. ಪ್ರಭುವು ಅದನ್ನು ಪ್ರೀತಿಯಿಂದ ಸ್ವೀಕರಿಸುತ್ತಾನೆ. ಚರಿತ್ರೆಯಲ್ಲಿ ಇಂತಹ ನಿದರ್ಶನಗಳು ಹೇರಳವಾಗಿವೆ. ಪ್ರಭುವಿನ ಚರಣಕಮಲಗಳಿಗೆ ಅರ್ಪಿಸುವ ತುಳಸಿಯನ್ನು ಆಸ್ವಾದಿಸಿದುದರಿಂದಲೇ ಸನತ್ಕುಮಾರನಂತಹ ಮಹರ್ಷಿಗಳು ಶ್ರೇಷ್ಠ ಭಕ್ತರಾದರು. ಆದುದರಿಂದ ಭಕ್ತಿಮಾರ್ಗವು ಬಹು ಸೊಗಸಾದದ್ದು.

ಅದನ್ನು ಸುಖವಾದ ಮನಸ್ಥಿತಿಯಲ್ಲಿ ಅನುಸರಿಸಬಹುದು. ಭಗವಂತನು ಅವನಿಗೆ ಅರ್ಪಿಸಿದ ವಸ್ತುಗಳ ಹಿಂದಿರುವ ಪ್ರೀತಿಯನ್ನೇ ಸ್ವೀಕರಿಸುತ್ತಾನೆ.

ಭಕ್ತಿಸೇವೆಯು ಶಾಶ್ವತವಾದದ್ದು ಎಂದು ಇಲ್ಲಿ ಹೇಳಿದೆ. ಇದು ಮಾಯಾವಾದಿ ತತ್ವಶಾಸ್ತ್ರಜ್ಞರು ಹೇಳುವ ರೀತಿ ಅಲ್ಲ. ಅವರು ಹಲವೊಮ್ಮೆ ಹೆಸರಿಗೆ ಮಾತ್ರದ ಭಕ್ತಿಸೇವೆಯನ್ನು ಆಚರಿಸುತ್ತಾರೆ, ಆದರೂ ತಾವು ಭಕ್ತಿಸೇವೆಯನ್ನು ಮುಂದುವರಿಸಿ, ಮುಕ್ತರಾದ ಅನಂತರ "ದೇವರೊಡನೆ ಒಂದಾಗುತ್ತೇವೆ", ಎಂದು ಭಾವಿಸುತ್ತಾರೆ. ಇಂತಹ ತಾತ್ಕಾಲಿಕ ಸಮಯಾನುವರ್ತಿ ಭಕ್ತಿಸೇವೆಯನ್ನು ಪರಿಶುದ್ಧ ಭಕ್ತಿಸೇವೆ ಎಂದು ಸ್ವೀಕರಿಸುವುದಿಲ್ಲ. ವಾಸ್ತವವಾದ ಭಕ್ತಿಸೇವೆಯು ಮುಕ್ತಿಯ ಅನಂತರವೂ ಮುಂದುವರಿಯುತ್ತದೆ. ಭಕ್ತನು ಭಗವಂತನ ರಾಜ್ಯದಲ್ಲಿನ ದಿವ್ಯಲೋಕಕ್ಕೆ ಹೋದಾಗ, ಅಲ್ಲಿಯೂ ಭಗವಂತನನ್ನು ಸೇವಿಸುವುದರಲ್ಲಿ ನಿರತನಾಗುತ್ತಾನೆ. ಆತನು ಪರಮ ಪ್ರಭುವಿನೊಡನೆ ಒಂದಾಗಲು ಯತ್ನಿಸುವುದಿಲ್ಲ.

ಭಗವದ್ಗೀತೆಯಲ್ಲಿ ಕಾಣುವಂತೆ, ವಾಸ್ತವವಾದ ಭಕ್ತಿಸೇವೆಯು ಮುಕ್ತಿಯ ಅನಂತರ ಪ್ರಾರಂಭವಾಗುತ್ತದೆ. ಮುಕ್ತನಾದ ಮೇಲೆ ಮನುಷ್ಯನು ಬ್ರಹ್ಮನ್ (ಬ್ರಹ್ಮ ಭೂತ) ನೆಲೆಯನ್ನು ಪಡೆದಾಗ ಅವನ ಭಕ್ತಿಸೇವೆಯು ಪ್ರಾರಂಭವಾಗುತ್ತದೆ (**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್**) **ಕರ್ಮಯೋಗ, ಜ್ಞಾನಯೋಗ, ಅಷ್ಟಾಂಗಯೋಗ** ಅಥವಾ ಬೇರಾವುದೇ ಯೋಗವನ್ನು ಪ್ರತ್ಯೇಕವಾಗಿ ಆಚರಿಸುವುದರಿಂದ ಯಾರೂ ದೇವೋತ್ತಮ ಪರಮ ಪುರುಷನನ್ನು ಅರಿಯಲಾರರು. ಈ ಯೋಗ ಮಾರ್ಗಗಳಿಂದ ಮನುಷ್ಯನು ಭಕ್ತಿಯೋಗದತ್ತ ಸ್ವಲ್ಪಮಟ್ಟಿಗೆ ಮುನ್ನಡೆಯಬಹುದು. ಆದರೆ ಭಕ್ತಿಸೇವೆಯ ಘಟ್ಟಕ್ಕೆ ಬಾರದೆ ಮನುಷ್ಯನಿಗೆ ದೇವೋತ್ತಮ ಪುರುಷನೆಂದರೆ ಏನು ಎಂದು ಅರ್ಥವಾಗುವುದಿಲ್ಲ. ಭಕ್ತಿಸೇವೆಯ ಅನುಷ್ಠಾನದಿಂದ, ಅದರಲ್ಲಿಯೂ ಸಾಕ್ಷಾತ್ಕಾರ ಸಾಧಿಸಿದ ಚೇತನಗಳಿಂದ ಶ್ರೀಮದ್ಭಾಗವತವನ್ನೋ ಭಗವದ್ಗೀತೆಯನ್ನೋ ಕೇಳಿ ಮನುಷ್ಯನು ಪರಿಶುದ್ಧನಾದಾಗ ಅವನಿಗೆ ಕೃಷ್ಣವಿಜ್ಞಾನ ಅಥವಾ ದೈವವಿಜ್ಞಾನವು ಅರ್ಥವಾಗುತ್ತದೆ. ಹೀಗೆಂದು ಶ್ರೀಮದ್ಭಾಗವತದಲ್ಲಿಯೂ ದೃಢಪಡಿಸಿದೆ. **ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ**. ಮನುಷ್ಯನ ಹೃದಯದಿಂದ ಎಲ್ಲ ಅಪಾರ್ಥಗಳೂ ತೊಲಗಿ ಹೋದಾಗ ಅವನಿಗೆ ದೇವರೆಂದರೆ ಏನು ಎಂದು ಅರ್ಥವಾಗುತ್ತದೆ. ಹೀಗೆ ಭಕ್ತಿಸೇವೆಯ ಪ್ರಕ್ರಿಯೆಯು ಅಥವಾ ಕೃಷ್ಣಪ್ರಜ್ಞೆಯು, ರಾಜವಿದ್ಯೆ; ಎಲ್ಲ ರಹಸ್ಯವಿದ್ಯೆಯ ರಾಜ. ಇದು ಧರ್ಮದ ಅತ್ಯಂತ ಪರಿಶುದ್ಧ ರೂಪ. ಅದನ್ನು ಕಷ್ಟವಿಲ್ಲದೆ ಸಂತೋಷವಾಗಿ ಅನುಸರಿಸಬಹುದು. ಆದುದರಿಂದ ಅದನ್ನು ಅಂಗೀಕರಿಸಬೇಕು.

## ಶ್ಲೋಕ - 3

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರನ್ತಪ |**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ||೩||**

**ಅಶ್ರದ್ದಧಾನಾಃ**—ಶ್ರದ್ಧಾಹೀನರಾದ; **ಪುರುಷಾಃ**—ಅಂತಹ ವ್ಯಕ್ತಿಗಳು; **ಧರ್ಮಸ್ಯ**—ಧರ್ಮದ ಪ್ರಕ್ರಿಯೆಯಲ್ಲಿ; **ಅಸ್ಯ**—ಈ; **ಪರನ್ತಪ**—ಶತ್ರುಸಂಹಾರಕನೇ; **ಅಪ್ರಾಪ್ಯ**—ಪಡೆಯದೆ; **ಮಾಮ್**—

ನನ್ನನ್ನು; **ನಿವರ್ತನ್ತೇ**—ಹಿಂದಿರುಗುತ್ತಾರೆ; **ಮೃತ್ಯು**—ಸಾವಿನ; **ಸಂಸಾರ**—ಭೌತಿಕ ಅಸ್ತಿತ್ವದ; **ವರ್ತ್ಮನಿ**—ಮಾರ್ಗದಲ್ಲಿ.

## ಅನುವಾದ

**ಶತ್ರುಸಂಹಾರಕನಾದ ಅರ್ಜುನನೇ, ಈ ಭಕ್ತಿಸೇವೆಯಲ್ಲಿ ಶ್ರದ್ಧಾವಂತರಲ್ಲದವರು ನನ್ನನ್ನು ಪಡೆಯಲಾರರು. ಆದುದರಿಂದ ಅವರು ಈ ಐಹಿಕ ಜಗತ್ತಿನಲ್ಲಿ ಜನನ-ಮರಣಗಳ ಮಾರ್ಗಕ್ಕೆ ಹಿಂದಿರುಗುವರು.**

## ಭಾವಾರ್ಥ

ಶ್ರದ್ಧೆ ಇಲ್ಲದವರು ಈ ಭಕ್ತಿಸೇವೆಯ ಪ್ರಕ್ರಿಯೆಯನ್ನು ಸಾಧಿಸಲಾರರು. ಇದೇ ಶ್ಲೋಕದ ಸಾರಾಂಶ. ಭಕ್ತರ ಸಹವಾಸದಿಂದ ಶ್ರದ್ಧೆಯು ಹುಟ್ಟುತ್ತದೆ. ಮಹಾತ್ಮರಿಂದ ವೈದಿಕ ಸಾಹಿತ್ಯದ ಎಲ್ಲ ಸಾಕ್ಷ್ಯವನ್ನು ಕೇಳಿಯೂ ದುರದೃಷ್ಟವಂತರಿಗೆ ದೇವರಲ್ಲಿ ಶ್ರದ್ಧೆಯು ಬರುವುದಿಲ್ಲ. ಅವರು ಅರೆಮನಸ್ಸಿನವರು ಮತ್ತು ಪ್ರಭುವಿನ ಭಕ್ತಿಸೇವೆಯಲ್ಲಿ ಸ್ಥಿರವಾಗಿರಲಾರರು. ಹೀಗೆ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯಲು ಶ್ರದ್ಧೆಯು ಒಂದು ಬಹು ಮುಖ್ಯ ಅಂಶ. ಪರಮ ಪ್ರಭುವಾದ ಕೃಷ್ಣನನ್ನು ಸೇವಿಸಿದರೆ ಸಾಕು, ಮನುಷ್ಯನು ಎಲ್ಲ ಪರಿಪೂರ್ಣತೆಯನ್ನು ಸಾಧಿಸಬಹುದು ಎಂಬ ಪೂರ್ಣ ದೃಢನಂಬಿಕೆಯೇ ಶ್ರದ್ಧೆ ಎಂದು ಚೈತನ್ಯ ಚರಿತಾಮೃತದಲ್ಲಿ ಹೇಳಿದೆ. ಅದೇ ನಿಜವಾದ ಶ್ರದ್ಧೆ. ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ (4.31.14) —

**ಯಥಾ ತರೋರ್ ಮೂಲನಿಷೇಚನೇನ**
**ತೃಪ್ಯನ್ತಿ ತತ್ಸ್ಕನ್ಧಭುಜೋಪಶಾಖಾಃ |**
**ಪ್ರಾಣೋಪಹಾರಾಚ್ಚ ಯಥೇನ್ದ್ರಿಯಾಣಾಂ**
**ತಥೈವ ಸರ್ವಾರ್ಹಣಮ್ ಅಚ್ಯುತೇಜ್ಯಾ ||**

"ಮರದ ಬೇರಿಗೆ ನೀರನ್ನು ಹಾಕಿ ಮನುಷ್ಯನು ಅದರ ಕೊಂಬೆಗಳನ್ನು, ಸಣ್ಣ ಶಾಖೆಗಳನ್ನು ಮತ್ತು ಎಲೆಗಳನ್ನು ತೃಪ್ತಿಪಡಿಸುತ್ತಾನೆ; ಹೊಟ್ಟೆಗೆ ಆಹಾರವನ್ನು ಕೊಟ್ಟು ಮನುಷ್ಯನು ದೇಹದ ಎಲ್ಲ ಇಂದ್ರಿಯಗಳನ್ನು ತೃಪ್ತಿಪಡಿಸುತ್ತಾನೆ. ಇದೇ ರೀತಿಯಲ್ಲಿ ಪರಮ ಪ್ರಭುವಿನ ದಿವ್ಯಸೇವೆಯಲ್ಲಿ ತೊಡಗಿದ ಮನುಷ್ಯನು ಎಲ್ಲ ದೇವತೆಗಳನ್ನು ಹಾಗೂ ಇತರ ಎಲ್ಲ ಜೀವಿಗಳನ್ನು ತೃಪ್ತಿಪಡಿಸುತ್ತಾನೆ." ಆದುದರಿಂದ ಭಗವದ್ಗೀತೆಯನ್ನು ಓದಿದವನು ವಿಳಂಬವಿಲ್ಲದೆ ಭಗವದ್ಗೀತೆಯ ನಿರ್ಣಯಕ್ಕೇ ಬರಬೇಕು; ಮನುಷ್ಯನು ಬೇರಾವುದರಲ್ಲಿಯೂ ತೊಡಗದೆ ದೇವೋತ್ತಮ ಪುರುಷನಾದ ಪರಮ ಪ್ರಭು ಕೃಷ್ಣನ ಸೇವೆಯನ್ನು ಕೈಗೊಳ್ಳಬೇಕು; ಈ ಜೀವನ ಸಿದ್ಧಾಂತವನ್ನು ಮನಗಂಡರೆ ಅದೇ ಶ್ರದ್ಧೆ.

ಈ ಶ್ರದ್ಧೆಯ ಬೆಳವಣಿಗೆಯೇ ಕೃಷ್ಣಪ್ರಜ್ಞೆಯ ಪ್ರಕ್ರಿಯೆ. ಕೃಷ್ಣಪ್ರಜ್ಞೆ ಇರುವವರಲ್ಲಿ ಮೂರು ವರ್ಗಗಳು. ಶ್ರದ್ಧೆಯಿಲ್ಲದವರು ಮೂರನೆಯ ವರ್ಗದವರು. ಅವರು ಔಪಚಾರಿಕವಾಗಿ ಭಕ್ತಿಸೇವೆಯಲ್ಲಿ ತೊಡಗಿದ್ದರೂ ಅತ್ಯುನ್ನತ ಪರಿಪೂರ್ಣ ಹಂತವನ್ನು ಮುಟ್ಟಲಾರರು. ಪ್ರಾಯಶಃ

ಸ್ವಲ್ಪ ಕಾಲವಾದ ಮೇಲೆ ಅವರು ಜಾರಿಹೋಗುತ್ತಾರೆ. ಅವರು ಕೆಲಸದಲ್ಲಿ ತೊಡಗಿರಬಹುದು. ಆದರೆ ಅವರಿಗೆ ಪೂರ್ಣವಾಗಿ ದೃಢನಂಬಿಕೆಯಾಗಲೀ ಶ್ರದ್ಧೆಯಾಗಲೀ ಇಲ್ಲ. ಆದುದರಿಂದ ಅವರಿಗೆ ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯುವುದು ಕಷ್ಟ. ನಮ್ಮ ಧಾರ್ಮಿಕ ಪ್ರಸಾರ ಕಾರ್ಯಗಳಲ್ಲಿ ನಮಗೆ ಇದರ ವಾಸ್ತವ ಅನುಭವವಿದೆ; ಕೆಲವರು ಬಂದು ಕೃಷ್ಣಪ್ರಜ್ಞೆಯಲ್ಲಿ ನಿರತರಾಗುತ್ತಾರೆ, ಅವರ ನಿಜವಾದ ಉದ್ದೇಶವನ್ನು ಬಚ್ಚಿಟ್ಟಿರುತ್ತಾರೆ. ಆರ್ಥಿಕವಾಗಿ ಅವರ ಸ್ಥಿತಿ ಸ್ವಲ್ಪ ಉತ್ತಮಗೊಳ್ಳುತ್ತಲೇ ಈ ಪ್ರಕ್ರಿಯೆಯನ್ನು ಬಿಟ್ಟು ತಮ್ಮ ಹಿಂದಿನ ರೀತಿಗಳನ್ನು ಪ್ರಾರಂಭಿಸುತ್ತಾರೆ. ಶ್ರದ್ಧೆಯಿಂದ ಮಾತ್ರ ಕೃಷ್ಣಪ್ರಜ್ಞೆಯಲ್ಲಿ ಮುನ್ನಡೆಯಲು ಸಾಧ್ಯ. ಶ್ರದ್ಧೆಯ ಮಾತು ಹೇಳುವುದಾದರೆ, ಭಕ್ತಿಸಾಹಿತ್ಯವನ್ನು ಚೆನ್ನಾಗಿ ಅರಿತು ದೃಢಭಕ್ತಿಯ ಘಟ್ಟಕ್ಕೆ ಬಂದವನನ್ನು ಕೃಷ್ಣಪ್ರಜ್ಞೆಯಲ್ಲಿ ಪ್ರಥಮ ತರಗತಿಯ ಮನುಷ್ಯ ಎಂದು ಕರೆಯಲಾಗುತ್ತದೆ. ಭಕ್ತಿಯ ಪವಿತ್ರಗ್ರಂಥಗಳ ತಿಳಿವಳಿಕೆಯಲ್ಲಿ ಹೆಚ್ಚು ಮುಂದುವರಿಯದೆ ಇದ್ದರೂ ಕೃಷ್ಣಭಕ್ತಿಯೇ ಅತಿಶ್ರೇಷ್ಠ ಮಾರ್ಗ ಎಂದು ಸಹಜವಾಗಿಯೇ ದೃಢನಂಬಿಕೆ ಇದ್ದು ನಿಷ್ಠೆಯಿಂದ ಇದನ್ನು ಆರಿಸಿಕೊಂಡವರು ಎರಡನೆಯ ವರ್ಗದವರು. ಇವರು ಮೂರನೆಯ ವರ್ಗದವರಿಗಿಂತ ಉತ್ತಮ; ಮೂರನೆಯ ವರ್ಗದವರಿಗೆ ಧರ್ಮಗ್ರಂಥಗಳ ಪರಿಪೂರ್ಣ ಜ್ಞಾನವೂ ಇಲ್ಲ ನಿಷ್ಠೆಯೂ ಇಲ್ಲ, ಆದರೆ ಸಹವಾಸದಿಂದ ಮತ್ತು ಸ್ವಭಾವದ ಸರಳತೆಯಿಂದ ಇತರರನ್ನು ಅನುಸರಿಸಲು ಪ್ರಯತ್ನಿಸುತ್ತಾರೆ. ಮೂರನೆಯ ತರಗತಿಯವನು ಕೆಳಕ್ಕೆ ಬೀಳಬಹುದು; ಎರಡನೆಯ ವರ್ಗದವನು ಬೀಳುವುದಿಲ್ಲ. ಪ್ರಥಮ ತರಗತಿಯವನು ಬೀಳುವ ಸಾಧ್ಯತೆಯೇ ಇಲ್ಲ. ಮೊದಲನೆಯ ತರಗತಿಯವನು ನಿಶ್ಚಯವಾಗಿಯೂ ಪ್ರಗತಿ ಹೊಂದಿ ಕಡೆಯಲ್ಲಿ ಫಲಿತಾಂಶವನ್ನು ಸಾಧಿಸುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಮೂರನೆಯ ವರ್ಗದವನನ್ನು ಕುರಿತು ಹೇಳುವುದಾದರೆ, ಕೃಷ್ಣನ ಭಕ್ತಿಸೇವೆಯು ಬಹಳ ಒಳ್ಳೆಯದು ಎಂಬ ದೃಢನಂಬಿಕೆಯಲ್ಲಿ ಶ್ರದ್ಧೆ ಇದ್ದರೂ ಅವನು ಶ್ರೀಮದ್ಭಾಗವತ ಮತ್ತು ಭಗವದ್ಗೀತೆಯಂತಹ ಪವಿತ್ರಗ್ರಂಥಗಳ ಮೂಲಕ ಕೃಷ್ಣನ ಬಗ್ಗೆ ಸಾಕಷ್ಟು ತಿಳಿವಳಿಕೆಯನ್ನು ಪಡೆದಿರುವುದಿಲ್ಲ. ಕೆಲವೊಮ್ಮೆ ಈ ಮೂರನೆಯ ವರ್ಗದ ಜನರಿಗೆ ಕರ್ಮಯೋಗ ಮತ್ತು ಜ್ಞಾನಯೋಗಗಳತ್ತ ಒಲವು ಇರುತ್ತದೆ. ಒಮ್ಮೊಮ್ಮೆ ಅವರು ಮಾನಸಿಕ ಅಶಾಂತಿಗೆ ಒಳಗಾಗುತ್ತಾರೆ. ಆದರೆ ಕರ್ಮಯೋಗ ಅಥವಾ ಜ್ಞಾನಯೋಗದ ಕಲ್ಮಷದ ಸೋಂಕು ನಿವಾರಣೆಯಾಗುತ್ತಲೇ ಅವರು ಕೃಷ್ಣಪ್ರಜ್ಞೆಯಲ್ಲಿ ಎರಡನೆಯ ವರ್ಗದ ಅಥವಾ ಮೊದಲನೆಯ ವರ್ಗದ ಭಕ್ತರಾಗುತ್ತಾರೆ. ಕೃಷ್ಣನಲ್ಲಿ ಶ್ರದ್ಧೆಯನ್ನೂ ಮೂರು ವರ್ಗಗಳಾಗಿ ವಿಂಗಡಿಸಿದೆ; ಇದನ್ನು ಶ್ರೀಮದ್ಭಾಗವತದಲ್ಲಿ ವರ್ಣಿಸಿದೆ. ಶ್ರೀಮದ್ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ಮೊದಲನೆಯ, ಎರಡನೆಯ ಮತ್ತು ಮೂರನೆಯ ವರ್ಗಗಳ ಆಸಕ್ತಿಯನ್ನು ವಿವರಿಸಿದೆ. ಕೃಷ್ಣನ ವಿಷಯವನ್ನೂ, ಭಕ್ತಿಮಾರ್ಗದ ಶ್ರೇಷ್ಠತೆಯನ್ನೂ ಕೇಳಿಯೂ ಶ್ರದ್ಧೆಯಿಲ್ಲದವರು ಮತ್ತು ಇದೆಲ್ಲ ಬರಿಯ ಹೊಗಳಿಕೆ ಎಂದು ಭಾವಿಸುವವರು ಇರುತ್ತಾರೆ. ಅಂತಹವರು ಭಕ್ತಿಮಾರ್ಗದಲ್ಲಿ ನಡೆದರೂ ಅವರಿಗೆ ಅದು ಕಠಿಣವಾಗುತ್ತದೆ. ಅವರಿಗೆ ಪರಿಪೂರ್ಣತೆಯನ್ನು ಸಾಧಿಸುವ ಭರವಸೆ ಅತ್ಯಲ್ಪವಾದುದಾಗಿದೆ. ಹೀಗೆ ಭಕ್ತಿಸೇವೆಯನ್ನು ಸಲ್ಲಿಸಲು ಶ್ರದ್ಧೆಯು ಅತಿ ಮುಖ್ಯ.

## ಶ್ಲೋಕ - 4

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ |**
**ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ||೪||**

**ಮಯಾ**—ನನ್ನಿಂದ; **ತತಮ್**—ವ್ಯಾಪ್ತವಾಗಿದೆ; **ಇದಮ್**—ಈ; **ಸರ್ವಮ್**—ಎಲ್ಲ; **ಜಗತ್**—ವಿಶ್ವ ಅಭಿವ್ಯಕ್ತಿಯು; **ಅವ್ಯಕ್ತ ಮೂರ್ತಿನಾ**—ಅವ್ಯಕ್ತ ರೂಪದಿಂದ; **ಮತ್ ಸ್ಥಾನಿ**—ನನ್ನಲ್ಲಿ; **ಸರ್ವ ಭೂತಾನಿ**—ಎಲ್ಲ ಜೀವಿಗಳು; **ನ**—ಇಲ್ಲ; **ಚ**—ಕೂಡ; **ಅಹಮ್**—ನಾನು; **ತೇಷು**—ಅವುಗಳಲ್ಲಿ; **ಅವಸ್ಥಿತಃ**—ನೆಲೆಸಿದ್ದೇನೆ.

## ಅನುವಾದ

**ನನ್ನ ಅವ್ಯಕ್ತ ಸ್ವರೂಪದಲ್ಲಿ ನಾನು ಇಡೀ ವಿಶ್ವವನ್ನು ವ್ಯಾಪಿಸಿದ್ದೇನೆ. ಎಲ್ಲ ಜೀವಿಗಳೂ ನನ್ನಲ್ಲಿದ್ದಾರೆ. ನಾನು ಅವರಲ್ಲಿ ಇಲ್ಲ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನನ್ನು ಜಡ ಭೌತಿಕ ಇಂದ್ರಿಯಗಳು ಗ್ರಹಿಸಲಾರವು. ಭಕ್ತಿರಸಾಮೃತಸಿಂಧುವಿನಲ್ಲಿ ಹೀಗೆ ಹೇಳಿದೆ —

**ಅತಃ ಶ್ರೀಕೃಷ್ಣ ನಾಮಾದಿ ನ ಭವೇದ್ ಗ್ರಾಹ್ಯಮ್ ಇನ್ದ್ರಿಯೈಃ |**
**ಸೇವೋನ್ಮುಖೇ ಹಿ ಜಿಹ್ವಾದೌ ಸ್ವಯಮೇವ ಸ್ಫುರತ್ಯದಃ ||**

(ಭಕ್ತಿರಸಾಮೃತ ಸಿಂಧು 1.2.234)

ಭೌತಿಕ ಇಂದ್ರಿಯಗಳು ಪ್ರಭು ಶ್ರೀಕೃಷ್ಣನ ನಾಮವನ್ನಾಗಲಿ ಮಹಿಮೆಯನ್ನಾಗಲಿ ಲೀಲೆಗಳನ್ನಾಗಲಿ ಅರ್ಥಮಾಡಿಕೊಳ್ಳಲಾರವು. ಯೋಗ್ಯವಾದ ಮಾರ್ಗದರ್ಶನದಲ್ಲಿ ಭಕ್ತಿಸೇವೆಯಲ್ಲಿ ನಿರತನಾದವನಿಗೆ ಮಾತ್ರ ಶ್ರೀಕೃಷ್ಣನು ಗೋಚರವಾಗುತ್ತಾನೆ ಬ್ರಹ್ಮ ಸಂಹಿತೆಯಲ್ಲಿ (5.38) **ಪ್ರೇಮಾಞ್ಜನಚ್ಛುರಿತಭಕ್ತಿ ವಿಲೋಚನೇನ ಸನ್ತಃ ಸದೈವ ಹೃದಯೇಷು ವಿಲೋಕಯನ್ತಿ** ಮನುಷ್ಯನು ದೇವೋತ್ತಮ ಪರಮ ಪುರುಷನಾದ ಗೋವಿಂದನ ವಿಷಯದಲ್ಲಿ ದಿವ್ಯಪ್ರೇಮದ ಮನೋಧರ್ಮವನ್ನು ಬೆಳೆಸಿಕೊಂಡರೆ ಸದಾ ತನ್ನೊಳಗೂ, ತನ್ನ ಹೊರಗೂ ಗೋವಿಂದನನ್ನು ಕಾಣಬಹುದು ಎಂದು ಹೇಳಿದೆ. ಹೀಗೆ ಜನಸಾಮಾನ್ಯರು ಅವನನ್ನು ಕಾಣಲಾರರು. ಆತನು ಸರ್ವವ್ಯಾಪಿಯಾದರೂ ಭೌತಿಕ ಇಂದ್ರಿಯಗಳು ಅವನನ್ನು ಗ್ರಹಿಸಲಾರವು ಎಂದು ಇಲ್ಲಿ ಹೇಳಿದೆ. **ಅವ್ಯಕ್ತ ಮೂರ್ತಿನಾ** ಎನ್ನುವ ಮಾತು ಇದನ್ನು ಸೂಚಿಸುತ್ತದೆ. ನಾವು ಅವನನ್ನು ಕಾಣಲಾರೆವಾದರೂ ಆತನೇ ಎಲ್ಲಕ್ಕೂ ಆಧಾರ. ಏಳನೆಯ ಅಧ್ಯಾಯದಲ್ಲಿ ನಾವು ಚರ್ಚಿಸಿದಂತೆ, ಇಡೀ ಐಹಿಕ ವಿಶ್ವದ ಅಭಿವ್ಯಕ್ತಿಯು ಅವನ ಎರಡು ಬೇರೆ ಬೇರೆ ಶಕ್ತಿಗಳ ಸಂಯೋಜನೆಯಷ್ಟೇ — ಶ್ರೇಷ್ಠ ಆಧ್ಯಾತ್ಮಿಕ ಶಕ್ತಿ ಮತ್ತು ಕೆಳಮಟ್ಟದ ಐಹಿಕ ಶಕ್ತಿ. ಸೂರ್ಯನ ಬೆಳಕು ಇಡೀ ಸೃಷ್ಟಿಯಲ್ಲಿ ವ್ಯಾಪಿಸಿರುವಂತೆ ಪ್ರಭುವಿನ ಶಕ್ತಿಯು ಸೃಷ್ಟಿಯಲ್ಲಿ ವ್ಯಾಪಿಸಿದೆ. ಎಲ್ಲವೂ ಈ

ಶಕ್ತಿಯಲ್ಲಿ ಆಶ್ರಯಪಡೆದಿವೆ.

ಆದರೆ ಎಲ್ಲೆಲ್ಲೂ ವ್ಯಾಪಿಸಿರುವುದರಿಂದ ಅವನ ವೈಯಕ್ತಿಕ ಅಸ್ತಿತ್ವವು ಕಳೆದು ಹೋಗುತ್ತದೆ ಎಂದು ಭಾವಿಸಬಾರದು. ಇಂತಹ ವಾದವನ್ನು ತಳ್ಳಿ ಹಾಕಲು ಪ್ರಭುವು "ನಾನು ಎಲ್ಲೆಲ್ಲಿಯೂ ಇದ್ದೇನೆ, ಎಲ್ಲವೂ ನನ್ನಲ್ಲಿದೆ. ಆದರೂ ನಾನು ದೂರವಾಗಿದ್ದೇನೆ" ಎಂದು ಹೇಳಿದ್ದಾನೆ. ಉದಾಹರಣೆಗೆ ರಾಜನು ಸರ್ಕಾರದ ಮುಖ್ಯಸ್ಥ. ಸರ್ಕಾರವಾದರೋ ರಾಜನ ಶಕ್ತಿಯ ಒಂದು ಅಭಿವ್ಯಕ್ತಿ ಅಷ್ಟೇ. ಪ್ರತಿಯೊಂದು ವಿಭಾಗಕ್ಕೂ ರಾಜನ ಶಕ್ತಿಯೇ ಆಧಾರ. ಆದರೆ ರಾಜನು ಪ್ರತಿಯೊಂದು ವಿಭಾಗದಲ್ಲಿ ವೈಯಕ್ತಿಕವಾಗಿ ಸ್ವತಃ ಇರುತ್ತಾನೆ ಎಂದು ನಿರೀಕ್ಷಿಸುವಂತಿಲ್ಲ. ಇದೊಂದು ಒರಟು ಉದಾಹರಣೆ. ಹೀಗೆಯೇ ಐಹಿಕ ಜಗತ್ತಿನಲ್ಲಿಯೂ ಆಧ್ಯಾತ್ಮಿಕ ಜಗತ್ತಿನಲ್ಲಿಯೂ ನಾವು ನೋಡುವ ಎಲ್ಲ ಅಭಿವ್ಯಕ್ತಿಗಳೂ, ಅಸ್ತಿತ್ವದಲ್ಲಿರುವ ಉಳಿದೆಲ್ಲವೂ ದೇವೋತ್ತಮ ಪರಮ ಪುರುಷನ ಶಕ್ತಿಯ ಮೇಲೆ ನಿಂತಿವೆ. ಆತನ ವಿವಿಧ ಶಕ್ತಿಗಳ ಪ್ರಸರಣದಿಂದ ಸೃಷ್ಟಿಯಾಗುತ್ತವೆ. ಭಗವದ್ಗೀತೆಯಲ್ಲಿ ಹೇಳಿದಂತೆ, **ವಿಷ್ಟಭ್ಯಾಹಂ ಇದಂ ಕೃತ್ಸ್ನಮ್**—ಅವನು ತನ್ನ ವೈಯಕ್ತಿಕ ಪ್ರಾತಿನಿಧ್ಯದಿಂದ, ವಿವಿಧ ಶಕ್ತಿಗಳ ಪ್ರಸರಣದಿಂದ, ಎಲ್ಲೆಲ್ಲೂ ಇದ್ದಾನೆ.

## ಶ್ಲೋಕ - 5

**ನ ಚ ಮತ್‌ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ |**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ||೫||**

**ನ**—ಎಂದಿಗೂ ಅಲ್ಲ; **ಚ**—ಕೂಡ; **ಮತ್ ಸ್ಥಾನಿ**—ನನ್ನಲ್ಲಿ ನೆಲೆಸಿದೆ; **ಭೂತಾನಿ**—ಎಲ್ಲ ಸೃಷ್ಟಿಯು; **ಪಶ್ಯ**—ನೋಡು; **ಮೇ**—ನನ್ನ; **ಯೋಗಮ್ ಐಶ್ವರಮ್**—ಅಚಿಂತ್ಯ ಯೋಗಶಕ್ತಿಯನ್ನು; **ಭೂತ ಭೃತ್**—ಸಕಲಜೀವಿಗಳ ಪಾಲಕನು; **ನ**—ಎಂದಿಗೂ ಅಲ್ಲ; **ಚ**—ಕೂಡ; **ಭೂತಸ್ಥಃ**—ವಿಶ್ವಾಭಿವ್ಯಕ್ತಿಯಲ್ಲಿ; **ಮಮ**—ನನ್ನ; **ಆತ್ಮಾ**—ಪರಮಾತ್ಮವು; **ಭೂತ ಭಾವನಃ**—ಸಕಲ ಅಭಿವ್ಯಕ್ತಿಗಳ ಆಕರವು.

## ಅನುವಾದ

**ಆದರೂ ಸೃಷ್ಟಿಯಾದದ್ದೆಲ್ಲ ನನ್ನನ್ನೇ ಆಧರಿಸಿದ್ದಲ್ಲ. ನನ್ನ ಯೋಗ ಸಮೃದ್ಧಿಯನ್ನು ನೋಡು. ಎಲ್ಲ ಜೀವಿಗಳ ಪಾಲಕನು ನಾನಾದರೂ ಮತ್ತು ನಾನು ಎಲ್ಲ ಕಡೆ ಇರುವೆನಾದರೂ ನಾನು ಈ ವಿಶ್ವದ ಅಭಿವ್ಯಕ್ತಿಯ ಭಾಗವಲ್ಲ. ಏಕೆಂದರೆ ನಾನೇ ಸೃಷ್ಟಿಯ ಮೂಲ.**

## ಭಾವಾರ್ಥ

ಎಲ್ಲಕ್ಕೂ ತಾನೇ ಆಧಾರ (**ಮತ್‌ಸ್ಥಾನಿ ಸರ್ವಭೂತಾನಿ**) ಎಂದು ಪ್ರಭುವು ಹೇಳುತ್ತಾನೆ. ಇದನ್ನು ತಪ್ಪಾಗಿ ಅರ್ಥಮಾಡಿಕೊಳ್ಳಬಾರದು. ಭೌತಿಕ ಅಭಿವ್ಯಕ್ತಿಯ ನಿರ್ವಹಣೆ ಮತ್ತು ಪಾಲನೆಯ ವಿಷಯದಲ್ಲಿ ಪ್ರಭುವಿಗೆ ನೇರ ಕಾಳಜಿ ಇಲ್ಲ. ಅಟ್ಲಾಸ್ ಎಂಬಾತನು ಭೂಗೋಳವನ್ನು ತನ್ನ ಭುಜಗಳ ಮೇಲೆ ಹೊತ್ತು ನಿಂತಿರುವ ಚಿತ್ರವನ್ನು ನಾವು ನೋಡಿದ್ದೇವೆ. ಈ ಬೃಹತ್ತಾದ

ಭೂಗ್ರಹವನ್ನು ಹೊತ್ತುಕೊಂಡ ಅವನು ಬಹು ಆಯಾಸಗೊಂಡಂತೆ ಕಾಣುತ್ತಾನೆ. ಕೃಷ್ಣನು ಸೃಷ್ಟಿಯಾದ ವಿಶ್ವವನ್ನು ಎತ್ತಿ ಹಿಡಿಯುತ್ತಾನೆಂದರೆ ಇಂತಹ ಚಿತ್ರಕ್ಕೆ ಮನಸ್ಸಿನಲ್ಲಿ ಅವಕಾಶ ಕೊಡಬಾರದು. ಎಲ್ಲವೂ ತನ್ನನ್ನು ಆಧರಿಸಿದ್ದರೂ ತಾನು ದೂರವಾಗಿದ್ದೇನೆ ಎಂದು ಅವನು ಹೇಳುತ್ತಾನೆ. ಲೋಕವ್ಯೂಹಗಳು ಆಕಾಶದಲ್ಲಿ ತೇಲುತ್ತಿವೆ. ಈ ಆಕಾಶವು ಪರಮ ಪ್ರಭುವಿನ ಶಕ್ತಿ. ಆದರೆ ಆತನು ಆಕಾಶದಿಂದ ಬೇರೆ. ಆತನ ಸನ್ನಿವೇಶವೇ ಬೇರೆ. ಆದುದರಿಂದ ಪ್ರಭುವು "ಅವಕ್ಕೆ ನನ್ನ ಕಲ್ಪನಾತೀತ ಶಕ್ತಿಯು ಆಧಾರವಾಗಿದ್ದರೂ ದೇವೋತ್ತಮ ಪರಮ ಪುರುಷನಾಗಿ ನಾನು ಅವರಿಂದ ದೂರವಾಗಿದ್ದೇನೆ" ಎಂದಿದ್ದಾನೆ. ಇದು ಪ್ರಭುವಿನ ಕಲ್ಪನಾತೀತ ಐಶ್ವರ್ಯ.

**ನಿರುಕ್ತಿ** ಎಂಬ ವೈದಿಕ ನಿಘಂಟಿನಲ್ಲಿ **ಯುಜ್ಯತೇಽನೇನ ದುರ್ಘಟೇಷು ಕಾರ್ಯೇಷು** — "ಪರಮ ಪ್ರಭುವು ತನ್ನ ಶಕ್ತಿಯಲ್ಲಿ ಮೆರೆಯುತ್ತ, ಕಲ್ಪನೆಗೆ ನಿಲುಕದ ಅದ್ಭುತ ಲೀಲೆಗಳಲ್ಲಿ ತೊಡಗಿದ್ದಾನೆ" ಎಂದು ಹೇಳಿದೆ. ಆತನ ವ್ಯಕ್ತಿತ್ವದಲ್ಲಿ ಬೇರೆ ಬೇರೆ ಪ್ರಬಲ ಶಕ್ತಿಗಳು ತುಂಬಿ ತುಳುಕಾಡುತ್ತಿವೆ. ಆತನ ಸಂಕಲ್ಪವೇ ನಿಜವಾಗಿ ವಾಸ್ತವಾಂಶ. ದೇವೋತ್ತಮ ಪರಮ ಪುರುಷನನ್ನು ಈ ರೀತಿಯಲ್ಲಿ ಅರ್ಥಮಾಡಿಕೊಳ್ಳಬೇಕು. ನಾವು ಏನನ್ನಾದರೂ ಮಾಡಲು ಯೋಚಿಸಬಹುದು, ಆದರೆ ಹಲವಾರು ಅಡ್ಡಿಗಳು ಎದುರಾಗುತ್ತವೆ; ಕೆಲವೊಮ್ಮೆ ನಾವು ಬಯಸಿದಂತೆ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಕೃಷ್ಣನು ಏನನ್ನಾದರೂ ಮಾಡಲು ಬಯಸಿದಾಗ, ಅವನ ಸಂಕಲ್ಪದಿಂದಲೇ ಎಲ್ಲವೂ ಎಷ್ಟು ಪರಿಪೂರ್ಣವಾಗಿ ಆಗಿಬಿಡುತ್ತದೆ ಎಂದರೆ ಅದು ಹೇಗಾಯಿತು ಎಂದು ಕಲ್ಪಿಸಿಕೊಳ್ಳುವುದಕ್ಕೇ ಸಾಧ್ಯವಿಲ್ಲ. ಪ್ರಭುವು ಈ ವಾಸ್ತವಾಂಶವನ್ನು ವಿವರಿಸುತ್ತಾನೆ; ಇಡೀ ಭೌತಿಕ ಅಭಿವ್ಯಕ್ತಿಯನ್ನು ಕಾಪಾಡಿ ಪಾಲಿಸುವವನು ತಾನೇ ಆದರೂ ಆತನು ಈ ಭೌತಿಕ ಅಭಿವ್ಯಕ್ತಿಯನ್ನು ಮುಟ್ಟುವುದಿಲ್ಲ. ಅವನ ಪರಮಸಂಕಲ್ಪ ಮಾತ್ರದಿಂದಲೇ ಎಲ್ಲವೂ ಸೃಷ್ಟಿಯಾಗುತ್ತದೆ, ಎಲ್ಲವೂ ಪಾಲನೆಯಾಗುತ್ತದೆ, ಎಲ್ಲವೂ ನಾಶವಾಗುತ್ತದೆ (ನಮಗೂ ನಮ್ಮ ಈಗಿನ ಐಹಿಕ ಮನಸ್ಸಿಗೂ ವ್ಯತ್ಯಾಸವಿರುವಂತೆ) ಆತನ ಮನಸ್ಸಿಗೂ ಅವನಿಗೂ ವ್ಯತ್ಯಾಸವೇ ಇಲ್ಲ. ಏಕೆಂದರೆ ಆತನು ಪರಿಪೂರ್ಣ ಚೇತನ. ಏಕಕಾಲದಲ್ಲಿ ಪ್ರಭುವು ಎಲ್ಲರಲ್ಲಿಯೂ ಇರುತ್ತಾನೆ. ಆದರೆ ಆತನು ವೈಯಕ್ತಿಕವಾಗಿ ಸಹ ಹೇಗೆ ಇರುತ್ತಾನೆ ಎನ್ನುವುದನ್ನು ಸಾಮಾನ್ಯ ಮನುಷ್ಯನು ಅರ್ಥ ಮಾಡಿಕೊಳ್ಳಲಾರ. ಆತನು ಈ ಐಹಿಕ ಅಭಿವ್ಯಕ್ತಿಯಿಂದ ಬೇರೆಯಾಗಿದ್ದಾನೆ. ಆದರೆ ಎಲ್ಲಕ್ಕೂ ಆತನೇ ಆಧಾರ. ಇದನ್ನು ಇಲ್ಲಿ **ಯೋಗಮ್ ಐಶ್ವರ್ಯಮ್,** ದೇವೋತ್ತಮ ಪರಮ ಪುರುಷನ ರಹಸ್ಯಶಕ್ತಿ ಎಂದು ವರ್ಣಿಸಿದೆ.

## ಶ್ಲೋಕ - 6

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್‌ಸ್ಥಾನೀತ್ಯುಪಧಾರಯ ॥೬॥**

**ಯಥಾ**—ಹೇಗೆ; **ಆಕಾಶಸ್ಥಿತಃ**—ಆಕಾಶದಲ್ಲಿರುವ; **ನಿತ್ಯಮ್**—ಸದಾ; **ವಾಯುಃ**—ಗಾಳಿಯು; **ಸರ್ವತ್ರ ಗಃ**—ಎಲ್ಲೆಡೆಗಳಲ್ಲಿಯೂ ಬೀಸುವುದೋ; **ಮಹಾನ್**—ಮಹಾ; **ತಥಾ**—ಹಾಗೆಯೇ; **ಸರ್ವಾಣಿ**

**ಭೂತಾನಿ**—ಸೃಷ್ಟಿಯಾದ ಎಲ್ಲ ಜೀವಿಗಳು; **ಮತ್ ಸ್ಥಾನಿ**—ನನ್ನಲ್ಲಿ ನೆಲೆಸಿದ್ದು; **ಇತಿ**— ಎಂದು; **ಉಪಧಾರಯ**—ತಿಳಿಯಲು ಪ್ರಯತ್ನಿಸು.

## ಅನುವಾದ

**ಎಲ್ಲ ಕಡೆಯೂ ಬೀಸುವ ಬಲಶಾಲಿಯಾದ ಗಾಳಿಯು ಸದಾ ಆಕಾಶದಲ್ಲಿ ಹೇಗೆ ನೆಲೆಸಿರುವುದೋ ಹಾಗೆ ಸೃಷ್ಟಿಯಾದದ್ದೆಲ್ಲವೂ ನನ್ನಲ್ಲಿ ನೆಲೆಸಿರುತ್ತದೆ.**

## ಭಾವಾರ್ಥ

ಬೃಹತ್ ಐಹಿಕ ಸೃಷ್ಟಿಯು ಭಗವಂತನಲ್ಲಿ ಹೇಗೆ ನೆಲೆಸಿರುತ್ತದೆ ಎನ್ನುವುದನ್ನು ಸಾಮಾನ್ಯ ಮನುಷ್ಯನು ಉಹಿಸಿಕೊಳ್ಳಲಾರ. ಆದರೆ ಇದನ್ನು ಅರ್ಥ ಮಾಡಿಕೊಳ್ಳಲು ನಮಗೆ ಸಹಾಯವಾಗಬಹುದಾದಂತಹ ಒಂದು ನಿದರ್ಶನವನ್ನು ಪ್ರಭುವು ಇಲ್ಲಿ ಹೇಳುತ್ತಿದ್ದಾನೆ. ನಾವು ಊಹಿಸಿಕೊಳ್ಳಬಹುದಾದ ಅತ್ಯಂತ ಬೃಹತ್ ಸೃಷ್ಟಿ ಆಕಾಶವೇ ಇರಬಹುದು. ಆ ಆಕಾಶದಲ್ಲಿ ಗಾಳಿ ಅಥವಾ ವಾಯುವು ವಿಶ್ವದ ಅತ್ಯಂತ ದೊಡ್ಡ ಅಭಿವ್ಯಕ್ತಿ. ಗಾಳಿಯ ಚಲನೆಯು ಪ್ರತಿಯೊಂದು ವಸ್ತುವಿನ ಚಲನೆಯ ಮೇಲೆ ಪ್ರಭಾವವನ್ನು ಬೀರುತ್ತದೆ. ವಾಯುವು ಮಹತ್ತರವಾದದ್ದಾದರೂ ಅದು ಆಕಾಶದಲ್ಲಿ ನೆಲೆಸಿದೆ; ವಾಯುವು ಆಕಾಶದಾಚೆ ಇಲ್ಲ. ಹಾಗೆಯೇ, ಎಲ್ಲ ಬೆರಗುಗೊಳಿಸುವ ವಿಶ್ವ ಅಭಿವ್ಯಕ್ತಿಗಳೂ ಭಗವಂತನ ಪರಮಸಂಕಲ್ಪದಿಂದ ಅಸ್ತಿತ್ವದಲ್ಲಿವೆ. ಅವೆಲ್ಲವೂ ಪರಮ ಸಂಕಲ್ಪಕ್ಕೆ ಅಧೀನ. ನಾವು ಸಾಮಾನ್ಯವಾಗಿ ಹೇಳುವಂತೆ, ದೇವೋತ್ತಮ ಪರಮ ಪುರುಷನ ಇಚ್ಛೆಯಿಲ್ಲದೆ ಹುಲ್ಲಿನೆಸಳೂ ಅಲುಗಾಡುವುದಿಲ್ಲ. ಹೀಗೆ ಎಲ್ಲವೂ ಅವನ ಇಚ್ಛೆಯಂತೆ ಚಲಿಸುತ್ತವೆ; ಅವನ ಇಚ್ಛೆಯಿಂದ ಎಲ್ಲವೂ ಸೃಷ್ಟಿಯಾಗುತ್ತವೆ, ಎಲ್ಲದರ ಪಾಲನೆಯಾಗುತ್ತದೆ, ಎಲ್ಲ ನಾಶವಾಗುತ್ತದೆ. ಆದರೂ ಆಕಾಶವು ಯಾವಾಗಲೂ ವಾಯುವಿನ ಕ್ರಿಯೆಗಳಿಂದ ದೂರವಿರುವಂತೆ, ಅವನು ಎಲ್ಲದರಿಂದ ದೂರವಿರುತ್ತಾನೆ.

ಉಪನಿಷತ್ತುಗಳಲ್ಲಿ **ಯದ್‌ಭೀಷಾ ವಾತಃ ಪವತೇ**, "ಪರಮ ಪ್ರಭುವಿಗೆ ಹೆದರಿಯೇ ಗಾಳಿ ಬೀಸುತ್ತಿರುವುದು" ಎಂದು ಹೇಳಿದೆ. (ತೈತ್ತಿರೀಯ ಉಪನಿಷತ್ತು, 2.8.1) ಬೃಹದಾರಣ್ಯಕ ಉಪನಿಷತ್ತಿನಲ್ಲಿ (3.8.9) ಹೀಗೆ ಹೇಳಿದೆ — **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಚನ್ದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೌ ತಿಷ್ಠತಃ** "ಪರಮ ಆದೇಶದಿಂದ, ದೇವೋತ್ತಮ ಪುರುಷನ ಮೇಲ್ವಿಚಾರಣೆಯಲ್ಲಿ, ಸೂರ್ಯ ಚಂದ್ರ ಮತ್ತಿತರ ಬೃಹತ್ ಗ್ರಹಗಳು ಚಲಿಸುತ್ತವೆ." ಬ್ರಹ್ಮ ಸಂಹಿತೆಯಲ್ಲಿ (5.52) ಸಹ ಹೀಗೆ ಹೇಳಿದೆ —

**ಯಚ್ಚಕ್ಷುರ್ ಏಷ ಸವಿತಾ ಸಕಲಗ್ರಹಾಣಾಂ**
**ರಾಜಾ ಸಮಸ್ತ ಸುರಮೂರ್ತಿರಶೇಷತೇಜಾಃ ।**
**ಯಸ್ಯಾಜ್ಞಯಾ ಭ್ರಮತಿ ಸಂಭೃತ ಕಾಲಚಕ್ರೋ**
**ಗೋವಿನ್ದಮಾದಿಪುರುಷಂ ತಮ್ ಅಹಂ ಭಜಾಮಿ ॥**

ಇದು ಸೂರ್ಯನ ಚಲನೆಯ ವರ್ಣನೆ. ಸೂರ್ಯ ಪರಮ ಪ್ರಭುವಿನ ಕಣ್ಣುಗಳಲ್ಲಿ

ಒಂದು. ಶಾಖ ಮತ್ತು ಬೆಳಕುಗಳನ್ನು ಪ್ರಸರಿಸುವ ಅಗಾಧ ಶಕ್ತಿ ಅದಕ್ಕಿದೆ ಎಂದು ಹೇಳುತ್ತಾರೆ. ಆದರೂ ಅದು ಗೋವಿಂದನ ಅನುಜ್ಞೆ ಮತ್ತು ಪರಮ ಇಚ್ಛೆಯ ಪ್ರಕಾರ ತನ್ನ ನಿಗದಿತ ಪಥದಲ್ಲಿ ಚಲಿಸುತ್ತದೆ. ಆದುದರಿಂದ, ನಮಗೆ ಬೆರಗನ್ನುಂಟುಮಾಡುವ ಮತ್ತು ಮಹತ್ತಾದುದೆಂದು ತೋರುವ ಈ ಐಹಿಕ ಅಭಿವ್ಯಕ್ತಿಯು ದೇವೋತ್ತಮ ಪರಮ ಪುರುಷನ ಸಂಪೂರ್ಣ ಹಿಡಿತದಲ್ಲಿದೆ ಎಂಬುದಕ್ಕೆ ವೈದಿಕ ಸಾಹಿತ್ಯದಲ್ಲಿ ಸಾಕ್ಷ್ಯವನ್ನು ಕಾಣುತ್ತೇವೆ. ಇದನ್ನು ಈ ಅಧ್ಯಾಯದ ಮುಂದಿನ ಶ್ಲೋಕಗಳಲ್ಲಿ ಇನ್ನಷ್ಟು ವಿವರಿಸಿದೆ.

## ಶ್ಲೋಕ - 7

**ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥೭॥**

**ಸರ್ವಭೂತಾನಿ**—ಸೃಷ್ಟಿಯಾಗಿರುವ ಎಲ್ಲ ಜೀವಿಗಳು; **ಕೌನ್ತೇಯ**—ಕುಂತೀಪುತ್ರನೇ; **ಪ್ರಕೃತಿಮ್**—ಪ್ರಕೃತಿಯನ್ನು; **ಯಾನ್ತಿ**—ಪ್ರವೇಶಿಸುತ್ತವೆ; **ಮಾಮಿಕಾಮ್**—ನನ್ನ; **ಕಲ್ಪಕ್ಷಯೇ**—ಕಲ್ಪಾಂತ್ಯದಲ್ಲಿ; **ಪುನಃ**—ಮತ್ತೆ; **ತಾನಿ**—ಅವೆಲ್ಲವನ್ನೂ; **ಕಲ್ಪ ಆದೌ**—ಕಲ್ಪದ ಪ್ರಾರಂಭದಲ್ಲಿ; **ವಿಸೃಜಾಮಿ**—ಸೃಷ್ಟಿಸುತ್ತೇನೆ; **ಅಹಮ್**—ನಾನು.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ಕಲ್ಪಾಂತ್ಯದಲ್ಲಿ ಎಲ್ಲ ಐಹಿಕ ಅಭಿವ್ಯಕ್ತಿಗಳೂ ನನ್ನ ಪ್ರಕೃತಿಯಲ್ಲಿ ಲೀನವಾಗುತ್ತವೆ ಮತ್ತು ಇನ್ನೊಂದು ಕಲ್ಪವು ಪ್ರಾರಂಭವಾದಾಗ ನನ್ನ ಶಕ್ತಿಯಿಂದ ಮತ್ತೆ ಅವುಗಳನ್ನು ಸೃಷ್ಟಿಸುತ್ತೇನೆ.**

## ಭಾವಾರ್ಥ

ಈ ಐಹಿಕ ವಿಶ್ವದ ಅಭಿವ್ಯಕ್ತಿಯ ಸೃಷ್ಟಿ, ಪಾಲನೆ ಮತ್ತು ನಾಶಗಳು ದೇವೋತ್ತಮ ಪರಮ ಪುರುಷನ ಪರಮ ಸಂಕಲ್ಪವನ್ನೇ ಸಂಪೂರ್ಣವಾಗಿ ಅವಲಂಬಿಸಿವೆ. 'ಕಲ್ಪಾಂತ್ಯ'ದಲ್ಲಿ ಎಂದರೆ ಬ್ರಹ್ಮನು ಮರಣ ಹೊಂದಿದಾಗ. ಬ್ರಹ್ಮನು ಒಂದು ನೂರು ವರ್ಷಗಳ ಕಾಲ ಬದುಕಿರುತ್ತಾನೆ ಮತ್ತು ಅವನ ಒಂದು ಹಗಲು ನಮ್ಮ ಭೂಲೋಕದ 4,30,00,00,000 ವರ್ಷಗಳ ಸಮಾನ ಎಂದು ಲೆಕ್ಕಹಾಕಿದ್ದಾರೆ. ಅವನ ರಾತ್ರಿಯ ಅವಧಿಯೂ ಅಷ್ಟೆ. ಅವನ ತಿಂಗಳಲ್ಲಿ ಇಂತಹ 30 ದಿನಗಳಿವೆ. ಅವನ ವರ್ಷದಲ್ಲಿ ಹನ್ನೆರಡು ತಿಂಗಳು ಇವೆ. ಇಂತಹ ಒಂದು ನೂರು ವರ್ಷಗಳ ಅನಂತರ ಮಹಾಪ್ರಳಯವಾಗುತ್ತದೆ. ಹೀಗೆಂದರೆ ಪರಮ ಪ್ರಭುವು ಪ್ರಕಟ ಮಾಡಿದ ಶಕ್ತಿಯು ಮತ್ತೆ ಅವನಲ್ಲೆ ಕೊನೆಗೊಂಡಿತು ಎಂದರ್ಥ. ಅನಂತರ ಮತ್ತೆ ವಿಶ್ವದ ರೂಪ ಕೊಡುವುದು ಅಗತ್ಯವಾದಾಗ ಅದು ಆತನ ಸಂಕಲ್ಪದಿಂದಾಗುತ್ತದೆ. **ಬಹು ಸ್ಯಾಮ್** ಎಂದರೆ (ಛಾಂದೋಗ್ಯ ಉಪನಿಷತ್ತು 6.2.3) ಆತನು ಈ ಐಹಿಕ ಚೈತನ್ಯದಲ್ಲಿ ವಿಸ್ತಾರಗೊಳ್ಳುತ್ತಾನೆ; ಇಡೀ ವಿಶ್ವದ ಅಭಿವ್ಯಕ್ತಿಯು ಮತ್ತೆ ಆಗುತ್ತದೆ.

## ಶ್ಲೋಕ - 8

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ |**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ||೮||**

**ಪ್ರಕೃತಿಮ್**—ಭೌತಿಕ ಪ್ರಕೃತಿಯನ್ನು; **ಸ್ವಾಮ್**—ಸ್ವಯಂ ನನ್ನ; **ಅವಷ್ಟಭ್ಯ**—ಒಳಗೆ ಪ್ರವೇಶಿಸಿ; **ವಿಸೃಜಾಮಿ**—ಸೃಷ್ಟಿಸುತ್ತೇನೆ; **ಪುನಃ ಪುನಃ**—ಮತ್ತೆ ಮತ್ತೆ; **ಭೂತ ಗ್ರಾಮಮ್**—ಎಲ್ಲ ವಿಶ್ವ ಅಭಿವ್ಯಕ್ತಿಗಳನ್ನು; **ಇಮಮ್**—ಈ; **ಕೃತ್ಸ್ನಮ್**—ಸಮಗ್ರ; **ಅವಶಮ್**—ತಾನೇ ತಾನಾಗಿ; **ಪ್ರಕೃತೇಃ**—ಪ್ರಕೃತಿಯ ಬಲದ; **ವಶಾತ್**—ವಶದಿಂದ.

## ಅನುವಾದ

**ಇಡೀ ವಿಶ್ವ ವ್ಯವಸ್ಥೆಯು ನನ್ನ ಅಧೀನವಾಗಿದೆ. ನನ್ನ ಸಂಕಲ್ಪದಿಂದ ಅದು ಮತ್ತೆ ಮತ್ತೆ ರೂಪತಾಳುತ್ತದೆ ಮತ್ತು ನನ್ನ ಸಂಕಲ್ಪದಿಂದ ಕೊನೆಗೆ ಅದು ನಾಶವಾಗುತ್ತದೆ.**

## ಭಾವಾರ್ಥ

ಈ ಭೌತಿಕ ಜಗತ್ತು ದೇವೋತ್ತಮ ಪರಮ ಪುರುಷನ ಕೆಳಮಟ್ಟದ ಶಕ್ತಿಯ ಅಭಿವ್ಯಕ್ತಿ. ಇದನ್ನು ಆಗಲೇ ಅನೇಕ ಬಾರಿ ವಿವರಿಸಿದೆ. ಸೃಷ್ಟಿಯ ಕಾಲದಲ್ಲಿ ಐಹಿಕ ಶಕ್ತಿಯು **ಮಹತ್‌ತತ್ತ್ವ**ವಾಗಿ ಬಿಡುಗಡೆ ಹೊಂದುತ್ತದೆ; ಪ್ರಭುವು ತನ್ನ ಮೊದಲ ಪುರುಷಾವತಾರವಾದ ವಿಷ್ಣುವಾಗಿ ಇದನ್ನು ಪ್ರವೇಶಿಸುತ್ತಾನೆ. ಆತನು ಕಾರಣ ಸಮುದ್ರದಲ್ಲಿ ಮಲಗಿ ಗರ್ಭೋದಕಶಾಯೀ ವಿಷ್ಣುವಾಗಿ ತಾನು ಹೊರಬಿಡುವ ಉಸಿರಿನಿಂದ ಲೆಕ್ಕವಿಲ್ಲದಷ್ಟು ವಿಶ್ವಗಳನ್ನು ಸೃಷ್ಟಿಸುತ್ತಾನೆ. ಈ ರೀತಿಯಲ್ಲಿ ಪ್ರತಿಯೊಂದು ವಿಶ್ವವೂ ಸೃಷ್ಟಿಯಾಗುತ್ತದೆ. ಮುಂದೆ ಅವನು ಕ್ಷೀರೋದಕಶಾಯೀ ವಿಷ್ಣುವಾಗಿ ಪ್ರಕಟಗೊಳ್ಳುತ್ತಾನೆ. ಈ ವಿಷ್ಣುವು ಪರಮಾಣುವರೆಗೆ ಎಲ್ಲವನ್ನೂ ಪ್ರವೇಶಿಸುತ್ತಾನೆ. ಈ ವಿಷಯವನ್ನು ಇಲ್ಲಿ ವಿವರಿಸಿದೆ. ಆತನು ಎಲ್ಲವನ್ನೂ ಪ್ರವೇಶಿಸುತ್ತಾನೆ.

ಜೀವಿಗಳ ಮಾತು ಹೇಳುವುದಾದರೆ ಅವರು ಈ ಐಹಿಕ ಪ್ರಕೃತಿಯ ಗರ್ಭದಲ್ಲಿ ಸೇರುತ್ತಾರೆ; ತಮ್ಮ ಹಿಂದಿನ ಕರ್ಮಗಳ ಫಲವಾಗಿ ಬೇರೆ ಬೇರೆ ಸ್ಥಾನಗಳನ್ನು ಪಡೆಯುತ್ತಾರೆ. ಹೀಗೆ ಐಹಿಕ ಜಗತ್ತಿನ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ಬೇರೆ ಬೇರೆ ಜೀವಿವರ್ಗಗಳ ಚಟುವಟಿಕೆಗಳು ಈ ರೀತಿಯಲ್ಲಿ ಸೃಷ್ಟಿಯ ಕ್ಷಣದಿಂದಲೇ ಪ್ರಾರಂಭವಾಗುತ್ತವೆ. ಎಲ್ಲವೂ ವಿಕಸನವಾಗುತ್ತವೆ ಎಂದೇನೂ ಅಲ್ಲ. ಬೇರೆ ಬೇರೆ ಜೀವವರ್ಗಗಳು ವಿಶ್ವದೊಡನೆಯೇ ಕೂಡಲೇ ಸೃಷ್ಟಿಯಾಗುತ್ತವೆ. ಮನುಷ್ಯರು, ಪ್ರಾಣಿಗಳು, ಪಕ್ಷಿಗಳು — ಎಲ್ಲ ಒಟ್ಟಿಗೆ ಸೃಷ್ಟಿಯಾಗುತ್ತವೆ. ಏಕೆಂದರೆ ಜೀವಿಗಳು ಹಿಂದಿನ ವಿನಾಶದ ಹೊತ್ತಿನಲ್ಲಿ ಇಟ್ಟುಕೊಂಡಿದ್ದ ಬಯಕೆಗಳು ಮತ್ತೆ ಪ್ರಕಟವಾಗುತ್ತವೆ. **ಅವಶಮ್** ಎನ್ನುವ ಪದವು ಜೀವಿಗಳು ಈ ಪ್ರಕ್ರಿಯೆಯಲ್ಲಿ ಏನನ್ನೂ ಮಾಡುವುದಿಲ್ಲ ಎನ್ನುವುದನ್ನು ಸೂಚಿಸುತ್ತದೆ. ಹಿಂದಿನ ಸೃಷ್ಟಿಯಲ್ಲಿ ತಮ್ಮ ಹಿಂದಿನ ಜನ್ಮದಲ್ಲಿ ಅವರಿದ್ದ ಸ್ಥಿತಿಯು ಮತ್ತೆ ಪ್ರಕಟವಾಗುತ್ತದೆ ಅಷ್ಟೆ. ಇದು ಅವನ ಇಚ್ಛೆಯಂತೆಯೇ ನಡೆಯುತ್ತದೆ. ಇದು ಭಗವಂತನ ಊಹಾತೀತ ಶಕ್ತಿ. ಬೇರೆ ಬೇರೆ ಜೀವವರ್ಗಗಳನ್ನು ಸೃಷ್ಟಿಸಿದ ಮೇಲೆ ಆತನಿಗೂ ಅವುಗಳಿಗೂ

ಯಾವುದೇ ಸಂಬಂಧವಿಲ್ಲ. ವಿವಿಧ ಜೀವಿಗಳ ಪ್ರವೃತ್ತಿಗಳಿಗೆ ಅವಕಾಶ ಮಾಡಿಕೊಡಲು ಸೃಷ್ಟಿಯು ನಡೆಯುತ್ತದೆ. ಆದುದರಿಂದ ಭಗವಂತನು ಅದರಲ್ಲಿ ಸಿಕ್ಕಿಕೊಳ್ಳುವುದಿಲ್ಲ.

## ಶ್ಲೋಕ - 9

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಞ್ಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥೯॥**

**ನ**—ಎಂದಿಗೂ ಇಲ್ಲ; **ಚ**—ಕೂಡ; **ಮಾಮ್**—ನನ್ನನ್ನು; **ತಾನಿ**—ಅವೆಲ್ಲ; **ಕರ್ಮಾಣಿ**—ಚಟುವಟಿಕೆಗಳು; **ನಿಬಧ್ನನ್ತಿ**—ಬಂಧಿಸುತ್ತವೆ; **ಧನಞ್ಜಯ**—ಧನಂಜಯನೇ; **ಉದಾಸೀನವತ್**—ತಟಸ್ಥನಂತೆ; **ಆಸೀನಮ್**—ನೆಲೆಸಿರುವ; **ಅಸಕ್ತಮ್**—ಆಕರ್ಷಣೆಯಿಲ್ಲದೆ; **ತೇಷು**—ಆ; **ಕರ್ಮಸು**—ಕಾರ್ಯಗಳಲ್ಲಿ.

## ಅನುವಾದ

**ಧನಂಜಯನೆ, ಈ ಎಲ್ಲ ಕಾರ್ಯವು ನನ್ನನ್ನು ಬಂಧಿಸುವುದಿಲ್ಲ. ನಾನು ತಟಸ್ಥನಂತೆ ಕುಳಿತಿದ್ದು ಈ ಎಲ್ಲ ಐಹಿಕ ಚಟುವಟಿಕೆಗಳ ಬಗ್ಗೆ ನಿರ್ಲಿಪ್ತನಾಗಿರುತ್ತೇನೆ.**

## ಭಾವಾರ್ಥ

ಈ ಸಂದರ್ಭದಲ್ಲಿ ಭಗವಂತನಿಗೆ ಯಾವ ಕೆಲಸವೂ ಇಲ್ಲ ಎಂದು ಭಾವಿಸಬಾರದು. ಅವನ ದಿವ್ಯಜಗತ್ತಿನಲ್ಲಿ ಅವನು ಸದಾ ಕಾರ್ಯನಿರತನಾಗಿರುತ್ತಾನೆ. ಬ್ರಹ್ಮಸಂಹಿತೆಯಲ್ಲಿ (5.6) ಹೀಗೆ ಹೇಳಿದೆ—**ಆತ್ಮಾರಾಮಸ್ಯ ತಸ್ಯಾಸ್ತಿ ಪ್ರಕೃತ್ಯಾ ನ ಸಮಾಗಮಃ** — ಆತನು ಯಾವಾಗಲೂ ತನ್ನ ಶಾಶ್ವತವಾದ, ಆನಂದಮಯವಾದ, ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ತೊಡಗಿರುತ್ತಾನೆ. ಆದರೆ ಈ ಐಹಿಕ ಚಟುವಟಿಕೆಗಳಿಗೂ ಅವನಿಗೂ ಯಾವುದೇ ಸಂಬಂಧವಿಲ್ಲ. "ಐಹಿಕ ಚಟುವಟಿಕೆಗಳನ್ನು ಅವನ ಬೇರೆ ಬೇರೆ ಶಕ್ತಿಗಳು ನಡೆಸಿಕೊಂಡು ಹೋಗುತ್ತವೆ. ಸೃಷ್ಟಿಯಾದ ಜಗತ್ತಿನ ಐಹಿಕ ಕ್ರಿಯೆಗಳ ವಿಷಯದಲ್ಲಿ ಪ್ರಭುವು ಯಾವಾಗಲೂ ತಟಸ್ಥನು. ಈ ತಾಟಸ್ಥ್ಯವನ್ನು ಇಲ್ಲಿ **ಉದಾಸೀನವತ್** ಎನ್ನುವ ಪದದಿಂದ ಹೇಳಿದೆ. ಅವನಿಗೆ ಐಹಿಕ ಕ್ರಿಯೆಗಳ ಪ್ರತಿಯೊಂದು ವಿವರದ ಮೇಲೂ ಹತೋಟಿಯಿದೆ. ಆದರೂ ತಟಸ್ಥನಂತೆ ಕುಳಿತಿರುತ್ತಾನೆ. ತನ್ನ ಆಸನದಲ್ಲಿ ಕುಳಿತಿರುವ ಉಚ್ಚ ನ್ಯಾಯಾಲಯದ ನ್ಯಾಯಾಧೀಶನ ನಿದರ್ಶನವನ್ನು ಕೊಡಬಹುದು. ಅವನ ಆಜ್ಞೆಯಂತೆ ಎಷ್ಟೋ ಸಂಗತಿಗಳು ನಡೆಯುತ್ತವೆ — ಯಾರನ್ನೋ ನೇಣುಹಾಕುತ್ತಿರುತ್ತಾರೆ; ಯಾರನ್ನೋ ಸೆರೆಮನೆಗೆ ಕಳಿಸುತ್ತಾರೆ; ಮತ್ತೊಬ್ಬರಿಗೆ ಅಪಾರ ಧನವನ್ನು ಕೊಡುತ್ತಾರೆ. ಆದರೆ ಆತನು ತಟಸ್ಥ. ಈ ಲಾಭ ನಷ್ಟಗಳಿಗೂ ಅವನಿಗೂ ಸಂಬಂಧವಿಲ್ಲ. ಹೀಗೆಯೇ ಪ್ರತಿಯೊಂದು ಕ್ರಿಯೆಯಲ್ಲೂ ಭಗವಂತನ ಕೈಯಿದ್ದರೂ ಅವನು ಸದಾ ತಟಸ್ಥ. ವೇದಾಂತ ಸೂತ್ರದಲ್ಲಿ (2.1.34) **ವೈಷಮ್ಯ ನೈರ್ಘೃಣ್ಯೇ ನ**—ಆತನು ಐಹಿಕ ಜಗತ್ತಿನ ದ್ವಂದ್ವಗಳಲ್ಲಿ ಸಿಲುಕಿಲ್ಲ ಎಂದು ಹೇಳಿದೆ. ಆತನು ಈ ದ್ವಂದ್ವಗಳಿಗೆ ಅತೀತನು; ಈ ಐಹಿಕ ಜಗತ್ತಿನ ಸೃಷ್ಟಿ ಮತ್ತು ನಾಶಗಳ ವಿಷಯದಲ್ಲಿ ನಿರ್ಲಿಪ್ತನು.

ಜೀವಿಗಳು ತಮ್ಮ ಹಿಂದಿನ ಕ್ರಿಯೆಗಳಿಗೆ ಅನುಗುಣವಾಗಿ ವಿವಿಧ ಜೀವವರ್ಗಗಳಲ್ಲಿ ಬೇರೆ ಬೇರೆ ರೂಪಗಳನ್ನು ಪಡೆಯುತ್ತಾರೆ. ಭಗವಂತನು ಅವರ ವಿಷಯಗಳಲ್ಲಿ ಕೈ ಹಾಕುವುದಿಲ್ಲ.

## ಶ್ಲೋಕ - 10

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ |**
**ಹೇತುನಾನೇನ ಕೌನ್ತೇಯ ಜಗದ್ ವಿಪರಿವರ್ತತೇ ||೧೦||**

**ಮಯಾ**—ನನ್ನಿಂದ; **ಅಧ್ಯಕ್ಷೇಣ**—ಅಧೀಕ್ಷಣೆಯಿಂದ; **ಪ್ರಕೃತಿಃ**—ಭೌತಿಕ ಪ್ರಕೃತಿಯು; **ಸೂಯತೇ**—ವ್ಯಕ್ತಪಡುತ್ತದೆ; **ಸ**—ಉಭಯ; **ಚರ ಅಚರಮ್**—ಚಲಿಸುವ ಮತ್ತು ಚಲಿಸದ; **ಹೇತುನಾ**—ಕಾರಣಕ್ಕಾಗಿ; **ಅನೇನ**—ಈ; **ಕೌನ್ತೇಯ**—ಕುಂತೀಪುತ್ರನೇ; **ಜಗತ್**—ವಿಶ್ವಾಭಿವ್ಯಕ್ತಿಯು; **ವಿಪರಿವರ್ತತೇ**—ಕೆಲಸಮಾಡುತ್ತದೆ.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ನನ್ನ ಶಕ್ತಿಗಳಲ್ಲಿ ಒಂದಾದ ಈ ಐಹಿಕ ಪ್ರಕೃತಿಯು ಎಲ್ಲ ಚರಾಚರ ವಸ್ತುಗಳನ್ನು ನನ್ನ ಅಪ್ಪಣೆಯಂತೆ ಸೃಷ್ಟಿಸಿ ಕೆಲಸ ಮಾಡುತ್ತದೆ. ಈ ಅಭಿವ್ಯಕ್ತಿಯು ಅದರ ನಿಯಮಕ್ಕೆ ಅನುಗುಣವಾಗಿ ಮತ್ತೆ ಮತ್ತೆ ಸೃಷ್ಟಿಯಾಗುತ್ತದೆ ಮತ್ತು ನಾಶವಾಗುತ್ತದೆ.**

## ಭಾವಾರ್ಥ

ಪರಮ ಪ್ರಭುವು ಐಹಿಕ ಜಗತ್ತಿನ ಎಲ್ಲ ಚಟುವಟಿಕೆಗಳಿಂದ ದೂರವಾಗಿದ್ದರೂ ಅದರ ಪರಮ ನಿರ್ದೇಶಕನಾಗಿ ಉಳಿಯುತ್ತಾನೆ ಎನ್ನುವುದನ್ನೂ ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಪರಮ ಪ್ರಭುವೇ ಪರಮ ಸಂಕಲ್ಪ ಮತ್ತು ಈ ಐಹಿಕ ಅಭಿವ್ಯಕ್ತಿಯ ಹಿನ್ನೆಲೆ. ಆದರೆ ಐಹಿಕ ಪ್ರಕೃತಿಯು ಇದನ್ನು ನಿರ್ವಹಿಸುತ್ತದೆ. ಭಗವದ್ಗೀತೆಯಲ್ಲಿ ಕೃಷ್ಣನೂ, ಬೇರೆ ಬೇರೆ ರೂಪಗಳ ಮತ್ತು ವರ್ಗಗಳ ಜೀವಿಗಳಿಗೆಲ್ಲ "ನಾನೇ ತಂದೆ" ಎಂದು ಹೇಳುತ್ತಾನೆ. ತಂದೆಯು ಮಗುವಿನ ಜನನಕ್ಕಾಗಿ ತಾಯಿಯ ಗರ್ಭಕ್ಕೆ ಬೀಜವನ್ನು ನೀಡುತ್ತಾನೆ. ಇದೇ ರೀತಿಯಲ್ಲಿ ಭಗವಂತನು ತನ್ನ ಕಡೆಗಣ್ಣಿನ ನೋಟ ಮಾತ್ರದಿಂದಲೇ ಐಹಿಕ ಪ್ರಕೃತಿಯ ಗರ್ಭದೊಳಗೆ ಎಲ್ಲ ಜೀವಿಗಳನ್ನೂ ಸೇರಿಸುತ್ತಾನೆ; ಅವರು ತಮ್ಮ ಹಿಂದಿನ ಆಸೆಗಳು ಮತ್ತು ಚಟುವಟಿಕೆಗಳು ಇವುಗಳಿಗೆ ಅನುಗುಣವಾಗಿ ಹೊರಕ್ಕೆ ಬರುತ್ತಾರೆ. ಈ ಎಲ್ಲ ಜೀವಿಗಳೂ ಪ್ರಭುವಿನ ಕಡೆಗಣ್ಣ ನೋಟದಲ್ಲಿ ಜನಿಸಿದ್ದರೂ ತಮ್ಮ ಹಿಂದಿನ ಕಾರ್ಯಗಳಿಗೆ ಮತ್ತು ಆಸೆಗಳಿಗೆ ಅನುಗುಣವಾಗಿ ಬೇರೆ ಬೇರೆ ದೇಹಗಳನ್ನು ಪಡೆಯುತ್ತಾರೆ. ಆದುದರಿಂದ ಪ್ರಭುವು ಈ ಐಹಿಕ ಸೃಷ್ಟಿಯಲ್ಲಿ ನೇರವಾಗಿ ಆಸಕ್ತನಲ್ಲ. ಆತನು ಐಹಿಕ ಪ್ರಕೃತಿಯತ್ತ ಕಣ್ಣೋಟ ಬೀರುತ್ತಾನೆ ಅಷ್ಟೇ; ಇದರಿಂದ ಐಹಿಕ ಪ್ರಕೃತಿಯು ಚುರುಕಾಗುತ್ತದೆ ಮತ್ತು ಕೂಡಲೇ ಎಲ್ಲವೂ ಸೃಷ್ಟಿಯಾಗುತ್ತವೆ. ಐಹಿಕ ಪ್ರಕೃತಿಯತ್ತ ಕಣ್ಣೋಟ ಬೀರುವುದರಿಂದ ಪರಮ ಪ್ರಭುವು ನಿಶ್ಚಯವಾಗಿಯೂ ಚಟುವಟಿಕೆಯನ್ನು ತೋರಿಸುತ್ತಾನೆ. ಆದರೆ ಐಹಿಕ ಜಗತ್ತಿನ ಅಭಿವ್ಯಕ್ತಿಗೂ ಆತನಿಗೂ ನೇರವಾದ ಸಂಬಂಧವಿಲ್ಲ. ಸ್ಮೃತಿಯಲ್ಲಿ ಈ ಉದಾಹರಣೆಯನ್ನು ಕೊಟ್ಟಿದೆ. ಯಾರ ಮುಂದಾದರೂ ಒಂದು ಸುಗಂಧವಿರುವ ಹೂವಿದ್ದರೆ ಆತನ ಘ್ರಾಣಶಕ್ತಿಯನ್ನು

ಸುಗಂಧವು ಸ್ಪರ್ಶಿಸುತ್ತದೆ. ಆದರೆ ಘ್ರಾಣವೂ ಹೂವೂ ಒಂದರಿಂದ ಇನ್ನೊಂದು ಬೇರೆಯಾಗಿರುತ್ತದೆ. ಐಹಿಕ ಜಗತ್ತಿಗೂ ದೇವೋತ್ತಮ ಪರಮ ಪುರುಷನಿಗೂ ಇಂತಹುದೇ ಸಂಬಂಧವಿದೆ. ವಾಸ್ತವವಾಗಿ ಆತನಿಗೆ ಈ ಐಹಿಕ ಜಗತ್ತಿನೊಡನೆ ಸಂಬಂಧವಿಲ್ಲ. ಆದರೆ ತನ್ನ ಕಣ್ಣೋಟದಿಂದ ಸೃಷ್ಟಿಮಾಡಿ ಜಗನ್ನಿಯಾಮಕನಾಗುತ್ತಾನೆ. ಸಂಗ್ರಹವಾಗಿ ಹೇಳಬೇಕೆಂದರೆ ದೇವೋತ್ತಮ ಪರಮ ಪುರುಷನ ಮೇಲ್ವಿಚಾರಣೆಯಿಲ್ಲದೆ ಐಹಿಕ ಪ್ರಕೃತಿಯು ಏನನ್ನೂ ಮಾಡಲಾರದು. ಆದರೂ ಪರಮ ಪುರುಷನು ಎಲ್ಲ ಐಹಿಕ ಚಟುವಟಿಕೆಗಳಿಂದ ದೂರವಾಗಿರುತ್ತಾನೆ.

## ಶ್ಲೋಕ - 11

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥೧೧॥**

**ಅವಜಾನನ್ತಿ**—ಕಡೆಗಣಿಸುತ್ತಾರೆ; **ಮಾಮ್**—ನನ್ನನ್ನು; **ಮೂಢಾಃ**—ಮೂರ್ಖರು; **ಮಾನುಷೀಮ್**—ಮಾನವರೂಪದ; **ತನುಮ್**—ದೇಹವನ್ನು; **ಆಶ್ರಿತಮ್**—ಧರಿಸಿದ; **ಪರಮ್**—ದಿವ್ಯವಾದ; **ಭಾವಮ್**—ಪ್ರಕೃತಿಯನ್ನು; **ಅಜಾನನ್ತಃ**—ತಿಳಿಯದೆ; **ಮಮ**—ನನ್ನ; **ಭೂತ**— ಇರುವುದೆಲ್ಲದರ; **ಮಹಾ ಈಶ್ವರಮ್**—ಪರಮ ಪ್ರಭುವಾದ.

## ಅನುವಾದ

**ನಾನು ಮನುಷ್ಯರೂಪದಲ್ಲಿ ಇಳಿದು ಬಂದಾಗ ಮೂಢರು ನನ್ನನ್ನು ಅಪಹಾಸ್ಯ ಮಾಡುತ್ತಾರೆ. ಇರುವುದೆಲ್ಲದರ ಪ್ರಭು ನಾನೇ. ನನ್ನ ಈ ದಿವ್ಯಪ್ರಕೃತಿಯು ಅವರಿಗೆ ತಿಳಿಯದು.**

## ಭಾವಾರ್ಥ

ಈ ಅಧ್ಯಾಯದ ಇತರ ವಿವರಣೆಗಳಿಂದ ದೇವೋತ್ತಮ ಪರಮ ಪುರುಷನು ಮನುಷ್ಯರೂಪದಲ್ಲಿ ಕಾಣಿಸಿಕೊಂಡರೂ ಸಾಮಾನ್ಯ ಮನುಷ್ಯನಲ್ಲ ಎನ್ನುವುದು ಸ್ಪಷ್ಟವಾಗಿದೆ. ಸಮಸ್ತ ವಿಶ್ವದ ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ನಿರ್ವಹಿಸುವ ದೇವೋತ್ತಮ ಪರಮ ಪುರುಷನು ಮನುಷ್ಯನಾಗಿರಲು ಸಾಧ್ಯವಿಲ್ಲ. ಆದರೂ ಕೃಷ್ಣನೊಬ್ಬ ಬಲಶಾಲಿ ಮನುಷ್ಯ ಮಾತ್ರ, ಬೇರೇನೂ ಅಲ್ಲ ಎಂದು ಭಾವಿಸುವ ಅನೇಕ ಮೂಢರಿದ್ದಾರೆ. ಆದರೆ ಬ್ರಹ್ಮಸಂಹಿತೆಯಲ್ಲಿ ದೃಢಪಡಿಸಿರುವಂತೆ (**ಈಶ್ವರಃ ಪರಮಃ ಕೃಷ್ಣಃ**) ಆತನೇ ಮೂಲ ಪರಮ ಪುರುಷನು; ಆತನು ಪರಮ ಪ್ರಭು.

ಈಶ್ವರರು, ನಿಯಂತ್ರಕರು ಅನೇಕರಿದ್ದಾರೆ; ಒಬ್ಬರು ಮತ್ತೊಬ್ಬರಿಗಿಂತ ದೊಡ್ಡವರಾಗಿ ಕಾಣುತ್ತಾರೆ. ಈ ಐಹಿಕ ಜಗತ್ತಿನ ವ್ಯವಹಾರಗಳ ಸಾಮಾನ್ಯ ನಿರ್ವಹಣೆಯಲ್ಲಿ ನಾವು ಒಬ್ಬ ಅಧಿಕಾರಿಯನ್ನು ಅಥವಾ ನಿರ್ದೇಶಕನನ್ನು ಕಾಣುತ್ತೇವೆ. ಅವನ ಮೇಲೆ ಒಬ್ಬ ಕಾರ್ಯದರ್ಶಿ ಇರುತ್ತಾನೆ. ಅವನ ಮೇಲೆ ಒಬ್ಬ ಮಂತ್ರಿ ಮತ್ತು ಅವನ ಮೇಲೆ ಒಬ್ಬ ಅಧ್ಯಕ್ಷ. ಅವರಲ್ಲಿ ಪ್ರತಿಯೊಬ್ಬರೂ ನಿಯಂತ್ರಕರೇ. ಆದರೆ ಒಬ್ಬನು ಮತ್ತೊಬ್ಬನನ್ನು ನಿಯಂತ್ರಿಸುತ್ತಾನೆ. ಕೃಷ್ಣನು ಪರಮ ನಿಯಂತ್ರಕ ಎಂದು ಬ್ರಹ್ಮಸಂಹಿತೆಯಲ್ಲಿ ಹೇಳಿದೆ. ಐಹಿಕ ಜಗತ್ತಿನಲ್ಲಿಯೂ ಆಧ್ಯಾತ್ಮಿಕ ಜಗತ್ತಿನಲ್ಲಿಯೂ ನಿಸ್ಸಂಶಯವಾಗಿ ಅನೇಕ ನಿಯಂತ್ರಕರಿದ್ದಾರೆ. ಆದರೆ ಕೃಷ್ಣನು ಪರಮ ನಿಯಂತ್ರಕ

(**ಈಶ್ವರಃ ಪರಮಃ ಕೃಷ್ಣಃ**) ಮತ್ತು ಅವನ ದೇಹವು ಸಚ್ಚಿದಾನಂದ.

ಹಿಂದಿನ ಶ್ಲೋಕಗಳಲ್ಲಿ ವರ್ಣಿಸಿರುವ ಆಶ್ಚರ್ಯಕರ ಕಾರ್ಯಗಳನ್ನು ಐಹಿಕ ದೇಹಗಳು ಮಾಡಲಾರವು. ಅವನ ದೇಹವು ಶಾಶ್ವತವಾದದ್ದು, ಆನಂದಮಯವಾದದ್ದು ಮತ್ತು ಜ್ಞಾನಪೂರ್ಣವಾದದ್ದು. ಆತನು ಸಾಮಾನ್ಯ ಮನುಷ್ಯನಲ್ಲದಿದ್ದರೂ ಮೂಢರು ಅವನನ್ನು ಅಪಹಾಸ್ಯ ಮಾಡುತ್ತಾರೆ ಮತ್ತು ಆತನು ಸಾಮಾನ್ಯ ಮನುಷ್ಯನೆಂದು ಪರಿಗಣಿಸುತ್ತಾರೆ. ಇಲ್ಲಿ ಅವನ ದೇಹವನ್ನು **ಮಾನುಷೀಮ್** ಎಂದು ಕರೆಯಲಾಗಿದೆ. ಏಕೆಂದರೆ ಅವನು ಒಬ್ಬ ಮನುಷ್ಯನಂತೆ, ಅರ್ಜುನನ ಸಖನಾಗಿ ಮತ್ತು ಕುರುಕ್ಷೇತ್ರ ಯುದ್ಧದಲ್ಲಿ ಒಳಗಾಗಿರುವ ಒಬ್ಬ ರಾಜಕಾರಣಿಯಂತೆ ವರ್ತಿಸುತ್ತಿದ್ದಾನೆ. ಅನೇಕ ರೀತಿಗಳಲ್ಲಿ ಆತನು ಸಾಮಾನ್ಯ ಮನುಷ್ಯನಂತೆ ವರ್ತಿಸುತ್ತಾನೆ. ಆದರೆ ಆತನ ದೇಹವು **ಸಚ್ಚಿದಾನನ್ದವಿಗ್ರಹ** —ಶಾಶ್ವತ ಆನಂದ ಮತ್ತು ಪರಿಪೂರ್ಣಜ್ಞಾನ. ವೇದದ ಭಾಷೆಯು ಇದನ್ನು ದೃಢಪಡಿಸುತ್ತದೆ. **ಸಚ್ಚಿದಾನನ್ದರೂಪಾಯ ಕೃಷ್ಣಾಯ** — ಸಚ್ಚಿದಾನಂದ ಸ್ವರೂಪನಾದ ದೇವೋತ್ತಮ ಪರಮ ಪುರುಷನಾದ ಕೃಷ್ಣನಿಗೆ ನಾನು ನಮಸ್ಕರಿಸುತ್ತೇನೆ. (ಗೋಪಾಲ ತಾಪನೀ ಉಪನಿಷತ್ತು 1.1) ವೇದಗಳ ಭಾಷೆಯಲ್ಲಿ ಇತರ ವರ್ಣನೆಗಳೂ ಇವೆ. **ತಮ್ ಏಕಮ್ ಗೋವಿನ್ದಮ್** — "ನೀನು ಗೋವಿಂದನು, ಇಂದ್ರಿಯಗಳ ಮತ್ತು ಗೋವುಗಳ ಆನಂದನು." **ಸಚ್ಚಿದಾನನ್ದ ವಿಗ್ರಹಮ್** — "ನಿನ್ನ ರೂಪವು ದಿವ್ಯವಾದದ್ದು, ಶಾಶ್ವತ ಜ್ಞಾನ ಮತ್ತು ಆನಂದಗಳಿಂದ ತುಂಬಿರುವುದು." (ಗೋಪಾಲ ತಾಪನೀ ಉಪನಿಷತ್ತು 1.35)

ಶ್ರೀಕೃಷ್ಣನ ದೇಹಕ್ಕೆ ದಿವ್ಯಗುಣಗಳಿದ್ದರೂ, ಅದು ಜ್ಞಾನಾನಂದಮಯವಾದರೂ ವಿದ್ವಾಂಸರೆಂದು ಕರೆಸಿಕೊಳ್ಳುವ ಎಷ್ಟೋಮಂದಿ ಮತ್ತು ಭಗವದ್ಗೀತೆಯ ಹಲವರು ವ್ಯಾಖ್ಯಾನಕಾರರು ಅವನನ್ನು ಸಾಮಾನ್ಯ ಮನುಷ್ಯನೆಂದು ತಿರಸ್ಕಾರದಿಂದ ಕಾಣುತ್ತಾರೆ. ಹಿಂದಿನ ಪುಣ್ಯಕಾರ್ಯದ ಫಲವಾಗಿ ವಿದ್ವಾಂಸನು ಅಸಾಧಾರಣ ಮನುಷ್ಯನಾಗಿ ಹುಟ್ಟಿರಬಹುದು. ಆದರೆ ಕೃಷ್ಣನನ್ನು ಕುರಿತ ಈ ಕಲ್ಪನೆಯು ಅಲ್ಪಜ್ಞಾನದಿಂದ ಬಂದದ್ದು. ಆದುದರಿಂದ ಈ ಮನುಷ್ಯನನ್ನು **ಮೂಢಾ** ಎಂದು ಕರೆದಿದೆ; ಮೂಢರು ಮಾತ್ರ ಕೃಷ್ಣನು ಸಾಮಾನ್ಯ ಮನುಷ್ಯ ಎಂದು ಭಾವಿಸುತ್ತಾರೆ. ಪರಮ ಪ್ರಭುವಿನ ರಹಸ್ಯ ಚಟುವಟಿಕೆಗಳನ್ನು, ಅವನ ವಿವಿಧ ಶಕ್ತಿಗಳನ್ನು, ತಿಳಿಯದಿರುವುದರಿಂದ ಮೂಢರು ಕೃಷ್ಣನನ್ನು ಸಾಮಾನ್ಯ ಮನುಷ್ಯ ಎಂದು ಭಾವಿಸುತ್ತಾರೆ. ಕೃಷ್ಣನ ದೇಹವು ಸಂಪೂರ್ಣ ಜ್ಞಾನಾನಂದಗಳ ಸಂಕೇತ; ಅಸ್ತಿತ್ವದಲ್ಲಿರುವ ಎಲ್ಲದರ ಒಡೆಯ ಅವನು; ಆತನು ಯಾರಿಗಾದರೂ ಮುಕ್ತಿಯನ್ನು ಅನುಗ್ರಹಿಸಬಲ್ಲ ಎಂಬುದನ್ನು ಅವರು ತಿಳಿಯರು. ಕೃಷ್ಣನಲ್ಲಿ ಅನೇಕ ದಿವ್ಯ ಅರ್ಹತೆಗಳು ಇವೆ ಎಂದು ಅವರಿಗೆ ತಿಳಿಯದು. ಆದುದರಿಂದ ಅವರು ಆತನನ್ನು ಅಪಹಾಸ್ಯ ಮಾಡುತ್ತಾರೆ.

ಈ ಐಹಿಕ ಜಗತ್ತಿನಲ್ಲಿ ದೇವೋತ್ತಮ ಪರಮ ಪುರುಷನ ಅವತಾರವು ಆತನ ಅಂತರಂಗ ಶಕ್ತಿಯ ಅಭಿವ್ಯಕ್ತಿ ಎಂದೂ ಅವರಿಗೆ ತಿಳಿಯದು. ಆತನು ಐಹಿಕ ಶಕ್ತಿಯ ಪ್ರಭು. ಅನೇಕ ಸ್ಥಳಗಳಲ್ಲಿ ವಿವರಿಸಿರುವಂತೆ (**ಮಮ ಮಾಯಾ ದುರತ್ಯಯಾ**), ಎಲ್ಲ ಐಹಿಕ ಶಕ್ತಿಯೂ, ಅದರ ಬಲ ಎಷ್ಟೇ ಇರಲಿ, ತನ್ನ ಅಧೀನ, ಮತ್ತು ತನಗೆ ಯಾರು ಶರಣಾಗುತ್ತಾರೋ ಅವರು ಈ ಐಹಿಕ ಶಕ್ತಿಯ ನಿಯಂತ್ರಣದಿಂದ ಪಾರಾಗಬಹುದು ಎಂದು ಅವನು ಹೇಳುತ್ತಾನೆ. ಕೃಷ್ಣನಿಗೆ ಶರಣಾಗುವ ಆತ್ಮವು ಐಹಿಕ ಶಕ್ತಿಯ ಪ್ರಭಾವದಿಂದ ಪಾರಾಗಬಹುದಾದರೆ ಇಡೀ ವಿಶ್ವದ ಸೃಷ್ಟಿ, ಸ್ಥಿತಿ ಮತ್ತು

ಲಯಗಳನ್ನು ನಿರ್ವಹಿಸುವ ಪರಮ ಪ್ರಭುವಿಗೆ ನಮ್ಮ ದೇಹಗಳಂತಹ ಭೌತಿಕ ದೇಹವು ಇರುವುದು ಹೇಗೆ ಸಾಧ್ಯ? ಆದುದರಿಂದ ಕೃಷ್ಣನನ್ನು ಕುರಿತ ಈ ಕಲ್ಪನೆ ಸಂಪೂರ್ಣವಾಗಿ ದಡ್ಡತನ. ಸಾಮಾನ್ಯ ಮನುಷ್ಯನ ರೂಪದಲ್ಲಿ ಕಾಣಿಸಿಕೊಳ್ಳುವ ದೇವೋತ್ತಮ ಪರಮ ಪುರುಷನಾದ ಕೃಷ್ಣನು ಹೇಗೆ ಎಲ್ಲ ಪರಮಾಣುಗಳ ಮತ್ತು ವಿಶ್ವರೂಪದ ಬೃಹತ್ ಅಭಿವ್ಯಕ್ತಿಗಳ ನಿಯಂತ್ರಕನಾಗಬಲ್ಲ ಎಂದು ಮೂಢರು ಕಲ್ಪಿಸಿಕೊಳ್ಳಲಾರರು. ಬೃಹತ್ತಾದದ್ದು ಅವರ ಕಲ್ಪನಾಶಕ್ತಿಗೆ ಮೀರಿದ್ದು. ಆದುದರಿಂದ, ಮನುಷ್ಯನಂತಹ ರೂಪವು ಅನಂತವಾದುದನ್ನೂ ಅತ್ಯಂತ ಸೂಕ್ಷ್ಮವಾದದ್ದನ್ನೂ ನಿಯಂತ್ರಿಸಬಲ್ಲದು ಎಂದು ಅವರು ಕಲ್ಪಿಸಿಕೊಳ್ಳಲಾರರು. ವಾಸ್ತವವಾಗಿ ಆತನು ಅನಂತವನ್ನೂ ಪರಿಮಿತವನ್ನೂ ನಿಯಂತ್ರಿಸುತ್ತಿದ್ದರೂ ಆತನು ಈ ಎಲ್ಲ ಅಭಿವ್ಯಕ್ತಿಯಿಂದ ಪ್ರತ್ಯೇಕವಾಗಿದ್ದಾನೆ. ಆತನ **ಯೋಗಮ್ ಐಶ್ವರಮ್** — ಊಹಾತೀತ ದಿವ್ಯ ಶಕ್ತಿಯನ್ನು ಕುರಿತು — ಆತನು ಏಕಕಾಲದಲ್ಲಿ ಅನಂತವಾದುದನ್ನು ಪರಿಮಿತವಾದುದನ್ನು ನಿಯಂತ್ರಿಸಬಲ್ಲ, ಹಾಗೆಯೇ ಅವುಗಳಿಂದ ಪ್ರತ್ಯೇಕವಾಗಿ ಇರಬಲ್ಲ ಎಂದು ಸ್ಪಷ್ಟವಾಗಿ ಹೇಳಿದೆ. ಮನುಷ್ಯನಂತೆಯೇ ಕಾಣುವ ಕೃಷ್ಣನು ಅನಂತವನ್ನು, ಪರಿಮಿತವನನ್ನು ಹೇಗೆ ನಿಯಂತ್ರಿಸಬಲ್ಲ ಎಂದು ಮೂಢರು ಕಲ್ಪಿಸಿಕೊಳ್ಳಲಾರರು. ಆದರೆ ಪರಿಶುದ್ಧ ಭಕ್ತರು ಇದನ್ನು ಒಪ್ಪಿಕೊಳ್ಳುತ್ತಾರೆ. ಏಕೆಂದರೆ ಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ಅವರಿಗೆ ಗೊತ್ತು. ಆದುದರಿಂದ ಅವರು ಆತನಿಗೆ ಸಂಪೂರ್ಣವಾಗಿ ಶರಣಾಗುತ್ತಾರೆ ಮತ್ತು ಕೃಷ್ಣಪ್ರಜ್ಞೆಯಲ್ಲಿ, ಪ್ರಭುವಿನ ಭಕ್ತಿಸೇವೆಯಲ್ಲಿ ನಿರತರಾಗುತ್ತಾರೆ.

ಭಗವಂತನು ಮನುಷ್ಯರೂಪದಲ್ಲಿ ಕಾಣಿಸಿಕೊಳ್ಳುವ ವಿಷಯದಲ್ಲಿ ನಿರಾಕಾರವಾದಿಗಳಿಗೂ ಸಾಕಾರವಾದಿಗಳಿಗೂ ಬಹು ವಾದವಿವಾದಗಳಿವೆ. ಆದರೆ ಕೃಷ್ಣ ವಿಜ್ಞಾನವನ್ನು ಅರ್ಥಮಾಡಿಕೊಳ್ಳಲು ಭಗವದ್ಗೀತೆಯೂ, ಶ್ರೀಮದ್ಭಾಗವತವೂ ಪ್ರಮಾಣ ಗ್ರಂಥಗಳು; ಅವನ್ನು ಓದಿ ನೋಡಿದರೆ ಕೃಷ್ಣನು ದೇವೋತ್ತಮ ಪರಮ ಪುರುಷನು ಎಂದು ನಾವು ಅರ್ಥಮಾಡಿಕೊಳ್ಳಬಹುದು. ಸಾಮಾನ್ಯ ಮನುಷ್ಯನಂತೆ ಭೂಲೋಕದಲ್ಲಿ ಕಾಣಿಸಿಕೊಂಡರೂ ಆತನು ಸಾಮಾನ್ಯ ಮನುಷ್ಯನಲ್ಲ. ಶ್ರೀಮದ್ಭಾಗವತದ ಪ್ರಥಮ ಸ್ಕಂಧದ ಪ್ರಥಮ ಅಧ್ಯಾಯದಲ್ಲಿ, ಶೌನಕರ ನಾಯಕತ್ವದಲ್ಲಿ ಋಷಿಗಳನ್ನು ಕೃಷ್ಣನ ಕಾರ್ಯಗಳನ್ನು ಕುರಿತು ಪ್ರಶ್ನೆ ಮಾಡಿದಾಗ ಅವರು ಹೀಗೆ ಹೇಳಿದರು—

**ಕೃತವಾನ್ ಕಿಲ ಕರ್ಮಾಣಿ ಸಹ ರಾಮೇಣ ಕೇಶವಃ |**
**ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ ||**

"ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನು, ಬಲರಾಮನೊಡನೆ, ಮನುಷ್ಯನಂತೆ ಆಟವಾಡಿದನು. ಹೀಗೆ ಮರೆಯಾಗಿ ಬಹು ಮನುಷ್ಯಾತೀತ ಕಾರ್ಯಗಳನ್ನು ಮಾಡಿದನು." (ಭಾಗವತ 1.1.20) ಮನುಷ್ಯನಾಗಿ ಪ್ರಭುವು ಕಾಣಿಸಿಕೊಳ್ಳುವುದು ಮೂಢರಿಗೆ ದಿಗ್ಭ್ರಮೆಯನ್ನುಂಟು ಮಾಡುತ್ತದೆ. ಕೃಷ್ಣನು ಈ ಭೂಮಿಯ ಮೇಲಿದ್ದ ಕಾಲದಲ್ಲಿ ಮಾಡಿದ ಕಾರ್ಯಗಳನ್ನು ಯಾವ ಮನುಷ್ಯನೂ ಮಾಡಲು ಸಾಧ್ಯವಿಲ್ಲ. ಕೃಷ್ಣನು ತನ್ನ ತಂದೆ ತಾಯಿಯರಾದ ವಸುದೇವ ಮತ್ತು ದೇವಕಿಯರ ಎದುರಿಗೆ ಚತುರ್ಭುಜನಾಗಿ ಕಾಣಿಸಿಕೊಂಡ. ಆದರೆ ತನ್ನ ತಂದೆತಾಯಿಯರು ಪ್ರಾರ್ಥನೆ ಮಾಡಿದನಂತರ ಆತನು ಸಾಮಾನ್ಯ ಮಗುವಿನ ರೂಪವನ್ನು ಧರಿಸಿದ. ಭಾಗವತದಲ್ಲಿ ಹೇಳಿರುವಂತೆ (10.3.46) **ಬಭೂವ ಪ್ರಾಕೃತಃ ಶಿಶುಃ** ಆತನು ಸಾಮಾನ್ಯ ಮನುಷ್ಯನಂತೆ ಆದನು. ಸಾಮಾನ್ಯ ಮನುಷ್ಯನಾಗಿ ಕಾಣಿಸಿಕೊಳ್ಳುವುದು ಪ್ರಭುವಿನ ದಿವ್ಯ ಶರೀರದ ಲಕ್ಷಣಗಳಲ್ಲಿ

ಒಂದು ಎಂದು ಇಲ್ಲಿ ಮತ್ತೆ ಸೂಚಿಸಿದೆ. ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ಅರ್ಜುನನು ಕೃಷ್ಣನ ಚತುರ್ಭುಜ ರೂಪವನ್ನು ಕಾಣಲು ಬಯಸಿದ (**ತೇನೈವ ರೂಪೇಣ ಚತುರ್ಭುಜೇನ**) ಎಂದು ಹೇಳಿದೆ. ಈ ರೂಪವನ್ನು ತೋರಿಸಿದ ಅನಂತರ, ಅರ್ಜುನನ ಪ್ರಾರ್ಥನೆಯಂತೆ ಕೃಷ್ಣನು ಮತ್ತೆ ತನ್ನ ಮನುಷ್ಯ ರೂಪವನ್ನು (**ಮಾನುಷಂ ರೂಪಮ್**) ಧರಿಸಿದನು. ಪರಮ ಪ್ರಭುವಿನ ಈ ಬೇರೆಬೇರೆ ಸ್ವರೂಪಗಳು ನಿಶ್ಚಯವಾಗಿಯೂ ಸಾಮಾನ್ಯ ಮನುಷ್ಯನ ಸ್ವರೂಪಗಳಲ್ಲ.

ಮಾಯಾವಾದಿ ಸಿದ್ಧಾಂತದ ಸೋಂಕಿನಿಂದ ಕೃಷ್ಣನನ್ನು ತೆಗಳುವವರಲ್ಲಿ ಕೆಲವರು, ಆತನು ಸಾಮಾನ್ಯ ಮನುಷ್ಯ ಎಂದು ತೋರಿಸಿ ಕೊಡಲು ಶ್ರೀಮದ್ಭಾಗವತದಿಂದ (3.29.21) ಈ ಕೆಳಗಿನ ಶ್ಲೋಕವನ್ನು ಉದ್ಧರಿಸುತ್ತಾರೆ — **ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ** (3.29.21) — "ಪರಮ ಪ್ರಭುವು ಪ್ರತಿಯೊಂದು ಜೀವಿಯಲ್ಲಿ ಇದ್ದಾನೆ. " ಕೃಷ್ಣನನ್ನು ತೆಗಳುವ ಅನಧಿಕೃತ ವ್ಯಕ್ತಿಗಳ ವ್ಯಾಖ್ಯಾರ್ಥವನ್ನು ಅನುಸರಿಸುವ ಬದಲು ಜೀವ ಗೋಸ್ವಾಮಿ ಮತ್ತು ವಿಶ್ವನಾಥ ಚಕ್ರವರ್ತಿ ಠಾಕೂರರಂತಹವರ ಮಾರ್ಗದರ್ಶನದಲ್ಲಿ ಈ ಶ್ಲೋಕವನ್ನು ಗಮನಿಸುವುದು ಉತ್ತಮ. ಈ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತ ಜೀವ ಗೋಸ್ವಾಮಿಯವರು, ಸ್ವಾಂಶ ವಿಸ್ತರಣೆಯಲ್ಲಿ ಕೃಷ್ಣನು ಪರಮಾತ್ಮನಾಗಿ ಸಕಲ ಚರಾಚರಗಳಲ್ಲಿ ಇದ್ದಾನೆ, ಆದುದರಿಂದ ಅರ್ಚಾಮೂರ್ತಿಗಷ್ಟೇ — ದೇವಸ್ಥಾನದಲ್ಲಿ ಅರ್ಚನೆ ಮಾಡುವ ಪರಮ ಪ್ರಭುವಿನ ರೂಪಕ್ಕಷ್ಟೇ — ಗಮನಕೊಟ್ಟು ಇತರ ಜೀವಿಗಳನ್ನು ಗೌರವಿಸದಿರುವ ನವಶಿಷ್ಯನು ದೇವಾಲಯದಲ್ಲಿರುವ ದೇವರ ರೂಪವನ್ನು ನಿರರ್ಥಕವಾಗಿ ಪೂಜೆ ಮಾಡುತ್ತಾನೆ ಎಂದು ಹೇಳಿದ್ದಾರೆ. ಪ್ರಭುವಿನ ಭಕ್ತರಲ್ಲಿ ಮೂರು ಬಗೆಯವರಿದ್ದಾರೆ; ನವಶಿಷ್ಯನು ಅತ್ಯಂತ ಕೆಳಗಿನ ಹಂತದಲ್ಲಿದ್ದಾನೆ. ನವಶಿಷ್ಯ ಭಕ್ತನು ಇತರ ಭಕ್ತರಿಗೆ ಕೊಡುವುದಕ್ಕಿಂತ ಹೆಚ್ಚು ಗಮನವನ್ನು ದೇವಸ್ಥಾನದಲ್ಲಿರುವ ಮೂರ್ತಿಗೆ ಕೊಡುತ್ತಾನೆ; ಆದುದರಿಂದ ವಿಶ್ವನಾಥ ಚಕ್ರವರ್ತಿ ಠಾಕೂರರು ಇಂತಹ ಮನೋಧರ್ಮವನ್ನು ತಿದ್ದಬೇಕು ಎಂದು ಎಚ್ಚರ ಹೇಳಿದ್ದಾರೆ. ಪರಮಾತ್ಮ ಸ್ವರೂಪದಲ್ಲಿ ಕೃಷ್ಣನು ಪ್ರತಿಯೊಬ್ಬರ ಹೃದಯದಲ್ಲೂ ಇರುವುದರಿಂದ ಪ್ರತಿಯೊಬ್ಬನೂ ಪರಮ ಪ್ರಭುವಿನ ಸಾಕಾರರೂಪ ಅಥವಾ ದೇವಾಲಯ ಎನ್ನುವುದನ್ನು ಭಕ್ತನು ಅರ್ಥಮಾಡಿಕೊಳ್ಳಬೇಕು. ಪ್ರಭುವಿನ ದೇವಾಲಯಕ್ಕೆ ಗೌರವ ಕೊಡುವಂತೆ ಪರಮಾತ್ಮನು ವಾಸಿಸುವ ಒಂದೊಂದು ದೇಹಕ್ಕೂ ಗೌರವವನ್ನು ಕೊಡಬೇಕು. ಪ್ರತಿಯೊಬ್ಬನಿಗೂ ಉಚಿತವಾದ ಗೌರವವನ್ನು ನೀಡಬೇಕು. ಯಾರನ್ನೂ ಅಲಕ್ಷ್ಯ ಮಾಡಬಾರದು.

ದೇವಾಲಯ ಪೂಜೆಯನ್ನು ತೆಗಳುವ ಅನೇಕ ಮಂದಿ ನಿರಾಕಾರವಾದಿಗಳು ಇದ್ದಾರೆ. ದೇವರು ಎಲ್ಲೆಲ್ಲಿಯೂ ಇದ್ದಾನೆ. ಆದುದರಿಂದ ಭಕ್ತನು ದೇವಾಲಯ ಪೂಜೆಗೇ ತನ್ನನ್ನು ಏಕೆ ಸೀಮಿತಗೊಳಿಸಿಕೊಳ್ಳಬೇಕು? ಎಂದು ಅವರು ಕೇಳುತ್ತಾರೆ. ದೇವರು ಎಲ್ಲೆಲ್ಲಿಯೂ ಇರುವುದಾದರೆ ಆತನು ದೇವಾಲಯದಲ್ಲಿ ಅಥವಾ ಮೂರ್ತಿಯಲ್ಲಿ ಇರುವುದಿಲ್ಲವೆ ? ಸಾಕಾರವಾದಿಗಳು, ನಿರಾಕಾರವಾದಿಗಳು ನಿರಂತರವಾಗಿ ಒಬ್ಬರೊಡನೊಬ್ಬರು ಜಗಳವಾಡುತ್ತಾರೆ. ಆದರೂ ಕೃಷ್ಣಪ್ರಜ್ಞೆಯಲ್ಲಿರುವ ಪರಿಪೂರ್ಣ ಭಕ್ತನಿಗೆ ಕೃಷ್ಣನು ಪರಮ ಪುರುಷನಾದರೂ ಬ್ರಹ್ಮಸಂಹಿತೆಯಲ್ಲಿ ದೃಢಪಡಿಸಿರುವಂತೆ ಆತನು ಎಲ್ಲೆಲ್ಲಿಯೂ ಇದ್ದಾನೆ ಎಂದು ಗೊತ್ತು. ಗೋಲೋಕ ವೃಂದಾವನವು ಆತನ ವೈಯಕ್ತಿಕ ನಿವಾಸ, ಅವನು ಸದಾ ಅಲ್ಲಿಯೇ ವಾಸಿಸುತ್ತಾನೆ; ಆದರೂ ತನ್ನ ಶಕ್ತಿಯ ಬೇರೆ

ಬೇರೆ ಅಭಿವ್ಯಕ್ತಿಗಳಿಂದ ಮತ್ತು ತನ್ನ ಪೂರ್ಣ ವಿಸ್ತರಣೆಯಿಂದ ಆತನು ಐಹಿಕ ಮತ್ತು ಆಧ್ಯಾತ್ಮಿಕ ಸೃಷ್ಟಿಯ ಎಲ್ಲ ಭಾಗಗಳಲ್ಲಿ ಎಲ್ಲೆಲ್ಲಿಯೂ ಇದ್ದಾನೆ.

## ಶ್ಲೋಕ - 12

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ |**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ||೧೨||**

**ಮೋಘ ಆಶಾಃ**—ತಮ್ಮ ಆಶೆಯಲ್ಲಿ ದಿಗ್ಭ್ರಮಿತರಾದವರು; **ಮೋಘಕರ್ಮಾಣಃ**—ಕಾಮ್ಯ ಕರ್ಮಗಳಲ್ಲಿ ದಿಗ್ಭ್ರಮಿತರಾದವರು; **ಮೋಘ ಜ್ಞಾನಾಃ**—ಜ್ಞಾನದಲ್ಲಿ ದಿಗ್ಭ್ರಮಿತರಾದವರು; **ವಿಚೇತಸಃ**—ಭ್ರಾಂತಿಗೊಂಡವರು; **ರಾಕ್ಷಸೀಮ್**—ರಾಕ್ಷಸೀಯವಾದ; **ಆಸುರೀಮ್**—ನಾಸ್ತಿಕವಾದ; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಪ್ರಕೃತಿಮ್**—ಪ್ರಕೃತಿಯನ್ನು; **ಮೋಹಿನೀಮ್**—ದಿಗ್ಭ್ರಮೆಗೊಳಿಸುವ; **ಶ್ರಿತಾಃ**—ಆಶ್ರಯವನ್ನು ಹೊಂದುವರು.

## ಅನುವಾದ

**ಹೀಗೆ ದಿಗ್ಭ್ರಮೆಯಾದವರನ್ನು ರಾಕ್ಷಸೀ ಮತ್ತು ನಾಸ್ತಿಕ ಅಭಿಪ್ರಾಯಗಳು ಆಕರ್ಷಿಸುತ್ತವೆ. ಈ ಭ್ರಾಂತಿಯ ಸ್ಥಿತಿಯಲ್ಲಿ ಅವರ ಮುಕ್ತಿಯ ಭರವಸೆಗಳು, ಅವರ ಫಲಾಪೇಕ್ಷಿತ ಕರ್ಮಗಳು ಮತ್ತು ಅವರ ಜ್ಞಾನ ಸಂಸ್ಕಾರ ಎಲ್ಲ ಸೋತು ಹೋಗುತ್ತವೆ.**

## ಭಾವಾರ್ಥ

ತಾವು ಕೃಷ್ಣಪ್ರಜ್ಞೆಯಲ್ಲಿ ಇದ್ದೇವೆ ಮತ್ತು ಭಕ್ತಿಸೇವೆಯಲ್ಲಿ ತೊಡಗಿದ್ದೇವೆ ಎಂದು ಭಾವಿಸಿಕೊಳ್ಳುವ ಅನೇಕ ಮಂದಿ ಭಕ್ತರು ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಪರಿಪೂರ್ಣ ಸತ್ಯ ಎಂದು ಸ್ವೀಕರಿಸುವುದಿಲ್ಲ. ಅವರು ಭಕ್ತಿಸೇವೆಯ ಫಲವಾದ ಭಗವದ್ಧಾಮಕ್ಕೆ ಹಿಂದಿರುಗುವುದನ್ನು ಎಂದೂ ಸವಿಯುವುದಿಲ್ಲ. ಹಾಗೆಯೇ ಹಲವರು ಫಲಾಪೇಕ್ಷೆಯುಳ್ಳ ಪುಣ್ಯಕಾರ್ಯಗಳಲ್ಲಿ ನಿರತರಾಗಿ ಈ ಐಹಿಕ ಬಂಧನದಿಂದ ಕಟ್ಟಕಡೆಗೆ ಬಿಡುಗಡೆಯಾಗುತ್ತೇವೆ ಎಂಬ ಭರವಸೆಯನ್ನು ಇಟ್ಟುಕೊಂಡಿರುತ್ತಾರೆ; ಅವರೂ ಯಶಸ್ವಿಗಳಾಗುವುದಿಲ್ಲ. ಏಕೆಂದರೆ ಅವರು ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ತೆಗಳುತ್ತಾರೆ. ಇತರ ಮಾತುಗಳಲ್ಲಿ ಹೇಳುವುದಾದರೆ ಕೃಷ್ಣನನ್ನು ಅಪಹಾಸ್ಯ ಮಾಡುವವರು ರಾಕ್ಷಸ ಸ್ವಭಾವದವರು ಅಥವಾ ನಾಸ್ತಿಕರು ಎಂದು ತಿಳಿದುಕೊಳ್ಳಬೇಕು. ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ವರ್ಣಿಸಿರುವಂತೆ ಈ ರಾಕ್ಷಸೀ ದುಷ್ಕರ್ಮಿಗಳು ಎಂದಿಗೂ ಕೃಷ್ಣನಿಗೆ ಶರಣಾಗತರಾಗುವುದಿಲ್ಲ. ಅವರು ಪರಿಪೂರ್ಣ ಸತ್ಯವನ್ನು ಮುಟ್ಟಲು ಊಹಾತ್ಮಕ ಚಿಂತನೆಗಳಲ್ಲಿ ತೊಡಗುತ್ತಾರೆ. ಇದರಿಂದ ಸಾಮಾನ್ಯ ಜೀವಿಯೂ ಕೃಷ್ಣನೂ ಒಂದೇ ಎನ್ನುವ ಮಿಥ್ಯೆಯ ನಿರ್ಣಯಕ್ಕೆ ಬರುತ್ತಾರೆ. ಇಂತಹ ಸುಳ್ಳು ನಂಬಿಕೆಯಿಂದ ಅವರು ಹೀಗೆ ಯೋಚಿಸುತ್ತಾರೆ; ಯಾವುದೇ ಮನುಷ್ಯನ ದೇಹವನ್ನು ಈಗ ಐಹಿಕ ಪ್ರಕೃತಿಯು ಮುಚ್ಚಿದೆ. ಮನುಷ್ಯನು ಈ ಐಹಿಕ ದೇಹದಿಂದ ಬಿಡುಗಡೆಯಾಗುತ್ತಲೇ ದೇವರಿಗೂ ಅವನಿಗೂ ವ್ಯತ್ಯಾಸವೇ ಇಲ್ಲ. ಕೃಷ್ಣನೊಡನೆ ಒಂದಾಗುವ ಈ ಪ್ರಯತ್ನವು ಭ್ರಾಂತಿಯ ದೆಸೆಯಿಂದ ಗೊಂದಲಕ್ಕೆ ಈಡಾಗುತ್ತದೆ. ಆಧ್ಯಾತ್ಮಿಕ

ಜ್ಞಾನದ ಇಂತಹ ನಾಸ್ತಿಕ ಮತ್ತು ರಾಕ್ಷಸೀ ಪಾಲನೆಯು ಯಾವಾಗಲೂ ನಿರರ್ಥಕ. ಇದೇ ಈ ಶ್ಲೋಕದ ಸೂಚನೆ. ಇಂತಹ ಜನರಿಗೆ ವೇದಾಂತ ಸೂತ್ರ ಮತ್ತು ಉಪನಿಷತ್ತುಗಳಂತಹ ವೈದಿಕ ಸಾಹಿತ್ಯದ ಜ್ಞಾನವು ಸದಾ ಗೊಂದಲವೇ.

ಆದುದರಿಂದ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಸಾಮಾನ್ಯ ಮನುಷ್ಯ ಎಂದು ಭಾವಿಸುವುದು ದೊಡ್ಡ ಅಪರಾಧ. ಹೀಗೆ ಮಾಡುವವರಿಗೆ ನಿಶ್ಚಯವಾಗಿಯೂ ಭ್ರಾಂತಿ. ಏಕೆಂದರೆ ಅವರು ಕೃಷ್ಣನ ನಿತ್ಯರೂಪವನ್ನು ಅರ್ಥಮಾಡಿಕೊಳ್ಳಲಾರರು. **ಬೃಹದ್ ವಿಷ್ಣು ಸ್ಮೃತಿಯು** ಸ್ಪಷ್ಟವಾಗಿ ಹೀಗೆ ಹೇಳಿದೆ —

**ಯೋ ವೇತ್ತಿ ಭೌತಿಕಂ ದೇಹಂ ಕೃಷ್ಣಸ್ಯ ಪರಮಾತ್ಮನಃ**
**ಸ ಸರ್ವಸ್ಮಾದ್ ಬಹಿಷ್ಕಾರ್ಯಃ ಶ್ರೌತಸ್ಮಾರ್ತವಿಧಾನತಃ**
**ಮುಖಂ ತಸ್ಯಾವಲೋಕ್ಯಾಪಿ ಸಚೇಲಂ ಸ್ನಾನಮಾಚರೇತ್**

"ಕೃಷ್ಣನ ದೇಹವು ಐಹಿಕವಾದದ್ದು ಎಂದು ಭಾವಿಸುವವನನ್ನು ಶ್ರುತಿ ಮತ್ತು ಸ್ಮೃತಿಗಳ ಎಲ್ಲ ವಿಧಿಗಳಿಂದ, ಚಟುವಟಿಕೆಗಳಿಂದ ಬಹಿಷ್ಕರಿಸಬೇಕು. ಅಕಸ್ಮಾತ್ತಾಗಿ ಅವನ ಮುಖವನ್ನು ನೋಡಿದರೆ ಆ ಕಲ್ಮಷ ಸೋಂಕನ್ನು ನಿವಾರಿಸಿಕೊಳ್ಳಲು ಕೂಡಲೇ ಗಂಗಾನದಿಯಲ್ಲಿ ಸ್ನಾನ ಮಾಡಬೇಕು." ಜನರು ದೇವೋತ್ತಮ ಪರಮ ಪುರುಷನ ಬಗ್ಗೆ ಅಸೂಯೆ ಪಡುವುದರಿಂದ ಕೃಷ್ಣನನ್ನು ಅಪಹಾಸ್ಯ ಮಾಡುತ್ತಾರೆ. ನಾಸ್ತಿಕ ಮತ್ತು ರಾಕ್ಷಸೀ ಬದುಕಿನ ವರ್ಗಗಳಲ್ಲಿ ಮತ್ತೆ ಮತ್ತೆ ಹುಟ್ಟುವುದು ನಿಶ್ಚಯವಾಗಿಯೂ ಅವರ ವಿಧಿ. ಎಂದೆಂದೂ ಅವರ ನಿಜವಾದ ಜ್ಞಾನವು ಭ್ರಾಂತಿಯಲ್ಲಿ ಸಿಲುಕಿರುತ್ತದೆ ಮತ್ತು ಕ್ರಮೇಣ ಅವರು ಸೃಷ್ಟಿಯ ಅತ್ಯಂತ ಕತ್ತಲೆಯ ಪ್ರದೇಶಕ್ಕೆ ಹಿನ್ನಡೆಯುತ್ತಾರೆ.

## ಶ್ಲೋಕ - 13

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ |**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ||೧೩||**

**ಮಹಾ ಆತ್ಮಾನಃ**—ಮಹಾತ್ಮರು; **ತು**—ಆದರೆ; **ಮಾಮ್**—ನನ್ನನ್ನು; **ಪಾರ್ಥ**—ಪೃಥೆಯ ಪುತ್ರನೇ; **ದೈವೀಮ್**—ದೈವಿಕವಾದ; **ಪ್ರಕೃತಿಮ್**—ಪ್ರಕೃತಿಯನ್ನು; **ಆಶ್ರಿತಾಃ**—ಆಶ್ರಯಿಸಿ; **ಭಜನ್ತಿ**—ಸೇವೆ ಸಲ್ಲಿಸುತ್ತಾರೆ; **ಅನನ್ಯ ಮನಸಃ**—ವಿಚಲಿತವಲ್ಲದ ಮನಸ್ಸಿನವರು; **ಜ್ಞಾತ್ವಾ**—ತಿಳಿದು; **ಭೂತ**—ಸೃಷ್ಟಿಯ; **ಆದಿಮ್**—ಮೂಲವನ್ನು; **ಅವ್ಯಯಮ್**—ಅವ್ಯಯವಾದ.

## ಅನುವಾದ

**ಪಾರ್ಥನೇ, ಭ್ರಾಂತಿಗೆ ಸಿಲುಕದ ಮಹಾತ್ಮರು ದೈವೀ ಪ್ರಕೃತಿಯ ರಕ್ಷಣೆಯಲ್ಲಿ ಇರುತ್ತಾರೆ. ಅವರಿಗೆ ನಾನು ಮೂಲನೂ ಅವ್ಯಯನೂ ಆದ ದೇವೋತ್ತಮ ಪರಮ ಪುರುಷನು ಎಂದು ಗೊತ್ತು. ಆದುದರಿಂದ ಅವರು ಭಕ್ತಿಸೇವೆಯಲ್ಲಿ ಸಂಪೂರ್ಣವಾಗಿ ನಿರತರಾಗಿರುತ್ತಾರೆ.**

## ಭಾವಾರ್ಥ

ಈ ಶ್ಲೋಕದಲ್ಲಿ ಮಹಾತ್ಮನನ್ನು ಸ್ಪಷ್ಟವಾಗಿ ವರ್ಣಿಸಿದೆ. ಮಹಾತ್ಮನ ಮೊದಲನೆಯ ಲಕ್ಷಣವೆಂದರೆ ಆತನು ಆಗಲೇ ದೈವೀ ಪ್ರಕೃತಿಯಲ್ಲಿ ನೆಲೆಸಿದ್ದಾನೆ. ಆತನು ಐಹಿಕ ಪ್ರಕೃತಿಯ ನಿಯಂತ್ರಣದಲ್ಲಿ ಇಲ್ಲ. ಇದನ್ನು ಸಾಧಿಸುವುದು ಹೇಗೆ? ಇದನ್ನು ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ. ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನಿಗೆ ಶರಣಾಗತನಾದವನು ಕೂಡಲೇ ಐಹಿಕ ಪ್ರಕೃತಿಯ ನಿಯಂತ್ರಣದಿಂದ ಬಿಡುಗಡೆ ಹೊಂದುತ್ತಾನೆ. ಅದೇ ಅರ್ಹತೆ. ಮನುಷ್ಯನು ತನ್ನ ಆತ್ಮವನ್ನು ದೇವೋತ್ತಮ ಪರಮ ಪುರುಷನಿಗೆ ಒಪ್ಪಿಸುತ್ತಲೇ ಆತನು ಐಹಿಕ ಪ್ರಕೃತಿಯ ನಿಯಂತ್ರಣದಿಂದ ಬಿಡುಗಡೆಯಾಗುತ್ತಾನೆ. ಇದು ಪ್ರಾಥಮಿಕ ಸೂತ್ರ. ಜೀವಿಯು ತಟಸ್ಥ ಶಕ್ತಿಯಾದದ್ದರಿಂದ ಐಹಿಕ ಪ್ರಕೃತಿಯ ನಿಯಂತ್ರಣದಿಂದ ಬಿಡುಗಡೆ ಹೊಂದುತ್ತಲೇ ಅವನನ್ನು ಆಧ್ಯಾತ್ಮಿಕ ಪ್ರಕೃತಿಯ ಮಾರ್ಗದರ್ಶನಕ್ಕೆ ಒಳಪಡಿಸಲಾಗುತ್ತದೆ. ಆಧ್ಯಾತ್ಮಿಕ ಪ್ರಕೃತಿಯ ಮಾರ್ಗದರ್ಶನಕ್ಕೆ **ದೈವೀಪ್ರಕೃತಿ** ಎಂದು ಹೆಸರು. ಆದುದರಿಂದ ದೇವೋತ್ತಮ ಪರಮ ಪುರುಷನಿಗೆ ಶರಣಾಗುವುದರ ಮೂಲಕ ಮೇಲಕ್ಕೆ ಹೋದಾಗ ಮನುಷ್ಯನು ಮಹಾತ್ಮ ಹಂತವನ್ನು ಸಾಧಿಸುತ್ತಾನೆ.

ಮಹಾತ್ಮನಾದವನು ಕೃಷ್ಣನಾಚೆ ಯಾವುದಕ್ಕೂ ಗಮನ ಕೊಡುವುದಿಲ್ಲ. ಏಕೆಂದರೆ ಕೃಷ್ಣನು ಮೂಲ ಆದಿಪುರುಷ, ಎಲ್ಲ ಕಾರಣಗಳ ಕಾರಣ ಎಂದು ಅವನಿಗೆ ಬಹಳ ಚೆನ್ನಾಗಿ ಗೊತ್ತು. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಇಂತಹ ಮಹಾತ್ಮನು ಇತರ ಪರಿಶುದ್ಧ ಭಕ್ತರಾದ ಮಹಾತ್ಮರ ಸಹವಾಸದಿಂದ ಬೆಳೆಯುತ್ತಾನೆ. ಪರಿಶುದ್ಧ ಭಕ್ತರಿಗೆ ಚತುರ್ಭುಜನಾದ ಮಹಾವಿಷ್ಣುವಿನಂತಹ ಕೃಷ್ಣನ ಇತರ ಸ್ವರೂಪಗಳ ಆಕರ್ಷಣೆಯೇ ಇಲ್ಲ. ಅವರಿಗೆ ಎರಡು ತೋಳುಗಳ ಕೃಷ್ಣನ ರೂಪವೇ ಆಕರ್ಷಕ. ಅವರಿಗೆ ಕೃಷ್ಣನ ಇತರ ರೂಪ ಲಕ್ಷಣಗಳ ಬಗ್ಗೆ ಆಕರ್ಷಣೆಯಿಲ್ಲ; ಯಾವುದೇ ದೇವತೆಯ ಅಥವಾ ಮನುಷ್ಯನ ಯಾವ ರೂಪದಲ್ಲಿಯೂ ಅವರಿಗೆ ಆಸಕ್ತಿಯಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಅವರು ಕೃಷ್ಣನನ್ನು ಕುರಿತು ಮಾತ್ರ ಧ್ಯಾನ ಮಾಡುತ್ತಾರೆ. ಅವರು ಸದಾ ಕೃಷ್ಣಪ್ರಜ್ಞೆಯಲ್ಲಿ ಪ್ರಭುವಿನ ಅವಿಚಲಿತ ಸೇವೆಯಲ್ಲಿ ನಿರತರಾಗಿರುತ್ತಾರೆ.

## ಶ್ಲೋಕ - 14

**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ |**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ||೧೪||**

**ಸತತಮ್**—ಯಾವಾಗಲೂ; **ಕೀರ್ತಯನ್ತಃ**—ಕೀರ್ತಿಸುತ್ತ; **ಮಾಮ್**—ನನ್ನನ್ನು ಕುರಿತು; **ಯತನ್ತಃ**—ಪೂರ್ಣವಾಗಿ ಪ್ರಯತ್ನಿಸುತ್ತ; **ಚ**—ಕೂಡ; **ದೃಢ ವ್ರತಾಃ**—ದೃಢ ನಿರ್ಧಾರದೊಂದಿಗೆ; **ನಮಸ್ಯನ್ತಃ**—ನಮಸ್ಕರಿಸುತ್ತ; **ಚ**—ಮತ್ತು; **ಮಾಮ್**—ನನ್ನನ್ನು; **ಭಕ್ತ್ಯಾ**—ಭಕ್ತಿಯಲ್ಲಿ; **ನಿತ್ಯ ಯುಕ್ತಾಃ**—ನಿರಂತರವಾಗಿ ತೊಡಗಿ; **ಉಪಾಸತೇ**—ಆರಾಧಿಸುತ್ತಾರೆ.

## ಅನುವಾದ

**ಸದಾ ನನ್ನ ಕೀರ್ತನೆಯನ್ನು ಮಾಡುತ್ತ, ದೃಢ ಸಂಕಲ್ಪದಿಂದ ಪ್ರಯತ್ನವನ್ನು ಮಾಡುತ್ತ, ನನಗೆ**

**ನಮಸ್ಕಾರವನ್ನು ಮಾಡುತ್ತ ಈ ಮಹಾತ್ಮರು ಸತತವಾಗಿ ಭಕ್ತಿಯಿಂದ ನನ್ನನ್ನು ಪೂಜಿಸುತ್ತಾರೆ.**

## ಭಾವಾರ್ಥ

ಸಾಮಾನ್ಯ ಮನುಷ್ಯನಿಗೆ ರಬ್ಬರ್‌ಸ್ಟ್ಯಾಂಪನ್ನು ಒತ್ತಿ ಮಹಾತ್ಮನ ಉತ್ಪಾದನೆ ಮಾಡಲು ಸಾಧ್ಯವಿಲ್ಲ. ಅವನ ಲಕ್ಷಣಗಳನ್ನು ಇಲ್ಲಿ ವರ್ಣಿಸಿದೆ. ಮಹಾತ್ಮನು ದೇವೋತ್ತಮ ಪುರುಷನಾದ ಪರಮ ಪ್ರಭು ಕೃಷ್ಣನ ಕೀರ್ತನೆಯಲ್ಲಿ ಸದಾ ನಿರತನಾಗಿರುತ್ತಾನೆ. ಅವನಿಗೆ ಬೇರೆ ಕೆಲಸವೇ ಇಲ್ಲ. ಅವನು ಸದಾ ದೇವರನ್ನು ಸ್ತುತಿಸುವುದರಲ್ಲಿಯೇ ನಿರತನು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆತನು ನಿರಾಕಾರವಾದಿಯಲ್ಲ. ಕೀರ್ತನೆಯ ಪ್ರಶ್ನೆ ಇರುವಾಗ, ಪರಮ ಪ್ರಭುವನ್ನು ಕೀರ್ತಿಸಬೇಕು. ಅವನ ಪವಿತ್ರ ನಾಮವನ್ನೂ ನಿತ್ಯ ರೂಪವನ್ನೂ ದಿವ್ಯ ಗುಣಗಳನ್ನೂ ಅಸಾಧಾರಣ ಲೀಲೆಗಳನ್ನೂ ಹೊಗಳಬೇಕು. ಇವೆಲ್ಲವನ್ನೂ ಸ್ತುತಿಸಬೇಕು. ಆದುದರಿಂದ ಮಹಾತ್ಮನಾದವನಿಗೆ ದೇವೋತ್ತಮ ಪರಮ ಪುರುಷನಲ್ಲಿ ಆಸಕ್ತಿ.

ಪರಮ ಪ್ರಭುವಿನ ನಿರಾಕಾರಸ್ವರೂಪವಾದ ಬ್ರಹ್ಮಜ್ಯೋತಿಯಲ್ಲಿ ಆಸಕ್ತನಾದವನನ್ನು ಭಗವದ್ಗೀತೆಯಲ್ಲಿ ಮಹಾತ್ಮನೆಂದು ವರ್ಣಿಸಿಲ್ಲ. ಮುಂದಿನ ಶ್ಲೋಕದಲ್ಲಿ ಅವನನ್ನು ಬೇರೆ ರೀತಿಯಲ್ಲಿ ವರ್ಣಿಸಿದೆ. ಮಹಾತ್ಮನು ಶ್ರೀಮದ್ಭಾಗವತದಲ್ಲಿ ವರ್ಣಿಸಿದಂತೆ ವಿಷ್ಣುವಿನ ವಿಷಯವನ್ನು ಕೇಳುತ್ತ, ಅತನ ಸಂಕೀರ್ತನೆಯನ್ನು ಮಾಡುತ್ತ ಭಕ್ತಿಸೇವೆಯ ಬೇರೆಬೇರೆ ಕಾರ್ಯಗಳಲ್ಲಿ ಸದಾ ತೊಡಗಿರುತ್ತಾನೆ; ಯಾವುದೇ ದೇವತೆಯ ಅಥವಾ ಮನುಷ್ಯನ ಸೇವೆಯಲ್ಲಿ ಅಲ್ಲ. ಇದು ಭಕ್ತಿ — **ಶ್ರವಣಂ ಕೀರ್ತನಂ ವಿಷ್ಣೋಃ** ಮತ್ತು **ಸ್ಮರಣಮ್**, ಅವನ ನೆನಪು. ಐದು ದಿವ್ಯ ರಸಗಳಲ್ಲಿ ಯಾವುದಾದರೂ ಒಂದು ರಸದಲ್ಲಿ ಕಟ್ಟಕಡೆಗೆ ಪರಮ ಪ್ರಭುವಿನ ಸಹವಾಸವನ್ನು ಪಡೆಯಬೇಕು. ಇದು ಇಂತಹ ಮಹಾತ್ಮನ ವಜ್ರಸಂಕಲ್ಪ. ಈ ಯಶಸ್ಸನ್ನು ಸಾಧಿಸಲು ಅವನು ಕಾಯಾ ವಾಚಾ ಮನಸಾ ಎಲ್ಲ ಚಟುವಟಿಕೆಗಳನ್ನೂ ಪರಮ ಪ್ರಭುವಾದ ಶ್ರೀಕೃಷ್ಣನ ಸೇವೆಯಲ್ಲಿ ತೊಡಗಿಸುತ್ತಾನೆ. ಇದನ್ನು ಸಂಪೂರ್ಣ ಕೃಷ್ಣಪ್ರಜ್ಞೆ ಎಂದು ಕರೆಯುತ್ತಾರೆ.

ಭಕ್ತಿಸೇವೆಯಲ್ಲಿ ಕೆಲವು ನಿರ್ಧಾರಿತ ಚಟುವಟಿಕೆಗಳಿವೆ. ಉದಾಹರಣೆಗೆ, ಏಕಾದಶಿಯ ದಿವಸ ಮತ್ತು ಪ್ರಭುವಿನ ಅವತಾರದ ದಿವಸ ಉಪವಾಸ ಮಾಡುವುದು. ದಿವ್ಯಜಗತ್ತಿನಲ್ಲಿ ದೇವೋತ್ತಮ ಪರಮ ಪುರುಷನ ಸಹವಾಸಕ್ಕೆ ಪ್ರವೇಶ ಪಡೆಯಲು ಆಸಕ್ತರಾದವರಿಗೆಲ್ಲ ಮಹಾ ಆಚಾರ್ಯರು ಈ ವಿಧಿನಿಯಮಗಳನ್ನು ಕೊಟ್ಟಿದ್ದಾರೆ. ಮಹಾತ್ಮರು ಎಲ್ಲ ವಿಧಿನಿಯಮಗಳನ್ನೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಆದುದರಿಂದ ಅವರು ಅಪೇಕ್ಷಿತ ಫಲವನ್ನು ನಿಶ್ಚಯವಾಗಿಯೂ ಸಾಧಿಸುವರು.

ಈ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ವರ್ಣಿಸಿದಂತೆ ಈ ಭಕ್ತಿಸೇವೆಯು ಸುಲಭ ಮಾತ್ರವಲ್ಲ, ಅದನ್ನು ಸುಖವಾದ ಮನಸ್ಥಿತಿಯಲ್ಲಿ ನಡೆಸಬಹುದು. ಇದಕ್ಕಾಗಿ ಯಾವುದೇ ಕಠಿಣವಾದ ಪ್ರಾಯಶ್ಚಿತ್ತವನ್ನಾಗಲೀ, ವ್ರತವನ್ನಾಗಲೀ ನಡೆಸಬೇಕಾಗಿಲ್ಲ. ವ್ಯಕ್ತಿಯು ಒಬ್ಬ ತಜ್ಞ ಗುರುವಿನ ಮಾರ್ಗದರ್ಶನದಲ್ಲಿ ಈ ಭಕ್ತಿಸೇವೆಯಲ್ಲಿ ಬಾಳಬಹುದು. ಗೃಹಸ್ಥನಾಗಿ ಅಥವಾ ಸನ್ಯಾಸಿಯಾಗಿ ಅಥವಾ ಬ್ರಹ್ಮಚಾರಿಯಾಗಿ ಆತನು ಯಾವುದೇ ಸ್ಥಿತಿಯಲ್ಲಾದರೂ ಮತ್ತು ಜಗತ್ತಿನಲ್ಲಿ ಎಲ್ಲಾದರೂ ದೇವೋತ್ತಮ ಪರಮ ಪುರುಷನ ಈ ಭಕ್ತಿಸೇವೆಯನ್ನು ಮಾಡಬಹುದು ಮತ್ತು ಹೀಗೆ

ವಾಸ್ತವವಾಗಿ ಮಹಾತ್ಮನಾಗಬಹುದು.

## ಶ್ಲೋಕ - 15

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ |**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ||೧೫||**

**ಜ್ಞಾನ ಯಜ್ಞೇನ**—ಜ್ಞಾನದ ಅಭಿವೃದ್ಧಿಯಿಂದ; **ಚ**—ಕೂಡ; **ಅಪಿ**—ಖಂಡಿತವಾಗಿಯೂ; **ಅನ್ಯೇ**—ಇತರರು; **ಯಜನ್ತಃ**—ಯಜ್ಞಮಾಡುತ್ತ; **ಮಾಮ್**—ನನ್ನನ್ನು; **ಉಪಾಸತೇ**—ಆರಾಧಿಸುತ್ತಾರೆ; **ಏಕತ್ವೇನ**—ಏಕತೆಯಲ್ಲಿ; **ಪೃಥಕ್ತ್ವೇನ**—ದ್ವಂದ್ವದಲ್ಲಿ; **ಬಹುಧಾ**—ವೈವಿಧ್ಯದಲ್ಲಿ; **ವಿಶ್ವತಃ ಮುಖಮ್**—ಮತ್ತು ವಿಶ್ವರೂಪದಲ್ಲಿ.

## ಅನುವಾದ

**ಜ್ಞಾನದ ಬೆಳವಣಿಗೆಯಿಂದ ಯಜ್ಞದಲ್ಲಿ ನಿರತರಾದ ಇತರರು ಭಗವಂತನನ್ನು ಅದ್ವಿತೀಯನೆಂದೂ ಹಲವು ರೂಪಗಳಲ್ಲಿ ಇರುವವನೆಂದೂ ಮತ್ತು ವಿಶ್ವರೂಪದಲ್ಲಿಯೂ ಪೂಜಿಸುತ್ತಾರೆ.**

## ಭಾವಾರ್ಥ

ಈ ಶ್ಲೋಕವು ಹಿಂದಿನ ಶ್ಲೋಕಗಳ ಸಾರಾಂಶ. ಕೃಷ್ಣಪ್ರಜ್ಞೆಯಲ್ಲಿ ಪರಿಶುದ್ಧರಾಗಿ ಕೃಷ್ಣನನ್ನು ಬಿಟ್ಟು ಬೇರೆ ಏನನ್ನೂ ತಿಳಿಯದವರಿಗೆ ಮಹಾತ್ಮರೆಂದು ಹೆಸರು ಎಂದು ಪ್ರಭುವು ಅರ್ಜುನನಿಗೆ ಹೇಳುತ್ತಾನೆ; ಆದರೂ ನಿಖರವಾಗಿ ಮಹಾತ್ಮರ ಸ್ಥಾನದಲ್ಲಿಯೇ ಇಲ್ಲದಿದ್ದರೂ ವಿವಿಧ ರೀತಿಗಳಲ್ಲಿ ಕೃಷ್ಣನನ್ನು ಪೂಜಿಸುವ ಇತರರು ಇದ್ದಾರೆ. ಅವರಲ್ಲಿ ಕೆಲವರನ್ನು ಸಂಕಟದಲ್ಲಿರುವವರು, ಆರ್ಥಿಕವಾಗಿ ರಿಕ್ತರಾದವರು, ಕುತೂಹಲವುಳ್ಳವರು ಮತ್ತು ಜ್ಞಾನವನ್ನು ಬೆಳೆಸಿಕೊಳ್ಳುವುದರಲ್ಲಿ ನಿರತರಾದವರು ಎಂದು ಈಗಾಗಲೇ ವರ್ಣಿಸಲಾಗಿದೆ. ಆದರೆ ಇದಕ್ಕಿಂತ ಕೆಳಗಿನ ಮಟ್ಟದಲ್ಲಿರುವ ಇತರರೂ ಇದ್ದಾರೆ; ಇವರು ಮೂರು ವರ್ಗಗಳವರು — (i) ತಾನು ಪರಮ ಪ್ರಭುವಿನೊಂದಿಗೆ ಒಂದು ಎಂದು ಪೂಜಿಸುವವರು, (ii) ಪರಮ ಪ್ರಭುವಿನ ಯಾವುದಾದರೂ ರೂಪವನ್ನು ಸೃಷ್ಟಿಸಿಕೊಂಡು ಅದನ್ನು ಪೂಜಿಸುವವರು ಮತ್ತು (iii) ದೇವೋತ್ತಮ ಪರಮ ಪುರುಷನ ವಿಶ್ವರೂಪವನ್ನು ಒಪ್ಪಿಕೊಂಡು ಅದನ್ನು ಪೂಜಿಸುವವರು. ಈ ಮೂವರಲ್ಲಿ ಅತ್ಯಂತ ಕೆಳಗಿನ ಹಂತದಲ್ಲಿರುವ, ತಾವು ಅದ್ವೈತಿಗಳೆಂದು ಭಾವಿಸಿಕೊಂಡು ತಮ್ಮನ್ನೇ ಪರಮ ಪ್ರಭು ಎಂದು ಪೂಜಿಸಿಕೊಳ್ಳುವವರು ಬಹು ಹೆಚ್ಚಿನ ಸಂಖ್ಯೆಯವರು. ಈ ಜನರು ತಾವೇ ಪರಮ ಪ್ರಭು ಎಂದು ಯೋಚಿಸುತ್ತಾರೆ ಮತ್ತು ಈ ಮನಸ್ಥಿತಿಯಲ್ಲಿ ತಮ್ಮನ್ನೇ ಪೂಜಿಸಿಕೊಳ್ಳುತ್ತಾರೆ. ಇದೂ ಒಂದು ರೀತಿಯ ದೇವರಪೂಜೆಯೇ. ಏಕೆಂದರೆ ಅವರು ತಾವು ಐಹಿಕ ದೇಹವಲ್ಲ, ಆದರೆ ವಾಸ್ತವವಾಗಿ ಚೇತನಾತ್ಮರು ಎನ್ನುವುದನ್ನು ಅರ್ಥಮಾಡಿಕೊಳ್ಳುತ್ತಾರೆ. ಕಡೆಯಪಕ್ಷ ಈ ಅರ್ಥವು ಪ್ರಧಾನವಾಗಿದೆ. ಸಾಮಾನ್ಯವಾಗಿ ನಿರಾಕಾರವಾದಿಗಳು ಪರಮ ಪ್ರಭುವನ್ನು ಈ ರೀತಿ ಪೂಜಿಸುತ್ತಾರೆ. ದೇವತೆಗಳನ್ನು ಪೂಜಿಸುವವರು, ಕಲ್ಪನಾಶಕ್ತಿಯಿಂದ ಯಾವುದೇ ರೂಪವನ್ನಾದರೂ ಪರಮ ಪ್ರಭುವಿನ ಸ್ವರೂಪವೆಂದು ಭಾವಿಸುವವರು ಎರಡನೆಯ ವರ್ಗದವರು.

ಈ ಐಹಿಕ ವಿಶ್ವದ ಅಭಿವ್ಯಕ್ತಿಯಾಚೆ ಬೇರೇನನ್ನೂ ಕಲ್ಪಿಸಿಕೊಳ್ಳಲಾರದವರು ಮೂರನೆಯ ವರ್ಗದವರು. ಅವರು ವಿಶ್ವವನ್ನೇ ಪರಮ ಜೀವಿಯೆಂದು ಅಥವಾ ಅಸ್ತಿತ್ವದಲ್ಲಿರುವ ವಸ್ತುವೆಂದು ಭಾವಿಸಿ ಅದನ್ನೇ ಪೂಜಿಸುತ್ತಾರೆ. ವಿಶ್ವವೂ ಪರಮ ಪ್ರಭುವಿನ ಒಂದು ರೂಪ.

## ಶ್ಲೋಕ - 16

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ |**
**ಮನ್ತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ||೧೬||**

**ಅಹಮ್**—ನಾನು; **ಕ್ರತುಃ**—ವೈದಿಕ ಕರ್ಮಕಾಂಡವು; **ಅಹಮ್**—ನಾನು; **ಯಜ್ಞಃ**—ಸ್ಮೃತಿಯಜ್ಞವು; **ಸ್ವಧಾ**—ಆಹುತಿಯು; **ಅಹಮ್**—ನಾನು; **ಅಹಮ್**—ನಾನು; **ಔಷಧಮ್**—ಗುಣಪಡಿಸುವ ಮೂಲಿಕೆಯು; **ಮನ್ತ್ರಃ**—ದಿವ್ಯಮಂತ್ರವು; **ಅಹಮ್**—ನಾನು; **ಅಹಮ್**—ನಾನು; **ಏವ**—ಖಂಡಿತವಾಗಿಯೂ; **ಆಜ್ಯಮ್**—ತುಪ್ಪವು; **ಅಹಮ್**—ನಾನು; **ಅಗ್ನಿಃ**—ಅಗ್ನಿಯು; **ಅಹಮ್**—ನಾನು; **ಹುತಮ್**—ಅರ್ಪಣೆಯು.

## ಅನುವಾದ

**ನಾನು ವೈದಿಕವಿಧಿ, ನಾನೇ ಯಜ್ಞ, ನಾನೇ ಪಿತೃಗಳಿಗೆ ಅರ್ಪಿಸುವ ಆಹುತಿ, ನಾನೇ ಔಷಧ ಮೂಲಿಕೆ, ನಾನೇ ಮಂತ್ರ. ನಾನೇ ಆಜ್ಯ, ನಾನೇ ಅಗ್ನಿ, ನಾನೇ ಹುತ.**

## ಭಾವಾರ್ಥ

**ಜ್ಯೋತಿಷ್ಟೋಮ** ಎಂಬ ವೈದಿಕಯಜ್ಞವು ಕೃಷ್ಣನೇ; ಅವನೇ ಸ್ಮೃತಿಯಲ್ಲಿ ಹೇಳಿರುವ **ಮಹಾಯಜ್ಞ**. ಪಿತೃಲೋಕಕ್ಕೆ ಅಥವಾ ಪಿತೃಗಳನ್ನು ಪ್ರಸನ್ನಗೊಳಿಸಲು ಅರ್ಪಿಸುವ ತುಪ್ಪದ ರೂಪದ ಔಷಧ ಎಂದು ಭಾವಿಸುವ ಆಹುತಿಯೂ ಕೃಷ್ಣನೇ. ಈ ಸಂದರ್ಭದಲ್ಲಿ ಉಚ್ಚರಿಸುವ ಮಂತ್ರಗಳೂ ಕೃಷ್ಣ. ಯಜ್ಞಗಳಲ್ಲಿ ಅರ್ಪಿಸಲು ಮಾಡುವ ಹಲವು ಹಾಲಿನ ಪದಾರ್ಥಗಳೂ ಕೃಷ್ಣ. ಅಗ್ನಿಯೂ ಕೃಷ್ಣ. ಏಕೆಂದರೆ ಅಗ್ನಿಯು ಪಂಚಭೂತಗಳಲ್ಲಿ ಒಂದು. ಈ ಕಾರಣದಿಂದ ಅಗ್ನಿಯನ್ನು ಕೃಷ್ಣನಿಂದ ಬೇರ್ಪಟ್ಟ ಶಕ್ತಿ ಎಂದು ಹೇಳಲಾಗಿದೆ. ಎಂದರೆ, ವೇದಗಳ ಕರ್ಮಕಾಂಡ ಭಾಗದಲ್ಲಿ ಹೇಳಿರುವ ವೈದಿಕ ಯಜ್ಞಗಳು ಒಟ್ಟಿನಲ್ಲಿ ಕೃಷ್ಣನೇ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಕೃಷ್ಣನ ಭಕ್ತಿಸೇವೆಯಲ್ಲಿ ನಿರತರಾದವರು ವೇದಗಳು ಮಾಡಬೇಕೆಂದು ಹೇಳಿರುವ ಎಲ್ಲ ಯಜ್ಞಗಳನ್ನೂ ಮಾಡಿದ್ದಾರೆ ಎಂದೇ ಅರ್ಥ.

## ಶ್ಲೋಕ - 17

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ |**
**ವೇದ್ಯಂ ಪವಿತ್ರಮ್ ಓಙ್ಕಾರ ಋಕ್ ಸಾಮ ಯಜುರೇವ ಚ ||೧೭||**

**ಪಿತಾ**—ತಂದೆಯು; **ಅಹಮ್**—ನಾನು; **ಅಸ್ಯ**—ಈ; **ಜಗತಃ**—ವಿಶ್ವದ; **ಮಾತಾ**—ತಾಯಿಯು; **ಧಾತಾ**—ಆಧಾರನು; **ಪಿತಾಮಹಃ**—ಅಜ್ಜನು; **ವೇದ್ಯಮ್**—ತಿಳಿಯಬೇಕಾದ; **ಪವಿತ್ರಮ್**—

ಪವಿತ್ರಗೊಳಿಸುವ; **ಓಙ್ಕಾರಃ**—ಓಂಕಾರವು; **ಋಕ್**—ಋಗ್ವೇದವು; **ಸಾಮ**—ಸಾಮವೇದವು; **ಯಜುಃ**—ಯಜುರ್ವೇದವು; **ಏವ**—ಖಂಡಿತವಾಗಿಯೂ; **ಚ**—ಮತ್ತು.

## ಅನುವಾದ

**ನಾನು ವಿಶ್ವದ ತಂದೆ, ತಾಯಿ, ಆಧಾರ ಮತ್ತು ಪಿತಾಮಹ. ನಾನು ಜ್ಞಾನದ ಗುರಿ, ಪವಿತ್ರೀಕರಿಸುವವನು, ಓಂಕಾರ. ನಾನೇ ಋಗ್, ಸಾಮ ಮತ್ತು ಯಜುರ್ ವೇದಗಳು.**

## ಭಾವಾರ್ಥ

ಚರಾಚರವಾದ ಎಲ್ಲ ವಿಶ್ವದ ಅಭಿವ್ಯಕ್ತಿಗಳು ಕೃಷ್ಣನ ವಿವಿಧ ಶಕ್ತಿಗಳಿಂದ ಪ್ರಕಟವಾದವು. ಐಹಿಕ ಅಸ್ತಿತ್ವದಲ್ಲಿ ನಾವು ಬೇರೆ ಬೇರೆ ಜೀವಿಗಳೊಡನೆ ಬೇರೆಬೇರೆ ಸಂಬಂಧಗಳನ್ನು ಸೃಷ್ಟಿಸಿಕೊಳ್ಳುತ್ತೇವೆ; ಆ ಜೀವಿಗಳೆಲ್ಲ ಕೃಷ್ಣನ ತಟಸ್ಥ ಶಕ್ತಿಗಳೇ. **ಪ್ರಕೃತಿಯ** ಸೃಷ್ಟಿಯಲ್ಲಿ ತಂದೆ, ತಾಯಿ, ತಾತ, ಸೃಷ್ಟಿಕರ್ತ ಎಂದು ಅವರಲ್ಲಿ ಕೆಲವರು ಕಾಣಿಸುತ್ತಾರೆ. ಅವರೆಲ್ಲ ಕೃಷ್ಣನ ವಿಭಿನ್ನಾಂಶಗಳೇ. ತಂದೆ—ತಾಯಿಗಳಂತೆ ತೋರುವ ಜೀವಿಗಳು ಕೃಷ್ಣನೇ ಆಗಿದ್ದಾನೆ. ಈ ಶ್ಲೋಕದಲ್ಲಿ **ಧಾತಾ** ಎಂದರೆ 'ಸೃಷ್ಟಿಕರ್ತ' ಎಂದರ್ಥ. ನಮ್ಮ ತಂದೆತಾಯಿಯರು ಮಾತ್ರ ಕೃಷ್ಣನ ವಿಭಿನ್ನಾಂಶರು. ಮಾತ್ರವಲ್ಲ, ಸೃಷ್ಟಿಕರ್ತ, ಅಜ್ಜಿ, ಅಜ್ಜ ಎಲ್ಲ ಕೃಷ್ಣನೇ. ವಾಸ್ತವವಾಗಿ ಯಾವುದೇ ಜೀವಿಯೂ ಕೃಷ್ಣನ ವಿಭಿನ್ನಾಂಶವಾಗಿರುವುದರಿಂದ ಕೃಷ್ಣನೇ. ಆದುದರಿಂದಲೇ ಕೃಷ್ಣನು ಎಲ್ಲ ವೇದಗಳ ಗುರಿ. ನಾವು ವೇದಗಳ ಮೂಲಕ ತಿಳಿಯಬಯಸುವುದೆಲ್ಲ ಕೃಷ್ಣನ ಕಡೆಗಿಟ್ಟ ಒಂದು ಹೆಜ್ಜೆ. ನಮ್ಮ ಸಹಜಸ್ವರೂಪವನ್ನು ಪರಿಶುದ್ಧಗೊಳಿಸಿಕೊಳ್ಳಲು ನೆರವಾಗುವ ವಸ್ತುವೂ ಕೃಷ್ಣ. ಹಾಗೆಯೇ, ಎಲ್ಲ ವೈದಿಕ ತತ್ವಗಳನ್ನು ಅರ್ಥಮಾಡಿಕೊಳ್ಳಬಯಸುವ ಜಿಜ್ಞಾಸುವೂ ಕೃಷ್ಣನ ವಿಭಿನ್ನಾಂಶ; ಹಾಗಾಗಿ ಅವನೂ ಕೃಷ್ಣನೇ. ಎಲ್ಲ ವೇದದ ಮಂತ್ರಗಳಲ್ಲಿ **ಪ್ರಣವ** ಎಂದು ಕರೆಯುವ ಓಂಕಾರದ ದಿವ್ಯ ಶಬ್ದನಾದವೂ ಕೃಷ್ಣ. ಸಾಮ, ಯಜುರ್, ಋಗ್, ಮತ್ತು ಅಥರ್ವಣ — ನಾಲ್ಕು ವೇದಗಳಲ್ಲಿಯೂ ಪ್ರಣವ ಅಥವಾ ಓಂಕಾರವು ಬಹು ಪ್ರಧಾನವಾಗಿರುವುದರಿಂದ, ಅದೂ ಕೃಷ್ಣನೇ ಎಂದು ತಿಳಿಯಬೇಕು.

## ಶ್ಲೋಕ - 18

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥**

**ಗತಿಃ**—ಗುರಿಯು; **ಭರ್ತಾ**—ಪೋಷಕನು; **ಪ್ರಭುಃ**—ಸ್ವಾಮಿಯು; **ಸಾಕ್ಷೀ**—ಸಾಕ್ಷಿಯು; **ನಿವಾಸಃ**—ವಾಸಸ್ಥಾನವು; **ಶರಣಮ್**—ಆಶ್ರಯನು; **ಸುಹೃತ್**—ಅತ್ಯಂತ ಆತ್ಮೀಯ ಮಿತ್ರನು; **ಪ್ರಭವಃ**—ಸೃಷ್ಟಿಯು; **ಪ್ರಲಯಃ**—ಪ್ರಳಯವು; **ಸ್ಥಾನಮ್**—ತಳಹದಿಯು; **ನಿಧಾನಮ್**—ವಿಶ್ರಾಂತಿ ಸ್ಥಾನವು; **ಬೀಜಮ್**—ಬೀಜವು; **ಅವ್ಯಯಮ್**—ನಾಶರಹಿತನು.

## ಅನುವಾದ

**ನಾನೇ ಗುರಿಯು, ನಾನೇ ಪೋಷಿಸುವವನು, ನಾನೇ ಯಜಮಾನನು, ನಾನೇ ಸಾಕ್ಷಿ, ನಾನೇ**

**ನಿವಾಸ, ನಾನೇ ಆಶ್ರಯ, ನಾನೇ ಅತ್ಯಂತ ಆಪ್ತ ಗೆಳೆಯ, ನಾನೇ ಸೃಷ್ಟಿ, ನಾನೇ ಪ್ರಳಯ, ನಾನೇ ಎಲ್ಲಕ್ಕೂ ಆಧಾರ, ನಾನೇ ವಿಶ್ರಾಂತಿ ತಾಣ, ನಾನೇ ಶಾಶ್ವತವಾದ ಬೀಜ.**

## ಭಾವಾರ್ಥ

**ಗತಿ** ಎಂದರೆ ನಾವು ಸೇರಲು ಬಯಸುವ ಗುರಿ. ಜನಕ್ಕೆ ಇದು ತಿಳಿಯದಿದ್ದರೂ ಕಟ್ಟಕಡೆಯ ಗುರಿ ಕೃಷ್ಣನೇ. ಕೃಷ್ಣನನ್ನು ಅರಿಯದವನು ದಾರಿತಪ್ಪಿದ್ದಾನೆ. ಪ್ರಗತಿ ಎಂದು ಕರೆಯುವ ಅವನ ಪ್ರಯಾಣವು ಪಾರ್ಶ್ವಿಕವಾದದ್ದು ಅಥವಾ ಭ್ರಾಂತಿಯಿಂದ ಕೂಡಿದ್ದು. ಬೇರೆ ಬೇರೆ ದೇವತೆಗಳನ್ನು ತಮ್ಮ ಗುರಿಯನ್ನಾಗಿ ಮಾಡಿಕೊಂಡವರು ಅನೇಕರಿದ್ದಾರೆ. ಆಯಾ ದೇವತೆಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ವಿಧಾನಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿ ಅವರು ಚಂದ್ರಲೋಕ, ಸೂರ್ಯಲೋಕ, ಇಂದ್ರಲೋಕ, ಮಹರ್‌ಲೋಕ ಮೊದಲಾದ ವಿವಿಧ ಲೋಕಗಳನ್ನು ತಲಪುತ್ತಾರೆ. ಆದರೆ ಇಂತಹ ಲೋಕಗಳೆಲ್ಲ ಕೃಷ್ಣನ ಸೃಷ್ಟಿಯಾದದ್ದರಿಂದ ಏಕಕಾಲದಲ್ಲಿ ಅವು ಕೃಷ್ಣನೂ ಹೌದು, ಕೃಷ್ಣನಲ್ಲದ್ದೂ ಹೌದು. ಇಂತಹ ಲೋಕಗಳು ಕೃಷ್ಣಶಕ್ತಿಯ ಅಭಿವ್ಯಕ್ತಿಗಳಾದದ್ದರಿಂದ ಅವು ಕೃಷ್ಣನೇ; ಆದರೆ ಅವು ಏನಿದ್ದರೂ ಕೃಷ್ಣಸಾಕ್ಷಾತ್ಕಾರಕ್ಕೆ ಒಂದು ಹೆಜ್ಜೆ ಮಾತ್ರ. ಕೃಷ್ಣನ ವಿವಿಧ ಶಕ್ತಿಗಳ ಬಳಿಗೆ ಹೋಗುವುದೆಂದರೆ ಕೃಷ್ಣನ ಬಳಿಗೆ ಪರೋಕ್ಷವಾಗಿ ಹೋಗುವುದು. ಮನುಷ್ಯನು ನೇರವಾಗಿ ಕೃಷ್ಣನ ಬಳಿಗೆ ಹೋಗಬೇಕು; ಅದರಿಂದ ಕಾಲ ಮತ್ತು ಶಕ್ತಿ ಎರಡೂ ಉಳಿಯುತ್ತವೆ. ಉದಾಹರಣೆಗೆ ಒಂದು ಕಟ್ಟಡದ ಮೇಲಕ್ಕೆ ಹೋಗಲು ಕೊಂಡೊಯ್ಯುವ ಸಾಧಕವಿದ್ದಾಗ ಮೆಟ್ಟಲು ಮೆಟ್ಟಲಾಗಿ ಹತ್ತುತ್ತಾ ಏಕೆ ಹೋಗಬೇಕು? ಎಲ್ಲವೂ ಕೃಷ್ಣನ ಶಕ್ತಿಯನ್ನು ಆಧರಿಸಿದೆ; ಆದುದರಿಂದ ಕೃಷ್ಣನ ಆಶ್ರಯವಿಲ್ಲದೆ ಯಾವುದೂ ಇರಲು ಸಾಧ್ಯವಿಲ್ಲ. ಎಲ್ಲವೂ ಕೃಷ್ಣನಿಗೆ ಸೇರಿದ್ದು ಮತ್ತು ಎಲ್ಲವೂ ಕೃಷ್ಣನ ಶಕ್ತಿಯಿಂದಲೇ ಇರುವುದು; ಆದುದರಿಂದ ಕೃಷ್ಣನು ಪರಮ ಪ್ರಭು; ಕೃಷ್ಣನು ಪ್ರತಿಯೊಬ್ಬರ ಹೃದಯದಲ್ಲಿಯೂ ಇರುವುದರಿಂದ ಅವನು ಪರಮಸಾಕ್ಷಿ. ನಾವು ವಾಸಿಸುವ ಮನೆಗಳು, ದೇಶಗಳು ಅಥವಾ ಲೋಕಗಳು ಸಹ ಕೃಷ್ಣನೇ. ಆಶ್ರಯದ ಕಟ್ಟಕಡೆಯ ಗುರಿ ಕೃಷ್ಣ. ಆದುದರಿಂದ ಮನುಷ್ಯನು ರಕ್ಷಣೆಗಾಗಲಿ ಅಥವಾ ತನ್ನ ಸಂಕಟದ ನಾಶಕ್ಕಾಗಲಿ ಕೃಷ್ಣನಲ್ಲಿ ಆಶ್ರಯ ಪಡೆಯಬೇಕು. ನಾವು ರಕ್ಷಣೆಯನ್ನು ಪಡೆದಾಗ ನಮ್ಮ ರಕ್ಷಕನು ಜೀವಂತವಾಗಿರುವವನಾಗಿರಬೇಕು ಎನ್ನುವುದನ್ನು ತಿಳಿಯಬೇಕು. ಕೃಷ್ಣನೇ ಪರಮ ಪುರುಷ. ಕೃಷ್ಣನು ನಮ್ಮ ಹುಟ್ಟಿನ ಮೂಲ ಅಥವಾ ಪರಮಪಿತ; ಕೃಷ್ಣನಿಗಿಂತ ಉತ್ತಮರಾದ ಸ್ನೇಹಿತರು ಅಥವಾ ಉತ್ತಮರಾದ ಹಿತೈಷಿಗಳು ಯಾರೂ ಇರುವುದು ಸಾಧ್ಯವಿಲ್ಲ. ಕೃಷ್ಣನು ನಮ್ಮ ಸೃಷ್ಟಿಯ ಆದಿಮೂಲ ಮತ್ತು ವಿನಾಶದ ಅನಂತರ ಕಟ್ಟಕಡೆಯ ವಿಶ್ರಾಂತಿಯ ತಾಣ. ಆದುದರಿಂದ ಕೃಷ್ಣನು ಎಲ್ಲ ಕಾರಣಗಳ ಶಾಶ್ವತ ಕಾರಣನು.

## ಶ್ಲೋಕ - 19

**ತಪಾಮ್ಯಹ ಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ |**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ||೧೯||**

**ತಪಾಮಿ**—ಶಾಖ ನೀಡುತ್ತೇನೆ; **ಅಹಮ್**—ನಾನು; **ಅಹಮ್**—ನಾನು; **ವರ್ಷಮ್**—ಮಳೆಯನ್ನು; **ನಿಗೃಹ್ಣಾಮಿ**—ತಡೆಹಿಡಿಯುತ್ತೇನೆ; **ಉತ್ಸೃಜಾಮಿ**—ಕಳುಹಿಸುತ್ತೇನೆ; **ಚ**—ಮತ್ತು; **ಅಮೃತಮ್**—

ಅಮರತ್ವವು; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಮೃತ್ಯುಃ**—ಮರಣವು; **ಚ**—ಮತ್ತು; **ಸತ್**—ಚೇತನವು; **ಅಸತ್**—ಜಡವು; **ಚ**—ಮತ್ತು; **ಅಹಮ್**—ನಾನು; **ಅರ್ಜುನ**—ಅರ್ಜುನನೇ.

## ಅನುವಾದ

**ಅರ್ಜುನನೆ, ನಾನೇ ಶಾಖವನ್ನು ಕೊಡುತ್ತೇನೆ, ನಾನೇ ಮಳೆಯನ್ನು ತಡೆಹಿಡಿಯುತ್ತೇನೆ ಮತ್ತು ಕಳುಹಿಸುತ್ತೇನೆ; ನಾನೇ ಅಮೃತ, ನಾನೇ ಮೃತ್ಯು. ಚೇತನ ಮತ್ತು ಜಡವಸ್ತು ಎರಡೂ ನನ್ನಲ್ಲಿವೆ.**

## ಭಾವಾರ್ಥ

ತನ್ನ ವಿವಿಧ ಶಕ್ತಿಗಳಿಂದಾಗಿ ಕೃಷ್ಣನು ವಿದ್ಯುಚ್ಛಕ್ತಿ ಮತ್ತು ಸೂರ್ಯನ ಮೂಲಕ ಶಾಖವನ್ನೂ ಬೆಳಕನ್ನೂ ಪಸರಿಸುತ್ತಾನೆ. ಬೇಸಗೆಯಲ್ಲಿ ಆಕಾಶದಿಂದ ಮಳೆಯು ಬೀಳದಂತೆ ತಡೆಯುವವನು ಕೃಷ್ಣ ಮತ್ತು ಅನಂತರ ಮಳೆಗಾಲದಲ್ಲಿ ನಿಲ್ಲದ ಧಾರೆಯಾಗಿ ಮಳೆಯನ್ನು ಸುರಿಸುವವನು ಕೃಷ್ಣ. ನಮ್ಮ ಆಯುಸ್ಸನ್ನು ದೀರ್ಘಗೊಳಿಸಿ ನಮ್ಮನ್ನು ಪಾಲಿಸುವ ಶಕ್ತಿಯು ಕೃಷ್ಣನೇ. ಬದುಕಿನ ಅಂತ್ಯದಲ್ಲಿ ಕೃಷ್ಣನು ಸಾವಿನ ರೂಪದಲ್ಲಿ ನಮ್ಮನ್ನು ಸಂಧಿಸುತ್ತಾನೆ. ಕೃಷ್ಣನ ಈ ವಿವಿಧ ಶಕ್ತಿಗಳನ್ನು ವಿಶ್ಲೇಷಿಸಿ ಕೃಷ್ಣನಿಗೆ ಜಡವಸ್ತು ಮತ್ತು ಚೈತನ್ಯಗಳ ನಡುವೆ ವ್ಯತ್ಯಾಸವಿಲ್ಲ ಎಂದು ನಾವು ಖಚಿತವಾಗಿ ತಿಳಿದುಕೊಳ್ಳಬಹುದು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಅವನೇ ಜಡವಸ್ತು ಮತ್ತು ಅವನೇ ಚೇತನ. ಕೃಷ್ಣಪ್ರಜ್ಞೆಯ ಮುಂದುವರಿದ ಹಂತದಲ್ಲಿ ಮನುಷ್ಯನು ಇಂತಹ ವ್ಯತ್ಯಾಸವನ್ನೇ ಮಾಡುವುದಿಲ್ಲ. ಆತನು ಎಲ್ಲದರಲ್ಲಿಯೂ ಕೃಷ್ಣನನ್ನೇ ಕಾಣುತ್ತಾನೆ.

ಕೃಷ್ಣನೇ ಜಡವಸ್ತು ಮತ್ತು ಚೇತನವಾದದ್ದರಿಂದ ಎಲ್ಲ ಐಹಿಕ ಅಭಿವ್ಯಕ್ತಿಗಳನ್ನು ಒಳಗೊಂಡ ಈ ಬೃಹತ್ತಾದ ವಿಶ್ವರೂಪವೂ ಕೃಷ್ಣನೇ. ಎರಡು ಕೈಗಳ ಶ್ಯಾಮಸುಂದರನಾಗಿ ಕೊಳಲನ್ನು ನುಡಿಸುತ್ತ ವೃಂದಾವನದಲ್ಲಿ ಅವನು ತೋರಿದ ಲೀಲೆಗಳು ದೇವೋತ್ತಮ ಪರಮ ಪುರುಷನ ಲೀಲೆಗಳು.

## ಶ್ಲೋಕ - 20

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರ ಲೋಕಮ್**
**ಅಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥೨೦॥**

**ತ್ರೈ ವಿದ್ಯಾಃ**—ಮೂರು ವೇದಗಳನ್ನು ತಿಳಿದವರು; **ಮಾಮ್**—ನನ್ನನ್ನು; **ಸೋಮಪಾಃ**—ಸೋಮರಸವನ್ನು ಪಾನಮಾಡುವವರು; **ಪೂತ**—ಶುದ್ಧವಾದ; **ಪಾಪಾಃ**—ಪಾಪಗಳುಳ್ಳವರು; **ಯಜ್ಞೈಃ**—ಯಜ್ಞಗಳಿಂದ; **ಇಷ್ಟ್ವಾ**—ಪೂಜಿಸುತ್ತ; **ಸ್ವಃ ಗತಿಮ್**—ಸ್ವರ್ಗದ ಮಾರ್ಗವನ್ನು; **ಪ್ರಾರ್ಥಯನ್ತೇ**—ಪ್ರಾರ್ಥಿಸುತ್ತಾರೆ; **ತೇ**—ಅವರು; **ಪುಣ್ಯಮ್**—ಪುಣ್ಯವನ್ನು; **ಆಸಾದ್ಯ**—ಹೊಂದಿ; **ಸುರ ಇನ್ದ್ರ**—ದೇವೇಂದ್ರನ; **ಲೋಕಮ್**—ಲೋಕವನ್ನು; **ಅಶ್ನನ್ತಿ**—ಭೋಗಿಸುತ್ತಾರೆ; **ದಿವ್ಯಾನ್**—ಸ್ವರ್ಗೀಯ;

**ದಿವಿ**—ಸ್ವರ್ಗದಲ್ಲಿ; **ದೇವ ಭೋಗಾನ್**—ದೇವತೆಗಳ ಸುಖಗಳನ್ನು.

## ಅನುವಾದ

**ವೇದಗಳನ್ನು ಅಭ್ಯಾಸಮಾಡಿ, ಸೋಮರಸವನ್ನು ಪಾನಮಾಡಿ, ಸ್ವರ್ಗಲೋಕಗಳನ್ನು ಅರಸುವವರು ಪರೋಕ್ಷವಾಗಿ ನನ್ನನ್ನು ಪೂಜಿಸುತ್ತಾರೆ. ಪಾಪ ಪ್ರತಿಕ್ರಿಯೆಗಳಿಂದ ಬಿಡುಗಡೆಯಾಗಿ ಪರಿಶುದ್ಧರಾಗಿ ಅವರು ಪುಣ್ಯ ಸ್ವರ್ಗಲೋಕದಲ್ಲಿ ಹುಟ್ಟುತ್ತಾರೆ; ಅಲ್ಲಿ ಸ್ವರ್ಗಸುಖಗಳನ್ನು ಸವಿಯುತ್ತಾರೆ.**

## ಭಾವಾರ್ಥ

**ತ್ರೈವಿದ್ಯಾಃ** ಎನ್ನುವ ಶಬ್ದವು ಸಾಮ, ಯಜುರ್ ಮತ್ತು ಋಗ್ವೇದಗಳನ್ನು ಸೂಚಿಸುತ್ತದೆ. ಈ ಮೂರು ವೇದಗಳನ್ನು ಅಧ್ಯಯನಮಾಡಿದ ಬ್ರಾಹ್ಮಣನಿಗೆ **ತ್ರಿವೇದೀ** ಎಂದು ಹೆಸರು. ಈ ಮೂರು ವೇದಗಳ ಜ್ಞಾನದಲ್ಲಿ ಬಹುವಾಗಿ ಆಸಕ್ತಿ ಇರುವವನನ್ನು ಸಮಾಜವು ಗೌರವಿಸುತ್ತದೆ. ದುರದೃಷ್ಟದಿಂದ ವೇದವಿದ್ವಾಂಸರಲ್ಲಿ ಹಲವರಿಗೆ ಅವುಗಳನ್ನು ಅಧ್ಯಯನ ಮಾಡುವುದರ ಪರಮ ಉದ್ದೇಶವು ತಿಳಿದಿರುವುದಿಲ್ಲ. ಆದುದರಿಂದ ಕೃಷ್ಣನು ಇಲ್ಲಿ ತ್ರಿವೇದಿಗಳಿಗೆ ತಾನು ಕಟ್ಟಕಡೆಯ ಗುರಿ ಎಂದು ಘೋಷಿಸುತ್ತಾನೆ. ನಿಜವಾದ ತ್ರಿವೇದಿಗಳು ಕೃಷ್ಣನ ಚರಣಕಮಲಗಳ ಅಡಿಯಲ್ಲಿ ಆಶ್ರಯವನ್ನು ಪಡೆಯುತ್ತಾರೆ ಮತ್ತು ಪ್ರಭುವನ್ನು ಪ್ರಸನ್ನಗೊಳಿಸಲು ಪರಿಶುದ್ಧ ಭಕ್ತಿಸೇವೆಯಲ್ಲಿ ನಿರತರಾಗುತ್ತಾರೆ. ಭಕ್ತಿಸೇವೆಯು ಹರೇಕೃಷ್ಣ ಮಂತ್ರದ ಸಂಕೀರ್ತನೆಯಿಂದ ಮತ್ತು ಅದರೊಂದಿಗೆ ಕೃಷ್ಣನನ್ನು ಸತ್ಯವಾಗಿ ಅರಿತುಕೊಳ್ಳುವ ಪ್ರಯತ್ನದಿಂದ ಪ್ರಾರಂಭವಾಗುತ್ತದೆ. ದುರದೃಷ್ಟದಿಂದ ವೇದಗಳ ಔಪಚಾರಿಕ ವಿದ್ಯಾರ್ಥಿಗಳಷ್ಟೇ ಆದವರು ಇಂದ್ರ ಮತ್ತು ಚಂದ್ರನಂತಹ ಬೇರೆ ಬೇರೆ ದೇವತೆಗಳಿಗೆ ಯಜ್ಞಮಾಡುವುದರಲ್ಲಿಯೇ ಹೆಚ್ಚು ಆಸಕ್ತಿಯನ್ನು ತೋರುತ್ತಾರೆ. ಇಂತಹ ಪ್ರಯತ್ನದಿಂದ ಬೇರೆ ಬೇರೆ ದೇವತೆಗಳನ್ನು ಪೂಜಿಸುವವರು ನಿಶ್ಚಯವಾಗಿಯೂ ಪ್ರಕೃತಿಯ ಕೀಳುಗುಣಗಳ ಕಲ್ಮಷದ ಸೋಂಕಿನಿಂದ ಪರಿಶುದ್ಧರಾಗುತ್ತಾರೆ; ಇದರಿಂದ ಮಹರ್‌ಲೋಕ, ಜನೋಲೋಕ, ತಪೋಲೋಕ ಮುಂತಾದ ಹೆಸರುಗಳ ಉನ್ನತ ಲೋಕಮಂಡಲಗಳಿಗೆ ಅಥವಾ ಸ್ವರ್ಗಲೋಕಗಳಿಗೆ ಏರುತ್ತಾರೆ. ಈ ಉನ್ನತ ಲೋಕವ್ಯೂಹಗಳಲ್ಲಿ ಒಮ್ಮೆ ಸೇರಿದವನು ಭೂಲೋಕದಲ್ಲಿ ಪಡೆಯುವುದಕ್ಕಿಂತ ಲಕ್ಷಾಂತರ ಬಾರಿ ಉತ್ತಮ ರೀತಿಯಲ್ಲಿ ಇಂದ್ರಿಯ ತೃಪ್ತಿಯನ್ನು ಪಡೆಯಬಹುದು.

## ಶ್ಲೋಕ - 21

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥೨೧॥**

**ತೇ**—ಅವರು; **ತಮ್**—ಆ; **ಭುಕ್ತ್ವಾ**—ಅನುಭವಿಸಿ; **ಸ್ವರ್ಗ ಲೋಕಮ್**—ಸ್ವರ್ಗಲೋಕವನ್ನು; **ವಿಶಾಲಮ್**—ವಿಶಾಲವಾದ; **ಕ್ಷೀಣೇ**—ಕ್ಷೀಣಿಸಲು; **ಪುಣ್ಯೇ**—ಪುಣ್ಯಕರ್ಮದ ಫಲಗಳು; **ಮರ್ತ್ಯ ಲೋಕಮ್**—ಸಾವಿರುವ ಭೂಲೋಕಕ್ಕೆ; **ವಿಶನ್ತಿ**—ಪತನಹೊಂದುತ್ತಾರೆ; **ಏವಮ್**—ಹೀಗೆ; **ತ್ರಯೀ**

—ಮೂರು ವೇದಗಳ; **ಧರ್ಮಮ್**—ತತ್ವಗಳನ್ನು; **ಅನುಪ್ರಪನ್ನಾಃ**—ಅನುಸರಿಸುತ್ತಾ; **ಗತ ಆಗತಮ್**—ಸಾವು ಮತ್ತು ಹುಟ್ಟುಗಳನ್ನು; **ಕಾಮ ಕಾಮಾಃ**—ಇಂದ್ರಿಯಭೋಗಗಳನ್ನು ಆಶಿಸುತ್ತಾ; **ಲಭನ್ತೇ**—ಹೊಂದುತ್ತಾರೆ.

## ಅನುವಾದ

**ಹೀಗೆ ಅವರು ಸ್ವರ್ಗಲೋಕದ ಅಪಾರವಾದ ಇಂದ್ರಿಯ ಭೋಗವನ್ನು ಸವಿದು, ತಮ್ಮ ಪುಣ್ಯಕಾರ್ಯಗಳ ಫಲಗಳು ಕ್ಷಯಿಸಿದನಂತರ ಈ ಮರ್ತ್ಯಲೋಕಕ್ಕೆ ಹಿಂದಿರುಗುತ್ತಾರೆ. ಹೀಗೆ ಮೂರು ವೇದಗಳ ತತ್ವಗಳ ಅನುಸರಣೆಯಿಂದ ಇಂದ್ರಿಯ ಸುಖವಷ್ಟನ್ನೇ ಅರಸುವವರು ಮತ್ತೆಮತ್ತೆ ಹುಟ್ಟಿ ಸಾಯುವುದಷ್ಟನ್ನೇ ಸಾಧಿಸುತ್ತಾರೆ.**

## ಭಾವಾರ್ಥ

ಮೇಲಿನ ಲೋಕವ್ಯೂಹಗಳಿಗೆ ಏರಿದವನು ಇನ್ನೂ ದೀರ್ಘವಾದ ಆಯುಸ್ಸನ್ನೂ ಇಂದ್ರಿಯ ಸುಖಗಳಿಗೆ ಇನ್ನೂ ಹೆಚ್ಚಿನ ಸೌಲಭ್ಯಗಳನ್ನೂ ಪಡೆಯುತ್ತಾನೆ. ಆದರೆ ಅಲ್ಲಿ ಶಾಶ್ವತವಾಗಿ ಉಳಿಯಲು ಅವನಿಗೆ ಅನುಮತಿ ದೊರೆಯುವುದಿಲ್ಲ. ಪುಣ್ಯಕಾರ್ಯಗಳ ಫಲಗಳನ್ನು ಮುಗಿಸಿದನಂತರ ಅವನನ್ನು ಭೂಮಿಗೆ ಮತ್ತೆ ಕಳಿಸಲಾಗುತ್ತದೆ. ವೇದಾಂತ ಸೂತ್ರದಲ್ಲಿ ಸೂಚಿಸಿರುವಂತೆ ಆತನು ಪರಿಪೂರ್ಣ ಜ್ಞಾನವನ್ನು ಪಡೆದಿರುವುದಿಲ್ಲ (**ಜನ್ಮಾದಿ ಅಸ್ಯ ಯತಃ**); ಬೇರೆ ಮಾತುಗಳಲ್ಲಿ ಹೇಳಬೇಕಾದರೆ, ಎಲ್ಲ ಕಾರಣಗಳ ಕಾರಣನಾದ ಕೃಷ್ಣನನ್ನು ಅರ್ಥಮಾಡಿಕೊಳ್ಳದವನು ಬದುಕಿನ ಕಟ್ಟಕಡೆಯ ಗುರಿಯನ್ನು ಸಾಧಿಸುವ ವಿಷಯದಲ್ಲಿ ದಿಕ್ಕುತೋರದವನಾಗುತ್ತಾನೆ. ಆದುದರಿಂದ, ಒಮ್ಮೊಮ್ಮೆ ಮೇಲಕ್ಕೆ ಹೋಗಿ ಒಮ್ಮೊಮ್ಮೆ ಕೆಳಕ್ಕೆ ಬರುವ ತಿರುಗುಚಕ್ರದಲ್ಲಿ ಕುಳಿತವನಂತೆ ಮತ್ತೆ ಮತ್ತೆ ಉನ್ನತ ಲೋಕಗಳಿಗೆ ಹೋಗಿ ಮತ್ತೆ ಕೆಳಕ್ಕೆ ಬರುವ ನಿಯತಕ್ರಮಕ್ಕೆ ಸಿಕ್ಕಿಕೊಳ್ಳುತ್ತಾನೆ. ಇದರ ಭಾವಾರ್ಥವೆಂದರೆ, ಮತ್ತೆ ಕೆಳಕ್ಕೆ ಬರುವ ಸಾಧ್ಯತೆಯೇ ಇಲ್ಲದ ಆಧ್ಯಾತ್ಮಿಕ ಲೋಕಕ್ಕೆ ಆತನು ಏರುವುದಿಲ್ಲ. ಅದರ ಬದಲು ಊರ್ಧ್ವಲೋಕ — ಅಧೋಲೋಕಗಳ ವ್ಯೂಹಗಳಲ್ಲಿ, ಹುಟ್ಟು—ಸಾವುಗಳ ಚಕ್ರದಲ್ಲಿ ಸುತ್ತುತ್ತಾನೆ ಅಷ್ಟೆ. ಶಾಶ್ವತವಾದ ಜ್ಞಾನಾನಂದವನ್ನು ಸವಿಯುತ್ತ ಈ ಕಷ್ಟದ ಐಹಿಕ ಜನ್ಮಕ್ಕೆ ಬಾರದೆಯೇ ಇರಬೇಕಾದಲ್ಲಿ ಆಧ್ಯಾತ್ಮಿಕ ಲೋಕಕ್ಕೆ ಹೋಗುವುದೇ ಉತ್ತಮ.

## ಶ್ಲೋಕ - 22

**ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ |**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ||೨೨||**

**ಅನನ್ಯಾಃ**—ಅನ್ಯ ಗುರಿ ಇಲ್ಲದೆ; **ಚಿನ್ತಯನ್ತಃ**—ಕೇಂದ್ರೀಕರಿಸಿ; **ಮಾಮ್**—ನನ್ನನ್ನು; **ಯೇ**—ಯಾವ; **ಜನಾಃ**—ವ್ಯಕ್ತಿಗಳು; **ಪರ್ಯುಪಾಸತೇ**—ಸರಿಯಾಗಿ ಆರಾಧಿಸುತ್ತಾರೋ; **ತೇಷಾಮ್**—ಅವರ; **ನಿತ್ಯ**—ಸದಾ; **ಅಭಿಯುಕ್ತಾನಾಮ್**—ಭಕ್ತಿಯಲ್ಲಿ ನೆಲೆಸಿದ; **ಯೋಗ**—ಅಪೇಕ್ಷೆಗಳನ್ನು; **ಕ್ಷೇಮಮ್**—ರಕ್ಷಣೆಯನ್ನು; **ವಹಾಮಿ**—ವಹಿಸಿಕೊಳ್ಳುತ್ತೇನೆ; **ಅಹಮ್**—ನಾನು.

## ಅನುವಾದ

**ಅನ್ಯಚಿಂತೆಯಿಲ್ಲದೆ ಒಂದೇ ಮನಸ್ಸಿನಿಂದ ನನ್ನನ್ನು ಪೂಜಿಸುತ್ತ ನನ್ನ ದಿವ್ಯರೂಪವನ್ನು ಧ್ಯಾನಿಸುವವರು ಯಾರೋ ಅವರಿಗೆ ನಾನು ಇಲ್ಲದ್ದನ್ನು ಕೊಡುತ್ತೇನೆ ಮತ್ತು ಇರುವುದನ್ನು ಕಾಪಾಡುತ್ತೇನೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಿಲ್ಲದೆ ಒಂದು ಕ್ಷಣವೂ ಬದುಕಲಾರದವರು ದಿನದಲ್ಲಿ ಇಪ್ಪತ್ನಾಲ್ಕು ಗಂಟೆಯೂ ಕೃಷ್ಣನನ್ನೇ ಕುರಿತು ಯೋಚಿಸದೆ ಬೇರೆ ದಾರಿಯೇ ಇಲ್ಲ; ಭಗವಂತನ ವಿಷಯ ಕೇಳುತ್ತ, ಸಂಕೀರ್ತನೆ ಮಾಡುತ್ತ, ಸ್ಮರಣೆ ಮಾಡುತ್ತ, ಪ್ರಾರ್ಥನೆ ಮಾಡುತ್ತ, ಪೂಜೆ ಮಾಡುತ್ತ, ಭಗವಂತನ ಚರಣಕಮಲಗಳನ್ನು ಸೇವಿಸುತ್ತ, ಇತರ ಸೇವೆಗಳನ್ನು ಮಾಡುತ್ತ, ಸ್ನೇಹವನ್ನು ಬೆಳೆಸಿಕೊಳ್ಳುತ್ತ ಮತ್ತು ಸಂಪೂರ್ಣವಾಗಿ ಪ್ರಭುವಿಗೆ ಶರಣಾಗುತ್ತ ಅವರು ಭಕ್ತಿ ಸೇವೆಯಲ್ಲಿ ನಿರತರಾಗಿರುತ್ತಾರೆ. ಇಂತಹ ಚಟುವಟಿಕೆಗಳೆಲ್ಲ ಮಂಗಳಕರವಾದವು ಮತ್ತು ಆಧ್ಯಾತ್ಮಿಕ ಶಕ್ತಿಗಳಿಂದ ತುಂಬಿರುವುವು. ಅವು ಭಕ್ತನನ್ನು ಆತ್ಮಸಾಕ್ಷಾತ್ಕಾರದಲ್ಲಿ ಪರಿಪೂರ್ಣನನ್ನಾಗಿ ಮಾಡುತ್ತವೆ. ದೇವೋತ್ತಮ ಪರಮ ಪುರುಷನ ಸಹವಾಸವನ್ನು ಪಡೆಯುವುದೊಂದೇ ಅವನ ಬಯಕೆಯಾಗುತ್ತದೆ. ಇಂತಹ ಭಕ್ತನು ನಿಶ್ಚಯವಾಗಿಯೂ ಯಾವುದೇ ಕಷ್ಟವಿಲ್ಲದೆ ಭಗವಂತನ ಬಳಿ ಸಾರುತ್ತಾನೆ. ಇದನ್ನು ಯೋಗ ಎಂದು ಕರೆಯಲಾಗುತ್ತದೆ. ಪ್ರಭುವಿನ ಕೃಪೆಯಿಂದ ಇಂತಹ ಭಕ್ತನು ಬದುಕಿನ ಐಹಿಕ ಸ್ಥಿತಿಗೆ ಮತ್ತೆ ಬರುವುದೇ ಇಲ್ಲ. ಕ್ಷೇಮ ಎಂದರೆ ಭಗವಂತನ ಕೃಪಾಪೂರ್ಣ ರಕ್ಷಣೆ. ಭಕ್ತನು ಯೋಗದ ಮೂಲಕ ಕೃಷ್ಣಪ್ರಜ್ಞೆಯನ್ನು ಸಾಧಿಸಲು ಭಗವಂತನು ನೆರವಾಗುತ್ತಾನೆ; ಆತನ ಕೃಷ್ಣಪ್ರಜ್ಞೆಯು ಪೂರ್ಣವಾದಾಗ ಆತನು ಸಂಕಟದ ಬಾಳಿನಲ್ಲಿ ಬೀಳದಂತೆ ಭಗವಂತನು ಕಾಪಾಡುತ್ತಾನೆ.

## ಶ್ಲೋಕ - 23

**ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ |**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ||೨೩||**

**ಯೇ**—ಯಾವ; **ಅಪಿ**—ಕೂಡ; **ಅನ್ಯ**—ಇತರ; **ದೇವತಾ**—ದೇವತೆಗಳ; **ಭಕ್ತಾಃ**—ಭಕ್ತರು; **ಯಜನ್ತೇ**—ಪೂಜಿಸುತ್ತಾರೋ; **ಶ್ರದ್ಧಯಾ ಅನ್ವಿತಾಃ**—ಶ್ರದ್ಧೆಯೊಂದಿಗೆ; **ತೇ**—ಅವರು; **ಅಪಿ**—ಕೂಡ; **ಮಾಮ್**—ನನ್ನನ್ನು; **ಏವ**—ಮಾತ್ರವೇ; **ಕೌನ್ತೇಯ**—ಕುಂತೀ ಪುತ್ರನೇ; **ಯಜನ್ತಿ**—ಅರ್ಚಿಸುತ್ತಾರೆ; **ಅವಿಧಿ ಪೂರ್ವಕಮ್**—ತಪ್ಪುಮಾರ್ಗದಲ್ಲಿ.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ಇತರ ದೇವತೆಗಳ ಭಕ್ತರಾಗಿ ಶ್ರದ್ಧೆಯಿಂದ ಅವರನ್ನು ಪೂಜಿಸುವವರು ನನ್ನನ್ನೇ ಪೂಜಿಸುತ್ತಾರೆ, ಆದರೆ ಅದನ್ನು ತಪ್ಪುರೀತಿಯಲ್ಲಿ ಮಾಡುತ್ತಾರೆ.**

## ಭಾವಾರ್ಥ

ಕೃಷ್ಣನು, "ದೇವತೆಗಳ ಪೂಜೆಯಲ್ಲಿ ನಿರತರಾದವರು ಪರೋಕ್ಷವಾಗಿ ನನ್ನನ್ನೇ ಪೂಜಿಸುತ್ತಿದ್ದರೂ ಅವರು ಹೆಚ್ಚು ಬುದ್ಧಿವಂತರಲ್ಲ", ಎಂದು ಹೇಳುತ್ತಾನೆ. ಉದಾಹರಣೆಗೆ, ಒಬ್ಬ ಮನುಷ್ಯನು ಮರದ ಬೇರಿಗೆ ನೀರು ಹಾಕದೆ ಅದರ ಎಲೆಗಳು ಮತ್ತು ರೆಂಬೆಗಳಿಗೆ ನೀರು ಹಾಕಿದರೆ ಅದು ಸಾಕಷ್ಟು ತಿಳುವಳಿಕೆ ಇಲ್ಲದೆ ಅಥವಾ ನಿಯಂತ್ರಕ ತತ್ವಗಳನ್ನು ಅನುಸರಿಸದೆ ಮಾಡುವ ಕೆಲಸವಾಗುತ್ತದೆ. ಹಾಗೆಯೇ ದೇಹದ ಬೇರೆ ಬೇರೆ ಭಾಗಗಳಿಗೆ ಸೇವೆ ಮಾಡುವ ವಿಧಾನವೆಂದರೆ ಹೊಟ್ಟೆಗೆ ಆಹಾರವನ್ನು ಕೊಡುವುದು. ದೇವತೆಗಳು ಪರಮ ಪ್ರಭುವಿನ ಸರ್ಕಾರದಲ್ಲಿ ಬೇರೆ ಬೇರೆ ಅಧಿಕಾರಿಗಳು ಮತ್ತು ನಿರ್ದೇಶಕರು ಎನ್ನಬಹುದು. ಮನುಷ್ಯನು ಅನುಸರಿಸಬೇಕಾದದ್ದು ಸರ್ಕಾರವು ಮಾಡಿದ ಕಾನೂನುಗಳನ್ನು; ಅಧಿಕಾರಿಗಳು, ನಿರ್ದೇಶಕರು ಮಾಡಿದ ಕಾನೂನುಗಳನ್ನಲ್ಲ. ಹಾಗೆಯೇ ಪ್ರತಿಯೊಬ್ಬನೂ ಪರಮ ಪ್ರಭುವಿಗೆ ಮಾತ್ರ ಪೂಜೆಯನ್ನು ಸಲ್ಲಿಸಬೇಕು. ಅದು ತಾನಾಗಿಯೇ ಪ್ರಭುವಿನ ಬೇರೆ ಬೇರೆ ಅಧಿಕಾರಿಗಳನ್ನು ಮತ್ತು ನಿರ್ದೇಶಕರನ್ನು ತೃಪ್ತಿಪಡಿಸುತ್ತದೆ. ಅಧಿಕಾರಿಗಳು ಮತ್ತು ನಿರ್ದೇಶಕರು ಸರ್ಕಾರದ ಪ್ರತಿನಿಧಿಗಳಾಗಿ ಕಾರ್ಯನಿರತರಾಗಿರುತ್ತಾರೆ. ಅಧಿಕಾರಿಗಳಿಗೆ ಮತ್ತು ನಿರ್ದೇಶಕರಿಗೆ ಲಂಚಕೊಡುವುದು ಕಾನೂನಿಗೆ ವಿರುದ್ಧವಾದುದು. ಇದನ್ನು ಇಲ್ಲಿ **ಅವಿಧಿಪೂರ್ವಕಮ್** ಎಂದು ಹೇಳಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಕೃಷ್ಣನು ದೇವತೆಗಳನ್ನು ಅನಗತ್ಯವಾಗಿ ಪೂಜಿಸುವುದಕ್ಕೆ ಸಮ್ಮತಿ ಕೊಡುವುದಿಲ್ಲ.

## ಶ್ಲೋಕ - 24

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ||೨೪||**

**ಅಹಮ್**—ನಾನು; **ಹಿ**—ಖಂಡಿತವಾಗಿಯೂ; **ಸರ್ವ**—ಎಲ್ಲ; **ಯಜ್ಞಾನಾಮ್**—ಯಜ್ಞಗಳ; **ಭೋಕ್ತಾ**—ಭೋಕ್ತಾರನು; **ಚ**—ಮತ್ತು; **ಪ್ರಭುಃ**—ಸ್ವಾಮಿಯು; **ಏವ**—ಕೂಡ; **ಚ**—ಮತ್ತು; **ನ**—ಇಲ್ಲ; **ತು**—ಆದರೆ; **ಮಾಮ್**—ನನ್ನನ್ನು; **ಅಭಿಜಾನನ್ತಿ**—ತಿಳಿಯುತ್ತಾರೆ; **ತತ್ತ್ವೇನ**—ನಿಜದಲ್ಲಿ; **ಅತಃ**—ಆದ್ದರಿಂದ; **ಚ್ಯವನ್ತಿ**—ಪತನಗೊಳ್ಳುತ್ತಾರೆ; **ತೇ**—ಅವರು.

## ಅನುವಾದ

**ನಾನೊಬ್ಬನೇ ಎಲ್ಲ ಯಜ್ಞಗಳ ಭೋಕ್ತಾರನು ಮತ್ತು ಯಜಮಾನನು. ಆದುದರಿಂದ ನನ್ನ ನಿಜವಾದ ದಿವ್ಯಸ್ವಭಾವವನ್ನು ಗುರುತಿಸದವರು ಪತನ ಹೊಂದುತ್ತಾರೆ.**

## ಭಾವಾರ್ಥ

ವೈದಿಕ ಸಾಹಿತ್ಯದಲ್ಲಿ ಅನೇಕ ಬಗೆಯ ಯಜ್ಞಾಚರಣೆಯನ್ನು ಮಾಡಬೇಕೆಂದು ಹೇಳಿದೆ. ಆದರೆ ವಾಸ್ತವವಾಗಿ ಅವೆಲ್ಲವುಗಳ ಉದ್ದೇಶ ಪರಮ ಪ್ರಭುವಿನ ತೃಪ್ತಿಯೇ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಯಜ್ಞ ಎಂದರೆ ವಿಷ್ಣು. ಭಗವದ್ಗೀತೆಯ ಮೂರನೆಯ ಅಧ್ಯಾಯದಲ್ಲಿ ಮನುಷ್ಯನು ಯಜ್ಞನನ್ನು ಅಥವಾ ವಿಷ್ಣುವನ್ನು ತೃಪ್ತಿಪಡಿಸಲು ಮಾತ್ರ ಕೆಲಸ ಮಾಡಬೇಕೆಂದು

ಹೇಳಿದೆ. ವರ್ಣಾಶ್ರಮ ಧರ್ಮ ಎಂದು ಕರೆಸಿಕೊಳ್ಳುವ ಮನುಷ್ಯನ ನಾಗರಿಕತೆಯ ಪರಿಪೂರ್ಣ ರೂಪದ ಉದ್ದೇಶವು ವಿಷ್ಣುವನ್ನು ತೃಪ್ತಿಗೊಳಿಸುವುದು. ಆದುದರಿಂದ ಈ ಶ್ಲೋಕದಲ್ಲಿ "ನಾನೇ ಎಲ್ಲ ಯಜ್ಞಗಳ ಭೋಕ್ತಾರನು, ಏಕೆಂದರೆ ನಾನೇ ಪರಮ ಪ್ರಭು", ಎಂದು ಕೃಷ್ಣನು ಹೇಳುತ್ತಾನೆ. ಸಾಕಷ್ಟು ಬುದ್ಧಿ ಇಲ್ಲದವರು ಈ ವಿಷಯವನ್ನು ತಿಳಿಯದೆ ತಾತ್ಕಾಲಿಕ ಪ್ರಯೋಜನಕ್ಕಾಗಿ ದೇವತೆಗಳನ್ನು ಪೂಜಿಸುತ್ತಾರೆ. ಆದುದರಿಂದ ಅವರು ಐಹಿಕ ಬಾಳಿಗೆ ಬೀಳುತ್ತಾರೆ; ಬದುಕಿನಲ್ಲಿ ಅಪೇಕ್ಷಿಸಿದ ಗುರಿಯನ್ನು ಮುಟ್ಟುವುದಿಲ್ಲ. ಆದರೆ ಯಾರಿಗಾದರೂ ಐಹಿಕ ಬಯಕೆಯಿದ್ದರೆ (ಅದು ಪರಿಶುದ್ಧ ಭಕ್ತಿ ಅಲ್ಲದಿದ್ದರೂ) ಆತನು ಪರಮ ಪ್ರಭುವಿಗೆ ಪ್ರಾರ್ಥನೆ ಮಾಡಿಕೊಳ್ಳುವುದೇ ಉತ್ತಮ. ಹಾಗೆ ಅವನು ತಾನು ಬಯಸಿದ ಫಲವನ್ನು ಪಡೆಯುತ್ತಾನೆ.

## ಶ್ಲೋಕ - 25

**ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋऽಪಿ ಮಾಮ್ ॥೨೫॥**

**ಯಾನ್ತಿ**—ಹೋಗುತ್ತಾರೆ; **ದೇವ ವ್ರತಾಃ**—ದೇವತೆಗಳ ಆರಾಧಕರು; **ದೇವಾನ್**—ದೇವತೆಗಳಲ್ಲಿಗೆ; **ಪಿತೄನ್**—ಪೂರ್ವಜರಲ್ಲಿಗೆ; **ಯಾನ್ತಿ**—ಹೋಗುತ್ತಾರೆ; **ಪಿತೃವ್ರತಾಃ**—ಪೂರ್ವಜರ ಆರಾಧಕರು; **ಭೂತಾನಿ**—ಭೂತಗಳು ಮತ್ತು ಪಿಶಾಚಿಗಳಲ್ಲಿಗೆ; **ಯಾನ್ತಿ**—ಹೋಗುತ್ತಾರೆ; **ಭೂತಇಜ್ಯಾಃ**—ಭೂತಗಳು ಮತ್ತು ಪಿಶಾಚಿಗಳನ್ನು ಪೂಜಿಸುವವರು; **ಯಾನ್ತಿ**—ಹೋಗುತ್ತಾರೆ; **ಮತ್**—ನನ್ನ; **ಯಾಜಿನಃ**—ಭಕ್ತರು; **ಅಪಿ**—ಆದರೆ; **ಮಾಮ್**—ನನ್ನಲ್ಲಿಗೆ.

## ಅನುವಾದ

**ದೇವತೆಗಳನ್ನು ಪೂಜಿಸುವವರು ದೇವತೆಗಳ ಮಧ್ಯೆ ಹುಟ್ಟುತ್ತಾರೆ. ಪಿತೃಗಳನ್ನು ಪೂಜಿಸುವವರು ಪಿತೃಗಳ ಬಳಿಗೆ ಹೋಗುತ್ತಾರೆ. ಭೂತಗಳನ್ನು ಪೂಜಿಸುವವರು ಭೂತಗಳ ಮಧ್ಯೆ ಹುಟ್ಟುತ್ತಾರೆ. ನನ್ನನ್ನು ಪೂಜಿಸುವವರು ನನ್ನೊಡನೆ ಇರುತ್ತಾರೆ.**

## ಭಾವಾರ್ಥ

ಚಂದ್ರ, ಸೂರ್ಯ ಅಥವಾ ಬೇರೆ ಯಾವುದೇ ಲೋಕಕ್ಕೆ ಹೋಗಲು ಬಯಸುವವನು ಈ ಉದ್ದೇಶ ಸಾಧನೆಗಾಗಿ ವೇದಗಳಲ್ಲಿ ಹೇಳಿರುವ ನಿರ್ದಿಷ್ಟ ತತ್ವಗಳನ್ನು — ಉದಾಹರಣೆಗೆ, **ದರ್ಶಪೌರ್ಣಮಾಸೀ** ಎಂದು ಪಾರಿಭಾಷಿಕವಾಗಿ ಕರೆಯುವ ಪ್ರಕ್ರಿಯೆಯನ್ನು — ಅನುಸರಿಸಿ ಬಯಸಿದ ಸ್ಥಳವನ್ನು ಸೇರಬಹುದು. ವೇದಗಳಲ್ಲಿ ಫಲಾಪೇಕ್ಷಿತ ಕರ್ಮಗಳನ್ನು ವಿವರಿಸುವ ಭಾಗದಲ್ಲಿ ಇವನ್ನು ವಿವರವಾಗಿ ವರ್ಣಿಸಿದೆ. ಬೇರೆ ಬೇರೆ ಸ್ವರ್ಗಲೋಕಗಳಲ್ಲಿ ನೆಲೆಸಿರುವ ದೇವತೆಗಳ ನಿರ್ದಿಷ್ಟ ಪೂಜೆಯನ್ನು ವೇದಗಳು ಸೂಚಿಸುತ್ತವೆ. ಇದೇ ರೀತಿಯಲ್ಲಿ ಒಂದು ನಿರ್ದಿಷ್ಟ ಯಜ್ಞವನ್ನು ಮಾಡಿ ಪಿತೃಲೋಕಕ್ಕೆ ಹೋಗಬಹುದು. ಹೀಗೆಯೇ ಅನೇಕ ಭೂತಲೋಕಗಳಿಗೆ ಹೋಗಿ ಯಕ್ಷ, ರಾಕ್ಷಸ ಅಥವಾ ಪಿಶಾಚಿ ಆಗಬಹುದು. ಪಿಶಾಚಿ ಪೂಜೆಯನ್ನು 'ಮಾಟ' ಅಥವಾ 'ಅಭಿಚಾರ' ಎಂದು ಕರೆಯುತ್ತಾರೆ. ಅಂತಹ ಮಾಟ ಅಥವಾ ಅಭಿಚಾರವನ್ನು

ಅಭ್ಯಾಸಮಾಡುವವರು ಅನೇಕರಿದ್ದಾರೆ. ಅವರು ಅದು ಆಧ್ಯಾತ್ಮಿಕತೆ ಎಂದು ಭಾವಿಸುತ್ತಾರೆ. ಆದರೆ ಇಂತಹ ಚಟುವಟಿಕೆಗಳು ಸಂಪೂರ್ಣವಾಗಿ ಪ್ರಾಪಂಚಿಕವಾದವು. ಅದೇ ರೀತಿಯಲ್ಲಿ, ದೇವೋತ್ತಮ ಪರಮ ಪುರುಷನನ್ನು ಪೂಜಿಸುವ ಪರಿಶುದ್ಧ ಭಕ್ತನು ನಿಸ್ಸಂದೇಹವಾಗಿಯೂ ವೈಕುಂಠ ಮತ್ತು ಕೃಷ್ಣ ಲೋಕವನ್ನು ಸೇರುವನು. ದೇವತೆಗಳನ್ನು ಪೂಜಿಸಿದ ಮಾತ್ರದಿಂದಲೇ ದೇವಲೋಕಗಳನ್ನು ಸೇರಬಹುದಾದರೆ, ಪಿತೃಗಳನ್ನು ಪೂಜಿಸಿ ಪಿತೃಲೋಕಗಳನ್ನು ಸೇರಬಹುದಾದರೆ, ಮಾಟದಿಂದ ಭೂತಗಳ ಲೋಕವನ್ನು ಸೇರಬಹುದಾದರೆ ಪರಿಶುದ್ಧ ಭಕ್ತನು ಕೃಷ್ಣ ಅಥವಾ ವಿಷ್ಣುಲೋಕವನ್ನು ಸೇರುವುದು ಏಕೆ ಸಾಧ್ಯವಿಲ್ಲ? ಈ ಮುಖ್ಯವಾದ ಶ್ಲೋಕದಿಂದ ಇದನ್ನು ಅರ್ಥಮಾಡಿಕೊಳ್ಳುವುದು ಬಹು ಸುಲಭ. ದುರದೃಷ್ಟದಿಂದ ಬಹು ಮಂದಿಗೆ ಕೃಷ್ಣನೂ ವಿಷ್ಣುವೂ ವಾಸಿಸುವ ಈ ಭವ್ಯಲೋಕಗಳ ವಿಷಯದಲ್ಲಿ ಸಾಕಷ್ಟು ತಿಳಿವಳಿಕೆ ಇಲ್ಲ; ಅವರ ಅಜ್ಞಾನದಿಂದಾಗಿ ಅವರು ಪತನ ಹೊಂದುತ್ತಾರೆ. ನಿರಾಕಾರವಾದಿಗಳು ಸಹ ಬ್ರಹ್ಮಜ್ಯೋತಿಯಿಂದ ಉರುಳುತ್ತಾರೆ. ಹರೇಕೃಷ್ಣ ಮಂತ್ರವನ್ನು ಜಪಿಸಿದ ಮಾತ್ರದಿಂದಲೇ ಮನುಷ್ಯನು ಈ ಲೋಕದಲ್ಲಿ ಪರಿಪೂರ್ಣವಾಗಿ ಭಗವದ್ಧಾಮಕ್ಕೆ ಹೋಗಬಹುದು; ಕೃಷ್ಣಪ್ರಜ್ಞೆಯು ಈ ಭವ್ಯ ತಿಳಿವಳಿಕೆಯನ್ನು ಇಡೀ ಮಾನವ ಸಮಾಜದಲ್ಲಿ ಪ್ರಸಾರ ಮಾಡುತ್ತಿದೆ.

## ಶ್ಲೋಕ - 26

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೨೬॥**

**ಪತ್ರಮ್**—ಒಂದು ಎಲೆಯನ್ನು; **ಪುಷ್ಪಮ್**—ಒಂದು ಹೂವನ್ನು; **ಫಲಮ್**—ಒಂದು ಹಣ್ಣನ್ನು; **ತೋಯಮ್**—ನೀರನ್ನು; **ಯಃ**—ಯಾವನು; **ಮೇ**—ನನಗೆ; **ಭಕ್ತ್ಯಾ**—ಭಕ್ತಿಯಿಂದ; **ಪ್ರಯಚ್ಛತಿ**—ಅರ್ಪಿಸುತ್ತಾನೋ; **ತತ್**—ಅದನ್ನು; **ಅಹಮ್**—ನಾನು; **ಭಕ್ತಿ ಉಪಹೃತಮ್**—ಭಕ್ತಿಯಿಂದ ಅರ್ಪಿಸಿದ; **ಅಶ್ನಾಮಿ**—ಸ್ವೀಕರಿಸುತ್ತೇನೆ; **ಪ್ರಯತ ಆತ್ಮನಃ**—ಶುದ್ಧಪ್ರಜ್ಞೆಯಲ್ಲಿ ಇರುವವನಿಂದ.

## ಅನುವಾದ

**ಯಾರಾದರೂ ನನಗೆ ಪ್ರೀತಿ ಮತ್ತು ಭಕ್ತಿಗಳಿಂದ ಒಂದು ಎಲೆ, ಒಂದು ಹೂವು, ಒಂದು ಹಣ್ಣು ಅಥವಾ ಒಂದಿಷ್ಟು ನೀರನ್ನು ಅರ್ಪಿಸಿದರೆ ನಾನು ಅದನ್ನು ಸ್ವೀಕರಿಸುತ್ತೇನೆ.**

## ಭಾವಾರ್ಥ

ಬುದ್ಧಿವಂತನು, ನಿತ್ಯ ಸುಖಕ್ಕಾಗಿ ಒಂದು ಶಾಶ್ವತವಾದ ಆನಂದಮಯವಾದ ನಿವಾಸವನ್ನು ಪಡೆಯಲು ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಗವಂತನ ದಿವ್ಯ ಪ್ರೀತಿಯುತ ಸೇವೆಯಲ್ಲಿ ನಿರತನಾಗಿರುವುದು ಅತ್ಯಾವಶ್ಯಕ. ಇಂತಹ ಆಶ್ಚರ್ಯಕರವಾದ ಫಲಿತಾಂಶವನ್ನು ಸಾಧಿಸುವ ವಿಧಾನ ಬಹು ಸುಲಭವಾದದ್ದು; ಬಡವರಲ್ಲಿ ಬಡವರಾಗಿದ್ದು ಯಾವ ಅರ್ಹತೆಯೂ ಇಲ್ಲದವರೂ ಇದನ್ನು ಪ್ರಯತ್ನಿಸಬಹುದು. ಇದಕ್ಕೆ ಅಗತ್ಯವಾದ ಏಕೈಕ ಅರ್ಹತೆಯೆಂದರೆ ಶುದ್ಧ ಭಕ್ತನಾಗಿರುವುದು. ಮನುಷ್ಯನು ಏನಾಗಿದ್ದಾನೆ, ಅವನ ಸ್ಥಿತಿ ಏನು — ಯಾವುದೂ ಮುಖ್ಯವಲ್ಲ. ಈ ವಿಧಾನವು ಎಷ್ಟು ಸುಲಭ ಎಂದರೆ ನಿಜವಾದ ಪ್ರೀತಿಯಿಂದ ಪರಮ ಪ್ರಭುವಿಗೆ ಒಂದು ಎಲೆಯನ್ನಾಗಲಿ

ಹಣ್ಣನ್ನಾಗಲಿ ಒಂದಿಷ್ಟು ನೀರನ್ನಾಗಲಿ ಅರ್ಪಿಸಬಹುದು. ಪ್ರಭುವು ಅದನ್ನು ಸಂತೋಷದಿಂದ ಸ್ವೀಕರಿಸುತ್ತಾನೆ. ಆದುದರಿಂದ ಕೃಷ್ಣಪ್ರಜ್ಞೆಯು ಬಹುಸುಲಭ; ಎಲ್ಲರಿಗೂ ಸಾಧ್ಯವಾದದ್ದು. ಯಾರನ್ನೂ ಅದರಿಂದ ದೂರವಿಡಲು ಸಾಧ್ಯವಿಲ್ಲ. ಈ ಸರಳವಾದ ವಿಧಾನದಿಂದ ಕೃಷ್ಣಪ್ರಜ್ಞೆಯನ್ನು ಸಾಧಿಸಿ ನಿತ್ಯಜ್ಞಾನಾನಂದದ ಅತ್ಯುನ್ನತ ಪರಿಪೂರ್ಣತೆಯ ಬದುಕನ್ನು ಪಡೆಯುವುದು ಬೇಡ ಎನ್ನುವ ಮೂರ್ಖನು ಯಾರು? ಕೃಷ್ಣನಿಗೆ ಪ್ರೇಮಪೂರ್ವಕ ಸೇವೆ ಮಾತ್ರವೇ ಬೇಕು. ಬೇರೇನೂ ಬೇಡ. ತನ್ನ ಪರಿಶುದ್ಧ ಭಕ್ತರಿಂದ ಒಂದು ಸಣ್ಣ ಹೂವನ್ನು ಸಹ ಆತನು ಸ್ವೀಕರಿಸುತ್ತಾನೆ. ಭಕ್ತನಲ್ಲದವನಿಂದ ಆತನು ಏನನ್ನೂ ಬಯಸುವುದಿಲ್ಲ. ಆತನು ಸ್ವಯಂಪೂರ್ಣನು, ಆತನಿಗೆ ಯಾರಿಂದಲೂ ಏನೂ ಅಗತ್ಯವಿಲ್ಲ; ಆದರೂ ಆತನು ಪ್ರೀತಿವಿಶ್ವಾಸಗಳ ವಿನಿಮಯವೆಂದು ತನ್ನ ಭಕ್ತನ ಕಾಣಿಕೆಯನ್ನು ಸ್ವೀಕರಿಸುತ್ತಾನೆ. ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವುದೇ ಬದುಕಿನಲ್ಲಿ ಅತ್ಯುನ್ನತ ಪರಿಪೂರ್ಣತೆ. ಈ ಶ್ಲೋಕದಲ್ಲಿ ಭಕ್ತಿ ಎನ್ನುವುದನ್ನು ಎರಡು ಬಾರಿ ಬಳಸಿದೆ; ಕೃಷ್ಣನ ಬಳಿಗೆ ಹೋಗಲು ಭಕ್ತಿಸೇವೆಯೊಂದೇ ಮಾರ್ಗ ಎಂದು ಒತ್ತಿ ಹೇಳುವುದು ಇದರ ಉದ್ದೇಶ. ಬ್ರಾಹ್ಮಣನಾಗುವುದು, ವಿದ್ವಾಂಸನಾಗುವುದು, ಬಹು ಶ್ರೀಮಂತನೋ, ತತ್ವಶಾಸ್ತ್ರಜ್ಞನೋ ಆಗುವುದು ಇಂತಹ ಯಾವುದೇ ಸಾಧನವು ಯಾವುದೇ ಕಾಣಿಕೆಯನ್ನು ಸ್ವೀಕರಿಸುವಂತೆ ಕೃಷ್ಣನ ಮನವನ್ನು ಒಲಿಸಲಾರದು. ಭಕ್ತಿಯ ಮೂಲತತ್ವವಿಲ್ಲದೆ ಯಾರಿಂದಲೇ ಆಗಲಿ ಯಾವ ಕಾಣಿಕೆಯನ್ನೇ ಆಗಲಿ ಸ್ವೀಕರಿಸುವಂತೆ ಪ್ರಭುವಿನ ಮನಸ್ಸನ್ನು ಒಲಿಸಲು ಸಾಧ್ಯವಿಲ್ಲ. ಭಕ್ತಿ ಯಾವಾಗಲೂ ಕಾರಣಾತ್ಮಕವಲ್ಲ. ಈ ಪ್ರಕ್ರಿಯೆ ನಿತ್ಯವಾದದ್ದು. ಪರಾತ್ಪರ ಪೂರ್ಣತೆಗೆ ಸೇವೆಯಲ್ಲಿ ಅರ್ಪಿಸುವ ನೇರ ಕ್ರಿಯೆ ಭಕ್ತಿ.

ತಾನೊಬ್ಬನೇ ಭೋಕ್ತಾರ, ಅನಾದಿಪ್ರಭು ಮತ್ತು ಎಲ್ಲ ಯಜ್ಞಗಳ ನಿಜವಾದ ಗುರಿ ಎಂದು ಶ್ರೀಕೃಷ್ಣನು ತೋರಿಸಿಕೊಟ್ಟಿದ್ದಾನೆ; ಅನಂತರ ಇಲ್ಲಿ ತಾನು ಎಂತಹ ಕಾಣಿಕೆಗಳನ್ನು ಬಯಸುತ್ತೇನೆ ಎಂದು ಹೇಳುತ್ತಾನೆ. ಪರಿಶುದ್ಧನಾಗಿ, ಬದುಕಿನ ಪರಮಗುರಿಯಾದ ಭಗವಂತನ ಪ್ರೇಮಪೂರ್ವಕ ದಿವ್ಯಸೇವೆಯನ್ನು ಸಾಧಿಸಲು ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗಲು ಬಯಸುವವನು ಪ್ರಭುವು ತನ್ನಿಂದ ಏನನ್ನು ಅಪೇಕ್ಷಿಸುತ್ತಾನೆ ಎಂದು ಕಂಡುಕೊಳ್ಳಬೇಕು. ಕೃಷ್ಣನನ್ನು ಪ್ರೀತಿಸುವವನು ಅವನಿಗೆ ಏನು ಬೇಕಾದರೂ ಕೊಡುತ್ತಾನೆ ಮತ್ತು ಅಪೇಕ್ಷಣೀಯವಲ್ಲದ ಅಥವಾ ಕೃಷ್ಣನು ಕೇಳಿರದ ಏನನ್ನೇ ಆಗಲಿ ಅರ್ಪಿಸುವುದಿಲ್ಲ. ಆದುದರಿಂದ ಕೃಷ್ಣನಿಗೆ ಮಾಂಸವನ್ನು, ಮೀನನ್ನು, ಮೊಟ್ಟೆಗಳನ್ನು ಅರ್ಪಿಸಬಾರದು. ಅವನಿಗೆ ಇಂತಹ ಕಾಣಿಕೆಗಳು ಬೇಕಾಗಿದ್ದರೆ ಅವನು ಹಾಗೆ ಹೇಳುತ್ತಿದ್ದ. ಅದರ ಬದಲು ಆತನು ಸ್ಪಷ್ಟವಾಗಿ ಒಂದು ಎಲೆ, ಹಣ್ಣು, ಹೂವು ಮತ್ತು ನೀರನ್ನು ಅರ್ಪಿಸಬೇಕೆಂದು ಹೇಳುತ್ತಾನೆ; ಈ ನೈವೇದ್ಯವನ್ನು ಕುರಿತು 'ನಾನು ಅದನ್ನು ಸ್ವೀಕರಿಸುತ್ತೇನೆ' ಎಂದು ಹೇಳುತ್ತಾನೆ. ಆದುದರಿಂದ ಆತನು ಮಾಂಸ, ಮೀನು ಮತ್ತು ಮೊಟ್ಟೆಗಳನ್ನು ಸ್ವೀಕರಿಸುವುದಿಲ್ಲ ಎಂದು ನಾವು ತಿಳಿದುಕೊಳ್ಳಬೇಕು. ಮನುಷ್ಯರಿಗೆ ಯೋಗ್ಯವಾದ ಆಹಾರಗಳೆಂದರೆ ತರಕಾರಿಗಳು, ಧಾನ್ಯಗಳು, ಹಣ್ಣುಗಳು, ಹಾಲು ಮತ್ತು ನೀರು; ಶ್ರೀಕೃಷ್ಣನೇ ಹೀಗೆಂದು ವಿಧಿಸಿದ್ದಾನೆ. ಇವನ್ನು ಬಿಟ್ಟು ನಾವು ಏನನ್ನು ತಿನ್ನುತ್ತೇವೆಯೋ ಅದನ್ನೆಲ್ಲ ಕೃಷ್ಣನಿಗೆ ನೈವೇದ್ಯ ಮಾಡಲಾಗದು. ಏಕೆಂದರೆ ಆತನು ಅದನ್ನು ಸ್ವೀಕರಿಸುವುದಿಲ್ಲ. ಆದುದರಿಂದ ನಾವು ಇಂತಹ ಆಹಾರಗಳನ್ನು ನೈವೇದ್ಯ ಮಾಡಿದರೆ ಪ್ರೀತಿಪೂರ್ವಕ ಭಕ್ತಿಯ ಮಟ್ಟದಲ್ಲಿ ನಡೆದುಕೊಂಡಂತಾಗುವುದಿಲ್ಲ.

ಮೂರನೆಯ ಅಧ್ಯಾಯದ ಹದಿಮೂರನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಯಜ್ಞಶೇಷ ಮಾತ್ರವೇ ಪರಿಶುದ್ಧ ಎಂದು ಹೇಳುತ್ತಾನೆ. ಬದುಕಿನಲ್ಲಿ ಮುನ್ನಡೆದು ಐಹಿಕ ತೊಡಕುಗಳ ಮುಷ್ಟಿಯಿಂದ ಬಿಡುಗಡೆ ಬಯಸುವವರಿಗೆ ಇದು ಯೋಗ್ಯಆಹಾರ ಎಂದು ವಿವರಿಸಿದ್ದಾನೆ. ಇದೇ ಶ್ಲೋಕದಲ್ಲಿ ತಮ್ಮ ಆಹಾರವನ್ನು ನೈವೇದ್ಯ ಮಾಡದಿರುವವರು ಪಾಪವನ್ನೇ ತಿನ್ನುತ್ತಾರೆ ಎಂದು ಹೇಳಿದ್ದಾನೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಪ್ರತಿಯೊಂದು ತುತ್ತೂ, ಐಹಿಕ ಪ್ರಕೃತಿಯ ಜಟಿಲತೆಗಳಲ್ಲಿ ಅವರು ಸಿಕ್ಕಿಕೊಂಡಿರುವುದನ್ನು ಇನ್ನೂ ಆಳಮಾಡುತ್ತದೆ. ಆದರೆ ಒಳ್ಳೆಯ ಸರಳವಾದ ತರಕಾರಿಯ ತಿನಿಸುಗಳನ್ನು ಸಿದ್ಧಮಾಡಿ ಶ್ರೀಕೃಷ್ಣನ ಚಿತ್ರ ಅಥವಾ ವಿಗ್ರಹಕ್ಕೆ ಅರ್ಪಿಸಿ ತಲೆಬಾಗಿ ಇಂತಹ ವಿನೀತ ನೈವೇದ್ಯವನ್ನು ಒಪ್ಪಿಸಿಕೊಳ್ಳಬೇಕೆಂದು ಅವನನ್ನು ಪ್ರಾರ್ಥಿಸಬೇಕು. ಇದರಿಂದ ಮನುಷ್ಯನು ಒಂದೇ ಸಮನೆ ಬದುಕಿನಲ್ಲಿ ಮುನ್ನಡೆಯಬಹುದು; ದೇಹವನ್ನು ಪರಿಶುದ್ಧ ಮಾಡಿಕೊಳ್ಳಬಹುದು ಮತ್ತು ಸ್ಪಷ್ಟವಾಗಿ ಯೋಚನೆ ಮಾಡುವುದನ್ನು ಸಾಧ್ಯಮಾಡುವ ಸೊಗಸಾದ ಮೆದುಳಿನ ಅಂಗಾಂಶಗಳನ್ನು ಸೃಷ್ಟಿಸಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಪ್ರೇಮಪೂರ್ವಕವಾಗಿ ನೈವೇದ್ಯವನ್ನು ಅರ್ಪಿಸಬೇಕು. ಇರುವುದೆಲ್ಲವೂ ಕೃಷ್ಣನ ಸ್ವತ್ತೇ, ಆದುದರಿಂದ ಆತನಿಗೆ ನೈವೇದ್ಯದ ಅಗತ್ಯವಿಲ್ಲ; ಆದರೂ ಈ ರೀತಿಯಲ್ಲಿ ಆತನನ್ನು ಸಂತೋಷಪಡಿಸಿದವನ ಕಾಣಿಕೆಯನ್ನು ಆತನು ಸ್ವೀಕರಿಸುತ್ತಾನೆ. ಅಡಿಗೆ ಮಾಡುವುದರಲ್ಲಿ, ಬಡಿಸುವುದರಲ್ಲಿ ಮತ್ತು ನೈವೇದ್ಯ ಮಾಡುವುದರಲ್ಲಿ ಮುಖ್ಯವಾದ ಅಂಶವೆಂದರೆ ಕೃಷ್ಣನ ವಿಷಯದಲ್ಲಿ ಪ್ರೇಮದಿಂದ ನಡೆದುಕೊಳ್ಳುವುದು.

ನಿರಾಕಾರವಾದಿಗಳಾದ ತತ್ವಜ್ಞಾನಿಗಳು ಪರಮಸತ್ಯಕ್ಕೆ ಇಂದ್ರಿಯಗಳಿಲ್ಲ ಎಂದೇ ಸಾಧಿಸಲು ಬಯಸುತ್ತಾರೆ. ಅವರಿಗೆ ಭಗವದ್ಗೀತೆಯ ಈ ಶ್ಲೋಕವು ಅರ್ಥವಾಗುವುದಿಲ್ಲ. ಅವರಿಗೆ ಇದೊಂದು ಉಪಮಾನ, ಅಥವಾ ಭಗವದ್ಗೀತೆಯ ವಕ್ತಾರನಾದ ಕೃಷ್ಣನು ಈ ಪ್ರಪಂಚದವನು ಎನ್ನುವುದಕ್ಕೆ ಸಾಕ್ಷಿ. ಆದರೆ ವಾಸ್ತವವಾಗಿ ಪರಮ ದೇವೋತ್ತಮನಾದ ಕೃಷ್ಣನಿಗೆ ಇಂದ್ರಿಯಗಳಿವೆ; ಅವನ ಇಂದ್ರಿಯಗಳು ಅದಲು ಬದಲಾಗಬಲ್ಲವು ಎಂದು ಹೇಳಿದೆ; ಎಂದರೆ ಒಂದು ಇಂದ್ರಿಯವು ಬೇರೆ ಯಾವುದೇ ಇಂದ್ರಿಯದ ಕಾರ್ಯವನ್ನು ಮಾಡಬಲ್ಲದು. ಕೃಷ್ಣನು ಪರಿಪೂರ್ಣನು ಎಂದು ಹೇಳಿದಾಗ ಇದೇ ಅರ್ಥ. ಇಂದ್ರಿಯಗಳಿಲ್ಲದಿದ್ದರೆ ಆತನು ಎಲ್ಲ ಬಗೆಯ ಸಿರಿಗಳಲ್ಲಿ ಸಂಪೂರ್ಣನಾಗಿದ್ದಾನೆ ಎಂದು ಭಾವಿಸಲು ಸಾಧ್ಯವಿಲ್ಲ. ಏಳನೆಯ ಅಧ್ಯಾಯದಲ್ಲಿ ಕೃಷ್ಣನು ತಾನು ಜೀವಿಗಳನ್ನು ಐಹಿಕ ಪ್ರಕೃತಿಯಲ್ಲಿ ಸೇರಿಸುತ್ತೇನೆ ಎಂದು ವಿವರಿಸಿದ್ದಾನೆ. ಐಹಿಕ ಪ್ರಕೃತಿಯತ್ತ ನೋಡುವುದರಿಂದ ಇದನ್ನು ಮಾಡುತ್ತಾನೆ. ಆದುದರಿಂದ ಈ ಸಂದರ್ಭದಲ್ಲಿ ಕೃಷ್ಣನು ನೈವೇದ್ಯವನ್ನರ್ಪಿಸುವ ಭಕ್ತನ ಪ್ರೇಮಪೂರ್ವಕ ಮಾತುಗಳನ್ನು ಕೇಳುವುದು, ಆತನು ತಿನ್ನುವುದು ಮತ್ತು ವಾಸ್ತವವಾಗಿ ಸವಿಯುವುದು ಇವುಗಳೊಡನೆ ಸಂಪೂರ್ಣವಾಗಿ ಒಂದಾಗಿರುತ್ತದೆ. ಈ ವಿಷಯವನ್ನು ಒತ್ತಿ ಹೇಳಬೇಕು — ಅವನ ಪರಿಪೂರ್ಣ ಸ್ಥಾನದ ಕಾರಣದಿಂದ ಆತನು ಕೇಳುವುದು, ಆತನು ತಿನ್ನುವುದು ಮತ್ತು ಸವಿಯುವುದು ಎಲ್ಲ ಸಂಪೂರ್ಣವಾಗಿ ಒಂದೇ. ಯಾವುದೇ ವ್ಯಾಖ್ಯಾನವಿಲ್ಲದೆ ಕೃಷ್ಣನು ತನ್ನನ್ನು ವರ್ಣಿಸಿಕೊಳ್ಳುವ ಹಾಗೆ ಆತನನ್ನು ಒಪ್ಪಿಕೊಳ್ಳುವ ಭಕ್ತನು ಮಾತ್ರ ಪರಮ ಪರಿಪೂರ್ಣ ಸತ್ಯವು ಆಹಾರವನ್ನು ತಿನ್ನಬಲ್ಲದು ಮತ್ತು ಸವಿಯಬಲ್ಲದು ಎಂದು ಅರ್ಥಮಾಡಿಕೊಳ್ಳಬಲ್ಲ.

## ಶ್ಲೋಕ - 27

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ||೨೭||**

**ಯತ್**—ಏನೆಲ್ಲ; **ಕರೋಷಿ**—ಮಾಡುತ್ತೀಯೋ; **ಯತ್**—ಏನೆಲ್ಲ; **ಅಶ್ನಾಸಿ**—ತಿನ್ನುತ್ತೀಯೋ; **ಯತ್**—ಏನನ್ನು; **ಜುಹೋಷಿ**—ಅರ್ಪಿಸುತ್ತೀಯೋ; **ದದಾಸಿ**—ಕೊಡುತ್ತೀಯೋ; **ಯತ್**—ಏನನ್ನಾದರೂ; **ಯತ್**—ಏನೆಲ್ಲ; **ತಪಸ್ಯಸಿ**—ವ್ರತಗಳನ್ನು ಆಚರಿಸುತ್ತೀಯೋ; **ಕೌನ್ತೇಯ**—ಕುಂತೀಪುತ್ರನೇ; **ತತ್**—ಅದನ್ನು; **ಕುರುಷ್ವ**—ಮಾಡು; **ಮತ್**—ನನಗೆ; **ಅರ್ಪಣಮ್**—ಅರ್ಪಿತವನ್ನಾಗಿ.

## ಅನುವಾದ

**ಕುಂತಿಯ ಮಗನಾದ ಅರ್ಜುನನೇ, ನೀನು ಏನನ್ನೇ ಮಾಡು, ಏನನ್ನೇ ಭುಂಜಿಸು, ಏನನ್ನೇ ಅರ್ಪಿಸು ಅಥವಾ ಕೊಟ್ಟುಬಿಡು ಮತ್ತು ಯಾವುದೇ ತಪಸ್ಸನ್ನು ಮಾಡು — ಅದನ್ನು ಕಾಣಿಕೆಯಾಗಿ ನನಗೆ ಅರ್ಪಿಸು.**

## ಭಾವಾರ್ಥ

ಹೀಗೆ ಯಾವುದೇ ಸನ್ನಿವೇಶದಲ್ಲಿಯೂ ಕೃಷ್ಣನನ್ನು ಮರೆಯದಂತೆ ತನ್ನ ಬದುಕನ್ನು ರೂಪಿಸಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯ. ಪ್ರತಿಯೊಬ್ಬನೂ ತನ್ನ ದೇಹ ಮತ್ತು ಆತ್ಮಗಳನ್ನು ಒಟ್ಟಿಗೆ ಇರಿಸಿಕೊಳ್ಳಲು ಕೆಲಸ ಮಾಡಬೇಕಾಗುತ್ತದೆ. ಇಲ್ಲಿ ಕೃಷ್ಣನು ಮನುಷ್ಯನು ತನಗಾಗಿ (ಕೃಷ್ಣನಿಗಾಗಿ) ಕೆಲಸ ಮಾಡಬೇಕು ಎಂದು ಹೇಳುತ್ತಾನೆ. ಪ್ರತಿಯೊಬ್ಬರೂ ಜೀವಿಸಲು ಏನನ್ನಾದರೂ ತಿನ್ನಲೇಬೇಕು. ಆದುದರಿಂದ ಅವನು ಪ್ರಸಾದವನ್ನು ಸ್ವೀಕರಿಸಬೇಕು. ನಾಗರಿಕನಾದ ಪ್ರತಿಯೊಬ್ಬ ಮನುಷ್ಯನು ಯಾವುದಾದರೂ ಧಾರ್ಮಿಕ ವಿಧಿಗಳನ್ನು ಮಾಡಲೇಬೇಕು. ಆದುದರಿಂದ ಕೃಷ್ಣನು, "ಅದನ್ನು ನನಗಾಗಿ ಮಾಡು", ಎಂದು ಹೇಳುತ್ತಾನೆ. ಇದಕ್ಕೆ ಅರ್ಚನೆ ಎಂದು ಹೆಸರು. ಪ್ರತಿಯೊಬ್ಬನಿಗೂ ಏನನ್ನಾದರೂ ದಾನಮಾಡುವ ಪ್ರವೃತ್ತಿಯಿರುತ್ತದೆ; ಕೃಷ್ಣನು "ಅದನ್ನು ನನಗೆ ಕೊಡು", ಎಂದು ಹೇಳುತ್ತಾನೆ; ಶೇಖರವಾದ ಎಲ್ಲ ನಿವ್ವಳ ಹಣವನ್ನು ಕೃಷ್ಣಪ್ರಜ್ಞೆಯ ಆಂದೋಳನವನ್ನು ಮುನ್ನಡೆಸಲು ಉಪಯೋಗಿಸಬೇಕೆಂದು ಇದರ ಅರ್ಥ. ಈಗಿನ ಕಾಲದಲ್ಲಿ ಜನರಿಗೆ ಧ್ಯಾನದ ಪ್ರಕ್ರಿಯೆಯಲ್ಲಿ ಬಹಳ ಒಲವು; ಈ ಯುಗದಲ್ಲಿ ಇದು ಕಾರ್ಯಸಾಧ್ಯವಲ್ಲ. ಆದರೆ ಹರೇಕೃಷ್ಣ ಮಂತ್ರವನ್ನು ತನ್ನ ಜಪಮಣಿಯೊಂದಿಗೆ ಜಪಮಾಡುತ್ತ ದಿನದ ಇಪ್ಪತ್ನಾಲ್ಕು ಗಂಟೆಗಳೂ ಕೃಷ್ಣಧ್ಯಾನದಲ್ಲಿ ಯಾರಾದರೂ ಕಳೆಯುವುದಾದರೆ ಭಗವದ್ಗೀತೆಯ ಆರನೆಯ ಅಧ್ಯಾಯದಲ್ಲಿ ಸಮರ್ಥವಾಗಿ ತೋರಿಸಿದಂತೆ ಆತನೇ ಖಂಡಿತವಾಗಿಯೂ ಅತ್ಯಂತ ಶ್ರೇಷ್ಠ ಧ್ಯಾನಿ ಮತ್ತು ಅತ್ಯಂತ ಶ್ರೇಷ್ಠಯೋಗಿ.

## ಶ್ಲೋಕ - 28

**ಶುಭಾಶುಭ ಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ |**
**ಸನ್ನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ||೨೮||**

**ಶುಭ**—ಶುಭಕರವಾದ; **ಅಶುಭ**—ಮತ್ತು ಅಶುಭಕರವಾದ; **ಫಲೈಃ**—ಫಲಗಳುಳ್ಳ; **ಏವಮ್**—ಹೀಗೆ; **ಮೋಕ್ಷ್ಯಸೇ**—ನೀನು ಮುಕ್ತನಾಗುವೆ; **ಕರ್ಮ**—ಕರ್ಮದ; **ಬನ್ಧನೈಃ**—ಬಂಧನಗಳಿಂದ; **ಸನ್ನ್ಯಾಸ**— ಪರಿತ್ಯಾಗದ; **ಯೋಗ**—ಯೋಗದಿಂದ; **ಯುಕ್ತ ಆತ್ಮಾ**—ಮನಸ್ಸನ್ನು ದೃಢವಾಗಿ ನಿಲ್ಲಿಸಿ; **ವಿಮುಕ್ತಃ**—ಮುಕ್ತನಾಗಿ; **ಮಾಮ್**—ನನ್ನನ್ನು; **ಉಪೈಷ್ಯಸಿ**—ಸೇರುತ್ತೀಯೆ.

## ಅನುವಾದ

**ಈ ರೀತಿಯಲ್ಲಿ ನೀನು ಕರ್ಮಬಂಧನದಿಂದ ಮತ್ತು ಅದರ ಶುಭಾಶುಭ ಫಲಗಳಿಂದ ಬಿಡುಗಡೆ ಹೊಂದುತ್ತೀಯೆ. ಈ ತ್ಯಾಗ ತತ್ವದಿಂದ ನಿನ್ನ ಮನಸ್ಸು ನನ್ನಲ್ಲಿ ನೆಲೆಸಿ ನೀನು ಮುಕ್ತನಾಗುತ್ತೀಯೆ ಮತ್ತು ನನ್ನ ಬಳಿಗೆ ಬರುತ್ತೀಯೆ.**

## ಭಾವಾರ್ಥ

ಶ್ರೇಷ್ಠ ಮಾರ್ಗದರ್ಶನದಲ್ಲಿ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವವನನ್ನು **ಯುಕ್ತ** ಎಂದು ಕರೆಯುತ್ತಾರೆ. ಇದಕ್ಕೆ ಶಾಸ್ತ್ರೀಯ ಶಬ್ದ **ಯುಕ್ತ ವೈರಾಗ್ಯ**. ಇದನ್ನು ರೂಪ ಗೋಸ್ವಾಮಿಯವರು ಹೀಗೆ ಇನ್ನಷ್ಟು ವಿವರಿಸಿದ್ದಾರೆ —

**ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ |**
**ನಿರ್ಬನ್ಧಃ ಕೃಷ್ಣಸಮ್ಬನ್ಧೇ ಯುಕ್ತಂ ವೈರಾಗ್ಯಮುಚ್ಯತೇ ||**

(ಭಕ್ತಿರಸಾಮೃತ ಸಿಂಧು 2.255)

ನಾವು ಈ ಐಹಿಕ ಜಗತ್ತಿನಲ್ಲಿ ಇರುವವರೆಗೆ ಕರ್ಮ ಮಾಡಲೇಬೇಕು; ಕರ್ಮವನ್ನು ಬಿಡುವಂತಿಲ್ಲ. ಹಾಗೆ ಕರ್ಮಗಳನ್ನು ಮಾಡಿ ಫಲಗಳನ್ನು ಕೃಷ್ಣನಿಗೆ ಅರ್ಪಿಸಿದರೆ, ಅದಕ್ಕೆ **ಯುಕ್ತ ವೈರಾಗ್ಯ** ಎಂದು ಹೆಸರು ಎಂದು ರೂಪ ಗೋಸ್ವಾಮಿಯವರು ಹೇಳುತ್ತಾರೆ. ವಾಸ್ತವವಾಗಿ ಸನ್ಯಾಸದಲ್ಲಿ ನೆಲೆಸಿದಾಗ ಇಂತಹ ಚಟುವಟಿಕೆಗಳು ಮನಸ್ಸಿನ ದರ್ಪಣವನ್ನು ಸ್ವಚ್ಛಗೊಳಿಸುತ್ತವೆ; ಕರ್ತನು ಕ್ರಮಕ್ರಮವಾಗಿ ಆತ್ಮಸಾಕ್ಷಾತ್ಕಾರದಲ್ಲಿ ಮುನ್ನಡೆದಂತೆ ಆತನು ಸಂಪೂರ್ಣವಾಗಿ ದೇವೋತ್ತಮ ಪರಮ ಪುರುಷನಿಗೆ ಶರಣಾಗುತ್ತಾನೆ. ಆದುದರಿಂದ ಕಡೆಯಲ್ಲಿ ಮುಕ್ತನಾಗುತ್ತಾನೆ. ಈ ಮುಕ್ತಿಯನ್ನೂ ಖಚಿತವಾಗಿ ಹೇಳಿದೆ. ಈ ಮುಕ್ತಿಯಿಂದ ಆತನು ಬ್ರಹ್ಮಜ್ಯೋತಿಯೊಂದಿಗೆ ಒಂದಾಗುವುದಿಲ್ಲ. ಆದರೆ ಪರಮ ಪ್ರಭುವಿನ ಲೋಕವನ್ನು ಪ್ರವೇಶಿಸುತ್ತಾನೆ. ಇದನ್ನು ಇಲ್ಲಿ ಸ್ಪಷ್ಟವಾಗಿ ಹೇಳಿದೆ. **ಮಾಮ್ ಉಪೈಶ್ಯಸಿ** "ಆತನು ನನ್ನ ಬಳಿಗೆ ಬರುತ್ತಾನೆ", ಎಂದರೆ ಭಗವದ್ಧಾಮಕ್ಕೆ ಹಿಂದಿರುಗುತ್ತಾನೆ. ಮುಕ್ತಿಯಲ್ಲಿ ಐದು ಹಂತಗಳಿವೆ. ಮೇಲೆ ಹೇಳಿದಂತೆ, ತನ್ನ ಬಾಳಿನಲ್ಲಿ ಸದಾ ಪರಮ ಪ್ರಭುವಿನ ನಿರ್ದೇಶನದಲ್ಲಿ ಬದುಕಿದವನು ಒಂದು ಹಂತದವರೆಗೆ ವಿಕಾಸ ಹೊಂದುತ್ತಾನೆ. ಈ ಹಂತದಿಂದ ಅವನು ದೇಹವನ್ನು ಬಿಟ್ಟನಂತರ ಭಗದ್ಧಾಮಕ್ಕೆ ಹಿಂದಿರುಗಿ ಪರಮ ಪ್ರಭುವಿನ ಸಹವಾಸದಲ್ಲಿ ನೇರವಾಗಿ ನಿರತನಾಗಬಹುದು. ತನ್ನ ಜೀವನವನ್ನು ಪ್ರಭುವಿನ ಸೇವೆಗೆ ಮುಡಿಪಾಗಿಡುವುದನ್ನು ಬಿಟ್ಟು ಬೇರೆ ಯಾವುದೇ ಆಸಕ್ತಿ ಇಲ್ಲದವನು ವಾಸ್ತವವಾಗಿ ಸನ್ಯಾಸಿ. ಅಂತಹ ಮನುಷ್ಯನು ತನ್ನನ್ನು ಪ್ರಭುವಿನ ಪರಮ ಇಚ್ಛೆಯನ್ನು ಅವಲಂಬಿಸಿದ ನಿರಂತರ ಸೇವಕ ಎಂದೇ ಭಾವಿಸುತ್ತಾನೆ. ಹೀಗಾಗಿ ಅವನು ಏನನ್ನೇ ಮಾಡಲಿ

ಪ್ರಭುವಿನ ಪ್ರಯೋಜನಕ್ಕಾಗಿ ಮಾಡುತ್ತಾನೆ. ಅವನು ಯಾವ ಕಾರ್ಯವನ್ನೇ ಮಾಡಲಿ ಅದನ್ನು ಪ್ರಭುವಿನ ಸೇವೆ ಎಂದು ಮಾಡುತ್ತಾನೆ. ಫಲವನ್ನು ನೀಡುವ ಕರ್ಮಗಳಿಗಾಗಲೀ, ವೇದಗಳಲ್ಲಿ ಪ್ರಸ್ತಾಪಿಸಿರುವ ವಿಧಿತ ಕರ್ತವ್ಯಗಳಿಗಾಗಲೀ ಆತನು ಗಂಭೀರ ಗಮನವನ್ನು ಕೊಡುವುದಿಲ್ಲ. ವೇದಗಳಲ್ಲಿ ಪ್ರಸ್ತಾಪಿಸಿರುವ ವಿಧಿತ ಕರ್ತವ್ಯಗಳನ್ನು ಸಾಮಾನ್ಯ ಮನುಷ್ಯರು ಮಾಡಲೇಬೇಕು; ಆದರೆ ಪ್ರಭುವಿನ ಸೇವೆಯಲ್ಲಿಯೇ ಸಂಪೂರ್ಣವಾಗಿ ನಿರತನಾಗಿರುವ ಪರಿಶುದ್ಧ ಭಕ್ತನು ವೇದಗಳು ವಿಧಿಸಿರುವ ಕರ್ತವ್ಯಗಳಿಗೆ ವಿರುದ್ಧವಾಗಿ ಹೋಗುವಂತೆ ಕಂಡರೂ ವಾಸ್ತವವಾಗಿ ಹಾಗಿರುವುದಿಲ್ಲ.

ಆದುದರಿಂದ ಅತ್ಯಂತ ಬುದ್ಧಿವಂತನಾದವನೂ ಪರಿಶುದ್ಧ ಭಕ್ತನ ಯೋಜನೆಗಳನ್ನು, ಕಾರ್ಯಗಳನ್ನು ಅರ್ಥಮಾಡಿಕೊಳ್ಳಲಾರ ಎಂದು ವೈಷ್ಣವ ಪ್ರಮಾಣಗಳು ಹೇಳುತ್ತವೆ. ನಿಷ್ಕೃಷ್ಟವಾಗಿ ಆ ಮಾತುಗಳು ಇವು — **ತಾನ್ರವಾಕ್ಯ, ಕ್ರಿಯಾ, ಮುದ್ರಾವಿಜ್ಞೇಹ ನಾ ಬುಝುಯ** (ಚೈತನ್ಯ ಚರಿತಾಮೃತ, ಮಧ್ಯ 23.39). ಭಗವಂತನ ಸೇವೆಯಲ್ಲಿ ಸದಾ ನಿರತನಾಗಿರುವವನನ್ನು ಅಥವಾ ಭಗವಂತನ ಸೇವೆ ಮಾಡುವುದು ಹೇಗೆ ಎಂದು ಸದಾ ಯೋಚಿಸುತ್ತ ಯೋಜನೆಗಳನ್ನು ಮಾಡುತ್ತಿರುವವನು ಈಗಲೇ ಸಂಪೂರ್ಣವಾಗಿ ಮುಕ್ತನಾಗಿದ್ದಾನೆ ಎಂದು ಭಾವಿಸಬೇಕು. ಮುಂದೆ ಅವನು ಭಗವದ್ಧಾಮಕ್ಕೆ ಹಿಂದಿರುಗುವುದು ಖಚಿತ. ಹೇಗೆ ಕೃಷ್ಣನು ಎಲ್ಲ ಟೀಕೆಗಳನ್ನೂ ಮೀರಿದವನೋ ಹಾಗೆಯೇ ಇಂತಹ ಭಕ್ತನು ಎಲ್ಲ ಐಹಿಕ ಟೀಕೆಗಳನ್ನೂ ಮೀರಿದವನು.

## ಶ್ಲೋಕ - 29

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ |**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ||೨೯||**

**ಸಮಃ**—ಸಮಾನ ಮನೋಭಾವವುಳ್ಳವನು; **ಅಹಮ್**—ನಾನು; **ಸರ್ವಭೂತೇಷು**—ಎಲ್ಲ ಜೀವಿಗಳಲ್ಲಿ; **ನ**—ಒಬ್ಬನೂ ಇಲ್ಲ; **ಮೇ**—ನನಗೆ; **ದ್ವೇಷ್ಯಃ**—ದ್ವೇಷವುಳ್ಳವನು; **ಅಸ್ತಿ**—ಇದ್ದಾನೆ; **ನ**—ಇಲ್ಲ; **ಪ್ರಿಯಃ**—ಪ್ರೀತಿಪಾತ್ರನು; **ಯೇ**—ಯಾರು; **ಭಜನ್ತಿ**—ಭಕ್ತಿಸೇವೆಯನ್ನು ಸಲ್ಲಿಸುತ್ತಾರೋ; **ತು**—ಆದರೆ; **ಮಾಮ್**—ನನ್ನನ್ನು; **ಭಕ್ತ್ಯಾ**—ಭಕ್ತಿಯಿಂದ; **ಮಯಿ**—ನನ್ನಲ್ಲಿ ಇರುತ್ತಾರೆ; **ತೇ**—ಅಂತಹ ವ್ಯಕ್ತಿಗಳು; **ತೇಷು**—ಅವರಲ್ಲಿ; **ಚ**—ಕೂಡ; **ಅಪಿ**—ಖಂಡಿತವಾಗಿಯೂ; **ಅಹಮ್**—ನಾನು.

## ಅನುವಾದ

**ನನಗೆ ಯಾರ ವಿಷಯದಲ್ಲಿಯೂ ಅಸೂಯೆಯಿಲ್ಲ. ನಾನು ಯಾರ ಪರವಾಗಿಯೂ ಪಕ್ಷಪಾತ ಮಾಡುವುದಿಲ್ಲ. ನಾನು ಎಲ್ಲರ ವಿಷಯದಲ್ಲಿಯೂ ಸಮನಾಗಿ ಇರುತ್ತೇನೆ. ಆದರೆ ಯಾವಾತನು ನನ್ನ ಭಕ್ತಿಸೇವೆಯನ್ನು ಮಾಡುವನೋ ಆತನು ನನ್ನ ಸ್ನೇಹಿತನು, ನನ್ನಲ್ಲಿದ್ದಾನೆ ಮತ್ತು ನಾನು ಅವನಿಗೆ ಸ್ನೇಹಿತ.**

## ಭಾವಾರ್ಥ

ಕೃಷ್ಣನು ಎಲ್ಲರ ವಿಷಯದಲ್ಲಿಯೂ ಸಮನಾಗಿದ್ದರೆ ಮತ್ತು ಯಾರೂ ಅವನ ವಿಶೇಷ

ಸ್ನೇಹಿತರಲ್ಲದಿದ್ದರೆ ಸದಾ ಅವನ ದಿವ್ಯ ಸೇವೆಯಲ್ಲಿ ನಿರತರಾಗಿರುವ ಭಕ್ತರಲ್ಲಿ ಅವನು ವಿಶೇಷ ಆಸಕ್ತಿಯನ್ನು ಏಕೆ ವಹಿಸುತ್ತಾನೆ ಎಂದು ಇಲ್ಲಿ ಪ್ರಶ್ನೆಮಾಡಬಹುದು. ಆದರೆ ಇದು ಪಕ್ಷಪಾತವಲ್ಲ; ಇದು ಸಹಜವಾದದ್ದು. ಈ ಐಹಿಕ ಪ್ರಪಂಚದಲ್ಲಿ ಯಾವುದೇ ಮನುಷ್ಯನು ಬಹು ಉದಾರನಾಗಿರಬಹುದು, ಆದರೂ ಆತನಿಗೆ ತನ್ನ ಮಕ್ಕಳಲ್ಲಿ ವಿಶೇಷ ಆಸಕ್ತಿಯಿರುತ್ತದೆ. ಯಾವುದೇ ರೂಪದಲ್ಲಿರುವ ಜೀವಿಯನ್ನು ತನ್ನ ಮಗ ಎಂದು ಪರಮ ಪ್ರಭುವು ಹೇಳುತ್ತಾನೆ; ಆದುದರಿಂದ ಆತನು ಬದುಕಿನ ಅಗತ್ಯಗಳನ್ನು ಪ್ರತಿಯೊಬ್ಬರಿಗೂ ಉದಾರವಾಗಿ ನೀಡುತ್ತಾನೆ. ಮಳೆಯು ಬಂಡೆಯ ಮೇಲೆ ಬೀಳಲಿ, ಭೂಮಿಯ ಮೇಲೆ ಬೀಳಲಿ ಅಥವಾ ನೀರಿನ ಮೇಲೆ ಬೀಳಲಿ, ಎಲ್ಲೆಲ್ಲೂ ಮಳೆಯನ್ನು ಸುರಿಸುವ ಮೋಡದಂತೆ ಭಗವಂತ. ಆದರೆ ಆತನು ತನ್ನ ಭಕ್ತರಿಗೆ ವಿಶಿಷ್ಟ ಗಮನವನ್ನು ಕೊಡುತ್ತಾನೆ. ಇಂತಹ ಭಕ್ತರನ್ನು ಇಲ್ಲಿ ಪ್ರಸ್ತಾಪಿಸಿದೆ. ಅವರು ಸದಾ ಕೃಷ್ಣಪ್ರಜ್ಞೆಯಲ್ಲಿರುತ್ತಾರೆ. ಆದುದರಿಂದ ಸದಾ ಆಧ್ಯಾತ್ಮಿಕವಾಗಿ ಕೃಷ್ಣನಲ್ಲಿ ನೆಲೆಸಿರುತ್ತಾರೆ. 'ಕೃಷ್ಣಪ್ರಜ್ಞೆ' ಎನ್ನುವ ಮಾತೇ ಇಂತಹ ಪ್ರಜ್ಞೆಯಲ್ಲಿರುವವರು ಭಗವಂತನಲ್ಲಿ ನೆಲೆಸಿರುವ ಜೀವಂತ ಆಧ್ಯಾತ್ಮವಾದಿಗಳು ಎನ್ನುವುದನ್ನು ಹೇಳುತ್ತದೆ. ಭಗವಂತನು ಇಲ್ಲಿ **ಮಯಿ ತೇ**, "ಅವರು ನನ್ನಲ್ಲಿದ್ದಾರೆ", ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಸಹಜವಾಗಿ ಇದರ ಪರಿಣಾಮವಾಗಿ ಭಗವಂತನು ಅವರಲ್ಲಿದ್ದಾನೆ. ಇದು ಪರಸ್ಪರವಾದದ್ದು. ಇದು ಈ ಮಾತುಗಳನ್ನು ವಿವರಿಸುತ್ತದೆ. **ಯೇ ಯಥಾ ಮಾಂ ಪ್ರಪದ್ಯನ್ತೇ ತಾನ್ಸ್ತಥೈವ ಭಜಾಮಿ ಅಹಮ್** — "ಯಾರೇ ಆಗಲಿ ನನಗೆ ಎಷ್ಟರ ಮಟ್ಟಿಗೆ ಶರಣಾಗತನಾದರೆ ಅಷ್ಟರ ಮಟ್ಟಿಗೆ ನಾನು ಅವನನ್ನು ಪಾಲಿಸುತ್ತೇನೆ." ಪ್ರಭುವೂ ಮತ್ತು ಭಕ್ತನೂ ಪ್ರಜ್ಞೆ ಉಳ್ಳವರಾದದ್ದರಿಂದ ಈ ಆಧ್ಯಾತ್ಮಿಕ ಪರಸ್ಪರ ವಿನಿಮಯವು ಇರುತ್ತದೆ. ರತ್ನವನ್ನು ಬಂಗಾರದ ಉಂಗುರದಲ್ಲಿಟ್ಟಾಗ ಅದು ತುಂಬ ಸೊಗಸಾಗಿ ಕಾಣುತ್ತದೆ. ಚಿನ್ನಕ್ಕೂ ವೈಭವ ಬರುತ್ತದೆ; ಅದೇ ಸಮಯದಲ್ಲಿ ರತ್ನಕ್ಕೂ ವೈಭವ ಬರುತ್ತದೆ. ಪ್ರಭುವೂ ಜೀವಿಯೂ ಹೊಳೆಯುತ್ತಾರೆ. ಜೀವಿಗೆ ಪರಮ ಪ್ರಭುವಿನ ಸೇವೆಯಲ್ಲಿ ಒಲವು ಬಂದಾಗ ಚಿನ್ನದಂತೆ ಕಾಣುತ್ತಾನೆ. ಪ್ರಭುವು ವಜ್ರ. ಆದುದರಿಂದ ಈ ಜೊತೆಯು ತುಂಬ ಸೊಗಸಾದದ್ದು. ಪರಿಶುದ್ಧ ಸ್ಥಿತಿಯಲ್ಲಿರುವ ಜೀವಿಗಳಿಗೆ ಭಕ್ತರೆಂದು ಹೆಸರು. ಪರಮ ಪ್ರಭುವು ತನ್ನ ಭಕ್ತರ ಭಕ್ತನಾಗುತ್ತಾನೆ. ಭಕ್ತ ಮತ್ತು ಪ್ರಭುವಿನ ನಡುವೆ ಪರಸ್ಪರ ವಿನಿಮಯದ ಸಂಬಂಧ ಇಲ್ಲವಾದರೆ ಸಾಕಾರ ಸಿದ್ಧಾಂತವೇ ಇರುವುದಿಲ್ಲ. ನಿರಾಕಾರ ಸಿದ್ಧಾಂತದಲ್ಲಿ ಪರಮೋನ್ನತನಿಗೂ ಜೀವಿಗೂ ಪರಸ್ಪರ ವಿನಿಮಯದ ಸಂಬಂಧವಿಲ್ಲ. ಸಾಕಾರ ಸಿದ್ಧಾಂತದಲ್ಲಿ ಉಂಟು.

ಪ್ರಭುವು ಕಲ್ಪವೃಕ್ಷದಂತೆ ಎಂಬ ನಿದರ್ಶನವನ್ನು ಹಲವೊಮ್ಮೆ ಕೊಡುತ್ತಾರೆ. ಈ ಕಲ್ಪವೃಕ್ಷದಿಂದ ಬಯಸಿದುದನ್ನೆಲ್ಲ ಪ್ರಭುವು ಕೊಡುತ್ತಾನೆ. ಆದರೆ ಇಲ್ಲಿ ವಿವರಣೆಯು ಇನ್ನೂ ಪೂರ್ಣವಾಗಿದೆ. ಪ್ರಭುವು ಭಕ್ತರ ವಿಷಯದಲ್ಲಿ ಪಕ್ಷಪಾತಿ ಎಂದು ಇಲ್ಲಿ ಹೇಳಿದೆ. ಇದು ಭಕ್ತರ ವಿಷಯದಲ್ಲಿ ಭಗವಂತನ ವಿಶೇಷ ಕೃಪೆಯ ಅಭಿವ್ಯಕ್ತಿ. ಭಗವಂತನ ವಿನಿಮಯವು ಕರ್ಮದ ನಿಯಮಕ್ಕನುಗುಣವಾಗಿದೆ ಎಂದು ಭಾವಿಸಬಾರದು. ಇದು ಭಗವಂತನೂ ಅವನ ಭಕ್ತರೂ ಕಾರ್ಯನಿರ್ವಹಣೆ ಮಾಡುವ ಆಧ್ಯಾತ್ಮಿಕ ಸನ್ನಿವೇಶಕ್ಕೆ ಸೇರಿದ್ದು. ಪರಮ ಪ್ರಭುವಿನ ಭಕ್ತಿಸೇವೆಯು ಈ ಐಹಿಕ ಜಗತ್ತಿನ ಒಂದು ಚಟುವಟಿಕೆಯಲ್ಲ; ಅದು ನಿತ್ಯಜ್ಞಾನಾನಂದವು ಪ್ರಧಾನವಾಗಿರುವ ಆಧ್ಯಾತ್ಮಿಕ ಜಗತ್ತಿನ ಭಾಗ.

## ಶ್ಲೋಕ - 30

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ |**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ||೩೦||**

**ಅಪಿ**—ಕೂಡ; **ಚೇತ್**—ಆಗಿದ್ದರೆ; **ಸು ದುರಾಚಾರಃ**—ಅತ್ಯಂತ ಅಸಹ್ಯಕಾರ್ಯಗಳನ್ನು ಮಾಡುವವನು; **ಭಜತೇ**—ಭಕ್ತಿಸೇವೆಯಲ್ಲಿ ನಿರತನಾಗಿರುತ್ತಾನೆ; **ಮಾಮ್**—ನನ್ನ; **ಅನನ್ಯ ಭಾಕ್**—ವಿಚಲತೆಯಿಲ್ಲದೆ; **ಸಾಧುಃ**—ಸಾಧುವು; **ಏವ**—ಖಂಡಿತವಾಗಿಯು; **ಸಃ**—ಅವನು; **ಮನ್ತವ್ಯಃ**—ಎಂದು ಪರಿಗಣಿಸಬೇಕು; **ಸಮ್ಯಕ್**—ಸಂಪೂರ್ಣವಾಗಿ; **ವ್ಯವಸಿತಃ**—ನಿರ್ಧಾರದಲ್ಲಿ ನೆಲೆಸಿದವನು; **ಹಿ**—ಖಂಡಿತವಾಗಿಯೂ; **ಸಃ**—ಅವನು.

## ಅನುವಾದ

**ಯಾವನಾದರೂ ಅತ್ಯಂತ ಹೀನ ಕಾರ್ಯವನ್ನು ಮಾಡುತ್ತಿದ್ದರೂ, ಆತನು ಭಕ್ತಿಸೇವೆಯಲ್ಲಿ ತೊಡಗಿದ್ದರೆ ಆತನನ್ನು ಸಾಧು ಎಂದೇ ಭಾವಿಸಬೇಕು, ಏಕೆಂದರೆ ಆತನು ತನ್ನ ನಿರ್ಧಾರದಲ್ಲಿ ಸರಿಯಾಗಿ ನೆಲೆಸಿದ್ದಾನೆ.**

## ಭಾವಾರ್ಥ

**ಸುದುರಾಚಾರಃ** ಎನ್ನುವ ಪದ ಈ ಶ್ಲೋಕದಲ್ಲಿ ಅರ್ಥವತ್ತಾದದ್ದು. ಅದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಜೀವಿಯು ಬದ್ಧನಾಗಿದ್ದಾಗ ಅವನ ಚಟುವಟಿಕೆಗಳು ಎರಡು ಬಗೆಯವು — ಬದ್ಧವಾದವು, ಸಹಜಸ್ವರೂಪದವು. ಭಕ್ತರ ಬದ್ಧಜೀವನಕ್ಕೆ ಸಂಬಂಧಿಸಿದಂತೆ ದೇಹರಕ್ಷಣೆ ಹಾಗೂ ಸಮಾಜದ ಸರ್ಕಾರದ ನಿಯಮಗಳನ್ನು ಪಾಲಿಸುವಲ್ಲಿ ಬೇರೆ ಬೇರೆ ಚಟುವಟಿಕೆಗಳಿರುತ್ತವೆ. ಇವನ್ನು ಬದ್ಧ ಚಟುವಟಿಕೆಗಳು ಎಂದು ಕರೆಯುತ್ತಾರೆ. ಇವುಗಳಲ್ಲದೆ, ತನ್ನ ಆಧ್ಯಾತ್ಮಿಕ ಸ್ವರೂಪದ ಅರಿವಿದ್ದು ಕೃಷ್ಣಪ್ರಜ್ಞೆಯಲ್ಲಿ ಅಥವಾ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾದ ಜೀವಿಯು ನಿರ್ವಹಿಸಬೇಕಾದ ಆಧ್ಯಾತ್ಮಿಕ ಚಟುವಟಿಕೆಗಳೂ ಇವೆ. ಇಂತಹ ಚಟುವಟಿಕೆಗಳನ್ನು ಜೀವಿಯು ತನ್ನ ಸಹಜಸ್ವರೂಪದಲ್ಲಿ ಮಾಡುತ್ತಾನೆ. ಇವಕ್ಕೆ ಶಾಸ್ತ್ರೀಯವಾಗಿ ಭಕ್ತಿಸೇವೆ ಎಂದು ಹೆಸರು. ಬದ್ಧಸ್ಥಿತಿಯಲ್ಲಿ ಕೆಲವೊಮ್ಮೆ ಭಕ್ತಿಸೇವೆಯೂ ದೇಹಕ್ಕೆ ಸಂಬಂಧಿಸಿದಂತೆ ಬದ್ಧಸೇವೆಯೂ ಪರಸ್ಪರ ಸಮಾನಾಂತರವಾಗುತ್ತವೆ. ಆದರೆ ಕೆಲವೊಮ್ಮೆ ಈ ಚಟುವಟಿಕೆಗಳು ಒಂದಕ್ಕೊಂದು ವಿರೋಧವಾಗುತ್ತವೆ. ಸಾಧ್ಯವಾದ ಮಟ್ಟಿಗೂ ತನ್ನ ಆರೋಗ್ಯಕರವಾದ ಸ್ಥಿತಿಯನ್ನು ಹದಗೆಡಿಸುವ ಏನನ್ನೂ ಮಾಡದಂತೆ ಭಕ್ತನು ಬಹಳ ಎಚ್ಚರದಿಂದ ಇರುತ್ತಾನೆ. ತನ್ನ ಚಟುವಟಿಕೆಗಳಲ್ಲಿ ಪರಿಪೂರ್ಣತೆಯು ತಾನು ಕ್ರಮಕ್ರಮವಾಗಿ ಕೃಷ್ಣಪ್ರಜ್ಞೆಯನ್ನು ಸಾಧಿಸುವುದರಲ್ಲಿದೆ ಎಂದು ಅವನಿಗೆ ಗೊತ್ತು. ಆದರೆ ಒಮ್ಮೊಮ್ಮೆ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು, ಸಾಮಾಜಿಕವಾಗಿ ಅಥವಾ ರಾಜಕೀಯವಾಗಿ ಅತ್ಯಂತ ಹೀನಾಯವೆನ್ನಿಸುವ ಕೆಲಸಗಳನ್ನು ಮಾಡುವುದನ್ನು ಕಾಣಬಹುದು. ಇಂತಹ ತಾತ್ಕಾಲಿಕ ಪತನವು ಅವನನ್ನು ಅಯೋಗ್ಯನನ್ನಾಗಿ ಮಾಡುವುದಿಲ್ಲ. ಒಬ್ಬ ಮನುಷ್ಯನು ಪತಿತನಾಗಬಹುದು; ಆದರೆ ಅವನು ಮನಃಪೂರ್ವಕವಾಗಿ ಪರಮ ಪ್ರಭುವಿನ ದಿವ್ಯಸೇವೆಯಲ್ಲಿ ನಿರತನಾಗಿದ್ದರೆ ಅವನ ಹೃದಯದಲ್ಲಿರುವ ಪ್ರಭುವು ಅವನನ್ನು

ಪರಿಶುದ್ಧಗೊಳಿಸುತ್ತಾನೆ ಮತ್ತು ಆ ಹೀನ ಕಾರ್ಯಕ್ಕಾಗಿ ಕ್ಷಮಿಸುತ್ತಾನೆ. ಹೀಗೆಂದು ಶ್ರೀಮದ್ಭಾಗವತದಲ್ಲಿ ಹೇಳಿದೆ. ಐಹಿಕದ ಸೋಂಕು ಎಷ್ಟು ಪ್ರಬಲ ಎಂದರೆ ಭಗವಂತನ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗಿರುವ ಯೋಗಿಯೂ ಸಹ ಒಮ್ಮೊಮ್ಮೆ ಬಲೆಗೆ ಬೀಳುತ್ತಾನೆ. ಆದರೆ ಕೃಷ್ಣಪ್ರಜ್ಞೆಯು ಎಷ್ಟು ಶಕ್ತವಾದದ್ದು ಎಂದರೆ ಯಾವಾಗಲಾದರೊಮ್ಮೆ ಆಗುವ ಇಂತಹ ಪತನವನ್ನು ಕೂಡಲೇ ಸರಿಪಡಿಸುತ್ತದೆ. ಆದುದರಿಂದ ಭಕ್ತಿಸೇವೆಯ ಪ್ರಕ್ರಿಯೆಯು ಯಾವಾಗಲೂ ಯಶಸ್ವಿಯಾಗುತ್ತದೆ. ಆದರ್ಶ ಮಾರ್ಗದಿಂದ ಆಕಸ್ಮಿಕವಾಗಿ ಪತನ ಹೊಂದಿದುದಕ್ಕೆ ಯಾರೂ ಭಕ್ತನನ್ನು ಅಪಹಾಸ್ಯ ಮಾಡಬಾರದು; ಏಕೆಂದರೆ, ಮುಂದಿನ ಶ್ಲೋಕದಲ್ಲಿ ವಿವರಿಸಿರುವಂತೆ, ಭಕ್ತನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ನೆಲೆಸುತ್ತಲೇ ಒಮ್ಮೊಮ್ಮೆ ಸಂಭವಿಸುವ ಇಂತಹ ಪತನಗಳು ಕಾಲಕ್ರಮದಲ್ಲಿ ನಿಂತುಹೋಗುತ್ತವೆ.

ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ನೆಲೆಸಿ, ಹರೇಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂದು ಸಂಕೀರ್ತನೆ ಮಾಡುವ ಪ್ರಕ್ರಿಯೆಯಲ್ಲಿ ದೃಢಮನಸ್ಸಿನಿಂದ ನಿರತನಾದವನು ಆಕಸ್ಮಾತ್ತಾಗಿ ಪತನ ಹೊಂದಿದ್ದನ್ನು ಕಂಡರೂ ಅವನು ದಿವ್ಯ ನೆಲೆಯಲ್ಲಿದ್ದಾನೆ ಎಂದು ಭಾವಿಸಬೇಕು. **ಸಾಧುರ್ಏವ**, 'ಆತನು ಸಾಧು' ಎನ್ನುವ ಮಾತುಗಳು ಒತ್ತಿಹೇಳುತ್ತವೆ. ಆಕಸ್ಮಿಕವಾಗಿ ಪತನ ಹೊಂದಿದ ಮಾತ್ರಕ್ಕೆ ಭಕ್ತನನ್ನು ತೆಗಳಬಾರದು; ಆಕಸ್ಮಿಕವಾಗಿ ಪತನ ಹೊಂದಿದ್ದರೂ ಆತನನ್ನು ಸಾಧು ಎಂದು ಪರಿಗಣಿಸಬೇಕು ಎಂದು ಈ ಶಬ್ದಗಳು ಭಕ್ತರಲ್ಲದವರಿಗೆ ಎಚ್ಚರಿಕೆ ನೀಡುತ್ತವೆ. **ಮನ್ತವ್ಯಃ** ಎನ್ನುವ ಶಬ್ದವು ಇನ್ನೂ ಶಕ್ತಿಯುತವಾದದ್ದು. ಈ ನಿಯಮವನ್ನು ಅನುಸರಿಸದೆ ಆಕಸ್ಮಿಕವಾಗಿ ಪತನಹೊಂದಿದ ಭಕ್ತನನ್ನು ಅಪಹಾಸ್ಯ ಮಾಡುವವರು ಪರಮ ಪ್ರಭುವಿನ ಅಪ್ಪಣೆಯನ್ನು ಮೀರುತ್ತಿದ್ದಾರೆ. ಭಕ್ತನ ಒಂದೇ ಒಂದು ಅರ್ಹತೆಯೆಂದರೆ ಒಂದಿಷ್ಟೂ ವಿಚಲಿತನಾಗದೆ ಸಂಪೂರ್ಣವಾಗಿ ಭಕ್ತಿಸೇವೆಯಲ್ಲಿ ತೊಡಗಿರುವುದು.

ನೃಸಿಂಹ ಪುರಾಣದಲ್ಲಿ ಹೀಗೆ ಹೇಳಿದೆ —

**ಭಗವತಿ ಚ ಹರಾವನನ್ಯಚೇತಾ**
**ಭೃಶಮಲಿನೋऽಪಿ ವಿರಾಜತೇ ಮನುಷ್ಯಃ ।**
**ನ ಹಿ ಶಶಕಲುಷಚ್ಛಬಿಃ ಕದಾಚಿತ್**
**ತಿಮಿರ ಪರಾಭವತಾಮ್ ಉಪೈತಿ ಚನ್ದ್ರಃ ॥**

ಇದರ ಅರ್ಥ — ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ಸಂಪೂರ್ಣವಾಗಿ ನಿರತನಾದವನು ಒಮ್ಮೊಮ್ಮೆ ಅಸಹ್ಯವಾದ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡುಬಂದರೂ ಅವುಗಳನ್ನು ಚಂದ್ರನಲ್ಲಿರುವ ಮೊಲದ ಗುರುತನ್ನು ಹೋಲುವ ಕಲೆಗಳಂತೆ ಪರಿಗಣಿಸಬೇಕು. ಇಂತಹ ಕಲೆಗಳು ಬೆಳದಿಂಗಳು ಹರಡುವುದಕ್ಕೆ ಅಡ್ಡಿಯಾಗುವುದಿಲ್ಲ. ಹೀಗೆಯೇ ಭಕ್ತನೊಬ್ಬನು ಸಾಧು ಮಾರ್ಗದಿಂದ ಆಕಸ್ಮಾತ್ತಾಗಿ ಪತನಗೊಂಡರೆ ಆತನು ಅಸಹ್ಯವನ್ನುಂಟುಮಾಡುವುದಿಲ್ಲ.

ಆದರೆ ಆಧ್ಯಾತ್ಮಿಕ ಭಕ್ತಿಸೇವೆಯಲ್ಲಿ ತೊಡಗಿರುವ ಭಕ್ತನು ಎಲ್ಲ ಬಗೆಯ ಅಸಹ್ಯಕರ ರೀತಿಗಳಲ್ಲಿ ವರ್ತಿಸಬಹುದು ಎಂದು ತಪ್ಪಾಗಿ ಅರ್ಥಮಾಡಿಕೊಳ್ಳಬಾರದು. ಐಹಿಕ ಸಂಬಂಧಗಳ

ಬಲಿಷ್ಠ ಪ್ರಭಾವದಿಂದುಂಟಾಗುವ ಆಕಸ್ಮಿಕಗಳನ್ನು ಮಾತ್ರ ಈ ಶ್ಲೋಕದಲ್ಲಿ ಸೂಚಿಸಲಾಗಿದೆ. ಭಕ್ತಿಸೇವೆಯು ಸ್ವಲ್ಪ ಹೆಚ್ಚು ಕಡಮೆ ಮಾಯಾಶಕ್ತಿಯ ವಿರುದ್ಧ ಯುದ್ಧ ಸಾರಿದಂತೆ. ಮಾಯಾಶಕ್ತಿಯೊಡನೆ ಹೋರಾಡುವಷ್ಟು ಮನುಷ್ಯನು ಶಕ್ತನಾಗುವವರೆಗೆ ಆಕಸ್ಮಿಕ ಪತನಗಳಾಗಬಹುದು. ಆದರೆ ಹಿಂದೆಯೇ ಹೇಳಿದಂತೆ ಸಾಕಷ್ಟು ಶಕ್ತಿಯನ್ನು ಪಡೆದಾಗ ಆತನು ಇಂತಹ ಪತನಗಳಿಗೆ ಒಳಗಾಗುವುದಿಲ್ಲ. ಯಾರೂ ಈ ಶ್ಲೋಕವನ್ನು ದುರುಪಯೋಗ ಮಾಡಿಕೊಂಡು ತಪ್ಪು ತಪ್ಪಾಗಿ ನಡೆದು ತಾನು ಇನ್ನೂ ಭಕ್ತನೇ ಎಂದುಕೊಳ್ಳಬಾರದು. ಭಕ್ತಿಸೇವೆಯಿಂದ ಆತನು ತನ್ನ ಸ್ವಭಾವವನ್ನು ಉತ್ತಮಗೊಳಿಸಿಕೊಳ್ಳದಿದ್ದರೆ ಆತನು ಒಳ್ಳೆಯ ಭಕ್ತನಲ್ಲ ಎಂದು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 31

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ |**
**ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ||೩೧||**

**ಕ್ಷಿಪ್ರಮ್**—ಬಹು ಬೇಗನೆ; **ಭವತಿ**—ಆಗುತ್ತಾನೆ; **ಧರ್ಮ ಆತ್ಮಾ**—ಧರ್ಮಾತ್ಮನು; **ಶಶ್ವತ್ ಶಾನ್ತಿಮ್**—ಶಾಶ್ವತವಾದ ಶಾಂತಿಯನ್ನು; **ನಿಗಚ್ಛತಿ**—ಪಡೆಯುತ್ತಾನೆ; **ಕೌನ್ತೇಯ**—ಕುಂತೀಪುತ್ರನೇ; **ಪ್ರತಿಜಾನೀಹಿ**—ಪ್ರಕಟಿಸು; **ನ**—ಎಂದಿಗೂ ಇಲ್ಲ; **ಮೇ**—ನನ್ನ; **ಭಕ್ತಃ**—ಭಕ್ತನು; **ಪ್ರಣಶ್ಯತಿ**—ನಾಶವಾಗುತ್ತಾನೆ.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ಅವನು ಶೀಘ್ರವಾಗಿ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತ ಶಾಂತಿಯನ್ನು ಪಡೆಯುತ್ತಾನೆ. ನನ್ನ ಭಕ್ತನು ಎಂದೂ ನಾಶವಾಗುವುದಿಲ್ಲ ಎಂದು ಧೈರ್ಯವಾಗಿ ಘೋಷಿಸು.**

## ಭಾವಾರ್ಥ

ಇದನ್ನು ತಪ್ಪರ್ಥ ಮಾಡಿಕೊಳ್ಳಬಾರದು. ಏಳನೆಯ ಅಧ್ಯಾಯದಲ್ಲಿ ಪರಮ ಪ್ರಭುವು, ಕಿಡಿಗೇಡಿತನದಲ್ಲಿ ತೊಡಗಿರುವವನು ಪರಮ ಪ್ರಭುವಿನ ಭಕ್ತನಾಗಲಾರ ಎಂದು ಹೇಳುತ್ತಾನೆ. ಪರಮ ಪ್ರಭುವಿನ ಭಕ್ತನಲ್ಲದವನಿಗೆ ಯಾವುದೇ ಒಳ್ಳೆಯ ಅರ್ಹತೆಗಳಿಲ್ಲ. ಈ ಪ್ರಶ್ನೆಯು ಉಳಿಯುತ್ತದೆ — ಆಕಸ್ಮಿಕವಾಗಿಯಾಗಲಿ ಉದ್ದೇಶಪೂರ್ವಕವಾಗಿಯಾಗಲಿ ಅಸಹ್ಯಕರ ಚಟುವಟಿಕೆಗಳಲ್ಲಿ ತೊಡಗಿರುವವನು ಪರಿಶುದ್ಧ ಭಕ್ತನು ಹೇಗಾದಾನು? ನ್ಯಾಯವಾಗಿಯೇ ಈ ಪ್ರಶ್ನೆಯನ್ನು ಕೇಳಬಹುದು. ಏಳನೆಯ ಅಧ್ಯಾಯದಲ್ಲಿ ಹೇಳಿದಂತೆ, ಪ್ರಭುವಿನ ಭಕ್ತಿಸೇವೆಗೆ ಬಾರದೆಯೇ ಇರುವ ದುಷ್ಕರ್ಮಿಗಳಿಗೆ, ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ, ಒಳ್ಳೆಯ ಅರ್ಹತೆಗಳೇ ಇರುವುದಿಲ್ಲ. ಸಾಮಾನ್ಯವಾಗಿ, ಭಕ್ತಿಸೇವೆಯ ಒಂಬತ್ತು ವಿಧಗಳಲ್ಲಿ ತೊಡಗಿರುವ ಭಕ್ತನು ಹೃದಯದಿಂದ ಎಲ್ಲ ಕಲ್ಮಷವನ್ನೂ ತೊಡೆದು ಹಾಕುವುದರಲ್ಲಿ ನಿರತನಾಗಿರುತ್ತಾನೆ. ಅವನು ದೇವೋತ್ತಮ ಪರಮ ಪುರುಷನನ್ನು ಹೃದಯದಲ್ಲಿ ಧರಿಸಿರುತ್ತಾನೆ. ಸಹಜವಾಗಿ ಅವನ

ಎಲ್ಲ ಪಾಪಕಲ್ಮಷಗಳೂ ತೊಳೆದುಹೋಗುತ್ತವೆ. ಸದಾ ಪರಮ ಪ್ರಭುವನ್ನು ಕುರಿತು ಯೋಚಿಸುವುದು ಅವನನ್ನು ಪರಿಶುದ್ಧ ಹೃದಯನನ್ನಾಗಿ ಮಾಡುತ್ತದೆ. ವೇದಗಳ ಪ್ರಕಾರ, ಒಂದು ನಿಯಮವಿದೆ — ಉನ್ನತ ಸ್ಥಾನದಿಂದ ಪತನಹೊಂದಿದವನು ಪರಿಶುದ್ಧನಾಗಲು ಕೆಲವು ಪ್ರಾಯಶ್ಚಿತ್ತ ವಿಧಿಗಳನ್ನು ಅನುಸರಿಸಬೇಕು. ಆದರೆ ಇಲ್ಲಿ ಅಂತಹ ನಿಯಮವೇನೂ ಇಲ್ಲ; ಏಕೆಂದರೆ, ಆತನು ಸದಾ ದೇವೋತ್ತಮ ಪರಮ ಪುರುಷನನ್ನು ಸ್ಮರಿಸುವುದರಿಂದ, ಪರಿಶುದ್ಧಗೊಳಿಸುವ ಪ್ರಕ್ರಿಯೆಯು ಆಗಲೇ ಭಕ್ತನ ಹೃದಯದಲ್ಲಿದೆ. ಆದುದರಿಂದ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ ಎನ್ನುವುದರ ಸಂಕೀರ್ತನೆಯನ್ನು ನಿಲ್ಲಿಸದೆ ಮುಂದುವರಿಸಬೇಕು. ಇದು ಭಕ್ತನನ್ನು ಎಲ್ಲ ಆಕಸ್ಮಿಕ ಪತನಗಳಿಂದ ರಕ್ಷಿಸುತ್ತದೆ. ಹೀಗೆ ಅವನು ಎಲ್ಲ ಐಹಿಕ ಕಲ್ಮಷಗಳ ಸೋಂಕಿನಿಂದ ಎಂದೆಂದೂ ಮುಕ್ತನಾಗಿರುವನು.

## ಶ್ಲೋಕ - 32

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ |**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ||೩೨||**

**ಮಾಮ್**—ನನ್ನನ್ನು; **ಹಿ**—ಖಂಡಿತವಾಗಿಯೂ; **ಪಾರ್ಥ**—ಪೃಥೆಯ ಪುತ್ರನೇ; **ವ್ಯಪಾಶ್ರಿತ್ಯ**—ವಿಶೇಷವಾಗಿ ಆಶ್ರಯಿಸಿ; **ಯೇ**—ಯಾರು; **ಅಪಿ**—ಕೂಡ; **ಸ್ಯುಃ**—ಇರುತ್ತಾರೋ; **ಪಾಪ ಯೋನಯಃ**—ನೀಚ ಕುಟುಂಬಗಳಲ್ಲಿ ಜನಿಸಿದ; **ಸ್ತ್ರಿಯಃ**—ಸ್ತ್ರೀಯರು; **ವೈಶ್ಯಾಃ**—ವರ್ತಕರು; **ತಥಾ**—ಕೂಡ; **ಶೂದ್ರಾಃ**—ಕೆಳವರ್ಗದ ಜನರು; **ತೇ ಅಪಿ**—ಅವರೂ ಕೂಡ; **ಯಾನ್ತಿ**—ಹೋಗುತ್ತಾರೆ; **ಪರಾಮ್**—ಪರಮೋನ್ನತವಾದ; **ಗತಿಮ್**—ಗಮ್ಯಸ್ಥಾನಕ್ಕೆ.

## ಅನುವಾದ

**ಪಾರ್ಥ, ನನ್ನಲ್ಲಿ ಆಶ್ರಯ ಪಡೆಯುವವರು ಕೀಳುಜನ್ಮದವರಾದರೂ — ಸ್ತ್ರೀಯರು, ವೈಶ್ಯರು ಮತ್ತು ಶೂದ್ರರು — ಪರಮಗತಿಯನ್ನು ಪಡೆಯಬಲ್ಲರು.**

## ಭಾವಾರ್ಥ

ಭಕ್ತಿಸೇವೆಯಲ್ಲಿ ಕೆಳಗಿನ ಮತ್ತು ಮೇಲಿನ ವರ್ಗಗಳ ಜನರಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂದು ಪರಮ ಪ್ರಭುವು ಇಲ್ಲಿ ಸ್ಪಷ್ಟವಾಗಿ ಸಾರುತ್ತಾನೆ. ಜೀವನದ ಪ್ರಾಪಂಚಿಕ ಪರಿಕಲ್ಪನೆಯಲ್ಲಿ ಇಂತಹ ಭೇದಗಳುಂಟು. ಆದರೆ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾದವನಿಗೆ ಇಂತಹ ಭೇದಗಳಿಲ್ಲ. ಪ್ರತಿಯೊಬ್ಬನೂ ಪರಮಗತಿಗೆ ಅರ್ಹನೇ. ಶ್ರೀಮದ್ಭಾಗವತದಲ್ಲಿ (2.4.18), ಚಂಡಾಲರಂತಹ (ನಾಯಿಗಳನ್ನು ತಿನ್ನುವವರು) ಅತ್ಯಂತ ಕೀಳಾದವರೂ ಒಬ್ಬ ಪರಿಶುದ್ಧಭಕ್ತನ ಸಹವಾಸದಿಂದ ಪರಿಶುದ್ಧರಾಗಬಲ್ಲರು ಎಂದು ಹೇಳಿದೆ. ಭಕ್ತಿಸೇವೆ ಮತ್ತು ಪರಿಶುದ್ಧ ಭಕ್ತನೊಬ್ಬನ ಮಾರ್ಗದರ್ಶನ ಎಷ್ಟು ಶಕ್ತವಾದವು ಎಂದರೆ ಕೆಳಗಿನ ಮತ್ತು ಮೇಲಿನ ವರ್ಗಗಳ ಜನರಲ್ಲಿ ಭೇದ ಭಾವವಿಲ್ಲ. ಯಾರು ಬೇಕಾದರೂ ಇದನ್ನು ಅನುಸರಿಸಬಹುದು. ಪರಿಶುದ್ಧ ಭಕ್ತನ ಆಶ್ರಯವನ್ನು ಪಡೆಯುವ ಅತ್ಯಂತ ಸರಳನಾದ ಮನುಷ್ಯನು ಯೋಗ್ಯವಾದ ಮಾರ್ಗದರ್ಶನದಿಂದ ಪರಿಶುದ್ಧನಾಗಬಲ್ಲ.

ಐಹಿಕ ಪ್ರಕೃತಿಯ ಗುಣಗಳಿಗೆ ಅನುಗುಣವಾಗಿ ಮನುಷ್ಯನನ್ನು ಸಾತ್ವಿಕ ಸ್ವಭಾವದವರು (ಬ್ರಾಹ್ಮಣರು), ರಾಜಸ ಸ್ವಭಾವದವರು (ಕ್ಷತ್ರಿಯರು ಅಥವಾ ಆಡಳಿತಗಾರರು), ರಾಜಸ ಮತ್ತು ತಾಮಸ ಗುಣಗಳು ಬೆರೆತವರು (ವೈಶ್ಯರು ಅಥವಾ ವ್ಯಾಪಾರಿಗಳು) ಮತ್ತು ತಾಮಸ ಗುಣದವರು (ಶೂದ್ರರು ಅಥವಾ ಕಾರ್ಮಿಕರು) ಎಂದು ವರ್ಗೀಕರಿಸಲಾಗಿದೆ. ಇವರಿಗಿಂತ ಕೆಳಗಿನವರನ್ನು ಚಂಡಾಲರೆಂದು ಕರೆಯುತ್ತಾರೆ. ಅವರು ಪಾಪಿ ಸಂಸಾರಗಳಲ್ಲಿ ಹುಟ್ಟುತ್ತಾರೆ. ಸಾಮಾನ್ಯವಾಗಿ ಪಾಪಿಸಂಸಾರಗಳಲ್ಲಿ ಹುಟ್ಟಿದವರ ಸಹವಾಸವನ್ನು ಮೇಲಿನ ವರ್ಗಗಳವರು ಒಪ್ಪುವುದಿಲ್ಲ. ಆದರೆ ಭಕ್ತಿಸೇವೆಯ ಪ್ರಕ್ರಿಯೆಯ ಶಕ್ತಿ ಎಷ್ಟೆಂದರೆ ಪರಮ ಪ್ರಭುವಿನ ಪರಿಶುದ್ಧ ಭಕ್ತನು ಕೆಳಗಿನ ವರ್ಗಗಳ ಎಲ್ಲರೂ ಜೀವನದ ಅತ್ಯುನ್ನತ ಪರಿಪೂರ್ಣತೆಯನ್ನು ಪಡೆಯುವಂತೆ ಮಾಡಬಲ್ಲ. ಮನುಷ್ಯನು ಕೃಷ್ಣನ ಆಶ್ರಯವನ್ನು ಪಡೆದಾಗ ಮಾತ್ರ ಇದು ಸಾಧ್ಯ. **ವ್ಯಪಾಶ್ರಿತ್ಯ** ಎನ್ನುವ ಶಬ್ದವು ಇಲ್ಲಿ ಸೂಚಿಸುವಂತೆ ಮನುಷ್ಯನು ಸಂಪೂರ್ಣವಾಗಿ ಕೃಷ್ಣನ ಆಶ್ರಯವನ್ನು ಪಡೆಯಬೇಕು. ಆಗ ಅವನು ಮಹಾಜ್ಞಾನಿಗಳಿಗಿಂತಲೂ ಯೋಗಿಗಳಿಗಿಂತಲೂ ಶ್ರೇಷ್ಠನಾಗುತ್ತಾನೆ.

## ಶ್ಲೋಕ - 33

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥**

**ಕಿಮ್**—ಇನ್ನೇನು; **ಪುನಃ**—ಮತ್ತೆ; **ಬ್ರಾಹ್ಮಣಾಃ**—ಬ್ರಾಹ್ಮಣರು; **ಪುಣ್ಯಾಃ**—ಧರ್ಮಿಷ್ಠರಾದವರು; **ಭಕ್ತಾಃ**—ಭಕ್ತರು; **ರಾಜರ್ಷಯಃ**—ರಾಜರ್ಷಿಗಳು; **ತಥಾ**—ಕೂಡ; **ಅನಿತ್ಯಮ್**—ತಾತ್ಕಾಲಿಕವಾದ; **ಅಸುಖಮ್**—ಕ್ಲೇಶಮಯವಾದ; **ಲೋಕಮ್**—ಲೋಕವನ್ನು; **ಇಮಮ್**—ಈ; **ಪ್ರಾಪ್ಯ**—ಹೊಂದಿ; **ಭಜಸ್ವ**—ಪ್ರೀತಿಯುತ ಸೇವೆಯಲ್ಲಿ ತೊಡಗು; **ಮಾಮ್**—ನನಗೆ.

## ಅನುವಾದ

**ಧರ್ಮಾತ್ಮರಾದ ಬ್ರಾಹ್ಮಣರು, ಭಕ್ತರು ಮತ್ತು ರಾಜರ್ಷಿಗಳ ವಿಷಯದಲ್ಲಿ ಇದು ಇನ್ನಷ್ಟು ನಿಜ. ಆದುದರಿಂದ ಈ ಅಶಾಶ್ವತವಾದ ಮತ್ತು ದುಃಖದ ಲೋಕಕ್ಕೆ ಬಂದಿರುವ ನೀನು ನನ್ನ ಪ್ರೇಮಪೂರ್ವಕ ಸೇವೆಯಲ್ಲಿ ನಿರತನಾಗು.**

## ಭಾವಾರ್ಥ

ಈ ಐಹಿಕ ಜಗತ್ತಿನಲ್ಲಿ ಜನರ ಬೇರೆ ಬೇರೆ ವರ್ಗಗಳುಂಟು; ಏನೇ ಆಗಲಿ, ಈ ಜಗತ್ತು ಯಾರಿಗೂ ಸುಖದ ತಾಣವಲ್ಲ. **ಅನಿತ್ಯಮ್ ಅಸುಖಮ್ ಲೋಕಮ್** — ಈ ಲೋಕವು ಅಶಾಶ್ವತವಾಗಿದ್ದು ದುಃಖಗಳಿಂದ ತುಂಬಿಹೋಗಿದೆ. ಇದು ಯಾವುದೇ ವಿವೇಕಯುಕ್ತನಾದ ಯೋಗ್ಯ ಮನುಷ್ಯನು ವಾಸಮಾಡುವಂತಹ ಸ್ಥಳವಲ್ಲ ಎಂದು ಸ್ಪಷ್ಟವಾಗಿ ಹೇಳಿದೆ. ದೇವೋತ್ತಮ ಪರಮ ಪುರುಷನು ಈ ಪ್ರಪಂಚವು ಅಶಾಶ್ವತ ಮತ್ತು ಇದು ದುಃಖಗಳಿಂದ ತುಂಬಿಹೋಗಿದೆ ಎಂದು ಹೇಳುತ್ತಾನೆ. ಕೆಲವರು ತತ್ವಶಾಸ್ತ್ರಜ್ಞರು ಅದರಲ್ಲಿಯೂ ಮಾಯಾವಾದಿ ತತ್ವಶಾಸ್ತ್ರಜ್ಞರು ಈ ಜಗತ್ತು ಮಿಥ್ಯೆ ಎಂದು ಹೇಳುತ್ತಾರೆ. ಆದರೆ ಭಗವದ್ಗೀತೆಯಿಂದ ನಾವು ಈ ಜಗತ್ತು ಮಿಥ್ಯೆಯಲ್ಲ,

ಆದರೆ ಅಶಾಶ್ವತ ಎಂದು ತಿಳಿದುಕೊಳ್ಳಬಹುದು. ಅಶಾಶ್ವತತೆಗೂ ಮಿಥ್ಯೆಗೂ ವ್ಯತ್ಯಾಸವುಂಟು. ಈ ಜಗತ್ತು ಅಶಾಶ್ವತ. ಆದರೆ ಇನ್ನೊಂದು ಜಗತ್ತಿದೆ. ಅದು ಶಾಶ್ವತ. ಈ ಜಗತ್ತು ದುಃಖಮಯ. ಆದರೆ ಇನ್ನೊಂದು ಜಗತ್ತು ಶಾಶ್ವತ ಮತ್ತು ಆನಂದಮಯ.

ಅರ್ಜುನನು ಒಂದು ಸಾಧುಸ್ವಭಾವದ ರಾಜಕುಟುಂಬದಲ್ಲಿ ಹುಟ್ಟಿದವನು. ಅವನಿಗೂ ಪರಮ ಪ್ರಭುವು, "ನನ್ನ ಭಕ್ತಿಸೇವೆಯನ್ನು ಆರಿಸಿಕೊ ಮತ್ತು ಶೀಘ್ರವಾಗಿ ಭಗವದ್ಧಾಮಕ್ಕೆ ಬಂದುಬಿಡು" ಎಂದು ಹೇಳುತ್ತಾನೆ. ದುಃಖಗಳೇ ತುಂಬಿದ ಈ ಅಶಾಶ್ವತ ಜಗತ್ತಿನಲ್ಲಿ ಯಾರೂ ನಿಲ್ಲಬಾರದು. ಪ್ರತಿಯೊಬ್ಬನೂ ದೇವೋತ್ತಮ ಪರಮ ಪುರುಷನ ಹೃದಯಕ್ಕೆ ತನ್ನನ್ನು ಕೂಡಿಸಿಕೊಳ್ಳಬೇಕು. ಆಗ ಆತನು ಶಾಶ್ವತವಾಗಿ ಸುಖಿಯಾಗಿರಬಹುದು. ಎಲ್ಲ ವರ್ಗಗಳ ಮನುಷ್ಯರ ಎಲ್ಲ ಸಮಸ್ಯೆಗಳನ್ನು ನಿವಾರಿಸಬಲ್ಲ ಒಂದೇ ಒಂದು ಪ್ರಕ್ರಿಯೆ ಎಂದರೆ ಪರಮ ಪ್ರಭುವಿನ ಭಕ್ತಿಸೇವೆ. ಆದುದರಿಂದ ಪ್ರತಿಯೊಬ್ಬನೂ ಕೃಷ್ಣಪ್ರಜ್ಞೆಯನ್ನು ಆರಿಸಿಕೊಂಡು ತನ್ನ ಬದುಕನ್ನು ಪರಿಪೂರ್ಣ ಮಾಡಿಕೊಳ್ಳಬೇಕು.

## ಶ್ಲೋಕ - 34

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ||೩೪||**

**ಮತ್ ಮನಾಃ**—ಸದಾ ನನ್ನನ್ನೇ ಚಿಂತಿಸುವವನು; **ಭವ**—ಆಗು; **ಮತ್**—ನನ್ನ; **ಭಕ್ತಃ**—ಭಕ್ತನು; **ಮತ್**—ನನ್ನ; **ಯಾಜೀ**—ಆರಾಧಕನು; **ಮಾಮ್**—ನನಗೆ; **ನಮಸ್ಕುರು**—ನಮಸ್ಕರಿಸು; **ಮಾಮ್**—ನನ್ನಲ್ಲಿಗೆ; **ಏವ**—ಸಂಪೂರ್ಣವಾಗಿ; **ಏಷ್ಯಸಿ**—ನೀನು ಬರುವೆ; **ಯುಕ್ತ್ವಾ**—ತಲ್ಲೀನನಾಗಿಸಿ; **ಏವಮ್**—ಹೀಗೆ; **ಆತ್ಮಾನಮ್**—ನಿನ್ನ ಆತ್ಮವನ್ನು; **ಮತ್ ಪರಾಯಣಃ**—ನನ್ನಲ್ಲಿ ಭಕ್ತಿಯುಳ್ಳವನಾಗಿ.

## ಅನುವಾದ

**ಸದಾ ನನ್ನನ್ನು ಚಿಂತಿಸುವುದರಲ್ಲಿ ಮನಸ್ಸನ್ನು ತೊಡಗಿಸು, ನನ್ನ ಭಕ್ತನಾಗು, ನನಗೆ ನಮಸ್ಕಾರ ಮಾಡು ಮತ್ತು ನನ್ನನ್ನು ಪೂಜಿಸು. ಆಗ ನನ್ನಲ್ಲಿ ಸಂಪೂರ್ಣವಾಗಿ ಮಗ್ನನಾಗಿ ನಿಶ್ಚಯವಾಗಿಯೂ ನೀನು ನನ್ನಲ್ಲಿಗೆ ಬರುವೆ.**

## ಭಾವಾರ್ಥ

ಕಲ್ಮಷಯುಕ್ತವಾದ ಈ ಐಹಿಕ ಜಗತ್ತಿನ ಕಪಿಮುಷ್ಟಿಯಿಂದ ಪಾರಾಗಬೇಕಾದರೆ ಕೃಷ್ಣಪ್ರಜ್ಞೆಯೊಂದೇ ಮಾರ್ಗ ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ. ಕೆಲವೊಮ್ಮೆ ನೈತಿಕ ಅಳುಕಿಲ್ಲದ ವ್ಯಾಖ್ಯಾನಕಾರರು ಇಲ್ಲಿ ಸ್ಪಷ್ಟವಾಗಿ ಹೇಳಿರುವ ಮಾತಿನ ಅರ್ಥವನ್ನು ಎಂದರೆ ಎಲ್ಲ ಭಕ್ತಿಸೇವೆಯನ್ನೂ ದೇವೋತ್ತಮ ಪರಮ ಪುರುಷನಾದ ಕೃಷ್ಣನಿಗೆ ಅರ್ಪಿಸಬೇಕೆಂಬ ಮಾತಿನ ಅರ್ಥವನ್ನು ತಿರುಚುತ್ತಾರೆ. ದುರದೃಷ್ಟದಿಂದ ನೈತಿಕ ಅಳುಕಿಲ್ಲದ ವ್ಯಾಖ್ಯಾನಕಾರರು ಕಾರ್ಯಸಾಧ್ಯವಲ್ಲದುದರ ಕಡೆಗೆ ಓದುಗನ ಮನಸ್ಸನ್ನು ಎಳೆಯುತ್ತಾರೆ. ಕೃಷ್ಣನ ಮನಸ್ಸಿಗೂ

ಕೃಷ್ಣನಿಗೂ ವ್ಯತ್ಯಾಸವಿಲ್ಲ ಎನ್ನುವುದು ಇಂತಹ ವ್ಯಾಖ್ಯಾನಕಾರರಿಗೆ ತಿಳಿಯದು. ಕೃಷ್ಣನು ಸಾಮಾನ್ಯ ಮನುಷ್ಯನಲ್ಲ; ಆತನು ಪರಿಪೂರ್ಣ ಸತ್ಯ. ಅವನ ದೇಹ, ಮನಸ್ಸು ಮತ್ತು ಸ್ವಯಂ ಆತ್ಮ ಅಭಿನ್ನ ಮತ್ತು ಪರಾತ್ಪರ. ಚೈತನ್ಯಚರಿತಾಮೃತವನ್ನು ಕುರಿತ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿಗಳ ಅನುಭಾಷ್ಯ (ಐದನೆಯ ಅಧ್ಯಾಯ; ಆದಿಲೀಲಾ, ಶ್ಲೋಕಗಳು 41-48) ವ್ಯಾಖ್ಯಾನದಲ್ಲಿ ಉದ್ಧರಿಸಿರುವಂತೆ, ಕೂರ್ಮ ಪುರಾಣದಲ್ಲಿ ಹೀಗೆ ಹೇಳಿದೆ—**ದೇಹದೇಹಿ ವಿಭೇದೋಽಯಂ ನೇಶ್ವರೇ ವಿದ್ಯತೇ ಕ್ವಚಿತ್**. ಹೀಗೆಂದರೆ ಪರಮ ಪ್ರಭು ಕೃಷ್ಣನಿಗೂ ಅವನ ದೇಹಕ್ಕೂ ವ್ಯತ್ಯಾಸವಿಲ್ಲ ಎಂದು ಅರ್ಥ. ಆದರೆ ವ್ಯಾಖ್ಯಾನಕಾರರಿಗೆ ಕೃಷ್ಣವಿಜ್ಞಾನವು ತಿಳಿಯದಿರುವುದರಿಂದ ಅವರು ಕೃಷ್ಣನನ್ನು ಬಚ್ಚಿಟ್ಟು, ಅವನ ವ್ಯಕ್ತಿತ್ವವನ್ನು ಆತನ ಮನಸ್ಸಿನಿಂದ ಅಥವಾ ದೇಹದಿಂದ ಪ್ರತ್ಯೇಕಿಸುತ್ತಾರೆ. ಇದು ಕೃಷ್ಣವಿಜ್ಞಾನದ ಸಂಪೂರ್ಣ ಅಜ್ಞಾನ; ಆದರೂ ಕೆಲವರು ಜನರ ದಾರಿ ತಪ್ಪಿಸಿಯೇ ಲಾಭ ಮಾಡಿಕೊಳ್ಳುತ್ತಾರೆ.

ಕೆಲವರು ರಾಕ್ಷಸೀ ಸ್ವಭಾವದವರಿದ್ದಾರೆ; ಅವರೂ ಕೃಷ್ಣನನ್ನು ಕುರಿತು ಚಿಂತಿಸುತ್ತಾರೆ; ಆದರೆ ಕೃಷ್ಣನ ಸೋದರಮಾವ ಕಂಸನಂತೆ, ಅಸೂಯೆಯಿಂದ ಚಿಂತಿಸುತ್ತಾರೆ. ಕಂಸನೂ ಸದಾ ಕೃಷ್ಣನ ವಿಷಯವನ್ನೇ ಯೋಚಿಸುತ್ತಿದ್ದ. ಕೃಷ್ಣನು ತನ್ನ ಶತ್ರು ಎಂದೇ ಯೋಚಿಸುತ್ತಿದ್ದ. ತನ್ನನ್ನು ಕೊಲ್ಲಲು ಕೃಷ್ಣನು ಬರುವನೇ ಎಂದು ಯೋಚಿಸುತ್ತ ಸದಾ ಆತಂಕದಲ್ಲಿಯೇ ಇರುತ್ತಿದ್ದ. ಇಂತಹ ಯೋಚನೆಯಿಂದ ನಮಗೆ ಸಹಾಯವಾಗುವುದಿಲ್ಲ. ಕೃಷ್ಣನ ವಿಷಯವಾಗಿ ಭಕ್ತಿಪೂರ್ವಕ ಪ್ರೀತಿಯಿಂದ ಯೋಚಿಸುತ್ತಿರಬೇಕು. ಅದೇ ಭಕ್ತಿ. ಕೃಷ್ಣಪ್ರಜ್ಞೆಯನ್ನು ಸದಾ ಬೆಳೆಸಿಕೊಳ್ಳುತ್ತಿರಬೇಕು. ಆ ಅನುಕೂಲಕರ ಬೆಳವಣಿಗೆಯ ಮಾರ್ಗವೇನು? ಅದನ್ನು ಒಬ್ಬ ಅರ್ಹ ಗುರುವಿನಿಂದ ಕಲಿಯಬೇಕು. ಕೃಷ್ಣನು ದೇವೋತ್ತಮ ಪರಮ ಪುರುಷನು; ಆತನ ದೇಹವು ಜಡವಸ್ತುವಿನಿಂದ ಆದದ್ದಲ್ಲ; ಅದು ನಿತ್ಯ ಜ್ಞಾನಾನಂದ ಎಂದು ಹಲವು ಬಾರಿ ವಿವರಿಸಿದ್ದೇವೆ. ಕೃಷ್ಣನನ್ನು ಕುರಿತ ಇಂತಹ ಮಾತು ಮನುಷ್ಯನು ಭಕ್ತನಾಗಲು ನೆರವಾಗುತ್ತದೆ. ತಪ್ಪುಮೂಲದಿಂದ ಕೃಷ್ಣನನ್ನು ಬೇರೆ ರೀತಿಯಲ್ಲಿ ಅರ್ಥಮಾಡಿಕೊಳ್ಳುವುದು ವ್ಯರ್ಥ.

ಆದುದರಿಂದ ಯಾರೇ ಆದರೂ ಕೃಷ್ಣನ ನಿತ್ಯರೂಪದಲ್ಲಿ, ಮೂಲರೂಪದಲ್ಲಿ, ತನ್ನ ಮನಸ್ಸನ್ನು ನಿಲ್ಲಿಸಬೇಕು; ಕೃಷ್ಣನೇ ಪರಮ ಪುರುಷನೆಂಬ ನಿಶ್ಚಲ ನಂಬಿಕೆಯಿಂದ ಅವನ ಪೂಜೆಯಲ್ಲಿ ತೊಡಗಬೇಕು. ಕೃಷ್ಣನ ಪೂಜೆ ಮಾಡಬೇಕೆಂದರೆ ಭಾರತದಲ್ಲಿ ಲಕ್ಷಾಂತರ ದೇವಾಲಯಗಳಿವೆ; ಇವುಗಳಲ್ಲಿ ಭಕ್ತಿಸೇವೆಯು ನಡೆಯುತ್ತದೆ. ಇಂತಹ ಸೇವೆಯು ನಡೆಯುವಾಗ ಕೃಷ್ಣನಿಗೆ ನಮಸ್ಕಾರ ಮಾಡಬೇಕು. ವಿಗ್ರಹದ ಮುಂದೆ ತಲೆಬಾಗಿ ಕಾಯಾ ವಾಚಾ ಮನಸಾ ಎಲ್ಲವನ್ನೂ ನಿರತಗೊಳಿಸಬೇಕು. ಇದರಿಂದ ಮನುಷ್ಯನು ವಿಚಲಿತನಾಗದೆ ಕೃಷ್ಣನಲ್ಲಿ ತನ್ಮಯನಾಗುತ್ತಾನೆ. ಇದರಿಂದ ಅವನು ಕೃಷ್ಣಲೋಕಕ್ಕೆ ಹೋಗಲು ನೆರವಾಗುತ್ತದೆ. ನೈತಿಕ ಅಳುಕಿಲ್ಲದ ವ್ಯಾಖ್ಯಾನಕಾರರು ದಾರಿತಪ್ಪಿಸಲು ಅವಕಾಶ ನೀಡಬಾರದು. ಕೃಷ್ಣನ ವಿಷಯ ಶ್ರವಣ ಮತ್ತು ಸಂಕೀರ್ತನಗಳಿಂದ ಪ್ರಾರಂಭಿಸಿ ಭಕ್ತಿಸೇವೆಯ ಒಂಬತ್ತು ವಿಧಗಳಲ್ಲಿ ತೊಡಗಬೇಕು. ಪರಿಶುದ್ಧ ಭಕ್ತಿಸೇವೆಯು ಮಾನವ ಸಮಾಜದ ಅತ್ಯುನ್ನತ ಸಾಧನೆ.

ಭಗವದ್ಗೀತೆಯ ಏಳನೆಯ ಮತ್ತು ಎಂಟನೆಯ ಅಧ್ಯಾಯಗಳು ಊಹಾತ್ಮಕ ಚಿಂತನೆಯಿಂದ, ಹಠಯೋಗದಿಂದ ಮತ್ತು ಫಲಾಪೇಕ್ಷಿತ ಕರ್ಮಗಳಿಂದ ಮುಕ್ತವಾದ ಪರಿಶುದ್ಧ

ಭಕ್ತಿಸೇವೆಯನ್ನು ವಿವರಿಸಿವೆ. ಪರಮ ಪ್ರಭುವಿನ ನಿರಾಕಾರ ಬ್ರಹ್ಮಜ್ಯೋತಿ ಮತ್ತು ಅಂತರ್ಯಾಮಿ ಪರಮಾತ್ಮ ಇಂತಹ ವಿವಿಧ ಲಕ್ಷಣಗಳು ಸಂಪೂರ್ಣವಾಗಿ ಪರಿಶುದ್ಧರಾಗದವರನ್ನು ಆಕರ್ಷಿಸಬಹುದು. ಆದರೆ ಪರಿಶುದ್ಧ ಭಕ್ತನು ಪರಮ ಪ್ರಭುವಿನ ಸೇವೆಯನ್ನು ನೇರವಾಗಿ ಆರಿಸಿಕೊಳ್ಳುತ್ತಾನೆ.

ದೇವತೆಗಳ ಪೂಜೆಯಲ್ಲಿ ತೊಡಗಿದ ಮನುಷ್ಯನು ಅತ್ಯಂತ ಅವಿವೇಕಿ. ಆತನು ಕೃಷ್ಣನ ಪರಮ ವರವನ್ನು ಎಂದೂ ಪಡೆದುಕೊಳ್ಳಲಾರ ಎಂದು ಸ್ಪಷ್ಟವಾಗಿ ಹೇಳುವ ಒಂದು ಸುಂದರ ಕವನವಿದೆ. ಪ್ರಾರಂಭದಲ್ಲಿ ಕೆಲವೊಮ್ಮೆ ಭಕ್ತನು ಇರಬೇಕಾದ ಮಟ್ಟಕ್ಕೆ ಬರದೇ ಇರಬಹುದು. ಆದರೂ ಅವನು ಎಲ್ಲ ತತ್ವಶಾಸ್ತ್ರಜ್ಞರಿಗಿಂತ ಮತ್ತು ಯೋಗಿಗಳಿಗಿಂತ ಶ್ರೇಷ್ಠ ಎಂದು ಭಾವಿಸಬೇಕು. ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವವನನ್ನು ಪರಿಪೂರ್ಣ ಸಾಧು ಎಂದು ತಿಳಿಯಬೇಕು. ಆತನು ಆಕಸ್ಮಿಕವಾಗಿ ಕೈಗೊಳ್ಳುವ ಭಕ್ತಿರಹಿತ ಚಟುವಟಿಕೆಗಳು ಕಡಮೆಯಾಗುತ್ತವೆ. ಆತನು ಶೀಘ್ರವಾಗಿ ನಿಸ್ಸಂದೇಹವಾಗಿ ಸಂಪೂರ್ಣ ಪರಿಪೂರ್ಣತೆಯಲ್ಲಿ ನೆಲೆಸುತ್ತಾನೆ. ಪರಿಶುದ್ಧ ಭಕ್ತನು ವಾಸ್ತವವಾಗಿ ಪತನಗೊಳ್ಳಲು ಅವಕಾಶವೇ ಇಲ್ಲ. ಏಕೆಂದರೆ ಪರಮ ಪ್ರಭುವು ಅವನ (ಭಗವಂತನ) ಪರಿಶುದ್ಧ ಭಕ್ತರ ಕ್ಷೇಮವನ್ನು ನೋಡಿಕೊಳ್ಳುತ್ತಾನೆ. ಆದುದರಿಂದ ವಿವೇಕಿಯಾದವನು ನೇರವಾಗಿ ಕೃಷ್ಣಪ್ರಜ್ಞೆಯಲ್ಲಿ ತೊಡಗಬೇಕು. ಹೀಗೆ ಮಾಡಿ ಈ ಐಹಿಕ ಜಗತ್ತಿನಲ್ಲಿ ಸುಖವಾಗಿ ಬಾಳಬೇಕು. ಕಡೆಗೆ ಅವನು ಪರಮ ವರವಾದ ಕೃಷ್ಣನನ್ನು ಪಡೆಯುವನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ರಹಸ್ಯತಮ ಜ್ಞಾನ" ಎಂಬ ಒಂಬತ್ತನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 10

# ವಿಭೂತಿ ಯೋಗ

### ಶ್ಲೋಕ - 1

**ಶ್ರೀ ಭಗವಾನುವಾಚ**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ |**
**ಯತ್ತೇऽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ||೧||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಭೂಯಃ**—ಮತ್ತೆ; **ಏವ**—ಖಂಡಿತವಾಗಿಯೂ; **ಮಹಾ ಬಾಹೋ**—ಮಹಾಬಾಹುವೇ; **ಶೃಣು**—ಕೇಳು; **ಮೇ**—ನನ್ನ; **ಪರಮಮ್**—ಪರಮವಾದ; **ವಚಃ**—ಉಪದೇಶವನ್ನು; **ಯತ್**—ಯಾವುದನ್ನು; **ತೇ**—ನಿನಗೆ; **ಅಹಮ್**—ನಾನು; **ಪ್ರೀಯಮಾಣಾಯ**—ನನಗೆ ನೀನು ಪ್ರಿಯನೆಂದು ತಿಳಿದು; **ವಕ್ಷ್ಯಾಮಿ**—ಹೇಳುತ್ತೇನೆ; **ಹಿತ ಕಾಮ್ಯಯಾ**—ನಿನ್ನ ಹಿತಕ್ಕಾಗಿ.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆಂದು ಹೇಳಿದನು—ಮಹಾಬಾಹುವಾದ ಅರ್ಜುನನೆ, ಮತ್ತೆ ಕೇಳು. ನೀನು ನನ್ನ ಪ್ರೀತಿಯ ಸ್ನೇಹಿತನಾದುದರಿಂದ ನಾನು ನಿನಗಾಗಿ ಇನ್ನೂ ಹೇಳುತ್ತೇನೆ; ನಾನು ಆಗಲೇ ವಿವರಿಸಿರುವ ಜ್ಞಾನಕ್ಕಿಂತ ಇನ್ನೂ ಉತ್ತಮವಾದ ಜ್ಞಾನವನ್ನು ನಿನಗೆ ನೀಡುತ್ತೇನೆ.**

### ಭಾವಾರ್ಥ

**ಭಗವಾನ್** ಎನ್ನುವ ಶಬ್ದವನ್ನು ಪರಾಶರ ಮುನಿಗಳು ಹೀಗೆ ವಿವರಿಸಿದ್ದಾರೆ—ಪೂರ್ಣಶಕ್ತಿ, ಪೂರ್ಣಕೀರ್ತಿ, ಐಶ್ವರ್ಯ, ಜ್ಞಾನ, ಸೌಂದರ್ಯ ಮತ್ತು ವೈರಾಗ್ಯ ಈ ಆರು ಸಿರಿಗಳನ್ನು ಪೂರ್ಣವಾಗಿ ಹೊಂದಿರುವವನು ಭಗವಾನ್ ಅಥವಾ ದೇವೋತ್ತಮ ಪರಮ ಪುರುಷ. ಕೃಷ್ಣನು ಈ ಭೂಮಿಯ ಮೇಲಿದ್ದಾಗ ಈ ಆರು ಸಿರಿಗಳನ್ನೂ ಮೆರೆದನು. ಆದುದರಿಂದ ಪರಾಶರ ಮುನಿಗಳಂತಹ ಶ್ರೇಷ್ಠ ಋಷಿಗಳು ಕೃಷ್ಣನನ್ನು ದೇವೋತ್ತಮ ಪರಮ ಪುರುಷ ಎಂದು ಸ್ವೀಕರಿಸಿದ್ದಾರೆ. ಈಗ ಕೃಷ್ಣನು ಅರ್ಜುನನಿಗೆ ತನ್ನ ಸಿರಿಗಳು ಮತ್ತು ಕಾರ್ಯ ಇವುಗಳನ್ನು ಕುರಿತು ಹೆಚ್ಚು ರಹಸ್ಯ ಜ್ಞಾನವನ್ನು ಬೋಧಿಸುತ್ತಿದ್ದಾನೆ. ಹಿಂದೆಯೇ ಏಳನೆಯ ಅಧ್ಯಾಯದಿಂದ ಪ್ರಾರಂಭಿಸಿ ಪರಮ ಪ್ರಭುವು ತನ್ನ ವಿವಿಧ ಶಕ್ತಿಗಳನ್ನೂ ಅವು ಹೇಗೆ ಕಾರ್ಯಪ್ರವೃತ್ತವಾಗುತ್ತವೆ ಎನ್ನುವುದನ್ನೂ ವಿವರಿಸಿದ್ದಾನೆ. ಈಗ ಈ ಅಧ್ಯಾಯದಲ್ಲಿ ತನ್ನ ನಿರ್ದಿಷ್ಟ ಸಿರಿಗಳನ್ನು ಅರ್ಜುನನಿಗೆ ವಿವರಿಸುತ್ತಾನೆ. ಹಿಂದಿನ ಅಧ್ಯಾಯದಲ್ಲಿ ಆತನು ಭಕ್ತಿಯನ್ನು ಸ್ಥಿರವಾದ ನಂಬಿಕೆಯಲ್ಲಿ ನೆಲೆಗೊಳಿಸಲು ತನ್ನ ವಿವಿಧ ಶಕ್ತಿಗಳನ್ನು ವಿವರಿಸಿದ್ದಾನೆ. ಈ ಅಧ್ಯಾಯದಲ್ಲಿ ಆತನು ಅರ್ಜುನನಿಗೆ ತನ್ನ ಅಭಿವ್ಯಕ್ತಿಗಳನ್ನೂ ವಿವಿಧ ಸಿರಿಗಳನ್ನೂ ಕುರಿತು ಮತ್ತೆ ಹೇಳುತ್ತಾನೆ. ಪರಮ ಪ್ರಭುವನ್ನು ಕುರಿತು ಕೇಳಿದಷ್ಟೂ

ಮನುಷ್ಯನು ಭಕ್ತಿಸೇವೆಯಲ್ಲಿ ಸ್ಥಿರನಾಗುತ್ತಾನೆ. ಮನುಷ್ಯನು ಯಾವಾಗಲೂ ಪ್ರಭುವಿನ ವಿಷಯವನ್ನು ಭಕ್ತರ ಸಹವಾಸದಲ್ಲಿ ಕೇಳಬೇಕು. ಅದು ಅವನ ಭಕ್ತಿಸೇವೆಯನ್ನು ಹೆಚ್ಚಿಸುತ್ತದೆ. ಭಕ್ತರ ಸಹವಾಸದಲ್ಲಿ ಕೃಷ್ಣಪ್ರಜ್ಞೆಯಲ್ಲಿರಲು ನಿಜವಾಗಿ ಕಾತರರಾಗಿರುವವರ ಮಧ್ಯೆ ಮಾತ್ರ ಪ್ರವಚನಗಳು ನಡೆಯಲು ಸಾಧ್ಯ. ಇತರರು ಇಂತಹ ಪ್ರವಚನಗಳಲ್ಲಿ ಭಾಗವಹಿಸಲಾರರು. ಅರ್ಜುನನು ತನಗೆ ತುಂಬ ಪ್ರಿಯನಾದವನಾದ್ದರಿಂದ ಅವನ ಪ್ರಯೋಜನಕ್ಕಾಗಿ ಇಂತಹ ಪ್ರವಚನಗಳು ನಡೆಯುತ್ತಿವೆ ಎಂದು ಪ್ರಭುವು ಅರ್ಜುನನಿಗೆ ಸ್ಪಷ್ಟವಾಗಿ ಹೇಳುತ್ತಾನೆ.

## ಶ್ಲೋಕ - 2

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ |**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ||೨||**

**ನ**—ಎಂದಿಗೂ ಇಲ್ಲ; **ಮೇ**—ನನ್ನ; **ವಿದುಃ**—ತಿಳಿಯುತ್ತಾರೆ; **ಸುರ ಗಣಾಃ**—ದೇವತೆಗಳು; **ಪ್ರಭವಮ್**—ಮೂಲವನ್ನು; ಐಶ್ವರ್ಯವನ್ನು; **ನ**—ಎಂದಿಗೂ ಇಲ್ಲ; **ಮಹಾ ಋಷಯಃ**—ಮಹರ್ಷಿಗಳು; **ಅಹಮ್**—ನಾನು ಆಗಿದ್ದೇನೆ; **ಆದಿಃ**—ಮೂಲವು; **ಹಿ**—ಖಂಡಿತವಾಗಿಯೂ; **ದೇವಾನಾಮ್**—ದೇವತೆಗಳ; **ಮಹಾ ಋಷೀಣಾಮ್**—ಮಹರ್ಷಿಗಳ; **ಚ**—ಕೂಡ; **ಸರ್ವಶಃ**—ಎಲ್ಲ ವಿಧಗಳಲ್ಲಿ.

## ಅನುವಾದ

**ದೇವತೆಗಳಾಗಲೀ ಮಹರ್ಷಿಗಳಾಗಲೀ ನನ್ನ ಮೂಲವನ್ನಾಗಲೀ ಸಿರಿಯನ್ನಾಗಲೀ ಅರಿಯರು. ಏಕೆಂದರೆ, ಎಲ್ಲ ರೀತಿಗಳಲ್ಲಿಯೂ ನಾನೇ ದೇವತೆಗಳಿಗೆ ಮತ್ತು ಮಹರ್ಷಿಗಳಿಗೆ ಮೂಲನು.**

## ಭಾವಾರ್ಥ

ಬ್ರಹ್ಮಸಂಹಿತೆಯಲ್ಲಿ ಹೇಳಿದಂತೆ ಶ್ರೀಕೃಷ್ಣನೇ ಪರಮ ಪ್ರಭು. ಅವನಿಗಿಂತ ಶ್ರೇಷ್ಠರು ಯಾರೂ ಇಲ್ಲ. ಅವನು ಎಲ್ಲ ಕಾರಣಗಳ ಕಾರಣನು. ಇಲ್ಲಿ ಸ್ವಯಂ ಪ್ರಭುವೇ ತಾನು ಎಲ್ಲ ದೇವತೆಗಳ ಮತ್ತು ಋಷಿಗಳ ಮೂಲನು ಎಂದು ಹೇಳಿದ್ದಾನೆ. ಅವರಿಗೆ ಅವನ ನಾಮವಾಗಲೀ ಅವನ ವ್ಯಕ್ತಿತ್ವವಾಗಲೀ ಅರ್ಥವಾಗುವುದಿಲ್ಲ. ಅವರಿಗೇ ಹೀಗಾದರೆ ಈ ಸಣ್ಣಲೋಕದಲ್ಲಿ ವಿದ್ವಾಂಸರು ಎನ್ನಿಸಿಕೊಳ್ಳುವವರ ಸ್ಥಿತಿಯೇನು? ಈ ಪರಮ ಪುರುಷನು ಸಾಮಾನ್ಯ ಮನುಷ್ಯನಂತೆ ಭೂಮಿಗೆ ಬಂದು ಇಂತಹ ಆಶ್ಚರ್ಯಕರ, ಅಸಾಧಾರಣ ಕಾರ್ಯಗಳನ್ನು ಏಕೆ ನಡೆಸುತ್ತಾನೆ ಎಂದು ಯಾರಿಗೂ ತಿಳಿಯದು. ಆದುದರಿಂದ ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಅಗತ್ಯವಾದ ಅರ್ಹತೆ ಪಾಂಡಿತ್ಯವಲ್ಲ ಎಂದು ತಿಳಿದುಕೊಳ್ಳಬೇಕು. ದೇವತೆಗಳು ಮತ್ತು ಮಹರ್ಷಿಗಳು ಸಹ ತಮ್ಮ ಊಹಾತ್ಮಕ ಚಿಂತನೆಯಿಂದ ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ವಿಫಲರಾಗಿದ್ದಾರೆ. ಮಹಾನ್ ದೇವತೆಗಳೂ ಸಹ ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಸಮರ್ಥರಲ್ಲ ಎಂದು ಶ್ರೀಮದ್ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿದೆ. ತಮ್ಮ ಅಪರಿಪೂರ್ಣ ಇಂದ್ರಿಯಗಳು ಎಷ್ಟುದೂರ ಓಡಬಲ್ಲವೋ ಅಷ್ಟು ಊಹಿಸಿ ಅವರು ನಿರಾಕಾರದ

ವಿರುದ್ಧ ನಿರ್ಣಯಕ್ಕೆ ಬರಬಹುದು ಅಥವಾ ಐಹಿಕ ಪ್ರಕೃತಿಯ ತ್ರಿಗುಣಗಳಿಂದ ಪ್ರಕಟವಾಗದ ಏನೋ ಒಂದನ್ನು ಕಲ್ಪಿಸಿಕೊಳ್ಳಬಹುದು. ಇಲ್ಲವೇ, ಅವರು ಊಹಾತ್ಮಕ ಚಿಂತನೆಯಿಂದ ಏನನ್ನೋ ಕಲ್ಪಿಸಿಕೊಳ್ಳಬಹುದು. ಆದರೆ ಇಂತಹ ದಡ್ಡ ಊಹಾಪೋಹಗಳಿಂದ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ.

ಯಾರಿಗಾದರೂ ಪರಿಪೂರ್ಣ ಸತ್ಯವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿದ್ದರೆ, "ದೇವೋತ್ತಮ ಪರಮ ಪುರುಷನಾಗಿ ನಾನು ಇಲ್ಲಿದ್ದೇನೆ, ನಾನೇ ಪರಮ ಪುರುಷನು", ಎಂದು ಇಲ್ಲಿ ಪ್ರಭುವು ಪರೋಕ್ಷವಾಗಿ ಹೇಳುತ್ತಾನೆ — ಇದನ್ನು ತಿಳಿದುಕೊಳ್ಳಬೇಕು. ವ್ಯಕ್ತಿಯಾಗಿ ಇರುವ ಊಹಾತೀತ ಪ್ರಭುವನ್ನು ಮನುಷ್ಯನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲದಿದ್ದರೂ ಪ್ರಭುವು ಇದ್ದಾನೆ. ಭಗವದ್ಗೀತೆಯಲ್ಲಿ ಮತ್ತು ಶ್ರೀಮದ್ಭಾಗವತದಲ್ಲಿ ಅವನು ಆಡುವ ಮಾತುಗಳನ್ನು ಅಧ್ಯಯನ ಮಾಡಿದರೆ ಸಾಕು, ನಿತ್ಯನೂ ಜ್ಞಾನಾನಂದಪೂರ್ಣನೂ ಆದ ಕೃಷ್ಣನನ್ನು ನಾವು ಅರ್ಥಮಾಡಿಕೊಳ್ಳಬಹುದು. ದೇವರು ಆಳುವ ಒಂದು ಶಕ್ತಿ ಅಥವಾ ನಿರಾಕಾರ ಬ್ರಹ್ಮನ್ ಎನ್ನುವ ಪರಿಕಲ್ಪನೆಯನ್ನು ಭಗವಂತನ ಕೆಳಮಟ್ಟದ ಶಕ್ತಿಯಲ್ಲಿ ಇರುವವರು ಮುಟ್ಟಬಹುದು. ಆದರೆ ಆಧ್ಯಾತ್ಮಿಕ ಸ್ಥಿತಿಯಲ್ಲಿ ಇಲ್ಲದಿದ್ದರೆ ಮನುಷ್ಯನು ದೇವೋತ್ತಮ ಪುರುಷನನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಬಹುಮಂದಿಗೆ ಅವನ ವಾಸ್ತವಿಕ ಸ್ಥಿತಿಯಲ್ಲಿ ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ತನ್ನ ನಿಷ್ಕಾರಣ ಕರುಣೆಯಿಂದಾಗಿ ಆತನು ಹೀಗೆ ಊಹೆಗಳನ್ನು ಮಾಡುವವರಿಗೆ ಕೃಪೆಮಾಡಲು ಇಳಿದು ಬರುತ್ತಾನೆ. ಪರಮ ಪ್ರಭುವಿನ ಕಾರ್ಯಗಳು ಅಸಾಧಾರಣವಾದವು. ಆದರೂ ಐಹಿಕಶಕ್ತಿಯ ಕಲ್ಮಷ ಸಂಪರ್ಕದಿಂದಾಗಿ ಊಹಾಪೋಹ ಮಾಡುವವರು ನಿರಾಕಾರ ಬ್ರಹ್ಮನ್‌ನೇ ಪರಮನು ಎಂದು ಯೋಚಿಸುತ್ತಾರೆ. ಪರಮ ಪ್ರಭುವಿಗೆ ಸಂಪೂರ್ಣವಾಗಿ ಶರಣಾಗತರಾದ ಭಕ್ತರು ಮಾತ್ರ ಪರಮ ಪುರುಷನ ಕೃಪೆಯಿಂದ ಅವನು ಕೃಷ್ಣ ಎಂದು ಅರ್ಥಮಾಡಿಕೊಳ್ಳಬಲ್ಲರು. ಪ್ರಭುವಿನ ಭಕ್ತರು ದೇವರು ನಿರಾಕಾರಬ್ರಹ್ಮ ಎನ್ನುವ ಪರಿಕಲ್ಪನೆಯನ್ನು ಗಮನಕ್ಕೇ ತಂದುಕೊಳ್ಳುವುದಿಲ್ಲ. ಅವರ ಶ್ರದ್ಧಾಭಕ್ತಿಗಳು ಅವರು ಕೂಡಲೇ ಪರಮ ಪ್ರಭುವಿಗೆ ಶರಣಾಗತರಾಗುವಂತೆ ಮಾಡುತ್ತವೆ. ಕೃಷ್ಣನ ನಿಷ್ಕಾರಣ ದಯೆಯಿಂದಾಗಿ ಅವರು ಕೃಷ್ಣನನ್ನು ಅರ್ಥಮಾಡಿಕೊಳ್ಳಬಲ್ಲರು. ಬೇರೆ ಯಾರೂ ಆತನನ್ನು ಅರಿಯಲಾರರು. ಮಹರ್ಷಿಗಳು ಸಹ ಇದನ್ನು ಒಪ್ಪುತ್ತಾರೆ. ಆತ್ಮ ಯಾವುದು, ಪರಮ ಯಾವುದು? ನಾವು ಪೂಜಿಸಬೇಕಾದದ್ದು ಆತನನ್ನು.

## ಶ್ಲೋಕ - 3

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ |**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ||೩||**

**ಯಃ**—ಯಾರು; **ಮಾಮ್**—ನನ್ನನ್ನು; **ಅಜಮ್**—ಜನ್ಮ ರಹಿತನು; **ಅನಾದಿಮ್**—ಆದಿಯಿಲ್ಲದವನು; **ಚ**—ಕೂಡ; **ವೇತ್ತಿ**—ತಿಳಿಯುತ್ತಾನೋ; **ಲೋಕ**—ಲೋಕಗಳ; **ಮಹಾ ಈಶ್ವರಮ್**—ಪರಮ ಪ್ರಭುವಾದ; **ಅಸಮ್ಮೂಢಃ**—ಭ್ರಾಂತನಾಗದೆ; **ಸಃ**—ಅವನು; **ಮರ್ತ್ಯೇಷು**—ಮರಣಕ್ಕೆ ಒಳಪಟ್ಟವರಲ್ಲಿ; **ಸರ್ವ ಪಾಪೈಃ**—ಸಮಸ್ತ ಪಾಪಗಳಿಂದ; **ಪ್ರಮುಚ್ಯತೇ**—ಬಿಡುಗಡೆ

ಪಡೆಯುತ್ತಾನೆ.

## ಅನುವಾದ

**ಯಾರು ನನ್ನನ್ನು ಜನ್ಮವಿಲ್ಲದವನು, ಅನಾದಿ ಮತ್ತು ಎಲ್ಲ ಲೋಕಗಳ ಪರಮ ಪ್ರಭು ಎಂದು ಅರಿಯುತ್ತಾನೆಯೋ ಅವನು ಮಾತ್ರ, ಮನುಷ್ಯರಲ್ಲಿ ಭ್ರಾಂತಿಯಿಲ್ಲದವನಾಗಿ, ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.**

## ಭಾವಾರ್ಥ

ಏಳನೆಯ ಅಧ್ಯಾಯದಲ್ಲಿ ಹೇಳಿರುವಂತೆ (7.3) **ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ** — ತಮ್ಮನ್ನು ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಏರಿಸಿಕೊಳ್ಳಲು ಪ್ರಯತ್ನಿಸುತ್ತಿರುವವರು ಸಾಮಾನ್ಯ ಮನುಷ್ಯರಲ್ಲ; ಆಧ್ಯಾತ್ಮಿಕ ಸಾಕ್ಷಾತ್ಕಾರದ ತಿಳುವಳಿಕೆಯಿಲ್ಲದ ಲಕ್ಷಾಂತರ ಮಂದಿಗಿಂತ ಅವರು ಶ್ರೇಷ್ಠರು. ತಮ್ಮ ಆಧ್ಯಾತ್ಮಿಕ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ವಾಸ್ತವವಾಗಿ ಪ್ರಯತ್ನಿಸುತ್ತಿರುವವರಲ್ಲಿ ಕೃಷ್ಣನು ದೇವೋತ್ತಮ ಪರಮ ಪುರುಷ, ಎಲ್ಲದರ ಒಡೆಯ, ಅವನಿಗೆ ಹುಟ್ಟಿಲ್ಲ ಎನ್ನುವ ತಿಳುವಳಿಕೆಯನ್ನು ಪಡೆಯುವವನೇ ಅತ್ಯಂತ ಯಶಸ್ವಿಯಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆದವನು. ಈ ಹಂತದಲ್ಲಿ ಮಾತ್ರ, ಕೃಷ್ಣನ ಪರಮ ಸ್ಥಾನವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡವನು ಎಲ್ಲ ಪಾಪ ಪ್ರತಿಕ್ರಿಯೆಗಳಿಂದ ಸಂಪೂರ್ಣವಾಗಿ ಬಿಡುಗಡೆಯಾಗುತ್ತಾನೆ.

ಇಲ್ಲಿ ಪ್ರಭುವನ್ನು **ಅಜ** ಎಂದು ವರ್ಣಿಸಿದೆ; ಹೀಗೆಂದರೆ ಹುಟ್ಟು ಇಲ್ಲದವನು. ಆದರೆ ಅವನು ಅಜ ಎಂದು ಎರಡನೆಯ ಅಧ್ಯಾಯದಲ್ಲಿ ವರ್ಣಿಸಿದ ಜೀವಿಗಳಿಗಿಂತ ಭಿನ್ನನು. ಐಹಿಕ ಮೋಹದಿಂದಾಗಿ ಹುಟ್ಟಿ ಸಾಯುತ್ತಿರುವ ಜೀವಿಗಳಿಗಿಂತ ಪ್ರಭುವು ಬೇರೆಯಾದವನು. ಬದ್ಧ ಆತ್ಮರು ತಮ್ಮ ದೇಹಗಳನ್ನು ಬದಲಾಯಿಸುತ್ತಿರುತ್ತಾರೆ. ಆದರೆ ಅವನ ದೇಹವು ಬದಲಾಗುವಂತಿಲ್ಲ. ಈ ಐಹಿಕ ಲೋಕಕ್ಕೆ ಬಂದಾಗಲೂ ಅವನು ಹುಟ್ಟು ಇಲ್ಲದವನಾಗಿಯೇ ಬರುತ್ತಾನೆ. ಆದುದರಿಂದ ತನ್ನ ಅಂತರಂಗ ಶಕ್ತಿಯಿಂದ ಪ್ರಭುವು ಕೆಳಮಟ್ಟದ, ಐಹಿಕ ಶಕ್ತಿಯ ಅಧೀನನಲ್ಲ, ಅವನು ಯಾವಾಗಲೂ ಮೇಲಿನ ಶಕ್ತಿಯಲ್ಲಿಯೇ ಇರುತ್ತಾನೆ ಎಂದು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದೆ.

ಈ ಶ್ಲೋಕದಲ್ಲಿ **ವೇತ್ತಿ ಲೋಕಮಹೇಶ್ವರಮ್** ಎನ್ನುವ ಮಾತುಗಳು, ಪ್ರಭು ಕೃಷ್ಣನು ವಿಶ್ವದ ಗ್ರಹವ್ಯೂಹಗಳ ಪರಮ ಒಡೆಯ ಎನ್ನುವುದನ್ನು ಸೂಚಿಸುತ್ತವೆ. ಆತನು ಸೃಷ್ಟಿಗೆ ಮೊದಲೇ ಇದ್ದವನು; ಸೃಷ್ಟಿಯಿಂದ ಬೇರೆಯಾದವನು. ಎಲ್ಲ ದೇವತೆಗಳೂ ಈ ಐಹಿಕ ಜಗತ್ತಿನಲ್ಲಿ ಸೃಷ್ಟಿಯಾದವರು, ಆದರೆ ಕೃಷ್ಣನು ಸೃಷ್ಟಿಯಾಗಲಿಲ್ಲ ಎಂದು ಹೇಳಿದೆ. ಆದುದರಿಂದ ಕೃಷ್ಣನು ಬ್ರಹ್ಮ ಮತ್ತು ಶಿವನಂತಹ ಮಹಾನ್ ದೇವತೆಗಳಿಗಿಂತ ಭಿನ್ನನಾದವನು. ಆತನು ಬ್ರಹ್ಮನ, ಶಿವನ ಮತ್ತು ಇತರ ದೇವತೆಗಳ ಸೃಷ್ಟಿಕರ್ತನಾದುದರಿಂದ ಎಲ್ಲ ಲೋಕಗಳಲ್ಲಿ ಪರಮ ಪುರುಷನು.

ಕೃಷ್ಣನು ಸೃಷ್ಟಿಯಾದ ಎಲ್ಲದರಿಂದ ಭಿನ್ನನು. ಹೀಗೆ ಅವನನ್ನು ಅರಿತವರು ಕೂಡಲೇ

ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ. ಪರಮ ಪ್ರಭುವಿನ ಜ್ಞಾನವನ್ನು ಪಡೆಯಲು ಮನುಷ್ಯನು ಎಲ್ಲ ಪಾಪಗಳಿಂದ ಮುಕ್ತನಾಗಿರಬೇಕು. ಭಗವದ್ಗೀತೆಯಲ್ಲಿ ಹೇಳಿದಂತೆ, ಭಕ್ತಿಸೇವೆಯಿಂದ ಮಾತ್ರ ಅವನನ್ನು ತಿಳಿಯಲು ಸಾಧ್ಯ. ಬೇರಾವ ಮಾರ್ಗವೂ ಇಲ್ಲ.

ಕೃಷ್ಣನನ್ನು ಮನುಷ್ಯನೆಂದು ಭಾವಿಸಿ ಅವನನ್ನು ಅರಿಯಲು ಪ್ರಯತ್ನಿಸಬಾರದು. ಆಗಲೇ ಹೇಳಿದಂತೆ, ಮೂಢನಾದವನು ಮಾತ್ರ ಅವನೊಬ್ಬ ಮನುಷ್ಯ ಎಂದು ಯೋಚಿಸುತ್ತಾನೆ. ಇದನ್ನು ಇಲ್ಲಿ ಬೇರೊಂದು ರೀತಿಯಲ್ಲಿ ಹೇಳಿದೆ. ಮೂಢನಲ್ಲದವನು, ಭಗವಂತನ ಸಹಜ ಸ್ವರೂಪವನ್ನು ಅರಿಯುವಷ್ಟು ಬುದ್ಧಿವಂತನಾದವನು, ಯಾವಾಗಲೂ ಪಾಪಗಳಿಂದ ಮುಕ್ತನಾಗಿರುತ್ತಾನೆ.

ಕೃಷ್ಣನು ದೇವಕಿಯ ಮಗನೆಂದು ಜನ ತಿಳಿದಿದ್ದರೆ, ಅವನು ಹುಟ್ಟು ಇಲ್ಲದಿರುವವನು ಹೇಗೆ? ಇದಕ್ಕೂ ಶ್ರೀಮದ್ಭಾಗವತದಲ್ಲಿ ಉತ್ತರವಿದೆ. ಅವನು ದೇವಕಿ ಮತ್ತು ವಸುದೇವರಿಗೆ ಕಾಣಿಸಿಕೊಂಡಾಗ ಸಾಮಾನ್ಯ ಮಗುವಿನಂತೆ ಹುಟ್ಟಲಿಲ್ಲ; ತನ್ನ ಮೂಲ ಸ್ವರೂಪದಲ್ಲಿ ಕಾಣಿಸಿಕೊಂಡ. ಅನಂತರ ಸಾಮಾನ್ಯ ಮಗುವಾಗಿ ರೂಪವನ್ನು ಮಾರ್ಪಡಿಸಿಕೊಂಡ.

ಕೃಷ್ಣನ ಆದೇಶದಂತೆ ಮಾಡಿದುದೆಲ್ಲ ಆಧ್ಯಾತ್ಮಿಕವೇ. ಅದಕ್ಕೆ ಐಹಿಕ ಪ್ರತಿಕ್ರಿಯೆಗಳ ಕಲ್ಮಷ ಸೋಂಕಬಾರದು. ಈ ಪ್ರಕ್ರಿಯೆಗಳು ಶುಭಕರವಾಗಿರಬಹುದು, ಅಶುಭಕರವಾಗಿರಬಹುದು. ಐಹಿಕ ಜಗತ್ತಿನಲ್ಲಿ ಶುಭಕರವಾದ ಮತ್ತು ಅಶುಭಕರವಾದ ಸಂಗತಿಗಳಿರುತ್ತವೆ ಎನ್ನುವುದು ಸ್ವಲ್ಪ ಹೆಚ್ಚು ಕಡಮೆ ಮನಸ್ಸಿನ ಮಿಥ್ಯಾಸೃಷ್ಟಿ. ಐಹಿಕ ಜಗತ್ತಿನಲ್ಲಿ ಶುಭಕರವಾದದ್ದು ಎನ್ನುವುದೇ ಇಲ್ಲ. ಎಲ್ಲ ಅಶುಭಕರವೇ. ಏಕೆಂದರೆ ಐಹಿಕ ಜಗತ್ತೇ ಅಶುಭಕರವಾದದ್ದು. ಅದು ಶುಭಕರ ಎಂದು ನಾವು ಕಲ್ಪಿಸಿಕೊಳ್ಳುತ್ತೇವೆ ಅಷ್ಟೇ. ನಿಜವಾದ ಶುಭವು ಸಂಪೂರ್ಣ ಭಕ್ತಿ ಮತ್ತು ಸೇವೆಗಳಲ್ಲಿ ಕೃಷ್ಣಪ್ರಜ್ಞೆಯಲ್ಲಿ ನಡೆಸುವ ಕಾರ್ಯಗಳನ್ನು ಅವಲಂಬಿಸಿರುತ್ತದೆ. ಆದುದರಿಂದ ನಮ್ಮ ಕಾರ್ಯಗಳು ಶುಭಕರವಾಗಿರಬೇಕೆಂದು ನಾವು ಬಯಸುವುದೇ ಆದಲ್ಲಿ ನಾವು ಪರಮ ಪ್ರಭುವಿನ ಆದೇಶದಂತೆ ಕೆಲಸ ಮಾಡಬೇಕು. ಇಂತಹ ಆದೇಶಗಳನ್ನು ಶ್ರೀಮದ್ಭಾಗವತ ಮತ್ತು ಭಗವದ್ಗೀತೆಗಳಂತಹ ಪ್ರಮಾಣ ಗ್ರಂಥಗಳು ಅಥವಾ ಅರ್ಹ ಗುರುವು ಕೊಡಲು ಸಾಧ್ಯ. ಗುರುವು ಪರಮ ಪ್ರಭುವಿನ ಪ್ರತಿನಿಧಿಯಾದದ್ದರಿಂದ ಆತನ ನಿರ್ದೇಶನವು ನೇರವಾಗಿ ಪರಮ ಪ್ರಭುವಿನ ನಿರ್ದೇಶನವೇ. ಗುರುವೂ, ಸಾಧುಗಳೂ, ಧಾರ್ಮಿಕ ಗ್ರಂಥಗಳೂ ಒಂದೇ ದಾರಿಯಲ್ಲಿ ಕರೆದೊಯ್ಯುತ್ತವೆ. ಈ ಮೂರು ಮೂಲಗಳಲ್ಲಿ ಪರಸ್ಪರ ವಿರೋಧವಿಲ್ಲ. ಇಂತಹ ನಿರ್ದೇಶನಗಳಿಗೆ ಅನುಗುಣವಾಗಿ ಮಾಡಿದ ಕ್ರಿಯೆಗಳೆಲ್ಲ ಈ ಐಹಿಕ ಜಗತ್ತಿನ ಪಾಪ-ಪುಣ್ಯ ಫಲಗಳಿಂದ ಮುಕ್ತವಾದವು. ಚಟುವಟಿಕೆಗಳನ್ನು ನಿರ್ವಹಿಸುವಾಗ ಭಕ್ತನ ಆಧ್ಯಾತ್ಮಿಕ ನಿಲುವು ವಾಸ್ತವವಾಗಿ ಸನ್ಯಾಸದ ನಿಲುವು. ಇದನ್ನು ಸನ್ಯಾಸ ಎಂದು ಕರೆಯುತ್ತಾರೆ. ಭಗವದ್ಗೀತೆಯ ಆರನೆಯ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಹೇಳಿರುವಂತೆ, ಪರಮ ಪ್ರಭುವಿನ ಅಪ್ಪಣೆಯಂತೆ ಕರ್ತವ್ಯವೆಂದು ಕಾರ್ಯಮಾಡುವ, ಮತ್ತು ಕರ್ಮಫಲಗಳಲ್ಲಿ ಆಶ್ರಯವನ್ನು ಬಯಸದ (**ಅನಾಶ್ರಿತಃ ಕರ್ಮಫಲಮ್**) ಮನುಷ್ಯನು ನಿಜವಾದ ಸನ್ಯಾಸಿ. ಪರಮ ಪ್ರಭುವಿನ ಆದೇಶದಂತೆ ಕೆಲಸ ಮಾಡುವವನು ನಿಜವಾದ ಸನ್ಯಾಸಿ ಮತ್ತು ನಿಜವಾದ ಯೋಗಿ. ಸನ್ಯಾಸಿಯ ಉಡುಪನ್ನು ಧರಿಸಿದ ಮಾತ್ರಕ್ಕೇ ಅಥವಾ ಹುಸಿ ಯೋಗಿಯಾದ ಮಾತ್ರಕ್ಕೇ ಸನ್ಯಾಸಿಯಾಗುವುದಿಲ್ಲ.

## ಶ್ಲೋಕ 4-5

**ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥೪॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥೫॥**

**ಬುದ್ಧಿಃ**—ಬುದ್ಧಿಯು; **ಜ್ಞಾನಮ್**—ಜ್ಞಾನವು; **ಅಸಮ್ಮೋಹಃ**—ಸಂಶಯದಿಂದ ಮುಕ್ತಿಯು; **ಕ್ಷಮಾ**—ಕ್ಷಮಾಗುಣವು; **ಸತ್ಯಮ್**—ಸತ್ಯವು; **ದಮಃ**—ಇಂದ್ರಿಯಗಳ ನಿಗ್ರಹವು; **ಶಮಃ**—ಮನಸ್ಸಿನ ನಿಗ್ರಹವು; **ಸುಖಮ್**—ಸುಖವು; **ದುಃಖಮ್**—ದುಃಖವು; **ಭವಃ**—ಹುಟ್ಟು; **ಅಭಾವಃ**—ಸಾವು; **ಭಯಮ್**—ಭೀತಿಯು; **ಚ**—ಕೂಡ; **ಅಭಯಮ್**—ನಿರ್ಭೀತಿಯು; **ಏವ**—ಕೂಡ; **ಚ**—ಮತ್ತು; **ಅಹಿಂಸಾ**—ಅಹಿಂಸೆಯು; **ಸಮತಾ**—ಸಮಾನತೆಯು; **ತುಷ್ಟಿಃ**—ತೃಪ್ತಿಯು; **ತಪಃ**—ತಪಸ್ಸು; **ದಾನಮ್**—ದಾನವು; **ಯಶಃ**—ಕೀರ್ತಿಯು; **ಅಯಶಃ**—ಅಪಕೀರ್ತಿಯು; **ಭವಂತಿ** —ಉಂಟಾಗುತ್ತವೆ; **ಭಾವಾಃ**—ಸ್ವಭಾವಗಳು; **ಭೂತಾನಾಮ್**—ಜೀವಿಗಳ; **ಮತ್ತಃ**—ನನ್ನಿಂದ; **ಏವ**— ಖಂಡಿತವಾಗಿಯೂ; **ಪೃಥಕ್ ವಿಧಾಃ**—ವಿಧವಿಧವಾಗಿ ವ್ಯವಸ್ಥೆ ಮಾಡಲಾದ.

## ಅನುವಾದ

**ಬುದ್ಧಿ, ಜ್ಞಾನ, ಸಂದೇಹ ಮತ್ತು ಭ್ರಾಂತಿಗಳಿಂದ ಬಿಡುಗಡೆ, ಕ್ಷಮೆ, ಸತ್ಯ, ಇಂದ್ರಿಯನಿಗ್ರಹ, ಮನೋನಿಗ್ರಹ, ಸುಖದುಃಖಗಳು, ಹುಟ್ಟು, ಸಾವು, ಭಯ, ನಿರ್ಭಯ, ಅಹಿಂಸೆ, ಸಮಚಿತ್ತತೆ, ತುಷ್ಟಿ, ತಪಸ್ಸು, ದಾನ, ಕೀರ್ತಿ ಮತ್ತು ಅಪಕೀರ್ತಿ — ಜೀವಿಗಳ ಈ ಎಲ್ಲ ಗುಣಗಳನ್ನೂ ಸೃಷ್ಟಿಸಿದವನು ನಾನೊಬ್ಬನೇ.**

## ಭಾವಾರ್ಥ

ಜೀವಿಗಳ ಗುಣಗಳು ಒಳ್ಳೆಯವಾಗಿರಲಿ ಕೆಟ್ಟವಾಗಿರಲಿ, ಎಲ್ಲವನ್ನೂ ಸೃಷ್ಟಿಸಿದವನು ಕೃಷ್ಣನೇ. ಅವುಗಳನ್ನು ಇಲ್ಲಿ ವರ್ಣಿಸಿದೆ.

ಬುದ್ಧಿ ಎಂದರೆ ವಿಷಯಗಳನ್ನು ಸರಿಯಾದ ದೃಷ್ಟಿಯಿಂದ ವಿಶ್ಲೇಷಣೆ ಮಾಡುವ ಶಕ್ತಿ. ಜ್ಞಾನ ಎಂದರೆ ಚೇತನ ಯಾವುದು, ಜಡವಸ್ತು ಯಾವುದು ಎನ್ನುವುದಕ್ಕೆ ಸಂಬಂಧಿಸಿದ್ದು. ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸದಿಂದ ಪಡೆದುಕೊಂಡ ಸಾಮಾನ್ಯ ಜ್ಞಾನವು ಜಡವಸ್ತುವಿಗೆ ಸಂಬಂಧಿಸಿದ್ದು; ಅದನ್ನು ಜ್ಞಾನ ಎಂದು ಇಲ್ಲಿ ಒಪ್ಪುವುದಿಲ್ಲ. ಜ್ಞಾನ ಎಂದರೆ ಚೇತನ ಮತ್ತು ಜಡವಸ್ತುಗಳ ನಡುವಣ ವ್ಯತ್ಯಾಸದ ತಿಳಿವಳಿಕೆ. ಆಧುನಿಕ ವಿದ್ಯಾಭ್ಯಾಸದಲ್ಲಿ ಚೇತನಕ್ಕೆ ಸಂಬಂಧಿಸಿದಂತೆ ತಿಳಿವಳಿಕೆ ಇಲ್ಲ; ಭೌತಿಕ ಮೂಲಾಂಶಗಳು ಮತ್ತು ದೈಹಿಕ ಅಗತ್ಯಗಳು — ಇವುಗಳಿಗಷ್ಟೇ ಗಮನ ಕೊಡಲಾಗುತ್ತಿದೆ. ಆದುದರಿಂದ ಶಾಲಾಕಾಲೇಜುಗಳ ಶಿಕ್ಷಣ ಅಸಂಪೂರ್ಣ.

**ಅಸಮ್ಮೋಹ** ಅಥವಾ ಸಂದೇಹ ಭ್ರಾಂತಿಗಳಿಂದ ಬಿಡುಗಡೆಯನ್ನು, ಮನುಷ್ಯನು ಅನಿಶ್ಚಿತ ಮನಸ್ಥಿತಿಯಲ್ಲಿ ಇಲ್ಲದಿರುವಾಗ ಮತ್ತು ದಿವ್ಯತತ್ವಜ್ಞಾನವನ್ನು ಅರಿತಾಗ ಸಾಧಿಸಬಹುದು. ಆತನು

ನಿಧಾನವಾಗಿ ಆದರೆ ಖಂಡಿತವಾಗಿ ದಿಗ್ಭ್ರಮೆಯಿಂದ ಮುಕ್ತನಾಗುತ್ತಾನೆ. ಏನನ್ನೂ ಕಣ್ಣುಮುಚ್ಚಿಕೊಂಡು ಸ್ವೀಕರಿಸಬಾರದು; ಎಲ್ಲವನ್ನೂ ಎಚ್ಚರಿಕೆಯಿಂದ ಸ್ವೀಕರಿಸಬೇಕು. ಕ್ಷಮೆಯನ್ನು ಅಭ್ಯಾಸ ಮಾಡಬೇಕು; ಸಹನೆಯಿಂದ ಇರಬೇಕು. ಇತರರ ಸಣ್ಣಪುಟ್ಟ ತಪ್ಪುಗಳನ್ನು ಕ್ಷಮಿಸಬೇಕು. ಸತ್ಯ ಎಂದರೆ ವಾಸ್ತವಾಂಶಗಳನ್ನು ಇತರರ ಪ್ರಯೋಜನಕ್ಕಾಗಿ ಇದ್ದದ್ದನ್ನು ಇದ್ದಂತೆ ನಿರೂಪಿಸಬೇಕು. ವಾಸ್ತವಾಂಶಗಳನ್ನು ತಪ್ಪಾಗಿ ನಿರೂಪಿಸಬಾರದು. ಸಾಮಾಜಿಕ ಸಂಪ್ರದಾಯಗಳಂತೆ, ಇತರರಿಗೆ ರುಚಿಸುವಾಗ ಮಾತ್ರ ಸತ್ಯವನ್ನು ಹೇಳಬೇಕು ಎನ್ನುತ್ತಾರೆ. ಆದರೆ ಇದು ಸತ್ಯನಿಷ್ಠೆಯಲ್ಲ. ಇತರರು ವಾಸ್ತವಾಂಶಗಳೇನು ಎಂದು ತಿಳಿಯಲು ಸಾಧ್ಯವಾಗುವಂತೆ ನೇರವಾಗಿ ಹೇಳಬೇಕು. ಮನುಷ್ಯನೊಬ್ಬನು ಕಳ್ಳನಾದರೆ, ಆತ ಕಳ್ಳನೆಂದು ಜನರಿಗೆ ಎಚ್ಚರಿಕೆ ಕೊಟ್ಟರೆ ಅದು ಸತ್ಯ. ಕೆಲವೊಮ್ಮೆ ಸತ್ಯವು ಅಪ್ರಿಯವಾಗಬಹುದು. ಆದರೆ ಅದನ್ನು ಹೇಳದೆ ಸುಮ್ಮನಿರಬಾರದು. ಸತ್ಯನಿಷ್ಠೆ ಎಂದರೆ ವಾಸ್ತವಾಂಶಗಳನ್ನು ಇತರರ ಪ್ರಯೋಜನಕ್ಕಾಗಿ ಹೇಳಲೇಬೇಕು. ಇದು ಸತ್ಯದ ವಿವರಣೆ.

ಇಂದ್ರಿಯ ನಿಗ್ರಹ ಎಂದರೆ ಇಂದ್ರಿಯಗಳನ್ನು ಅನಗತ್ಯವಾದ ವೈಯಕ್ತಿಕ ಭೋಗಕ್ಕಾಗಿ ಬಳಸಬಾರದು. ಇಂದ್ರಿಯಗಳ ಯೋಗ್ಯವಾದ ಅಗತ್ಯಗಳನ್ನು ತೃಪ್ತಿಪಡಿಸುವುದು ನಿಷಿದ್ಧವಲ್ಲ. ಆದರೆ ಅನಗತ್ಯ ಇಂದ್ರಿಯ ಸುಖವು ಆಧ್ಯಾತ್ಮಿಕ ಮುನ್ನಡೆಗೆ ಅಡ್ಡಿ ಉಂಟುಮಾಡುತ್ತದೆ. ಆದುದರಿಂದ ಇಂದ್ರಿಯಗಳ ಅನಗತ್ಯ ಬಳಕೆಗೆ ಕಡಿವಾಣ ಹಾಕಬೇಕು. ಹಾಗೆಯೇ ಮನಸ್ಸನ್ನು ಅನಗತ್ಯ ಯೋಚನೆಗಳಿಂದ ದೂರವಿಡಬೇಕು; ಇದಕ್ಕೆ **ಶಮ** ಎಂದು ಹೆಸರು. ಹಣವನ್ನು ಸಂಪಾದಿಸುವುದನ್ನು ಕುರಿತು ಯೋಚಿಸುತ್ತ ಕಾಲವನ್ನು ಕಳೆಯಬಾರದು. ಹಾಗೆ ಮಾಡುವುದು ಯೋಚನಾಶಕ್ತಿಯ ದುರುಪಯೋಗ. ಮನುಷ್ಯನ ಪ್ರಧಾನ ಅಗತ್ಯವನ್ನು ಅರ್ಥಮಾಡಿಕೊಳ್ಳಲು ಮನಸ್ಸನ್ನು ಬಳಸಬೇಕು. ಅದನ್ನು ಅಧಿಕಾರಯುತವಾಗಿ ನಿರೂಪಿಸಬೇಕು. ಧರ್ಮಗ್ರಂಥಗಳ ವಿಷಯದಲ್ಲಿ ಅಧಿಕಾರಿಗಳಾದವರು, ಸಾಧುಜನರು, ಗುರುಗಳು ಮತ್ತು ಧೀಮಂತರ ಸಹವಾಸದಲ್ಲಿ ಯೋಚನಾಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಕೃಷ್ಣಪ್ರಜ್ಞೆಯ ಆಧ್ಯಾತ್ಮಿಕ ಜ್ಞಾನದ ಬೆಳವಣಿಗೆಗೆ ಯಾವುದು ನೆರವಾಗುವುದೋ ಅದರಲ್ಲಿ ಯಾವಾಗಲೂ ಸುಖವನ್ನು ಕಾಣಬೇಕು. ಕೃಷ್ಣಪ್ರಜ್ಞೆಯ ಬೆಳವಣಿಗೆಗೆ ಪ್ರತಿಕೂಲವಾಗುವುದು ದುಃಖಕರವಾದದ್ದು. ಕೃಷ್ಣಪ್ರಜ್ಞೆಯ ಬೆಳವಣಿಗೆಗೆ ನೆರವಾಗುವುದನ್ನು ಸ್ವೀಕರಿಸಬೇಕು; ಪ್ರತಿಕೂಲವಾದದ್ದನ್ನು ತಿರಸ್ಕರಿಸಬೇಕು.

**ಭವ**, ಹುಟ್ಟು, ಎನ್ನುವುದು ದೇಹಕ್ಕೆ ಸಂಬಂಧಿಸಿದ್ದು ಎಂದು ಅರ್ಥಮಾಡಿಕೊಳ್ಳಬೇಕು. ಆತ್ಮದ ಮಟ್ಟಿಗೆ ಹುಟ್ಟೂ ಇಲ್ಲ, ಸಾವೂ ಇಲ್ಲ. ಇದನ್ನು ಭಗವದ್ಗೀತೆಯ ಪ್ರಾರಂಭದಲ್ಲಿ ಚರ್ಚಿಸಿದ್ದೇವೆ. ಹುಟ್ಟು ಸಾವುಗಳು ಈ ಐಹಿಕ ಜಗತ್ತಿನಲ್ಲಿ ಮನುಷ್ಯನು ಪಡೆದ ದೇಹಕ್ಕೆ ಸಂಬಂಧಿಸಿದವು. ಭವಿಷ್ಯವನ್ನು ಕುರಿತ ತಳಮಳದಿಂದ ಭಯ ಬರುತ್ತದೆ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನಿಗೆ ಭಯವಿಲ್ಲ. ಏಕೆಂದರೆ ಆತನ ಚಟುವಟಿಕೆಗಳ ಫಲವಾಗಿ ಅವನು ಆಧ್ಯಾತ್ಮಿಕ ಗಗನಕ್ಕೆ, ಮತ್ತೆ ಭಗವದ್ಧಾಮಕ್ಕೆ ಹೋಗುವುದು ಖಂಡಿತ. ಆದುದರಿಂದ ಅವನ ಭವಿಷ್ಯ ಉಜ್ವಲವಾದದ್ದು. ಇತರರಿಗೆ ಭವಿಷ್ಯದಲ್ಲಿ ಏನು ಅಡಗಿದೆ ಎಂದು ತಿಳಿಯದು; ಮುಂದಿನ ಜನ್ಮದಲ್ಲಿ ಏನು ಅಡಗಿದೆ ಎಂದು ತಿಳಿಯದು. ಆದುದರಿಂದ ಅವರಿಗೆ ಸದಾ ಆತಂಕ. ಆತಂಕದಿಂದ ನಮಗೆ ಬಿಡುಗಡೆಯಾಗಲು ಅತ್ಯುತ್ತಮ ದಾರಿ ಎಂದರೆ ಕೃಷ್ಣನನ್ನು ಅರ್ಥ ಮಾಡಿಕೊಂಡು ಸದಾ ಕೃಷ್ಣಪ್ರಜ್ಞೆಯಲ್ಲಿ ನೆಲೆಯಾಗಿರುವುದು. ಆಗ ನಾವು ಎಲ್ಲ ಭಯದಿಂದ ಮುಕ್ತರಾಗುತ್ತೇವೆ.

ಶ್ರೀಮದ್ಭಾಗವತದಲ್ಲಿ (11.2.37) **ಭಯಂ ದ್ವಿತೀಯಾಭಿನಿವೇಶತಃ ಸ್ಯಾತ್** ಎಂದು ಹೇಳಿದೆ—ಹೀಗೆಂದರೆ, ನಾವು ಮಾಯಾಶಕ್ತಿಯಲ್ಲಿ ತನ್ಮಯರಾಗಿರುವುದು ಭಯದ ಕಾರಣದಿಂದ ಎಂದರ್ಥ. ಆದರೆ ಎಲ್ಲ ಮಾಯಾಶಕ್ತಿಯಿಂದ ಬಿಡುಗಡೆ ಹೊಂದಿದವರು, ತಾವು ಭೌತಿಕ ದೇಹವಲ್ಲ ಎಂಬ ವಿಶ್ವಾಸ ಇರುವವರು, ತಾವು ದೇವೋತ್ತಮ ಪರಮ ಪುರುಷನ ವಿಭಿನ್ನಾಂಶಗಳು ಎಂಬ ನಂಬಿಕೆ ಇರುವವರು, ಈ ಕಾರಣದಿಂದ ಪರಮ ಪ್ರಭುವಿನ ದಿವ್ಯ ಸೇವೆಯಲ್ಲಿ ನಿರತರಾದವರು ಭಯಪಡಲು ಕಾರಣವೇ ಇಲ್ಲ. ಅವರ ಭವಿಷ್ಯವು ಬಹಳ ಉಜ್ವಲ. ಕೃಷ್ಣಪ್ರಜ್ಞೆಯಲ್ಲಿ ಇಲ್ಲದವರ ಒಂದು ಸ್ಥಿತಿ ಈ ಭಯ . **ಅಭಯಮ್**, ಭಯವಿಲ್ಲದಿರುವುದು, ಕೃಷ್ಣಪ್ರಜ್ಞೆಯಲ್ಲಿ ಇರುವವನಿಗೆ ಮಾತ್ರ ಸಾಧ್ಯ.

**ಅಹಿಂಸಾ** ಎಂದರೆ ಇತರರಿಗೆ ದುಃಖ ಅಥವಾ ಗೊಂದಲವನ್ನು ಉಂಟುಮಾಡುವ ಏನನ್ನೂ ಮಾಡಬಾರದು ಎಂದು ಅರ್ಥ. ಎಷ್ಟೋ ಮಂದಿ ರಾಜಕಾರಣಿಗಳು, ಸಮಾಜಶಾಸ್ತ್ರಜ್ಞರು, ಪರೋಪಕಾರಿಗಳು ಇವರೆಲ್ಲ ಭರವಸೆ ನೀಡುವ ಐಹಿಕ ಕಾರ್ಯಗಳು ಒಳ್ಳೆಯ ಫಲಿತಾಂಶವನ್ನು ನೀಡುವುದಿಲ್ಲ. ಏಕೆಂದರೆ ರಾಜಕಾರಣಿಗಳಿಗೂ ಪರೋಪಕಾರಿಗಳಿಗೂ ಆಧ್ಯಾತ್ಮಿಕ ದರ್ಶನವಿಲ್ಲ. ಮಾನವ ಸಮಾಜಕ್ಕೆ ನಿಜವಾಗಿ ಕಲ್ಯಾಣ ಮಾಡುವುದು ಯಾವುದು ಎಂದು ಅವರಿಗೆ ತಿಳಿಯದು. ಅಹಿಂಸಾ ಎಂದರೆ, ಮನುಷ್ಯ ದೇಹದ ಸಂಪೂರ್ಣ ಬಳಕೆಯನ್ನು ಸಾಧಿಸುವಂತೆ ಜನರಿಗೆ ಶಿಕ್ಷಣ ಕೊಡಬೇಕು ಎಂದು ಅರ್ಥ. ಮಾನವ ದೇಹ ಇರುವುದು ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕಾಗಿ. ಆದುದರಿಂದ ಈ ಗುರಿಗೆ ನೆರವಾಗದ ಯಾವುದೇ ಚಲನೆ ಅಥವಾ ಕ್ರಿಯೆಯೂ ಮನುಷ್ಯ ದೇಹದ ಹಿಂಸೆ. ಒಟ್ಟಿನಲ್ಲಿ ಜನರ ಭವಿಷ್ಯದ ಆಧ್ಯಾತ್ಮಿಕ ಸುಖವನ್ನು ಹೆಚ್ಚಿಸುವುದಕ್ಕೆ ಕಾರಣವಾಗುವುದನ್ನು ಅಹಿಂಸೆ ಎಂದು ಕರೆಯುತ್ತಾರೆ.

**ಸಮತಾ** ಅಥವಾ ಸಮಚಿತ್ತ ಎನ್ನುವುದು ಮೋಹ ಮತ್ತು ಜುಗುಪ್ಸೆಗಳಿಂದ ಬಿಡುಗಡೆಯನ್ನು ಸೂಚಿಸುತ್ತದೆ. ಅತಿ ಮೋಹ, ಅತಿ ನಿರ್ಮೋಹ ಎರಡೂ ಒಳ್ಳೆಯದಲ್ಲ. ಈ ಐಹಿಕ ಜಗತ್ತನ್ನು ಮೋಹವಿಲ್ಲದೆ, ಜುಗುಪ್ಸೆ ಇಲ್ಲದೆ ಒಪ್ಪಿಕೊಳ್ಳಬೇಕು. ಕೃಷ್ಣಪ್ರಜ್ಞೆಯನ್ನು ಮುಂದುವರಿಸಲು ಯಾವುದು ನೆರವಾಗುವುದೋ ಅದನ್ನು ಒಪ್ಪಿಕೊಳ್ಳಬೇಕು; ಪ್ರತಿಕೂಲವಾದದ್ದನ್ನು ಬಿಡಬೇಕು. ಇದಕ್ಕೆ **ಸಮತಾ,** ಸಮಚಿತ್ತ ಎಂದು ಹೆಸರು. ಕೃಷ್ಣಪ್ರಜ್ಞೆಯಲ್ಲಿರುವವನು ಏನನ್ನೇ ಆಗಲಿ ಕೃಷ್ಣಪ್ರಜ್ಞೆಯ ಬೆಳವಣಿಗೆಗೆ ನೆರವಾಗುತ್ತದೆಯೇ ಎಂಬ ದೃಷ್ಟಿಯಿಂದ ಅಲ್ಲದೆ, ಬೇರಾವ ದೃಷ್ಟಿಯಿಂದಲೂ ಸ್ವೀಕರಿಸಬೇಕಾಗಿಲ್ಲ; ನಿರಾಕರಿಸಲೂ ಬೇಕಾಗಿಲ್ಲ.

**ತುಷ್ಟಿ**, ಅಥವಾ ತೃಪ್ತಿ ಎಂದರೆ ಅನಗತ್ಯವಾದ ಚಟುವಟಿಕೆಗಳಿಂದ ಹೆಚ್ಚು ಹೆಚ್ಚು ಪ್ರಾಪಂಚಿಕ ವಸ್ತುಗಳನ್ನು ಸಂಗ್ರಹಿಸಲು ಮನುಷ್ಯನು ಕಾತರನಾಗಿರಬಾರದು ಎಂದು ಅರ್ಥ. ಪರಮ ಪ್ರಭುವಿನ ಕೃಪೆಯಿಂದ ದೊರಕಿದುದರಲ್ಲಿ ತೃಪ್ತಿ ಕಾಣಬೇಕು; ಇದು ತುಷ್ಟಿ. ತಪಸ್ಸು ಎಂದರೆ ವ್ರತ. ತಪಸ್ಸುಗಳನ್ನು ಆಚರಿಸುವುದು, ಬೆಳಗ್ಗೆ ಬೇಗನೆ ಏಳುವುದು, ಸ್ನಾನ ಮಾಡುವುದು. ವೇದಗಳಲ್ಲಿ ಹೇಳಿರುವ ಇಂತಹ ಹಲವಾರು ನಿಯಮ ನಿಬಂಧನೆಗಳು ಇಲ್ಲಿ ಅನ್ವಯಿಸುತ್ತವೆ. ಕೆಲವೊಮ್ಮೆ ಬೆಳಗ್ಗೆ ಬೇಗ ಏಳುವುದು ಬಹು ಕಷ್ಟವಾಗುತ್ತದೆ; ಈ ರೀತಿಯಲ್ಲಿ ಸ್ವ ಇಚ್ಛೆಯಿಂದ ಪಡುವ ಶ್ರಮಕ್ಕೆ ತಪಸ್ಸು ಎಂದು ಹೆಸರು. ಹಾಗೆಯೇ ತಿಂಗಳಿನಲ್ಲಿ ಕೆಲವು ದಿನಗಳು ಉಪವಾಸ ಮಾಡಬೇಕೆಂದು ವಿಧಿಸಿದೆ. ಇಂತಹ ಉಪವಾಸವನ್ನು ಮಾಡಲು ಮನುಷ್ಯನಿಗೆ

ಇಷ್ಟವಿಲ್ಲದಿರಬಹುದು. ಆದರೆ ಕೃಷ್ಣಪ್ರಜ್ಞೆಯಲ್ಲಿ ಪ್ರಗತಿ ಸಾಧಿಸಬೇಕೆಂಬ ಸಂಕಲ್ಪದಿಂದಾಗಿ ಆತನು, ಇಂತಹ ದೇಹ ಶ್ರಮಗಳನ್ನು ಮಾಡಬೇಕೆಂದು ಸೂಚಿಸಿದಾಗ ಅವನ್ನು ಒಪ್ಪಿಕೊಳ್ಳಬೇಕು. ಆದರೆ ವೇದಗಳ ಆದೇಶಕ್ಕೆ ವಿರುದ್ಧವಾಗಿ, ಅನಗತ್ಯವಾಗಿ ಉಪವಾಸ ಮಾಡಬಾರದು. ರಾಜಕೀಯ ಕಾರಣಗಳಿಗಾಗಿ ಉಪವಾಸ ಮಾಡಬಾರದು. ಇದನ್ನು ಭಗವದ್ಗೀತೆಯಲ್ಲಿ ಅಜ್ಞಾನದಲ್ಲಿ ಮಾಡಿದ ಉಪವಾಸ ಎಂದು ವರ್ಣಿಸಿದೆ. ತಾಮಸದಲ್ಲಿ ಅಥವಾ ರಾಜಸ ಪ್ರವೃತ್ತಿಯಲ್ಲಿ ಏನನ್ನು ಮಾಡಿದರೂ ಅದು ಆಧ್ಯಾತ್ಮಿಕ ಮುನ್ನಡೆಗೆ ಸಾಧನವಾಗಲಾರದು. ಸಾತ್ವಿಕವಾಗಿ ಏನನ್ನು ಮಾಡಿದರೂ ಅದು ಮನುಷ್ಯನನ್ನು ಮುನ್ನಡೆಸುತ್ತದೆ. ವೇದಗಳ ಆದೇಶದಂತೆ ಮಾಡಿದ ಉಪವಾಸವು ಮನುಷ್ಯನನ್ನು ಆಧ್ಯಾತ್ಮಿಕ ಜ್ಞಾನದಲ್ಲಿ ಶ್ರೀಮಂತಗೊಳಿಸುತ್ತದೆ.

**ದಾನ**ದ ವಿಷಯ ಹೇಳುವುದಾದರೆ, ಮನುಷ್ಯನು ತನ್ನ ಸಂಪಾದನೆಯಲ್ಲಿ ಅರ್ಧ ಭಾಗವನ್ನು ಯಾವುದಾದರೂ ಒಳ್ಳೆಯ ಕಾರ್ಯಕ್ಕೆ ಕೊಡಬೇಕು. ಒಳ್ಳೆಯ ಕಾರ್ಯ ಯಾವುದು? ಕೃಷ್ಣಪ್ರಜ್ಞೆಗೆ ಅನುಗುಣವಾಗಿ ನಡೆಸುವ ಕಾರ್ಯ. ಅದು ಒಳ್ಳೆಯ ಕಾರ್ಯಮಾತ್ರವಲ್ಲ, ಅತ್ಯಂತ ಶ್ರೇಷ್ಠಕಾರ್ಯ. ಕೃಷ್ಣನು ಒಳ್ಳೆಯವನು. ಆದುದರಿಂದ ಅವನಿಗಾಗಿ ಮಾಡುವ ಕಾರ್ಯವು ಒಳ್ಳೆಯದು. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವ ಮನುಷ್ಯನಿಗೆ ದಾನವನ್ನು ಕೊಡಬೇಕು. ವೈದಿಕ ಸಾಹಿತ್ಯದಲ್ಲಿ ಬ್ರಾಹ್ಮಣರಿಗೆ ದಾನವನ್ನು ಕೊಡಬೇಕೆಂದು ಆದೇಶಿಸಿದೆ. ವೇದಗಳ ಆದೇಶಕ್ಕನುಗುಣವಾಗಿ ಯೋಗ್ಯರೀತಿಯಲ್ಲಿ ಅಲ್ಲದಿದ್ದರೂ ಈ ರೂಢಿಯನ್ನು ಅನುಸರಿಸಲಾಗುತ್ತಿದೆ. ಆದರೂ ಆದೇಶವಿರುವುದು ದಾನವನ್ನು ಬ್ರಾಹ್ಮಣರಿಗೆ ಕೊಡಬೇಕು ಎಂದು. ಏಕೆ? ಏಕೆಂದರೆ ಅವರು ಆಧ್ಯಾತ್ಮಿಕ ಜ್ಞಾನದ ಉನ್ನತ ಬೆಳವಣಿಗೆಯಲ್ಲಿ ನಿರತರಾಗಿದ್ದಾರೆ. ಬ್ರಾಹ್ಮಣನು ಬ್ರಹ್ಮನ್‌ನನ್ನು ಅರ್ಥಮಾಡಿಕೊಳ್ಳಲು ತನ್ನ ಇಡೀ ಜೀವನವನ್ನು ಮುಡುಪಾಗಿಡುವನೆಂದು ನಿರೀಕ್ಷೆ. **ಬ್ರಹ್ಮ ಜಾನಾತೀತಿ ಬ್ರಾಹ್ಮಣಃ** ಬ್ರಹ್ಮನ್‌ನನ್ನು ತಿಳಿದವನು ಬ್ರಾಹ್ಮಣ. ಹೀಗೆ ಬ್ರಾಹ್ಮಣರು ಸದಾ ಉನ್ನತಮಟ್ಟದ ಆಧ್ಯಾತ್ಮಿಕ ಸೇವೆಯಲ್ಲಿ ತೊಡಗಿರುತ್ತಾರೆ. ಆದುದರಿಂದ ಜೀವನ ನಿರ್ವಹಣೆಗೆ ಸಂಪಾದಿಸಲು ಸಮಯವಿರುವುದಿಲ್ಲ ಎಂದು ಅವರಿಗೆ ದಾನ ಕೊಡಲಾಗುತ್ತದೆ. ವೈದಿಕ ಸಾಹಿತ್ಯದಲ್ಲಿ ಸನ್ಯಾಸಿಗೂ ದಾನವನ್ನು ನೀಡಬೇಕು ಎಂದು ಹೇಳಿದೆ. ಸನ್ಯಾಸಿಗಳು ಮನೆಯಿಂದ ಮನೆಗೆ ಹೋಗಿ ಭಿಕ್ಷೆಯನ್ನು ಬೇಡುತ್ತಾರೆ. ಇದು ಹಣಕ್ಕಾಗಿ ಅಲ್ಲ. ಆದರೆ ಧರ್ಮಪ್ರಸಾರದ ಉದ್ದೇಶಗಳಿಗಾಗಿ. ಗೃಹಸ್ಥರನ್ನು ಅಜ್ಞಾನದ ನಿದ್ರೆಯಿಂದ ಎಬ್ಬಿಸಲು ಮನೆಮನೆಗೆ ಹೋಗುವುದಕ್ಕಾಗಿ ಈ ವ್ಯವಸ್ಥೆ ಇದೆ. ಸಂಸಾರಿಗಳು ಸಂಸಾರದ ವ್ಯವಹಾರಗಳಲ್ಲಿ ತೊಡಗಿರುತ್ತಾರೆ. ತಮ್ಮ ಕೃಷ್ಣಪ್ರಜ್ಞೆಯನ್ನು ಹೆಚ್ಚಿಸಿಕೊಳ್ಳುವುದು ಬದುಕಿನ ನಿಜವಾದ ಉದ್ದೇಶ. ಇದನ್ನು ಮರೆತಿದ್ದಾರೆ. ಆದುದರಿಂದ ಭಿಕ್ಷುಕರಾಗಿ ಗೃಹಸ್ಥರ ಬಳಿಗೆ ಹೋಗಿ ಅವರು ಕೃಷ್ಣಪ್ರಜ್ಞೆಯನ್ನು ಪಡೆಯುವಂತೆ ಪ್ರೋತ್ಸಾಹಿಸುವುದು ಸನ್ಯಾಸಿಗಳ ಕರ್ತವ್ಯ. ವೇದಗಳಲ್ಲಿ ಹೇಳಿರುವಂತೆ ಮನುಷ್ಯನು ಎಚ್ಚೆತ್ತು ಈ ಮನುಷ್ಯಜನ್ಮದಲ್ಲಿ ತನಗೆ ಸಲ್ಲಬೇಕಾದುದನ್ನು ಪಡೆದುಕೊಳ್ಳಬೇಕು. ಈ ಜ್ಞಾನವನ್ನೂ ವಿಧಾನವನ್ನೂ ಸನ್ಯಾಸಿಗಳು ಇತರರೊಡನೆ ಹಂಚಿಕೊಳ್ಳುತ್ತಾರೆ. ಆದುದರಿಂದ ದಾನವನ್ನು ಯಾವುದೋ ಹುಚ್ಚು ಅನಿಸಿಕೆಗೆ ಕೊಡಬಾರದು. ಅದನ್ನು ಸನ್ಯಾಸಿಗೆ, ಬ್ರಾಹ್ಮಣರಿಗೆ ಮತ್ತು ಇಂತಹ ಒಳ್ಳೆಯ ಉದ್ದೇಶಗಳಿಗೆ ಕೊಡಬೇಕು.

ಚೈತನ್ಯ ಮಹಾಪ್ರಭುಗಳು ಹೇಳಿದಂತೆ ಯಶಸ್ಸನ್ನು ಗಳಿಸಬೇಕು. ಮನುಷ್ಯನಿಗೆ ಮಹಾಭಕ್ತನೆಂದು ಹೆಸರು ಬಂದಾಗ ಅದೇ ಕೀರ್ತಿ ಎಂದು ಅವರು ಹೇಳಿದರು. ಅದು ನಿಜವಾದ ಕೀರ್ತಿ. ಕೃಷ್ಣಪ್ರಜ್ಞೆಯಲ್ಲಿ ಶ್ರೇಷ್ಠಮನುಷ್ಯನಾಗಿ ಅದು ಎಲ್ಲರಿಗೆ ತಿಳಿದಾಗ ಅವನು ನಿಜವಾಗಿ

ಕೀರ್ತಿವಂತ. ಇಂತಹ ಕೀರ್ತಿ ಇಲ್ಲದವನದು ಅಪಕೀರ್ತಿ.

ವಿಶ್ವದಲ್ಲೆಲ್ಲ, ಮನುಷ್ಯ ಸಮಾಜದಲ್ಲಿ ಮತ್ತು ದೇವತೆಗಳ ಸಮಾಜದಲ್ಲಿ ಇಂತಹ ಗುಣಗಳು ಕಾಣಬರುತ್ತವೆ. ಇತರ ಲೋಕಗಳಲ್ಲಿಯೂ ವಿವಿಧ ಸ್ವರೂಪಗಳ ಮನುಷ್ಯರಿದ್ದಾರೆ. ಈ ಗುಣಗಳು ಅಲ್ಲಿಯೂ ಇವೆ. ಈಗ ಕೃಷ್ಣಪ್ರಜ್ಞೆಯಲ್ಲಿ ಮುನ್ನಡೆಯಲು ಅಪೇಕ್ಷಿಸುವವನಿಗಾಗಿ ಕೃಷ್ಣನು ಈ ಎಲ್ಲ ಗುಣಗಳನ್ನು ಸೃಷ್ಟಿಸುತ್ತಾನೆ. ಆದರೆ ವ್ಯಕ್ತಿಯು ಅವುಗಳನ್ನು ತನ್ನೊಳಗಿನಿಂದಲೇ ಬೆಳೆಸಿಕೊಳ್ಳುತ್ತಾನೆ. ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ತೊಡಗಿರುವವನು, ಪರಮ ಪ್ರಭುವೇ ವ್ಯವಸ್ಥೆ ಮಾಡಿದಂತೆ, ಎಲ್ಲ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳುತ್ತಾನೆ.

ನಾವು ಕಾಣುವ ಎಲ್ಲದರ ಮೂಲ ಅವು ಒಳ್ಳೆಯವಾಗಿರಲಿ ಅಥವಾ ಕೆಟ್ಟದ್ದಾಗಿರಲಿ ಕೃಷ್ಣನೇ. ಕೃಷ್ಣನಲ್ಲಿ ಇಲ್ಲದ್ದು ಯಾವುದೂ ಈ ಐಹಿಕ ಜಗತ್ತಿನಲ್ಲಿ ಪ್ರಕಟವಾಗಲಾರದು. ಇದು ಜ್ಞಾನ. ವಸ್ತುಗಳು ಬೇರೆ ಬೇರೆ ಸ್ಥಿತಿಗಳಲ್ಲಿ ಇವೆ ಎಂದು ನಮಗೆ ತಿಳಿದಿದ್ದರೂ ಎಲ್ಲವೂ ಕೃಷ್ಣನಿಂದ ಬರುತ್ತವೆ ಎನ್ನುವುದನ್ನು ನಾವು ಗುರುತಿಸಬೇಕು.

## ಶ್ಲೋಕ - 6

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥೬॥**

**ಮಹರ್ಷಯಃ**—ಮಹರ್ಷಿಗಳು; **ಸಪ್ತ**—ಏಳು; **ಪೂರ್ವೇ**—ಹಿಂದೆ; **ಚತ್ವಾರಃ**—ನಾಲ್ಕು; **ಮನವಃ**—ಮನುಗಳು; **ತಥಾ**—ಕೂಡ; **ಮತ್ ಭಾವಾಃ**—ನನ್ನಿಂದ ಜನಿಸಿದ; **ಮಾನಸಾಃ**—ಮನಸ್ಸಿನಿಂದ; **ಜಾತಾಃ**—ಹುಟ್ಟಿದರು; **ಯೇಷಾಮ್**—ಅವರ; **ಲೋಕೇ**—ಪ್ರಪಂಚದಲ್ಲಿ; **ಇಮಾಃ**—ಈ ಎಲ್ಲ; **ಪ್ರಜಾಃ**—ಪ್ರಜೆಗಳು.

## ಅನುವಾದ

**ಸಪ್ತರ್ಷಿಗಳು ಮತ್ತು ಅವರ ಪೂರ್ವದ ನಾಲ್ವರು ಮಹರ್ಷಿಗಳು ಎಲ್ಲರೂ ನನ್ನಿಂದ ಬಂದರು; ನನ್ನ ಮನಸ್ಸಿನಿಂದ ಹುಟ್ಟಿದರು. ವಿವಿಧ ಲೋಕಗಳಲ್ಲಿರುವ ಜೀವಿಗಳೆಲ್ಲ ಅವರ ಸಂತಾನದವರೇ.**

## ಭಾವಾರ್ಥ

ಪ್ರಭುವು ವಿಶ್ವದ ಜನತೆಯ ವಂಶವೃಕ್ಷವನ್ನು ಸಂಗ್ರಹವಾಗಿ ಕೊಡುತ್ತಿದ್ದಾನೆ. ಹಿರಣ್ಯಗರ್ಭ ಎಂದು ಕರೆಯುವ ಪರಮ ಪ್ರಭುವಿನ ಶಕ್ತಿಯಿಂದ ಮೊದಲು ಹುಟ್ಟಿದವನು ಬ್ರಹ್ಮ. ಬ್ರಹ್ಮನಿಂದ ಸಪ್ತರ್ಷಿಗಳು. ಅವರಿಗೆ ಮೊದಲು ಸನಕ, ಸನಂದ, ಸನಾತನ ಮತ್ತು ಸನತ್ಕುಮಾರ ಎನ್ನುವ ನಾಲ್ವರು ಮಹರ್ಷಿಗಳು ಮತ್ತು ಮನುಗಳು ರೂಪಪಡೆದರು. ಈ ಇಪ್ಪತ್ತೈದು ಮಂದಿ ಮಹರ್ಷಿಗಳು ವಿಶ್ವದ ಎಲ್ಲ ಜೀವಿಗಳ ಪ್ರಜಾಪತಿಗಳೆಂದು ಹೆಸರಾಗಿದ್ದಾರೆ. ಪ್ರತಿಯೊಂದು ವಿಶ್ವದಲ್ಲಿಯೂ ಅಸಂಖ್ಯಾತ ವಿಶ್ವಗಳಿವೆ ಮತ್ತು ಅಸಂಖ್ಯಾತ ಲೋಕಗಳಿವೆ. ಪ್ರತಿಯೊಂದು ಲೋಕವೂ ವಿವಿಧ ಬಗೆಗಳ ಜನಗಳಿಂದ ತುಂಬಿಹೋಗಿದೆ. ಅವರೆಲ್ಲರೂ ಈ ಇಪ್ಪತ್ತೈದು ಮಂದಿ ಪ್ರಜಾಪತಿಗಳ ಸಂತಾನರು. ಸೃಷ್ಟಿಮಾಡುವುದು ಹೇಗೆ ಎನ್ನುವುದನ್ನು ತಿಳಿಯುವ

ಮೊದಲು ಬ್ರಹ್ಮನು ದೇವತೆಗಳ ಲೆಕ್ಕದ ಒಂದು ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದ. ಅನಂತರ ಬ್ರಹ್ಮನಿಂದ ಸನಕ, ಸನಂದ, ಸನಾತನ ಮತ್ತು ಸನತ್ಕುಮಾರ ಇವರು ಬಂದರು. ಅನಂತರ ರುದ್ರ. ಅನಂತರ ಸಪ್ತರ್ಷಿಗಳು. ಈ ರೀತಿಯಾಗಿ ಎಲ್ಲ ಬ್ರಾಹ್ಮಣರೂ, ಕ್ಷತ್ರಿಯರೂ ದೇವೋತ್ತಮ ಪರಮ ಪುರುಷನ ಶಕ್ತಿಯಿಂದ ಹುಟ್ಟಿದವರು. ಬ್ರಹ್ಮನನ್ನು ಪಿತಾಮಹ ಅಥವಾ ಅಜ್ಜ ಎಂದೂ ಕೃಷ್ಣನನ್ನು ಪ್ರಪಿತಾಮಹ ಅಥವಾ ಅಜ್ಜನ ತಂದೆ ಎಂದೂ ಕರೆಯುತ್ತಾರೆ. ಇದನ್ನು ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ (11.39) ಹೇಳಿದೆ.

## ಶ್ಲೋಕ - 7

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋऽವಿಕಲ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥೭॥**

**ಏತಾಮ್**—ಈ ಎಲ್ಲ; **ವಿಭೂತಿಮ್**—ಐಶ್ವರ್ಯವನ್ನು; **ಯೋಗಮ್**—ಯೋಗಶಕ್ತಿಯನ್ನು; **ಚ**—ಕೂಡ; **ಮಮ**—ನನ್ನ; **ಯಃ**—ಯಾರು; **ವೇತ್ತಿ**—ತಿಳಿಯುತ್ತಾನೋ; **ತತ್ತ್ವತಃ**—ನಿಜವಾಗಿಯೂ; **ಸಃ**—ಅವನು; **ಅವಿಕಲ್ಪೇನ**—ವಿಕಲ್ಪವಿಲ್ಲದೆ; **ಯೋಗೇನ**—ಭಕ್ತಿಸೇವೆಯಲ್ಲಿ; **ಯುಜ್ಯತೇ**—ನಿರತನಾಗುತ್ತಾನೆ; **ನ**—ಎಂದಿಗೂ ಇಲ್ಲ; **ಅತ್ರ**—ಇಲ್ಲಿ; **ಸಂಶಯಃ**—ಸಂದೇಹವು.

## ಅನುವಾದ

**ನನ್ನ ಈ ಐಶ್ವರ್ಯವನ್ನೂ ಮತ್ತು ಯೋಗಶಕ್ತಿಯನ್ನೂ ಯಥಾರ್ಥವಾಗಿ ತಿಳಿದವನು ಪರಿಶುದ್ಧವಾದ ಭಕ್ತಿಸೇವೆಯಲ್ಲಿ ತೊಡಗುತ್ತಾನೆ; ಈ ವಿಷಯದಲ್ಲಿ ಸಂಶಯವಿಲ್ಲ.**

## ಭಾವಾರ್ಥ

ಆಧ್ಯಾತ್ಮಿಕ ಪರಿಪೂರ್ಣತೆಯ ಅತ್ಯುನ್ನತ ಶಿಖರವೆಂದರೆ ದೇವೋತ್ತಮ ಪರಮ ಪುರುಷನ ಅರಿವು. ಪರಮ ಪ್ರಭುವಿನ ವಿವಿಧ ಸಿರಿಗಳಲ್ಲಿ ದೃಢವಾದ ವಿಶ್ವಾಸವಿಲ್ಲದಿದ್ದರೆ ಮನುಷ್ಯನು ಭಕ್ತಿಸೇವೆಯಲ್ಲಿ ನಿರತನಾಗಲಾರ. ಸಾಮಾನ್ಯವಾಗಿ ಜನರಿಗೆ ದೇವರು ದೊಡ್ಡವನೆಂದು ಗೊತ್ತು. ಆದರೆ ದೇವರು ಹೇಗೆ ದೊಡ್ಡವನು ಎಂದು ವಿವರವಾಗಿ ತಿಳಿಯದು. ವಿವರಗಳು ಇಲ್ಲಿವೆ. ದೇವರು ಹೇಗೆ ದೊಡ್ಡವನು ಎಂದು ಯಥಾರ್ಥವಾಗಿ ತಿಳಿದರೆ ಮನುಷ್ಯನು ಸಹಜವಾಗಿ ಶರಣಾಗತನಾಗುತ್ತಾನೆ ಮತ್ತು ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗುತ್ತಾನೆ. ಪರಮ ಪ್ರಭುವಿನ ಸಿರಿಯನ್ನು ಯಥಾರ್ಥವಾಗಿ ತಿಳಿದುಕೊಂಡಾಗ ಅವನಿಗೆ ಶರಣಾಗುವುದಲ್ಲದೆ ಬೇರೆ ಮಾರ್ಗವೇ ಇಲ್ಲ. ಶ್ರೀಮದ್ಭಾಗವತ, ಭಗವದ್ಗೀತೆ ಮತ್ತು ಇಂತಹ ಇತರ ಸಾಹಿತ್ಯದಲ್ಲಿನ ವರ್ಣನೆಗಳಿಂದ ಈ ಯಥಾರ್ಥ ಜ್ಞಾನವನ್ನು ಪಡೆಯಬಹುದು.

ಈ ವಿಶ್ವದ ಆಡಳಿತ ನಿರ್ವಹಣೆಯಲ್ಲಿ ಲೋಕಗಳ ವ್ಯೂಹದಲ್ಲೆಲ್ಲ ಬೇರೆ ಬೇರೆ ಸ್ಥಳಗಳಲ್ಲಿರುವ ದೇವತೆಗಳು ಇದ್ದಾರೆ. ಅವರಲ್ಲಿ ಮುಖ್ಯವಾದವನು ಬ್ರಹ್ಮ, ಶಿವ, ನಾಲ್ವರು ಕುಮಾರರು ಮತ್ತು ಇತರ ಪ್ರಜಾಪತಿಗಳು. ವಿಶ್ವದ ಜನತೆಯ ಪ್ರಜಾಪತಿಗಳು ಹಲವರು. ಅವರೆಲ್ಲ ಪರಮ ಪ್ರಭು ಶ್ರೀಕೃಷ್ಣನ ಸಂತಾನ. ದೇವೋತ್ತಮ ಪರಮ ಪುರುಷನಾದ ಕೃಷ್ಣನು ಎಲ್ಲ

ಪೂರ್ವಿಕರಿಗೆ ಪೂರ್ವಿಕನು.

ಪರಮ ಪ್ರಭುವಿನ ಸಿರಿಗಳಲ್ಲಿ ಇವು ಕೆಲವು. ಅವುಗಳಲ್ಲಿ ದೃಢ ನಂಬಿಕೆಯು ಉಂಟಾದಾಗ ವ್ಯಕ್ತಿಯು ಬಹು ಶ್ರದ್ಧೆಯಿಂದ ಮತ್ತು ಯಾವುದೇ ಸಂಶಯವಿಲ್ಲದೆ ಕೃಷ್ಣನನ್ನು ಒಪ್ಪಿಕೊಳ್ಳುತ್ತಾನೆ ಮತ್ತು ಭಕ್ತಿಸೇವೆಯಲ್ಲಿ ನಿರತನಾಗುತ್ತಾನೆ. ಪ್ರಭುವಿನ ಭಕ್ತಿಸೇವೆಯಲ್ಲಿ ಮನುಷ್ಯನ ಆಸಕ್ತಿಯನ್ನು ಹೆಚ್ಚಿಸಲು ಈ ಖಚಿತವಾದ ಜ್ಞಾನವು ಅಗತ್ಯವಾಗುತ್ತದೆ. ಕೃಷ್ಣನು ಎಂತಹ ಮಹಾನುಭಾವ ಎನ್ನುವುದನ್ನು ತಿಳಿದುಕೊಳ್ಳುವುದನ್ನು ಅಲಕ್ಷ್ಯಮಾಡಬಾರದು. ಏಕೆಂದರೆ ಕೃಷ್ಣನ ಮಹಾತ್ಮೆಯನ್ನು ತಿಳಿದವನು ಪ್ರಾಮಾಣಿಕ ಭಕ್ತಿಸೇವೆಯಲ್ಲಿ ನಿಶ್ಚಲನಾಗಿರುತ್ತಾನೆ.

## ಶ್ಲೋಕ - 8

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ |**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ||೮||**

**ಅಹಮ್**—ನಾನು; **ಸರ್ವಸ್ಯ**—ಎಲ್ಲದರ; **ಪ್ರಭವಃ**—ಉತ್ಪತ್ತಿಯ ಮೂಲನು; **ಮತ್ತಃ**—ನನ್ನಿಂದ; **ಸರ್ವಮ್**—ಪ್ರತಿಯೊಂದೂ; **ಪ್ರವರ್ತತೇ**—ವ್ಯಕ್ತವಾಗುತ್ತದೆ; **ಇತಿ**—ಹೀಗೆ; **ಮತ್ವಾ**—ತಿಳಿದು; **ಭಜನ್ತೇ**—ಭಕ್ತಿಯುಳ್ಳವರಾಗುತ್ತಾರೆ; **ಮಾಮ್**—ನನ್ನಲ್ಲಿ; **ಬುಧಾಃ**—ವಿದ್ವಾಂಸರು; **ಭಾವ ಸಮನ್ವಿತಾಃ**—ಅತ್ಯಂತ ಗಮನಪೂರ್ವಕವಾಗಿ.

## ಅನುವಾದ

**ಎಲ್ಲ ಆಧ್ಯಾತ್ಮಿಕ ಮತ್ತು ಭೌತಿಕ ಜಗತ್ತುಗಳ ಮೂಲವು ನಾನೇ. ಎಲ್ಲವೂ ನನ್ನಿಂದ ಹೊರಸೂಸುತ್ತದೆ. ಇದನ್ನು ಸಂಪೂರ್ಣವಾಗಿ ತಿಳಿದ ವಿದ್ವಾಂಸರು ನನ್ನ ಭಕ್ತಿಸೇವೆಯಲ್ಲಿ ನಿರತರಾಗುತ್ತಾರೆ ಮತ್ತು ಹೃದಯತುಂಬಿ ನನ್ನನ್ನು ಪೂಜಿಸುತ್ತಾರೆ.**

## ಭಾವಾರ್ಥ

ವೇದಗಳನ್ನು ಪರಿಪೂರ್ಣವಾಗಿ ಅಧ್ಯಯನ ಮಾಡಿ ಚೈತನ್ಯ ಮಹಾಪ್ರಭುಗಳಂತಹ ಆಚಾರ್ಯರಿಂದ ತಿಳುವಳಿಕೆ ಪಡೆದು ಈ ಬೋಧನೆಗಳನ್ನು ಹೇಗೆ ಅನ್ವಯಿಸಬೇಕು ಎಂಬುದನ್ನು ತಿಳಿದುಕೊಂಡ ಪ್ರಗಲ್ಭ ವಿದ್ವಾಂಸನು, ಕೃಷ್ಣನು ಐಹಿಕ ಮತ್ತು ಆಧ್ಯಾತ್ಮಿಕ ಪ್ರಪಂಚಗಳಲ್ಲಿ ಇರುವುದೆಲ್ಲಕ್ಕೂ ಮೂಲ ಎನ್ನುವುದನ್ನು ಅರ್ಥಮಾಡಿಕೊಳ್ಳಬಲ್ಲ. ಇದನ್ನು ಪರಿಪೂರ್ಣವಾಗಿ ತಿಳಿದುಕೊಂಡದ್ದರಿಂದ ಅವನು ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ಸ್ಥಿತನಾಗಿದ್ದಾನೆ. ಎಷ್ಟೇ ಪ್ರಮಾಣದ ಅಸಂಬದ್ಧ ವ್ಯಾಖ್ಯಾನಗಳಿಂದಾಗಲೀ, ಮೂರ್ಖರಿಂದಾಗಲೀ ಅವನು ಅತ್ತಿತ್ತ ಚಲಿಸುವುದಿಲ್ಲ. ಬ್ರಹ್ಮ, ಶಿವ ಮತ್ತು ಇತರ ಎಲ್ಲ ದೇವತೆಗಳ ಮೂಲ ಕೃಷ್ಣನೇ ಎಂದು ಎಲ್ಲ ವೈದಿಕ ಸಾಹಿತ್ಯದಲ್ಲಿ ಒಮ್ಮತವಿದೆ. ಅಥರ್ವಣ ವೇದದಲ್ಲಿ (ಗೋಪಾಲ ತಾಪನಿ ಉಪನಿಷತ್ 1.24) ಹೀಗೆ ಹೇಳಿದೆ — **ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಗಾಪಯತಿ ಸ್ಮ ಕೃಷ್ಣಃ** — "ಬ್ರಹ್ಮನಿಗೆ ವೇದದ ಜ್ಞಾನದಲ್ಲಿ ಮೊದಲು ಉಪದೇಶ ಮಾಡಿದವನು ಮತ್ತು ಭೂತಕಾಲದಲ್ಲಿ ವೇದದ ಜ್ಞಾನವನ್ನು ಪ್ರಸಾರ ಮಾಡಿದವನು ಕೃಷ್ಣನೇ." ನಾರಾಯಣ ಉಪನಿಷತ್ (1) ಹೀಗೆ

ಹೇಳುತ್ತದೆ — **ಅಥ ಪುರುಷೋ ಹ ವೈ ನಾರಾಯಣೋऽಕಾಮಯತ ಪ್ರಜಾಃ ಸೃಜೇಯೇತಿ** — "ಅನಂತರ ಪರಮ ಪುರುಷನಾದ ನಾರಾಯಣನು ಜೀವಿಗಳನ್ನು ಸೃಷ್ಟಿಸಲು ಅಪೇಕ್ಷಿಸಿದನು." ಉಪನಿಷತ್ತು ಮುಂದುವರಿಸಿ ಹೀಗೆ ಹೇಳುತ್ತದೆ — **ನಾರಾಯಣಾದ್ ಬ್ರಹ್ಮಾಜಾಯತೇ, ನಾರಾಯಣಾದ್ ಪ್ರಜಾಪತಿಃ ಪ್ರಜಾಯತೇ, ನಾರಾಯಣಾದ್ ಇನ್ದ್ರೋ ಜಾಯತೇ, ನಾರಾಯಣಾದ್ ಅಷ್ಟೌ ವಸವೋ ಜಾಯಂತೇ, ನಾರಾಯಣಾದ್ ಏಕಾದಶ ರುದ್ರಾಜಾಯನ್ತೇ, ನಾರಾಯಣಾದ್ ದ್ವಾದಶಾದಿತ್ಯಾಃ** — "ನಾರಾಯಣನಿಂದ ಬ್ರಹ್ಮನು ಹುಟ್ಟಿದನು; ನಾರಾಯಣನಿಂದ ಪ್ರಜಾಪತಿಗಳು ಸಹ ಹುಟ್ಟಿದರು; ನಾರಾಯಣನಿಂದ ಇಂದ್ರನು ಹುಟ್ಟಿದನು; ನಾರಾಯಣನಿಂದ ಅಷ್ಟವಸುಗಳು ಹುಟ್ಟಿದರು; ನಾರಾಯಣನಿಂದ ಏಕಾದಶ ರುದ್ರರು ಹುಟ್ಟಿದರು; ನಾರಾಯಣನಿಂದ ದ್ವಾದಶಾದಿತ್ಯರು ಹುಟ್ಟಿದರು." ಈ ನಾರಾಯಣನು ಕೃಷ್ಣನ ವಿಸ್ತರಣೆ.

ಅದೇ ವೇದಗಳಲ್ಲಿ ಹೀಗೆ ಹೇಳಿದೆ—**ಬ್ರಹ್ಮಣ್ಯೋ ದೇವಕೀ ಪುತ್ರಃ** "ದೇವಕಿಯ ಮಗನಾದ ಕೃಷ್ಣನು ಪುರುಷೋತ್ತಮನು." (ನಾರಾಯಣ ಉಪನಿಷತ್ತು 4) ಮತ್ತೆ ಹೀಗೆ ಹೇಳಿದೆ, **ಏಕೋ ವೈ ನಾರಾಯಣ ಆಸೀನ್ ನ ಬ್ರಹ್ಮಾ ನ ಈಶಾನೋ ನಾಪೋ ನಾಗ್ನಿಸಮೌ ನೇಮೇ ದ್ಯಾವಾಪೃಥಿವೀ ನ ನಕ್ಷತ್ರಾಣಿ ನ ಸೂರ್ಯಃ** — "ಸೃಷ್ಟಿಯ ಪ್ರಾರಂಭದಲ್ಲಿ ಪರಮ ಪುರುಷನಾದ ನಾರಾಯಣನೊಬ್ಬನೇ ಇದ್ದನು. ಬ್ರಹ್ಮ ಇರಲಿಲ್ಲ, ಶಿವನಿರಲಿಲ್ಲ, ಅಗ್ನಿ ಇರಲಿಲ್ಲ, ಚಂದ್ರ ಇರಲಿಲ್ಲ, ಆಕಾಶದಲ್ಲಿ ನಕ್ಷತ್ರಗಳಿರಲಿಲ್ಲ, ಸೂರ್ಯನಿರಲಿಲ್ಲ." (ಮಹಾಉಪನಿಷತ್ತು 1) ಮಹಾ ಉಪನಿಷತ್ತಿನಲ್ಲಿ ಶಿವನು ಪರಮ ಪ್ರಭುವಿನ ಹಣೆಯಿಂದ ಹುಟ್ಟಿದ ಎಂದು ಹೇಳಿದೆ. ಹೀಗೆ ವೇದಗಳು ನಾವು ಪೂಜಿಸಬೇಕಾದದ್ದು ಬ್ರಹ್ಮ ಮತ್ತು ಶಿವರನ್ನು ಸೃಷ್ಟಿ ಮಾಡಿದ ಪರಮ ಪ್ರಭುವನ್ನು ಎಂದು ಹೇಳುತ್ತವೆ.

ಮೋಕ್ಷಧರ್ಮದಲ್ಲಿ ಕೃಷ್ಣನು ಹೀಗೆ ಹೇಳುತ್ತಾನೆ —

**ಪ್ರಜಾಪತಿಂ ಚ ರುದ್ರಂ ಚಾಪ್ಯಹಮೇವ ಸೃಜಾಮಿ ವೈ |**
**ತೌಹಿ ಮಾಂ ನ ವಿಜಾನೀತೋ ಮಮ ಮಾಯಾವಿಮೋಹಿತೌ ||**

"ಪ್ರಜಾಪತಿಗಳು, ಶಿವ ಮತ್ತು ಇತರರನ್ನು ನಾನು ಸೃಷ್ಟಿಸಿದೆ. ಆದರೆ ನನ್ನ ಮಾಯಾಶಕ್ತಿಯಿಂದ ಭ್ರಾಂತರಾದ ಅವರಿಗೆ ನಾನು ಅವರನ್ನು ಸೃಷ್ಟಿಸಿದೆ ಎಂದು ತಿಳಿಯದು." ವರಾಹ ಪುರಾಣದಲ್ಲಿಯೂ ಹೀಗೆ ಹೇಳಿದೆ —

**ನಾರಾಯಣಃ ಪರೋ ದೇವಸ್ ತಸ್ಮಾಜ್ಜಾತಶ್ಚತುರ್ಮುಖಃ |**
**ತಸ್ಮಾದ್ ರುದ್ರೋऽಭವದ್ ದೇವಃ ಸ ಚ ಸರ್ವಜ್ಞತಾಂ ಗತಃ ||**

"ನಾರಾಯಣನು ದೇವೋತ್ತಮ ಪರಮ ಪುರುಷ. ಅವನಿಂದ ಬ್ರಹ್ಮನು ಹುಟ್ಟಿದನು, ಅವನಿಂದ ಶಿವನು ಹುಟ್ಟಿದನು."

ಶ್ರೀಕೃಷ್ಣನು ಎಲ್ಲ ತಲೆಮಾರುಗಳ ಮೂಲ. ಅವನನ್ನು ಎಲ್ಲದರ ಅತ್ಯಂತ ಸಮರ್ಥ ಕಾರಣನು ಎಂದು ಕರೆಯುತ್ತಾರೆ. ಆತನು, "ಎಲ್ಲವೂ ನನ್ನಿಂದ ಹುಟ್ಟಿರುವುದರಿಂದ ನಾನು ಎಲ್ಲದರ ಮೂಲ ಕಾರಣನು. ಎಲ್ಲವೂ ನನ್ನ ಅಧೀನದಲ್ಲಿದೆ; ಯಾರೂ ನನ್ನ ಮೇಲಿಲ್ಲ", ಎಂದು

ಹೇಳಿದ್ದಾನೆ. ಕೃಷ್ಣನನ್ನು ಬಿಟ್ಟರೆ ಪರಮ ನಿಯಂತ್ರಕನು ಯಾರೂ ಇಲ್ಲ. ಈ ರೀತಿಯಲ್ಲಿ ಒಬ್ಬ ಅಧಿಕೃತ ಗುರುವಿನಿಂದ ವೈದಿಕ ಸಾಹಿತ್ಯದ ಉಲ್ಲೇಖಗಳೊಡನೆ ಕೃಷ್ಣನನ್ನು ಅರ್ಥಮಾಡಿಕೊಳ್ಳುವವನು ತನ್ನ ಶಕ್ತಿಯನ್ನೆಲ್ಲ ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಿ ನಿಜವಾದ ವಿದ್ವಾಂಸನಾಗುತ್ತಾನೆ. ಅವನೊಡನೆ ಹೋಲಿಸಿದಾಗ ಕೃಷ್ಣನನ್ನು ಸರಿಯಾಗಿ ತಿಳಿಯದ ಉಳಿದವರೆಲ್ಲ ಮೂರ್ಖರು. ಮೂರ್ಖನು ಮಾತ್ರ ಕೃಷ್ಣನು ಸಾಮಾನ್ಯ ಮನುಷ್ಯ ಎಂದು ಭಾವಿಸುತ್ತಾನೆ. ಕೃಷ್ಣಪ್ರಜ್ಞೆ ಇರುವ ಮನುಷ್ಯನು ಮೂರ್ಖರಿಂದ ದಿಗ್ಭ್ರಾಂತನಾಗಬಾರದು. ಭಗವದ್ಗೀತೆಯ ಅಧಿಕೃತವಲ್ಲದ ಎಲ್ಲ ವ್ಯಾಖ್ಯಾನಗಳನ್ನೂ, ಅರ್ಥವಿವರಣೆಯನ್ನೂ ಅವನು ದೂರ ಇಡಬೇಕು. ನಿಶ್ಚಲವಾದ ಸಂಕಲ್ಪ ಮತ್ತು ದೃಢತೆಯಿಂದ ಆತನು ಕೃಷ್ಣಪ್ರಜ್ಞೆಯಲ್ಲಿ ಮುಂದುವರಿಯಬೇಕು.

## ಶ್ಲೋಕ - 9

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥೯॥**

**ಮತ್ ಚಿತ್ತಾಃ**—ಪೂರ್ಣ ಮನಸ್ಸಿನಿಂದ ನನ್ನಲ್ಲಿ ಲೀನರಾಗಿ; **ಮತ್ ಗತ ಪ್ರಾಣಾಃ**—ಜೀವನವನ್ನು ನನ್ನಲ್ಲಿ ಅರ್ಪಿಸಿದವರಾಗಿ; **ಬೋಧಯನ್ತಃ**—ಬೋಧಿಸುತ್ತ; **ಪರಸ್ಪರಮ್**—ಅವರವರಲ್ಲಿ; **ಕಥಯಂತಃ**—ಮಾತನಾಡುತ್ತ; **ಚ**—ಕೂಡ; **ಮಾಮ್**—ನನ್ನ ವಿಚಾರವಾಗಿ; **ನಿತ್ಯಮ್**— ನಿರಂತರವಾಗಿ; **ತುಷ್ಯನ್ತಿ**—ತೃಪ್ತರಾಗುತ್ತಾರೆ; **ಚ**—ಕೂಡ; **ರಮನ್ತಿ**—ದಿವ್ಯಾನಂದವನ್ನು ಅನುಭವಿಸುತ್ತಾರೆ; **ಚ**—ಕೂಡ.

## ಅನುವಾದ

**ನನ್ನ ಪರಿಶುದ್ಧ ಭಕ್ತರ ಯೋಚನೆಗಳು ನನ್ನಲ್ಲಿ ನೆಲೆಸಿರುತ್ತವೆ. ಅವರ ಬದುಕುಗಳು ಸಂಪೂರ್ಣವಾಗಿ ನನಗೆ ಅರ್ಪಿತವಾಗುತ್ತವೆ ಮತ್ತು ಪರಸ್ಪರವಾಗಿ ನನ್ನ ವಿಷಯವನ್ನು ತಿಳಿಸಿಕೊಡುತ್ತ ನನ್ನ ಬಗೆಗೆ ಮಾತನಾಡುತ್ತ ಅವರು ಬಹುತೃಪ್ತಿಯನ್ನೂ ಆನಂದವನ್ನೂ ಪಡೆಯುತ್ತಾರೆ.**

## ಭಾವಾರ್ಥ

ಇಲ್ಲಿ ಪರಿಶುದ್ಧ ಲಕ್ಷಣಗಳನ್ನು ಹೇಳಿದೆ. ಇಂತಹವರು ಪರಮ ಪ್ರಭುವಿನ ಪ್ರೇಮಪೂರ್ವಕ ದಿವ್ಯಸೇವೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾರೆ. ಅವರ ಮನಸ್ಸುಗಳನ್ನು ಕೃಷ್ಣನ ಪಾದಕಮಲಗಳಿಂದ ವಿಚಲಿತಗೊಳಿಸಲು ಸಾಧ್ಯವಿಲ್ಲ. ಅವರ ಮಾತು ಆಧ್ಯಾತ್ಮಿಕ ವಸ್ತುಗಳನ್ನೇ ಕುರಿತದ್ದಾಗಿರುತ್ತದೆ. ಈ ಶ್ಲೋಕದಲ್ಲಿ ಪರಿಶುದ್ಧ ಭಕ್ತರ ಲಕ್ಷಣಗಳನ್ನು ಖಚಿತವಾಗಿ ಹೇಳಿದೆ. ಪರಮ ಪ್ರಭುವಿನ ಭಕ್ತರು ದಿನದ ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ಪರಮ ಪ್ರಭುವಿನ ಗುಣಗಳ ಮತ್ತು ಲೀಲೆಗಳ ಮಹಿಮೆಯನ್ನು ಹೇಳುವುದರಲ್ಲಿಯೇ ನಿರತರಾಗಿರುತ್ತಾರೆ. ಅವರ ಹೃದಯಗಳೂ ಆತ್ಮಗಳೂ ಸದಾ ಕೃಷ್ಣನಲ್ಲಿ ಮುಳುಗಿರುತ್ತವೆ, ಮತ್ತು ಇತರ ಭಕ್ತರೊಡನೆ ಅವನ ವಿಷಯವನ್ನು ಚರ್ಚಿಸುವುದೇ ಅವರಿಗೊಂದು ಸಂತೋಷ.

ಭಕ್ತಿಸೇವೆಯ ಮೊದಲನೆಯ ಹಂತದಲ್ಲಿ ಅವರು ಸೇವೆಯಿಂದಲೇ ದಿವ್ಯ ಆನಂದವನ್ನು ಅನುಭವಿಸುತ್ತಾರೆ. ಪಕ್ವವಾದ ಹಂತದಲ್ಲಿ ಅವರು ವಾಸ್ತವವಾಗಿ ಭಗವಂತನ ಪ್ರೇಮದಲ್ಲಿ ನೆಲೆಸಿರುತ್ತಾರೆ. ಆ ದಿವ್ಯಸ್ಥಿತಿಯಲ್ಲಿ ಒಮ್ಮೆ ನೆಲೆಸಿದ ಮೇಲೆ ಅವರು ಪ್ರಭುವು ತನ್ನ ನಿವಾಸದಲ್ಲಿ ಮೆರೆಯುವ ಅತ್ಯುನ್ನತ ಪರಿಪೂರ್ಣತೆಯನ್ನು ಸವಿಯಬಹುದು. ಆಧ್ಯಾತ್ಮಿಕ ಭಕ್ತಿಪೂರ್ವಕ ಸೇವೆಯನ್ನು ಚೈತನ್ಯ ಮಹಾಪ್ರಭುಗಳು ಜೀವಿಯ ಹೃದಯದಲ್ಲಿ ಒಂದು ಬೀಜವನ್ನು ಬಿತ್ತುವುದಕ್ಕೆ ಹೋಲಿಸುತ್ತಾರೆ. ವಿಶ್ವದ ಬೇರೆ ಬೇರೆ ಭಾಗಗಳಲ್ಲಿ ಅಸಂಖ್ಯಾತ ಜೀವಿಗಳು ಪ್ರಯಾಣ ಮಾಡುತ್ತಿರುತ್ತಾರೆ. ಅವರಲ್ಲಿ ಕೆಲವರಿಗೆ ಪರಿಶುದ್ಧ ಭಕ್ತನನ್ನು ಕಂಡು ಭಕ್ತಿಸೇವೆಯನ್ನು ಅರ್ಥಮಾಡಿಕೊಳ್ಳುವ ಸುಯೋಗ ಲಭ್ಯವಾಗುತ್ತದೆ. ಈ ಭಕ್ತಿಸೇವೆಯು ಒಂದು ಬೀಜದಂತೆ. ಒಂದು ಮರದ ಬೀಜಕ್ಕೆ ತಪ್ಪದೆ ನೀರೆರೆದರೆ ಅದು ಫಲಿಸುತ್ತದೆ. ಹಾಗೆಯೇ ಜೀವಿಯೊಬ್ಬನ ಹೃದಯದಲ್ಲಿ ಇದನ್ನು ಬಿತ್ತಿದರೆ, ಅವನು ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ ಎಂದು ಜಪ ಮಾಡುತ್ತಿದ್ದರೆ, ಬೀಜವು ಫಲಿಸುತ್ತದೆ. ಭಕ್ತಿಸೇವೆಯ ದಿವ್ಯತರುವು ಬೆಳೆಯುತ್ತಲೇ ಹೋಗುತ್ತದೆ. ಭೌತಿಕ ಜಗತ್ತಿನ ಆವರಣವನ್ನು ಭೇದಿಸಿಕೊಂಡು ಹೋಗಿ ಆಧ್ಯಾತ್ಮಿಕ ಆಕಾಶದ ಬ್ರಹ್ಮಜ್ಯೋತಿಯ ಪ್ರಭೆಯನ್ನು ಪ್ರವೇಶಿಸುವವರೆಗೆ ಅದು ಬೆಳೆಯುತ್ತದೆ. ಆಧ್ಯಾತ್ಮಿಕ ಜಗತ್ತಿನಲ್ಲಿ ಸಹ ಆ ಗಿಡವು ಅತ್ಯುನ್ನತ ಲೋಕವನ್ನು ಮುಟ್ಟುವವರೆಗೆ ಬೆಳೆಯುತ್ತದೆ. ಆ ಲೋಕವು ಕೃಷ್ಣನ ಪರಮ ಲೋಕ. ಅದಕ್ಕೆ ಗೋಲೋಕ ವೃಂದಾವನ ಎಂದು ಹೆಸರು. ಕಡೆಗೆ ಗಿಡವು ಕೃಷ್ಣನ ಪಾದಾರವಿಂದಗಳಲ್ಲಿ ಆಶ್ರಯವನ್ನು ಪಡೆದು ಅಲ್ಲಿ ವಿಶ್ರಮಿಸುತ್ತದೆ. ಕ್ರಮೇಣ ಗಿಡದಲ್ಲಿ ಹೂ ಹಣ್ಣುಗಳು ಬಿಡುವಂತೆ, ಭಕ್ತಿಸೇವೆಯು ಸಹ ಫಲಗಳನ್ನು ನೀಡುತ್ತದೆ. ಕೀರ್ತನೆ - ಶ್ರವಣಗಳ ರೂಪದಲ್ಲಿ ನೀರರೆಯುವ ಪ್ರಕ್ರಿಯೆಯು ಮುಂದುವರಿಯುತ್ತದೆ. ಭಕ್ತಿಸೇವೆಯ ಈ ಗಿಡವನ್ನು ಚೈತನ್ಯ ಚರಿತಾಮೃತದಲ್ಲಿ (ಮಧ್ಯಲೀಲಾ, 19ನೆಯ ಅಧ್ಯಾಯ) ಸಂಪೂರ್ಣವಾಗಿ ವರ್ಣಿಸಿದೆ. ಸಂಪೂರ್ಣ ಗಿಡವು ಪರಮ ಪ್ರಭುವಿನ ಚರಣಕಮಲಗಳಲ್ಲಿ ಆಶ್ರಯ ಪಡೆದಾಗ ಮನುಷ್ಯನು ಪೂರ್ಣವಾಗಿ ಭಗವತ್ಪ್ರೇಮದಲ್ಲಿ ತನ್ಮಯನಾಗುತ್ತಾನೆ. ಆಗ ಹೇಗೆ ಮೀನು ನೀರನ್ನು ಬಿಟ್ಟು ಇರಲಾರದೋ ಹಾಗೆ ಪರಮ ಪ್ರಭುವಿನೊಡನೆ ಸಂಪರ್ಕವಿಲ್ಲದೆ ಅವನು ಒಂದು ಕ್ಷಣವೂ ಇರಲಾರ ಎಂದು ಆ ಕೃತಿಯಲ್ಲಿ ವಿವರಿಸಿದೆ. ಇಂತಹ ಸ್ಥಿತಿಯಲ್ಲಿ ಪರಮ ಪ್ರಭುವಿನೊಡನೆ ಸಂಪರ್ಕಪಡೆದು ಭಕ್ತನು ದಿವ್ಯ ಗುಣಗಳನ್ನು ಹೊಂದುತ್ತಾನೆ.

ಪರಮ ಪ್ರಭು ಮತ್ತು ಆತನ ಭಕ್ತರ ಸಂಬಂಧದ ಇಂತಹ ವೃತ್ತಾಂತಗಳಿಂದ ಶ್ರೀಮದ್ಭಾಗವತವು ತುಂಬಿಹೋಗಿದೆ. ಆದುದರಿಂದ ಭಾಗವತದಲ್ಲಿಯೇ ಹೇಳಿದಂತೆ (12.13.18) ಶ್ರೀಮದ್ಭಾಗವತವು ಭಕ್ತರಿಗೆ ತುಂಬ ಪ್ರಿಯವಾಗಿದೆ. **ಶ್ರೀಮದ್ಭಾಗವತಂ ಪುರಾಣಮ್ ಅಮಲಂ ಯದ್ ವೈಷ್ಣವಾನಾಂ ಪ್ರಿಯಮ್**. ಈ ವೃತ್ತಾಂತದಲ್ಲಿ ಭೌತಿಕ ಚಟುವಟಿಕೆಗಳು, ಆರ್ಥಿಕ ಅಭಿವೃದ್ಧಿ, ಇಂದ್ರಿಯತೃಪ್ತಿ ಅಥವಾ ಮುಕ್ತಿಯನ್ನು ಕುರಿತು ಏನೂ ಇಲ್ಲ. ಪರಮ ಪ್ರಭುವಿನ ಮತ್ತು ಅವನ ಭಕ್ತರ ಆಧ್ಯಾತ್ಮಿಕ ಸ್ವಭಾವವನ್ನು ಸಂಪೂರ್ಣವಾಗಿ ವರ್ಣಿಸುವ ಒಂದೇ ಒಂದು ವೃತ್ತಾಂತ ಶ್ರೀಮದ್ಭಾಗವತ. ತರುಣ ತರುಣಿಯರು ಪರಸ್ಪರ ಸಹವಾಸದಲ್ಲಿ ಸಂತೋಷಪಡುವಂತೆ ಕೃಷ್ಣಪ್ರಜ್ಞೆಯಲ್ಲಿರುವ ಸಾಕ್ಷಾತ್ಕಾರ ಪಡೆದ ಚೇತನರು ಇಂತಹ ಆಧ್ಯಾತ್ಮಿಕ ಸಾಹಿತ್ಯಗಳನ್ನು ಕೇಳುವುದರಲ್ಲಿ ಸದಾ ಸಂತೋಷಪಡುತ್ತಾರೆ.

## ಶ್ಲೋಕ - 10

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ |**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ||೧೦||**

**ತೇಷಾಮ್**—ಅವರಿಗೆ; **ಸತತ ಯುಕ್ತಾನಾಮ್**—ಸತತವಾಗಿ ನಿರತರಾದ; **ಭಜತಾಮ್**—ಭಕ್ತಿಸೇವೆಯನ್ನು ಸಲ್ಲಿಸುವುದರಲ್ಲಿ; **ಪ್ರೀತಿ ಪೂರ್ವಕಮ್**—ಪ್ರೇಮ ಭಾವೋದ್ರೇಕದಲ್ಲಿ; **ದದಾಮಿ**—ನೀಡುತ್ತೇನೆ; **ಬುದ್ಧಿಯೋಗಮ್**—ನೈಜಬುದ್ಧಿಯನ್ನು; **ತಮ್**—ಆ; **ಯೇನ**—ಯಾವುದರಿಂದ; **ಮಾಮ್**—ನನ್ನಲ್ಲಿಗೆ; **ಉಪಯಾನ್ತಿ**—ಬರುತ್ತಾರೆ; **ತೇ**—ಅವರು.

## ಅನುವಾದ

**ನನ್ನ ಪ್ರೀತಿಪೂರ್ವಕ ಸೇವೆಗೆ ಸದಾ ಮುಡಿಪಾಗಿರುವವರಿಗೆ, ಅವರು ನನ್ನ ಬಳಿಗೆ ಬರುವುದಕ್ಕೆ ಅಗತ್ಯವಾದ ಬುದ್ಧಿಯೋಗವನ್ನು ನಾನು ಕೊಡುತ್ತೇನೆ.**

## ಭಾವಾರ್ಥ

ಈ ಶ್ಲೋಕದಲ್ಲಿ **ಬುದ್ಧಿಯೋಗಮ್** ಎನ್ನುವ ಪದ ಅರ್ಥವತ್ತಾದದ್ದು. ಎರಡನೆಯ ಅಧ್ಯಾಯದಲ್ಲಿ ಪ್ರಭುವು ಅರ್ಜುನನಿಗೆ ಉಪದೇಶ ಮಾಡುತ್ತ, ತಾನು ಅವನಿಗೆ ಅನೇಕ ವಿಷಯಗಳನ್ನು ಕುರಿತು ಮಾತನಾಡಿದ್ದೇನೆ, ಬುದ್ಧಿಯೋಗವನ್ನು ಉಪದೇಶಿಸುತ್ತೇನೆ ಎಂದು ಹೇಳಿದುದನ್ನು ಸ್ಮರಿಸಬಹುದು. ಈಗ ಬುದ್ಧಿಯೋಗವನ್ನು ವಿವರಿಸಿದೆ. ಬುದ್ಧಿಯೋಗ ಎಂದರೆ ಕೃಷ್ಣಪ್ರಜ್ಞೆಯಲ್ಲಿ ಕಾರ್ಯಮಾಡುವುದು. ಅದೇ ಅತ್ಯುನ್ನತ ಬುದ್ಧಿವಂತಿಕೆ. ಬುದ್ಧಿ ಎಂದರೆ ಯೋಚನಾಶಕ್ತಿ, ಯೋಗ ಎಂದರೆ ಆಧ್ಯಾತ್ಮಿಕ ಕ್ರಿಯೆಗಳು ಅಥವಾ ಯೋಗದಿಂದ ಉತ್ಥಾನ. ಮನುಷ್ಯನು ಭಗವದ್ಧಾಮಕ್ಕೆ ಹಿಂದಿರುಗಲು ಪ್ರಯತ್ನಿಸಿದಾಗ, ಭಕ್ತಿಸೇವೆಯಲ್ಲಿ ಕೃಷ್ಣಪ್ರಜ್ಞೆಯನ್ನು ಕೈಗೊಂಡಾಗ ಅವನ ಕ್ರಿಯೆಗೆ ಬುದ್ಧಿಯೋಗ ಎಂದು ಹೆಸರು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಬುದ್ಧಿಯೋಗವು ಮನುಷ್ಯನು ಈ ಜಗತ್ತಿನ ಗೋಜಿನಿಂದ ಪಾರಾಗುವ ಪ್ರಕ್ರಿಯೆ. ಪ್ರಗತಿಯ ಕಟ್ಟಕಡೆಯ ಗುರಿ ಕೃಷ್ಣನೇ. ಜನಕ್ಕೆ ಇದು ತಿಳಿಯದು. ಆದುದರಿಂದ ಭಕ್ತರ ಮತ್ತು ಅಧಿಕಾರಯುತ ಗುರು ಸಹವಾಸವು ಮುಖ್ಯ. ಕೃಷ್ಣನೇ ಗುರಿ ಎಂದು ತಿಳಿದುಕೊಳ್ಳಬೇಕು. ಗುರಿಯನ್ನು ನಿಶ್ಚಯ ಮಾಡಿಕೊಂಡ ಮೇಲೆ ದಾರಿಯನ್ನು ನಿಧಾನವಾಗಿ ಆದರೆ ಮುಂದು ಮುಂದಕ್ಕೆ ಸಾಗುತ್ತ ಕ್ರಮಿಸಲಾಗುವುದು.

ಮನುಷ್ಯನಿಗೆ ಬದುಕಿನ ಗುರಿಯು ತಿಳಿದಿದ್ದೂ ಕರ್ಮಫಲಗಳಿಗೆ ಅಂಟಿಕೊಂಡಿದ್ದರೆ ಆತನು ಕರ್ಮಯೋಗದಲ್ಲಿ ಕೆಲಸ ಮಾಡುತ್ತಿದ್ದಾನೆ. ಗುರಿಯು ಕೃಷ್ಣ ಎಂದು ತಿಳಿದಿದ್ದರೂ ಕೃಷ್ಣನನ್ನು ತಿಳಿಯಲು ಊಹಾತ್ಮಕ ಚಿಂತನೆಗಳಲ್ಲಿ ತೊಡಗಿದ್ದರೆ ಆತನು ಜ್ಞಾನಯೋಗದಲ್ಲಿ ಕೆಲಸ ಮಾಡುತ್ತಿದ್ದಾನೆ. ಆತನಿಗೆ ಗುರಿಯು ತಿಳಿದಿದ್ದು, ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ಮತ್ತು ಭಕ್ತಿಸೇವೆಯಲ್ಲಿ ಕೃಷ್ಣನನ್ನು ಅರಸುತ್ತಿದ್ದರೆ ಆತನು ಭಕ್ತಿಯೋಗದಲ್ಲಿ ಅಥವಾ ಬುದ್ಧಿಯೋಗದಲ್ಲಿ ಕೆಲಸಮಾಡುತ್ತಿದ್ದಾನೆ; ಇದೇ ಪೂರ್ಣಯೋಗ. ಈ ಪೂರ್ಣಯೋಗವು ಬದುಕಿನ ಅತ್ಯುನ್ನತ ಪರಿಪೂರ್ಣತೆಯ ಹಂತ.

ಮನುಷ್ಯನಿಗೆ ಸದ್ಗುರುವು ಇರಬಹುದು. ಆತನು ಒಂದು ಆಧ್ಯಾತ್ಮಿಕ ಸಂಘಕ್ಕೆ ಸೇರಿರಬಹುದು. ಆದರೂ, ಆತನು ಮುನ್ನಡೆಯುವಷ್ಟು ಬುದ್ಧಿವಂತನಲ್ಲದಿದ್ದರೆ, ಒಳಗಿನಿಂದ ಕೃಷ್ಣನು, ಆತನು ಕಷ್ಟವಿಲ್ಲದೆ ಕಡೆಗೆ ಹೇಗೆ ತನ್ನ ಬಳಿಗೆ ಬರಬಹುದು ಎಂದು ದಾರಿಯನ್ನು ತೋರಿಸುತ್ತಾನೆ. ಇದಕ್ಕೆ ಬೇಕಾದ ಅರ್ಹತೆ ಎಂದರೆ, ಮನುಷ್ಯನು ಸದಾ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿದ್ದು, ಪ್ರೀತಿ ಮತ್ತು ಭಕ್ತಿಯಿಂದ ಎಲ್ಲ ಬಗೆಯ ಸೇವೆಗಳನ್ನೂ ಸಲ್ಲಿಸಬೇಕು. ಆತನು ಕೃಷ್ಣನಿಗಾಗಿ ಏನಾದರೂ ಕೆಲಸವನ್ನು ಮಾಡಬೇಕು. ಆ ಕೆಲಸವನ್ನು ಪ್ರೀತಿಯಿಂದ ಮಾಡಬೇಕು. ಭಕ್ತನು ಆತ್ಮಸಾಕ್ಷಾತ್ಕಾರದ ಹಾದಿಯಲ್ಲಿ ಮುನ್ನಡೆಯುವಷ್ಟು ಬುದ್ಧಿವಂತನಲ್ಲದಿದ್ದರೂ ಪ್ರಾಮಾಣಿಕನಾಗಿದ್ದು ಭಕ್ತಿಸೇವೆಗೆ ನಿಷ್ಠನಾಗಿದ್ದರೆ, ಪ್ರಭುವು ಪ್ರಗತಿಯನ್ನು ಸಾಧಿಸಲು ಮತ್ತು ಕಟ್ಟಕಡೆಗೆ ತನ್ನ ಬಳಿಗೆ ಬರಲು ಅವನಿಗೆ ಅವಕಾಶವನ್ನು ನೀಡುತ್ತಾನೆ.

## ಶ್ಲೋಕ - 11

**ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ |**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ||೧೧||**

**ತೇಷಾಮ್**—ಅವರಿಗೋಸ್ಕರ; **ಏವ**—ಖಂಡಿತವಾಗಿಯೂ; **ಅನುಕಮ್ಪಾ ಅರ್ಥಮ್**—ವಿಶೇಷ ದಯೆಯನ್ನು ತೋರಲು; **ಅಹಮ್**—ನಾನು; **ಅಜ್ಞಾನ ಜಮ್**—ಅಜ್ಞಾನದ ಕಾರಣದಿಂದಾದ; **ತಮಃ**—ಅಂಧಕಾರವನ್ನು; **ನಾಶಯಾಮಿ**—ಹೋಗಲಾಡಿಸುತ್ತೇನೆ; **ಆತ್ಮ ಭಾವ**—ಅವರ ಹೃದಯಗಳಲ್ಲಿ; **ಸ್ಥಃ**—ನೆಲೆಸಿ; **ಜ್ಞಾನ**—ಜ್ಞಾನದ; **ದೀಪೇನ**—ದೀಪದಿಂದ; **ಭಾಸ್ವತಾ**— ಪ್ರಕಾಶಿಸುತ್ತಾ.

## ಅನುವಾದ

**ಅವರಿಗೆ ವಿಶೇಷ ಅನುಕಂಪವನ್ನು ತೋರಲು ನಾನು ಅವರ ಹೃದಯಗಳಲ್ಲಿದ್ದು, ಜ್ಞಾನದ ದೀಪದ ಬೆಳಕಿನಿಂದ ಅಜ್ಞಾನದ ಕತ್ತಲನ್ನು ನಾಶಮಾಡುತ್ತೇನೆ.**

## ಭಾವಾರ್ಥ

ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಮಂತ್ರದ ಸಂಕೀರ್ತನೆಯನ್ನು ವಾರಾಣಸಿಯಲ್ಲಿ ಚೈತನ್ಯ ಮಹಾಪ್ರಭುಗಳು ಪ್ರಸಾರಮಾಡುತ್ತಿದ್ದಾಗ ಸಾವಿರಾರು ಮಂದಿ ಅವರನ್ನು ಅನುಸರಿಸಿದರು. ಆ ದಿನಗಳಲ್ಲಿ ವಾರಾಣಸಿಯಲ್ಲಿ ಬಹು ಪ್ರಭಾವಶಾಲಿಗಳೂ ವಿದ್ವಾಂಸರೂ ಆದ ಪ್ರಕಾಶಾನಂದ ಸರಸ್ವತಿಯವರು ಚೈತನ್ಯ ಮಹಾಪ್ರಭುಗಳು ಅತಿಭಾವುಕರೆಂದು ಹಾಸ್ಯ ಮಾಡಿದರು. ಕೆಲವೊಮ್ಮೆ ತತ್ವಶಾಸ್ತ್ರಜ್ಞರು ಭಕ್ತರನ್ನು ಟೀಕೆ ಮಾಡುತ್ತಾರೆ. ಏಕೆಂದರೆ ಭಕ್ತರಲ್ಲಿ ಬಹುಮಂದಿ ಅಜ್ಞಾನದ ಕತ್ತಲಿನಲ್ಲಿದ್ದಾರೆ; ತತ್ವಜ್ಞಾನದಲ್ಲಿ ಅವರು ಅತಿಮುಗ್ಧರೂ ಅತಿಭಾವುಕರೂ ಆಗಿದ್ದಾರೆ ಎಂದು ತತ್ವಶಾಸ್ತ್ರಜ್ಞರು ಭಾವಿಸುತ್ತಾರೆ. ವಾಸ್ತವಾಂಶ ಇದಲ್ಲ. ಭಕ್ತಿಯ ತತ್ವವನ್ನು ಪ್ರತಿಪಾದಿಸಿದ ಪ್ರಗಲ್ಭ ವಿದ್ವಾಂಸರಿದ್ದಾರೆ. ಭಕ್ತನು ಅವರ ಬರೆಹಗಳಿಂದ ಅಥವಾ ತನ್ನ ಗುರುವಿನಿಂದ ಪ್ರಯೋಜನವನ್ನು

ಪಡೆದುಕೊಳ್ಳದಿದ್ದರೂ, ಆತನು ತನ್ನ ಭಕ್ತಿಸೇವೆಯಲ್ಲಿ ಪ್ರಾಮಾಣಿಕನಾಗಿದ್ದರೆ ಅವನ ಹೃದಯದಲ್ಲಿರುವ ಕೃಷ್ಣನೇ ಅವನಿಗೆ ನೆರವಾಗುತ್ತಾನೆ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ನಿರತನಾದ ಭಕ್ತನು ಜ್ಞಾನಹೀನನಾಗಿರುವುದಿಲ್ಲ. ವ್ಯಕ್ತಿಗೆ ಅಗತ್ಯವಾದ ಒಂದೇ ಅರ್ಹತೆ ಎಂದರೆ ಅವನು ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯನ್ನು ಮಾಡಬೇಕು.

ತಾರತಮ್ಯ ಜ್ಞಾನವಿಲ್ಲದೆ ಮನುಷ್ಯನಿಗೆ ಪರಿಶುದ್ಧ ಜ್ಞಾನವು ಇರುವುದಿಲ್ಲ ಎಂದು ಆಧುನಿಕ ತತ್ವಶಾಸ್ತ್ರಜ್ಞರು ಭಾವಿಸುತ್ತಾರೆ. ಪರಮ ಪ್ರಭುವೇ ಅವರಿಗೆ ಉತ್ತರಕೊಟ್ಟಿದ್ದಾನೆ. ಭಕ್ತಿಸೇವೆಯಲ್ಲಿ ನಿರತರಾಗಿರುವವರಿಗೆ ಸಾಕಷ್ಟು ಶಿಕ್ಷಣವಿಲ್ಲದಿರಬಹುದು; ವೇದದ ತತ್ವಗಳ ತಿಳಿವಳಿಕೆ ಸಾಕಷ್ಟು ಇಲ್ಲದಿರಬಹುದು. ಆದರೆ, ಈ ಶ್ಲೋಕದಲ್ಲಿ ಹೇಳಿರುವಂತೆ, ಪರಮ ಪ್ರಭು ಅವರಿಗೆ ಸಹಾಯ ಮಾಡುತ್ತಾನೆ.

ಪರಮ ಸತ್ಯವನ್ನು, ಪರಿಪೂರ್ಣ ಸತ್ಯವನ್ನು, ದೇವೋತ್ತಮ ಪರಮ ಪುರುಷನನ್ನು ಊಹಾತ್ಮಕ ಚಿಂತನೆಯಿಂದ ಅರ್ಥಮಾಡಿಕೊಳ್ಳುವುದು ಮೂಲತಃ ಸಾಧ್ಯವೇ ಇಲ್ಲ. ಏಕೆಂದರೆ ಪರಮಸತ್ಯನ ಮಹಿಮೆ ಎಷ್ಟೆಂದರೆ ಮಾನಸಿಕ ಪ್ರಯತ್ನ ಒಂದರಿಂದಲೇ ಆತನನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಪ್ರಭುವು ಅರ್ಜುನನಿಗೆ ಹೇಳುತ್ತಾನೆ. ಮನುಷ್ಯ ಎಷ್ಟೋ ಕೋಟಿ ವರ್ಷ ಊಹಾಪೋಹ ಮಾಡುತ್ತ ಇರಬಹುದು. ಆದರೆ ಆತನಲ್ಲಿ ಭಕ್ತಿ ಇಲ್ಲವಾದರೆ, ಪರಮಸತ್ಯನನ್ನು ಆತ ಪ್ರೀತಿಸದಿದ್ದರೆ, ಅವನಿಗೆ ಕೃಷ್ಣ ಅಥವಾ ಪರಮಸತ್ಯ ಅರ್ಥವಾಗುವುದೇ ಇಲ್ಲ. ಭಕ್ತಿಸೇವೆಯಿಂದ ಮಾತ್ರ ಕೃಷ್ಣನು ಪ್ರಸನ್ನನಾಗುತ್ತಾನೆ. ತನ್ನ ಊಹಾತೀತ ಶಕ್ತಿಯಿಂದ ಅವನು ಪರಿಶುದ್ಧ ಭಕ್ತನ ಹೃದಯಕ್ಕೆ ಪ್ರತ್ಯಕ್ಷನಾಗಬಲ್ಲ. ಪರಿಶುದ್ಧ ಭಕ್ತನು ತನ್ನ ಹೃದಯದಲ್ಲಿ ಕೃಷ್ಣನನ್ನು ಸದಾ ನೆಲೆಗೊಳಿಸಿಕೊಂಡಿರುತ್ತಾನೆ. ಸೂರ್ಯನಂತಿರುವ ಕೃಷ್ಣನ ಸನ್ನಿಧಿಯಲ್ಲಿ ಅಜ್ಞಾನದ ಕತ್ತಲೆಯು ಕೂಡಲೇ ಚದುರಿಹೋಗುತ್ತದೆ. ಪರಿಶುದ್ಧ ಭಕ್ತನಿಗೆ ಕೃಷ್ಣನು ತೋರುವ ವಿಶೇಷ ಅನುಕಂಪ ಇದು.

ಲಕ್ಷಾಂತರ ಜನ್ಮಗಳಲ್ಲಿ ಪಡೆದ ಐಹಿಕ ಸಹವಾಸದ ಕಲ್ಮಷದ ಸೋಂಕಿನಿಂದ ಮನುಷ್ಯನ ಹೃದಯವನ್ನು ಪ್ರಾಪಂಚಿಕತೆಯ ಧೂಳು ಮುಚ್ಚಿಬಿಟ್ಟಿರುತ್ತದೆ. ಆದರೆ ಅವನು ಭಕ್ತಿಸೇವೆಯಲ್ಲಿ ನಿರತನಾಗಿದ್ದರೆ ಮತ್ತು ಸದಾ ಹರೇಕೃಷ್ಣ ಸಂಕೀರ್ತನೆ ಮಾಡುತ್ತಿದ್ದರೆ ಧೂಳು ಶೀಘ್ರವಾಗಿ ಹೊರಟುಹೋಗಿ ಮನುಷ್ಯನು ಪರಿಶುದ್ಧ ಜ್ಞಾನದ ನೆಲೆಗೆ ಏರುತ್ತಾನೆ. ಕಟ್ಟಕಡೆಯ ಗುರಿಯಾದ ವಿಷ್ಣುವನ್ನು ಈ ಸಂಕೀರ್ತನೆಯಿಂದ ಮತ್ತು ಭಕ್ತಿಸೇವೆಯಿಂದ ಮಾತ್ರ ಮುಟ್ಟಲು ಸಾಧ್ಯ; ಊಹಾತ್ಮಕ ಚಿಂತನೆ ಅಥವಾ ವಾದದಿಂದ ಸಾಧ್ಯವಿಲ್ಲ. ಪರಿಶುದ್ಧ ಭಕ್ತನು ಪ್ರಾಪಂಚಿಕ ಅಗತ್ಯಗಳ ವಿಷಯವಾಗಿ ಆತಂಕಪಟ್ಟುಕೊಳ್ಳಬೇಕಾಗಿಲ್ಲ. ಏಕೆಂದರೆ ಅವನು ತನ್ನ ಹೃದಯದಿಂದ ಕತ್ತಲನ್ನು ತೊಡೆದು ಹಾಕಿದಾಗ ಪರಮ ಪ್ರಭುವು ಭಕ್ತನ ಪ್ರೇಮಪೂರ್ವಕ ಭಕ್ತಿಸೇವೆಯಿಂದ ಸುಪ್ರೀತನಾಗಿ ತಾನಾಗಿಯೇ ಎಲ್ಲವನ್ನೂ ಒದಗಿಸುತ್ತಾನೆ. ಭಗವದ್ಗೀತೆಯ ಉಪದೇಶಗಳ ಸಾರ ಇದೇ. ಭಗವದ್ಗೀತೆಯನ್ನು ಅಧ್ಯಯನ ಮಾಡಿದವನು ಪರಮ ಪ್ರಭುವಿಗೆ ಸಂಪೂರ್ಣವಾಗಿ ಶರಣಾದ ಆತ್ಮನಾಗಬಲ್ಲ; ಭಕ್ತಿಸೇವೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳಬಲ್ಲ. ಪ್ರಭುವೇ ಹೊಣೆಯನ್ನು ವಹಿಸಿಕೊಂಡಾಗ ಮನುಷ್ಯನು ಎಲ್ಲ ಬಗೆಯ ಪ್ರಾಪಂಚಿಕ ಪ್ರಯತ್ನಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದುತ್ತಾನೆ.

## ಶ್ಲೋಕ 12-13

**ಅರ್ಜುನ ಉವಾಚ**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ |**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ||೧೨||**

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ |**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ||೧೩||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಪರಮ್**—ಪರಮ; **ಬ್ರಹ್ಮ**—ಸತ್ಯನು; **ಪರಮ್**—ಪರಮ; **ಧಾಮ**—ಧಾಮನು;**ಪವಿತ್ರಮ್**—ಶುದ್ಧನು; **ಪರಮಮ್**—ಪರಮ; **ಭವಾನ್**—ನೀನು; **ಪುರುಷಮ್**—ಪುರುಷನು; **ಶಾಶ್ವತಮ್**—ಮೂಲನಾದ; **ದಿವ್ಯಮ್**— ಅಲೌಕಿಕನು; **ಆದಿ ದೇವಮ್**—ಆದಿದೇವನು; **ಅಜಮ್**—ಜನ್ಮರಹಿತನು; **ವಿಭುಮ್**— ಅತ್ಯುತ್ತಮನು; **ಆಹುಃ**—ಹೇಳುತ್ತಾರೆ; **ತ್ವಾಮ್**—ನಿನ್ನನ್ನು ಕುರಿತು; **ಋಷಯಃ**—ಋಷಿಗಳು; **ಸರ್ವೇ**—ಎಲ್ಲರೂ; **ದೇವ ಋಷಿಃ**—ದೇವರ್ಷಿಯಾದ; **ನಾರದಃ**—ನಾರದನೂ; **ತಥಾ**—ಕೂಡ; **ಅಸಿತಃ**—ಅಸಿತನು; **ದೇವಲಃ**—ದೇವಲನು;**ವ್ಯಾಸಃ**—ವ್ಯಾಸನೂ; **ಸ್ವಯಮ್**—ಸ್ವತಃ, ನೀನೂ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಬ್ರವೀಷಿ**—ವಿವರಿಸುತ್ತಿದ್ದೀಯೆ; **ಮೇ**—ನನಗೆ.

### ಅನುವಾದ

**ಅರ್ಜುನನು ಹೇಳಿದನು—ನೀನು ದೇವೋತ್ತಮ ಪರಮ ಪುರುಷ, ಪರಂಧಾಮ, ಪವಿತ್ರ, ಪರಿಪೂರ್ಣ ಸತ್ಯ. ನೀನು ನಿತ್ಯನು, ದಿವ್ಯನು, ಆದಿಪುರುಷನು. ನಿನಗೆ ಹುಟ್ಟಿಲ್ಲ; ನೀನೇ ಅತ್ಯಂತ ಶ್ರೇಷ್ಠನು. ನಾರದ, ಅಸಿತ, ದೇವಲ ಮತ್ತು ವ್ಯಾಸರಂತಹ ಮಹರ್ಷಿಗಳು ನಿನ್ನ ವಿಷಯದಲ್ಲಿ ಈ ಸತ್ಯವನ್ನು ದೃಢಪಡಿಸುತ್ತಾರೆ. ಈಗ ನೀನೇ ಇದನ್ನು ನನಗೆ ಹೇಳುತ್ತಿದ್ದೀಯೆ.**

### ಭಾವಾರ್ಥ

ಈ ಎರಡು ಶ್ಲೋಕಗಳಲ್ಲಿ ಪ್ರಭುವು ಆಧುನಿಕ ತತ್ವಶಾಸ್ತ್ರಜ್ಞನಿಗೆ ಒಂದು ಅವಕಾಶವನ್ನು ಕೊಡುತ್ತಿದ್ದಾನೆ; ಏಕೆಂದರೆ ಪರಮ ಪ್ರಭುವು ವ್ಯಕ್ತಿಗತ ಆತ್ಮಕ್ಕಿಂತ ಭಿನ್ನನಾದವನು ಎನ್ನುವುದು ಸ್ಪಷ್ಟ. ಅರ್ಜುನನು ಭಗವದ್ಗೀತೆಯ ಈ ಅಧ್ಯಾಯದ ನಾಲ್ಕು ಬಹು ಮುಖ್ಯ ಶ್ಲೋಕಗಳನ್ನು ಕೇಳಿದನಂತರ ಎಲ್ಲ ಸಂದೇಹಗಳಿಂದಲೂ ಮುಕ್ತನಾಗಿ ಶ್ರೀಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ಒಪ್ಪಿಕೊಂಡ. ಕೂಡಲೇ ಧೈರ್ಯವಾಗಿ, "ನೀನೇ ಪರಬ್ರಹ್ಮ, ದೇವೋತ್ತಮ ಪರಮ ಪುರುಷ" ಎಂದು ಸಾರಿದ. ಹಿಂದೆ ಕೃಷ್ಣನು ತಾನೇ ಎಲ್ಲದರ ಮತ್ತು ಎಲ್ಲ ಜನರ ಸೃಷ್ಟಿಕರ್ತ ಎಂದು ಹೇಳಿದ. ಪ್ರತಿಯೊಬ್ಬ ದೇವತೆಯೂ ಮಾನವಜೀವಿಯೂ ಅವನನ್ನು ಅವಲಂಬಿಸಿದ್ದಾರೆ. ಅಜ್ಞಾನದಿಂದ ಮನುಷ್ಯರೂ ದೇವತೆಗಳೂ ತಾವು ಪರಿಪೂರ್ಣರು, ದೇವೋತ್ತಮ ಪರಮ ಪುರುಷನಿಂದ ಸ್ವತಂತ್ರರು ಎಂದು ಭಾವಿಸುತ್ತಾರೆ. ಭಕ್ತಿಸೇವೆಯನ್ನು ಸಲ್ಲಿಸುವುದರಿಂದ ಈ ಅಜ್ಞಾನವು ಪರಿಪೂರ್ಣವಾಗಿ ತೊಡೆದು ಹೋಗುತ್ತದೆ. ಇದನ್ನು ಇದರ ಹಿಂದಿನ ಶ್ಲೋಕದಲ್ಲಿ

ಪ್ರಭುವು ವಿವರಿಸಿದ್ದಾನೆ. ಈಗ, ವೇದಗಳ ಆದೇಶಕ್ಕನುಗುಣವಾಗಿ, ಪ್ರಭುವಿನ ಕೃಪೆಯಿಂದ ಅರ್ಜುನನು ಅವನನ್ನು ಪರಮಸತ್ಯವೆಂದು ಒಪ್ಪಿಕೊಳ್ಳುತ್ತಿದ್ದಾನೆ. ಕೃಷ್ಣನು ಅರ್ಜುನನ ಆತ್ಮೀಯ ಗೆಳೆಯ ಎಂಬ ಕಾರಣಕ್ಕಾಗಿ ಅರ್ಜುನನು ಅವನನ್ನು ದೇವೋತ್ತಮ ಪರಮ ಪುರುಷ ಎಂದು, ಪರಿಪೂರ್ಣ ಸತ್ಯ ಎಂದು ಕರೆದು ವೃಥಾ ಹೊಗಳುತ್ತಿಲ್ಲ. ಈ ಎರಡು ಶ್ಲೋಕಗಳಲ್ಲಿ ಅರ್ಜುನನು ಹೇಳಿರುವುದೆಲ್ಲವನ್ನೂ ವೇದಗಳ ಸತ್ಯವು ದೃಢಪಡಿಸಿದೆ. ಪರಮ ಪ್ರಭುವಿನ ಸೇವೆಯನ್ನು ಕೈಗೊಂಡವನು ಮಾತ್ರ ಅವನನ್ನು ಅರ್ಥಮಾಡಿಕೊಳ್ಳಬಲ್ಲ; ಇತರರಿಗೆ ಇದು ಸಾಧ್ಯವಿಲ್ಲ ಎಂದು ವೇದಗಳ ಅನುಜ್ಞೆಯು ದೃಢವಾಗಿ ಹೇಳಿದೆ. ಅರ್ಜುನನು ಈ ಶ್ಲೋಕದಲ್ಲಿ ಹೇಳಿದ ಒಂದೊಂದು ಮಾತಿಗೂ ವೇದಗಳ ಅಪ್ಪಣೆಯ ಒಪ್ಪಿಗೆಯಿದೆ.

ಪರಮ ಬ್ರಹ್ಮನೇ ಎಲ್ಲಕ್ಕೂ ವಿಶ್ರಾಂತಿ ತಾಣ ಎಂದು ಕೇನ ಉಪನಿಷತ್ತಿನಲ್ಲಿ ಹೇಳಿದೆ. ಎಲ್ಲವೂ ತನ್ನನ್ನೇ ಆಧರಿಸಿದೆ ಎಂದು ಕೃಷ್ಣನು ಆಗಲೇ ವಿವರಿಸಿದ್ದಾನೆ. ಎಲ್ಲವೂ ಪರಮ ಪ್ರಭುವನ್ನು ಆಧರಿಸಿವೆ. ಸದಾ ಅವನನ್ನು ಕುರಿತೇ ಯೋಚಿಸುವವರು ಮಾತ್ರ ಅವನ ಸಾಕ್ಷಾತ್ಕಾರವನ್ನು ಪಡೆಯುವರು ಎಂಬುದನ್ನು ಮುಂಡಕ ಉಪನಿಷತ್ತು ದೃಢಪಡಿಸುತ್ತದೆ. ಸದಾ ಕೃಷ್ಣನನ್ನು ಕುರಿತು ಯೋಚಿಸುವುದೇ **ಸ್ಮರಣ.** ಇದು ಭಕ್ತಿಸೇವೆಯ ವಿಧಾನಗಳಲ್ಲಿ ಒಂದು. ಕೃಷ್ಣನ ಭಕ್ತಿಸೇವೆಯಿಂದ ಮಾತ್ರ ಮನುಷ್ಯನು ತನ್ನಸ್ಥಿತಿಯನ್ನು ಅರ್ಥಮಾಡಿಕೊಳ್ಳಬಲ್ಲ ಮತ್ತು ಈ ಭೌತಿಕ ದೇಹವನ್ನು ತ್ಯಜಿಸಬಲ್ಲ.

ವೇದಗಳಲ್ಲಿ ಪರಮ ಪ್ರಭುವನ್ನು ಪರಿಶುದ್ಧರಲ್ಲಿ ಅತ್ಯಂತ ಪರಿಶುದ್ಧ ಎಂದು ಒಪ್ಪಿದೆ. ಕೃಷ್ಣನು ಪರಿಶುದ್ಧರಲ್ಲಿ ಪರಿಶುದ್ಧ ಎಂಬುದನ್ನು ಅರ್ಥಮಾಡಿಕೊಂಡವನು ಎಲ್ಲ ಪಾಪಕರ್ಮಗಳಿಂದ ಪರಿಶುದ್ಧನಾಗಬಲ್ಲ. ಪರಮ ಪ್ರಭುವಿಗೆ ಶರಣಾಗದಿದ್ದರೆ ಪಾಪಕ್ರಿಯೆಗಳ ಸೋಂಕಿನಿಂದ ಮನುಷ್ಯನು ಬಿಡುಗಡೆ ಹೊಂದಲಾರ. ಕೃಷ್ಣನನ್ನು ಪರಮ ಪರಿಶುದ್ಧನೆಂದು ಅರ್ಜುನನು ಒಪ್ಪಿಕೊಳ್ಳುವುದು ವೇದ ಸಾಹಿತ್ಯದ ಅನುಜ್ಞೆಗಳಿಗೆ ಅನುಗುಣವಾಗಿಯೇ ಇದೆ. ಇದನ್ನು ಮಹಾತ್ಮರು ದೃಢಪಡಿಸಿದ್ದಾರೆ. ಅವರಲ್ಲಿ ನಾರದನು ಮುಖ್ಯನು.

ಕೃಷ್ಣನು ದೇವೋತ್ತಮ ಪರಮ ಪುರುಷ; ಮನುಷ್ಯನು ಸದಾ ಅವನನ್ನು ಧ್ಯಾನಿಸಬೇಕು ಮತ್ತು ಅವನೊಡನೆ ಅಲೌಕಿಕ ಸಂಬಂಧವನ್ನು ಸವಿಯಬೇಕು. ಆತನೇ ಪರಮ ಅಸ್ತಿತ್ವ. ಅವನು ದೈಹಿಕ ಅಗತ್ಯಗಳಿಂದಲೂ ಜನನ ಮರಣಗಳಿಂದಲೂ ಮುಕ್ತನು. ಇದನ್ನು ಅರ್ಜುನನು ಮಾತ್ರವೇ ಅಲ್ಲ, ಎಲ್ಲ ವೇದ ಸಾಹಿತ್ಯವೂ, ಪುರಾಣಗಳೂ, ಇತಿಹಾಸಗಳೂ ದೃಢಪಡಿಸುತ್ತವೆ. ಎಲ್ಲ ವೇದ ಸಾಹಿತ್ಯವೂ ಕೃಷ್ಣನನ್ನು ಹೀಗೆಯೇ ವರ್ಣಿಸುತ್ತದೆ. ಸ್ವಯಂ ಪರಮ ಪ್ರಭುವೇ ನಾಲ್ಕನೆಯ ಅಧ್ಯಾಯದಲ್ಲಿ, "ನನಗೆ ಹುಟ್ಟು ಇಲ್ಲವಾದರೂ ನಾನು ಭೂಮಿಯಲ್ಲಿ ಧರ್ಮಸಂಸ್ಥಾಪನೆಗಾಗಿ ಅವತರಿಸುತ್ತೇನೆ" ಎಂದು ಹೇಳಿದ್ದಾನೆ. ಅವನೇ ಪರಮ ಮೂಲ; ಅವನಿಗೆ ಕಾರಣವಿಲ್ಲ. ಏಕೆಂದರೆ ಅವನು ಎಲ್ಲ ಕಾರಣಗಳ ಕಾರಣನು. ಎಲ್ಲವೂ ಅವನಿಂದ ಹೊರಹೊಮ್ಮುತ್ತದೆ. ಈ ಪರಿಪೂರ್ಣ ಜ್ಞಾನವನ್ನು ಪರಮ ಪ್ರಭುವಿನ ಕೃಪೆಯಿಂದ ಪಡೆಯಬಹುದು.

ಇಲ್ಲಿ ಅರ್ಜುನನು ಕೃಷ್ಣನ ಕೃಪೆಯಿಂದ ತನ್ನ ಭಾವನೆಗಳನ್ನು ಹೇಳುತ್ತಿದ್ದಾನೆ. ನಾವು ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಈ ಎರಡು ಶ್ಲೋಕಗಳಲ್ಲಿ ಹೇಳಿರುವುದನ್ನು ಒಪ್ಪಿಕೊಳ್ಳಬೇಕು. ಇದಕ್ಕೆ ಪರಂಪರಾ ಪದ್ಧತಿ, ಗುರುಶಿಷ್ಯ ಪರಂಪರೆಯ ಸ್ವೀಕಾರ ಎಂದು ಹೆಸರು.

ಗುರುಶಿಷ್ಯ ಪರಂಪರೆಯಲ್ಲಿ ಇಲ್ಲದವನು ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳಲಾರ. ವಿದ್ವತ್ಪೂರ್ಣಶಿಕ್ಷಣ ಎಂದು ಕರೆಸಿಕೊಳ್ಳುವ ಶಿಕ್ಷಣದಿಂದ ಇದು ಸಾಧ್ಯವಾಗುವುದಿಲ್ಲ. ದುರದೃಷ್ಟದಿಂದ, ವೇದಸಾಹಿತ್ಯದಲ್ಲಿ ಇಷ್ಟೊಂದು ಸಾಕ್ಷ್ಯವಿದ್ದರೂ ತಮ್ಮ ವಿದ್ವತ್ಪೂರ್ಣಶಿಕ್ಷಣದ ಬಗ್ಗೆ ಹೆಮ್ಮೆಪಟ್ಟುಕೊಳ್ಳುವವರು, ಕೃಷ್ಣನು ಸಾಮಾನ್ಯ ಮನುಷ್ಯ ಎಂಬ ತಮ್ಮ ದೃಢ ನಂಬಿಕೆಗೇ ಅಂಟಿಕೊಳ್ಳುತ್ತಾರೆ.

## ಶ್ಲೋಕ - 14

**ಸರ್ವಮೇತದ್ ಋತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥**

**ಸರ್ವಮ್**—ಎಲ್ಲವನ್ನೂ; **ಏತತ್**—ಈ; **ಋತಮ್**—ಸತ್ಯವೆಂದು; **ಮನ್ಯೇ**—ಅಂಗೀಕರಿಸುತ್ತೇನೆ; **ಯತ್**—ಯಾವುದನ್ನು; **ಮಾಮ್**—ನನಗೆ; **ವದಸಿ**—ಹೇಳುತ್ತಿರುವೆಯೋ; **ಕೇಶವ**—ಕೃಷ್ಣನೇ; **ನ**—ಎಂದಿಗೂ ಇಲ್ಲ; **ಹಿ**—ಖಂಡಿತವಾಗಿಯೂ; **ತೇ**—ನಿನ್ನ; **ಭಗವನ್**—ದೇವೋತ್ತಮ ಪುರುಷನೇ; **ವ್ಯಕ್ತಿಮ್**—ದಿವ್ಯ ವ್ಯಕ್ತಿತ್ವವನ್ನು; **ವಿದುಃ**—ತಿಳಿಯಬಲ್ಲರು; **ದೇವಾಃ**—ದೇವತೆಗಳು; **ನ**—ಇಲ್ಲ; **ದಾನವಾಃ**—ರಾಕ್ಷಸರು.

## ಅನುವಾದ

**ಕೃಷ್ಣ, ನೀನು ನನಗೆ ಹೇಳುವುದನ್ನೆಲ್ಲ ಸತ್ಯವೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಪ್ರಭುವೇ, ದೇವತೆಗಳಾಗಲಿ ದಾನವರಾಗಲಿ ನಿನ್ನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲಾರರು.**

## ಭಾವಾರ್ಥ

ಶ್ರದ್ಧೆಯಿಲ್ಲದವರು ಮತ್ತು ದಾನವ ಸ್ವಭಾವದವರು ಕೃಷ್ಣನನ್ನು ಅರ್ಥ ಮಾಡಿಕೊಳ್ಳಲಾರರು; ದೇವತೆಗಳು ಸಹ ಅವನನ್ನು ತಿಳಿಯಲಾರರು. ಇನ್ನು ಆಧುನಿಕ ಜಗತ್ತಿನಲ್ಲಿ ವಿದ್ವಾಂಸರೆಂದು ಕರೆಸಿಕೊಳ್ಳುವವರ ಪಾಡೇನು? ಪರಮ ಪ್ರಭುವಿನ ಕೃಪೆಯಿಂದ ಅರ್ಜುನನು ಪರಮಸತ್ಯವು ಕೃಷ್ಣ ಮತ್ತು ಅವನು ಪರಿಪೂರ್ಣನು ಎಂದು ಅರ್ಥಮಾಡಿಕೊಂಡಿದ್ದಾನೆ. ಆದುದರಿಂದ ಅರ್ಜುನನ ಮಾರ್ಗವನ್ನು ಅನುಸರಿಸಬೇಕು. ಅವನು ಭಗವದ್ಗೀತೆಯ ಪ್ರಮಾಣವನ್ನು ಸ್ವೀಕರಿಸಿದವನು. ನಾಲ್ಕನೆಯ ಅಧ್ಯಾಯದಲ್ಲಿ ವರ್ಣಿಸಿದಂತೆ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಲು ಗುರುಶಿಷ್ಯ ಪರಂಪರೆಯು ಕಳೆದು ಹೋಗಿತ್ತು; ಅರ್ಜುನನನ್ನು ತನ್ನ ಆಪ್ತಸ್ನೇಹಿತನೆಂದು, ಶ್ರೇಷ್ಠ ಭಕ್ತನೆಂದು ಭಾವಿಸಿ ಕೃಷ್ಣನು ಅರ್ಜುನನೊಡನೆ ಆ ಗುರುಶಿಷ್ಯ ಪರಂಪರೆಯನ್ನು ಮತ್ತೆ ಪ್ರಾರಂಭಿಸಿದನು. ಆದುದರಿಂದ ಗೀತೋಪನಿಷತ್ತಿಗೆ ಬರೆದ ನಮ್ಮ ಮುನ್ನುಡಿಯಲ್ಲಿ ಹೇಳುವಂತೆ ಭಗವದ್ಗೀತೆಯನ್ನು ಪರಂಪರೆಯ ರೂಢಿಯಲ್ಲಿ ಅರ್ಥಮಾಡಿಕೊಳ್ಳಬೇಕು. ಪರಂಪರೆಯ ರೂಢಿಯು ಕಳೆದುಹೋದಾಗ ಅದಕ್ಕೆ ಮತ್ತೆ ಚೈತನ್ಯವನ್ನು ಕೊಡಲು ಅರ್ಜುನನನ್ನು ಆರಿಸಲಾಯಿತು. ಕೃಷ್ಣನು ಹೇಳಿದುದನ್ನೆಲ್ಲ ಅರ್ಜುನನು ಸ್ವೀಕರಿಸುತ್ತಾನೆ. ಅದನ್ನು ನಾವು ಮೇಲ್ಪಂಕ್ತಿಯಾಗಿ ಅನುಸರಿಸಬೇಕು. ಆಗ ನಾವು ಭಗವದ್ಗೀತೆಯ ತಿರುಳನ್ನು

ತಿಳಿಯಬಲ್ಲೆವು; ಮತ್ತು ಆಗ ಮಾತ್ರ ಕೃಷ್ಣನು ದೇವೋತ್ತಮ ಪರಮ ಪುರುಷನೆಂದು ಅರ್ಥಮಾಡಿಕೊಳ್ಳಬಲ್ಲೆವು.

## ಶ್ಲೋಕ - 15

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ |**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ||೧೫||**

**ಸ್ವಯಮ್**—ವೈಯಕ್ತಿಕವಾಗಿ; **ಏವ**—ಖಂಡಿತವಾಗಿಯೂ; **ಆತ್ಮನಾ**—ನಿನ್ನಿಂದ; **ಆತ್ಮಾನಮ್**—ನಿನ್ನನ್ನು; **ವೇತ್ಥ**—ತಿಳಿದಿದ್ದೀಯೆ; **ತ್ವಮ್**—ನೀನು; **ಪುರುಷ ಉತ್ತಮ**—ಸಕಲವ್ಯಕ್ತಿಗಳಲ್ಲಿ ಶ್ರೇಷ್ಠನಾದವನೇ; **ಭೂತ ಭಾವನ**—ಪ್ರತಿಯೊಂದರ ಮೂಲನೇ; **ಭೂತ ಈಶ**—ಪ್ರತಿಯೊಂದರ ಪ್ರಭುವೇ; **ದೇವ ದೇವ**—ದೇವಾಧಿದೇವನೇ; **ಜಗತ್ಪತೇ**—ಇಡೀ ವಿಶ್ವದ ಪ್ರಭುವೇ.

## ಅನುವಾದ

**ಓ ಪುರುಷೋತ್ತಮನೇ, ಎಲ್ಲದರ ಮೂಲನೆ, ಎಲ್ಲದರ ಪ್ರಭುವೆ, ದೇವದೇವನೆ, ಜಗತ್ಪತಿಯೆ! ವಾಸ್ತವವಾಗಿ ನಿನ್ನ ಅಂತರಂಗ ಶಕ್ತಿಯಿಂದ ನೀನೊಬ್ಬನೇ ನಿನ್ನನ್ನು ಅರ್ಥಮಾಡಿಕೊಳ್ಳಬಲ್ಲೆ.**

## ಭಾವಾರ್ಥ

ಅರ್ಜುನ ಮತ್ತು ಅವನ ಅನುಯಾಯಿಗಳಂತೆ ಭಕ್ತಿಸೇವೆಯನ್ನು ಸಲ್ಲಿಸಿ ಕೃಷ್ಣನೊಡನೆ ಸಂಬಂಧವನ್ನು ಪಡೆದುಕೊಂಡವರು ಮಾತ್ರ ಪರಮ ಪ್ರಭು ಕೃಷ್ಣನನ್ನು ಅರ್ಥಮಾಡಿಕೊಳ್ಳಬಲ್ಲರು. ರಾಕ್ಷಸೀ ಅಥವಾ ನಾಸ್ತಿಕ ಮನೋಧರ್ಮದವರು ಕೃಷ್ಣನನ್ನು ಅರ್ಥಮಾಡಿಕೊಳ್ಳಲಾರರು. ಮನುಷ್ಯನನ್ನು ಪರಮ ಪ್ರಭುವಿನಿಂದ ಬೇರೆಡೆ ಒಯ್ಯುವ ಮಾನಸಿಕ ಊಹಾಪೋಹವು ಪರಮಪಾಪ; ಕೃಷ್ಣನನ್ನು ತಿಳಿಯದವರು ಭಗವದ್ಗೀತೆಯ ಬಗ್ಗೆ ಮಾತನಾಡಲು ಹೋಗಬಾರದು. ಭಗವದ್ಗೀತೆಯು ಕೃಷ್ಣನು ಹೇಳಿದ್ದು. ಅದು ಕೃಷ್ಣವಿಜ್ಞಾನವಾದದ್ದರಿಂದ ಅರ್ಜುನನು ಅರ್ಥಮಾಡಿಕೊಂಡಂತೆ ಅದನ್ನು ಕೃಷ್ಣನಿಂದಲೇ ತಿಳಿದುಕೊಳ್ಳಬೇಕು. ಅದನ್ನು ನಾಸ್ತಿಕರಿಂದ ಸ್ವೀಕರಿಸಬಾರದು.

ಶ್ರೀಮದ್ಭಾಗವತದಲ್ಲಿ (1.2.11) ಹೇಳಿರುವಂತೆ —

**ವದನ್ತಿ ತತ್ ತತ್ತ್ವವಿದಸ್ ತತ್ತ್ವಂ ಯಜ್ ಜ್ಞಾನಮ್ ಅದ್ವಯಮ್ |**
**ಬ್ರಹ್ಮೇತಿ ಪರಮಾತ್ಮೇತಿ ಭಗವಾನ್ ಇತಿ ಶಬ್ದ್ಯತೇ ||**

ಪರಮಸತ್ಯವನ್ನು ಮೂರು ಮುಖಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ — ನಿರಾಕಾರ ಬ್ರಹ್ಮನಾಗಿ, ಅಂತರ್ಯಾಮಿ ಪರಮಾತ್ಮನಾಗಿ, ಮತ್ತು ಕಟ್ಟಕಡೆಗೆ ದೇವೋತ್ತಮ ಪರಮ ಪುರುಷನಾಗಿ. ಆದುದರಿಂದ ಪರಿಪೂರ್ಣ ಸತ್ಯವನ್ನು ಅರ್ಥಮಾಡಿಕೊಳ್ಳುವ ಕಡೆಯ ಹಂತದಲ್ಲಿ ಮನುಷ್ಯನು ದೇವೋತ್ತಮ ಪರಮ ಪುರುಷನ ನೆಲೆಗೆ ಬರುತ್ತಾನೆ. ಒಬ್ಬ ಸಾಮಾನ್ಯ ಮನುಷ್ಯನಾಗಲಿ ನಿರಾಕಾರ ಬ್ರಹ್ಮನ್‌ನನ್ನೋ ಅಂತರ್ಯಾಮಿ ಪರಮಾತ್ಮನನ್ನೋ ಅರ್ಥಮಾಡಿಕೊಂಡ ಒಬ್ಬ ಮುಕ್ತ ಮನುಷ್ಯನಾಗಲಿ ಭಗವಂತನ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳದೆ ಹೋಗಬಹುದು. ಅಂತಹ

ಮನುಷ್ಯನು ಸ್ವತಃ ಕೃಷ್ಣನು ಹೇಳುತ್ತಿರುವ ಭಗವದ್ಗೀತೆಯ ಶ್ಲೋಕಗಳಿಂದ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಹುದು. ಕೆಲವೊಮ್ಮೆ ನಿರಾಕಾರವಾದಿಗಳು ಕೃಷ್ಣನನ್ನು ಭಗವಾನ್ ಎಂದು ಒಪ್ಪಿಕೊಳ್ಳುತ್ತಾರೆ ಅಥವಾ ಆತನ ಅಧಿಕಾರವನ್ನು ಒಪ್ಪಿಕೊಳ್ಳುತ್ತಾರೆ. ಆದರೂ ಮುಕ್ತರಾದವರು ಹಲವರು ಕೃಷ್ಣನನ್ನು ಪುರುಷೋತ್ತಮ ಎಂದು ಒಪ್ಪಿಕೊಳ್ಳಲಾರರು. ಆದುದರಿಂದ ಅರ್ಜುನನು ಅವನನ್ನು ಪುರುಷೋತ್ತಮ ಎಂದು ಸಂಬೋಧಿಸುತ್ತಾನೆ. ಕೃಷ್ಣನು ಎಲ್ಲ ಜೀವಿಗಳ ತಂದೆ ಎನ್ನುವುದನ್ನು ಮನುಷ್ಯನು ಅರ್ಥಮಾಡಿಕೊಳ್ಳದೆ ಹೋಗಬಹುದು. ಆದುದರಿಂದ ಅರ್ಜುನನು ಅವನನ್ನು ಭೂತಭಾವನ ಎಂದು ಸಂಬೋಧಿಸುತ್ತಾನೆ. ಕೃಷ್ಣನನ್ನು ಎಲ್ಲ ಜೀವಿಗಳ ತಂದೆಯೆಂದು ಅರಿತವನೂ ಸಹ ಅವನನ್ನು ಪರಮ ನಿಯಂತ್ರಕ ಎಂದು ಅರಿಯದೆ ಹೋಗಬಹುದು. ಆದುದರಿಂದ ಅವನನ್ನು ಇಲ್ಲಿ ಭೂತೇಶ, ಎಲ್ಲ ಜೀವಿಗಳ ಪರಮ ನಿಯಂತ್ರಕ ಎಂದು ಸಂಬೋಧಿಸಿದೆ. ಅವನು ಎಲ್ಲ ಜೀವಿಗಳ ಪರಮ ನಿಯಂತ್ರಕ ಎಂದು ಅರ್ಥಮಾಡಿಕೊಂಡವನೂ ಅವನನ್ನು ಎಲ್ಲ ದೇವತೆಗಳ ಮೂಲ ಎಂದು ತಿಳಿಯದೆ ಹೋಗಬಹುದು. ಆದುದರಿಂದ ಇಲ್ಲಿ ಅವನನ್ನು ದೇವದೇವ ಎಂದು ಸಂಬೋಧಿಸಿದೆ. ಅವನನ್ನು ದೇವದೇವನೆಂದು ತಿಳಿದುಕೊಂಡವರೂ ಅವನು ಎಲ್ಲ ವಸ್ತುಗಳ ಪರಮಸ್ವಾಮಿ ಎಂದು ಅರಿಯದಿರಬಹುದು. ಆದುದರಿಂದ ಅವನನ್ನು ಜಗತ್ಪತಿ ಎಂದು ಸಂಬೋಧಿಸಲಾಗಿದೆ. ಹೀಗೆ ಅರ್ಜುನನ ಸಾಕ್ಷಾತ್ಕಾರದಿಂದ ಕೃಷ್ಣನ ವಿಷಯದ ಸತ್ಯವನ್ನು ಇಲ್ಲಿ ಸ್ಥಾಪಿಸಲಾಗಿದೆ. ಕೃಷ್ಣನು ಇರುವಂತೆ ಅವನನ್ನು ಅರ್ಥಮಾಡಿಕೊಳ್ಳಲು ನಾವು ಅರ್ಜುನನ ಹೆಜ್ಜೆಗಳಲ್ಲಿ ಹೆಜ್ಜೆಯಿಡಬೇಕು.

## ಶ್ಲೋಕ - 16

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ |**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ||೧೬||**

**ವಕ್ತುಮ್**—ಹೇಳಲು; **ಅರ್ಹಸಿ**—ಅರ್ಹನಾಗಿದ್ದೀಯೆ; **ಅಶೇಷೇಣ**—ವಿವರವಾಗಿ; **ದಿವ್ಯಾಃ**—ದೈವಿಕವಾದ; **ಹಿ**—ಖಂಡಿತವಾಗಿಯೂ; **ಆತ್ಮ**—ಸ್ವಯಂ ನಿನ್ನ; **ವಿಭೂತಯಃ**—ಐಶ್ವರ್ಯಗಳನ್ನು; **ಯಾಭಿಃ**—ಯಾವ; **ವಿಭೂತಿಭಿಃ**—ಐಶ್ವರ್ಯಗಳಿಂದ; **ಲೋಕಾನ್**—ಎಲ್ಲ ಲೋಕಗಳನ್ನು; **ಇಮಾನ್**—ಈ; **ತ್ವಮ್**—ನೀನು; **ವ್ಯಾಪ್ಯ**—ವ್ಯಾಪಿಸಿ; **ತಿಷ್ಠಸಿ**—ಇದ್ದೀಯೆ.

## ಅನುವಾದ

**ಯಾವ ದೈವಿಕ ಸಂಪತ್ತುಗಳಿಂದ ನೀನು ಈ ಎಲ್ಲ ಜಗತ್ತುಗಳನ್ನು ವ್ಯಾಪಿಸಿರುವೆಯೋ ಅವನ್ನು ಕುರಿತು ನನಗೆ ವಿವರವಾಗಿ ಹೇಳು.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ತಾನು ಅರ್ಥಮಾಡಿಕೊಂಡಿದ್ದರಿಂದ ಅರ್ಜುನನಿಗೆ ಆಗಲೇ ತೃಪ್ತಿಯಾಗಿದೆ ಎಂದು ಈ ಶ್ಲೋಕದಲ್ಲಿ ಕಾಣುತ್ತದೆ. ಕೃಷ್ಣನ ಕೃಪೆಯಿಂದ ಅರ್ಜುನನಿಗೆ ವೈಯಕ್ತಿಕ ಅನುಭವವಿದೆ, ಬುದ್ಧಿಶಕ್ತಿಯಿದೆ, ಜ್ಞಾನವಿದೆ ಮತ್ತು ಈ ಸಾಧನಗಳಿಂದ

ಮನುಷ್ಯನಿಗೆ ಬರಬಹುದಾದುದೆಲ್ಲ ಇದೆ. ಆತನು ಕೃಷ್ಣನನ್ನು ದೇವೋತ್ತಮ ಪರಮ ಪುರುಷನೆಂದು ಅರ್ಥಮಾಡಿಕೊಂಡಿದ್ದಾನೆ. ಅವನಿಗೆ ಯಾವ ಸಂಶಯವೂ ಇಲ್ಲ. ಆದರೂ ಕೃಷ್ಣನು ತನ್ನ ಸರ್ವವ್ಯಾಪಿ ಸ್ವಭಾವವನ್ನು ವಿವರಿಸಬೇಕೆಂದು ಕೃಷ್ಣನನ್ನು ಕೇಳುತ್ತಿದ್ದಾನೆ. ಸಾಮಾನ್ಯವಾಗಿ ಜನರು, ವಿಶೇಷವಾಗಿ ನಿರಾಕಾರವಾದಿಗಳು ಮುಖ್ಯವಾಗಿ ಪರಮದ ಸರ್ವವ್ಯಾಪಿ ಸ್ವಭಾವವನ್ನು ಕುರಿತು ಆಸಕ್ತಿ ಹೊಂದಿರುತ್ತಾರೆ. ಆದುದರಿಂದ ಅರ್ಜುನನು ಕೃಷ್ಣನನ್ನು ಅವನ ವಿವಿಧ ಶಕ್ತಿಗಳ ಮೂಲಕ ತನ್ನ ಸರ್ವವ್ಯಾಪಿ ಸ್ವರೂಪದಲ್ಲಿ ಹೇಗೆ ಅಸ್ತಿತ್ವದಲ್ಲಿದ್ದಾನೆ ಎಂದು ಕೇಳುತ್ತಿದ್ದಾನೆ. ಅರ್ಜುನನು ಇದನ್ನು ಸಾಮಾನ್ಯಜನರ ಪರವಾಗಿ ಕೇಳುತ್ತಿದ್ದಾನೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 17

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋऽಸಿ ಭಗವನ್ಮಯಾ ॥೧೭॥**

**ಕಥಮ್**—ಹೇಗೆ; **ವಿದ್ಯಾಮ್ ಅಹಮ್**—ನಾನು ತಿಳಿಯಲಿ; **ಯೋಗಿನ್**—ಪರಮಯೋಗಿಯೇ; **ತ್ವಾಮ್**—ನಿನ್ನನ್ನು; **ಸದಾ**—ಯಾವಾಗಲೂ; **ಪರಿಚಿನ್ತಯನ್**—ಯೋಚಿಸುವ; **ಕೇಷು**—ಯಾವ; **ಕೇಷು**—ಯಾವ; **ಚ**—ಕೂಡ; **ಭಾವೇಷು**—ಲಕ್ಷಣಗಳಲ್ಲಿ; **ಚಿನ್ತ್ಯಃ ಅಸಿ**—ನೀನು ಸ್ಮರಿಸಲ್ಪಡಬೇಕಾದವನಾಗಿರುವೆ; **ಭಗವನ್**—ಪರಮನೇ; **ಮಯಾ**—ನನ್ನಿಂದ.

## ಅನುವಾದ

**ಕೃಷ್ಣನೇ, ಪರಮ ಯೋಗಿಯೇ, ನಾನು ಸದಾ ನಿನ್ನನ್ನು ಧ್ಯಾನಮಾಡುವುದು ಹೇಗೆ? ಓ ದೇವೋತ್ತಮ ಪರಮ ಪುರುಷನೆ, ಯಾವ ಯಾವ ರೂಪಗಳಲ್ಲಿ ನಿನ್ನನ್ನು ಸ್ಮರಿಸಬೇಕು?**

## ಭಾವಾರ್ಥ

ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ, ದೇವೋತ್ತಮ ಪರಮ ಪುರುಷನನ್ನು ಅವನ ಯೋಗಮಾಯೆಯು ಮುಚ್ಚಿರುತ್ತದೆ. ಶರಣಾಗತರಾದ ಆತ್ಮರು ಮತ್ತು ಭಕ್ತರು ಮಾತ್ರ ಅವನನ್ನು ಕಾಣಬಲ್ಲರು. ಈಗ ಅರ್ಜುನನಿಗೆ ತನ್ನ ಸ್ನೇಹಿತ ಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ದೃಢಪಟ್ಟಿದೆ. ಆದರೆ ಸಾಮಾನ್ಯ ಮನುಷ್ಯರು ಯಾವ ಪ್ರಕ್ರಿಯೆಯಿಂದ ಸರ್ವವ್ಯಾಪಿಯಾದ ಪ್ರಭುವನ್ನು ಅರ್ಥಮಾಡಿಕೊಳ್ಳಬಹುದು ಎಂದು ತಿಳಿಯಲು ಅಪೇಕ್ಷಿಸುತ್ತಾನೆ. ದಾನವರು ಮತ್ತು ನಾಸ್ತಿಕರು ಸೇರಿದಂತೆ ಸಾಮಾನ್ಯ ಮನುಷ್ಯರು ಕೃಷ್ಣನನ್ನು ತಿಳಿಯಲಾರರು. ಏಕೆಂದರೆ ಅವನ ಯೋಗಮಾಯೆಯ ಶಕ್ತಿಯು ಅವನನ್ನು ಆವರಿಸಿರುತ್ತದೆ. ಅರ್ಜುನನು ಇಂತಹವರ ಪ್ರಯೋಜನಕ್ಕಾಗಿ ಈ ಪ್ರಶ್ನೆಗಳನ್ನು ಕೇಳುತ್ತಾನೆ. ಶ್ರೇಷ್ಠ ಭಕ್ತನಿಗೆ ತನ್ನ ತಿಳಿವಳಿಕೆಯ ಬಗೆಗೆ ಮಾತ್ರವಲ್ಲ, ಎಲ್ಲ ಮಾನವಕುಲದ ತಿಳಿವಳಿಕೆಯ ಬಗೆಗೆ ಕಾಳಜಿ. ಅರ್ಜುನನು ಒಬ್ಬ ವೈಷ್ಣವ ಭಕ್ತ; ಅವನು ದಯೆಯಿಂದ ಸಾಮಾನ್ಯ ಮನುಷ್ಯನಿಗೆ ಭಗವಂತನ ಸರ್ವವ್ಯಾಪಕತ್ವವನ್ನು ಅರ್ಥಮಾಡಿಕೊಳ್ಳಲು ದಾರಿಯನ್ನು ತೆರೆಯುತ್ತಿದ್ದಾನೆ. ಅವನು ಕೃಷ್ಣನನ್ನು ನಿರ್ದಿಷ್ಟವಾಗಿ **ಯೋಗಿನ್** ಎಂದು ಸಂಬೋಧಿಸುತ್ತಿದ್ದಾನೆ. ಏಕೆಂದರೆ ಸಾಮಾನ್ಯ ಮನುಷ್ಯನಿಗೆ ಅವನನ್ನು ಮರೆಮಾಡುವ ಅಥವಾ ತೆರೆಯುವ

ಯೋಗಮಾಯಾಶಕ್ತಿಯ ಪ್ರಭು ಕೃಷ್ಣನೇ. ಕೃಷ್ಣನಲ್ಲಿ ಪ್ರೀತಿ ಇಲ್ಲದ ಸಾಮಾನ್ಯ ಮನುಷ್ಯನು ಸದಾ ಕೃಷ್ಣನನ್ನು ಕುರಿತು ಯೋಚಿಸಲಾರ. ಆದುದರಿಂದ ಅವನು ಐಹಿಕವಾಗಿ ಯೋಚಿಸಬೇಕಾಗುತ್ತದೆ. ಅರ್ಜುನನು ಈ ಜಗತ್ತಿನ ಪ್ರಾಪಂಚಿಕ ಮನೋಧರ್ಮದ ಜನರ ಯೋಚನಾರೀತಿಯನ್ನು ಪರಿಶೀಲಿಸುತ್ತಿದ್ದಾನೆ. **ಕೇಷು ಕೇಷು ಚ ಭಾವೇಷು** ಎನ್ನುವ ಮಾತುಗಳು ಐಹಿಕ ಪ್ರಕೃತಿಗೆ ಸಂಬಂಧಿಸಿದವು. (**ಭಾವ** ಎನ್ನುವ ಪದಕ್ಕೆ 'ಭೌತಿಕ ವಸ್ತುಗಳು' ಎಂದರ್ಥ). ಐಹಿಕ ಮನೋಧರ್ಮದವರು ಆಧ್ಯಾತ್ಮಿಕವಾಗಿ ಅರ್ಥ ಮಾಡಿಕೊಳ್ಳಲಾರರು. ಆದುದರಿಂದ ಅವರು ಭೌತಿಕ ವಸ್ತುಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಕೃಷ್ಣನು ಭೌತಿಕ ನಿರೂಪಣೆಗಳಲ್ಲಿ ಹೇಗೆ ಪ್ರಕಟಗೊಳ್ಳುತ್ತಾನೆ ಎಂದು ಕಾಣಲು ಪ್ರಯತ್ನಿಸುವಂತೆ ಹೇಳಲಾಗಿದೆ.

## ಶ್ಲೋಕ - 18

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ |**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇऽಮೃತಮ್ ||೧೮||**

**ವಿಸ್ತರೇಣ**—ವಿವರವಾಗಿ; **ಆತ್ಮನಃ**—ನಿನ್ನ; **ಯೋಗಮ್**—ಯೋಗಶಕ್ತಿಯನ್ನು; **ವಿಭೂತಿಮ್**—ಐಶ್ವರ್ಯವನ್ನು; **ಚ**—ಕೂಡ; **ಜನ ಅರ್ದನ**—ನಾಸ್ತಿಕರನ್ನು ಕೊಲ್ಲುವವನೇ; **ಭೂಯಃ**—ಪುನಃ; **ಕಥಯ**—ವಿವರಿಸು; **ತೃಪ್ತಿಃ**—ತೃಪ್ತಿಯು; **ಹಿ**—ಖಂಡಿತವಾಗಿಯೂ; **ಶೃಣ್ವತಃ**—ಕೇಳುವ; **ನ ಅಸ್ತಿ**—ಇಲ್ಲ;**ಮೇ**—ನನಗೆ;**ಅಮೃತಮ್**—ಅಮೃತವನ್ನು.

## ಅನುವಾದ

**ಜನಾರ್ದನ, ನಿನ್ನ ಸಿರಿಗಳ ಯೋಗಶಕ್ತಿಯನ್ನು ಮತ್ತೆ ವಿವರವಾಗಿ ವರ್ಣಿಸು. ನಿನ್ನ ವಿಷಯ ಕೇಳುವುದು ಸಾಕು ಎಂದೇ ನನಗೆ ಅನಿಸುವುದಿಲ್ಲ. ನಿನ್ನ ವಿಷಯವನ್ನು ಕೇಳಿದಷ್ಟೂ ನಿನ್ನ ಮಾತುಗಳ ಅದ್ಭುತವನ್ನು ಸವಿಯಬೇಕು ಎನ್ನಿಸುತ್ತದೆ.**

## ಭಾವಾರ್ಥ

ಶೌನಕನು ಮುಂದಾಳುವಾಗಿದ್ದ ನೈಮಿಷಾರಣ್ಯದ ಋಷಿಗಳು ಸೂತಮುನಿಗಳಿಗೆ ಇಂತಹುದೇ ಮಾತನ್ನು ಹೇಳಿದರು. ಅವರು ಹೇಳಿದ್ದು ಹೀಗೆ —

**ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೇ |**
**ಯಚ್ಛೃಣ್ವತಾಂ ರಸಜ್ಞಾನಾಂ ಸ್ವಾದು ಸ್ವಾದು ಪದೇ ಪದೇ ||**

"ಸೊಗಸಾದ ಸ್ತೋತ್ರಗಳು ಯಾರ ಮಹಿಮೆಯನ್ನು ಹಾಡುವುವೋ ಆ ಕೃಷ್ಣನ ಲೀಲೆಗಳನ್ನು ಸದಾ ಕೇಳಿದರೂ ಸಾಕೆನಿಸುವುದೇ ಇಲ್ಲ. ಕೃಷ್ಣನೊಡನೆ ಒಂದು ದಿವ್ಯ ಸಂಬಂಧವನ್ನು ಪಡೆದುಕೊಂಡವರು ಹೆಜ್ಜೆ ಹೆಜ್ಜೆಗೂ ಪ್ರಭುವಿನ ಲೀಲೆಗಳನ್ನು ಸವಿಯುತ್ತಾರೆ" (ಭಾಗವತ, 1.1.19). ಹೀಗೆ ಅರ್ಜುನನಿಗೆ ಕೃಷ್ಣನ ವಿಷಯವನ್ನು ಕೇಳುವುದರಲ್ಲಿ ಆಸಕ್ತಿ. ಅದರಲ್ಲಿಯೂ ಅವನು ಹೇಗೆ ಸರ್ವವ್ಯಾಪಿ ಪರಮ ಪ್ರಭುವಾಗಿಯೇ ಇರುತ್ತಾನೆ ಎನ್ನುವುದರಲ್ಲಿ ಆಸಕ್ತಿ.

ಅಮೃತದ ವಿಷಯ ಹೇಳುವುದಾದರೆ, ಕೃಷ್ಣನನ್ನು ಕುರಿತ ಯಾವುದೇ ವೃತ್ತಾಂತ ಅಥವಾ ಹೇಳಿಕೆಯು ಅಮೃತದಂತೆ. ಅಮೃತವನ್ನು ಸ್ವಾನುಭವದಿಂದ ಕಂಡುಕೊಳ್ಳಬಹುದು. ಆಧುನಿಕ ಕಥೆ, ಕಾದಂಬರಿ ಮತ್ತು ಚರಿತ್ರೆಗಳಿಗೂ ಪ್ರಭುವಿನ ದಿವ್ಯಲೀಲೆಗಳಿಗೂ ವ್ಯತ್ಯಾಸವಿದೆ. ಐಹಿಕ ಆಗುಹೋಗುಗಳ ಕಥೆಯನ್ನು ಮತ್ತೆ ಮತ್ತೆ ಕೇಳಿದರೆ ಬೇಸರವಾಗುತ್ತದೆ. ಆದರೆ ಕೃಷ್ಣನ ವಿಷಯ ಎಷ್ಟು ಕೇಳಿದರೂ ಬೇಸರವಾಗುವುದಿಲ್ಲ. ಈ ಕಾರಣದಿಂದಲೇ ಇಡೀ ವಿಶ್ವದ ಚರಿತ್ರೆಯು ಭಗವಂತನ ಅವತಾರಗಳ ಲೀಲಾಪ್ರಸ್ತಾಪಗಳಿಂದ ತುಂಬಿಹೋಗಿದೆ. ಪುರಾಣಗಳು ಪ್ರಭುವಿನ ವಿವಿಧ ಅವತಾರಗಳ ಲೀಲೆಗಳನ್ನು ವಿವರಿಸುವ ಹಿಂದಿನ ಯುಗಗಳ ಇತಿಹಾಸಗಳು. ಈ ರೀತಿಯಲ್ಲಿ ಓದುವ ವಿಷಯವು ಮತ್ತೆ ಮತ್ತೆ ಓದಿದರೂ ಸಹ, ಹೊಚ್ಚ ಹೊಸದಾಗಿರುತ್ತದೆ.

## ಶ್ಲೋಕ - 19

**ಶ್ರೀಭಗವಾನುವಾಚ**

**ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥೧೯॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಹನ್ತ**—ಆಗಲಿ; **ತೇ**—ನಿನಗೆ; **ಕಥಯಿಷ್ಯಾಮಿ**—ಹೇಳುವೆನು; **ದಿವ್ಯಾಃ**—ದೈವಿಕವಾದ; **ಹಿ**—ಖಂಡಿತವಾಗಿಯೂ; **ಆತ್ಮ ವಿಭೂತಯಃ**—ವೈಯಕ್ತಿಕ ಐಶ್ವರ್ಯಗಳನ್ನು; **ಪ್ರಾಧಾನ್ಯತಃ**—ಪ್ರಧಾನವಾಗಿರುವ; **ಕುರುಶ್ರೇಷ್ಠ**—ಕುರುಕುಲಗಳಲ್ಲಿ ಉತ್ತಮನಾದವನೇ; **ನ ಅಸ್ತಿ**—ಇಲ್ಲ; **ಅನ್ತಃ**—ಮಿತಿಯು; **ವಿಸ್ತರಸ್ಯ**—ವೈಶಾಲ್ಯಕ್ಕೆ; **ಮೇ**—ನನ್ನ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆಂದನು — ಆಗಲಿ, ಅರ್ಜುನ, ನನ್ನ ದಿವ್ಯ ವಿಭೂತಿಗಳನ್ನು ಕುರಿತು ಹೇಳುತ್ತೇನೆ. ನನ್ನ ವಿಭೂತಿಗಳಿಗೆ ಮಿತಿ ಇಲ್ಲ. ಆದುದರಿಂದ ಪ್ರಧಾನವಾದುವನ್ನು ಮಾತ್ರ ಹೇಳುತ್ತೇನೆ.**

## ಭಾವಾರ್ಥ

ಕೃಷ್ಣನ ಮತ್ತು ಅವನ ಸಿರಿಗಳ ಹಿರಿಮೆಯನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲ. ವ್ಯಕ್ತಿಗತ ಆತ್ಮದ ಇಂದ್ರಿಯಗಳು ಮಿತಿಗೊಳಗಾದಂತಹವು; ಕೃಷ್ಣನ ವ್ಯಾಪಾರವನ್ನು ಸಮಗ್ರವಾಗಿ ಗ್ರಹಿಸಲು ಅವು ಅವಕಾಶವನ್ನು ಕೊಡುವುದಿಲ್ಲ. ಆದರೂ ಭಕ್ತರು ಕೃಷ್ಣನನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಯಾವುದೇ ನಿರ್ದಿಷ್ಟ ಸಮಯದಲ್ಲಿ ಅಥವಾ ಬದುಕಿನ ಯಾವುದೇ ಸ್ಥಿತಿಯಲ್ಲಿ ಕೃಷ್ಣನನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ ಎನ್ನುವ ತತ್ವದ ಮೇಲಲ್ಲ. ಕೃಷ್ಣನಿಗೆ ಸಂಬಂಧಿಸಿದ ವಿಷಯಗಳೇ ಎಷ್ಟು ಸವಿ ಎಂದರೆ ಭಕ್ತರಿಗೆ ಅವು ಅಮೃತವೆಂದು ಕಾಣುತ್ತವೆ. ಭಕ್ತರು ಅವನ್ನು ಸವಿಯುತ್ತಾರೆ. ಕೃಷ್ಣನ ಸಿರಿಗಳನ್ನೂ ಅವನ ವಿವಿಧ ಶಕ್ತಿಗಳನ್ನೂ ಚರ್ಚಿಸುವುದರಲ್ಲಿ ಪರಿಶುದ್ಧ ಭಕ್ತರು ದಿವ್ಯಾನಂದವನ್ನು ಪಡೆಯುತ್ತಾರೆ.

ಆದುದರಿಂದ ಅವರು ಅವುಗಳನ್ನು ಕೇಳಬೇಕು ಮತ್ತು ಚರ್ಚಿಸಬೇಕು ಎಂದು ಬಯಸುತ್ತಾರೆ. ತನ್ನ ಸಿರಿಗಳ ವಿಸ್ತಾರವು ಜೀವಿಗಳಿಗೆ ಅರ್ಥವಾಗುವುದಿಲ್ಲ ಎಂದು ಕೃಷ್ಣನಿಗೆ ತಿಳಿದಿದೆ. ಆದುದರಿಂದ ಅವನು ತನ್ನ ವಿವಿಧ ಶಕ್ತಿಗಳ ಮುಖ್ಯ ಅಭಿವ್ಯಕ್ತಿಗಳನ್ನು ಮಾತ್ರ ಹೇಳಲು ಒಪ್ಪುತ್ತಾನೆ. **ಪ್ರಾಧಾನ್ಯತಃ** ಎನ್ನುವ ಶಬ್ದವು ಬಹಳ ಮುಖ್ಯ. ಏಕೆಂದರೆ ಪರಮ ಪ್ರಭುವಿನ ಲಕ್ಷಣಗಳಿಗೆ ಮಿತಿ ಇಲ್ಲ. ಅವುಗಳಲ್ಲಿ ಕೆಲವನ್ನು ಮಾತ್ರ ನಾವು ಅರ್ಥಮಾಡಿಕೊಳ್ಳಬಲ್ಲೆವು. ಅವನ ಲಕ್ಷಣಗಳನ್ನೆಲ್ಲ ಅರ್ಥಮಾಡಿಕೊಳ್ಳುವುದು ಅಸಾಧ್ಯ. ಈ ಶ್ಲೋಕದಲ್ಲಿ **ವಿಭೂತಿ** ಎಂದರೆ ಅವನು ಇಡೀ ಅಭಿವ್ಯಕ್ತಿಯನ್ನು ಯಾವ ಸಿರಿಗಳಿಂದ ನಿಯಂತ್ರಿಸುತ್ತಾನೆಯೋ ಅವು. ಅಮರಕೋಶದಲ್ಲಿ ವಿಭೂತಿ ಶಬ್ದವನ್ನು ಅಸಾಧಾರಣ ಸಿರಿ ಎಂದು ವಿವರಿಸಿದೆ.

ನಿರಾಕಾರವಾದಿಯಾಗಲಿ ಬಹು ದೇವತಾವಾದಿಯಾಗಲಿ ಪರಮ ಪ್ರಭುವಿನ ಅಸಾಧಾರಣ ಶಕ್ತಿಗಳನ್ನೂ ಅವನ ಹಲವು ಶಕ್ತಿಗಳ ಅಭಿವ್ಯಕ್ತಿಯನ್ನೂ ಅರ್ಥಮಾಡಿಕೊಳ್ಳಲಾರ. ಐಹಿಕ ಜಗತ್ತಿನಲ್ಲೂ ಆಧ್ಯಾತ್ಮಿಕ ಜಗತ್ತಿನಲ್ಲೂ ಅವನ ಶಕ್ತಿಗಳು ಅಭಿವ್ಯಕ್ತಿಯ ಪ್ರತಿಯೊಂದು ಪ್ರಭೇದದಲ್ಲಿಯೂ ಹಂಚಿಹೋಗಿವೆ. ಸಾಮಾನ್ಯ ಮನುಷ್ಯನು ನೇರವಾಗಿ ಏನನ್ನು ಕಾಣಬಹುದೋ ಅದನ್ನು ಕೃಷ್ಣನು ಈಗ ವರ್ಣಿಸುತ್ತಿದ್ದಾನೆ. ಅವನ ವೈವಿಧ್ಯಮಯ ಶಕ್ತಿಯ ಭಾಗವನ್ನು ಈ ರೀತಿಯಲ್ಲಿ ವರ್ಣಿಸಿದೆ.

## ಶ್ಲೋಕ - 20

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ||೨೦||**

**ಅಹಮ್**—ನಾನು; **ಆತ್ಮಾ**—ಆತ್ಮನು; **ಗುಡಾಕೇಶ**—ಅರ್ಜುನನೇ; **ಸರ್ವಭೂತ**—ಎಲ್ಲ ಜೀವಿಗಳ; **ಆಶಯಸ್ಥಿತಃ**—ಹೃದಯದಲ್ಲಿ ನೆಲೆಸಿದ; **ಅಹಮ್**—ನಾನು; **ಆದಿಃ**—ಮೂಲನು; **ಚ**—ಕೂಡ; **ಮಧ್ಯಮ್**—ಮಧ್ಯವು; **ಚ**—ಕೂಡ; **ಭೂತಾನಾಮ್**—ಜೀವಿಗಳೆಲ್ಲರ; **ಅನ್ತಃ**—ಕೊನೆಯು; **ಏವ**—ಖಂಡಿತವಾಗಿಯೂ; **ಚ**—ಮತ್ತು.

## ಅನುವಾದ

**ಅರ್ಜುನಾ, ನಾನು ಎಲ್ಲ ಜೀವಿಗಳ ಹೃದಯದಲ್ಲಿ ನೆಲೆಸಿರುವ ಪರಮಾತ್ಮ. ಎಲ್ಲ ಜೀವಿಗಳ ಆದಿ, ಮಧ್ಯ ಮತ್ತು ಅಂತ್ಯವು ನಾನು.**

## ಭಾವಾರ್ಥ

ಈ ಶ್ಲೋಕದಲ್ಲಿ ಅರ್ಜುನನನ್ನು **ಗುಡಾಕೇಶ** ಎಂದು ಸಂಬೋಧಿಸಿದೆ. ಹೀಗೆಂದರೆ ನಿದ್ರೆಯ ತಮಸ್ಸನ್ನು ಗೆದ್ದವನು. ಅಜ್ಞಾನದ ಕತ್ತಲೆಯೊಳಗೆ ನಿದ್ರಿಸುತ್ತಿರುವವರಿಗೆ ದೇವೋತ್ತಮ ಪರಮ ಪುರುಷನು ಭೌತಿಕ ಮತ್ತು ಆಧ್ಯಾತ್ಮಿಕ ಜಗತ್ತುಗಳಲ್ಲಿ ಹೇಗೆ ತನ್ನನ್ನು ಪ್ರಕಟಮಾಡಿಕೊಳ್ಳುತ್ತಾನೆ ಎಂದು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಆದುದರಿಂದ ಕೃಷ್ಣನು ಇಲ್ಲಿ ಅರ್ಜುನನನ್ನು ಸಂಬೋಧಿಸುವ ರೀತಿಯು ಅರ್ಥವತ್ತಾದದ್ದು. ಅರ್ಜುನನು ಇಂತಹ

ಕತ್ತಲೆಯನ್ನು ಮೀರಿದವನಾದುದರಿಂದ ದೇವೋತ್ತಮ ಪರಮ ಪುರುಷನು ತನ್ನ ವಿವಿಧ ಶಕ್ತಿಗಳನ್ನು ವರ್ಣಿಸಲು ಒಪ್ಪುತ್ತಾನೆ.

ತನ್ನ ಪ್ರಥಮ ವಿಸ್ತರಣೆಯಿಂದಾಗಿ ತಾನು ಇಡೀ ವಿಶ್ವದ ಅಭಿವ್ಯಕ್ತಿಗೆ ಆತ್ಮನು ಎಂದು ಕೃಷ್ಣನು ಮೊದಲು ಅರ್ಜುನನಿಗೆ ಹೇಳುತ್ತಾನೆ. ಐಹಿಕ ಸೃಷ್ಟಿಗೆ ಮೊದಲು ಪರಮ ಪ್ರಭುವು ಸ್ವಾಂಶ ವಿಸ್ತರಣೆಯಿಂದ ಪುರುಷಾವತಾರಗಳನ್ನು ಸ್ವೀಕರಿಸುತ್ತಾನೆ. ಅವನಿಂದ ಎಲ್ಲವೂ ಪ್ರಾರಂಭವಾಗುತ್ತದೆ. ಆದುದರಿಂದ ಅವನು ಮಹತ್‌ತತ್ವದ ಆತ್ಮ ಎಂದರೆ ವಿಶ್ವದ ಮೂಲಾಂಶಗಳ ಆತ್ಮ. ಒಟ್ಟು ಭೌತಿಕ ಶಕ್ತಿಯು ಸೃಷ್ಟಿಗೆ ಕಾರಣವಲ್ಲ; ವಾಸ್ತವವಾಗಿ ಮಹಾವಿಷ್ಣುವು ಮಹತ್‌ತತ್ವವನ್ನು, ಒಟ್ಟು ಭೌತಿಕ ಶಕ್ತಿಯನ್ನು, ಪ್ರವೇಶಿಸುತ್ತಾನೆ. ಅವನೇ ಆತ್ಮ. ಮಹಾವಿಷ್ಣುವು ಪ್ರಕಟವಾದ ವಿಶ್ವವನ್ನು ಪ್ರವೇಶಿಸಿದಾಗ ಆತನು ಮತ್ತೆ ಪ್ರತಿಯೊಂದು ವಸ್ತುವಿನಲ್ಲಿಯೂ ಪರಮಾತ್ಮನಾಗಿ ಪ್ರಕಟವಾಗುತ್ತಾನೆ. ಜೀವಿಯ ವೈಯಕ್ತಿಕ ದೇಹವು ಆಧ್ಯಾತ್ಮಿಕ ಕಿಡಿಯ ಇರವಿನಿಂದಾಗಿ ಅಸ್ತಿತ್ವದಲ್ಲಿರುತ್ತದೆ ಎಂದು ನಮಗೆ ಅನುಭವವಿದೆ. ಆ ಆಧ್ಯಾತ್ಮಿಕ ಕಿಡಿ ಇಲ್ಲದಿದ್ದರೆ ದೇಹವು ಬೆಳೆಯಲಾರದು. ಹಾಗೆಯೇ ಭೌತಿಕ ಅಭಿವ್ಯಕ್ತಿಯೂ ಪರಮಾತ್ಮನಾದ ಕೃಷ್ಣನು ಪ್ರವೇಶಿಸದಿದ್ದರೆ ಬೆಳೆಯಲಾರದು. ಸುಬಲ ಉಪನಿಷತ್ತಿನಲ್ಲಿ ಹೇಳಿರುವಂತೆ, **ಪ್ರಕೃತಿ ಆದಿ ಸರ್ವಭೂತಾಂತರ್ಯಾಮೀ ಸರ್ವ ಶೇಷೀ ಚ ನಾರಾಯಣಃ** — "ದೇವೋತ್ತಮ ಪರಮ ಪುರುಷನು ಪರಮಾತ್ಮನಾಗಿ, ಅಭಿವ್ಯಕ್ತವಾಗಿರುವ ಎಲ್ಲ ವಿಶ್ವಗಳಲ್ಲಿದ್ದಾನೆ."

ಮೂರು ಪುರುಷಾವತಾರಗಳನ್ನು ಶ್ರೀಮದ್ಭಾಗವತದಲ್ಲಿ ವರ್ಣಿಸಿದೆ. ಅವುಗಳನ್ನು ಸಾತ್ವತ ತಂತ್ರದಲ್ಲಿಯೂ ವರ್ಣಿಸಿದೆ — **ವಿಷ್ಣೋಸ್ತು ತ್ರೀಣಿ ರೂಪಾಣಿ ಪುರುಷಾಖ್ಯಾನಿ ಅಥೋ ವಿದುಃ** — ದೇವೋತ್ತಮ ಪರಮ ಪುರುಷನಿಗೆ ಈ ಭೌತಿಕ ಅಭಿವ್ಯಕ್ತಿಯಲ್ಲಿ ಮೂರು ಸ್ವರೂಪಗಳುಂಟು — ಕಾರಣೋದಕಶಾಯಿ ವಿಷ್ಣು, ಗರ್ಭೋದಕಶಾಯಿ ವಿಷ್ಣು ಮತ್ತು ಕ್ಷೀರೋದಕಶಾಯಿ ವಿಷ್ಣು. ಮಹಾವಿಷ್ಣು ಅಥವಾ ಕಾರಣೋದಕಶಾಯಿ ವಿಷ್ಣುವನ್ನು ಬ್ರಹ್ಮಸಂಹಿತೆಯಲ್ಲಿ (5.47) ವರ್ಣಿಸಿದೆ — **ಯಃ ಕಾರಣಾರ್ಣವಜಲೇ ಭಜತಿ ಸ್ಮ ಯೋಗನಿದ್ರಾಮ್**— ಎಲ್ಲ ಕಾರಣಗಳ ಕಾರಣನಾದ ಪರಮ ಪ್ರಭು ಕೃಷ್ಣನು ವಿಶ್ವಸಮುದ್ರದಲ್ಲಿ ಮಹಾವಿಷ್ಣುವಾಗಿ ಮಲಗಿರುತ್ತಾನೆ. ಆದುದರಿಂದ ದೇವೋತ್ತಮ ಪರಮ ಪುರುಷನು ಈ ವಿಶ್ವದ ಆದಿ, ವಿಶ್ವದ ಅಭಿವ್ಯಕ್ತಿಗಳ ಸ್ಥಿತಿಪಾಲಕ ಮತ್ತು ಎಲ್ಲ ಶಕ್ತಿಯ ಅಂತ್ಯ.

## ಶ್ಲೋಕ - 21

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ |**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ||೨೧||**

**ಆದಿತ್ಯಾನಾಮ್**—ಆದಿತ್ಯರಲ್ಲಿ; **ಅಹಮ್**—ನಾನು; **ವಿಷ್ಣುಃ**—ಪರಮ ಪ್ರಭುವು; **ಜ್ಯೋತಿಷಾಮ್**—ಸಕಲಜ್ಯೋತಿಗಳಲ್ಲಿ; **ರವಿಃ**—ಸೂರ್ಯನು; **ಅಂಶು ಮಾನ್**—ಪ್ರಕಾಶಬೀರುವ; **ಮರೀಚಿಃ**—ಮರೀಚಿಯು; **ಮರುತಾಮ್**—ಮರುತ್ತುಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ನಕ್ಷತ್ರಾಣಾಮ್** —ನಕ್ಷತ್ರಗಳಲ್ಲಿ; **ಅಹಮ್**—ನಾನು; **ಶಶೀ**—ಚಂದ್ರನು.

## ಅನುವಾದ

**ನಾನು ಆದಿತ್ಯರಲ್ಲಿ ವಿಷ್ಣು, ಜ್ಯೋತಿಗಳಲ್ಲಿ ತೇಜಸ್ವೀ ಸೂರ್ಯ, ಮರುತರಲ್ಲಿ ಮರೀಚಿ, ಮತ್ತು ನಕ್ಷತ್ರಗಳಲ್ಲಿ ನಾನು ಚಂದ್ರನು.**

## ಭಾವಾರ್ಥ

ಆದಿತ್ಯರು ಹನ್ನೆರಡು ಮಂದಿ. ಅವರಲ್ಲಿ ಮುಖ್ಯನಾದವನು ಕೃಷ್ಣ. ಆಕಾಶದಲ್ಲಿ ಹೊಳೆಯುತ್ತಿರುವ ಪ್ರಕಾಶಗಳಲ್ಲಿ ಸೂರ್ಯನು ಮುಖ್ಯನಾದವನು. ಬ್ರಹ್ಮಸಂಹಿತೆಯಲ್ಲಿ ಸೂರ್ಯನನ್ನು ಪರಮ ಪ್ರಭುವಿನ ಪ್ರಕಾಶಮಾನ ನೇತ್ರವೆಂದು ಒಪ್ಪಿದೆ. ಆಕಾಶದಲ್ಲಿ ಐವತ್ತು ಬಗೆಗಳ ವಾಯುವು ಬೀಸುತ್ತದೆ. ಇವುಗಳ ನಿಯಂತ್ರಕ ದೇವತೆ ಮರೀಚಿಯು ಕೃಷ್ಣನನ್ನು ಪ್ರತಿನಿಧಿಸುತ್ತಾನೆ.

ನಕ್ಷತ್ರಗಳಲ್ಲಿ ರಾತ್ರಿ ಪ್ರಧಾನವಾದವನು ಚಂದ್ರ. ಆದುದರಿಂದ ಚಂದ್ರನು ಕೃಷ್ಣನ ಪ್ರತಿನಿಧಿ. ಈ ಶ್ಲೋಕದಲ್ಲಿ ಚಂದ್ರನು ನಕ್ಷತ್ರಗಳಲ್ಲಿ ಒಂದೆಂದು ತೋರುತ್ತದೆ. ಆದುದರಿಂದ ಆಕಾಶದಲ್ಲಿ ಮಿನುಗುವ ನಕ್ಷತ್ರಗಳು ಸಹ ಸೂರ್ಯನ ಬೆಳಕನ್ನು ಪ್ರತಿಫಲಿಸುತ್ತವೆ. ವಿಶ್ವದಲ್ಲಿ ಹಲವು ಸೂರ್ಯರಿದ್ದಾರೆ ಎನ್ನುವ ಊಹೆಯನ್ನು ವೇದಸಾಹಿತ್ಯವು ಒಪ್ಪುವುದಿಲ್ಲ. ಸೂರ್ಯನು ಒಬ್ಬನೇ; ಸೂರ್ಯನ ಪ್ರತಿಫಲನದಿಂದ ಚಂದ್ರನು ಬೆಳಗುವಂತೆಯೇ ನಕ್ಷತ್ರಗಳೂ ಬೆಳಗುತ್ತವೆ. ಭಗವದ್ಗೀತೆಯು ಇಲ್ಲಿ, ಚಂದ್ರನು ನಕ್ಷತ್ರಗಳಲ್ಲಿ ಒಂದು; ಮಿನುಗುವ ನಕ್ಷತ್ರಗಳು ಸೂರ್ಯಗಳಲ್ಲ, ಆದರೆ ಚಂದ್ರನನ್ನು ಹೋಲುತ್ತವೆ ಎಂದು ಸೂಚಿಸುತ್ತದೆ.

## ಶ್ಲೋಕ - 22

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥**

**ವೇದಾನಾಮ್**—ಎಲ್ಲ ವೇದಗಳಲ್ಲಿ; **ಸಾಮ ವೇದಃ**—ಸಾಮವೇದವು; **ಅಸ್ಮಿ**—ಆಗಿದ್ದೇನೆ; **ದೇವಾನಾಮ್**—ದೇವತೆಗಳೆಲ್ಲರಲ್ಲಿ; **ಅಸ್ಮಿ**—ಆಗಿದ್ದೇನೆ; **ವಾಸವಃ**—ಸ್ವರ್ಗಾಧಿಪತಿಯು; **ಇನ್ದ್ರಿಯಾಣಾಮ್**—ಎಲ್ಲ ಇಂದ್ರಿಯಗಳಲ್ಲಿ; **ಮನಃ**—ಮನಸ್ಸು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ಭೂತಾನಾಮ್**—ಎಲ್ಲ ಜೀವಿಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ಚೇತನಾ**—ಜೀವಶಕ್ತಿಯು.

## ಅನುವಾದ

**ವೇದಗಳಲ್ಲಿ ನಾನು ಸಾಮವೇದ, ದೇವತೆಗಳಲ್ಲಿ ನಾನು ಸ್ವರ್ಗರಾಜನಾದ ಇಂದ್ರ, ಇಂದ್ರಿಯಗಳಲ್ಲಿ ನಾನು ಮನಸ್ಸು, ಮತ್ತು ಜೀವಿಗಳಲ್ಲಿ ನಾನು ಚೇತನ.**

## ಭಾವಾರ್ಥ

ಜಡದ್ರವ್ಯಕ್ಕೂ ಚೇತನಕ್ಕೂ ಇರುವ ವ್ಯತ್ಯಾಸವೆಂದರೆ, ಜಡದ್ರವ್ಯಕ್ಕೆ ಜೀವಿಗಿರುವಂತೆ

ಪ್ರಜ್ಞೆ ಇಲ್ಲ. ಆದುದರಿಂದ ಈ ಪ್ರಜ್ಞೆಯು ಪರಮ ವಾದದ್ದು; ನಿತ್ಯವಾದದ್ದು. ಜಡದ್ರವ್ಯದ ಸಂಘಟನೆಯೂ ಪ್ರಜ್ಞೆಯನ್ನು ಉತ್ಪತ್ತಿ ಮಾಡಲಾರದು.

## ಶ್ಲೋಕ - 23

**ರುದ್ರಾಣಾಂ ಶಙ್ಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ |**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ||೨೩||**

**ರುದ್ರಾಣಾಮ್**—ಎಲ್ಲ ರುದ್ರರಲ್ಲಿ; **ಶಙ್ಕರಃ**—ಶ್ರೀ ಶಿವನು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ವಿತ್ತ ಈಶಃ**—ದೇವತೆಗಳ ಕೋಶಾಧಿಪತಿಯು; **ಯಕ್ಷ ರಕ್ಷಸಾಮ್**—ಯಕ್ಷರು ಮತ್ತು ರಾಕ್ಷಸರಲ್ಲಿ; **ವಸೂನಾಮ್**—ವಸುಗಳಲ್ಲಿ; **ಪಾವಕಃ**—ಅಗ್ನಿಯು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ಮೇರುಃ**—ಮೇರುವು; **ಶಿಖರಿಣಾಮ್**—ಎಲ್ಲ ಪರ್ವತಗಳಲ್ಲಿ; **ಅಹಮ್**—ನಾನು.

## ಅನುವಾದ

**ರುದ್ರರಲ್ಲಿ ನಾನು ಶಿವ, ಯಕ್ಷರಾಕ್ಷಸರಲ್ಲಿ ನಾನು ಕುಬೇರ, ವಸುಗಳಲ್ಲಿ ನಾನು ಅಗ್ನಿ ಮತ್ತು ಪರ್ವತಗಳಲ್ಲಿ ನಾನು ಮೇರು.**

## ಭಾವಾರ್ಥ

ರುದ್ರರಲ್ಲಿ ಹನ್ನೊಂದು ಮಂದಿ. ಅವರಲ್ಲಿ ಶಂಕರ ಅಥವಾ ಶಿವನು ಪ್ರಧಾನ. ಅವನು ವಿಶ್ವದಲ್ಲಿನ ತಮೋಗುಣದ ಹೊಣೆಯನ್ನು ವಹಿಸಿಕೊಂಡಿರುವ ಪರಮ ಪ್ರಭುವಿನ ಅವತಾರ. ಯಕ್ಷರು ಮತ್ತು ರಾಕ್ಷಸರ ನಾಯಕ ಕುಬೇರ. ಅವನು ದೇವತೆಗಳ ಕೋಶಾಧಿಪತಿ ಮತ್ತು ಪರಮ ಪ್ರಭುವಿನ ಪ್ರತಿನಿಧಿ. ಮೇರುವು ಸಂಪನ್ಮೂಲಗಳ ಶ್ರೀಮಂತಿಕೆಗೆ ಹೆಸರಾದ ಪರ್ವತ.

## ಶ್ಲೋಕ - 24

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ |**
**ಸೇನಾನೀನಾಮಹಂ ಸ್ಕನ್ದಃ ಸರಸಾಮಸ್ಮಿ ಸಾಗರಃ ||೨೪||**

**ಪುರೋಧಸಾಮ್**—ಎಲ್ಲ ಪುರೋಹಿತರಲ್ಲಿ; **ಚ**—ಕೂಡ; **ಮುಖ್ಯಮ್**—ಮುಖ್ಯನಾದ; **ಮಾಮ್**—ನನ್ನನ್ನು; **ವಿದ್ಧಿ**—ತಿಳಿದುಕೊ; **ಪಾರ್ಥ**—ಪೃಥೆಯ ಪುತ್ರನೆ; **ಬೃಹಸ್ಪತಿಮ್**—ಬೃಹಸ್ಪತಿ ಎಂದು; **ಸೇನಾನೀನಾಮ್**—ಎಲ್ಲ ಸೇನಾಪತಿಗಳಲ್ಲಿ; **ಅಹಮ್**—ನಾನು; **ಸ್ಕನ್ದಃ**—ಕಾರ್ತಿಕೇಯನು; **ಸರಸಾಮ್**—ಎಲ್ಲ ಜಲಾಶಯಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ಸಾಗರಃ**—ಸಮುದ್ರವು.

## ಅನುವಾದ

**ಅರ್ಜುನನೆ, ಪುರೋಹಿತರಲ್ಲಿ ನಾನು ಮುಖ್ಯನಾದ ಬೃಹಸ್ಪತಿ ಎಂದು ತಿಳಿದುಕೊ; ಸೇನಾಧಿಪತಿಗಳಲ್ಲಿ ನಾನು ಕಾರ್ತಿಕೇಯ ಮತ್ತು ಸರಸ್ಸುಗಳಲ್ಲಿ ನಾನು ಸಾಗರ.**

## ಭಾವಾರ್ಥ

ಸ್ವರ್ಗಲೋಕಗಳ ಮುಖ್ಯ ದೇವತೆ ಇಂದ್ರ. ಅವನಿಗೆ ದೇವಲೋಕದ ರಾಜನೆಂದು ಹೆಸರು. ಆತನು ಆಳುವ ಲೋಕವು ಇಂದ್ರಲೋಕ. ಬೃಹಸ್ಪತಿಯು ಇಂದ್ರನ ಪುರೋಹಿತ; ಇಂದ್ರನು ಎಲ್ಲ ರಾಜರ ನಾಯಕನಾದದ್ದರಿಂದ ಬೃಹಸ್ಪತಿಯು ಎಲ್ಲ ಪುರೋಹಿತರ ನಾಯಕ. ಇಂದ್ರನು ಎಲ್ಲ ರಾಜರಲ್ಲಿ ಪ್ರಮುಖನಾದಂತೆ ಪಾರ್ವತಿ ಮತ್ತು ಶಿವರ ಮಗನಾದ ಸ್ಕಂದ ಅಥವಾ ಕಾರ್ತಿಕೇಯನು ಎಲ್ಲ ಸೈನ್ಯಾಧಿಪತಿಗಳಲ್ಲಿ ಮುಖ್ಯನು. ಜಲರಾಶಿಗಳಲ್ಲಿ ಸಮುದ್ರವೇ ಅತ್ಯಂತ ದೊಡ್ಡದು. ಕೃಷ್ಣನ ಈ ನಿರೂಪಣೆಗಳು ಅವನ ಮಹಿಮೆಯ ಸೂಚನೆಗಳು ಅಷ್ಟೆ.

## ಶ್ಲೋಕ - 25

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ |**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ||೨೫||**

**ಮಹಾ ಋಷೀಣಾಮ್**—ಮಹರ್ಷಿಗಳಲ್ಲಿ; **ಭೃಗುಃ**—ಭೃಗುವು; **ಅಹಮ್**—ನಾನು; **ಗಿರಾಮ್**—ಶಬ್ದಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ಏಕಮ್ ಅಕ್ಷರಮ್**—ಪ್ರಣವವು; **ಯಜ್ಞಾನಾಮ್**—ಯಜ್ಞಗಳಲ್ಲಿ; **ಜಪಯಜ್ಞಃ**—ಜಪವು; **ಅಸ್ಮಿ**—ಆಗಿದ್ದೇನೆ; **ಸ್ಥಾವರಾಣಾಮ್**—ಸ್ಥಿರವಸ್ತುಗಳಲ್ಲಿ; **ಹಿಮಾಲಯಃ**—ಹಿಮಾಲಯ ಪರ್ವತವು.

## ಅನುವಾದ

**ಮಹರ್ಷಿಗಳಲ್ಲಿ ನಾನು ಭೃಗು, ಕಂಪನಗಳಲ್ಲಿ ನಾನು ದಿವ್ಯ ಓಂಕಾರ, ಯಜ್ಞಗಳಲ್ಲಿ ನಾನು ಜಪಯಜ್ಞ, ಚಲಿಸದ ವಸ್ತುಗಳಲ್ಲಿ ನಾನು ಹಿಮಾಲಯ.**

## ಭಾವಾರ್ಥ

ವಿಶ್ವದ ಪ್ರಥಮ ಜೀವಿಯಾದ ಬ್ರಹ್ಮನು ವಿವಿಧ ವರ್ಗಗಳ ಸಂತಾನ ಪ್ರಸಾರಕ್ಕಾಗಿ ಹಲವರು ಪುತ್ರರನ್ನು ಸೃಷ್ಟಿಸಿದನು. ಈ ಗಂಡು ಮಕ್ಕಳಲ್ಲಿ ಭೃಗುವು ಅತ್ಯಂತ ಶಕ್ತ ಋಷಿ. ಎಲ್ಲ ದಿವ್ಯಮಂತ್ರಗಳಲ್ಲಿ ಓಂಕಾರವು ಕೃಷ್ಣನ ಪ್ರತಿನಿಧಿ. ಎಲ್ಲ ಯಜ್ಞಗಳಲ್ಲಿ ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ ಎಂಬ ಸಂಕೀರ್ತನೆಯು ಕೃಷ್ಣನ ಅತ್ಯಂತ ಪರಿಶುದ್ಧ ಪ್ರತಿನಿಧಿ. ಒಮ್ಮೊಮ್ಮೆ ಪಶುಬಲಿಯನ್ನು ಕೊಡಬೇಕೆಂದು ಹೇಳುವುದುಂಟು. ಆದರೆ ಹರೇ ಕೃಷ್ಣ, ಹರೇ ಕೃಷ್ಣ ಯಜ್ಞದಲ್ಲಿ ಹಿಂಸೆಯ ಪ್ರಶ್ನೆಯೇ ಇಲ್ಲ. ಅದು ಅತ್ಯಂತ ಸರಳವಾದದ್ದು ಮತ್ತು ಅತ್ಯಂತ ಪರಿಶುದ್ಧವಾದದ್ದು. ಲೋಕಗಳಲ್ಲಿ ಭವ್ಯವಾದದ್ದೆಲ್ಲ ಕೃಷ್ಣನ ಪ್ರತಿನಿಧಿ. ಆದುದರಿಂದ ಪ್ರಪಂಚದಲ್ಲಿ ಅತಿದೊಡ್ಡ ಪರ್ವತವಾದ ಹಿಮಾಲಯವು ಅವನ ಪ್ರತಿನಿಧಿ. ಹಿಂದಿನ ಶ್ಲೋಕದಲ್ಲಿ ಮೇರುಪರ್ವತವನ್ನು ಹೆಸರಿಸಲಾಗಿತ್ತು. ಆದರೆ ಮೇರುವು ಒಮ್ಮೊಮ್ಮೆ ಚಲಿಸುತ್ತದೆ. ಹಿಮಾಲಯವು ಮೇರುಪರ್ವತಕ್ಕಿಂತ ಶ್ರೇಷ್ಠವಾದದ್ದು.

## ಶ್ಲೋಕ - 26

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

**ಅಶ್ವತ್ಥಃ**—ಅಶ್ವತ್ಥವೃಕ್ಷವು; **ಸರ್ವ ವೃಕ್ಷಾಣಾಮ್**—ಎಲ್ಲ ಮರಗಳಲ್ಲಿ; **ದೇವರ್ಷೀಣಾಮ್**—ಎಲ್ಲ ದೇವರ್ಷಿಗಳಲ್ಲಿ; **ಚ**—ಮತ್ತು; **ನಾರದಃ**—ನಾರದನು; **ಗಂಧರ್ವಾಣಾಮ್**—ಗಂಧರ್ವ ಲೋಕದ ಪ್ರಜೆಗಳಲ್ಲಿ; **ಚಿತ್ರರಥಃ**—ಚಿತ್ರರಥನು; **ಸಿದ್ಧಾನಾಮ್**—ಸಿದ್ಧರಲ್ಲಿ; **ಕಪಿಲಃ ಮುನಿಃ**—ಕಪಿಲ ಮುನಿಯು.

## ಅನುವಾದ

**ವೃಕ್ಷಗಳಲ್ಲಿ ನಾನು ಅಶ್ವತ್ಥ, ದೇವ ಋಷಿಗಳಲ್ಲಿ ನಾರದ, ಗಂಧರ್ವರಲ್ಲಿ ನಾನು ಚಿತ್ರರಥ, ಸಿದ್ಧಿ ಪಡೆದವರಲ್ಲಿ ನಾನು ಕಪಿಲಮುನಿ.**

## ಭಾವಾರ್ಥ

ಅತ್ಯಂತ ಎತ್ತರವಾದ ಮತ್ತು ಸುಂದರವಾದ ಮರಗಳಲ್ಲಿ ಅಶ್ವತ್ಥ ವೃಕ್ಷವೂ ಒಂದು. ಭಾರತದಲ್ಲಿ ಜನರು ತಮ್ಮ ಪ್ರತಿದಿನದ ಬೆಳಗಿನ ಧಾರ್ಮಿಕ ವಿಧಿಗಳಲ್ಲಿ ಒಂದೆನ್ನುವಂತೆ ಈ ವೃಕ್ಷವನ್ನು ಪೂಜಿಸುತ್ತಾರೆ. ದೇವತೆಗಳಲ್ಲಿ ಅವರು ನಾರದನನ್ನು ಪೂಜಿಸುತ್ತಾರೆ. ನಾರದನು ವಿಶ್ವದಲ್ಲಿ ಅತ್ಯಂತ ಶ್ರೇಷ್ಠ ಭಕ್ತ ಎಂದು ಭಾವಿಸಲಾಗಿದೆ. ಅವನು ಭಕ್ತನಾಗಿ ಶ್ರೀಕೃಷ್ಣನ ಪ್ರತಿನಿಧಿಯೂ ಹೌದು. ಗಂಧರ್ವ ಲೋಕದಲ್ಲಿ ಬಹು ಮಧುರವಾಗಿ ಹಾಡುವವರಿದ್ದಾರೆ. ಅವರಲ್ಲಿ ಅತ್ಯಂತ ಮಧುರ ಗಾಯಕ ಚಿತ್ರರಥ. ಪರಿಪೂರ್ಣ ಜೀವಿಗಳಲ್ಲಿ ದೇವಹೂತಿಯ ಮಗ ಕಪಿಲನು ಕೃಷ್ಣನ ಪ್ರತಿನಿಧಿ. ಅವನನ್ನು ಕೃಷ್ಣನ ಅವತಾರ ಎಂದು ಭಾವಿಸುತ್ತಾರೆ. ಅವನ ತತ್ವಜ್ಞಾನವನ್ನು ಶ್ರೀಮದ್ಭಾಗವತದಲ್ಲಿ ಪ್ರಸ್ತಾಪಿಸಿದೆ. ಮುಂದೆ ಮತ್ತೊಬ್ಬ ಕಪಿಲನು ಖ್ಯಾತಿ ಪಡೆದನು. ಆದರೆ ಆತನು ನಾಸ್ತಿಕನು. ಆದುದರಿಂದ ಇವರ ನಡುವೆ ವಿಶಾಲವಾದ ವ್ಯತ್ಯಾಸವಿದೆ.

## ಶ್ಲೋಕ - 27

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥೨೭॥**

**ಉಚ್ಚೈಃಶ್ರವಸಮ್**—ಉಚ್ಚೈಃಶ್ರವ ಎಂದು; **ಅಶ್ವಾನಾಮ್**—ಕುದುರೆಗಳಲ್ಲಿ; **ವಿದ್ಧಿ**—ತಿಳಿದುಕೊ; **ಮಾಮ್**—ನನ್ನನ್ನು; **ಅಮೃತ ಉದ್ಭವಮ್**—ಸಾಗರಮಥನದಿಂದ ಉದ್ಭವವಾದ; **ಐರಾವತಮ್**—ಐರಾವತ ಎಂದು; **ಗಜ ಇನ್ದ್ರಾಣಾಮ್**—ಗಜೇಂದ್ರಗಳಲ್ಲಿ; **ನರಾಣಾಮ್**—ಮಾನವರಲ್ಲಿ; **ಚ**—ಮತ್ತು; **ನರಾಧಿಪಮ್**—ರಾಜನು ಎಂದು.

## ಅನುವಾದ

**ಅಶ್ವಗಳಲ್ಲಿ ನಾನು, ಅಮೃತಕ್ಕಾಗಿ ಸಮುದ್ರವನ್ನು ಕಡೆದಾಗ ಉದ್ಭವವಾದ ಉಚ್ಚೈಶ್ರವಸ್ಸು ಎಂದು ತಿಳಿ. ಗಜೇಂದ್ರರಲ್ಲಿ ನಾನು ಐರಾವತ; ಮನುಷ್ಯರಲ್ಲಿ ನಾನು ರಾಜ.**

## ಭಾವಾರ್ಥ

ಭಕ್ತರಾದ ದೇವತೆಗಳೂ ಅಸುರರೂ ಒಮ್ಮೆ ಸಮುದ್ರವನ್ನು ಕಡೆದರು. ಈ ಮಂಥನದಿಂದ ಅಮೃತ ಮತ್ತು ವಿಷ ಎರಡೂ ಹೊರಬಂದವು. ಶಿವನು ವಿಷವನ್ನು ಕುಡಿದನು. ಅಮೃತಮಥನದಿಂದ ಅನೇಕ ವಸ್ತುಗಳು ಹುಟ್ಟಿದವು. ಅವುಗಳಲ್ಲಿ ಉಚ್ಚೈಶ್ರವಸ್ಸು ಎಂಬ ಹೆಸರಿನ ಕುದುರೆಯೂ ಒಂದು. ಅಮೃತಮಥನದಿಂದ ಮೂಡಿ ಬಂದ ಮತ್ತೊಂದು ಪ್ರಾಣಿ ಐರಾವತ ಎನ್ನುವ ಆನೆ. ಈ ಎರಡು ಪ್ರಾಣಿಗಳೂ ಅಮೃತಮಥನದಿಂದ ಬಂದುದರಿಂದ ಅವಕ್ಕೆ ವಿಶೇಷ ಮಹತ್ವ. ಅವು ಕೃಷ್ಣನ ಪ್ರತಿನಿಧಿಗಳು.

ಮನುಷ್ಯರಲ್ಲಿ ರಾಜನು ಕೃಷ್ಣನ ಪ್ರತಿನಿಧಿ. ಏಕೆಂದರೆ ಕೃಷ್ಣನು ವಿಶ್ವವನ್ನು ಪಾಲಿಸುತ್ತಾನೆ. ತಮ್ಮ ದೈವಭಕ್ತಿ ಮತ್ತು ಧಾರ್ಮಿಕ ಗುಣಗಳಿಗಾಗಿ ನೇಮಿತರಾದ ರಾಜರು ತಮ್ಮ ರಾಜ್ಯಗಳ ಪಾಲಕರು. ಮಹಾರಾಜ ಯುಧಿಷ್ಠಿರ, ಮಹಾರಾಜ ಪರೀಕ್ಷಿತ್ ಮತ್ತು ಶ್ರೀರಾಮನಂತಹ ರಾಜರು ಬಹುಧರ್ಮಿಷ್ಠ ಅರಸರಾಗಿದ್ದರು ಮತ್ತು ಸದಾ ಪ್ರಜೆಗಳ ಯೋಗಕ್ಷೇಮವನ್ನು ಕುರಿತು ಚಿಂತಿಸುತ್ತಿದ್ದರು. ವೇದ ಸಾಹಿತ್ಯದಲ್ಲಿ ರಾಜನನ್ನು ದೇವರ ಪ್ರತಿನಿಧಿ ಎಂದು ಪರಿಗಣಿಸಿದೆ. ಆದರೆ ಈ ಯುಗದಲ್ಲಿ, ಧಾರ್ಮಿಕ ತತ್ವಗಳು ಭ್ರಷ್ಟವಾಗಿ, ರಾಜತ್ವವು ಕ್ಷೀಣಗತಿಗೆ ಬಂದಿತು. ಈಗ ಕೊನೆಗೊಂಡಿದೆ. ಆದರೆ ಹಿಂದಿನ ಕಾಲದಲ್ಲಿ ಧರ್ಮಿಷ್ಠ ರಾಜರ ಆಳ್ವಿಕೆಯಲ್ಲಿ ಜನರು ಇನ್ನೂ ಸುಖವಾಗಿದ್ದರು ಎಂದು ತಿಳಿದುಕೊಳ್ಳಬೇಕು.

## ಶ್ಲೋಕ - 28

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ |**
**ಪ್ರಜನಶ್ಚಾಸ್ಮಿ ಕನ್ದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ||೨೮||**

**ಆಯುಧಾನಾಮ್**—ಎಲ್ಲ ಆಯುಧಗಳಲ್ಲಿ; **ಅಹಮ್**—ನಾನು; **ವಜ್ರಮ್**—ವಜ್ರಾಯುಧವು; **ಧೇನೂನಾಮ್**—ಹಸುಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ಕಾಮ ಧುಕ್**—ಸುರಭಿ ಹಸುವು; **ಪ್ರಜನಃ**—ಮಕ್ಕಳನ್ನು ಪಡೆಯಲು ಕಾರಣನಾದ; **ಚ**—ಮತ್ತು; **ಅಸ್ಮಿ**—ಆಗಿದ್ದೇನೆ; **ಕನ್ದರ್ಪಃ**—ಮನ್ಮಥನು; **ಸರ್ಪಾಣಾಮ್**—ಸರ್ಪಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ವಾಸುಕಿಃ**—ವಾಸುಕಿಯು.

## ಅನುವಾದ

**ಆಯುಧಗಳಲ್ಲಿ ನಾನು ವಜ್ರಾಯುಧ, ಗೋವುಗಳಲ್ಲಿ ಸುರಭಿ. ಪ್ರಜೋತ್ಪತ್ತಿಗೆ ಕಾರಣಗಳಲ್ಲಿ ನಾನು ಕಂದರ್ಪ, ಪ್ರೇಮದೇವತೆ; ಸರ್ಪಗಳಲ್ಲಿ ನಾನು ವಾಸುಕಿ.**

## ಭಾವಾರ್ಥ

ವಜ್ರಾಯುಧ ಅಥವಾ ಸಿಡಿಲು ನಿಜವಾಗಿಯೂ ಬಲಶಾಲಿಯಾದದ್ದು. ಅದು ಕೃಷ್ಣನ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಆಧ್ಯಾತ್ಮಿಕ ಗಗನದಲ್ಲಿರುವ ಕೃಷ್ಣಲೋಕದಲ್ಲಿ, ಯಾವಾಗ ಕರೆದರೂ ಹಾಲು ಕೊಡುವ ಹಸುಗಳಿವೆ. ಅವು ಮನುಷ್ಯನು ಎಷ್ಟು ಬಯಸಿದರೆ ಅಷ್ಟು ಹಾಲನ್ನು ಕೊಡುತ್ತವೆ. ನಿಜ, ಇಂತಹ ಗೋವುಗಳು ಐಹಿಕ ಲೋಕದಲ್ಲಿ ಇಲ್ಲ. ಆದರೆ ಕೃಷ್ಣಲೋಕದಲ್ಲಿ ಅವುಗಳ ಪ್ರಸ್ತಾಪ ಇದೆ. ಪ್ರಭುವು ಇಂತಹ ಅನೇಕ ಗೋವುಗಳನ್ನು ಇಟ್ಟುಕೊಂಡಿದ್ದಾನೆ. ಅವುಗಳಿಗೆ **ಸುರಭಿ** ಎಂದು ಹೆಸರು. ಭಗವಂತನು ಸುರಭಿ ಗೋವುಗಳನ್ನು ನೋಡಿಕೊಳ್ಳುವುದರಲ್ಲಿ ನಿರತನಾಗಿರುತ್ತಾನೆ ಎಂದು ಹೇಳಲಾಗಿದೆ. ಕಂದರ್ಪ ಎಂದರೆ ಸತ್ಪುತ್ರರ ಪ್ರಾಪ್ತಿಗಾಗಿ ಇರುವ ಕಾಮಾಪೇಕ್ಷೆ. ಆದುದರಿಂದ ಕಂದರ್ಪನು ಕೃಷ್ಣನ ಪ್ರತಿನಿಧಿ. ಕೆಲವೊಮ್ಮೆ ಇಂದ್ರಿಯ ಸುಖಕ್ಕಾಗಿಯೇ ರತಿಕ್ರೀಡೆ ಆಡುವುದುಂಟು. ಇಂತಹ ರತಿಕ್ರೀಡೆಯು ಕೃಷ್ಣನ ಪ್ರತಿನಿಧಿಯಲ್ಲ. ಆದರೆ ಒಳ್ಳೆಯ ಮಕ್ಕಳ ಜನನಕ್ಕಾಗಿ ನಡೆಯುವ ಕಾಮಜೀವನಕ್ಕೆ ಕಂದರ್ಪ ಎಂದು ಹೆಸರು. ಇದು ಕೃಷ್ಣನನ್ನು ಪ್ರತಿನಿಧಿಸುತ್ತದೆ.

## ಶ್ಲೋಕ - 29

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥**

**ಅನಂತಃ**—ಅನಂತನು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ನಾಗಾನಾಮ್**—ಹಲವು ಹೆಡೆಗಳಿರುವ ಸರ್ಪಗಳಲ್ಲಿ; **ವರುಣಃ**—ಜಲನಿಯಂತ್ರಕ ದೇವತೆಯು; **ಯಾದಸಾಮ್**—ಎಲ್ಲ ಜಲಚರಗಳಲ್ಲಿ; **ಅಹಮ್**—ನಾನು; **ಪಿತೄಣಾಮ್**—ಪೂರ್ವಜರಲ್ಲಿ; **ಅರ್ಯಮಾ**—ಅರ್ಯಮನು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ಯಮಃ**—ಮರಣ ನಿಯಂತ್ರಕನು; **ಸಂಯಮತಾಮ್**—ಎಲ್ಲ ನಿಯಂತ್ರಕರಲ್ಲಿ; **ಅಹಮ್**—ನಾನು.

## ಅನುವಾದ

**ಬಹು ಹೆಡೆಗಳ ನಾಗರಲ್ಲಿ ನಾನು ಅನಂತ, ಜಲವಾಸಿಗಳಲ್ಲಿ ನಾನು ವರುಣ ದೇವತೆ. ಪಿತೃಗಳಲ್ಲಿ ಅರ್ಯಮಾ ಮತ್ತು ಶಾಸನ ನಿರ್ವಹಿಸುವವರಲ್ಲಿ ನಾನು ಯಮ.**

## ಭಾವಾರ್ಥ

ಜಲವಾಸಿಗಳಲ್ಲಿ ವರುಣದೇವನೇ ಅತ್ಯಂತ ಶ್ರೇಷ್ಠನಾದಂತೆ ಬಹು ಹೆಡೆಗಳ ನಾಗಸರ್ಪಗಳಲ್ಲಿ ಅನಂತನೇ ಬಹುಶ್ರೇಷ್ಠ. ಇವರಿಬ್ಬರೂ ಕೃಷ್ಣನನ್ನು ಪ್ರತಿನಿಧಿಸುತ್ತಾರೆ. ಪಿತೃಗಳ ಲೋಕವೊಂದಿದೆ. ಅದರ ಅಧಿಪತಿ ಅರ್ಯಮಾ. ಆತನು ಕೃಷ್ಣನನ್ನು ಪ್ರತಿನಿಧಿಸುತ್ತಾನೆ. ದುಷ್ಕರ್ಮಿಗಳಿಗೆ ಶಿಕ್ಷೆ ಮಾಡುವ ಜೀವಿಗಳು ಅನೇಕರಿದ್ದಾರೆ. ಅವರಲ್ಲಿ ಯಮನೇ ಪ್ರಧಾನನು. ಯಮನು ಭೂಲೋಕದ ಬಳಿ ಇರುವ ಒಂದು ಗ್ರಹದಲ್ಲಿ ನೆಲೆಸಿದ್ದಾನೆ. ಮರಣಾನಂತರ ಬಹಳ

ಪಾಪ ಮಾಡಿರುವವರನ್ನು ಆ ಲೋಕಕ್ಕೆ ಕರೆದೊಯ್ಯಲಾಗುತ್ತದೆ. ಯಮನು ಅವರಿಗೆ ವಿಧವಿಧವಾದ ಶಿಕ್ಷೆಗಳನ್ನು ವಿಧಿಸುತ್ತಾನೆ.

## ಶ್ಲೋಕ - 30

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥೩೦॥**

**ಪ್ರಹ್ಲಾದಃ**—ಪ್ರಹ್ಲಾದನು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ದೈತ್ಯಾನಾಮ್**—ದೈತ್ಯರಲ್ಲಿ; **ಕಾಲಃ**—ಕಾಲವು; **ಕಲಯತಾಮ್**—ಕ್ಷಯಕಾರಕರಲ್ಲಿ; **ಅಹಮ್**—ನಾನು; **ಮೃಗಾಣಾಮ್**—ಮೃಗಗಳಲ್ಲಿ; **ಚ**—ಮತ್ತು; **ಮೃಗ ಇನ್ದ್ರಃ**—ಸಿಂಹವು; **ಅಹಮ್**—ನಾನು; **ವೈನತೇಯಃ**—ಗರುಡನು; **ಚ**—ಕೂಡ; **ಪಕ್ಷಿಣಾಮ್**—ಪಕ್ಷಿಗಳಲ್ಲಿ.

## ಅನುವಾದ

**ದೈತ್ಯರಲ್ಲಿ ನಾನು ಭಕ್ತ ಪ್ರಹ್ಲಾದ, ಕ್ಷಯವನ್ನುಂಟುಮಾಡುವವರಲ್ಲಿ ನಾನು ಕಾಲ. ಪ್ರಾಣಿಗಳಲ್ಲಿ ನಾನು ಸಿಂಹ ಮತ್ತು ಪಕ್ಷಿಗಳಲ್ಲಿ ನಾನು ಗರುಡ.**

## ಭಾವಾರ್ಥ

ದಿತಿ ಮತ್ತು ಅದಿತಿ ಸೋದರಿಯರು. ಅದಿತಿಯ ಗಂಡುಮಕ್ಕಳಿಗೆ ಆದಿತ್ಯರೆಂದೂ ದಿತಿಯ ಗಂಡುಮಕ್ಕಳಿಗೆ ದೈತ್ಯರೆಂದೂ ಹೆಸರು. ಆದಿತ್ಯರೆಲ್ಲ ಭಗವಂತನ ಭಕ್ತರು; ದೈತ್ಯರೆಲ್ಲ ನಾಸ್ತಿಕರು. ಪ್ರಹ್ಲಾದನು ದೈತ್ಯ ಕುಟುಂಬದಲ್ಲಿ ಹುಟ್ಟಿದರೂ ಬಾಲ್ಯದಿಂದ ಅವನು ಮಹಾಭಕ್ತ. ಅವನ ಭಕ್ತಿಸೇವೆಯಿಂದಾಗಿ ಮತ್ತು ಧರ್ಮಿಷ್ಠ ಸ್ವಭಾವದಿಂದಾಗಿ ಅವನನ್ನು ಕೃಷ್ಣನ ಪ್ರತಿನಿಧಿ ಎಂದು ಪರಿಗಣಿಸಿದೆ.

ಕ್ಷಯವನ್ನುಂಟುಮಾಡುವ ಅನೇಕ ತತ್ವಗಳಿವೆ, ಆದರೆ ಕಾಲವು ಐಹಿಕ ವಿಶ್ವದಲ್ಲಿ ಎಲ್ಲ ವಸ್ತುಗಳನ್ನು ಸವೆಸುತ್ತದೆ; ಆದುದರಿಂದ ಅದು ಕೃಷ್ಣನ ಪ್ರತಿನಿಧಿ. ಅನೇಕ ಪ್ರಾಣಿಗಳಲ್ಲಿ ಸಿಂಹವು ಅತ್ಯಂತ ಬಲಶಾಲಿಯಾದದ್ದು ಮತ್ತು ಭಯಂಕರವಾದದ್ದು. ಲಕ್ಷಾಂತರ ಬಗೆಯ ಪಕ್ಷಿಗಳಲ್ಲಿ ವಿಷ್ಣುವಿನ ವಾಹನವಾದ ಗರುಡನು ಅತ್ಯಂತ ಶ್ರೇಷ್ಠನು.

## ಶ್ಲೋಕ - 31

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

**ಪವನಃ**—ವಾಯುವು; **ಪವತಾಮ್**—ಶುದ್ಧಿಮಾಡುವುದೆಲ್ಲದರಲ್ಲಿ; **ಅಸ್ಮಿ**—ಆಗಿದ್ದೇನೆ; **ರಾಮಃ**—ರಾಮನು; **ಶಸ್ತ್ರ ಭೃತಾಮ್**—ಶಸ್ತ್ರಪಾಣಿಗಳಲ್ಲಿ; **ಅಹಮ್**—ನಾನು; **ಝಷಾಣಾಮ್**—ಮೀನುಗಳಲ್ಲಿ; **ಮಕರಃ**—ತಿಮಿಂಗಿಲವು; **ಚ**—ಕೂಡ; **ಅಸ್ಮಿ**—ಆಗಿದ್ದೇನೆ; **ಸ್ರೋತಸಾಮ್**—

ಹರಿಯುವ ನದಿಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ಜಾಹ್ನವೀ**—ಗಂಗಾನದಿಯು.

### ಅನುವಾದ

**ಪರಿಶುದ್ಧಗೊಳಿಸುವವರಲ್ಲಿ ನಾನು ವಾಯು, ಶಸ್ತ್ರಧಾರಿಗಳಲ್ಲಿ ರಾಮ, ಮೀನುಗಳಲ್ಲಿ ನಾನು ಮಕರ ಮತ್ತು ಹರಿಯುವ ನದಿಗಳಲ್ಲಿ ಗಂಗಾನದಿ.**

### ಭಾವಾರ್ಥ

ಜಲವಾಸಿಗಳಲ್ಲಿ ಅತ್ಯಂತ ದೊಡ್ಡಪ್ರಾಣಿಗಳಲ್ಲಿ ತಿಮಿಂಗಿಲವು ಒಂದು. ನಿಶ್ಚಯವಾಗಿಯೂ ಅದು ಮನುಷ್ಯನಿಗೆ ಅತ್ಯಂತ ಅಪಾಯಕಾರಿ. ಅದು ಕೃಷ್ಣನ ಪ್ರತಿನಿಧಿ.

## ಶ್ಲೋಕ - 32

**ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ |**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ||೩೨||**

**ಸರ್ಗಾಣಾಮ್**—ಎಲ್ಲ ಸೃಷ್ಟಿಗಳ; **ಆದಿಃ**—ಪ್ರಾರಂಭವು; **ಅನ್ತಃ**—ಕೊನೆಯು; **ಚ**—ಮತ್ತು; **ಮಧ್ಯಮ್**—ಮಧ್ಯವು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಅಹಮ್**—ನಾನು; **ಅರ್ಜುನ**—ಅರ್ಜುನನೇ; **ಅಧ್ಯಾತ್ಮ ವಿದ್ಯಾ**—ಅಧ್ಯಾತ್ಮಜ್ಞಾನವು; **ವಿದ್ಯಾನಾಮ್**—ಎಲ್ಲ ವಿದ್ಯೆಗಳಲ್ಲಿ; **ವಾದಃ**—ಸ್ವಾಭಾವಿಕ ಸಿದ್ಧಾಂತವು; **ಪ್ರವದತಾಮ್**—ವಾದಗಳಲ್ಲಿ; **ಅಹಮ್**—ನಾನು.

### ಅನುವಾದ

**ಅರ್ಜುನ, ಎಲ್ಲ ಸೃಷ್ಟಿಗಳಿಗೆ ನಾನೇ ಆದಿ, ಅಂತ್ಯ ಮತ್ತು ಮಧ್ಯ. ಎಲ್ಲ ವಿದ್ಯೆಗಳಲ್ಲಿ ನಾನು ಅಧ್ಯಾತ್ಮವಿದ್ಯೆಯು, ಎಲ್ಲ ತಾರ್ಕಿಕರಲ್ಲಿ ನಾನೇ ನಿರ್ಣಾಯಕ ಸತ್ಯ.**

### ಭಾವಾರ್ಥ

ಸೃಷ್ಟಿಯಾದ ಅಭಿವ್ಯಕ್ತಿಗಳಲ್ಲಿ ಮೊದಲನೆಯದು ಸಂಪೂರ್ಣ ಐಹಿಕ ಮೂಲಾಂಶಗಳದು. ಮೊದಲೇ ಹೇಳಿದಂತೆ, ವಿಶ್ವ ಅಭಿವ್ಯಕ್ತಿಯನ್ನು ಮಹಾವಿಷ್ಣು, ಗರ್ಭೋದಕಶಾಯಿ ವಿಷ್ಣು ಮತ್ತು ಕ್ಷೀರೋದಕಶಾಯಿ ವಿಷ್ಣು ಸೃಷ್ಟಿಮಾಡುತ್ತಾರೆ ಮತ್ತು ನಿರ್ವಹಿಸುತ್ತಾರೆ. ಅನಂತರ ಇದನ್ನು ಶಿವನು ನಾಶಮಾಡುತ್ತಾನೆ. ಬ್ರಹ್ಮನು ಗೌಣ ಸೃಷ್ಟಿಕರ್ತ. ಸೃಷ್ಟಿ, ಸ್ಥಿತಿ, ಲಯಗಳ ಈ ಶಕ್ತಿಗಳು ಪರಮ ಪ್ರಭುವಿನ ಐಹಿಕ ಗುಣಗಳ ಮೂರ್ತಿಗಳು. ಆದುದರಿಂದ ಅವನೇ ಎಲ್ಲ ಸೃಷ್ಟಿಯ ಆದಿ; ಅವನೇ ಮಧ್ಯ; ಅವನೇ ಅಂತ್ಯ.

ಪ್ರೌಢವಿದ್ಯೆಗೆ ಅರಿವನ್ನು ನೀಡುವ ಹಲವು ಗ್ರಂಥಗಳಿವೆ. ಉದಾಹರಣೆಗೆ ನಾಲ್ಕು ವೇದಗಳು; ಅವುಗಳ ಆರು ಪೂರಕ ಗ್ರಂಥಗಳು, ವೇದಾಂತ ಸೂತ್ರ, ತರ್ಕದ ಪುಸ್ತಕಗಳು, ನ್ಯಾಯಶಾಸ್ತ್ರ ಗ್ರಂಥಗಳು ಮತ್ತು ಪುರಾಣಗಳು. ಹೀಗೆ ಒಟ್ಟು ಶಿಕ್ಷಣದ ಹದಿನಾಲ್ಕು ಗ್ರಂಥಗಳಿವೆ. ಇವುಗಳಲ್ಲಿ ಅಧ್ಯಾತ್ಮವಿದ್ಯೆಯನ್ನು ನೀಡುವ ವೇದಾಂತ ಸೂತ್ರವು ಕೃಷ್ಣನ ಪ್ರತಿನಿಧಿ.

ತರ್ಕದಲ್ಲಿ ವಿವಿಧ ಬಗೆಯ ವಾದಗಳುಂಟು. ವಿರೋಧವಾದವನ್ನೂ ಸಮರ್ಥಿಸುವ ಸಾಕ್ಷ್ಯಾಧಾರಗಳಿಂದ ತನ್ನ ವಾದವನ್ನು ಸಮರ್ಥಿಸುವುದಕ್ಕೆ ಜಲ್ಪ ಎಂದು ಹೆಸರು. ಪ್ರತಿವಾದಿಯನ್ನು ಸೋಲಿಸಲೆಂದು ಮಾತ್ರ ಪ್ರಯತ್ನಿಸುವುದಕ್ಕೆ ವಿತಂಡ ಎಂದು ಹೆಸರು. ವಾಸ್ತವ ನಿರ್ಣಯಕ್ಕೆ ವಾದ ಎಂದು ಹೆಸರು. ಈ ನಿರ್ಣಾಯಕ ಸತ್ಯವು ಕೃಷ್ಣನ ಪ್ರತಿನಿಧಿ.

## ಶ್ಲೋಕ - 33

**ಅಕ್ಷರಾಣಾಮಕಾರೋಽಸ್ಮಿ ದ್ವನ್ದ್ವಃ ಸಾಮಾಸಿಕಸ್ಯ ಚ |**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ||೩೩||**

**ಅಕ್ಷರಾಣಾಮ್**—ಅಕ್ಷರಗಳಲ್ಲಿ; **ಅಕಾರಃ**—ಮೊದಲ ಅಕ್ಷರವು; **ಅಸ್ಮಿ**—ಆಗಿದ್ದೇನೆ; **ದ್ವನ್ದ್ವಃ**—ದ್ವಂದ್ವವು; **ಸಾಮಾಸಿಕಸ್ಯ**—ಸಮಾಸಗಳಲ್ಲಿ; **ಚ**—ಮತ್ತು; **ಅಹಮ್**—ನಾನು; **ಏವ**—ಖಂಡಿತವಾಗಿಯೂ; **ಅಕ್ಷಯಃ**—ಶಾಶ್ವತವಾದ; **ಕಾಲಃ**—ಸಮಯವು; **ಧಾತಾ**—ಸೃಷ್ಟಿಕರ್ತನು; **ಅಹಮ್**—ನಾನು; **ವಿಶ್ವತಃ ಮುಖಃ**—ಬ್ರಹ್ಮ ದೇವನು.

## ಅನುವಾದ

**ಅಕ್ಷರಗಳಲ್ಲಿ ನಾನು ಅ, ಸಮಾಸಗಳಲ್ಲಿ ದ್ವಂದ್ವ ಸಮಾಸ. ನಾನೇ ಅಕ್ಷಯವಾದ ಕಾಲ, ಸೃಷ್ಟಿಕರ್ತರಲ್ಲಿ ನಾನು ಬ್ರಹ್ಮ.**

## ಭಾವಾರ್ಥ

ಸಂಸ್ಕೃತ ವರ್ಣಮಾಲೆಯ ಮೊದಲಕ್ಷರ **ಅಕಾರ**. ಇದು ವೇದ ಸಾಹಿತ್ಯದ ಪ್ರಾರಂಭ. ಅಕಾರವಿಲ್ಲದೆ ಏನನ್ನೂ ಹೇಳಲು ಸಾಧ್ಯವಿಲ್ಲ. ಆದುದರಿಂದ ಅದು ಶಬ್ದದ ಪ್ರಾರಂಭ. ಸಂಸ್ಕೃತದಲ್ಲಿ ಹಲವು ಸಮಾಸ ಪದಗಳಿವೆ. ಇವುಗಳಲ್ಲಿ ರಾಮ—ಕೃಷ್ಣ ಎನ್ನುವಂತಹ ಪದಗಳನ್ನು ದ್ವಂದ್ವ ಎಂದು ಕರೆಯುತ್ತಾರೆ. ಈ ದ್ವಂದ್ವ ಸಮಾಸದಲ್ಲಿ ರಾಮ ಮತ್ತು ಕೃಷ್ಣ ಎರಡು ಪದಗಳಿಗೂ ಒಂದೇ ರೂಪವಿದೆ. ಆದುದರಿಂದ ಈ ಸಮಾಸವನ್ನು ದ್ವಂದ್ವ ಎಂದು ಕರೆಯುತ್ತಾರೆ.

ಕೊಲ್ಲುವವರಲ್ಲೆಲ್ಲ ಕಾಲವೇ ಕಟ್ಟಕಡೆಯದು. ಏಕೆಂದರೆ ಕಾಲವು ಎಲ್ಲವನ್ನೂ ಕೊಲ್ಲುತ್ತದೆ. ಅದು ಕೃಷ್ಣನ ಪ್ರತಿನಿಧಿ. ಏಕೆಂದರೆ ಕಾಲ ಬಂದಾಗ ಪ್ರಳಯಾಗ್ನಿ ಉಂಟಾಗಿ ಎಲ್ಲವೂ ನಾಶವಾಗುತ್ತವೆ.

ಸೃಷ್ಟಿಕರ್ತರಾದ ಜೀವಿಗಳಲ್ಲಿ ಚತುರ್ಮುಖನಾದ ಬ್ರಹ್ಮನೇ ಪ್ರಧಾನ. ಆದುದರಿಂದ ಅವನು ಪರಮ ಪ್ರಭು ಕೃಷ್ಣನ ಪ್ರತಿನಿಧಿ.

## ಶ್ಲೋಕ - 34

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ |**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ||೩೪||**

**ಮೃತ್ಯುಃ**—ಮರಣವು; **ಸರ್ವ ಹರಃ**—ಸರ್ವಭಕ್ಷಕನಾದ; **ಚ**—ಕೂಡ; **ಅಹಮ್**—ನಾನು; **ಉದ್ಭವಃ**—ಹುಟ್ಟು; **ಚ**—ಕೂಡ; **ಭವಿಷ್ಯತಾಮ್**—ಭವಿಷ್ಯದ ಅಭಿವ್ಯಕ್ತಿಗಳಲ್ಲಿ; **ಕೀರ್ತಿಃ**—ಕೀರ್ತಿಯು; **ಶ್ರೀಃ**—ಐಶ್ವರ್ಯ ಅಥವಾ ಸೌಂದರ್ಯವು; **ವಾಕ್**—ಒಳ್ಳೆಯ ಮಾತು; **ಚ**—ಕೂಡ; ನಾರೀಣಾಮ್ —ಸ್ತ್ರೀಯರ; **ಸ್ಮೃತಿಃ**—ನೆನಪು; **ಮೇಧಾ**—ಬುದ್ಧಿಶಕ್ತಿಯು; **ಧೃತಿಃ**—ದೃಢತೆಯು; **ಕ್ಷಮಾ**— ತಾಳ್ಮೆಯು.

## ಅನುವಾದ

**ಸರ್ವಭಕ್ಷಕನಾದ ಮೃತ್ಯುವು ನಾನೇ. ಇನ್ನೂ ಹುಟ್ಟಲಿರುವ ಎಲ್ಲದರ ಉತ್ಪತ್ತಿತತ್ತ್ವ ನಾನೇ. ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಾಶಕ್ತಿ, ದೃಢತೆ ಮತ್ತು ತಾಳ್ಮೆ ನಾನು.**

## ಭಾವಾರ್ಥ

ಮನುಷ್ಯನು ಹುಟ್ಟಿದಾಗಿನಿಂದ ಪ್ರತಿ ಕ್ಷಣವೂ ಸಾಯುತ್ತಿರುತ್ತಾನೆ. ಹೀಗೆ ಸಾವು ಜೀವಿಯನ್ನು ಪ್ರತಿ ಕ್ಷಣವೂ ತಿನ್ನುತ್ತಿರುತ್ತದೆ. ಕಡೆಯ ಪೆಟ್ಟಿಗೆ ಸಾವು ಎಂದು ಹೆಸರು. ಕೃಷ್ಣನೇ ಆ ಸಾವು. ಮುಂದಿನ ಬೆಳವಣಿಗೆಯ ವಿಷಯ ಹೇಳುವುದೆಂದರೆ, ಎಲ್ಲ ಜೀವಿಗಳಲ್ಲಿ ಮೂಲ ಬದಲಾವಣೆಗಳಾಗುತ್ತವೆ. ಅವರು ಹುಟ್ಟುತ್ತಾರೆ, ಬೆಳೆಯುತ್ತಾರೆ, ಕೆಲ ಕಾಲ ಇರುತ್ತಾರೆ, ಮಕ್ಕಳನ್ನು ಪಡೆಯುತ್ತಾರೆ, ಕಡೆಗೆ ಮಾಯವಾಗುತ್ತಾರೆ. ಇವುಗಳಲ್ಲಿ ಮೊದಲನೆಯದು ಗರ್ಭದಿಂದ ಬಿಡುಗಡೆ. ಇದು ಕೃಷ್ಣ. ಮೊದಲ ಹುಟ್ಟು ಎಲ್ಲ ಮುಂದಿನ ಚಟುವಟಿಕೆಗಳ ಪ್ರಾರಂಭ.

ಇಲ್ಲಿ ಹೆಸರಿಸಿರುವ ಏಳು ಸಿರಿಗಳು — ಕೀರ್ತಿ, ಅದೃಷ್ಟ, ಸುಂದರ ಮಾತು, ಸ್ಮರಣಶಕ್ತಿ, ಬುದ್ಧಿಶಕ್ತಿ, ದೃಢತೆ ಮತ್ತು ತಾಳ್ಮೆ — ಸ್ತ್ರೀ ಸಹಜ ಎಂದು ಪರಿಗಣಿಸಲಾಗುತ್ತವೆ. ಇವೆಲ್ಲ ಅಥವಾ ಇವುಗಳಲ್ಲಿ ಕೆಲವು ಸಿರಿಗಳಿರುವವನು ಮಹಾನ್‌ವ್ಯಕ್ತಿಯಾಗುತ್ತಾನೆ. ವ್ಯಕ್ತಿಯು ಧರ್ಮಿಷ್ಠನೆಂದು ಪ್ರಸಿದ್ಧನಾಗಿದ್ದರೆ ಅವನು ಮಹಿಮಾನ್ವಿತನಾಗುತ್ತಾನೆ. ಸಂಸ್ಕೃತವು ಪರಿಪೂರ್ಣ ಭಾಷೆ; ಆದುದರಿಂದ ಮಹತ್ವದ್ದಾಗಿದೆ. ಅಧ್ಯಯನ ಮಾಡಿದನಂತರ ಮನುಷ್ಯನು ವಿಷಯವನ್ನು ಜ್ಞಾಪಿಸಿಕೊಳ್ಳಬಲ್ಲವನಾದರೆ ಅವನಿಗೆ ಒಳ್ಳೆಯ ಸ್ಮರಣಶಕ್ತಿ ಅಥವಾ **ಸ್ಮೃತಿ** ಉಂಟು. ಬೇರೆ ಬೇರೆ ವಿಷಯಗಳನ್ನು ಕುರಿತು ಅಧಿಕ ಸಂಖ್ಯೆಯ ಪುಸ್ತಕಗಳನ್ನು ಓದಿ ಅವುಗಳನ್ನು ಅರ್ಥಮಾಡಿಕೊಂಡು ಅಗತ್ಯವಾದಾಗ ಅನ್ವಯಿಸುವ ಶಕ್ತಿಯು ಬುದ್ಧಿಶಕ್ತಿ (**ಮೇಧಾ**). ಅಸ್ಥಿರತೆಯನ್ನು ನಿವಾರಿಸಿಕೊಳ್ಳುವ ಶಕ್ತಿಯು ದೃಢತೆ ಅಥವಾ **ಧೃತಿ**. ಸಂಪೂರ್ಣವಾಗಿ ಅರ್ಹನಾದರೂ ನಮ್ರನಾಗಿ ಮೃದುಸ್ವಭಾವದವನಾಗಿದ್ದು, ದುಃಖದಲ್ಲಿಯೂ ಹರ್ಷೋನ್ಮಾದದಲ್ಲಿಯೂ ಸಮಚಿತ್ತನಾಗಿ ಇರುವವನಿಗೆ ತಾಳ್ಮೆಯ ಸಿರಿಯುಂಟು.

## ಶ್ಲೋಕ - 35

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾಮಹಮ್ |**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ||೩೫||**

**ಬೃಹತ್ಸಾಮ**—ಬೃಹತ್ಸಾಮವು; **ತಥಾ**—ಕೂಡ; **ಸಾಮ್ನಾಮ್**—ಸಾಮವೇದದ ಗೀತಗಳಲ್ಲಿ;

**ಗಾಯತ್ರೀ**—ಗಾಯತ್ರೀ ಮಂತ್ರ; **ಛನ್ದಸಾಮ್**—ಎಲ್ಲ ಛಂದಸ್ಸುಗಳಲ್ಲಿ; **ಅಹಮ್**—ನಾನು; **ಮಾಸಾನಾಮ್**—ಮಾಸಗಳಲ್ಲಿ; **ಮಾರ್ಗಶೀರ್ಷಃ**—ಮಾರ್ಗಶೀರ್ಷವು (ನವೆಂಬರ-ಡಿಸೆಂಬರ); **ಅಹಮ್**—ನಾನು; **ಋತೂನಾಮ್**—ಎಲ್ಲ ಋತುಗಳಲ್ಲಿ; **ಕುಸುಮ ಆಕರಃ**—ವಸಂತನು.

## ಅನುವಾದ

**ಸಾಮವೇದದಲ್ಲಿನ ಸ್ತೋತ್ರಗಳಲ್ಲಿ ನಾನು ಬೃಹತ್ ಸಾಮ, ಕಾವ್ಯದಲ್ಲಿ ಗಾಯತ್ರಿ, ಮಾಸಗಳಲ್ಲಿ ನಾನು ಮಾರ್ಗಶಿರ ಮತ್ತು ಋತುಗಳಲ್ಲಿ ಕುಸುಮಾಕರವಾದ ವಸಂತ.**

## ಭಾವಾರ್ಥ

ವೇದಗಳಲ್ಲಿ ತಾನು ಸಾಮವೇದ ಎಂದು ಪ್ರಭುವು ಆಗಲೇ ವಿವರಿಸಿದ್ದಾನೆ. ಬೇರೆ ಬೇರೆ ದೇವತೆಗಳು ಹಾಡುವ ಸುಂದರವಾದ ಹಾಡುಗಳಿಂದ ಸಾಮವೇದವು ತುಂಬಿಹೋಗಿದೆ. ಈ ಹಾಡುಗಳಲ್ಲಿ ಒಂದು **ಬೃಹತ್ ಸಾಮ**; ಇದು ಬಹು ಮಧುರವಾಗಿದೆ. ಇದನ್ನು ಮಧ್ಯರಾತ್ರಿಯ ಸಮಯದಲ್ಲಿ ಹಾಡುತ್ತಾರೆ.

ಸಂಸ್ಕೃತದಲ್ಲಿ ಕಾವ್ಯವನ್ನು ನಿಯಂತ್ರಿಸಲು ನಿರ್ದಿಷ್ಟ ನಿಯಮಗಳಿವೆ. ಆಧುನಿಕ ಕಾವ್ಯದಲ್ಲಿರುವಂತೆ ಪ್ರಾಸ ಮತ್ತು ಛಂದಸ್ಸನ್ನು ಮನಸೋ ಇಚ್ಛೆ ಬಳಸುವುದಿಲ್ಲ. ಛಂದೋಬದ್ಧ ಕವನಗಳಲ್ಲಿ, ಯೋಗ್ಯ ಅರ್ಹತೆಯುಳ್ಳ ಬ್ರಾಹ್ಮಣರು ಜಪಮಾಡುವ ಗಾಯತ್ರಿಮಂತ್ರವು ಅತ್ಯಂತ ಮುಖ್ಯವಾದದ್ದು. ಶ್ರೀಮದ್ಭಾಗವತದಲ್ಲಿ ಗಾಯತ್ರಿ ಮಂತ್ರದ ಪ್ರಸ್ತಾಪವಿದೆ. ಗಾಯತ್ರಿ ಮಂತ್ರದ ಉದ್ದೇಶವು ವಿಶೇಷವಾಗಿ ಭಗವಂತನ ಸಾಕ್ಷಾತ್ಕಾರವಾದುದರಿಂದ ಅದು ಪರಮ ಪ್ರಭುವನ್ನು ಪ್ರತಿನಿಧಿಸುತ್ತದೆ. ಇದು ಆಧ್ಯಾತ್ಮಿಕವಾಗಿ ಮುಂದುವರಿದವರಿಗಾಗಿಯೇ ರಚಿತವಾದ ಮಂತ್ರ; ಅದರ ಜಪದಲ್ಲಿ ಯಶಸ್ವಿಯಾದವನು ಪ್ರಭುವಿನ ದಿವ್ಯಸ್ಥಾನವನ್ನು ಪ್ರವೇಶಿಸಬಲ್ಲ. ಗಾಯಿತ್ರಿಮಂತ್ರವನ್ನು ಜಪಿಸಲು ಮನುಷ್ಯನು ಮೊದಲು ಪರಿಪೂರ್ಣ ಸ್ಥಿತಿಯಲ್ಲಿರುವ ವ್ಯಕ್ತಿಯ ಗುಣಗಳನ್ನು, ಐಹಿಕ ಪ್ರಕೃತಿಯ ನಿಯಮಗಳಿಗೆ ಅನುಗುಣವಾಗಿ ಸಾತ್ವಿಕ ಗುಣಗಳನ್ನು ಪಡೆದುಕೊಳ್ಳಬೇಕು. ವೇದ ನಾಗರಿಕತೆಯಲ್ಲಿ ಗಾಯತ್ರಿಮಂತ್ರವು ಬಹಳ ಮುಖ್ಯವಾದದ್ದು; ಅದು ಬ್ರಹ್ಮನ್‌ನ ಶಬ್ದಾವತಾರ ಎಂದು ಪರಿಗಣಿಸುತ್ತಾರೆ. ಬ್ರಹ್ಮನು ಅದನ್ನು ಉಪಕ್ರಮ ಮಾಡಿದವನು; ಅವನಿಂದ ಅದು ಗುರು ಶಿಷ್ಯ ಪರಂಪರೆಯಲ್ಲಿ ಸಾಗಿ ಬಂದಿದೆ.

ಎಲ್ಲ ತಿಂಗಳುಗಳಲ್ಲಿ ನವೆಂಬರ್-ಡಿಸೆಂಬರ್ ತಿಂಗಳು ಅತ್ಯಂತ ಶ್ರೇಷ್ಠವಾದದ್ದು ಎಂದು ಭಾವಿಸುತ್ತಾರೆ. ಏಕೆಂದರೆ ಭಾರತದಲ್ಲಿ ಇದು ಸುಗ್ಗಿಯ ಕಾಲ; ಜನರು ತುಂಬ ಸಂತೋಷದಿಂದ ಇರುತ್ತಾರೆ; ವಸಂತವೆಂದರೆ ಎಲ್ಲರಿಗೂ ಪ್ರೀತಿ. ಏಕೆಂದರೆ ಬಹು ಸೆಕೆಯೂ ಇರುವುದಿಲ್ಲ ಬಹುಚಳಿಯೂ ಇರುವುದಿಲ್ಲ; ಹೂಗಳು ಅರಳುತ್ತವೆ, ಗಿಡಮರಗಳು ಬೆಳೆಯುತ್ತವೆ. ವಸಂತ ಋತುವಿನಲ್ಲಿ ಕೃಷ್ಣನ ಲೀಲೆಗಳನ್ನು ನೆನಪಿಗೆ ತರುವ ಅನೇಕ ಉತ್ಸವಗಳಿವೆ. ಆದುದರಿಂದ ಇದು ಎಲ್ಲ ಋತುಗಳಲ್ಲಿ ಅತ್ಯಂತ ಸಂತೋಷದ ಋತು. ಅದು ಪರಮ ಪ್ರಭು ಕೃಷ್ಣನ ಪ್ರತಿನಿಧಿ.

### ಶ್ಲೋಕ - 36

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥೩೬॥**

**ದ್ಯೂತಮ್**—ಜೂಜಾಟವು; **ಛಲಯತಾಮ್**—ವಂಚಕರೆಲ್ಲರಲ್ಲಿ; **ಅಸ್ಮಿ**—ಆಗಿದ್ದೇನೆ; **ತೇಜಃ**—ತೇಜಸ್ಸು; **ತೇಜಸ್ವಿನಾಮ್**—ತೇಜಸ್ವಿಗಳೆಲ್ಲರಲ್ಲಿ; **ಅಹಮ್**—ನಾನು; **ಜಯಃ**—ಗೆಲುವು; **ಅಸ್ಮಿ**—ಆಗಿದ್ದೇನೆ; **ವ್ಯವಸಾಯಃ**—ಉದ್ಯಮ ಅಥವಾ ಸಾಹಸವು; **ಅಸ್ಮಿ**—ಆಗಿದ್ದೇನೆ; **ಸತ್ತ್ವಮ್**—ಬಲವು; **ಸತ್ತ್ವವತಾಮ್**—ಬಲಿಷ್ಠರಲ್ಲಿ; **ಅಹಮ್**—ನಾನು.

### ಅನುವಾದ

**ಮೋಸಗಾರರ ಜೂಜು ನಾನೇ. ತೇಜಸ್ವಿಗಳ ತೇಜಸ್ಸು ನಾನು. ನಾನು ಜಯ, ನಾನು ಸಾಹಸ, ಬಲಿಷ್ಠರ ಬಲವೂ ನಾನೇ.**

### ಭಾವಾರ್ಥ

ವಿಶ್ವದಲ್ಲಿ ನಾನಾ ಬಗೆಯ ಮೋಸಗಾರರುಂಟು. ಇತರ ಎಲ್ಲ ಮೋಸ ರೀತಿಗಳನ್ನು ಮೀರಿಸಿದ್ದು ಜೂಜು. ಆದುದರಿಂದ ಅದು ಕೃಷ್ಣನ ಪ್ರತಿನಿಧಿ. ಪರಮನಾಗಿ ಕೃಷ್ಣನು ಇತರರಿಗಿಂತ ಹೆಚ್ಚು ಮೋಸಗಾರನಾಗಿರಬಲ್ಲ. ಯಾರೂ ಆತನ ಮೋಸವನ್ನು ಆತನಿಗೆ ತಿಳಿಯದಂತೆ ಕಂಡುಹಿಡಿಯಲಾರರು. ಅವನ ಹಿರಿಮೆಗೆ ಒಂದೇ ಮುಖವಲ್ಲ; ಅದಕ್ಕೆ ಎಲ್ಲ ಮುಖಗಳುಂಟು.

ಜಯಶಾಲಿಗಳಲ್ಲಿ ಆತನು ಜಯ. ತೇಜಸ್ವಿಗಳ ತೇಜಸ್ಸು ಅವನು. ಸಾಹಸಿಗಳು, ಶ್ರಮಪಡುವವರಲ್ಲಿ ಆತನೇ ಮಹಾಸಾಹಸಿ, ಅತ್ಯಂತ ಶ್ರಮಪಡುವವನು. ಕೃಷ್ಣನು ಭೂಮಿಯ ಮೇಲೆ ಇದ್ದಾಗ ಅವನನ್ನು ಯಾರೂ ಬಲದಲ್ಲಿ ಮೀರಿಸುವವರಿರಲಿಲ್ಲ. ಬಾಲ್ಯದಲ್ಲಿಯೇ ಗೋವರ್ಧನಗಿರಿಯನ್ನು ಎತ್ತಿದವನು ಅವನು. ಮೋಸದಲ್ಲಿ ಯಾರೂ ಅವನನ್ನು ಮೀರಿಸಲಾರರು; ತೇಜಸ್ಸಿನಲ್ಲಿ ಅವನನ್ನು ಯಾರೂ ಮೀರಿಸಲಾರರು; ಜಯದಲ್ಲಿ ಯಾರೂ ಅವನನ್ನು ಮೀರಿಸಲಾರರು; ಸಾಹಸದಲ್ಲಿ ಯಾರೂ ಅವನನ್ನು ಮೀರಿಸಲಾರರು ಮತ್ತು ಶಕ್ತಿಯಲ್ಲಿ ಯಾರೂ ಅವನನ್ನು ಮೀರಿಸಲಾರರು.

### ಶ್ಲೋಕ - 37

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಣ್ಡವಾನಾಂ ಧನಞ್ಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥**

**ವೃಷ್ಣೀನಾಮ್**—ವೃಷ್ಣಿವಂಶಜರಲ್ಲಿ; **ವಾಸುದೇವಃ**—ದ್ವಾರಕೆಯಲ್ಲಿರುವ ಕೃಷ್ಣನು; **ಅಸ್ಮಿ**—ಆಗಿದ್ದೇನೆ; **ಪಾಣ್ಡವಾನಾಮ್**—ಪಾಂಡವರಲ್ಲಿ; **ಧನಞ್ಜಯಃ**—ಅರ್ಜುನನು; **ಮುನೀನಾಮ್**—ಮುನಿಗಳಲ್ಲಿ; **ಅಪಿ**—ಕೂಡ; **ಅಹಮ್**—ನಾನು; **ವ್ಯಾಸಃ**—ಸಕಲ ವೇದ ಸಾಹಿತ್ಯಗಳ ಸಂಕಲನಕಾರನಾದ ವ್ಯಾಸನು;

**ಕವೀನಾಮ್**—ಉನ್ನತ ಚಿಂತಕರೆಲ್ಲರಲ್ಲಿ; **ಉಶನಾ**—ಉಶನನು; **ಕವಿಃ**—ಚಿಂತಕನು.

## ಅನುವಾದ

**ವೃಷ್ಣಿವಂಶದವರಲ್ಲಿ ನಾನು ವಾಸುದೇವ; ಪಾಂಡವರಲ್ಲಿ ನಾನು ಅರ್ಜುನ. ಋಷಿಗಳಲ್ಲಿ ನಾನು ವ್ಯಾಸ; ಮಹಾಚಿಂತಕರಲ್ಲಿ ನಾನು ಉಶನಾ.**

## ಭಾವಾರ್ಥ

ಕೃಷ್ಣನು ದೇವೋತ್ತಮ ಪರಮ ಪುರುಷನು, ಬಲದೇವನು ಅವನ ನಿಕಟ ವಿಸ್ತರಣೆ. ಕೃಷ್ಣನೂ ಬಲದೇವನೂ ವಸುದೇವನ ಮಕ್ಕಳಾಗಿ ಕಾಣಿಸಿಕೊಂಡರು. ಆದುದರಿಂದ ಇಬ್ಬರನ್ನೂ ವಾಸುದೇವ ಎಂದು ಕರೆಯಬಹುದು. ಇನ್ನೊಂದು ದೃಷ್ಟಿಯಿಂದ ನೋಡಿದರೆ, ಕೃಷ್ಣನು ಬೃಂದಾವನವನ್ನು ಬಿಡುವುದೇ ಇಲ್ಲವಾದುದರಿಂದ ಬೇರೆಡೆ ಕಾಣುವ ಕೃಷ್ಣ ಸ್ವರೂಪಗಳೆಲ್ಲ ಅವನ ವಿಸ್ತರಣೆಗಳೇ. ವಾಸುದೇವನು ಕೃಷ್ಣನ ನಿಕಟ ವಿಸ್ತರಣೆ; ಆದುದರಿಂದ ವಾಸುದೇವನು ಕೃಷ್ಣನಿಗಿಂತ ಬೇರೆಯಲ್ಲ. ಈ ಶ್ಲೋಕದಲ್ಲಿ ಹೆಸರಿಸಿರುವ ವಾಸುದೇವನು ಬಲದೇವ ಅಥವಾ ಬಲರಾಮ. ಏಕೆಂದರೆ ಅವನು ಎಲ್ಲ ಅವತಾರಗಳ ಆದಿ ಮೂಲ; ಆದುದರಿಂದ ವಾಸುದೇವನಿಗೆ ಅವನು ಏಕಮಾತ್ರ ಮೂಲ ಎಂದು ಅರಿತುಕೊಳ್ಳಬೇಕು. ಪ್ರಭುವಿನ ನಿಕಟ ವಿಸ್ತರಣೆಗಳಿಗೆ ಸ್ವಾಂಶ (ವೈಯಕ್ತಿಕ ವಿಸ್ತರಣೆ) ಎಂದು ಹೆಸರು. ವಿಭಿನ್ನಾಂಶ (ಭಿನ್ನವಾದ ವಿಸ್ತರಣೆಗಳು) ಎಂದು ಕರೆಯುವ ವಿಸ್ತರಣೆಗಳೂ ಇವೆ.

ಪಾಂಡುವಿನ ಮಕ್ಕಳಲ್ಲಿ ಅರ್ಜುನನು ಧನಂಜಯನೆಂದು ಹೆಸರಾದವನು. ಅವನು ಪುರುಷ ಶ್ರೇಷ್ಠ, ಆದುದರಿಂದ ಕೃಷ್ಣನನ್ನು ಪ್ರತಿನಿಧಿಸುತ್ತಾನೆ. ಮುನಿಗಳಲ್ಲಿ ಅಥವಾ ವೇದಗಳನ್ನು ಬಲ್ಲ ವಿದ್ವಾಂಸರಲ್ಲಿ ವ್ಯಾಸರೇ ಎಲ್ಲರಿಗಿಂತ ಶ್ರೇಷ್ಠರು. ಏಕೆಂದರೆ, ಈ ಕಲಿಯುಗದಲ್ಲಿ ಜನಸಾಮಾನ್ಯರಿಗೂ ವೇದಗಳು ತಿಳಿಯಲೆಂದು ವೇದಗಳನ್ನು ಬೇರೆ ಬೇರೆ ರೀತಿಗಳಲ್ಲಿ ವಿವರಿಸಿದ ವ್ಯಾಸರು ಕೃಷ್ಣನ ಅವತಾರವೆಂದೂ ಪ್ರಸಿದ್ಧ; ಆದುದರಿಂದ ವ್ಯಾಸರೂ ಕೃಷ್ಣನ ಪ್ರತಿನಿಧಿ. ಯಾವುದಾದರೂ ವಿಷಯವನ್ನು ಕೂಲಂಕಷವಾಗಿ ಯೋಚಿಸಬಲ್ಲವರು ಕವಿಗಳು. ಕವಿಗಳಲ್ಲಿ ಉಶನಾ. ಶುಕ್ರಾಚಾರ್ಯರು ದಾನವರ ಗುರು; ಅವರು ಬಹು ಬುದ್ಧಿವಂತರು; ದೂರದೃಷ್ಟಿಯ ರಾಜನೀತಜ್ಞರು. ಆದುದರಿಂದ ಶುಕ್ರಾಚಾರ್ಯರು ಕೃಷ್ಣನ ಮಹಿಮೆಯ ಮತ್ತೊಬ್ಬ ಪ್ರತಿನಿಧಿ.

## ಶ್ಲೋಕ - 38

**ದಣ್ಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ |**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ||೩೮||**

**ದಣ್ಡಃ**—ಶಿಕ್ಷೆಯು; **ದಮಯತಾಮ್**—ಹತ್ತಿಕ್ಕುವ ಎಲ್ಲ ಮಾರ್ಗಗಳಲ್ಲಿ; **ಅಸ್ಮಿ**—ಆಗಿದ್ದೇನೆ; **ನೀತಿಃ**—ನೀತಿಯು; **ಅಸ್ಮಿ**—ಆಗಿದ್ದೇನೆ; **ಜಿಗೀಷತಾಮ್**—ಗೆಲುವನ್ನು ಅಪೇಕ್ಷಿಸುವವರಲ್ಲಿ; **ಮೌನಮ್**—ಮೌನವು; **ಚ**—ಮತ್ತು; **ಏವ**—ಕೂಡ; **ಅಸ್ಮಿ**—ಆಗಿದ್ದೇನೆ; **ಗುಹ್ಯಾನಾಮ್**— ರಹಸ್ಯಗಳಲ್ಲಿ; **ಜ್ಞಾನಮ್**—ಜ್ಞಾನವು; **ಜ್ಞಾನ ವತಾಮ್**—ಜ್ಞಾನಿಗಳಲ್ಲಿ; **ಅಹಮ್**—ನಾನು.

## ಅನುವಾದ

**ಶಾಸನ ಅವಿಧೇಯತೆಯನ್ನು ದಮನ ಮಾಡುವ ರೀತಿಗಳಲ್ಲಿ ನಾನು ಶಿಕ್ಷೆ, ಜಯವನ್ನು ಅರಸುವವರಲ್ಲಿ ನಾನು ನೀತಿ, ಗುಹ್ಯ ವಿಷಯಗಳಲ್ಲಿ ನಾನು ಮೌನ, ಜ್ಞಾನಿಗಳ ಜ್ಞಾನ ನಾನು.**

## ಭಾವಾರ್ಥ

ದಮನ ಮಾಡುವ ಸಾಧನಗಳು ಹಲವು. ಇವುಗಳಲ್ಲಿ ದುಷ್ಕರ್ಮಿಗಳನ್ನು ಕತ್ತರಿಸಿ ಹಾಕುವ ಸಾಧನಗಳು ತುಂಬ ಮುಖ್ಯವಾದವು. ದುಷ್ಕರ್ಮಿಗಳನ್ನು ಕತ್ತರಿಸಿ ಶಿಕ್ಷೆ ಮಾಡಿದಾಗ ಶಿಕ್ಷೆಯ ಸಾಧನವು ಕೃಷ್ಣನ ಪ್ರತಿನಿಧಿ. ಯಾವುದಾದರೂ ಕಾರ್ಯಕ್ಷೇತ್ರದಲ್ಲಿ ವಿಜಯವನ್ನು ಸಾಧಿಸಲು ಪ್ರಯತ್ನಿಸುವವರ ನಡುವೆ ಅತ್ಯಂತ ಜಯಶಾಲಿ ಅಂಶ ನೀತಿ. ಶ್ರವಣ, ಚಿಂತನ ಮತ್ತು ಧ್ಯಾನ ಈ ಗುಹ್ಯ ಚಟುವಟಿಕೆಗಳಲ್ಲಿ ಮೌನವೇ ತುಂಬ ಮುಖ್ಯ. ಏಕೆಂದರೆ ಮೌನದಿಂದ ಮನುಷ್ಯನು ಬಹುಶೀಘ್ರವಾಗಿ ಮುಂದುವರಿಯಬಲ್ಲ. ಜಡವಸ್ತು ಮತ್ತು ಚೇತನ — ಇವುಗಳ ನಡುವೆ, ಭಗವಂತನ ಮೇಲ್ಮಟ್ಟದ ಮತ್ತು ಕೆಳಮಟ್ಟದ ಪ್ರಕೃತಿಗಳ ನಡುವೆ ವ್ಯತ್ಯಾಸವನ್ನು ಕಾಣಬಲ್ಲವನು ಜ್ಞಾನಿ. ಇಂತಹ ಜ್ಞಾನವು ಸ್ವಯಂ ಕೃಷ್ಣನೇ.

## ಶ್ಲೋಕ - 39

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ |**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ||೩೯||**

**ಯತ್**—ಯಾವುದೇ; **ಚ**—ಕೂಡ; **ಅಪಿ**—ಆಗಿರಬಹುದು; **ಸರ್ವ ಭೂತಾನಾಮ್**—ಸೃಷ್ಟಿಗಳೆಲ್ಲದರ; **ಬೀಜಮ್**—ಬೀಜವು; **ತತ್**—ಅದು; **ಅಹಮ್**—ನಾನು; **ಅರ್ಜುನ**— ಅರ್ಜುನನೇ; **ನ**—ಇಲ್ಲ; **ತತ್**—ಅದು; **ಅಸ್ತಿ**—ಇದೆ; **ವಿನಾ**—ಹೊರತಾಗಿ; **ಯತ್**—ಯಾವುದು; **ಸ್ಯಾತ್**—ಇರುತ್ತದೆ; **ಮಯಾ**—ನನ್ನ; **ಭೂತಮ್**—ಸೃಷ್ಟಿಯಾದ ಜೀವಿಯು; **ಚರ ಅಚರಮ್**—ಚಲಿಸುವ ಮತ್ತು ಚಲಿಸದ.

## ಅನುವಾದ

**ಅರ್ಜುನ, ಇದಲ್ಲದೆ ನಾನು ಎಲ್ಲ ಅಸ್ತಿತ್ವಗಳನ್ನು ಉತ್ಪಾದಿಸುವ ಬೀಜ. ನಾನಿಲ್ಲದೆ ಚರಾಚರವಾದದ್ದು ಯಾವುದೂ ಇರಲು ಸಾಧ್ಯವಿಲ್ಲ.**

## ಭಾವಾರ್ಥ

ಪ್ರತಿಯೊಂದಕ್ಕೂ ಒಂದು ಕಾರಣವಿದೆ. ಆ ಅಭಿವ್ಯಕ್ತಿಯ ಕಾರಣ ಅಥವಾ ಬೀಜವು ಕೃಷ್ಣ. ಕೃಷ್ಣನ ಶಕ್ತಿಯಿಲ್ಲದೆ ಏನೂ ಇರಲು ಸಾಧ್ಯವಿಲ್ಲ; ಆದುದರಿಂದ ಅವನನ್ನು ಸರ್ವಶಕ್ತ ಎಂದು ಕರೆಯುತ್ತಾರೆ. ಅವನ ಶಕ್ತಿಯಿಲ್ಲದೆ ಚಲಿಸುವುದಾಗಲೀ, ಚಲಿಸದೆ ಇರುವುದಾಗಲೀ ಇರಲು ಸಾಧ್ಯವಿಲ್ಲ. ಕೃಷ್ಣನ ಶಕ್ತಿಯ ಆಧಾರವಿಲ್ಲದ ಯಾವುದೇ ಅಸ್ತಿತ್ವವನ್ನು ಮಾಯೆ ಎಂದು ಕರೆಯುತ್ತಾರೆ.

## ಶ್ಲೋಕ - 40

**ನಾನ್ತೋऽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥೪೦॥**

**ನ ಅನ್ತಃ ಅಸ್ತಿ**—ಮಿತಿಯಿಲ್ಲ; **ಮಮ**—ನನ್ನ; **ದಿವ್ಯಾನಾಮ್**—ದಿವ್ಯವಾದ; **ವಿಭೂತೀನಾಮ್**—ಐಶ್ವರ್ಯಗಳಿಗೆ; **ಪರನ್ತಪ**—ಶತ್ರುಗಳನ್ನು ಗೆಲ್ಲುವವನೇ; **ಏಷಃ**—ಇವೆಲ್ಲವೂ; **ತು**—ಆದರೆ; **ಉದ್ದೇಶತಃ**—ಉದಾಹರಣೆಗಳಂತೆ; **ಪ್ರೋಕ್ತಃ**—ಹೇಳಲ್ಪಟ್ಟಿವೆ; **ವಿಭೂತೇಃ**—ಐಶ್ವರ್ಯಗಳ; **ವಿಸ್ತರಃ**—ವಿಸ್ತಾರವು; **ಮಯಾ**—ನನ್ನಿಂದ.

## ಅನುವಾದ

**ಶತ್ರುವಿಜೇತನಾದ ಅರ್ಜುನನೆ, ನನ್ನ ದೈವೀ ಅಭಿವ್ಯಕ್ತಿಗಳಿಗೆ ಕೊನೆಯೇ ಇಲ್ಲ. ನಾನು ನಿನಗೆ ಹೇಳಿರುವುದು ನನ್ನ ಅನಂತ ಸಿರಿಗಳ ಒಂದು ಸೂಚನೆಯಷ್ಟೆ.**

## ಭಾವಾರ್ಥ

ವೇದ ಸಾಹಿತ್ಯದಲ್ಲಿ ಹೇಳಿರುವಂತೆ ಪರಮನ ಸಿರಿಗಳನ್ನು ಮತ್ತು ಶಕ್ತಿಗಳನ್ನು ಬೇರೆ ಬೇರೆ ರೀತಿಗಳಲ್ಲಿ ಅರ್ಥಮಾಡಿಕೊಳ್ಳುತ್ತಾರೆ; ಆದರೆ ಇಂತಹ ಸಿರಿಗಳಿಗೆ ಮಿತಿಯಿಲ್ಲ. ಆದುದರಿಂದ ಎಲ್ಲ ಸಿರಿಗಳನ್ನೂ ಶಕ್ತಿಗಳನ್ನೂ ವಿವರಿಸಲು ಸಾಧ್ಯವಿಲ್ಲ. ಅರ್ಜುನನ ಕುತೂಹಲವನ್ನು ತಣಿಸಲು ಕೆಲವೇ ನಿದರ್ಶನಗಳನ್ನು ವರ್ಣಿಸಿದೆ.

## ಶ್ಲೋಕ - 41

**ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂऽಶ ಸಮ್ಭವಮ್ ॥೪೧॥**

**ಯತ್‌ಯತ್**—ಯಾವೆಲ್ಲ; **ವಿಭೂತಿ**—ಐಶ್ವರ್ಯಗಳು; **ಮತ್**—ಉಳ್ಳ; **ಸತ್ತ್ವಮ್**—ಅಸ್ತಿತ್ವವನ್ನು; **ಶ್ರೀಮತ್**—ಸೌಂದರ್ಯಯುಕ್ತ ; **ಊರ್ಜಿತಮ್**—ಭವ್ಯವಾದ; **ಏವ**—ಖಂಡಿತವಾಗಿಯೂ; **ವಾ**—ಅಥವಾ; **ತತ್ ತತ್**—ಅವೆಲ್ಲವೂ; **ಏವ**—ಖಂಡಿತವಾಗಿಯೂ; **ಅವಗಚ್ಛ**—ತಿಳಿದುಕೋ; **ತ್ವಮ್**—ನೀನು; **ಮಮ**—ನನ್ನ; **ತೇಜಃ**—ತೇಜಸ್ಸಿನ; **ಅಂಶ**—ಒಂದು ಭಾಗದಿಂದ; **ಸಮ್ಭವಮ್**—ಹುಟ್ಟಿದುವು ಎಂದು.

## ಅನುವಾದ

**ಎಲ್ಲ ಶ್ರೀಮಂತವಾದ, ಸುಂದರವಾದ ಮತ್ತು ಉಜ್ವಲವಾದ ಸೃಷ್ಟಿಗಳು ನನ್ನ ವೈಭವದ ಒಂದು ಕಿಡಿಯಿಂದ ಮೂಡಿಬಂದಿವೆ ಎಂದು ತಿಳಿ.**

## ಭಾವಾರ್ಥ

ಒಂದು ತೇಜಸ್ವೀ ಅಥವಾ ಸುಂದರ ಅಸ್ತಿತ್ವವು ಆಧ್ಯಾತ್ಮಿಕ ಜಗತ್ತಿನಲ್ಲಿರಬಹುದು ಅಥವಾ ಭೌತಿಕ ಜಗತ್ತಿನಲ್ಲಿರಬಹುದು. ಅದು ಕೃಷ್ಣನ ಸಂಪತ್ತಿನ ಒಂದು ಸಣ್ಣ ಅಭಿವ್ಯಕ್ತಿ ಎಂದು ತಿಳಿಯಬೇಕು. ಅಸಾಧಾರಣ ಶ್ರೀಮಂತಿಕೆಯ ಯಾವ ವಸ್ತುವನ್ನಾದರೂ ಕೃಷ್ಣನ ಸಿರಿಯ ಪ್ರತಿನಿಧಿ ಎಂದು ತಿಳಿಯಬೇಕು.

## ಶ್ಲೋಕ - 42

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥೪೨॥**

**ಅಥವಾ**—ಅಥವಾ; **ಬಹುನಾ**—ಅನೇಕವಾಗಿ; **ಏತೇನ**—ಈ ಬಗೆಯಿಂದ; **ಕಿಮ್**—ಏನು; **ಜ್ಞಾತೇನ**— ತಿಳಿಯುವುದರಿಂದ; **ತವ**—ನಿನಗೆ; **ಅರ್ಜುನ**—ಅರ್ಜುನನೇ; **ವಿಷ್ಟಭ್ಯ**—ವ್ಯಾಪಿಸಿ; **ಅಹಮ್**—ನಾನು; **ಇದಮ್**—ಈ; **ಕೃತ್ಸ್ನಮ್**—ಸಮಗ್ರವಾದ; **ಏಕ**—ಒಂದೇ; **ಅಂಶೇನ**—ಭಾಗದಿಂದ; **ಸ್ಥಿತಃ**—ನೆಲೆಸಿದ್ದೇನೆ; **ಜಗತ್**—ವಿಶ್ವವನ್ನು.

## ಅನುವಾದ

**ಅರ್ಜುನ, ಈ ವಿವರವಾದ ಜ್ಞಾನದ ಅಗತ್ಯವೇನು? ನನ್ನ ಒಂದೇ ಅಂಶದಿಂದ ನಾನು ಇಡೀ ವಿಶ್ವವನ್ನು ವ್ಯಾಪಿಸಿ ಧರಿಸಿದ್ದೇನೆ.**

## ಭಾವಾರ್ಥ

ಪರಮ ಪ್ರಭುವು ಪರಮಾತ್ಮನಾಗಿ ಎಲ್ಲ ವಸ್ತುಗಳನ್ನು ಪ್ರವೇಶಿಸಿರುವುದರಿಂದ ಇಡೀ ಐಹಿಕ ವಿಶ್ವಗಳಲ್ಲಿ ಅವನ ಪ್ರತಿನಿಧಿಗಳಿದ್ದಾರೆ. ಇಲ್ಲಿ ಪ್ರಭುವು ವಸ್ತುಗಳು ತಮ್ಮ ಪ್ರತ್ಯೇಕ ಶ್ರೀಮಂತಿಕೆ ಮತ್ತು ವೈಭವಗಳಲ್ಲಿ ಹೇಗೆ ಅಸ್ತಿತ್ವದಲ್ಲಿರುತ್ತವೆ ಎಂದು ತಿಳಿದುಕೊಳ್ಳುವುದರಲ್ಲಿ ಅರ್ಥವಿಲ್ಲ ಎಂದು ಅರ್ಜುನನಿಗೆ ಹೇಳುತ್ತಾನೆ. ಕೃಷ್ಣನು ಪರಮಾತ್ಮನಾಗಿ ಎಲ್ಲ ವಸ್ತುಗಳನ್ನು ಪ್ರವೇಶಿಸುವುದರಿಂದ ಅವು ಅಸ್ತಿತ್ವದಲ್ಲಿವೆ ಎಂದು ತಿಳಿದುಕೊಳ್ಳಬೇಕು. ಅತ್ಯಂತ ಬೃಹತ್ತಾದ ಜೀವಿಯಾದ ಬ್ರಹ್ಮನಿಂದ ಪ್ರಾರಂಭಿಸಿ ಅತ್ಯಂತ ಸಣ್ಣ ಇರುವೆಯವರೆಗೆ ಎಲ್ಲವೂ ಅಸ್ತಿತ್ವದಲ್ಲಿರುವುದಕ್ಕೆ ಕಾರಣ ಪ್ರಭುವು ಪ್ರತಿಯೊಂದನ್ನೂ ಪ್ರವೇಶಿಸಿದ್ದಾನೆ ಮತ್ತು ಪಾಲಿಸುತ್ತಿದ್ದಾನೆ ಎನ್ನುವುದೇ.

ಯಾವ ದೇವತೆಯನ್ನು ಪೂಜಿಸಿದರೂ ಅದು ಮನುಷ್ಯನನ್ನು ದೇವೋತ್ತಮ ಪರಮ ಪುರುಷನ ಬಳಿಗೆ ಅಥವಾ ಪರಮಗುರಿಯೆಡೆಗೆ ಕೊಂಡೊಯ್ಯುತ್ತದೆ ಎಂದು ಒಂದೇ ಸಮನೆ ವಿವರಿಸುವ ಧರ್ಮಸಂಸ್ಥೆಯೊಂದಿದೆ. ಆದರೆ ಇಲ್ಲಿ ದೇವತೆಗಳ ಪೂಜೆಯನ್ನು ಸ್ವಲ್ಪವೂ ಪ್ರೋತ್ಸಾಹಿಸಿಲ್ಲ. ಏಕೆಂದರೆ ಬ್ರಹ್ಮ ಮತ್ತು ಶಿವನಂತಹ ದೇವತೆಗಳೂ ಸಹ ಪರಮ ಪ್ರಭುವಿನ ಸಿರಿಯ ಒಂದು ಭಾಗದ ಪ್ರತಿನಿಧಿಗಳು ಮಾತ್ರ. ಜನ್ಮತಾಳಿದ ಎಲ್ಲರಿಗೂ ಅವನೇ ಮೂಲ. ಅವನಿಗಿಂತ ದೊಡ್ಡವರು ಇಲ್ಲ. ಅವನು **ಅಸಮೌರ್ಧ್ವ**; ಹೀಗೆಂದರೆ ಅವನಿಗಿಂತ ಶ್ರೇಷ್ಠರು ಅಥವಾ ಅವನಿಗೆ ಸಮನಾದವರು

ಯಾರೂ ಇಲ್ಲ. ಶ್ರೀಕೃಷ್ಣನನ್ನು ದೇವತೆಗಳ ವರ್ಗದಲ್ಲಿ — ಅವರು ಬ್ರಹ್ಮ ಅಥವಾ ಶಿವ ಆದರೂ ಸಹ — ಪರಿಗಣಿಸಿದರೆ ಅಂತಹ ಮನುಷ್ಯನು ಕೂಡಲೇ ನಾಸ್ತಿಕನಾಗುತ್ತಾನೆ ಎಂದು ಪದ್ಮಪುರಾಣದಲ್ಲಿ ಹೇಳಿದೆ. ಯಾರಾದರೂ ಕೃಷ್ಣನ ಸಾಮರ್ಥ್ಯದ ಸಿರಿಗಳ ಮತ್ತು ವಿಸ್ತರಣಗಳ ಬೇರೆಬೇರೆ ವರ್ಣನೆಗಳನ್ನು ಅಧ್ಯಯನ ಮಾಡಿದರೆ, ನಿಸ್ಸಂದೇಹವಾಗಿಯೂ ಆತನು ಪ್ರಭು ಶ್ರೀಕೃಷ್ಣನ ಸ್ಥಾನವನ್ನು ಅರ್ಥಮಾಡಿಕೊಳ್ಳಬಹುದು ಮತ್ತು ತನ್ನ ಮನಸ್ಸನ್ನು ನಿಶ್ಚಲವಾಗಿ ಕೃಷ್ಣಪ್ರಜ್ಞೆಯಲ್ಲಿ ನಿಲ್ಲಿಸಬಹುದು. ಪ್ರಭುವಿನ ಆಂಶಿಕ ಪ್ರತಿನಿಧಿಯಾದ ಪರಮಾತ್ಮನು ಅಸ್ತಿತ್ವದಲ್ಲಿರುವ ಪ್ರತಿಯೊಂದು ವಸ್ತುವನ್ನೂ ಪ್ರವೇಶಿಸುತ್ತಾನೆ; ಇದರಿಂದ ಪ್ರಭುವು ಸರ್ವಾಂತರ್ಯಾಮಿ. ಪರಿಶುದ್ಧ ಭಕ್ತರು ತಮ್ಮ ಮನಸ್ಸುಗಳನ್ನು ಪೂರ್ಣ ಭಕ್ತಿಸೇವೆಯಲ್ಲಿ ಕೃಷ್ಣಪ್ರಜ್ಞೆಯಲ್ಲಿ ಕೇಂದ್ರೀಕರಿಸುತ್ತಾರೆ. ಆದುದರಿಂದ ಅವರು ಸದಾ ದಿವ್ಯಸ್ಥಿತಿಯಲ್ಲಿ ಇರುತ್ತಾರೆ. ಈ ಅಧ್ಯಾಯದ ಎಂಟರಿಂದ ಹನ್ನೊಂದನೆಯ ಶ್ಲೋಕಗಳಲ್ಲಿ ಕೃಷ್ಣನ ಭಕ್ತಿಸೇವೆ ಮತ್ತು ಪೂಜೆಗಳನ್ನು ಬಹುಸ್ಪಷ್ಟವಾಗಿ ಸೂಚಿಸಿದೆ. ಪರಿಶುದ್ಧ ಭಕ್ತಿಸೇವೆಯ ಮಾರ್ಗವೇ ಅದು. ದೇವೋತ್ತಮ ಪರಮ ಪುರುಷನ ಸಹವಾಸದ ಅತ್ಯುನ್ನತ ಭಕ್ತಿಯ ಪರಿಪೂರ್ಣತೆಯನ್ನು ಸಾಧಿಸುವುದು ಹೇಗೆ ಎನ್ನುವುದನ್ನು ವಿವರವಾಗಿ ಈ ಅಧ್ಯಾಯದಲ್ಲಿ ವಿವರಿಸಿದೆ. ಕೃಷ್ಣನಿಂದ ಬಂದ ಗುರುಶಿಷ್ಯ ಪರಂಪರೆಯಲ್ಲಿ ಒಬ್ಬ ಮಹಾನ್ ಆಚಾರ್ಯರಾದ ಶ್ರೀ ಬಲದೇವ ವಿದ್ಯಾಭೂಷಣರು ಈ ಅಧ್ಯಾಯದ ಮೇಲಿನ ತಮ್ಮ ವ್ಯಾಖ್ಯಾನವನ್ನು ಈ ಮಾತುಗಳಿಂದ ಮುಗಿಸುತ್ತಾರೆ.

**ಯಚ್ಛಕ್ತಿಲೇಶಾತ್ ಸುರ್ಯಾದ್ಯಾ ಭವನ್ತ್ಯತ್ಯುಗ್ರತೇಜಸಃ |**
**ಯದಂಶೇನ ಧೃತಂ ವಿಶ್ವಂ ಸ ಕೃಷ್ಣೋ ದಶಮೇಽರ್ಚ್ಯತೇ ||**

ಪ್ರಬಲವಾದ ಸೂರ್ಯನು ಸಹ ತನ್ನ ಶಕ್ತಿಯನ್ನು ಶ್ರೀಕೃಷ್ಣನ ಮಹಾಶಕ್ತಿಯಿಂದ ಪಡೆಯುತ್ತಾನೆ; ಕೃಷ್ಣನ ಆಂಶಿಕ ವಿಸ್ತರಣವು ಇಡೀ ಜಗತ್ತನ್ನು ಪಾಲಿಸುತ್ತದೆ. ಆದುದರಿಂದ ಶ್ರೀಕೃಷ್ಣನು ಪೂಜಾರ್ಹನು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ವಿಭೂತಿ ಯೋಗ" ಎಂಬ ಹತ್ತನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 11

# ವಿಶ್ವರೂಪ

## ಶ್ಲೋಕ - 1

**ಅರ್ಜುನ ಉವಾಚ**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಮತ್ ಅನುಗ್ರಹಾಯ**—ನನಗೆ ಅನುಗ್ರಹ ತೋರುವುದಕ್ಕಾಗಿಯೇ; **ಪರಮಮ್**—ಪರಮವಾದ; **ಗುಹ್ಯಮ್**—ರಹಸ್ಯವಾದ; **ಅಧ್ಯಾತ್ಮ**—ಅಧ್ಯಾತ್ಮದ; **ಸಂಜ್ಞಿತಮ್**—ವಿಷಯದಲ್ಲಿ; **ಯತ್**—ಏನು; **ತ್ವಯಾ**—ನಿನ್ನಿಂದ; **ಉಕ್ತಮ್**—ಹೇಳಲ್ಪಟ್ಟಿತೋ; **ವಚಃ**—ಮಾತುಗಳು; **ತೇನ**—ಅದರಿಂದ; **ಮೋಹಃ**—ಭ್ರಾಂತಿಯು; **ಅಯಮ್**—ಈ; **ವಿಗತಃ**—ದೂರವಾಗಿದೆ; **ಮಮ**—ನನ್ನ.

## ಅನುವಾದ

**ಅರ್ಜುನನು ಹೀಗೆ ಹೇಳಿದನು — ನೀನು ಅನುಗ್ರಹ ಮಾಡಿ ಈ ರಹಸ್ಯವಾದ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ಉಪದೇಶ ಮಾಡಿದೆ. ಇದರಿಂದ ನನ್ನ ಮೋಹವು ನಾಶವಾಗಿದೆ.**

## ಭಾವಾರ್ಥ

ಕೃಷ್ಣನು ಎಲ್ಲ ಕಾರಣಗಳ ಕಾರಣ ಎನ್ನುವುದನ್ನು ಈ ಅಧ್ಯಾಯವು ತೋರಿಸುತ್ತದೆ. ಭೌತಿಕ ಲೋಕಗಳು ಮಹಾ ವಿಷ್ಣುವಿನಿಂದ ಹೊರಸೂಸುತ್ತವೆ; ಮಹಾವಿಷ್ಣುವಿಗೆ ಸಹ ಕೃಷ್ಣನು ಕಾರಣನು. ಕೃಷ್ಣನು ಒಂದು ಅವತಾರವಲ್ಲ; ಅವನು ಎಲ್ಲ ಅವತಾರಗಳ ಮೂಲ. ಹಿಂದಿನ ಅಧ್ಯಾಯದಲ್ಲಿ ಇದನ್ನು ಸಂಪೂರ್ಣವಾಗಿ ವಿವರಿಸಿದೆ. ಈಗ ಅರ್ಜುನನ ಮಟ್ಟಿಗೆ ಅವನು ತನ್ನ ಮೋಹವು ಕೊನೆಗಂಡಿತು ಎಂದು ಹೇಳುತ್ತಾನೆ. ಎಂದರೆ ಈಗ ಅರ್ಜುನನು ಕೃಷ್ಣನು ಕೇವಲ ಒಬ್ಬ ಮನುಷ್ಯ, ತನ್ನ ಸ್ನೇಹಿತ ಎಂದು ಯೋಚಿಸುವುದಿಲ್ಲ; ಅವನು ಎಲ್ಲ ವಸ್ತುಗಳ ಮೂಲ ಎಂದು ಕಾಣುತ್ತಾನೆ. ಅರ್ಜುನನಿಗೆ ಬಹುಮಟ್ಟಿಗೆ ಜ್ಞಾನೋದಯವಾಗಿದೆ. ತನಗೆ ಕೃಷ್ಣನಂತಹ ಮಹಾನ್ ಸ್ನೇಹಿತನಿದ್ದಾನೆ ಎಂದು ಅವನಿಗೆ ಸಂತೋಷ. ಆದರೆ ತಾನು ಕೃಷ್ಣನನ್ನು ಎಲ್ಲ ವಸ್ತುಗಳ ಮೂಲ ಎಂದು ಒಪ್ಪಿಕೊಂಡರೂ ಇತರರು ಒಪ್ಪಿಕೊಳ್ಳದೆ ಹೋಗಬಹುದು. ಆದುದರಿಂದ ಎಲ್ಲರಿಗೂ ಕೃಷ್ಣನ ದೈವತ್ವವು ಸ್ಪಷ್ಟವಾಗುವಂತೆ ಈ ಅಧ್ಯಾಯದಲ್ಲಿ ಅವನು ಕೃಷ್ಣನಿಗೆ ತನ್ನ ವಿಶ್ವರೂಪವನ್ನು ತೋರಿಸುವಂತೆ ಪ್ರಾರ್ಥಿಸುತ್ತಾನೆ. ವಾಸ್ತವವಾಗಿ ಕೃಷ್ಣನ ವಿಶ್ವರೂಪವನ್ನು ಕಂಡವನು ಅರ್ಜುನನಂತೆ ಹೆದರಿಕೊಳ್ಳುತ್ತಾನೆ. ಆದರೆ ಕೃಷ್ಣನು ಎಷ್ಟು ಕರುಣಾಳು ಎಂದರೆ

ವಿಶ್ವರೂಪವನ್ನು ತೋರಿಸಿ ತನ್ನ ಮೂಲರೂಪಕ್ಕೆ ಹಿಂದಿರುಗುತ್ತಾನೆ. ಕೃಷ್ಣನು ತಾನು ಮಾತನಾಡುತ್ತಿರುವುದು ಅರ್ಜುನನ ಪ್ರಯೋಜನಕ್ಕಾಗಿ ಎಂದು ಹಲವು ಬಾರಿ ಹೇಳಿದ್ದಾನೆ; ಅರ್ಜುನನು ಇದನ್ನು ಒಪ್ಪುತ್ತಾನೆ; ತನಗೆ ಇದೆಲ್ಲ ಆಗುತ್ತಿರುವುದು ಕೃಷ್ಣನ ಕೃಪೆಯಿಂದ ಎಂದು ಅರ್ಜುನನು ಒಪ್ಪಿಕೊಳ್ಳುತ್ತಾನೆ. ಕೃಷ್ಣನು ಎಲ್ಲ ಕಾರಣಗಳ ಕಾರಣನು ಮತ್ತು ಪ್ರತಿಯೊಬ್ಬರ ಹೃದಯದಲ್ಲಿಯೂ ಪರಮಾತ್ಮನಾಗಿ ನೆಲೆಸಿದ್ದಾನೆ ಎನ್ನುವುದು ಈಗ ಅವನ ದೃಢ ನಂಬಿಕೆ.

## ಶ್ಲೋಕ - 2

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥೨॥**

**ಭವ**—ಆವಿರ್ಭಾವ; **ಅಪ್ಯಯೌ**—ಅಂತರ್ಧಾನವು; **ಹಿ**—ಖಂಡಿತವಾಗಿಯೂ; **ಭೂತಾನಾಮ್**—ಸಕಲ ಜೀವಿಗಳ; **ಶ್ರುತೌ**—ಕೇಳಲ್ಪಟ್ಟವು; **ವಿಸ್ತರಶಃ**—ವಿವರವಾಗಿ; **ಮಯಾ**—ನನ್ನಿಂದ; **ತ್ವತ್ತಃ**—ನಿನ್ನಿಂದ; **ಕಮಲ ಪತ್ರ ಅಕ್ಷ**—ಕಮಲನಯನನೇ; **ಮಾಹಾತ್ಮ್ಯಮ್**—ಮಹಿಮೆಗಳನ್ನು; **ಅಪಿ**—ಕೂಡ; **ಚ**—ಮತ್ತು; **ಅವ್ಯಯಮ್**—ಅಕ್ಷಯವಾದ.

## ಅನುವಾದ

**ಕಮಲ ನೇತ್ರನೆ, ಪ್ರತಿಯೊಂದು ಜೀವಿಯ ಹುಟ್ಟು ಮತ್ತು ಸಾವಿನ ವಿಷಯವನ್ನು ನಿನ್ನಿಂದ ವಿವರವಾಗಿ ಕೇಳಿದೆನು. ಎಂದೂ ಕೊನೆಯಾಗದ ನಿನ್ನ ವೈಭವಗಳನ್ನು ಅರ್ಥಮಾಡಿಕೊಂಡಿದ್ದೇನೆ.**

## ಭಾವಾರ್ಥ

ಅರ್ಜುನನು ತನ್ನ ಸಂತೋಷದಲ್ಲಿ ಶ್ರೀಕೃಷ್ಣನನ್ನು 'ಕಮಲ ನೇತ್ರ' (ಕೃಷ್ಣನ ಕಣ್ಣುಗಳು ಕಮಲದ ದಳಗಳಂತೆ ಕಾಣುತ್ತವೆ) ಎಂದು ಕರೆಯುತ್ತಾನೆ. ಕೃಷ್ಣನು ಹಿಂದಿನ ಒಂದು ಅಧ್ಯಾಯದಲ್ಲಿ **ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ** "ಈ ಇಡೀ ಭೌತಿಕ ಅಭಿವ್ಯಕ್ತಿಯು ಕಾಣಿಸುವುದಕ್ಕೆ ಮತ್ತು ಅದೃಶ್ಯವಾಗುವುದಕ್ಕೆ ನಾನು ಮೂಲ" ಎಂದು ಭರವಸೆ ನೀಡಿದ್ದಾನೆ. ಅರ್ಜುನನು ಇದನ್ನು ಪ್ರಭುವಿನಿಂದ ವಿವರವಾಗಿ ಕೇಳಿದ್ದಾನೆ. ಕೃಷ್ಣನು ಎಲ್ಲ ವಸ್ತುಗಳು ಕಾಣಿಸಿಕೊಳ್ಳುವುದಕ್ಕೆ ಮತ್ತು ಮಾಯವಾಗುವುದಕ್ಕೆ ಮೂಲವಾದರೂ ಅವನು ಅವುಗಳಿಂದ ದೂರ ಉಳಿದಿದ್ದಾನೆ ಎಂದೂ ಅರ್ಜುನನಿಗೆ ತಿಳಿದಿದೆ. ಒಂಬತ್ತನೆಯ ಅಧ್ಯಾಯದಲ್ಲಿ ಪ್ರಭುವು ಹೇಳಿದಂತೆ ಆತನು ಸರ್ವವ್ಯಾಪಿ, ಆದರೆ ಆತನೇ ವ್ಯಕ್ತಿಶಃ ಎಲ್ಲೆಲ್ಲೂ ಇರುವುದಿಲ್ಲ. ಇದು ಕೃಷ್ಣನ ಊಹಾತೀತ ಸಂಪತ್ತು; ಇದು ತನಗೆ ಸಂಪೂರ್ಣವಾಗಿ ಅರ್ಥವಾಗಿದೆ ಎಂದು ಅರ್ಜುನನು ಒಪ್ಪಿಕೊಳ್ಳುತ್ತಾನೆ.

## ಶ್ಲೋಕ - 3

**ಏವಮೇತದ್ ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥**

**ಏವಮ್**—ಹೀಗೆ; **ಏತತ್**—ಇದನ್ನು; **ಯಥಾ**—ಇದ್ದಂತೆಯೇ; **ಆತ್ಥ**—ಹೇಳಿದ್ದೀಯೆ; **ತ್ವಮ್**—

ನೀನು; **ಆತ್ಮಾನಮ್**—ನಿನ್ನನ್ನು; **ಪರಮ ಈಶ್ವರ**—ಪರಮ ಪ್ರಭುವೇ; **ದ್ರಷ್ಟುಮ್**—ನೋಡಲು; **ಇಚ್ಛಾಮಿ**—ಇಚ್ಛಿಸುತ್ತೇನೆ; **ತೇ**—ನಿನ್ನ; **ರೂಪಮ್**—ರೂಪವನ್ನು; **ಐಶ್ವರಮ್**—ದಿವ್ಯವಾದ; **ಪುರುಷೋತ್ತಮ**—ಪುರುಷೋತ್ತಮನೇ.

## ಅನುವಾದ

**ಪರಮ ಪ್ರಭುವೇ, ಪುರುಷೋತ್ತಮನೇ, ನೀನು ನಿನ್ನನ್ನು ವರ್ಣಿಸಿಕೊಂಡಂತೆ, ನಿನ್ನ ವಾಸ್ತವ ಸ್ಥಿತಿಯಲ್ಲಿ ನನ್ನ ಮುಂದೆ ಕಾಣುತ್ತಿದ್ದೇನೆ. ಆದರೂ ನೀನು ಈ ವಿಶ್ವದ ಅಭಿವ್ಯಕ್ತಿಯಲ್ಲಿ ಹೇಗೆ ಪ್ರವೇಶಿಸಿರುವೆ ಎಂದು ಕಾಣಲು ಬಯಸುತ್ತೇನೆ; ನಿನ್ನ ಆ ರೂಪವನ್ನು ನೋಡಲು ಬಯಸುತ್ತೇನೆ.**

## ಭಾವಾರ್ಥ

ತಾನು ಸ್ವಯಂ ಅಂಶದಿಂದ ಭೌತಿಕ ಜಗತ್ತನ್ನು ಪ್ರವೇಶಿಸಿದುದರಿಂದ ಈ ವಿಶ್ವದ ಅಭಿವ್ಯಕ್ತಿಯು ಸಾಧ್ಯವಾಗಿದೆ ಮತ್ತು ಅದು ಸಾಗುತ್ತಿದೆ ಎಂದು ಪ್ರಭುವು ಹೇಳಿದನು. ಅರ್ಜುನನ ಮಟ್ಟಿಗೆ ಕೃಷ್ಣನ ಮಾತುಗಳು ಅವನಿಗೆ ಸ್ಫೂರ್ತಿಯನ್ನು ಕೊಟ್ಟಿವೆ. ಆದರೆ ಮುಂದೆ ಕೃಷ್ಣನು ಸಾಮಾನ್ಯ ಮನುಷ್ಯ ಎಂದು ಯೋಚಿಸುವವರನ್ನು ಒಪ್ಪಿಸಲು ಅರ್ಜುನನು ಕೃಷ್ಣನ ವಿಶ್ವರೂಪವನ್ನು ನೋಡಲು ಅಪೇಕ್ಷಿಸುತ್ತಾನೆ. ಕೃಷ್ಣನು ವಿಶ್ವದಿಂದ ಬೇರೆಯಾದರೂ ಅವನು ಅದರೊಳಗಿಂದ ಹೇಗೆ ಕಾರ್ಯ ನಿರ್ವಹಿಸುತ್ತಾನೆ ಎಂದು ಕಾಣಲು ಬಯಸುತ್ತಾನೆ. ಅರ್ಜುನನು ಕೃಷ್ಣನನ್ನು **ಪುರುಷೋತ್ತಮ** ಎಂದು ಸಂಬೋಧಿಸುವುದು ಅರ್ಥವತ್ತಾಗಿದೆ. ಪ್ರಭುವು ದೇವೋತ್ತಮ ಪರಮ ಪುರುಷ; ಆತನು ಅರ್ಜುನನಲ್ಲಿಯೇ ಇದ್ದಾನೆ; ಆದುದರಿಂದ ಅವನಿಗೆ ಅರ್ಜುನನ ಅಪೇಕ್ಷೆಯು ತಿಳಿದಿದೆ. ಅರ್ಜುನನಿಗೆ ಕೃಷ್ಣನನ್ನು ಅವನ ಕೃಷ್ಣರೂಪದಲ್ಲಿ ಕಾಣುವುದರಲ್ಲಿಯೇ ಸಂಪೂರ್ಣ ತೃಪ್ತಿಯಿದೆ; ಆದುದರಿಂದ ಆತನ ವಿಶ್ವರೂಪವನ್ನು ನೋಡಲು ವಿಶೇಷವಾದ ಆಸೆಯಿಲ್ಲ. ಇದನ್ನು ಕೃಷ್ಣನು ತಿಳಿಯಬಲ್ಲ. ಇತರರಿಗೆ ಮನದಟ್ಟು ಮಾಡಿಕೊಡುವುದಕ್ಕಾಗಿ ಅರ್ಜುನನು ವಿಶ್ವರೂಪವನ್ನು ನೋಡಲು ಬಯಸುತ್ತಾನೆ ಎಂದು ಪ್ರಭುವಿಗೆ ಗೊತ್ತು. ಅರ್ಜುನನಿಗೆ ತನ್ನ ನಂಬಿಕೆಯು ದೃಢವಾಗಬೇಕೆಂದು ವೈಯಕ್ತಿಕ ಆಸೆಯೇನೂ ಇರಲಿಲ್ಲ. ಒಂದು ಪ್ರಮಾಣವನ್ನು ಸ್ಥಾಪಿಸಲು ಅರ್ಜುನನು ವಿಶ್ವರೂಪವನ್ನು ನೋಡಲು ಬಯಸುತ್ತಾನೆ. ಮುಂದೆಯೂ ಸಹ ತಾವು ದೇವರ ಅವತಾರಗಳೆಂದು ಹೇಳಿಕೊಳ್ಳುವ ಮೋಸಗಾರರು ಬರುತ್ತಾರೆ ಎಂದು ಕೃಷ್ಣನು ಅರ್ಥಮಾಡಿಕೊಳ್ಳಬಲ್ಲ. ಆದುದರಿಂದ ಜನರು ಎಚ್ಚರದಿಂದಿರಬೇಕು. ತಾನು ಕೃಷ್ಣ ಎಂದು ಹೇಳಿಕೊಳ್ಳುವವನು ತನ್ನ ಹೇಳಿಕೆಯನ್ನು ಜನರಿಗೆ ಮನದಟ್ಟು ಮಾಡಿಕೊಡಲು ತನ್ನ ವಿಶ್ವರೂಪವನ್ನು ತೋರಿಸಲು ಸಿದ್ಧನಾಗಿರಬೇಕು.

## ಶ್ಲೋಕ - 4

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥೪॥**

**ಮನ್ಯಸೇ**—ನೀನು ತಿಳಿಯುವುದು; **ಯದಿ**—ಆದರೆ; **ತತ್**—ಅದು; **ಶಕ್ಯಮ್**—ಸಾಧ್ಯ; **ಮಯಾ**—

ನನ್ನಿಂದ; **ದ್ರಷ್ಟುಮ್**—ನೋಡಲು; **ಇತಿ**—ಎಂದು; **ಪ್ರಭೋ**—ಪ್ರಭುವೇ; **ಯೋಗ ಈಶ್ವರ**—ಸಕಲ ಯೋಗ ಶಕ್ತಿಗಳ ಸ್ವಾಮಿಯೇ; **ತತಃ**—ಆಗ; **ಮೇ**—ನನಗೆ; **ತ್ವಮ್**—ನೀನು; **ದರ್ಶಯ**—ತೋರಿಸು; **ಆತ್ಮಾನಮ್**—ನಿನ್ನನ್ನು; **ಅವ್ಯಯಮ್**—ಶಾಶ್ವತನಾದ.

## ಅನುವಾದ

**ಓ ಪ್ರಭುವೆ, ಯೋಗೀಶ್ವರನೆ, ನಿನ್ನ ವಿಶ್ವರೂಪವನ್ನು ನಾನು ನೋಡಬಲ್ಲೆ ಎಂದು ನೀನು ಭಾವಿಸುವೆಯಾದರೆ ಆ ನಿನ್ನ ಅಪರಿಮಿತ ವಿಶ್ವರೂಪವನ್ನು ತೋರಿಸು.**

## ಭಾವಾರ್ಥ

ಪರಮಪ್ರಭುವಾದ ಕೃಷ್ಣನನ್ನು ಐಹಿಕ ಇಂದ್ರಿಯಗಳಿಂದ ನೋಡಲು, ಕಾಣಲು, ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಆದರೆ ಯಾರು ಪ್ರಾರಂಭದಿಂದಲೂ ಕೃಷ್ಣನ ಪ್ರೇಮಪೂರ್ವಕ ದಿವ್ಯ ಸೇವೆಯಲ್ಲಿ ನಿರತರಾಗಿರುತ್ತಾರೋ ಅವರಿಗೆ ಕೃಷ್ಣನು ತನ್ನನ್ನು ತೋರಿಸಿಕೊಳ್ಳುತ್ತಾನೆ. ಪ್ರತಿಯೊಂದು ಜೀವಿಯೂ ಒಂದು ಆಧ್ಯಾತ್ಮಿಕ ಕಿಡಿ ಮಾತ್ರ. ಆದುದರಿಂದ ಪರಮ ಪ್ರಭುವನ್ನು ನೋಡುವುದಾಗಲೀ, ಅರ್ಥ ಮಾಡಿಕೊಳ್ಳುವುದಾಗಲೀ ಸಾಧ್ಯವಿಲ್ಲ. ಭಕ್ತನಾದ ಅರ್ಜುನನು ತನ್ನ ಊಹಾಪೋಹಗಳ ಶಕ್ತಿಯನ್ನು ನೆಚ್ಚುವುದಿಲ್ಲ. ಅದರ ಬದಲು ಅವನು ಜೀವಿಯಾಗಿ ತನ್ನ ಮಿತಿಗಳನ್ನು ಒಪ್ಪಿಕೊಳ್ಳುತ್ತಾನೆ. ಕೃಷ್ಣನ ಸ್ಥಾನವು ಅಳತೆಗೆ ಮೀರಿದ್ದು; ಇದನ್ನು ಅರ್ಜುನನು ಒಪ್ಪಿಕೊಳ್ಳುತ್ತಾನೆ. ಜೀವಿಗೆ ಅನಂತವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ ಎಂದು ಅರ್ಜುನನು ತಿಳಿಯಬಲ್ಲ. ಅನಂತನಾದವನು ತನ್ನನ್ನು ತೋರಿಸಿಕೊಂಡರೆ ಆಗ ಅನಂತನ ಕೃಪೆಯಿಂದ ಅನಂತನ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯ. ಇಲ್ಲಿ ಯೋಗೇಶ್ವರ ಎನ್ನುವ ಶಬ್ದವು ಬಹಳ ಮಹತ್ವದ್ದು. ಏಕೆಂದರೆ ಪ್ರಭುವಿನ ಶಕ್ತಿಯು ಕಲ್ಪನಾತೀತ. ಆದುದರಿಂದ ಅರ್ಜುನನು ಕೃಷ್ಣನ ಕಲ್ಪನಾತೀತ ಕೃಪೆಗಾಗಿ ಬೇಡುತ್ತಾನೆ. ಅವನು ಕೃಷ್ಣನಿಗೆ ಅಪ್ಪಣೆಮಾಡುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಮನುಷ್ಯನು ತನ್ನನ್ನು ಪೂರ್ಣವಾಗಿ ಅರ್ಪಿಸಿಕೊಳ್ಳದಿದ್ದರೆ ಮತ್ತು ಭಕ್ತಿಸೇವೆಯಲ್ಲಿ ನಿರತನಾಗದಿದ್ದರೆ ಕೃಷ್ಣನು ತನ್ನನ್ನು ತೋರಿಸಿಕೊಳ್ಳಬೇಕಾಗಿಲ್ಲ. ಕೇವಲ ತಮ್ಮ ಊಹಾತ್ಮಕ ಚಿಂತನೆಯ ಶಕ್ತಿಯನ್ನು ನೆಚ್ಚಿದವರಿಗೆ ಕೃಷ್ಣನನ್ನು ನೋಡಲು ಸಾಧ್ಯವಾಗುವುದಿಲ್ಲ.

## ಶ್ಲೋಕ - 5

**ಶ್ರೀ ಭಗವಾನುವಾಚ**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ |**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ||೫||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಪಶ್ಯ**—ನೋಡು; **ಮೇ**—ನನ್ನ; **ಪಾರ್ಥ**—ಪೃಥೆಯ ಮಗನೇ; **ರೂಪಾಣಿ**—ರೂಪಗಳನ್ನು; **ಶತಶಃ**—ನೂರಾರು; **ಅಥ**—ಕೂಡ; **ಸಹಸ್ರಶಃ**—ಸಾವಿರಾರು; **ನಾನಾವಿಧಾನಿ**—ವಿವಿಧವಾದ; **ದಿವ್ಯಾನಿ**—ದಿವ್ಯವಾದ; **ನಾನಾ**—ಬಗೆ ಬಗೆಯ; **ವರ್ಣ**—ಬಣ್ಣ; **ಆಕೃತೀನಿ**—ಆಕೃತಿಗಳನ್ನು; **ಚ**—ಸಹಾ.

### ಅನುವಾದ

**ದೇವೋತ್ತಮ ಪರಮ ಪುರುಷನು ಹೇಳಿದನು — ಪೃಥೆಯ ಮಗನಾದ ನನ್ನ ಪ್ರೀತಿಯ ಅರ್ಜುನ, ನನ್ನ ಸಿರಿಗಳನ್ನು, ನಾನಾ ವಿಧವಾದ ದಿವ್ಯ ವರ್ಣಗಳ ನನ್ನ ಕೋಟ್ಯಂತರ ರೂಪಗಳನ್ನು ನೋಡು.**

### ಭಾವಾರ್ಥ

ಕೃಷ್ಣನ ವಿಶ್ವರೂಪವು ಒಂದು ಅಲೌಕಿಕ ರೂಪ. ಆದರೂ ಅದು ವಿಶ್ವದ ಅಭಿವ್ಯಕ್ತಿಗಾಗಿಯೇ ಪ್ರಕಟವಾಗಿದೆ. ಆದುದರಿಂದ ಅದು ಈ ಭೌತಿಕ ಪ್ರಕೃತಿಯ ಅನಿತ್ಯ ಕಾಲಕ್ಕೆ ಒಳಪಟ್ಟಿದೆ. ಅರ್ಜುನನು ಈ ವಿಶ್ವರೂಪವನ್ನು ನೋಡಲು ಬಯಸುತ್ತಾನೆ. ಭೌತಿಕ ಪ್ರಕೃತಿಯು ಪ್ರಕಟಿತವೂ ಮತ್ತು ಅಪ್ರಕಟಿತವೂ ಆಗಿರುವಂತೆ ಕೃಷ್ಣನ ಈ ವಿಶ್ವರೂಪವು ಪ್ರಕಟಿತ ಮತ್ತು ಅಪ್ರಕಟಿತ. ಅದು ಕೃಷ್ಣನ ಇತರ ಸ್ವರೂಪಗಳಂತೆ ಆಧ್ಯಾತ್ಮಿಕ ಗಗನದಲ್ಲಿ ಶಾಶ್ವತವಾಗಿ ನೆಲೆಸಿರುವುದಿಲ್ಲ. ಭಕ್ತನ ಮಟ್ಟಿಗೆ ಹೇಳುವುದಾದರೆ ಅವನು ವಿಶ್ವರೂಪವನ್ನು ನೋಡಲು ಕಾತರನಾಗಿರುವುದಿಲ್ಲ. ಆದರೆ ಅರ್ಜುನನು ಕೃಷ್ಣನನ್ನು ಈ ರೀತಿಯಲ್ಲಿ ಕಾಣಲು ಬಯಸಿದುದರಿಂದ ಕೃಷ್ಣನು ಈ ರೂಪವನ್ನು ತೋರುತ್ತಾನೆ. ಸಾಮಾನ್ಯ ಮನುಷ್ಯನು ಈ ವಿಶ್ವರೂಪವನ್ನು ನೋಡಲಾರ. ನೋಡುವ ಶಕ್ತಿಯನ್ನು ಕೃಷ್ಣನೇ ಕೊಡಬೇಕು.

## ಶ್ಲೋಕ - 6

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥೬॥**

**ಪಶ್ಯ**—ನೋಡು; **ಆದಿತ್ಯಾನ್**—ಅದಿತಿಯ ದ್ವಾದಶ ಪುತ್ರರನ್ನು; **ವಸೂನ್**—ಅಷ್ಟ ವಸುಗಳನ್ನು; **ರುದ್ರಾನ್**—ರುದ್ರನ ಏಕಾದಶ ರೂಪಗಳನ್ನು; **ಅಶ್ವಿನೌ**—ಇಬ್ಬರು ಅಶ್ವಿನೀ ಕುಮಾರರನ್ನು; **ಮರುತಃ**—ನಲವತ್ತೊಂಬತ್ತು ಮರುತ್ತುಗಳು (ವಾಯು ದೇವತೆಗಳು); **ತಥಾ**—ಕೂಡ; **ಬಹೂನಿ**—ಅನೇಕ; **ಅದೃಷ್ಟ**—ನೀನು ನೋಡಿರದ; **ಪೂರ್ವಾಣಿ**—ಹಿಂದೆ; **ಪಶ್ಯ**—ನೋಡು; **ಆಶ್ಚರ್ಯಾಣಿ**— ಸಕಲ ಅದ್ಭುತಗಳನ್ನು; **ಭಾರತ**—ಭಾರತ ಶ್ರೇಷ್ಠನೇ.

### ಅನುವಾದ

**ಭರತ ವಂಶದವರಲ್ಲಿ ಶ್ರೇಷ್ಠನೆ, ಆದಿತ್ಯರು, ವಸುಗಳು, ರುದ್ರರು, ಅಶ್ವಿನಿ ಕುಮಾರರು ಮತ್ತು ಇತರ ಎಲ್ಲ ದೇವತೆಗಳ ವಿವಿಧ ಅಭಿವ್ಯಕ್ತಿಗಳನ್ನು ನೋಡು. ಈವರೆಗೆ ಯಾರೂ ನೋಡದಿರುವ ಮತ್ತು ಕೇಳದಿರುವ ಆಶ್ಚರ್ಯಗಳನ್ನು ನೋಡು.**

### ಭಾವಾರ್ಥ

ಅರ್ಜುನನು ಕೃಷ್ಣನ ಆತ್ಮೀಯ ಸ್ನೇಹಿತನಾಗಿ, ವಿದ್ವಾಂಸರಲ್ಲಿ ಬಹು ಮುಂದುವರಿದವನಾದರೂ ಅವನಿಗೆ ಕೃಷ್ಣನ ವಿಷಯವಾಗಿ ಎಲ್ಲವನ್ನೂ ತಿಳಿಯಲು ಸಾಧ್ಯವಾಗಿರಲಿಲ್ಲ. ಮನುಷ್ಯರು ಈ ಎಲ್ಲ ರೂಪಗಳನ್ನು ಮತ್ತು ಅಭಿವ್ಯಕ್ತಿಗಳನ್ನು ಕೇಳಿಲ್ಲ

ಮತ್ತು ಕಂಡಿಲ್ಲ ಎಂದು ಇಲ್ಲಿ ಹೇಳಿದೆ. ಈಗ ಕೃಷ್ಣನು ಈ ಆಶ್ಚರ್ಯಕರ ರೂಪಗಳನ್ನು ತೋರಿಸುತ್ತಾನೆ.

## ಶ್ಲೋಕ - 7

**ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ |**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ ದ್ರಷ್ಟುಮಿಚ್ಛಸಿ ||೭||**

**ಇಹ**—ಇದರಲ್ಲಿ; **ಏಕ ಸ್ಥಮ್**—ಒಂದು ಸ್ಥಳದಲ್ಲಿ; **ಜಗತ್**—ವಿಶ್ವವನ್ನು; **ಕೃತ್ಸ್ನಮ್**—ಪೂರ್ಣವಾಗಿ; **ಪಶ್ಯ**—ನೋಡು; **ಅದ್ಯ**—ಕೂಡಲೇ; **ಸ**—ಜೊತೆಗೆ; **ಚರ**—ಚಲಿಸುವ; **ಅಚರಮ್**—ಚಲಿಸದಿರುವುದನ್ನು; **ಮಮ**—ನನ್ನ; **ದೇಹೇ**—ಶರೀರದಲ್ಲಿ; **ಗುಡಾಕೇಶ**—ಅರ್ಜುನನೇ; **ಯತ್**—ಯಾವುದನ್ನು; **ಚ**—ಕೂಡ; **ಅನ್ಯತ್**—ಬೇರೆಯದು; **ದ್ರಷ್ಟುಮ್**—ನೋಡಲು; **ಇಚ್ಛಸಿ**—ಅಪೇಕ್ಷಿಸುತ್ತೀಯೋ.

## ಅನುವಾದ

**ಅರ್ಜುನ, ನೀನು ಏನೇನನ್ನು ನೋಡಲು ಬಯಸುತ್ತೀಯೋ ಅದೆಲ್ಲವನ್ನೂ ಒಮ್ಮೆಗೇ ಈ ನನ್ನ ದೇಹದಲ್ಲಿ ನೋಡು! ನೀನು ಈಗ ಏನೇನನ್ನು ನೋಡಲು ಬಯಸುತ್ತೀಯೋ ಮತ್ತು ಮುಂದೆ ಏನೇನನ್ನು ನೋಡಲು ಬಯಸಬಹುದೋ ಅದೆಲ್ಲವನ್ನೂ ಈ ವಿಶ್ವರೂಪವು ನಿನಗೆ ತೋರಿಸುವುದು. ಚರಾಚರವಾದದ್ದೆಲ್ಲವೂ ಸಂಪೂರ್ಣವಾಗಿ ಒಂದು ಸ್ಥಳದಲ್ಲಿ ಇಲ್ಲಿವೆ.**

## ಭಾವಾರ್ಥ

ಒಂದು ಸ್ಥಳದಲ್ಲಿ ಕುಳಿತು ಯಾರೂ ಇಡೀ ವಿಶ್ವವನ್ನು ಕಾಣಲಾರರು. ಅತ್ಯಂತ ಮುಂದುವರಿದ ವಿಜ್ಞಾನಿಯೂ ವಿಶ್ವದ ಇತರ ಭಾಗಗಳಲ್ಲಿ ಆಗುತ್ತಿರುವುದನ್ನು ಕಾಣಲಾರ. ಆದರೆ ಅರ್ಜುನನಂತಹ ಭಕ್ತನು ವಿಶ್ವದ ಯಾವುದೇ ಭಾಗದಲ್ಲಿರುವ ಏನನ್ನಾದರೂ ಕಾಣಬಲ್ಲ. ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳಲ್ಲಿ ಅವನು ಕಾಣಲು ಬಯಸುವ ಏನನ್ನೇ ಆದರೂ ಕಾಣುವ ಶಕ್ತಿಯನ್ನು ಕೃಷ್ಣನು ಅವನಿಗೆ ಕೊಡುತ್ತಾನೆ. ಹೀಗೆ ಕೃಷ್ಣನ ದಯೆಯಿಂದ ಅರ್ಜುನನು ಎಲ್ಲವನ್ನೂ ನೋಡಬಲ್ಲವನಾಗುತ್ತಾನೆ.

## ಶ್ಲೋಕ - 8

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ |**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ||೮||**

**ನ**—ಎಂದಿಗೂ ಇಲ್ಲ; **ತು**—ಆದರೆ; **ಮಾಮ್**—ನನ್ನನ್ನು; **ಶಕ್ಯಸೇ**—ಸಮರ್ಥನಾಗುತ್ತೀಯೆ; **ದ್ರಷ್ಟುಮ್**—ನೋಡಲು; **ಅನೇನ**—ಈ; **ಏವ**—ಖಂಡಿತವಾಗಿಯೂ; **ಸ್ವ ಚಕ್ಷುಷಾ**—ನಿನ್ನ ಸ್ವಂತ ಕಣ್ಣುಗಳಿಂದ; **ದಿವ್ಯಮ್**—ದಿವ್ಯವಾದ; **ದದಾಮಿ**—ಕೊಡುತ್ತೇನೆ; **ತೇ**—ನಿನಗೆ; **ಚಕ್ಷುಃ**—ಕಣ್ಣುಗಳನ್ನು; **ಪಶ್ಯ**—ನೋಡು; **ಮೇ**—ನನ್ನ; **ಯೋಗಮ್ ಐಶ್ವರಮ್**—ಅಚಿಂತ್ಯವಾದ ಯೋಗ

ಶಕ್ತಿಯನ್ನು.

## ಅನುವಾದ

**ಆದರೆ ನೀನು ನಿನ್ನ ಈಗಿನ ಕಣ್ಣುಗಳಿಂದ ನನ್ನನ್ನು ಕಾಣಲಾರೆ. ಆದುದರಿಂದ ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ. ನನ್ನ ಐಶ್ವರ್ಯಯೋಗವನ್ನು ನೋಡು.**

## ಭಾವಾರ್ಥ

ಶುದ್ಧಭಕ್ತನು ಎರಡು ಕೈಗಳಿರುವ ಕೃಷ್ಣನನ್ನು ಬಿಟ್ಟು ಬೇರೆ ಯಾವ ರೂಪದಲ್ಲೂ ಅವನನ್ನು ಕಾಣಲು ಇಷ್ಟ ಪಡುವುದಿಲ್ಲ. ಭಕ್ತನು ತನ್ನ ಮನಸ್ಸಿನಿಂದ ಅವನ ವಿಶ್ವರೂಪವನ್ನು ಕಾಣಲಾರ, ಅವನ ಕೃಪೆಯಿಂದ ಮತ್ತು ದಿವ್ಯವಾದ ಕಣ್ಣುಗಳಿಂದ ಮಾತ್ರ ಕಾಣಬಲ್ಲ. ಕೃಷ್ಣನ ವಿಶ್ವರೂಪವನ್ನು ನೋಡಲು ಅರ್ಜುನನು ಬದಲಾಯಿಸಬೇಕಾದದ್ದು ಅವನ ಮನಸ್ಸನ್ನಲ್ಲ, ಅವನ ಕಣ್ಣುಗಳನ್ನು. ಕೃಷ್ಣನ ವಿಶ್ವರೂಪವು ಅಷ್ಟೇನೂ ಮುಖ್ಯವಾದದ್ದಲ್ಲ. ಇದು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಾಗುತ್ತದೆ. ಆದರೆ ಅರ್ಜುನನು ಅದನ್ನು ನೋಡಲು ಬಯಸಿದುದರಿಂದ, ವಿಶ್ವರೂಪವನ್ನು ನೋಡಲು ಅಗತ್ಯವಾದ ವಿಶಿಷ್ಟ ದೃಷ್ಟಿಯನ್ನು ಪ್ರಭುವು ಅವನಿಗೆ ಕೊಡುತ್ತಾನೆ.

ಕೃಷ್ಣನೊಡನೆ ಆಧ್ಯಾತ್ಮಿಕ ಸಂಬಂಧದಲ್ಲಿ ಸರಿಯಾದ ರೀತಿಯಲ್ಲಿ ನೆಲೆಗೊಂಡವರು ಆಕರ್ಷಿತರಾಗುವುದು ಪ್ರೇಮಮಯ ಲಕ್ಷಣಗಳಿಂದ, ದೈವಹೀನವಾದ ಸಿರಿಗಳ ಪ್ರದರ್ಶನದಿಂದಲ್ಲ. ಕೃಷ್ಣನೊಡನೆ ಆಟವಾಡಿದವರು, ಕೃಷ್ಣನ ಸ್ನೇಹಿತರು ಮತ್ತು ಕೃಷ್ಣನ ತಂದೆ ತಾಯಿಯರು, ಕೃಷ್ಣನು ತನ್ನ ಸಿರಿಗಳನ್ನು ತೋರಿಸಬೇಕೆಂದು ಎಂದೂ ಬಯಸಲಿಲ್ಲ. ಅವರು ಪರಿಶುದ್ಧ ಪ್ರೇಮದಲ್ಲಿ ಎಷ್ಟು ತನ್ಮಯರಾಗಿದ್ದರೆಂದರೆ ಅವರಿಗೆ ಕೃಷ್ಣನು ದೇವೋತ್ತಮ ಪರಮ ಪುರುಷ ಎನ್ನುವುದೂ ತಿಳಿಯದು. ತಮ್ಮ ಪ್ರೇಮ ವಿನಿಮಯದಲ್ಲಿ ಕೃಷ್ಣನು ಪರಮ ಪ್ರಭು ಎನ್ನುವುದನ್ನು ಅವರು ಮರೆಯುತ್ತಾರೆ. ಕೃಷ್ಣನೊಡನೆ ಆಡುವ ಬಾಲಕರು ಬಹು ಪುಣ್ಯ ಜೀವಿಗಳು ಮತ್ತು ಅನೇಕಾನೇಕ ಜನ್ಮಗಳ ಅನಂತರ ಅವರಿಗೆ ಕೃಷ್ಣನೊಡನೆ ಹಾಗೆ ಕ್ರೀಡಿಸಲು ಸಾಧ್ಯವಾಗಿದೆ ಎಂದು ಶ್ರೀಮದ್ಭಾಗವತದಲ್ಲಿ ಹೇಳಿದೆ. ಕೃಷ್ಣನು ದೇವೋತ್ತಮ ಪರಮ ಪುರುಷ ಎಂದು ಈ ಹುಡುಗರಿಗೆ ತಿಳಿಯದು. ಆತನನ್ನು ತಮ್ಮ ಸ್ನೇಹಿತ ಎಂದೇ ತಿಳಿಯುತ್ತಾರೆ. ಆದುದರಿಂದ ಶುಕಮುನಿಗಳು ಈ ಶ್ಲೋಕವನ್ನು ಹೇಳಿದ್ದಾರೆ —

**ಇತ್ಥಂ ಸತಾಂ ಬ್ರಹ್ಮ ಸುಖಾನುಭೂತ್ಯಾ**
**ದಾಸ್ಯಂ ಗತಾನಾಂ ಪರದೈವತೇನ |**
**ಮಾಯಾಶ್ರಿತಾನಾಂ ನರದಾರಕೇಣ**
**ಸಾಕಂ ವಿಜಹ್ರುಃ ಕೃತಪುಣ್ಯಪುಂಜಾಃ ||**

"ಇವನು ಪರಮ ಪುರುಷ; ಮಹರ್ಷಿಗಳು ಇವನನ್ನು ನಿರಾಕಾರ ಬ್ರಹ್ಮನೆಂದು ಭಾವಿಸುತ್ತಾರೆ. ಭಕ್ತರು ಇವನನ್ನು ದೇವೋತ್ತಮ ಪರಮ ಪುರುಷ ಎಂದು ಭಾವಿಸುತ್ತಾರೆ. ಸಾಮಾನ್ಯ ಜನರು ಇವನನ್ನು ಭೌತಿಕ ಪ್ರಕೃತಿಯ ಸೃಷ್ಟಿ ಎಂದು ಭಾವಿಸುತ್ತಾರೆ. ತಮ್ಮ ಹಿಂದಿನ

ಜನ್ಮಗಳಲ್ಲಿ ಅನೇಕಾನೇಕ ಪುಣ್ಯಕಾರ್ಯಗಳನ್ನು ಮಾಡಿರುವ ಈ ಬಾಲಕರು ಆ ದೇವೋತ್ತಮ ಪರಮ ಪುರುಷನೊಂದಿಗೆ ಆಟವಾಡುತ್ತಿದ್ದಾರೆ." (ಶ್ರೀಮದ್ಭಾಗವತ 10.12.11).

ವಾಸ್ತವಾಂಶವೆಂದರೆ ಭಕ್ತನಿಗೆ ವಿಶ್ವರೂಪವನ್ನು ನೋಡುವ ಆಸಕ್ತಿಯಿಲ್ಲ. ಆದರೆ ಕೃಷ್ಣನು ಕೇವಲ ವಿಚಾರ ಸರಣಿಯಲ್ಲಿ ಅಥವಾ ತಾತ್ವಿಕವಾಗಿ ತಾನು ಪರಮನೆಂದು ಹೇಳಿಕೊಳ್ಳಲಿಲ್ಲ; ವಾಸ್ತವವಾಗಿಯೇ ಆ ರೀತಿ ಅರ್ಜುನನಿಗೆ ಕಾಣಿಸಿಕೊಂಡ. ಇದನ್ನು ಭವಿಷ್ಯದ ಜನರು ಅರ್ಥಮಾಡಿಕೊಳ್ಳಬೇಕು; ಆ ಮೂಲಕ ಕೃಷ್ಣನ ಹೇಳಿಕೆಗಳಿಗೆ ಸಮರ್ಥನೆ ಬರಬೇಕು ಎಂದು ಅರ್ಜುನನು ಬಯಸಿದನು. ಅರ್ಜುನನು ಇದನ್ನು ದೃಢಪಡಿಸಿಕೊಳ್ಳಬೇಕು. ಏಕೆಂದರೆ ಅರ್ಜುನನು ಪರಂಪರಾ ಪದ್ಧತಿಯ ಪ್ರಾರಂಭ. ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಅರ್ಥಮಾಡಿಕೊಳ್ಳಬೇಕೆಂದು ನಿಜವಾಗಿ ಆಸಕ್ತಿ ಇದ್ದು ಅರ್ಜುನನ ಹೆಜ್ಜೆಗಳಲ್ಲಿಯೇ ಹೆಜ್ಜೆಯಿಟ್ಟು ಅನುಸರಿಸುವವರು ಇದನ್ನು ಅರ್ಥಮಾಡಿಕೊಳ್ಳಬೇಕು. ಕೃಷ್ಣನು ವಾದದಲ್ಲಿ ಮಾತ್ರವೇ ತನ್ನನ್ನು ಪರಮನೆಂದು ಹೇಳಿಕೊಳ್ಳಲಿಲ್ಲ; ನಿಜವಾಗಿ ತನ್ನನ್ನು ಪರಮನೆಂದು ತೋರಿಸಿಕೊಂಡನು.

ನಾವು ಆಗಲೇ ವಿವರಿಸಿರುವಂತೆ ಅರ್ಜುನನಿಗೆ ವಿಶ್ವರೂಪವನ್ನು ನೋಡಬೇಕೆಂದು ಅಷ್ಟೇನೂ ಅಪೇಕ್ಷೆ ಇರಲಿಲ್ಲ. ಇದು ಕೃಷ್ಣನಿಗೆ ತಿಳಿದಿತ್ತು; ಇದಕ್ಕಾಗಿ ಪ್ರಭುವು ತನ್ನ ವಿಶ್ವರೂಪವನ್ನು ನೋಡಲು ಅಗತ್ಯವಾದ ಶಕ್ತಿಯನ್ನು ಅರ್ಜುನನಿಗೆ ನೀಡಿದನು.

## ಶ್ಲೋಕ - 9

**ಸಂಜಯ ಉವಾಚ**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ |**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ||೯||**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಏವಮ್**—ಹೀಗೆ; **ಉಕ್ತ್ವಾ**—ಹೇಳಿ; **ತತಃ**—ಅನಂತರ; **ರಾಜನ್**—ದೊರೆಯೇ; **ಮಹಾ ಯೋಗ ಈಶ್ವರಃ**—ಅತ್ಯಂತ ಶಕ್ತಿಶಾಲಿ ಯೋಗಿಯಾದ; **ಹರಿಃ**—ದೇವೋತ್ತಮ ಪರಮ ಪುರುಷನಾದ ಕೃಷ್ಣನು; **ದರ್ಶಯಾಮ್ ಆಸ**—ತೋರಿಸಿದನು; **ಪಾರ್ಥಾಯ**—ಅರ್ಜುನನಿಗೆ; **ಪರಮಮ್**—ದಿವ್ಯವಾದ; **ರೂಪಮ್ ಐಶ್ವರಮ್**—ವಿಶ್ವರೂಪವನ್ನು.

## ಅನುವಾದ

**ಸಂಜಯನು ಹೇಳಿದನು — ರಾಜನೆ! ಮಹಾ ಯೋಗೀಶ್ವರನು, ದೇವೋತ್ತಮ ಪುರುಷನು, ಹೀಗೆ ಹೇಳಿ ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿದನು.**

## ಶ್ಲೋಕ 10-11

**ಅನೇಕವಕ್ತ್ರನಯನಮನೇಕಾದ್‌ಭುತದರ್ಶನಮ್ |**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ||೧೦||**

ದಿವ್ಯಮಾಲ್ಯಾಮ್ಬರಧರಂ ದಿವ್ಯಗಂಧಾನುಲೇಪನಮ್ ।
ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥೧೧॥

**ಅನೇಕ**—ನಾನಾ; **ವಕ್ತ್ರ**—ಮುಖಗಳು; **ನಯನಮ್**—ಕಣ್ಣುಗಳುಳ್ಳವನನ್ನು; **ಅನೇಕ**—ವಿವಿಧ; **ಅದ್ಭುತ**—ಆಶ್ಚರ್ಯಕರವಾದ; **ದರ್ಶನಮ್**—ನೋಟಗಳುಳ್ಳವನನ್ನು; **ಅನೇಕ**—ಹಲವು; **ದಿವ್ಯ**—ದಿವ್ಯವಾದ; **ಆಭರಣಮ್**—ಒಡವೆಗಳುಳ್ಳವನನ್ನು; **ದಿವ್ಯ**—ದಿವ್ಯವಾದ; **ಅನೇಕ**—ಅನೇಕ; **ಉದ್ಯತ**—ಮೇಲೆತ್ತಿದ; **ಆಯುಧಮ್**—ಆಯುಧಗಳುಳ್ಳವನನ್ನು; **ದಿವ್ಯ**—ದಿವ್ಯವಾದ; **ಮಾಲ್ಯ**—ಹಾರಗಳು; **ಅಮ್ಬರ**—ವಸ್ತ್ರಗಳನ್ನು; **ಧರಮ್**—ಧರಿಸಿದವನನ್ನು; **ದಿವ್ಯ**—ದಿವ್ಯವಾದ; **ಗಂಧ**—ಸುಗಂಧಗಳ; **ಅನುಲೇಪನಮ್**—ಹಚ್ಚಿಕೊಂಡವನನ್ನು; **ಸರ್ವ**—ಎಲ್ಲ; **ಆಶ್ಚರ್ಯಮಯಮ್**—ಆಶ್ಚರ್ಯಪೂರ್ಣನನ್ನು; **ದೇವಮ್**—ಕಾಂತಿಯುತನನ್ನು; **ಅನನ್ತಮ್**—ಅಪರಿಮಿತನನ್ನು; **ವಿಶ್ವತಃ ಮುಖಮ್**—ಸರ್ವವ್ಯಾಪ್ತನನ್ನು.

## ಅನುವಾದ

**ಅರ್ಜುನನು ಆ ವಿಶ್ವರೂಪದಲ್ಲಿ ಅಸಂಖ್ಯಾತವಾದ ಬಾಯಿಗಳನ್ನೂ, ಅಸಂಖ್ಯಾತವಾದ ಕಣ್ಣುಗಳನ್ನೂ, ಅಸಂಖ್ಯಾತವಾದ ಅದ್ಭುತ ದರ್ಶನಗಳನ್ನೂ ಕಂಡನು. ಆತನು ದಿವ್ಯಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿದ್ದನು. ಹಲವು ದಿವ್ಯ ಗಂಧಗಳನ್ನು ಲೇಪಿಸಿಕೊಂಡಿದ್ದನು. ಎಲ್ಲವೂ ಆಶ್ಚರ್ಯಮಯವಾಗಿದ್ದಿತು, ಉಜ್ವಲವಾಗಿದ್ದಿತು, ಅನಂತವಾಗಿತ್ತು, ವಿಶ್ವತೋ ಮುಖವಾಗಿತ್ತು.**

## ಭಾವಾರ್ಥ

ಈ ಎರಡು ಶ್ಲೋಕಗಳಲ್ಲಿ ಅನೇಕ ಎನ್ನುವ ಪದವನ್ನು ಮತ್ತೆಮತ್ತೆ ಬಳಸಿರುವುದು ಅರ್ಜುನನು ನೋಡುತ್ತಿದ್ದ ಕೈಗಳು, ಬಾಯಿಗಳು, ಕಾಲುಗಳು ಮತ್ತು ಇತರ ಅಭಿವ್ಯಕ್ತಿಗಳ ಸಂಖ್ಯೆಗೆ ಮಿತಿಯೇ ಇರಲಿಲ್ಲ ಎನ್ನುವುದನ್ನು ತೋರಿಸುತ್ತದೆ. ಒಂದು ಸ್ಥಳದಲ್ಲಿ ಕುಳಿತು ಅವೆಲ್ಲವನ್ನೂ ನೋಡಲು ಅರ್ಜುನನಿಗೆ ಸಾಧ್ಯವಾಯಿತು. ಇದು ಕೃಷ್ಣನ ಕಲ್ಪನಾತೀತ ಶಕ್ತಿಯಿಂದ ಸಾಧ್ಯವಾಯಿತು.

## ಶ್ಲೋಕ - 12

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ ಭಾಸಸ್ತಸ್ಯ ಮಹಾತ್ಮನಃ ॥೧೨॥

**ದಿವಿ**—ಆಕಾಶದಲ್ಲಿ; **ಸೂರ್ಯ**—ಸೂರ್ಯರ; **ಸಹಸ್ರಸ್ಯ**—ಅನೇಕ ಸಹಸ್ರರು; **ಭವೇತ್**—ಆದರೆ; **ಯುಗಪತ್**—ಏಕಕಾಲದಲ್ಲಿ; **ಉತ್ಥಿತಾ**—ಉದಯಿಸಿದ್ದೇ; **ಯದಿ**—ಆದರೆ; **ಭಾಃ**—ಪ್ರಕಾಶವು; **ಸದೃಶೀ**—ಅದರಂತೆ; **ಸಾ**—ಅದು; **ಸ್ಯಾತ್**—ಇರಬಹುದು; **ಭಾಸಃ**—ಜ್ಯೋತಿಯು; **ತಸ್ಯ**—ಆ; **ಮಹಾ ಆತ್ಮನಃ**—ಪರಮ ಪ್ರಭುವಿನ.

### ಅನುವಾದ

**ಲಕ್ಷಾಂತರ ಸೂರ್ಯರು ಒಟ್ಟಿಗೆ ಆಕಾಶದಲ್ಲಿ ಉದಿಸಿದ್ದರೆ ಅವರ ಪ್ರಭೆಯು ಆ ವಿಶ್ವರೂಪದಲ್ಲಿದ್ದ ಪರಮ ಪುರುಷನ ತೇಜಸ್ಸನ್ನು ಹೋಲಬಹುದಾಗಿತ್ತು.**

### ಭಾವಾರ್ಥ

ಅರ್ಜುನನು ಕಂಡದ್ದು ವರ್ಣನೆಗೆ ನಿಲುಕದ್ದು. ಆದರೂ ಸಂಜಯನು ಧೃತರಾಷ್ಟ್ರನಿಗೆ ಆ ಮಹಾರೂಪದ ಒಂದು ಮಾನಸಿಕ ಚಿತ್ರವನ್ನು ಕೊಡಲು ಪ್ರಯತ್ನಿಸುತ್ತಾನೆ. ಸಂಜಯನಾಗಲೀ ಧೃತರಾಷ್ಟ್ರನಾಗಲೀ ಅಲ್ಲಿರಲಿಲ್ಲ. ಆದರೆ ವ್ಯಾಸರ ಕೃಪೆಯಿಂದ ಸಂಜಯನಿಗೆ ಅಲ್ಲಿ ನಡೆದದ್ದೆಲ್ಲವನ್ನೂ ಕಾಣಲು ಸಾಧ್ಯವಾಯಿತು. ಹೀಗೆ ಅವನು ಅದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾದ ಮಟ್ಟಿಗೂ ಆ ಸನ್ನಿವೇಶವನ್ನು ಕಲ್ಪಿಸಿಕೊಳ್ಳಬಹುದಾದ ಒಂದು ಘಟನೆಗೆ (ಎಂದರೆ ಸಹಸ್ರಾರು ಸೂರ್ಯರಿಗೆ) ಹೋಲಿಸುತ್ತಾನೆ.

## ಶ್ಲೋಕ - 13

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ |**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ||೧೩||**

**ತತ್ರ**—ಅಲ್ಲಿ; **ಏಕಸ್ಥಮ್**—ಒಂದೇ ಸ್ಥಳದಲ್ಲಿ; **ಜಗತ್**—ವಿಶ್ವವನ್ನು; **ಕೃತ್ಸ್ನಮ್**—ಸಂಪೂರ್ಣ; **ಪ್ರವಿಭಕ್ತಮ್**—ವಿಭಜಿತವಾಗಿರುವ; **ಅನೇಕಧಾ**—ಅನೇಕವಾಗಿ; **ಅಪಶ್ಯತ್**—ನೋಡಿದನು; **ದೇವದೇವಸ್ಯ**—ದೇವೋತ್ತಮ ಪರಮ ಪುರುಷನ; **ಶರೀರೇ**—ವಿಶ್ವರೂಪದಲ್ಲಿ; **ಪಾಣ್ಡವಃ**—ಅರ್ಜುನನು; **ತದಾ**—ಆಗ.

### ಅನುವಾದ

**ಪ್ರಭುವಿನ ವಿಶ್ವರೂಪದಲ್ಲಿ ಸಹಸ್ರ ಸಹಸ್ರ ಭಾಗಗಳಿದ್ದರೂ ವಿಶ್ವದ ಅಮಿತ ವಿಸ್ತರಣಗಳು ಒಂದೇ ಸ್ಥಳದಲ್ಲಿರುವುದನ್ನು ಅರ್ಜುನನು ನೋಡಿದನು.**

### ಭಾವಾರ್ಥ

**ತತ್ರ** (ಅಲ್ಲಿ) ಎನ್ನುವ ಪದವು ಬಹು ಮುಖ್ಯವಾದದ್ದು. ಅರ್ಜುನನು ವಿಶ್ವರೂಪವನ್ನು ನೋಡಿದಾಗ ಅರ್ಜುನನೂ ಕೃಷ್ಣನೂ ರಥದಲ್ಲಿ ಕುಳಿತಿದ್ದರು ಎನ್ನುವುದನ್ನು ಇದು ತೋರಿಸುತ್ತದೆ. ರಣರಂಗದಲ್ಲಿದ್ದ ಇತರರಿಗೆ ಈ ರೂಪವು ಕಾಣಿಸಲಿಲ್ಲ. ಏಕೆಂದರೆ ಕೃಷ್ಣನು ಈ ದೃಷ್ಟಿಯನ್ನು ಅರ್ಜುನನಿಗೆ ಮಾತ್ರ ಕೊಟ್ಟನು. ಅರ್ಜುನನು ಕೃಷ್ಣನ ದೇಹದಲ್ಲಿ ಸಹಸ್ರಾರು ಲೋಕಗಳನ್ನು ಕಂಡನು. ವೇದಗಳ ಪವಿತ್ರ ಗ್ರಂಥಗಳಿಂದ ನಾವು ತಿಳಿಯುವಂತೆ ಹಲವಾರು ವಿಶ್ವಗಳೂ ಹಲವಾರು ಲೋಕಗಳೂ ಇವೆ. ಅವುಗಳಲ್ಲಿ ಕೆಲವನ್ನು ಮಣ್ಣಿನಿಂದ ಮಾಡಿದೆ, ಕೆಲವನ್ನು ಚಿನ್ನದಿಂದ ಮಾಡಿದೆ. ಕೆಲವನ್ನು ಆಭರಣದಿಂದ ಮಾಡಿದೆ. ಕೆಲವು ಬಹು ದೊಡ್ಡವು; ಕೆಲವು ಅಷ್ಟು

ದೊಡ್ಡವಲ್ಲ ಇತ್ಯಾದಿ. ತನ್ನ ರಥದಲ್ಲಿ ಕುಳಿತು ಅರ್ಜುನನು ಇವೆಲ್ಲವನ್ನೂ ಕಂಡನು. ಆದರೆ ಅರ್ಜುನ ಮತ್ತು ಕೃಷ್ಣರ ನಡುವೆ ಏನಾಗುತ್ತಿತ್ತು ಎಂದು ಯಾರಿಗೂ ತಿಳಿಯಲಿಲ್ಲ.

## ಶ್ಲೋಕ - 14

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಞ್ಜಯಃ |**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ||೧೪||**

**ತತಃ**—ಅನಂತರ; **ಸಃ**—ಆ; **ವಿಸ್ಮಯ ಆವಿಷ್ಟಃ**—ಆಶ್ಚರ್ಯದಿಂದ ದಿಗ್ಭ್ರಾಂತನಾಗಿ; **ಹೃಷ್ಟ ರೋಮಾ**—ಭಾವೋದ್ರೇಕದಿಂದ ರೋಮಾಂಚನಗೊಂಡು; **ಧನಞ್ಜಯಃ**—ಅರ್ಜುನನು; **ಪ್ರಣಮ್ಯ**—ನಮಸ್ಕರಿಸಿ; **ಶಿರಸಾ**—ತಲೆಯಿಂದ; **ದೇವಮ್**—ದೇವೋತ್ತಮ ಪರಮ ಪುರುಷನಿಗೆ; **ಕೃತ ಅಂಜಲಿಃ**—ಕೈ ಮುಗಿದು; **ಅಭಾಷತ**—ಹೇಳ ತೊಡಗಿದನು.

## ಅನುವಾದ

**ಅನಂತರ ದಿಗ್ಭ್ರಮೆಯಿಂದ, ಆಶ್ಚರ್ಯದಿಂದ, ರೋಮಾಂಚನಗೊಂಡ ಅರ್ಜುನನು ತಲೆಬಾಗಿ ಪ್ರಣಾಮ ಮಾಡಿ, ಕೈಗಳನ್ನು ಮುಗಿದುಕೊಂಡು ಪರಮ ಪ್ರಭುವಿಗೆ ಪ್ರಾರ್ಥನೆಯನ್ನು ಮಾಡಲು ಪ್ರಾರಂಭಿಸಿದನು.**

## ಭಾವಾರ್ಥ

ದೈವೀದೃಶ್ಯವು ಒಮ್ಮೆ ಪ್ರಕಟವಾಗುತ್ತಲೇ ಕೃಷ್ಣ ಮತ್ತು ಅರ್ಜುನರ ಸಂಬಂಧವು ಬದಲಾಗುತ್ತದೆ. ಈವರೆಗೆ ಕೃಷ್ಣ ಮತ್ತು ಅರ್ಜುನರ ಬಾಂಧವ್ಯಕ್ಕೆ ಸ್ನೇಹವು ಆಧಾರವಾಗಿತ್ತು. ದರ್ಶನದನಂತರ ಇಲ್ಲಿ ಅರ್ಜುನನು ಬಹು ಗೌರವದಿಂದ ಪ್ರಣಾಮ ಮಾಡುತ್ತಿದ್ದಾನೆ ಮತ್ತು ಕೈಗಳನ್ನು ಮುಗಿದುಕೊಂಡು ಕೃಷ್ಣನಿಗೆ ಪ್ರಾರ್ಥನೆ ಮಾಡುತ್ತಿದ್ದಾನೆ. ಅವನು ವಿಶ್ವರೂಪವನ್ನು ಹೊಗಳುತ್ತಿದ್ದಾನೆ. ಹೀಗೆ ಅರ್ಜುನನ ಬಾಂಧವ್ಯವು ಸ್ನೇಹದ ಬಾಂಧವ್ಯಕ್ಕಿಂತ ಹೆಚ್ಚಾಗಿ ಬೆರಗಿನ ಬಾಂಧವ್ಯವಾಗುತ್ತದೆ. ಮಹಾನ್‌ಭಕ್ತರು ಕೃಷ್ಣನನ್ನು ಎಲ್ಲ ಬಾಂಧವ್ಯಗಳ ಭಂಡಾರವಾಗಿ ಕಾಣುತ್ತಾರೆ. ಧರ್ಮಗ್ರಂಥಗಳಲ್ಲಿ ಹನ್ನೆರಡು ಬಗೆಯ ಬಾಂಧವ್ಯಗಳನ್ನು ಪ್ರಸ್ತಾಪಿಸಿದೆ. ಅವೆಲ್ಲ ಕೃಷ್ಣನಲ್ಲಿವೆ. ಅವನು ಎರಡು ಜೀವಿಗಳ ನಡುವೆ, ದೇವತೆಗಳ ನಡುವೆ ಅಥವಾ ಪರಮ ಪ್ರಭು ಮತ್ತು ಅವನ ಭಕ್ತರ ನಡುವೆ ವಿನಿಮಯವಾಗುವ ಎಲ್ಲ ಬಾಂಧವ್ಯಗಳ ಸಾಗರ ಎಂದು ಹೇಳಲಾಗಿದೆ.

ಇಲ್ಲಿ ಅರ್ಜುನನಿಗೆ ಬೆರಗಿನ ಬಾಂಧವ್ಯವು ಸ್ಫೂರ್ತಿಯನ್ನು ಕೊಟ್ಟಿತು. ಅವನು ಸಮಾಧಾನವಾದ, ಶಾಂತವಾದ ಮತ್ತು ನಿರುದ್ವಿಗ್ನವಾದ ಸ್ವಭಾವದವನು; ಆದರೂ ಇಲ್ಲಿ ತನ್ನ ಬೆರಗಿನಲ್ಲಿ ಅವನಿಗೆ ಹರ್ಷೋನ್ಮಾದವಾಯಿತು; ಅವನ ಕೂದಲು ನಿಮಿರಿತು ಮತ್ತು ಕೈಗಳನ್ನು ಮುಗಿದುಕೊಂಡು ಪರಮ ಪ್ರಭುವಿಗೆ ಪ್ರಣಾಮ ಮಾಡಲು ಪ್ರಾರಂಭಿಸಿದ. ಅವನಿಗೆ ಹೆದರಿಕೆಯಾಗಲಿಲ್ಲ. ಪರಮ ಪ್ರಭುವಿನ ಅದ್ಭುತಗಳು ಅವನ ಮೇಲೆ ಪರಿಣಾಮ ಮಾಡಿದವು. ತಕ್ಷಣದ ಸಂದರ್ಭ ಬೆರಗು. ಅವನ ಸಹಜವಾದ ಪ್ರೇಮಪೂರ್ವಕ ಸ್ನೇಹವು ಬೆರಗಿನಿಂದ ದುರ್ಬಲವಾಯಿತು; ಅವನು ಈ ರೀತಿಯಲ್ಲಿ ಪ್ರತಿಕ್ರಿಯೆ ತೋರಿದನು.

### ಶ್ಲೋಕ - 15

**ಅರ್ಜುನ ಉವಾಚ**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಮ್**
**ಋಷೀಂಶ್ಚ ಸರ್ವಾನುರುಗಾಂಶ್ಚ ದಿವ್ಯಾನ್ ॥೧೫॥**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಪಶ್ಯಾಮಿ**—ನೋಡುತ್ತೇನೆ; **ದೇವಾನ್**—ಎಲ್ಲಾ ದೇವತೆಗಳನ್ನೂ; **ತವ**—ನಿನ್ನ; **ದೇವ**—ಪ್ರಭುವೇ; **ದೇಹೇ**—ಶರೀರದಲ್ಲಿ; **ಸರ್ವಾನ್**—ಎಲ್ಲ; **ತಥಾ**—ಕೂಡ; **ಭೂತ**—ಜೀವಿಗಳನ್ನು; **ವಿಶೇಷ ಸಂಘಾನ್**—ವಿಶೇಷವಾಗಿ ಸೇರಿದ; **ಬ್ರಹ್ಮಾಣಮ್**—ಬ್ರಹ್ಮನನ್ನು; **ಈಶಮ್**—ಶಿವನನ್ನು; **ಕಮಲಾಸನಸ್ಥಮ್**—ಕಮಲ ಪುಷ್ಪದ ಮೇಲೆ ಕುಳಿತ; **ಋಷೀನ್**—ಮಹರ್ಷಿಗಳನ್ನು; **ಚ**—ಕೂಡ; **ಸರ್ವಾನ್**—ಎಲ್ಲ; **ಉರಗಾನ್**—ಸರ್ಪಗಳನ್ನೂ; **ಚ**—ಸಹಾ; **ದಿವ್ಯಾನ್**—ದಿವ್ಯವಾದ.

### ಅನುವಾದ

**ಅರ್ಜುನನು ಹೀಗೆ ಹೇಳಿದನು — ಪ್ರೀತಿಯ ಪ್ರಭು ಶ್ರೀಕೃಷ್ಣನೇ! ಎಲ್ಲ ದೇವತೆಗಳು ಮತ್ತು ಇತರ ಹಲವಾರು ಜೀವಿಗಳು ನಿನ್ನ ದೇಹದಲ್ಲಿ ಸೇರಿರುವುದನ್ನು ಕಾಣುತ್ತಿದ್ದೇನೆ. ಬ್ರಹ್ಮನು ಕಮಲದ ಮೇಲೆ ಕುಳಿತಿರುವುದನ್ನು, ಶಿವ ಮತ್ತು ಎಲ್ಲ ಋಷಿಗಳನ್ನು ಮತ್ತು ದಿವ್ಯ ಸರ್ಪಗಳನ್ನು ಕಾಣುತ್ತಿದ್ದೇನೆ.**

### ಭಾವಾರ್ಥ

ಅರ್ಜುನನು ವಿಶ್ವದಲ್ಲಿ ಇರುವುದೆಲ್ಲವನ್ನೂ ಕಾಣುತ್ತಾನೆ; ಆದುದರಿಂದ ವಿಶ್ವದ ಪ್ರಥಮ ಜೀವಿಯಾದ ಬ್ರಹ್ಮನನ್ನೂ, ವಿಶ್ವದ ಅಧೋಪ್ರದೇಶದಲ್ಲಿ ಗರ್ಭೋದಕಶಾಯಿ ವಿಷ್ಣುವಿಗೆ ಹಾಸಿಗೆಯಾಗಿರುವ ದಿವ್ಯಸರ್ಪವನ್ನೂ ಕಾಣುತ್ತಾನೆ. ಈ ಸರ್ಪಶಯ್ಯೆಗೆ ವಾಸುಕಿ ಎಂದು ಹೆಸರು. ವಾಸುಕಿ ಎನ್ನುವ ಹೆಸರಿನ ಇತರ ಸರ್ಪಗಳೂ ಉಂಟು. ಗರ್ಭೋದಕಶಾಯಿ ವಿಷ್ಣುವಿನಿಂದ ವಿಶ್ವದ ಅತ್ಯುಚ್ಚಭಾಗವಾದ ಬ್ರಹ್ಮ ಲೋಕದವರೆಗೆ ಅರ್ಜುನನು ಕಾಣಬಲ್ಲನು. ಹೀಗೆಂದರೆ ತನ್ನ ರಥದಲ್ಲಿ ಒಂದು ಸ್ಥಳದಲ್ಲಿ ಕುಳಿತಿರುವ ಅರ್ಜುನನು ಆದಿಯಿಂದ ಅಂತ್ಯದವರೆಗೆ ಎಲ್ಲವನ್ನೂ ಕಾಣಲು ಸಾಧ್ಯವಾಗಿತ್ತು. ಇದು ಸಾಧ್ಯವಾದದ್ದು ಪರಮ ಪ್ರಭುವಾದ ಕೃಷ್ಣನ ಕೃಪೆಯಿಂದ.

### ಶ್ಲೋಕ - 16

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನನ್ತರೂಪಮ್ ।**

**ನಾಂತಂ ನ ಮಧ್ಯಂ ನ ಪುನಸ್ತವಾದಿಮ್**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥**

**ಅನೇಕ**—ಹಲವು; **ಬಾಹು**—ತೋಳುಗಳು; **ಉದರ**—ಹೊಟ್ಟೆಗಳು; **ವಕ್ತ್ರ**—ಮುಖಗಳು; **ನೇತ್ರಮ್**—ಕಣ್ಣುಗಳುಳ್ಳ; **ಪಶ್ಯಾಮಿ**—ನೋಡುತ್ತೇನೆ; **ತ್ವಾಮ್**—ನಿನ್ನನ್ನು; **ಸರ್ವತಃ**—ಎಲ್ಲ ಕಡೆಗಳಲ್ಲಿ; **ಅನಂತ ರೂಪಮ್**—ಅಪರಿಮಿತ ರೂಪವುಳ್ಳ; **ನ ಅನ್ತಮ್**—ಅಂತ್ಯವಿಲ್ಲ; **ನ ಮಧ್ಯಮ್**—ಮಧ್ಯವಿಲ್ಲ; **ನ ಪುನಃ**—ಮತ್ತೆ ಇಲ್ಲ; **ತವ**—ನಿನಗೆ; **ಆದಿಮ್**—ಪ್ರಾರಂಭವೂ; **ಪಶ್ಯಾಮಿ**—ನೋಡುತ್ತೇನೆ; **ವಿಶ್ವೇಶ್ವರ**—ವಿಶ್ವದ ಪ್ರಭುವೇ; **ವಿಶ್ವರೂಪ**—ವಿಶ್ವರೂಪನೇ.

## ಅನುವಾದ

**ವಿಶ್ವೇಶ್ವರನೆ, ವಿಶ್ವರೂಪನೆ, ನಿನ್ನ ದೇಹದಲ್ಲಿ ನಾನು ಎಲ್ಲೆಲ್ಲೂ ಅಮಿತವಾಗಿ ವಿಸ್ತಾರಗೊಂಡ ಅನೇಕಾನೇಕ ತೋಳುಗಳನ್ನೂ, ಉದರಗಳನ್ನೂ, ಬಾಯಿಗಳನ್ನೂ ಮತ್ತು ಕಣ್ಣುಗಳನ್ನೂ ಕಾಣುತ್ತಿದ್ದೇನೆ. ನಿನ್ನಲ್ಲಿ ಆದಿಯನ್ನಾಗಲಿ, ಮಧ್ಯವನ್ನಾಗಲಿ ಮತ್ತು ಅಂತ್ಯವನ್ನಾಗಲಿ ಕಾಣಲಾರೆನು.**

## ಭಾವಾರ್ಥ

ಕೃಷ್ಣನು ದೇವೋತ್ತಮ ಪರಮ ಪುರುಷ ಮತ್ತು ಅಮಿತನಾದವನು; ಅದುದರಿಂದ ಅವನ ಮೂಲಕ ಎಲ್ಲವನ್ನೂ ಕಾಣಲು ಸಾಧ್ಯವಾಯಿತು.

## ಶ್ಲೋಕ - 17

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮನ್ತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮನ್ತಾದ್**
**ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥೧೭॥**

**ಕಿರೀಟಿನಮ್**—ಕಿರೀಟಗಳೊಂದಿಗೆ; **ಗದಿನಮ್**—ಗದೆಗಳೊಂದಿಗೆ; **ಚಕ್ರಿಣಮ್**—ಚಕ್ರಗಳೊಡನೆ; **ಚ**—ಮತ್ತು; **ತೇಜಃ ರಾಶಿಮ್**—ತೇಜೋರಾಶಿಯಾದ; **ಸರ್ವತಃ**—ಎಲ್ಲಾ ಕಡೆಗಳಲ್ಲಿಯೂ; **ದೀಪ್ತಿ ಮನ್ತಮ್**—ಪ್ರಕಾಶಿಸುತ್ತಿರುವ; **ಪಶ್ಯಾಮಿ**—ನೋಡುತ್ತೇನೆ; **ತ್ವಾಮ್**—ನಿನ್ನನ್ನು; **ದುರ್ನಿರೀಕ್ಷ್ಯಮ್**—ನೋಡಲು ಕಷ್ಟಸಾಧ್ಯವಾದ; **ಸಮನ್ತಾತ್**—ಎಲ್ಲೆಡೆಗಳಲ್ಲೂ; **ದೀಪ್ತ ಅನಲ**—ಉರಿಯುವ ಅಗ್ನಿಯಾದ; **ಅರ್ಕ**—ಸೂರ್ಯನ; **ದ್ಯುತಿಮ್**—ಪ್ರಕಾಶವುಳ್ಳ; **ಅಪ್ರಮೇಯಮ್**—ಅಳೆಯಲಾಗದ.

## ಅನುವಾದ

**ನಿನ್ನ ರೂಪವನ್ನು ನೋಡುವುದು ಕಷ್ಟ. ಏಕೆಂದರೆ ನಿನ್ನ ರೂಪದ ಪ್ರಭೆಯು ಪ್ರಜ್ವಲಿಸುವ ಉರಿಯಂತೆ ಅಥವಾ ಅಳತೆಗೆ ಸಿಕ್ಕದ ಸೂರ್ಯಪ್ರಭೆಯಂತೆ ಸುತ್ತಲೂ ಹರಡಿದೆ. ಆದರೂ ನಾನು ಈ ಪ್ರಕಾಶಮಾನವಾದ ರೂಪವು ವಿವಿಧ ಕಿರೀಟಗಳಿಂದ, ಗದೆಗಳಿಂದ ಮತ್ತು ಚಕ್ರಗಳಿಂದ**

**ಅಲಂಕೃತವಾಗಿರುವುದನ್ನು ಎಲ್ಲೆಲ್ಲೂ ಕಾಣುತ್ತಿದ್ದೇನೆ.**

## ಶ್ಲೋಕ - 18

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥**

**ತ್ವಮ್**—ನೀನು; **ಅಕ್ಷರಮ್**—ಅಚ್ಯುತನು; **ಪರಮಮ್**—ಪರಮನು; **ವೇದಿತವ್ಯಮ್**—ತಿಳಿಯಲ್ಪಡಬೇಕಾದವನು; **ತ್ವಮ್**—ನೀನು; **ಅಸ್ಯ**—ಈ; **ವಿಶ್ವಸ್ಯ**—ವಿಶ್ವದ; **ಪರಮ್**—ಪರಮವಾದ; **ನಿಧಾನಮ್**—ಆಧಾರನು; **ತ್ವಮ್**—ನೀನು; **ಅವ್ಯಯಃ**—ಅವಿನಾಶಿಯು; **ಶಾಶ್ವತ ಧರ್ಮ ಗೋಪ್ತಾ**—ಶಾಶ್ವತವಾದ ಧರ್ಮದ ಪಾಲಕನು; **ಸನಾತನಃ**—ಶಾಶ್ವತನು; **ತ್ವಮ್**—ನೀನು; **ಪುರುಷಃ**—ಪರಮ ಪುರುಷನು; **ಮತಃ ಮೇ**—ಇದು ನನ್ನ ಅಭಿಪ್ರಾಯ.

## ಅನುವಾದ

**ನೀನು ಪರಮವಾದ ಆದಿಲಕ್ಷ್ಯವು. ನೀನು ಎಲ್ಲ ವಿಶ್ವದ ಕಟ್ಟಕಡೆಯ ವಿಶ್ರಾಂತಿ ತಾಣ. ನಿನಗೆ ಕ್ಷಯವೇ ಇಲ್ಲ ಮತ್ತು ನೀನು ಅತ್ಯಂತ ಪ್ರಾಚೀನನು. ನೀನು ಸನಾತನ ಧರ್ಮದ ಪಾಲಕನು; ದೇವೋತ್ತಮ ಪುರುಷನು. ಇದು ನನ್ನ ಅಭಿಪ್ರಾಯ.**

## ಶ್ಲೋಕ - 19

**ಅನಾದಿಮಧ್ಯಾಂತಮನನ್ತವೀರ್ಯಮ್**
**ಅನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಮ್**
**ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥೧೯॥**

**ಅನಾದಿ ಮಧ್ಯಾನ್ತಮ್**—ಆದಿ, ಮಧ್ಯ, ಅಂತ್ಯಗಳಿಲ್ಲದ; **ಅನಂತ**—ಅಪರಿಮಿತ; **ವೀರ್ಯಮ್**—ವೈಭವಗಳನ್ನುಳ್ಳ; **ಅನಂತ**—ಅಪರಿಮಿತವಾದ; **ಬಾಹುಮ್**—ತೋಳುಗಳುಳ್ಳ; **ಶಶಿ**—ಚಂದ್ರ; **ಸೂರ್ಯ**—ಮತ್ತು ಸೂರ್ಯರು; **ನೇತ್ರಮ್**—ಕಣ್ಣುಗಳಾಗಿರುವ; **ಪಶ್ಯಾಮಿ**—ನೋಡುತ್ತೇನೆ; **ತ್ವಾಮ್**—ನಿನ್ನನ್ನು; **ದೀಪ್ತ**—ಉರಿಯುತ್ತಿರುವ; **ಹುತಾಶ ವಕ್ತ್ರಮ್**—ಅಗ್ನಿ ಹೊರಹೊಮ್ಮುವ ಬಾಯಿಯುಳ್ಳವನು; **ಸ್ವ ತೇಜಸಾ**—ಸ್ವಂತ ಪ್ರಕಾಶದಿಂದ; **ವಿಶ್ವಮ್**—ವಿಶ್ವವನ್ನು; **ಇದಮ್**—ಈ; **ತಪನ್ತಮ್**—ಸುಡುತ್ತಿರುವವನು.

## ಅನುವಾದ

**ನಿನಗೆ ಆದಿ, ಮಧ್ಯ ಮತ್ತು ಅಂತ್ಯಗಳಿಲ್ಲ. ನಿನ್ನ ಮಹಿಮೆಗೆ ಮಿತಿಯಿಲ್ಲ. ನಿನಗೆ ಅಸಂಖ್ಯಾತ**

**ಬಾಹುಗಳಿವೆ. ಸೂರ್ಯ ಚಂದ್ರರು ನಿನ್ನ ಕಣ್ಣುಗಳು. ಪ್ರಜ್ವಲಿಸುವ ಉರಿಯು ನಿನ್ನ ಬಾಯಿಯಿಂದ ಹೊರಬರುತ್ತಿರುವುದನ್ನೂ ನಿನ್ನ ಪ್ರಕಾಶವು ಇಡೀ ವಿಶ್ವವನ್ನು ಸುಡುತ್ತಿರುವುದನ್ನು ಕಾಣುತ್ತಿದ್ದೇನೆ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನ ಆರು ಐಶ್ವರ್ಯಗಳಿಗೆ ಮಿತಿಯೇ ಇಲ್ಲ. ಇಲ್ಲಿ ಮತ್ತು ಹಲವು ಇತರ ಸ್ಥಳಗಳಲ್ಲಿ ಪುನರಾವೃತ್ತಿಯಿದೆ. ಆದರೆ ಧರ್ಮಗ್ರಂಥಗಳ ಪ್ರಕಾರ ಕೃಷ್ಣನ ಮಹಿಮೆಗಳ ಪುನರಾವೃತ್ತಿಯು ಸಾಹಿತ್ಯಕವಾಗಿ ದೌರ್ಬಲ್ಯವಲ್ಲ. ದಿಗ್ಭ್ರಮೆ ಅಥವಾ ಬೆರಗು ಅಥವಾ ಮಹತ್ತರವಾದ ಹರ್ಷೋನ್ಮಾದದ ಕಾಲದಲ್ಲಿ ಹೇಳಿಕೆಗಳು ಪುನರಾವೃತ್ತಿಯಾಗುತ್ತವೆ ಎಂದು ಹೇಳಲಾಗಿದೆ. ಇದು ದೋಷವಲ್ಲ.

## ಶ್ಲೋಕ - 20

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥**

**ದ್ಯೌ**—ಅಂತರಿಕ್ಷದಿಂದ; **ಆ ಪೃಥಿವ್ಯೋಃ**—ಭೂಮಿಯವರೆಗೆ; **ಇದಮ್**—ಈ; **ಅಂತರಮ್**—ನಡುವೆ; **ಹಿ**—ಖಂಡಿತವಾಗಿಯೂ; **ವ್ಯಾಪ್ತಮ್**—ವ್ಯಾಪಿಸಲ್ಪಟ್ಟಿವೆ; **ತ್ವಯಾ**—ನಿನ್ನಿಂದ; **ಏಕೇನ**—ಒಬ್ಬನಿಂದಲೇ; **ದಿಶಃ**—ದಿಕ್ಕುಗಳು; **ಚ**—ಮತ್ತು; **ಸರ್ವಾಃ**—ಎಲ್ಲ; **ದೃಷ್ಟ್ವಾ**—ನೋಡಿ; **ಅದ್ಭುತಮ್**—ಆಶ್ಚರ್ಯಕರವಾದ; **ರೂಪಮ್**—ರೂಪವನ್ನು; **ಉಗ್ರಮ್**—ಭೀಕರವಾದ; **ತವ**—ನಿನ್ನ; **ಇದಮ್**—ಈ; **ಲೋಕ**—ಲೋಕವ್ಯೂಹಗಳು; **ತ್ರಯಮ್**—ಮೂರು; **ಪ್ರವ್ಯಥಿತಮ್**—ಕ್ಷೋಭೆಗೊಂಡಿವೆ; **ಮಹಾ ಆತ್ಮನ್**—ಮಹಾತ್ಮನೇ.

## ಅನುವಾದ

**ನೀನು ಒಬ್ಬನೇ; ಆದರೂ ನೀನು ಆಕಾಶವನ್ನೂ ಎಲ್ಲ ಲೋಕಗಳನ್ನೂ ಅವುಗಳ ನಡುವಣ ಎಲ್ಲ ಸ್ಥಳವನ್ನೂ ವ್ಯಾಪಿಸಿದ್ದೀಯೆ. ಮಹಾತ್ಮನೆ, ಈ ಅದ್ಭುತವಾದ ಮತ್ತು ಉಗ್ರವಾದ ರೂಪವನ್ನು ಕಂಡು ಮೂರು ಲೋಕಗಳು ಭಯಗೊಂಡಿವೆ.**

## ಭಾವಾರ್ಥ

**ದ್ಯಾವಾ ಪೃಥಿವ್ಯೋಃ** (ಸ್ವರ್ಗ ಮತ್ತು ಭೂಮಿಗಳ ನಡುವಣ ಸ್ಥಳ) ಮತ್ತು **ಲೋಕತ್ರಯಮ್** (ಮೂರು ಲೋಕಗಳು) ಈ ಶ್ಲೋಕದಲ್ಲಿ ಮಹತ್ವದ ಶಬ್ದಗಳು. ಏಕೆಂದರೆ ಪ್ರಭುವಿನ ಈ ವಿಶ್ವರೂಪವನ್ನು ಅರ್ಜುನನು ಮಾತ್ರವಲ್ಲದೆ ಇತರ ಲೋಕವ್ಯೂಹಗಳಲ್ಲಿರುವವರು ನೋಡಿದರು ಎಂದು ಕಾಣುತ್ತದೆ. ಅರ್ಜುನನು ವಿಶ್ವರೂಪವನ್ನು ಕಂಡದ್ದು ಕನಸಾಗಿರಲಿಲ್ಲ. ಪ್ರಭುವು ಯಾರು ಯಾರಿಗೆ ದಿವ್ಯದೃಷ್ಟಿಯನ್ನು ಕರುಣಿಸಿದನೋ ಅವರೆಲ್ಲರೂ ರಣರಂಗದಲ್ಲಿನ ಈ

ವಿಶ್ವರೂಪವನ್ನು ಕಂಡರು.

## ಶ್ಲೋಕ - 21

**ಅಮೀ ಹಿ ತ್ವಾಂ ಸುರಸನ್ಘಾ ವಿಶನ್ತಿ**
**ಕೇಚಿದ್ ಭೀತಾಃ ಪ್ರಾಞ್ಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸನ್ಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥೨೧॥**

**ಅಮೀ**—ಈ ಎಲ್ಲ; **ಹಿ**—ಖಂಡಿತವಾಗಿಯೂ; **ತ್ವಾಮ್**—ನಿನ್ನನ್ನು; **ಸುರ ಸನ್ಘಾಃ**—ದೇವತೆಗಳ ಸಮೂಹಗಳು; **ವಿಶನ್ತಿ**—ಪ್ರವೇಶಿಸುತ್ತಾರೆ; **ಕೇಚಿತ್**—ಅವರಲ್ಲಿ ಕೆಲವರು; **ಭೀತಾಃ**—ಭಯದಿಂದ; **ಪ್ರಾಞ್ಜಲಯಃ**—ಕೈಮುಗಿದು; **ಗೃಣನ್ತಿ**—ಪ್ರಾರ್ಥಿಸುತ್ತಿದ್ದಾರೆ; **ಸ್ವಸ್ತಿ**—ಸಕಲ ಶಾಂತಿಯು; **ಇತಿ**—ಎಂದು; **ಉಕ್ತ್ವಾ**—ಹೇಳುತ್ತಾ; **ಮಹಾಋಷಿ**—ಮಹರ್ಷಿಗಳು; **ಸಿದ್ಧ ಸನ್ಘಾಃ**—ಸಿದ್ಧ ಪುರುಷರು; **ಸ್ತುವನ್ತಿ**—ಸ್ತುತಿಸುತ್ತಿರುವರು; **ತ್ವಾಮ್**—ನಿನ್ನನ್ನು; **ಸ್ತುತಿಭಿಃ**—ಸ್ತೋತ್ರಗಳಿಂದ; **ಪುಷ್ಕಲಾಭಿಃ**—ವೇದ ಮಂತ್ರಗಳಿಂದ.

### ಅನುವಾದ

**ದೇವತೆಗಳ ಸಮೂಹಗಳೆಲ್ಲ ನಿನ್ನ ಮುಂದೆ ಶರಣಾಗತವಾಗಿ ನಿನ್ನನ್ನೇ ಪ್ರವೇಶಿಸುತ್ತಿರುವುವು. ಅವರಲ್ಲಿ ಕೆಲವರು ಭಯಭೀತರಾಗಿ ಕೈಮುಗಿದುಕೊಂಡು ಪ್ರಾರ್ಥನೆ ಮಾಡುತ್ತಿದ್ದಾರೆ. ಮಹರ್ಷಿಗಳ ಮತ್ತು ಪರಿಪೂರ್ಣ ಸಿದ್ಧರ ಸಮೂಹಗಳು "ಸ್ವಸ್ತಿ, ಸ್ವಸ್ತಿ"! ಎಂದು ಹೇಳುತ್ತ ವೇದದ ಸ್ತುತಿಗಳನ್ನು ಹಾಡುತ್ತ ನಿನಗೆ ಪ್ರಾರ್ಥನೆ ಸಲ್ಲಿಸುತ್ತಿರುವರು.**

### ಭಾವಾರ್ಥ

ಎಲ್ಲ ಲೋಕವ್ಯೂಹಗಳ ದೇವತೆಗಳು ವಿಶ್ವರೂಪದ ಉಗ್ರ ಅಭಿವ್ಯಕ್ತಿಯಿಂದ ಮತ್ತು ಅದರ ಕಣ್ಣುಕೋರೈಸುವ ಪ್ರಭೆಯಿಂದ ಭಯಭೀತರಾಗಿದ್ದಾರೆ ಮತ್ತು ರಕ್ಷಿಸಬೇಕೆಂದು ಪ್ರಾರ್ಥಿಸುತ್ತಿದ್ದಾರೆ.

## ಶ್ಲೋಕ - 22

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗನ್ಧರ್ವಯಕ್ಷಾಸುರಸಿದ್ಧಸನ್ಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

**ರುದ್ರ**—ಶಿವನ ಅಭಿವ್ಯಕ್ತಿಗಳು; **ಆದಿತ್ಯಾಃ**—ಆದಿತ್ಯರು; **ವಸವಃ**—ವಸುಗಳು; **ಯೇ**—ಅವರೆಲ್ಲ; **ಚ**—ಮತ್ತು; **ಸಾಧ್ಯಾಃ**—ಸಾಧ್ಯರು; **ವಿಶ್ವೇ**—ವಿಶ್ವೇ ದೇವರು; **ಅಶ್ವಿನೌ**—ಅಶ್ವಿನೀ ಕುಮಾರರು; **ಮರುತಃ**—ಮರುತ್ತುಗಳು; **ಚ**—ಮತ್ತು; **ಉಷ್ಮಪಾಃ**—ಪಿತೃಗಳು; **ಚ**—ಮತ್ತು; **ಗನ್ಧರ್ವ**—

ಗಂಧರ್ವರು; **ಯಕ್ಷ**—ಯಕ್ಷರು; **ಅಸುರ**—ರಾಕ್ಷಸರು; **ಸಿದ್ಧ**—ಸಿದ್ಧ ಲೋಕದ ದೇವತೆಗಳ; **ಸನ್ಘಾಃ**—ಸಮೂಹಗಳು; **ವೀಕ್ಷನ್ತೇ**—ನೋಡುತ್ತಿದ್ದಾರೆ; **ತ್ವಾಮ್**—ನಿನ್ನನ್ನು; **ವಿಸ್ಮಿತಾಃ**—ಆಶ್ಚರ್ಯಗೊಂಡವರಾಗಿ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಸರ್ವೇ**—ಎಲ್ಲರೂ.

## ಅನುವಾದ

**ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಇಬ್ಬರು ಅಶ್ವಿನೀ ದೇವತೆಗಳು, ಮರುತರು, ಪಿತೃಗಳು, ಗಂಧರ್ವರು, ಯಕ್ಷರು, ಅಸುರರು ಮತ್ತು ಸಿದ್ಧ ದೇವತೆಗಳು ಬೆರಗಾಗಿ ನಿನ್ನನ್ನು ನೋಡುತ್ತಿದ್ದಾರೆ.**

## ಶ್ಲೋಕ - 23

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩॥**

**ರೂಪಮ್**—ರೂಪವನ್ನು; **ಮಹತ್**—ಬಹು ಉನ್ನತವಾದ; **ತೇ**—ನಿನ್ನ; **ಬಹು**—ಅನೇಕ; **ವಕ್ತ್ರ**—ಮುಖಗಳು; **ನೇತ್ರಮ್**—ಮತ್ತು ಕಣ್ಣುಗಳುಳ್ಳ; **ಮಹಾ ಬಾಹೋ**—ಮಹಾಬಾಹುವೇ; **ಬಹು**—ಹಲವು; **ಬಾಹು**—ತೋಳುಗಳು; **ಊರು**—ತೊಡೆಗಳು; **ಪಾದಮ್**—ಮತ್ತು ಕಾಲುಗಳುಳ್ಳ; **ಬಹು ಉದರಮ್**—ಅನೇಕ ಹೊಟ್ಟೆಗಳುಳ್ಳ; **ಬಹು ದಂಷ್ಟ್ರಾ**—ಅನೇಕ ಹಲ್ಲುಗಳಿಂದ; **ಕರಾಲಮ್**—ಭೀಕರವಾದ; **ದೃಷ್ಟ್ವಾ**—ನೋಡಿ; **ಲೋಕಾಃ**—ಎಲ್ಲ ಲೋಕಗಳು; **ಪ್ರವ್ಯಥಿತಾಃ**—ಕ್ಷೋಭೆಗೊಂಡಿವೆ; **ತಥಾ**—ಅದರಂತೆಯೇ; **ಅಹಮ್**—ನಾನೂ.

## ಅನುವಾದ

**ಎಲೈ ಮಹಾಬಾಹುವೆ, ಹಲವು ಮುಖಗಳನ್ನು, ಕಣ್ಣುಗಳನ್ನು, ಬಾಹುಗಳನ್ನು, ತೊಡೆಗಳನ್ನು, ಪಾದಗಳನ್ನು, ಉದರಗಳನ್ನು ಮತ್ತು ಕೋರೆದಾಡೆಗಳನ್ನು ಹೊಂದಿರುವ ನಿನ್ನ ಮಹಾನ್ ರೂಪವನ್ನು ಕಂಡು ದೇವತೆಗಳನ್ನೊಳಗೊಂಡಂತೆ ಅವರ ಲೋಕಗಳು ಭಯಗೊಂಡಿವೆ; ಅವರಂತೆ ನಾನೂ ಭಯಗೊಂಡಿದ್ದೇನೆ.**

## ಶ್ಲೋಕ - 24

**ನಭಃಸ್ಪೃಶಂ ದೀಪ್ತಮನೇಕವರ್ಣಮ್**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾನ್ತರಾತ್ಮಾ**
**ಧೃತಿಂ ನ ವಿನ್ದಾಮಿ ಶಮಂ ಚ ವಿಷ್ಣೋ ॥೨೪॥**

**ನಭಃ ಸ್ಪೃಶಮ್**—ಆಕಾಶವನ್ನು ಸ್ಪರ್ಶಿಸುವ; **ದೀಪ್ತಮ್**—ಹೊಳೆಯುವ; **ಅನೇಕ**—ಹಲವು;

**ವರ್ಣಮ್**—ಬಣ್ಣಗಳುಳ್ಳ; **ವ್ಯಾತ್ತ**—ತೆರೆದ; **ಆನನಮ್**—ಬಾಯಿಗಳುಳ್ಳ; **ದೀಪ್ತ**—ಪ್ರಕಾಶಿಸುವ; **ವಿಶಾಲ**—ಬಹು ದೊಡ್ಡ; **ನೇತ್ರಮ್**—ಕಣ್ಣುಗಳುಳ್ಳ; **ದೃಷ್ಟ್ವಾ**—ನೋಡಿ; **ಹಿ**—ಖಂಡಿತವಾಗಿಯೂ; **ತ್ವಾಮ್**—ನಿನ್ನನ್ನು; **ಪ್ರವ್ಯಥಿತ**—ಕ್ಷೋಭೆಗೊಂಡಿದೆ; **ಅನ್ತಃ**—ಒಳಗೆ; **ಆತ್ಮಾ**—ಆತ್ಮವು; **ಧೃತಿಮ್**—ಸ್ಥಿಮಿತವನ್ನು; **ನ ವಿನ್ದಾಮಿ**—ಹೊಂದುವುದಿಲ್ಲ; **ಶಮಮ್**—ಮಾನಸಿಕ ನೆಮ್ಮದಿಯನ್ನು; **ಚ**—ಕೂಡ; **ವಿಷ್ಣೋ**—ಪ್ರಭು ವಿಷ್ಣುವೇ.

## ಅನುವಾದ

**ಸರ್ವಾಂತರ್ಯಾಮಿಯಾದ ವಿಷ್ಣುವೆ! ಆಕಾಶವನ್ನು ಮುಟ್ಟುತ್ತಿರುವ ನಿನ್ನ ಅನೇಕ ಉಜ್ವಲ ವರ್ಣಗಳು, ತೆರೆದಿರುವ ನಿನ್ನ ಬಾಯಿಗಳು, ನಿನ್ನ ವಿಶಾಲವಾದ ಹೊಳೆಯುತ್ತಿರುವ ಕಣ್ಣುಗಳು, ಇವೆಲ್ಲವನ್ನು ಕಂಡು ನನ್ನ ಮನಸ್ಸು ಭಯದಿಂದ ತಲ್ಲಣಗೊಂಡಿದೆ. ನನ್ನ ಧೃತಿಯನ್ನಾಗಲಿ, ಸಮಚಿತ್ತವನ್ನಾಗಲಿ ಉಳಿಸಿಕೊಳ್ಳಲಾರೆ.**

## ಶ್ಲೋಕ - 25

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

**ದಂಷ್ಟ್ರಾ**—ಹಲ್ಲುಗಳಿಂದ; **ಕರಾಲಾನಿ**—ಭಯಂಕರವಾದ; **ಚ**—ಕೂಡ; **ತೇ**—ನಿನ್ನ; **ಮುಖಾನಿ**—ಮುಖಗಳನ್ನು; **ದೃಷ್ಟ್ವಾ**—ನೋಡುತ್ತಾ; **ಏವ**—ಹೀಗೆ; **ಕಾಲ ಅನಲ**—ಕಾಲಾಗ್ನಿಯೋ; **ಸನ್ನಿಭಾನಿ**—ಎನ್ನುವ ಹಾಗೆ; **ದಿಶಃ**—ದಿಕ್ಕುಗಳನ್ನು; **ನ ಜಾನೇ**—ತಿಳಿಯಲಾಗುತ್ತಿಲ್ಲ; **ನ ಲಭೇ**—ಪಡೆಯುತ್ತಿಲ್ಲ; **ಚ**—ಮತ್ತು; **ಶರ್ಮ**—ಅನುಗ್ರಹವನ್ನು; **ಪ್ರಸೀದ**—ಪ್ರಸನ್ನನಾಗು; **ದೇವ ಈಶ**—ದೇವ ದೇವನೇ; **ಜಗತ್ ನಿವಾಸ**—ಜಗತ್ತಿಗೆ ಆಶ್ರಯನಾದವನೇ.

## ಅನುವಾದ

**ಎಲ್ಲ ಪ್ರಭುಗಳ ಪ್ರಭುವೆ, ಎಲ್ಲ ಲೋಕಗಳ ಆಶ್ರಯನೆ, ನನ್ನಲ್ಲಿ ಕೃಪೆ ಮಾಡು. ನಿನ್ನ ಪ್ರಜ್ವಲಿಸುತ್ತಿರುವ ಮೃತ್ಯು ಸದೃಶ ಮುಖಗಳನ್ನೂ, ಭಯಂಕರವಾದ ಹಲ್ಲುಗಳನ್ನೂ ಕಂಡೂ ನಾನು ನನ್ನ ಸಮತೋಲನವನ್ನು ಉಳಿಸಿಕೊಳ್ಳಲಾರೆ. ಎಲ್ಲ ರೀತಿಯಲ್ಲೂ ನಾನು ದಿಗ್ಭ್ರಾಂತನಾಗಿದ್ದೇನೆ.**

## ಶ್ಲೋಕ 26-27

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲ ಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ ವಿಲಗ್ನಾ ದಶನಾನ್ತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾನ್ಗೈಃ ॥೨೭॥**

**ಅಮೀ**—ಈ; **ಚ**—ಕೂಡ; **ತ್ವಾಮ್**—ನಿನ್ನನ್ನು; **ಧೃತರಾಷ್ಟ್ರಸ್ಯ**—ಧೃತರಾಷ್ಟ್ರನ; **ಪುತ್ರಾಃ**—ಮಕ್ಕಳು; **ಸರ್ವೇ**—ಎಲ್ಲರೂ; **ಸಹ**—ಜೊತೆಗೆ; **ಏವ**—ನಿಜವಾಗಿ; **ಅವನಿಪಾಲ**—ಕ್ಷತ್ರಿಯ ದೊರೆಗಳ; **ಸಂಘೈಃ**—ಗುಂಪುಗಳ; **ಭೀಷ್ಮಃ**—ಭೀಷ್ಮದೇವ; **ದ್ರೋಣಃ**—ದ್ರೋಣಾಚಾರ್ಯ; **ಸೂತ ಪುತ್ರಃ**— ಕರ್ಣ; **ತಥಾ**—ಕೂಡ; **ಅಸೌ**—ಈ; **ಸಹ**—ಜೊತೆಗೆ; **ಅಸ್ಮದೀಯೈಃ**—ನಮ್ಮವರಾದ; **ಅಪಿ**—ಕೂಡ; **ಯೋಧ ಮುಖ್ಯೈಃ**—ಯೋಧರ ಮುಖಂಡರ; **ವಕ್ತ್ರಾಣಿ**—ಬಾಯಿಗಳನ್ನು; **ತೇ**—ನಿನ್ನ; **ತ್ವರಮಾಣಾಃ**—ಧಾವಿಸುತ್ತಾ; **ವಿಶಂತಿ**—ಪ್ರವೇಶಿಸುತ್ತಿದ್ದಾರೆ; **ದಂಷ್ಟ್ರಾ**—ಹಲ್ಲುಗಳಿಂದ; **ಕರಾಲಾನಿ**— ಕರಾಳವಾದ; **ಭಯಾನಕಾನಿ**—ಬಹಳ ಭೀಕರವಾದ; **ಕೇಚಿತ್**—ಅವರಲ್ಲಿ ಕೆಲವರು; **ವಿಲಗ್ನಾಃ**— ಸಿಕ್ಕಿಕೊಂಡು; **ದಶನ ಅನ್ತರೇಷು**—ಹಲ್ಲುಗಳ ನಡುವೆ; **ಸಂದೃಶ್ಯಂತೇ**—ಕಾಣುತ್ತಿದ್ದಾರೆ; **ಚೂರ್ಣಿತೈಃ**—ಜಜ್ಜಲ್ಪಟ್ಟವರಾಗಿ; **ಉತ್ತಮ ಅನ್ಗೈಃ**—ತಲೆಗಳಿಂದ.

## ಅನುವಾದ

**ಧೃತರಾಷ್ಟ್ರನ ಎಲ್ಲ ಪುತ್ರರೂ ಅವರ ಸ್ನೇಹಿತರಾದ ರಾಜರುಗಳೂ, ಭೀಷ್ಮ, ದ್ರೋಣ ಮತ್ತು ಕರ್ಣರೂ, ನಮ್ಮ ಮುಖ್ಯಯೋಧರೂ, ನಿನ್ನ ಭಯಂಕರ ಬಾಯಿಗಳನ್ನು ವೇಗವಾಗಿ ಪ್ರವೇಶಿಸುತ್ತಿದ್ದಾರೆ. ನಿನ್ನ ಹಲ್ಲಿನ ಸಂದುಗಳಲ್ಲಿ ಸಿಕ್ಕಿಕೊಂಡು ಪುಡಿಪುಡಿಯಾದ ಕೆಲವರ ತಲೆಗಳನ್ನು ಕಾಣುತ್ತಿದ್ದೇನೆ.**

## ಭಾವಾರ್ಥ

ಹಿಂದಿನ ಒಂದು ಶ್ಲೋಕದಲ್ಲಿ ಅರ್ಜುನನಿಗೆ ಬಹು ಆಸಕ್ತಿಯನ್ನುಂಟುಮಾಡುವ ದೃಶ್ಯಗಳನ್ನು ತೋರಿಸುವುದಾಗಿ ಪರಮ ಪ್ರಭುವು ಭರವಸೆ ನೀಡಿದ. ತಮ್ಮ ವಿರುದ್ಧಪಕ್ಷದ ನಾಯಕರು (ಭೀಷ್ಮ, ದ್ರೋಣ, ಕರ್ಣ ಮತ್ತು ಧೃತರಾಷ್ಟ್ರನ ಎಲ್ಲ ಗಂಡು ಮಕ್ಕಳು), ಅವರ ಯೋಧರು ಮತ್ತು ಅರ್ಜುನನ ಯೋಧರು ಸಹ ನಾಶವಾಗುತ್ತಿರುವುದನ್ನು ಈಗ ಅರ್ಜುನನು ಕಾಣುತ್ತಾನೆ. ಕುರುಕ್ಷೇತ್ರದಲ್ಲಿ ಸೇರಿದವರಲ್ಲಿ ಸ್ವಲ್ಪ ಹೆಚ್ಚು ಕಡಮೆ ಎಲ್ಲರ ಸಾವಿನನಂತರ ಅರ್ಜುನನು ಜಯಶಾಲಿಯಾಗುತ್ತಾನೆ ಎನ್ನುವುದಕ್ಕೆ ಇದೊಂದು ಸೂಚನೆ. ಅಜೇಯನೆನಿಸಿಕೊಂಡ ಭೀಷ್ಮನು ಸಹ ನುಚ್ಚುನೂರಾಗುತ್ತಾನೆ ಎಂದು ಇಲ್ಲಿ ಹೇಳಿದೆ. ಹಾಗೆಯೇ ಕರ್ಣನೂ ಸಹ. ಶತ್ರುಪಕ್ಷದ ಭೀಷ್ಮನಂತಹ ಮಹಾ ಯೋಧರು ಮಾತ್ರವಲ್ಲದೆ ಅರ್ಜುನನ ಪಕ್ಷದ ಹಲವಾರು ಮಹಾನ್ ಯೋಧರೂ ನುಚ್ಚುನೂರಾಗುತ್ತಾರೆ.

## ಶ್ಲೋಕ - 28

**ಯಥಾ ನದೀನಾಂ ಬಹವೋಮ್ಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವನ್ತಿ ।**

ತಥಾ ತವಾಮೀ ನರಲೋಕವೀರಾ
ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ||೨೮||

**ಯಥಾ**—ಹೇಗೆ; **ನದೀನಾಮ್**—ನದಿಗಳ; **ಬಹವಃ**—ಅನೇಕ; **ಅಮ್ಬುವೇಗಾಃ**—ನೀರಿನ ತೆರೆಗಳು; **ಸಮುದ್ರಮ್**—ಸಮುದ್ರದ; **ಏವ**—ಖಂಡಿತವಾಗಿಯೂ; **ಅಭಿಮುಖಾಃ**—ಕಡೆಗೆ; **ದ್ರವನ್ತಿ**—ಹರಿಯುತ್ತವೋ; **ತಥಾ**—ಅದರಂತೆಯೇ; **ತವ**—ನಿನ್ನ; **ಅಮೀ**—ಈ ಎಲ್ಲ; **ನರ ಲೋಕ ವೀರಾಃ**—ಮಾನವ ಸಮಾಜದ ದೊರೆಗಳು; **ವಿಶನ್ತಿ**—ಪ್ರವೇಶಿಸುತ್ತಿದ್ದಾರೆ; **ವಕ್ತ್ರಾಣಿ**—ಬಾಯಿಗಳನ್ನು; **ಅಭಿವಿಜ್ವಲನ್ತಿ**—ಮತ್ತು ಉರಿಯುತ್ತಿದ್ದಾರೆ.

## ಅನುವಾದ

**ನದಿಗಳ ಅಧಿಕ ಸಂಖ್ಯೆಯ ಅಲೆಗಳು ಸಮುದ್ರದೊಳಕ್ಕೆ ಹರಿಯುವಂತೆ, ಈ ಎಲ್ಲ ಮಹಾ ಯೋಧರು ಪ್ರಜ್ವಲಿಸುತ್ತ ನಿನ್ನ ಬಾಯಿಗಳನ್ನು ಪ್ರವೇಶಿಸುತ್ತಿರುವರು.**

## ಶ್ಲೋಕ - 29

ಯಥಾ ಪ್ರದೀಪ್ತಂ ಜ್ವಲನಂ ಪತನ್ಗಾ
ವಿಶನ್ತಿ ನಾಶಾಯ ಸಮೃದ್ಧವೇಗಾಃ |
ತಥೈವ ನಾಶಾಯ ವಿಶನ್ತಿ ಲೋಕಾಸ್
ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ||೨೯||

**ಯಥಾ**—ಹೇಗೆ; **ಪ್ರದೀಪ್ತಮ್**—ಉರಿಯುತ್ತಿರುವ; **ಜ್ವಲನಮ್**—ಬೆಂಕಿಯನ್ನು; **ಪತನ್ಗಾಃ**—ದೀಪದ ಹುಳುಗಳು; **ವಿಶನ್ತಿ**—ಪ್ರವೇಶಿಸುತ್ತವೋ; **ನಾಶಾಯ**—ನಾಶಕ್ಕಾಗಿ; **ಸಮೃದ್ಧ**—ತುಂಬು; **ವೇಗಾಃ**—ವೇಗದಿಂದ; **ತಥಾ ಏವ**—ಅದರಂತೆಯೇ; **ನಾಶಾಯ**—ವಿನಾಶಕ್ಕಾಗಿ; **ವಿಶನ್ತಿ**—ಪ್ರವೇಶಿಸುತ್ತಿದ್ದಾರೆ; **ಲೋಕಾಃ**—ಜನರೆಲ್ಲರೂ; **ತವ**—ನಿನ್ನ; **ಅಪಿ**—ಕೂಡ; **ವಕ್ತ್ರಾಣಿ**—ಬಾಯಿಗಳನ್ನು; **ಸಮೃದ್ಧ ವೇಗಾಃ**—ಪೂರ್ಣವೇಗದೊಂದಿಗೆ.

## ಅನುವಾದ

**ಪತಂಗಗಳು ತಮ್ಮ ನಾಶಕ್ಕಾಗಿ ಉರಿಯುತ್ತಿರುವ ಜ್ವಾಲೆಯನ್ನು ವೇಗವಾಗಿ ಪ್ರವೇಶಿಸುವಂತೆ, ಎಲ್ಲ ಜನರು ನಿನ್ನ ಬಾಯಿಗಳೊಳಕ್ಕೆ ವೇಗವಾಗಿ ಧಾವಿಸುತ್ತಿರುವರು.**

## ಶ್ಲೋಕ - 30

ಲೇಲಿಹ್ಯಸೇ ಗ್ರಸಮಾನಃ ಸಮನ್ತಾಲ್
ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ |
ತೇಜೋಭಿರಾಪೂರ್ಯ ಜಗತ್ಸಮಗ್ರಮ್
ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ||೩೦||

**ಲೇಲಿಹ್ಯಸೇ**—ನೀನು ನೆಕ್ಕುತ್ತಿದ್ದೀಯೆ; **ಗ್ರಸಮಾನಃ**—ನುಂಗುತ್ತಾ; **ಸಮನ್ತಾತ್**—ಎಲ್ಲ ದಿಕ್ಕುಗಳಿಂದ; **ಲೋಕಾನ್**—ಜನರನ್ನು; **ಸಮಗ್ರಾನ್**—ಎಲ್ಲ; **ವದನೈಃ**—ಬಾಯಿಗಳಿಂದ; **ಜ್ವಲದ್ಭಿಃ**—ಉರಿಯುತ್ತಿರುವ; **ತೇಜೋಭಿಃ**—ಜ್ವಾಲೆಗಳುಳ್ಳ; **ಆಪೂರ್ಯ**—ಆವರಿಸಿ; **ಜಗತ್**—ವಿಶ್ವವನ್ನು; **ಸಮಗ್ರಮ್**—ಎಲ್ಲ; **ಭಾಸಃ**—ರಶ್ಮಿಗಳು; **ತವ**—ನಿನ್ನ; **ಉಗ್ರಾಃ**—ಭೀಕರವಾದ; **ಪ್ರತಪನ್ತಿ**—ಸುಡುತ್ತಿವೆ; **ವಿಷ್ಣೋ**—ಸರ್ವವ್ಯಾಪಕನಾದ ಪ್ರಭುವೇ.

## ಅನುವಾದ

**ಎಲೈ ವಿಷ್ಣುವೆ, ಉರಿಯುತ್ತಿರುವ ನಿನ್ನ ಬಾಯಿಗಳಲ್ಲಿ ಎಲ್ಲ ಕಡೆಗಳಿಂದ ನೀನು ಎಲ್ಲ ಜನರನ್ನು ನುಂಗುತ್ತಿರುವುದನ್ನು ನಾನು ಕಾಣುತ್ತಿದ್ದೇನೆ. ನಿನ್ನ ತೇಜಸ್ಸಿನಿಂದ ಇಡೀ ವಿಶ್ವವನ್ನು ಆವರಿಸಿದ್ದೀಯೆ. ನೀನು ಭಯಂಕರವಾದ, ಸುಡುವ ಕಿರಣಗಳೊಡನೆ ಪ್ರಕಟವಾಗಿದ್ದೀಯೆ.**

## ಶ್ಲೋಕ - 31

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಮ್**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥೩೧॥**

**ಆಖ್ಯಾಹಿ**—ದಯವಿಟ್ಟು ವಿವರಿಸು; **ಮೇ**—ನನಗೆ; **ಕಃ**—ಯಾರು; **ಭವಾನ್**—ನೀನು; **ಉಗ್ರ ರೂಪಃ**—ಭೀಕರ ರೂಪವುಳ್ಳ; **ನಮಃ ಅಸ್ತು**—ನಮಸ್ಕಾರಗಳು; **ತೇ**—ನಿನಗೆ; **ದೇವ ವರ**— ದೇವತೆಗಳಲ್ಲಿ ಶ್ರೇಷ್ಠನಾದವನೇ; **ಪ್ರಸೀದ**—ಅನುಗ್ರಹಿಸು; **ವಿಜ್ಞಾತುಮ್**—ತಿಳಿಯಲು; **ಇಚ್ಛಾಮಿ**—ಅಪೇಕ್ಷಿಸುತ್ತೇನೆ; **ಭವನ್ತಮ್**—ನಿನ್ನನ್ನು; **ಆದ್ಯಮ್**—ಮೊದಲಿಗನಾದ; **ನ ಹಿ ಪ್ರಜಾನಾಮಿ**— ಖಂಡಿತವಾಗಿಯೂ ತಿಳಿಯಲಾರೆನು; **ತವ**—ನಿನ್ನ; **ಪ್ರವೃತ್ತಿಮ್**—ಉದ್ದೇಶವನ್ನು.

## ಅನುವಾದ

**ಪ್ರಭುಗಳ ಪ್ರಭುವೇ, ಉಗ್ರರೂಪನೇ, ದಯೆಯಿಟ್ಟು ನೀನು ಯಾರು ಎಂದು ಹೇಳು. ನಾನು ನಿನಗೆ ಪ್ರಣಾಮ ಮಾಡುತ್ತೇನೆ. ದಯೆಯಿಟ್ಟು ನನ್ನಲ್ಲಿ ಕೃಪೆಮಾಡು. ನೀನು ಆದಿಪುರುಷನು. ನಿನ್ನ ಉದ್ದೇಶವನ್ನು ನಾನು ತಿಳಿಯಲಾರೆನು; ಆದುದರಿಂದ ನಿನ್ನನ್ನು ತಿಳಿಯಬೇಕೆಂದು ಬಯಸುತ್ತಿದ್ದೇನೆ.**

## ಶ್ಲೋಕ - 32

**ಶ್ರೀ ಭಗವಾನುವಾಚ**

**ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**

**ಋತೇಽಪಿ ತ್ವಾಂ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ||೩೨||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪುರುಷನು ಹೇಳಿದನು; **ಕಾಲಃ**—ಸಮಯವು; **ಅಸ್ಮಿ**—ಆಗಿದ್ದೇನೆ; **ಲೋಕ**—ಪ್ರಪಂಚಗಳ; **ಕ್ಷಯಕೃತ್**—ನಾಶಮಾಡುವ; **ಪ್ರವೃದ್ಧಃ**—ಮಹತ್ತಾದ; **ಲೋಕಾನ್**—ಜನರೆಲ್ಲರನ್ನು; **ಸಮಾಹರ್ತುಮ್**—ನಾಶಮಾಡುವಲ್ಲಿ; **ಇಹ**—ಈ ಜಗತ್ತಿನಲ್ಲಿ; **ಪ್ರವೃತ್ತಃ**—ನಿರತನು; **ಋತೇ**—ಹೊರತುಪಡಿಸಿ; **ಅಪಿ**—ಕೂಡ; **ತ್ವಾಮ್**—ನಿಮ್ಮನ್ನು; **ನ ಭವಿಷ್ಯನ್ತಿ**—ಇರಲಾರರು; **ಸರ್ವೇ**—ಎಲ್ಲರೂ; **ಯೇ**—ಯಾವ; **ಅವಸ್ಥಿತಾಃ**—ನೆಲೆಸಿದ; **ಪ್ರತಿ ಅನೀಕೇಷು**—ಉಭಯ ಪಕ್ಷಗಳಲ್ಲಿಯೂ; **ಯೋಧಾಃ**—ಯೋಧರು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ನಾನು ಕಾಲನು. ಎಲ್ಲ ಲೋಕಗಳ ಮಹಾನ್ ಕ್ಷಯಕಾರಿಯು; ಎಲ್ಲ ಜನರನ್ನೂ ನಾಶಮಾಡಲು ಇಲ್ಲಿಗೆ ಬಂದಿದ್ದೇನೆ. ನಿಮ್ಮನ್ನು (ಪಾಂಡವರನ್ನು) ಬಿಟ್ಟು ಎರಡು ಪಕ್ಷಗಳ ಎಲ್ಲ ಯೋಧರೂ ಕೊಲ್ಲಲ್ಪಡುವರು.**

## ಭಾವಾರ್ಥ

ಕೃಷ್ಣನು ತನ್ನ ಸ್ನೇಹಿತ ಮತ್ತು ದೇವೋತ್ತಮ ಪರಮ ಪುರುಷ ಎಂದು ಅರ್ಜುನನಿಗೆ ತಿಳಿದಿದ್ದರೂ ಕೃಷ್ಣನು ತೋರಿಸಿದ ಹಲವು ರೂಪಗಳಿಂದ ಅವನಿಗೆ ತೊಡಕಾಯಿತು. ಆದುದರಿಂದ ಈ ವಿನಾಶಕಾರಕ ಶಕ್ತಿಯ ವಾಸ್ತವ ಉದ್ದೇಶವನ್ನು ಕುರಿತು ಇನ್ನಷ್ಟು ಪ್ರಶ್ನೆಮಾಡಿದನು. ಪರಮ ಸತ್ಯವು ಎಲ್ಲವನ್ನೂ, ಬ್ರಾಹ್ಮಣರನ್ನು ಸಹ ನಾಶಮಾಡುತ್ತದೆ ಎಂದು ವೇದಗಳಲ್ಲಿ ಹೇಳಿದೆ. ಕಠ ಉಪನಿಷತ್ತಿನಲ್ಲಿ (1.2.25) ಹೀಗೆ ಹೇಳಿದೆ —

**ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ |**
**ಮೃತ್ಯುರ್ ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ||**

ಕಟ್ಟಕಡೆಗೆ ಬ್ರಾಹ್ಮಣರು, ಕ್ಷತ್ರಿಯರು ಮತ್ತು ಉಳಿದೆಲ್ಲರನ್ನೂ ಪರಮನು ಒಂದು ತುತ್ತಿನಂತೆ ನುಂಗಿಬಿಡುವನು. ಪರಮ ಪ್ರಭುವಿನ ಈ ರೂಪವು ಸರ್ವಭಕ್ಷಕವಾದ ಅದ್ಭುತ ರೂಪ. ಇಲ್ಲಿ ಕೃಷ್ಣನು ಸರ್ವಭಕ್ಷಕ ಕಾಲನ ರೂಪದಲ್ಲಿ ಪ್ರಕಟವಾಗಿದ್ದಾನೆ. ಕೆಲವರು ಪಾಂಡವರನ್ನು ಬಿಟ್ಟರೆ ರಣಭೂಮಿಯಲ್ಲಿದ್ದ ಎಲ್ಲರನ್ನೂ ಅವನು ಭಕ್ಷಿಸುತ್ತಾನೆ.

ಅರ್ಜುನನಿಗೆ ಯುದ್ಧವು ಬೇಕಿರಲಿಲ್ಲ. ಯುದ್ಧ ಮಾಡದಿರುವುದೇ ಉತ್ತಮ. ಆಗ ಹತಾಶೆಯಿರುವುದಿಲ್ಲ ಎಂದು ಅವನು ಭಾವಿಸಿದನು. ಇದಕ್ಕೆ ಉತ್ತರವಾಗಿ ಪ್ರಭುವು ಅವನು ಯುದ್ಧಮಾಡದಿದ್ದರೂ ಅವರಲ್ಲಿ ಪ್ರತಿಯೊಬ್ಬರೂ ನಾಶವಾಗುವರು, ಏಕೆಂದರೆ ಅದು ತನ್ನ ಯೋಜನೆ ಎಂದು ಹೇಳುತ್ತಾನೆ. ಅರ್ಜುನನು ಯುದ್ಧವನ್ನು ನಿಲ್ಲಿಸಿದರೆ ಅವರು ಬೇರೊಂದು ರೀತಿಯಲ್ಲಿ ಸಾಯುತ್ತಾರೆ. ಅವನು ಹೋರಾಡದಿದ್ದರೂ ಸಾವನ್ನು ತಪ್ಪಿಸುವಂತಿಲ್ಲ. ವಾಸ್ತವವಾಗಿ ಅವರೆಲ್ಲರೂ ಆಗಲೇ ಸತ್ತು ಹೋಗಿದ್ದಾರೆ. ಕಾಲವೆಂದರೆ ನಾಶ; ಪರಮ ಪ್ರಭುವಿನ ಇಚ್ಛೆಗಳಿಗೆ ಅನುಗುಣವಾಗಿ ಎಲ್ಲ ಅಭಿವ್ಯಕ್ತಿಗಳೂ ನಾಶವಾಗಬೇಕು. ಇದು ಪ್ರಕೃತಿ ನಿಯಮ.

## ಶ್ಲೋಕ - 33

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯ್ಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥೩೩॥**

**ತಸ್ಮಾತ್**—ಆದ್ದರಿಂದ; **ತ್ವಮ್**—ನೀನು; **ಉತ್ತಿಷ್ಠ**—ಎದ್ದೇಳು; **ಯಶಃ**—ಕೀರ್ತಿಯನ್ನು; **ಲಭಸ್ವ**—ಪಡೆದುಕೋ; **ಜಿತ್ವಾ**—ಗೆದ್ದು; **ಶತ್ರೂನ್**—ವೈರಿಗಳನ್ನು; **ಭುಂಕ್ಷ್ವ**—ಭೋಗಿಸು; **ರಾಜ್ಯಮ್**—ರಾಜ್ಯವನ್ನು; **ಸಮೃದ್ಧಮ್**—ಸಮೃದ್ಧವಾಗಿರುವ; **ಮಯಾ**—ನನ್ನಿಂದ; **ಏವ**—ಖಂಡಿತವಾಗಿಯೂ; **ಏತೇ**—ಈ ಎಲ್ಲರೂ; **ನಿಹತಾಃ**—ಕೊಲ್ಲಲ್ಪಟ್ಟಿದ್ದಾರೆ; **ಪೂರ್ವಮ್ ಏವ**—ಮುಂಚಿನ ವ್ಯವಸ್ಥೆಯಿಂದಲೇ; **ನಿಮಿತ್ತ ಮಾತ್ರಮ್**—ನೆಪವಷ್ಟೇ; **ಭವ**—ಆಗು; **ಸವ್ಯಸಾಚಿನ್**—ಸವ್ಯಸಾಚಿಯೇ.

## ಅನುವಾದ

**ಆದುದರಿಂದ ಎದ್ದೇಳು, ಯುದ್ಧಮಾಡಿ ಕೀರ್ತಿಯನ್ನು ಪಡೆ. ನಿನ್ನ ಶತ್ರುಗಳನ್ನು ಸೋಲಿಸಿ ಸಮೃದ್ಧವಾದ ರಾಜ್ಯವನ್ನು ಅನುಭವಿಸು. ನನ್ನ ವ್ಯವಸ್ಥೆಯಿಂದ ಆಗಲೇ ಅವರು ಹತರಾಗಿದ್ದಾರೆ. ಸವ್ಯಸಾಚಿಯೆ, ನೀನು ಯುದ್ಧದಲ್ಲಿ ಒಂದು ನಿಮಿತ್ತ ಮಾತ್ರ.**

## ಭಾವಾರ್ಥ

**ಸವ್ಯಸಾಚಿ**ಯೆಂದರೆ ರಣರಂಗದಲ್ಲಿ ಬಹು ನೈಪುಣ್ಯದಿಂದ ಬಾಣಗಳನ್ನು ಬಿಡುವವನು ಎಂದರ್ಥ; ಆದುದರಿಂದ, ತನ್ನ ಶತ್ರುಗಳನ್ನು ಕೊಲ್ಲಲು ಸಾಮರ್ಥ್ಯವಿರುವ ಬಾಣಗಳನ್ನು ಪ್ರಯೋಗಿಸುವ ನಿಪುಣ ಯೋಧ ಎಂದು ಅರ್ಜುನನನ್ನು ಸಂಬೋಧಿಸಿದೆ. **ನಿಮಿತ್ತ ಮಾತ್ರಮ್** "ನೀನು ಒಂದು ಸಾಧನ ಮಾತ್ರ ಆಗು." ಈ ಮಾತು ಅರ್ಥವತ್ತಾದದ್ದು. ಇಡೀ ಜಗತ್ತು ದೇವೋತ್ತಮ ಪರಮ ಪುರುಷನ ಯೋಜನೆಯಂತೆ ಸಾಗುತ್ತಿದೆ. ತಕ್ಕಷ್ಟು ತಿಳುವಳಿಕೆ ಇಲ್ಲದ ಮೂಢರು ಪ್ರಕೃತಿಯು ಯೋಜನೆಯಿಲ್ಲದೆ ಸಾಗುತ್ತಿದೆ ಮತ್ತು ಎಲ್ಲ ಅಭಿವ್ಯಕ್ತಿಗಳು ಅಕಸ್ಮಾತ್ತಾಗಿ ಆದ ರಚನೆಗಳು ಎಂದು ಭಾವಿಸುತ್ತಾರೆ. ವಿಜ್ಞಾನಿಗಳೆಂದು ಕರೆಸಿಕೊಳ್ಳುವ ಅನೇಕರು ಪ್ರಾಯಶಃ ಅದು ಆದದ್ದು ಹೀಗಿರಬಹುದು, ಹಾಗಿರಬಹುದು ಎಂದು ಸೂಚಿಸುತ್ತಾರೆ. ಆದರೆ 'ಪ್ರಾಯಶಃ' ಮತ್ತು 'ಬಹುದು' ಇವುಗಳ ಪ್ರಶ್ನೆಯೇ ಇಲ್ಲ. ಈ ಭೌತಿಕ ಜಗತ್ತಿನಲ್ಲಿ ಕಾರ್ಯಗತವಾಗುತ್ತಿರುವ ನಿರ್ದಿಷ್ಟ ಯೋಜನೆ ಇದೆ. ಈ ಯೋಜನೆ ಯಾವುದು? ಈ ವಿಶ್ವದ ಅಭಿವ್ಯಕ್ತಿಯು ಭಗವದ್ಧಾಮಕ್ಕೆ ಹಿಂದಿರುಗಿ ಹೋಗುವುದಕ್ಕೆ, ಬದ್ಧ ಆತ್ಮರಿಗೆ ಒಂದು ಅವಕಾಶ. ಭೌತಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸುವ ಅವರ ದರ್ಪದ ಮನೋಧರ್ಮವು ಇರುವಷ್ಟು ಕಾಲವೂ ಅವರು ಬದ್ಧರಾಗಿಯೇ ಉಳಿಯುತ್ತಾರೆ. ಆದರೆ ಪರಮ ಪ್ರಭುವಿನ ಯೋಜನೆಯನ್ನು ಅರ್ಥಮಾಡಿಕೊಂಡು ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವವನು ಬಹು ಬುದ್ಧಿವಂತನು. ವಿಶ್ವದ ಅಭಿವ್ಯಕ್ತಿಯ ಸೃಷ್ಟಿಯೂ, ವಿನಾಶವೂ ಭಗವಂತನ ಶ್ರೇಷ್ಠ ಮಾರ್ಗದರ್ಶನಕ್ಕೆ ಅನುಗುಣವಾಗಿ

ನಡೆಯುತ್ತವೆ. ಕುರುಕ್ಷೇತ್ರ ಯುದ್ಧವು ಭಗವಂತನ ಯೋಜನೆಯಂತೆ ನಡೆಯಿತು. ಅರ್ಜುನನು ಯುದ್ಧ ಮಾಡಲು ನಿರಾಕರಿಸಿದ. ಆದರೆ ಅವನು ಪರಮ ಪ್ರಭುವಿನ ಇಚ್ಛೆಯಂತೆ ಹೋರಾಡಬೇಕೆಂದು ಅವನಿಗೆ ಹೇಳಲಾಯಿತು. ಹಾಗೆ ಮಾಡಿದರೆ ಅವನು ಸುಖವಾಗಿರಬಹುದು. ಯಾವ ಮನುಷ್ಯನು ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿರುವನೋ ಮತ್ತು ಯಾವ ಮನುಷ್ಯನ ಬದುಕು ಪ್ರಭುವಿನ ದಿವ್ಯ ಸೇವೆಗೆ ಅರ್ಪಿತವಾಗಿದೆಯೋ ಆತನು ಪರಿಪೂರ್ಣನು.

## ಶ್ಲೋಕ - 34

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥**

**ದ್ರೋಣಂ ಚ**—ದ್ರೋಣನನ್ನು ಸಹ; **ಭೀಷ್ಮಮ್ ಚ**—ಭೀಷ್ಮನನ್ನು ಕೂಡ; **ಜಯದ್ರಥಂ ಚ**—ಜಯದ್ರಥನನ್ನು ಸಹ; **ಕರ್ಣಮ್**—ಕರ್ಣನನ್ನು; **ತಥಾ**—ಕೂಡ; **ಅನ್ಯಾನ್**—ಇತರ; **ಅಪಿ**—ಖಂಡಿತವಾಗಿಯೂ; **ಯೋಧ ವೀರಾನ್**—ಮಹಾ ಯೋಧರನ್ನೂ; **ಮಯಾ**—ನನ್ನಿಂದ; **ಹತಾನ್**—ಆಗಲೇ ಹತರಾದ; **ತ್ವಮ್**—ನೀನು; **ಜಹಿ**—ನಾಶಮಾಡು; **ಮಾ ವ್ಯಥಿಷ್ಠಾಃ**—ಕ್ಷೋಭೆಗೊಳ್ಳಬೇಡ; **ಯುಧ್ಯಸ್ವ**—ಯುದ್ಧ ಮಾಡು; **ಜೇತಾ ಅಸಿ**—ನೀನು ಗೆಲ್ಲುವೆ; **ರಣೇ**—ಯುದ್ಧದಲ್ಲಿ; **ಸಪತ್ನಾನ್**—ಶತ್ರುಗಳನ್ನು.

## ಅನುವಾದ

**ದ್ರೋಣ, ಭೀಷ್ಮ, ಜಯದ್ರಥ, ಕರ್ಣ ಮತ್ತು ಇತರ ವೀರ ಯೋಧರು ಆಗಲೇ ನನ್ನಿಂದ ನಾಶವಾಗಿದ್ದಾರೆ. ಆದುದರಿಂದ ಅವರನ್ನು ಕೊಲ್ಲು. ವ್ಯಥೆ ಪಡಬೇಡ. ಯುದ್ಧ ಮಾಡು, ಯುದ್ಧದಲ್ಲಿ ನಿನ್ನ ಶತ್ರುಗಳನ್ನು ಸೋಲಿಸುವೆ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನು ಎಲ್ಲ ಯೋಜನೆಗಳನ್ನು ಮಾಡುತ್ತಾನೆ. ಆದರೆ ತನ್ನ ಭಕ್ತರಲ್ಲಿ ಅವನ ಕೃಪೆ ಎಷ್ಟೆಂದರೆ, ತನ್ನ ಯೋಜನೆಯನ್ನು ತನ್ನ ಅಪೇಕ್ಷೆಯಂತೆ ಕಾರ್ಯಗತ ಮಾಡುವವರಿಗೆ ಅದರ ಕೀರ್ತಿಯನ್ನು ನೀಡಲು ಬಯಸುತ್ತಾನೆ. ಪ್ರತಿಯೊಬ್ಬನೂ ಕೃಷ್ಣಪ್ರಜ್ಞೆಯಲ್ಲಿ ಕೆಲಸಮಾಡಿ, ಒಬ್ಬ ಗುರುವಿನ ಮೂಲಕ ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಬೇಕು; ಬದುಕು ಸಾಗಬೇಕಾದದ್ದು ಹೀಗೆ. ದೇವೋತ್ತಮ ಪರಮ ಪುರುಷನ ಕೃಪೆಯಿಂದ ಅವನ ಯೋಜನೆಗಳು ಅರ್ಥವಾಗುತ್ತವೆ; ಭಕ್ತರ ಯೋಜನೆಗಳು ಕೃಷ್ಣನ ಯೋಜನೆಗಳಂತೆಯೇ. ಮನುಷ್ಯನು ಇಂತಹ ಯೋಜನೆಗಳನ್ನು ಅನುಸರಿಸಿ, ಬದುಕಲು ನಡೆಸುವ ಹೋರಾಟದಲ್ಲಿ ಜಯಶಾಲಿಯಾಗಬೇಕು.

## ಶ್ಲೋಕ - 35

**ಸಂಜಯ ಉವಾಚ**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಞ್ಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತ ಭೀತಃ ಪ್ರಣಮ್ಯ ॥೩೫॥**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಏತತ್**—ಹೀಗೆ; **ಶ್ರುತ್ವಾ**—ಕೇಳಿ; **ವಚನಮ್**—ಮಾತನ್ನು; **ಕೇಶವಸ್ಯ**—ಕೃಷ್ಣನ; **ಕೃತ ಅಞ್ಜಲಿಃ**—ಕೈ ಮುಗಿದು; **ವೇಪಮಾನಃ**—ನಡುಗುತ್ತಾ; **ಕಿರೀಟೀ**—ಅರ್ಜುನನು; **ನಮಸ್ಕೃತ್ವಾ**—ನಮಸ್ಕರಿಸಿ; **ಭೂಯಃ**—ಪುನಃ; **ಏವ**—ಕೂಡ; **ಆಹ**— ಹೇಳಿದನು; **ಕೃಷ್ಣಮ್**—ಕೃಷ್ಣನಿಗೆ; **ಸ ಗದ್ಗದಮ್**—ಗದ್ಗದ ಧ್ವನಿಯಲ್ಲಿ; **ಭೀತ ಭೀತಃ**— ಹೆದರಿದವನಾಗಿ; **ಪ್ರಣಮ್ಯ**—ನಮಸ್ಕರಿಸುತ್ತ.

## ಅನುವಾದ

**ಸಂಜಯನು ಧೃತರಾಷ್ಟ್ರನಿಗೆ ಹೀಗೆ ಹೇಳಿದನು — ರಾಜನೇ, ದೇವೋತ್ತಮ ಪರಮ ಪುರುಷನ ಈ ಮಾತುಗಳನ್ನು ಕೇಳಿ ಅರ್ಜುನನು ಕೈಗಳನ್ನು ಮುಗಿದುಕೊಂಡು ನಡುಗುತ್ತ ಮತ್ತೆ ಮತ್ತೆ ನಮಸ್ಕಾರ ಮಾಡಿದನು. ಗದ್ಗದ ಕಂಠದಿಂದ ಭಯಭೀತನಾಗಿ ಶ್ರೀಕೃಷ್ಣನಿಗೆ ಹೀಗೆ ಹೇಳಿದನು.**

## ಭಾವಾರ್ಥ

ನಾವು ಆಗಲೇ ವಿವರಿಸಿದಂತೆ, ದೇವೋತ್ತಮ ಪರಮ ಪುರುಷನ ವಿಶ್ವರೂಪವು ಸೃಷ್ಟಿಸಿದ ಸನ್ನಿವೇಶದಿಂದ ಅರ್ಜುನನು ಆಶ್ಚರ್ಯಚಕಿತನಾಗಿ ದಿಗ್ಭ್ರಾಂತನಾದನು. ಅನಂತರ ಭಕ್ತಿಪೂರ್ವಕವಾಗಿ ಮತ್ತೆ ಮತ್ತೆ ಕೃಷ್ಣನಿಗೆ ಪ್ರಣಾಮ ಮಾಡಿದನು. ಸ್ನೇಹಿತನಾಗಿ ಅಲ್ಲ, ಬೆರಗಾದ ಭಕ್ತನಾಗಿ ಅವನು ಗದ್ಗದ ಸ್ವರದಲ್ಲಿ ಪ್ರಾರ್ಥನೆ ಮಾಡಲು ಪ್ರಾರಂಭಿಸಿದನು.

## ಶ್ಲೋಕ - 36

**ಅರ್ಜುನ ಉವಾಚ**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಂಘಾಃ ॥೩೬॥**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಸ್ಥಾನೇ**—ಸರಿಯಾಗಿ; **ಹೃಷೀಕ ಈಶ**—ಸಕಲೇಂದ್ರಿಯಗಳ ಸ್ವಾಮಿಯೇ; **ತವ**—ನಿನ್ನ; **ಪ್ರಕೀರ್ತ್ಯಾ**—ವೈಭವಗಳಿಂದ; **ಜಗತ್**—ಪೂರ್ಣ ಪ್ರಪಂಚವು; **ಪ್ರಹೃಷ್ಯತಿ**—ಸಂತಸ ಪಡುತ್ತಿದೆ; **ಅನುರಜ್ಯತೇ**—ಅನುರಕ್ತವಾಗುತ್ತಿದೆ; **ಚ**—ಮತ್ತು;

**ರಕ್ಷಾಂಸಿ**—ರಾಕ್ಷಸರು; **ಭೀತಾನಿ**—ಭಯದಿಂದ; **ದಿಶಾಃ**—ಎಲ್ಲ ದಿಕ್ಕುಗಳಲ್ಲಿ; **ದ್ರವನ್ತಿ**—ಓಡುತ್ತಿದ್ದಾರೆ; **ಸರ್ವೇ**—ಎಲ್ಲ; **ನಮಸ್ಯನ್ತಿ**—ಗೌರವ ಸಲ್ಲಿಸುತ್ತಿದ್ದಾರೆ; **ಚ**—ಕೂಡ; **ಸಿದ್ಧ ಸಂಘಾಃ**—ಸಿದ್ಧಿಪಡೆದ ಮಾನವ ಜೀವಿಗಳು.

## ಅನುವಾದ

**ಅರ್ಜುನನು ಹೇಳಿದನು — ಇಂದ್ರಿಯಗಳ ಪ್ರಭುವಾದ ಹೃಷೀಕೇಶನೆ, ನಿನ್ನ ಹೆಸರನ್ನು ಕೇಳಿಯೇ ಇಡೀ ಜಗತ್ತು ಸಂತೋಷ ಪಡುತ್ತದೆ. ಆದುದರಿಂದ ಎಲ್ಲರೂ ನಿನ್ನಲ್ಲಿ ಅನುರಾಗಗೊಳ್ಳುತ್ತಾರೆ. ಸಿದ್ಧರು ನಿನಗೆ ತಮ್ಮ ಗೌರವ ಪೂರ್ವಕ ನಮಸ್ಕಾರಗಳನ್ನು ಅರ್ಪಿಸುತ್ತಾರೆ. ರಾಕ್ಷಸರು ಬೆದರಿ ಎಲ್ಲ ದಿಕ್ಕುಗಳಲ್ಲಿ ಓಡಿ ಹೋಗುತ್ತಾರೆ. ಇದೆಲ್ಲ ಯುಕ್ತವೇ ಸರಿ.**

## ಭಾವಾರ್ಥ

ಕುರುಕ್ಷೇತ್ರದ ಪರಿಣಾಮವನ್ನು ಕೃಷ್ಣನಿಂದ ಕೇಳಿದಾಗ ಅರ್ಜುನನಿಗೆ ಜ್ಞಾನೋದಯವಾಯಿತು. ದೇವೋತ್ತಮ ಪರಮ ಪುರುಷನ ಮಹಾಭಕ್ತನೂ ಸ್ನೇಹಿತನೂ ಆಗಿ ಅರ್ಜುನನು ಕೃಷ್ಣನು ಮಾಡಿದುದೆಲ್ಲ ಯೋಗ್ಯವೇ ಎಂದು ಹೇಳಿದನು. ಭಕ್ತರನ್ನು ರಕ್ಷಿಸುವವನೂ, ಭಕ್ತರ ಆರಾಧ್ಯ ದೈವವೂ ಕೃಷ್ಣನೇ. ಅನಿಷ್ಟರಾದವರನ್ನು ನಾಶಮಾಡುವವನೂ ಕೃಷ್ಣನೇ ಎಂದು ಅರ್ಜುನನು ದೃಢಪಡಿಸುತ್ತಾನೆ. ಅವನ ಕಾರ್ಯಗಳು ಎಲ್ಲರಿಗೂ ಸಮಾನವಾಗಿ ಒಳಿತನ್ನು ಮಾಡುತ್ತವೆ. ಕುರುಕ್ಷೇತ್ರ ಯುದ್ಧದ ಮುಕ್ತಾಯದ ಹಂತದಲ್ಲಿ ಹೊರ ಆಕಾಶದಲ್ಲಿ ಅನೇಕರು ದೇವತೆಗಳು, ಸಿದ್ಧರು, ಉನ್ನತ ಲೋಕಗಳ ಧೀಮಂತರು ಎಲ್ಲ ಸೇರಿದ್ದರು. ಕೃಷ್ಣನು ಅಲ್ಲಿದ್ದುದರಿಂದ ಅವರೆಲ್ಲ ಯುದ್ಧವನ್ನು ವೀಕ್ಷಿಸುತ್ತಿದ್ದರು ಎಂದು ಇಲ್ಲಿ ಅರ್ಜುನನಿಗೆ ಅರಿವಾಯಿತು. ಅರ್ಜುನನಿಗೆ ವಿಶ್ವರೂಪದರ್ಶನವಾದಾಗ ದೇವತೆಗಳು ಆನಂದಪಟ್ಟರು. ಆದರೆ ಇತರರು — ರಾಕ್ಷಸರು ಮತ್ತು ನಾಸ್ತಿಕರು — ಭಗವಂತನ ಸ್ತುತಿಯನ್ನು ಸಹಿಸದಾದರು. ದೇವೋತ್ತಮ ಪರಮ ಪುರುಷನ ಭಯಂಕರ ರೂಪವನ್ನು ಕಂಡು ಅವರು ಸಹಜವಾಗಿ ಹೆದರಿ ಓಡಿ ಹೋದರು. ಕೃಷ್ಣನು ಭಕ್ತರನ್ನೂ ನಾಸ್ತಿಕರನ್ನೂ ನಡೆಸಿಕೊಂಡ ರೀತಿಯನ್ನು ಅರ್ಜುನನು ಹೊಗಳುತ್ತಾನೆ. ಪ್ರಭುವು ಮಾಡುವುದೆಲ್ಲ ಎಲ್ಲರಿಗೂ ಒಳಿತಾದುದೇ ಎಂದು ಭಕ್ತನಿಗೆ ಗೊತ್ತು. ಆದುದರಿಂದ ಎಲ್ಲ ಸಂದರ್ಭಗಳಲ್ಲಿಯೂ ಅವನು ಪ್ರಭುವಿನ ಮಹಿಮೆಯನ್ನು ಹೊಗಳುತ್ತಾನೆ.

## ಶ್ಲೋಕ - 37

**ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೭॥**

**ಕಸ್ಮಾತ್**—ಏಕೆ; **ಚ**—ಕೂಡ; **ತೇ**—ನಿನಗೆ; **ನ ನಮೇರನ್**—ಅವರು ಸರಿಯಾಗಿ ನಮಸ್ಕರಿಸಲಾರರು; **ಮಹಾತ್ಮನ್**—ಮಹಾತ್ಮನೇ; **ಗರೀಯಸೇ**—ಉತ್ತಮನಾದ; **ಬ್ರಹ್ಮಣಃ**—ಬ್ರಹ್ಮನಿಗಿಂತ; **ಅಪಿ**—ಆಗಿದ್ದರೂ; **ಆದಿಕರ್ತ್ರೇ**—ಪರಮ ಸೃಷ್ಟಿಕರ್ತನಾದ; **ಅನನ್ತ**—ಅಪರಿಮಿತನೇ; **ದೇವ ಈಶ**—ದೇವ

ದೇವನೇ; **ಜಗತ್ ನಿವಾಸ**—ಜಗದಾಶ್ರಯನೇ; **ತ್ವಮ್**—ನೀನು ಆಗಿದ್ದೀಯೆ; **ಅಕ್ಷರಮ್**—ಅವಿನಾಶಿಯು; **ಸತ್ ಅಸತ್**—ಕಾರಣ ಮತ್ತು ಪರಿಣಾಮಗಳಿಗೆ; **ತತ್ಪರಮ್**—ಅತೀತನು; **ಯತ್**—ಏಕೆಂದರೆ.

## ಅನುವಾದ

**ಬ್ರಹ್ಮನಿಗೂ ಶ್ರೇಷ್ಠನಾದ ಮಹಾತ್ಮನೇ, ನೀನು ಆದಿ ಸೃಷ್ಟಿಕರ್ತನು. ಆದುದರಿಂದ ಅವರು ನಿನಗೆ ಭಕ್ತಿಪೂರ್ವಕ ಪ್ರಣಾಮಗಳನ್ನು ಏಕೆ ಅರ್ಪಿಸಬಾರದು? ನೀನು ಅನಂತನು, ದೇವತೆಗಳ ದೇವ, ಜಗನ್ನಿವಾಸನು. ನೀನು ಅಜೇಯನಾದ ಮೂಲನು; ಎಲ್ಲ ಕಾರಣಗಳ ಕಾರಣನು. ಈ ಐಹಿಕ ಅಭಿವ್ಯಕ್ತಿಗೆ ಅತೀತನಾದವನು.**

## ಭಾವಾರ್ಥ

ಅರ್ಜುನನು ಕೃಷ್ಣನಿಗೆ ಹೀಗೆ ಪ್ರಣಾಮ ಮಾಡಿ ಅವನು ಎಲ್ಲರ ಪೂಜೆಗೆ ಅರ್ಹನು ಎಂದು ಸೂಚಿಸುತ್ತಾನೆ. ಅವನು ಸರ್ವವ್ಯಾಪಿ, ಎಲ್ಲ ಆತ್ಮಗಳ ಆತ್ಮ. ಅರ್ಜುನನು ಕೃಷ್ಣನನ್ನು **ಮಹಾತ್ಮ** ಎಂದು ಸಂಬೋಧಿಸುತ್ತಾನೆ. ಮಹಾತ್ಮ ಎಂದರೆ ಕೃಷ್ಣನು ಅತ್ಯಂತ ಉದಾರಿ ಮತ್ತು ಅನಂತನು ಎಂದು ಅರ್ಥ. **ಅನಂತ** ಎನ್ನುವ ಶಬ್ದವು ಪರಮ ಪ್ರಭುವಿನ ಪ್ರಭಾವವೂ ಶಕ್ತಿಯೂ ಆವರಿಸದಿರುವ ವಸ್ತುವೇ ಇಲ್ಲ ಎನ್ನುವುದನ್ನು ತೋರಿಸುತ್ತದೆ. **ದೇವೇಶ** ಎಂದರೆ ಆತನು ಎಲ್ಲ ದೇವತೆಗಳನ್ನು ನಿಯಂತ್ರಿಸುತ್ತಾನೆ. ಅವನು ಅವರೆಲ್ಲರಿಗಿಂತ ಉನ್ನತನಾದವನು ಎಂದು ಅರ್ಥ. ಅವನು ಇಡೀ ವಿಶ್ವಕ್ಕೆ ಆಶ್ರಯದಾತ. ಅವನಿಗಿಂತ ಶ್ರೇಷ್ಠರಾದವರು ಯಾರೂ ಇಲ್ಲ. ಆದುದರಿಂದ ಎಲ್ಲ ಪರಿಪೂರ್ಣ ಜೀವಿಗಳೂ ಶಕ್ತಿವಂತರಾದ ದೇವತೆಗಳೂ ಅವನಿಗೆ ಗೌರವ ಪೂರ್ವಕ ಪ್ರಣಾಮಗಳನ್ನು ಅರ್ಪಿಸುವುದು ಯೋಗ್ಯ ಎಂದೂ ಅರ್ಜುನನು ಭಾವಿಸಿದನು. ಕೃಷ್ಣನು ಬ್ರಹ್ಮನಿಗಿಂತ ಶ್ರೇಷ್ಠನು ಎಂದು ಅರ್ಜುನನು ವಿಶೇಷವಾಗಿ ಪ್ರಸ್ತಾಪಿಸುತ್ತಾನೆ; ಏಕೆಂದರೆ ಕೃಷ್ಣನು ಬ್ರಹ್ಮನನ್ನು ಸೃಷ್ಟಿಸಿದ. ಗರ್ಭೋದಕಶಾಯಿ ವಿಷ್ಣುವಿನ ನಾಭಿಯಿಂದ ಬೆಳೆದ ಕಮಲದ ಕಾಂಡದಿಂದ ಹುಟ್ಟಿದವನು ಬ್ರಹ್ಮ. ವಿಷ್ಣುವು ಕೃಷ್ಣನ ಸ್ವಾಂಶ ವಿಸ್ತರಣೆ. ಆದುದರಿಂದ ಬ್ರಹ್ಮನೂ ಮತ್ತು ಅವನಿಂದ ಹುಟ್ಟಿದ ಶಿವನೂ ಇತರ ಎಲ್ಲ ದೇವತೆಗಳೂ ತಮ್ಮ ಗೌರವ ಪೂರ್ವಕ ಪ್ರಣಾಮಗಳನ್ನು ಸಲ್ಲಿಸಬೇಕು. ಶ್ರೀಮದ್ಭಾಗವತದಲ್ಲಿ ಶಿವನೂ ಬ್ರಹ್ಮನೂ ಅವರಂತಹ ಇತರ ದೇವತೆಗಳೂ ಭಗವಂತನನ್ನು ಗೌರವಿಸುತ್ತಾರೆ ಎಂದು ಹೇಳಿದೆ. **ಅಕ್ಷರಮ್** ಎನ್ನುವ ಪದವು ಬಹಳ ಮಹತ್ವದ್ದು. ಈ ಭೌತಿಕ ಸೃಷ್ಟಿಯು ನಾಶವಾಗತಕ್ಕದ್ದು; ಆದರೆ ಪ್ರಭುವು ಈ ಭೌತಿಕ ಸೃಷ್ಟಿಯನ್ನು ಮೀರಿದವನು. ಅವನು ಎಲ್ಲ ಕಾರಣಗಳ ಕಾರಣನು. ಹೀಗಿರುವುದರಿಂದ ಈ ಭೌತಿಕ ಪ್ರಕೃತಿಯಲ್ಲಿರುವ ಬದ್ಧ ಆತ್ಮರಿಗಿಂತಲೂ, ಭೌತಿಕ ವಿಶ್ವದ ಅಭಿವ್ಯಕ್ತಿಗಿಂತಲೂ ಶ್ರೇಷ್ಠನು. ಆದುದರಿಂದ ಅವನು ಸರ್ವಶ್ರೇಷ್ಠ ಪರಮ ಪ್ರಭು.

## ಶ್ಲೋಕ - 38

**ತ್ವಮಾದಿದೇವಃ ಪುರುಷಃ ಪುರಾಣಸ್**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**

**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ||೩೮||**

**ತ್ವಮ್**—ನೀನು; **ಆದಿದೇವಃ**—ಮೂಲ ಪರಮ ದೇವನು; **ಪುರುಷಃ**—ಪುರುಷನು; **ಪುರಾಣಃ**—ಪ್ರಾಚೀನನು; **ತ್ವಮ್**—ನೀನು; **ಅಸ್ಯ**—ಈ; **ವಿಶ್ವಸ್ಯ**—ವಿಶ್ವದ; **ಪರಮ್**—ದಿವ್ಯವಾದ; **ನಿಧಾನಮ್**—ಆಶ್ರಯನು; **ವೇತ್ತಾ**—ತಿಳಿಯುವವನು; **ಅಸಿ**—ಆಗಿದ್ದೀಯೆ; **ವೇದ್ಯಮ್**—ತಿಳಿಯಲ್ಪಡುವವನು; **ಚ**—ಮತ್ತು; **ಪರಮ್**—ದಿವ್ಯವಾದ; **ಚ**—ಮತ್ತು; **ಧಾಮ**—ಆಶ್ರಯವು; **ತ್ವಯಾ**—ನಿನ್ನಿಂದ; **ತತಮ್**—ವ್ಯಾಪ್ತವಾಗಿದೆ; **ವಿಶ್ವಮ್**—ವಿಶ್ವವು; **ಅನನ್ತ ರೂಪ**—ಅಪರಿಮಿತ ರೂಪನೇ.

## ಅನುವಾದ

**ನೀನು ಆದಿ ದೇವೋತ್ತಮ ಪುರುಷನು; ಪುರಾಣ ಪುರುಷನು; ಈ ಪ್ರಕಟಿತ ವಿಶ್ವದ ಕಟ್ಟಕಡೆಯ ಆಶ್ರಯ ನೀನು. ಎಲ್ಲವನ್ನೂ ತಿಳಿದವನು ನೀನು; ತಿಳಿಯಲು ಸಾಧ್ಯವಿರುವುದೆಲ್ಲ ನೀನೇ. ಭೌತಿಕ ಗುಣಗಳನ್ನು ಮೀರಿದ ಪರಂಧಾಮನು ನೀನು. ಹೇ ಅನಂತರೂಪನೆ! ಈ ವಿಶ್ವವನ್ನೆಲ್ಲ ನೀನು ವ್ಯಾಪಿಸಿರುವೆ!**

## ಭಾವಾರ್ಥ

ಎಲ್ಲವೂ ದೇವೋತ್ತಮ ಪರಮ ಪುರುಷನನ್ನು ಅವಲಂಬಿಸಿದೆ. ಆದುದರಿಂದ ಅವನೇ ಕಡೆಯ ಶಾಂತಿಯ ತಾಣ. **ನಿಧಾನಮ್** ಎಂದರೆ ಎಲ್ಲವೂ, ಬ್ರಹ್ಮಜ್ಯೋತಿಯೂ ಸಹ, ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನೇ ಅವಲಂಬಿಸಿದೆ ಎಂದು ಅರ್ಥ. ಈ ಪ್ರಪಂಚದಲ್ಲಿ ನಡೆಯುವುದೆಲ್ಲವನ್ನೂ ತಿಳಿದವನು ಅವನು. ಜ್ಞಾನಕ್ಕೆ ಕೊನೆ ಏನಾದರೂ ಇದ್ದರೆ ಅದು ಅವನೇ. ಆದುದರಿಂದ ಅವನೇ ಜ್ಞಾನ ಮತ್ತು ಜ್ಞೇಯ. ಅವನೇ ಜ್ಞಾನದ ಗುರಿ. ಏಕೆಂದರೆ ಅವನು ಸರ್ವವ್ಯಾಪಿ. ಅವನೇ ಆಧ್ಯಾತ್ಮಿಕ ಜಗತ್ತಿನಲ್ಲಿ ಕಾರಣನು. ಆದುದರಿಂದ ಅವನು ದಿವ್ಯನು. ಅಲೌಕಿಕ ಜಗತ್ತಿನಲ್ಲಿ ಅವನೇ ಪ್ರಧಾನನು.

## ಶ್ಲೋಕ - 39

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ||೩೯||**

**ವಾಯುಃ**—ವಾಯು; **ಯಮಃ**—ಯಮನು; **ಅಗ್ನಿಃ**—ಅಗ್ನಿ; **ವರುಣಃ**—ಜಲವು; **ಶಶ ಅಂಕಃ**—ಚಂದ್ರ; **ಪ್ರಜಾಪತಿಃ**—ಬ್ರಹ್ಮನು; **ತ್ವಮ್**—ನೀನು; **ಪ್ರಪಿತಾಮಹಃ**—ಪ್ರಪಿತಾಮಹನಾದ; **ಚ**—ಕೂಡ; **ನಮಃ**—ನಮಸ್ಕಾರಗಳು; **ನಮಃ**—ಮತ್ತೆ ನನ್ನ ಗೌರವಪೂರ್ವಕ ನಮಸ್ಕಾರಗಳು; **ತೇ**—ನಿನಗೆ; **ಅಸ್ತು**—ಇರಲಿ; **ಸಹಸ್ರ ಕೃತ್ವಃ**—ಸಾವಿರ ಸಲ; **ಪುನಃ ಚ**—ಮತ್ತೆಯೂ; **ಭೂಯಃ**—ಮತ್ತೆ; **ಅಪಿ**—ಕೂಡ; **ನಮಃ**—ನಮಸ್ಕಾರಗಳನ್ನು ಅರ್ಪಿಸುತ್ತೇನೆ; **ನಮಃ ತೇ**—ನಿನಗೆ ನಮಸ್ಕಾರಗಳು.

### ಅನುವಾದ

**ನೀನೇ ವಾಯುವು, ನೀನೇ ಯಮ! ನೀನೇ ಅಗ್ನಿ, ನೀನೇ ಜಲ, ನೀನೇ ಚಂದ್ರನು! ನೀನು ಪ್ರಥಮ ಜೀವಿಯಾದ ಬ್ರಹ್ಮ. ನೀನು ಪ್ರಪಿತಾಮಹ. ನಿನಗೆ ಸಹಸ್ರ ಬಾರಿ ಗೌರವದಿಂದ ಪ್ರಣಾಮ ಮಾಡುತ್ತೇನೆ. ಮತ್ತೆ ಮತ್ತೆ ನಿನಗೆ ನಮಸ್ಕಾರ!**

### ಭಾವಾರ್ಥ

ಪ್ರಭುವನ್ನು ಇಲ್ಲಿ ವಾಯು ಎಂದು ಸಂಬೋಧಿಸಿದೆ. ಏಕೆಂದರೆ ವಾಯುವು ಎಲ್ಲ ದೇವತೆಗಳಲ್ಲಿ ಅತ್ಯಂತ ಮುಖ್ಯವಾದ ಸ್ವರೂಪ. ಅದು ಎಲ್ಲೆಲ್ಲಿಯೂ ಇದೆ. ಅರ್ಜುನನು ಕೃಷ್ಣನನ್ನು ಪ್ರಪಿತಾಮಹನೆಂದೂ ಸಂಬೋಧಿಸುತ್ತಾನೆ. ಏಕೆಂದರೆ ಅವನು ವಿಶ್ವದ ಪ್ರಥಮ ಜೀವಿಯಾದ ಬ್ರಹ್ಮನ ತಂದೆ.

## ಶ್ಲೋಕ - 40

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನನ್ತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥೪೦॥**

**ನಮಃ**—ನಮಸ್ಕಾರಗಳು; **ಪುರಸ್ತಾತ್**—ಮುಂದಿನಿಂದ; **ಅಥ**—ಕೂಡ; **ಪೃಷ್ಠತಃ**—ಹಿಂದಿನಿಂದ; **ತೇ**—ನಿನಗೆ; **ನಮಃ ಅಸ್ತು**—ಗೌರವಗಳನ್ನು ಅರ್ಪಿಸುತ್ತೇನೆ; **ತೇ**—ನಿನಗೆ; **ಸರ್ವತಃ**—ಎಲ್ಲ ಕಡೆಗಳಿಂದಲೂ; **ಏವ**—ನಿಶ್ಚಯವಾಗಿಯೂ; **ಸರ್ವ**—ನೀನು ಪ್ರತಿಯೊಂದೂ ಆಗಿರುವುದರಿಂದ; **ಅನನ್ತ ವೀರ್ಯ**—ಅಪರಿಮಿತ ಶಕ್ತಿಶಾಲಿ; **ಅಮಿತ ವಿಕ್ರಮಃ**—ಮತ್ತು ಅಪರಿಮಿತ ಬಲಶಾಲಿ; **ತ್ವಮ್**—ನೀನು; **ಸರ್ವಮ್**—ಪ್ರತಿಯೊಂದನ್ನೂ; **ಸಮಾಪ್ನೋಷಿ**—ಆವರಿಸುತ್ತೀಯೆ; **ತತಃ**—ಆದ್ದರಿಂದ; **ಅಸಿ**—ಆಗಿದ್ದೀಯೆ; **ಸರ್ವಃ**—ಪ್ರತಿಯೊಂದೂ.

### ಅನುವಾದ

**ನಿನಗೆ ಮುಂದಿನಿಂದ, ಹಿಂದಿನಿಂದ, ಎಲ್ಲ ಕಡೆಗಳಿಂದ ಪ್ರಣಾಮಗಳು! ಅನಂತವೀರ್ಯನೆ, ನೀನು ಅನಂತ ಪರಾಕ್ರಮದ ಪ್ರಭು! ನೀನು ಸರ್ವವ್ಯಾಪಿ. ಆದುದರಿಂದ ಎಲ್ಲವೂ ನೀನೇ.**

### ಭಾವಾರ್ಥ

ತನ್ನ ಗೆಳೆಯನಾದ ಕೃಷ್ಣನ ವಿಷಯದಲ್ಲಿ ಪ್ರೀತಿಯ ಹರ್ಷೋನ್ಮಾದದಲ್ಲಿ ಅರ್ಜುನನು ಕೃಷ್ಣನಿಗೆ ಎಲ್ಲ ಕಡೆಗಳಿಂದ ನಮಸ್ಕಾರವನ್ನು ಅರ್ಪಿಸುತ್ತಾನೆ. ಎಲ್ಲ ಶಕ್ತಿ ಸಾಮರ್ಥ್ಯಗಳ ಪ್ರಭು ಅವನು. ರಣರಂಗದಲ್ಲಿ ನೆರೆದಿರುವ ಎಲ್ಲ ಯೋಧರಿಗಿಂತ ಶ್ರೇಷ್ಠನಾದವನು ಎನ್ನುವುದನ್ನು ಅವನು ಒಪ್ಪುತ್ತಾನೆ. ವಿಷ್ಣು ಪುರಾಣದಲ್ಲಿ ಹೀಗೆ ಹೇಳಿದೆ (1.9.69) —

**ಯೋಽಯಂ ತವಾಗತೋ ದೇವ ಸಮೀಪಂ ದೇವತಾಗಣಃ |**
**ಸ ತ್ವಂ ಏವ ಜಗತ್ ಸ್ರಷ್ಟಾ ಯತಃ ಸರ್ವ ಗತೋ ಭವಾನ್ ||**

"ದೇವೋತ್ತಮ ಪರಮ ಪುರುಷನೆ, ನಿನ್ನ ಮುಂದೆ ಯಾರೇ ಬರಲಿ, ಅವರು ದೇವತೆಗಳೇ ಆಗಿದ್ದರೂ, ಅವರನ್ನು ಸೃಷ್ಟಿಸಿದವನು ನೀನೇ."

## ಶ್ಲೋಕ 41-42

**ಸಖೇತಿ ಮತ್ವಾ ಪ್ರಸಭಂ ಯದುಕ್ತಮ್**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ |**
**ಅಜಾನತಾ ಮಹಿಮಾನಂ ತವೇದಮ್**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ||೪೧||**

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು |**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಮ್**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ||೪೨||**

**ಸಖಾ**—ಸ್ನೇಹಿತನು; **ಇತಿ**—ಎಂದು; **ಮತ್ವಾ**—ತಿಳಿಯುತ್ತ; **ಪ್ರಸಭಮ್**—ಪೂರ್ವಗ್ರಹಿಕೆಯಿಂದ; **ಯತ್**—ಯಾವುದು; **ಉಕ್ತಮ್**—ಹೇಳಲ್ಪಟ್ಟಿದೆಯೋ; **ಹೇ ಕೃಷ್ಣ**—ಕೃಷ್ಣನೇ; **ಹೇ ಯಾದವ**—ಯಾದವನೇ; **ಹೇ ಸಖೇ**—ನನ್ನ ಪ್ರಿಯ ಮಿತ್ರನೇ; **ಇತಿ**—ಹೀಗೆ; **ಅಜಾನತಾ**—ತಿಳಿಯದೆ; **ಮಹಿಮಾನವ್**—ಮಹಿಮೆಗಳನ್ನು; **ತವ**—ನಿನ್ನ; **ಇದವ್**—ಈ; **ಮಯಾ**—ನನ್ನಿಂದ; **ಪ್ರಮಾದಾತ್**—ಮೌಢ್ಯದಿಂದ; **ಪ್ರಣಯೇನ**—ಪ್ರೇಮದಿಂದ; **ವಾಪಿ**—ಅಥವಾ; **ಯತ್**—ಯಾವುದು; **ಚ**—ಕೂಡ; **ಅವಹಾಸ ಅರ್ಥಮ್**—ಪರಿಹಾಸಕ್ಕಾಗಿ; **ಅಸತ್ ಕೃತಃ**—ಅವಮಾನಿತನು; **ಅಸಿ**—ನೀನು ಆಗಿದ್ದೀಯೋ; **ವಿಹಾರ**—ವಿಹಾರದಲ್ಲಿ; **ಶಯ್ಯಾ**—ಮಲಗುವುದರಲ್ಲಿ; **ಆಸನ**—ಕುಳಿತುಕೊಳ್ಳುವಿಕೆಯಲ್ಲಿ; **ಭೋಜನೇಷು**—ಒಟ್ಟಿಗೆ ಊಟಮಾಡುತ್ತಿರುವಲ್ಲಿ; **ಏಕಃ**—ಒಬ್ಬನೇ; **ಅಥವಾ**—ಅಥವಾ; **ಅಪಿ**—ಕೂಡ; **ಅಚ್ಯುತ**—ಚ್ಯುತಿ ಇಲ್ಲದವನೇ; **ತತ್ ಸಮಕ್ಷಮ್**—ಒಡನಾಡಿಗಳಲ್ಲಿ; **ತತ್**—ಅವೆಲ್ಲವನ್ನೂ; **ಕ್ಷಾಮಯೇ**—ಕ್ಷಮೆಯಾಚಿಸುತ್ತೇನೆ; **ತ್ವಾಮ್**—ನಿನ್ನಲ್ಲಿ; **ಅಹಮ್**—ನಾನು; **ಅಪ್ರಮೇಯಮ್**—ಅಪ್ರಮೇಯನಾದ.

## ಅನುವಾದ

**ನಿನ್ನ ಮಹಿಮೆಗಳನ್ನು ತಿಳಿಯದೆ, ನೀನು ನನ್ನ ಸಖನೆಂದು ಭಾವಿಸಿ, ಯೋಚನೆ ಮಾಡದೆ ನಿನ್ನನ್ನು 'ಕೃಷ್ಣಾ', 'ಯಾದವ', 'ಓ ಗೆಳೆಯಾ' ಎಂದೆಲ್ಲ ಕರೆದಿದ್ದೇನೆ. ಪ್ರಮಾದದಿಂದಾಗಲಿ ಪ್ರೀತಿಯಿಂದಾಗಲಿ ನಾನು ಮಾಡಿರುವ ಅಪರಾಧಗಳನ್ನು ಕ್ಷಮಿಸು. ವಿಹಾರದಲ್ಲಿ, ಒಂದೇ ಹಾಸಿಗೆಯಲ್ಲಿ ಮಲಗಿದ್ದಾಗ, ನಾವಿಬ್ಬರೇ ಇದ್ದಾಗ, ಸ್ನೇಹಿತರ ಮುಂದೆ ನಾನು ನಿನ್ನನ್ನು ಅನೇಕ ಬಾರಿ ಅಪಹಾಸ್ಯ ಮಾಡಿದ್ದೇನೆ. ಅಚ್ಯುತನೇ, ಇವಕ್ಕೆಲ್ಲ ನಾನು ನಿನ್ನ ಕ್ಷಮೆ ಬೇಡುತ್ತೇನೆ.**

### ಭಾವಾರ್ಥ

ಕೃಷ್ಣನು ತನ್ನ ವಿಶ್ವರೂಪದಲ್ಲಿ ಅರ್ಜುನನ ಮುಂದೆ ಪ್ರಕಟನಾದರೂ, ಅರ್ಜುನನು ಕೃಷ್ಣನೊಡನೆ ತನ್ನ ಗೆಳೆತನದ ಸಂಬಂಧವನ್ನು ಸ್ಮರಿಸಿಕೊಂಡು ಕ್ಷಮೆ ಬೇಡುತ್ತಾನೆ. ಸ್ನೇಹದಿಂದ ಮಾಡುವ ಸಲಿಗೆಯ ಹಲವು ರೀತಿಗಳಿಗಾಗಿ ತನ್ನನ್ನು ಕ್ಷಮಿಸುವಂತೆ ಕೇಳಿಕೊಳ್ಳುತ್ತಾನೆ. ಕೃಷ್ಣನು ತನ್ನ ಆತ್ಮೀಯ ಸಖನಾಗಿ ಎಲ್ಲವನ್ನೂ ವಿವರಿಸಿದ್ದರೂ, ಅವನು ಇಂತಹ ವಿಶ್ವರೂಪವನ್ನು ಧರಿಸಬಲ್ಲ ಎಂದು ತನಗೆ ತಿಳಿದಿರಲಿಲ್ಲ ಎಂದು ಒಪ್ಪಿಕೊಳ್ಳುತ್ತಾನೆ. ಕೃಷ್ಣನ ಸಿರಿಯನ್ನು ಗುರುತಿಸದೆ, ಅವನನ್ನು 'ಗೆಳೆಯಾ', 'ಕೃಷ್ಣಾ', 'ಯಾದವಾ' ಎಂದು ಸಂಬೋಧಿಸಿ ಎಷ್ಟು ಬಾರಿ ಅವನಿಗೆ ಅಪಮಾನ ಮಾಡಿರುವನೋ ಅರ್ಜುನನಿಗೆ ತಿಳಿಯದು. ಆದರೆ ಕೃಷ್ಣನು ಎಷ್ಟು ದಯಾಮಯ ಮತ್ತು ಕರುಣಾಳು ಎಂದರೆ ಇಷ್ಟು ಸಿರಿ ಇದ್ದೂ ಅರ್ಜುನನೊಡನೆ ಗೆಳೆಯನಾಗಿ ಆಡಿದ. ಭಕ್ತ ಮತ್ತು ಭಗವಂತರ ನಡುವೆ ಇರುವ ಪರಸ್ಪರ ದಿವ್ಯಪ್ರೀತಿ ಇಂತಹದು. ಜೀವಿ ಮತ್ತು ಕೃಷ್ಣನ ನಡುವಣ ಬಾಂಧವ್ಯವು ನಿರಂತರವಾದದ್ದು. ಅರ್ಜುನನ ವರ್ತನೆಯಲ್ಲಿ ನಾವು ಕಾಣುವಂತೆ, ಅದನ್ನು ಮರೆಯಲು ಸಾಧ್ಯವಿಲ್ಲ. ಅರ್ಜುನನು ವಿಶ್ವರೂಪದ ಸಿರಿಯನ್ನು ಕಂಡಿದ್ದರೂ ಕೃಷ್ಣನೊಡನೆ ತನಗಿರುವ ಸ್ನೇಹದ ಸಂಬಂಧವನ್ನು ಅವನು ಮರೆಯಲಾರ.

### ಶ್ಲೋಕ - 43

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ |**
**ನ ತ್ವತ್ಸಮೋऽಸ್ತ್ಯಭ್ಯಧಿಕಃ ಕುತೋऽನ್ಯೋ**
**ಲೋಕತ್ರಯೇऽಪ್ಯಪ್ರತಿಮಪ್ರಭಾವ ||೪೩||**

**ಪಿತಾ**—ತಂದೆಯು; **ಅಸಿ**—ಆಗಿದ್ದೀಯೆ; **ಲೋಕಸ್ಯ**—ಸಕಲ ಲೋಕಗಳ; **ಚರ**—ಚಲಿಸುವ; **ಅಚರಸ್ಯ**—ಚಲಿಸದಿರುವ; **ತ್ವಮ್**—ನೀನು; **ಅಸ್ಯ**—ಈ; **ಪೂಜ್ಯಃ**—ಪೂಜನೀಯನು; **ಚ**—ಕೂಡ; **ಗುರುಃ**—ಗುರುವು; **ಗರೀಯಾನ್**—ಮಹಿಮಾನ್ವಿತನು; **ನ**—ಎಂದಿಗೂ ಇಲ್ಲ; **ತ್ವತ್ ಸಮಃ**—ನಿನಗೆ ಸಮಾನನು; **ಅಸ್ತಿ**—ಇದ್ದಾನೆ; **ಅಭ್ಯಧಿಕಃ**—ಉನ್ನತನು; **ಕುತಃ**—ಹೇಗೆ ಸಾಧ್ಯ; **ಅನ್ಯಃ**—ಬೇರೊಬ್ಬನು; **ಲೋಕತ್ರಯೇ**—ಮೂರು ಲೋಕಗಳಲ್ಲಿ; **ಅಪಿ**—ಕೂಡ; **ಅಪ್ರತಿಮ ಪ್ರಭಾವ**—ಅಳತೆ ಮಾಡಲಾಗದಷ್ಟು ಬಲಶಾಲಿಯಾದವನೇ.

### ಅನುವಾದ

**ಈ ಸಮಸ್ತ ವಿಶ್ವಕ್ಕೆ, ಚರಾಚರವಾದುದೆಲ್ಲಕ್ಕೆ ನೀನೇ ತಂದೆ. ನೀನು ಪೂಜ್ಯನು, ಪರಮ ಗುರುವು. ನಿನಗೆ ಸಮಾನರಾದವರು ಯಾರೂ ಇಲ್ಲ, ಯಾರೂ ನಿನ್ನೊಡನೆ ಒಂದಾಗಿರುವುದಿಲ್ಲ. ಆದುದರಿಂದ, ಅಪರಿಮಿತ ಪ್ರಭಾವದ ಪ್ರಭುವೆ, ಮೂರು ಲೋಕಗಳಲ್ಲಿ ನಿನಗಿಂತ ಶ್ರೇಷ್ಠರಾದವರು ಯಾರಿದ್ದಾರೆ?**

### ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನು ಮಗನಿಗೆ ತಂದೆಯು ಪೂಜ್ಯನಾದಂತೆ

ಪೂಜ್ಯನು. ಮೂಲತಃ ಬ್ರಹ್ಮನಿಗೆ ವೇದಗಳನ್ನು ಬೋಧಿಸಿದವನು ಮತ್ತು ಈಗ ಭಗವದ್ಗೀತೆಯನ್ನು ಅರ್ಜುನನಿಗೆ ಬೋಧಿಸುತ್ತಿರುವವನು ಆತನೇ. ಆದುದರಿಂದಲೇ ಆತನು ಆದಿ ಗುರು. ಈ ಕ್ಷಣದಲ್ಲಿ ನಿಜವಾದ ಗುರುವಾಗಿರುವ ಯಾರೇ ಆಗಲಿ ಕೃಷ್ಣನಿಂದ ಪ್ರಾರಂಭವಾದ ಗುರು ಶಿಷ್ಯ ಪರಂಪರೆಯಲ್ಲಿ ಬಂದವರು. ಕೃಷ್ಣನ ಪ್ರತಿನಿಧಿಯಾಗದೆ ಯಾರೂ ಅಲೌಕಿಕ ವಿಷಯದಲ್ಲಿ ಗುರುವಾಗಲು ಸಾಧ್ಯವಿಲ್ಲ.

ಭಗವಂತನಿಗೆ ಎಲ್ಲ ರೀತಿಗಳಲ್ಲಿ ಪ್ರಣಾಮಗಳನ್ನು ಅರ್ಪಿಸಲಾಗುತ್ತಿದೆ. ಆತನ ಮಹಿಮೆಯು ಅಪರಿಮಿತವಾದದ್ದು. ಅಲೌಕಿಕವಾದ ಅಥವಾ ಐಹಿಕವಾದ ಯಾವುದೇ ಅಭಿವ್ಯಕ್ತಿಯಲ್ಲಿ ಕೃಷ್ಣನಿಗೆ ಸಮನಾದವರು ಅಥವಾ ಅವನಿಗಿಂತ ಶ್ರೇಷ್ಠರಾದವರು ಯಾರೂ ಇಲ್ಲ. ಆದುದರಿಂದ ದೇವೋತ್ತಮ ಪರಮ ಪುರುಷನಾದ ಕೃಷ್ಣನಿಗಿಂತ ಮೇಲಿನವರು ಯಾರೂ ಇಲ್ಲ. ಎಲ್ಲರೂ ಅವನಿಗಿಂತ ಕೆಳಗಿನ ಸ್ಥಾನದಲ್ಲಿರುವವರು. ಅವನನ್ನು ಮೀರಬಲ್ಲವರು ಯಾರೂ ಇಲ್ಲ. ಇದನ್ನು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದೆ (6.8) —

ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ |
ನ ತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ ||

ಪರಮ ಪ್ರಭುವಾದ ಕೃಷ್ಣನಿಗೆ ಸಾಮಾನ್ಯ ಮನುಷ್ಯನಿಗಿರುವಂತೆಯೇ ಇಂದ್ರಿಯಗಳೂ ದೇಹವೂ ಉಂಟು. ಆದರೆ ಅವನ ಮಟ್ಟಿಗೆ ಅವನ ಇಂದ್ರಿಯಗಳು, ಅವನ ದೇಹ, ಅವನ ಮನಸ್ಸು ಮತ್ತು ಅವನು ಇವುಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲ. ಕೃಷ್ಣನು ತನ್ನ ಆತ್ಮ, ಮನಸ್ಸು, ಹೃದಯ ಮತ್ತು ಬೇರೆ ಎಲ್ಲದರಿಂದ ಬೇರೆ ಎಂದು ಅವನನ್ನು ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳಲಾರದ ಮೂಢರು ಹೇಳುತ್ತಾರೆ. ಕೃಷ್ಣನು ಪರಮ ಪ್ರಭುವು; ಆದುದರಿಂದ ಅವನ ಚಟುವಟಿಕೆಗಳು ಮತ್ತು ಸಾಮರ್ಥ್ಯವು ಪರಮವಾದವು. ನಮ್ಮ ಇಂದ್ರಿಯಗಳಂತೆ ಅವನಿಗೆ ಇಂದ್ರಿಯಗಳಿಲ್ಲದಿದ್ದರೂ ಆತನು ಎಲ್ಲ ಇಂದ್ರಿಯ ಕ್ರಿಯೆಗಳನ್ನು ಮಾಡಬಲ್ಲನು. ಆದುದರಿಂದ ಅವನ ಇಂದ್ರಿಯಗಳು ದೋಷಪೂರ್ಣವೂ ಅಲ್ಲ, ಮಿತವೂ ಅಲ್ಲ. ಅವನಿಗಿಂತ ಶ್ರೇಷ್ಠರು ಯಾರೂ ಇಲ್ಲ. ಅವನಿಗೆ ಯಾರೂ ಸಮಾನರಿಲ್ಲ ಮತ್ತು ಪ್ರತಿಯೊಬ್ಬರೂ ಅವನಿಗಿಂತ ಕೆಳಗಿರುವವರೇ.

ದೇವೋತ್ತಮ ಪರಮ ಪುರುಷನ ಜ್ಞಾನ, ಶಕ್ತಿ ಮತ್ತು ಚಟುವಟಿಕೆಗಳೆಲ್ಲ ದಿವ್ಯವಾದವು. ಭಗವದ್ಗೀತೆಯಲ್ಲಿ (4.9) ಹೇಳಿದಂತೆ

ಜನ್ಮ ಕರ್ಮ ಚ ಮೇ ದಿವ್ಯಮ್ ಏವಂ ಯೋ ವೇತ್ತಿ ತತ್ತ್ವತಃ |
ತ್ಯಕ್ತ್ವಾ ದೇಹಂ ಪುನರ್ ಜನ್ಮ ನೈತಿ ಮಾಮ್ ಏತಿ ಸೋಽರ್ಜುನ ||

ಕೃಷ್ಣನ ದಿವ್ಯಶರೀರ, ಚಟುವಟಿಕೆಗಳು ಮತ್ತು ಪರಿಪೂರ್ಣತೆಯನ್ನು ಬಲ್ಲ ಯಾರೇ ಆಗಲಿ ದೇಹವನ್ನು ತ್ಯಜಿಸಿದ ಅನಂತರ ಅವನ (ಕೃಷ್ಣನ) ಬಳಿಗೆ ಹಿಂತಿರುಗುತ್ತಾರೆ. ಈ ದುಃಖಮಯ ಜಗತ್ತಿಗೆ ಹಿಂದಿರುಗುವುದಿಲ್ಲ. ಆದುದರಿಂದ ಕೃಷ್ಣನ ಚಟುವಟಿಕೆಗಳು ಇತರರ ಚಟುವಟಿಕೆಗಳಿಗಿಂತ ಭಿನ್ನವಾದವು ಎನ್ನುವುದನ್ನು ತಿಳಿದುಕೊಳ್ಳಬೇಕು. ಅತ್ಯುತ್ತಮ ನೀತಿ ಎಂದರೆ ಕೃಷ್ಣನ ತತ್ವಗಳನ್ನು ಅನುಸರಿಸುವುದು; ಇದು ಮನುಷ್ಯನನ್ನು ಪರಿಪೂರ್ಣನನ್ನಾಗಿ ಮಾಡುತ್ತದೆ.

ಕೃಷ್ಣನಿಗೆ ಯಾರೂ ಒಡೆಯರಲ್ಲ, ಎಲ್ಲರೂ ಅವನ ಸೇವಕರು ಎಂದು ಹೇಳಿದೆ. ಚೈತನ್ಯ ಚರಿತಾಮೃತವು (ಆದಿ 5.142) ಇದನ್ನು ದೃಢಪಡಿಸುತ್ತದೆ — **ಏಕಲೇ ಈಶ್ವರ ಕೃಷ್ಣ, ಆರ ಸಬ ಭೃತ್ಯ** — ಕೃಷ್ಣನೊಬ್ಬನೇ ದೇವರು, ಬೇರೆ ಪ್ರತಿಯೊಬ್ಬರೂ ಅವನ ಸೇವಕರು. ಪ್ರತಿಯೊಬ್ಬರೂ ಅವನ ಅಪ್ಪಣೆಯನ್ನು ನಡೆಸುತ್ತಾರೆ. ಅವನ ಅಪ್ಪಣೆಯನ್ನು ತಿರಸ್ಕರಿಸಬಲ್ಲವರು ಯಾರೂ ಇಲ್ಲ. ಪ್ರತಿಯೊಬ್ಬರೂ ಅವನ ಮೇಲ್ವಿಚಾರಣೆಯಲ್ಲಿ ಇರುವುದರಿಂದ ಅವನ ಮಾರ್ಗದರ್ಶನದಂತೆ ನಡೆದುಕೊಳ್ಳುತ್ತಾರೆ. ಬ್ರಹ್ಮ ಸಂಹಿತೆಯಲ್ಲಿ ಹೇಳಿರುವಂತೆ ಅವನು ಎಲ್ಲ ಕಾರಣಗಳ ಕಾರಣನು.

## ಶ್ಲೋಕ - 44

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಮ್**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ |**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ||೪೪||**

**ತಸ್ಮಾತ್**—ಆದ್ದರಿಂದ; **ಪ್ರಣಮ್ಯ**—ನಮಸ್ಕರಿಸುತ್ತ; **ಪ್ರಣಿಧಾಯ**—ನೆಲಕ್ಕೊರಗಿಸಿ; **ಕಾಯಮ್**—ದೇಹವನ್ನು; **ಪ್ರಸಾದಯೇ**—ಅನುಗ್ರಹಯಾಚಿಸುವೆನು; **ತ್ವಾಮ್**—ನಿನಗೆ; **ಅಹಮ್**—ನಾನು; **ಈಶಮ್**—ಪರಮ ಪ್ರಭುವಾದ; **ಈಡ್ಯಮ್**—ಪೂಜನೀಯನಾದ; **ಪಿತಾ ಇವ**—ತಂದೆಯಂತೆ; **ಪುತ್ರಸ್ಯ**—ಮಗನೊಂದಿಗೆ; **ಸಖಾ ಇವ**—ಸ್ನೇಹಿತನಂತೆ; **ಸಖ್ಯುಃ**—ಮಿತ್ರನೊಂದಿಗೆ; **ಪ್ರಿಯಃ**—ಪ್ರಿಯಕರನು; **ಪ್ರಿಯಾಯಾಃ**—ಪ್ರಿಯತಮೆಯೊಂದಿಗೆ; **ಅರ್ಹಸಿ**—ಅರ್ಹನಾಗಿದ್ದೀಯೆ; **ದೇವ**—ನನ್ನ ಪ್ರಭುವೇ; **ಸೋಢುಮ್**—ಸಹಿಸಲು.

## ಅನುವಾದ

**ಪ್ರತಿಯೊಂದು ಜೀವಿಯು ಪೂಜಿಸಬೇಕಾದ ಪರಮ ಪ್ರಭುವು ನೀನು. ನಾನು ಸಾಷ್ಟಾಂಗ ನಮಸ್ಕಾರ ಮಾಡಿ ನನ್ನ ಗೌರವಪೂರ್ವಕ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ನಿನ್ನ ದಯೆಯನ್ನು ಬೇಡುತ್ತೇನೆ. ತಂದೆಯು ಮಗನ ಅವಿಧೇಯತೆಯನ್ನು, ಸ್ನೇಹಿತನು ಸ್ನೇಹಿತನ ಅಧಿಕ ಪ್ರಸಂಗವನ್ನು ಮತ್ತು ಹೆಂಡತಿಯು ತನ್ನ ಗಂಡನ ಸಲಿಗೆಯನ್ನು ಕ್ಷಮಿಸುವಂತೆ, ನೀನು ನಾನು ಮಾಡಿರಬಹುದಾದ ತಪ್ಪುಗಳನ್ನು ಕ್ಷಮಿಸು.**

## ಭಾವಾರ್ಥ

ಕೃಷ್ಣನ ಭಕ್ತರು ಕೃಷ್ಣನೊಂದಿಗೆ ಬೇರೆ ಬೇರೆ ಸಂಬಂಧಗಳನ್ನು ಸಾಧಿಸಿಕೊಳ್ಳುತ್ತಾರೆ. ಕೃಷ್ಣನನ್ನು ಮಗನಂತೆ, ಗಂಡನಂತೆ, ಸ್ನೇಹಿತನಂತೆ ಅಥವಾ ಒಡೆಯನಂತೆ ಕಾಣಬಹುದು. ಕೃಷ್ಣಾರ್ಜುನರದು ಸಖ್ಯಭಾವ. ತಂದೆ, ಗಂಡ ಅಥವಾ ಒಡೆಯನು ಸಹಿಸಿಕೊಳ್ಳುವಂತೆ ಕೃಷ್ಣನೂ ಸಹಿಸಿಕೊಳ್ಳುತ್ತಾನೆ.

## ಶ್ಲೋಕ - 45

**ಅದೃಷ್ಟಪೂರ್ವಂ ಹೃಷಿತೋऽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಮ್**
**ಪ್ರಸೀದ ದೇವೇಶ ಜಗನ್ನಿವಾಸ ॥೪೫॥**

**ಅದೃಷ್ಟ ಪೂರ್ವಮ್**—ಹಿಂದೆಂದೂ ನೋಡದ್ದನ್ನು; **ಹೃಷಿತಃ**—ಹರ್ಷಿತನಾದವನು; **ಅಸ್ಮಿ**—ಆಗಿದ್ದೇನೆ; **ದೃಷ್ಟ್ವಾ**—ನೋಡಿ; **ಭಯೇನ**—ಹೆದರಿಕೆಯಿಂದ; **ಚ**—ಕೂಡ; **ಪ್ರವ್ಯಥಿತಮ್**—ಕ್ಷೋಭೆಗೊಂಡಿದೆ; **ಮನಃ**—ಮನಸ್ಸು; **ಮೇ**—ನನ್ನ; **ತತ್**—ಅ; **ಏವ**—ಖಂಡಿತವಾಗಿಯೂ; **ಮೇ**—ನನಗೆ; **ದರ್ಶಯ**—ತೋರಿಸು; **ದೇವ**—ಪ್ರಭುವೇ; **ರೂಪಮ್**—ರೂಪವನ್ನು; **ಪ್ರಸೀದ**—ಅನುಗ್ರಹಿಸು; **ದೇವೇಶ**—ದೇವಾಧಿದೇವನೇ; **ಜಗತ್ ನಿವಾಸ**—ವಿಶ್ವಾಶ್ರಯನೇ.

### ಅನುವಾದ

**ನಾನು ಹಿಂದೆ ನೋಡದಿದ್ದ ಈ ವಿಶ್ವರೂಪವನ್ನು ಕಂಡು ಸಂತೋಷಪಟ್ಟಿದ್ದೇನೆ. ಆದರೆ ಅದೇ ಕಾಲದಲ್ಲಿ ನನ್ನ ಮನಸ್ಸು ಭಯದಿಂದ ತಲ್ಲಣಗೊಂಡಿದೆ. ಹೇ ಪ್ರಭುಗಳ ಪ್ರಭುವೇ, ಜಗನ್ನಿವಾಸನೇ, ನನ್ನಲ್ಲಿ ಕೃಪೆಮಾಡಿ ದೇವೋತ್ತಮ ಪರಮ ಪುರುಷನಾದ ನಿನ್ನ ರೂಪವನ್ನು ನನಗೆ ಮತ್ತೆ ತೋರಿಸು.**

### ಭಾವಾರ್ಥ

ಅರ್ಜುನನು ಕೃಷ್ಣನ ಪರಮ ಪ್ರಿಯಸಖನಾದದ್ದರಿಂದ ಯಾವಾಗಲೂ ಆತನಿಗೆ ಪ್ರೀತಿಪಾತ್ರನು. ಅರ್ಜುನನು ಪ್ರಿಯಸ್ನೇಹಿತನಾಗಿ ತನ್ನ ಸ್ನೇಹಿತನ ಸಿರಿಯನ್ನು ಕಂಡು ಹರ್ಷಪಟ್ಟಿದ್ದಾನೆ. ತನ್ನ ಸ್ನೇಹಿತನಾದ ಕೃಷ್ಣನು ದೇವೋತ್ತಮ ಪರಮ ಪುರುಷ ಮತ್ತು ಇಂತಹ ಅದ್ಭುತವಾದ ವಿಶ್ವರೂಪವನ್ನು ತೋರಿಸಬಲ್ಲ ಎಂದು ಅರ್ಜುನನಿಗೆ ಸಂತೋಷವಾಗಿದೆ. ಆದರೆ ಅದೇ ಕಾಲದಲ್ಲಿ ವಿಶ್ವರೂಪವನ್ನು ಕಂಡು ತನ್ನ ಪರಿಶುದ್ಧ ಸ್ನೇಹದ ಕಾರಣದಿಂದ ಕೃಷ್ಣನ ವಿಷಯದಲ್ಲಿ ಹಲವು ಅಪರಾಧಗಳನ್ನು ಮಾಡಿದ್ದೇನೆ ಎಂದು ಅವನಿಗೆ ಭಯವಾಗುತ್ತದೆ. ಹೀಗೆ ಅವನು ಭಯಪಡಲು ಕಾರಣವೇ ಇಲ್ಲದಿದ್ದರೂ ಭಯದಿಂದ ಅವನ ಮನಸ್ಸು ವ್ಯಗ್ರವಾಗಿದೆ. ಆದುದರಿಂದ ಕೃಷ್ಣನು ತನ್ನ ನಾರಾಯಣ ರೂಪವನ್ನು ತೋರಬೇಕೆಂದು ಅರ್ಜುನನು ಬೇಡುತ್ತಿದ್ದಾನೆ. ಏಕೆಂದರೆ ಕೃಷ್ಣನು ಯಾವ ರೂಪವನ್ನಾದರೂ ಧರಿಸಬಲ್ಲ. ಈ ವಿಶ್ವರೂಪವು ಐಹಿಕವಾದದ್ದು ಮತ್ತು ಸ್ವಲ್ಪಕಾಲದ್ದು. ಏಕೆಂದರೆ ಈ ಐಹಿಕ ಜಗತ್ತು ಅಲ್ಪ ಕಾಲದ್ದು. ಆದರೆ ವೈಕುಂಠ ಲೋಕಗಳಲ್ಲಿ ಅವನಿಗೆ ಚತುರ್ಭುಜನಾದ ನಾರಾಯಣನ ದಿವ್ಯ ರೂಪವಿದೆ. ಆಧ್ಯಾತ್ಮಿಕ ಗಗನದಲ್ಲಿ ಲೆಕ್ಕವಿಲ್ಲದಷ್ಟು ಲೋಕಗಳಿವೆ. ಬೇರೆ ಬೇರೆ ಹೆಸರುಗಳ ತನ್ನ ಪರಿಪೂರ್ಣವಿಸ್ತರಣೆಗಳಿಂದ ಕೃಷ್ಣನು ಪ್ರತಿಯೊಂದು ಲೋಕದಲ್ಲಿಯೂ ಇದ್ದಾನೆ. ವೈಕುಂಠ ಲೋಕಗಳ ಪ್ರಕಟವಾದ ರೂಪಗಳಲ್ಲಿ ಒಂದನ್ನು ಕಾಣಲು ಅರ್ಜುನನು ಬಯಸುತ್ತಾನೆ. ಪ್ರತಿಯೊಂದು ವೈಕುಂಠ ಲೋಕದಲ್ಲಿಯೂ ನಾರಾಯಣ ರೂಪಕ್ಕೆ ನಾಲ್ಕು ಭುಜಗಳಿವೆ. ಆದರೆ ಶಂಖ, ಗದೆ, ಪದ್ಮ ಮತ್ತು ಚಕ್ರ ಈ

ಸಂಕೇತಗಳ ಜೋಡಣೆಯು ಬೇರೆ ಬೇರೆಯಾಗಿರುತ್ತವೆ. ಈ ನಾಲ್ಕು ವಸ್ತುಗಳನ್ನು ಬೇರೆ ಬೇರೆ ಕೈಗಳು ಹಿಡಿದಿರುವುದಕ್ಕೆ ಅನುಗುಣವಾಗಿ ನಾರಾಯಣನಿಗೆ ಬೇರೆ ಬೇರೆ ಹೆಸರುಗಳುಂಟು. ಈ ಎಲ್ಲ ರೂಪಗಳೂ ಕೃಷ್ಣನಿಂದ ಅಭಿನ್ನ; ಆದುದರಿಂದ ಅರ್ಜುನನು ಈ ಚತುರ್ಭುಜ ರೂಪವನ್ನು ತನಗೆ ತೋರಿಸಬೇಕೆಂದು ಪ್ರಾರ್ಥಿಸುತ್ತಾನೆ.

## ಶ್ಲೋಕ - 46

**ಕಿರೀಟಿನಂ ಗದಿನಂ ಚಕ್ರಹಸ್ತಮ್**
**ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥೪೬॥**

**ಕಿರೀಟಿನಮ್**—ಕಿರೀಟದೊಂದಿಗೆ; **ಗದಿನಮ್**—ಗದೆಯೊಡನೆ; **ಚಕ್ರಹಸ್ತಮ್**—ಚಕ್ರ ಪಾಣಿಯಾಗಿ; **ಇಚ್ಛಾಮಿ**—ಅಪೇಕ್ಷಿಸುತ್ತೇನೆ; **ತ್ವಾಮ್**—ನಿನ್ನನ್ನು; **ದ್ರಷ್ಟುಮ್**—ನೋಡಲು; **ಅಹಮ್**—ನಾನು; **ತಥಾ ಏವ**—ಆ ಸ್ಥಿತಿಯ; **ತೇನ ಏವ**—ಅದೇ; **ರೂಪೇಣ**—ರೂಪದಿಂದ; **ಚತುಃ ಭುಜೇನ**—ನಾಲ್ಕು ತೋಳುಗಳುಳ್ಳ; **ಸಹಸ್ರಬಾಹೋ**—ಸಾವಿರತೋಳುಗಳುಳ್ಳವನೇ; **ಭವ**—ಆಗು; **ವಿಶ್ವಮೂರ್ತೇ**—ವಿಶ್ವರೂಪಿಯೇ.

## ಅನುವಾದ

**ಹೇ ವಿಶ್ವಮೂರ್ತಿಯೇ, ಸಹಸ್ರಬಾಹುವೇ, ಕಿರೀಟಧಾರಿಯಾಗಿ ಗದೆ, ಚಕ್ರ, ಶಂಖ ಮತ್ತು ಪದ್ಮಗಳನ್ನು ಕೈಗಳಲ್ಲಿ ಹಿಡಿದಿರುವ ನಿನ್ನ ಚತುರ್ಭುಜ ರೂಪವನ್ನು ನಾನು ನೋಡಲು ಬಯಸುತ್ತೇನೆ.**

## ಭಾವಾರ್ಥ

ಬ್ರಹ್ಮಸಂಹಿತೆಯಲ್ಲಿ (5.39) **ರಾಮಾದಿ ಮೂರ್ತಿಷು ಕಲಾನಿಯಮೇನ ತಿಷ್ಠನ್**—ಭಗವಂತನು ನಿರಂತರವಾಗಿ ನೂರಾರು ಮತ್ತು ಸಾವಿರಾರು ರೂಪಗಳಲ್ಲಿ ನೆಲೆಸಿರುತ್ತಾನೆ ಮತ್ತು ರಾಮ, ನೃಸಿಂಹ, ನಾರಾಯಣ ಮೊದಲಾದವು ಮುಖ್ಯ ರೂಪಗಳು ಎಂದು ಹೇಳಿದೆ. ಕೃಷ್ಣನೇ ಮೂಲ ದೇವೋತ್ತಮ ಪುರುಷ ಮತ್ತು ಅವನು ತಾತ್ಕಾಲಿಕವಾಗಿ ವಿಶ್ವರೂಪವನ್ನು ಧರಿಸಿದ್ದಾನೆ ಎಂದು ಅರ್ಜುನನಿಗೆ ಗೊತ್ತಿತ್ತು. ಈಗ ಅವನು ದಿವ್ಯರೂಪವಾದ ನಾರಾಯಣ ರೂಪವನ್ನು ಕಾಣಬೇಕೆಂದು ಪ್ರಾರ್ಥಿಸುತ್ತಿದ್ದಾನೆ. ಕೃಷ್ಣನು ಮೂಲ ದೇವೋತ್ತಮ ಪರಮ ಪುರುಷನು ಮತ್ತು ಇತರ ಎಲ್ಲ ರೂಪಗಳಿಗೂ ಅವನೇ ಮೂಲ ಎಂದು ಶ್ರೀಮದ್ಭಾಗವತದಲ್ಲಿ ಹೇಳಿದೆ. ಈ ಶ್ಲೋಕವು ಸಂದೇಹವಿಲ್ಲದಂತೆ ಈ ಹೇಳಿಕೆಯನ್ನು ಸಿದ್ಧಮಾಡಿ ತೋರಿಸುತ್ತದೆ. ಆತನು ತನ್ನ ಸ್ವಾಂಶ ವಿಸ್ತರಣೆಗಳಿಂದ ಭಿನ್ನನಲ್ಲ ಮತ್ತು ತನ್ನ ಅಸಂಖ್ಯಾತ ರೂಪಗಳಲ್ಲಿ ಯಾವ ರೂಪದಲ್ಲಿಯೇ ಆಗಲಿ ಅವನು ದೇವರು. ಈ ಎಲ್ಲ ರೂಪಗಳಲ್ಲಿಯೂ ಆತನು ಯುವಕನಂತೆ ಹೊಸ ಕಳೆಯಿಂದಿರುತ್ತಾನೆ. ಕೃಷ್ಣನನ್ನು ಬಲ್ಲವನು ಐಹಿಕ ಜಗತ್ತಿನ ಕಲ್ಮಷದ ಸೋಂಕಿನಿಂದ ಕೂಡಲೇ ಬಿಡುಗಡೆಯಾಗುತ್ತಾನೆ.

## ಶ್ಲೋಕ - 47

**ಶ್ರೀ ಭಗವಾನುವಾಚ**

**ಮಯಾ ಪ್ರಸನ್ನೇನ ತವಾರ್ಜುನೇದಮ್**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನನ್ತಮಾದ್ಯಮ್**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥೪೭॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಮಯಾ**—ನನ್ನಿಂದ; **ಪ್ರಸನ್ನೇನ**—ಪ್ರಸನ್ನನಾದ; **ತವ**—ನಿನಗೆ; **ಅರ್ಜುನ**—ಅರ್ಜುನನೇ; **ಇದಮ್**—ಈ; **ರೂಪಮ್**—ರೂಪವನ್ನು; **ಪರಮ್**—ದಿವ್ಯವಾದ; **ದರ್ಶಿತಮ್**—ತೋರಿಸಲಾಗಿದೆ; **ಆತ್ಮಯೋಗಾತ್**—ನನ್ನ ಅಂತರಂಗಶಕ್ತಿಯಿಂದ; **ತೇಜಃ ಮಯಮ್**—ತೇಜೋಮಯವಾದ; **ವಿಶ್ವಮ್**—ಪೂರ್ಣ ಬ್ರಹ್ಮಾಂಡವಾದ; **ಅನನ್ತಮ್**—ಅಪರಿಮಿತವಾದ; **ಆದ್ಯಮ್**—ಮೂಲವಾದ; **ಯತ್**—ಯಾವ; **ಮೇ**—ನನ್ನ; **ತ್ವತ್ ಅನ್ಯೇನ**—ನಿನ್ನನ್ನುಳಿದು; **ನ ದೃಷ್ಟ ಪೂರ್ವಮ್**—ಹಿಂದೆ ಬೇರೆ ಯಾರೂ ನೋಡಿರದ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಪ್ರಿಯ ಅರ್ಜುನ, ನಾನು ಪ್ರಸನ್ನನಾಗಿ ನನ್ನ ಅಂತರಂಗಶಕ್ತಿಯಿಂದ ಈ ಐಹಿಕ ಜಗತ್ತಿನಲ್ಲಿ ಈ ಪರಮ ವಿಶ್ವರೂಪವನ್ನು ನಿನಗೆ ತೋರಿಸಿದ್ದೇನೆ. ಅನಂತವೂ, ತೇಜೋಮಯವೂ ಆದ ಈ ಆದಿ ರೂಪವನ್ನು ನಿನಗೆ ಮೊದಲು ಯಾರೂ ನೋಡಿಲ್ಲ.**

## ಭಾವಾರ್ಥ

ಅರ್ಜುನನು ಪರಮ ಪ್ರಭುವಿನ ವಿಶ್ವರೂಪವನ್ನು ಕಾಣಲು ಬಯಸಿದನು. ಆದುದರಿಂದ ತನ್ನ ಭಕ್ತನಾದ ಅರ್ಜುನನಲ್ಲಿ ಇದ್ದ ದಯೆಯಿಂದ ಶ್ರೀಕೃಷ್ಣನು ತೇಜಸ್ಸು ಮತ್ತು ಸಿರಿಗಳಿಂದ ಕೂಡಿದ ವಿಶ್ವರೂಪವನ್ನು ತೋರಿಸಿದನು. ಈ ರೂಪವು ಸೂರ್ಯನಂತೆ ಕಣ್ಣನ್ನು ಕೋರೈಸುತ್ತಿತ್ತು ಮತ್ತು ಅದರ ಹಲವು ಮುಖಗಳು ವೇಗವಾಗಿ ಬದಲಾಗುತ್ತಿದ್ದವು. ತನ್ನ ಗೆಳೆಯ ಅರ್ಜುನನ ತೃಪ್ತಿಗಾಗಿ ಪ್ರಭುವು ಈ ರೂಪವನ್ನು ತೋರಿಸಿದನು. ತನ್ನ ಅಂತರಂಗಶಕ್ತಿಯಿಂದ ಕೃಷ್ಣನು ಈ ರೂಪವನ್ನು ತೋರಿಸಿದನು. ಈ ಶಕ್ತಿಯನ್ನು ಮನುಷ್ಯನ ಊಹೆಯು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಅರ್ಜುನನಿಗೆ ಮೊದಲು ಈ ವಿಶ್ವರೂಪವನ್ನು ಯಾರೂ ಕಂಡಿರಲಿಲ್ಲ. ಆದರೆ ಈ ರೂಪವನ್ನು ಅರ್ಜುನನಿಗೆ ತೋರಿಸಿದುದರಿಂದ ಸ್ವರ್ಗಲೋಕಗಳಲ್ಲಿಯೂ ಹೊರಗಿನ ಆಕಾಶದ ಲೋಕಗಳಲ್ಲಿಯೂ ಇದ್ದ ಭಕ್ತರು ಅದನ್ನು ನೋಡಲು ಸಾಧ್ಯವಾಯಿತು. ಅವರು ಆ ರೂಪವನ್ನು ಮೊದಲು ನೋಡಿರಲಿಲ್ಲ; ಅರ್ಜುನನಿಂದಾಗಿ ಅವರು ನೋಡಲು ಸಾಧ್ಯವಾಯಿತು. ಎಂದರೆ, ಕೃಷ್ಣನು ಕೃಪೆಯಿಟ್ಟು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಭಗವಂತನ ಗುರು ಶಿಷ್ಯ ಪರಂಪರೆಗೆ ಸೇರಿದವರೆಲ್ಲ ನೋಡಬಲ್ಲವರಾದರು. ಕೃಷ್ಣನು ಶಾಂತಿ ಸಂಧಾನಕ್ಕಾಗಿ ದುರ್ಯೋಧನನ ಬಳಿ

ಹೋದಾಗ ಈ ರೂಪವನ್ನು ದುರ್ಯೋಧನನಿಗೆ ತೋರಿಸಿದ ಎಂದು ಒಬ್ಬರು ವ್ಯಾಖ್ಯಾನ ಮಾಡಿದ್ದಾರೆ. ದುರದೃಷ್ಟದಿಂದ ದುರ್ಯೋಧನನು ಆ ಶಾಂತಿ ಸಂಧಾನಕ್ಕೆ ಒಪ್ಪಲಿಲ್ಲ. ಆಗ ಕೃಷ್ಣನು ತನ್ನ ವಿಶ್ವರೂಪಗಳಲ್ಲಿ ಕೆಲವನ್ನು ಪ್ರಕಟಮಾಡಿದ್ದನು. ಆದರೆ ಆ ರೂಪಗಳು ಅರ್ಜುನನಿಗೆ ತೋರಿಸಿದ ರೂಪಕ್ಕಿಂತ ಬೇರೆಯಾದವು. ಈ ರೂಪವನ್ನು ಹಿಂದೆ ಬೇರೆ ಯಾರೂ ನೋಡಿರಲಿಲ್ಲ ಎಂದು ಸ್ಪಷ್ಟವಾಗಿ ಹೇಳಿದೆ.

## ಶ್ಲೋಕ - 48

**ನ ವೇದಯಜ್ಞಾಧ್ಯಯನೈರ್ನ ದಾನೈರ್**
**ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ |**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ||೪೮||**

**ನ**—ಎಂದಿಗೂ ಇಲ್ಲ; **ವೇದ ಯಜ್ಞ**—ಯಜ್ಞದಿಂದ; **ಅಧ್ಯಯನೈಃ**—ಅಥವಾ ವೇದಗಳ ಅಧ್ಯಯನದಿಂದ; **ನ**—ಎಂದಿಗೂ ಇಲ್ಲ; **ದಾನೈಃ**—ದಾನಗಳಿಂದ; **ನ**—ಎಂದಿಗೂ ಇಲ್ಲ; **ಚ**—ಕೂಡ; **ಕ್ರಿಯಾಭಿಃ**—ಪುಣ್ಯಕಾರ್ಯಗಳಿಂದ; **ನ**—ಎಂದಿಗೂ ಇಲ್ಲ; **ತಪೋಭಿಃ**—ತೀವ್ರ ತಪಸ್ಸುಗಳಿಂದ; **ಉಗ್ರೈಃ**—ಉಗ್ರವಾದ; **ಏವಮ್ ರೂಪಃ**—ಈ ರೂಪದಲ್ಲಿ; **ಶಕ್ಯಃ**—ಸಾಧ್ಯವು; **ಅಹಮ್**—ನಾನು; **ನೃ ಲೋಕೇ**—ಈ ಭೌತಿಕ ಜಗತ್ತಿನಲ್ಲಿ; **ದ್ರಷ್ಟುಮ್**—ನೋಡಲು; **ತ್ವತ್**—ನಿನ್ನ ಹೊರತು; **ಅನ್ಯೇನ**—ಬೇರೆಯವರಿಂದ; **ಕುರು ಪ್ರವೀರ**—ಕುರು ವೀರರಲ್ಲಿ ಶ್ರೇಷ್ಠನೇ.

## ಅನುವಾದ

**ಕುರು ಯೋಧರಲ್ಲಿ ಅತ್ಯಂತ ಶ್ರೇಷ್ಠನಾದ ಅರ್ಜುನನೆ, ನಿನಗೆ ಮೊದಲು ಯಾರೂ ಈ ನನ್ನ ವಿಶ್ವರೂಪವನ್ನು ನೋಡಿರಲಿಲ್ಲ. ಏಕೆಂದರೆ ವೇದಾಧ್ಯಯನದಿಂದಾಗಲೀ, ಯಜ್ಞಗಳನ್ನು ಮಾಡುವುದರಿಂದಾಗಲೀ, ದಾನದಿಂದಾಗಲೀ, ಪುಣ್ಯಕಾರ್ಯಗಳಿಂದಾಗಲೀ, ಉಗ್ರ ತಪಸ್ಸಿನಿಂದಾಗಲೀ ಈ ಐಹಿಕ ಜಗತ್ತಿನಲ್ಲಿ ನನ್ನ ಈ ರೂಪವನ್ನು ನೋಡಲು ಸಾಧ್ಯವಿಲ್ಲ.**

## ಭಾವಾರ್ಥ

ಈ ಸಂದರ್ಭದಲ್ಲಿ ದೈವೀದೃಷ್ಟಿಯನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕು. ದೈವೀದೃಷ್ಟಿಯು ಯಾರಿಗೆ ಆಗಬಹುದು? ದೈವೀ ಎಂದರೆ ದೇವರಿಗೆ ಸಂಬಂಧಿಸಿದ್ದು. ದೇವತೆಯಾಗಿ ದೈವೀ ಅಂತಸ್ತನ್ನು ಮನುಷ್ಯನು ಪಡೆಯದಿದ್ದರೆ ಅವನಿಗೆ ದೈವೀದೃಷ್ಟಿಯು ಸಾಧ್ಯವಿಲ್ಲ. ದೇವತೆಯೆಂದರೆ ಏನು? ಪವಿತ್ರ ಗ್ರಂಥಗಳಲ್ಲಿ ಹೀಗೆ ಹೇಳಿದೆ — ವಿಷ್ಣುಭಕ್ತರೇ ದೇವತೆಗಳು (**ವಿಷ್ಣು ಭಕ್ತಾಃ ಸ್ಮೃತಾ ದೇವಾಃ**) ನಾಸ್ತಿಕರಾದವರು ಎಂದರೆ ವಿಷ್ಣುವಿನಲ್ಲಿ ನಂಬಿಕೆ ಇಲ್ಲದವರು ಅಥವಾ ಕೃಷ್ಣನ ನಿರಾಕಾರ ಭಾಗವನ್ನು ಮಾತ್ರ ಪರಮವೆಂದು ಮನ್ನಣೆಮಾಡುವವರು ದೈವೀದೃಷ್ಟಿಯನ್ನು ಪಡೆಯಲಾರರು. ಕೃಷ್ಣನನ್ನು ತೆಗಳಿ ಆಗಲೇ ದೈವೀದೃಷ್ಟಿಯನ್ನು ಪಡೆಯುವುದು ಸಾಧ್ಯವಿಲ್ಲ.

ತಾನೇ ದೇವತೆಯಾಗದೆ ದೈವೀದೃಷ್ಟಿ ದೊರೆಯುವುದು ಸಾಧ್ಯವಿಲ್ಲ. ಎಂದರೆ ದೈವೀದೃಷ್ಟಿಯಿರುವವರು ಅರ್ಜುನನಂತೆ ನೋಡಬಲ್ಲರು.

ಭಗವದ್ಗೀತೆಯು ವಿಶ್ವರೂಪವನ್ನು ವರ್ಣಿಸುತ್ತದೆ. ಅರ್ಜುನನಿಗಿಂತ ಮೊದಲು ಈ ವರ್ಣನೆಯು ಯಾರಿಗೂ ತಿಳಿಯದಿದ್ದರೂ ಈಗ ಈ ಘಟನೆಯನಂತರ ವಿಶ್ವರೂಪದ ಒಂದು ಕಲ್ಪನೆಯನ್ನು ಪಡೆದುಕೊಳ್ಳಲು ಸಾಧ್ಯ. ವಾಸ್ತವವಾಗಿ ದೈವಿಕರಾದವರು ಪ್ರಭುವಿನ ವಿಶ್ವರೂಪವನ್ನು ಕಾಣಬಲ್ಲರು. ಆದರೆ ಕೃಷ್ಣನ ಪರಿಶುದ್ಧ ಭಕ್ತರಾಗದೆ ಯಾರೂ ದೈವಿಕರಾಗುವುದು ಸಾಧ್ಯವಿಲ್ಲ. ವಾಸ್ತವವಾಗಿ ದೈವಿಕ ಸ್ವಭಾವವಿದ್ದು ದೈವಿಕ ದೃಷ್ಟಿ ಇರುವವರಿಗೆ ಪ್ರಭುವಿನ ವಿಶ್ವರೂಪವನ್ನು ನೋಡುವುದರಲ್ಲಿ ಹೆಚ್ಚು ಆಸಕ್ತಿ ಇರುವುದಿಲ್ಲ. ಹಿಂದಿನ ಶ್ಲೋಕದಲ್ಲಿ ವರ್ಣಿಸಿದಂತೆ ಅರ್ಜುನನು ವಿಷ್ಣುವಾಗಿ ಶ್ರೀಕೃಷ್ಣನ ಚತುರ್ಭುಜ ರೂಪವನ್ನು ನೋಡಲು ಬಯಸಿದನು; ವಿಶ್ವರೂಪದಿಂದ ಅವನಿಗೆ ಭಯವೇ ಆಯಿತು.

ಈ ಶ್ಲೋಕದಲ್ಲಿ ಹಲವು ಮಹತ್ವದ ಪದಗಳಿವೆ. ಉದಾಹರಣೆಗೆ **ವೇದ ಯಜ್ಞಾಧ್ಯಯನೈಃ** ಇದು ವೈದಿಕ ಸಾಹಿತ್ಯದ ಮತ್ತು ಯಜ್ಞಗಳ ನಿಯಮಗಳ ವಸ್ತುವಿನ ಅಧ್ಯಯನಕ್ಕೆ ಸಂಬಂಧಿಸಿದ್ದು. ವೇದ ಎನ್ನುವ ಶಬ್ದವು ನಾಲ್ಕು ವೇದಗಳು (ಋಗ್, ಯಜುರ್, ಸಾಮ ಮತ್ತು ಅಥರ್ವ) ಮತ್ತು ಹದಿನೆಂಟು ಪುರಾಣಗಳು, ಉಪನಿಷತ್ತುಗಳು ಮತ್ತು ವೇದಾಂತ ಸೂತ್ರ ಇಂತಹ ಎಲ್ಲ ಬಗೆಯ ವೇದ ಸಾಹಿತ್ಯಕ್ಕೆ ಸಂಬಂಧಿಸಿದ್ದು. ಇವನ್ನು ಮನೆಯಲ್ಲಾಗಲೀ ಬೇರೆಲ್ಲಾದರೂ ಆಗಲಿ ಅಧ್ಯಯನ ಮಾಡಬಹುದು. ಹಾಗೆಯೇ ಯಜ್ಞವಿಧಾನವನ್ನು ಅಧ್ಯಯನ ಮಾಡಲು ಕಲ್ಪಸೂತ್ರಗಳು ಮತ್ತು ಮೀಮಾಂಸ ಸೂತ್ರಗಳಂತಹ ಸೂತ್ರಗಳಿವೆ. **ದಾನೈಃ** ಶಬ್ದವು ಯೋಗ್ಯ ಪಾತ್ರನಿಗೆ ಕೊಟ್ಟ ದಾನವನ್ನು ಸೂಚಿಸುತ್ತದೆ. ಬ್ರಾಹ್ಮಣರಂತೆ ಮತ್ತು ವೈಷ್ಣವರಂತೆ ಪ್ರಭುವಿನ ಪ್ರೀತಿಯ ದಿವ್ಯಸೇವೆಯಲ್ಲಿ ನಿರತರಾದವರು ದಾನ ಪಡೆಯಲು ಯೋಗ್ಯರು. ಹಾಗೆಯೇ 'ಪುಣ್ಯಕಾರ್ಯಗಳು' ಎನ್ನುವುದು ಅಗ್ನಿಹೋತ್ರ ಮತ್ತು ಬೇರೆ ಬೇರೆ ಜಾತಿಗಳವರಿಗೆ ವಿಧಿಸಿರುವ ಕರ್ತವ್ಯಗಳಿಗೆ ಸಂಬಂಧಿಸಿದ್ದು. ದೇಹದಂಡನೆಯನ್ನು ಸ್ವ ಇಚ್ಛೆಯಿಂದ ಒಪ್ಪಿಕೊಳ್ಳುವುದು ತಪಸ್ಯ. ಒಬ್ಬ ಮನುಷ್ಯನು ಇವೆಲ್ಲವನ್ನೂ ಮಾಡಬಹುದು. ದೇಹದಂಡನೆಯನ್ನು ಮಾಡಿಕೊಳ್ಳಬಹುದು; ದಾನವನ್ನು ಕೊಡಬಹುದು; ವೇದಗಳನ್ನು ಅಭ್ಯಾಸಮಾಡಬಹುದು ಇತ್ಯಾದಿ. ಆದರೆ ಆತನು ಅರ್ಜುನನಂತೆ ಭಕ್ತನಲ್ಲದಿದ್ದರೆ ಆ ವಿಶ್ವರೂಪವನ್ನು ಕಾಣಲು ಸಾಧ್ಯವಿಲ್ಲ. ನಿರಾಕಾರವಾದಿಗಳು ತಾವು ಪ್ರಭುವಿನ ವಿಶ್ವರೂಪವನ್ನು ಕಾಣುತ್ತಿದ್ದೇವೆ ಎಂದು ಭಾವಿಸುತ್ತಾರೆ. ನಿರಾಕಾರವಾದಿಗಳು ಭಕ್ತರಲ್ಲ ಎಂದು ಭಗವದ್ಗೀತೆಯಿಂದ ತಿಳಿಯುತ್ತೇವೆ. ಆದುದರಿಂದ ಪ್ರಭುವಿನ ವಿಶ್ವರೂಪವನ್ನು ನೋಡಲು ಅವರಿಗೆ ಸಾಧ್ಯವಿಲ್ಲ.

ಅವತಾರಗಳನ್ನು ಸೃಷ್ಟಿಮಾಡುವ ಹಲವು ಜನರಿದ್ದಾರೆ. ಸಾಮಾನ್ಯ ಮನುಷ್ಯನೊಬ್ಬನು ಒಂದು ಅವತಾರ ಎಂದು ಅವರ ಸುಳ್ಳು ಹೇಳಿಕೆ. ಇದೆಲ್ಲ ಮೂರ್ಖತನ. ನಾವು ಭಗವದ್ಗೀತೆಯ ತತ್ವಗಳನ್ನು ಅನುಸರಿಸಬೇಕು; ಇಲ್ಲವಾದರೆ ಪರಿಪೂರ್ಣ ಆಧ್ಯಾತ್ಮಿಕ ಜ್ಞಾನವನ್ನು ಪಡೆಯಲು ಸಾಧ್ಯವೇ ಇಲ್ಲ. ಭಗವದ್ಗೀತೆಯನ್ನು ಭಗವದ್ವಿಜ್ಞಾನದ ಪೂರ್ವಭಾವಿ ಅಧ್ಯಯನವೆಂದು ಪರಿಗಣಿಸುತ್ತಾರೆ. ಅದು ಎಷ್ಟು ಪರಿಪೂರ್ಣವಾಗಿದೆ ಎಂದರೆ ಮನುಷ್ಯನು ಪ್ರತಿಯೊಂದನ್ನೂ

ಅರ್ಥಮಾಡಿಕೊಳ್ಳುವ ವಿವೇಚನಾಶಕ್ತಿಯನ್ನು ಕೊಡುತ್ತದೆ. ಹುಸಿ ಅವತಾರದ ಹಿಂಬಾಲಕರು ತಾವು ಭಗವಂತನ ದಿವ್ಯ ಅವತಾರವನ್ನು, ವಿಶ್ವರೂಪವನ್ನು ಕಂಡಿದ್ದೇವೆ ಎಂದು ಹೇಳಿಕೊಳ್ಳಬಹುದು. ಆದರೆ ಇದನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ಏಕೆಂದರೆ ಕೃಷ್ಣನ ಭಕ್ತನಾಗದಿದ್ದರೆ ಭಗವಂತನ ವಿಶ್ವರೂಪವನ್ನು ಕಾಣಲು ಸಾಧ್ಯವಿಲ್ಲ ಎಂದು ಇಲ್ಲಿ ಹೇಳಿದೆ. ಆದುದರಿಂದ ಮೊಟ್ಟಮೊದಲು ಮನುಷ್ಯನು ಕೃಷ್ಣನ ಪರಿಶುದ್ಧ ಭಕ್ತನಾಗಬೇಕು; ಅನಂತರ ಅವನು ತಾನು ಕಂಡ ವಿಶ್ವರೂಪವನ್ನು ತೋರಿಸಬಲ್ಲೆ ಎಂದು ಹೇಳಿಕೊಳ್ಳಬಹುದು. ಕೃಷ್ಣ ಭಕ್ತನು ಹುಸಿ ಅವತಾರಗಳನ್ನಾಗಲಿ, ಹುಸಿ ಅವತಾರಗಳ ಹಿಂಬಾಲಕರನ್ನಾಗಲಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ.

## ಶ್ಲೋಕ - 49

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ ಮಮೇದಮ್ |**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಮ್**
**ತದೇವ ಮೇ ರೂಪಮಿದಂ ಪ್ರಪಶ್ಯ ||೪೯||**

**ಮಾ**—ಆಗದಿರಲಿ; **ತೇ**—ನಿನಗೆ; **ವ್ಯಥಾ**—ತೊಂದರೆಯು; **ಮಾ**—ಆಗದಿರಲಿ; **ಚ**—ಕೂಡ; **ವಿಮೂಢ ಭಾವಃ**—ದಿಗ್ಭ್ರಮೆಯು; **ದೃಷ್ಟ್ವಾ**—ನೋಡಿ; **ರೂಪಮ್**—ರೂಪವನ್ನು; **ಘೋರಮ್**—ಘೋರವಾದ; **ಈದೃಕ್**—ಈ ಬಗೆಯ; **ಮಮ**—ನನ್ನ; **ಇದಮ್**—ಈ; **ವ್ಯಪೇತ ಭೀಃ**—ಎಲ್ಲಾ ಭಯದಿಂದ ಬಿಡುಗಡೆ ಹೊಂದಿ; **ಪ್ರೀತ ಮನಾಃ**—ಮನಸ್ಸಿನಲ್ಲಿ ಸಂತೋಷವುಳ್ಳವನಾಗಿ; **ಪುನಃ**—ಮತ್ತೆ; **ತ್ವಮ್**—ನೀನು; **ತತ್**—ಆ; **ಏವ**—ಹೀಗೆ; **ಮೇ**—ನನ್ನ; **ರೂಪಮ್**—ರೂಪವನ್ನು; **ಇದಮ್**—ಈ; **ಪ್ರಪಶ್ಯ**—ನೋಡು.

## ಅನುವಾದ

**ನನ್ನ ಈ ಘೋರ ರೂಪವನ್ನು ನೋಡಿ ನೀನು ತಳಮಳಗೊಂಡಿದ್ದೀಯೆ ಮತ್ತು ದಿಗ್ಭ್ರಾಂತನಾಗಿದ್ದೀಯೆ. ಈಗ ಇದು ಮುಕ್ತಾಯವಾಗಲಿ. ನನ್ನ ಭಕ್ತನೆ, ಮತ್ತೆ ಎಲ್ಲ ಅಶಾಂತಿಯಿಂದ ಮುಕ್ತನಾಗು. ಶಾಂತವಾದ ಮನಸ್ಸಿನಿಂದ ಈಗ ನೀನು ಅಪೇಕ್ಷಿಸಿದ ರೂಪವನ್ನು ಕಾಣಬಹುದು.**

## ಭಾವಾರ್ಥ

ಭಗವದ್ಗೀತೆಯ ಪ್ರಾರಂಭದಲ್ಲಿ ತನ್ನ ಪೂಜ್ಯ ತಾತ ಮತ್ತು ಗುರುಗಳು ಭೀಷ್ಮ, ದ್ರೋಣರನ್ನು ಕೊಲ್ಲುವ ವಿಷಯದಲ್ಲಿ ಅರ್ಜುನನಿಗೆ ಚಿಂತೆಯುಂಟಾಗಿತ್ತು. ಆದರೆ ಕೃಷ್ಣನು ತನ್ನ ತಾತನನ್ನು ಕೊಲ್ಲುವ ವಿಷಯದಲ್ಲಿ ಅವನು ಭಯಪಡಬೇಕಾಗಿಲ್ಲ ಎಂದನು. ಧೃತರಾಷ್ಟ್ರನ ಮಕ್ಕಳು ಕುರುಸಭೆಯಲ್ಲಿ ದ್ರೌಪದಿಯ ಸೀರೆಯನ್ನು ಸೆಳೆದಾಗ ಭೀಷ್ಮರೂ ದ್ರೋಣರೂ ಮೌನವಾಗಿದ್ದರು. ಹೀಗೆ ಕರ್ತವ್ಯವನ್ನು ಅಲಕ್ಷ್ಯಮಾಡಿದ್ದಕ್ಕಾಗಿ ಅವರನ್ನು ಕೊಲ್ಲಬೇಕು. ತಮ್ಮ ಅನ್ಯಾಯದ ಕಾರ್ಯದಿಂದ ಅವರು ಆಗಲೇ ಸತ್ತಿದ್ದಾರೆ ಎನ್ನುವುದನ್ನು ತೋರಿಸುವುದಕ್ಕಾಗಿಯೇ

ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿದನು. ಭಕ್ತರು ಯಾವಾಗಲೂ ಶಾಂತರು ಮತ್ತು ಇಂತಹ ಘೋರ ಕಾರ್ಯಗಳನ್ನು ಮಾಡಲಾರರು. ಆದುದರಿಂದ ಅರ್ಜುನನಿಗೆ ಈ ದೃಶ್ಯವನ್ನು ತೋರಿಸಲಾಯಿತು. ವಿಶ್ವರೂಪದ ಪ್ರಕಟಣೆಯ ಉದ್ದೇಶವನ್ನು ತೋರಿಸಿದ್ದಾಯಿತು; ಈಗ ಅರ್ಜುನನು ಚತುರ್ಭುಜ ಸ್ವರೂಪವನ್ನು ನೋಡಲು ಬಯಸಿದನು ಮತ್ತು ಕೃಷ್ಣನು ಅದನ್ನು ತೋರಿಸಿದನು. ಭಕ್ತನಿಗೆ ವಿಶ್ವರೂಪವನ್ನು ನೋಡುವುದರಲ್ಲಿ ಆಸಕ್ತಿಯಿಲ್ಲ. ಏಕೆಂದರೆ ಅದು ಪ್ರೀತಿಯ ಭಾವನೆಗಳನ್ನು ಪರಸ್ಪರ ತೋರಿಸಲು ಅವಕಾಶ ನೀಡುವುದಿಲ್ಲ. ಭಕ್ತನು ತನ್ನ ಭಕ್ತಿಭಾವಗಳನ್ನು ಅರ್ಪಿಸಲು ಬಯಸುತ್ತಾನೆ. ಇಲ್ಲವೇ ದೇವೋತ್ತಮ ಪರಮ ಪುರುಷನ ಪ್ರೇಮ ಪೂರ್ವಕ ಸೇವೆಯಲ್ಲಿ ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುವಂತೆ ಕೃಷ್ಣನ ಎರಡು ಕೈಗಳ ರೂಪವನ್ನು ನೋಡಲು ಬಯಸುತ್ತಾನೆ.

## ಶ್ಲೋಕ - 50

**ಸಂಜಯ ಉವಾಚ**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ |**
**ಆಶ್ವಾಸಯಾಮಾಸ ಚ ಭೀತಮೇನಮ್**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ||೫೦||**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಇತಿ**—ಹೀಗೆ; **ಅರ್ಜುನಮ್**—ಅರ್ಜುನನಿಗೆ; **ವಾಸುದೇವಃ**—ಕೃಷ್ಣನು; **ತಥಾ**—ಆ ರೀತಿಯಲ್ಲಿ; **ಉಕ್ತ್ವಾ**—ಹೇಳಿ; **ಸ್ವಕಮ್**—ತನ್ನದೇ ಆದ; **ರೂಪಮ್**—ರೂಪವನ್ನು; **ದರ್ಶಯಾಮ್ ಆಸ**—ತೋರಿಸಿದನು; **ಭೂಯಃ**—ಪುನಃ; **ಆಶ್ವಾಸಯಾಮ್ ಆಸ**—ಪ್ರೋತ್ಸಾಹಿಸಿದನು; **ಚ**—ಕೂಡ; **ಭೀತಮ್**—ಹೆದರಿದ; **ಏನಮ್**—ಅವನನ್ನು; **ಭೂತ್ವಾ**—ಆಗಿ; **ಪುನಃ**—ಮತ್ತೆ; **ಸೌಮ್ಯವಪುಃ**—ಸುಂದರ ರೂಪನು; **ಮಹಾ ಆತ್ಮಾ**— ಮಹಾತ್ಮನು.

### ಅನುವಾದ

**ಸಂಜಯನು ಧೃತರಾಷ್ಟ್ರನಿಗೆ ಹೇಳಿದನು — ದೇವೋತ್ತಮ ಪರಮ ಪುರುಷನಾದ ಕೃಷ್ಣನು ಅರ್ಜುನನಿಗೆ ಹೀಗೆ ಹೇಳಿ, ತನ್ನ ನಿಜವಾದ ಚತುರ್ಭುಜ ರೂಪವನ್ನು ತೋರಿದನು ಮತ್ತು ಕಟ್ಟಕಡೆಗೆ ತನ್ನ ಎರಡು ಕೈಗಳ ರೂಪವನ್ನು ತೋರಿ ಭಯಗೊಂಡಿದ್ದ ಅರ್ಜುನನಿಗೆ ಧೈರ್ಯವನ್ನು ಕೊಟ್ಟನು.**

### ಭಾವಾರ್ಥ

ಕೃಷ್ಣನು ವಸುದೇವ-ದೇವಕಿಯರ ಮಗನಾಗಿ ಕಾಣಿಸಿಕೊಂಡಾಗ ಮೊದಲು ನಾಲ್ಕು ಕೈಗಳ ನಾರಾಯಣನಾಗಿ ಕಾಣಿಸಿಕೊಂಡ. ತನ್ನ ತಂದೆ ತಾಯಿಗಳ ಪ್ರಾರ್ಥನೆಯಂತೆ ಸಾಮಾನ್ಯ ಮಗುವಿನ ರೂಪವನ್ನು ತಳೆದ. ಹೀಗೆಯೇ, ಅರ್ಜುನನಿಗೆ ಚತುರ್ಭುಜ ರೂಪವನ್ನು ಕಾಣುವ ಆಸಕ್ತಿ ಇರಲಿಲ್ಲ ಎಂದು ಕೃಷ್ಣನಿಗೆ ತಿಳಿದಿತ್ತು. ಆದರೆ ಅರ್ಜುನನು ಚತುರ್ಭುಜ ರೂಪವನ್ನು ಕಾಣಬೇಕೆಂದು

ಕೇಳಿಕೊಂಡದ್ದರಿಂದ, ಕೃಷ್ಣನು ಅವನಿಗೆ ಮತ್ತೆ ಈ ರೂಪವನ್ನು ತೋರಿಸಿ ಅನಂತರ ತನ್ನ ಎರಡು ಕೈಗಳ ರೂಪದಲ್ಲಿ ಕಾಣಿಸಿಕೊಂಡ. **ಸೌಮ್ಯವಪುಃ** ಎನ್ನುವ ಮಾತು ಬಹು ಅರ್ಥವತ್ತಾದದ್ದು. ಸೌಮ್ಯವಪುಃ ಎಂದರೆ ಬಹು ಸುಂದರ ರೂಪ; ಇದು ಅತ್ಯಂತ ಮೋಹಕ ರೂಪ ಎಂದು ಪ್ರಸಿದ್ಧಿ. ಕೃಷ್ಣನಿದ್ದಲ್ಲಿ ಪ್ರತಿಯೊಬ್ಬರೂ ಅವನ ರೂಪದಿಂದಲೇ ಆಕರ್ಷಿತರಾಗುತ್ತಿದ್ದರು. ಕೃಷ್ಣನು ವಿಶ್ವದ ಸೂತ್ರಧಾರಿಯಾದದ್ದರಿಂದ ಆತನು ತನ್ನ ಭಕ್ತನಾದ ಅರ್ಜುನನ ಭಯವನ್ನು ತೊಡೆದು ಹಾಕಿದನು ಮತ್ತು ಅವನಿಗೆ ಮತ್ತೆ ಕೃಷ್ಣನ ಸುಂದರ ರೂಪವನ್ನೂ ತೋರಿದನು. ಬ್ರಹ್ಮಸಂಹಿತೆಯಲ್ಲಿ — **ಪ್ರೇಮಾಂಜನಚ್ಛುರಿತ ಭಕ್ತಿ ವಿಲೋಚನೇನ** — ಯಾರ ಕಣ್ಣುಗಳಿಗೆ ಪ್ರೇಮದ ಅಂಜನವನ್ನು ಹಚ್ಚಿದೆಯೋ, ಅವರು ಮಾತ್ರ ಶ್ರೀಕೃಷ್ಣನ ಸುಂದರ ರೂಪವನ್ನು ಕಾಣಬಲ್ಲರು ಎಂದು ಹೇಳಿದೆ.

## ಶ್ಲೋಕ - 51

### ಅರ್ಜುನ ಉವಾಚ

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ |**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ||೫೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ದೃಷ್ಟ್ವಾ**—ನೋಡಿ; **ಇದಮ್**—ಈ; **ಮಾನುಷಮ್**—ಮನುಷ್ಯನ; **ರೂಪಮ್**—ರೂಪವನ್ನು; **ತವ**—ನಿನ್ನ; **ಸೌಮ್ಯಮ್**—ಬಹು ಸುಂದರವಾದ; **ಜನಾರ್ದನ**—ಶತ್ರುಮರ್ದನನೇ; **ಇದಾನೀಮ್**—ಈಗ; **ಅಸ್ಮಿ**—ಆಗಿದ್ದೇನೆ; **ಸಂವೃತ್ತಃ**—ಸ್ತಿಮಿತ ಸ್ಥಿತಿಗೆ ಬಂದವನು; **ಸಚೇತಾಃ**—ನನ್ನ ಪ್ರಜ್ಞೆಯಲ್ಲಿ; **ಪ್ರಕೃತಿಮ್**—ನನ್ನ ಸ್ವಭಾವಕ್ಕೆ; **ಗತಃ**—ಹಿಂದಿರುಗಿದವನು.

### ಅನುವಾದ

**ಹೀಗೆ ಕೃಷ್ಣನನ್ನು ಅವನ ಮೂಲ ರೂಪದಲ್ಲಿ ಕಂಡಾಗ ಅರ್ಜುನನು ಹೀಗೆಂದನು — ಓ ಜನಾರ್ದನ, ಇಷ್ಟೊಂದು ಸುಂದರವಾದ ಮಾನವಸದೃಶ ರೂಪವನ್ನು ಕಂಡು ನನ್ನ ಮನಸ್ಸು ಸಮಾಧಾನವಾಗಿದೆ; ನನ್ನ ಸಹಜ ಸ್ವಭಾವವು ಹಿಂದಿರುಗಿದೆ.**

### ಭಾವಾರ್ಥ

ಇಲ್ಲಿ **ಮಾನುಷಂ ರೂಪಮ್** ಎನ್ನುವ ಮಾತುಗಳು ದೇವೋತ್ತಮ ಪರಮ ಪುರುಷನಿಗೆ ಮೂಲ ರೂಪದಲ್ಲಿ ಎರಡು ಕೈಗಳಿದ್ದವು ಎನ್ನುವುದನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಕೃಷ್ಣನು ಸಾಮಾನ್ಯ ಮನುಷ್ಯ ಎನ್ನುವಂತೆ ತೆಗಳುವವರಿಗೆ ಕೃಷ್ಣನ ದೇವಸ್ವಭಾವವು ತಿಳಿಯದು ಎಂದು ಇಲ್ಲಿ ತೋರಿಸಿಕೊಟ್ಟಿದೆ. ಕೃಷ್ಣನು ಸಾಮಾನ್ಯ ಮನುಷ್ಯನಂತಿದ್ದರೆ ಆತನಿಗೆ ವಿಶ್ವರೂಪವನ್ನಾಗಲಿ ಚತುರ್ಭುಜನಾದ ನಾರಾಯಣ ರೂಪವನ್ನಾಗಲಿ ತೋರಲು ಹೇಗೆ ಸಾಧ್ಯ? ಕೃಷ್ಣನು ಸಾಮಾನ್ಯ ಮನುಷ್ಯ ಎಂದು ಯೋಚಿಸಿ ಮಾತನಾಡುತ್ತಿರುವುದು, ಕೃಷ್ಣನ ಒಳಗಿರುವ ನಿರಾಕಾರ ಬ್ರಹ್ಮನ್ ಎಂದು ಹೇಳಿ ಓದುಗನನ್ನು ತಪ್ಪು ದಾರಿಗೆಳೆಯುವವನು, ಅತ್ಯಂತ ದೊಡ್ಡ ಅನ್ಯಾಯವನ್ನು

ಮಾಡುತ್ತಿದ್ದಾನೆ ಎಂದು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಕೃಷ್ಣನು ತನ್ನ ವಿಶ್ವರೂಪವನ್ನೂ, ಚತುರ್ಭುಜನಾದ ವಿಷ್ಣುರೂಪವನ್ನೂ ವಾಸ್ತವವಾಗಿ ತೋರಿಸಿದ್ದಾನೆ. ಆತನು ಸಾಮಾನ್ಯ ಮನುಷ್ಯನಾಗಿರಲು ಹೇಗೆ ಸಾಧ್ಯ? ಭಗವದ್ಗೀತೆಯ ವ್ಯಾಖ್ಯಾನಕಾರರಲ್ಲಿ ತಪ್ಪು ದಾರಿ ಹಿಡಿದವರು ಪರಿಶುದ್ಧ ಭಕ್ತನನ್ನು ಗೊಂದಲಕ್ಕೆ ಸಿಕ್ಕಿಸಲಾರರು. ಏಕೆಂದರೆ ಭಕ್ತನಿಗೆ ಪ್ರತಿಯೊಂದರ ನಿಜಾಂಶವು ತಿಳಿದಿರುತ್ತದೆ. ಭಗವದ್ಗೀತೆಯ ಮೂಲ ಶ್ಲೋಕಗಳು ಸೂರ್ಯನಷ್ಟು ಸ್ಪಷ್ಟವಾಗಿವೆ; ಮೂರ್ಖ ವ್ಯಾಖ್ಯಾನಕಾರರ ಮಂಕು ಬೆಳಕು ಅವಕ್ಕೆ ಅಗತ್ಯವಿಲ್ಲ.

## ಶ್ಲೋಕ - 52

**ಶ್ರೀ ಭಗವಾನುವಾಚ**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ |**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಙ್ಕ್ಷಿಣಃ ||೫೨||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಸುದುರ್ದರ್ಶಮ್**—ನೋಡಲು ಬಹಳ ಕಷ್ಟವಾದ; **ಇದಮ್**—ಈ; **ರೂಪಮ್**—ಆಕಾರವನ್ನು; **ದೃಷ್ಟವಾನ್ ಅಸಿ**—ನೀನು ನೋಡಿರುವೆ; **ಯತ್**—ಯಾವ; **ಮಮ**—ನನ್ನ; **ದೇವಾಃ**—ದೇವತೆಗಳು; **ಅಪಿ**—ಕೂಡ; **ಅಸ್ಯ**—ಈ; **ರೂಪಸ್ಯ**—ರೂಪದ; **ನಿತ್ಯಮ್**—ಶಾಶ್ವತವಾಗಿ; **ದರ್ಶನ ಕಾಙ್ಕ್ಷಿಣಃ**—ನೋಟಕ್ಕಾಗಿ ಹಂಬಲಿಸುತ್ತಿರುವವರು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆಂದನು — ನನ್ನ ಪ್ರಿಯ ಅರ್ಜುನಾ, ಈಗ ನೀನು ಕಾಣುತ್ತಿರುವ ನನ್ನ ರೂಪವನ್ನು ಕಾಣುವುದು ಬಹು ಕಷ್ಟ. ದೇವತೆಗಳು ಸಹ ಪ್ರಿಯವಾದ ಈ ರೂಪವನ್ನು ಕಾಣುವ ಅವಕಾಶಕ್ಕಾಗಿ ಹಂಬಲಿಸುತ್ತಾರೆ.**

## ಭಾವಾರ್ಥ

ಈ ಅಧ್ಯಾಯದ ನಲವತ್ತೆಂಟನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ತನ್ನ ವಿಶ್ವರೂಪವನ್ನು ಮುಕ್ತಾಯಗೊಳಿಸಿದ. ಪುಣ್ಯಕರ್ಮಗಳು, ಯಜ್ಞಗಳು ಮೊದಲಾದವುಗಳಿಂದ ಈ ರೂಪವನ್ನು ಕಾಣುವುದು ಸಾಧ್ಯವಿಲ್ಲ ಎಂದು ಅರ್ಜುನನಿಗೆ ಹೇಳಿದ. ಇಲ್ಲಿ **ಸುದುರ್ದರ್ಶಮ್** ಎನ್ನುವ ಶಬ್ದವನ್ನು ಬಳಸಿದೆ. ಇದು ಎರಡು ಕೈಗಳಿರುವ ಕೃಷ್ಣನ ರೂಪವು ಇನ್ನೂ ಗುಹ್ಯವಾದದ್ದು ಎಂದು ಸೂಚಿಸುತ್ತದೆ. ತಪಸ್ಸುಗಳು, ವೇದಾಧ್ಯಯನ ಮತ್ತು ಊಹಾತ್ಮಕ ಚಿಂತನೆಗೆ ಒಂದಿಷ್ಟು ಭಕ್ತಿಸೇವೆಯನ್ನು ಸೇರಿಸಿ ಕೃಷ್ಣನ ವಿಶ್ವರೂಪವನ್ನು ಕಾಣಲು ಸಾಧ್ಯವಾದೀತು. ಇದು ಸಾಧ್ಯವಾಗಬಹುದು. ಆದರೆ ಸ್ವಲ್ಪ ಭಕ್ತಿಯಿಲ್ಲದಿದ್ದರೆ ನೋಡಲು ಸಾಧ್ಯವಿಲ್ಲ. ಇದನ್ನು ಆಗಲೇ ವಿವರಿಸಿದೆ. ಆದರೂ ಬ್ರಹ್ಮ ಮತ್ತು ಶಿವನಂತಹ ದೇವತೆಗಳಿಗೆ ಸಹ ಆ ವಿಶ್ವರೂಪದಾಚೆ ಎರಡು ಕೈಗಳಿರುವ ಕೃಷ್ಣನ ರೂಪವನ್ನು ಕಾಣುವುದು ಇನ್ನೂ ಕಷ್ಟ. ಅವರಿಗೆ ಕೃಷ್ಣನನ್ನು ಕಾಣುವ ಹಂಬಲ. ಆತನು ತನ್ನ ತಾಯಿ ದೇವಕಿಯ ಗರ್ಭದಲ್ಲಿದ್ದನೆಂದು ಭಾವಿಸಿದಾಗ ಸ್ವರ್ಗದಿಂದ

ದೇವತೆಗಳೆಲ್ಲ ಕೃಷ್ಣನ ಅದ್ಭುತ ಮಹಿಮೆಯನ್ನು ನೋಡಲೆಂದು ಬಂದರು. ಆಗ ಅವರಿಗೆ ಆತನು ಕಾಣದಿದ್ದರೂ ಅವನನ್ನು ಸೊಗಸಾಗಿ ಸ್ತುತಿಸಿದರು. ಇದಕ್ಕೆ ಶ್ರೀಮದ್ಭಾಗವತದಲ್ಲಿ ಸಾಕ್ಷ್ಯವಿದೆ. ಅವನನ್ನು ನೋಡಲು ಅವರು ಕಾದಿದ್ದರು. ಆತನು ಸಾಮಾನ್ಯ ಮನುಷ್ಯನೆಂದು ತಿಳಿದು ಮೂರ್ಖನಾದವನು ಅವನನ್ನು ತೆಗಳಬಹುದು. ಅವನಿಗೆ ಗೌರವ ಸಲ್ಲಿಸದೆ ಅವನೊಳಗಿರುವ ನಿರಾಕಾರವಾದ 'ಯಾವುದೋ ಒಂದಕ್ಕೆ' ಗೌರವ ಸಲ್ಲಿಸಬಹುದು. ಆದರೆ ಇವೆಲ್ಲ ಅಸಂಬದ್ಧ ನಿಲುವುಗಳು. ಎರಡು ಕೈಗಳಿರುವ ಕೃಷ್ಣನ ರೂಪವನ್ನು ನೋಡಬೇಕೆಂದು ಬ್ರಹ್ಮ ಮತ್ತು ಶಿವನಂತಹ ದೇವತೆಗಳು ಬಯಸುತ್ತಾರೆ.

ಭಗವದ್ಗೀತೆಯಲ್ಲಿಯೂ (9.11) ಇದನ್ನು ದೃಢಪಡಿಸಿದೆ — **ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮ್ ಆಶ್ರಿತಃ** — ಅವನನ್ನು ತೆಗಳುವ ಮೂಢರಿಗೆ ಅವನು ಕಾಣುವುದಿಲ್ಲ. ಬ್ರಹ್ಮಸಂಹಿತೆಯಲ್ಲಿ ದೃಢಪಡಿಸಿರುವಂತೆ ಮತ್ತು ಭಗವದ್ಗೀತೆಯಲ್ಲಿ ಸ್ವಯಂ ಕೃಷ್ಣನೇ ದೃಢಪಡಿಸಿದಂತೆ ಅವನ ದೇಹವು ದಿವ್ಯವಾದದ್ದು ಮತ್ತು ನಿತ್ಯಾನಂದಪೂರ್ಣವಾದದ್ದು. ಅವನ ದೇಹವು ಐಹಿಕದೇಹದಂತೆ ಇಲ್ಲವೇ ಇಲ್ಲ. ಆದರೆ ಭಗವದ್ಗೀತೆಯನ್ನು ಅಥವಾ ಅಂತಹ ವೇದಶಾಸ್ತ್ರಗಳನ್ನು ಓದಿ ಕೃಷ್ಣನನ್ನು ಅಧ್ಯಯನ ಮಾಡುವ ಕೆಲವರಿಗೆ ಕೃಷ್ಣನು ಒಂದು ಸಮಸ್ಯೆಯಾಗುತ್ತಾನೆ. ಐಹಿಕ ಪ್ರಕ್ರಿಯೆಯನ್ನು ಬಳಸುವವನಿಗೆ ಕೃಷ್ಣನು ಒಬ್ಬ ಮಹಾನ್ ಐತಿಹಾಸಿಕ ವ್ಯಕ್ತಿ ಮತ್ತು ಬಹು ದೊಡ್ಡ ವಿದ್ವಾಂಸ ತತ್ವಜ್ಞಾನಿಯಾಗಿದ್ದರೂ ಸಾಮಾನ್ಯ ಮನುಷ್ಯನೇ; ಕೃಷ್ಣನು ಅಷ್ಟು ಶಕ್ತಿವಂತನಾದರೂ ಭೌತಿಕ ಶರೀರವೊಂದನ್ನು ಸ್ವೀಕರಿಸಬೇಕಾಯಿತು ಎಂದೆನಿಸುತ್ತದೆ. ಕಟ್ಟಕಡೆಗೆ ಇಂತಹವರು ಪರಿಪೂರ್ಣ ಸತ್ಯವು ನಿರಾಕಾರ ಎಂದು ಯೋಚಿಸುತ್ತಾರೆ. ಆದುದರಿಂದ, ತನ್ನ ನಿರಾಕಾರ ಸ್ವರೂಪದಿಂದ ಆತನು ಭೌತಿಕ ಪ್ರಕೃತಿಗೆ ಸೇರಿದ ಒಂದು ಸಾಕಾರ ರೂಪವನ್ನು ಧರಿಸಿದ ಎಂದು ಯೋಚಿಸುತ್ತಾರೆ. ಇದು ಪರಮ ಪ್ರಭುವನ್ನು ಕುರಿತು ಒಂದು ಭೌತಿಕ ಲೆಕ್ಕಾಚಾರ. ಇನ್ನೊಂದು ಲೆಕ್ಕಾಚಾರವು ಊಹಾತ್ಮಕವಾದದ್ದು. ಜ್ಞಾನವನ್ನು ಅರಸುವವರು ಸಹ ಕೃಷ್ಣನ ವಿಷಯದಲ್ಲಿ ಊಹಾತ್ಮಕ ಚಿಂತನೆ ಮಾಡುತ್ತಾರೆ ಮತ್ತು ಆತನು ಪರಮನ ವಿಶ್ವರೂಪದಷ್ಟು ಮುಖ್ಯನಲ್ಲ ಎಂದು ಭಾವಿಸುತ್ತಾರೆ. ಹೀಗೆ ಕೆಲವರು ಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವು ಅವನ ವೈಯಕ್ತಿಕ ರೂಪಕ್ಕಿಂತ ಮುಖ್ಯ ಎಂದು ಯೋಚಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ಪರಮನ ವೈಯಕ್ತಿಕ ರೂಪವು ಕಾಲ್ಪನಿಕವಾದದ್ದು. ಕಟ್ಟಕಡೆಯದಾಗಿ ಹೇಳುವುದಾದರೆ ಪರಿಪೂರ್ಣ ಸತ್ಯವು ವ್ಯಕ್ತಿಯಲ್ಲ ಎಂದು ಅವರು ನಂಬುತ್ತಾರೆ. ಆದರೆ ಭಗವದ್ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ ಆಧ್ಯಾತ್ಮಿಕ ಪ್ರಕ್ರಿಯೆಯನ್ನು ವರ್ಣಿಸಿದೆ. ಆಚಾರ್ಯರಿಂದ ಕೃಷ್ಣನ ವಿಷಯ ಕೇಳುವುದೇ ಈ ಪ್ರಕ್ರಿಯೆ. ಅದು ವಾಸ್ತವಿಕ ವೈದಿಕ ಪ್ರಕ್ರಿಯೆ. ವಾಸ್ತವಿಕವಾಗಿ ವೈದಿಕ ಪರಂಪರೆಯಲ್ಲಿರುವವರು ಅಧಿಕಾರಯುತನಾಗಿ ಹೇಳಬಲ್ಲವರಿಂದ ಕೃಷ್ಣನ ವಿಷಯ ಕೇಳುತ್ತಾರೆ. ಅವನ ವಿಷಯವನ್ನು ಮತ್ತೆ ಮತ್ತೆ ಕೇಳುವುದರಿಂದ ಕೃಷ್ಣನು ಪ್ರಿಯನಾಗುತ್ತಾನೆ. ನಾವು ಅನೇಕ ಬಾರಿ ಚರ್ಚಿಸಿರುವಂತೆ ಕೃಷ್ಣನನ್ನು ಅವನ ಯೋಗಮಾಯೆಯ ಶಕ್ತಿಯು ಆವರಿಸಿರುತ್ತದೆ. ಆತನು ಯಾರು ಯಾರಿಗೋ ಕಾಣಿಸುವವನು ಅಥವಾ ಪ್ರಕಟವಾಗುವವನು ಅಲ್ಲ. ಆತನು ಯಾರಿಗೆ ತನ್ನ ದರ್ಶನವನ್ನು ಕೊಡುತ್ತಾನೋ ಅವರು ಮಾತ್ರ ಅವನನ್ನು ಕಾಣಲು ಸಾಧ್ಯ. ಇದನ್ನು ವೈದಿಕ ಸಾಹಿತ್ಯವು ದೃಢಪಡಿಸುತ್ತದೆ; ಶರಣಾಗತವಾದ ಆತ್ಮವು ವಾಸ್ತವವಾಗಿ ಕೃಷ್ಣನನ್ನು ಅರ್ಥಮಾಡಿಕೊಳ್ಳಬಲ್ಲದು. ನಿರಂತರವಾದ ಕೃಷ್ಣಪ್ರಜ್ಞೆಯಿಂದ ಮತ್ತು ಕೃಷ್ಣನಿಗೆ ಭಕ್ತಿಸೇವೆಯನ್ನು ಸಲ್ಲಿಸುವುದರಿಂದ

ಅಧ್ಯಾತ್ಮವಾದಿಯು ತನ್ನ ದಿವ್ಯ ಕಣ್ಣುಗಳು ತೆರೆಯುವಂತೆ ಮಾಡಬಲ್ಲ ಮತ್ತು ಆ ದೃಷ್ಟಿಯಿಂದ ಕೃಷ್ಣನನ್ನು ಕಾಣಬಹುದು. ದೇವತೆಗಳಿಗೂ ಇಂತಹ ದರ್ಶನವು ಸಾಧ್ಯವಾಗುವುದಿಲ್ಲ. ಆದುದರಿಂದ ದೇವತೆಗಳಿಗೂ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಕಷ್ಟ ಮತ್ತು ಮೇಲ್ಮಟ್ಟದ ದೇವತೆಗಳು ಯಾವಾಗಲೂ ಕೃಷ್ಣನ ಎರಡೂ ಕೈಗಳ ರೂಪವನ್ನು ಕಾಣುವ ಭರವಸೆಯಲ್ಲಿರುತ್ತಾರೆ. ಇದರ ನಿರ್ಣಯವೆಂದರೆ ಕೃಷ್ಣನ ವಿಶ್ವರೂಪ ದರ್ಶನವನ್ನು ಪಡೆಯುವುದು ಬಹಳ ಕಷ್ಟ ಮತ್ತು ಅದು ಎಲ್ಲರಿಗೂ ಅಸಾಧ್ಯ. ಆದರೆ ಶ್ಯಾಮಸುಂದರನಾಗಿ ಅವನ ವೈಯಕ್ತಿಕ ರೂಪವನ್ನು ಅರ್ಥಮಾಡಿಕೊಳ್ಳುವುದು ಇನ್ನೂ ಕಷ್ಟ.

## ಶ್ಲೋಕ - 53

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥**

**ನ**—ಎಂದಿಗೂ ಇಲ್ಲ; **ಅಹಮ್**—ನಾನು; **ವೇದೈಃ**—ವೇದಗಳ ಅಧ್ಯಯನದಿಂದ; **ನ**—ಎಂದಿಗೂ ಇಲ್ಲ; **ತಪಸಾ**—ತೀವ್ರ ತಪಸ್ಸುಗಳಿಂದ; **ನ**—ಎಂದಿಗೂ ಇಲ್ಲ; **ದಾನೇನ**—ದಾನದಿಂದ; **ನ**—ಎಂದಿಗೂ ಇಲ್ಲ; **ಚ**—ಕೂಡ; **ಇಜ್ಯಯಾ**—ಆರಾಧನೆಯಿಂದ; **ಶಕ್ಯಃ**—ಸಾಧ್ಯವಾಗುತ್ತದೆ; **ಏವಂ ವಿಧಃ**—ಈ ರೀತಿಯಲ್ಲಿ; **ದ್ರಷ್ಟುಮ್**—ನೋಡಲು; **ದೃಷ್ಟವಾನ್**—ನೋಡುವವನು; **ಅಸಿ**—ಆಗಿದ್ದೀಯೆ; **ಮಾಮ್**—ನನ್ನನ್ನು; **ಯಥಾ**—ಹಾಗೆಯೇ.

## ಅನುವಾದ

**ವೇದಾಧ್ಯಯನ ಮಾತ್ರದಿಂದ ಅಥವಾ ಕಠಿಣ ತಪಸ್ಸಿನಿಂದ ಅಥವಾ ದಾನದಿಂದ ಅಥವಾ ಪೂಜೆಯಿಂದ ನೀನು ನಿನ್ನ ದಿವ್ಯನೇತ್ರಗಳಿಂದ ಕಾಣುತ್ತಿರುವ ನನ್ನ ರೂಪವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇವುಗಳಿಂದ ನಾನಿರುವಂತೆ ನನ್ನನ್ನು ಕಾಣಲು ಸಾಧ್ಯವಿಲ್ಲ.**

## ಭಾವಾರ್ಥ

ಕೃಷ್ಣನು ತನ್ನ ತಾಯಿತಂದೆಯರಾದ ದೇವಕಿ ಮತ್ತು ವಸುದೇವರಿಗೆ ಮೊದಲ ಬಾರಿ ಚತುರ್ಭುಜ ರೂಪದಲ್ಲಿ ಕಾಣಿಸಿಕೊಂಡ. ಅನಂತರ ಎರಡು ಕೈಗಳ ರೂಪವನ್ನು ಧರಿಸಿದ. ನಾಸ್ತಿಕರಾದವರಿಗೆ ಅಥವಾ ಭಕ್ತಿಸೇವೆ ಮಾಡದವರಿಗೆ ಈ ರಹಸ್ಯ ರೂಪವನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ. ವ್ಯಾಕರಣ ಜ್ಞಾನದಿಂದಷ್ಟೇ ವೈದಿಕ ಸಾಹಿತ್ಯವನ್ನು ಅಭ್ಯಾಸಮಾಡಿದ ಅಥವಾ ವಿದ್ವತ್ತಿನ ಅರ್ಹತೆಗಳನ್ನು ಮಾತ್ರ ಪಡೆದ ವಿದ್ವಾಂಸರು ಕೃಷ್ಣನನ್ನು ಅರ್ಥಮಾಡಿಕೊಳ್ಳಲಾರರು. ಪೂಜೆ ಸಲ್ಲಿಸುವುದಕ್ಕಾಗಿ ಅಧಿಕೃತ ರೀತಿಯಲ್ಲಿ ದೇವಸ್ಥಾನಗಳಿಗೆ ಹೋಗುವವರು ಅವನನ್ನು ಅರ್ಥಮಾಡಿಕೊಳ್ಳಲಾರರು. ಅವರು ದೇವಸ್ಥಾನಕ್ಕೆ ಭೇಟಿಕೊಡಬಹುದೇ ಹೊರತು ಕೃಷ್ಣನನ್ನು ಅವನು ಇರುವಂತೆ ಅರ್ಥಮಾಡಿಕೊಳ್ಳಲಾರರು. ಸ್ವತಃ ಕೃಷ್ಣನೇ ಮುಂದಿನ ಶ್ಲೋಕದಲ್ಲಿ ವಿವರಿಸುವಂತೆ ಭಕ್ತಿಸೇವೆಯಿಂದ ಮಾತ್ರ ಅವನನ್ನು ಅರ್ಥಮಾಡಿಕೊಳ್ಳಲು ಸಾಧ್ಯ.

## ಶ್ಲೋಕ - 54

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ |**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರನ್ತಪ ||೫೪||**

**ಭಕ್ತ್ಯಾ**—ಭಕ್ತಿಸೇವೆಯಿಂದ; **ತು**—ಆದರೆ; **ಅನನ್ಯಯಾ**—ಕಾಮ್ಯ ಕರ್ಮಗಳಿಂದ ಅಥವಾ ಊಹಾತ್ಮಕ ಚಿಂತನೆಗಳಿಂದ ಮಿಶ್ರವಾಗದ; **ಶಕ್ಯಃ**—ಸಾಧ್ಯವು; **ಅಹಮ್**—ನಾನು; **ಏವಮ್ ವಿಧಃ**—ಈ ರೀತಿಯಲ್ಲಿ; **ಅರ್ಜುನ**—ಅರ್ಜುನನೇ; **ಜ್ಞಾತುಮ್**—ತಿಳಿಯಲು; **ದ್ರಷ್ಟುಮ್**—ನೋಡಲು; **ಚ**— ಮತ್ತು; **ತತ್ತ್ವೇನ**—ವಾಸ್ತವವಾಗಿ; **ಪ್ರವೇಷ್ಟುಮ್**—ಪ್ರವೇಶಿಸಲು; **ಚ**—ಕೂಡ; **ಪರನ್ತಪ**—ಮಹಾಬಾಹುವೇ.

## ಅನುವಾದ

**ನನ್ನ ಪ್ರೀತಿಯ ಅರ್ಜುನನೆ, ಏಕಚಿತ್ತದ ಭಕ್ತಿಸೇವೆಯಿಂದ ಮಾತ್ರ ನಿನ್ನ ಮುಂದೆ ನಿಂತಿರುವ ನನ್ನನ್ನು ನಾನಿರುವಂತೆ ಅರ್ಥಮಾಡಿಕೊಳ್ಳಲು ಸಾಧ್ಯ; ಹೀಗೆ ಮಾತ್ರ ನನ್ನನ್ನು ನೇರವಾಗಿ ನೋಡಲು ಸಾಧ್ಯ. ಈ ರೀತಿಯಲ್ಲಿ ಮಾತ್ರ ನನ್ನನ್ನು ತಿಳಿಯುವ ರಹಸ್ಯಗಳನ್ನು ನೀನು ಪ್ರವೇಶಿಸಬಲ್ಲೆ.**

## ಭಾವಾರ್ಥ

ಏಕಾಗ್ರಚಿತ್ತದ ಭಕ್ತಿಸೇವೆಯ ಪ್ರಕ್ರಿಯೆಯಿಂದ ಮಾತ್ರ ಕೃಷ್ಣನನ್ನು ಅರ್ಥಮಾಡಿಕೊಳ್ಳಬಹುದು. ಇದನ್ನು ಕೃಷ್ಣನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ವಿವರಿಸುತ್ತಾನೆ. ಬರಿಯ ಊಹಾತ್ಮಕ ಚಿಂತನೆಯ ಪ್ರಕ್ರಿಯೆಯಿಂದ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವ ಅಧಿಕಾರವಿಲ್ಲದ ವ್ಯಾಖ್ಯಾನಕಾರರು ತಾವು ಕಾಲವನ್ನು ವ್ಯರ್ಥಮಾಡುತ್ತಿದ್ದೇವೆ ಎಂದು ತಿಳಿದುಕೊಳ್ಳಲಿ ಎನ್ನುವುದು ಇದರ ಉದ್ದೇಶ. ಕೃಷ್ಣನನ್ನು ಯಾರೂ ಅರ್ಥಮಾಡಿಕೊಳ್ಳಲಾರರು. ಅವನು ಚತುರ್ಭುಜ ರೂಪದಲ್ಲಿ ತಂದೆ ತಾಯಿಯಿಂದ ಹೇಗೆ ಬಂದ ಮತ್ತು ತಕ್ಷಣವೇ ಎರಡು ಕೈಗಳ ರೂಪವನ್ನು ಹೇಗೆ ಧರಿಸಿದ ಎನ್ನುವುದು ಯಾರಿಗೂ ಅರ್ಥವಾಗುವುದಿಲ್ಲ. ವೇದಾಧ್ಯಯನದಿಂದ ಅಥವಾ ಊಹಾತ್ಮಕಚಿಂತನೆಯಿಂದ ಈ ವಿಷಯಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಆದುದರಿಂದ ಯಾರೂ ಅವನನ್ನು ಕಾಣಲಾರರು ಮತ್ತು ಯಾರೂ ಈ ವಿಷಯಗಳನ್ನು ತಿಳಿದುಕೊಳ್ಳಲಾರರು ಎಂದು ಸ್ಪಷ್ಟವಾಗಿ ಹೇಳಿದೆ. ಆದರೆ ವೇದಸಾಹಿತ್ಯದ ನುರಿತ ವಿದ್ಯಾರ್ಥಿಗಳಾದವರು ಅನೇಕ ರೀತಿಗಳಲ್ಲಿ ವೇದಸಾಹಿತ್ಯದಿಂದ ಅವನ ವಿಷಯವನ್ನು ತಿಳಿದುಕೊಳ್ಳಬಹುದು. ಅದಕ್ಕೆ ಹಲವಾರು ನಿಯಮ ನಿಬಂಧನೆಗಳಿವೆ. ಕೃಷ್ಣನನ್ನು ಯಾರಾದರೂ ಅರ್ಥಮಾಡಿಕೊಳ್ಳಲು ಬಯಸಿದರೆ ಆತನು ಪ್ರಮಾಣಗ್ರಂಥಗಳಲ್ಲಿ ವರ್ಣಿಸುವ ನಿಯಂತ್ರಕ ತತ್ವಗಳನ್ನು ಅನುಸರಿಸಬೇಕು. ಈ ತತ್ವಗಳಿಗೆ ಅನುಗುಣವಾಗಿ ವ್ರತಗಳನ್ನು ಆಚರಿಸಬಹುದು. ಉದಾಹರಣೆಗೆ ಕಟ್ಟುನಿಟ್ಟಾದ ವ್ರತಗಳನ್ನು ನಡೆಸಲು ಕೃಷ್ಣನು ಕಾಣಿಸಿಕೊಂಡ ಜನ್ಮಾಷ್ಟಮಿಯಂದು ಮತ್ತು ಕೃಷ್ಣಪಕ್ಷ, ಶುಕ್ಲಪಕ್ಷಗಳಂದು ಏಕಾದಶಿಯ ದಿವಸ ಉಪವಾಸ ಮಾಡಬಹುದು. ದಾನದ ವಿಷಯ ಹೇಳುವುದಾದರೆ ಇಡೀ ಜಗತ್ತಿನಲ್ಲಿ ಕೃಷ್ಣ ಸಿದ್ಧಾಂತವನ್ನು ಅಥವಾ ಕೃಷ್ಣಪ್ರಜ್ಞೆಯನ್ನು ಹರಡಲು ಕೃಷ್ಣನ ಭಕ್ತಿಸೇವೆಯಲ್ಲಿ ನಿರತರಾದ ಅವನ ಭಕ್ತರಿಗೆ ದಾನ ಕೊಡಬೇಕು ಎನ್ನುವುದು ಸ್ಪಷ್ಟ. ಕೃಷ್ಣಪ್ರಜ್ಞೆಯು ಮಾನವ ಕುಲಕ್ಕೆ ಒಂದು ವರ. ರೂಪ ಗೋಸ್ವಾಮಿಯವರು ಚೈತನ್ಯ

ಮಹಾಪ್ರಭುಗಳನ್ನು ಅತ್ಯಂತ ದಾನಶೂರರೆಂದು ಮೆಚ್ಚಿಕೊಂಡರು. ಇದಕ್ಕೆ ಕಾರಣ, ಪಡೆಯಲು ಬಹು ಕಷ್ಟವಾದ ಕೃಷ್ಣಪ್ರೇಮವನ್ನು ಚೈತನ್ಯರು ಉಚಿತವಾಗಿ ಹಂಚಿದರು. ಆದುದರಿಂದ ಕೃಷ್ಣಪ್ರಜ್ಞೆಯನ್ನು ವಿತರಣೆ ಮಾಡುವುದರಲ್ಲಿ ನಿರತರಾದವರಿಗೆ ದಾನ ನೀಡಿದರೆ ಕೃಷ್ಣಪ್ರಜ್ಞೆಯನ್ನು ಹರಡಲು ಕೊಟ್ಟ ಈ ದಾನವು ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದ ದಾನವಾಗುತ್ತದೆ. ದೇವಾಲಯದಲ್ಲಿ ವಿಧಿಸಿರುವ ರೀತಿಯಲ್ಲಿ ಪೂಜೆಮಾಡಿದರೆ (ಭಾರತದ ದೇವಾಲಯಗಳಲ್ಲಿ ಯಾವಾಗಲೂ ಸಾಮಾನ್ಯವಾಗಿ ವಿಷ್ಣು ಅಥವಾ ಕೃಷ್ಣನ ಒಂದು ವಿಗ್ರಹ ಇರುತ್ತದೆ) ದೇವೋತ್ತಮ ಪರಮ ಪುರುಷನಿಗೆ ಪೂಜೆ ಮತ್ತು ಗೌರವ ಸಲ್ಲಿಸುವ ಮೂಲಕ ಪ್ರಗತಿಯನ್ನು ಸಾಧಿಸಲು ಅದೊಂದು ಅವಕಾಶ. ಭಗವಂತನ ಭಕ್ತಿಸೇವೆಯನ್ನು ಪ್ರಾರಂಭಿಸುವವರಿಗೆ ದೇವಾಲಯದಲ್ಲಿ ಪೂಜೆಮಾಡುವುದು ಅಗತ್ಯ. ಇದನ್ನು ವೇದಸಾಹಿತ್ಯವು ದೃಢಪಡಿಸುತ್ತದೆ — (ಶ್ವೇತಾಶ್ವತರ ಉಪನಿಷತ್ 6.23)

**ಯಸ್ಯ ದೇವೇ ಪರಾ ಭಕ್ತಿರ್ ಯಥಾ ದೇವೇ ತಥಾ ಗುರೌ |**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ||**

ಪರಮ ಪ್ರಭುವಿನಲ್ಲಿ ನಿಶ್ಚಲವಾದ ಭಕ್ತಿ ಇದ್ದು ತನ್ನ ಗುರುವಿನಲ್ಲಿಯೂ ಅಂತಹುದೇ ನಿಶ್ಚಲ ನಂಬಿಕೆಯನ್ನಿಟ್ಟ ಮನುಷ್ಯನು ದೇವೋತ್ತಮ ಪರಮ ಪುರುಷನನ್ನು ದಿವ್ಯದರ್ಶನದಿಂದ ಕಾಣಬಲ್ಲ. ಊಹಾತ್ಮಕ ಚಿಂತನೆಯಿಂದ ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ನಿಜವಾದ ಗುರುವಿನ ಮಾರ್ಗದರ್ಶನದಲ್ಲಿ ವೈಯಕ್ತಿಕ ಶಿಕ್ಷಣವನ್ನು ಪಡೆಯದವನು ಕೃಷ್ಣನನ್ನು ಅರ್ಥಮಾಡಿಕೊಳ್ಳುವುದನ್ನು ಪ್ರಾರಂಭ ಸಹ ಮಾಡಲಾರ. **ತು** ಎಂಬ ಪದವನ್ನು ಇಲ್ಲಿ ವಿಶೇಷ ಕಾರಣಕ್ಕೆ ಬಳಸಿದೆ. ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಬೇರೆ ಯಾವುದೇ ಪ್ರಕ್ರಿಯೆಯನ್ನು ಬಳಸಲು ಸಾಧ್ಯವಿಲ್ಲ. ಯಾವುದೇ ಸಲಹೆ ನೀಡಲು ಸಾಧ್ಯವಿಲ್ಲ ಅಥವಾ ಯಶಸ್ವಿಯಾಗುವುದೂ ಸಾಧ್ಯವಿಲ್ಲ ಎನ್ನುವುದನ್ನು ಸೂಚಿಸುವುದು ಇದರ ಉದ್ದೇಶ.

ಎರಡು ಕೈಗಳ ರೂಪ ಮತ್ತು ಚತುರ್ಭುಜ ರೂಪ — ಈ ಎರಡು ರೂಪ ಕೃಷ್ಣನ ವೈಯಕ್ತಿಕ ರೂಪಗಳು. ಅರ್ಜುನನಿಗೆ ತೋರಿದ ಅಲ್ಪಕಾಲದ ವಿಶ್ವರೂಪದಿಂದ ಭಿನ್ನವಾದವು. ನಾರಾಯಣನ ಚತುರ್ಭುಜ ರೂಪವೂ ಕೃಷ್ಣನ ಎರಡು ಕೈಗಳ ರೂಪವೂ ನಿತ್ಯವಾದವು ಮತ್ತು ದಿವ್ಯವಾದವು. ಆದರೆ ಅರ್ಜುನನಿಗೆ ತೋರಿದ ವಿಶ್ವರೂಪವು ತಾತ್ಕಾಲಿಕವಾದದ್ದು. **ಸುದುರ್ದರ್ಶಮ್** ಎನ್ನುವ ಪದಕ್ಕೆ 'ನೋಡಲು ಕಷ್ಟವಾದದ್ದು' ಎಂದು ಅರ್ಥ. ವಿಶ್ವರೂಪವನ್ನು ಯಾರೂ ಕಂಡಿರಲಿಲ್ಲ ಎನ್ನುವುದನ್ನು ಇದು ಸೂಚಿಸುತ್ತದೆ. ಭಕ್ತರ ನಡುವೆ ವಿಶ್ವರೂಪವನ್ನು ತೋರುವ ಅಗತ್ಯ ಇರಲಿಲ್ಲ ಎನ್ನುವುದನ್ನೂ ಇದು ಸೂಚಿಸುತ್ತದೆ. ಈ ರೂಪವನ್ನು ಅರ್ಜುನನ ಪ್ರಾರ್ಥನೆಯಂತೆ ಕೃಷ್ಣನು ತೋರಿಸಿದನು. ಭವಿಷ್ಯದಲ್ಲಿ ಯಾರಾದರೂ ತಾನು ದೇವರ ಅವತಾರವೆಂದು ಹೇಳಿಕೊಂಡರೆ ಆತನ ವಿಶ್ವರೂಪವನ್ನು ತೋರಿಸುವಂತೆ ಜನರು ಕೇಳಬಹುದು. ಇದೇ ಕೃಷ್ಣನ ಉದ್ದೇಶ.

ಹಿಂದಿನ ಶ್ಲೋಕದಲ್ಲಿ **ನ** ಎನ್ನುವ ಪದವನ್ನು ಮತ್ತೆ ಮತ್ತೆ ಬಳಸಿದೆ; ವಿದ್ಯಾಸಂಸ್ಥೆಯಲ್ಲಿ ಕಲಿತ ವೇದ ಸಾಹಿತ್ಯದ ಪಾಂಡಿತ್ಯದಿಂದ ಮನುಷ್ಯನು ಬಹು ಹೆಮ್ಮೆ ಪಡಬಾರದು ಎನ್ನುವುದನ್ನು

ಇದು ತೋರಿಸುತ್ತದೆ. ಮನುಷ್ಯನು ಕೃಷ್ಣನ ಭಕ್ತಿಸೇವೆಯಲ್ಲಿ ತೊಡಗಬೇಕು. ಆಗ ಮಾತ್ರ ಆತನು ಭಗವದ್ಗೀತೆಯ ವ್ಯಾಖ್ಯಾನವನ್ನು ಬರೆಯಲು ಪ್ರಯತ್ನಿಸಬಹುದು.

ಕೃಷ್ಣನು ವಿಶ್ವರೂಪದಿಂದ ನಾಲ್ಕು ಕೈಗಳ ನಾರಾಯಣ ರೂಪಕ್ಕೆ, ಅನಂತರ ಎರಡು ಕೈಗಳ ತನ್ನ ಸಹಜವಾದ ರೂಪಕ್ಕೆ ಬದಲಾವಣೆ ಮಾಡಿಕೊಳ್ಳುತ್ತಾನೆ. ವೇದ ಸಾಹಿತ್ಯದಲ್ಲಿ ಪ್ರಸ್ತಾಪಿಸಿರುವ ಚತುರ್ಭುಜ ರೂಪವೂ ಇತರ ಎಲ್ಲ ರೂಪಗಳೂ ಎರಡು ಕೈಗಳ ಮೂಲದ ಕೃಷ್ಣನ ರೂಪದಿಂದ ಮೂಡಿ ಬಂದವು ಎನ್ನುವುದನ್ನು ಇದು ತೋರಿಸುತ್ತದೆ. ಮೂಡಿಬರುವ ಎಲ್ಲದರ ಮೂಲವು ಅವನೇ. ನಿರಾಕಾರ ಪರಿಕಲ್ಪನೆಯ ವಿಷಯವಿರಲಿ; ಕೃಷ್ಣನು ಈ ರೂಪಗಳಿಂದ ಸಹ ಭಿನ್ನವಾದವನು. ಕೃಷ್ಣನ ಚತುರ್ಭುಜ ರೂಪಗಳನ್ನು ಕುರಿತು ಹೇಳುವಾಗ ಕೃಷ್ಣನ ಚತುರ್ಭುಜದ ಅತ್ಯಂತ ಸದೃಶ ರೂಪವು ಪರಮ ಪ್ರಭುವಿನ ವಿಸ್ತರಣೆ ಎಂದು ಹೇಳಲಾಗಿದೆ. (ವಿಶ್ವಸಾಗರದಲ್ಲಿ ಯಾರು ಪವಡಿಸಿರುವರೋ ಮತ್ತು ಯಾರ ಉಸಿರಾಟದಿಂದ ಅಸಂಖ್ಯಾತ ವಿಶ್ವಗಳು ಹೊರಕ್ಕೆ ಬರುತ್ತಿವೆಯೋ ಮತ್ತು ಒಳಕ್ಕೆ ಹೋಗುತ್ತಿವೆಯೋ ಅಂತಹ ರೂಪಕ್ಕೆ ಮಹಾ ವಿಷ್ಣು ಎಂದು ಹೆಸರು). ಬ್ರಹ್ಮಸಂಹಿತೆಯಲ್ಲಿ (5.48) ಹೇಳುವಂತೆ —

**ಯಸ್ಯೈಕ ನಿಶ್ವಸಿತ ಕಾಲಮ್ ಅಥಾವಲಮ್ಬ್ಯ**
**ಜೀವನ್ತಿ ಲೋಮವಿಲಜಾ ಜಗದಣ್ಡ ನಾಥಾಃ ।**
**ವಿಷ್ಣುರ್ ಮಹಾನ್ ಸ ಇಹ ಯಸ್ಯ ಕಲಾ ವಿಶೇಷೋ**
**ಗೋವಿನ್ದಮಾದಿಪುರುಷಂ ತಮಹಂ ಭಜಾಮಿ ॥**

"ಮಹಾವಿಷ್ಣುವು ಉಸಿರಾಡಿದರೆ ಸಾಕು, ಅಸಂಖ್ಯಾತ ವಿಶ್ವಗಳು ಒಳಕ್ಕೆ ಹೋಗುತ್ತವೆ ಮತ್ತು ಹೊರಕ್ಕೆ ಬರುತ್ತವೆ. ಇಂತಹ ಮಹಾವಿಷ್ಣುವು ಕೃಷ್ಣನ ಸ್ವಾಂಶ ವಿಸ್ತರಣೆ. ಆದುದರಿಂದ ಎಲ್ಲ ಕಾರಣಗಳ ಕಾರಣನಾದ ಗೋವಿಂದನನ್ನು ಕೃಷ್ಣನನ್ನು ನಾನು ಪೂಜಿಸುತ್ತೇನೆ." ಆದುದರಿಂದ ಕೃಷ್ಣನ ಸಾಕಾರ ರೂಪವನ್ನು ಸಚ್ಚಿದಾನಂದ ಜ್ಞಾನವನ್ನು ಪಡೆದ ದೇವೋತ್ತಮ ಪರಮ ಪುರುಷ ಎಂದು ಮನುಷ್ಯನು ದೃಢವಾಗಿ ಪೂಜಿಸಬೇಕು. ವಿಷ್ಣುವಿನ ಎಲ್ಲ ರೂಪಗಳ ಮೂಲ ಅವನು. ಎಲ್ಲ ಅವತಾರ ರೂಪಗಳ ಮೂಲನೂ ಅವನೇ. ಭಗವದ್ಗೀತೆಯಲ್ಲಿ ದೃಢ ಪಡಿಸಿದಂತೆ ಅವನೇ ಪರಮ ಪುರುಷನು.

ವೇದ ಸಾಹಿತ್ಯದಲ್ಲಿ (ಗೋಪಾಲತಾಪನಿ ಉಪನಿಷತ್ 1.1) ಹೀಗೆ ಹೇಳಿದೆ —

**ಸಚ್ಚಿದಾನನ್ದ ರೂಪಾಯ ಕೃಷ್ಣಾಯಾಕ್ಲಿಷ್ಟ ಕಾರಿಣೇ ।**
**ನಮೋ ವೇದಾನ್ತ ವೇದ್ಯಾಯ ಗುರವೇ ಬುದ್ಧಿ ಸಾಕ್ಷಿಣೇ ॥**

"ನಾನು ಕೃಷ್ಣನಿಗೆ ಗೌರವ ಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ. ಆತನು ಸಚ್ಚಿದಾನಂದ ರೂಪನು. ಅವನನ್ನು ಅರ್ಥಮಾಡಿಕೊಳ್ಳುವುದೆಂದರೆ ವೇದಗಳನ್ನು ಅರ್ಥಮಾಡಿಕೊಂಡಂತೆ. ಆದುದರಿಂದ ಆತನು ಪರಮ ಗುರು. ಆದುದರಿಂದ ಆತನಿಗೆ ನನ್ನ ಗೌರವವನ್ನು ಸಲ್ಲಿಸುತ್ತೇನೆ." ಅನಂತರ ಹೀಗೆ ಹೇಳಿದೆ — **ಕೃಷ್ಣೋ ವೈ ಪರಮಂ ದೈವತಮ್** — "ಕೃಷ್ಣನು ದೇವೋತ್ತಮ ಪರಮ ಪುರುಷ" (ಗೋಪಾಲತಾಪನಿ 1.3) **ಏಕೋ ವಶೀ ಸರ್ವಗಃ ಕೃಷ್ಣ ಈಡ್ಯಃ** —ಆ ಕೃಷ್ಣನು ದೇವೋತ್ತಮ ಪರಮ ಪುರುಷ ಮತ್ತು ಪರಮ ಪೂಜ್ಯನು." **ಏಕೋಽಪಿ**

**ಸನ್ ಬಹುಧಾ ಯೋऽವಭಾತಿ** — "ಕೃಷ್ಣನು ಒಬ್ಬನೇ, ಆದರೆ ಲೆಕ್ಕವಿಲ್ಲದಷ್ಟು ರೂಪಗಳಲ್ಲಿ ಮತ್ತು ವಿಸ್ತೃತ ಅವತಾರಗಳಲ್ಲಿ ಆತನು ಪ್ರಕಟವಾಗುತ್ತಾನೆ." (ಗೋಪಾಲತಾಪನಿ 1.21) ಬ್ರಹ್ಮಸಂಹಿತೆಯಲ್ಲಿ (5.1) ಹೀಗೆ ಹೇಳಿದೆ —

**ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನನ್ದ ವಿಗ್ರಹಃ |**
**ಅನಾದಿರ್ ಆದಿರ್ ಗೋವಿನ್ದಃ ಸರ್ವ ಕಾರಣ ಕಾರಣಮ್ ||**

"ದೇವೋತ್ತಮ ಪರಮ ಪುರುಷನು ಕೃಷ್ಣನು. ಅವನಿಗೆ ಸಚ್ಚಿದಾನಂದ ದೇಹವಿದೆ. ಅವನಿಗೆ ಆದಿಯಿಲ್ಲ. ಏಕೆಂದರೆ ಅವನೇ ಎಲ್ಲದರ ಆದಿ, ಅವನು ಎಲ್ಲ ಕಾರಣಗಳ ಕಾರಣನು." ಬೇರೆಡೆ ಹೀಗೆ ಹೇಳಿದೆ — **ಯತ್ರಾವತೀರ್ಣಂ ಕೃಷ್ಣಾಖ್ಯಂ ಪರಂ ಬ್ರಹ್ಮ ನರಾಕೃತಿ** — "ಪರಮ ಪರಿಪೂರ್ಣ ಸತ್ಯವು ಒಬ್ಬ ವ್ಯಕ್ತಿ. ಅವನ ಹೆಸರು ಕೃಷ್ಣ." ಅವನು ಒಮ್ಮೊಮ್ಮೆ ಈ ಭೂಮಿಗೆ ಇಳಿದು ಬರುತ್ತಾನೆ. ಹೀಗೆಯೇ ಶ್ರೀಮದ್ಭಾಗವತದಲ್ಲಿ ದೇವೋತ್ತಮ ಪರಮ ಪುರುಷನ ಎಲ್ಲ ಬಗೆಯ ಅವತಾರಗಳ ವರ್ಣನೆಯನ್ನು ಕಾಣುತ್ತೇವೆ. ಈ ಪಟ್ಟಿಯಲ್ಲಿ ಕೃಷ್ಣನ ಹೆಸರೂ ಕಾಣುತ್ತದೆ. ಆದರೆ ಈ ಕೃಷ್ಣನು ದೇವರ ಒಂದು ಅವತಾರವಲ್ಲ. ಅವನು ಮೂಲ ದೇವೋತ್ತಮ ಪರಮ ಪುರುಷನೇ ಎಂದು ಹೇಳಲಾಗಿದೆ. **(ಏತೇ ಚಾಂಶ ಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್).**

ಹೀಗೆಯೇ ಭಗವದ್ಗೀತೆಯಲ್ಲಿ ಭಗವಂತನು **ಮತ್ತಃ ಪರತರಂ ನಾನ್ಯತ್** — "ದೇವೋತ್ತಮ ಪುರುಷನಾಗಿ ನನ್ನ ರೂಪವನ್ನು ಮೀರಿಸುವುದು ಯಾವುದೂ ಇಲ್ಲ" ಎಂದು ಹೇಳುತ್ತಾನೆ. ಭಗವದ್ಗೀತೆಯಲ್ಲಿ ಬೇರೆಡೆ ಅವನು **ಅಹಮ್ ಆದಿರ್ ಹಿ ದೇವಾನಾಮ್** — "ನಾನು ದೇವತೆಗಳಿಗೆ ಮೂಲ" ಎಂದೂ ಹೇಳುತ್ತಾನೆ. ಕೃಷ್ಣನಿಂದ ಭಗವದ್ಗೀತೆಯನ್ನು ತಿಳಿದುಕೊಂಡನಂತರ ಅರ್ಜುನನೂ ಈ ಮಾತುಗಳಲ್ಲಿ ಇದನ್ನು ದೃಢಪಡಿಸುತ್ತಾನೆ. **ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್** — "ನೀನು ಪರಿಪೂರ್ಣ ಸತ್ಯನಾದ ದೇವೋತ್ತಮ ಪರಮ ಪುರುಷನೆಂದೂ ಎಲ್ಲಕ್ಕೂ ಆಶ್ರಯನೆಂದೂ ನಾನು ಈಗ ಸಂಪೂರ್ಣವಾಗಿ ತಿಳಿದಿದ್ದೇನೆ." ಆದುದರಿಂದ ಕೃಷ್ಣನು ಅರ್ಜುನನಿಗೆ ತೋರಿದ ವಿಶ್ವರೂಪವು ಭಗವಂತನ ಮೂಲ ರೂಪವಲ್ಲ. ಮೂಲವು ಕೃಷ್ಣನ ರೂಪ. ಸಹಸ್ರ ಶಿರಗಳ ಸಹಸ್ರ ಬಾಹುಗಳ ವಿಶ್ವರೂಪವು, ದೇವರಲ್ಲಿ ಪ್ರೀತಿ ಇಲ್ಲದವರ ಗಮನವನ್ನು ಸೆಳೆಯಲು ಮಾತ್ರ ಪ್ರಕಟವಾಗಿದೆ. ಅದು ಭಗವಂತನ ಮೂಲ ರೂಪವಲ್ಲ.

ಭಗವಂತನೊಡನೆ ಬೇರೆ ಬೇರೆ ಅಲೌಕಿಕ ಸಂಬಂಧಗಳನ್ನು ಹೊಂದಿರುವ ಪರಿಶುದ್ಧ ಭಕ್ತರಿಗೆ ವಿಶ್ವರೂಪವು ಆಕರ್ಷಕವಾಗಿಲ್ಲ. ಪರಮ ಪ್ರಭುವು ತನ್ನ ಮೂಲ ರೂಪವಾದ ಕೃಷ್ಣನ ರೂಪದಲ್ಲಿ ಪ್ರೀತಿಯನ್ನು ವಿನಿಮಯ ಮಾಡಿಕೊಳ್ಳುತ್ತಾನೆ. ಆದುದರಿಂದ, ಸ್ನೇಹದಲ್ಲಿ ಕೃಷ್ಣನೊಡನೆ ಆತ್ಮೀಯ ಸಂಬಂಧವನ್ನು ಬೆಳೆಸಿಕೊಂಡ ಅರ್ಜುನನಿಗೆ ಈ ವಿಶ್ವರೂಪವು ಸಂತೋಷದಾಯಕವಲ್ಲ; ಅದು ಭಯಂಕರವಾಗಿತ್ತು. ಕೃಷ್ಣನ ನಿತ್ಯಸಂಗಾತಿಯಾಗಿದ್ದ ಅರ್ಜುನನಿಗೆ ದಿವ್ಯನೇತ್ರಗಳಿದ್ದಿರಬೇಕು. ಅವನು ಸಾಮಾನ್ಯ ಮನುಷ್ಯನಾಗಿರಲಿಲ್ಲ. ಆದುದರಿಂದ ವಿಶ್ವರೂಪವು ಅವನಿಗೆ ಮೋಹಕವಾಗಿರಲಿಲ್ಲ. ಫಲವನ್ನು ನೀಡುವ ಕರ್ಮಗಳಿಂದ ತಾವು ಮೇಲೇರಲು ಬಯಸುವವರಿಗೆ ಇದು ಆಶ್ಚರ್ಯಕರವಾಗಿ ತೋರಬಹುದು. ಆದರೆ ಭಕ್ತಿಸೇವೆಯಲ್ಲಿ ನಿರತರಾದವರಿಗೆ ಎರಡು ಕೈಗಳ ಕೃಷ್ಣನ ರೂಪದಲ್ಲಿಯೇ ಬಹು ಪ್ರೀತಿ.

## ಶ್ಲೋಕ - 55

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ |**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ||೫೫||**

**ಮತ್ ಕರ್ಮ ಕೃತ್**—ನನ್ನ ಕಾರ್ಯಮಾಡುವುದರಲ್ಲಿ ತೊಡಗಿದ; **ಮತ್ ಪರಮಃ**—ನನ್ನನ್ನು ಪರಮನೆಂದು ಪರಿಗಣಿಸುವ; **ಮತ್ ಭಕ್ತಃ**—ನನ್ನ ಭಕ್ತಿಸೇವೆಯಲ್ಲಿ ನಿರತನಾದವನು; **ಸಙ್ಗವರ್ಜಿತಃ**—ಕಾಮ್ಯ ಕರ್ಮಗಳ ಮತ್ತು ಊಹಾತ್ಮಕ ಚಿಂತನೆಗಳಿಂದ ಮುಕ್ತನಾದ; **ನಿರ್ವೈರಃ**—ವೈರವಿಲ್ಲದ; **ಸರ್ವಭೂತೇಷು**—ಸಕಲ ಜೀವಿಗಳಲ್ಲಿ; **ಯಃ**—ಯಾವ; **ಸಃ**—ಅವನು; **ಮಾಮ್**—ನನ್ನಲ್ಲಿಗೆ; **ಏತಿ**—ಬರುತ್ತಾನೆ; **ಪಾಣ್ಡವ**—ಪಾಂಡು ಪುತ್ರನೇ.

## ಅನುವಾದ

**ಪ್ರಿಯ ಅರ್ಜುನ, ಕಾಮ್ಯಕರ್ಮದ ಮತ್ತು ಊಹಾತ್ಮಕ ಚಿಂತನೆಗಳ ಕಶ್ಮಲದಿಂದ ಮುಕ್ತರಾಗಿ ಯಾರು ನನ್ನ ಪರಿಶುದ್ಧ ಭಕ್ತಿಸೇವೆಯಲ್ಲಿ ತೊಡಗಿರುವನೋ, ಯಾರು ನನಗಾಗಿ ಕರ್ಮಗಳನ್ನು ಮಾಡುವನೋ, ನನ್ನನ್ನು ತನ್ನ ಬದುಕಿನ ಪರಮ ಗುರಿಯನ್ನಾಗಿ ಮಾಡಿಕೊಳ್ಳುವನೋ ಮತ್ತು ಎಲ್ಲ ಜೀವಿಗಳ ಮಿತ್ರನೋ ಅವನು ನಿಶ್ಚಯವಾಗಿಯೂ ನನ್ನಲ್ಲಿಗೆ ಬರುವನು.**

## ಭಾವಾರ್ಥ

ದೇವೋತ್ತಮ ಪುರುಷರಲ್ಲಿ ಪರಮೋಚ್ಚ ಭಗವಂತನು ಆಧ್ಯಾತ್ಮಿಕ ಗಗನದ ಕೃಷ್ಣಲೋಕದಲ್ಲಿರುತ್ತಾನೆ. ಯಾರಾದರೂ ಅವನ ಬಳಿ ಸಾರಲು ಬಯಸಿದರೆ ಮತ್ತು ಪರಮ ಪುರುಷನಾದ ಕೃಷ್ಣನೊಂದಿಗೆ ಆತ್ಮೀಯ ಸಂಬಂಧವನ್ನು ಸ್ಥಾಪಿಸಲು ಬಯಸಿದರೆ, ಭಗವಂತನೇ ಇಲ್ಲಿ ಹೇಳಿರುವಂತೆ ಈ ಸೂತ್ರವನ್ನು ಅನುಸರಿಸಬೇಕು. ಆದುದರಿಂದ ಈ ಶ್ಲೋಕವನ್ನು ಭಗವದ್ಗೀತೆಯ ಸಾರವೆಂದು ಪರಿಗಣಿಸುತ್ತಾರೆ. ಬದ್ಧಜೀವಿಗಳು ಪ್ರಕೃತಿಯ ಮೇಲೆ ಪ್ರಭುತ್ವ ಸಾಧಿಸಲು ಐಹಿಕ ಜಗತ್ತಿನಲ್ಲಿ ಮುಳುಗಿರುತ್ತಾರೆ. ಅವರಿಗೆ ನಿಜವಾದ ಆಧ್ಯಾತ್ಮಿಕ ಬದುಕು ತಿಳಿಯದು. ಇವರಿಗಾಗಿಯೇ ಇರುವ ಗ್ರಂಥ ಭಗವದ್ಗೀತೆ. ಮನುಷ್ಯನು ತನ್ನ ಆಧ್ಯಾತ್ಮಿಕ ಅಸ್ತಿತ್ವವನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎನ್ನುವುದನ್ನು, ಪರಮ ಆಧ್ಯಾತ್ಮಿಕ ಪುರುಷನೊಂದಿಗೆ ತನ್ನ ನಿತ್ಯ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎನ್ನುವುದನ್ನು, ಭಗವದ್ಧಾಮಕ್ಕೆ ಹೋಗುವುದು ಹೇಗೆ ಎನ್ನುವುದನ್ನು ತೋರಿಸಿಕೊಡುವುದು ಭಗವದ್ಗೀತೆಯ ಉದ್ದೇಶ. ಮನುಷ್ಯನು ತನ್ನ ಆಧ್ಯಾತ್ಮಿಕ ಚಟುವಟಿಕೆಯಾದ ಭಕ್ತಿಸೇವೆಯಲ್ಲಿ ಯಶಸ್ಸನ್ನು ಪಡೆಯಲು ಅವಶ್ಯವಾದ ಪ್ರಕ್ರಿಯೆಯನ್ನು ಸ್ಪಷ್ಟವಾಗಿ ವಿವರಿಸುವ ಶ್ಲೋಕ ಇದು.

ಕರ್ಮದ ಮಟ್ಟಿಗೆ ಹೇಳುವುದಾದರೆ ಮನುಷ್ಯನು ತನ್ನ ಶಕ್ತಿಯನ್ನು ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯ ಚಟುವಟಿಕೆಗಳಿಗೆ ವರ್ಗಾಯಿಸಬೇಕು. ಭಕ್ತಿರಸಾಮೃತ ಸಿಂಧುವಿನಲ್ಲಿ (2.255) ಹೇಳಿರುವಂತೆ —

**ಅನಾಸಕ್ತಸ್ಯ ವಿಷಯಾನ್ ಯಥಾರ್ಹಮ್ ಉಪಯುಞ್ಜತಃ |**
**ನಿರ್ಬಂಧಃ ಕೃಷ್ಣ ಸಮ್ಬನ್ಧೇ ಯುಕ್ತಂ ವೈರಾಗ್ಯಮ್ ಉಚ್ಯತೇ ||**

ಕೃಷ್ಣನ ಸಂಬಂಧವಿಲ್ಲದ ಯಾವುದೇ ಕೆಲಸವನ್ನು ಯಾರೂ ಮಾಡಬಾರದು. ಇದಕ್ಕೆ ಕೃಷ್ಣಕರ್ಮ ಎಂದು ಹೆಸರು. ಮನುಷ್ಯನು ಹಲವು ಕರ್ಮಗಳಲ್ಲಿ ತೊಡಗಿರಬಹುದು; ಆದರೆ ತನ್ನ ಕೆಲಸದ ಫಲದಲ್ಲಿ ಆಸಕ್ತಿಯಿರಬಾರದು. ಫಲವನ್ನು ಅವನಿಗೇ ಬಿಡಬೇಕು. ಉದಾಹರಣೆಗೆ ಮನುಷ್ಯನು ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿರಬಹುದು; ಆದರೆ ಅದನ್ನು ಕೃಷ್ಣಪ್ರಜ್ಞೆಗೆ ಪರಿವರ್ತಿಸಲು ಕೃಷ್ಣನಿಗಾಗಿ ವ್ಯಾಪಾರ ವ್ಯವಹಾರಗಳನ್ನು ಮಾಡಬೇಕು. ಕೃಷ್ಣನು ಈ ವ್ಯವಹಾರದ ಒಡೆಯನಾದರೆ ವ್ಯವಹಾರದ ಲಾಭವನ್ನು ಕೃಷ್ಣನು ಸವಿಯಬೇಕು. ವ್ಯವಹಾರದಲ್ಲಿ ತೊಡಗಿರುವವನಿಗೆ ಸಾವಿರ ಸಾವಿರಗಟ್ಟಲೆ ರೂಪಾಯಿಗಳಿದ್ದರೆ ಮತ್ತು ಅದೆಲ್ಲವನ್ನು ಕೃಷ್ಣನಿಗೆ ಅರ್ಪಿಸಬೇಕಾದರೆ ಆತನು ಹಾಗೆ ಮಾಡಬಹುದು. ಇದು ಕೃಷ್ಣನಿಗಾಗಿ ಕೆಲಸ ಮಾಡುವುದು. ತನ್ನ ಇಂದ್ರಿಯ ತೃಪ್ತಿಗಾಗಿ ಒಂದು ದೊಡ್ಡಕಟ್ಟಡವನ್ನು ಕಟ್ಟುವುದಕ್ಕೆ ಬದಲು, ಆತನು ಕೃಷ್ಣನಿಗಾಗಿ ಸೊಗಸಾಗಿ ದೇವಸ್ಥಾನವನ್ನು ಕಟ್ಟಿ ಭಕ್ತಿಸೇವೆಯ ಪ್ರಮಾಣ ಗ್ರಂಥಗಳಲ್ಲಿ ಹೇಳಿರುವಂತೆ, ಕೃಷ್ಣನ ವಿಗ್ರಹವನ್ನು ಸ್ಥಾಪಿಸಿ, ಕೃಷ್ಣನ ಸೇವೆಗೆ ವ್ಯವಸ್ಥೆಮಾಡಬಹುದು. ಇದೆಲ್ಲ ಕೃಷ್ಣಕರ್ಮ. ಮನುಷ್ಯನು ತನ್ನ ಕೆಲಸದ ಫಲದಲ್ಲಿ ಆಸಕ್ತಿಯನ್ನಿಟ್ಟುಕೊಳ್ಳಬಾರದು; ಫಲವನ್ನು ಕೃಷ್ಣನಿಗೆ ಬಿಡಬೇಕು. ಕೃಷ್ಣನಿಗೆ ಅರ್ಪಿಸಿದ್ದರಲ್ಲಿ ಉಳಿದದ್ದನ್ನು ಪ್ರಸಾದವೆಂದು ಸ್ವೀಕರಿಸಬೇಕು. ಯಾರಾದರೂ ಕೃಷ್ಣನಿಗಾಗಿ ಬಹು ದೊಡ್ಡ ಕಟ್ಟಡವನ್ನು ಕಟ್ಟಿ, ಅಲ್ಲಿ ಕೃಷ್ಣನ ವಿಗ್ರಹವನ್ನು ಸ್ಥಾಪಿಸಿದರೆ, ಆತನು ಅಲ್ಲಿ ವಾಸಮಾಡಬಾರದು ಎಂದು ನಿಷೇಧವಿಲ್ಲ; ಆದರೆ ಕಟ್ಟಡದ ಯಜಮಾನನು ಕೃಷ್ಣ ಎಂದು ತಿಳಿದಿರಬೇಕು. ಇದಕ್ಕೆ ಕೃಷ್ಣಪ್ರಜ್ಞೆ ಎಂದು ಹೆಸರು. ಕೃಷ್ಣನಿಗಾಗಿ ದೇವಾಲಯವನ್ನು ನಿರ್ಮಿಸಲಾರದವನು ಕೃಷ್ಣನ ದೇವಾಲಯವನ್ನು ಸ್ವಚ್ಛಗೊಳಿಸಬಹುದು. ಇದೂ ಕೃಷ್ಣಕರ್ಮ. ತೋಟವನ್ನು ಬೆಳೆಸಬಹುದು. ಭೂಮಿ ಇರುವವನು — ಭಾರತದಲ್ಲಿ ಬಡವನಿಗೂ ಒಂದಿಷ್ಟು ಭೂಮಿ ಇರುತ್ತದೆ — ಅದನ್ನು ಕೃಷ್ಣನಿಗಾಗಿ ಬಳಸಿ ಹೂವುಗಳನ್ನು ಬೆಳೆದು ಅವುಗಳನ್ನು ಕೃಷ್ಣನಿಗೆ ಅರ್ಪಿಸಬಹುದು. ತುಳಸಿ ಗಿಡಗಳನ್ನು ಬೆಳೆಸಬಹುದು, ಏಕೆಂದರೆ ತುಳಸಿ ಎಲೆಗಳು ಬಹು ಮುಖ್ಯ. ಇದನ್ನು ಕೃಷ್ಣನು ಭಗವದ್ಗೀತೆಯಲ್ಲಿ ಸಲಹೆ ಮಾಡಿದ್ದಾನೆ. **ಪತ್ರಮ್ ಪುಷ್ಪಮ್ ಫಲಮ್ ತೋಯಮ್.** ಕೃಷ್ಣನು ಒಂದು ಎಲೆಯನ್ನಾಗಲಿ, ಹೂವನ್ನಾಗಲಿ, ಹಣ್ಣನ್ನಾಗಲಿ, ಒಂದಿಷ್ಟು ನೀರನ್ನಾಗಲಿ ತನಗೆ ಅರ್ಪಿಸಬೇಕೆಂದು ಬಯಸುತ್ತಾನೆ. ಇಂತಹ ಸಮರ್ಪಣೆಯಿಂದ ಅವನು ತೃಪ್ತನಾಗುತ್ತಾನೆ. ಈ ಎಲೆಯ ಪ್ರಸ್ತಾಪವು ವಿಶೇಷವಾಗಿ ತುಳಸಿಗೆ ಅನ್ವಯಿಸುತ್ತದೆ. ತುಳಸಿಯನ್ನು ಬಿತ್ತಿ ಗಿಡಕ್ಕೆ ನೀರೆರೆಯಬಹುದು. ಹೀಗೆ ಅತ್ಯಂತ ಬಡವನೂ ಕೃಷ್ಣಸೇವೆಯಲ್ಲಿ ನಿರತನಾಗಬಹುದು. ಕೃಷ್ಣನಿಗಾಗಿ ಕೆಲಸ ಮಾಡುವುದರಲ್ಲಿ ಮನುಷ್ಯನು ಹೇಗೆ ತೊಡಗಬಹುದು ಎನ್ನುವುದಕ್ಕೆ ಇವು ಕೆಲವು ನಿದರ್ಶನಗಳು.

**ಮತ್-ಪರಮಃ** ಎನ್ನುವ ಮಾತು ಕೃಷ್ಣನ ಪರಮನಿವಾಸದಲ್ಲಿ ಅವನ ಸಹವಾಸವೇ ಬದುಕಿನ ಪರಮ ಪರಿಪೂರ್ಣತೆ ಎಂದು ಪರಿಗಣಿಸುವ ಮನುಷ್ಯನನ್ನು ಕುರಿತದ್ದು. ಚಂದ್ರಲೋಕ ಅಥವಾ ಸೂರ್ಯಲೋಕ ಅಥವಾ ಸ್ವರ್ಗಲೋಕಗಳಿಗೆ ಅಥವಾ ಈ ವಿಶ್ವದ ಅತ್ಯುನ್ನತ ಲೋಕವಾದ

ಬ್ರಹ್ಮಲೋಕಕ್ಕೆ ಏರಲು ಇಂತಹ ಮನುಷ್ಯ ಬಯಸುವುದಿಲ್ಲ. ಅದು ಅವನನ್ನು ಆಕರ್ಷಿಸುವುದಿಲ್ಲ. ಆಧ್ಯಾತ್ಮಿಕ ಗಗನದಲ್ಲಿ ಬ್ರಹ್ಮಜ್ಯೋತಿಯ ಪ್ರಭೆಯಲ್ಲಿ ಒಂದಾಗುವುದು ಸಹ ಅವನಿಗೆ ತೃಪ್ತಿಯನ್ನು ಕೊಡುವುದಿಲ್ಲ. ಏಕೆಂದರೆ ಅವನು ಅತ್ಯುನ್ನತ ದಿವ್ಯಲೋಕವಾದ ಕೃಷ್ಣಲೋಕವನ್ನು, ಗೋಲೋಕ ವೃಂದಾವನವನ್ನು ಪ್ರವೇಶಿಸಲು ಬಯಸುತ್ತಾನೆ. ಅವನಿಗೆ ಆ ಲೋಕದ ವಿಷಯದಲ್ಲಿ ಸಂಪೂರ್ಣ ತಿಳುವಳಿಕೆಯಿದೆ. ಆದುದರಿಂದ ಅವನಿಗೆ ಬೇರೆ ಯಾವ ಲೋಕದಲ್ಲಿಯೂ ಆಸಕ್ತಿಯಿಲ್ಲ. **ಮದ್ ಭಕ್ತಃ** ಎನ್ನುವ ಪದವು ಸೂಚಿಸುವಂತೆ ಆತನು ಭಕ್ತಿಸೇವೆಯಲ್ಲಿ ವಿಶೇಷವಾಗಿ ತೊಡಗುತ್ತಾನೆ. ಅದರಲ್ಲಿಯೂ ವಿಶೇಷವಾಗಿ ಶ್ರವಣ, ಕೀರ್ತನ, ಸ್ಮರಣ, ಅರ್ಚನ, ಭಗವಂತನ ಪಾದಪದ್ಮಗಳ ಸೇವೆ, ಪ್ರಾರ್ಥನೆ, ಪ್ರಭುವಿನ ಅಪ್ಪಣೆಯನ್ನು ನಡೆಸುವುದು, ಆತನೊಡನೆ ಸಖ್ಯ ಬೆಳಸುವುದು ಮತ್ತು ಎಲ್ಲವನ್ನೂ ಆತನಿಗೆ ಸಮರ್ಪಿಸುವುದು — ಭಕ್ತಿಕಾರ್ಯದ ಈ ಒಂಬತ್ತು ಪ್ರಕ್ರಿಯೆಗಳಲ್ಲಿ ವಿಶೇಷವಾಗಿ ನಿರತನಾಗುತ್ತಾನೆ. ಮನುಷ್ಯನು ಈ ಎಲ್ಲ ಒಂಬತ್ತು ಭಕ್ತಿ ಪ್ರಕ್ರಿಯೆಗಳಲ್ಲಿ ತೊಡಗಬಹುದು ಅಥವಾ ಎಂಟರಲ್ಲಿ ಅಥವಾ ಏಳರಲ್ಲಿ ಅಥವಾ ಕೊನೆಯ ಪಕ್ಷ ಒಂದರಲ್ಲಿ ನಿರತನಾಗಬಹುದು. ನಿಶ್ಚಯವಾಗಿಯೂ ಅದು ಅವನನ್ನು ಪರಿಪೂರ್ಣನನ್ನಾಗಿ ಮಾಡುತ್ತದೆ.

**ಸಂಗ ವರ್ಜಿತಃ** ಎನ್ನುವ ಮಾತು ಅರ್ಥವತ್ತಾದದ್ದು. ಕೃಷ್ಣನ ವಿರೋಧಿಗಳಿಂದ ಮನುಷ್ಯನು ದೂರನಾಗಬೇಕು. ನಾಸ್ತಿಕರು ಮಾತ್ರವೇ ಕೃಷ್ಣನ ವಿರೋಧಿಗಳಲ್ಲ. ಫಲಾಪೇಕ್ಷೆಯಿರುವ ಕರ್ಮಗಳು ಮತ್ತು ಊಹಾತ್ಮಕ ಚಿಂತನೆಯಿಂದ ಆಕರ್ಷಿತರಾಗುವವರೂ ವಿರೋಧಿಗಳೇ. ಆದುದರಿಂದ ಭಕ್ತಿಸೇವೆಯ ಪರಿಶುದ್ಧ ರೂಪವನ್ನು ಭಕ್ತಿರಸಾಮೃತ ಸಿಂಧುವಿನಲ್ಲಿ (1.1.11) ಹೀಗೆ ವರ್ಣಿಸಿದೆ —

**ಅನ್ಯಾಭಿಲಾಷಿತಾ ಶೂನ್ಯಂ ಜ್ಞಾನ ಕರ್ಮಾದಿ ಅನಾವೃತಮ್ |**
**ಆನುಕೂಲ್ಯೇನ ಕೃಷ್ಣಾನುಶೀಲನಂ ಭಕ್ತಿರುತ್ತಮಾ ||**

ಪರಿಶುದ್ಧವಾದ ಭಕ್ತಿಸೇವೆಯನ್ನು ಸಲ್ಲಿಸಲು ಯಾರಾದರೂ ಬಯಸಿದರೆ ಆತನು ಎಲ್ಲ ಬಗೆಯ ಐಹಿಕ ಕಲ್ಮಷ ಸಂಪರ್ಕದಿಂದ ಮುಕ್ತನಾಗಿರಬೇಕು ಎಂದು ಶ್ರೀರೂಪ ಗೋಸ್ವಾಮಿಯವರು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳುತ್ತಾರೆ. ಅಂತಹ ಮನುಷ್ಯನು ಫಲಾಪೇಕ್ಷಿತ ಕರ್ಮಗಳಿಗೆ ಮತ್ತು ಊಹಾತ್ಮಕ ಚಿಂತನೆಗೆ ಅಂಟಿಕೊಂಡವರ ಸಹವಾಸದಿಂದ ಬಿಡುಗಡೆ ಹೊಂದಬೇಕು. ಅಪೇಕ್ಷಣೀಯವಲ್ಲದ ಇಂತಹ ಸಹವಾಸದಿಂದ ಮತ್ತು ಐಹಿಕ ಬಯಕೆಗಳ ಕಲ್ಮಷದಿಂದ ಬಿಡುಗಡೆಯಾಗಿ ಮನುಷ್ಯನು ಕೃಷ್ಣಜ್ಞಾನವನ್ನು ಅನುಕೂಲವಾಗಿ ಬಳಸಿಕೊಂಡಾಗ ಅದು ಶುದ್ಧ ಭಕ್ತಿಸೇವೆ. **ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಮ್.** (ಹರಿಭಕ್ತಿ ವಿಲಾಸ 11.676) ಕೃಷ್ಣನನ್ನು ಕುರಿತು ಯೋಚನೆಮಾಡಬೇಕು ಮತ್ತು ಕೃಷ್ಣನಿಗೆ ಅನುಕೂಲವಾಗಿ ಕೆಲಸಮಾಡಬೇಕು; ಕೃಷ್ಣನಿಗೆ ವಿರೋಧವಾಗಿ ಅಲ್ಲ. ಕಂಸನು ಕೃಷ್ಣನ ಒಬ್ಬ ಶತ್ರು. ಕೃಷ್ಣನ ಜನನದಿಂದ ಪ್ರಾರಂಭಿಸಿ ಅವನನ್ನು ಕೊಲ್ಲಲು ಕಂಸನು ಅನೇಕ ಯೋಜನೆಗಳನ್ನು ಮಾಡಿದನು. ಅವನು ಯಾವಾಗಲೂ ವಿಫಲನಾದದ್ದರಿಂದ ಸದಾ ಕೃಷ್ಣನನ್ನೇ ಕುರಿತು ಯೋಚನೆಮಾಡುತ್ತಿದ್ದನು. ಹೀಗೆ ಕೆಲಸ

ಮಾಡುವಾಗ, ತಿನ್ನುವಾಗ ಮತ್ತು ಮಲಗಿದಾಗ ಅವನಿಗೆ ಎಲ್ಲ ರೀತಿಗಳಲ್ಲಿ ಸದಾ ಕೃಷ್ಣಪ್ರಜ್ಞೆ ಇರುತ್ತಿತ್ತು. ಆದರೆ ಆ ಕೃಷ್ಣಪ್ರಜ್ಞೆಯು ಅನುಕೂಲಕರವಾಗಿ ಇರಲಿಲ್ಲ. ಆದುದರಿಂದ ಅವನು ಕೃಷ್ಣನನ್ನು ಕುರಿತು ದಿನದಲ್ಲಿ ಇಪ್ಪತ್ನಾಲ್ಕು ಗಂಟೆಗಳೂ ಯೋಚಿಸುತ್ತಿದ್ದರೂ ಅವನನ್ನು ರಾಕ್ಷಸನೆಂದೇ ಪರಿಗಣಿಸಲಾಯಿತು ಮತ್ತು ಕಡೆಗೆ ಕೃಷ್ಣನು ಅವನನ್ನು ಕೊಂದನು. ನಿಜ, ಕೃಷ್ಣನು ಯಾರನ್ನು ಕೊಂದರೂ ಅವರಿಗೆ ಕೂಡಲೇ ಮುಕ್ತಿಯು ದೊರೆಯುತ್ತದೆ. ಆದರೆ ಪರಿಶುದ್ಧ ಭಕ್ತನ ಗುರಿ ಇದಲ್ಲ. ಪರಿಶುದ್ಧ ಭಕ್ತನಿಗೆ ಮೋಕ್ಷವು ಸಹ ಬೇಕಿಲ್ಲ. ಅತ್ಯುನ್ನತ ಲೋಕವಾದ ಗೋಲೋಕ ವೃಂದಾವನಕ್ಕೆ ವರ್ಗವಾಗುವುದು ಸಹ ಅವನಿಗೆ ಬೇಕಿಲ್ಲ. ಅವನ ಒಂದೇ ಗುರಿ ತಾನು ಎಲ್ಲಿದ್ದರೂ ಕೃಷ್ಣನನ್ನು ಸೇವಿಸುವುದು.

ಕೃಷ್ಣನ ಭಕ್ತನು ಎಲ್ಲರೊಂದಿಗೂ ಸ್ನೇಹದಿಂದ ಇರುತ್ತಾನೆ. ಆದುದರಿಂದ ಆತನು **ನಿರ್ವೈರಃ** ಎಂದು ಇಲ್ಲಿ ಹೇಳಿದೆ. ಇದು ಹೇಗೆ? ಕೃಷ್ಣಪ್ರಜ್ಞೆಯಲ್ಲಿ ನೆಲೆಗೊಂಡ ಭಕ್ತನಿಗೆ, ಕೃಷ್ಣನಿಗೆ ಭಕ್ತಿಸೇವೆ ಸಲ್ಲಿಸುವುದರಿಂದ ಮಾತ್ರವೇ ಬದುಕಿನ ಎಲ್ಲ ಸಮಸ್ಯೆಗಳಿಂದ ಬಿಡುಗಡೆಯು ದೊರೆಯುತ್ತದೆ ಎಂಬ ಅರಿವು ಇರುತ್ತದೆ. ಅವನಿಗೆ ಇದರ ವೈಯಕ್ತಿಕ ಅನುಭವ ಉಂಟು. ಆದುದರಿಂದ ಅವನು ಈ ಪದ್ಧತಿಯನ್ನು, ಕೃಷ್ಣಪ್ರಜ್ಞೆಯನ್ನು ಮನುಷ್ಯನ ಸಮಾಜಕ್ಕೆ ತರಬೇಕೆಂದು ಬಯಸುತ್ತಾನೆ. ಭಗವಂತನ ಪ್ರಜ್ಞೆಯನ್ನು ಹರಡಲು ಭಗವಂತನ ಭಕ್ತರು ತಮ್ಮ ಪ್ರಾಣವನ್ನೇ ಅಪಾಯಕ್ಕೊಡ್ಡಿದ ಹಲವು ನಿದರ್ಶನಗಳು ಚರಿತ್ರೆಯಲ್ಲಿವೆ. ಯೇಸು ಕ್ರಿಸ್ತನು ಬಹು ಜನರಿಗೆ ಇಷ್ಟವಾಗುವ ನಿದರ್ಶನವಾಗಿದ್ದಾನೆ. ಭಕ್ತರಲ್ಲದವರು ಅವನನ್ನು ಶಿಲುಬೆಗೆ ಏರಿಸಿದರು. ಆದರೆ ಭಗವತ್ಪ್ರಜ್ಞೆಯನ್ನು ಹರಡಲು ಆತನು ತನ್ನನ್ನೆ ಬಲಿಕೊಟ್ಟುಕೊಂಡನು. ನಿಜ, ಅವನನ್ನು ಕೊಂದರು ಎಂದು ಅರ್ಥಮಾಡಿಕೊಂಡರೆ ಅಲ್ಪ ತಿಳಿವಳಿಕೆಯಾಗುತ್ತದೆ. ಹೀಗೆಯೆ ಭಾರತದಲ್ಲಿಯೂ ಠಾಕೂರ ಹರಿದಾಸರು ಮತ್ತು ಪ್ರಹ್ಲಾದ ಮಹಾರಾಜರಂತಹವರ ನಿದರ್ಶನಗಳಿವೆ. ಹೀಗೆ ಅಪಾಯವನ್ನು ಎದುರಿಸಬೇಕೇಕೆ? ಏಕೆಂದರೆ, ಅವರು ಕೃಷ್ಣಪ್ರಜ್ಞೆಯನ್ನು ಹರಡಲು ಬಯಸಿದರು, ಅದು ಕಷ್ಟದ ಕೆಲಸ. ಯಾರೇ ಆದರೂ ಕಷ್ಟದಲ್ಲಿದ್ದರೆ ಅದಕ್ಕೆ ಕಾರಣ ಆತನು ಕೃಷ್ಣನೊಡನೆ ತನ್ನ ಶಾಶ್ವತ ಸಂಬಂಧವನ್ನು ಮರೆತಿರುವುದೇ ಎಂದು ಕೃಷ್ಣಪ್ರಜ್ಞೆ ಇರುವ ಮನುಷ್ಯನಿಗೆ ಗೊತ್ತು. ಆದುದರಿಂದ ಮಾನವ ಸಮಾಜಕ್ಕೆ ತಂದುಕೊಡಬಹುದಾದ ಅತ್ಯುನ್ನತ ಲಾಭ ಎಂದರೆ ತನ್ನ ನೆರೆಯವನಿಗೆ ಎಲ್ಲ ಪ್ರಾಪಂಚಿಕ ಸಮಸ್ಯೆಗಳ ಹೊರೆಯನ್ನು ತಪ್ಪಿಸುವುದು. ಈ ರೀತಿಯಲ್ಲಿ ಪರಿಶುದ್ಧ ಭಕ್ತನು ಪರಮಪ್ರಭುವಿನ ಸೇವೆಯಲ್ಲಿ ನಿರತನಾಗಿರುತ್ತಾನೆ. ಕೃಷ್ಣನಿಗಾಗಿ ಎಲ್ಲವನ್ನೂ ಅಪಾಯಕ್ಕೆ ಒಡ್ಡಿ ಅವನ ಸೇವೆಯಲ್ಲಿ ತೊಡಗಿರುವವರ ವಿಷಯದಲ್ಲಿ ಕೃಷ್ಣನು ಎಷ್ಟು ಕರುಣಾಮಯನಾಗಿರುತ್ತಾನೆ ಎನ್ನುವುದನ್ನು ಊಹಿಸಿಕೊಳ್ಳಬಹುದು. ಇಂತಹವರು ದೇಹವನ್ನು ಬಿಟ್ಟನಂತರ ಪರಮ ಲೋಕವನ್ನು ಸೇರುತ್ತಾರೆ ಎನ್ನುವುದು ನಿಶ್ಚಯ.

ಒಟ್ಟಿನಲ್ಲಿ, ಸ್ವಲ್ಪ ಕಾಲದ ಅಭಿವ್ಯಕ್ತಿಯಾದ ವಿಶ್ವರೂಪ, ಎಲ್ಲವನ್ನೂ ನುಂಗುವ ಕಾಲದ ರೂಪ, ನಾಲ್ಕು ಕೈಗಳ ವಿಷ್ಣುವಿನ ರೂಪ — ಎಲ್ಲವನ್ನೂ ಕೃಷ್ಣನು ತೋರಿದ್ದಾನೆ. ಹೀಗೆ ಕೃಷ್ಣನು ಈ ಎಲ್ಲ ಅಭಿವ್ಯಕ್ತಿಗಳ ಮೂಲ. ಕೃಷ್ಣನು ಮೂಲ ವಿಶ್ವರೂಪದ ಅಥವಾ

ವಿಷ್ಣುರೂಪದ ಅಭಿವ್ಯಕ್ತಿ ಎಂದು ಅರ್ಥವಲ್ಲ. ಕೃಷ್ಣನೇ ಎಲ್ಲ ರೂಪಗಳ ಮೂಲನು. ನೂರಾರು ಸಾವಿರಾರು ವಿಷ್ಣುಗಳಿದ್ದಾರೆ. ಆದರೆ ಕೃಷ್ಣಭಕ್ತನಿಗೆ ಮೂಲ ರೂಪವಾದ ಎರಡು ಕೈಗಳ ಶ್ಯಾಮಸುಂದರ ರೂಪವನ್ನು ಬಿಟ್ಟು ಬೇರೆ ಯಾವುದೂ ಮುಖ್ಯವಲ್ಲ. ಬ್ರಹ್ಮಸಂಹಿತೆಯಲ್ಲಿ ಪ್ರೀತಿ ಭಕ್ತಿಗಳಿಂದ, ಶ್ಯಾಮಸುಂದರ ರೂಪವನ್ನು ಮೆಚ್ಚಿದವರು ತಮ್ಮ ಹೃದಯದಲ್ಲಿ ಆತನನ್ನು ಸದಾ ಕಾಣುತ್ತಾರೆ, ಅವರಿಗೆ ಬೇರೇನೂ ಕಾಣುವುದಿಲ್ಲ ಎಂದು ಹೇಳಿದೆ. ಹನ್ನೊಂದನೆಯ ಅಧ್ಯಾಯದ ಭಾವಾರ್ಥವೆಂದರೆ ಕೃಷ್ಣರೂಪವು ಅಗತ್ಯ ಮತ್ತು ಪರಮವಾದದ್ದು ಎನ್ನುವುದನ್ನು ತಿಳಿದುಕೊಳ್ಳಬೇಕು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ವಿಶ್ವರೂಪ" ಎಂಬ ಹನ್ನೊಂದನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

## ಅಧ್ಯಾಯ - 12

# ಭಕ್ತಿಸೇವೆ

### ಶ್ಲೋಕ - 1

**ಅರ್ಜುನ ಉವಾಚ**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ |**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ||೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಏವಮ್**—ಹೀಗೆ; **ಸತತ**—ಯಾವಾಗಲೂ; **ಯುಕ್ತಾಃ**—ನಿರತರಾದ; **ಯೇ**—ಯಾವ; **ಭಕ್ತಾಃ**—ಭಕ್ತರು; **ತ್ವಾಮ್**—ನಿನ್ನನ್ನು; **ಪರ್ಯುಪಾಸತೇ**—ಸಮರ್ಪಕವಾಗಿ ಪೂಜಿಸುತ್ತಾರೋ; **ಯೇ**—ಯಾರು; **ಚ**—ಕೂಡ; **ಅಪಿ**—ಮತ್ತೆ; **ಅಕ್ಷರಮ್**—ಇಂದ್ರಿಯಾತೀತನಾದ; **ಅವ್ಯಕ್ತಮ್**—ಅವ್ಯಕ್ತನಾದವನನ್ನು; **ತೇಷಾಮ್**—ಅವರಲ್ಲಿ; **ಕೇ**—ಯಾರು; **ಯೋಗವಿತ್ ತಮಾಃ**—ಯೋಗಜ್ಞಾನದಲ್ಲಿ ಅತ್ಯಂತ ಪರಿಪೂರ್ಣನು.

### ಅನುವಾದ

**ಅರ್ಜುನನು ಪ್ರಶ್ನಿಸಿದನು—ಸದಾ ನಿನ್ನ ಭಕ್ತಿಸೇವೆಯಲ್ಲಿ ಉಚಿತವಾದ ರೀತಿಯಲ್ಲಿ ನಿರತರಾದವರು, ಅವ್ಯಕ್ತವಾದ ನಿರಾಕಾರ ಬ್ರಹ್ಮನನ್ನು ಪೂಜಿಸುವವರು — ಇವರಿಬ್ಬರಲ್ಲಿ ಯಾರು ಹೆಚ್ಚು ಪರಿಪೂರ್ಣರೆಂದು ಭಾವಿಸಬೇಕು?**

### ಭಾವಾರ್ಥ

ಕೃಷ್ಣನು ಈಗ ಸಾಕಾರ ರೂಪ, ನಿರಾಕಾರ ರೂಪ ಮತ್ತು ವಿಶ್ವರೂಪ ಈ ಮೂರನ್ನೂ ಮತ್ತು ಎಲ್ಲ ಬಗೆಗಳ ಭಕ್ತರನ್ನೂ ಯೋಗಿಗಳನ್ನೂ ವರ್ಣಿಸಿದ್ದಾನೆ. ಸಾಮಾನ್ಯವಾಗಿ ಆಧ್ಯಾತ್ಮಿಕವಾದಿಗಳನ್ನು ಎರಡು ವರ್ಗಗಳನ್ನಾಗಿ ವಿಂಗಡಿಸಬಹುದು. ಒಂದು ವರ್ಗ ನಿರಾಕಾರವಾದಿಗಳದು, ಮತ್ತೊಂದು ಸಾಕಾರವಾದಿಗಳದು. ಸಾಕಾರವಾದಿಯಾದ ಭಕ್ತನು ತನ್ನ ಎಲ್ಲ ಶಕ್ತಿಯನ್ನು ಬಳಸಿ ಪರಮ ಪ್ರಭುವಿನ ಸೇವೆಯಲ್ಲಿ ತೊಡಗುತ್ತಾನೆ. ನಿರಾಕಾರವಾದಿಯು ನೇರವಾಗಿ ಕೃಷ್ಣನ ಸೇವೆಯಲ್ಲಿ ತೊಡಗುವುದಿಲ್ಲ, ಅವ್ಯಕ್ತವಾದ ನಿರಾಕಾರ ಬ್ರಹ್ಮನ ಧ್ಯಾನದಲ್ಲಿ ನಿರತನಾಗುತ್ತಾನೆ.

ಪರಿಪೂರ್ಣ ಸತ್ಯದ ಸಾಕ್ಷಾತ್ಕಾರದ ವಿವಿಧ ಪ್ರಕ್ರಿಯೆಗಳಲ್ಲಿ ಭಕ್ತಿಸೇವೆ ಅಥವಾ ಭಕ್ತಿಯೋಗವೇ ಅತ್ಯುನ್ನತವಾದದ್ದು ಎಂದು ಈ ಅಧ್ಯಾಯದಲ್ಲಿ ಕಾಣುತ್ತೇವೆ. ದೇವೋತ್ತಮ ಪರಮ ಪುರುಷನ ಸಹವಾಸ ಬೇಕೆಂಬ ಬಯಕೆ ಇದ್ದಲ್ಲಿ ಅಂತಹ ಮನುಷ್ಯನು ಭಕ್ತಿಸೇವೆಯನ್ನು ಕೈಗೊಳ್ಳಲೇಬೇಕು.

ಭಕ್ತಿಸೇವೆಯಲ್ಲಿ ಪರಮ ಪ್ರಭುವನ್ನು ನೇರವಾಗಿ ಪೂಜಿಸುವವರಿಗೆ ಸಾಕಾರವಾದಿಗಳು

ಎಂದು ಹೆಸರು. ನಿರಾಕಾರ ಬ್ರಹ್ಮನ್‌ನ ಧ್ಯಾನದಲ್ಲಿ ತೊಡಗುವವರಿಗೆ ನಿರಾಕಾರವಾದಿಗಳು ಎಂದು ಹೆಸರು. ಇಲ್ಲಿ ಅರ್ಜುನನು ಯಾವ ನಿಲುವು ಉತ್ತಮ ಎಂದು ಪ್ರಶ್ನಿಸುತ್ತಿದ್ದಾನೆ. ಪರಿಪೂರ್ಣ ಸತ್ಯದ ಸಾಕ್ಷಾತ್ಕಾರಕ್ಕೆ ಬೇರೆ ಬೇರೆ ಮಾರ್ಗಗಳುಂಟು. ಈ ಅಧ್ಯಾಯದಲ್ಲಿ ಕೃಷ್ಣನು ಇವುಗಳಲ್ಲಿ ಅತ್ಯುನ್ನತವಾದದ್ದು ಭಕ್ತಿಯೋಗ ಅಥವಾ ತನ್ನ ಭಕ್ತಿಸೇವೆ ಎಂದು ಸೂಚಿಸುತ್ತಾನೆ. ಅದು ಅತ್ಯಂತ ನೇರವಾದದ್ದು ಮತ್ತು ಭಗವಂತನೊಡನೆ ಸಹವಾಸವನ್ನು ಪಡೆಯಲು ಅದೇ ಅತ್ಯಂತ ಸುಲಭವಾದದ್ದು.

ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಪರಮ ಪ್ರಭುವು ಜೀವಿಯು ಭೌತಿಕ ದೇಹವಲ್ಲ ಎಂದು ವಿವರಿಸಿದ್ದಾನೆ; ಅವನೊಂದು ಅಲೌಕಿಕ ಕಿಡಿ. ಪರಿಪೂರ್ಣ ಸತ್ಯವು ಅಲೌಕಿಕ ಸಮಗ್ರತೆ. ಏಳನೆಯ ಅಧ್ಯಾಯದಲ್ಲಿ ಜೀವಿಯು ಪರಮ ಸಮಗ್ರತೆಯ ಭಾಗ ಎನ್ನುವುದನ್ನು ಹೇಳಿ ಅರ್ಜುನನು ತನ್ನ ಗಮನವನ್ನು ಸಂಪೂರ್ಣವಾಗಿ ಸಮಗ್ರತೆಗೇ ಬದಲಿಸಬೇಕೆಂದು ಪ್ರಭುವು ಸೂಚಿಸಿದ. ತನ್ನ ದೇಹವನ್ನು ಬಿಡುವ ಕಾಲದಲ್ಲಿ ಯಾರು ಕೃಷ್ಣನನ್ನು ಕುರಿತು ಯೋಚಿಸುತ್ತಾರೋ ಅಂತಹವರನ್ನು ಕೂಡಲೇ ಆಧ್ಯಾತ್ಮಿಕ ಗಗನಕ್ಕೆ, ಕೃಷ್ಣನ ನಿವಾಸಕ್ಕೆ ಕಳುಹಿಸಲಾಗುವುದು ಎಂದೂ ಎಂಟನೆಯ ಅಧ್ಯಾಯದಲ್ಲಿ ಹೇಳಲಾಯಿತು. ಆರನೆಯ ಅಧ್ಯಾಯದ ಕಡೆಯಲ್ಲಿ ಪ್ರಭುವು, ಎಲ್ಲ ಯೋಗಿಗಳಲ್ಲಿ ಯಾರು ಸದಾ ತನ್ನಲ್ಲಿಯೇ ಕೃಷ್ಣನನ್ನು ಕುರಿತು ಚಿಂತಿಸುವನೋ ಅವನು ಅತ್ಯಂತ ಪರಿಪೂರ್ಣನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಹೀಗೆ ಒಟ್ಟಿನಲ್ಲಿ ಪ್ರತಿಯೊಂದು ಅಧ್ಯಾಯದಲ್ಲಿಯೂ ತೀರ್ಮಾನವೆಂದರೆ, ಮನುಷ್ಯನು ಕೃಷ್ಣನ ಸಾಕಾರ ರೂಪದಲ್ಲಿ ಅನುರಕ್ತನಾಗಬೇಕು, ಅದೇ ಅತ್ಯುನ್ನತ ಆಧ್ಯಾತ್ಮಿಕ ಸಾಕ್ಷಾತ್ಕಾರ ಎಂದು.

ಆದರೂ ಕೃಷ್ಣನ ಸಾಕಾರ ರೂಪದಲ್ಲಿ ಅನುರಕ್ತರಾಗಿಲ್ಲದವರು ಇದ್ದಾರೆ. ಅವರು ಎಷ್ಟರಮಟ್ಟಿಗೆ ಬೇರೆಯಾಗಿದ್ದಾರೆಂದರೆ ಭಗವದ್ಗೀತೆಯ ವ್ಯಾಖ್ಯಾನಗಳನ್ನು ಸಿದ್ಧಗೊಳಿಸುವಾಗ ಸಹ ಅವರು ಜನರ ಮನಸ್ಸನ್ನು ಕೃಷ್ಣನಿಂದ ಬೇರೆಡೆಗೆ ತಿರುಗಿಸಿ ಭಕ್ತಿಯನ್ನೆಲ್ಲ ನಿರಾಕಾರ ಬ್ರಹ್ಮಜ್ಯೋತಿಗೆ ಬದಲಾಯಿಸಲು ಅಪೇಕ್ಷಿಸುತ್ತಾರೆ. ಪರಿಪೂರ್ಣ ಸತ್ಯವು ಇಂದ್ರಿಯಗಳಿಗೆ ಎಟುಕುವುದಿಲ್ಲ, ಅದು ಅವ್ಯಕ್ತ; ಆದ್ದರಿಂದ ಇವರು ಪರಿಪೂರ್ಣ ಸತ್ಯದ ನಿರಾಕಾರ ರೂಪವನ್ನೇ ಧ್ಯಾನಿಸಲು ಬಯಸುತ್ತಾರೆ.

ಯೋಗಿಗಳಲ್ಲಿ ಎರಡು ವರ್ಗಗಳು. ಯಾವ ಪ್ರಕ್ರಿಯೆಯು ಹೆಚ್ಚು ಸುಲಭವಾದದ್ದು ಮತ್ತು ಎರಡು ವರ್ಗಗಳಲ್ಲಿ ಯಾವುದು ಅತ್ಯಂತ ಪರಿಪೂರ್ಣವಾದದ್ದು ಎನ್ನುವ ಪ್ರಶ್ನೆಯನ್ನು ತೀರ್ಮಾನಿಸಲು ಅರ್ಜುನನು ಪ್ರಯತ್ನಿಸುತ್ತಿದ್ದಾನೆ. ಎಂದರೆ, ಆತನು ಕೃಷ್ಣನ ಸಾಕಾರರೂಪದಲ್ಲಿ ಪ್ರೀತಿಯಿರುವವನಾದ್ದರಿಂದ ತನ್ನ ನಿಲುವನ್ನು ಸ್ಪಷ್ಟಪಡಿಸುತ್ತಿದ್ದಾನೆ. ಆತನಿಗೆ ನಿರಾಕಾರ ಬ್ರಹ್ಮನಲ್ಲಿ ಆಸಕ್ತಿಯಿಲ್ಲ. ತನ್ನ ಸ್ಥಿತಿಯು ಭದ್ರವಾದುದೇ ಎಂದು ತಿಳಿದುಕೊಳ್ಳಲು ಅವನು ಬಯಸುತ್ತಾನೆ. ಈ ಐಹಿಕ ಜಗತ್ತಿನಲ್ಲಾಗಲೀ ಪರಮ ಪ್ರಭುವಿನ ಅಲೌಕಿಕ ಜಗತ್ತಿನಲ್ಲಾಗಲೀ ನಿರಾಕಾರ ಅಭಿವ್ಯಕ್ತಿಯು ಚಿಂತನೆಗೆ ಒಂದು ಸಮಸ್ಯೆ. ವಾಸ್ತವವಾಗಿ ಪರಿಪೂರ್ಣ ಸತ್ಯದ ನಿರಾಕಾರ ರೂಪವನ್ನು ಪರಿಪೂರ್ಣವಾಗಿ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಅರ್ಜುನನು, "ಹೀಗೆ ಕಾಲವನ್ನು ವ್ಯರ್ಥಮಾಡಿ ಏನು ಪ್ರಯೋಜನ?" ಎಂದು ಕೇಳಲು ಬಯಸುತ್ತಾನೆ. ಕೃಷ್ಣನ ಸಾಕಾರ ರೂಪವನ್ನು ಪ್ರೀತಿಸುವುದರಿಂದ ಇತರ ರೂಪಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿತ್ತು ಮತ್ತು ಅವನ ಮನಸ್ಸಿಗೆ ಯಾವ ಬಗೆಯ ಪ್ರಕ್ಷುಬ್ಧತೆಯೂ ಇರುತ್ತಿರಲಿಲ್ಲ. ಆದುದರಿಂದ ಕೃಷ್ಣನ ಸಾಕಾರ ರೂಪವನ್ನು ಪ್ರೀತಿಸುವುದೇ ಅತ್ಯುತ್ತಮ

ಎಂದು ಹನ್ನೊಂದನೆಯ ಅಧ್ಯಾಯದಲ್ಲಿ ಆತನು ಅನುಭವಿಸಿ ಕಂಡುಕೊಂಡನು. ಅರ್ಜುನನು ಕೃಷ್ಣನಿಗೆ ಕೇಳುವ ಈ ಮುಖ್ಯವಾದ ಪ್ರಶ್ನೆಯಿಂದ ಪರಿಪೂರ್ಣ ಸತ್ಯದ ನಿರಾಕಾರ ಮತ್ತು ಸಾಕಾರ ಪರಿಕಲ್ಪನೆಗಳ ನಡುವಣ ವ್ಯತ್ಯಾಸವು ಸ್ಪಷ್ಟವಾಗುವುದು.

## ಶ್ಲೋಕ - 2

**ಶ್ರೀಭಗವಾನುವಾಚ**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ |**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ||೨||**

**ಶ್ರೀಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಮಯಿ**—ನನ್ನಲ್ಲಿ; **ಆವೇಶ್ಯ**—ಸ್ಥಿರಗೊಳಿಸಿ; **ಮನಃ**—ಮನಸ್ಸನ್ನು; **ಯೇ**—ಯಾರು; **ಮಾಮ್**—ನನ್ನನ್ನು; **ನಿತ್ಯ**—ಸದಾ; **ಯುಕ್ತಾಃ**—ನಿರತರಾಗಿ; **ಉಪಾಸತೇ**—ಆರಾಧಿಸುತ್ತಾರೋ; **ಶ್ರದ್ಧಯಾ**—ಶ್ರದ್ಧೆಯಿಂದ; **ಪರಯಾ** —ಅಲೌಕಿಕವಾದ; **ಉಪೇತಾಃ**—ಕೂಡಿ; **ತೇ**—ಅವರು; **ಮೇ**—ನನ್ನಿಂದ; **ಯುಕ್ತ ತಮಾಃ** —ಯೋಗದಲ್ಲಿ ಅತ್ಯಂತ ಪರಿಪೂರ್ಣರೆಂದು; **ಮತಾಃ**—ಪರಿಗಣಿತರಾಗುತ್ತಾರೆ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆಂದನು — ಯಾರು ನನ್ನ ಸಾಕಾರ ರೂಪದಲ್ಲಿ ತಮ್ಮ ಮನಸ್ಸನ್ನು ನಿಲ್ಲಿಸುತ್ತಾರೋ ಮತ್ತು ಅಧಿಕವಾದ ಹಾಗೂ ಅಲೌಕಿಕವಾದ ನಿಷ್ಠೆಯಿಂದ ನನ್ನನ್ನು ಪೂಜಿಸುವುದರಲ್ಲಿ ನಿರತರಾಗಿರುತ್ತಾರೋ ಅವರನ್ನು ನಾನು ಅತ್ಯಂತ ಪರಿಪೂರ್ಣರು ಎಂದು ಭಾವಿಸುತ್ತೇನೆ.**

## ಭಾವಾರ್ಥ

ಅರ್ಜುನನ ಪ್ರಶ್ನೆಗೆ ಉತ್ತರವಾಗಿ ಕೃಷ್ಣನು ಈ ಮಾತನ್ನು ಸ್ಪಷ್ಟವಾಗಿ ಹೇಳುತ್ತಾನೆ—ಯಾವಾತನು ಕೃಷ್ಣನ ಸಾಕಾರ ರೂಪದಲ್ಲಿ ತನ್ನ ಮನಸ್ಸನ್ನು ಕೇಂದ್ರೀಕರಿಸುತ್ತಾನೋ ಮತ್ತು ಶ್ರದ್ಧಾಭಕ್ತಿಗಳಿಂದ ಆತನನ್ನು ಪೂಜಿಸುತ್ತಾನೋ ಅವನೇ ಯೋಗದಲ್ಲಿ ಅತ್ಯಂತ ಪರಿಪೂರ್ಣನು ಎಂದು ಪರಿಗಣಿಸಬೇಕು. ಇಂತಹ ಕೃಷ್ಣಪ್ರಜ್ಞೆಯ ಸ್ಥಿತಿಯಲ್ಲಿರುವವನಿಗೆ ಐಹಿಕ ಚಟುವಟಿಕೆಗಳೇ ಇಲ್ಲ; ಏಕೆಂದರೆ ಅವನು ಮಾಡುವುದೆಲ್ಲ ಕೃಷ್ಣನಿಗಾಗಿ. ಪರಿಶುದ್ಧ ಭಕ್ತನು ಸದಾ ಕೆಲಸದಲ್ಲಿ ನಿರತನಾಗಿರುತ್ತಾನೆ. ಕೆಲವೊಮ್ಮೆ ಅವನು ಸಂಕೀರ್ತನ ಮಾಡುತ್ತಾನೆ, ಕೃಷ್ಣನ ವಿಷಯ ಕೇಳುತ್ತಾನೆ ಅಥವಾ ಪುಸ್ತಕಗಳನ್ನು ಓದುತ್ತಾನೆ. ಕೆಲವೊಮ್ಮೆ ನೈವೇದ್ಯಕ್ಕಾಗಿ ಅಡಿಗೆ ಮಾಡುತ್ತಾನೆ ಅಥವಾ ಕೃಷ್ಣನಿಗಾಗಿ ಏನನ್ನೋ ಕೊಳ್ಳಲು ಅಂಗಡಿಗೆ ಹೋಗುತ್ತಾನೆ ಅಥವಾ ಕೆಲವೊಮ್ಮೆ ದೇವಸ್ಥಾನವನ್ನು ಸ್ವಚ್ಛಮಾಡುತ್ತಾನೆ ಅಥವಾ ಪಾತ್ರೆಗಳನ್ನು ಸ್ವಚ್ಛಮಾಡುತ್ತಾನೆ. ಅವನು ಏನೇ ಮಾಡಲಿ ತನ್ನ ಚಟುವಟಿಕೆಗಳನ್ನು ಕೃಷ್ಣನಿಗೆ ಸಮರ್ಪಿಸದೆ ಒಂದು ಕ್ಷಣವನ್ನೂ ಕಳೆಯುವುದಿಲ್ಲ. ಇಂತಹ ಕ್ರಿಯೆಯು ಪೂರ್ಣ ಸಮಾಧಿಸ್ಥಿತಿಯಲ್ಲಿದೆ.

## ಶ್ಲೋಕ 3-4

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ |**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ||೩||**

**ಸನ್ನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ |**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ||೪||**

**ಯೇ**—ಯಾರು; **ತು**—ಆದರೆ; **ಅಕ್ಷರಮ್**—ಇಂದ್ರಿಯಗ್ರಹಣಾತೀತವಾದ; **ಅನಿರ್ದೇಶ್ಯಮ್**—ಅನಿರ್ದಿಷ್ಟವಾದ; **ಅವ್ಯಕ್ತಮ್**—ವ್ಯಕ್ತವಲ್ಲದುದನ್ನು; **ಪರ್ಯುಪಾಸತೇ**—ಆರಾಧಿಸುವುದರಲ್ಲಿ ಪೂರ್ಣವಾಗಿ ತೊಡಗಿರುತ್ತಾರೋ; **ಸರ್ವತ್ರಗಮ್**—ಸರ್ವವ್ಯಾಪಕವಾದ; **ಅಚಿನ್ತ್ಯಮ್**—ಗ್ರಹಿಸಲಾಗದ; **ಚ**—ಕೂಡ; **ಕೂಟಸ್ಥಮ್**—ಬದಲಾವಣೆಯಿಲ್ಲದ; **ಅಚಲಮ್**—ಚಲಿಸದ; **ಧ್ರುವಮ್**—ಸ್ಥಿರವಾದ; **ಸನ್ನಿಯಮ್ಯ**—ನಿಯಂತ್ರಿಸಿ; **ಇನ್ದ್ರಿಯಗ್ರಾಮಮ್**—ಸಕಲ ಇಂದ್ರಿಯಗಳನ್ನು ; **ಸರ್ವತ್ರ**—ಎಲ್ಲ ಕಡೆಗಳಲ್ಲಿ; **ಸಮ ಬುದ್ಧಯಃ**—ಸಮಬುದ್ಧಿಯುಳ್ಳ; **ತೇ**—ಅವರು; **ಪ್ರಾಪ್ನುವನ್ತಿ**—ಹೊಂದುತ್ತಾರೆ; **ಮಾಮ್**—ನನ್ನನ್ನು; **ಏವ**—ಖಂಡಿತವಾಗಿಯೂ; **ಸರ್ವ ಭೂತ ಹಿತೇ**—ಸಕಲಜೀವಿಗಳ ಕಲ್ಯಾಣಕ್ಕಾಗಿ; **ರತಾಃ**—ತೊಡಗಿರುವ.

### ಅನುವಾದ

**ಅವ್ಯಕ್ತವಾದದ್ದು, ಇಂದ್ರಿಯಗಳ ಗ್ರಹಿಕೆಯನ್ನು ಮೀರಿದ್ದು, ಸರ್ವವ್ಯಾಪಿಯು, ಬದಲಾವಣೆ ಇಲ್ಲದ್ದು, ಧ್ರುವವಾದದ್ದು ಮತ್ತು ನಿಶ್ಚಲವಾದದ್ದು — ಇದು ಪರಮ ಸತ್ಯದ ನಿರಾಕಾರ ಪರಿಕಲ್ಪನೆ — ಇದನ್ನು ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸಿ ಎಲ್ಲ ಜೀವಿಗಳ ಹಿತವನ್ನು ಬಯಸುತ್ತ ಸಂಪೂರ್ಣವಾಗಿ ಪೂಜಿಸುವವರು ಕಡೆಗೆ ನನ್ನನ್ನು ಸೇರುತ್ತಾರೆ.**

### ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ನೇರವಾಗಿ ಪೂಜಿಸದೆ ಅದೇ ಗುರಿಯನ್ನು ಪರೋಕ್ಷ ರೀತಿಯಲ್ಲಿ ಮುಟ್ಟಲು ಪ್ರಯತ್ನಿಸುವವರು, ಅದೇ ಗುರಿಯಾದ, ಶ್ರೀಕೃಷ್ಣನನ್ನು ಅಂತಿಮವಾಗಿ ಸೇರುವರು. "ವಾಸುದೇವನೇ ಸರ್ವಸ್ವ ಎಂದು ತಿಳಿದುಕೊಂಡು ಜ್ಞಾನಿಯು ಹಲವು ಜನ್ಮಗಳನಂತರ ನನ್ನಲ್ಲಿ ಆಶ್ರಯವನ್ನು ಅರಸುತ್ತಾನೆ." ಹಲವು ಜನ್ಮಗಳನಂತರ ಮನುಷ್ಯನಿಗೆ ಪೂರ್ಣಜ್ಞಾನವು ಬಂದಾಗ ಆತನು ಶ್ರೀಕೃಷ್ಣನಿಗೆ ಶರಣಾಗತನಾಗುತ್ತಾನೆ. ಈ ಶ್ಲೋಕದಲ್ಲಿ ಹೇಳಿರುವ ರೀತಿಯಲ್ಲಿ ಮನುಷ್ಯನು ಭಗವಂತನ ಬಳಿ ಸಾರಿದರೆ ಆತನು ಇಂದ್ರಿಯ ನಿಗ್ರಹ ಮಾಡಬೇಕು, ಎಲ್ಲರ ಸೇವೆ ಮಾಡಬೇಕು ಮತ್ತು ಎಲ್ಲಜೀವಿಗಳ ಹಿತಕ್ಕಾಗಿ ಕೆಲಸ ಮಾಡಬೇಕು. ಮನುಷ್ಯನು ಪ್ರಭು ಕೃಷ್ಣನ ಬಳಿ ಸಾರಬೇಕು, ಇಲ್ಲವಾದರೆ ಪರಿಪೂರ್ಣ ಸಾಕ್ಷಾತ್ಕಾರವಿಲ್ಲ ಎನ್ನುವುದು ಇಂಗಿತಾರ್ಥ. ಅನೇಕ ಬಾರಿ ಮನುಷ್ಯನು ಅವನಿಗೆ ಸಂಪೂರ್ಣವಾಗಿ ಶರಣಾಗುವ ಮುನ್ನ ತುಂಬ ತಪಸ್ಸನ್ನು ಮಾಡಬೇಕಾಗುತ್ತದೆ.

ವ್ಯಕ್ತಿಗತ ಆತ್ಮದಲ್ಲಿ ಪರಮಾತ್ಮನನ್ನು ಕಾಣಲು ಮನುಷ್ಯನು ಕಾಣುವುದು, ಕೇಳುವುದು,

ಸವಿಯುವುದು, ಕೆಲಸಮಾಡುವುದು ಮೊದಲಾದ ಇಂದ್ರಿಯಕಾರ್ಯಗಳನ್ನು ನಿಲ್ಲಿಸಬೇಕಾಗುತ್ತದೆ. ಆಗ ಅವನಿಗೆ ಪರಮಾತ್ಮನು ಎಲ್ಲೆಲ್ಲೂ ಇದ್ದಾನೆ ಎಂದು ಅರ್ಥವಾಗುತ್ತದೆ. ಇದನ್ನು ಅರ್ಥಮಾಡಿಕೊಂಡ ಮನುಷ್ಯನು ಯಾವ ಜೀವಿಯ ವಿಷಯದಲ್ಲಿಯೂ ಅಸೂಯೆ ಪಡುವುದಿಲ್ಲ. ಅವನು ಹೊರಗಿನ ಆಚ್ಛಾದನೆಯನ್ನು ಮಾತ್ರ ಕಾಣದೆ ಆತ್ಮವನ್ನು ಮಾತ್ರ ಕಾಣುತ್ತಾನೆ. ಆದುದರಿಂದ ಅವನು ಮನುಷ್ಯನಿಗೂ ಪ್ರಾಣಿಗೂ ನಡುವೆ ಯಾವ ವ್ಯತ್ಯಾಸವನ್ನೂ ಕಾ ಣುವುದಿಲ್ಲ. ಆದರೆ ಈ ನಿರಾಕಾರ ಸಾಕ್ಷಾತ್ಕಾರದ ರೀತಿಯು ಸಾಮಾನ್ಯ ಮನುಷ್ಯನಿಗೆ ಬಹು ಕಷ್ಟವಾದುದು.

## ಶ್ಲೋಕ - 5

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥೫॥**

**ಕ್ಲೇಶಃ**—ತೊಂದರೆಯು ; **ಅಧಿಕ ತರಃ**—ಅತಿಹೆಚ್ಚು; **ತೇಷಾಮ್**—ಅವರಿಗೆ; **ಅವ್ಯಕ್ತ**—ವ್ಯಕ್ತವಾಗದುದಕ್ಕೆ; **ಆಸಕ್ತ**—ಆಸಕ್ತರಾದ; **ಚೇತಸಾಮ್**—ಚಿತ್ತವುಳ್ಳ; **ಅವ್ಯಕ್ತಾ**—ಅವ್ಯಕ್ತದ ಕಡೆಗೆ; **ಹಿ**—ಖಂಡಿತವಾಗಿಯೂ; **ಗತಿಃ**—ಪ್ರಗತಿಯು; **ದುಃಖಮ್**—ತೊಂದರೆಯನ್ನು; **ದೇಹ ವದ್ಭಿಃ**—ದೇಹವುಳ್ಳವನಿಂದ; **ಅವಾಪ್ಯತೇ**—ಹೊಂದಲ್ಪಡುವುದು.

## ಅನುವಾದ

**ಪರಮ ಪ್ರಭುವಿನ ಅವ್ಯಕ್ತವಾದ ಮತ್ತು ನಿರಾಕಾರವಾದ ರೂಪವನ್ನು ಪ್ರೀತಿಸುವ ಮನಸ್ಸಿನವರಿಗೆ ಪ್ರಗತಿಯು ತುಂಬಾ ಕ್ಲೇಶಕರವಾದದ್ದು. ಆ ಶಿಸ್ತಿನಲ್ಲಿ ಮುಂದುವರಿಯುವುದು ದೇಹಧಾರಿಗಳಿಗೆ ಬಹು ಕಷ್ಟ.**

## ಭಾವಾರ್ಥ

ಪರಮ ಪ್ರಭುವಿನ ಅಚಿಂತ್ಯವೂ, ಅವ್ಯಕ್ತವೂ, ನಿರಾಕಾರವೂ ಆದ ರೂಪದ ಮಾರ್ಗವನ್ನು ಅನುಸರಿಸುವ ಅಲೌಕಿಕವಾದಿಗಳನ್ನು ಜ್ಞಾನಯೋಗಿಗಳೆಂದು ಕರೆಯುತ್ತಾರೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿದ್ದು ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತರಾದವರನ್ನು ಭಕ್ತಿಯೋಗಿಗಳೆಂದು ಕರೆಯುತ್ತಾರೆ. ಇಲ್ಲಿ ಜ್ಞಾನಯೋಗ ಮತ್ತು ಭಕ್ತಿಯೋಗಗಳ ನಡುವಣ ವ್ಯತ್ಯಾಸವನ್ನು ಖಚಿತವಾಗಿ ವಿವರಿಸಿದೆ. ಕಡೆಗೆ ಮನುಷ್ಯನನ್ನು ಅದೇ ಗುರಿಗೆ ಕೊಂಡೊಯ್ದರೂ ಜ್ಞಾನಯೋಗದ ಪ್ರಕ್ರಿಯೆಯು ತುಂಬಾ ಕ್ಲೇಶಕರವಾದದ್ದು. ಆದರೆ ದೇವೋತ್ತಮ ಪರಮ ಪುರುಷನ ನೇರಸೇವೆಯ ಭಕ್ತಿಯೋಗದ ಮಾರ್ಗವು ಇನ್ನೂ ಸುಲಭವಾದದ್ದು ಮತ್ತು ದೇಹಧಾರಿಯಾದ ಆತ್ಮಕ್ಕೆ ಸಹಜವಾದದ್ದು. ಅನಾದಿಕಾಲದಿಂದ ವ್ಯಕ್ತಿಗತ ಆತ್ಮವು ದೇಹದಲ್ಲಿ ವಾಸವಾಗಿದೆ. ತಾನು ದೇಹವಲ್ಲ ಎನ್ನುವುದನ್ನು ತಾತ್ವಿಕವಾಗಿ ತಿಳಿಯುವುದು ಆತನಿಗೆ ಬಹುಕಷ್ಟ. ಆದುದರಿಂದ ಭಕ್ತಿಯೋಗವು ಕೃಷ್ಣವಿಗ್ರಹವನ್ನು ಪೂಜಾರ್ಹ ಎಂದು ಸ್ವೀಕರಿಸುತ್ತದೆ. ಏಕೆಂದರೆ ಮನಸ್ಸಿನಲ್ಲಿ ಸ್ಥಿರವಾಗಿರುವ ದೈಹಿಕ ಪರಿಕಲ್ಪನೆಯನ್ನು ಹೀಗೆ ಅನ್ವಯಿಸುವುದು ಸಾಧ್ಯವಾಗುತ್ತದೆ. ದೇವಾಲಯದಲ್ಲಿ, ದೇವೋತ್ತಮ ಪರಮ ಪುರುಷನನ್ನು ಅವನ ರೂಪದಲ್ಲಿ ಪೂಜಿಸುವುದು ಮಿಥ್ಯ

ಕಾಲ್ಪನಿಕ ಪ್ರತಿಮೆಯ ಆರಾಧನೆಯಲ್ಲ. ಪೂಜೆಯು ಪರಮ ಪ್ರಭುವು ಗುಣಗಳನ್ನು ಹೊಂದಿರುವ ಅಥವಾ ಹೊಂದಿರದ ಎಂದರೆ ಸಗುಣ ಮತ್ತು ನಿರ್ಗುಣ ರೀತಿಗಳಲ್ಲಿ ಯಾವುದಾದರೂ ಆಗಿರಬಹುದು ಎನ್ನುವುದಕ್ಕೆ ವೇದ ಸಾಹಿತ್ಯದಲ್ಲಿ ಸಾಕ್ಷ್ಯವಿದೆ. ದೇವಸ್ಥಾನದಲ್ಲಿ ವಿಗ್ರಹವನ್ನು ಪೂಜಿಸುವುದು ಸಗುಣ ಪೂಜೆ. ಏಕೆಂದರೆ ಭೌತಿಕ ಗುಣಗಳು ಭಗವಂತನನ್ನು ಚಿತ್ರಿಸುತ್ತವೆ. ಆದರೆ ಕಲ್ಲು, ಮರ ಅಥವಾ ತೈಲಚಿತ್ರ ಮೊದಲಾದ ಭೌತಿಕ ಗುಣಗಳು ಪ್ರಭುವನ್ನು ಚಿತ್ರಿಸಿದರೂ ವಾಸ್ತವವಾಗಿ ಪ್ರಭುವು ಭೌತಿಕನಲ್ಲ. ಪರಮ ಪ್ರಭುವಿನ ಪರಿಪೂರ್ಣ ಸ್ವಭಾವ ಇದು.

ಇಲ್ಲಿ ಒಂದು ಸ್ಥೂಲವಾದ ಉದಾಹರಣೆಯನ್ನು ಕೊಡಬಹುದು. ರಸ್ತೆಯಲ್ಲಿ ನಾವು ಕೆಲವು ಅಂಚೆಪೆಟ್ಟಿಗೆಗಳನ್ನು ಕಾಣಬಹುದು. ನಾವು ನಮ್ಮ ಪತ್ರಗಳನ್ನು ಆ ಪೆಟ್ಟಿಗೆಗಳಲ್ಲಿ ಹಾಕಿದರೆ ಅವು ಕಷ್ಟವಿಲ್ಲದೆ ಸಹಜವಾಗಿ ತಮ್ಮ ಗುರಿಯನ್ನು ಮುಟ್ಟುತ್ತವೆ. ಅಂಚೆಕಛೇರಿಯು ಅಧಿಕೃತವಾಗಿ ಪರಿಗಣಿಸದಿರುವ ಎಲ್ಲೋ ಕಾಣುವ ಅನುಕರಣೆಯ ಪೆಟ್ಟಿಗೆ ಅಥವಾ ಯಾವುದೋ ಹಳೆಯ ಪೆಟ್ಟಿಗೆಯು ಈ ಕೆಲಸವನ್ನು ಮಾಡಲಾರದು. ಹಾಗೆಯೇ ಭಗವಂತನಿಗೆ ವಿಗ್ರಹ ರೂಪದಲ್ಲಿ ಒಂದು ಅಧಿಕೃತ ಚಿತ್ರಣವಿದೆ; ಇದಕ್ಕೆ ಅರ್ಚಾವಿಗ್ರಹ ಎಂದು ಹೆಸರು. ಈ ಅರ್ಚಾವಿಗ್ರಹವು ಪರಮ ಪ್ರಭುವಿನ ಅವತಾರ. ಆ ರೂಪದ ಮೂಲಕ ಭಗವಂತನು ಸೇವೆಯನ್ನು ಸ್ವೀಕರಿಸುತ್ತಾನೆ. ಪ್ರಭುವು ಸರ್ವಶಕ್ತ, ಆದುದರಿಂದ ಅರ್ಚಾವಿಗ್ರಹದ ಅವತಾರದ ಮೂಲಕ, ಭಕ್ತನಿಗೆ ಬದ್ಧ ಬದುಕಿನಲ್ಲಿ ಅನುಕೂಲ ಮಾಡಿಕೊಡುವುದಕ್ಕಾಗಿ ಆತನ ಸೇವೆಯನ್ನು ಭಗವಂತನು ಸ್ವೀಕರಿಸುತ್ತಾನೆ.

ಆದುದರಿಂದ ಪರಮವನ್ನು ಕೂಡಲೇ ಮತ್ತು ನೇರವಾಗಿ ಬಳಿ ಸಾರಲು ಭಕ್ತರಿಗೆ ಯಾವ ಕಷ್ಟವೂ ಇಲ್ಲ. ಆದರೆ ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ನಿರಾಕಾರ ಮಾರ್ಗವನ್ನು ಅನುಸರಿಸುವವರಿಗೆ ಕಷ್ಟವಾಗುತ್ತದೆ. ಉಪನಿಷತ್ತುಗಳಂತಹ ವೇದ ಸಾಹಿತ್ಯದ ಮೂಲಕ ಅವರು ಪರಮ ಪ್ರಭುವಿನ ಅವ್ಯಕ್ತ ಲಕ್ಷಣವನ್ನು ಅರ್ಥಮಾಡಿಕೊಳ್ಳಬೇಕು. ಅವರು ಭಾಷೆಯನ್ನೂ ಕಲ್ಪನೆಗೆ ನಿಲುಕದ ಭಾವಗಳನ್ನೂ ಅರ್ಥಮಾಡಿಕೊಳ್ಳಬೇಕು ಮತ್ತು ಎಲ್ಲ ಪ್ರಕ್ರಿಯೆಗಳನ್ನೂ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಸಾಮಾನ್ಯ ಮನುಷ್ಯನಿಗೆ ಇದು ಸುಲಭವಲ್ಲ. ಭಕ್ತಿಸೇವೆಯಲ್ಲಿ ನಿರತನಾಗಿರುವ ಕೃಷ್ಣಪ್ರಜ್ಞೆಯಯಲ್ಲಿರುವ ಮನುಷ್ಯನು ಯೋಗ್ಯಗುರುವಿನ ಮಾರ್ಗದರ್ಶನ ಮಾತ್ರದಿಂದಲೇ, ವಿಗ್ರಹಕ್ಕೆ ವಿಧಿಪೂರ್ವಕ ಪ್ರಣಾಮಗಳನ್ನು ಅರ್ಪಿಸುವ ಮಾತ್ರದಿಂದಲೇ, ಪ್ರಭುವಿನ ಮಹಿಮೆಯನ್ನು ಕೇಳುವುದರಿಂದಲೇ ಮತ್ತು ಪ್ರಭುವಿನ ಪ್ರಸಾದದ ಶೇಷಭಾಗವನ್ನು ತಿನ್ನುವುದರಿಂದಲೇ ಬಹು ಸುಲಭವಾಗಿ ದೇವೋತ್ತಮ ಪರಮ ಪುರುಷನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಕಡೆಯಲ್ಲಿ ಪರಮ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳದೆ ಹೋಗುವ ಅಪಾಯವೂ ಇರುವ ಬಹುಕಷ್ಟಕರವಾದ ಮಾರ್ಗವನ್ನು ನಿರಾಕಾರವಾದಿಗಳು ಅನಗತ್ಯವಾಗಿ ಅನುಸರಿಸುತ್ತಿದ್ದಾರೆ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಸಾಕಾರವಾದಿಯು ಯಾವುದೇ ಅಪಾಯ, ತೊಂದರೆ ಅಥವಾ ಕಷ್ಟವಿಲ್ಲದೆ ನೇರವಾಗಿ ಪರಮ ಪುರುಷನ ಬಳಿ ಸಾರುತ್ತಾನೆ. ಇಂತಹದೇ ಒಂದು ಭಾಗವು ಶ್ರೀಮದ್ಭಾಗವತದಲ್ಲಿ ಕಾಣುತ್ತದೆ. ಕಟ್ಟಕಡೆಗೆ ದೇವೋತ್ತಮ ಪರಮ ಪುರುಷನಿಗೆ ಮನುಷ್ಯನು ಶರಣಾಗತನಾಗಬೇಕು (ಈ ಶರಣಾಗತಿಗೆ ಭಕ್ತಿ ಎಂದು ಹೆಸರು). ಅದರ ಬದಲು ಆತನು ಯಾವುದು ಬ್ರಹ್ಮನ್ ಮತ್ತು ಯಾವುದು ಬ್ರಹ್ಮನ್ ಅಲ್ಲ ಎನ್ನುವುದನ್ನು ಅರ್ಥಮಾಡಿಕೊಳ್ಳಲು ತೊಂದರೆ ತೆಗೆದುಕೊಂಡು ತನ್ನ ಇಡೀ ಜೀವಮಾನವನ್ನು ಅದರಲ್ಲಿ ಕಳೆದರೆ ಪರಿಣಾಮವು ಬರೀ ಕ್ಲೇಶವಷ್ಟೇ ಎಂದು ಭಾಗವತದಲ್ಲಿ ಹೇಳಿದೆ. ಆದುದರಿಂದ ಮನುಷ್ಯನು ಆತ್ಮಸಾಕ್ಷಾತ್ಕಾರದ ಈ

ಕಷ್ಟದ ಮಾರ್ಗವನ್ನು ಹಿಡಿಯಬಾರದು. ಏಕೆಂದರೆ ಕಡೆಗೆ ಪರಿಣಾಮವು ಅನಿಶ್ಚಯ ಎಂದು ಇಲ್ಲಿ ಹೇಳಿದೆ.

ಜೀವಿಯು ನಿರಂತರವಾಗಿ ಒಂದು ವ್ಯಕ್ತಿಗತ ಆತ್ಮ. ಆಧ್ಯಾತ್ಮಿಕ ಸಮಗ್ರತೆಯೊಡನೆ ಒಂದಾಗಲು ಬಯಸಿದರೆ ಆತನು ತನ್ನ ನಿಜಸ್ವರೂಪದ, ನಿತ್ಯವಾದ ಮತ್ತು ಗ್ರಹಿಸಬಹುದಾದ ಅಂಶಗಳ ಸಾಕ್ಷಾತ್ಕಾರವನ್ನು ಸಾಧಿಸಬಹುದು. ಆದರೆ ಆನಂದ ಭಾಗದ ಸಾಕ್ಷಾತ್ಕಾರ ಆಗುವುದಿಲ್ಲ. ಜ್ಞಾನಯೋಗದಲ್ಲಿ ಪ್ರಗಲ್ಭ ಪಾಂಡಿತ್ಯವನ್ನು ಪಡೆದ ಅಂತಹ ಅಧ್ಯಾತ್ಮವಾದಿಯು ಭಕ್ತನೊಬ್ಬನ ಕೃಪೆಯಿಂದ ಭಕ್ತಿಯೋಗದ ಬಿಂದುವನ್ನು ಮುಟ್ಟಬಹುದು. ಅಂತಹ ಕಾಲದಲ್ಲಿ ನಿರಾಕಾರತ್ವದ ದೀರ್ಘಸಾಧನೆಯು ತೊಂದರೆಗೆ ಒಂದು ಕಾರಣವಾಗಬಹುದು. ಏಕೆಂದರೆ ಆತ್ಮನು ಆ ವಿಚಾರವನ್ನು ಬಿಡಲಾರ. ಆದುದರಿಂದ ದೇಹಧಾರಿಯಾದ ಆತ್ಮನು ಸಾಧನೆಯ ಕಾಲದಲ್ಲಿಯೂ, ಸಾಕ್ಷಾತ್ಕಾರದ ಕಾಲದಲ್ಲಿಯೂ ಅವ್ಯಕ್ತದ ವಿಷಯದಲ್ಲಿ ಯಾವಾಗಲೂ ಕಷ್ಟದಲ್ಲಿರುತ್ತಾನೆ. ಪ್ರತಿಯೊಬ್ಬ ಜೀವಾತ್ಮನೂ ಭಾಗಶಃ ಸ್ವತಂತ್ರನು; ಈ ಅವ್ಯಕ್ತ ಸಾಕ್ಷಾತ್ಕಾರವು ಜೀವಾತ್ಮದ ಆಧ್ಯಾತ್ಮಿಕ ಆನಂದಕ್ಕೆ ವಿರುದ್ಧವಾದದ್ದು ಎನ್ನುವುದನ್ನು ನಾವು ತಿಳಿದುಕೊಳ್ಳಬೇಕು. ಈ ಪ್ರಕ್ರಿಯೆಯನ್ನು ಆರಿಸಿಕೊಳ್ಳಬಾರದು. ಕೃಷ್ಣಪ್ರಜ್ಞೆಯ ಪ್ರಕ್ರಿಯೆಯೆಂದರೆ ಭಕ್ತಿಸೇವೆಯಲ್ಲಿ ಸಂಪೂರ್ಣವಾಗಿ ತೊಡಗುವುದು. ಪ್ರತಿಯೊಂದು ವ್ಯಕ್ತಿಗತ ಜೀವಾತ್ಮಕ್ಕೂ ಇದೇ ಅತ್ಯುತ್ತಮ ಮಾರ್ಗ. ಈ ಭಕ್ತಿಸೇವೆಯನ್ನು ಅಲಕ್ಷಿಸಲು ಬಯಸಿದರೆ ಮನುಷ್ಯನು ನಾಸ್ತಿಕತೆಗೆ ವಾಲುವ ಅಪಾಯವುಂಟು. ಈ ಶ್ಲೋಕದಲ್ಲಿ ಆಗಲೇ ಹೇಳಿರುವಂತೆ ಅವ್ಯಕ್ತವಾದದ್ದನ್ನು, ಅನೂಹ್ಯವಾದದ್ದನ್ನು ಇಂದ್ರಿಯಗಳು ಬಳಿಸಾರಲಾರವು. ಆದುದರಿಂದ ಅವ್ಯಕ್ತವೂ, ಅನೂಹ್ಯವೂ ಆದದ್ದರಲ್ಲಿ ಗಮನವನ್ನು ಕೇಂದ್ರೀಕರಿಸುವ ಪ್ರಕ್ರಿಯೆಯನ್ನು ಯಾವಾಗಲೂ ಪ್ರೋತ್ಸಾಹಿಸಬಾರದು. ಈ ಯುಗದಲ್ಲಂತೂ ಪ್ರೋತ್ಸಾಹಿಸಲೇ ಬಾರದು. ಹೀಗೆ ಮಾಡಬೇಕೆಂದು ಕೃಷ್ಣನು ಹೇಳುವುದಿಲ್ಲ.

## ಶ್ಲೋಕ 6-7

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ |
ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ||೬||

ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ |
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ||೭||

ಯೇ—ಯಾರು; ತು—ಆದರೆ; ಸರ್ವಾಣಿ—ಎಲ್ಲ; ಕರ್ಮಾಣಿ—ಕರ್ಮಗಳನ್ನೂ; ಮಯಿ—ನನ್ನಲ್ಲಿ; ಸನ್ನ್ಯಸ್ಯ—ತ್ಯಜಿಸಿ; ಮತ್‌ಪರಾಃ—ನನ್ನಲ್ಲಿ ಆಸಕ್ತರಾಗಿ; ಅನನ್ಯೇನ—ವಿಚಲಿತವಾಗದ; ಏವ—ಖಂಡಿತವಾಗಿಯೂ; ಯೋಗೇನ—ಭಕ್ತಿಯೋಗದ ಅಭ್ಯಾಸದಿಂದ; ಮಾಮ್—ನನ್ನನ್ನು; ಧ್ಯಾಯನ್ತಃ—ಧ್ಯಾನಿಸುತ್ತ; ಉಪಾಸತೇ—ಆರಾಧಿಸುತ್ತಾರೋ; ತೇಷಾಮ್—ಅವರ; ಅಹಮ್—ನಾನು; ಸಮುದ್ಧರ್ತಾ—ಉದ್ಧರಿಸುವವನು; ಮೃತ್ಯು—ಮರಣದ; ಸಂಸಾರ—ಭೌತಿಕ ಅಸ್ತಿತ್ವದ; ಸಾಗರಾತ್—ಸಮುದ್ರದಿಂದ; ಭವಾಮಿ—ಆಗುತ್ತೇನೆ; ನ ಚಿರಾತ್—ಬಹುಬೇಗ; ಪಾರ್ಥ—ಪಾರ್ಥನೇ; ಮಯಿ—ನನ್ನಲ್ಲಿ; ಆವೇಶಿತ—ಸ್ಥಿರಗೊಳಿಸಿದ; ಚೇತಸಾಮ್—ಮನಸ್ಸುಳ್ಳ.

## ಅನುವಾದ

**ಪಾರ್ಥ, ತಮ್ಮ ಎಲ್ಲ ಕರ್ಮಗಳನ್ನೂ ನನಗೆ ಅರ್ಪಿಸಿ, ನಿಶ್ಚಲವಾಗಿ ನನ್ನಲ್ಲಿ ಭಕ್ತಿ ಇಟ್ಟು, ಭಕ್ತಿಸೇವೆಯಲ್ಲಿ ನಿರತರಾಗಿ ಸದಾ ನನ್ನನ್ನೇ ಧ್ಯಾನಿಸುತ್ತ, ನನ್ನಲ್ಲೇ ಮನಸ್ಸನ್ನು ನಿಲ್ಲಿಸಿ ನನ್ನನ್ನು ಪೂಜಿಸುವವರನ್ನು, ನಾನು ಹುಟ್ಟು, ಸಾವುಗಳ ಸಂಸಾರ ಸಾಗರದಿಂದ ಶೀಘ್ರವಾಗಿ ಉದ್ಧಾರ ಮಾಡುತ್ತೇನೆ.**

## ಭಾವಾರ್ಥ

ಭಗವಂತನು ಭಕ್ತರನ್ನು ಐಹಿಕ ಅಸ್ತಿತ್ವದಿಂದ ಬಹು ಶೀಘ್ರವಾಗಿ ಉದ್ಧರಿಸುವುದರಿಂದ ಅವರು ಅದೃಷ್ಟವಂತರು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಪರಿಶುದ್ಧ ಭಕ್ತಿಸೇವೆಯಲ್ಲಿ ಮನುಷ್ಯನಿಗೆ ಭಗವಂತನು ದೊಡ್ಡವನು, ವ್ಯಕ್ತಿಗತ ಆತ್ಮನು ಭಗವಂತನಿಗೆ ಅಧೀನ ಎನ್ನುವ ಅರಿವು ಬರುತ್ತದೆ. ಭಗವಂತನಿಗೆ ಸೇವೆ ಸಲ್ಲಿಸುವುದೇ ಅವನ ಕರ್ತವ್ಯ. ಸಲ್ಲಿಸದಿದ್ದರೆ, ಅವನು ಮಾಯೆಗೆ ಸೇವಕನಾಗುತ್ತಾನೆ.

ಹಿಂದೆಯೇ ಹೇಳಿದಂತೆ, ಭಕ್ತಿಸೇವೆಯ ಮೂಲಕ ಮಾತ್ರ ಜೀವಿಯು ಪರಮ ಪ್ರಭುವಿನ ಬಳಿಗೆ ಹೋಗಲು ಸಾಧ್ಯ. ಆದುದರಿಂದ ಮನುಷ್ಯನಿಗೆ ಸಂಪೂರ್ಣ ಭಕ್ತಿ ಇರಬೇಕು. ಕೃಷ್ಣನನ್ನು ಸೇರಲು ತನ್ನ ಮನಸ್ಸನ್ನು ಸಂಪೂರ್ಣವಾಗಿ ಅವನಲ್ಲಿ ನಿಲ್ಲಿಸಬೇಕು. ಕೃಷ್ಣನಿಗಾಗಿಯೇ ಕೆಲಸವನ್ನು ಮಾಡಬೇಕು. ಮಾಡುವ ಕೆಲಸ ಯಾವುದೇ ರೀತಿಯದಾಗಿರಬಹುದು. ಆ ಕೆಲಸವನ್ನು ಕೃಷ್ಣನಿಗಾಗಿಯೇ ಮಾಡಬೇಕು. ಭಕ್ತಿಸೇವೆಯ ಮಾನದಂಡ ಇದೇ. ದೇವೋತ್ತಮ ಪರಮ ಪುರುಷನನ್ನು ಸುಪ್ರೀತಗೊಳಿಸುವುದಲ್ಲದೆ ಬೇರೆ ಯಾವ ಸಾಧನೆಯನ್ನೂ ಭಕ್ತನು ಅಪೇಕ್ಷಿಸುವುದಿಲ್ಲ. ಅವನ ಬದುಕಿನ ಮಹದುದ್ದೇಶವೇ ಕೃಷ್ಣನನ್ನು ಪ್ರಸನ್ನಗೊಳಿಸುವುದು; ಅರ್ಜುನನು ಕುರುಕ್ಷೇತ್ರ ಯುದ್ಧದಲ್ಲಿ ಮಾಡಿದಂತೆ ಅವನು ಕೃಷ್ಣನ ತೃಪ್ತಿಗಾಗಿ ಎಲ್ಲವನ್ನೂ ತ್ಯಾಗಮಾಡಬಲ್ಲ. ಈ ಪ್ರಕ್ರಿಯೆ ಬಹು ಸುಲಭ. ತನ್ನ ವೃತ್ತಿಯಲ್ಲಿ ತೊಡಗಿ ಅದೇ ಸಮಯದಲ್ಲಿಯೇ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಕೀರ್ತನೆ ಮಾಡಬಹುದು. ಇಂತಹ ದಿವ್ಯ ಸಂಕೀರ್ತನೆಯು ಭಕ್ತನನ್ನು ದೇವೋತ್ತಮ ಪರಮ ಪುರುಷನೆಡೆಗೆ ಆಕರ್ಷಿಸುತ್ತದೆ.

ಹೀಗೆ ನಿರತನಾಗಿರುವ ಪರಿಶುದ್ಧ ಭಕ್ತನನ್ನು ವಿಳಂಬವಿಲ್ಲದೆ ತಾನು ಭವಸಾಗರದಿಂದ ಪಾರುಮಾಡುವುದಾಗಿ ಪರಮ ಪ್ರಭುವು ಇಲ್ಲಿ ವಾಗ್ದಾನ ಮಾಡುತ್ತಾನೆ. ಯೋಗಾಭ್ಯಾಸದಲ್ಲಿ ಮುಂದುವರಿದವರು ಸಂಕಲ್ಪಮಾಡಿ ಆತ್ಮವನ್ನು ತಾವು ಇಚ್ಛಿಸುವ ಯಾವುದೇ ಲೋಕಕ್ಕೆ ವರ್ಗಾಯಿಸಬಲ್ಲರು. ಇತರರು ಬೇರೆ ಬೇರೆ ರೀತಿಗಳಲ್ಲಿ ಅವಕಾಶವನ್ನು ಪಡೆದುಕೊಳ್ಳುತ್ತಾರೆ. ಆದರೆ ಭಕ್ತನ ಮಟ್ಟಿಗೆ ಸ್ವತಃ ಪ್ರಭುವೇ ಅವನನ್ನು ಕರೆದುಕೊಳ್ಳುತ್ತಾನೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ತನ್ನನ್ನು ಆಧ್ಯಾತ್ಮಿಕ ಗಗನಕ್ಕೆ ವರ್ಗಾಯಿಸಿಕೊಳ್ಳಲು ಭಕ್ತನು ಬಹು ಅನುಭವಿಯಾಗಬೇಕಾಗಿಲ್ಲ.

ವರಾಹ ಪುರಾಣದಲ್ಲಿ ಈ ಶ್ಲೋಕವಿದೆ —

ನಯಾಮಿ ಪರಮಂ ಸ್ಥಾನಮ್ ಅರ್ಚಿರಾದಿಗತಿಂ ವಿನಾ |
ಗರುಡ ಸ್ಕಂಧಮಾರೋಪ್ಯ ಯಥೇಚ್ಛಮನಿವಾರಿತಃ ||

ಈ ಶ್ಲೋಕದ ಭಾವಾರ್ಥವೆಂದರೆ ಭಕ್ತನು ತನ್ನ ಆತ್ಮವನ್ನು ಆಧ್ಯಾತ್ಮಿಕ ಲೋಕಗಳಿಗೆ ವರ್ಗಾಯಿಸಿಕೊಳ್ಳಲು ಅಷ್ಟಾಂಗಯೋಗವನ್ನು ಅಭ್ಯಾಸಮಾಡಿಕೊಳ್ಳಬೇಕಾಗಿಲ್ಲ ಎಂದು. ಪರಮ ಪ್ರಭುವೇ ಆ ಹೊಣೆಯನ್ನು ವಹಿಸಿಕೊಳ್ಳುತ್ತಾನೆ. ತಾನೇ ಉದ್ಧಾರಕನಾಗುವೆನೆಂದು ಇಲ್ಲಿ ಅವನು ಸ್ಪಷ್ಟವಾಗಿ ಹೇಳುತ್ತಾನೆ. ತಂದೆ ತಾಯಿಯರು ಮಗುವನ್ನು ಸಂಪೂರ್ಣವಾಗಿ ನೋಡಿಕೊಳ್ಳುತ್ತಾರೆ. ಆದ್ದರಿಂದ ಅವನ ಸ್ಥಾನ ಭದ್ರವಾದದ್ದು. ಹಾಗೆಯೇ ಭಕ್ತನು ತನ್ನನ್ನು ಇತರ ಲೋಕಗಳಿಗೆ ವರ್ಗಾಯಿಸಿಕೊಳ್ಳಲು ಶ್ರಮಪಡಬೇಕಾಗಿಲ್ಲ. ತನ್ನ ಅಸಾಧಾರಣ ದಯೆಯಿಂದ ಪರಮ ಪ್ರಭುವೇ ತನ್ನ ಪಕ್ಷಿವಾಹನ ಗರುಡನನ್ನೇರಿ ಬಂದು ಕೂಡಲೇ ಭಕ್ತನನ್ನು ಐಹಿಕ ಅಸ್ತಿತ್ವದಿಂದ ಬಿಡುಗಡೆ ಮಾಡುತ್ತಾನೆ. ಸಮುದ್ರದಲ್ಲಿ ಬಿದ್ದವನು ಬಹು ಹೋರಾಡಬಹುದು, ನಿಪುಣ ಈಜುಗಾರನಾಗಿರಬಹುದು, ಆದರೂ ಉಳಿದುಕೊಳ್ಳಲಾರನು. ಆದರೆ ಯಾರಾದರೂ ಬಂದು ಅವನನ್ನು ನೀರಿನಿಂದ ಎತ್ತಿದರೆ ಅವನು ಸುಲಭವಾಗಿ ಪಾರಾಗುತ್ತಾನೆ. ಹೀಗೆಯೇ ಪ್ರಭುವು ಭಕ್ತನನ್ನು ಈ ಭೌತಿಕ ಅಸ್ತಿತ್ವದಿಂದ ಮೇಲೆತ್ತುತ್ತಾನೆ. ಅವನು ಕೃಷ್ಣಪ್ರಜ್ಞೆಯ ಸುಲಭವಾದ ಪ್ರಕ್ರಿಯೆಯನ್ನು ಅಭ್ಯಾಸ ಮಾಡಬೇಕು ಮತ್ತು ಭಕ್ತಿಸೇವೆಯಲ್ಲಿ ನಿರತನಾಗಬೇಕು, ಅಷ್ಟೇ. ವಿವೇಕವಿರುವ ಯಾರೇ ಆಗಲಿ, ಬೇರೆಲ್ಲ ಮಾರ್ಗಗಳನ್ನು ಬಿಟ್ಟು ಭಕ್ತಿಸೇವೆಯ ಪ್ರಕ್ರಿಯೆಯನ್ನೇ ಯಾವಾಗಲೂ ಆರಿಸಿಕೊಳ್ಳಬೇಕು. ನಾರಾಯಣೀಯದಲ್ಲಿ ಇದನ್ನು ಹೀಗೆ ದೃಢಪಡಿಸಿದೆ —

ಯಾ ವೈ ಸಾಧನ ಸಂಪತ್ತಿಃ ಪುರುಷಾರ್ಥ ಚತುಷ್ಟಯೇ |
ತಯಾ ವಿನಾ ತದ್ ಆಪ್ನೋತಿ ನರೋ ನಾರಾಯಣಾಶ್ರಯಃ ||

ಮನುಷ್ಯನು ಕಾಮ್ಯ ಕರ್ಮದ ವಿವಿಧ ಪ್ರಕ್ರಿಯೆಗಳಲ್ಲಿ ಅಥವಾ ಊಹಾತ್ಮಕ ಚಿಂತನೆಯ ಪ್ರಕ್ರಿಯೆಯಿಂದ ಜ್ಞಾನವನ್ನು ಪಡೆಯುವುದರಲ್ಲಿ ತೊಡಗಬಾರದು ಎಂದು ಈ ಶ್ಲೋಕದ ಭಾವಾರ್ಥ. ಪರಮ ಪುರುಷನ ಭಕ್ತನಾದವನು ಇತರ ಯೋಗಪ್ರಕ್ರಿಯೆಗಳು, ಊಹಾಪೋಹ, ಧಾರ್ಮಿಕ ವಿಧಿಗಳು, ಯಜ್ಞಗಳು, ದಾನಗಳು ಮೊದಲಾದುವುಗಳಿಂದ ಬರುವ ಎಲ್ಲ ಫಲಗಳನ್ನೂ ಪಡೆಯಬಲ್ಲ. ಭಕ್ತಿಸೇವೆಯ ಖಚಿತವಾದ ಅನುಗ್ರಹ ಇದೇ.

ಕೃಷ್ಣನ ಪಾವನ ನಾಮವನ್ನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಸಂಕೀರ್ತನೆ ಮಾಡುವಷ್ಟರಿಂದಲೇ ಪ್ರಭುವಿನ ಭಕ್ತನು ಪರಮ ಗುರಿಯನ್ನು ಸುಲಭವಾಗಿ ಮತ್ತು ಸುಖವಾಗಿ ಸೇರಬಹುದು; ಆದರೆ ಬೇರೆ ಯಾವುದೇ ಧಾರ್ಮಿಕ ಪ್ರಕ್ರಿಯೆಯಿಂದ ಈ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ.

ಭಗವದ್ಗೀತೆಯ ನಿರ್ಣಯವನ್ನು ಹದಿನೆಂಟನೆಯ ಅಧ್ಯಾಯದಲ್ಲಿ ಹೇಳಿದೆ —

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ||

ಆತ್ಮ ಸಾಕ್ಷಾತ್ಕಾರದ ಬೇರೆಲ್ಲ ಪ್ರಕ್ರಿಯೆಗಳನ್ನೂ ತ್ಯಜಿಸಿ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯನ್ನು ಮಾಡಬೇಕು. ಇದರಿಂದ ಮನುಷ್ಯನು ಬದುಕಿನ ಅತ್ಯುನ್ನತ ಪರಿಪೂರ್ಣತೆಯನ್ನು ತಲಪಬಹುದು. ತನ್ನ ಹಿಂದಿನ ಬಾಳಿನ ಪಾಪಕರ್ಮಗಳನ್ನು ಕುರಿತು ಯೋಚಿಸುವ ಅಗತ್ಯವೇ ಅವನಿಗೆ ಇಲ್ಲ. ಏಕೆಂದರೆ ಪರಮ ಪ್ರಭುವು ಭಕ್ತನ ಪೂರ್ಣ ಜವಾಬ್ದಾರಿ ವಹಿಸಿಕೊಳ್ಳುತ್ತಾನೆ. ಆದುದರಿಂದ ಆಧ್ಯಾತ್ಮಿಕ ಸಾಕ್ಷಾತ್ಕಾರದ ಮೂಲಕ ತನ್ನನ್ನು ಬಿಡುಗಡೆ ಮಾಡಿಕೊಳ್ಳಲು ಮನುಷ್ಯನು ವ್ಯರ್ಥವಾಗಿ ಪ್ರಯತ್ನಿಸಬಾರದು. ಎಲ್ಲರೂ ಪರಮ ಸರ್ವಶಕ್ತ ದೇವನಾದ ಕೃಷ್ಣನಿಗೆ ಶರಣಾಗತರಾಗಬೇಕು. ಇದು ಬದುಕಿನ ಅತ್ಯುನ್ನತ ಪರಿಪೂರ್ಣತೆ.

## ಶ್ಲೋಕ - 8

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ |**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ||೮||**

**ಮಯಿ**—ನನ್ನಲ್ಲಿ; **ಏವ**—ಖಂಡಿತವಾಗಿಯೂ; **ಮನಃ**—ಮನಸ್ಸನ್ನು; **ಆಧತ್ಸ್ವ**—ಸ್ಥಿರಗೊಳಿಸು; **ಮಯಿ**—ನನ್ನಲ್ಲಿ; **ಬುದ್ಧಿಮ್**—ಬುದ್ಧಿಯನ್ನು; **ನಿವೇಶಯ**—ಇರಿಸು; **ನಿವಸಿಷ್ಯಸಿ**—ನೀನು ಜೀವಿಸುವೆ; **ಮಯಿ**—ನನ್ನಲ್ಲಿ; **ಏವ**—ಖಂಡಿತವಾಗಿಯೂ; **ಅತಃ ಊರ್ಧ್ವಮ್**—ಅನಂತರ; **ನ ಸಂಶಯಃ**—ಸಂದೇಹವಿಲ್ಲ.

## ಅನುವಾದ

**ದೇವೋತ್ತಮ ಪರಮ ಪುರುಷನಾದ ನನ್ನಲ್ಲಿ ಮನಸ್ಸನ್ನು ನಿಲ್ಲಿಸು, ನಿನ್ನ ಬುದ್ಧಿಯನ್ನು ಸಂಪೂರ್ಣವಾಗಿ ನನ್ನಲ್ಲಿ ತೊಡಗಿಸು, ಸಾಕು. ನಿಸ್ಸಂದೇಹವಾಗಿಯೂ ಇದರಿಂದ ನೀನು ಯಾವಾಗಲೂ ನನ್ನಲ್ಲಿ ವಾಸಿಸುವೆ.**

## ಭಾವಾರ್ಥ

ಪರಮ ಪ್ರಭು ಕೃಷ್ಣನ ಸೇವೆಯಲ್ಲಿ ನಿರತನಾದವನು ಪರಮ ಪ್ರಭುವಿನೊಡನೆ ನೇರವಾದ ಸಂಬಂಧದಲ್ಲಿ ಬಾಳುತ್ತಾನೆ. ಆದುದರಿಂದ ಪ್ರಾರಂಭದಿಂದಲೇ ಅವನದು ಅಲೌಕಿಕ ಸ್ಥಿತಿ ಎನ್ನುವುದರಲ್ಲಿ ಸಂಶಯವಿಲ್ಲ. ಭಕ್ತನಾದವನು ಐಹಿಕ ಮಟ್ಟದಲ್ಲಿ ಬದುಕುವುದಿಲ್ಲ — ಆತನು ಕೃಷ್ಣನಲ್ಲಿ ಬದುಕುತ್ತಾನೆ. ಭಗವಂತನ ಪಾವನನಾಮವೂ ಭಗವಂತನೂ ಬೇರೆ ಬೇರೆಯಲ್ಲ. ಆದುದರಿಂದ ಭಕ್ತನು ಹರೇ ಕೃಷ್ಣ ಸಂಕೀರ್ತನೆ ಮಾಡುವಾಗ ಕೃಷ್ಣನೂ ಅವನ ಅಂತರಂಗ ಶಕ್ತಿಯೂ ಭಕ್ತನ ನಾಲಿಗೆಯಲ್ಲಿ ಕುಣಿಯುತ್ತಿರುತ್ತಾರೆ. ಅವನು ಕೃಷ್ಣನಿಗೆ ನೈವೇದ್ಯ ಮಾಡಿದಾಗ ಕೃಷ್ಣನು ಆ ತಿಂಡಿತಿನಸುಗಳನ್ನು ನೇರವಾಗಿ ಸ್ವೀಕರಿಸುತ್ತಾನೆ; ಭಕ್ತನು ಪ್ರಸಾದವನ್ನು ತಿಂದಾಗ ಕೃಷ್ಣಪ್ರಜ್ಞೆ ಹೊಂದುತ್ತಾನೆ. ಭಗವದ್ಗೀತೆ ಮತ್ತು ಇತರ ವೇದಸಾಹಿತ್ಯದಲ್ಲಿ ಈ ಪ್ರಕ್ರಿಯೆಯನ್ನು ಸಲಹೆ ಮಾಡಲಾಗಿದೆ. ಹೀಗಿದ್ದರೂ, ಇಂತಹ ಸೇವೆಯಲ್ಲಿ ನಿರತನಾಗದವನು ಈ ಪ್ರಕ್ರಿಯೆ ಹೇಗೆ ಕೆಲಸಮಾಡುತ್ತದೆ ಎಂದು ಅರ್ಥಮಾಡಿಕೊಳ್ಳಲಾರ.

## ಶ್ಲೋಕ - 9

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ |**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಞ್ಜಯ ||೯||**

**ಅಥ**—ಆದರೆ; **ಚಿತ್ತಮ್**—ಮನಸ್ಸನ್ನು; **ಸಮಾಧಾತುಮ್**—ಸ್ಥಿರಗೊಳಿಸಲು; **ನ ಶಕ್ನೋಷಿ**—ಸಮರ್ಥನಾಗಲಾರೆ; **ಮಯಿ**—ನನ್ನಲ್ಲಿ; **ಸ್ಥಿರಮ್**—ಸ್ಥಿರವಾಗಿ; **ಅಭ್ಯಾಸಯೋಗೇನ**—ಭಕ್ತಿಸೇವೆಯ ಅಭ್ಯಾಸದಿಂದ; **ತತಃ**—ಆಗ; **ಮಾಮ್**—ನನ್ನನ್ನು; **ಇಚ್ಛಾ**—ಬಯಕೆಯನ್ನು; **ಆಪ್ತುಮ್**—ಹೊಂದಲು; **ಧನಮ್ ಜಯ**—ಧನಂಜಯನಾದ ಅರ್ಜುನನೇ.

## ಅನುವಾದ

**ಅರ್ಜುನಾ, ಧನಂಜಯಾ, ನಿಶ್ಚಲವಾಗಿ ನನ್ನಲ್ಲಿ ನಿನ್ನ ಮನಸ್ಸನ್ನು ನಿಲ್ಲಿಸಲು ಸಾಧ್ಯವಾಗದಿದ್ದರೆ ಭಕ್ತಿಯೋಗದ ನಿಯಂತ್ರಕ ತತ್ವಗಳನ್ನು ಅನುಸರಿಸಲು ಪ್ರಯತ್ನಿಸು. ಹೀಗೆ ನನ್ನನ್ನು ಸೇರುವ ಬಯಕೆಯನ್ನು ಬೆಳೆಸಿಕೋ.**

## ಭಾವಾರ್ಥ

ಈ ಶ್ಲೋಕದಲ್ಲಿ ಭಕ್ತಿಯೋಗದ ಎರಡು ಬೇರೆ ಬೇರೆ ಪ್ರಕ್ರಿಯೆಗಳನ್ನು ಸೂಚಿಸಿದೆ. ಮೊದಲನೆಯದು ದೇವೋತ್ತಮ ಪರಮ ಪುರುಷನಾದ ಕೃಷ್ಣನಲ್ಲಿ ಆಧ್ಯಾತ್ಮಿಕ ಪ್ರೀತಿಯಿಂದ ವಾಸ್ತವವಾಗಿ ಆಸಕ್ತಿಯನ್ನು ಬೆಳೆಸಿಕೊಂಡಿರುವವನಿಗೆ ಅನ್ವಯಿಸುತ್ತದೆ. ಮತ್ತೊಂದು, ಪರಮ ಪುರುಷನಲ್ಲಿ ಆಧ್ಯಾತ್ಮಿಕ ಪ್ರೀತಿಯಿಂದ ಆಸಕ್ತಿಯನ್ನು ಬೆಳೆಸಿಕೊಳ್ಳದಿರುವವನಿಗೆ ಸೂಚಿಸುವ ಪ್ರಕ್ರಿಯೆ. ಕೃಷ್ಣಾನುರಾಗದ ಘಟ್ಟಕ್ಕೆ ಕಡೆಗೆ ಏರಲು ಮನುಷ್ಯನು ಅನುಸರಿಸಬಹುದಾದ, ಈ ಎರಡನೆಯ ವರ್ಗದ ಜನರಿಗಾಗಿ ನಿಗದಿತವಾದ ಬೇರೆ ಬೇರೆ ವಿಧಿ, ನಿಯಮಗಳಿವೆ.

ಭಕ್ತಿಯೋಗ ಎಂದರೆ ಇಂದ್ರಿಯಗಳನ್ನು ಶುದ್ಧಿಗೊಳಿಸುವುದು. ಈಗ ಐಹಿಕ ಅಸ್ತಿತ್ವದಲ್ಲಿ ಇಂದ್ರಿಯಗಳು ತಮ್ಮ ಸುಖದಲ್ಲಿ ಮಗ್ನವಾಗಿ ಸದಾ ಮಲಿನವಾಗಿರುತ್ತವೆ. ಭಕ್ತಿಯೋಗದ ಅಭ್ಯಾಸದಿಂದ ಈ ಇಂದ್ರಿಯಗಳು ಪರಿಶುದ್ಧವಾಗುತ್ತವೆ. ಈ ಪರಿಶುದ್ಧ ಸ್ಥಿತಿಯಲ್ಲಿ ಅವು ನೇರವಾಗಿ ಪರಮ ಪ್ರಭುವಿನ ಸಂಪರ್ಕವನ್ನು ಪಡೆಯುತ್ತವೆ. ಈ ಐಹಿಕ ಅಸ್ತಿತ್ವದಲ್ಲಿ, ನಾನು ಯಾರೋ ಯಜಮಾನನಿಗಾಗಿ ಸೇವೆಸಲ್ಲಿಸುತ್ತಿರಬಹುದು. ಆದರೆ ನಾನು ನನ್ನ ಯಜಮಾನನ ಸೇವೆಯನ್ನು ಪ್ರೀತಿಯಿಂದ ಒಂದಿಷ್ಟು ದುಡ್ಡಿಗಾಗಿ ಮಾಡುತ್ತೇನೆ. ಯಜಮಾನನಿಗೂ ನನ್ನ ವಿಷಯದಲ್ಲಿ ಪ್ರೀತಿ ಇಲ್ಲ; ನನ್ನನ್ನು ದುಡಿಸಿಕೊಳ್ಳುತ್ತಾನೆ, ಹಣ ಕೊಡುತ್ತಾನೆ. ಆದುದರಿಂದ ಪ್ರೀತಿಯ ಪ್ರಶ್ನೆಯೇ ಇಲ್ಲ. ಆದರೆ ಆಧ್ಯಾತ್ಮಿಕ ಜೀವನಕ್ಕೆ ಪ್ರೀತಿಯು ಪರಿಶುದ್ಧ ಮಟ್ಟಕ್ಕೆ ಏರಬೇಕು. ಈಗಿರುವ ಇಂದ್ರಿಯಗಳ ಮೂಲಕ ಮಾಡುವ ಪ್ರೀತಿಪೂರ್ವಕ ಸೇವೆಯ ಅಭ್ಯಾಸದಿಂದ ಪ್ರೀತಿಯ ಆ ಘಟ್ಟವನ್ನು ಸಾಧಿಸಬಹುದು.

ಈ ಭಗವತ್ಪ್ರೇಮವು ಈಗ ಪ್ರತಿಯೊಬ್ಬರ ಹೃದಯದಲ್ಲಿ ಸುಪ್ತವಾಗಿದೆ. ಅಲ್ಲಿ ದೇವರ ಪ್ರೀತಿಯು ಬೇರೆ ಬೇರೆ ರೀತಿಗಳಲ್ಲಿ ಪ್ರಕಟವಾಗುತ್ತದೆ. ಆದರೆ ಐಹಿಕ ಸಂಪರ್ಕದಿಂದ ಅದು

ಮಲಿನವಾಗಿದೆ. ಈಗ ಹೃದಯವನ್ನು ಐಹಿಕ ಸಂಪರ್ಕದ ಮಾಲಿನ್ಯದಿಂದ ಪರಿಶುದ್ಧಗೊಳಿಸಬೇಕು; ಸುಪ್ತವಾದ ಸಹಜವಾದ ಕೃಷ್ಣಪ್ರೇಮವನ್ನು ಪುನಶ್ಚೇತನಗೊಳಿಸಬೇಕು. ಇದೇ ಸಂಪೂರ್ಣ ಪ್ರಕ್ರಿಯೆ.

ಭಕ್ತಿಯೋಗದ ನಿಯಂತ್ರಕ ತತ್ವಗಳನ್ನು ಅಭ್ಯಾಸಮಾಡಲು ತಜ್ಞ ಗುರುವಿನ ಮಾರ್ಗದರ್ಶನದಲ್ಲಿ ಕೆಲವು ತತ್ವಗಳನ್ನು ಆಚರಿಸಬೇಕು. ಬೆಳಗ್ಗೆ ಬೇಗನೆ ಏಳಬೇಕು. ಸ್ನಾನ ಮಾಡಬೇಕು. ದೇವಸ್ಥಾನವನ್ನು ಪ್ರವೇಶಿಸಿ ಪ್ರಾರ್ಥನೆಯನ್ನು ಸಲ್ಲಿಸಿ ಹರೇಕೃಷ್ಣ ಸಂಕೀರ್ತನೆಯನ್ನು ಮಾಡಬೇಕು. ಹೂವುಗಳನ್ನು ಸಂಗ್ರಹಿಸಿ ವಿಗ್ರಹಕ್ಕೆ ಅರ್ಪಿಸಬೇಕು. ವಿಗ್ರಹಕ್ಕೆ ನೈವೇದ್ಯ ಮಾಡಲು ಅಡುಗೆ ಮಾಡಬೇಕು; ಪ್ರಸಾದವನ್ನು ತೆಗೆದುಕೊಳ್ಳಬೇಕು ಇತ್ಯಾದಿ. ಮನುಷ್ಯನು ಅನುಸರಿಸಬೇಕಾದ ಹಲವಾರು ನಿಯಮ ನಿಬಂಧನೆಗಳಿವೆ. ಪರಿಶುದ್ಧ ಭಕ್ತರಿಂದ ಸದಾ ಭಗವದ್ಗೀತೆ ಮತ್ತು ಭಾಗವತಗಳನ್ನು ಕೇಳಬೇಕು. ಯಾರೇ ಆಗಲಿ ದೇವರ ಪ್ರೇಮದ ಎತ್ತರಕ್ಕೆ ಏರಲು ಈ ಸಾಧನೆಯು ನೆರವಾಗಬಲ್ಲದು. ಅನಂತರ ಭಗವಂತನ ದಿವ್ಯ ಸಾಮ್ರಾಜ್ಯದಲ್ಲಿ ಆತನ ಮುನ್ನಡೆಯು ನಿಶ್ಚಯವಾದದ್ದು. ನಿಯಮ ನಿಯಂತ್ರಣಗಳನ್ನು ಅನುಸರಿಸಿ, ಗುರುಗಳ ಮಾರ್ಗದರ್ಶನದಲ್ಲಿ ಭಕ್ತಿಯೋಗವನ್ನು ಆಚರಿಸಿದರೆ ಭಗವತ್ಪ್ರೇಮದ ಹಂತವನ್ನು ನಿಶ್ಚಿತವಾಗಿಯೂ ತಲಪಬಹುದು.

## ಶ್ಲೋಕ - 10

**ಅಭ್ಯಾಸೇऽಪ್ಯಸಮರ್ಥೋऽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥೧೦॥**

**ಅಭ್ಯಾಸೇ**—ಅಭ್ಯಾಸದಲ್ಲಿ; **ಅಪಿ**—ಕೂಡ; **ಅಸಮರ್ಥಃ**—ಅಸಮರ್ಥನು; **ಅಸಿ**—ಆಗಿದ್ದೀಯೆ; **ಮತ್‌ಕರ್ಮ**—ನನ್ನ ಕೆಲಸಕ್ಕೆ; **ಪರಮಃ**—ಅರ್ಪಿತನಾಗಿ; **ಭವ**—ಆಗು; **ಮತ್ ಅರ್ಥಮ್**—ನನಗಾಗಿ; **ಅಪಿ**—ಕೂಡ; **ಕರ್ಮಾಣಿ**—ಕಾರ್ಯಗಳನ್ನು; **ಕುರ್ವನ್**—ಆಚರಿಸುತ್ತಾ; **ಸಿದ್ಧಿಮ್**—ಸಿದ್ಧಿಯನ್ನು; **ಅವಾಪ್ಸ್ಯಸಿ**—ಹೊಂದುತ್ತೀಯೆ.

## ಅನುವಾದ

**ಭಕ್ತಿಯೋಗದ ನಿಯಮಗಳನ್ನು ಅಭ್ಯಾಸ ಮಾಡಲು ನಿನಗೆ ಸಾಧ್ಯವಾಗದಿದ್ದರೆ ನನಗಾಗಿ ಕೆಲಸ ಮಾಡಲು ಪ್ರಯತ್ನಿಸು. ಏಕೆಂದರೆ ನನಗಾಗಿ ಕೆಲಸ ಮಾಡುವುದರಿಂದಲೂ ನೀನು ಪರಿಪೂರ್ಣಸ್ಥಿತಿಗೆ ಬರುವೆ.**

## ಭಾವಾರ್ಥ

ಗುರುವಿನ ಮಾರ್ಗದರ್ಶನದಲ್ಲಿ ಭಕ್ತಿಯೋಗದ ನಿಯಂತ್ರಕ ತತ್ವಗಳನ್ನು ಆಚರಿಸಲಾರದವನು ಕೂಡಾ ಪರಮ ಪ್ರಭುವಿಗಾಗಿ ಕೆಲಸ ಮಾಡುವ ಮೂಲಕ ಈ ಪರಿಪೂರ್ಣ ಘಟ್ಟಕ್ಕೆ ಸೆಳೆದುಕೊಳ್ಳಲ್ಪಡಬಹುದು. ಈ ಕೆಲಸವನ್ನು ಮಾಡುವುದು ಹೇಗೆ ಎನ್ನುವುದನ್ನು ಹನ್ನೊಂದನೆಯ ಅಧ್ಯಾಯದ ಐವತ್ತೈದನೆಯ ಶ್ಲೋಕದಲ್ಲಿ ಹೇಳಿದೆ. ಕೃಷ್ಣಪ್ರಜ್ಞೆಯ ಪ್ರಸಾರದ ಪರವಾಗಿರಬೇಕು. ಕೃಷ್ಣಪ್ರಜ್ಞೆಯ ಪ್ರಸಾರದ ಕಾರ್ಯದಲ್ಲಿ ನಿರತರಾಗಿರುವ ಭಕ್ತರು ಎಷ್ಟೋ ಮಂದಿ ಇದ್ದಾರೆ. ಅವರಿಗೆ ಸಹಾಯವು ಅಗತ್ಯ. ಆದುದರಿಂದ ಭಕ್ತಿಯೋಗದ ನಿಯಂತ್ರಕ

ತತ್ವಗಳನ್ನು ನೇರವಾಗಿ ಅಭ್ಯಾಸಮಾಡಲಾರದವನೂ ಇಂತಹ ಕಾರ್ಯದಲ್ಲಿ ನೆರವಾಗಬಹುದು. ಎಲ್ಲ ಪ್ರಯತ್ನಕ್ಕೂ ಭೂಮಿ, ಬಂಡವಾಳ, ವ್ಯವಸ್ಥೆ ಮತ್ತು ಶ್ರಮಗಳು ಅಗತ್ಯ. ವಾಣಿಜ್ಯ ವ್ಯವಹಾರದಲ್ಲಿ ಮನುಷ್ಯನಿಗೆ ವಾಸಿಸಲು ಒಂದು ಸ್ಥಳ, ಬಳಸಲು ಒಂದಿಷ್ಟು ಬಂಡವಾಳ, ಶ್ರಮ ಮತ್ತು ವಿಸ್ತರಿಸಲು ಸಂಘ ಹೇಗೆ ಅಗತ್ಯವೋ ಹಾಗೆಯೇ ಕೃಷ್ಣನ ಸೇವೆಯಲ್ಲಿ ಇವು ಅಗತ್ಯ. ಇರುವ ಒಂದೇ ವ್ಯತ್ಯಾಸ ಎಂದರೆ ಪ್ರಾಪಂಚಿಕತೆಯಲ್ಲಿ ಮನುಷ್ಯನು ಇಂದ್ರಿಯ ತೃಪ್ತಿಗಾಗಿ ಕೆಲಸ ಮಾಡುತ್ತಾನೆ. ಇದೇ ಕೆಲಸವನ್ನು ಕೃಷ್ಣನ ತೃಪ್ತಿಗಾಗಿ ಮಾಡಬಹುದು. ಅದು ಆಧ್ಯಾತ್ಮಿಕ ಚಟುವಟಿಕೆಯಾಗುತ್ತದೆ. ತಕ್ಕಷ್ಟು ಹಣವಿರುವ ಮನುಷ್ಯನು ಕೃಷ್ಣಪ್ರಜ್ಞೆಯ ಪ್ರಸಾರಕ್ಕಾಗಿ ಒಂದು ಕಛೇರಿಯನ್ನು ಕಟ್ಟಬಹುದು ಅಥವಾ ದೇವಸ್ಥಾನವನ್ನು ಕಟ್ಟಬಹುದು ಇಲ್ಲವೇ ಪ್ರಕಟಣೆಗಳಿಗೆ ನೆರವಾಗಬಹುದು. ಹೀಗೆ ನಾನಾ ಕಾರ್ಯಕ್ಷೇತ್ರಗಳಿವೆ. ಯಾವುದಾದರೂ ಒಂದು ಕಾರ್ಯಕ್ಷೇತ್ರದಲ್ಲಿ ಆಸಕ್ತನಾಗಬೇಕು. ಕರ್ಮಫಲವನ್ನು ತ್ಯಾಗ ಮಾಡಲಾರದವನು ಅದರ ಒಂದು ಭಾಗವನ್ನು, ಕೃಷ್ಣಪ್ರಜ್ಞೆಯನ್ನು ಪ್ರಸಾರಮಾಡಲು ತ್ಯಾಗಮಾಡಬಹುದು. ಕೃಷ್ಣಪ್ರಜ್ಞೆಗಾಗಿ ಸ್ವಯಂಪ್ರೇರಣೆಯಿಂದ ಮಾಡುವ ಈ ಕಾರ್ಯವು ಮನುಷ್ಯನು ಭಗವತ್ಪ್ರೇಮದಲ್ಲಿ ಇನ್ನೂ ಮೇಲಿನ ಸ್ಥಿತಿಗೆ ಏರಲು ನೆರವಾಗುತ್ತದೆ. ಇದರಿಂದ ಆತನು ಪರಿಪೂರ್ಣನಾಗುತ್ತಾನೆ.

## ಶ್ಲೋಕ - 11

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ||೧೧||**

**ಅಥ**—ಹಾಗಿದ್ದರೂ; **ಏತತ್**—ಇದನ್ನು; **ಅಪಿ**—ಕೂಡ; **ಅಶಕ್ತಃ**—ಅಸಮರ್ಥನು; **ಅಸಿ**—ಆಗಿದ್ದೀಯೆ; **ಕರ್ತುಮ್**—ಆಚರಿಸಲು; **ಮತ್**—ನನ್ನಲ್ಲಿ; **ಯೋಗಮ್**—ಭಕ್ತಿಸೇವೆಯಲ್ಲಿ; **ಆಶ್ರಿತಃ**—ಆಶ್ರಯಪಡೆದು; **ಸರ್ವಕರ್ಮ**—ಎಲ್ಲ ಚಟುವಟಿಕೆಗಳ; **ಫಲ**—ಫಲಗಳ; **ತ್ಯಾಗಮ್**—ತ್ಯಾಗವನ್ನು; **ತತಃ**—ಆಗ; **ಕುರು**—ಮಾಡು; **ಯತ ಆತ್ಮವಾನ್**—ಆತ್ಮಸ್ಥಿತನಾಗಿ.

## ಅನುವಾದ

**ನನ್ನ ಪ್ರಜ್ಞೆಯಲ್ಲಿ ಕೆಲಸ ಮಾಡಲು ನಿನಗೆ ಸಾಧ್ಯವಿಲ್ಲದಿದ್ದರೆ ನಿನ್ನ ಎಲ್ಲ ಕರ್ಮಫಲವನ್ನು ತ್ಯಾಗಮಾಡಿ ಆತ್ಮಸ್ಥಿತನಾಗಿರಲು ಪ್ರಯತ್ನಿಸು.**

## ಭಾವಾರ್ಥ

ಸಾಮಾಜಿಕ, ಕೌಟುಂಬಿಕ ಅಥವಾ ಧಾರ್ಮಿಕ ಕಾರಣಗಳಿಂದಾಗಿ ಅಥವಾ ಬೇರೆ ಅಡ್ಡಿಗಳಿಂದಾಗಿ ಮನುಷ್ಯನಿಗೆ ಕೃಷ್ಣಪ್ರಜ್ಞೆಯ ಚಟುವಟಿಕೆಗಳಲ್ಲಿ ಸಹಾನುಭೂತಿಯನ್ನು ತೋರುವುದಕ್ಕೂ ಸಾಧ್ಯವಾಗದೆ ಹೋಗಬಹುದು. ಕೃಷ್ಣಪ್ರಜ್ಞೆಯ ಕೆಲಸಕಾರ್ಯಗಳಲ್ಲಿ ನೇರವಾಗಿ ಆಸಕ್ತಿಯನ್ನು ತೋರಿದರೆ ಕುಟುಂಬದವರು ಆಕ್ಷೇಪಿಸಬಹುದು ಅಥವಾ ಬೇರೆ ಎಷ್ಟೋ ತೊಂದರೆಗಳಿರಬಹುದು. ಇಂತಹ ಸಮಸ್ಯೆ ಇರುವವನಿಗೆ, ತನ್ನ ಚಟುವಟಿಕೆಗಳಿಂದ ಸಂಗ್ರಹವಾದ ಫಲವನ್ನು ಒಂದು ಒಳ್ಳೆಯ ಕಾರ್ಯಕ್ಕಾಗಿ ತ್ಯಾಗಮಾಡಬೇಕೆಂದು ಬುದ್ಧಿವಾದ ಹೇಳಿದೆ. ಇಂತಹ

ವಿಧಿಯನ್ನು ವೇದಗಳ ನಿಯಮಗಳಲ್ಲಿ ವರ್ಣಿಸಿದೆ. ಯಜ್ಞಗಳಲ್ಲಿ ಅಥವಾ ವಿಶೇಷ ಪುಣ್ಯಕಾರ್ಯಗಳಲ್ಲಿ ಒಬ್ಬನ ಹಿಂದಿನ ಕರ್ಮದ ಫಲವನ್ನು ಹೇಗೆ ಉಪಯೋಗಿಸಬಹುದು ಎನ್ನುವುದಕ್ಕೆ ವೈದಿಕ ಶಾಸ್ತ್ರಗಳಲ್ಲಿ ಅನೇಕ ವರ್ಣನೆಗಳಿವೆ. ಹೀಗೆ ಮನುಷ್ಯನು ಕ್ರಮೇಣ ಜ್ಞಾನದ ಸ್ಥಿತಿಗೆ ಏರಬಹುದು. ಕೃಷ್ಣಪ್ರಜ್ಞೆಯ ಕೆಲಸಕಾರ್ಯಗಳಲ್ಲಿ ಆಸಕ್ತಿ ಇಲ್ಲದವನು ಒಂದು ಆಸ್ಪತ್ರೆಗಾಗಿ ಅಥವಾ ಬೇರೆಯಾವುದಾದರೂ ಸಾಮಾಜಿಕ ಸಂಸ್ಥೆಗೆ ದಾನಮಾಡುತ್ತಾನೆ ಎಂಬುದನ್ನು ಕಾಣುತ್ತೇವೆ. ಹೀಗೆ ಮಾಡುವುದರಿಂದ ಅವನು ತನ್ನ ಅತೀವ ಶ್ರಮದ ಫಲಗಳನ್ನು ತ್ಯಾಗಮಾಡುತ್ತಾನೆ. ಅದನ್ನು ಇಲ್ಲಿ ಸಮರ್ಥಿಸಿ ಸಲಹೆಮಾಡಿದೆ. ಏಕೆಂದರೆ ಕರ್ಮಫಲವನ್ನು ತ್ಯಾಗಮಾಡಲು ಅಭ್ಯಾಸ ಮಾಡಿದವನು ಕ್ರಮೇಣ ತನ್ನ ಮನಸ್ಸನ್ನು ಪರಿಶುದ್ಧಗೊಳಿಸಿಕೊಳ್ಳಲು ಸಮರ್ಥನಾಗುತ್ತಾನೆ. ಆ ಪರಿಶುದ್ಧವಾದ ಮನಸ್ಸಿನ ಸ್ಥಿತಿಯಲ್ಲಿ ಕೃಷ್ಣಪ್ರಜ್ಞೆಯನ್ನು ಅರ್ಥಮಾಡಿಕೊಳ್ಳಲು ಸಮರ್ಥನಾಗುತ್ತಾನೆ. ನಿಜ, ಕೃಷ್ಣಪ್ರಜ್ಞೆಯು ಬೇರಾವ ಅನುಭವವನ್ನೂ ಅವಲಂಬಿಸಿಲ್ಲ. ಏಕೆಂದರೆ ಕೃಷ್ಣಪ್ರಜ್ಞೆಯೇ ಮನುಷ್ಯನ ಮನಸ್ಸನ್ನು ಪರಿಶುದ್ಧಗೊಳಿಸಬಲ್ಲದು. ಆದರೆ ಕೃಷ್ಣಪ್ರಜ್ಞೆಯನ್ನು ಸ್ವೀಕರಿಸಲು ಬೇರೆ ಅಡ್ಡಿಗಳಿದ್ದಲ್ಲಿ ಮನುಷ್ಯನು ತನ್ನ ಕರ್ಮಗಳ ಫಲವನ್ನು ತ್ಯಾಗಮಾಡಲು ಪ್ರಯತ್ನಿಸಬಹುದು. ಈ ಕಾರಣಕ್ಕಾಗಿ ಸಾಮಾಜಿಕ ಸೇವೆ, ಸಮುದಾಯ ಸೇವೆ, ರಾಷ್ಟ್ರಸೇವೆ, ದೇಶಕ್ಕಾಗಿ ತ್ಯಾಗ ಮೊದಲಾದುವನ್ನು ಒಪ್ಪಿಕೊಳ್ಳಬಹುದು. ಇದರಿಂದ ಮನುಷ್ಯನು ಎಂದಾದರೂ ಒಂದು ದಿನ ಪರಮ ಪ್ರಭುವಿನ ಪರಿಶುದ್ಧ ಭಕ್ತಿಸೇವೆಯ ಘಟ್ಟಕ್ಕೆ ಬರಬಹುದು. ಭಗವದ್ಗೀತೆಯಲ್ಲಿ (18.46) **ಯಥಾ ಪ್ರವೃತ್ತಿರ್ ಭೂತಾನಾಮ್** ಎಂದು ಹೇಳಿದೆ — ಎಂದರೆ ಪರಮ ಆದರ್ಶವು ಕೃಷ್ಣನೇ ಎಂದು ತಿಳಿಯದಿದ್ದರೂ ಪರಮ ಆದರ್ಶಕ್ಕಾಗಿ ತ್ಯಾಗ ಮಾಡಲು ಮನುಷ್ಯನು ನಿರ್ಧರಿಸಿದರೆ, ಅವನು ಕೃಷ್ಣನೇ ಪರಮ ಆದರ್ಶ ಎನ್ನುವುದನ್ನು ತ್ಯಾಗಮಾರ್ಗದಿಂದ ಕ್ರಮೇಣ ತಿಳಿದುಕೊಳ್ಳುತ್ತಾನೆ.

## ಶ್ಲೋಕ - 12

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥೧೨॥**

**ಶ್ರೇಯಃ**—ಉತ್ತಮವು; **ಹಿ**—ಖಂಡಿತವಾಗಿಯೂ; **ಜ್ಞಾನಮ್**—ಜ್ಞಾನವು; **ಅಭ್ಯಾಸಾತ್**—ಅಭ್ಯಾಸಕ್ಕಿಂತ; **ಜ್ಞಾನಾತ್**—ಜ್ಞಾನಕ್ಕಿಂತ; **ಧ್ಯಾನಮ್**—ಧ್ಯಾನವು; **ವಿಶಿಷ್ಯತೇ**—ಉತ್ತಮವೆಂದು ಪರಿಗಣಿತವಾಗಿದೆ; **ಧ್ಯಾನಾತ್**—ಧ್ಯಾನಕ್ಕಿಂತ; **ಕರ್ಮ ಫಲ ತ್ಯಾಗಃ**—ಕರ್ಮ ಫಲಗಳ ತ್ಯಾಗವು; **ತ್ಯಾಗಾತ್**—ಅಂತಹ ತ್ಯಾಗದಿಂದ; **ಶಾನ್ತಿಃ**—ಶಾಂತಿಯು; **ಅನನ್ತರಮ್**—ಆಮೇಲೆ.

## ಅನುವಾದ

**ಈ ಅಭ್ಯಾಸವು ನಿನಗೆ ಸಾಧ್ಯವಾಗದೆ ಹೋದರೆ ಜ್ಞಾನಸಾಧನೆಯಲ್ಲಿ ತೊಡಗು. ಆದರೆ ಜ್ಞಾನಕ್ಕಿಂತ ಧ್ಯಾನವು ಉತ್ತಮ, ಧ್ಯಾನಕ್ಕಿಂತ ಕರ್ಮಫಲತ್ಯಾಗವು ಉತ್ತಮ. ಏಕೆಂದರೆ ಇಂತಹ ತ್ಯಾಗದಿಂದ ಮನಶ್ಶಾಂತಿಯನ್ನು ಪಡೆಯಬಹುದು.**

## ಭಾವಾರ್ಥ

ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ಭಕ್ತಿಸೇವೆಯಲ್ಲಿ ಎರಡು ವಿಧ. ನಿಯಂತ್ರಕ ತತ್ವಗಳ ರೀತಿ ಒಂದು. ಭಗವತ್ಪ್ರೇಮದಲ್ಲಿ ಪೂರ್ಣ ಆಸಕ್ತಿಯ ಮಾರ್ಗ ಮತ್ತೊಂದು. ಕೃಷ್ಣಪ್ರಜ್ಞೆಯ ತತ್ವಗಳನ್ನು ಅನುಸರಿಸಲು ಸಾಧ್ಯವಾಗದೆ ಹೋದವರು ಜ್ಞಾನವನ್ನು ಬೆಳೆಸಿಕೊಳ್ಳುವುದು ಉತ್ತಮ. ಏಕೆಂದರೆ ಜ್ಞಾನದಿಂದ ಮನುಷ್ಯನು ತನ್ನ ನಿಜವಾದ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬಲ್ಲ. ಕ್ರಮೇಣ ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಮನುಷ್ಯನು ತಾನೇ ಪರಮನು ಎಂಬ ಅರಿವನ್ನು ತಂದುಕೊಡುವ ಪ್ರಕ್ರಿಯೆಗಳಿವೆ. ಭಕ್ತಿಸೇವೆಯಲ್ಲಿ ನಿರತನಾಗಲು ಸಾಧ್ಯವಾಗದೇ ಹೋದವನಿಗೆ ಇಂತಹ ಧ್ಯಾನವೇ ಉತ್ತಮ. ಈ ರೀತಿ ಧ್ಯಾನಮಾಡಲಾರದವನಿಗೆ, ವೇದಸಾಹಿತ್ಯದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರಿಗೆ ನಿಗದಿಯಾದ ಕರ್ತವ್ಯಗಳನ್ನು ವಿಧಿಸಲಾಗಿದೆ. ಇವನ್ನು ಭಗವದ್ಗೀತೆಯ ಕಡೆಯ ಅಧ್ಯಾಯದಲ್ಲಿ ನಾವು ಕಾಣುತ್ತೇವೆ. ಏನೇ ಆಗಲಿ, ಮನುಷ್ಯನು ಕರ್ಮಫಲವನ್ನು ತ್ಯಾಗಮಾಡಬೇಕು. ಹೀಗೆಂದರೆ ಕರ್ಮಫಲವನ್ನು ಒಂದು ಒಳ್ಳೆಯ ಕಾರ್ಯಕ್ಕಾಗಿ ಬಳಸುವುದು ಎಂದು ಅರ್ಥ.

ಸಾರಾಂಶವೆಂದರೆ, ಅತ್ಯುನ್ನತ ಗುರಿಯಾದ ದೇವೋತ್ತಮ ಪರಮ ಪುರುಷನನ್ನು ಸೇರಲು ಎರಡು ಪ್ರಕ್ರಿಯೆಗಳಿವೆ. ಒಂದು ಪ್ರಕ್ರಿಯೆ, ಕ್ರಮಕ್ರಮವಾದ ಬೆಳವಣಿಗೆ. ಮತ್ತೊಂದು ನೇರವಾದದ್ದು. ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯನ್ನು ಮಾಡುವುದು ನೇರ ಮಾರ್ಗ; ಇನ್ನೊಂದು, ತನ್ನ ಕರ್ಮಗಳ ಫಲವನ್ನು ತ್ಯಜಿಸುವುದು. ಆಗ ಮನುಷ್ಯನು ಜ್ಞಾನದ ಹಂತಕ್ಕೆ, ಅನಂತರ ಧ್ಯಾನದ ಹಂತಕ್ಕೆ, ಅನಂತರ ಪರಮಾತ್ಮನ ಅರಿವಿನ ಹಂತಕ್ಕೆ, ಅನಂತರ ದೇವೋತ್ತಮ ಪರಮ ಪುರುಷನ ಹಂತಕ್ಕೆ ಬರಬಹುದು. ಮೆಟ್ಟಲು ಮೆಟ್ಟಲಾಗಿ ಏರುವ ಪ್ರಕ್ರಿಯೆಯನ್ನಾಗಲಿ ನೇರವಾದ ಮಾರ್ಗವನ್ನಾಗಲಿ ಮನುಷ್ಯ ಆರಿಸಿಕೊಳ್ಳಬಹುದು. ಪ್ರತಿಯೊಬ್ಬರಿಗೂ ನೇರವಾದ ಪ್ರಕ್ರಿಯೆ ಸಾಧ್ಯವಿಲ್ಲ; ಆದುದರಿಂದ ಪರೋಕ್ಷ ಪ್ರಕ್ರಿಯೆಯೂ ಒಳ್ಳೆಯದೇ. ಆದರೆ ಇದನ್ನು ಅರ್ಥಮಾಡಿಕೊಳ್ಳಬೇಕು. ಅರ್ಜುನನು ಆಗಲೇ ಪರಮ ಪ್ರಭುವಿನ ಭಕ್ತಿಸೇವೆಯ ಹಂತದಲ್ಲಿದ್ದಾನೆ. ಆದುದರಿಂದ ಪರೋಕ್ಷ ಪ್ರಕ್ರಿಯೆಯನ್ನು ಅವನಿಗೆ ಸಲಹೆ ಮಾಡುತ್ತಿಲ್ಲ. ಈ ಹಂತದಲ್ಲಿ ಇಲ್ಲದವರಿಗೆ ಪರೋಕ್ಷ ಪ್ರಕ್ರಿಯೆ. ಅವರು ವೈರಾಗ್ಯ, ಜ್ಞಾನ, ಧ್ಯಾನ ಮತ್ತು ಸಾಕ್ಷಾತ್ಕಾರದ ಕ್ರಮಕ್ರಮವಾದ ಪ್ರಕ್ರಿಯೆಯನ್ನು ಅನುಸರಿಸಬೇಕು. ಭಗವದ್ಗೀತೆಗೆ ಸಂಬಂಧಿಸಿದಂತೆ ನೇರಮಾರ್ಗಕ್ಕೆ ಮಹತ್ವವನ್ನು ನೀಡಲಾಗಿದೆ. ನೇರವಾದ ರೀತಿಯನ್ನು ಅನುಸರಿಸಿ ದೇವೋತ್ತಮ ಪರಮ ಪುರುಷನಾದ ಕೃಷ್ಣನಿಗೆ ಶರಣಾಗತರಾಗುವಂತೆ ಪ್ರತಿಯೊಬ್ಬರಿಗೂ ಉಪದೇಶ ಮಾಡಲಾಗಿದೆ.

## ಶ್ಲೋಕ 13-14

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಙ್ಕಾರಃ ಸಮದುಃಖಸುಖಃ ಕ್ಷಮೀ ॥೧೩॥

ಸನ್ತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿರ್ಯೋಮದ್ಭಕ್ತಃ ಸ ಮೇ ಪ್ರಿಯಃ ॥೧೪॥

**ಅದ್ವೇಷ್ಟಾ**—ಅಸೂಯೆಯಿಲ್ಲದ; **ಸರ್ವಭೂತಾನಾಮ್**—ಎಲ್ಲ ಜೀವಿಗಳ ವಿಚಾರದಲ್ಲಿ; **ಮೈತ್ರಃ**—ಸ್ನೇಹಭಾವವುಳ್ಳ; **ಕರುಣಃ**—ಕರುಣೆಯುಳ್ಳ; **ಏವ**—ಖಂಡಿತವಾಗಿಯೂ; **ಚ**—ಕೂಡ; **ನಿರ್ಮಮಃ**—ಒಡೆತನದ ಭಾವನೆಯಿಲ್ಲದ; **ನಿರಹಂಕಾರಃ**—ಅಹಂಕಾರವಿಲ್ಲದ; **ಸಮ**—ಸಮನಾದ; **ದುಃಖ**—ದುಃಖದಲ್ಲಿ; **ಸುಖಃ**—ಸುಖದಲ್ಲಿ; **ಕ್ಷಮೀ**—ಕ್ಷಮಾಗುಣ ಉಳ್ಳ; **ಸನ್ತುಷ್ಟಃ**—ತೃಪ್ತನಾದ; **ಸತತಮ್**—ಯಾವಾಗಲೂ; **ಯೋಗೀ**—ಭಕ್ತಿಯಲ್ಲಿ ನಿರತನಾದ; **ಯತ ಆತ್ಮಾ**—ಆತ್ಮ ಸಂಯಮಿಯಾದ; **ದೃಢ ನಿಶ್ಚಯಃ**—ದೃಢ ನಿರ್ಧಾರವುಳ್ಳ; **ಮಯಿ**—ನನ್ನಲ್ಲಿ; **ಅರ್ಪಿತ**—ತೊಡಗಿಸಿದ; **ಮನಃ**—ಮನಸ್ಸು; **ಬುದ್ಧಿಃ**—ಮತ್ತು ಬುದ್ಧಿಯುಳ್ಳ; **ಯಃ**—ಯಾವ; **ಮತ್‌ಭಕ್ತಃ**—ನನ್ನ ಭಕ್ತನು; **ಸಃ**—ಅವನು; **ಮೇ**—ನನಗೆ; **ಪ್ರಿಯಃ**—ಪ್ರೀತಿಪಾತ್ರನು.

## ಅನುವಾದ

**ಯಾರಿಗೆ ಅಸೂಯೆ ಇಲ್ಲವೋ, ಯಾರು ಎಲ್ಲ ಜೀವಿಗಳಿಗೆ ಸ್ನೇಹಿತನೋ, ತಾನು ಒಡೆಯನೆಂಬ ಭಾವನೆ ಇಲ್ಲದೆ ನಿರಹಂಕಾರನೋ, ಸುಖ ದುಃಖಗಳಲ್ಲಿ ಸಮಚಿತ್ತನೋ, ಕ್ಷಮಾಶೀಲನೋ, ಸದಾತೃಪ್ತನೋ, ಸಂತುಷ್ಟನೋ, ಆತ್ಮಸಂಯಮಿಯೋ, ದೃಢಚಿತ್ತದಿಂದ ಭಕ್ತಿಸೇವೆಯಲ್ಲಿ ನಿರತನೋ, ತನ್ನ ಮನಸ್ಸನ್ನೂ ಬುದ್ಧಿಯನ್ನೂ ನನ್ನಲ್ಲಿ ನಿಲ್ಲಿಸಿರುವನೋ ಅಂತಹ ಭಕ್ತನು ನನಗೆ ಬಹಳ ಪ್ರಿಯನಾದವನು.**

## ಭಾವಾರ್ಥ

ಶುದ್ಧ ಭಕ್ತಿಸೇವೆಯ ವಿಷಯಕ್ಕೆ ಮತ್ತೆ ಬಂದು ಪ್ರಭುವು ಈ ಎರಡು ಶ್ಲೋಕಗಳಲ್ಲಿ ಪರಿಶುದ್ಧ ಭಕ್ತನ ಆಧ್ಯಾತ್ಮಿಕ ಅರ್ಹತೆಗಳನ್ನು ವರ್ಣಿಸುತ್ತಿದ್ದಾನೆ. ಪರಿಶುದ್ಧ ಭಕ್ತನು ಯಾವುದೇ ಸನ್ನಿವೇಶದಲ್ಲಿ ಪ್ರಕ್ಷುಬ್ಧನಾಗುವುದಿಲ್ಲ. ಅವನಿಗೆ ಯಾರ ವಿಷಯದಲ್ಲಿಯೂ ಅಸೂಯೆ ಇಲ್ಲ. ಅವನು ತನ್ನ ಶತ್ರುವಿನ ಶತ್ರುವೂ ಅಲ್ಲ; "ನನ್ನ ಹಿಂದಿನ ಪಾಪಗಳಿಂದಲೇ ಈ ಮನುಷ್ಯನು ನನ್ನ ಶತ್ರುವಾಗಿ ನಡೆದುಕೊಳ್ಳುತ್ತಾನೆ. ಆದುದರಿಂದ ಪ್ರತಿಭಟಿಸುವುದಕ್ಕಿಂತ ಅನುಭವಿಸುವುದೇ ಉತ್ತಮ" ಎಂದು ಯೋಚಿಸುತ್ತಾನೆ. ಶ್ರೀಮದ್ಭಾಗವತದಲ್ಲಿ, (10.14.8) ಹೀಗೆ ಹೇಳಿದೆ — **ತತ್ ತೇऽನುಕಂಪಾಂ ಸುಸಮೀಕ್ಷಮಾಣೋ ಭುಂಜಾನ ಏವಾತ್ಮಕೃತಂ ವಿಪಾಕಮ್** — ಭಕ್ತನು ಸಂಕಟದಲ್ಲಿ ಅಥವಾ ಕಷ್ಟದಲ್ಲಿಇರುವಾಗಲೆಲ್ಲ ಅದು ತನ್ನ ಮೇಲೆ ಭಗವಂತನ ಕರುಣೆ ಎಂದು ಭಾವಿಸುತ್ತಾನೆ. "ನಾನು ಹಿಂದೆ ಮಾಡಿದ ಪಾಪಕರ್ಮಗಳ ದೆಸೆಯಿಂದ ಈಗ ಅನುಭವಿಸುತ್ತಿರುವುದಕ್ಕಿಂತ ಇನ್ನೂ ಬಹುವಾಗಿ ನಾನು ಸಂಕಟಪಡಬೇಕು. ನನಗೆ ಆಗಬೇಕಾದ ಶಿಕ್ಷೆ ಎಲ್ಲ ಆಗದಿರುವುದಕ್ಕೆ ಪರಮ ಪ್ರಭುವಿನ ಕರುಣೆಯೇ ಕಾರಣ. ದೇವೋತ್ತಮ ಪರಮ ಪುರುಷನ ದಯೆಯಿಂದ ನನಗೆ ಸ್ವಲ್ಪ ಮಾತ್ರ ಶಿಕ್ಷೆಯಾಗಿದೆ" — ಎಂದು ಯೋಚಿಸುತ್ತಾನೆ. ಆದುದರಿಂದ ಎಷ್ಟೇ ಸಂಕಟಮಯ ಸನ್ನಿವೇಶದಲ್ಲಿಯೂ ಅವನು ಶಾಂತನಾಗಿ, ನಿಶ್ಚಿಂತನಾಗಿ, ತಾಳ್ಮೆಯಿಂದ ಇರುತ್ತಾನೆ. ಭಕ್ತನು ಎಲ್ಲರ' ವಿಷಯದಲ್ಲಿಯೂ — ಶತ್ರುವಿನ ವಿಷಯದಲ್ಲಿ ಸಹ ದಯೆಯಿಂದ ನಡೆದುಕೊಳ್ಳುತ್ತಾನೆ. **ನಿರ್ಮಮ** ಎಂದರೆ ಭಕ್ತನು ದೇಹಕ್ಕೆ ಸಂಬಂಧಿಸಿದ ನೋವು ಮತ್ತು ಕಷ್ಟಗಳಿಗೆ ಹೆಚ್ಚು ಗಮನವನ್ನು ಕೊಡುವುದಿಲ್ಲ. ಇದಕ್ಕೆ ತಾನು ದೇಹವಲ್ಲ ಎಂದು ಅವನಿಗೆ ಸಂಪೂರ್ಣವಾಗಿ ತಿಳಿದಿದೆ ಎಂದರ್ಥ. ದೇಹದೊಡನೆ ಆತನು ತನ್ನನ್ನು ಗುರುತಿಸಿಕೊಳ್ಳುವುದಿಲ್ಲ; ಆದುದರಿಂದ ಅವನು ಅಹಂಕಾರದ

ಕಲ್ಪನೆಯಿಂದ ಮುಕ್ತನಾಗಿರುತ್ತಾನೆ ಮತ್ತು ಸುಖದುಃಖಗಳಲ್ಲಿ ಸಮಚಿತ್ತನಾಗಿರುತ್ತಾನೆ. ಆತನು ಸಹಿಷ್ಣುವಾಗಿರುತ್ತಾನೆ. ಪರಮ ಪ್ರಭುವಿನ ಕೃಪೆಯಿಂದ ಲಭ್ಯವಾದುದರಲ್ಲಿ ತೃಪ್ತಿಪಡೆದುಕೊಂಡಿರುತ್ತಾನೆ. ಬಹು ಕಷ್ಟದಿಂದ ಏನನ್ನಾದರೂ ಸಾಧಿಸಲು ಅವನು ಬಹಳ ಪ್ರಯತ್ನವನ್ನು ಮಾಡುವುದಿಲ್ಲ; ಆದುದರಿಂದ ಅವನು ಯಾವಾಗಲೂ ಸಂತೋಷಚಿತ್ತನಾಗಿರುತ್ತಾನೆ. ಅವನು ಪರಿಪೂರ್ಣಯೋಗಿ. ಏಕೆಂದರೆ ಅವನು ತನ್ನ ಗುರುವು ನೀಡಿದ ಆದೇಶಕ್ಕೆ ನಿಶ್ಚಲವಾಗಿ ನಿಷ್ಠನಾಗಿರುತ್ತಾನೆ, ಮತ್ತು ಅವನಿಗೆ ಇಂದ್ರಿಯ ಸಂಯಮವಿರುವುದರಿಂದ ಅವನು ದೃಢಚಿತ್ತದವನು. ಹುಸಿವಾದಗಳು ಅವನ ಮೇಲೆ ಯಾವುದೇ ಪ್ರಭಾವವನ್ನು ಬೀರಲಾರವು. ಏಕೆಂದರೆ ಭಕ್ತಿಸೇವೆಯ ನಿಶ್ಚಲ ದೃಢತೆಯಿಂದ ಯಾರೂ ಅವನನ್ನು ಕದಲಿಸಲಾರರು. ಕೃಷ್ಣನೇ ಶಾಶ್ವತ ಪ್ರಭು ಎಂದು ಅವನಿಗೆ ಸಂಪೂರ್ಣ ಅರಿವಿದೆ; ಆದುದರಿಂದ ಯಾರೂ ಅವನ ಮನಸ್ಸನ್ನು ಕಲಕಲಾರರು. ಈ ಎಲ್ಲ ಅರ್ಹತೆಗಳಿಂದ ಅವನಿಗೆ ತನ್ನ ಮನಸ್ಸು ಮತ್ತು ಬುದ್ಧಿಗಳೆರಡನ್ನೂ ಸಂಪೂರ್ಣವಾಗಿ ಪರಮ ಪ್ರಭುವಿನಲ್ಲಿ ನಿಲ್ಲಿಸಲು ಸಾಧ್ಯವಾಗುತ್ತದೆ. ಇಂತಹ ಭಕ್ತಿಸೇವೆಯ ಮಟ್ಟ ಬಹು ವಿರಳ ಎನ್ನುವುದು ನಿಜ. ಆದರೆ ಭಕ್ತನು ಭಕ್ತಿಸೇವೆಯ ನಿಯಂತ್ರಕ ತತ್ವಗಳನ್ನು ಅನುಸರಿಸುವುದರಿಂದ ಈ ಹಂತದಲ್ಲಿ ನೆಲೆಗೊಳ್ಳುತ್ತಾನೆ. ಅಲ್ಲದೆ, ಇಂತಹ ಭಕ್ತನು ತನಗೆ ಬಹು ಪ್ರಿಯನಾದವನು ಎಂದು ಪ್ರಭುವು ಹೇಳುತ್ತಾನೆ. ಏಕೆಂದರೆ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಆತನು ನಡೆಸುವ ಕಾರ್ಯಗಳಿಂದ ಪ್ರಭುವು ಯಾವಾಗಲೂ ಸುಪ್ರೀತನಾಗುತ್ತಾನೆ.

## ಶ್ಲೋಕ - 15

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ |**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ||೧೫||**

**ಯಸ್ಮಾತ್**—ಯಾರಿಂದ; **ನ ಉದ್ವಿಜತೇ**—ಕ್ಷೋಭೆಗೊಳ್ಳುವುದಿಲ್ಲವೋ; **ಲೋಕಃ**—ಜನರು; **ಲೋಕಾತ್**—ಜನರಿಂದ; **ನ ಉದ್ವಿಜತೇ**—ಉದ್ವಿಗ್ನನಾಗುವುದಿಲ್ಲವೋ; **ಚ**—ಕೂಡ; **ಯಃ**—ಯಾರು; **ಹರ್ಷ**—ಸಂತೋಷ; **ಅಮರ್ಷ**—ದುಃಖ; **ಭಯ**—ಹೆದರಿಕೆ; **ಉದ್ವೇಗೈಃ**—ಉದ್ವೇಗಗಳಿಂದ; **ಮುಕ್ತಃ**—ಮುಕ್ತನಾದವನು; **ಯಃ**—ಯಾರೋ; **ಸಃ**—ಅವನು; **ಚ**—ಕೂಡಾ; **ಮೇ**—ನನಗೆ; **ಪ್ರಿಯಃ**—ಬಹು ಪ್ರಿಯನು.

## ಅನುವಾದ

**ಯಾವ ವ್ಯಕ್ತಿಯಿಂದ ಯಾರೂ ಉದ್ವೇಗವನ್ನು ಪಡುವುದಿಲ್ಲವೋ, ಮತ್ತು ಆ ವ್ಯಕ್ತಿಯು ಯಾರಿಂದಲೂ ಉದ್ವೇಗವನ್ನು ಅನುಭವಿಸುವುದಿಲ್ಲವೋ, ಸುಖ ಮತ್ತು ದುಃಖಗಳಲ್ಲಿ ಭಯ ಮತ್ತು ಆತಂಕಗಳಲ್ಲಿ ಸಮಚಿತ್ತನಾಗಿರುತ್ತಾನೋ ಆತನು ನನಗೆ ಬಹು ಪ್ರಿಯನಾಗುತ್ತಾನೆ.**

## ಭಾವಾರ್ಥ

ಭಕ್ತನ ಇನ್ನೂ ಕೆಲವು ಅರ್ಹತೆಗಳನ್ನು ಇಲ್ಲಿ ವರ್ಣಿಸಿದೆ. ಇಂತಹ ಭಕ್ತನಿಂದ ಯಾರಿಗೂ ಕಷ್ಟ, ಆತಂಕ, ಭಯ ಅಥವಾ ಅತೃಪ್ತಿ ಉಂಟಾಗುವುದಿಲ್ಲ. ಭಕ್ತನು ಎಲ್ಲರ ವಿಷಯದಲ್ಲಿಯೂ

ದಯೆಯಿಂದ ನಡೆದುಕೊಳ್ಳುವುದರಿಂದ ಇತರರಿಗೆ ಆತಂಕವನ್ನುಂಟುಮಾಡುವಂತೆ ಅವನು ನಡೆದುಕೊಳ್ಳುವುದಿಲ್ಲ. ಆದರೆ ಇತರರು ಭಕ್ತನಿಗೆ ಆತಂಕವನ್ನುಂಟುಮಾಡಲು ಯತ್ನಿಸಿದರೆ ಆತನು ಕ್ಷೋಭೆಗೆ ಒಳಗಾಗುವುದಿಲ್ಲ. ಹೊರಗಿನ ಯಾವುದೇ ಕ್ಷೋಭೆಯಿಂದ ಅವನು ಪ್ರಕ್ಷುಬ್ಧನಾಗದಿರುವಂತೆ ಸಾಧನೆ ಮಾಡಿರುವುದಕ್ಕೆ ಪ್ರಭುವಿನ ಕೃಪೆಯೇ ಕಾರಣ. ವಾಸ್ತವವಾಗಿ, ಭಕ್ತನು ಸದಾ ಕೃಷ್ಣಪ್ರಜ್ಞೆಯಲ್ಲಿ ತನ್ಮಯನಾಗಿದ್ದು ಭಕ್ತಿಸೇವೆಯಲ್ಲಿ ನಿರತನಾಗಿರುವುದರಿಂದ ಇಂತಹ ಐಹಿಕ ಸನ್ನಿವೇಶಗಳಿಂದ ಅವನ ಮನಸ್ಸು ವಿಚಲಿತವಾಗುವುದಿಲ್ಲ. ಸಾಮಾನ್ಯವಾಗಿ ಪ್ರಾಪಂಚಿಕ ಸ್ವಭಾವದ ಮನುಷ್ಯನ ಇಂದ್ರಿಯ ತೃಪ್ತಿಗೆ ಮತ್ತು ದೇಹಕ್ಕೆ ಏನಾದರೂ ದೊರೆತಾಗ ಅವನಿಗೆ ಸಂತೋಷವಾಗುತ್ತದೆ. ಇತರರಿಗೆ ಇಂದ್ರಿಯ ತೃಪ್ತಿಗೆ ಏನೋ ದೊರೆತಿದೆ, ತನಗೆ ದೊರೆತಿಲ್ಲ ಎನ್ನುವುದನ್ನು ಕಂಡಾಗ ಅವನಿಗೆ ದುಃಖವಾಗುತ್ತದೆ, ಅಸೂಯೆಯಾಗುತ್ತದೆ. ವ್ಯಕ್ತಿಯು ಶತ್ರುವಿನಿಂದ ಪ್ರತೀಕಾರವನ್ನು ನಿರೀಕ್ಷಿಸುತ್ತಿರುವಾಗ ಭಯದ ಮನಸ್ಥಿತಿಯಲ್ಲಿರುತ್ತಾನೆ. ಏನನ್ನಾದರೂ ಯಶಸ್ವಿಯಾಗಿ ಕಾರ್ಯಗತ ಮಾಡಲು ಸಾಧ್ಯವಾಗದಿದ್ದಾಗ ಬೇಸರ ಪಡುತ್ತಾನೆ. ಈ ಎಲ್ಲ ಕ್ಷೋಭೆಯನ್ನೂ ಮೀರಿದ ಭಕ್ತನು ಯಾವಾಗಲೂ ಕೃಷ್ಣನಿಗೆ ಬಹು ಪ್ರಿಯನಾದವನು.

## ಶ್ಲೋಕ - 16

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ |**
**ಸರ್ವಾರಮ್ಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ||೧೬||**

**ಅನಪೇಕ್ಷಃ**—ತಟಸ್ಥನು; **ಶುಚಿಃ**—ಶುದ್ಧನು; **ದಕ್ಷಃ**—ಪರಿಣತನು; **ಉದಾಸೀನಃ**—ಉದಾಸೀನನು; **ಗತವ್ಯಥಃ**—ಸಕಲ ದುಃಖಗಳಿಂದ ಮುಕ್ತನು; **ಸರ್ವ ಆರಮ್ಭ**—ಎಲ್ಲ ಪ್ರಯತ್ನಗಳ; **ಪರಿತ್ಯಾಗೀ**—ತ್ಯಾಗಿಯು; **ಯಃ**—ಯಾರೋ; **ಮತ್‌ಭಕ್ತಃ**—ನನ್ನ ಭಕ್ತನು; **ಸಃ**—ಅವನು; **ಮೇ**—ನನಗೆ; **ಪ್ರಿಯಃ**—ಬಹಳ ಪ್ರಿಯನು.

## ಅನುವಾದ

**ಚಟುವಟಿಕೆಗಳ ಸಾಮಾನ್ಯ ನಡೆಯನ್ನು ಅವಲಂಬಿಸದಿರುವ, ಪರಿಶುದ್ಧನಾದ, ದಕ್ಷನಾದ, ಚಿಂತೆ ಇಲ್ಲದ, ಎಲ್ಲ ನೋವುಗಳಿಂದ ಮುಕ್ತನಾದ, ಯಾವ ಫಲಕ್ಕಾಗಿಯೂ ಶ್ರಮಪಡದ ಭಕ್ತನು ನನಗೆ ಬಹು ಪ್ರಿಯನಾದವನು.**

## ಭಾವಾರ್ಥ

ಭಕ್ತನಿಗೆ ಹಣವನ್ನು ನೀಡಲು ಯಾರಾದರೂ ಮುಂದೆ ಬರಬಹುದು. ಆದರೆ ಅವನು ಹಣಸಂಪಾದನೆಗಾಗಿ ಪ್ರಯತ್ನಪಡಬಾರದು. ಪರಮೋತ್ತಮನ ಕೃಪೆಯಿಂದ ತಾನಾಗಿಯೇ ಹಣವು ಒದಗಿ ಬಂದರೆ ಅವನ ಮನಸ್ಸು ಕದಡುವುದಿಲ್ಲ. ಸಹಜವಾಗಿ ಭಕ್ತನು ದಿನಕ್ಕೆ ಎರಡು ಬಾರಿ ಸ್ನಾನ ಮಾಡುತ್ತಾನೆ ಮತ್ತು ಭಕ್ತಿಸೇವೆಗಾಗಿ ಬೆಳಗ್ಗೆ ಬೇಗನೆ ಏಳುತ್ತಾನೆ. ಹೀಗೆ ಅವನು ಸಹಜವಾಗಿ ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಶುಚಿಯಾಗಿರುತ್ತಾನೆ. ಭಕ್ತನು ಯಾವಾಗಲೂ ದಕ್ಷ. ಏಕೆಂದರೆ ಅವನಿಗೆ ಬದುಕಿನ ಎಲ್ಲ ಕಾರ್ಯಗಳ ತಿರುಳು ತಿಳಿದಿರುತ್ತದೆ ಮತ್ತು ಪ್ರಮಾಣ ಶಾಸ್ತ್ರ

ಗ್ರಂಥಗಳಲ್ಲಿ ಪೂರ್ಣ ನಂಬಿಕೆ ಇರುತ್ತದೆ. ಭಕ್ತನು ಯಾರ ಪಕ್ಷವನ್ನೂ ವಹಿಸುವುದಿಲ್ಲ; ಆದುದರಿಂದ ಆತ ನಿರಾತಂಕವಾಗಿರುತ್ತಾನೆ. ಅವನಿಗೆ ನೋವೆಂಬುದಿಲ್ಲ. ಏಕೆಂದರೆ ಅವನು ಎಲ್ಲ ಉಪಾಧಿಗಳಿಂದ ಮುಕ್ತ; ದೇಹ ಬರಿಯ ಉಪಾಧಿಯಷ್ಟೇ ಎಂದು ಅವನಿಗೆ ಗೊತ್ತು, ಆದುದರಿಂದ ದೇಹಕ್ಕೆ ನೋವಾದರೂ ಅವನು ಮುಕ್ತ. ಪರಿಶುದ್ಧ ಭಕ್ತನು ಭಕ್ತಿಸೇವೆಯ ತತ್ವಗಳಿಗೆ ವಿರುದ್ಧವಾದುದೇನನ್ನೂ ಮಾಡಲು ಪ್ರಯತ್ನಿಸುವುದಿಲ್ಲ. ಉದಾಹರಣೆಗೆ, ಒಂದು ದೊಡ್ಡ ಕಟ್ಟಡದ ನಿರ್ಮಾಣಕ್ಕೆ ಹೆಚ್ಚಿನ ಶಕ್ತಿ ಅಗತ್ಯ; ಹೀಗೆ ಕಟ್ಟಡವನ್ನು ನಿರ್ಮಿಸುವುದು ತನ್ನ ಭಕ್ತಿಸೇವೆಯ ಮುನ್ನಡೆಗೆ ನೆರವಾಗಿ ತನಗೆ ಪ್ರಯೋಜನ ಆಗದಿದ್ದರೆ ಅವನು ಇಂತಹ ಕೆಲಸಕ್ಕೆ ಕೈಹಾಕುವುದಿಲ್ಲ. ಪ್ರಭುವಿಗಾಗಿ ಅವನು ಒಂದು ದೇವಸ್ಥಾನವನ್ನು ಕಟ್ಟಬಹುದು; ಅದಕ್ಕಾಗಿ ಎಲ್ಲ ಬಗೆಯ ಆತಂಕವನ್ನು ಪಡಬಹುದು; ಆದರೆ ತನ್ನ ನೆಂಟರಿಗಾಗಿ ಅವನು ದೊಡ್ಡ ಮನೆಯನ್ನು ಕಟ್ಟುವುದಿಲ್ಲ.

## ಶ್ಲೋಕ - 17

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಙ್ಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥೧೭॥**

**ಯಃ**—ಯಾರು; **ನ ಹೃಷ್ಯತಿ**—ಸಂತೋಷಪಡುವುದಿಲ್ಲವೋ; **ನ ದ್ವೇಷ್ಟಿ**—ದುಃಖಿಸುವುದಿಲ್ಲವೋ; **ನ ಶೋಚತಿ**—ಶೋಕಿಸುವುದಿಲ್ಲವೋ; **ನ ಕಾಙ್ಕ್ಷತಿ**—ಅಪೇಕ್ಷಿಸುವುದಿಲ್ಲವೋ; **ಶುಭ**— ಶುಭಕರವಾದ; **ಅಶುಭ**—ಅಶುಭಕರವಾದವುಗಳನ್ನೂ; **ಪರಿತ್ಯಾಗೀ**—ಪರಿತ್ಯಜಿಸುವ; **ಭಕ್ತಿಮಾನ್**—ಭಕ್ತನು; **ಯಃ**—ಯಾರೋ; **ಸಃ**—ಅವನು; **ಮೇ**—ನನಗೆ; **ಪ್ರಿಯಃ**—ಪ್ರೀತಿಪಾತ್ರನು.

## ಅನುವಾದ

**ಯಾರು ಹರ್ಷಪಡುವುದಿಲ್ಲವೋ ದುಃಖಪಡುವುದಿಲ್ಲವೋ, ಯಾರು ಶೋಕಿಸುವುದಿಲ್ಲವೋ ಬಯಸುವುದಿಲ್ಲವೋ, ಯಾರು ಶುಭಾಶುಭಗಳನ್ನು ಪರಿತ್ಯಾಗ ಮಾಡುತ್ತಾರೆಯೋ ಅಂತಹ ಭಕ್ತನು ನನಗೆ ಬಹು ಪ್ರಿಯನಾದವನು.**

## ಭಾವಾರ್ಥ

ಭಕ್ತನಾದವನಿಗೆ ಪ್ರಾಪಂಚಿಕ ಲಾಭದಿಂದ ಹರ್ಷವಿಲ್ಲ; ನಷ್ಟದಿಂದ ದುಃಖವಿಲ್ಲ. ಮಗನನ್ನೋ ಶಿಷ್ಯನನ್ನೋ ಪಡೆಯಬೇಕೆಂಬ ಬಲವಾದ ಆಕಾಂಕ್ಷೆ ಇಲ್ಲ. ಅವರನ್ನು ಪಡೆಯದಿದ್ದರೆ ದುಃಖವಿಲ್ಲ. ತನಗೆ ಪ್ರಿಯವಾದುದನ್ನು ಕಳೆದುಕೊಂಡರೆ ಆತನು ಶೋಕಿಸುವುದಿಲ್ಲ. ಹಾಗೆಯೇ ತಾನು ಬಯಸಿದ್ದನ್ನು ಪಡೆಯದಿದ್ದರೆ ಅವನಿಗೆ ಸಂಕಟವಿಲ್ಲ. ಎಲ್ಲ ಬಗೆಯ ಶುಭಾಶುಭಗಳು, ಪಾಪಕಾರ್ಯಗಳು ಎದುರಾದಾಗ ಅವನು ಅವನ್ನು ಮೀರುತ್ತಾನೆ. ಪರಮ ಪ್ರಭುವಿನ ತೃಪ್ತಿಗಾಗಿ ಅವನು ಎಲ್ಲ ಬಗೆಯ ಅಪಾಯಗಳನ್ನು ಸ್ವೀಕರಿಸಲು ಸಿದ್ಧನಾಗಿರುತ್ತಾನೆ. ಅವನ ಭಕ್ತಿಸೇವೆಗೆ ಅಡ್ಡಿ ಎನ್ನುವುದೇ ಇಲ್ಲ. ಇಂತಹ ಭಕ್ತನು ಕೃಷ್ಣನಿಗೆ ಬಹು ಪ್ರಿಯನಾದವನು.

## ಶ್ಲೋಕ 18-19

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ |**
**ಶೀತೋಷ್ಣಸುಖದುಃಖೇಷು ಸಮಃ ಸಙ್ಗವಿವರ್ಜಿತಃ ||೧೮||**

**ತುಲ್ಯನಿನ್ದಾಸ್ತುತಿರ್ಮೌನೀ ಸನ್ತುಷ್ಟೋ ಯೇನ ಕೇನಚಿತ್ |**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ||೧೯||**

**ಸಮಃ**—ಸಮಾನನು; **ಶತ್ರೌ**—ವೈರಿಗೆ; **ಚ**—ಕೂಡ; **ಮಿತ್ರೇ**—ಸ್ನೇಹಿತನಿಗೆ; **ಚ**—ಕೂಡ; **ತಥಾ** —ಹಾಗೆಯೇ; **ಮಾನ**—ಗೌರವ; **ಅಪಮಾನಯೋಃ**—ಅಗೌರವಗಳಲ್ಲಿ; **ಶೀತ**—ಶೈತ್ಯ; **ಉಷ್ಣ** —ಉಷ್ಣ; **ಸುಖ**—ಸಂತೋಷ; **ದುಃಖೇಷು**—ಮತ್ತು ದುಃಖಗಳಲ್ಲಿ; **ಸಮಃ**—ಸಮಚಿತ್ತನು; **ಸಙ್ಗವಿವರ್ಜಿತಃ** —ಸಕಲ ಸಹವಾಸಗಳಿಂದ ಮುಕ್ತನು; **ತುಲ್ಯ**—ಸಮಾನನು; **ನಿನ್ದಾ**—ನಿಂದೆ; **ಸ್ತುತಿಃ**—ಮತ್ತು ಸ್ತುತಿಗಳಲ್ಲಿ; **ಮೌನೀ**—ಮೌನವಾಗಿರುವವನು; **ಸನ್ತುಷ್ಟಃ**—ತೃಪ್ತನು; **ಯೇನ ಕೇನಚಿತ್**—ಯಾವುದರಿಂದಲೂ; **ಅನಿಕೇತಃ**—ನಿವಾಸವಿಲ್ಲದವನು; **ಸ್ಥಿರ**—ದೃಢವಾದ; **ಮತಿಃ**—ನಿರ್ಧಾರವುಳ್ಳವನು; **ಭಕ್ತಿಮಾನ್**—ಭಕ್ತಿನಿರತನು; **ಮೇ**—ನನಗೆ; **ಪ್ರಿಯಃ**—ಪ್ರಿಯನಾದ; **ನರಃ**—ಮನುಷ್ಯನು.

## ಅನುವಾದ

**ಮಿತ್ರರು ಶತ್ರುಗಳ ವಿಷಯದಲ್ಲಿ ಒಂದೇ ರೀತಿ ಇರುವವನೂ, ಮಾನಾಪಮಾನಗಳಲ್ಲಿ, ಶೀತೋಷ್ಣಗಳಲ್ಲಿ, ಕೀರ್ತಿ ಅಪಕೀರ್ತಿಗಳಲ್ಲಿ ಸಮಚಿತ್ತನಾಗಿರುವವನೂ, ಕಲ್ಮಷವನ್ನುಂಟುಮಾಡುವ ಎಲ್ಲ ಸಹವಾಸಗಳಿಂದ ಮುಕ್ತನೂ, ಸದಾ ಮೌನಿಯಾಗಿದ್ದು ಅಲ್ಪ ತೃಪ್ತನೂ, ವಾಸಸ್ಥಳದಲ್ಲಿ ಆಸಕ್ತಿ ಇಲ್ಲದವನೂ, ಸ್ಥಿರಮತಿಯೂ, ಭಕ್ತಿಸೇವೆಯಲ್ಲಿ ನಿರತನೂ ಆದವನು ನನಗೆ ಬಹು ಪ್ರಿಯನಾದವನು.**

## ಭಾವಾರ್ಥ

ಭಕ್ತನು ಯಾವಾಗಲೂ ಕೆಟ್ಟ ಸಹವಾಸದಿಂದ ದೂರ ಇರುತ್ತಾನೆ. ಒಮ್ಮೊಮ್ಮೆ ಜನ ಹೊಗಳುತ್ತಾರೆ; ಒಮ್ಮೊಮ್ಮೆ ತೆಗಳುತ್ತಾರೆ. ಮನುಷ್ಯ ಸವಜದ ಸ್ವಭಾವವೇ ಹಾಗೆ. ಆದರೆ ಭಕ್ತನು ಯಾವಾಗಲೂ ಕೃತಕವಾದ ಕೀರ್ತಿ ಅಪಕೀರ್ತಿ, ಸುಖದುಃಖಗಳನ್ನು ಮೀರಿರುತ್ತಾನೆ. ಅವನಿಗೆ ಬಹು ತಾಳ್ಮೆ. ಆತನು ಕೃಷ್ಣನಿಗೆ ಸಂಬಂಧಿಸಿದ ವಿಷಯಗಳನ್ನು ಬಿಟ್ಟು ಬೇರೇನೂ ಮಾತನಾಡುವುದಿಲ್ಲ; ಆದುದರಿಂದ ಅವನನ್ನು ಮೌನಿ ಎಂದು ಕರೆದಿದೆ. ಮೌನಿ ಎಂದರೆ ಮನುಷ್ಯ ಮಾತನಾಡಲೇಬಾರದು ಎಂದು ಅರ್ಥವಲ್ಲ; ಮೌನಿ ಎಂದರೆ ಮನುಷ್ಯ ಅಸಂಬದ್ಧವಾಗಿ ಮಾತನಾಡಬಾರದು ಎಂದು ಅರ್ಥ. ಮುಖ್ಯವಾದ ಸಂಗತಿಗಳನ್ನು ಕುರಿತು ಮಾತ್ರ ಮಾತನಾಡಬೇಕು; ಭಕ್ತನ ಬಹು ಮುಖ್ಯ ಮಾತೆಂದರೆ ಪರಮ ಪ್ರಭುವಿಗಾಗಿ. ಎಲ್ಲ ಸ್ಥಿತಿಗಳಲ್ಲಿಯೂ ಭಕ್ತನು ಸಂತೋಷವಾಗಿರುತ್ತಾನೆ. ಒಮ್ಮೆ ಬಹು ರುಚಿಯಾದ ಭಕ್ಷ್ಯಗಳು ದೊರೆಯಬಹುದು; ಒಮ್ಮೊಮ್ಮೆ ದೊರೆಯದೆ ಹೋಗಬಹುದು. ಆದರೆ ಅವನು ತೃಪ್ತನೇ. ವಾಸಸ್ಥಳದ ವಿಷಯಕ್ಕೆ ಆತ ಗಮನ ಕೊಡುವುದಿಲ್ಲ. ಕೆಲವೊಮ್ಮೆ ಆತ ಒಂದು ಮರದ ಕೆಳಗೆ ವಾಸಿಸಬಹುದು. ಕೆಲವೊಮ್ಮೆ ಅರಮನೆಯಂತಹ ಕಟ್ಟಡದಲ್ಲಿ ವಾಸಿಸಬಹುದು; ಅವನಿಗೆ ಎರಡರಲ್ಲಿಯೂ ಆಕರ್ಷಣೆ ಇಲ್ಲ. ಆತನನ್ನು ಸ್ಥಿರ ಎಂದು ಕರೆದಿದೆ. ಏಕೆಂದರೆ ಆತನು

ಸಂಕಲ್ಪದಲ್ಲಿ ಮತ್ತು ಜ್ಞಾನದಲ್ಲಿ ನಿಶ್ಚಲ. ಭಕ್ತನ ಅರ್ಹತೆಗಳ ವರ್ಣನೆಯಲ್ಲಿ ಸ್ವಲ್ಪಮಟ್ಟಿನ ಪುನರಾವೃತ್ತಿಯನ್ನು ನಾವು ಕಾಣಬಹುದು. ಆದರೆ ಇದರ ಉದ್ದೇಶ ಭಕ್ತನು ಈ ಎಲ್ಲ ಅರ್ಹತೆಗಳನ್ನು ಪಡೆದುಕೊಳ್ಳಬೇಕೆಂದು ಒತ್ತಿ ಹೇಳುವುದು. ಸರಿಯಾದ ಅರ್ಹತೆಗಳಿಲ್ಲದ ಮನುಷ್ಯನು ಪರಿಶುದ್ಧ ಭಕ್ತನಾಗಲಾರ. **ಹರಾವಭಕ್ತಸ್ಯ ಕುತೋ ಮಹದ್‌ಗುಣಾಃ** ಭಕ್ತನಲ್ಲದವನಿಗೆ ಒಳ್ಳೆಯ ಅರ್ಹತೆ ಇರುವುದಿಲ್ಲ. ಭಕ್ತನೆಂದು ಗುರುತಿಸಲ್ಪಡಬೇಕೆಂದು ಬಯಸುವವನು ಒಳ್ಳೆಯ ಅರ್ಹತೆಗಳನ್ನು ಬೆಳೆಸಿಕೊಳ್ಳಬೇಕು. ಈ ಅರ್ಹತೆಗಳನ್ನು ಗಳಿಸಿಕೊಳ್ಳಲು ಅವನು ಪ್ರತ್ಯೇಕವಾಗಿ ಶ್ರಮಿಸುವುದಿಲ್ಲ; ಆದರೆ ಕೃಷ್ಣಪ್ರಜ್ಞೆಯಲ್ಲಿ ನಿರತನಾಗಿರುವುದು ಮತ್ತು ಭಕ್ತಿಸೇವೆ ಇವು ಸಹಜವಾಗಿ ಅವನು ಆ ಅರ್ಹತೆಗಳನ್ನು ಬೆಳೆಸಿಕೊಳ್ಳಲು ನೆರವಾಗುತ್ತವೆ.

## ಶ್ಲೋಕ - 20

**ಯೇ ತು ಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ |**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ||೨೦||**

**ಯೇ**—ಯಾರು; **ತು**—ಆದರೆ; **ಧರ್ಮ**—ಧರ್ಮದ; **ಅಮೃತಮ್**—ಅಮೃತವನ್ನು; **ಇದಮ್**—ಈ; **ಯಥಾ**—ಹಾಗೆಯೇ; **ಉಕ್ತಮ್**—ಹೇಳಲಾದ; **ಪರ್ಯುಪಾಸತೇ**—ಸಂಪೂರ್ಣವಾಗಿ ನಿರತರಾಗುವ; **ಶ್ರದ್ದಧಾನಾಃ**—ಶ್ರದ್ಧೆಯಿಂದ; **ಮತ್ ಪರಮಾಃ**—ನನ್ನನ್ನು ಪರಮ ಪ್ರಭುವೆಂದು, ಸರ್ವಸ್ವವೆಂದು ಸ್ವೀಕರಿಸುವ; **ಭಕ್ತಾಃ**—ಭಕ್ತರೋ; **ತೇ**—ಅವರು; **ಅತೀವ**—ತುಂಬಾ; **ಮೇ**—ನನಗೆ; **ಪ್ರಿಯಾಃ**—ಪ್ರೀತಿಪಾತ್ರರು.

## ಅನುವಾದ

**ಯಾರು ಭಕ್ತಿಸೇವೆಯ ಈ ಅಮೃತಮಾರ್ಗವನ್ನು ಹಿಡಿದು ಶ್ರದ್ಧೆಯಿಂದ ನನ್ನನ್ನೇ ಪರಮ ಗುರಿಯನ್ನಾಗಿ ಮಾಡಿಕೊಳ್ಳುವರೋ ಅವರು ನನಗೆ ಬಹು ಬಹು ಪ್ರಿಯರು.**

## ಭಾವಾರ್ಥ

ಈ ಅಧ್ಯಾಯದಲ್ಲಿ ಎರಡನೆಯ ಶ್ಲೋಕದಿಂದ ಕಡೆಯವರೆಗೆ — **ಮಯ್ಯಾವೇಶ್ಯ ಮನೋ ಯೇ ಮಾಮ್** ("ನನ್ನಲ್ಲಿ ಮನಸ್ಸನ್ನು ಸ್ಥಿರಗೊಳಿಸಿ") ಎಂಬಲ್ಲಿಂದ **ಯೇ ತು ಧರ್ಮಾಮೃತಮಿದಮ್** (ನಿತ್ಯ ನಿರತತೆಯ ಈ ಧರ್ಮ) ವರೆಗೆ ಪರಮ ಪ್ರಭುವು ಆತನ ಬಳಿಸಾರಲು ಬೇಕಾದ ಅಲೌಕಿಕ ಸೇವೆಯ ಪ್ರಕ್ರಿಯೆಯನ್ನು ವಿವರಿಸಿದ್ದಾನೆ. ಇಂತಹ ಪ್ರಕ್ರಿಯೆಗಳು ಪ್ರಭುವಿಗೆ ಬಹು ಪ್ರಿಯವಾದವು. ಅವುಗಳಲ್ಲಿ ನಿರತರಾದವರನ್ನು ಅವನು ಸ್ವೀಕರಿಸುತ್ತಾನೆ. ನಿರಾಕಾರ ಬ್ರಹ್ಮನ ಮಾರ್ಗದಲ್ಲಿ ನಿರತನಾದವನು, ದೇವೋತ್ತಮ ಪರಮ ಪುರುಷನ ವೈಯಕ್ತಿಕ ಸೇವೆಯಲ್ಲಿ ನಿರತನಾದವನು — ಇವರಿಬ್ಬರಲ್ಲಿ ಯಾರು ಉತ್ತಮ ಎನ್ನುವ ಪ್ರಶ್ನೆಯನ್ನು ಅರ್ಜುನನು ಎತ್ತಿದ; ಪ್ರಭುವು ಅವನಿಗೆ ಎಷ್ಟು ಸ್ಪಷ್ಟವಾಗಿ ಉತ್ತರಕೊಟ್ಟನೆಂದರೆ, ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ದೇವೋತ್ತಮ ಪರಮ ಪುರುಷನ ಭಕ್ತಿಸೇವೆಯೇ ಎಲ್ಲ ಪ್ರಕ್ರಿಯೆಗಳಲ್ಲಿ ಅತಿ ಶ್ರೇಷ್ಠವಾದದ್ದು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಒಳ್ಳೆಯ ಸಹವಾಸದಿಂದ ಮನುಷ್ಯನು

ಪರಿಶುದ್ಧ ಭಕ್ತಿಸೇವೆಯಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಾನೆ. ಇದರಿಂದ ಒಬ್ಬ ಯೋಗ್ಯ ಗುರುವನ್ನು ಸ್ವೀಕರಿಸುತ್ತಾನೆ. ಅವನ ಉಪದೇಶ ಕೇಳಿ, ಸಂಕೀರ್ತನೆ ಮಾಡಿ, ಶ್ರದ್ಧೆಯಿಂದ, ಆಸಕ್ತಿಯಿಂದ ಮತ್ತು ಭಕ್ತಿಯಿಂದ ಭಕ್ತಿಸೇವೆಯ ನಿಯಂತ್ರಕ ತತ್ವಗಳನ್ನು ಆಚರಿಸಲು ಪ್ರಾರಂಭಿಸುತ್ತಾನೆ. ಹೀಗೆ ಪ್ರಭುವಿನ ದಿವ್ಯಸೇವೆಯಲ್ಲಿ ನಿರತನಾಗುತ್ತಾನೆ ಎಂದು ಈ ಅಧ್ಯಾಯದಲ್ಲಿ ನಿರ್ಣಯಿಸಿದೆ ಮತ್ತು ಆ ಮಾರ್ಗವನ್ನು ಸಮರ್ಥಿಸಿದೆ. ಆದುದರಿಂದ ಆತ್ಮ ಸಾಕ್ಷಾತ್ಕಾರಕ್ಕೆ, ದೇವೋತ್ತಮ ಪರಮ ಪುರುಷನನ್ನು ಸೇರುವುದಕ್ಕೆ ಭಕ್ತಿಸೇವೆಯೊಂದೇ ಪರಿಪೂರ್ಣ ಮಾರ್ಗ ಎನ್ನುವುದರಲ್ಲಿ ಸಂಶಯವಿಲ್ಲ. ಈ ಅಧ್ಯಾಯದಲ್ಲಿ ಹೇಳಿರುವಂತೆ, ಪರಮ ಪರಿಪೂರ್ಣ ಸತ್ಯದ ನಿರಾಕಾರ ಪರಿಕಲ್ಪನೆಯನ್ನು ಮನುಷ್ಯನು ಆತ್ಮಸಾಕ್ಷಾತ್ಕಾರಕ್ಕಾಗಿ ತನ್ನನ್ನು ಅರ್ಪಿಸಿಕೊಳ್ಳುವವರೆಗೆ ಸಲಹೆ ಮಾಡಿದೆ. ಎಂದರೆ, ಪರಿಶುದ್ಧ ಭಕ್ತನ ಸಹವಾಸವು ದೊರೆಯುವವರೆಗೆ ನಿರಾಕಾರ ಪರಿಕಲ್ಪನೆಯು ಸಹಾಯಕವಾಗಬಹುದು. ಪರಮ ಸತ್ಯದ ನಿರಾಕಾರ ಪರಿಕಲ್ಪನೆಯಲ್ಲಿ ಮನುಷ್ಯನು ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುತ್ತಾನೆ. ಧ್ಯಾನ ಮಾಡುತ್ತಾನೆ, ಮತ್ತು ಚೇತನ ಹಾಗೂ ಜಡವಸ್ತುವನ್ನು ಅರಿಯಲು ಜ್ಞಾನವನ್ನು ಬೆಳೆಸಿಕೊಳ್ಳುತ್ತಾನೆ. ಪರಿಶುದ್ಧ ಭಕ್ತನ ಸಹವಾಸವು ದೊರೆಯುವವರೆಗೆ ಇದು ಅಗತ್ಯ. ಸುದೈವದಿಂದ ಕೃಷ್ಣಪ್ರಜ್ಞೆಯಲ್ಲಿ, ಪರಿಶುದ್ಧ ಭಕ್ತಿಸೇವೆಯಲ್ಲಿ ತೊಡಗಲು ಮನುಷ್ಯನು ನಿರ್ಧರಿಸಿದರೆ ಆತನು ಆತ್ಮಸಾಕ್ಷಾತ್ಕಾರದಲ್ಲಿ ಹೆಜ್ಜೆಹೆಜ್ಜೆಯಾಗಿ ಉತ್ತಮಗೊಳ್ಳುತ್ತ ಹೋಗುವ ಅಗತ್ಯವಿಲ್ಲ. ಭಗವದ್ಗೀತೆಯ ಮಧ್ಯದ ಆರು ಅಧ್ಯಾಯಗಳಲ್ಲಿ ವರ್ಣಿಸಿದಂತೆ ಭಕ್ತಿಸೇವೆಯು ಇನ್ನೂ ಹಿತಕರ. ದೇಹ ಆತ್ಮಗಳನ್ನು ಒಟ್ಟಿಗಿರಿಸಲು ಮನುಷ್ಯ ಯೋಚಿಸಬೇಕಾಗಿಲ್ಲ. ಏಕೆಂದರೆ ಪ್ರಭುವಿನ ಕೃಪೆಯಿಂದ ಎಲ್ಲವೂ ತಂತಾನೇ ಆಗುತ್ತದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಭಕ್ತಿಸೇವೆ" ಎಂಬ ಹನ್ನೆರಡನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 13

# ಪ್ರಕೃತಿ, ಪುರುಷ ಹಾಗೂ ಪ್ರಜ್ಞೆ

## ಶ್ಲೋಕ 1-2

**ಅರ್ಜುನ ಉವಾಚ**

**ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ |**
**ಏತದ್ ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ||೧||**

**ಶ್ರೀಭಗವಾನುವಾಚ**

**ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ |**
**ಏತದ್ ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ||೨||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಪ್ರಕೃತಿಮ್**—ಪ್ರಕೃತಿಯನ್ನು; **ಪುರುಷಮ್**—ಭೋಕ್ತಾರನನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಕ್ಷೇತ್ರಮ್**—ಕ್ಷೇತ್ರವನ್ನೂ; **ಕ್ಷೇತ್ರಜ್ಞಮ್**—ಕ್ಷೇತ್ರವನ್ನು ತಿಳಿದವನನ್ನೂ; **ಏವ**—ಖಂಡಿತವಾಗಿಯೂ; **ಚ**—ಕೂಡ; **ಏತತ್**—ಈ ಎಲ್ಲವನ್ನೂ; **ವೇದಿತುಮ್**—ತಿಳಿದುಕೊಳ್ಳಲು; **ಇಚ್ಛಾಮಿ**—ಇಚ್ಛಿಸುತ್ತೇನೆ; **ಜ್ಞಾನಮ್**—ಜ್ಞಾನವನ್ನು; **ಜ್ಞೇಯಮ್**—ಜ್ಞಾನದ ವಿಷಯವನ್ನೂ; **ಚ**—ಕೂಡ; **ಕೇಶವ**—ಕೃಷ್ಣನೇ.

**ಶ್ರೀಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಇದಮ್**—ಈ; **ಶರೀರಮ್**—ದೇಹವನ್ನು; **ಕೌನ್ತೇಯ**—ಕುಂತೀಪುತ್ರನೇ; **ಕ್ಷೇತ್ರಮ್**—ಕ್ಷೇತ್ರವು; **ಇತಿ**—ಎಂದು; **ಅಭಿಧೀಯತೇ**—ಕರೆಯಲಾಗಿದೆ; **ಏತತ್**—ಇದನ್ನು; **ಯಃ**—ಯಾರು; **ವೇತ್ತಿ**—ತಿಳಿಯುತ್ತಾರೋ; **ತಮ್**—ಅವನನ್ನು; **ಪ್ರಾಹುಃ**—ಕರೆಯಲಾಗಿದೆ; **ಕ್ಷೇತ್ರಜ್ಞಃ**—ಕ್ಷೇತ್ರವನ್ನು ತಿಳಿದವನು; **ಇತಿ**—ಎಂದು; **ತತ್ ವಿದಃ**—ಇದನ್ನು ತಿಳಿದವರಿಂದ.

## ಅನುವಾದ

**ಅರ್ಜುನನು ಹೇಳಿದನು — ಪ್ರೀತಿಯ ಕೃಷ್ಣನೆ, ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ ಮತ್ತು ಜ್ಞಾನದ ಗುರಿ ಇವನ್ನು ತಿಳಿದುಕೊಳ್ಳಲು ಬಯಸುತ್ತೇನೆ.**

**ದೇವೋತ್ತಮ ಪರಮ ಪುರುಷನು ಹೇಳಿದನು — ಕೌಂತೇಯನೇ, ಈ ದೇಹವನ್ನು ಕ್ಷೇತ್ರವೆಂದೂ, ದೇಹವನ್ನು ತಿಳಿದವನನ್ನು ಕ್ಷೇತ್ರಜ್ಞ ಎಂದೂ ಕರೆಯುತ್ತಾರೆ.**

## ಭಾವಾರ್ಥ

**ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ,** ಜ್ಞಾನ ಮತ್ತು ಜ್ಞಾನದ ಗುರಿ ಇವುಗಳ ವಿಷಯದಲ್ಲಿ

ಅರ್ಜುನನಿಗೆ ಕುತೂಹಲವಿತ್ತು. ಇವನ್ನು ಕುರಿತು ಅವನು ಪ್ರಶ್ನಿಸಿದಾಗ, ಈ ದೇಹಕ್ಕೆ ಕ್ಷೇತ್ರ ಎಂದು ಹೆಸರು, ಈ ದೇಹವನ್ನು ತಿಳಿದವನಿಗೆ ಕ್ಷೇತ್ರಜ್ಞ ಎಂದು ಹೆಸರು ಎಂದು ಕೃಷ್ಣನು ಹೇಳಿದ. ಬದ್ಧ ಆತ್ಮಕ್ಕೆ ಚಟುವಟಿಕೆಗಳ ಕ್ಷೇತ್ರವು ದೇಹ. ಬದ್ಧ ಆತ್ಮನು ಐಹಿಕ ಅಸ್ತಿತ್ವದಲ್ಲಿ ಸಿಕ್ಕಿಬಿದ್ದಿದ್ದಾನೆ. ಆತನು ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸಲು ಎಷ್ಟರ ಮಟ್ಟಿಗೆ ಸಾಧ್ಯವಾದರೆ ಅಷ್ಟರಮಟ್ಟಿಗೆ ಚಟುವಟಿಕೆಯ ಕ್ಷೇತ್ರ ಆತನಿಗೆ ಲಭ್ಯವಾಗುತ್ತದೆ. ಈ ಕ್ಷೇತ್ರವು ದೇಹ. ದೇಹ ಎಂದರೇನು? ದೇಹವು ಇಂದ್ರಿಯಗಳಿಂದ ಆಗಿದೆ. ಬದ್ಧ ಆತ್ಮವು ಇಂದ್ರಿಯತೃಪ್ತಿಯನ್ನು ಬಯಸುತ್ತದೆ. ಒಂದಿಷ್ಟು ತೃಪ್ತಿಯನ್ನು ಪಡೆಯಲು ಶಕ್ತಿ ಇದ್ದಮಟ್ಟಿಗೆ ಆತನಿಗೆ ದೇಹವನ್ನು ಅಥವಾ ಚಟುವಟಿಕೆಗಳ ಕ್ಷೇತ್ರವನ್ನು ಕೊಡಲಾಗುತ್ತದೆ. ಆದುದರಿಂದ ದೇಹಕ್ಕೆ **ಕ್ಷೇತ್ರ**, ಅಥವಾ ಬದ್ಧ ಆತ್ಮದ ಚಟುವಟಿಕೆಗಳಿಗೆ ಬಯಲು ಎಂದು ಹೆಸರು. ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವವನನ್ನು ಕ್ಷೇತ್ರಜ್ಞ — ಕ್ಷೇತ್ರವನ್ನು ಬಲ್ಲವನು — ಎಂದು ಕರೆಯುತ್ತಾರೆ. ಕ್ಷೇತ್ರ ಮತ್ತು ಕ್ಷೇತ್ರಜ್ಞ, ದೇಹ ಮತ್ತು ದೇಹವನ್ನು ಬಲ್ಲವನು ಇವರಲ್ಲಿ ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಅಷ್ಟೇನೂ ಕಷ್ಟವಲ್ಲ. ಬಾಲ್ಯದಿಂದ ಮುಪ್ಪಿನವರೆಗೆ ತನ್ನ ದೇಹದಲ್ಲಿ ಎಷ್ಟೋ ಬದಲಾವಣೆಗಳಾಗುತ್ತವೆ. ಇಷ್ಟಾದರೂ ತಾನು ಅದೇ ವ್ಯಕ್ತಿಯಾಗಿ ಉಳಿಯುತ್ತೇನೆ ಎನ್ನುವುದನ್ನು ಯಾರಾದರೂ ಯೋಚಿಸಬಹುದು. ಹೀಗೆ ಕ್ಷೇತ್ರಜ್ಞನಿಗೂ ವಾಸ್ತವವಾಗಿ ಚಟುವಟಿಕೆಗಳ ಕ್ಷೇತ್ರಕ್ಕೂ ವ್ಯತ್ಯಾಸವಿದೆ. ಜೀವಂತ ಬದ್ಧ ಆತ್ಮನು ತಾನು ದೇಹದಿಂದ ಭಿನ್ನನಾದವನು ಎಂದು ಅರ್ಥ ಮಾಡಿಕೊಳ್ಳಬಲ್ಲ. ಜೀವಿಯು ಪ್ರಾರಂಭದಲ್ಲಿ — **ದೇಹಿನೋಽಸ್ಮಿನ್** — ಜೀವಿಯು ದೇಹದೊಳಗಿದ್ದಾನೆ ಮತ್ತು ದೇಹವು ಶೈಶವದಿಂದ ಬಾಲ್ಯ, ಯೌವನ, ಮುಪ್ಪು ಹೀಗೆ ಬದಲಾಗುತ್ತಿರುತ್ತದೆ ಎಂದು ವರ್ಣಿಸಿದೆ. ಒಡೆಯನು ಸ್ಪಷ್ಟವಾಗಿ **ಕ್ಷೇತ್ರಜ್ಞ**. ಒಮ್ಮೊಮ್ಮೆ ನಾವು, 'ನಾನು ಸುಖವಾಗಿದ್ದೇನೆ', 'ನಾನೊಬ್ಬ ಗಂಡಸು', 'ನಾನು ಹೆಂಗಸು', 'ನಾನು ನಾಯಿ', 'ನಾನು ಬೆಕ್ಕು', ಎಂದು ಯೋಚಿಸುತ್ತೇವೆ. ಇವು ಕ್ಷೇತ್ರಜ್ಞನ ದೇಹದ ಹೆಸರುಗಳು. ಆದರೆ ಕ್ಷೇತ್ರಜ್ಞನು ದೇಹದಿಂದ ಭಿನ್ನನಾದವನು. ನಾವು — ನಮ್ಮ ಬಟ್ಟೆ ಮೊದಲಾದ — ಹಲವು ವಸ್ತುಗಳನ್ನು ಬಳಸಬಹುದಾದರೂ ಬಳಸಿದ ವಸ್ತುಗಳಿಂದ ನಾವು ಬೇರೆ ಎಂದು ನಮಗೆ ಗೊತ್ತು. ಹಾಗೆಯೇ ಸ್ವಲ್ಪ ಯೋಚಿಸಿದರೆ ನಾವು ದೇಹದಿಂದ ಬೇರೆ ಎಂದು ಅರ್ಥವಾಗುತ್ತದೆ. ನಾನು ಅಥವಾ ನೀವು ಅಥವಾ ದೇಹದ ಯಜಮಾನರಾದವರು **ಕ್ಷೇತ್ರಜ್ಞರು**, ಚಟುವಟಿಕೆಗಳ ಕ್ಷೇತ್ರವನ್ನು ಬಲ್ಲವರು. ದೇಹವು ಕ್ಷೇತ್ರ, ಚಟುವಟಿಕೆಗಳ ವಲಯ.

ಭಗವದ್ಗೀತೆಯ ಮೊದಲ ಆರು ಅಧ್ಯಾಯಗಳಲ್ಲಿ ಕ್ಷೇತ್ರಜ್ಞನನ್ನೂ (ಜೀವಿ) ಅವನು ಪರಮ ಪ್ರಭುವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವ ಸ್ಥಾನವನ್ನೂ ವರ್ಣಿಸಿದೆ. ಭಗವದ್ಗೀತೆಯ ಮಧ್ಯದ ಆರು ಅಧ್ಯಾಯಗಳಲ್ಲಿ ದೇವೋತ್ತಮ ಪರಮ ಪುರುಷನ ಭಕ್ತಿಸೇವೆಯ ವಿಷಯದಲ್ಲಿ ವ್ಯಕ್ತಿಗತ ಆತ್ಮನಿಗೂ ಪರಮಾತ್ಮನಿಗೂ ಇರುವ ಸಂಬಂಧವನ್ನು ವರ್ಣಿಸಿದೆ. ದೇವೋತ್ತಮ ಪರಮ ಪುರುಷನ ಉನ್ನತ ಸ್ಥಾನವನ್ನೂ, ವ್ಯಕ್ತಿಗತ ಆತ್ಮನ ಕೆಳಗಿನ ಸ್ಥಾನವನ್ನೂ, ಈ ಅಧ್ಯಾಯಗಳಲ್ಲಿ ಖಚಿತವಾಗಿ ವಿವರಿಸಿದೆ. ಜೀವಿಗಳು ಎಲ್ಲ ಸನ್ನಿವೇಶದಲ್ಲಿಯೂ ಅಧೀನರು; ತಮ್ಮ ವಿಸ್ಮರಣೆಯಿಂದ ಅವರು ನೋವನ್ನು ಅನುಭವಿಸುತ್ತಿದ್ದಾರೆ. ಪುಣ್ಯಕಾರ್ಯಗಳಿಂದ ಅವರಿಗೆ ಜ್ಞಾನೋದಯವಾದಾಗ ಅವರು ಬೇರೆ ಬೇರೆ ಸ್ಥಿತಿಗಳಿಂದ ಪರಮ ಪ್ರಭುವಿನ ಬಳಿಗೆ ಹೋಗುತ್ತಾರೆ. ನೋವಿನಲ್ಲಿರುವವರು, ಹಣದ ಅಗತ್ಯವಿರುವವರು, ಕುತೂಹಲಿಗಳು ಮತ್ತು ಜ್ಞಾನದ

ಅನ್ವೇಷಣೆಯಲ್ಲಿರುವವರು ಹೀಗೆ ಪರಮ ಪ್ರಭುವಿನ ಬಳಿ ಸಾರುತ್ತಾರೆ. ಇದನ್ನೂ ವರ್ಣಿಸಲಾಗಿದೆ. ಹದಿಮೂರನೆಯ ಅಧ್ಯಾಯದಿಂದ, ಜೀವಿಗೆ ಹೇಗೆ ಐಹಿಕ ಪ್ರಕೃತಿಯ ಸಂಪರ್ಕವು ಬರುತ್ತದೆ ಮತ್ತು ಫಲಾಪೇಕ್ಷೆಯಿರುವ ಕರ್ಮ, ಜ್ಞಾನದ ಬೆಳವಣಿಗೆ ಮತ್ತು ಭಕ್ತಿಸೇವೆ ಇವುಗಳ ವಿವಿಧ ವಿಧಾನಗಳ ಮೂಲಕ ಪರಮ ಪ್ರಭುವು ಜೀವಿಯನ್ನು ಹೇಗೆ ಉದ್ಧಾರಮಾಡುತ್ತಾನೆ ಎನ್ನುವುದನ್ನು ವಿವರಿಸಿದೆ. ಜೀವಿಯು ಐಹಿಕ ದೇಹದಿಂದ ಸಂಪೂರ್ಣವಾಗಿ ಭಿನ್ನನಾದರೂ ಹೇಗೋ ಅದರ ಸಂಬಂಧ ಪಡೆಯುತ್ತಾನೆ. ಇದನ್ನೂ ವಿವರಿಸಿದೆ.

## ಶ್ಲೋಕ - 3

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ |**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್‌ಜ್ಞಾನಂ ಮತಂ ಮಮ ||೩||**

**ಕ್ಷೇತ್ರಜ್ಞಮ್**—ಕ್ಷೇತ್ರವನ್ನು ತಿಳಿದವನೆಂದು; **ಚ**—ಕೂಡ; **ಅಪಿ**—ಖಂಡಿತವಾಗಿಯೂ; **ಮಾಮ್**—ನನ್ನನ್ನು; **ವಿದ್ಧಿ**—ತಿಳಿದುಕೊ; **ಸರ್ವ**—ಎಲ್ಲ; **ಕ್ಷೇತ್ರೇಷು**—ದೈಹಿಕ ಕ್ಷೇತ್ರಗಳಲ್ಲಿ; **ಭಾರತ**—ಭರತ ಪುತ್ರನೇ; **ಕ್ಷೇತ್ರ**—ಕಾರ್ಯಕ್ಷೇತ್ರ (ಶರೀರ); **ಕ್ಷೇತ್ರಜ್ಞಯೋಃ**—ಮತ್ತು ಕ್ಷೇತ್ರವನ್ನು ತಿಳಿದವರ; **ಜ್ಞಾನಮ್**—ಜ್ಞಾನವು; **ಯತ್**—ಯಾವುದೋ; **ತತ್**—ಅದು; **ಜ್ಞಾನಮ್**—ಜ್ಞಾನವು ಎಂದು; **ಮತಮ್**—ಅಭಿಪ್ರಾಯವು; **ಮಮ**—ನನ್ನ.

## ಅನುವಾದ

**ಭರತವಂಶ ಶ್ರೇಷ್ಠನಾದ ಅರ್ಜುನನೆ, ಎಲ್ಲ ದೇಹಗಳಲ್ಲಿರುವ ಕ್ಷೇತ್ರಜ್ಞನು ನಾನೇ. ಈ ದೇಹವನ್ನೂ ಅದರ ಕ್ಷೇತ್ರಜ್ಞನನ್ನೂ ತಿಳಿಯುವುದೇ ಜ್ಞಾನ ಎನ್ನುವುದನ್ನು ನೀನು ಅರ್ಥಮಾಡಿಕೊಳ್ಳಬೇಕು. ಇದೇ ನನ್ನ ಅಭಿಪ್ರಾಯ.**

## ಭಾವಾರ್ಥ

ದೇಹ ಮತ್ತು ಕ್ಷೇತ್ರಜ್ಞ, ಆತ್ಮ ಮತ್ತು ಪರಮಾತ್ಮ ಈ ವಿಷಯವನ್ನು ಚರ್ಚಿಸುವಾಗ ನಾವು ಅಧ್ಯಯನ ಮಾಡಬೇಕಾದ ಮೂರು ಬೇರೆ ಬೇರೆ ವಿಷಯಗಳಿವೆ — ಪ್ರಭು, ಜೀವಿ ಮತ್ತು ಜಡವಸ್ತು. ಪ್ರತಿಯೊಂದು ದೇಹದಲ್ಲಿಯೂ, ಚಟುವಟಿಕೆಗಳ ಪ್ರತಿಯೊಂದು ಕ್ಷೇತ್ರದಲ್ಲಿಯೂ ಎರಡು ಆತ್ಮಗಳಿವೆ. ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ. ಪರಮಾತ್ಮನು ದೇವೋತ್ತಮ ಪರಮ ಪುರುಷನಾದ ಕೃಷ್ಣನ ಸ್ವಾಂಶ ವಿಸ್ತರಣೆಯಾದದ್ದರಿಂದ, ಕೃಷ್ಣನು "ನಾನು ಕ್ಷೇತ್ರಜ್ಞ, ಆದರೆ ವ್ಯಕ್ತಿಗತ ಕ್ಷೇತ್ರಜ್ಞನಲ್ಲ, ಪರಮ ಕ್ಷೇತ್ರಜ್ಞ. ನಾನು ಪರಮಾತ್ಮನಾಗಿ ಪ್ರತಿಯೊಂದು ದೇಹದಲ್ಲಿಯೂ ಇದ್ದೇನೆ" ಎಂದು ಹೇಳುತ್ತಾನೆ.

ಭಗವದ್ಗೀತೆಯಲ್ಲಿ ನಿರೂಪಿಸಿರುವಂತೆ ಕ್ಷೇತ್ರ ಮತ್ತು ಕ್ಷೇತ್ರಜ್ಞರ ವಿಷಯವನ್ನು ಬಹು ಸೂಕ್ಷ್ಮವಾಗಿ ಅಧ್ಯಯನ ಮಾಡಿದವನು ಜ್ಞಾನವನ್ನು ಪಡೆಯಬಲ್ಲ.

ಪ್ರಭುವು, "ಪ್ರತಿ ವ್ಯಕ್ತಿಗತ ದೇಹದಲ್ಲಿರುವ ಕ್ಷೇತ್ರಜ್ಞನು ನಾನು" ಎಂದು ಹೇಳುತ್ತಾನೆ. ಒಬ್ಬ ವ್ಯಕ್ತಿಗೆ ತನ್ನ ದೇಹದ ವಿಷಯ ತಿಳಿದಿರಬಹುದು, ಆದರೆ ಇತರ ದೇಹಗಳ ವಿಷಯ ಅವನಿಗೇನೂ ತಿಳಿಯದು. ಪರಮಾತ್ಮನಾಗಿ ಎಲ್ಲ ದೇಹಗಳಲ್ಲಿರುವ ದೇವೋತ್ತಮ ಪರಮ ಪುರುಷನಿಗೆ ಎಲ್ಲ ದೇಹಗಳ ಎಲ್ಲ ವಿಷಯಗಳೂ ತಿಳಿದಿರುತ್ತವೆ. ಅವನಿಗೆ ವಿವಿಧ ಜೀವ ವರ್ಗಗಳ ಬೇರೆ ಬೇರೆ ದೇಹಗಳೆಲ್ಲವೂ ತಿಳಿದಿರುತ್ತವೆ. ಪೌರನೊಬ್ಬನಿಗೆ ತನ್ನ ಭೂಮಿಯ ತುಂಡಿನ ವಿಷಯ ಎಲ್ಲವೂ ತಿಳಿದಿರಬಹುದು. ಆದರೆ ರಾಜನಿಗೆ ತನ್ನ ಅರಮನೆ ಮಾತ್ರವಲ್ಲ, ವ್ಯಕ್ತಿಗತ ಪೌರರು ಹೊಂದಿರುವ ಎಲ್ಲ ಆಸ್ತಿಗಳ ವಿಷಯವೂ ತಿಳಿದಿರುತ್ತದೆ. ಹಾಗೆಯೇ ವ್ಯಕ್ತಿಯು ತನ್ನ ಶರೀರದ ಒಡೆಯನಾಗಿರಬಹುದು. ಆದರೆ ಭಗವಂತನು ಸಕಲ ಶರೀರಗಳ ಒಡೆಯನಾಗಿದ್ದಾನೆ. ರಾಜನು ರಾಜ್ಯದ ಮೂಲ ಯಜಮಾನ; ಪೌರನು ಎರಡನೆಯ ವರ್ಗದ ಯಜಮಾನ. ಇದೇ ರೀತಿಯಲ್ಲಿ ಪರಮ ಪ್ರಭುವು ಎಲ್ಲ ದೇಹಗಳ ಪರಮ ಪ್ರಭು.

ದೇಹದಲ್ಲಿ ಇಂದ್ರಿಯಗಳಿವೆ. ಪರಮ ಪ್ರಭುವು ಹೃಷೀಕೇಶ; ಹೀಗೆಂದರೆ, "ಇಂದ್ರಿಯಗಳ ನಿಯಂತ್ರಕ" ಎಂದು ಅರ್ಥ. ರಾಜನು ರಾಜ್ಯದ ಎಲ್ಲ ಚಟುವಟಿಕೆಗಳ ಮೂಲ ನಿಯಂತ್ರಕ. ಪೌರರು ಎರಡನೆಯ ವರ್ಗದ ನಿಯಂತ್ರಕರು. ಇದೇ ರೀತಿಯಲ್ಲಿ ಪರಮ ಪ್ರಭುವು ಇಂದ್ರಿಯಗಳ ಮೂಲ ನಿಯಂತ್ರಕ. ಪರಮ ಪ್ರಭುವು, "ನಾನು ಕ್ಷೇತ್ರಜ್ಞನೂ ಹೌದು" ಎಂದು ಹೇಳುತ್ತಾನೆ. ಹೀಗೆಂದರೆ ಅವನು ಪರಮ ಜ್ಞಾನಿ ಎಂದರ್ಥ. ವ್ಯಕ್ತಿಗತ ಆತ್ಮನಿಗೆ ತನ್ನ ದೇಹದ ವಿಷಯ ಮಾತ್ರ ತಿಳಿದಿರುತ್ತದೆ. ವೇದ ಸಾಹಿತ್ಯದಲ್ಲಿ ಹೀಗೆ ಹೇಳಿದೆ —

ಕ್ಷೇತ್ರಾಣಿ ಹಿ ಶರೀರಾಣಿ ಬೀಜಂ ಚಾಪಿ ಶುಭಾಶುಭೇ |
ತಾನಿ ವೇತ್ತಿ ಸ ಯೋಗಾತ್ಮಾ ತತಃ ಕ್ಷೇತ್ರಜ್ಞ ಉಚ್ಯತೇ ||

ದೇಹವನ್ನು ಕ್ಷೇತ್ರ ಎಂದು ಕರೆದಿದೆ. ಅದರೊಳಗೆ ಕ್ಷೇತ್ರಜ್ಞನು ಮತ್ತು ದೇಹವನ್ನೂ ದೇಹದ ಒಡೆಯನನ್ನೂ ಬಲ್ಲ ಪರಮ ಪ್ರಭುವು ವಾಸಿಸುತ್ತಾನೆ. ಆದುದರಿಂದ ಆತನನ್ನು ಎಲ್ಲ ಕ್ಷೇತ್ರಗಳನ್ನು ತಿಳಿದವನು ಎಂದು ಕರೆಯುತ್ತಾರೆ. ಚಟುವಟಿಕೆಗಳ ಕ್ಷೇತ್ರ, ಕ್ಷೇತ್ರಜ್ಞ ಮತ್ತು ಪರಮ ಕ್ಷೇತ್ರಜ್ಞ — ಇವರ ನಡುವಣ ವ್ಯತ್ಯಾಸವನ್ನು ಹೀಗೆ ವರ್ಣಿಸಿದೆ. ದೇಹದ ಸ್ವರೂಪ, ವ್ಯಕ್ತಿಗತ ಆತ್ಮದ ಸ್ವರೂಪ ಮತ್ತು ಪರಮಾತ್ಮನ ಸ್ವರೂಪ ಇವುಗಳ ಪರಿಪೂರ್ಣ ತಿಳುವಳಿಕೆಗೆ ವೇದ ಸಾಹಿತ್ಯದಲ್ಲಿ ಜ್ಞಾನ ಎಂದು ಹೆಸರು. ಅದು ಕೃಷ್ಣನ ಅಭಿಪ್ರಾಯ. ಆತ್ಮನೂ ಪರಮಾತ್ಮನೂ ಒಂದೇ ಆದರೂ ಭಿನ್ನ ಎನ್ನುವ ಅರಿವೇ ಜ್ಞಾನ. ಕ್ಷೇತ್ರ ಮತ್ತು ಕ್ಷೇತ್ರಜ್ಞನನ್ನು ಅರ್ಥಮಾಡಿಕೊಳ್ಳಲಾರದವನಿಗೆ ಪರಿಪೂರ್ಣ ಜ್ಞಾನವಿಲ್ಲ. ಪ್ರಕೃತಿ, ಪುರುಷ ಮತ್ತು ಈಶ್ವರ (ಪ್ರಕೃತಿ ಮತ್ತು ವ್ಯಕ್ತಿಗತ ಆತ್ಮ ಇವುಗಳ ಮೇಲೆ ಪ್ರಭುತ್ವ ಮಾಡುವ ಮತ್ತು ಇವುಗಳನ್ನು ನಿಯಂತ್ರಿಸುವ ಕ್ಷೇತ್ರಜ್ಞ) ಇವರ ಸ್ಥಾನವನ್ನು ತಿಳಿದುಕೊಳ್ಳಬೇಕು. ಬೇರೆ ಬೇರೆ ಪಾತ್ರಗಳಲ್ಲಿರುವ ಈ ಮೂವರ ವಿಷಯದಲ್ಲಿ ಗೊಂದಲಮಾಡಿಕೊಳ್ಳಬಾರದು. ಚಿತ್ರಗಾರ, ಚಿತ್ರ ಮತ್ತು ಚಿತ್ರಾಧಾರ ಇವುಗಳ ನಡುವೆ ಗೊಂದಲಮಾಡಿಕೊಳ್ಳಬಾರದು. ಚಟುವಟಿಕೆಗಳ ಕ್ಷೇತ್ರವಾದ ಈ ಐಹಿಕ ಜಗತ್ತು ಪ್ರಕೃತಿ; ಪ್ರಕೃತಿಯ ಭೋಕ್ತೃ ಜೀವಿ. ಇವರಿಬ್ಬರ ಮೇಲೆ ಪರಮ ನಿಯಂತ್ರಕ ದೇವೋತ್ತಮ ಪುರುಷ. ವೈದಿಕ ಭಾಷೆಯಲ್ಲಿ ಶ್ವೇತಾಶ್ವತರ ಉಪನಿಷತ್‌ನಲ್ಲಿ (1.12) ಹೀಗೆ ಹೇಳಿದೆ — ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ / ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮ್ ಏತತ್.

ಬ್ರಹ್ಮನ್‌ನ ಮೂರು ಪರಿಕಲ್ಪನೆಗಳಿವೆ — ಚಟುವಟಿಕೆಗಳ ಕ್ಷೇತ್ರವಾಗಿ ಪ್ರಕೃತಿಯು ಬ್ರಹ್ಮನ್. ಪ್ರಕೃತಿಯನ್ನು ನಿಯಂತ್ರಿಸಲು ಪ್ರಯತ್ನಿಸುವ ಜೀವಿಯು ಸಹ ಬ್ರಹ್ಮನ್; ಇವೆರಡನ್ನೂ ನಿಯಂತ್ರಿಸುವವನು ಬ್ರಹ್ಮನ್. ಆತನೇ ವಾಸ್ತವಿಕವಾಗಿ ನಿಯಂತ್ರಕ.

ಈ ಅಧ್ಯಾಯದಲ್ಲಿ ಇಬ್ಬರು ಕ್ಷೇತ್ರಜ್ಞರಲ್ಲಿ ಒಬ್ಬನು ಚ್ಯುತಿ ಹೊಂದಬಹುದಾದವನು ಮತ್ತು ಇನ್ನೊಬ್ಬನು ಅಚ್ಯುತನು ಎಂದು ವಿವರಿಸಲಾಗುತ್ತದೆ. ಒಬ್ಬನು ಶ್ರೇಷ್ಠ, ಇನ್ನೊಬ್ಬನು ಅವನಿಗಿಂತ ಕೆಳಗಿನವನು. ಇಬ್ಬರು ಕ್ಷೇತ್ರಜ್ಞರೂ ಒಬ್ಬರೇ ಎಂದು ತಿಳಿದುಕೊಳ್ಳುವವನು ದೇವೋತ್ತಮ ಪರಮ ಪುರುಷನ ಮಾತನ್ನು ವಿರೋಧಿಸುತ್ತಾನೆ; "ನಾನೇ ಕ್ಷೇತ್ರಜ್ಞನು ಸಹ" ಎಂದು ದೇವೋತ್ತಮ ಪರಮ ಪುರುಷನು ಇಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ. ಹಗ್ಗವನ್ನು ಹಾವೆಂದು ತಪ್ಪಾಗಿ ಭಾವಿಸುವವನು ಜ್ಞಾನದಲ್ಲಿಲ್ಲ. ದೇಹಗಳಲ್ಲಿ ಬೇರೆ ಬೇರೆ ರೀತಿಗಳುಂಟು; ದೇಹಗಳ ಒಡೆಯರು ಬೇರೆ ಬೇರೆಯವರು. ಪ್ರತಿಯೊಂದು ವ್ಯಕ್ತಿಗತ ಆತ್ಮಕ್ಕೂ ಐಹಿಕ ಪ್ರಕೃತಿಯ ಮೇಲೆ ಪ್ರಭುತ್ವ ಮಾಡುವ ವಿಶಿಷ್ಟ ಶಕ್ತಿಯುಂಟು; ಆದುದರಿಂದ ಬೇರೆ ಬೇರೆ ದೇಹಗಳಿವೆ. ಆದರೆ ಪರಮ ಪ್ರಭುವು ಅವರಲ್ಲಿ ಪರಮ ನಿಯಂತ್ರಕನಾಗಿ ಇದ್ದಾನೆ. ಚ ಎನ್ನುವ ಪದವು ಅರ್ಥವತ್ತಾದದ್ದು. ಏಕೆಂದರೆ ಅದು ದೇಹಗಳ ಒಟ್ಟು ಸಂಖ್ಯೆಯನ್ನು ನಿರ್ದೇಶಿಸುತ್ತದೆ. ಇದು ಶ್ರೀ ಬಲದೇವ ವಿದ್ಯಾಭೂಷಣರ ಅಭಿಪ್ರಾಯ. ಪ್ರತಿಯೊಂದು ದೇಹದಲ್ಲಿ ವ್ಯಕ್ತಿಗತ ಆತ್ಮನಲ್ಲದೆ ಇರುವ ಪರಮಾತ್ಮನು ಕೃಷ್ಣ. ಇಲ್ಲಿ ಕೃಷ್ಣನು, ಕಾರ್ಯಕ್ಷೇತ್ರ ಮತ್ತು ಪರಿಮಿತ ಭೋಕ್ತೃ ಇಬ್ಬರನ್ನೂ ನಿಯಂತ್ರಿಸುವವನು ಪರಮಾತ್ಮನೇ ಎಂದು ಸ್ಪಷ್ಟವಾಗಿ ವಿವರಿಸುತ್ತಾನೆ.

## ಶ್ಲೋಕ - 4

**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್ |**
**ಸ ಚ ಯೋ ಯತ್ಪ್ರಭಾವಶ್ಚ ತತ್ ಸಮಾಸೇನ ಮೇ ಶೃಣು ||೪||**

**ತತ್**—ಆ; **ಕ್ಷೇತ್ರಮ್**—ಕಾರ್ಯಕ್ಷೇತ್ರವು; **ಯತ್**—ಯಾವುದು; **ಚ**—ಕೂಡ; **ಯಾದೃಕ್**—ಎಂತಹುದು; **ಚ**—ಕೂಡ; **ಯತ್**—ಏನನ್ನು ಹೊಂದಿರುವುದರಿಂದ; **ವಿಕಾರಿ**—ಬದಲಾವಣೆಗಳುಳ್ಳದ್ದು; **ಯತಃ**—ಯಾವುದರಿಂದ; **ಚ**—ಕೂಡ; **ಯತ್**—ಯಾವುದು; **ಸಃ**—ಅವನು; **ಚ**—ಕೂಡ; **ಯಃ**—ಯಾರು; **ಯತ್**—ಯಾವುದನ್ನು ಹೊಂದುವುದರಿಂದ; **ಪ್ರಭಾವಃ**—ಪ್ರಭಾವವು; **ಚ**—ಕೂಡ; **ತತ್**—ಅದನ್ನು; **ಸಮಾಸೇನ**—ಸಾರಾಂಶದಲ್ಲಿ; **ಮೇ**—ನನ್ನಿಂದ; **ಶೃಣು**—ಅರಿತುಕೊ.

## ಅನುವಾದ

**ಈ ಕಾರ್ಯಕ್ಷೇತ್ರ ಮತ್ತು ಅದರ ಸ್ವರೂಪ, ಅದರಲ್ಲಿ ಆಗುವ ಬದಲಾವಣೆಗಳು, ಅದು ಹೇಗೆ ಉತ್ಪತ್ತಿಯಾಯಿತು? ಕಾರ್ಯಕ್ಷೇತ್ರವನ್ನು ಬಲ್ಲವನು ಯಾರು ಮತ್ತು ಅವನ ಪ್ರಭಾವಗಳು ಯಾವುವು ಎನ್ನುವುದನ್ನು ಕುರಿತು ನನ್ನ ಸಂಕ್ಷಿಪ್ತವಾದ ವಿವರಣೆಯನ್ನು ಕೇಳು.**

### ಭಾವಾರ್ಥ

ಕಾರ್ಯಕ್ಷೇತ್ರ ಮತ್ತು ಕಾರ್ಯಕ್ಷೇತ್ರವನ್ನು ತಿಳಿದವನು ಇವುಗಳ ಸಹಜ ಸ್ವರೂಪವನ್ನು ಇಲ್ಲಿ ಪ್ರಭುವು ವರ್ಣಿಸುತ್ತಿದ್ದಾನೆ. ಈ ದೇಹದ ರಚನೆ ಎಂತಹುದು, ಅದನ್ನು ಯಾವ ವಸ್ತುಗಳಿಂದ ಮಾಡಿದೆ, ಯಾರ ನಿಯಂತ್ರಣದಲ್ಲಿ ಈ ದೇಹವು ಕೆಲಸ ಮಾಡುತ್ತಿದೆ, ಬದಲಾವಣೆಗಳು ಹೇಗೆ ಆಗುತ್ತವೆ, ಬದಲಾವಣೆಗಳ ಮೂಲ ಯಾವುದು, ಅವುಗಳ ಕಾರಣಗಳೇನು, ವ್ಯಕ್ತಿಗತ ಆತ್ಮನ ಪರಮಗುರಿ ಯಾವುದು ಮತ್ತು ವ್ಯಕ್ತಿಗತ ಆತ್ಮದ ವಾಸ್ತವಿಕ ರೂಪವೇನು — ಇವುಗಳನ್ನು ತಿಳಿದುಕೊಳ್ಳಬೇಕು. ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮನ ನಡುವಣ ವ್ಯತ್ಯಾಸ, ಅವರ ಭಿನ್ನ ಪ್ರಭಾವಗಳು, ಅವರ ಸುಪ್ತಶಕ್ತಿಗಳು ಇವನ್ನೂ ತಿಳಿದುಕೊಳ್ಳಬೇಕು. ದೇವೋತ್ತಮ ಪರಮ ಪುರುಷನು ಕೊಟ್ಟಿರುವ ವರ್ಣನೆಯಿಂದ ಭಗವದ್ಗೀತೆಯನ್ನು ನೇರವಾಗಿ ಅರ್ಥಮಾಡಿಕೊಳ್ಳಬೇಕು. ಆಗ ಇದೆಲ್ಲ ಸ್ಪಷ್ಟವಾಗುತ್ತದೆ. ಆದರೆ ಪ್ರತಿಯೊಂದು ದೇಹದಲ್ಲಿರುವ ದೇವೋತ್ತಮ ಪರಮ ಪುರುಷನೂ, ಜೀವಿಯೂ ಒಂದೇ ಎಂದು ಭಾವಿಸದಂತೆ ಎಚ್ಚರಿಕೆ ವಹಿಸಬೇಕು. ಇದು ವೀರ್ಯವತ್ತಾದವನನ್ನೂ, ಷಂಡನನ್ನೂ ಒಂದೇ ಎಂದು ಭಾವಿಸಿದಂತೆ ಆಗುತ್ತದೆ.

### ಶ್ಲೋಕ - 5

**ಋಷಿಭಿರ್ಬಹುಧಾ ಗೀತಂ ಛನ್ದೋಭಿರ್ವಿವಿಧೈಃ ಪೃಥಕ್ |**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ||೫||**

**ಋಷಿಭಿಃ**—ಬುದ್ಧಿವಂತರಾದ ಋಷಿಗಳಿಂದ; **ಬಹುಧಾ**—ಹಲವು ರೀತಿಗಳಲ್ಲಿ; **ಗೀತಮ್** — ವರ್ಣಿತವಾಗಿದೆ; **ಛನ್ದೋಭಿಃ**—ವೇದಮಂತ್ರಗಳಿಂದ; **ವಿವಿಧೈಃ**—ನಾನಾ; **ಪೃಥಕ್**— ಬಗೆಬಗೆಯಾಗಿ; **ಬ್ರಹ್ಮಸೂತ್ರ**—ವೇದಾಂತದ; **ಪದೈಃ**—ಸೂತ್ರಗಳಿಂದ; **ಚ**—ಕೂಡ; **ಏವ**— ಖಂಡಿತವಾಗಿಯೂ; **ಹೇತು ಮದ್ಭಿಃ**—ಕಾರಣ ಮತ್ತು ಪರಿಣಾಮಗಳೊಡನೆ; **ವಿನಿಶ್ಚಿತೈಃ**—ನಿಶ್ಚಿತವಾದ.

### ಅನುವಾದ

**ಕ್ಷೇತ್ರ ಮತ್ತು ಕ್ಷೇತ್ರಜ್ಞನ ಜ್ಞಾನವನ್ನು ಅನೇಕ ಋಷಿಗಳು ಬೇರೆ ಬೇರೆ ವೈದಿಕ ಬರೆಹಗಳಲ್ಲಿ ವರ್ಣಿಸಿದ್ದಾರೆ. ವಿಶೇಷವಾಗಿ ವೇದಾಂತಸೂತ್ರದಲ್ಲಿ ಕಾರ್ಯ ಕಾರಣದ ತರ್ಕದೊಂದಿಗೆ ಅದನ್ನು ನಿರೂಪಿಸಿದೆ.**

### ಭಾವಾರ್ಥ

ಈ ಜ್ಞಾನವನ್ನು ವಿವರಿಸುವುದರಲ್ಲಿ ದೇವೋತ್ತಮ ಪರಮ ಪುರುಷನಾದ ಕೃಷ್ಣನೇ ಅತ್ಯುನ್ನತ ಅಧಿಕಾರಿ. ಆದರೂ ವಿದ್ವಾಂಸರೂ, ಪ್ರಮಾಣಭೂತ ಆಚಾರ್ಯರೂ, ಯಾವಾಗಲೂ ಹಿಂದಿನ ಆಚಾರ್ಯರಿಂದ ಸಾಕ್ಷ್ಯವನ್ನು ಕೊಡುತ್ತಾರೆ. ಆತ್ಮ ಮತ್ತು ಪರಮಾತ್ಮಗಳ ದ್ವೈತ — ಅದ್ವೈತಗಳನ್ನು ಕುರಿತ ಅತ್ಯಂತ ವಿವಾದಾಸ್ಪದವಾದ ಈ ಅಂಶವನ್ನು, ಪ್ರಮಾಣವೆಂದು ಸ್ವೀಕೃತವಾಗಿರುವ ಶಾಸ್ತ್ರಗ್ರಂಥವಾದ ವೇದಾಂತವನ್ನು ಪ್ರಸ್ತಾಪಿಸಿ ಕೃಷ್ಣನು ವಿವರಿಸುತ್ತಾನೆ. ಮೊದಲು ಆತನು, "ಇದು

ಬೇರೆ ಬೇರೆ ಋಷಿಗಳ ಅಭಿಪ್ರಾಯಕ್ಕೆ ಅನುಗುಣವಾಗಿ" ಎಂದು ಹೇಳುತ್ತಾನೆ. ಋಷಿಗಳ ವಿಷಯ ಹೇಳುವುದಾದರೆ, ಸ್ವತಃ ಕೃಷ್ಣನಲ್ಲದೆ, (ವೇದಾಂತಸೂತ್ರವನ್ನು ರಚಿಸಿದ) ವೇದವ್ಯಾಸರು ಒಬ್ಬ ಮಹರ್ಷಿಗಳು; ವೇದಾಂತಸೂತ್ರದಲ್ಲಿ ದ್ವೈತವನ್ನು ಪರಿಪೂರ್ಣವಾಗಿ ವಿವರಿಸಿದೆ. ವ್ಯಾಸದೇವರ ತಂದೆ ಪರಾಶರರೂ ಮಹರ್ಷಿಗಳು. ಅವರು ತಮ್ಮ ಧಾರ್ಮಿಕ ಗ್ರಂಥಗಳ **ಅಹಂ ತ್ವಂ ಚ ತಥಾನ್ಯೇ..** ಎಂದಿದ್ದಾರೆ. ನಾವು, ನೀವು, ನಾನು ಮತ್ತು ಬೇರೆ ಬೇರೆ ಜೀವಿಗಳು — ಎಲ್ಲರೂ, ಐಹಿಕ ದೇಹಗಳಲ್ಲಿದ್ದರೂ ದಿವ್ಯರು. ಈಗ ನಾವು ನಮ್ಮ ಬೇರೆ ಬೇರೆ ಕರ್ಮಗಳಿಗನುಗುಣವಾಗಿ ತ್ರಿಗುಣಗಳ ಅಧೀನದಲ್ಲಿದ್ದೇವೆ. ಇದರಿಂದ ಕೆಲವರು ಮೇಲಿನ ಮಟ್ಟಗಳಲ್ಲಿ ಇದ್ದಾರೆ; ಕೆಲವರು ಕೆಳಮಟ್ಟದ ಪ್ರಕೃತಿಯಲ್ಲಿದ್ದಾರೆ. ಮೇಲ್ಮಟ್ಟದ ಮತ್ತು ಕೆಳಮಟ್ಟದ ಪ್ರಕೃತಿಗಳಿಗೆ ಅಜ್ಞಾನವೇ ಕಾರಣ. ಇವು ಅಸಂಖ್ಯಾತ ಜೀವಿಗಳಲ್ಲಿ ಪ್ರಕಟವಾಗುತ್ತವೆ. ಆದರೆ ಅಚ್ಯುತನಾದ ಪರಮಾತ್ಮನಿಗೆ ಪ್ರಕೃತಿಯ ಮೂರು ಗುಣಗಳ ಸೋಂಕಿಲ್ಲ. ಅವನು ದಿವ್ಯನಾದವನು. ಹೀಗೆಯೇ ಮೂಲ ವೇದಗಳಲ್ಲಿ ಮುಖ್ಯವಾಗಿ ಕಠ ಉಪನಿಷತ್ತಿನಲ್ಲಿ ಆತ್ಮ, ಪರಮಾತ್ಮ ಮತ್ತು ದೇಹಗಳ ನಡುವೆ ವ್ಯತ್ಯಾಸಗಳನ್ನು ಗುರುತಿಸಿದೆ. ಇದನ್ನೂ ಅನೇಕ ಮಂದಿ ಮಹರ್ಷಿಗಳು ಗುರುತಿಸಿದ್ದಾರೆ. ಇವರಲ್ಲಿ ಪರಾಶರರನ್ನು ಪ್ರಮುಖರೆಂದು ಪರಿಗಣಿಸಲಾಗಿದೆ.

**ಛನ್ದೋಭಿಃ** ಎನ್ನುವ ಶಬ್ದವು ವಿವಿಧ ವೇದಸಾಹಿತ್ಯವನ್ನು ಸೂಚಿಸುತ್ತದೆ. ಉದಾಹರಣೆಗೆ, ಯಜುರ್ವೇದದ ಒಂದು ಶಾಖೆಯಾದ ತೈತ್ತಿರೀಯ ಉಪನಿಷತ್ತು ಪ್ರಕೃತಿ, ಜೀವಿ ಮತ್ತು ದೇವೋತ್ತಮ ಪರಮ ಪುರುಷನನ್ನು ವರ್ಣಿಸುತ್ತದೆ.

ಮೊದಲೇ ಹೇಳಿದಂತೆ, ಕ್ಷೇತ್ರವು ಇದೆ ಮತ್ತು ಕ್ಷೇತ್ರಜ್ಞರಲ್ಲಿ ಎರಡು ವಿಧಗಳಿವೆ. ಜೀವಿ ಮತ್ತು ಪರಮಾತ್ಮ. ತೈತ್ತಿರೀಯ ಉಪನಿಷತ್ತಿನಲ್ಲಿಹೇಳಿದಂತೆ (2.2), **ಬ್ರಹ್ಮ ಪುಚ್ಛಂ ಪ್ರತಿಷ್ಠಾ** ಪರಮ ಪ್ರಭುವಿನ ಒಂದು ಅಭಿವ್ಯಕ್ತಿಗೆ **ಅನ್ನಮಯ**, ಬದುಕುವುದಕ್ಕಾಗಿ ಅನ್ನದ ಆಧಾರ, ಎಂದು ಹೆಸರು. ಇದು ಪರಮೋನ್ನತನ ಒಂದು ಐಹಿಕ ಸಾಕ್ಷಾತ್ಕಾರ. ಅನಂತರ, **ಪ್ರಾಣಮಯ**ದಲ್ಲಿ, ಪರಮ ಪರಿಪೂರ್ಣ ಸತ್ಯವನ್ನು ಆಹಾರದಲ್ಲಿ ಸಾಕ್ಷಾತ್ಕರಿಸಿಕೊಂಡು, ಪರಮಸತ್ಯವನ್ನು ಜೀವ ಲಕ್ಷಣಗಳಲ್ಲಿ ಅಥವಾ ಜೀವ ರೂಪಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದು. **ಜ್ಞಾನಮಯ**ದಲ್ಲಿ ಸಾಕ್ಷಾತ್ಕಾರವು ಜೀವ ಲಕ್ಷಣಗಳಾಚೆ ಯೋಚನೆ, ಭಾವಾನುಭವ ಮತ್ತು ಸಂಕಲ್ಪಗಳಿಗೆ ವಿಸ್ತರಿಸುತ್ತದೆ. ಅನಂತರ ಬ್ರಹ್ಮನ್ ಸಾಕ್ಷಾತ್ಕಾರ. ಇದಕ್ಕೆ **ವಿಜ್ಞಾನಮಯ** ಎಂದು ಹೆಸರು. ಈ ಸ್ಥಿತಿಯಲ್ಲಿ ಜೀವಿಯ ಮನಸ್ಸು ಮತ್ತು ಜೀವ ಲಕ್ಷಣಗಳನ್ನು ಜೀವಿಯಿಂದಲೇ ಪ್ರತ್ಯೇಕವಾಗಿ ಗುರುತಿಸಲಾಗುತ್ತದೆ. ಇದರ ಅನಂತರದ ಮತ್ತು ಅತ್ಯುನ್ನತ ಹಂತವು **ಆನನ್ದಮಯ**. ಇದು ಸಂಪೂರ್ಣ ಆನಂದಮಯ ಸ್ವಭಾವದ ಸಾಕ್ಷಾತ್ಕಾರ. ಹೀಗೆ ಬ್ರಹ್ಮನ್ ಸಾಕ್ಷಾತ್ಕಾರದಲ್ಲಿ ಐದು ಹಂತಗಳಿವೆ. ಇವಕ್ಕೆ **ಬ್ರಹ್ಮಪುಚ್ಛಮ್** ಎಂದು ಹೆಸರು. ಇವುಗಳಲ್ಲಿ ಮೊದಲ ಮೂರು — ಅನ್ನಮಯ, ಪ್ರಾಣಮಯ ಮತ್ತು ಜ್ಞಾನಮಯ — ಜೀವಿಗಳ ಕಾರ್ಯಕ್ಷೇತ್ರಗಳನ್ನು ಒಳಗೊಂಡಿರುತ್ತವೆ. ಈ ಎಲ್ಲ ಕಾರ್ಯಕ್ಷೇತ್ರಗಳನ್ನೂ ಪರಮ ಪ್ರಭುವು ಮೀರಿರುತ್ತಾನೆ; ಅವನಿಗೆ ಆನಂದಮಯ ಎಂದು ಹೆಸರು. ವೇದಾಂತಸೂತ್ರವೂ ಪರಮೋನ್ನತನನ್ನು **ಆನನ್ದಮಯೋಽಭ್ಯಾಸಾತ್**—

ದೇವೋತ್ತಮ ಪರಮ ಪುರುಷನು ಸ್ವಭಾವತಃ ಆನಂದಮಯನು ಎಂದು ವರ್ಣಿಸುತ್ತದೆ. ಅವನ ದಿವ್ಯಾನಂದವನ್ನು ಅನುಭವಿಸಲು ಆತನು ವಿಜ್ಞಾನಮಯ, ಪ್ರಾಣಮಯ, ಜ್ಞಾನಮಯ ಮತ್ತು ಅನ್ನಮಯಗಳಿಗೆ ವಿಸ್ತರಿಸಿಕೊಳ್ಳುತ್ತಾನೆ. ಕಾರ್ಯಕ್ಷೇತ್ರದಲ್ಲಿ ಜೀವಿಯನ್ನೇ ಭೋಕ್ತೃ ಎಂದು ಪರಿಗಣಿಸಲಾಗುತ್ತದೆ. ಆನಂದಮಯನು ಅವನಿಗಿಂತ ಭಿನ್ನ. ಹೀಗೆಂದರೆ, ಜೀವಿಯು ಆನಂದಮಯನಲ್ಲಿ ಹೊಂದಿಕೊಂಡು ಸವಿಯಲು ನಿಶ್ಚಯಿಸಿದರೆ ಅವನು ಪರಿಪೂರ್ಣನಾಗುತ್ತಾನೆ ಎಂದು ಅರ್ಥ. ಪರಮ ಪ್ರಭುವು ಪರಮ ಕ್ಷೇತ್ರಜ್ಞ, ಜೀವಿಯು ಅಧೀನ ಕ್ಷೇತ್ರಜ್ಞ, ಕ್ಷೇತ್ರದ ಸ್ವರೂಪ — ಇವುಗಳ ಯಥಾರ್ಥ ಚಿತ್ರ ಇದು. ಈ ಸತ್ಯವನ್ನು ವೇದಾಂತಸೂತ್ರ ಅಥವಾ ಬ್ರಹ್ಮಸೂತ್ರದಲ್ಲಿ ಹುಡುಕಿಕೊಳ್ಳಬೇಕಾಗುತ್ತದೆ.

ಬ್ರಹ್ಮಸೂತ್ರಗಳನ್ನು ಕಾರ್ಯ ಕಾರಣಕ್ಕೆ ಅನುಗುಣವಾಗಿ ಬಹು ಸೊಗಸಾಗಿ ಜೋಡಿಸಿದೆ ಎಂದು ಇಲ್ಲಿ ಹೇಳಿದೆ. ಕೆಲವು ಸೂತ್ರಗಳು ಹೀಗಿವೆ — **ನ ವಿಯದ್ ಅಶ್ರುತೇಃ** (2.3.2), **ನಾತ್ಮಾ ಶ್ರುತೇಃ** (2.3.18) ಮತ್ತು **ಪರಾತ್ ತು ತಚ್ಛ್ರುತೇಃ** (2.3.40) ಮೊದಲನೆಯ ಸೂತ್ರವು ಕಾರ್ಯಕ್ಷೇತ್ರವನ್ನು ಸೂಚಿಸುತ್ತದೆ. ಎರಡನೆಯದು ಜೀವಿಯನ್ನು ಸೂಚಿಸುತ್ತದೆ. ಮೂರನೆಯದು ವಿವಿಧ ಅಸ್ತಿತ್ವಗಳ ಅಭಿವ್ಯಕ್ತಿಗಳಲ್ಲಿ ಪರಮ ಒಳಿತಾದ ಪರಮ ಪ್ರಭುವನ್ನು ಸೂಚಿಸುತ್ತದೆ.

## ಶ್ಲೋಕ 6-7

**ಮಹಾಭೂತಾನ್ಯಹಙ್ಕಾರೋ ಬುದ್ಧಿರವ್ಯಕ್ತಮೇವ ಚ |**
**ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ||೬||**

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ |**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ||೭||**

**ಮಹಾಭೂತಾನಿ**—ಮಹಾಭೂತಗಳು; **ಅಹಙ್ಕಾರಃ**—ಅಹಂಕಾರವು; **ಬುದ್ಧಿಃ**—ಬುದ್ಧಿಶಕ್ತಿಯು; **ಅವ್ಯಕ್ತಮ್**—ವ್ಯಕ್ತವಾಗದ್ದು; **ಏವ**—ಖಂಡಿತವಾಗಿಯೂ; **ಚ**—ಕೂಡ; **ಇನ್ದ್ರಿಯಾಣಿ**—ಇಂದ್ರಿಯಗಳು; **ದಶ ಏಕಮ್**—ಹನ್ನೊಂದು; **ಚ**—ಕೂಡ; **ಪಞ್ಚ**—ಐದು; **ಚ**—ಕೂಡ; **ಇನ್ದ್ರಿಯ ಗೋಚರಾಃ**—ಇಂದ್ರಿಯ ವಿಷಯಗಳು; **ಇಚ್ಛಾ**—ಅಪೇಕ್ಷೆ; **ದ್ವೇಷಃ**—ಹಗೆತನ; **ಸುಖಮ್**—ಸುಖ; **ದುಃಖಮ್**—ದುಃಖ; **ಸಂಘಾತಃ**—ಸಮಷ್ಟಿ; **ಚೇತನಾ**—ಜೀವ ಚಿಹ್ನೆಗಳು; **ಧೃತಿಃ**—ದೃಢನಿಶ್ಚಯ; **ಏತತ್**—ಇವೆಲ್ಲವೂ; **ಕ್ಷೇತ್ರಮ್**—ಕಾರ್ಯಕ್ಷೇತ್ರವು; **ಸಮಾಸೇನ**—ಸಾರಾಂಶದಲ್ಲಿ; **ಸವಿಕಾರಮ್**—ಪರಸ್ಪರ ಕ್ರಿಯೆಗಳಿಂದ; **ಉದಾಹೃತಮ್**—ಉದಾಹರಿಸಲಾಗಿದೆ.

## ಅನುವಾದ

**ಪಂಚಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತವಾದದ್ದು, ಹತ್ತು ಇಂದ್ರಿಯಗಳು ಮತ್ತು ಮನಸ್ಸು, ಐದು ಇಂದ್ರಿಯ ವಿಷಯಗಳು, ಬಯಕೆ, ದ್ವೇಷ, ಸುಖ, ದುಃಖ, ಮೊತ್ತ, ಚೇತನ, ಧೃತಿ — ಸಂಕ್ಷೇಪವಾಗಿ ಇವನ್ನು ಕ್ಷೇತ್ರ ಮತ್ತು ಅದರ ಪರಸ್ಪರ ಪ್ರತಿಕ್ರಿಯೆಗಳು ಎಂದು ಪರಿಗಣಿಸುತ್ತಾರೆ.**

## ಭಾವಾರ್ಥ

ಮಹರ್ಷಿಗಳು, ವೇದಸ್ತೋತ್ರಗಳು ಮತ್ತು ವೇದಾಂತಸೂತ್ರದ ಸೂತ್ರಗಳು ಇವುಗಳ ಅಧಿಕಾರಯುತ ಹೇಳಿಕೆಗಳಿಂದ ಜಗತ್ತಿನ ಘಟಕಾಂಶಗಳನ್ನು ಹೀಗೆ ಅರ್ಥಮಾಡಿಕೊಳ್ಳಬಹುದು. ಮೊದಲನೆಯದಾಗಿ ಭೂಮಿ, ನೀರು, ಅಗ್ನಿ, ವಾಯು ಮತ್ತು ಆಕಾಶ ಇವುಗಳಿವೆ. ಇವು ಪಂಚಮಹಾಭೂತಗಳು. ಅನಂತರ ಅಹಂಕಾರ, ಬುದ್ಧಿ ಮತ್ತು ಪ್ರಕೃತಿಯ ಮೂರು ಗುಣಗಳ ಅವ್ಯಕ್ತ ಹಂತ. ಇದಾದ ಮೇಲೆ ತಿಳುವಳಿಕೆಯ ಗ್ರಹಿಕೆಗಾಗಿರುವ ಐದು ಇಂದ್ರಿಯಗಳು — ಕಣ್ಣುಗಳು, ಕಿವಿಗಳು, ಮೂಗು, ನಾಲಿಗೆ ಮತ್ತು ಚರ್ಮ. ಅನಂತರ ಐದು ಕರ್ಮೇಂದ್ರಿಯಗಳು — ಶಬ್ದ, ಕಾಲುಗಳು, ಕೈಗಳು, ಗುದ ಮತ್ತು ಜನನೇಂದ್ರಿಯಗಳು. ಇಂದ್ರಿಯಗಳ ಮೇಲೆ ಮನಸ್ಸಿದೆ; ಅದು ಒಳಗಿದೆ. ಅದನ್ನು ಅಂತರೇಂದ್ರಿಯ ಎಂದು ಕರೆಯಬಹುದು. ಆದ್ದರಿಂದ ಮನಸ್ಸೂ ಸೇರಿದಂತೆ ಒಟ್ಟು ಹನ್ನೊಂದು ಇಂದ್ರಿಯಗಳಿವೆ. ಅನಂತರ ಐದು ಇಂದ್ರಿಯ ವಸ್ತುಗಳಿವೆ — ವಾಸನೆ, ರುಚಿ, ರೂಪ, ಸ್ಪರ್ಶ ಮತ್ತು ಶಬ್ದ. ಈ ಇಪ್ಪತ್ತನಾಲ್ಕು ಘಟಕಾಂಶಗಳ ಮೊತ್ತವನ್ನು ಕ್ಷೇತ್ರ ಎಂದು ಕರೆಯಲಾಗುತ್ತದೆ. ಈ ಇಪ್ಪತ್ತನಾಲ್ಕು ವಿಷಯಗಳನ್ನು ವಿಶ್ಲೇಷಿಸಿ ಅಧ್ಯಯನ ಮಾಡಿದವನಿಗೆ ಕ್ಷೇತ್ರದ ಅರ್ಥವಾಗುತ್ತದೆ. ಅನಂತರ ಬಯಕೆ, ದ್ವೇಷ, ಸುಖ ಮತ್ತು ದುಃಖಗಳಿವೆ; ಇವು ಕ್ರಿಯೆ ಪ್ರತಿಕ್ರಿಯೆಗಳು; ಜಡದೇಹದ ಪಂಚ ಮಹಾಭೂತಗಳ ನಿರೂಪಣೆಗಳು. ಪ್ರಜ್ಞೆ ಮತ್ತು ದೃಢವಿಶ್ವಾಸಗಳು ಜೀವ ಲಕ್ಷಣಗಳನ್ನು ಪ್ರತಿನಿಧಿಸುತ್ತವೆ. ಜೀವ ಲಕ್ಷಣಗಳು ಸೂಕ್ಷ್ಮದೇಹದ — ಮನಸ್ಸು ಅಹಂಕಾರ ಮತ್ತು ಬುದ್ಧಿಗಳ — ಪ್ರತಿನಿಧಿಯಾಗಿವೆ. ಈ ಸೂಕ್ಷ್ಮಘಟಕಾಂಶಗಳು ಕ್ಷೇತ್ರದಲ್ಲಿ ಸೇರಿವೆ.

ಪಂಚಮಹಾಭೂತಗಳು ಅಹಂಕಾರದ ಒಂದು ಸ್ಥೂಲ ನಿರೂಪಣೆ; ಅಹಂಕಾರವು ಪಾರಿಭಾಷಿಕವಾಗಿ **ತಾಮಸಬುದ್ಧಿ** ಅಥವಾ ಐಹಿಕ ಪರಿಕಲ್ಪನೆಯ ಪ್ರಾಥಮಿಕ ಘಟ್ಟ; ತಾಮಸಬುದ್ಧಿಯೆಂದರೆ ಅಜ್ಞಾನದ ಬುದ್ಧಿ. ಇದು ಐಹಿಕ ಪ್ರಕೃತಿಯ ತ್ರಿಗುಣಗಳ ಅವ್ಯಕ್ತಘಟ್ಟವನ್ನು ಸೂಚಿಸುತ್ತದೆ. ಐಹಿಕ ಪ್ರಕೃತಿಯ ಅವ್ಯಕ್ತಗುಣಗಳಿಗೆ **ಪ್ರಧಾನ** ಎಂದು ಹೆಸರು.

ಈ ಇಪ್ಪತ್ನಾಲ್ಕು ಘಟಕಗಳನ್ನೂ ಮತ್ತು ಅವುಗಳ ಪರಸ್ಪರ ಪ್ರತಿಕ್ರಿಯೆಗಳನ್ನೂ ವಿವರವಾಗಿ ತಿಳಿಯಬಯಸುವವನು ತತ್ವಶಾಸ್ತ್ರವನ್ನು ಇನ್ನೂ ವಿವರವಾಗಿ ಅಭ್ಯಾಸ ಮಾಡಬೇಕು. ಭಗವದ್ಗೀತೆಯಲ್ಲಿ ಸಾರಾಂಶವನ್ನು ಮಾತ್ರ ಕೊಟ್ಟಿದೆ.

ದೇಹವು ಈ ಎಲ್ಲ ಅಂಶಗಳ ನಿರೂಪಣೆ, ದೇಹಕ್ಕೆ ಆರು ಬಗೆಯ ವ್ಯತ್ಯಾಸಗಳುಂಟು — ದೇಹವು ಹುಟ್ಟುತ್ತದೆ, ಬೆಳೆಯುತ್ತದೆ, ಉಳಿಯುತ್ತದೆ, ಉಪ ಉತ್ಪತ್ತಿಗಳನ್ನು ಉತ್ಪಾದಿಸುತ್ತದೆ. ಕ್ಷಯಿಸಲು ಪ್ರಾರಂಭಿಸುತ್ತದೆ ಮತ್ತು ಕಡೆಯ ಘಟ್ಟದಲ್ಲಿ ಮಾಯವಾಗುತ್ತದೆ. ಆದುದರಿಂದ ಕ್ಷೇತ್ರವು ಅನಿತ್ಯವಾದ ಭೌತಿಕ ವಸ್ತು. ಆದರೆ ಅದರ ಒಡೆಯನಾದ ಕ್ಷೇತ್ರಜ್ಞನು ಅದರಿಂದ ಬೇರೆಯಾದವನು.

## ಶ್ಲೋಕ 8-12

**ಅಮಾನಿತ್ವಮದಮ್ಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥೮॥**

**ಇನ್ದ್ರಿಯಾರ್ಥೇಷು ವೈರಾಗ್ಯಮನಹಙ್ಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥೯॥**

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥೧೦॥**

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥೧೧॥**

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥೧೨॥**

**ಅಮಾನಿತ್ವಮ್**—ನಮ್ರತೆ; **ಅದಂಭಿತ್ವಮ್**—ಗರ್ವವಿಲ್ಲದಿರುವಿಕೆ; **ಅಹಿಂಸಾ**—ಅಹಿಂಸೆ; **ಕ್ಷಾಂತಿಃ**—ಸಹನೆ; **ಆರ್ಜವಮ್**—ಸರಳತೆ; **ಆಚಾರ್ಯ ಉಪಾಸನಮ್**—ಸದ್ಗುರುಗಳ ಬಳಿಗೆ ಹೋಗುವುದು; **ಶೌಚಮ್**—ಶುಚಿತ್ವ; **ಸ್ಥೈರ್ಯಮ್**—ಸ್ಥೈರ್ಯವು; **ಆತ್ಮ ವಿನಿಗ್ರಹಃ**—ಆತ್ಮ ಸಂಯಮ; **ಇಂದ್ರಿಯ ಅರ್ಥೇಷು**—ಇಂದ್ರಿಯಗಳ ವಿಷಯದಲ್ಲಿ; **ವೈರಾಗ್ಯಮ್**—ವಿರಕ್ತಿಯು; **ಅನಹಙ್ಕಾರಃ**—ಅಹಂಕಾರವಿಲ್ಲದಿರುವಿಕೆ; **ಏವ**—ಖಂಡಿತವಾಗಿಯೂ; **ಚ**—ಕೂಡ; **ಜನ್ಮ**—ಹುಟ್ಟು; **ಮೃತ್ಯು**—ಮರಣ; **ಜರಾ**—ಮುಪ್ಪು; **ವ್ಯಾಧಿ**—ರೋಗ; **ದುಃಖ**—ದುಃಖಗಳು; **ದೋಷ**—ದೋಷದ; **ಅನುದರ್ಶನಮ್**—ಅವಲೋಕನವು; **ಅಸಕ್ತಿಃ**—ನಿರಾಸಕ್ತಿಯು; **ಅನಭಿಷ್ವಂಗಃ**—ಸಹವಾಸವಿಲ್ಲದಿರುವಿಕೆ; **ಪುತ್ರ**—ಮಗ; **ದಾರ**—ಹೆಂಡತಿ; **ಗೃಹ ಆದಿಷು**—ಮನೆ ಮೊದಲಾದುವುಗಳಲ್ಲಿ; **ನಿತ್ಯಮ್**—ನಿರಂತರ; **ಚ**—ಕೂಡ; **ಸಮಚಿತ್ತತ್ವಮ್**—ಸಮಚಿತ್ತತೆ; **ಇಷ್ಟ**—ಇಷ್ಟವಾದುದು; **ಅನಿಷ್ಟ**—ಇಷ್ಟವಲ್ಲದುದರ; **ಉಪಪತ್ತಿಷು**—ಪ್ರಾಪ್ತಿಯಲ್ಲಿ; **ಮಯಿ**—ನನ್ನಲ್ಲಿ; **ಚ**—ಕೂಡ; **ಅನನ್ಯಯೋಗೇನ**—ನಿಷ್ಕಲ್ಮಷ ಭಕ್ತಿಸೇವೆಯಿಂದ; **ಭಕ್ತಿಃ**—ಭಕ್ತಿಯು; **ಅವ್ಯಭಿಚಾರಿಣೀ**—ಚ್ಯುತಿಯಿಲ್ಲದ; **ವಿವಿಕ್ತ**—ಏಕಾಂತದ; **ದೇಶ**—ಸ್ಥಳಗಳ; **ಸೇವಿತ್ವಮ್**—ಹಂಬಲ; **ಅರತಿಃ**—ಅನಾಸಕ್ತಿ; **ಜನ ಸಂಸದಿ**—ಜನಸಾಮಾನ್ಯರಲ್ಲಿ; **ಅಧ್ಯಾತ್ಮ**—ಆತ್ಮಕ್ಕೆ ಸಂಬಂಧಿಸಿದ; **ಜ್ಞಾನ**—ಜ್ಞಾನದಲ್ಲಿ; **ನಿತ್ಯತ್ವಮ್**—ನೈರಂತರ್ಯ; **ತತ್ತ್ವ ಜ್ಞಾನ**—ತತ್ವಜ್ಞಾನದ; **ಅರ್ಥ**— ವಿಷಯಕ್ಕಾಗಿ; **ದರ್ಶನಮ್**—ಸಿದ್ಧಾಂತ; **ಏತತ್**—ಈ ಎಲ್ಲವನ್ನು; **ಜ್ಞಾನಮ್**—ಜ್ಞಾನ; **ಇತಿ**—ಎಂದು; **ಪ್ರೋಕ್ತಮ್**—ಘೋಷಿಸಲಾಗಿದೆ; **ಅಜ್ಞಾನಮ್**—ಅಜ್ಞಾನವು; **ಯತ್**—ಯಾವುದು; **ಅತಃ**—ಇದರಿಂದ; **ಅನ್ಯಥಾ**—ಬೇರೆಯೋ ಅದು.

## ಅನುವಾದ

**ನಮ್ರತೆ; ಜಂಬವಿಲ್ಲದಿರುವುದು; ಅಹಿಂಸೆ; ತಾಳ್ಮೆ; ಸರಳತೆ; ನಿಜವಾದ ಗುರುವಿನ ಬಳಿಗೆ**

**ಹೋಗುವುದು; ಶೌಚ; ಸ್ಥೈರ್ಯ; ಆತ್ಮಸಂಯಮ; ಇಂದ್ರಿಯ ತೃಪ್ತಿಯ ವಸ್ತುಗಳಲ್ಲಿ ವೈರಾಗ್ಯ; ಅಹಂಕಾರವಿಲ್ಲದಿರುವುದು; ಜನ್ಮ, ಸಾವು, ಮುಪ್ಪು ಮತ್ತು ರೋಗಗಳ ಕೆಡುಕನ್ನು ಗ್ರಹಿಸುವುದು; ಅನಾಸಕ್ತಿ; ಮಕ್ಕಳು, ಹೆಂಡತಿ, ಮನೆ ಮತ್ತಿತರ ವಿಷಯಗಳಲ್ಲಿ ಸಿಕ್ಕಿಕೊಳ್ಳದೆ ಮುಕ್ತವಾಗಿರುವುದು; ಇಷ್ಟಾನಿಷ್ಟಗಳ ಮಧ್ಯೆ ಸಮಚಿತ್ತತೆ; ನನ್ನಲ್ಲಿ ನಿರಂತರವಾದ ಮತ್ತು ಪರಿಶುದ್ಧವಾದ ಭಕ್ತಿ; ಏಕಾಂತಪ್ರದೇಶದಲ್ಲಿ ವಾಸಮಾಡುವ ಅಭಿಲಾಷೆ; ಜನಸಮೂಹದಲ್ಲಿ ಆಸಕ್ತಿಯಿಲ್ಲದಿರುವುದು; ಆತ್ಮಸಾಕ್ಷಾತ್ಕಾರದ ಮಹತ್ವವನ್ನು ಒಪ್ಪಿಕೊಳ್ಳುವುದು; ಪರಿಪೂರ್ಣ ಸತ್ಯದ ತತ್ವಜ್ಞಾನಾರ್ಥ ಅನ್ವೇಷಣೆ — ಇವೆಲ್ಲ ಜ್ಞಾನ ಎಂದು ನಾನು ಘೋಷಿಸುತ್ತೇನೆ; ಇದಲ್ಲದೆ ಇರುವುದೆಲ್ಲ ಅಜ್ಞಾನ.**

## ಭಾವಾರ್ಥ

ಹೆಚ್ಚು ಬುದ್ಧಿಯಿಲ್ಲದಿರುವವರು ಜ್ಞಾನದ ಪ್ರಕ್ರಿಯೆಯನ್ನು ಕಾರ್ಯಕ್ಷೇತ್ರದಲ್ಲಿನ ಪರಸ್ಪರ ಕ್ರಿಯೆ ಎಂದು ಕೆಲವೊಮ್ಮೆ ತಪ್ಪಾಗಿ ತಿಳಿದುಕೊಳ್ಳುತ್ತಾರೆ. ವಾಸ್ತವವಾಗಿ ಇದೇ ಜ್ಞಾನದ ನಿಜವಾದ ಪ್ರಕ್ರಿಯೆ. ಈ ಪ್ರಕ್ರಿಯೆಯನ್ನು ಒಪ್ಪಿಕೊಂಡರೆ ಪರಿಪೂರ್ಣ ಸತ್ಯವನ್ನು ಸೇರುವ ಸಾಧ್ಯತೆ ಉಂಟು. ಹಿಂದೆ ವರ್ಣಿಸಿದಂತೆ ಇಪ್ಪತ್ನಾಲ್ಕು ಘಟಕಾಂಶಗಳ ಪರಸ್ಪರ ಪ್ರತಿಕ್ರಿಯೆ ಇದಲ್ಲ. ವಾಸ್ತವವಾಗಿ ಆ ಘಟಕಗಳ ತೊಡಕಿನಿಂದ ಪಾರಾಗುವ ಮಾರ್ಗ ಇದು. ದೇಹವು ಇಪ್ಪತ್ನಾಲ್ಕು ಘಟಕಗಳಿಂದ ಮಾಡಿದ ಕೋಶ; ದೇಹಧಾರಿ ಆತ್ಮವು ದೇಹದಲ್ಲಿ ಸಿಕ್ಕಿಬಿದ್ದಿದೆ. ಇಲ್ಲಿ ವರ್ಣಿಸಿದ ಜ್ಞಾನದ ಪ್ರಕ್ರಿಯೆಯು ಅದರಿಂದ ಹೊರಬರುವ ಮಾರ್ಗ. ಜ್ಞಾನ ಪ್ರಕ್ರಿಯೆಯ ಎಲ್ಲ ವರ್ಣನೆಗಳಲ್ಲಿ ಅತಿಮುಖ್ಯವಾದದ್ದು ಹನ್ನೊಂದನೆಯ ಶ್ಲೋಕದ ಮೊದಲನೆಯ ಪಂಕ್ತಿ — **ಮಯಿ ಚಾನನ್ಯ ಯೋಗೇನ ಭಕ್ತಿರವ್ಯಭಿಚಾರಿಣೀ** — ಜ್ಞಾನದ ಪ್ರಕ್ರಿಯೆಯು ಪ್ರಭುವಿನ ಪರಿಶುದ್ಧ ಭಕ್ತಿಸೇವೆಯಲ್ಲಿ ಮುಕ್ತಾಯವಾಗುತ್ತದೆ. ಆದುದರಿಂದ ಪ್ರಭುವಿನ ದಿವ್ಯಸೇವೆಯ ಬಳಿಸಾರದೆ ಅಥವಾ ಬಳಿಸಾರಲು ಸಾಧ್ಯವಾಗದೆ ಇರುವವನಿಗೆ ಉಳಿದ ಹತ್ತೊಂಬತ್ತು ಅಂಶಗಳು ಲೆಕ್ಕಕ್ಕೆ ಬರುವುದಿಲ್ಲ. ಆದರೆ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯಲ್ಲಿ ತೊಡಗಿದರೆ ಉಳಿದ ಹತ್ತೊಂಬತ್ತು ಅಂಶಗಳು ಅವನಲ್ಲಿ ತಂತಾವೇ ಬೆಳೆಯುತ್ತವೆ. ಶ್ರೀಮದ್ಭಾಗವತದಲ್ಲಿ ಹೇಳಿರುವಂತೆ (5.18.12) **ಯಸ್ಯಾಸ್ತಿ ಭಕ್ತಿರ್ ಭಗವತಿ ಅಕಿಂಚನಾ ಸರ್ವೈರ್ ಗುಣೈಸ್ತತ್ರ ಸಮಾಸತೇ ಸುರಾಃ** ಭಕ್ತಿಸೇವೆಯ ಹಂತವನ್ನು ತಲಪಿದವನಲ್ಲಿ ಜ್ಞಾನದ ಎಲ್ಲ ಸದ್ಗುಣಗಳೂ ಬೆಳೆಯುತ್ತವೆ. ಎಂಟನೆಯ ಶ್ಲೋಕದಲ್ಲಿ ಹೇಳಿರುವಂತೆ ಒಬ್ಬ ಗುರುವನ್ನು ಸ್ವೀಕರಿಸುವ ತತ್ವವು ಬಹುಮುಖ್ಯವಾದದ್ದು. ಭಕ್ತಿಸೇವೆಯನ್ನು ಸ್ವೀಕರಿಸಿದವರಿಗೂ ಸಹ ಇದು ಅತ್ಯಂತ ಮುಖ್ಯ. ಮನುಷ್ಯನು ಯೋಗ್ಯಗುರುವನ್ನು ಸ್ವೀಕರಿಸಿದಾಗ ದಿವ್ಯಜೀವನವು ಪ್ರಾರಂಭವಾಗುತ್ತದೆ. ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನು ಜ್ಞಾನದ ಈ ಪ್ರಕ್ರಿಯೆಯೇ ವಾಸ್ತವವಾದ ಮಾರ್ಗ ಎಂದು ಇಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ. ಇದರಾಚೆ ಊಹಿಸಿದ್ದೆಲ್ಲ ಅಸಂಬದ್ಧವಾದದ್ದು.

ಇಲ್ಲಿ ರೂಪರೇಖೆ ಪಡೆದಿರುವ ಜ್ಞಾನದ ವಿಷಯ ಹೇಳುವುದಾದರೆ ಅಂಶಗಳ ವಿಷಯಗಳನ್ನು ಹೀಗೆ ವಿಶ್ಲೇಷಿಸಬಹುದು. ನಮ್ರತೆ ಎಂದರೆ ಇತರರಿಂದ ಗೌರವ ಪಡೆಯುವ ತೃಪ್ತಿಗಾಗಿ ಮನುಷ್ಯನು ಕಾತರನಾಗಿರದಿರುವುದು. ಬದುಕಿನ ಐಹಿಕ ಪರಿಕಲ್ಪನೆಯಿಂದಾಗಿ ನಾವು ಇತರರಿಂದ ಗೌರವವನ್ನು ಪಡೆಯಲು ಬಹು ಕಾತರರಾಗಿರುತ್ತೇವೆ. ಆದರೆ ತಾನು ಈ ದೇಹವಲ್ಲ

ಎಂದು ತಿಳಿದಿರುವ, ಪರಿಪೂರ್ಣ ಜ್ಞಾನವಿರುವ ಮನುಷ್ಯನ ದೃಷ್ಟಿಯಲ್ಲಿ ಗೌರವವಾಗಲೀ ಅಗೌರವವಾಗಲೀ ಈ ದೇಹಕ್ಕೆ ಸಂಬಂಧಿಸಿದ್ದರೆ ನಿಷ್ಪ್ರಯೋಜಕ. ಈ ಲೌಕಿಕ ಮೋಸಕ್ಕಾಗಿ ಮನುಷ್ಯನು ತವಕಪಡಬಾರದು. ತಮ್ಮ ಧಾರ್ಮಿಕತೆಗಾಗಿ ಕೀರ್ತಿವಂತರಾಗಬೇಕೆಂದು ಜನರಿಗೆ ಬಹು ಕಾತರ. ಇದರ ಪರಿಣಾಮವಾಗಿ ಕೆಲವೊಮ್ಮೆ ನಾವು ಕಾಣುವುದು ಇದು — ಧರ್ಮದ ತತ್ತ್ವಗಳನ್ನು ಅರ್ಥಮಾಡಿಕೊಳ್ಳದೆ ಕೆಲವೊಮ್ಮೆ ಮನುಷ್ಯನು ವಾಸ್ತವವಾಗಿ ಧಾರ್ಮಿಕ ತತ್ತ್ವಗಳನ್ನು ಅನುಸರಿಸದಿರುವ ಯಾವುದೋ ಗುಂಪನ್ನು ಪ್ರವೇಶಿಸುತ್ತಾನೆ. ಅನಂತರ ತಾನೊಬ್ಬ ಧಾರ್ಮಿಕ ಮಾರ್ಗದರ್ಶಿ ಎಂದು ಜಾಹೀರಾತು ಮಾಡಿಕೊಳ್ಳಲು ಬಯಸುತ್ತಾನೆ. ಆಧ್ಯಾತ್ಮಿಕ ವಿಜ್ಞಾನದ ಬಗ್ಗೆ ಹೇಳುವುದಾದರೆ ಮನುಷ್ಯನು ತಾನು ಎಷ್ಟುದೂರ ಪ್ರಗತಿ ಹೊಂದಿದ್ದೇನೆ ಎಂದು ನೋಡಿಕೊಳ್ಳಲು ಒಂದು ಪರೀಕ್ಷೆಯನ್ನು ಇಟ್ಟುಕೊಳ್ಳಬೇಕು. ಈ ಅಂಶಗಳಿಂದ ಅವನು ತೀರ್ಮಾನಿಸಿಕೊಳ್ಳಬಹುದು.

ಅಹಿಂಸೆಯೆಂದರೆ ದೇಹವನ್ನು ಕೊಲ್ಲದಿರುವುದು ಅಥವಾ ನಾಶ ಮಾಡದಿರುವುದು ಎಂದು ಸಾಮಾನ್ಯವಾಗಿ ಅರ್ಥಮಾಡಿಕೊಳ್ಳುತ್ತಾರೆ. ಆದರೆ ವಾಸ್ತವವಾಗಿ ಅಹಿಂಸೆ ಎಂದರೆ ಇತರರಿಗೆ ನೋವನ್ನುಂಟುಮಾಡದಿರುವುದು. ಸಾಮಾನ್ಯವಾಗಿ ಜನರು ಅಜ್ಞಾನದಿಂದ ಬದುಕಿನ ಐಹಿಕ ಪರಿಕಲ್ಪನೆಯಲ್ಲಿ ಸಿಕ್ಕಿಬೀಳುತ್ತಾರೆ ಮತ್ತು ಅವರು ನಿರಂತರವಾಗಿ ಐಹಿಕ ನೋವುಗಳನ್ನು ಅನುಭವಿಸುತ್ತಾರೆ. ಆದುದರಿಂದ ಜನರನ್ನು ಆಧ್ಯಾತ್ಮಿಕ ಜ್ಞಾನಕ್ಕೆ ಏರಿಸದಿದ್ದರೆ ಮನುಷ್ಯನು ಹಿಂಸೆಯನ್ನು ಆಚರಿಸುತ್ತಿರುತ್ತಾನೆ. ಜನರಿಗೆ ಜ್ಞಾನೋದಯವಾಗಿ ಅವರು ಈ ಐಹಿಕ ತೊಡಕನ್ನು ಬಿಡಲು ಸಾಧ್ಯವಾಗುವಂತೆ ಅವರಿಗೆ ನಿಜವಾದ ಜ್ಞಾನವನ್ನು ಹಂಚಿಕೊಡಲು ಮನುಷ್ಯನು ಸಾಧ್ಯವಾದಷ್ಟು ಪ್ರಯತ್ನಿಸಬೇಕು. ಇದು ಅಹಿಂಸೆ.

ತಾಳ್ಮೆ ಎಂದರೆ ಅಪಮಾನವನ್ನು ಅಗೌರವವನ್ನು ತಡೆದುಕೊಳ್ಳುವುದನ್ನು ಅಭ್ಯಾಸಮಾಡುವುದು. ಆಧ್ಯಾತ್ಮಿಕ ಜ್ಞಾನದಲ್ಲಿ ಮುಂದುವರಿಯುವುದರಲ್ಲಿ ನಿರತನಾದವನಿಗೆ ಇತರರಿಂದ ಎಷ್ಟೋ ಅಪಮಾನಗಳು ಅಗೌರವವೂ ಆಗುತ್ತದೆ. ಐಹಿಕ ಪ್ರಕೃತಿಯ ರಚನೆಯೇ ಇಂತಹುದು. ಆದುದರಿಂದ ಇದು ನಿರೀಕ್ಷಿಸಬೇಕಾದದ್ದೇ. ಐದೇ ವರ್ಷ ವಯಸ್ಸಿನ ಹುಡುಗ ಪ್ರಹ್ಲಾದನು ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳುವುದರಲ್ಲಿ ತೊಡಗಿದ್ದ; ಅವನ ತಂದೆಯು ಅವನ ಭಕ್ತಿಗೆ ವಿರೋಧಿಯಾದಾಗ ಹುಡುಗನಿಗೆ ಅಪಾಯವಾಯಿತು. ಅವನ ತಂದೆಯು ಅವನನ್ನು ಕೊಲ್ಲಲು ಅನೇಕ ರೀತಿಗಳಲ್ಲಿ ಪ್ರಯತ್ನಿಸಿದ. ಆದರೆ ಪ್ರಹ್ಲಾದನು ಅದನ್ನು ಸಹಿಸಿಕೊಂಡ. ಹೀಗೆ ಆಧ್ಯಾತ್ಮಿಕ ಜ್ಞಾನದಲ್ಲಿನ ಪ್ರಗತಿಗೆ ಎಷ್ಟೋ ಅಡ್ಡಿಗಳಿರಬಹುದು. ಆದರೆ ನಾವು ಸಹನೆಯಿಂದಿರಬೇಕು ಮತ್ತು ದೃಢಸಂಕಲ್ಪದಿಂದ ನಮ್ಮ ಪ್ರಗತಿಯನ್ನು ಮುಂದುವರಿಸಬೇಕು.

ಸರಳತೆ ಎಂದರೆ ಮನುಷ್ಯನು ಲೌಕಿಕ ಚಾಣಾಕ್ಷತನವಿಲ್ಲದೆ ಶತ್ರುವಿಗೂ ಸತ್ಯವನ್ನು ಹೇಳಿಬಿಡುವಷ್ಟು ನೇರವಾದ ನಡತೆ. ವ್ಯಕ್ತಿಯು ಗುರುವನ್ನು ಸ್ವೀಕರಿಸುವುದು ಅತ್ಯಗತ್ಯ. ಏಕೆಂದರೆ ಒಬ್ಬ ಸದ್ಗುರುವಿನ ಉಪದೇಶವಿಲ್ಲದೆ ಮನುಷ್ಯನು ಆಧ್ಯಾತ್ಮಿಕ ವಿಜ್ಞಾನದಲ್ಲಿ ಮುಂದುವರಿಯಲಾರ. ಅತ್ಯಂತ ನಮ್ರತೆಯಿಂದ ಗುರುವಿನ ಬಳಿಗೆ ಹೋಗಬೇಕು ಮತ್ತು ಎಲ್ಲ ರೀತಿಗಳಲ್ಲಿ ಅವನ ಸೇವೆಯನ್ನು ಮಾಡಬೇಕು; ಇದರಿಂದ ಆತನು ಶಿಷ್ಯನಿಗೆ ಆಶೀರ್ವಾದವನ್ನು ಅನುಗ್ರಹಿಸುತ್ತಾನೆ. ಸದ್ಗುರುವು ಕೃಷ್ಣನ ಪ್ರತಿನಿಧಿ. ಆದುದರಿಂದ ಆತನು ಶಿಷ್ಯನಿಗೆ ಆಶೀರ್ವಾದವನ್ನು ಮಾಡಿದರೆ, ಶಿಷ್ಯನು ನಿಯಂತ್ರಕ ತತ್ತ್ವಗಳನ್ನು ಪರಿಪಾಲಿಸದೆಯೇ ಕೂಡಲೇ ಪ್ರಗತಿಯನ್ನು

ಸಾಧಿಸುತ್ತಾನೆ. ಅಥವಾ, ಯಾವುದೇ ಹಿಂಜರಿಕೆಯಿಲ್ಲದೆ ಗುರುವಿನ ಸೇವೆ ಮಾಡಿದವನಿಗೆ ನಿಯಂತ್ರಕ ತತ್ವಗಳು ಇನ್ನೂ ಸುಲಭವಾಗುತ್ತವೆ.

ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿಯನ್ನು ಸಾಧಿಸಲು ಶುಚಿತ್ವವು ಅಗತ್ಯ. ಶುಚಿತ್ವದಲ್ಲಿ ಎರಡು ಬಗೆಗಳು — ಬಹಿರಂಗ ಮತ್ತು ಅಂತರಂಗ. ಬಹಿರಂಗ ಶುಚಿತ್ವ ಎಂದರೆ ಸ್ನಾನ ಮಾಡುವುದು. ಆದರೆ ಅಂತರಂಗ ಶುಚಿತ್ವಕ್ಕೆ ಮನುಷ್ಯನು ಸದಾ ಕೃಷ್ಣನನ್ನು ಕುರಿತು ಚಿಂತಿಸಬೇಕು ಮತ್ತು ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಎಂದು ಸಂಕೀರ್ತನೆ ಮಾಡಬೇಕು. ಇದು ಸಂಚಿತವಾದ ಹಿಂದಿನ ಕರ್ಮವನ್ನು ಮನಸ್ಸಿನಿಂದ ತೊಡೆದು ಹಾಕಿ ಸ್ವಚ್ಛಗೊಳಿಸುತ್ತದೆ.

ಸ್ಥೈರ್ಯವೆಂದರೆ ಮನುಷ್ಯನು ಆಧ್ಯಾತ್ಮಿಕ ಬದುಕಿನಲ್ಲಿ ಮುಂದುವರಿಯಲು ಮಾಡಬೇಕಾದ ದೃಢಮನಸ್ಸು. ದೃಢಮಸ್ಸಿಲ್ಲದೆ ಮನುಷ್ಯನು ವಾಸ್ತವವಾದ ಪ್ರಗತಿಯನ್ನು ಸಾಧಿಸಲಾರ. ಆತ್ಮ ಸಂಯಮವೆಂದರೆ ಆಧ್ಯಾತ್ಮಿಕ ಪ್ರಗತಿಗೆ ಅಡ್ಡಿಯಾಗುವ ಏನನ್ನೂ ಮನುಷ್ಯನು ಒಪ್ಪಿಕೊಳ್ಳಬಾರದು. ಇದನ್ನು ಅಭ್ಯಾಸಮಾಡಿಕೊಳ್ಳಬೇಕು ಮತ್ತು ಆಧ್ಯಾತ್ಮಿಕ ಪ್ರಗತಿಗೆ ವಿರುದ್ಧವಾದದ್ದು ಏನೇ ಆಗಲಿ ಅದನ್ನು ತಿರಸ್ಕರಿಸಬೇಕು. ಇದು ನಿಜವಾದ ಸನ್ಯಾಸ. ಇಂದ್ರಿಯಗಳ ಬಲ ಎಷ್ಟೆಂದರೆ ಅವು ಯಾವಾಗಲೂ ಇಂದ್ರಿಯತೃಪ್ತಿಗಾಗಿ ಕಾತರವಾಗಿರುತ್ತವೆ. ಅನಗತ್ಯವಾದ ಈ ಬಯಕೆಗಳನ್ನು ತೃಪ್ತಿಪಡಿಸಬಾರದು. ಮನುಷ್ಯನು ಆಧ್ಯಾತ್ಮಿಕ ಬದುಕಿನಲ್ಲಿ ಮುಂದುವರಿಯಲು ತನ್ನ ಕರ್ತವ್ಯವನ್ನು ಮಾಡಲು ಸಾಧ್ಯವಾಗುವಂತೆ ದೇಹವನ್ನು ಯೋಗ್ಯಸ್ಥಿತಿಯಲ್ಲಿಡುವುದರಲ್ಲಿ ಇಂದ್ರಿಯಗಳ ತೃಪ್ತಿಯನ್ನು ಕಂಡುಕೊಳ್ಳಬೇಕು. ಬಹು ಮುಖ್ಯವಾದ ಮತ್ತು ನಿಯಂತ್ರಿಸಲು ಸಾಧ್ಯವಿಲ್ಲದ ಇಂದ್ರಿಯ ನಾಲಿಗೆ. ನಾಲಿಗೆಯನ್ನು ನಿಯಂತ್ರಿಸಲು ಸಾಧ್ಯವಾದರೆ ಉಳಿದ ಇಂದ್ರಿಯಗಳನ್ನು ನಿಯಂತ್ರಿಸುವ ಎಲ್ಲ ಸಾಧ್ಯತೆಯಿರುತ್ತದೆ. ನಾಲಿಗೆಯ ಕೆಲಸ ರುಚಿ ನೋಡುವುದು ಮತ್ತು ಮಾತನಾಡುವುದು. ಆದುದರಿಂದ ವ್ಯವಸ್ಥಿತ ನಿಯಂತ್ರಣದಿಂದ ನಾಲಿಗೆಯು ಸದಾ ಕೃಷ್ಣನ ಪ್ರಸಾದವನ್ನು ಸ್ವೀಕರಿಸುವುದರಲ್ಲಿ ಮತ್ತು ಹರೇ ಕೃಷ್ಣ ಸಂಕೀರ್ತನೆಯಲ್ಲಿ ತೊಡಗಿರುವಂತೆ ಮಾಡಬೇಕು. ಕಣ್ಣುಗಳ ವಿಷಯ ಹೇಳುವುದಾದರೆ ಕೃಷ್ಣನ ಸುಂದರ ರೂಪವನ್ನು ಬಿಟ್ಟು ಬೇರೇನನ್ನೂ ನೋಡಲು ಅವಕಾಶಕೊಡಬಾರದು. ಇದು ಕಣ್ಣುಗಳನ್ನು ನಿಯಂತ್ರಿಸುತ್ತದೆ. ಹೀಗೆಯೇ ಕಿವಿಗಳು ಕೃಷ್ಣನ ವಿಷಯವನ್ನು ಕೇಳುವುದರಲ್ಲಿ ಮತ್ತು ಮೂಗು ಕೃಷ್ಣನಿಗೆ ಅರ್ಪಿಸಿದ ಹೂವುಗಳನ್ನು ಆಘ್ರಾಣಿಸುವುದರಲ್ಲಿ ನಿರತವಾಗಿರಬೇಕು. ಇದು ಭಕ್ತಿಸೇವೆಯ ಪ್ರಕ್ರಿಯೆ; ಇಲ್ಲಿ ಭಗವದ್ಗೀತೆಯು ಭಕ್ತಿಸೇವೆಯ ವಿಜ್ಞಾನವನ್ನು ಹೇಳುತ್ತಿದೆ ಅಷ್ಟೇ ಎಂದು ಅರ್ಥ. ಭಕ್ತಿಸೇವೆಯೇ ಮುಖ್ಯವಾದ ಮತ್ತು ಏಕೈಕವಾದ ಗುರಿ. ಭಗವದ್ಗೀತೆಯ ಬುದ್ಧಿಹೀನ ವ್ಯಾಖ್ಯಾನಕಾರರು ಓದುವವನ ಮನಸ್ಸನ್ನು ಬೇರೆ ವಿಷಯಗಳ ಕಡೆಗೆ ತಿರುಗಿಸಲು ಪ್ರಯತ್ನಿಸುತ್ತಾರೆ. ಆದರೆ ಭಗವದ್ಗೀತೆಯಲ್ಲಿ ಭಕ್ತಿಸೇವೆಯನ್ನು ಬಿಟ್ಟು ಬೇರೆ ಯಾವ ವಿಷಯವೂ ಇಲ್ಲ.

ಮಿಥ್ಯಾಹಂಕಾರ ಎಂದರೆ ಈ ದೇಹವೇ ತಾನು ಎಂದು ಒಪ್ಪಿಕೊಳ್ಳುವುದು. ಮನುಷ್ಯನಿಗೆ ತಾನು ದೇಹವಲ್ಲ, ಆತ್ಮ ಎಂದು ಅರ್ಥವಾದಾಗ ನಿಜವಾದ ಅಹಂಭಾವಕ್ಕೆ ಬರುತ್ತಾನೆ. ಅಹಮ್ ಎನ್ನುವುದು ಇದೆ. ಮಿಥ್ಯವಾದ ಅಹಂಭಾವವನ್ನು ಖಂಡಿಸಿದೆ. ನಿಜವಾದ ಅಹಂಭಾವವನ್ನಲ್ಲ. ವೇದಸಾಹಿತ್ಯದಲ್ಲಿ (ಬೃಹದಾರಣ್ಯಕ ಉಪನಿಷತ್ತು1.4.10) ಅಹಂ ಬ್ರಹ್ಮಾಸ್ಮಿ — ನಾನು ಬ್ರಹ್ಮನ್,

ನಾನು ಆತ್ಮ ಎಂದು ಹೇಳಿದೆ. ಈ 'ನಾನು ಇದ್ದೇನೆ.' ಅದು ಆತ್ಮದ ಅರಿವು ಎನ್ನುವುದು ಆತ್ಮಸಾಕ್ಷಾತ್ಕಾರದ ಮುಕ್ತಹಂತದಲ್ಲಿಯೂ ಇರುತ್ತದೆ. 'ನಾನು ಇದ್ದೇನೆ' ಎನ್ನುವ ಅರಿವು ಅಹಮ್. ಆದರೆ ನಾನು ಇದ್ದೇನೆ ಎನ್ನುವ ಅರಿವನ್ನು ಈ ಹುಸಿದೇಹಕ್ಕೆ ಅನ್ವಯಿಸಿದಾಗ ಅದು ಹುಸಿ ಅಹಂಭಾವ. ಆತ್ಮದ ಅರಿವನ್ನು ವಾಸ್ತವತೆಗೆ ಅನ್ವಯಿಸಿದಾಗ ಅದು ನಿಜವಾದ ಅಹಮ್. ನಾವು ನಮ್ಮ ಅಹಂಭಾವವನ್ನು ಬಿಟ್ಟುಬಿಡಬೇಕು ಎಂದು ಕೆಲವು ತತ್ವಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ನಾವು ಅಹಮ್ ಅನ್ನು ಬಿಟ್ಟು ಬಿಡಲು ಸಾಧ್ಯವಿಲ್ಲ. ಏಕೆಂದರೆ ಅಹಮ್ ಎನ್ನುವುದು ಪ್ರತ್ಯೇಕ ವ್ಯಕ್ತಿತ್ವ. ದೇಹದೊಡನೆ ಹುಸಿಯಾಗಿ ಗುರುತಿಸಿಕೊಳ್ಳುವುದನ್ನು ಬಿಡಬೇಕು.

ಜನನ, ಮರಣ, ಮುಪ್ಪು ಮತ್ತು ರೋಗಗಳನ್ನು ಒಪ್ಪಿಕೊಳ್ಳುವುದರಿಂದ ಆಗುವ ಯಾತನೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು. ವಿವಿಧ ವೇದ ಸಾಹಿತ್ಯದಲ್ಲಿ ಜನನದ ವರ್ಣನೆಗಳಿವೆ. ಇನ್ನೂ ಹುಟ್ಟದಿರುವ ಮಗುವಿನ ಜಗತ್ತು, ತಾಯಿಯ ಗರ್ಭದಲ್ಲಿ ಮಗುವಿನ ವಾಸ, ಅದರ ನೋವು ಎಲ್ಲವನ್ನೂ ಶ್ರೀಮದ್ಭಾಗವತದಲ್ಲಿ ಬಹು ವಿವರವಾಗಿ ವರ್ಣಿಸಿದೆ. ಜನ್ಮವು ಕ್ಲೇಶಕರವೆಂದು ಚೆನ್ನಾಗಿ ಅರಿತುಕೊಳ್ಳಬೇಕು. ನಾವು ತಾಯಿಯ ಗರ್ಭದಲ್ಲಿ ಎಷ್ಟೊಂದು ಸಂಕಟಪಟ್ಟಿದ್ದೇವೆ ಎನ್ನುವುದನ್ನು ಮರೆತುಬಿಡುತ್ತೇವೆ. ಇದರಿಂದ ಹುಟ್ಟು ಸಾವುಗಳ ಪುನರಾವರ್ತನೆಗೆ ಯಾವ ಪರಿಹಾರವನ್ನೂ ಕಂಡುಕೊಳ್ಳುವುದಿಲ್ಲ. ಹೀಗೆಯೇ ಸಾವಿನ ಸಮಯದಲ್ಲಿ ಎಲ್ಲ ಬಗೆಯ ಯಾತನೆಗಳುಂಟು. ಇವನ್ನು ಪ್ರಮಾಣಗ್ರಂಥಗಳಲ್ಲಿ ಪ್ರಸ್ತಾಪಿಸಿದೆ. ಇವುಗಳನ್ನು ಚರ್ಚಿಸಬೇಕು. ರೋಗ ಮತ್ತು ಮುಪ್ಪುಗಳ ವಿಷಯದಲ್ಲಿ ಪ್ರತಿಯೊಬ್ಬರಿಗೂ ತಮ್ಮದೇ ಅನುಭವವಾಗುತ್ತದೆ. ಕಾಯಿಲೆ ಮತ್ತು ಮುಪ್ಪುಗಳು ಯಾರಿಗೂ ಬೇಕಿಲ್ಲ. ಆದರೆ ಇವುಗಳಿಂದ ತಪ್ಪಿಸಿಕೊಳ್ಳುವ ಹಾಗಿಲ್ಲ. ಜನನ, ಮರಣ, ಮುಪ್ಪು ಮತ್ತು ಕಾಯಿಲೆ ಇವುಗಳ ವಿಷಯ ಯೋಚಿಸಿ ಐಹಿಕ ಬದುಕಿನ ವಿಷಯದಲ್ಲಿ ನಿರಾಶಾ ಭಾವನೆಯನ್ನು ತಾಳದಿದ್ದರೆ ಆಧ್ಯಾತ್ಮಿಕ ಬದುಕಿನಲ್ಲಿ ಪ್ರಗತಿಯನ್ನು ಸಾಧಿಸಲು ಯಾವುದೇ ಸ್ಫೂರ್ತಿಯಿರುವುದಿಲ್ಲ.

ಮಕ್ಕಳು, ಹೆಂಡತಿ ಮತ್ತು ಮನೆಗಳ ವಿಷಯದಲ್ಲಿ ಆಸಕ್ತಿ ಇರಬಾರದು ಎಂದರೆ ಅವುಗಳ ವಿಷಯದಲ್ಲಿ ಮನುಷ್ಯನಿಗೆ ಯಾವ ಭಾವನೆಯೂ ಇರಬಾರದು ಎಂದರ್ಥವಲ್ಲ. ಅವುಗಳಲ್ಲಿ ಸಹಜವಾಗಿಯೇ ಪ್ರೀತಿಯುಂಟಾಗುತ್ತದೆ. ಆದರೆ ಆಧ್ಯಾತ್ಮಿಕ ಪ್ರಗತಿಗೆ ಅವು ಅನುಕೂಲಕರವಾಗಿಲ್ಲದಿದ್ದಾಗ ಅವುಗಳಲ್ಲಿ ಆಸಕ್ತಿಯನ್ನಿಟ್ಟುಕೊಂಡಿರಬಾರದು. ಮನೆಯನ್ನು ಸಂತೋಷಕರವಾಗಿ ಮಾಡುವುದಕ್ಕೆ ಅತ್ಯುತ್ತಮ ಪ್ರಕ್ರಿಯೆಯೆಂದರೆ ಕೃಷ್ಣಪ್ರಜ್ಞೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿರುವಾತನು ತನ್ನ ಮನೆಯನ್ನು ಬಹು ಸುಖಕರವಾಗಿ ಮಾಡಬಲ್ಲ. ಏಕೆಂದರೆ ಕೃಷ್ಣಪ್ರಜ್ಞೆಯ ಈ ಪ್ರಕ್ರಿಯೆಯು ಅತ್ಯಂತ ಸುಲಭ. ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಜಪಮಾಡುವುದು, ಕೃಷ್ಣನ ಪ್ರಸಾದದ ಶೇಷವನ್ನು ಸ್ವೀಕರಿಸುವುದು, ಭಗವದ್ಗೀತೆ ಮತ್ತು ಶ್ರೀಮದ್ಭಾಗವತಗಳಂತಹ ಗ್ರಂಥಗಳನ್ನು ಕುರಿತು ಚರ್ಚೆ ಮಾಡುವುದು, ವಿಗ್ರಹದ ಪೂಜೆಯಲ್ಲಿ ನಿರತನಾಗುವುದು — ಇವಿಷ್ಟನ್ನು ಮಾಡಿದರೆ ಸಾಕು. ಈ ನಾಲ್ಕು ಸಂಗತಿಗಳು ಮನುಷ್ಯನಿಗೆ ಸುಖವನ್ನು ತರುತ್ತವೆ. ಸಂಸಾರದ ಸದಸ್ಯರಿಗೂ ಇದೇ ರೀತಿ ತರಬೇತಿ ಕೊಡಬೇಕು. ಬೆಳಗ್ಗೆ ಮತ್ತು ಸಂಜೆ ಕುಟುಂಬದ ಸದಸ್ಯರೆಲ್ಲ ಒಟ್ಟಿಗೆ ಕುಳಿತು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಸಂಕೀರ್ತನೆ ಮಾಡಬಹುದು. ಈ ನಾಲ್ಕು

ತತ್ವಗಳನ್ನು ಅನುಸರಿಸಿ ಕೃಷ್ಣಪ್ರಜ್ಞೆಯನ್ನು ಬೆಳೆಸುವಂತೆ ಕುಟುಂಬಜೀವನವನ್ನು ರೂಪಿಸುವುದು ಸಾಧ್ಯವಾದರೆ ಅಂತಹ ಮನುಷ್ಯನು ಸಾಂಸಾರಿಕ ಜೀವನದಿಂದ ಸನ್ಯಾಸಕ್ಕೆ ತಿರುಗುವ ಆವಶ್ಯಕತೆಯೇ ಇಲ್ಲ. ಆದರೆ ಸಾಂಸಾರಿಕ ಜೀವನವು ಆಧ್ಯಾತ್ಮಿಕ ಬದುಕಿಗೆ ಹೊಂದಿಕೊಳ್ಳುವಂತೆ, ಅನುಕೂಲವಾಗುವಂತೆ ಇಲ್ಲದಿದ್ದರೆ ಅದನ್ನು ತ್ಯಜಿಸಬೇಕು. ಅರ್ಜುನನು ಮಾಡಿದಂತೆ ಕೃಷ್ಣನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಅಥವಾ ಅವನ ಸೇವೆ ಮಾಡುವುದಕ್ಕೆ ಮನುಷ್ಯನು ಎಲ್ಲವನ್ನೂ ತ್ಯಜಿಸಬೇಕು. ಅರ್ಜುನನಿಗೆ ತನ್ನ ಸಂಸಾರದ ಸದಸ್ಯರನ್ನು ಕೊಲ್ಲಲು ಇಷ್ಟವಿರಲಿಲ್ಲ. ಆದರೆ ಅವರು ತನ್ನ ಕೃಷ್ಣಸಾಕ್ಷಾತ್ಕಾರಕ್ಕೆ ಅಡ್ಡಿಯಾಗಿದ್ದಾರೆ ಎಂದು ಅರಿವಾದಾಗ ಅವನು ಕೃಷ್ಣನ ಉಪದೇಶವನ್ನು ಒಪ್ಪಿಕೊಂಡನು ಮತ್ತು ಯುದ್ಧಮಾಡಿ ಅವರನ್ನು ಕೊಂದನು. ಎಲ್ಲ ಸಂದರ್ಭಗಳಲ್ಲಿಯೂ ಮನುಷ್ಯನು ಸಾಂಸಾರಿಕ ಜೀವನದ ಸುಖದುಃಖಗಳಲ್ಲಿ ನಿರಾಸಕ್ತನಾಗಿರಬೇಕು. ಏಕೆಂದರೆ ಯಾವ ಮನುಷ್ಯನೂ ಈ ಜಗತ್ತಿನಲ್ಲಿ ಸಂಪೂರ್ಣವಾಗಿ ಸುಖಿಯೂ ಆಗಿರಲಾರ; ಸಂಪೂರ್ಣವಾಗಿ ದುಃಖಿಯೂ ಆಗಿರಲಾರ.

ಸುಖ ದುಃಖಗಳು ಐಹಿಕ ಬಾಳಿನಲ್ಲಿ ಹಾಸುಹೊಕ್ಕಾಗಿರುವ ಅಂಶಗಳು. ಭಗವದ್ಗೀತೆಯಲ್ಲಿ ಉಪದೇಶ ಮಾಡಿದಂತೆ ಮನುಷ್ಯನು ಸಹನೆಯನ್ನು ಕಲಿಯಬೇಕು. ಸುಖ ಮತ್ತು ಸಂಕಟಗಳು ಬರುವುದನ್ನೂ ಹೋಗುವುದನ್ನೂ ಮನುಷ್ಯನು ನಿಯಂತ್ರಿಸಲಾರ. ಆದುದರಿಂದ ಪ್ರಾಪಂಚಿಕ ಬದುಕಿನ ರೀತಿಯಲ್ಲಿ ನಿರ್ಲಿಪ್ತನಾಗಿರಬೇಕು ಮತ್ತು ಸುಖದುಃಖಗಳೆರಡರಲ್ಲಿಯೂ ಸಮಚಿತ್ತನಾಗಿರಬೇಕು. ಸಾಮಾನ್ಯವಾಗಿ ನಮಗೆ ಇಷ್ಟವಾದದ್ದು ದೊರೆತಾಗ ಬಹಳ ಸಂತೋಷಪಡುತ್ತೇವೆ ಮತ್ತು ಇಷ್ಟವಲ್ಲದ್ದು ಪ್ರಾಪ್ತಿಯಾದಾಗ ದುಃಖಿಸುತ್ತೇವೆ. ಆದರೆ ನಾವು ಆಧ್ಯಾತ್ಮಿಕ ಸ್ಥಾನದಲ್ಲಿದ್ದಾಗ ಈ ಸಂಗತಿಗಳು ನಮ್ಮನ್ನು ಕಲಕುವುದಿಲ್ಲ. ಆ ಸ್ಥಿತಿಯನ್ನು ತಲಪಲು ನಾವು ಅವಿಚ್ಛಿನ್ನ ಭಕ್ತಿಸೇವೆಯನ್ನು ಅಭ್ಯಾಸ ಮಾಡಬೇಕು. ಕೃಷ್ಣನಿಗೆ ಏಕಾಗ್ರಚಿತ್ತದ ಭಕ್ತಿಸೇವೆ ಎಂದರೆ ಒಂಬತ್ತನೆಯ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಹೇಳಿದ ಕೀರ್ತನ, ಶ್ರವಣ, ಅರ್ಚನ, ನಮಸ್ಕಾರ ಮೊದಲಾದ ಭಕ್ತಿಸೇವೆಯ ಒಂಬತ್ತು ಪ್ರಕ್ರಿಯೆಗಳಲ್ಲಿ ತೊಡಗುವುದು. ಈ ಪ್ರಕ್ರಿಯೆಯನ್ನು ಅನುಸರಿಸಬೇಕು.

ಸಹಜವಾಗಿಯೇ ಆಧ್ಯಾತ್ಮಿಕ ಜೀವನರೀತಿಗೆ ಹೊಂದಿಕೊಂಡವನು ಪ್ರಾಪಂಚಿಕ ಮನೋಧರ್ಮದ ಜನರೊಂದಿಗೆ ಬೆರೆಯಲು ಇಷ್ಟಪಡುವುದಿಲ್ಲ, ಅದು ಅವನ ಮನೋಧರ್ಮಕ್ಕೆ ವಿರೋಧವಾಗುತ್ತದೆ. ಅನಗತ್ಯವಾದ ಸಹವಾಸವಿಲ್ಲದೆ ಏಕಾಂತ ಸ್ಥಳದಲ್ಲಿ ವಾಸಿಸುವುದರಲ್ಲಿ ತನಗೆಷ್ಟು ಒಲವಿದೆ ಎಂದು ನೋಡಿಕೊಂಡು ಮನುಷ್ಯನು ತನ್ನನ್ನು ತಾನೇ ಪರೀಕ್ಷೆ ಮಾಡಿಕೊಳ್ಳಬಹುದು. ಸಹಜವಾಗಿ ಭಕ್ತನಿಗೆ ಅನಗತ್ಯವಾದ ಕ್ರೀಡೆ ಅಥವಾ ಚಲನಚಿತ್ರಕ್ಕೆ ಹೋಗುವುದು ಅಥವಾ ಒಂದು ಸಾಮಾಜಿಕ ಸಮಾರಂಭದಲ್ಲಿ ಸಂತೋಷಪಡುವುದು ಇವುಗಳಲ್ಲಿ ಅಭಿರುಚಿಯಿರುವುದಿಲ್ಲ. ಏಕೆಂದರೆ ಇವುಗಳಿಂದ ವ್ಯರ್ಥ ಕಾಲಹರಣವಾಗುತ್ತದೆ ಎಂದು ಅವನಿಗೆ ಗೊತ್ತು. ಕಾಮಜೀವನವನ್ನು ಅಥವಾ ಬೇರೊಂದು ವಿಷಯವನ್ನು ಅಧ್ಯಯನ ಮಾಡುವ ಅನೇಕ ಮಂದಿ ಸಂಶೋಧಕ ವಿದ್ವಾಂಸರೂ, ತತ್ವಶಾಸ್ತ್ರಜ್ಞರೂ ಇದ್ದಾರೆ. ಆದರೆ ಭಗವದ್ಗೀತೆಯ ಪ್ರಕಾರ ಇಂತಹ ಸಂಶೋಧನೆ ಅಥವಾ ತತ್ವಶಾಸ್ತ್ರದ ಊಹಾತ್ಮಕ ಚಿಂತನೆಗೆ ಯಾವ ಬೆಲೆಯೂ ಇಲ್ಲ. ಇದು ಸ್ವಲ್ಪ ಹೆಚ್ಚೂಕಡಮೆ ಅಸಂಬದ್ಧವೇ. ಭಗವದ್ಗೀತೆಯ ಪ್ರಕಾರ ತತ್ವಶಾಸ್ತ್ರದ

ವಿವೇಚನೆಯನ್ನು ಬಳಸಿ ಮನುಷ್ಯನು ಆತ್ಮದ ಸ್ವರೂಪದ ವಿಷಯದಲ್ಲಿ ಸಂಶೋಧನೆ ಮಾಡಬೇಕು. ಆತ್ಮವನ್ನು ಅರ್ಥಮಾಡಿಕೊಳ್ಳಲು ಸಂಶೋಧನೆ ಮಾಡಬೇಕು. ಹೀಗೆಂದು ಇಲ್ಲಿ ಸಲಹೆ ಮಾಡಿದೆ.

ಆತ್ಮಸಾಕ್ಷಾತ್ಕಾರದ ವಿಷಯ ಹೇಳುವುದಾದರೆ ಭಕ್ತಿಯೋಗವು ವಿಶೇಷವಾಗಿ ಕಾರ್ಯಸಾಧ್ಯವಾದದ್ದು ಎಂದೇ ಸ್ಪಷ್ಟವಾಗಿ ಹೇಳಿದೆ. ಭಕ್ತಿಯ ಪ್ರಶ್ನೆ ಬಂದಾಗ ಪರಮಾತ್ಮ ಮತ್ತು ವ್ಯಕ್ತಿಗತ ಆತ್ಮಗಳ ಸಂಬಂಧವನ್ನು ಪರೀಶೀಲಿಸಬೇಕು. ವ್ಯಕ್ತಿಗತ ಆತ್ಮವೂ ಪರಮಾತ್ಮನೂ ಒಂದಾಗಲು ಸಾಧ್ಯವಿಲ್ಲ. ಭಕ್ತಿ ಪರಿಕಲ್ಪನೆಯಲ್ಲಂತೂ ಸಾಧ್ಯವೇ ಇಲ್ಲ. ಸ್ಪಷ್ಟವಾಗಿ ಹೇಳಿರುವಂತೆ ವ್ಯಕ್ತಿಗತ ಆತ್ಮವು ಪರಮಾತ್ಮನಿಗೆ ಸಲ್ಲಿಸುವ ಸೇವೆ **ನಿತ್ಯ**ವಾದದ್ದು, ನಿರಂತರವಾದದ್ದು. ಆದುದರಿಂದ ಭಕ್ತಿಯು ಶಾಶ್ವತವಾದದ್ದು. ಈ ತತ್ವಶಾಸ್ತ್ರದ ದೃಢನಂಬಿಕೆಯಲ್ಲಿ ಮನುಷ್ಯನು ಸ್ಥಿರವಾಗಿರಬೇಕು.

ಶ್ರೀಮದ್ಭಾಗವತದಲ್ಲಿ (1.2.11) ಇದನ್ನು ವಿವರಿಸಿದೆ. **ವದನ್ತಿ ತತ್ ತತ್ತ್ವವಿದಸ್ ತತ್ತ್ವಂ ಯಜ್‌ಜ್ಞಾನಂ ಅದ್ವಯಮ್** — "ಪರಿಪೂರ್ಣ ಸತ್ಯವನ್ನು ವಾಸ್ತವವಾಗಿ ಬಲ್ಲವರು ಆತ್ಮಸಾಕ್ಷಾತ್ಕಾರವು ಬ್ರಹ್ಮನ್, ಪರಮಾತ್ಮ ಮತ್ತು ಭಗವಾನ್ ಈ ಮೂರು ಬೇರೆ ಬೇರೆ ಹಂತಗಳಲ್ಲಿ ಆಗುತ್ತದೆ ಎನ್ನುವುದನ್ನು ಬಲ್ಲರು." ಪರಿಪೂರ್ಣ ಸತ್ಯದ ಸಾಕ್ಷಾತ್ಕಾರದಲ್ಲಿ ಭಗವಾನನೇ ಕಡೆಯ ಮಾತು. ಆದುದರಿಂದ ಮನುಷ್ಯನು ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳುವ ಆ ನೆಲೆಯನ್ನು ಏರಬೇಕು ಮತ್ತು ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗಬೇಕು. ಜ್ಞಾನದ ಪರಿಪೂರ್ಣತೆ ಇದೇ.

ನಮ್ರತೆಯ ಅಭ್ಯಾಸದಿಂದ ಪ್ರಾರಂಭಿಸಿ ಪರಮ ಸತ್ಯನಾದ ದೇವೋತ್ತಮ ಪರಮ ಪುರುಷನ ಸಾಕ್ಷಾತ್ಕಾರದವರೆಗೆ ಈ ಪ್ರಕ್ರಿಯೆಯು ನೆಲದ ಅಂತಸ್ತಿನಿಂದ ಪ್ರಾರಂಭಿಸಿ ಮೇಲಿನ ಅಂತಸ್ತಿನವರೆಗೆ ಹೋಗುವ ಮೆಟ್ಟಿಲು ಶ್ರೇಣಿಯಂತೆ. ಈ ಮೆಟ್ಟಿಲುಗಳ ಶ್ರೇಣಿಯಲ್ಲಿ ಮೊದಲನೆಯ, ಎರಡನೆಯ ಅಥವಾ ಮೂರನೆಯ ಅಂತಸ್ತನ್ನು ತಲಪಿದವರಿದ್ದಾರೆ. ಆದರೆ ಅತ್ಯಂತ ಮೇಲಿನ ಅಂತಸ್ತನ್ನು ಮನುಷ್ಯ ಮುಟ್ಟದಿದ್ದರೆ ಆತನು ಜ್ಞಾನದ ಕೆಳಹಂತದಲ್ಲಿಯೇ ಇರುತ್ತಾನೆ; ಕೃಷ್ಣನ ಅರಿವೇ ಈ ಅತ್ಯಂತ ಮೇಲಿನ ಅಂತಸ್ತು. ಯಾರಾದರೂ ದೇವರೊಡನೆ ಸ್ಪರ್ಧೆಹೂಡಿ ಅದೇ ಸಮಯದಲ್ಲಿಯೇ ಆಧ್ಯಾತ್ಮಿಕ ಜ್ಞಾನದಲ್ಲಿ ಮುನ್ನಡೆಯಲು ಬಯಸಿದರೆ ಆತನು ವಿಫಲನಾಗುತ್ತಾನೆ. ನಮ್ರತೆಯಿಲ್ಲದೆ ಅರಿವನ್ನು ಪಡೆಯುವುದು ನಿಜವಾಗಿಯೂ ಸಾಧ್ಯವಿಲ್ಲ ಎಂದು ಹೇಳಿದೆ. ತಾನೇ ದೇವರು ಎಂದು ಬೀಗುವುದು ಅಹಂಕಾರದ ಪರಮಾವಧಿ. ಐಹಿಕ ಪ್ರಕೃತಿಯ ಕಟ್ಟುನಿಟ್ಟಾದ ನಿಯಮಗಳು ಜೀವಿಯನ್ನು ಸದಾ ಒದೆಯುತ್ತಿದ್ದರೂ, ಅವನು ಅಜ್ಞಾನದಿಂದ 'ನಾನೇ ದೇವರು' ಎಂದು ಯೋಚಿಸುತ್ತಾನೆ. ಜ್ಞಾನದ ಪ್ರಾರಂಭವು **ಅಮಾನಿತ್ವ,** ನಮ್ರತೆ. ಮನುಷ್ಯನು ನಮ್ರನಾಗಿರಬೇಕು ಮತ್ತು ತಾನು ಪರಮ ಪ್ರಭುವಿಗೆ ಅಧೀನ ಎಂದು ತಿಳಿದುಕೊಳ್ಳಬೇಕು. ಪರಮ ಪ್ರಭುವಿಗೆ ವಿರುದ್ಧವಾಗಿ ದಂಗೆ ಎದ್ದರೆ ಮನುಷ್ಯನು ಐಹಿಕ ಪ್ರಕೃತಿಗೆ ಅಧೀನನಾಗುತ್ತಾನೆ. ಈ ಸತ್ಯವನ್ನು ತಿಳಿದುಕೊಂಡು ಅದನ್ನು ದೃಢವಾಗಿ ನಂಬಬೇಕು.

## ಶ್ಲೋಕ - 13

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್‌ಜ್ಞಾತ್ವಾಮೃತಮಶ್ನುತೇ |**
**ಅನಾದಿ ಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ||೧೩||**

**ಜ್ಞೇಯಮ್**—ತಿಳಿಯಬೇಕಾದುದೋ; **ಯತ್**—ಯಾವುದು; **ತತ್**—ಅದನ್ನು; **ಪ್ರವಕ್ಷ್ಯಾಮಿ**—ಈಗ ವಿವರಿಸುತ್ತೇನೆ; **ಯತ್**—ಯಾವುದನ್ನು; **ಜ್ಞಾತ್ವಾ**—ತಿಳಿದು; **ಅಮೃತಮ್**—ಅಮೃತವನ್ನು; **ಅಶ್ನುತೇ**—ಆಸ್ವಾದಿಸುತ್ತಾನೆ; **ಅನಾದಿ**—ಆದಿಯಿಲ್ಲದವನು; **ಮತ್‌ಪರಮ್**—ನನಗೆ ಅಧೀನನಲ್ಲ; **ಬ್ರಹ್ಮ**—ಚೇತನನು; **ನ ಸತ್**—ಕಾರಣವೂ ಅಲ್ಲ; **ತತ್**—ಅದು; **ನ ಅಸತ್**—ಪರಿಣಾಮವೂ ಅಲ್ಲ; **ಉಚ್ಯತೇ**—ಎಂದು ಹೇಳಲಾಗಿದೆ.

## ಅನುವಾದ

**ಯಾವ ಜ್ಞಾನವನ್ನು ತಿಳಿದುಕೊಂಡು ನೀನು ಅಮೃತತ್ವವನ್ನು ಸವಿಯುವೆಯೋ ಆ ಜ್ಞೇಯವಾದುದನ್ನು ವಿವರಿಸುತ್ತೇನೆ. ಅನಾದಿಯಾದ ಮತ್ತು ನನಗೆ ಅಧೀನವಾದ ಬ್ರಹ್ಮನ್ ಈ ಐಹಿಕ ಜಗತ್ತಿನ ಕಾರ್ಯ-ಕಾರಣದಾಚೆ ಇದೆ.**

## ಭಾವಾರ್ಥ

ಪ್ರಭುವು ಕ್ಷೇತ್ರವನ್ನೂ ಕ್ಷೇತ್ರಜ್ಞನನ್ನೂ ವಿವರಿಸಿದ್ದಾನೆ. ಕ್ಷೇತ್ರಜ್ಞನನ್ನು ತಿಳಿದುಕೊಳ್ಳಲು ಪ್ರಕ್ರಿಯೆಯನ್ನೂ ಅವನು ವಿವರಿಸಿದ್ದಾನೆ. ಈಗ ಅವನು ಜ್ಞೇಯವನ್ನು, ಎಂದರೆ ತಿಳಿದುಕೊಳ್ಳಲು ಸಾಧ್ಯವಿರುವುದನ್ನು, ವಿವರಿಸಲು ಪ್ರಾರಂಭಿಸುತ್ತಾನೆ. ಮೊದಲು ಆತ್ಮನನ್ನು ಅನಂತರ ಪರಮಾತ್ಮನನ್ನು ವಿವರಿಸುತ್ತಾನೆ. ಕ್ಷೇತ್ರಜ್ಞ, ಆತ್ಮ ಮತ್ತು ಪರಮಾತ್ಮ ಇವುಗಳನ್ನು ತಿಳಿದುಕೊಂಡು ಮನುಷ್ಯನು ಜೀವನದ ಅಮೃತವನ್ನು ಸವಿಯಬಹುದು. ಎರಡನೆಯ ಅಧ್ಯಾಯದಲ್ಲಿ ವಿವರಿಸಿದಂತೆ ಜೀವಿಯು ನಿತ್ಯನು, ಶಾಶ್ವತನು. ಇದನ್ನೂ ಇಲ್ಲಿ ದೃಢಪಡಿಸಿದೆ. ಜೀವಿಯು ಹುಟ್ಟಿದ ನಿಶ್ಚಿತ ದಿನವಿಲ್ಲ. ಪರಮ ಪ್ರಭುವಿನಿಂದ ಅಭಿವ್ಯಕ್ತಿ ಪಡೆದ ಜೀವಾತ್ಮನ ಇತಿಹಾಸವನ್ನು ಗುರುತಿಸಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದ ಅದು ಅನಾದಿ. ವೇದ ಸಾಹಿತ್ಯವು ಇದನ್ನು ದೃಢಪಡಿಸುತ್ತದೆ — **ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್** (ಕಠ ಉಪನಿಷತ್ತು 1.2.18) ಕ್ಷೇತ್ರಜ್ಞನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಅವನು ಜ್ಞಾನದಿಂದ ತುಂಬಿದ್ದಾನೆ.

ವೈದಿಕ ಸಾಹಿತ್ಯದಲ್ಲಿ (ಶ್ವೇತಾಶ್ವತರ ಉಪನಿಷತ್ತು 6.16) ಪರಮ ಪ್ರಭುವು ಪರಮಾತ್ಮನಾಗಿ **ಪ್ರಧಾನ ಕ್ಷೇತ್ರಜ್ಞ ಪತಿರ್ ಗುಣೇಶಃ** ಎಂದು ಹೇಳಿದೆ. ಹೀಗೆಂದರೆ ಅವನು ಪ್ರಧಾನ ಕ್ಷೇತ್ರಜ್ಞ ಮತ್ತು ಐಹಿಕ ಪ್ರಕೃತಿಯ ತ್ರಿಗುಣಗಳ ಒಡೆಯ. ಸ್ಮೃತಿಯಲ್ಲಿ ಹೀಗೆ ಹೇಳಿದೆ — **ದಾಸ ಭೂತೋ ಹರೇರ್ ಏವ ನಾನ್ಯಸ್ಯೈವ ಕದಾಚನ** ಜೀವಿಗಳು ಪರಮ ಪ್ರಭುವಿನ ನಿರಂತರ ದಾಸರು. ಇದನ್ನು ಚೈತನ್ಯ ಮಹಾಪ್ರಭುಗಳು ತಮ್ಮ ಉಪದೇಶಗಳಲ್ಲಿ ದೃಢಪಡಿಸಿದ್ದಾರೆ. ಆದುದರಿಂದ ಈ ಶ್ಲೋಕದಲ್ಲಿ ಪ್ರಸ್ತಾಪಿಸಿರುವ ಬ್ರಹ್ಮನ್ ವರ್ಣನೆಯು ವ್ಯಕ್ತಿಗತ ಆತ್ಮಕ್ಕೆ ಸಂಬಂಧಿಸಿದ್ದು; ಬ್ರಹ್ಮ ಎನ್ನುವ ಪದವನ್ನು ಜೀವಿಗೆ ಅನ್ವಯಿಸಿದಾಗ ಅವನು **ಆನಂದ ಬ್ರಹ್ಮನ್**‌ಗೆ ವ್ಯತಿರಿಕ್ತನಾದ **ವಿಜ್ಞಾನ ಬ್ರಹ್ಮನ್** ಎಂದು ಅರ್ಥಮಾಡಿಕೊಳ್ಳಬೇಕು. **ಆನಂದ ಬ್ರಹ್ಮವು** ದೇವೋತ್ತಮ ಪರಮ ಪುರುಷ ಅಥವಾ ಪರಬ್ರಹ್ಮನ್.

## ಶ್ಲೋಕ - 14

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ |**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ||೧೪||**

**ಸರ್ವತಃ**—ಎಲ್ಲ ಕಡೆಗಳಲ್ಲಿ; **ಪಾಣಿ**—ಕೈಗಳು; **ಪಾದಮ್**—ಕಾಲುಗಳುಳ್ಳದ್ದು; **ತತ್**—ಅದು; **ಸರ್ವತಃ**—ಎಲ್ಲ ಕಡೆಗಳಲ್ಲಿ; **ಅಕ್ಷಿ**—ಕಣ್ಣುಗಳು; **ಶಿರಃ**—ತಲೆಗಳು; **ಮುಖಮ್**—ಮುಖಗಳುಳ್ಳದ್ದು; **ಸರ್ವತಃ**—ಎಲ್ಲ ಕಡೆಗಳಲ್ಲಿ; **ಶ್ರುತಿಮತ್**—ಕಿವಿಗಳನ್ನು ಹೊಂದಿದ್ದು; **ಲೋಕೇ**—ಪ್ರಪಂಚದಲ್ಲಿ; **ಸರ್ವಮ್**—ಪ್ರತಿಯೊಂದನ್ನೂ; **ಆವೃತ್ಯ**—ಆವರಿಸಿ; **ತಿಷ್ಠತಿ**—ಇರುತ್ತದೆ.

## ಅನುವಾದ

**ಅವನ ಕೈಗಳು ಮತ್ತು ಕಾಲುಗಳು, ಅವನ ಕಣ್ಣುಗಳು, ತಲೆಗಳು ಮತ್ತು ಮುಖಗಳು ಎಲ್ಲೆಲ್ಲೂ ಇವೆ; ಅವನಿಗೆ ಎಲ್ಲೆಲ್ಲೂ ಕಿವಿಗಳುಂಟು. ಹೀಗೆ ಪರಮಾತ್ಮನು ಸರ್ವವ್ಯಾಪಿಯಾಗಿ ಇದ್ದಾನೆ.**

## ಭಾವಾರ್ಥ

ತನ್ನ ಅಮಿತಕಿರಣಗಳನ್ನು ಪಸರಿಸುತ್ತ ಸೂರ್ಯನು ಇರುವಂತೆ ಪರಮಾತ್ಮನು ಅಥವಾ ದೇವೋತ್ತಮ ಪರಮ ಪುರುಷನು ಇದ್ದಾನೆ. ಅವನು ತನ್ನ ಸರ್ವವ್ಯಾಪಿ ರೂಪದಲ್ಲಿ ಇದ್ದಾನೆ. ಪ್ರಥಮ ಮಹಾಗುರು ಬ್ರಹ್ಮನಿಂದ ಪ್ರಾರಂಭಿಸಿ ಸಣ್ಣ ಇರುವೆಗಳವರೆಗೆ ಎಲ್ಲ ವ್ಯಕ್ತಿಗತ ಜೀವಿಗಳು ಅವನಲ್ಲಿ ಇವೆ. ತಲೆಗಳು, ಕೈಗಳು, ಕಾಲುಗಳು ಮತ್ತು ಕಣ್ಣುಗಳಿಗೆ ಹಾಗೂ ಜೀವಿಗಳಿಗೆ ಮಿತಿಯಿಲ್ಲ. ಎಲ್ಲರೂ ಪರಮಾತ್ಮನಲ್ಲಿದ್ದಾರೆ ಮತ್ತು ಅವನನ್ನು ಅವಲಂಬಿಸಿದ್ದಾರೆ. ಆದುದರಿಂದ ಪರಮಾತ್ಮ ಸರ್ವವ್ಯಾಪಿ. ಆದರೆ ವ್ಯಕ್ತಿಗತ ಆತ್ಮವು ತನ್ನ ಕೈಗಳು, ಕಾಲುಗಳು ಮತ್ತು ಕಣ್ಣುಗಳು ಎಲ್ಲೆಲ್ಲಿಯೂ ಇವೆ ಎಂದು ಹೇಳಲು ಸಾಧ್ಯವಿಲ್ಲ. ತನ್ನ ಕೈಗಳು ಮತ್ತು ಕಾಲುಗಳು ಎಲ್ಲೆಲ್ಲಿಯೂ ಇವೆ ಎನ್ನುವುದು ಅಜ್ಞಾನದಿಂದ ತನಗೆ ಅರಿವಾಗಿಲ್ಲ, ಆದರೆ ಯೋಗ್ಯವಾದ ಜ್ಞಾನವನ್ನು ಪಡೆದಾಗ ತಾನು ಆ ಘಟ್ಟಕ್ಕೆ ಬರುತ್ತೇನೆ ಎಂದು ಅವನು ಯೋಚಿಸಿದರೆ ಅವನ ಯೋಚನೆಯಲ್ಲಿ ವಿರೋಧಾಭಾಸವಿದೆ. ಐಹಿಕ ಪ್ರಕೃತಿಯಿಂದ ಬದ್ಧವಾದ ವ್ಯಕ್ತಿಗತ ಆತ್ಮವು ಪರಮೋನ್ನತನಲ್ಲ ಎಂದು ಇದರ ಅರ್ಥ. ಪರಮೋನ್ನತವು ವ್ಯಕ್ತಿಗತ ಆತ್ಮಕ್ಕಿಂತ ಭಿನ್ನ. ಪರಮ ಪ್ರಭುವು ಮಿತಿಯಿಲ್ಲದಂತೆ ತನ್ನ ಕೈಯನ್ನು ಚಾಚಬಲ್ಲ; ವ್ಯಕ್ತಿಗತ ಆತ್ಮನು ಇದನ್ನು ಮಾಡಲಾರ. ಭಗವದ್ಗೀತೆಯಲ್ಲಿ ಪ್ರಭುವು ಯಾರಾದರೂ ತನಗೆ ಒಂದು ಹೂವನ್ನೋ ಅಥವಾ ಹಣ್ಣನ್ನೋ ಅಥವಾ ಒಂದಿಷ್ಟು ನೀರನ್ನೋ ಅರ್ಪಿಸಿದರೆ ಅವನ್ನು ಸ್ವೀಕರಿಸುತ್ತೇನೆ ಎಂದು ಹೇಳಿದ್ದಾನೆ. ಪ್ರಭುವು ಬಹುದೂರದಲ್ಲಿದ್ದರೆ ಅವನು ಈ ವಸ್ತುಗಳನ್ನು ಸ್ವೀಕರಿಸಲು ಹೇಗೆ ಸಾಧ್ಯ? ಇದು ಪ್ರಭುವಿನ ಸರ್ವಶಕ್ತಿ — ಭೂಮಿಯಿಂದ ಬಹುದೂರ ಇರುವ ತನ್ನ ನಿವಾಸದಲ್ಲಿಯೇ ಆತನು ಇದ್ದರೂ ಯಾರಾದರೂ ಅರ್ಪಿಸಿದುದನ್ನು ಸ್ವೀಕರಿಸಲು ಅವನು ತನ್ನ ಕೈಯನ್ನು ಚಾಚಬಲ್ಲ; ಇದು ಅವನ ಶಕ್ತಿ. ಬ್ರಹ್ಮ ಸಂಹಿತೆಯಲ್ಲಿ (5.37) ಹೀಗೆ ಹೇಳಿದೆ — **ಗೋಲೋಕ ಏವ ನಿವಸತಿ ಅಖಿಲಾತ್ಮ ಭೂತಃ** — ತನ್ನ ದಿವ್ಯಲೋಕದಲ್ಲಿ ಸದಾ ಲೀಲೆಗಳಲ್ಲಿ ಮಗ್ನನಾಗಿದ್ದರೂ ಅವನು ಎಲ್ಲೆಲ್ಲಿಯೂ ಇದ್ದಾನೆ. ವ್ಯಕ್ತಿಗತ ಆತ್ಮವು ತಾನು ಎಲ್ಲೆಲ್ಲಿಯೂ ಇದ್ದೇನೆ ಎಂದು ಹೇಳಿಕೊಳ್ಳಲಾರದು. ಆದುದರಿಂದ ಈ ಶ್ಲೋಕವು ಪರಮಾತ್ಮನನ್ನು, ದೇವೋತ್ತಮ ಪರಮ ಪುರುಷನನ್ನು ವರ್ಣಿಸುತ್ತದೆ, ವ್ಯಕ್ತಿಗತ ಆತ್ಮವನ್ನಲ್ಲ.

## ಶ್ಲೋಕ - 15

**ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿಯವಿವರ್ಜಿತಮ್ |**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ||೧೫||**

**ಸರ್ವ**—ಎಲ್ಲ; **ಇನ್ದ್ರಿಯ**—ಇಂದ್ರಿಯಗಳ; **ಗುಣ**—ಗುಣಗಳ; **ಆಭಾಸಮ್**—ಮೂಲ ಆಕರನು; **ಸರ್ವ**—ಎಲ್ಲ; **ಇನ್ದ್ರಿಯ**—ಇಂದ್ರಿಯ; **ವಿವರ್ಜಿತಮ್**—ರಹಿತನು; **ಅಸಕ್ತಮ್**—ಅನಾಸಕ್ತನು; **ಸರ್ವಭೃತ್**—ಪ್ರತಿಯೊಂದರ ಪಾಲಕನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ನಿರ್ಗುಣಮ್**—ಭೌತಿಕ ಗುಣರಹಿತನು; **ಗುಣಭೋಕ್ತೃ**—ಗುಣಗಳ ಸ್ವಾಮಿಯು; **ಚ**—ಕೂಡ.

## ಅನುವಾದ

**ಪರಮಾತ್ಮನು ಎಲ್ಲ ಇಂದ್ರಿಯಗಳ ಆದಿಮೂಲ, ಆದರೂ ಆತನಿಗೆ ಇಂದ್ರಿಯಗಳಿಲ್ಲ. ಆತನು ಎಲ್ಲ ಜೀವರಾಶಿಯನ್ನು ಪಾಲಿಸುವವನಾದರೂ ನಿರಾಸಕ್ತನು. ಆತನು ನಿಸರ್ಗದ ಗುಣಗಳನ್ನು ಮೀರಿದವನು, ಅದೇ ಕಾಲದಲ್ಲಿ ನಿಸರ್ಗದ ಎಲ್ಲ ಗುಣಗಳ ಪ್ರಭು.**

## ಭಾವಾರ್ಥ

ಪರಮಾತ್ಮನು ಜೀವಿಗಳ ಎಲ್ಲ ಇಂದ್ರಿಯಗಳ ಮೂಲನಾದರೂ ಅವರಿಗಿರುವಂತೆ ಅವನಿಗೆ ಭೌತಿಕ ಇಂದ್ರಿಯಗಳಿಲ್ಲ. ವಾಸ್ತವವಾಗಿ ವ್ಯಕ್ತಿಗತ ಆತ್ಮಗಳಿಗೆ ಆಧ್ಯಾತ್ಮಿಕ ಇಂದ್ರಿಯಗಳುಂಟು, ಆದರೆ ಬದ್ಧಜೀವನದಲ್ಲಿ ಐಹಿಕ ಘಟಕಾಂಶಗಳು ಅವನ್ನು ಮರೆಮಾಡಿರುತ್ತವೆ. ಆದುದರಿಂದ ಇಂದ್ರಿಯಗಳ ಚಟುವಟಿಕೆಗಳು ಜಡವಸ್ತುವಿನ ಮೂಲಕ ಪ್ರಕಟವಾಗುತ್ತವೆ. ಪರಮ ಪ್ರಭುವಿನ ಇಂದ್ರಿಯಗಳಿಗೆ ಈ ಬಗೆಯ ಮರೆಯಿಲ್ಲ. ಅವನ ಇಂದ್ರಿಯಗಳು ಅಲೌಕಿಕವಾದುವು, ಆದುದರಿಂದ ಅವನ್ನು **ನಿರ್ಗುಣ** ಎಂದು ಕರೆಯಲಾಗಿದೆ. **ಗುಣ** ಎಂದರೆ ಐಹಿಕ ಗುಣಗಳು. ಆದರೆ ಅವನ ಇಂದ್ರಿಯಗಳಿಗೆ ಐಹಿಕ ಆಚ್ಛಾದನೆಯಿಲ್ಲ. ಅವನ ಇಂದ್ರಿಯಗಳು ನಮ್ಮ ಇಂದ್ರಿಯಗಳಂತೆಯೇ ಇಲ್ಲ ಎಂದು ಅರ್ಥಮಾಡಿಕೊಳ್ಳಬೇಕು. ನಮ್ಮ ಇಂದ್ರಿಯಗಳ ಎಲ್ಲ ಚಟುವಟಿಕೆಗಳ ಮೂಲ ಅವನೇ ಆದರೂ ಅವನಿಗೆ ಅಲೌಕಿಕ ಇಂದ್ರಿಯಗಳಿವೆ; ಅವು ನಿರ್ಮಲವಾಗಿವೆ. ಶ್ವೇತಾಶ್ವತರ ಉಪನಿಷತ್ತಿನ **ಅಪಾಣಿ ಪಾದೋ ಜವನೋ ಗ್ರಹೀತಾ** ಎನ್ನುವ ಶ್ಲೋಕದಲ್ಲಿ ಇದನ್ನು ಬಹು ಚೆನ್ನಾಗಿ ವಿವರಿಸಿದೆ. ದೇವೋತ್ತಮ ಪರಮ ಪುರುಷನಿಗೆ ಐಹಿಕ ಕಶ್ಮಲದ ಸೋಂಕಿರುವ ಕೈಗಳಿಲ್ಲ; ಆದರೂ ಅವನಿಗೆ ಕೈಗಳಿವೆ; ಅವನಿಗೆ ಅರ್ಪಿಸಿದ ಯಜ್ಞಗಳನ್ನು ಸ್ವೀಕರಿಸುತ್ತಾನೆ. ಬದ್ಧ ಆತ್ಮಕ್ಕೂ ಪರಮಾತ್ಮನಿಗೂ ಇದೇ ವ್ಯತ್ಯಾಸ. ಅವನಿಗೆ ಐಹಿಕ ಕಣ್ಣುಗಳಿಲ್ಲ; ಆದರೆ ಅವನಿಗೆ ಕಣ್ಣುಗಳಿವೆ. ಇಲ್ಲವಾದರೆ ಅವನು ನೋಡಲು ಹೇಗೆ ಸಾಧ್ಯವಾಗುತ್ತಿತ್ತು? ಭೂತ, ವರ್ತಮಾನ, ಭವಿಷ್ಯ ಎಲ್ಲವನ್ನೂ ಆತ ಕಾಣುತ್ತಾನೆ. ಆತನು ಜೀವಂತ ಪ್ರಾಣಿಯ ಹೃದಯದಲ್ಲಿ ಇದ್ದಾನೆ; ನಾವು ಹಿಂದೆ ಏನು ಮಾಡಿದ್ದೇವೆ, ಈಗ ಏನು ಮಾಡುತ್ತಿದ್ದೇವೆ ಮತ್ತು ಮುಂದೆ ನಮಗಾಗಿ ಏನು ಕಾದಿದೆ ಎಲ್ಲ ಅವನಿಗೆ ಗೊತ್ತು. ಇದನ್ನು ಭಗವದ್ಗೀತೆಯಲ್ಲೂ ದೃಢಪಡಿಸಿದೆ. ಅವನಿಗೆ ಎಲ್ಲವೂ ತಿಳಿದಿದೆ. ಆದರೆ ಅವನನ್ನು ತಿಳಿದವರಿಲ್ಲ.

ಪರಮ ಪ್ರಭುವಿಗೆ ನಮಗಿರುವಂತೆ ಕಾಲುಗಳಿಲ್ಲ. ಆದರೆ ಅವನಿಗೆ ಆಧ್ಯಾತ್ಮಿಕ ಕಾಲುಗಳಿರುವುದರಿಂದ ಆಕಾಶದಲ್ಲಿ ಅವನು ಪ್ರಯಾಣ ಮಾಡಬಲ್ಲ, ಎಂದರೆ ಪ್ರಭುವು ನಿರಾಕಾರನಲ್ಲ. ಅವನಿಗೆ ಕಣ್ಣುಗಳು, ಕಾಲುಗಳು, ಕೈಗಳು ಮತ್ತು ಉಳಿದೆಲ್ಲ ಅಂಗಾಂಗಗಳಿವೆ ಮತ್ತು ನಾವು ಪರಮ ಪ್ರಭುವಿನ ಅವಿಭಾಜ್ಯ ಅಂಗಗಳಾದದ್ದರಿಂದ ನಮಗೂ ಆ ಅಂಗಾಂಗಗಳಿವೆ. ಆದರೆ ಅವನ ಕೈಗಳು, ಕಾಲುಗಳು, ಕಣ್ಣುಗಳು ಮತ್ತು ಇಂದ್ರಿಯಗಳಿಗೆ ಐಹಿಕ ಪ್ರಕೃತಿಯ ಕಲ್ಮಷದ ಸೋಂಕಿಲ್ಲ.

ಪ್ರಭುವು ಕಾಣಿಸಿಕೊಂಡಾಗ ತನ್ನ ಅಂತರಂಗ ಶಕ್ತಿಯಿಂದಾಗಿ ತಾನಿರುವಂತೆಯೇ ಕಾಣಿಸಿಕೊಳ್ಳುತ್ತಾನೆ ಎಂದು ಭಗವದ್ಗೀತೆಯು ದೃಢಪಡಿಸುತ್ತದೆ. ಐಹಿಕ ಶಕ್ತಿಯು ಅವನನ್ನು ಮಲಿನಗೊಳಿಸುವುದಿಲ್ಲ. ಏಕೆಂದರೆ ಅವನು ಐಹಿಕ ಶಕ್ತಿಯ ಪ್ರಭು. ಅವನ ಇಡೀ ಶರೀರವು ಆಧ್ಯಾತ್ಮಿಕವಾದದ್ದು ಎನ್ನುವುದನ್ನು ವೇದಸಾಹಿತ್ಯದಲ್ಲಿ ಕಾಣುತ್ತೇವೆ. ಅವನದು ಶಾಶ್ವತರೂಪ. ಅದಕ್ಕೆ ಸಚ್ಚಿದಾನಂದ ವಿಗ್ರಹ ಎಂದು ಹೆಸರು. ಅವನಲ್ಲಿ ಎಲ್ಲ ಸಿರಿಗಳಿವೆ. ಅವನು ಎಲ್ಲ ಸಿರಿಗಳ ಒಡೆಯ. ಎಲ್ಲ ಶಕ್ತಿಯೂ ಅವನಿಗೆ ಸೇರಿದ್ದು. ಅವನು ಅತ್ಯಂತ ಧೀಮಂತ ಮತ್ತು ಜ್ಞಾನಪೂರ್ಣ. ಇವು ದೇವೋತ್ತಮ ಪರಮ ಪುರುಷನ ಕೆಲವು ಲಕ್ಷಣಗಳು. ಅವನು ಎಲ್ಲ ಜೀವಿಗಳ ಪಾಲಕ ಮತ್ತು ಸರ್ವಸಾಕ್ಷಿ. ವೇದಸಾಹಿತ್ಯದಿಂದ ನಾವು ತಿಳಿದುಕೊಳ್ಳಲು ಸಾಧ್ಯವಾಗುವ ಮಟ್ಟಿಗೆ ಪರಮ ಪ್ರಭುವು ಯಾವಾಗಲೂ ದಿವ್ಯನು. ಅವನ ತಲೆ, ಮುಖ, ಕೈಗಳು ಮತ್ತು ಕಾಲುಗಳನ್ನು ನಾವು ಕಾಣಲು ಸಾಧ್ಯವಿಲ್ಲದಿದ್ದರೂ ಅವನಿಗೆ ಅವುಗಳುಂಟು; ನಾವು ಅಲೌಕಿಕ ಸ್ಥಿತಿಗೆ ಏರಿದಾಗ ಅವನ ರೂಪವನ್ನು ಕಾಣಬಹುದು. ನಮ್ಮ ಇಂದ್ರಿಯಗಳಿಗೆ ಐಹಿಕ ಕಲ್ಮಶದ ಸೋಂಕಿರುವುದರಿಂದ ನಾವು ಅವನ ರೂಪವನ್ನು ಕಾಣಲಾರೆವು. ಆದುದರಿಂದಲೇ ಐಹಿಕ ಜಗತ್ತಿನ ಪ್ರಭಾವಕ್ಕೆ ಒಳಗಾದ ನಿರಾಕಾರವಾದಿಗಳು ದೇವೋತ್ತಮ ಪುರುಷನನ್ನು ಅರ್ಥಮಾಡಿಕೊಳ್ಳಲಾರರು.

## ಶ್ಲೋಕ - 16

**ಬಹಿರನ್ತಶ್ಚ ಭೂತಾನಾಮಚರಂ ಚರಮೇವ ಚ |**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ||೧೬||**

**ಬಹಿಃ**—ಹೊರಗೆ; **ಅನ್ತಃ**—ಒಳಗೆ; **ಚ**—ಕೂಡ; **ಭೂತಾನಾಮ್**—ಎಲ್ಲ ಜೀವಿಗಳ; **ಅಚರಮ್**—ಚಲಿಸದ; **ಚರಮ್**—ಚಲಿಸುವ; **ಏವ**—ಕೂಡ; **ಚ**—ಮತ್ತು; **ಸೂಕ್ಷ್ಮತ್ವಾತ್**—ಸೂಕ್ಷ್ಮವಾಗಿರುವ ಕಾರಣದಿಂದಾಗಿ; **ತತ್**—ಅದು; **ಅವಿಜ್ಞೇಯಮ್**—ತಿಳಿಯಲಾಗದುದು; **ದೂರಸ್ಥಮ್**—ಬಹು ದೂರದಲ್ಲಿದ್ದೂ; **ಚ**—ಕೂಡ; **ಅನ್ತಿಕೇ**—ಹತ್ತಿರದಲ್ಲಿ; **ಚ**—ಮತ್ತು; **ತತ್**—ಅದು.

## ಅನುವಾದ

**ಪರಮ ಸತ್ಯನು ಎಲ್ಲ ಜೀವಿಗಳ ಮತ್ತು ಚರಾಚರಗಳ ಒಳಗೂ ಹೊರಗೂ ಇದ್ದಾನೆ. ಆತನು ಸೂಕ್ಷ್ಮನಾದದ್ದರಿಂದ ಐಹಿಕ ಇಂದ್ರಿಯಗಳು ಅವನನ್ನು ನೋಡಲಾರವು ಮತ್ತು ತಿಳಿಯಲಾರವು. ಬಹುದೂರದಲ್ಲಿದ್ದರೂ ಅವನು ಎಲ್ಲರಿಗೂ ಸಮೀಪದಲ್ಲಿದ್ದಾನೆ.**

## ಭಾವಾರ್ಥ

ಪರಮ ಪುರುಷನಾದ ನಾರಾಯಣನು ಪ್ರತಿಯೊಂದು ಜೀವಿಯ ಒಳಗೂ ಹೊರಗೂ ವಾಸಮಾಡುತ್ತಾನೆ ಎಂದು ವೇದಸಾಹಿತ್ಯದಿಂದ ನಮಗೆ ತಿಳಿದುಬರುತ್ತದೆ. ಅವನು ಆಧ್ಯಾತ್ಮಿಕ ಮತ್ತು ಐಹಿಕ ಜಗತ್ತುಗಳೆರಡರಲ್ಲಿಯೂ ಇದ್ದಾನೆ. ಅವನು ಬಹುದೂರದಲ್ಲಿದ್ದರೂ ನಮ್ಮ ಹತ್ತಿರವಿದ್ದಾನೆ. ಹೀಗೆಂದು ವೇದಸಾಹಿತ್ಯ ಹೇಳುತ್ತದೆ. **ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ** (ಕಠ ಉಪನಿಷತ್ತು 1.2.21). ಸದಾ ದಿವ್ಯಾನಂದದಲ್ಲಿರುವುದರಿಂದ ಅವನು ತನ್ನ ಪೂರ್ಣಸಿರಿಯನ್ನು ಹೇಗೆ ಸವಿಯುತ್ತಾನೆ ಎನ್ನುವುದು ನಮಗೆ ಅರ್ಥವಾಗುವುದಿಲ್ಲ. ನಮ್ಮ ಐಹಿಕ ಇಂದ್ರಿಯಗಳಿಂದ ನೋಡುವುದಾಗಲೀ ಅರ್ಥಮಾಡಿಕೊಳ್ಳುವುದಾಗಲೀ ಸಾಧ್ಯವಿಲ್ಲ. ಆದುದರಿಂದ ಅವನನ್ನು ಅರ್ಥಮಾಡಿಕೊಳ್ಳಲು ನಮ್ಮ ಐಹಿಕ ಮನಸ್ಸು ಮತ್ತು ಇಂದ್ರಿಯಗಳು ಕೆಲಸಮಾಡಲಾರವು ಎಂದು ವೈದಿಕ ಭಾಷೆಯಲ್ಲಿ ಹೇಳಿದೆ. ಆದರೆ ಭಕ್ತಿಸೇವೆಯಲ್ಲಿ ಕೃಷ್ಣಪ್ರಜ್ಞೆಯನ್ನು ಅಭ್ಯಾಸಮಾಡಿಕೊಂಡು ತನ್ನ ಮನಸ್ಸನ್ನೂ ಇಂದ್ರಿಯಗಳನ್ನೂ ಶುದ್ಧಗೊಳಿಸಿಕೊಂಡಿರುವವನು ಸದಾ ಅವನನ್ನು ನೋಡಬಲ್ಲ. ಪರಮ ಪ್ರಭುವಿನಲ್ಲಿ ಪ್ರೀತಿಯನ್ನು ಬೆಳೆಸಿಕೊಂಡ ಭಕ್ತನು ಅವಿಚ್ಛಿನ್ನವಾಗಿ ನಿರಂತರವೂ ಅವನನ್ನು ಕಾಣಬಲ್ಲ ಎಂದು ಬ್ರಹ್ಮಸಂಹಿತೆಯು ದೃಢಪಡಿಸಿದೆ. ಭಕ್ತಿಸೇವೆಯಿಂದ ಮಾತ್ರ ಅವನನ್ನು ಕಂಡು ಅರ್ಥಮಾಡಿಕೊಳ್ಳುವುದು ಸಾಧ್ಯ. **ಭಕ್ತ್ಯಾತ್ವನನ್ಯಯಾ ಶಕ್ಯಃ** ಎಂದು ಭಗವದ್ಗೀತೆಯಲ್ಲಿ (11.54) ದೃಢಪಡಿಸಿದೆ.

## ಶ್ಲೋಕ - 17

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ |**
**ಭೂತಭರ್ತೃ ಚ ತಜ್‌ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ||೧೭||**

**ಅವಿಭಕ್ತಮ್**—ವಿಭಜಿತನಾಗದವನು; **ಚ**—ಕೂಡ; **ಭೂತೇಷು**—ಎಲ್ಲ ಜೀವಿಗಳಲ್ಲಿ; **ವಿಭಕ್ತಮ್**—ವಿಭಜಿತನು; **ಇವ**—ಅಂತೆ; **ಚ**—ಕೂಡ; **ಸ್ಥಿತಮ್**—ನೆಲೆಸಿದ್ದಾನೆ; **ಭೂತಭರ್ತೃ**—ಎಲ್ಲ ಜೀವಿಗಳ ಪಾಲಕನು; **ಚ**—ಕೂಡ; **ತತ್**—ಅದನ್ನು; **ಜ್ಞೇಯಮ್**—ತಿಳಿದುಕೊಳ್ಳಬೇಕು; **ಗ್ರಸಿಷ್ಣು**—ಭಕ್ಷಕನು; **ಪ್ರಭವಿಷ್ಣು**—ವೃದ್ಧಿಕಾರಕನು; **ಚ**—ಕೂಡ.

## ಅನುವಾದ

**ಪರಮಾತ್ಮನು ಎಲ್ಲ ಪ್ರಾಣಿಗಳಲ್ಲಿ ಹಂಚಿರುವಂತೆ ಕಂಡರೂ ಅವನು ವಿಭಾಗವಾಗುವುದಿಲ್ಲ; ಅವನು ಏಕವಾಗಿ ಸ್ಥಿತನಾಗಿರುತ್ತಾನೆ. ಪ್ರತಿಯೊಂದು ಜೀವಿಯ ಪಾಲಕನಾದರೂ ಅವನು ಎಲ್ಲರನ್ನೂ ತಿಂದುಹಾಕುತ್ತಾನೆ ಮತ್ತು ಎಲ್ಲರನ್ನೂ ಬೆಳೆಸುತ್ತಾನೆ ಎಂದು ಅರ್ಥಮಾಡಿಕೊಳ್ಳಬೇಕು.**

## ಭಾವಾರ್ಥ

ಪರಮಾತ್ಮನಾಗಿ ಪ್ರಭುವು ಎಲ್ಲರ ಹೃದಯಗಳಲ್ಲಿಯೂ ಇದ್ದಾನೆ. ಹೇಗೆಂದರೆ ಅವನು ವಿಭಾಗವಾಗಿದ್ದಾನೆ ಎಂದು ಅರ್ಥವೆ? ಇಲ್ಲ. ವಾಸ್ತವವಾಗಿ ಅವನು ಏಕ. ಸೂರ್ಯನ

ಉದಾಹರಣೆಯನ್ನು ಸಾಮಾನ್ಯವಾಗಿ ಕೊಡುತ್ತಾರೆ. ಅವನು ಮಧ್ಯಾಹ್ನ ರೇಖೆಯಲ್ಲಿರುವಾಗ ತನ್ನ ಸ್ಥಾನದಲ್ಲಿರುತ್ತಾನೆ. ಆದರೆ ಯಾರಾದರೂ ಎಲ್ಲ ದಿಕ್ಕುಗಳಲ್ಲಿ ಐದು ಸಾವಿರ ಮೈಲಿ ಹೋಗಿ, 'ಸೂರ್ಯನೆಲ್ಲಿ?' ಎಂದು ಕೇಳಿದರೆ ಎಲ್ಲರೂ ಆತನಿಗೆ ಸೂರ್ಯನು ಅವನ ನೆತ್ತಿಯ ಮೇಲೆಯೇ ಪ್ರಕಾಶಿಸುತ್ತಿದ್ದಾನೆ ಎಂದು ಹೇಳುತ್ತಾರೆ. ಪರಮಾತ್ಮನು ಭಾಗವಾಗದಿದ್ದರೂ ಭಾಗವಾದಂತೆ ನೆಲೆಸಿರುತ್ತಾನೆ ಎಂದು ತೋರಿಸಲು ವೇದಸಾಹಿತ್ಯದಲ್ಲಿ ಈ ಉದಾಹರಣೆಯನ್ನು ಕೊಡುತ್ತಾರೆ. ಅಲ್ಲದೆ, ಹಲವಾರು ಸ್ಥಳಗಳಲ್ಲಿ ಸೂರ್ಯನು ಹಲವಾರು ಮಂದಿಗೆ ಗೋಚರನಾಗುವಂತೆ ಒಬ್ಬ ವಿಷ್ಣುವು ತನ್ನ ಸರ್ವಶಕ್ತಿಯಿಂದ ಎಲ್ಲೆಲ್ಲೂ ಇದ್ದಾನೆ ಎಂದು ವೇದಸಾಹಿತ್ಯದಲ್ಲಿ ಹೇಳಿದೆ. ಪರಮ ಪ್ರಭುವು ಎಲ್ಲ ಜೀವಿಗಳ ಪಾಲಕನಾದರೂ, ಪ್ರಳಯಕಾಲದಲ್ಲಿ ಎಲ್ಲರನ್ನೂ ನುಂಗಿ ಹಾಕುತ್ತಾನೆ. ಹನ್ನೊಂದನೆಯ ಅಧ್ಯಾಯದಲ್ಲಿ ಪ್ರಭುವು ತಾನು ಕುರುಕ್ಷೇತ್ರದಲ್ಲಿ ನೆರೆದಿದ್ದ ಎಲ್ಲ ಯೋಧರನ್ನು ತಿನ್ನಲು ಬಂದಿದ್ದೇನೆ ಎಂದು ಹೇಳಿದಾಗ ಇದು ದೃಢಪಟ್ಟಿತು. ಕಾಲದ ರೂಪದಲ್ಲಿಯೂ ತಾನು ಭಕ್ಷಿಸುವುದಾಗಿ ಅವನು ಹೇಳಿದ. ಅವನು ಲಯಕಾರಿ, ಸರ್ವವಿನಾಶಕ. ಸೃಷ್ಟಿಯಾಗುವಾಗ ಅವನು ಎಲ್ಲರನ್ನೂ ಅವರ ಮೂಲ ಸ್ಥಿತಿಯಿಂದ ಬೆಳೆಸುತ್ತಾನೆ, ಪ್ರಳಯಕಾಲದಲ್ಲಿ ಅವರನ್ನು ಭಕ್ಷಿಸುತ್ತಾನೆ. ಎಲ್ಲ ಜೀವಿಗಳ ಮೂಲನೂ ಅವನೇ, ಶಾಂತಿತಾಣವೂ ಅವನೇ ಎಂದು ವೇದಗಳ ಸ್ತೋತ್ರಗಳು ದೃಢಪಡಿಸುತ್ತವೆ. ಸೃಷ್ಟಿಯನಂತರ ಎಲ್ಲಕ್ಕೂ ಅವನ ಸರ್ವಶಕ್ತಿಯೇ ಆಧಾರ. ಪ್ರಳಯದನಂತರ ಎಲ್ಲವೂ ಅವನಲ್ಲಿ ವಿರಮಿಸಲು ಹಿಂದಿರುಗುತ್ತವೆ. ವೇದಗಳ ಸ್ತೋತ್ರಗಳು ಹೀಗೆ ದೃಢಪಡಿಸುತ್ತವೆ. **ಯತೋ ವಾ ಇಮಾನಿ ಭೂತಾನಿ ಜಾಯನ್ತೇ ಯೇನ ಜಾತಾನಿ ಜೀವನ್ತಿ ಯತ್ ಪ್ರಯನ್ತಿ ಅಭಿಸಂವಿಶನ್ತಿ ತದ್ ಬ್ರಹ್ಮ ತದ್ ವಿಜಿಜ್ಞಾಸಸ್ವ** (ತೈತ್ತಿರೀಯ ಉಪನಿಷತ್ತು 3.1).

## ಶ್ಲೋಕ - 18

**ಜ್ಯೋತಿಷಾಮಪಿ ತತ್‌ಜ್ಯೋತಿಸ್ತಮಸಃ ಪರಮುಚ್ಯತೇ |**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ||೧೮||**

**ಜ್ಯೋತಿಷಾಮ್**—ಎಲ್ಲ ಬೆಳಗುವ ವಸ್ತುಗಳಲ್ಲಿ; **ಅಪಿ**—ಕೂಡ; **ತತ್**—ಅದು; **ಜ್ಯೋತಿಃ**—ಬೆಳಕಿನ ಮೂಲವು; **ತಮಸಃ**—ಅಂಧಕಾರವನ್ನು; **ಪರಮ್**—ಮೀರಿದವನು ಎಂದು; **ಉಚ್ಯತೇ**—ಹೇಳಲಾಗಿದೆ; **ಜ್ಞಾನಮ್**—ಜ್ಞಾನವು; **ಜ್ಞೇಯಮ್**—ತಿಳಿಯಬೇಕಾದವನು; **ಜ್ಞಾನಗಮ್ಯಮ್**—ಜ್ಞಾನದಿಂದ ಸಮೀಪಿಸಬೇಕಾದವನು; **ಹೃದಿ**—ಹೃದಯದಲ್ಲಿ; **ಸರ್ವಸ್ಯ**—ಪ್ರತಿಯೊಬ್ಬರ; **ವಿಷ್ಠಿತಮ್**—ನೆಲೆಸಿದವನು.

## ಅನುವಾದ

**ಆತನು ಎಲ್ಲ ಪ್ರಕಾಶಮಾನ ವಸ್ತುಗಳ ಬೆಳಕಿನ ಮೂಲ. ಆತನು ಜಡವಸ್ತುವಿನ ತಮಸ್ಸಿನಾಚೆ ಇದ್ದಾನೆ ಮತ್ತು ಅವನು ಅವ್ಯಕ್ತನು. ಅವನು ಜ್ಞಾನ, ಜ್ಞಾನದ ವಸ್ತು ಮತ್ತು ಜ್ಞಾನದ ಗುರಿ. ಅವನು ಎಲ್ಲರ ಹೃದಯಗಳಲ್ಲಿ ಪ್ರತಿಷ್ಠಿತನಾಗಿದ್ದಾನೆ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಪರಮಾತ್ಮನು ಸೂರ್ಯ, ಚಂದ್ರ ಮತ್ತು ನಕ್ಷತ್ರಗಳಂತಹ ಪ್ರಕಾಶಮಾನ ವಸ್ತುಗಳ ಪ್ರಭೆಯ ಮೂಲ. ಆಧ್ಯಾತ್ಮಿಕ ಜಗತ್ತಿನಲ್ಲಿ ಸೂರ್ಯ ಚಂದ್ರರ ಅಗತ್ಯವೇ ಇಲ್ಲ. ಏಕೆಂದರೆ ಪರಮ ಪ್ರಭುವಿನ ಪ್ರಭೆಯೇ ಅಲ್ಲಿದೆ ಎನ್ನುವುದನ್ನು ವೇದ ಸಾಹಿತ್ಯದಲ್ಲಿ ಕಾಣುತ್ತೇವೆ. ಐಹಿಕ ಜಗತ್ತಿನಲ್ಲಿ ಪ್ರಭುವಿನ ದಿವ್ಯತೇಜಸ್ಸಾದ **ಬ್ರಹ್ಮಜ್ಯೋತಿ**ಯನ್ನು ಮಹತ್‌ತತ್ವವು ಎಂದರೆ ಐಹಿಕ ಘಟಕಾಂಶಗಳು ಮರೆಮಾಡಿರುತ್ತವೆ; ಆದುದರಿಂದ ಈ ಐಹಿಕ ಜಗತ್ತಿನಲ್ಲಿ ಬೆಳಕಿಗಾಗಿ ನಮಗೆ ಸೂರ್ಯ, ಚಂದ್ರ, ವಿದ್ಯುಚ್ಛಕ್ತಿ ಮೊದಲಾದವುಗಳ ನೆರವು ಬೇಕು. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ಅಂತಹ ವಸ್ತುಗಳ ಅಗತ್ಯವಿಲ್ಲ. ಪರಮಾತ್ಮನ ಪ್ರಕಾಶಮಾನ ತೇಜಸ್ಸಿನಿಂದ ಎಲ್ಲದರ ಮೇಲೂ ಬೆಳಕು ಬೀಳುತ್ತದೆ ಎಂದು ವೇದಸಾಹಿತ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಆತನು ಐಹಿಕ ಜಗತ್ತಿನಲ್ಲಿ ನೆಲೆಸಿಲ್ಲ ಎಂದು ಸ್ಪಷ್ಟವಾಗಿದೆ. ಅವನಿರುವುದು ಆಧ್ಯಾತ್ಮಿಕ ಜಗತ್ತಿನಲ್ಲಿ. ಅದು ಆಧ್ಯಾತ್ಮಿಕ ಗಗನದಲ್ಲಿ ಬಹುದೂರ ಇದೆ. ಇದನ್ನು ವೇದ ಸಾಹಿತ್ಯದಲ್ಲಿಯೂ ದೃಢಪಡಿಸಿದೆ —**ಆದಿತ್ಯವರ್ಣಂ ತಮಸಃ ಪರಸ್ತಾತ್** (ಶ್ವೇತಾಶ್ವತರ ಉಪನಿಷತ್ತು 3.8) ಆತನು ಸೂರ್ಯನಂತೆ ನಿರಂತರವಾಗಿ ಪ್ರಕಾಶಮಾನನು; ಆದರೆ ಈ ಐಹಿಕ ಜಗತ್ತಿನ ಕತ್ತಲೆಯಿಂದ ಬಹುದೂರ ಇದ್ದಾನೆ.

ಆತನದು ದಿವ್ಯಜ್ಞಾನ. ವೇದಸಾಹಿತ್ಯವು ಬ್ರಹ್ಮನ್ ಕೇಂದ್ರೀಕರಿಸಿದ ದಿವ್ಯಜ್ಞಾನ ಎನ್ನುವುದನ್ನು ದೃಢಪಡಿಸುತ್ತದೆ. ಆ ಆಧ್ಯಾತ್ಮಿಕ ಜಗತ್ತಿಗೆ ಸೇರಬೇಕೆಂದು ಕಾತರನಾದವನಿಗೆ ಪರಮ ಪ್ರಭುವು ಜ್ಞಾನವನ್ನು ನೀಡುತ್ತಾನೆ; ಪ್ರಭುವು ಪ್ರತಿಯೊಬ್ಬರ ಹೃದಯದಲ್ಲಿಯೂ ಪ್ರತಿಷ್ಠಿತನಾಗಿದ್ದಾನೆ. ಒಂದು ವೈದಿಕ ಮಂತ್ರ ಹೀಗಿದೆ — **ತಂ ಹ ದೇವಮ್ ಆತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ ವೈ ಶರಣಮ್ ಅಹಂ ಪ್ರಪದ್ಯೇ** (ಶ್ವೇತಾಶ್ವತರ ಉಪನಿಷತ್ತು 6.18) ಬಿಡುಗಡೆಯನ್ನು ಬಯಸುವವನು ದೇವೋತ್ತಮ ಪರಮ ಪುರುಷನಿಗೆ ಶರಣಾಗಬೇಕು. ಕಟ್ಟಕಡೆಯ ಜ್ಞಾನದ ಗುರಿಯನ್ನು ಕುರಿತು ಹೇಳುವುದಾದರೆ ಅದನ್ನು ವೇದ ಸಾಹಿತ್ಯವು ದೃಢಪಡಿಸುತ್ತದೆ — **ತಂ ಏವ ವಿದಿತ್ವಾತಿ ಮೃತ್ಯುಮ್ ಏತಿ** "ಅವನನ್ನು ತಿಳಿಯುವುದರಿಂದ ಮಾತ್ರ ಮನುಷ್ಯನು ಹುಟ್ಟು ಸಾವುಗಳ ಎಲ್ಲೆಯನ್ನು ಮೀರಬಲ್ಲನು" (ಶ್ವೇತಾಶ್ವತರ ಉಪನಿಷತ್ತು 3.8).

ಆತನು ಪರಮ ನಿಯಂತ್ರಕನಾಗಿ ಪ್ರತಿಯೊಬ್ಬರ ಹೃದಯದಲ್ಲಿಯೂ ನೆಲೆಸಿದ್ದಾನೆ. ಪರಮ ಪ್ರಭುವಿನ ಕಾಲುಗಳು, ಕೈಗಳು ಎಲ್ಲೆಡೆ ಹಂಚಿಹೋಗಿವೆ; ವ್ಯಕ್ತಿಗತ ಆತ್ಮದ ವಿಷಯದಲ್ಲಿ ಈ ಮಾತನ್ನು ಹೇಳಲು ಸಾಧ್ಯವಿಲ್ಲ. ಆದುದರಿಂದ ಇಬ್ಬರು ಕ್ಷೇತ್ರಜ್ಞರು — ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮ — ಇದ್ದಾರೆ ಎಂಬುದನ್ನು ಒಪ್ಪಲೇಬೇಕು. ಇವರಲ್ಲಿ ಒಬ್ಬರ ಕೈಕಾಲುಗಳು ಒಂದು ಸ್ಥಳದಲ್ಲಿ ಹಂಚಿವೆ. ಆದರೆ ಕೃಷ್ಣನ ಕೈಗಳು ಮತ್ತು ಕಾಲುಗಳು ಎಲ್ಲೆಡೆ ಹಂಚಿ ಹೋಗಿವೆ. ಇದನ್ನು ಶ್ವೇತಾಶ್ವತರ ಉಪನಿಷತ್ತು ದೃಢಪಡಿಸುತ್ತದೆ (3.17) — ಸರ್ವಸ್ಯ ಪ್ರಭುಮ್ ಈಶಾನಂ ಸರ್ವಸ್ಯ ಶರಣಂ ಬೃಹತ್. ದೇವೋತ್ತಮ ಪರಮ ಪುರುಷನಾದ ಪರಮಾತ್ಮನು ಎಲ್ಲ ಜೀವಿಗಳ ಪ್ರಭು; ಅವನು ಎಲ್ಲ ಜೀವಿಗಳ ಕಟ್ಟಕಡೆಯ ಆಶ್ರಯನು. ಆದುದರಿಂದ ಅತ್ಯುಚ್ಚ ಪರಮಾತ್ಮನೂ ವ್ಯಕ್ತಿಗತ ಆತ್ಮನೂ ಯಾವಾಗಲೂ ಬೇರೆ ಬೇರೆಯೇ ಎನ್ನುವ ವಾಸ್ತವಾಂಶವನ್ನು ನಿರಾಕರಿಸಲಾಗುವುದಿಲ್ಲ.

## ಶ್ಲೋಕ - 19

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ |**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ||೧೯||**

ಇತಿ—ಹೀಗೆ; **ಕ್ಷೇತ್ರಮ್**—ಕಾರ್ಯಕ್ಷೇತ್ರವನ್ನು (ಶರೀರ); ತಥಾ—ಕೂಡ; **ಜ್ಞಾನಮ್**—ಜ್ಞಾನವನ್ನು; ಜ್ಞೇಯಮ್—ತಿಳಿಯಬೇಕಾದವನನ್ನು; ಚ—ಕೂಡ; **ಉಕ್ತಮ್**—ವಿವರಿಸಿದೆ; ಸಮಾಸತಃ—ಸಾರಾಂಶದಲ್ಲಿ; ಮತ್‌ಭಕ್ತಃ—ನನ್ನ ಭಕ್ತನು; **ಏತತ್**—ಇದನ್ನೆಲ್ಲ; ವಿಜ್ಞಾಯ—ತಿಳಿದ ಮೇಲೆ; **ಮತ್‌ಭಾವಾಯ**—ನನ್ನ ಸ್ವಭಾವವನ್ನು; **ಉಪಪದ್ಯತೇ**—ಹೊಂದುತ್ತಾನೆ.

## ಅನುವಾದ

**ಹೀಗೆ ನಾನು ಕ್ಷೇತ್ರ (ದೇಹ), ಜ್ಞಾನ ಮತ್ತು ಜ್ಞಾನಕ್ಕೆ ನಿಲುಕುವುದು ಎಂದರೆ ಜ್ಞೇಯ — ಇವನ್ನು ಸಂಗ್ರಹವಾಗಿ ಹೇಳಿದ್ದಾಯಿತು. ನನ್ನ ಭಕ್ತರು ಮಾತ್ರ ಇದನ್ನು ಪೂರ್ಣವಾಗಿ ಅರ್ಥಮಾಡಿಕೊಂಡು ನನ್ನ ಸ್ವಭಾವವನ್ನು ಪಡೆಯುತ್ತಾರೆ.**

## ಭಾವಾರ್ಥ

ಪ್ರಭುವು ದೇಹ, ಜ್ಞಾನ ಮತ್ತು ಜ್ಞೇಯಗಳನ್ನು ಸಂಕ್ಷೇಪವಾಗಿ ವರ್ಣಿಸಿದ್ದಾನೆ. ಈ ಜ್ಞಾನವು ಮೂರು ವಸ್ತುಗಳನ್ನು ಕುರಿತದ್ದು — ಕ್ಷೇತ್ರಜ್ಞ, ಜ್ಞೇಯ ಮತ್ತು ಜ್ಞಾನದ ಪ್ರಕ್ರಿಯೆ. ಮೂರನ್ನೂ ಸೇರಿಸಿ **ವಿಜ್ಞಾನ** ಎಂದು ಕರೆಯುತ್ತಾರೆ. ಭಗವಂತನ ಪರಿಶುದ್ಧ ಭಕ್ತರು ಪರಿಪೂರ್ಣ ಜ್ಞಾನವನ್ನು ನೇರವಾಗಿ ತಿಳಿಯಬಲ್ಲರು. ಇತರರಿಗೆ ತಿಳಿಯಲು ಸಾಧ್ಯವಾಗುವುದಿಲ್ಲ. ಕಟ್ಟಕಡೆಯ ಹಂತದಲ್ಲಿ ಈ ಮೂರೂ ಒಂದೇ ಆಗುತ್ತವೆ ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಭಕ್ತರು ಇದನ್ನು ಒಪ್ಪುವುದಿಲ್ಲ. ಜ್ಞಾನ ಮತ್ತು ಜ್ಞಾನದಲ್ಲಿ ಬೆಳವಣಿಗೆ ಎಂದರೆ ಕೃಷ್ಣಪ್ರಜ್ಞೆಯಲ್ಲಿ ತನ್ನನ್ನು ಅರ್ಥಮಾಡಿಕೊಳ್ಳುವುದು. ಐಹಿಕ ಪ್ರಜ್ಞೆಯು ನಮ್ಮನ್ನು ನಡೆಸುತ್ತದೆ. ಆದರೆ ಎಲ್ಲ ಪ್ರಜ್ಞೆಯನ್ನು ಕೃಷ್ಣನ ಕೆಲಸ ಕಾರ್ಯಗಳಿಗೆ ವರ್ಗಾಯಿಸಿ ಕೃಷ್ಣನೇ ಸರ್ವಸ್ವ ಎಂದು ಅರ್ಥಮಾಡಿಕೊಳ್ಳುತ್ತಲೇ ನಾವು ನಿಜವಾದ ಜ್ಞಾನವನ್ನು ಸಾಧಿಸುತ್ತೇವೆ. ಜ್ಞಾನವೆಂದರೆ ಭಕ್ತಿಸೇವೆಯ ಪೂರ್ವಭಾವಿ ಅರಿವು ಮಾತ್ರವಲ್ಲದೆ ಬೇರೇನೂ ಅಲ್ಲ. ಹದಿನೈದನೆಯ ಅಧ್ಯಾಯದಲ್ಲಿ ಇದನ್ನು ಬಹು ಸ್ಪಷ್ಟವಾಗಿ ವಿವರಿಸಲಾಗುವುದು.

ಸಂಗ್ರಹವಾಗಿ ಹೇಳುವುದಾದರೆ, **ಮಹಾಭೂತಾನಿ**ಯಿಂದ ಪ್ರಾರಂಭವಾಗಿ **ಚೇತನಾ ಧೃತಿಃ** ಎನ್ನುವವರೆಗೆ ಆರು ಮತ್ತು ಏಳನೆಯ ಶ್ಲೋಕಗಳು ಐಹಿಕ ಮೂಲ ಘಟಕಗಳನ್ನು, ಬದುಕಿನ ಲಕ್ಷಣಗಳ ಕೆಲವು ಅಭಿವ್ಯಕ್ತಿಯನ್ನು ವಿಶ್ಲೇಷಣೆ ಮಾಡುತ್ತವೆ ಎಂದು ಅರ್ಥಮಾಡಿಕೊಳ್ಳಬಹುದು. ಇವು ಒಂದುಗೂಡಿ ದೇಹ ಅಥವಾ ಕ್ಷೇತ್ರ ಆಗುತ್ತದೆ. **ಅಮಾನಿತ್ವಮ್**ನಿಂದ **ತತ್ವಜ್ಞಾನಾರ್ಥ ದರ್ಶನಮ್**ವರೆಗೆ ಎಂಟರಿಂದ ಹನ್ನೆರಡನೆಯ ಶ್ಲೋಕಗಳು ಎರಡು ಬಗೆಯ ಕ್ಷೇತ್ರಜ್ಞರನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯನ್ನು ವರ್ಣಿಸುತ್ತವೆ; ಆತ್ಮ ಮತ್ತು ಪರಮಾತ್ಮ ಈ ಕ್ಷೇತ್ರಜ್ಞರು. **ಅನಾದಿ ಮತ್‌ಪರಮ್**ನಿಂದ ಪ್ರಾರಂಭವಾಗಿ **ಹೃದಿ ಸರ್ವಸ್ಯ ವಿಷ್ಠಿತಮ್**ವರೆಗೆ ಹದಿಮೂರರಿಂದ

ಹದಿನೆಂಟರವರೆಗಿನ ಶ್ಲೋಕಗಳು ಆತ್ಮನನ್ನೂ ಪರಮ ಪ್ರಭು ಅಥವಾ ಪರಮಾತ್ಮನನ್ನೂ ವರ್ಣಿಸುತ್ತವೆ.

ಈ ಮೂರು ಅಂಶಗಳನ್ನು ವರ್ಣಿಸಿದೆ — ಕ್ಷೇತ್ರ (ದೇಹ), ಜ್ಞಾನದ ಪ್ರಕ್ರಿಯೆ ಮತ್ತು ಆತ್ಮ ಹಾಗೂ ಪರಮಾತ್ಮ. ಪ್ರಭುವಿನ ಪರಿಶುದ್ಧ ಭಕ್ತರು ಮಾತ್ರ ಈ ಮೂರು ಅಂಶಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬಲ್ಲರು ಎಂದು ಇಲ್ಲಿ ವಿಶೇಷವಾಗಿ ವರ್ಣಿಸಿದೆ. ಆದುದರಿಂದ ಭಕ್ತರಿಗೆ ಭಗವದ್ಗೀತೆಯು ಸಂಪೂರ್ಣವಾಗಿ ಉಪಯುಕ್ತವಾಗಿದೆ; ಪರಮ ಪ್ರಭುವಾದ ಕೃಷ್ಣನ ಸ್ವಭಾವವೇ ಪರಮಗುರಿ; ಇದನ್ನು ಪಡೆಯಬಲ್ಲವರು ಈ ಭಕ್ತರು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಭಕ್ತರು ಮಾತ್ರ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಬಲ್ಲರು ಮತ್ತು ಅಪೇಕ್ಷಿತ ಪರಿಣಾಮವನ್ನು ಪಡೆಯಬಲ್ಲರು; ಇತರರಿಗೆ ಇದು ಸಾಧ್ಯವಿಲ್ಲ.

## ಶ್ಲೋಕ - 20

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ |**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಮ್ಭವಾನ್ ||೨೦||**

**ಪ್ರಕೃತಿಮ್**—ಭೌತಿಕ ಪ್ರಕೃತಿಯನ್ನು; **ಪುರುಷಮ್**—ಜೀವಿಗಳನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ವಿದ್ಧಿ**—ನೀನು ತಿಳಿಯಬೇಕು; **ಅನಾದೀ**—ಆದಿ ಇಲ್ಲದ; **ಉಭೌ**—ಎರಡನ್ನೂ; **ಅಪಿ**—ಕೂಡ; **ವಿಕಾರಾನ್**—ಪರಿವರ್ತನೆಗಳನ್ನು; **ಚ**—ಕೂಡ; **ಗುಣಾನ್**—ಮೂರು ಪ್ರಕೃತಿ ಗುಣಗಳನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ವಿದ್ಧಿ**—ತಿಳಿದುಕೊ; **ಪ್ರಕೃತಿ**—ಭೌತಿಕ ಪ್ರಕೃತಿಯ; **ಸಮ್ಭವಾನ್**—ಉತ್ಪನ್ನವಾದ.

## ಅನುವಾದ

**ಪ್ರಕೃತಿ ಮತ್ತು ಜೀವಿಗಳು ಅನಾದಿ ಎಂದು ತಿಳಿಯಬೇಕು. ಅವರ ಮಾರ್ಪಾಡುಗಳೂ ಗುಣಗಳೂ ಪ್ರಕೃತಿಯಿಂದ ಆದವು.**

## ಭಾವಾರ್ಥ

ಈ ಅಧ್ಯಾಯದಲ್ಲಿ ನೀಡಿರುವ ಜ್ಞಾನದಿಂದ ಕ್ಷೇತ್ರವನ್ನೂ, ಕ್ಷೇತ್ರಜ್ಞರನ್ನೂ (ವ್ಯಕ್ತಿಗತ ಆತ್ಮ ಮತ್ತು ಪರಮಾತ್ಮರನ್ನೂ) ಅರ್ಥಮಾಡಿಕೊಳ್ಳಬಹುದು. ದೇಹವು ಕ್ಷೇತ್ರ; ಇದು ಐಹಿಕ ಪ್ರಕೃತಿಯಿಂದ ಆದದ್ದು. ದೇಹಧಾರಿಯಾಗಿ ದೇಹದ ಚಟುವಟಿಕೆಗಳನ್ನು ಸವಿಯುತ್ತಿರುವ ವ್ಯಕ್ತಿಗತ ಆತ್ಮವು **ಪುರುಷ** ಅಥವಾ ಜೀವಿ. ಅವನೊಬ್ಬ ಕ್ಷೇತ್ರಜ್ಞ; ಇನ್ನೊಬ್ಬನು ಪರಮಾತ್ಮ. ಪರಮಾತ್ಮನೂ, ವ್ಯಕ್ತಿಯ ಆತ್ಮವೂ ದೇವೋತ್ತಮ ಪರಮ ಪುರುಷನ ಬೇರೆ ಬೇರೆ ಅಭಿವ್ಯಕ್ತಿಗಳು ಎಂಬುದನ್ನು ತಿಳಿದುಕೊಳ್ಳಬೇಕು. ವ್ಯಕ್ತಿಗತ ಆತ್ಮನು ಭಗವಂತನ ಶಕ್ತಿಯ ವರ್ಗಕ್ಕೆ ಸೇರಿದವನು; ಪರಮಾತ್ಮನು ಭಗವಂತನ ಸ್ವಾಂಶ ವಿಸ್ತರಣೆಗೆ ಸೇರಿದವನು.

ಪ್ರಕೃತಿಯೂ ಜೀವಿಯೂ ನಿತ್ಯವಾದವರು. ಎಂದರೆ, ಅವರು ಸೃಷ್ಟಿಗೆ ಮೊದಲೇ ಇದ್ದರು. ಪ್ರಕೃತಿಯ ಅಭಿವ್ಯಕ್ತಿಯು ಪರಮ ಪ್ರಭುವಿನ ಶಕ್ತಿಯಿಂದ ಆದದ್ದು. ಜೀವಿಗಳೂ ಹಾಗೆಯೇ. ಆದರೆ ಜೀವಿಗಳು ಶ್ರೇಷ್ಠಶಕ್ತಿಗೆ ಸೇರಿದವರು. ಈ ಸೃಷ್ಟಿಯು ರೂಪತಾಳುವ ಮೊದಲೇ ಜೀವಿಗಳೂ ಐಹಿಕ ಪ್ರಕೃತಿಯೂ ಅಸ್ತಿತ್ವದಲ್ಲಿದ್ದವು. ಐಹಿಕ ಪ್ರಕೃತಿಯು ದೇವೋತ್ತಮ ಪರಮ ಪುರುಷನಾದ ಮಹಾವಿಷ್ಣುವಿನಲ್ಲಿ ಸೇರಿ ಹೋಯಿತು; ಅಗತ್ಯವಾದಾಗ ಅದು **ಮಹತ್ ತತ್ತ್ವ**ದ ಮೂಲಕ ಪ್ರಕಟವಾಯಿತು. ಹೀಗೆಯೇ ಜೀವಿಗಳೂ ಅವನಲ್ಲಿವೆ; ಅವು ಬದ್ಧವಾಗಿರುವುದರಿಂದ ಅವಕ್ಕೆ ಪರಮ ಪ್ರಭುವಿನ ಸೇವೆಯನ್ನು ಮಾಡಲು ಇಷ್ಟವಿಲ್ಲ. ಹೀಗೆ ಅವು ಆಧ್ಯಾತ್ಮಿಕ ಗಗನವನ್ನು ಪ್ರವೇಶಿಸಲು ಅವಕಾಶವನ್ನು ಕೊಡುವುದಿಲ್ಲ. ಆದರೆ ಐಹಿಕ ನಿಸರ್ಗವು ಹೊರ ಬಂದಾಗ ಈ ಜೀವಿಗಳಿಗೆ ಮತ್ತೊಮ್ಮೆ ಐಹಿಕ ಜಗತ್ತಿನಲ್ಲಿ ಕ್ರಿಯೆಯಲ್ಲಿ ತೊಡಗಲು ಮತ್ತು ದಿವ್ಯ ಜಗತ್ತನ್ನು ಪ್ರವೇಶಿಸಲು ಸಿದ್ಧಮಾಡಿಕೊಳ್ಳಲು ಇನ್ನೊಂದು ಅವಕಾಶವನ್ನು ಕೊಡಲಾಗುವುದು. ಐಹಿಕಸೃಷ್ಟಿಯ ರಹಸ್ಯ ಇದು. ಜೀವಿಯು ಮೂಲತಃ ಪರಮ ಪ್ರಭುವಿನ ವಿಭಿನ್ನಾಂಶ. ಆದರೆ ತನ್ನ ಬಂಡಾಯದ ಸ್ವಭಾವದಿಂದ ಅವನು ಐಹಿಕ ಪ್ರಕೃತಿಯಲ್ಲಿ ಬದ್ಧನಾಗುತ್ತಾನೆ. ಈ ಜೀವಿಗಳು ಅಥವಾ ಭಗವಂತನ ಶ್ರೇಷ್ಠಶಕ್ತಿಯ ಅಂಶಗಳು ಐಹಿಕ ಪ್ರಕೃತಿಯ ಸಂಪರ್ಕವನ್ನು ಹೇಗೆ ಪಡೆದವು ಎಂಬುದು ವಾಸ್ತವವಾಗಿ ಮುಖ್ಯವೇ ಅಲ್ಲ. ಆದರೆ ಇದು ವಾಸ್ತವವಾಗಿ ಏಕೆ ಮತ್ತು ಹೇಗೆ ಆಯಿತು ಎನ್ನುವುದು ದೇವೋತ್ತಮ ಪರಮ ಪುರುಷನಿಗೆ ತಿಳಿದಿರುತ್ತದೆ. ಈ ಐಹಿಕ ಪ್ರಕೃತಿಯಿಂದ ಆಕರ್ಷಿತರಾದವರು ಅಸ್ತಿತ್ವಕ್ಕಾಗಿ ಕಠಿಣಶ್ರಮ ಪಡುತ್ತಿದ್ದಾರೆ ಎಂದು ಧರ್ಮಗ್ರಂಥಗಳಲ್ಲಿ ಪ್ರಭುವು ಹೇಳುತ್ತಾನೆ. ಆದರೆ ಐಹಿಕ ಪ್ರಕೃತಿಯಲ್ಲಿ ತ್ರಿಗುಣಗಳಿಂದ ಆಗುವ ಎಲ್ಲ ಪರಿವರ್ತನೆಗಳೂ ಪ್ರಭಾವಗಳೂ ಐಹಿಕ ಪ್ರಕೃತಿಯಿಂದಾದುವು ಎನ್ನುವುದನ್ನು ನಾವು ನಿಶ್ಚಯವಾಗಿ ತಿಳಿದುಕೊಳ್ಳಬೇಕು. ಜೀವಿಗಳಿಗೆ ಸಂಬಂಧಿಸಿದ ಎಲ್ಲ ಪರಿವರ್ತನೆಗಳಿಗೂ ವೈವಿಧ್ಯಕ್ಕೂ ದೇಹವೇ ಕಾರಣ. ಚೇತನದ ಮಟ್ಟಿಗೆ, ಎಲ್ಲ ಜೀವಿಗಳೂ ಒಂದೇ.

## ಶ್ಲೋಕ - 21

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ |**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ||೨೧||**

**ಕಾರ್ಯ**—ಪರಿಣಾಮದ; **ಕಾರಣ**—ಮತ್ತು ಕಾರಣಗಳ; **ಕರ್ತೃತ್ವೇ**—ಸೃಷ್ಟಿಯ ವಿಚಾರದಲ್ಲಿ; **ಹೇತುಃ**—ಸಾಧನವು ಎಂದು; **ಪ್ರಕೃತಿಃ**—ಭೌತಿಕ ಪ್ರಕೃತಿಯು; **ಉಚ್ಯತೇ**—ಹೇಳಲಾಗುತ್ತದೆ; **ಪುರುಷಃ**—ಜೀವಿಯು; **ಸುಖ**—ಸುಖ; **ದುಃಖಾನಾಮ್**—ಮತ್ತು ದುಃಖಗಳ; **ಭೋಕ್ತೃತ್ವೇ**—ಅನುಭೋಗದಲ್ಲಿ; **ಹೇತುಃ**—ಸಾಧನವು ಎಂದು; **ಉಚ್ಯತೇ**—ಹೇಳಲಾಗುತ್ತದೆ.

## ಅನುವಾದ

**ಎಲ್ಲ ಐಹಿಕ ಕಾರ್ಯಕಾರಣಗಳ ಕಾರಣವು ಪ್ರಕೃತಿ ಎಂದು ಹೇಳಲಾಗಿದೆ; ಈ ಪ್ರಪಂಚದಲ್ಲಿ ಹಲವು ಬಗೆಯ ಸುಖದುಃಖಗಳಿಗೆ ಜೀವಿಯು ಕಾರಣ.**

## ಭಾವಾರ್ಥ

ಜೀವಿಗಳಲ್ಲಿ ದೇಹಗಳು ಮತ್ತು ಇಂದ್ರಿಯಗಳು ಬೇರೆ ಬೇರೆ ರೀತಿಗಳಲ್ಲಿ ಪ್ರಕಟವಾಗುವುದಕ್ಕೆ ಐಹಿಕ ಪ್ರಕೃತಿಯೇ ಕಾರಣ. ಜೀವಿಗಳಲ್ಲಿ 84,00,000 ಬೇರೆ ಬೇರೆ ವರ್ಗಗಳಿವೆ. ಈ ಭಿನ್ನ ರೀತಿಗಳು ಐಹಿಕ ಪ್ರಕೃತಿಯ ಸೃಷ್ಟಿ. ಇವು ಜೀವಿಯ ಬೇರೆ ಬೇರೆ ಇಂದ್ರಿಯ ಸುಖಗಳಿಂದ ಹುಟ್ಟುತ್ತವೆ; ಜೀವಿ ಈ ದೇಹದಲ್ಲಿ ಅಥವಾ ಆ ದೇಹದಲ್ಲಿ ಇರಬೇಕೆಂದು ಬಯಸುತ್ತಾನೆ. ಆತನನ್ನು ಬೇರೆ ಬೇರೆ ದೇಹಗಳಲ್ಲಿ ಇಟ್ಟಾಗ ಬೇರೆ ಬೇರೆ ರೀತಿಗಳ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಅವನ ಐಹಿಕ ಸುಖದುಃಖಗಳಿಗೆ ಕಾರಣ ಅವನು ಇರುವ ರೀತಿಯಲ್ಲ, ಆದರೆ ಅವನ ದೇಹ. ಅವನ ಮೂಲಸ್ಥಿತಿಯಲ್ಲಿ ಭೋಗದ ವಿಷಯದಲ್ಲಿ ಅನುಮಾನವೇ ಇಲ್ಲ. ಆದುದರಿಂದ ಅದೇ ಅವನ ನಿಜವಾದ ಸ್ಥಿತಿ. ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸಬೇಕೆಂಬ ಅಪೇಕ್ಷೆಯ ಫಲವಾಗಿ ಅವನು ಐಹಿಕ ಜಗತ್ತಿನಲ್ಲಿದ್ದಾನೆ. ಆಧ್ಯಾತ್ಮಿಕ ಜಗತ್ತಿನಲ್ಲಿ ಇಂತಹುದು ಇಲ್ಲವೇ ಇಲ್ಲ. ಆಧ್ಯಾತ್ಮಿಕ ಜಗತ್ತು ಪರಿಶುದ್ಧವಾದದ್ದು. ಆದರೆ ಐಹಿಕ ಜಗತ್ತಿನಲ್ಲಿ ಪ್ರತಿಯೊಬ್ಬರೂ ದೇಹಕ್ಕಾಗಿ ಬೇರೆ ಬೇರೆ ಬಗೆಯ ಸುಖಗಳನ್ನು ಪಡೆಯಲು ಶ್ರಮಪಡುತ್ತಾರೆ. ದೇಹವು ಇಂದ್ರಿಯಗಳ ಪರಿಣಾಮ ಎಂದು ಹೇಳಿದರೆ ಇದು ಇನ್ನೂ ಸ್ಪಷ್ಟವಾದೀತು. ಬಯಕೆಯ ತೃಪ್ತಿಗಾಗಿ ಇರುವ ಸಾಧನೆಗಳು ಇಂದ್ರಿಯಗಳು. ದೇಹ ಮತ್ತು ಸಾಧನಗಳಾದ ಇಂದ್ರಿಯಗಳು ಒಟ್ಟಾಗಿ ಇವನ್ನು ಐಹಿಕ ಪ್ರಕೃತಿ ನೀಡುತ್ತದೆ. ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗುವಂತೆ ಜೀವಿಯ ಹಿಂದಿನ ಬಯಕೆ ಮತ್ತು ಕರ್ಮಗಳಿಗೆ ಅನುಗುಣವಾಗಿ ಅವನಿಗೆ ಹಿತವಾದ ಅಥವಾ ಅಹಿತವಾದ ಸನ್ನಿವೇಶವು ಲಭ್ಯವಾಗುತ್ತವೆ. ಐಹಿಕ ಪ್ರಕೃತಿಯು ಮನುಷ್ಯನ ಬಯಕೆಗಳು ಮತ್ತು ಕರ್ಮಗಳಿಗೆ ಅನುಗುಣವಾಗಿ ಅವನನ್ನು ವಿವಿಧ ವಾಸಸ್ಥಳಗಳಲ್ಲಿ ಇರಿಸುತ್ತದೆ. ಯಾವುದೇ ವಾಸಸ್ಥಳ ಲಭ್ಯವಾಗುವುದಕ್ಕೆ ಮತ್ತು ಅವನಿಗೆ ಬರುವ ಸುಖ ದುಃಖಗಳಿಗೆ ಆ ಜೀವಿಯೇ ಕಾರಣ. ದೇಹವು ಜಡವಸ್ತುವಾದದ್ದರಿಂದ ಪ್ರಕೃತಿಯ ನಿಯಮಕ್ಕೆ ಅನುಗುಣವಾಗಿ ಕೆಲಸ ಮಾಡುತ್ತದೆ. ಆದುದರಿಂದ ಜೀವಿಯನ್ನು ಒಮ್ಮೆ ಒಂದು ನಿರ್ದಿಷ್ಟವಾದ ಬಗೆಯ ದೇಹದಲ್ಲಿ ಇರಿಸುತ್ತಲೇ ಅವನು ಪ್ರಕೃತಿಯ ನಿಯಂತ್ರಣಕ್ಕೆ ಬರುತ್ತಾನೆ. ಪ್ರಕೃತಿಯ ನಿಯಮವನ್ನು ಬದಲು ಮಾಡಲು ಆ ಕಾಲದಲ್ಲಿ ಜೀವಿಗೆ ಶಕ್ತಿಯಿರುವುದಿಲ್ಲ. ಜೀವಿಯನ್ನು ಒಂದು ನಾಯಿಯ ದೇಹದಲ್ಲಿ ಇರಿಸಿದೆ ಎಂದುಕೊಳ್ಳೋಣ. ನಾಯಿಯ ದೇಹದಲ್ಲಿ ಇರಿಸಿದ ಕೂಡಲೇ ಅವನು ನಾಯಿಯಂತೆ ನಡೆದುಕೊಳ್ಳಬೇಕು. ಅವನು ಬೇರೆ ರೀತಿಯಲ್ಲಿ ನಡೆದುಕೊಳ್ಳಲು ಸಾಧ್ಯವಿಲ್ಲ. ಜೀವಿಯನ್ನು ಒಂದು ಹಂದಿಯ ದೇಹದಲ್ಲಿ ಇರಿಸಿದರೆ ಅವನು ಹೊಲಸನ್ನು ತಿಂದು ಹಂದಿಯಂತೆ ನಡೆದುಕೊಳ್ಳಲೇಬೇಕು. ಹಾಗೆಯೇ ಜೀವಿಯನ್ನು ಒಬ್ಬ ದೇವತೆಯ ದೇಹದಲ್ಲಿ ಇಟ್ಟರೆ ಅವನು ತನ್ನ ದೇಹಕ್ಕೆ ಅನುಗುಣವಾಗಿ ನಡೆದುಕೊಳ್ಳಬೇಕು. ಇದು ಪ್ರಕೃತಿಯ ನಿಯಮ. ಆದರೆ ಎಲ್ಲ ಸನ್ನಿವೇಶಗಳಲ್ಲಿಯೂ ಪರಮಾತ್ಮನು ಜೀವಾತ್ಮನೊಡನೆ ಇರುತ್ತಾನೆ. ಇದನ್ನು ವೇದಗಳಲ್ಲಿ (ಮುಂಡಕ ಉಪನಿಷತ್ತು 3.1.1) ಹೀಗೆ ವಿವರಿಸಿದೆ — **ದ್ವಾ ಸುಪರ್ಣಾ ಸಯುಜಾ ಸಖಾಯಃ**. ಪರಮ ಪ್ರಭುವು ಜೀವಾತ್ಮನ ವಿಷಯದಲ್ಲಿ ಎಷ್ಟು ಕರುಣಾಮಯನೆಂದರೆ ಅವನು ಜೀವಾತ್ಮನೊಡನೆ ಇರುತ್ತಾನೆ ಮತ್ತು ಎಲ್ಲ ಸನ್ನಿವೇಶಗಳಲ್ಲಿಯೂ ಪರಮಾತ್ಮನಾಗಿ ಇರುತ್ತಾನೆ.

## ಶ್ಲೋಕ - 22

**ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ |**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ||೨೨||**

**ಪುರುಷಃ**—ಜೀವಿಯು; **ಪ್ರಕೃತಿಸ್ಥಃ**—ಭೌತಿಕ ಶಕ್ತಿಯಲ್ಲಿ ನೆಲೆಸಿ; **ಹಿ**—ಖಂಡಿತವಾಗಿಯೂ; **ಭುಙ್ಕ್ತೇ**—ಅನುಭೋಗಿಸುತ್ತಾನೆ; **ಪ್ರಕೃತಿಜಾನ್**—ಭೌತಿಕ ಪ್ರಕೃತಿಯಿಂದ ಉತ್ಪನ್ನವಾದ; **ಗುಣಾನ್**—ಪ್ರಕೃತಿಗುಣಗಳನ್ನು; **ಕಾರಣಮ್**—ಕಾರಣವು; **ಗುಣಸಙ್ಗಃ**—ಪ್ರಕೃತಿಗುಣಗಳ ಸಂಗವು; **ಅಸ್ಯ**—ಜೀವಿಯ; **ಸತ್ ಅಸತ್**—ಒಳ್ಳೆಯ ಮತ್ತು ಕೆಟ್ಟ; **ಯೋನಿ**—ಜೀವಜಾತಿಗಳ; **ಜನ್ಮಸು**—ಜನ್ಮಗಳಲ್ಲಿ.

## ಅನುವಾದ

**ಐಹಿಕ ಪ್ರಕೃತಿಯಲ್ಲಿ ಜೀವಾತ್ಮನು ಹೀಗೆ ತ್ರಿಗುಣಗಳನ್ನು ಅನುಭವಿಸುತ್ತ ಬದುಕಿನ ರೀತಿಗಳನ್ನು ಅನುಸರಿಸುತ್ತಾನೆ. ಇದಕ್ಕೆ ಐಹಿಕ ಪ್ರಕೃತಿಯೊಡನೆ ಅವನ ಸಹಯೋಗವೇ ಕಾರಣ. ಹೀಗೆ ಆತನು ವಿವಿಧ ಜೀವಿ ವರ್ಗಗಳಲ್ಲಿ ಒಳ್ಳೆಯದನ್ನು ಕೆಟ್ಟದ್ದನ್ನು ಅನುಭವಿಸುತ್ತಾನೆ.**

## ಭಾವಾರ್ಥ

ಜೀವಾತ್ಮಗಳು ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೇಗೆ ಸಾಗುತ್ತಾರೆ ಎನ್ನುವುದನ್ನು ಅರ್ಥಮಾಡಿಕೊಳ್ಳಲು ಈ ಶ್ಲೋಕವು ಬಹು ಮುಖ್ಯವಾದದ್ದು. ಮನುಷ್ಯನು ಉಡುಪನ್ನು ಬದಲಾಯಿಸುವ ಹಾಗೆ ಜೀವಿಯು ದೇಹದಿಂದ ದೇಹಕ್ಕೆ ಸಾಗುತ್ತಾನೆ. ಇದನ್ನು ಎರಡನೆಯ ಅಧ್ಯಾಯದಲ್ಲಿ ಹೇಳಿದೆ. ಉಡುಪಿನ ಈ ಬದಲಾವಣೆಗೆ ಐಹಿಕ ಅಸ್ತಿತ್ವದಲ್ಲಿ ಅವನಿಗಿರುವ ಆಸಕ್ತಿಯೇ ಕಾರಣ. ಈ ಮಾಯಾ ಅಭಿವ್ಯಕ್ತಿಯು ಅವನನ್ನು ಮೋಹಗೊಳಿಸಿದಷ್ಟು ಕಾಲವೂ ಅವನು ದೇಹದಿಂದ ದೇಹಕ್ಕೆ ಸಾಗುತ್ತಲೇ ಇರಬೇಕಾಗುತ್ತದೆ. ಐಹಿಕ ಪ್ರಕೃತಿಯ ಮೇಲೆ ಪ್ರಭುತ್ವ ನಡೆಸಬೇಕೆಂಬ ಅವನ ಆಸೆಯಿಂದ ಅವನು ಇಂತಹ ಅಪೇಕ್ಷಣೀಯವಲ್ಲದ ಸನ್ನಿವೇಶಗಳಲ್ಲಿ ಇರಿಸಲ್ಪಡುತ್ತಾನೆ. ಜೀವಿಯು ಒಮ್ಮೆ ದೇವತೆಯಾಗಿ, ಒಮ್ಮೆ ಮನುಷ್ಯನಾಗಿ, ಒಮ್ಮೆ ಮೃಗವಾಗಿ, ಪಕ್ಷಿಯಾಗಿ, ಹುಳವಾಗಿ, ಜಲಪ್ರಾಣಿಯಾಗಿ, ಸಂತನಾಗಿ, ತಿಗಣೆಯಾಗಿ ಹುಟ್ಟುತ್ತಾನೆ. ಇದು ಐಹಿಕ ಬಯಕೆಯ ಪ್ರಭಾವದಿಂದಾಗಿ ಆಗುತ್ತದೆ. ಇದು ನಡೆಯುತ್ತಲೇ ಇದೆ. ಎಲ್ಲ ಆಗುಹೋಗುಗಳಲ್ಲಿಯೂ ಜೀವಾತ್ಮನು ತಾನು ಸನ್ನಿವೇಶದ ಪ್ರಭು ಎಂದುಕೊಳ್ಳುತ್ತಾನೆ; ಆದರೆ ಅವನು ಐಹಿಕ ಪ್ರಕೃತಿಯ ಪ್ರಭಾವದಲ್ಲಿರುತ್ತಾನೆ.

ಅವನನ್ನು ಹೀಗೆ ಬೇರೆ ಬೇರೆ ದೇಹಗಳಲ್ಲಿ ಹೇಗೆ ಇರಿಸಲಾಗುತ್ತದೆ ಎನ್ನುವುದನ್ನು ಇಲ್ಲಿ ವಿವರಿಸಲಾಗಿದೆ. ಬೇರೆ ಬೇರೆ ಪ್ರಕೃತಿಯ ಗುಣಗಳ ಸಹಯೋಗವೇ ಇದಕ್ಕೆ ಕಾರಣ. ಆದುದರಿಂದ ಮನುಷ್ಯನು ಮೂರು ಐಹಿಕ ಗುಣಗಳನ್ನು ಮೀರಿ ದಿವ್ಯಸ್ಥಿತಿಯನ್ನು ಸಾಧಿಸಬೇಕು. ಇದಕ್ಕೆ ಕೃಷ್ಣಪ್ರಜ್ಞೆ ಎಂದು ಹೆಸರು. ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ನೆಲೆಸದಿದ್ದರೆ ಅವನ ಐಹಿಕ ಪ್ರಜ್ಞೆಯು ಅವನು ದೇಹದಿಂದ ದೇಹಕ್ಕೆ ಸಾಗುವಂತೆ ಒತ್ತಾಯ ಮಾಡುತ್ತದೆ. ಏಕೆಂದರೆ ಅನಾದಿಕಾಲದಿಂದ ಅವನಿಗೆ ಐಹಿಕ ಬಯಕೆಗಳು ಇದ್ದೇ ಇವೆ. ಆದರೆ ಅವನು ಈ ಗ್ರಹಿಕೆಯನ್ನು ಬದಲಾಯಿಸಿಕೊಳ್ಳಬೇಕು.

ಅಧಿಕಾರಯುತ ಮೂಲಗಳಿಂದ ಕೇಳಿ ತಿಳಿದರೆ ಮಾತ್ರ ಈ ಬದಲಾವಣೆಯನ್ನು ಸಾಧಿಸಬಹುದು. ಇದಕ್ಕೆ ಅತ್ಯುತ್ತಮ ನಿದರ್ಶನ ಇಲ್ಲಿದೆ. ಅರ್ಜುನನು ಕೃಷ್ಣನಿಂದ ದೇವರ ವಿಜ್ಞಾನವನ್ನು ಕೇಳುತ್ತಿದ್ದಾನೆ. ಜೀವಿಯು ಈ ಶ್ರವಣ ಪ್ರಕ್ರಿಯೆಗೆ ತನ್ನನ್ನು ಒಪ್ಪಿಸಿಕೊಂಡರೆ ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸಬೇಕೆಂಬ ಅವನ ಬಹುಕಾಲದ ಬಯಕೆಯನ್ನು ಕಳೆದುಕೊಳ್ಳುತ್ತಾನೆ; ಯಜಮಾನಿಕೆ ನಡೆಸಬೇಕೆಂಬ ಈ ಬಹುಕಾಲದ ಬಯಕೆಯನ್ನು ಕಡಮೆಮಾಡಿಕೊಂಡಂತೆ, ಕ್ರಮೇಣ ಮತ್ತು ಸರಿಪ್ರಮಾಣದಲ್ಲಿ ಆಧ್ಯಾತ್ಮಿಕ ಸುಖವನ್ನು ಅನುಭವಿಸುತ್ತಾನೆ. ಅವನು ದೇವೋತ್ತಮ ಪರಮ ಪುರುಷನ ಸಹಯೋಗವನ್ನು ಕಲಿತುಕೊಂಡಂತೆ ಅಷ್ಟಷ್ಟು ಮಟ್ಟಿಗೆ ತನ್ನ ನಿತ್ಯಾನಂದದ ಬದುಕನ್ನು ಸವಿಯುತ್ತಾನೆ ಎಂದು ವೇದದ ಒಂದು ಮಂತ್ರದಲ್ಲಿ ಹೇಳಿದೆ.

## ಶ್ಲೋಕ - 23

**ಉಪದ್ರಷ್ಟಾನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ |**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ||೨೩||**

**ಉಪದ್ರಷ್ಟಾ**—ಮೇಲ್ವಿಚಾರಕನು; **ಅನುಮನ್ತಾ**—ಅನುಮತಿ ನೀಡುವವನು; **ಚ**—ಕೂಡ; **ಭರ್ತಾ**—ಸ್ವಾಮಿಯು; **ಭೋಕ್ತಾ**—ಪರಮ ಭೋಕ್ತಾರನು; **ಮಹೇಶ್ವರಃ**—ಪರಮ ಪ್ರಭುವು; **ಪರಮ ಆತ್ಮಾ**—ಪರಮಾತ್ಮನು; **ಇತಿ**—ಕೂಡಾ; **ಚ**—ಮತ್ತು; **ಅಪಿ**—ನಿಜವಾಗಿಯೂ; **ಉಕ್ತಃ**—ಹೇಳಲಾಗಿದೆ; **ದೇಹೇ**—ಶರೀರದಲ್ಲಿ; **ಅಸ್ಮಿನ್**—ಈ; **ಪುರುಷಃ**—ಭೋಕ್ತಾರನು; **ಪರಃ**—ದಿವ್ಯನಾದ.

## ಅನುವಾದ

**ಆದರೂ ಈ ದೇಹದಲ್ಲಿ ಇನ್ನೊಬ್ಬನಿದ್ದಾನೆ, ಅವನು ದಿವ್ಯಾನುಭವಿ; ಅವನು ಪ್ರಭು ಮತ್ತು ಪರಮ ಸ್ವಾಮಿ; ಅವನು ಮೇಲ್ವಿಚಾರಕನಾಗಿ ಮತ್ತು ಅಪ್ಪಣೆ ಕೊಡುವವನಾಗಿ ಇರುತ್ತಾನೆ. ಅವನಿಗೆ ಪರಮಾತ್ಮನೆಂದು ಹೆಸರು.**

## ಭಾವಾರ್ಥ

ಯಾವಾಗಲೂ ಜೀವಾತ್ಮನೊಂದಿಗೆ ಇರುವ ಪರಮಾತ್ಮನು ಪರಮ ಪ್ರಭುವಿನ ಪ್ರತಿನಿಧಿ ಎಂದು ಇಲ್ಲಿ ಹೇಳಿದೆ. ಅವನು ಸಾಮಾನ್ಯ ಜೀವಿಯಲ್ಲ. ಅದ್ವೈತ ತತ್ವಶಾಸ್ತ್ರಜ್ಞರು ಕ್ಷೇತ್ರಜ್ಞನು ಒಬ್ಬನೇ ಎಂದು ಭಾವಿಸುವುದರಿಂದ ಪರಮಾತ್ಮನಿಗೂ ಜೀವಾತ್ಮನಿಗೂ ವ್ಯತ್ಯಾಸವಿಲ್ಲ ಎಂದು ಪರಿಗಣಿಸುತ್ತಾರೆ. ಇದನ್ನು ಸ್ಪಷ್ಟಮಾಡಲು ಪ್ರಭುವು ಪರಮಾತ್ಮನಾಗಿ ಎಲ್ಲ ದೇಹಗಳಲ್ಲಿ ತನ್ನ ಪ್ರಾತಿನಿಧ್ಯವಿದೆ ಎಂದು ಹೇಳುತ್ತಾನೆ. ಆತನು **ಪರ** ಎಂದರೆ ದಿವ್ಯನು. ವ್ಯಕ್ತಿಗತ ಆತ್ಮವು ಒಂದು ವಿಶಿಷ್ಟ ಕ್ಷೇತ್ರದ ಚಟುವಟಿಕೆಗಳನ್ನು ಅನುಭವಿಸುತ್ತದೆ. ಆದರೆ ಪರಮಾತ್ಮನು ಮಿತಿಗಳಿರುವ ಭೋಕ್ತೃವಾಗಿಯಾಗಲಿ, ದೇಹದ ಚಟುವಟಿಕೆಗಳಲ್ಲಿ ಭಾಗವಹಿಸುವವನಾಗಿ ಆಗಲಿ ಅಲ್ಲಿರುವುದಿಲ್ಲ. ಸಾಕ್ಷಿಯಾಗಿ, ಮೇಲ್ವಿಚಾರಕನಾಗಿ, ಅಪ್ಪಣೆ ಕೊಡುವವನಾಗಿ ಪರಮ ಭೋಕ್ತೃವಾಗಿ ಇರುತ್ತಾನೆ. ಅವನ ಹೆಸರು ಪರಮಾತ್ಮ; ಆತ್ಮನೆಂದಲ್ಲ. ಅವನು ದಿವ್ಯನು. ಆತ್ಮ, ಪರಮಾತ್ಮ ಬೇರೆ ಬೇರೆ

ಎನ್ನುವುದು ಸುಸ್ಪಷ್ಟ. ಪರಮಾತ್ಮನಿಗೆ ಎಲ್ಲೆಲ್ಲೂ ಕಾಲುಗಳಿವೆ, ಕೈಗಳಿವೆ. ಆದರೆ ಜೀವಾತ್ಮನಿಗೆ ಹೀಗಿಲ್ಲ. ಪರಮಾತ್ಮನು ಪರಮ ಪ್ರಭುವಾದದ್ದರಿಂದ ಜೀವಾತ್ಮನಿಗಿರುವ ಐಹಿಕ ಭೋಗದ ಬಯಕೆಗೆ ಅನುಮತಿ ನೀಡಲು ಒಳಗಿದ್ದಾನೆ. ಪರಮಾತ್ಮನ ಅನುಮತಿ ಇಲ್ಲದೆ ಜೀವಾತ್ಮನು ಏನನ್ನೂ ಮಾಡುವಂತಿಲ್ಲ. ವ್ಯಕ್ತಿಯು **ಭುಕ್ತ** ಎಂದರೆ ಪಾಲಿತನಾದವನು; ಪರಮಾತ್ಮನು **ಭೋಕ್ತಾ** ಎಂದರೆ ಪಾಲಕನು. ಜೀವಿಗಳ ಸಂಖ್ಯೆಗೆ ಮಿತಿ ಇಲ್ಲ. ಅವನು ಅವರಲ್ಲಿ ಮಿತ್ರನಾಗಿ ಇದ್ದಾನೆ.

ವಾಸ್ತವಾಂಶವೆಂದರೆ ಪ್ರತಿಯೊಂದು ಜೀವಿಯೂ ನಿರಂತರವಾಗಿ ಪರಮ ಪ್ರಭುವಿನ ವಿಭಿನ್ನಾಂಶ. ಅವರಿಬ್ಬರದು ಆತ್ಮೀಯ ಸ್ನೇಹಿತರ ಸಂಬಂಧ. ಆದರೆ ಜೀವಾತ್ಮನಿಗೆ ಒಂದು ಪ್ರವೃತ್ತಿಯುಂಟು; ಅವನು ಪರಮ ಪ್ರಭುವಿನ ಒಪ್ಪಿಗೆಯನ್ನು ಕಡೆಗಣಿಸಿ, ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸುವುದಕ್ಕಾಗಿ ಸ್ವತಂತ್ರವಾಗಿ ಕಾರ್ಯಪ್ರವೃತ್ತನಾಗುತ್ತಾನೆ; ಈ ಪ್ರವೃತ್ತಿ ಇರುವುದರಿಂದ ಅವನನ್ನು ಪರಮ ಪ್ರಭುವಿನ ಅಲ್ಪಪ್ರಮಾಣದ ಶಕ್ತಿ ಎಂದು ಕರೆಯಲಾಗಿದೆ. ಈ ಜೀವಿಯು ಐಹಿಕ ಶಕ್ತಿಯಲ್ಲಾಗಲಿ, ಆಧ್ಯಾತ್ಮಿಕ ಶಕ್ತಿಯಲ್ಲಾಗಲಿ ನೆಲೆಸಿರಬಹುದು. ಐಹಿಕ ಶಕ್ತಿಯಿಂದ ಅವನು ಎಲ್ಲಿಯವರೆಗೆ ಬಂಧಿತನಾಗಿರುವನೋ ಅಲ್ಲಿಯವರೆಗೆ ಪರಮಾತ್ಮನಾದ ಪರಮ ಪ್ರಭುವು ಅವನೊಡನೆ ಇರುತ್ತಾನೆ; ಜೀವಿಯು ಆಧ್ಯಾತ್ಮಿಕ ಶಕ್ತಿಗೆ ಹಿಂದಿರುಗುವಂತೆ ಮಾಡುವುದೇ ಅವನ ಉದ್ದೇಶ. ಅವನನ್ನು ಮತ್ತೆ ಆಧ್ಯಾತ್ಮಿಕ ಶಕ್ತಿಗೆ ಕರೆದೊಯ್ಯಲು ಪ್ರಭು ಸದಾ ಕಾತರನಾಗಿರುತ್ತಾನೆ. ಆದರೆ ಅವನ ಅತ್ಯಲ್ಪ ಸ್ವಾತಂತ್ರ್ಯದಿಂದಾಗಿ ಜೀವಿಯು ಆಧ್ಯಾತ್ಮಿಕ ಬೆಳಕಿನ ಸಹಯೋಗವನ್ನು ಸದಾ ತಿರಸ್ಕರಿಸುತ್ತಾನೆ. ಸ್ವಾತಂತ್ರ್ಯದ ಈ ದುರುಪಯೋಗವು ಬದ್ಧ ಪ್ರಕೃತಿಯಲ್ಲಿ ಅವನ ಐಹಿಕ ಘರ್ಷಣೆಗೆ ಕಾರಣ. ಆದುದರಿಂದ ಪ್ರಭುವು ಸದಾ ಅಂತರಂಗದಿಂದ, ಹೊರಗಿನಿಂದ ಮಾರ್ಗದರ್ಶನವನ್ನು ಮಾಡುತ್ತಲೇ ಇರುತ್ತಾನೆ. ಭಗವದ್ಗೀತೆಯಲ್ಲಿ ಹೇಳಿರುವಂತೆ ಅವನು ಹೊರಗಿನಿಂದ ಮಾರ್ಗದರ್ಶನವನ್ನು ಮಾಡುತ್ತಾನೆ; ಒಳಗಿನಿಂದ ಅವನು ಐಹಿಕ ಕ್ಷೇತ್ರದಲ್ಲಿ ಜೀವಿಯ ಕಾರ್ಯ ರೀತಿಯು ನಿಜವಾದ ಸುಖದ ಹಾದಿಯಲ್ಲ ಎಂದು ಜೀವಿಗೆ ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಾನೆ. "ಇದನ್ನು ಬಿಟ್ಟು ಬಿಡು; ನಿನ್ನ ನಂಬಿಕೆಯನ್ನು ನನ್ನೆಡೆಗೆ ತಿರುಗಿಸು; ಆಗ ನೀನು ಸುಖವಾಗಿರುವೆ." ಎಂದು ಅವನು ಹೇಳುತ್ತಾನೆ. ಹೀಗೆ ವಿವೇಕಿಯು ಪರಮಾತ್ಮನಲ್ಲಿ ಅಥವಾ ದೇವೋತ್ತಮ ಪರಮ ಪುರುಷನಲ್ಲಿ ನಂಬಿಕೆ ಇಟ್ಟುಕೊಳ್ಳುತ್ತಾನೆ. ಇದರಿಂದ ಅವನು ನಿತ್ಯ ಜ್ಞಾನಾನಂದದ ಬದುಕಿನತ್ತ ನಡೆಯಲು ಪ್ರಾರಂಭಿಸುತ್ತಾನೆ.

## ಶ್ಲೋಕ - 24

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ |**
**ಸರ್ವಥಾ ವರ್ತಮಾನೋऽಪಿ ನ ಸ ಭೂಯೋऽಭಿಜಾಯತೇ ||೨೪||**

**ಯಃ**—ಯಾರು; **ಏವಮ್**—ಹೀಗೆ; **ವೇತ್ತಿ**—ತಿಳಿಯುತ್ತಾನೋ; **ಾಪುರುಷಮ್**—ಜೀವಿಯನ್ನು; **ಪ್ರಕೃತಿಮ್**—ಭೌತಿಕ ಪ್ರಕೃತಿಯನ್ನು; **ಚ**—ಮತ್ತು; **ಗುಣೈಃ**—ಪ್ರಕೃತಿಗುಣಗಳಿಂದ; **ಸಹ**—ಕೂಡಿ; **ಸರ್ವಥಾ**—ಎಲ್ಲಾ ರೀತಿಗಳಲ್ಲಿ; **ವರ್ತಮಾನಃ**—ಇರುವವನಾಗಿ; **ಅಪಿ**—ಇದ್ದರೂ; **ನ**—ಎಂದಿಗೂ ಇಲ್ಲ; **ಸಃ**—ಅವನು; **ಭೂಯಃ**—ಮತ್ತೆ; **ಅಭಿಜಾಯತೇ**—ಜನ್ಮವೆತ್ತುತ್ತಾನೆ.

## ಅನುವಾದ

**ಪ್ರಕೃತಿಯನ್ನೂ ಜೀವಿಯನ್ನೂ ಮತ್ತು ಗುಣಗಳ ಪರಸ್ಪರ ಪ್ರಕ್ರಿಯೆಯನ್ನೂ ಕುರಿತ ಈ ತತ್ವಜ್ಞಾನವನ್ನು ಅರ್ಥಮಾಡಿಕೊಂಡವನು ಮುಕ್ತಿಯನ್ನು ಪಡೆಯುವುದು ನಿಶ್ಚಯ. ಅವನ ಪ್ರಸ್ತುತ ಸ್ಥಿತಿ ಏನೇ ಆಗಿರಲಿ, ಅವನು ಇಲ್ಲಿ ಮತ್ತೆ ಹುಟ್ಟುವುದಿಲ್ಲ.**

## ಭಾವಾರ್ಥ

ಐಹಿಕ ಪ್ರಕೃತಿ, ಪರಮಾತ್ಮ, ಜೀವಿ ಮತ್ತು ಅವರ ಪರಸ್ಪರ ಪ್ರತಿಕ್ರಿಯೆ ಇವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕು. ಇದರಿಂದ ಮನುಷ್ಯನು ಮತ್ತೆ ಈ ಐಹಿಕ ಪ್ರಕೃತಿಗೆ ಹಿಂದಿರುಗುವ ಒತ್ತಾಯವಿಲ್ಲದೆ ಮುಕ್ತನಾಗುವುದಕ್ಕೆ ಆಧ್ಯಾತ್ಮಿಕ ವಾತಾವರಣಕ್ಕೆ ತಿರುಗಲು ಅರ್ಹನಾಗುತ್ತಾನೆ. ಇದು ಜ್ಞಾನದ ಫಲ. ಜೀವಿಯು ಅಕಸ್ಮಾತ್ತಾಗಿ ಈ ಐಹಿಕ ಅಸ್ತಿತ್ವದಲ್ಲಿ ಬಿದ್ದುಬಿಟ್ಟಿದ್ದಾನೆ ಎನ್ನುವುದನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುವುದು ಜ್ಞಾನದ ಉದ್ದೇಶ. ಅಧಿಕಾರಿಗಳು, ಸಂತಸದೃಶ ಜನರು ಮತ್ತು ಗುರು ಇವರ ಸಹವಾಸದಲ್ಲಿ ಮನುಷ್ಯನು ತಾನೇ ಪ್ರಯತ್ನಿಸಿ ತನ್ನ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬೇಕು; ಅನಂತರ ದೇವೋತ್ತಮ ಪುರುಷನು ವಿವರಿಸಿದಂತೆ ಭಗವದ್ಗೀತೆಯನ್ನು ಅರ್ಥಮಾಡಿಕೊಂಡು ಆಧ್ಯಾತ್ಮಿಕ ಪ್ರಜ್ಞೆಗೆ ಅಥವಾ ಕೃಷ್ಣಪ್ರಜ್ಞೆಗೆ ಹಿಂದಿರುಗಬೇಕು. ಆಗ ಆತನು ಮತ್ತೆ ಈ ಐಹಿಕ ಅಸ್ತಿತ್ವಕ್ಕೆ ಬರುವುದಿಲ್ಲ ಎನ್ನುವುದು ನಿಶ್ಚಯ; ಆತನು ನಿತ್ಯಜ್ಞಾನಾನಂದದ ಬದುಕಿಗಾಗಿ ದಿವ್ಯಲೋಕಕ್ಕೆ ಸ್ಥಳಾಂತರ ಹೊಂದುವನು.

## ಶ್ಲೋಕ - 25

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಙ್ಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥೨೫॥**

**ಧ್ಯಾನೇನ**—ಧ್ಯಾನದಿಂದ; **ಆತ್ಮನಿ**—ಆತ್ಮನಲ್ಲಿ; **ಪಶ್ಯನ್ತಿ**—ನೋಡುತ್ತಾರೆ; **ಕೇಚಿತ್**—ಕೆಲವರು; **ಆತ್ಮಾನಮ್**—ಪರಮಾತ್ಮನನ್ನು; **ಆತ್ಮನಾ**—ಮನಸ್ಸಿನಿಂದ; **ಅನ್ಯೇ**—ಉಳಿದವರು; **ಸಾಙ್ಖ್ಯೇನ**—ತತ್ವಶಾಸ್ತ್ರದ ಚರ್ಚೆಯಿಂದ; **ಯೋಗೇನ**—ಯೋಗ ಪದ್ಧತಿಯಿಂದ; **ಕರ್ಮಯೋಗೇನ**—ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವುದರಿಂದ; **ಚ**—ಕೂಡ; **ಅಪರೇ**—ಇತರರು.

## ಅನುವಾದ

**ಕೆಲವರು ಧ್ಯಾನದಿಂದ, ಮತ್ತೆ ಕೆಲವರು ಜ್ಞಾನವನ್ನು ಬೆಳೆಸಿಕೊಂಡು, ಇನ್ನು ಕೆಲವರು ನಿಷ್ಕಾಮಕರ್ಮದಿಂದ ತಮ್ಮೊಳಗಿರುವ ಪರಮಾತ್ಮನನ್ನು ಕಾಣುತ್ತಾರೆ.**

## ಭಾವಾರ್ಥ

ಆತ್ಮಸಾಕ್ಷಾತ್ಕಾರಕ್ಕಾಗಿ ಮನುಷ್ಯನ ಅನ್ವೇಷಣೆಯ ದೃಷ್ಟಿಯಿಂದ ಬದ್ಧಾತ್ಮಗಳನ್ನು ಎರಡು ವರ್ಗಗಳಾಗಿ ವಿಭಾಗಿಸಬಹುದು ಎಂದು ಕೃಷ್ಣನು ಅರ್ಜುನನಿಗೆ ತಿಳಿಸುತ್ತಾನೆ. ನಾಸ್ತಿಕರು, ಅಜ್ಞೇಯತಾವಾದಿಗಳು ಮತ್ತು ಸಂದೇಹವಾದಿಗಳು ಆಧ್ಯಾತ್ಮಿಕ ತಿಳುವಳಿಕೆಗೆ ದೂರವಾದವರು.

ಆದರೆ ಆಧ್ಯಾತ್ಮಿಕ ಬದುಕನ್ನು ಅರ್ಥಮಾಡಿಕೊಳ್ಳುವುದರಲ್ಲಿ ನಿಷ್ಠರಾದ ಇತರರು ಇದ್ದಾರೆ; ಅವರನ್ನು ಆತ್ಮಪರೀಕ್ಷೆ ಮಾಡಿಕೊಳ್ಳುವ ಭಕ್ತರು, ತತ್ವಜ್ಞಾನಿಗಳು ಮತ್ತು ನಿಷ್ಕಾಮ ಕರ್ಮಿಗಳು ಎಂದು ಕರೆಯುತ್ತಾರೆ. ಅದ್ವೈತ ಸಿದ್ಧಾಂತವನ್ನು ಸ್ಥಾಪಿಸಲು ಸದಾ ಯತ್ನಿಸುವವರನ್ನು ನಾಸ್ತಿಕರಲ್ಲಿ ಮತ್ತು ಅಜ್ಞೇಯತಾವಾದಿಗಳಲ್ಲಿ ಸೇರಿಸಲಾಗುತ್ತದೆ ಎಂದರೆ ದೇವೋತ್ತಮ ಪರಮ ಪುರುಷನ ಭಕ್ತರು ಮಾತ್ರ ಆಧ್ಯಾತ್ಮಿಕ ತಿಳುವಳಿಕೆಯಲ್ಲಿ ಅತ್ಯುತ್ತಮವಾಗಿ ನೆಲೆಗೊಂಡವರು; ಏಕೆಂದರೆ ಈ ಐಹಿಕ ಪ್ರಕೃತಿಯಾಚೆ ದಿವ್ಯಜಗತ್ತಿದೆ; ಪರಮಾತ್ಮನಾಗಿ, ವಿಸ್ತೃತನಾದ ಮತ್ತು ಎಲ್ಲರಲ್ಲಿರುವ ಪರಮಾತ್ಮನಾಗಿ, ಸರ್ವಾಂತರ್ಯಾಮಿಯಾದ ದೇವೋತ್ತಮನಾಗಿ ದೇವೋತ್ತಮ ಪರಮ ಪುರುಷನಿದ್ದಾನೆ ಎಂದು ಅವರು ಅರ್ಥಮಾಡಿಕೊಂಡಿದ್ದಾರೆ. ನಿಜ, ಜ್ಞಾನವನ್ನು ಬೆಳೆಸಿಕೊಂಡು ಪರಮ ಪರಿಪೂರ್ಣ ಸತ್ಯವನ್ನು ಅರಿಯಲು ಪ್ರಯತ್ನಮಾಡುವವರಿದ್ದಾರೆ; ಅವರನ್ನು ಶ್ರದ್ಧಾವಂತರ ವರ್ಗಕ್ಕೇ ಸೇರಿಸಬಹುದು. ಸಾಂಖ್ಯ ದಾರ್ಶನಿಕರು ಐಹಿಕ ಜಗತ್ತನ್ನು ಇಪ್ಪತ್ನಾಲ್ಕು ತತ್ವಗಳಲ್ಲಿ ವಿಶ್ಲೇಷಣೆ ಮಾಡುತ್ತಾರೆ; ಜೀವಾತ್ಮನನ್ನು ಇಪ್ಪತ್ತೈದನೆಯ ತತ್ವವಾಗಿ ಪರಿಗಣಿಸುತ್ತಾರೆ; ಜೀವಾತ್ಮನ ಸ್ವಭಾವವು ಐಹಿಕ ತತ್ವಗಳನ್ನು ಮೀರಿದುದು ಎಂದು ಅವರು ಅರ್ಥಮಾಡಿಕೊಳ್ಳಬೇಕು. ಆಗ ಅವರಿಗೆ ಜೀವಾತ್ಮನ ಮೇಲೆ ದೇವೋತ್ತಮ ಪರಮ ಪುರುಷನಿದ್ದಾನೆ ಎಂದು ಅರ್ಥವಾಗುತ್ತದೆ. ಆತನು ಇಪ್ಪತ್ತಾರನೆಯ ತತ್ವ. ಆಗ ಅವರು ಕ್ರಮೇಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯ ಮಟ್ಟಕ್ಕೆ ಬರುತ್ತಾರೆ. ನಿಷ್ಕಾಮಕರ್ಮಿಗಳು ಮನೋಧರ್ಮದಲ್ಲಿ ಪರಿಪೂರ್ಣರು. ಅವರಿಗೆ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯ ನೆಲೆಗೆ ಬರಲು ಅವಕಾಶ ದೊರೆಯುತ್ತದೆ. ಶುದ್ಧಪ್ರಜ್ಞೆಯವರಾಗಿದ್ದು ಧ್ಯಾನದಿಂದ ತಮ್ಮೊಳಗಿನ ಪರಮಾತ್ಮನನ್ನು ಕಂಡುಕೊಳ್ಳಲು ಪ್ರಯತ್ನಿಸುವ ಕೆಲವರು ಜನರಿದ್ದಾರೆ. ಅವರು ತಮ್ಮೊಳಗೆ ಪರಮಾತ್ಮನನ್ನು ಕಂಡುಕೊಂಡಾಗ ಅವರಿಗೆ ಆಧ್ಯಾತ್ಮಿಕ ನೆಲೆ ದೊರೆಯುತ್ತದೆ. ಹೀಗೆಂದು ಇಲ್ಲಿ ಹೇಳಿದೆ. ಇದೇ ರೀತಿಯಲ್ಲಿ ಜ್ಞಾನವನ್ನು ಬೆಳೆಸಿಕೊಂಡು ಪರಮಾತ್ಮನನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವವರಿದ್ದಾರೆ. ಹಠಯೋಗ ಪದ್ಧತಿಯನ್ನು ಅಭ್ಯಾಸ ಮಾಡುವ ಇತರರು ದೇವೋತ್ತಮ ಪರಮ ಪುರುಷನನ್ನು ತಮ್ಮ ಬಾಲಿಶ ಚಟುವಟಿಕೆಗಳಿಂದ ತೃಪ್ತಿಪಡಿಸಲು ಪ್ರಯತ್ನಿಸುತ್ತಾರೆ.

## ಶ್ಲೋಕ - 26

**ಅನ್ಯೇ ತ್ವೇವಮಜಾನನ್ತಃ ಶ್ರುತ್ವಾನ್ಯೇಭ್ಯ ಉಪಾಸತೇ |**
**ತೇऽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ||೨೬||**

**ಅನ್ಯೇ**—ಇತರರು; **ತು**—ಆದರೆ; **ಏವಮ್**—ಹೀಗೆ; **ಅಜಾನನ್ತಃ**—ಅಧ್ಯಾತ್ಮ ಜ್ಞಾನವಿಲ್ಲದೆ ; **ಶ್ರುತ್ವಾ**—ಶ್ರವಣ ಮಾಡಿ; **ಅನ್ಯೇಭ್ಯಃ**—ಬೇರೆಯವರಿಂದ; **ಉಪಾಸತೇ**—ಅರ್ಚಿಸಲು ಆರಂಭಿಸುತ್ತಾರೆ; **ತೇ**—ಅವರು; **ಅಪಿ**—ಕೂಡ; **ಚ**—ಮತ್ತು; **ಅತಿತರನ್ತಿ**—ದಾಟುತ್ತಾರೆ; **ಏವ**—ಖಂಡಿತವಾಗಿಯೂ; **ಮೃತ್ಯುಮ್**—ಮರಣಮಾರ್ಗವನ್ನು; **ಶ್ರುತಿ ಪರಾಯಣಾಃ**—ಶ್ರವಣವಿಧಾನದಲ್ಲಿ ಮನಸ್ಸಿಟ್ಟವರು.

## ಅನುವಾದ

**ಇನ್ನು ಕೆಲವರಿದ್ದಾರೆ; ಅವರಿಗೆ ಹೆಚ್ಚು ಆಧ್ಯಾತ್ಮಿಕ ಜ್ಞಾನವಿರುವುದಿಲ್ಲ. ಆದರೂ ಪರಮ ಪುರುಷನ ವಿಷಯವನ್ನು ಇತರರಿಂದ ಕೇಳಿ ಅವನನ್ನು ಪೂಜಿಸಲು ಪ್ರಾರಂಭಿಸುತ್ತಾರೆ. ಆಚಾರ್ಯರಿಂದ ಕೇಳಿ**

**ತಿಳಿದುಕೊಳ್ಳುವ ಪ್ರವೃತ್ತಿಯಿಂದ ಅವರು ಹುಟ್ಟು ಸಾವುಗಳನ್ನು ದಾಟುತ್ತಾರೆ.**

## ಭಾವಾರ್ಥ

ಈ ಶ್ಲೋಕವು ಆಧುನಿಕ ಸಮಾಜಕ್ಕೆ ವಿಶೇಷವಾಗಿ ಅನ್ವಯವಾಗುತ್ತದೆ. ಏಕೆಂದರೆ ಆಧುನಿಕ ಸಮಾಜದಲ್ಲಿ ಆಧ್ಯಾತ್ಮಿಕ ವಿಷಯಗಳಲ್ಲಿ ಶಿಕ್ಷಣವೇ ಇಲ್ಲ ಎನ್ನಬಹುದು. ಕೆಲವರು ನಾಸ್ತಿಕರಾಗಿ ಅಥವಾ ಅಜ್ಞೇಯತಾವಾದಿಗಳಾಗಿ ಅಥವಾ ತತ್ವಜ್ಞಾನಿಗಳಾಗಿ ಕಾಣಬಹುದು; ಆದರೆ ವಾಸ್ತವವಾಗಿ ಅವರಿಗೆ ತತ್ವಜ್ಞಾನದ ತಿಳುವಳಿಕೆಯೇ ಇಲ್ಲ. ಸಾಮಾನ್ಯ ಮನುಷ್ಯನ ವಿಷಯ ಹೇಳುವುದಾದರೆ ಅವನು ಒಳ್ಳೆಯ ಮನುಷ್ಯನಾದರೆ ಕೇಳಿ ತಿಳಿದುಕೊಂಡು ಮುನ್ನಡೆಯುವ ಸಾಧ್ಯತೆಯುಂಟು. ಈ ಶ್ರವಣ ವಿಧಾನವು ಬಹು ಮುಖ್ಯವಾದದ್ದು. ಆಧುನಿಕ ಜಗತ್ತಿನಲ್ಲಿ ಕೃಷ್ಣಪ್ರಜ್ಞೆಯನ್ನು ಉಪದೇಶಿಸಿದ ಚೈತನ್ಯ ಮಹಾಪ್ರಭುಗಳು ಶ್ರವಣಕ್ಕೆ ಬಹಳ ಒತ್ತುಕೊಟ್ಟರು. ಇದಕ್ಕೆ ಕಾರಣ ಸಾಮಾನ್ಯ ಮನುಷ್ಯನು ಅಧಿಕಾರೀ ಮೂಲಗಳಿಂದ ಕೇಳಿ ತಿಳಿದುಕೊಂಡರೆ ಸಾಕು; ಆತನು ಮುಂದುವರಿಯಬಲ್ಲ. ಚೈತನ್ಯ ಮಹಾಪ್ರಭುಗಳ ಪ್ರಕಾರ ವಿಶೇಷವಾಗಿ ಅವನು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎನ್ನುವ ದಿವ್ಯ ಸ್ಪಂದನಗಳನ್ನು ಕೇಳಿದರೆ ಮುಂದುವರಿಯಬಲ್ಲ. ಆದುದರಿಂದ ಸಾಕ್ಷಾತ್ಕಾರ ಪಡೆದ ವ್ಯಕ್ತಿಗಳಿಂದ ಕೇಳಿ ತಿಳಿದು ಪ್ರಯೋಜನ ಪಡೆದುಕೊಳ್ಳಬೇಕು. ಇದರಿಂದ ಕ್ರಮೇಣ ಎಲ್ಲವನ್ನೂ ಅರ್ಥಮಾಡಿಕೊಳ್ಳುವ ಶಕ್ತಿಯು ಬರುತ್ತದೆ ಎಂದು ಹೇಳಿದೆ. ಅದು ನಿಶ್ಚಯವಾಗಿಯೂ ಪರಮ ಪ್ರಭುವಿನ ಪೂಜೆಯೂ ಆಗುತ್ತದೆ. ಈ ಯುಗದಲ್ಲಿ ಯಾರೂ ತನ್ನ ಸ್ಥಿತಿಯನ್ನು ಬದಲಾಯಿಸಬೇಕಾಗಿಲ್ಲ. ಆದರೆ ಪರಿಪೂರ್ಣ ಸತ್ಯವನ್ನು ಊಹಾತ್ಮಕ ಚಿಂತನೆಯಿಂದ ಅರ್ಥಮಾಡಿಕೊಳ್ಳುವ ಪ್ರವೃತ್ತಿಯನ್ನು ಬಿಡಬೇಕು ಎಂದು ಚೈತನ್ಯ ಮಹಾಪ್ರಭುಗಳು ಹೇಳಿದ್ದಾರೆ. ಪರಮ ಪ್ರಭುವನ್ನು ಅರಿತವರ ಸೇವಕನಾಗುವುದನ್ನು ಮನುಷ್ಯನು ಕಲಿಯಬೇಕು. ಪರಿಶುದ್ಧ ಭಕ್ತರೊಬ್ಬರ ಆಶ್ರಯ ದೊರೆತು ಅವರಿಂದ ಆತ್ಮಸಾಕ್ಷಾತ್ಕಾರದ ವಿಷಯ ಕೇಳಿ ಅವರ ಹೆಜ್ಜೆಗಳಲ್ಲಿ ನಡೆಯುವ ಅದೃಷ್ಟವು ಲಭ್ಯವಾದರೆ ಅಂತಹ ಮನುಷ್ಯನು ಕ್ರಮೇಣ ಪರಿಶುದ್ಧ ಭಕ್ತನ ಸ್ಥಿತಿಗೆ ಏರುತ್ತಾನೆ. ಈ ಶ್ಲೋಕದಲ್ಲಿ ವಿಶೇಷವಾಗಿ ಶ್ರವಣದ ಪ್ರಕ್ರಿಯೆಗೆ ಒತ್ತುಕೊಟ್ಟು ಸೂಚಿಸಲಾಗಿದೆ. ಇದು ಬಹಳ ಉಚಿತವಾಗಿದೆ. ಸಾಮಾನ್ಯ ಮನುಷ್ಯನು ತತ್ವಜ್ಞಾನಿಗಳು ಎನ್ನಿಸಿಕೊಂಡವರಷ್ಟು ಸಮರ್ಥನಲ್ಲ; ಆದರೂ ಅಧಿಕಾರಿಯಾದ ಮನುಷ್ಯನಿಂದ ಶ್ರದ್ಧೆಯಿಂದ ಕೇಳಿ ತಿಳಿದುಕೊಂಡರೆ ಅದು ಈ ಐಹಿಕ ಅಸ್ತಿತ್ವವನ್ನು ಮೀರಿ ಭಗವದ್ಧಾಮಕ್ಕೆ ಹಿಂದಿರುಗಲು ನೆರವಾಗುತ್ತದೆ.

## ಶ್ಲೋಕ - 27

**ಯಾವತ್ ಸಞ್ಜಾಯತೇ ಕಿಞ್ಚಿತ್ ಸತ್ತ್ವಂ ಸ್ಥಾವರಜಙ್ಗಮಮ್ |**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ||೨೭||**

**ಯಾವತ್**—ಯಾವುದೆಲ್ಲ; **ಸಞ್ಜಾಯತೇ**—ಅಸ್ತಿತ್ವಕ್ಕೆ ಬರುತ್ತದೋ; **ಕಿಞ್ಚಿತ್**—ಯಾವುದಾದರೂ; **ಸತ್ತ್ವಮ್**—ಅಸ್ತಿತ್ವವು; **ಸ್ಥಾವರ**—ಅಚಲವಾದ; **ಜಙ್ಗಮಮ್**—ಚಲಿಸುವ; **ಕ್ಷೇತ್ರ**—ಶರೀರದ;

**ಕ್ಷೇತ್ರಜ್ಞ**—ಮತ್ತು ಶರೀರವನ್ನರಿತವನ; **ಸಂಯೋಗಾತ್**—ಸಂಯೋಗದಿಂದ; **ತತ್ ವಿದ್ಧಿ**—ಅದನ್ನು ನೀನು ತಿಳಿಯಬೇಕು; **ಭರತ ಋಷಭ**—ಭಾರತ ಶ್ರೇಷ್ಠನೇ.

## ಅನುವಾದ

**ಭರತರಲ್ಲಿ ಶ್ರೇಷ್ಠನಾದ ಅರ್ಜುನನೆ, ಚರಾಚರಗಳಾಗಿ ಅಸ್ತಿತ್ವದಲ್ಲಿರುವ ಏನನ್ನೇ ನೀನು ಕಂಡರೂ ಅದು ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಗ ಎಂದು ತಿಳಿದುಕೊ.**

## ಭಾವಾರ್ಥ

ವಿಶ್ವದ ಸೃಷ್ಟಿಗೆ ಮೊದಲೇ ಅಸ್ತಿತ್ವದಲ್ಲಿದ್ದ ಐಹಿಕ ಪ್ರಕೃತಿ ಮತ್ತು ಜೀವಿಗಳನ್ನು ಈ ಶ್ಲೋಕದಲ್ಲಿ ವಿವರಿಸಿದೆ. ಸೃಷ್ಟಿಯಾದದ್ದೆಲ್ಲ ಜೀವಿ ಮತ್ತು ಪ್ರಕೃತಿಯ ಸಂಯೋಗ. ಮರಗಳಂತೆ, ಬೆಟ್ಟಗುಡ್ಡಗಳಂತೆ, ಚಲಿಸದಿರುವ ಅನೇಕ ಅಭಿವ್ಯಕ್ತಿಗಳಿವೆ; ಚಲಿಸುವ ಅನೇಕ ಅಸ್ತಿತ್ವಗಳು ಇವೆ; ಅವೆಲ್ಲವೂ ಪ್ರಕೃತಿಯ ಮತ್ತು ಅದಕ್ಕಿಂತ ಉತ್ತಮ ಸ್ವಭಾವದ ಪುರುಷನ ಸಂಯೋಗಗಳು ಮಾತ್ರ. ಉತ್ತಮ ಪ್ರಕೃತಿಯ ಸ್ಪರ್ಶವಿಲ್ಲದೆ ಯಾವುದೂ ಬೆಳೆಯಲಾರದು. ಐಹಿಕ ಪ್ರಕೃತಿ ಮತ್ತು ಉತ್ತಮ ಪ್ರಕೃತಿಗಳ ಸಂಬಂಧವು ನಿರಂತರವಾಗಿ ಮುಂದುವರಿಯುತ್ತದೆ. ಪರಮ ಪ್ರಭುವೇ ಹೀಗೆ ಒಟ್ಟುಗೂಡಿಸುತ್ತಾನೆ; ಆದುದರಿಂದ ಉತ್ತಮವಾದ ಮತ್ತು ಕೆಳದರ್ಜೆಯ ಪ್ರಕೃತಿಗಳೆರಡನ್ನು ನಿಯಂತ್ರಿಸುವವನು ಅವನೇ. ಐಹಿಕ ಪ್ರಕೃತಿಯನ್ನು ಅವನೇ ಸೃಷ್ಟಿಸಿದನು. ಉತ್ತಮ ಪ್ರಕೃತಿಯನ್ನು ಐಹಿಕ ಪ್ರಕೃತಿಯಲ್ಲಿ ಇರಿಸಲಾಗುತ್ತದೆ. ಈ ರೀತಿಯಲ್ಲಿ ಎಲ್ಲ ಚಟುವಟಿಕೆಗಳು ಅಭಿವ್ಯಕ್ತಿಗಳು ಜರುಗುತ್ತವೆ.

## ಶ್ಲೋಕ - 28

**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ |**
**ವಿನಶ್ಯಸ್ತ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ||೨೮||**

**ಸಮಮ್**—ಸಮಾನವಾಗಿ; **ಸರ್ವೇಷು**—ಎಲ್ಲ; **ಭೂತೇಷು**—ಜೀವಿಗಳಲ್ಲಿ; **ತಿಷ್ಠನ್ತಮ್**—ವಾಸಿಸುತ್ತಿರುವ; **ಪರಮ ಈಶ್ವರಮ್**—ಪರಮಾತ್ಮನನ್ನು; **ವಿನಶ್ಯತ್ಸು**—ವಿನಾಶಿಯಾದವುಗಳಲ್ಲಿ; **ಅವಿನಶ್ಯನ್ತಮ್**—ವಿನಾಶವಾಗದವನನ್ನು; **ಯಃ**—ಯಾರು; **ಪಶ್ಯತಿ**—ನೋಡುತ್ತಾನೋ; **ಸಃ**—ಅವನು; **ಪಶ್ಯತಿ**—ನಿಜವಾಗಿಯೂ ಕಾಣುತ್ತಾನೆ.

## ಅನುವಾದ

**ಎಲ್ಲ ದೇಹಗಳಲ್ಲಿ ಜೀವಾತ್ಮನ ಜೊತೆಗಿರುವ ಪರಮಾತ್ಮನನ್ನು ಕಂಡುಕೊಂಡು, ನಾಶವಾಗುವ ದೇಹದಲ್ಲಿರುವ ಜೀವಾತ್ಮನಾಗಲೀ ಪರಮಾತ್ಮನಾಗಲೀ ಅಳಿಯುವುದಿಲ್ಲ ಎನ್ನುವುದನ್ನು ಅರ್ಥಮಾಡಿಕೊಳ್ಳುವವನೇ ನಿಜವಾಗಿ ನೋಡುತ್ತಾನೆ.**

## ಭಾವಾರ್ಥ

ಒಳ್ಳೆಯ ಸಹಯೋಗದಿಂದ ಕ್ಷೇತ್ರ, ಕ್ಷೇತ್ರಜ್ಞ ಅಥವಾ ಜೀವಾತ್ಮ ಮತ್ತು ಜೀವಾತ್ಮನ ಗೆಳೆಯ ಮೂರನ್ನೂ ಒಂದಾಗಿ ನೋಡಬಲ್ಲವನು ಜ್ಞಾನದ ಸ್ಥಿತಿಯಲ್ಲಿದ್ದಾನೆ. ಆಧ್ಯಾತ್ಮಿಕ ವಿಷಯಗಳನ್ನು ನಿಜವಾಗಿ ತಿಳಿದವನ ಸಹಯೋಗವಿಲ್ಲದಿದ್ದರೆ ಇವನ್ನು ನೋಡಲಾಗುವುದಿಲ್ಲ. ಇಂತಹ ಸಹಯೋಗವಿಲ್ಲದಿದ್ದವರು ಅಜ್ಞಾನಿಗಳು; ಅವರು ದೇಹವನ್ನು ಮಾತ್ರ ಕಾಣುತ್ತಾರೆ ಮತ್ತು ದೇಹವು ನಾಶವಾದಾಗ ಎಲ್ಲವೂ ಮುಗಿದುಹೋಗುತ್ತದೆ ಎಂದು ಭಾವಿಸುತ್ತಾರೆ. ಆದರೆ ವಾಸ್ತವವಾಗಿ ಹೀಗಾಗುವುದಿಲ್ಲ. ದೇಹವು ನಾಶವಾದ ಮೇಲೆ ಆತ್ಮನೂ, ಪರಮಾತ್ಮನೂ ಇರುತ್ತಾರೆ ಮತ್ತು ಹಲವು ಚರಾಚರ ರೂಪಗಳಲ್ಲಿ ಮುಂದಕ್ಕೆ ಸಾಗುತ್ತಾರೆ. **ಪರಮೇಶ್ವರ** ಎನ್ನುವ ಸಂಸ್ಕೃತ ಶಬ್ದವನ್ನು 'ಜೀವಾತ್ಮ' ಎಂದು ಕೆಲವೊಮ್ಮೆ ಅನುವಾದ ಮಾಡುವುದುಂಟು. ಇದಕ್ಕೆ ಕಾರಣ ಆತ್ಮನು ದೇಹದ ಯಜಮಾನ, ಮತ್ತು ದೇಹವು ನಾಶವಾದ ಅನಂತರ ಅವನು ಮತ್ತೊಂದು ರೂಪಕ್ಕೆ ಹೋಗುತ್ತಾನೆ. ಆದುದರಿಂದ ಅವನು ಯಜಮಾನ. ಇನ್ನು ಕೆಲವರು ಪರಮೇಶ್ವರ ಎನ್ನುವುದನ್ನು ಪರಮಾತ್ಮ ಎಂದು ಅನುವಾದಿಸುತ್ತಾರೆ. ಹೇಗೆ ಮಾಡಿದರೂ ಪರಮಾತ್ಮನೂ, ಜೀವಾತ್ಮನೂ ಮುಂದುವರಿಯುತ್ತಾರೆ; ಅವರು ನಾಶವಾಗುವುದಿಲ್ಲ. ಈ ದೃಷ್ಟಿಯಿರುವವನು ಏನಾಗುತ್ತಿದೆ ಎನ್ನುವುದನ್ನು ಕಾಣಬಲ್ಲ.

## ಶ್ಲೋಕ - 29

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ |**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ||೨೯||**

**ಸಮಮ್**—ಸಮಾನವಾಗಿ; **ಪಶ್ಯನ್**—ನೋಡುತ್ತಾ; **ಹಿ**—ಖಂಡಿತವಾಗಿಯೂ; **ಸರ್ವತ್ರ**—ಪ್ರತಿಯೊಂದು ಕಡೆಗಳಲ್ಲಿಯೂ; **ಸಮವಸ್ಥಿತಮ್**—ಸಮಾನವಾಗಿ ನೆಲೆಸಿರುವ; **ಈಶ್ವರಮ್** —ಪರಮಾತ್ಮನನ್ನು; **ನಹಿನಸ್ತಿ**—ಅವನತಿ ಹೊಂದುವುದಿಲ್ಲ; **ಆತ್ಮನಾ**—ಮನಸ್ಸಿನಿಂದ; **ಆತ್ಮಾನಮ್**—ಆತ್ಮನನ್ನು; **ತತಃ**—ಆಗ; **ಯಾತಿ**—ತಲಪುತ್ತಾನೆ; **ಪರಾಮ್**—ದಿವ್ಯವಾದ; **ಗತಿಮ್**—ಗುರಿಯನ್ನು.

## ಅನುವಾದ

**ಎಲ್ಲೆಲ್ಲಿಯೂ, ಪ್ರತಿಯೊಂದು ಜೀವಂತ ಪ್ರಾಣಿಯಲ್ಲಿಯೂ ಒಂದೇ ಸಮನಾಗಿ ಪರಮಾತ್ಮನು ಇರುವುದನ್ನು ಕಾಣಬಲ್ಲವನು ತನ್ನ ಮನಸ್ಸಿನಿಂದ ತನ್ನನ್ನು ಹೀನಸ್ಥಿತಿಗೆ ತಂದುಕೊಳ್ಳುವುದಿಲ್ಲ. ಹೀಗೆ ಅವನು ಪರಮ ಗತಿಯನ್ನು ಸೇರುತ್ತಾನೆ.**

## ಭಾವಾರ್ಥ

ಐಹಿಕ ಅಸ್ತಿತ್ವವನ್ನು ಒಪ್ಪಿಕೊಂಡು ಜೀವಿಯು ತನ್ನ ಆಧ್ಯಾತ್ಮಿಕ ಸ್ಥಿತಿಯಿಂದ ಬೇರೆ ಸ್ಥಿತಿಗೆ ಬಂದಿದ್ದಾನೆ. ಆದರೆ ಪರಮ ಪ್ರಭುವು ತನ್ನ ಪರಮಾತ್ಮ ಅಭಿವ್ಯಕ್ತಿಯಿಂದ ಎಲ್ಲೆಲ್ಲಿಯೂ ಇದ್ದಾನೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು. ಎಂದರೆ, ಪ್ರತಿಯೊಂದು ಜೀವಂತ ಪ್ರಾಣಿಯಲ್ಲಿಯೂ ದೇವೋತ್ತಮ ಪರಮ ಪುರುಷನು ಇರುವುದನ್ನು ಕಾಣಬೇಕು; ಆಗ ಮನುಷ್ಯನು

ವಿನಾಶಕರ ಮನೋಧರ್ಮದಿಂದ ತನ್ನನ್ನು ಹೀನಸ್ಥಿತಿಗೆ ತಂದುಕೊಳ್ಳುವುದಿಲ್ಲ. ಆ ಮೂಲಕ ಅವನು ಕ್ರಮೇಣ ಆಧ್ಯಾತ್ಮಿಕ ಜಗತ್ತಿನ ಬಳಿಗೆ ಹೋಗುತ್ತಾನೆ. ಸಾಮಾನ್ಯವಾಗಿ ಮನಸ್ಸು ಇಂದ್ರಿಯತೃಪ್ತಿಯ ಪ್ರಕ್ರಿಯೆಗಳಿಗೆ ಅಂಟಿಕೊಂಡಿರುತ್ತದೆ; ಅದು ಪರಮಾತ್ಮನ ಕಡೆ ತಿರುಗಿದಾಗ ಮನುಷ್ಯನು ಆಧ್ಯಾತ್ಮಿಕ ತಿಳುವಳಿಕೆಯಲ್ಲಿ ಪ್ರಗತಿಯನ್ನು ಸಾಧಿಸುತ್ತಾನೆ.

## ಶ್ಲೋಕ - 30

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ |**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ||೩೦||**

**ಪ್ರಕೃತ್ಯಾ**—ಭೌತಿಕ ಪ್ರಕೃತಿಯಿಂದ; **ಏವ**—ಖಂಡಿತವಾಗಿಯೂ; **ಚ**—ಕೂಡ; **ಕರ್ಮಾಣಿ**—ಕಾರ್ಯಗಳನ್ನು; **ಕ್ರಿಯಮಾಣಾನಿ**—ಆಚರಿಸಲಾಗುವ; **ಸರ್ವಶಃ**—ಎಲ್ಲ ರೀತಿಯಲ್ಲಿಯೂ; **ಯಃ**—ಯಾರು; **ಪಶ್ಯತಿ**—ನೋಡುತ್ತಾನೋ; **ತಥಾ**—ಕೂಡಾ; **ಆತ್ಮಾನಮ್**—ತನ್ನನ್ನೇ; **ಅಕರ್ತಾರಮ್**—ಮಾಡದಿರುವವನನ್ನಾಗಿ; **ಸಃ**—ಅವನು; **ಪಶ್ಯತಿ**—ಪರಿಪೂರ್ಣವಾಗಿ ಕಾಣುತ್ತಾನೆ.

## ಅನುವಾದ

**ದೇಹವು ಎಲ್ಲ ಕರ್ಮಗಳನ್ನೂ ಮಾಡುತ್ತದೆ. ಅದು ಐಹಿಕ ಪ್ರಕೃತಿಯಿಂದ ಆಗಿದೆ. ತಾನು ಏನನ್ನೂ ಮಾಡುವುದಿಲ್ಲ ಎಂದು ಯಾರು ನೋಡಬಲ್ಲರೋ ಅವರೇ ನಿಜವಾಗಿ ನೋಡುತ್ತಾರೆ.**

## ಭಾವಾರ್ಥ

ಪರಮಾತ್ಮನ ಮಾರ್ಗದರ್ಶನದಲ್ಲಿ ಐಹಿಕ ಪ್ರಕೃತಿಯು ದೇಹವನ್ನು ಮಾಡುತ್ತದೆ; ದೇಹಕ್ಕೆ ಸಂಬಂಧಿಸಿ ಆಗುವ ಕರ್ಮಗಳನ್ನು ಪರಮಾತ್ಮನು ಮಾಡುವುದಿಲ್ಲ. ಸುಖಕ್ಕಾಗಲೀ ದುಃಖಕ್ಕಾಗಲೀ ಮನುಷ್ಯನು ಮಾಡುತ್ತಾನೆಂದು ನಾವು ಭಾವಿಸಬಹುದಾದ್ದನ್ನೆಲ್ಲ ಮನುಷ್ಯನು ತನ್ನ ದೇಹದ ಸ್ವರೂಪದಿಂದಾಗಿ ಮಾಡಲೇಬೇಕಾಗುತ್ತದೆ. ಆದರೆ ಆತ್ಮನು ದೇಹದ ಕರ್ಮಗಳಿಂದ ಹೊರಗಿದ್ದಾನೆ. ಮನುಷ್ಯನ ಹಿಂದಿನ ಬಯಕೆಗಳಿಗೆ ಅನುಗುಣವಾಗಿ ಈಗ ಈ ದೇಹವು ಬಂದಿದೆ. ಬಯಕೆಗಳನ್ನು ಪೂರೈಸಿಕೊಳ್ಳಲು ಮನುಷ್ಯನಿಗೆ ಈ ದೇಹವನ್ನು ಕೊಟ್ಟಿದೆ. ಅದಕ್ಕೆ ಅನುಗುಣವಾಗಿ ಅವನು ಕರ್ಮಗಳನ್ನು ಮಾಡುತ್ತಾನೆ. ವಾಸ್ತವವಾಗಿ ಹೇಳುವುದಾದರೆ ದೇಹವೊಂದು ಯಂತ್ರ; ಬಯಕೆಗಳ ತೃಪ್ತಿಗಾಗಿ ಪರಮ ಪ್ರಭುವು ಇದನ್ನು ರೂಪಿಸಿದ್ದಾನೆ. ಬಯಕೆಗಳಿಂದಾಗಿ ಮನುಷ್ಯನನ್ನು ಕಷ್ಟಪಡುವ ಅಥವಾ ಸುಖಪಡುವ ಪರಿಸ್ಥಿತಿಗಳಲ್ಲಿ ಇಡಲಾಗುತ್ತದೆ. ಜೀವಿಯು ಈ ದಿವ್ಯದರ್ಶನವನ್ನು ಬೆಳೆಸಿಕೊಂಡರೆ ಅದು ಅವನನ್ನು ದೇಹದ ಕರ್ಮಗಳಿಂದ ಬೇರೆ ಮಾಡುತ್ತದೆ. ಇಂತಹ ದರ್ಶನವಿರುವವನು ವಾಸ್ತವವಾಗಿ ದ್ರಷ್ಟಾರನು.

## ಶ್ಲೋಕ - 31

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ |**
**ತತ ಏವ ಚ ವಿಸ್ತಾರಂ ಬ್ರಹ್ಮ ಸಮ್ಪದ್ಯತೇ ತದಾ ||೩೧||**

**ಯದಾ**—ಯಾವಾಗ; **ಭೂತ**—ಜೀವಿಗಳ; **ಪೃಥಕ್ ಭಾವಮ್**—ಪ್ರತ್ಯೇಕವಾದ ಸ್ವರೂಪಗಳನ್ನು; **ಏಕಸ್ಥಮ್**—ಒಂದರಲ್ಲಿ ನೆಲೆಸಿದ; **ಅನುಪಶ್ಯತಿ**—ಪ್ರಮಾಣದ ಮೂಲಕ ನೋಡಲು ಪ್ರಯತ್ನಿಸುತ್ತಾನೋ; **ತತಃ ಏವ**—ಅನಂತರ; **ಚ**—ಕೂಡ; **ವಿಸ್ತಾರಮ್**—ವಿಸ್ತಾರವಾದ; **ಬ್ರಹ್ಮ**—ಪರಾತ್ಪರನನ್ನು; **ಸಮ್ಪದ್ಯತೇ**—ಹೊಂದುತ್ತಾನೆ; **ತದಾ**—ಆ ಕಾಲದಲ್ಲಿ.

## ಅನುವಾದ

**ವಿವೇಚನೆಯುಳ್ಳ ಮನುಷ್ಯನು ಬೇರೆ ಬೇರೆ ಐಹಿಕ ದೇಹಗಳ ಕಾರಣದಿಂದ ಬೇರೆ ಬೇರೆ ಅಸ್ತಿತ್ವಗಳನ್ನು ನೋಡುವುದನ್ನು ಬಿಟ್ಟಾಗ ಮತ್ತು ಎಲ್ಲೆಲ್ಲೂ ಜೀವಿಗಳು ಹೇಗೆ ವಿಸ್ತಾರಹೊಂದುತ್ತಾರೆ ಎನ್ನುವುದನ್ನು ಕಂಡಾಗ ಅವನು ಬ್ರಹ್ಮನ್ ಪರಿಕಲ್ಪನೆಯನ್ನು ತಲಪುತ್ತಾನೆ.**

## ಭಾವಾರ್ಥ

ಜೀವಿಗಳ ಬೇರೆ ಬೇರೆ ದೇಹಗಳು ಜೀವಾತ್ಮನ ಬೇರೆ ಬೇರೆ ಬಯಕೆಗಳ ಕಾರಣದಿಂದ ಆದವು; ದೇಹಗಳು ಆತ್ಮಕ್ಕೆ ಸೇರಿದವಲ್ಲ. ಇದನ್ನು ಮನುಷ್ಯನು ನೋಡಲು ಸಾಧ್ಯವಾದಾಗ ಅವನು ನಿಜವಾಗಿ ನೋಡುತ್ತಾನೆ. ಬದುಕಿನ ಐಹಿಕ ಪರಿಕಲ್ಪನೆಯಲ್ಲಿ ಒಬ್ಬನು ದೇವತೆಯಾಗಿ, ಮತ್ತೊಬ್ಬನು ಮನುಷ್ಯನಾಗಿ, ನಾಯಿ, ಬೆಕ್ಕು ಇತ್ಯಾದಿಯಾಗಿ ನಮಗೆ ಕಾಣುತ್ತಾರೆ. ಇದು ಐಹಿಕ ದೃಷ್ಟಿ; ವಾಸ್ತವ ದೃಷ್ಟಿಯಲ್ಲ. ಈ ಐಹಿಕ ಭಿನ್ನತೆಗೆ ಬದುಕಿನ ಐಹಿಕ ಪರಿಕಲ್ಪನೆಯೇ ಕಾರಣ. ಐಹಿಕ ದೇಹವು ನಾಶವಾದ ಅನಂತರ ಜೀವಾತ್ಮ ಒಂದೇ. ಐಹಿಕ ಪ್ರಕೃತಿಯ ಸಂಪರ್ಕದಿಂದ ಜೀವಾತ್ಮನಿಗೆ ಬೇರೆ ಬೇರೆ ದೇಹಗಳು ಬರುತ್ತವೆ. ಮನುಷ್ಯನಿಗೆ ಇದನ್ನು ಕಾಣಲು ಸಾಧ್ಯವಾದಾಗ ಅವನು ದಿವ್ಯದರ್ಶನವನ್ನು ಪಡೆಯುತ್ತಾನೆ; ಹೀಗೆ ಮಾನವ ಪ್ರಾಣಿ, ಮೇಲಾದದ್ದು, ಕೀಳಾದದ್ದು ಇತ್ಯಾದಿ ಭಿನ್ನತೆಯ ಭಾವಗಳಿಂದ ಮುಕ್ತನಾಗಿ ಮನುಷ್ಯನು ಪ್ರಜ್ಞೆಯಲ್ಲಿ ಪರಿಶುದ್ಧನಾಗುತ್ತಾನೆ. ಅವನು ತನ್ನ ದಿವ್ಯ ಅಸ್ತಿತ್ವದಲ್ಲಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುವುದು ಸಾಧ್ಯವಾಗುತ್ತದೆ. ಆಗ ಅವನಿಗೆ ಎಲ್ಲವೂ ಹೇಗೆ ಕಾಣುತ್ತದೆ ಎನ್ನುವುದನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ.

## ಶ್ಲೋಕ - 32

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ |**
**ಶರೀರಸ್ಥೋऽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ ||೩೨||**

**ಅನಾದಿತ್ವಾತ್**—ಶಾಶ್ವತತೆಯ ಕಾರಣದಿಂದ; **ನಿರ್ಗುಣತ್ವಾತ್**—ದಿವ್ಯವಾಗಿರುವುದರಿಂದ; **ಪರಮ**—ಭೌತಿಕ ಪ್ರಕೃತಿಗೆ ಅತೀತವಾಗಿ; **ಆತ್ಮಾ**—ಚೇತನನು; **ಅಯಮ್**—ಈ ; **ಅವ್ಯಯಃ**—ಅವಿನಾಶಿಯಾದ; **ಶರೀರಸ್ಥಃ**—ದೇಹದಲ್ಲಿದ್ದ; **ಅಪಿ**—ಆದರೂ; **ಕೌನ್ತೇಯ**—ಕುಂತೀಪುತ್ರನೇ; **ನ ಕರೋತಿ**—ಏನನ್ನೂ ಮಾಡುವುದಿಲ್ಲ; **ನ ಲಿಪ್ಯತೇ**—ಸಿಲುಕುವುದೂ ಇಲ್ಲ.

## ಅನುವಾದ

**ಅರ್ಜುನ, ಅವಿನಾಶಿಯಾದ ಆತ್ಮವು ದಿವ್ಯವಾದದ್ದು, ನಿತ್ಯವಾದದ್ದು ಮತ್ತು ಗುಣಗಳನ್ನು**

**ಮೀರಿದ್ದು; ಶಾಶ್ವತದ ನೋಟವಿರುವವರು ಇದನ್ನು ಕಾಣಬಲ್ಲರು. ಐಹಿಕ ದೇಹದ ಸಂಪರ್ಕವಿದ್ದರೂ ಆತ್ಮವು ಏನನ್ನೂ ಮಾಡುವುದಿಲ್ಲ ಮತ್ತು ಲಿಪ್ತವಾಗುವುದಿಲ್ಲ.**

## ಭಾವಾರ್ಥ

ಐಹಿಕ ದೇಹವು ಜನ್ಮತಾಳುವುದರಿಂದ ಜೀವಿಯು ಜನ್ಮ ತಾಳಿದಂತೆ ಕಾಣುತ್ತದೆ. ಆದರೆ ವಾಸ್ತವವಾಗಿ ಜೀವಿಯು ನಿತ್ಯನು. ಐಹಿಕ ದೇಹದಲ್ಲಿ ಇದ್ದರೂ ಅವನು ದಿವ್ಯನಾದವನು ಮತ್ತು ನಿತ್ಯನಾದವನು. ಆದುದರಿಂದ ಅವನನ್ನು ನಾಶಮಾಡಲು ಸಾಧ್ಯವಿಲ್ಲ. ಸ್ವಭಾವತಃ ಅವನು ಆನಂದಮಯನು. ಆತನು ಯಾವುದೇ ಐಹಿಕ ಕರ್ಮಗಳಲ್ಲಿ ತೊಡಗುವುದಿಲ್ಲ. ಆದುದರಿಂದ ಆತನಿಗೆ ಐಹಿಕ ದೇಹಗಳ ಸಂಪರ್ಕವಾದದ್ದರಿಂದ ಅವನು ಮಾಡುವ ಕರ್ಮಗಳು ಅವನನ್ನು ಬಂಧಿಸುವುದಿಲ್ಲ.

## ಶ್ಲೋಕ - 33

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ |**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ||೩೩||**

**ಯಥಾ**—ಹೇಗೆ; **ಸರ್ವಗತಮ್**—ಸರ್ವ ವ್ಯಾಪಿಯಾದ; **ಸೌಕ್ಷ್ಮ್ಯಾತ್**—ಸೂಕ್ಷ್ಮವಾಗಿರುವುದರಿಂದ; **ಆಕಾಶಮ್**—ಆಕಾಶವು; **ನ ಉಪಲಿಪ್ಯತೇ**—ಮಿಶ್ರವಾಗುವುದಿಲ್ಲವೋ; **ಸರ್ವತ್ರ**—ಎಲ್ಲ ಕಡೆಯಲ್ಲಿ; **ಅವಸ್ಥಿತಃ**—ನೆಲೆಸಿದ; **ದೇಹೇ**—ದೇಹದಲ್ಲಿ; **ತಥಾ**—ಹಾಗೆಯೇ; **ಆತ್ಮಾ**—ಆತ್ಮವು; **ನ ಉಪಲಿಪ್ಯತೇ**—ಮಿಶ್ರವಾಗುವುದಿಲ್ಲ.

## ಅನುವಾದ

**ಆಕಾಶವು ಎಲ್ಲೆಲ್ಲಿಯೂ ಇದ್ದರೂ ತನ್ನ ಸೂಕ್ಷ್ಮ ಸ್ವರೂಪದಿಂದಾಗಿ ಅದು ಯಾತರೊಡನೆಯೂ ಬೆರೆಯುವುದಿಲ್ಲ. ಹಾಗೆಯೇ ಬ್ರಹ್ಮನ್ ದೃಷ್ಟಿಯಲ್ಲಿ ಸ್ಥಿತನಾಗಿರುವ ಆತ್ಮನು ಆ ದೇಹದಲ್ಲಿದ್ದರೂ ದೇಹದ ಜೊತೆಗೆ ಬೆರೆಯುವುದಿಲ್ಲ.**

## ಭಾವಾರ್ಥ

ವಾಯುವು ನೀರು, ಮಣ್ಣು, ಹೊಲಸು ಮತ್ತು ಬೇರೇನೇ ಇರಲಿ ಅದನ್ನು ಪ್ರವೇಶಿಸುತ್ತದೆ; ಆದರೂ ಅದು ಯಾತರೊಡನೆಯೂ ಬೆರೆಯುವುದಿಲ್ಲ. ಹಾಗೆಯೇ ಜೀವಿಯು ಹಲವಾರು ದೇಹಗಳಲ್ಲಿ ನೆಲೆಸಬೇಕಾದರೂ ಆತನ ಸೂಕ್ಷ್ಮ ಸ್ವಭಾವದಿಂದಾಗಿ ಅವುಗಳಿಂದ ದೂರ ಇರುತ್ತಾನೆ. ಆದುದರಿಂದ ಜೀವಿಯು ಈ ದೇಹದೊಡನೆ ಹೇಗೆ ಸಂಪರ್ಕ ಹೊಂದಿರುತ್ತಾನೆ ಮತ್ತು ಅದು ನಾಶವಾದನಂತರ ಹೇಗೆ ಅದರಿಂದ ಹೊರಗಿರುತ್ತಾನೆ ಎನ್ನುವುದನ್ನು ಐಹಿಕ ಕಣ್ಣುಗಳಿಂದ ನೋಡಲು ಸಾಧ್ಯವಿಲ್ಲ. ಯಾವ ವಿಜ್ಞಾನಿಯೂ ಇದನ್ನು ಖಚಿತಪಡಿಸಿಕೊಳ್ಳಲಾರ.

## ಶ್ಲೋಕ - 34

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ |**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ||೩೪||**

**ಯಥಾ**—ಹೇಗೆ; **ಪ್ರಕಾಶಯತಿ**—ಪ್ರಕಾಶಿಸುತ್ತಾನೋ; **ಏಕಃ**—ಒಬ್ಬನೇ; **ಕೃತ್ಸ್ನಮ್**—ಇಡಿಯ; **ಲೋಕಮ್**—ವಿಶ್ವವನ್ನು; **ಇಮಮ್**—ಈ ; **ರವಿಃ**—ಸೂರ್ಯನು; **ಕ್ಷೇತ್ರಮ್**—ಈ ದೇಹವನ್ನು; **ಕ್ಷೇತ್ರೀ**—ಆತ್ಮನು; **ತಥಾ**—ಅದರಂತೆಯೇ; **ಕೃತ್ಸ್ನಮ್**—ಪೂರ್ಣವಾಗಿ; **ಪ್ರಕಾಶಯತಿ**—ಪ್ರಕಾಶಿಸುತ್ತಾನೆ; **ಭಾರತ**—ಭರತ ಪುತ್ರನೇ.

## ಅನುವಾದ

**ಭರತ ವಂಶಜನಾದ ಅರ್ಜುನನೆ, ಒಬ್ಬನೇ ಸೂರ್ಯನು ಇಡೀ ವಿಶ್ವವನ್ನು ಹೇಗೆ ಬೆಳಗುತ್ತಾನೋ ಹಾಗೆಯೇ ದೇಹದೊಳಗಿರುವ ಜೀವಿಯು ಪ್ರಜ್ಞೆಯಿಂದ ಇಡೀ ದೇಹವನ್ನು ಬೆಳಗುತ್ತಾನೆ.**

## ಭಾವಾರ್ಥ

ಪ್ರಜ್ಞೆಯನ್ನು ಕುರಿತು ಹಲವಾರು ಊಹೆಗಳಿವೆ. ಭಗವದ್ಗೀತೆಯು ಇಲ್ಲಿ ಸೂರ್ಯ ಮತ್ತು ಸೂರ್ಯ ಪ್ರಕಾಶಗಳ ಉದಾಹರಣೆಯನ್ನು ಕೊಟ್ಟಿದೆ. ಸೂರ್ಯನು ಒಂದೇ ಸ್ಥಳದಲ್ಲಿರುತ್ತಾನೆ. ಆದರೂ ಇಡೀ ವಿಶ್ವಕ್ಕೆ ಬೆಳಕು ಕೊಡುತ್ತಾನೆ; ಹಾಗೆಯೇ ಜೀವಾತ್ಮನ ಒಂದು ಸಣ್ಣ ಕಣವು ಈ ದೇಹದ ಹೃದಯದಲ್ಲಿ ಇದ್ದರೂ ಪ್ರಜ್ಞೆಯ ಮೂಲಕ ಇಡೀ ದೇಹವನ್ನು ಬೆಳಗುತ್ತದೆ. ಸೂರ್ಯಪ್ರಕಾಶ ಅಥವಾ ಬೆಳಕು ಸೂರ್ಯನಿದ್ದಾನೆ ಎನ್ನುವುದಕ್ಕೆ ಪುರಾವೆಯಾದಂತೆ, ಪ್ರಜ್ಞೆಯು ಆತ್ಮನ ಇರುವಿಕೆಗೆ ಪುರಾವೆ. ದೇಹದಲ್ಲಿ ಆತ್ಮವಿದ್ದಾಗ ದೇಹದಲ್ಲಿ ಎಲ್ಲೆಲ್ಲಿಯೂ ಪ್ರಜ್ಞೆ ಇರುತ್ತದೆ; ಆತ್ಮವು ದೇಹವನ್ನು ಬಿಡುತ್ತಲೇ ಪ್ರಜ್ಞೆಯು ಇರುವುದಿಲ್ಲ. ಬುದ್ಧಿವಂತನಾದ ಯಾವುದೇ ಮನುಷ್ಯನು ಇದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲ. ಆದುದರಿಂದ ಪ್ರಜ್ಞೆಯು ಜಡವಸ್ತುವಿನ ಸಂಯೋಜನೆಯಿಂದ ಆದದ್ದಲ್ಲ. ಅದು ಜೀವಿಯ ಲಕ್ಷಣ. ಜೀವಿಯು ಗುಣಾತ್ಮಕವಾಗಿ ಪರಮಾತ್ಮನೊಂದಿಗೆ ಒಂದಾದರೂ ಅವನು ಪರಮೋನ್ನತನಲ್ಲ. ಏಕೆಂದರೆ ಒಂದು ದೇಹದ ಪ್ರಜ್ಞೆಯು ಇನ್ನೊಂದು ದೇಹದ ಪ್ರಜ್ಞೆಯೊಂದಿಗೆ ಪಾಲುಗೊಳ್ಳುವುದಿಲ್ಲ. ಆದರೆ ಜೀವಾತ್ಮನ ಗೆಳೆಯನಾಗಿ ಎಲ್ಲ ದೇಹಗಳಲ್ಲಿರುವ ಪರಮಾತ್ಮನಿಗೆ ಎಲ್ಲ ದೇಹಗಳ ಪ್ರಜ್ಞೆ ಇರುತ್ತದೆ. ಪರಮ ಪ್ರಜ್ಞೆಗೂ ವೈಯಕ್ತಿಕ ಪ್ರಜ್ಞೆಗೂ ಇರುವ ವ್ಯತ್ಯಾಸ ಇದೇ.

## ಶ್ಲೋಕ - 35

**ಕ್ಷೇತ್ರಕ್ಷೇತ್ರಜ್ಞಯೋರೇವಮನ್ತರಂ ಜ್ಞಾನಚಕ್ಷುಷಾ |**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ||೩೫||**

**ಕ್ಷೇತ್ರ**—ಶರೀರ; **ಕ್ಷೇತ್ರಜ್ಞಯೋಃ**—ಶರೀರದ ಯಜಮಾನರುಗಳು; **ಏವಮ್**—ಹೀಗೆ; **ಅನ್ತರಮ್**—ಭೇದವನ್ನು; **ಜ್ಞಾನ ಚಕ್ಷುಷಾ**—ಜ್ಞಾನದೃಷ್ಟಿಯಿಂದ; **ಭೂತ**—ಜೀವಿಯ; **ಪ್ರಕೃತಿ**—ಭೌತಿಕ

ಪ್ರಕೃತಿಯಿಂದ; **ಮೋಕ್ಷಮ್**—ಮೋಕ್ಷವನ್ನು; **ಚ**—ಕೂಡ; **ಯೇ**—ಯಾರು; **ವಿದುಃ**—ತಿಳಿಯುತ್ತಾರೋ; **ಯಾನ್ತಿ**—ಹೊಂದುತ್ತಾರೆ; **ತೇ**—ಅವರು; **ಪರಮ್**— ಪರಮೋನ್ನತನನ್ನು.

## ಅನುವಾದ

**ಜ್ಞಾನದ ಕಣ್ಣುಗಳಿಂದ ಕ್ಷೇತ್ರ ಮತ್ತು ಕ್ಷೇತ್ರಜ್ಞನ ನಡುವಣ ವ್ಯತ್ಯಾಸವನ್ನು ಕಾಣಬಲ್ಲವರು ಮತ್ತು ಐಹಿಕ ಪ್ರಕೃತಿಯಲ್ಲಿ ಬಂಧನದಿಂದ ಮೋಕ್ಷ ಪಡೆಯುವ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಬಲ್ಲವರು ಪರಮ ಗುರಿಯನ್ನು ಮುಟ್ಟುತ್ತಾರೆ.**

## ಭಾವಾರ್ಥ

ಕ್ಷೇತ್ರ, ಕ್ಷೇತ್ರಜ್ಞ ಮತ್ತು ಪರಮಾತ್ಮ — ಇವುಗಳ ನಡುವಣ ವ್ಯತ್ಯಾಸವನ್ನು ಮನುಷ್ಯನು ತಿಳಿದುಕೊಳ್ಳಬೇಕೆಂಬುದೇ ಈ ಹದಿಮೂರನೆಯ ಅಧ್ಯಾಯದ ಭಾವಾರ್ಥ. ಎಂಟರಿಂದ ಹನ್ನೆರಡನೆಯ ಶ್ಲೋಕದವರೆಗೆ ವರ್ಣಿಸಿರುವಂತೆ ಮೋಕ್ಷದ ಪ್ರಕ್ರಿಯೆಯನ್ನು ತಿಳಿದುಕೊಳ್ಳಬೇಕು. ಆಗ ಪರಮ ಗುರಿಯ ಕಡೆಗೆ ಸಾಗಬಹುದು.

ಶ್ರದ್ಧಾವಂತ ಮನುಷ್ಯನು ಮೊಟ್ಟಮೊದಲನೆಯದಾಗಿ ದೇವರ ವಿಷಯವನ್ನು ಕೇಳಲು ಒಳ್ಳೆಯ ಸಹವಾಸವನ್ನು ಪಡೆಯಬೇಕು. ಹೀಗೆ ಕ್ರಮವಾಗಿ ಜ್ಞಾನೋದಯವನ್ನು ಸಾಧಿಸಬೇಕು. ಮನುಷ್ಯನು ಒಬ್ಬ ಗುರುವನ್ನು ಸ್ವೀಕರಿಸಿದರೆ ಜಡವಸ್ತು ಮತ್ತು ಚೇತನಗಳ ನಡುವೆ ವ್ಯತ್ಯಾಸವನ್ನು ಕಾಣಲು ಕಲಿಯಬಹುದು; ಇನ್ನೂ ಹೆಚ್ಚಿನ ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಇದು ಮೆಟ್ಟಿಲಾಗುತ್ತದೆ. ಹಲವಾರು ಉಪದೇಶಗಳಿಂದ ಗುರುವು ತನ್ನ ಶಿಷ್ಯನಿಗೆ ಬದುಕಿನ ಐಹಿಕ ಪರಿಕಲ್ಪನೆಯಿಂದ ಬಿಡುಗಡೆಯಾಗಲು ಹೇಳಿಕೊಡುತ್ತಾನೆ. ಉದಾಹರಣೆಗೆ ಭಗವದ್ಗೀತೆಯಲ್ಲಿ ಕೃಷ್ಣನು ಅರ್ಜುನನನ್ನು ಐಹಿಕ ಪರಿಗಣನೆಗಳಿಂದ ಬಿಡುಗಡೆ ಮಾಡಲು ಉಪದೇಶಿಸುತ್ತಿರುವುದನ್ನು ಕಾಣುತ್ತೇವೆ.

ದೇಹವು ಜಡವಸ್ತು ಎನ್ನುವುದನ್ನು ಅರ್ಥಮಾಡಿಕೊಳ್ಳಬಹುದು. ಇದನ್ನು ಅದರ ಇಪ್ಪತ್ನಾಲ್ಕು ಘಟಕಾಂಶಗಳೊಂದಿಗೆ ವಿಶ್ಲೇಷಣೆ ಮಾಡಬಹುದು. ದೇಹವು ಜಡ ಅಭಿವ್ಯಕ್ತಿ. ಮನಸ್ಸು ಮತ್ತು ಮಾನಸಿಕ ಪರಿಣಾಮಗಳು ಸೂಕ್ಷ್ಮ ಅಭಿವ್ಯಕ್ತಿ. ಈ ಲಕ್ಷಣಗಳ ಪರಸ್ಪರ ಪ್ರತಿಕ್ರಿಯೆಯು ಬದುಕಿನ ಲಕ್ಷಣ. ಆದರೆ ಇದನ್ನು ಮೀರಿ ಆತ್ಮನಿದ್ದಾನೆ; ಪರಮಾತ್ಮನೂ ಇದ್ದಾನೆ. ಆತ್ಮನೂ ಪರಮಾತ್ಮನೂ ವಿಭಿನ್ನರು. ಆತ್ಮ ಮತ್ತು ಇಪ್ಪತ್ನಾಲ್ಕು ಘಟಕಾಂಶಗಳು ಇವುಗಳ ಸಂಯೋಜನೆಯಿಂದ ಈ ಐಹಿಕ ಜಗತ್ತು ಕೆಲಸ ಮಾಡುತ್ತಿದೆ. ಇಡೀ ಐಹಿಕ ಅಭಿವ್ಯಕ್ತಿಯನ್ನು ಆತ್ಮ ಮತ್ತು ಘಟಕಾಂಶಗಳ ಸಂಯೋಜನೆ ಎಂದು ಕಾಣಬಲ್ಲವನು ಮತ್ತು ಪರಮಾತ್ಮನ ಸ್ಥಾನವನ್ನು ಕಾಣಬಲ್ಲವನು ದಿವ್ಯಲೋಕಕ್ಕೆ ಸಾಗಿಹೋಗಲು ಅರ್ಹನಾಗುತ್ತಾನೆ. ಇವುಗಳನ್ನು ಹೇಳಿರುವುದು ಚಿಂತನೆ ಮಾಡುವುದಕ್ಕೆ ಮತ್ತು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ. ಮನುಷ್ಯನು ಗುರುವಿನ ನೆರವಿನಿಂದ ಈ ಅಧ್ಯಾಯವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಬೇಕು.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಪ್ರಕೃತಿ, ಪುರುಷ ಹಾಗೂ ಪ್ರಜ್ಞೆ" ಎಂಬ ಹದಿಮೂರನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

## ಅಧ್ಯಾಯ - 14

# ಭೌತಿಕ ಪ್ರಕೃತಿಯ ತ್ರಿಗುಣಗಳು

### ಶ್ಲೋಕ - 1

**ಶ್ರೀ ಭಗವಾನುವಾಚ**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ |**
**ಯದ್‌ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ||೧||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಪರಮ್**—ದಿವ್ಯವನ್ನು ಕುರಿತು; **ಭೂಯಃ**—ಮತ್ತೆ; **ಪ್ರವಕ್ಷ್ಯಾಮಿ**—ಹೇಳುತ್ತೇನೆ; **ಜ್ಞಾನಾನಾಮ್**—ಎಲ್ಲ ಜ್ಞಾನಗಳ; **ಜ್ಞಾನಮ್**—ಜ್ಞಾನವನ್ನು; **ಉತ್ತಮಮ್**—ಪರಮವಾದ; **ಯತ್**—ಯಾವುದನ್ನು; **ಜ್ಞಾತ್ವಾ**—ತಿಳಿದು; **ಮುನಯಃ**—ಮುನಿಗಳು; **ಸರ್ವೇ**—ಎಲ್ಲ; **ಪರಾಮ್**—ದಿವ್ಯವಾದ; **ಸಿದ್ಧಿಮ್**—ಸಿದ್ಧಿಯನ್ನು; **ಇತಃ**—ಈ ಪ್ರಪಂಚದಿಂದ; **ಗತಾಃ**—ಪಡೆದರು.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಎಲ್ಲ ಜ್ಞಾನಗಳಲ್ಲಿ ಅತ್ಯುತ್ತಮವಾದ ಈ ಜ್ಞಾನವನ್ನು ನಾನು ಮತ್ತೆ ನಿನಗೆ ಹೇಳುತ್ತೇನೆ; ಈ ಜ್ಞಾನವನ್ನು ತಿಳಿದುಕೊಂಡು ಮುನಿಗಳು ಪರಮ ಸಿದ್ಧಿಯನ್ನು ಪಡೆದರು.**

### ಭಾವಾರ್ಥ

ಏಳನೆಯ ಅಧ್ಯಾಯದಿಂದ ಹನ್ನೆರಡನೆಯ ಅಧ್ಯಾಯದ ಕೊನೆಯವರೆಗೆ ಶ್ರೀಕೃಷ್ಣನು ಪರಮ ಸತ್ಯನನ್ನು, ದೇವೋತ್ತಮ ಪರಮ ಪುರುಷನನ್ನು ವಿವರವಾಗಿ ತಿಳಿಸುತ್ತಾನೆ. ಈಗ ಪ್ರಭುವೇ ಅರ್ಜುನನಿಗೆ ಇನ್ನಷ್ಟು ತಿಳಿಸಿಕೊಡುತ್ತಾನೆ. ತಾತ್ವಿಕ ಚಿಂತನೆಯಿಂದ ಈ ಅಧ್ಯಾಯವನ್ನು ಅರ್ಥಮಾಡಿಕೊಂಡವನು ಭಕ್ತಿಸೇವೆಯ ಅರಿವನ್ನು ಪಡೆಯುತ್ತಾನೆ. ನಮ್ರತೆಯಿಂದ ಜ್ಞಾನವನ್ನು ಬೆಳೆಸಿಕೊಳ್ಳುವುದರಿಂದ ಮನುಷ್ಯನು ಐಹಿಕ ಬಂಧನದಿಂದ ಬಿಡುಗಡೆಯಾಗುವ ಸಾಧ್ಯತೆ ಇದೆ ಎಂದು ಹದಿಮೂರನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ವಿವರಿಸಲಾಯಿತು. ಪ್ರಕೃತಿ ಗುಣಗಳ ಸಹವಾಸದಿಂದ ಜೀವಿಯು ಈ ಐಹಿಕ ಜಗತ್ತಿನ ಬಂಧನದಲ್ಲಿದ್ದಾನೆ ಎಂದು ವಿವರಿಸಲಾಯಿತು. ಈ ಪ್ರಕೃತಿ ಗುಣಗಳು ಯಾವುವು, ಅವು ಹೇಗೆ ಕೆಲಸ ಮಾಡುತ್ತವೆ, ಅವು ಹೇಗೆ ಬಂಧಿಸುತ್ತವೆ ಮತ್ತು ಬಿಡುಗಡೆಯನ್ನು ಕೊಡುತ್ತವೆ ಎಂದು ಈ ಅಧ್ಯಾಯದಲ್ಲಿ ಪರಮ ಪುರುಷನು ವಿವರಿಸುತ್ತಾನೆ. ಈ ಅಧ್ಯಾಯದಲ್ಲಿ ವಿವರಿಸುವ ಜ್ಞಾನವು ಈವರೆಗೆ ಇತರ ಅಧ್ಯಾಯಗಳಲ್ಲಿ ಕೊಟ್ಟ ಜ್ಞಾನಕ್ಕಿಂತ ಶ್ರೇಷ್ಠವಾದದ್ದು ಎಂದು ಪರಮ ಪ್ರಭುವು ಘೋಷಿಸುತ್ತಾನೆ. ಈ ಜ್ಞಾನದ ಅರಿವಿನಿಂದ ಅನೇಕ

ಮಂದಿ ಮಹರ್ಷಿಗಳು ಪರಿಪೂರ್ಣತೆಯನ್ನು ಸಾಧಿಸಿ ದಿವ್ಯಲೋಕಕ್ಕೆ ಹೋಗಿದ್ದಾರೆ. ಪ್ರಭುವು ಈಗ ಅದೇ ಜ್ಞಾನವನ್ನು ಇನ್ನೂ ಉತ್ತಮ ರೀತಿಯಲ್ಲಿ ವಿವರಿಸುತ್ತಾನೆ. ಈ ಜ್ಞಾನವು ಇದುವರೆಗೆ ವಿವರಿಸಿದ ಎಲ್ಲ ಜ್ಞಾನ ಪ್ರಕ್ರಿಯೆಗಳಿಗಿಂತ ಅತ್ಯಂತ ಶ್ರೇಷ್ಠವಾದದ್ದು; ಇದನ್ನು ತಿಳಿದುಕೊಂಡು ಅನೇಕ ಮಂದಿ ಪರಿಪೂರ್ಣತೆಯನ್ನು ಸಾಧಿಸಿದ್ದಾರೆ. ಹೀಗೆ ಈ ಹದಿನಾಲ್ಕನೆಯ ಅಧ್ಯಾಯವನ್ನು ಅರ್ಥಮಾಡಿಕೊಂಡವನು ಪರಿಪೂರ್ಣತೆಯನ್ನು ಸಾಧಿಸುತ್ತಾನೆ ಎಂದು ನಿರೀಕ್ಷಿಸಲಾಗಿದೆ.

## ಶ್ಲೋಕ - 2

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ |**
**ಸರ್ಗೇऽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ||೨||**

**ಇದಮ್**—ಈ; **ಜ್ಞಾನಮ್**—ಜ್ಞಾನವನ್ನು; **ಉಪಾಶ್ರಿತ್ಯ**—ಆಶ್ರಯಿಸಿ; **ಮಮ**—ನನ್ನ; **ಸಾಧರ್ಮ್ಯಮ್**—ಸಮಾನ ಸ್ವಭಾವವನ್ನು; **ಆಗತಾಃ**—ಹೊಂದಿದವರು; **ಸರ್ಗೇ ಅಪಿ**—ಸೃಷ್ಟಿಯಲ್ಲಿಯೂ ಕೂಡ; **ನ ಉಪಜಾಯಂತೇ**—ಹುಟ್ಟುವುದಿಲ್ಲ; **ಪ್ರಲಯೇ**—ಪ್ರಳಯದಲ್ಲಿ; **ನ ವ್ಯಥನ್ತಿ**—ಕ್ಷೋಭೆಗೊಳ್ಳುವುದಿಲ್ಲ; **ಚ**—ಕೂಡ.

## ಅನುವಾದ

**ಈ ಜ್ಞಾನದಲ್ಲಿ ನೆಲೆಗೊಂಡವನು ನನ್ನ ರೀತಿಯ ದಿವ್ಯ ಸ್ವಭಾವವನ್ನು ಪಡೆಯುವನು. ಹೀಗೆ ನೆಲೆಗೊಂಡವನು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ ಮತ್ತು ಪ್ರಳಯ ಕಾಲದಲ್ಲಿ ವ್ಯಥೆಪಡುವುದಿಲ್ಲ.**

## ಭಾವಾರ್ಥ

ಪರಿಪೂರ್ಣ ದಿವ್ಯಜ್ಞಾನವನ್ನು ಪಡೆದ ಮನುಷ್ಯನು ದೇವೋತ್ತಮ ಪರಮ ಪುರುಷನೊಂದಿಗೆ ಗುಣಾತ್ಮಕ ಸಮಾನತೆಯನ್ನು ಪಡೆಯುವನು; ಹುಟ್ಟು ಸಾವುಗಳ ಪುನರಾವರ್ತನೆಯಿಂದ ಬಿಡುಗಡೆ ಹೊಂದುವನು. ಆದರೆ ಜೀವಾತ್ಮನಾಗಿ ತನ್ನ ಪ್ರತ್ಯೇಕ ಇರವನ್ನು ಕಳೆದುಕೊಳ್ಳುವುದಿಲ್ಲ. ಆಧ್ಯಾತ್ಮಿಕ ಗಗನದ ದಿವ್ಯಲೋಕಗಳನ್ನು ತಲಪಿದ ಮುಕ್ತಾತ್ಮರು ಪರಮ ಪ್ರಭುವಿನ ಪ್ರೀತಿ ಪೂರ್ವಕ ದಿವ್ಯಸೇವೆಯಲ್ಲಿ ನಿರತರಾಗಿದ್ದು ಸದಾ ಅವನ ಪಾದಕಮಲಗಳನ್ನು ನೋಡುತ್ತಿರುತ್ತಾರೆ ಎಂದು ವೇದಸಾಹಿತ್ಯದಿಂದ ತಿಳಿದುಕೊಳ್ಳಬಹುದು. ಆದುದರಿಂದ ಬಿಡುಗಡೆಯನಂತರವೂ ಭಕ್ತರು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ.

ಸಾಮಾನ್ಯವಾಗಿ ಈ ಐಹಿಕ ಜಗತ್ತಿನಲ್ಲಿ ನಾವು ಪಡೆಯುವ ಜ್ಞಾನವು ಐಹಿಕ ಪ್ರಕೃತಿಯ ಗುಣತ್ರಯಗಳಿಂದ ಕಲ್ಮಷ ಹೊಂದುತ್ತದೆ. ಪ್ರಕೃತಿಯ ಗುಣತ್ರಯಗಳ ಕಲ್ಮಷದ ಸೋಂಕಿಲ್ಲದ ಜ್ಞಾನಕ್ಕೆ ದಿವ್ಯಜ್ಞಾನ ಎಂದು ಹೆಸರು. ಈ ದಿವ್ಯಜ್ಞಾನದಲ್ಲಿ ನೆಲೆಸುತ್ತಲೇ ಮನುಷ್ಯನು ಪರಮ ಪುರುಷನೊಡನೆ ಒಂದೇ ನೆಲೆಯಲ್ಲಿರುತ್ತಾನೆ. ಆಧ್ಯಾತ್ಮಿಕ ಗಗನದ ತಿಳುವಳಿಕೆಯಿಲ್ಲದವರು ಐಹಿಕ ರೂಪದ ಐಹಿಕ ಕರ್ಮಗಳಿಂದ ಬಿಡುಗಡೆಯಾದನಂತರ ಈ ಆಧ್ಯಾತ್ಮಿಕ ವ್ಯಕ್ತಿತ್ವವು ವೈವಿಧ್ಯವೇ ಇಲ್ಲದೆ ರೂಪರಹಿತವಾಗುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಈ ಜಗತ್ತಿನಲ್ಲಿ ಐಹಿಕ ವೈವಿಧ್ಯವಿರುವಂತೆಯೇ ಆಧ್ಯಾತ್ಮಿಕ ಜಗತ್ತಿನಲ್ಲಿಯೂ ವೈವಿಧ್ಯವಿರುತ್ತದೆ. ಇದನ್ನು ತಿಳಿಯದವರು

ಆಧ್ಯಾತ್ಮಿಕ ಅಸ್ತಿತ್ವವು ಐಹಿಕ ವೈವಿಧ್ಯಕ್ಕೆ ವಿರುದ್ಧವಾದದ್ದು ಎಂದು ಆಲೋಚಿಸುತ್ತಾರೆ. ಆದರೆ ವಾಸ್ತವವಾಗಿ ಆಧ್ಯಾತ್ಮಿಕ ಗಗನದಲ್ಲಿ ಮನುಷ್ಯನು ಆಧ್ಯಾತ್ಮಿಕ ರೂಪವನ್ನು ಪಡೆಯುತ್ತಾನೆ. ಆಧ್ಯಾತ್ಮಿಕ ಚಟುವಟಿಕೆಗಳಿವೆ ಮತ್ತು ಆಧ್ಯಾತ್ಮಿಕ ಸನ್ನಿವೇಶವನ್ನು ಭಕ್ತಿಪೂರ್ವಕ ಜೀವನ ಎಂದು ಕರೆದಿದೆ. ಆ ವಾತಾವರಣವು ಕಲ್ಮಷರಹಿತ ಎಂದು ಹೇಳುತ್ತಾರೆ. ಅಲ್ಲಿ ಗುಣದಲ್ಲಿ ಮನುಷ್ಯನು ಪರಮ ಪ್ರಭುವಿಗೆ ಸಮಾನನು. ಇಂತಹ ಜ್ಞಾನವನ್ನು ಪಡೆಯಲು ಮನುಷ್ಯನು ಎಲ್ಲ ಆಧ್ಯಾತ್ಮಿಕ ಗುಣಗಳನ್ನು ಬೆಳೆಸಿಕೊಳ್ಳಬೇಕು. ಹೀಗೆ ಆಧ್ಯಾತ್ಮಿಕ ಗುಣಗಳನ್ನು ಬೆಳೆಸಿಕೊಂಡವನಿಗೆ ಐಹಿಕ ಜಗತ್ತಿನ ಸೃಷ್ಟಿಯಿಂದಾಗಲೀ ವಿನಾಶದಿಂದಾಗಲೀ ಯಾವ ಪರಿಣಾಮವೂ ಆಗುವುದಿಲ್ಲ.

## ಶ್ಲೋಕ - 3

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಮ್ಭವಃ ಸರ್ವಭೂತಾನಾಂ ತತೋ ಭವತಿ ಭಾರತ॥೩॥**

**ಮಮ**—ನನ್ನ; **ಯೋನಿಃ**—ಜನನ ಮೂಲವು; **ಮಹತ್**—ಮಹತ್ ತತ್ವವಾದ; **ಬ್ರಹ್ಮ**—ಪರಮೋನ್ನತನು; **ತಸ್ಮಿನ್**—ಅದರಲ್ಲಿ; **ಗರ್ಭಮ್**—ಗರ್ಭವನ್ನು; **ದಧಾಮಿ**—ಸೃಷ್ಟಿಸುತ್ತೇನೆ; **ಅಹಮ್**—ನಾನು; **ಸಮ್ಭವಃ**—ಸಂಭವವು; **ಸರ್ವಭೂತಾನಾಮ್**—ಎಲ್ಲ ಜೀವಿಗಳ; **ತತಃ**—ಅನಂತರ; **ಭವತಿ**—ಆಗುತ್ತದೆ; **ಭಾರತ**—ಭರತ ಪುತ್ರನೇ.

## ಅನುವಾದ

**ಭರತ ವಂಶದವನಾದ ಅರ್ಜುನನೆ, ಒಟ್ಟು ಐಹಿಕ ವಸ್ತುವಿಗೆ ಬ್ರಹ್ಮನ್ ಎಂದು ಹೆಸರು; ಅದು ಜನನದ ಮೂಲ; ನಾನು ಆ ಬ್ರಹ್ಮನ್‌ಗೆ ಗರ್ಭಾಧಾನಮಾಡಿ ಎಲ್ಲ ಜೀವಿಗಳು ಹುಟ್ಟುವುದು ಸಾಧ್ಯವಾಗುವಂತೆ ಮಾಡುತ್ತೇನೆ.**

## ಭಾವಾರ್ಥ

ಇದು ಜಗತ್ತಿನ ಒಂದು ವಿವರಣೆ; ಆಗುವುದೆಲ್ಲಕ್ಕೆ ಕಾರಣವಾದ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಜನೆ. ಪ್ರಕೃತಿ ಮತ್ತು ಪುರುಷರ ಈ ಸಂಯೋಜನೆಯನ್ನು ಸ್ವತಃ ಪರಮ ಪ್ರಭುವೇ ಸಾಧ್ಯಮಾಡುತ್ತಾನೆ. ಸಮಸ್ತ ವಿಶ್ವದ ಅಭಿವ್ಯಕ್ತಿಯ ಒಟ್ಟು ಕಾರಣ **ಮಹತ್ ತತ್ವ.** ಐಹಿಕ ಕಾರಣದ ಒಟ್ಟು ವಸ್ತುವನ್ನು ಕೆಲವೊಮ್ಮೆ ಬ್ರಹ್ಮನ್ ಎಂದು ಕರೆಯಲಾಗುತ್ತದೆ; ಇದರಲ್ಲಿ ಗುಣತ್ರಯಗಳಿವೆ. ಒಟ್ಟು ವಸ್ತುವು ಪರಮ ಪುರುಷನಿಂದ ಗರ್ಭವನ್ನು ಪಡೆಯುತ್ತದೆ. ಹೀಗೆ ಅಸಂಖ್ಯಾತ ವಿಶ್ವಗಳು ಸಾಧ್ಯವಾಗುತ್ತವೆ. ಈ ಒಟ್ಟು ಐಹಿಕ ವಸ್ತು ಅಥವಾ ಮಹತ್ ತತ್ವವನ್ನು ವೇದಸಾಹಿತ್ಯದಲ್ಲಿ ಬ್ರಹ್ಮನ್ ಎಂದು ವರ್ಣಿಸಿದೆ. (ಮುಂಡಕ ಉಪನಿಷತ್ತು 1.1.9) — **ತಸ್ಮಾದ್ ಏತದ್ ಬ್ರಹ್ಮ ನಾಮ ರೂಪಮ್ ಅನ್ನಂ ಚ ಜಾಯತೇ.** ಆ ಬ್ರಹ್ಮಕ್ಕೆ ಪರಮ ಪುರುಷನು ಜೀವಿಗಳ ಬೀಜಗಳನ್ನು ನೀಡಿ ಗರ್ಭಾಧಾನಮಾಡುತ್ತಾನೆ. ಭೂಮಿ, ನೀರು, ಅಗ್ನಿ ಮತ್ತು ವಾಯು ಇವುಗಳಿಂದ ಪ್ರಾರಂಭಿಸಿ ಇಪ್ಪತ್ನಾಲ್ಕು ಘಟಕಾಂಶಗಳು ಎಲ್ಲವೂ ಐಹಿಕ ಶಕ್ತಿ; ಅವುಗಳೆಲ್ಲ ಸೇರಿ **ಮಹತ್ ಬ್ರಹ್ಮ** ಅಥವಾ ಐಹಿಕ ಪ್ರಕೃತಿ. ಏಳನೆಯ ಅಧ್ಯಾಯದಲ್ಲಿ ವಿವರಿಸಿದಂತೆ ಇದರಾಚೆ ಇದಕ್ಕಿಂತ ಶ್ರೇಷ್ಠವಾದ ಇನ್ನೊಂದು ಪ್ರಕೃತಿಯಿದೆ. ಅದು ಜೀವಿ. ದೇವೋತ್ತಮ

ಪರಮ ಪುರುಷನ ಸಂಕಲ್ಪದಿಂದ ಶ್ರೇಷ್ಠ ಪ್ರಕೃತಿಯಲ್ಲಿ ಐಹಿಕ ಪ್ರಕೃತಿಯನ್ನು ಬೆರೆಸಲಾಗುತ್ತದೆ; ಅನಂತರ ಈ ಐಹಿಕ ಪ್ರಕೃತಿಯಿಂದ ಎಲ್ಲ ಜೀವಿಗಳೂ ಹುಟ್ಟುತ್ತಾರೆ.

ಚೇಳು ಅಕ್ಕಿಯ ರಾಶಿಗಳಲ್ಲಿ ತನ್ನ ಮೊಟ್ಟೆಯನ್ನು ಇಡುತ್ತದೆ. ಚೇಳು ಅಕ್ಕಿಯಿಂದ ಹುಟ್ಟುತ್ತದೆ ಎಂದು ಕೆಲವೊಮ್ಮೆ ಹೇಳುವುದುಂಟು. ಆದರೆ ಅಕ್ಕಿಯು ಚೇಳಿನ ಕಾರಣವಲ್ಲ. ವಾಸ್ತವವಾಗಿ ಮೊಟ್ಟೆಗಳನ್ನು ಇಟ್ಟದ್ದು ತಾಯಿ. ಹಾಗೆಯೇ ಜೀವಿಗಳ ಹುಟ್ಟಿಗೆ ಐಹಿಕ ಪ್ರಕೃತಿಯು ಕಾರಣವಲ್ಲ. ದೇವೋತ್ತಮ ಪರಮ ಪುರುಷನು ಬೀಜವನ್ನು ನೀಡುತ್ತಾನೆ; ಅವು ಐಹಿಕ ಪ್ರಕೃತಿಯ ಉತ್ಪನ್ನಗಳಾಗಿ ಹೊರಕ್ಕೆ ಬರುವಂತೆ ಕಾಣುತ್ತವೆ, ಅಷ್ಟೆ. ಹೀಗೆ ಪ್ರತಿಯೊಬ್ಬ ಜೀವಿಯೂ ತನ್ನ ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಬೇರೆ ದೇಹವನ್ನು ಪಡೆಯುತ್ತಾನೆ; ಇದನ್ನು ಐಹಿಕ ಪ್ರಕೃತಿಯು ಸೃಷ್ಟಿಸುತ್ತದೆ; ಇದರಿಂದ ಜೀವಿಯು ತನ್ನ ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಸುಖವನ್ನೋ ದುಃಖವನ್ನೋ ಅನುಭವಿಸುವುದು ಸಾಧ್ಯವಾಗುತ್ತದೆ. ಈ ಐಹಿಕ ಜಗತ್ತಿನಲ್ಲಿ ಜೀವಿಗಳ ಎಲ್ಲ ಅಭಿವ್ಯಕ್ತಿಗಳಿಗೆ ಪ್ರಭುವೇ ಕಾರಣನು.

## ಶ್ಲೋಕ - 4

**ಸರ್ವ ಯೋನಿಷು ಕೌನ್ತೇಯ ಮೂರ್ತಯಃ ಸಮ್ಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥೪॥**

**ಸರ್ವ ಯೋನಿಷು**—ಎಲ್ಲ ಜೀವ ಜಾತಿಗಳಲ್ಲಿ; **ಕೌನ್ತೇಯ**—ಕುಂತೀ ಪುತ್ರನೇ; **ಮೂರ್ತಯಃ**—ಆಕಾರಗಳು; **ಸಮ್ಭವನ್ತಿ**—ಪ್ರಕಟವಾಗುತ್ತವೋ; **ಯಾಃ**—ಯಾವ; **ತಾಸಾಮ್**—ಅವೆಲ್ಲದರ; **ಬ್ರಹ್ಮ**—ಪರಮೋನ್ನತನು; **ಮಹತ್ ಯೋನಿಃ**—ಭೌತಿಕ ತತ್ವದಲ್ಲಿ ಜನನ ಮೂಲವು; **ಅಹಮ್**—ನಾನು; **ಬೀಜಪ್ರದಃ**—ಬೀಜ ನೀಡುವ; **ಪಿತಾ**—ತಂದೆಯು.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ಜೀವಂತ ಪ್ರಾಣಿಗಳ ಎಲ್ಲ ವರ್ಗಗಳು ಇರುವುದು ಸಾಧ್ಯವಾಗುವುದು, ಐಹಿಕ ಪ್ರಕೃತಿಯಲ್ಲಿ ಹುಟ್ಟುವುದರಿಂದ; ನಾನೇ ಬೀಜವನ್ನು ನೀಡುವ ತಂದೆ; ಇದನ್ನು ತಿಳಿಯಬೇಕು.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನು ಎಲ್ಲ ಜೀವಿಗಳ ಮೂಲಪಿತ ಎನ್ನುವುದನ್ನು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಜೀವಿಗಳು ಐಹಿಕ ಪ್ರಕೃತಿ ಮತ್ತು ಆಧ್ಯಾತ್ಮಿಕ ಪ್ರಕೃತಿಗಳ ಸಂಯೋಜನೆಗಳು. ಇಂತಹ ಜೀವಿಗಳು ಈ ಲೋಕದಲ್ಲಿ ಮಾತ್ರವಲ್ಲ, ಎಲ್ಲ ಲೋಕಗಳಲ್ಲಿಯೂ ಕಾಣಬರುತ್ತವೆ. ಬ್ರಹ್ಮನು ನೆಲೆಸಿರುವ ಅತ್ಯುನ್ನತ ಲೋಕದಲ್ಲಿಯೂ ಇವರನ್ನು ಕಾಣಬಹುದು. ಜೀವಿಗಳು ಎಲ್ಲೆಲ್ಲಿಯೂ ಇದ್ದಾರೆ; ಭೂಮಿಯಲ್ಲಿ ಜೀವಿಗಳಿದ್ದಾರೆ. ನೀರು ಮತ್ತು ಅಗ್ನಿಗಳಲ್ಲಿ ಸಹ ಜೀವಿಗಳಿದ್ದಾರೆ. ಎಲ್ಲ ಅಭಿವ್ಯಕ್ತಿಗಳಿಗೆ ಕಾರಣವೆಂದರೆ ತಾಯಿಯಾದ ಐಹಿಕ ಪ್ರಕೃತಿ ಮತ್ತು ಕೃಷ್ಣನ ಗರ್ಭಾಧಾನ ಪ್ರಕ್ರಿಯೆ. ಇದರ ಭಾವಾರ್ಥ ಇದು — ಐಹಿಕ ಜಗತ್ತು ಬೀಜಗಳಿಂದ

ಗರ್ಭ ಧರಿಸುತ್ತದೆ. ಸೃಷ್ಟಿಯ ಸಮಯದಲ್ಲಿ ತಮ್ಮ ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಜೀವಿಗಳು ವಿವಿಧ ರೂಪಗಳಲ್ಲಿ ಹೊರಕ್ಕೆ ಬರುತ್ತಾರೆ.

## ಶ್ಲೋಕ - 5

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥೫॥**

**ಸತ್ತ್ವಮ್**—ಸತ್ವಗುಣವು; **ರಜಃ**—ರಜೋಗುಣವು; **ತಮಃ**—ತಮೋಗುಣವು; **ಇತಿ**—ಎಂಬ; **ಗುಣಾಃ**—ಗುಣಗಳು; **ಪ್ರಕೃತಿ**—ಭೌತಿಕ ಪ್ರಕೃತಿಯ; **ಸಮ್ಭವಾಃ**—ಉತ್ಪನ್ನಗಳು; **ನಿಬಧ್ನನ್ತಿ**—ಬದ್ಧಗೊಳಿಸುತ್ತವೆ; **ಮಹಾಬಾಹೋ**—ಮಹಾಬಾಹುವೇ; **ದೇಹೇ**—ಶರೀರದಲ್ಲಿ; **ದೇಹಿನಮ್**—ಜೀವಿಯನ್ನು; **ಅವ್ಯಯಮ್**—ನಿತ್ಯನಾದವನನ್ನು.

## ಅನುವಾದ

**ಐಹಿಕ ಪ್ರಕೃತಿಯಲ್ಲಿ ಮೂರು ಗುಣಗಳಿವೆ — ಸತ್ವ, ರಜಸ್ಸು ಮತ್ತು ತಮಸ್ಸು. ಮಹಾಬಾಹುವಾದ ಅರ್ಜುನನೆ, ನಿತ್ಯನಾದ ಜೀವಿಯು ಪ್ರಕೃತಿಯೊಡನೆ ಸಂಪರ್ಕ ಪಡೆದಾಗ ಅವನು ಈ ಗುಣಗಳ ಬಂಧನಕ್ಕೆ ಸಿಕ್ಕಿಕೊಳ್ಳುತ್ತಾನೆ.**

## ಭಾವಾರ್ಥ

ಜೀವಿಯು ಆಧ್ಯಾತ್ಮಿಕನಾದವನು. ಆದುದರಿಂದ ಅವನಿಗೂ ಐಹಿಕ ಪ್ರಕೃತಿಗೂ ಸಂಬಂಧವಿಲ್ಲ. ಆದರೂ ಆತನು ಐಹಿಕ ಜಗತ್ತಿನಿಂದ ಬದ್ಧನಾದದ್ದರಿಂದ ಅವನು ಐಹಿಕ ಪ್ರಕೃತಿಯ ಗುಣತ್ರಯಗಳ ಪ್ರಬಲ ಪ್ರಭಾವದಲ್ಲಿ ವರ್ತಿಸುತ್ತಾನೆ. ಪ್ರಕೃತಿಯ ಬೇರೆ ಬೇರೆ ಅಂಶಗಳಿಂದ ಜೀವಿಗಳಿಗೆ ಬೇರೆ ಬೇರೆ ಬಗೆಗಳ ದೇಹಗಳು ಲಭ್ಯವಾಗುತ್ತವೆ; ಇದರಿಂದ ಅವರು ಆ ಸ್ವಭಾವಕ್ಕೆ ಅನುಗುಣವಾಗಿ ವರ್ತಿಸಲು ಪ್ರೇರಣೆ ಪಡೆಯುತ್ತಾರೆ. ಸುಖ ದುಃಖಗಳ ವೈವಿಧ್ಯಕ್ಕೆ ಇದು ಕಾರಣ.

## ಶ್ಲೋಕ - 6

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚಾನಘ ॥೬॥**

**ತತ್ರ**—ಅಲ್ಲಿ; **ಸತ್ತ್ವಮ್**—ಸತ್ವಗುಣವು; **ನಿರ್ಮಲತ್ವಾತ್**—ಭೌತಿಕ ಜಗತ್ತಿನಲ್ಲಿ ಅತಿಶುದ್ಧವಾಗಿದ್ದು; **ಪ್ರಕಾಶಕಮ್**—ಪ್ರಕಾಶಮಾನವು; **ಅನಾಮಯಮ್**—ಯಾವ ಪಾಪ ಪ್ರತಿಕ್ರಿಯೆಯೂ ಇಲ್ಲದ್ದು; **ಸುಖ**—ಸುಖದ; **ಸಙ್ಗೇನ**—ಸಂಗದಿಂದ; **ಬಧ್ನಾತಿ**—ಬದ್ಧಗೊಳಿಸುತ್ತದೆ; **ಜ್ಞಾನ**—ಜ್ಞಾನದ; **ಸಙ್ಗೇನ**—ಸಂಗದಿಂದ; **ಚ**—ಕೂಡ; **ಅನಘ**—ಪಾಪರಹಿತನೇ.

## ಅನುವಾದ

**ಪಾಪರಹಿತನೆ, ಸಾತ್ವಿಕ ಗುಣವು ಇತರ ಗುಣಗಳಿಗಿಂತ ನಿರ್ಮಲವಾದುದು; ಆ ಕಾರಣದಿಂದ ಅದು**

**ಪ್ರಕಾಶಮಾನವಾದದ್ದು. ಅದು ಮನುಷ್ಯನನ್ನು ಎಲ್ಲ ಪಾಪಕರ ಪ್ರತಿಕ್ರಿಯೆಗಳಿಂದ ಬಿಡುಗಡೆ ಮಾಡುತ್ತದೆ. ಈ ಗುಣವನ್ನು ಹೊಂದಿದವರನ್ನು ಸುಖ ಮತ್ತು ಜ್ಞಾನಗಳ ಪ್ರಜ್ಞೆಯು ಬಂಧಿಸುತ್ತದೆ.**

## ಭಾವಾರ್ಥ

ಐಹಿಕ ಪ್ರಕೃತಿಯಿಂದ ಬದ್ಧರಾದ ಜೀವಿಗಳು ಹಲವು ಬಗೆಗಳವರು. ಒಬ್ಬನು ಸುಖವಾಗಿರುತ್ತಾನೆ. ಮತ್ತೊಬ್ಬನು ಬಹು ಚಟುವಟಿಕೆಯಿಂದಿರುತ್ತಾನೆ. ಇನ್ನೊಬ್ಬನು ನಿಸ್ಸಹಾಯಕನಾಗಿರುತ್ತಾನೆ. ಈ ಎಲ್ಲ ಬಗೆಗಳ ಮಾನಸಿಕ ಅಭಿವ್ಯಕ್ತಿಗಳು ಪ್ರಕೃತಿಯಲ್ಲಿ ಜೀವಿಗಳ ಬದ್ಧಸ್ಥಿತಿಗೆ ಕಾರಣ. ಅವು ಹೇಗೆ ಭಿನ್ನವಾಗಿ ಬದ್ಧವಾಗಿರುತ್ತವೆ ಎನ್ನುವುದನ್ನು ಭಗವದ್ಗೀತೆಯ ಈ ವಿಭಾಗದಲ್ಲಿ ವಿವರಿಸಿದೆ. ಸತ್ವಗುಣವನ್ನು ಮೊದಲು ಪರಿಶೀಲಿಸಿದೆ. ಈ ಐಹಿಕ ಜಗತ್ತಿನಲ್ಲಿ ಸತ್ವಗುಣವನ್ನು ಬೆಳೆಸಿಕೊಳ್ಳುವುದರ ಪರಿಣಾಮವೆಂದರೆ ಅಂತಹ ಮನುಷ್ಯನು ಹೀಗಿಲ್ಲದೆ ಬದ್ಧರಾಗಿರುವವರಿಗಿಂತ ಬುದ್ಧಿವಂತನಾಗುತ್ತಾನೆ. ಸತ್ವಗುಣವಿರುವವನ ಮೇಲೆ ಐಹಿಕ ದುಃಖಗಳು ಅಷ್ಟು ಪರಿಣಾಮವನ್ನು ಮಾಡುವುದಿಲ್ಲ ಮತ್ತು ಅವನಿಗೆ ಐಹಿಕ ಜ್ಞಾನದಲ್ಲಿ ಮುಂದುವರಿಯುತ್ತಿರುವ ಭಾವನೆ ಇರುತ್ತದೆ. ಇವರ ಪ್ರತಿನಿಧಿ ಬ್ರಾಹ್ಮಣ; ಅವನು ಸತ್ವಗುಣದಲ್ಲಿ ನೆಲೆಸಿದ್ದಾನೆ ಎಂದು ಭಾವಿಸಲಾಗುತ್ತದೆ. ಸತ್ವಗುಣದಿಂದ, ಮನುಷ್ಯನು ಪಾಪಕರ್ಮಗಳಿಂದ ಸ್ವಲ್ಪ ಹೆಚ್ಚು ಕಡಮೆ ಮುಕ್ತನೇ ಆಗುತ್ತಾನೆ ಎನ್ನುವುದನ್ನು ಅರ್ಥಮಾಡಿಕೊಳ್ಳುವುದೇ ಈ ಸುಖದ ಭಾವನೆಗೆ ಕಾರಣ. ವಾಸ್ತವವಾಗಿ ಸತ್ವಗುಣ ಎಂದರೆ ಹೆಚ್ಚಿನ ಜ್ಞಾನ ಮತ್ತು ಹೆಚ್ಚಿನ ಸುಖದ ಭಾವನೆ ಎಂದರ್ಥ ಎಂದು ವೇದ ಸಾಹಿತ್ಯದಲ್ಲಿ ಹೇಳಿದೆ.

ಇಲ್ಲಿ ಒಂದು ಕಷ್ಟವಿದೆ. ಜೀವಿಯು ಸತ್ವಗುಣದಲ್ಲಿದ್ದಾಗ ತಾನು ಜ್ಞಾನದಲ್ಲಿ ಮುಂದುವರಿದಿದ್ದೇನೆ ಮತ್ತು ಇತರರಿಗಿಂತ ಶ್ರೇಷ್ಠ ಎನ್ನಿಸುವಂತೆ ಬದ್ಧಸ್ಥಿತಿಗೆ ಬರುತ್ತಾನೆ. ಹೀಗೆ ಅವನು ಬದ್ಧನಾಗುತ್ತಾನೆ. ಇದಕ್ಕೆ ಅತ್ಯುತ್ತಮ ಉದಾಹರಣೆಗಳೆಂದರೆ ವಿಜ್ಞಾನಿ ಮತ್ತು ತತ್ವಶಾಸ್ತ್ರಜ್ಞ. ಇಬ್ಬರಿಗೂ ತಮ್ಮ ಜ್ಞಾನದ ವಿಷಯದಲ್ಲಿ ತುಂಬ ಹೆಮ್ಮೆ; ಸಾಮಾನ್ಯವಾಗಿ ಅವರು ತಮ್ಮ ಜೀವನದ ಸ್ಥಿತಿಗತಿಗಳನ್ನು ಉತ್ತಮಗೊಳಿಸಿಕೊಳ್ಳುವುದರಿಂದ ಒಂದು ಬಗೆಯ ಐಹಿಕ ಸುಖದ ಭಾವನೆ ಬರುತ್ತದೆ. ಬದ್ಧ ಬದುಕಿನಲ್ಲಿನ ಈ ಹೆಚ್ಚಿನ ಸುಖದ ಭಾವನೆಯಿಂದ ಅವರು ಐಹಿಕ ಪ್ರಕೃತಿಯ ಸತ್ವಗುಣದಿಂದ ಬಂಧಿತರಾಗುತ್ತಾರೆ. ಇದರಿಂದ ಸತ್ವಗುಣದಲ್ಲಿ ಕೆಲಸ ಮಾಡುವುದರತ್ತ ಅವರು ಆಕರ್ಷಿತರಾಗುತ್ತಾರೆ; ಆ ರೀತಿಯಲ್ಲಿ ಕೆಲಸಮಾಡುವುದಕ್ಕೆ ಅವರಿಗೆ ಆಕರ್ಷಣೆಯಿದ್ದಷ್ಟು ಕಾಲವೂ ಅವರು ಪ್ರಕೃತಿಯ ಗುಣಗಳಲ್ಲಿ ಯಾವುದಾದರೊಂದು ಬಗೆಯ ದೇಹವನ್ನು ಪಡೆಯಬೇಕಾಗುತ್ತದೆ. ಹೀಗೆ ಬಿಡುಗಡೆಯಾಗುವುದರ ಸಂಭವವೂ ಇಲ್ಲ. ಆಧ್ಯಾತ್ಮಿಕ ಜಗತ್ತಿಗೆ ಹೋಗುವ ಸಂಭವವೂ ಇಲ್ಲ. ಮನುಷ್ಯನು ಮತ್ತೆ ಮತ್ತೆ ಒಬ್ಬ ತತ್ವಶಾಸ್ತ್ರಜ್ಞನಾಗಬಹುದು, ವಿಜ್ಞಾನಿಯಾಗಬಹುದು ಅಥವಾ ಕವಿಯಾಗಬಹುದು; ಅದೇ ಹುಟ್ಟು ಸಾವುಗಳ ಅದೇ ತೊಂದರೆಗಳಲ್ಲಿ ಮತ್ತೆ ಮತ್ತೆ ಸಿಕ್ಕಿಕೊಳ್ಳಬಹುದು. ಆದರೆ ಐಹಿಕ ಶಕ್ತಿಯ ಮಾಯೆಯಿಂದ ಈ ಬಗೆಯ ಬದುಕು ಸಂತೋಷಕರವಾಗಿದೆ ಎಂದು ಮನುಷ್ಯನು ಭಾವಿಸುತ್ತಾನೆ.

## ಶ್ಲೋಕ - 7

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾ ಸಙ್ಗಸಮುದ್ಭವಮ್ |**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಙ್ಗೇನ ದೇಹಿನಮ್ ||೭||**

**ರಜಃ**—ರಜೋಗುಣವು; **ರಾಗ ಆತ್ಮಕಮ್**—ಬಯಕೆ ಅಥವಾ ಕಾಮದಿಂದ ಕೂಡಿದ್ದು ಎಂದು; **ವಿದ್ಧಿ**—ತಿಳಿದುಕೊ; **ತೃಷ್ಣಾ**—ಕಾತರತೆಯ; **ಸಂಗ**—ಸಂಗದಿಂದ; **ಸಮುದ್ಭವಮ್**—ಉತ್ಪನ್ನವಾದದ್ದು; **ತತ್**—ಅದು; **ನಿಬಧ್ನಾತಿ**—ಬಂಧಿಸುತ್ತದೆ; **ಕೌನ್ತೇಯ**—ಕುಂತೀ ಪುತ್ರನೇ; **ಕರ್ಮಸಙ್ಗೇನ**—ಕಾಮ್ಯಕರ್ಮ ಸಂಗದಿಂದ; **ದೇಹಿನಮ್**—ದೇಹಿಯನ್ನು.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ರಜೋಗುಣವು ಮಿತಿಯಿಲ್ಲದ ಆಸೆಗಳು ಮತ್ತು ಬಯಕೆಗಳಿಂದ ಹುಟ್ಟುತ್ತದೆ. ಇದರಿಂದಾಗಿ ದೇಹಧಾರಿಯಾದ ಜೀವಿಯು ಐಹಿಕ ಕಾಮ್ಯ ಕರ್ಮಗಳಲ್ಲಿ ಸಿಕ್ಕಿಕೊಳ್ಳುತ್ತಾನೆ.**

## ಭಾವಾರ್ಥ

ಸ್ತ್ರೀ ಪುರುಷರ ಪರಸ್ಪರ ಆಕರ್ಷಣೆಯು ರಜೋಗುಣದ ಲಕ್ಷಣ. ಹೆಂಗಸು ಗಂಡಸನ್ನು ಆಕರ್ಷಿಸುತ್ತಾಳೆ ಮತ್ತು ಗಂಡಸು ಹೆಂಗಸನ್ನು ಆಕರ್ಷಿಸುತ್ತಾನೆ. ಇದಕ್ಕೆ ರಜೋಗುಣವೆಂದು ಹೆಸರು. ರಜೋಗುಣವು ಹೆಚ್ಚಾದಾಗ ಮನುಷ್ಯನಿಗೆ ಐಹಿಕ ಭೋಗದ ಹಂಬಲವಾಗುತ್ತದೆ. ಅವನು ಇಂದ್ರಿಯ ತೃಪ್ತಿಯನ್ನು ಬಯಸುತ್ತಾನೆ. ಇಂದ್ರಿಯ ತೃಪ್ತಿಗಾಗಿ ರಜೋಗುಣದ ಮನುಷ್ಯನು ಸಮಾಜದಲ್ಲಿ ಅಥವಾ ದೇಶದಲ್ಲಿ ಗೌರವವನ್ನು ಬಯಸುತ್ತಾನೆ. ಅವನಿಗೆ ಒಳ್ಳೆಯ ಮಕ್ಕಳು, ಹೆಂಡತಿ ಮತ್ತು ಮನೆಗಳಿಂದ ಕೂಡಿದ ಸುಖವಾದ ಸಂಸಾರವು ಬೇಕು. ಇವು ರಜೋಗುಣದಿಂದ ಹುಟ್ಟಿದವು. ಮನುಷ್ಯನಿಗೆ ಈ ಹಂಬಲಗಳು ಇದ್ದಷ್ಟು ದಿನವೂ ಅವನು ಬಹಳ ಕಷ್ಟಪಟ್ಟು ಕೆಲಸ ಮಾಡಬೇಕಾಗುತ್ತದೆ. ಆದುದರಿಂದ ಆತನಿಗೆ ತನ್ನ ಕಾಮ್ಯಕರ್ಮಗಳ ಫಲದ ಸಂಗವಾಗುತ್ತದೆ. ಇದರಿಂದ ಅವನು ಅಂತಹ ಚಟುವಟಿಕೆಗಳ ಬಂದಿಯಾಗುತ್ತಾನೆ. ತನ್ನ ಹೆಂಡತಿ, ಮಕ್ಕಳು ಮತ್ತು ಸಮಾಜವನ್ನು ಸುಪ್ರೀತಗೊಳಿಸಲು ಮತ್ತು ತನ್ನ ಪ್ರತಿಷ್ಠೆಯನ್ನು ಉಳಿಸಿಕೊಳ್ಳಲು ಮನುಷ್ಯನು ಕೆಲಸ ಮಾಡಬೇಕಾಗುತ್ತದೆ. ಆದುದರಿಂದ ಸಮಸ್ತ ಐಹಿಕ ಜಗತ್ತು ಸ್ವಲ್ಪ ಹೆಚ್ಚು ಕಡಮೆ ರಜೋಗುಣದಲ್ಲಿದೆ. ರಜೋಗುಣದ ಮಟ್ಟದಲ್ಲಿ ಆಧುನಿಕ ನಾಗರಿಕತೆಯು ಮುಂದುವರಿದಿದೆ ಎಂದು ಭಾವಿಸಲಾಗುತ್ತದೆ. ಹಿಂದಿನ ಕಾಲದಲ್ಲಿ ಮುಂದುವರಿದ ಸ್ಥಿತಿಯು ಸತ್ವಗುಣದಲ್ಲಿನದು ಎಂದು ಭಾವಿಸಲಾಗುತ್ತಿತ್ತು. ಸತ್ವಗುಣದವರಿಗೇ ಬಿಡುಗಡೆಯಿಲ್ಲದಿರುವಾಗ ರಜೋಗುಣದಲ್ಲಿ ಸಿಕ್ಕಿಕೊಂಡಿರುವವರ ವಿಷಯ ಹೇಳುವುದೇನು?

## ಶ್ಲೋಕ - 8

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥೮॥**

**ತಮಃ**—ತಮೋಗುಣವು; **ತು**—ಆದರೆ; **ಅಜ್ಞಾನಜಮ್**—ಅಜ್ಞಾನದ ಉತ್ಪನ್ನವು ಎಂದು; **ವಿದ್ಧಿ**—ತಿಳಿ; **ಮೋಹನಮ್**—ಮೋಹವು; **ಸರ್ವದೇಹಿನಾಮ್**—ಎಲ್ಲ ದೇಹಿಗಳ; **ಪ್ರಮಾದ**—ಮತಿಭ್ರಮಣೆ; **ಆಲಸ್ಯ**—ಆಲಸ್ಯ; **ನಿದ್ರಾಭಿಃ**—ಮತ್ತು ನಿದ್ರೆಗಳಿಂದ; **ತತ್**—ಅದು; **ನಿಬಧ್ನಾತಿ**—ಬಂಧಿಸುತ್ತದೆ; **ಭಾರತ**—ಭರತ ಪುತ್ರನೇ.

## ಅನುವಾದ

**ಭರತ ವಂಶಜನಾದ ಅರ್ಜುನನೆ, ಅಜ್ಞಾನದಿಂದ ಹುಟ್ಟಿದ ತಮೋಗುಣವು ದೇಹಧಾರಿಗಳಾದ ಎಲ್ಲ ಜೀವಿಗಳ ಭ್ರಮೆ. ಈ ಗುಣದ ಪರಿಣಾಮಗಳೆಂದರೆ ಹುಚ್ಚು, ಪ್ರಮಾದ ಮತ್ತು ನಿದ್ರೆ. ಇವು ಬದ್ಧ ಆತ್ಮವನ್ನು ಬಂಧಿಸುತ್ತವೆ.**

## ಭಾವಾರ್ಥ

ಈ ಶ್ಲೋಕದಲ್ಲಿ **ತು** ಎನ್ನುವ ಪದದ ನಿಖರವಾದ ಅನ್ವಯವು ಅರ್ಥವತ್ತಾಗಿದೆ. ತಮೋಗುಣವು ಬದ್ಧ ಆತ್ಮನ ಒಂದು ಬಹು ವಿಶಿಷ್ಟ ಗುಣ ಎಂದು ಇದರ ಅರ್ಥ. ತಮೋಗುಣವು ಸತ್ವಗುಣಕ್ಕೆ ವಿರುದ್ಧವಾದುದು. ಸತ್ವಗುಣದಲ್ಲಿ ಮನುಷ್ಯನು ಜ್ಞಾನವನ್ನು ಬೆಳೆಸಿಕೊಂಡು ಪ್ರತಿಯೊಂದು ವಿಷಯವನ್ನೂ ಅರ್ಥಮಾಡಿಕೊಳ್ಳಬಲ್ಲ. ಆದರೆ ತಮೋಗುಣವು ಇದಕ್ಕೆ ವಿರುದ್ಧವಾದುದು. ತಮೋಗುಣದ ಪ್ರಭಾವಕ್ಕೆ ಸಿಕ್ಕ ಪ್ರತಿಯೊಬ್ಬನೂ ಹುಚ್ಚನಾಗುತ್ತಾನೆ. ಹುಚ್ಚನು ಯಾವುದು, ಏನು, ಎಂದು ಅರ್ಥಮಾಡಿಕೊಳ್ಳಲಾರ. ಮುನ್ನಡೆಯುವ ಬದಲು ಅವನು ಕೀಳುಸ್ಥಿತಿಗೆ ಬರುತ್ತಾನೆ. ತಮೋಗುಣದ ವಿವರಣೆಯು ವೇದ ಸಾಹಿತ್ಯದಲ್ಲಿ ಕಾಣುತ್ತದೆ — **ವಸ್ತು ಯಾಥಾತ್ಮ್ಯ ಜ್ಞಾನಾವರಕಂ ವಿಪರ್ಯಯ ಜ್ಞಾನ ಜನಕಂ ತಮಃ.** ಅಜ್ಞಾನದ ಪ್ರಭಾವದಿಂದ ಮನುಷ್ಯನಿಗೆ ವಸ್ತು ಇರುವಂತೆಯೇ ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ ಪ್ರತಿಯೊಬ್ಬನೂ ತನ್ನ ಅಜ್ಜನು ಸತ್ತಿದ್ದಾನೆ, ಆದುದರಿಂದ ತಾನೂ ಸಾಯುತ್ತೇನೆ ಎನ್ನುವುದನ್ನು ಕಾಣಬಲ್ಲ. ಮನುಷ್ಯನಿಗೆ ಸಾವು ಉಂಟು, ಅವನಿಗೆ ಹುಟ್ಟುವ ಮಕ್ಕಳೂ ಸಾಯುತ್ತಾರೆ. ಆದುದರಿಂದ ಸಾವು ಖಂಡಿತ. ಆದರೂ ಮನುಷ್ಯರು ಹುಚ್ಚಾಗಿ ಹಗಲು ರಾತ್ರಿ ಕಷ್ಟಪಟ್ಟು ಹಣವನ್ನು ಸಂಗ್ರಹಿಸುತ್ತಾರೆ; ನಿತ್ಯವಾದ ಚೇತನಕ್ಕೆ ಲಕ್ಷ್ಯಕೊಡುವುದಿಲ್ಲ. ಇದು ಹುಚ್ಚು. ತಮ್ಮ ಹುಚ್ಚಿನಲ್ಲಿ ಅವರು ಆಧ್ಯಾತ್ಮಿಕ ತಿಳುವಳಿಕೆಯಲ್ಲಿ ಮುನ್ನಡೆಯಲು ಇಷ್ಟವನ್ನೇ ಪಡುವುದಿಲ್ಲ. ಅಂತಹ ಜನರು ಬಹಳ ಸೋಮಾರಿಗಳು. ಆಧ್ಯಾತ್ಮಿಕ ತಿಳುವಳಿಕೆಗಾಗಿ ಇತರರೊಡನೆ ಸೇರಿಕೊಳ್ಳುವಂತೆ ಅವರನ್ನು ಆಹ್ವಾನಿಸಿದಾಗ ಅವರಿಗೆ ಹೆಚ್ಚು ಆಸಕ್ತಿ ಇರುವುದಿಲ್ಲ. ರಜೋಗುಣವು ನಿಯಂತ್ರಿಸುವ ಮನುಷ್ಯನಂತೆ ಸಹ ಅವರು ಚಟುವಟಿಕೆಯಿಂದಿರುವುದಿಲ್ಲ. ತಮೋಗುಣದಲ್ಲಿ ಮುಳುಗಿ ಹೋಗಿರುವವನ ಇನ್ನೊಂದು ಲಕ್ಷಣವೆಂದರೆ ಅವನು ಅಗತ್ಯವಾಗಿರುವುದಕ್ಕಿಂತ ಹೆಚ್ಚು ನಿದ್ರೆ ಮಾಡುತ್ತಾನೆ. ಆರು ಗಂಟೆಗಳ ನಿದ್ರೆ ಸಾಕು. ಆದರೆ ಅಜ್ಞಾನದ ಗುಣದ ಮನುಷ್ಯನು ಪ್ರತಿದಿನವೂ ಕೊನೆಯ ಪಕ್ಷ ಹತ್ತು,

ಹನ್ನೆರಡು ಗಂಟೆ ನಿದ್ರೆ ಮಾಡುತ್ತಾನೆ. ಇಂತಹ ಮನುಷ್ಯನು ಸದಾ ನಿರುತ್ಸಾಹಿಯಾಗಿರುವಂತೆ ಕಾಣುತ್ತಾನೆ. ಅವನಿಗೆ ಮಾದಕ ವಸ್ತುಗಳ ಸೇವನೆಯ ಮತ್ತು ನಿದ್ರೆಯ ಚಟವಿರುತ್ತದೆ. ತಮೋಗುಣದಿಂದ ಬದ್ಧನಾದ ಮನುಷ್ಯನ ಲಕ್ಷಣಗಳು ಇವು.

## ಶ್ಲೋಕ - 9

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ |**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಞ್ಜಯತ್ಯುತ ||೯||**

**ಸತ್ತ್ವಂ**—ಸತ್ವಗುಣವು; **ಸುಖೇ**—ಸುಖದಲ್ಲಿ; **ಸಂಜಯತಿ**—ಬದ್ಧಗೊಳಿಸುತ್ತದೆ; **ರಜಃ**—ರಜೋಗುಣವು; **ಕರ್ಮಣಿ**—ಕಾಮ್ಯಕರ್ಮಗಳಲ್ಲಿ; **ಭಾರತ**—ಭರತ ಪುತ್ರನೇ; **ಜ್ಞಾನಮ್**—ಜ್ಞಾನವನ್ನು; **ಆವೃತ್ಯ**—ಆವರಿಸಿ; **ತು**—ಆದರೆ; **ತಮಃ**—ತಮೋಗುಣವು; **ಪ್ರಮಾದೇ**— ಮತಿಭ್ರಮಣೆಯಲ್ಲಿ; **ಸಞ್ಜಯತಿ**—ಬದ್ಧಗೊಳಿಸುತ್ತದೆ; **ಉತ**—ಎಂದು ಹೇಳಲಾಗಿದೆ.

## ಅನುವಾದ

**ಭರತ ವಂಶಜನಾದ ಅರ್ಜುನನೆ, ಸತ್ವಗುಣವು ಮನುಷ್ಯನನ್ನು ಸುಖವಾಗಿರಲು ಬದ್ಧಗೊಳಿಸುತ್ತದೆ; ರಜೋಗುಣವು ಕಾಮ್ಯಕರ್ಮಗಳನ್ನು ಮಾಡಲು ಬದ್ಧಗೊಳಿಸುತ್ತದೆ; ತಮಸ್ಸು ಮನುಷ್ಯನ ಜ್ಞಾನವನ್ನು ಆವರಿಸಿ ಅವನನ್ನು ಹುಚ್ಚಿಗೆ ಬದ್ಧಗೊಳಿಸುತ್ತದೆ.**

## ಭಾವಾರ್ಥ

ಒಬ್ಬ ತತ್ವಶಾಸ್ತ್ರಜ್ಞಾನಿ ಅಥವಾ ವಿಜ್ಞಾನಿ ಅಥವಾ ಶಿಕ್ಷಣತಜ್ಞ ಒಂದು ಜ್ಞಾನ ಕ್ಷೇತ್ರದಲ್ಲಿ ಕೆಲಸಮಾಡಿ ಹಾಗೆ ತೃಪ್ತನಾಗಬಹುದು; ಹೀಗೆಯೇ ಸತ್ವಗುಣವಿರುವವನು ತನ್ನ ಕೆಲಸದಲ್ಲಿ ಅಥವಾ ಬೌದ್ಧಿಕ ಅನ್ವೇಷಣೆಯಲ್ಲಿ ತೃಪ್ತಿಪಡೆಯುತ್ತಾನೆ. ರಜೋಗುಣದ ಮನುಷ್ಯನು ಫಲದಾಸೆಯಿರುವ ಕರ್ಮದಲ್ಲಿ ನಿರತನಾಗಿರಬಹುದು. ಆತನು ಸಾಧ್ಯವಾದಷ್ಟು ಸ್ವತ್ತನ್ನು ಪಡೆಯುತ್ತಾನೆ ಮತ್ತು ಒಳ್ಳೆಯ ಕೆಲಸಗಳಿಗಾಗಿ ಖರ್ಚುಮಾಡುತ್ತಾನೆ. ಒಮ್ಮೊಮ್ಮೆ ಆತನು ಆಸ್ಪತ್ರೆಗಳನ್ನು ಪ್ರಾರಂಭಿಸುವುದು, ಸಂಸ್ಥೆಗಳಿಗೆ ದಾನವನ್ನು ಕೊಡುವುದು ಇಂತಹ ಕೆಲಸಗಳನ್ನು ಮಾಡಲು ಪ್ರಯತ್ನಿಸುತ್ತಾನೆ. ಇವು ರಜೋಗುಣವಿರುವ ಮನುಷ್ಯನ ಲಕ್ಷಣಗಳು. ತಮೋಗುಣವು ಜ್ಞಾನವನ್ನು ಮುಚ್ಚಿ ಬಿಡುತ್ತದೆ. ತಮೋಗುಣದ ಮನುಷ್ಯನು ಏನನ್ನೇ ಮಾಡಿದರೂ ಅದರಿಂದ ಅವನಿಗೂ ಒಳ್ಳೆಯದಾಗುವುದಿಲ್ಲ; ಯಾರಿಗೂ ಒಳ್ಳೆಯದಾಗುವುದಿಲ್ಲ.

## ಶ್ಲೋಕ - 10

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ |**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಮ್ ರಜಸ್ತಥಾ ||೧೦||**

**ರಜಃ**—ರಜೋಗುಣವನ್ನು; **ತಮಃ**—ತಮೋಗುಣವನ್ನು; **ಚ**—ಕೂಡ; **ಅಭಿಭೂಯ**—ದಾಟಿ;

**ಸತ್ತ್ವಮ್**—ಸತ್ವಗುಣವು; **ಭವತಿ**—ಪ್ರಧಾನವಾಗುತ್ತದೆ; **ಭಾರತ**—ಭರತ ಪುತ್ರನೇ; **ರಜಃ**—ರಜೋಗುಣವು; **ಸತ್ತ್ವಮ್**—ಸತ್ವಗುಣವನ್ನು; **ತಮಃ**—ತಮೋಗುಣವನ್ನು; **ಚ**—ಕೂಡ; **ಏವ**—ಅದರಂತೆ; **ತಮಃ**—ತಮೋಗುಣವು; **ಸತ್ವಮ್**—ಸತ್ವಗುಣವನ್ನು; **ರಜಃ**—ರಜೋಗುಣವನ್ನು; **ತಥಾ**—ಹಾಗೆಯೇ.

## ಅನುವಾದ

**ಭರತ ವಂಶಜನಾದ ಅರ್ಜುನನೆ, ಒಮ್ಮೊಮ್ಮೆ ಸತ್ವಗುಣವು, ರಜೋಗುಣವನ್ನೂ, ತಮೋಗುಣವನ್ನೂ, ಸೋಲಿಸಿ ತಾನು ಪ್ರಬಲವಾಗುತ್ತದೆ. ಕೆಲವೊಮ್ಮೆ ರಜೋಗುಣವು, ಸತ್ವ ಮತ್ತು ತಮೋಗುಣಗಳನ್ನು ಸೋಲಿಸುತ್ತದೆ. ಇನ್ನೂ ಕೆಲವು ಬಾರಿ ತಮೋಗುಣವು, ಸತ್ವ ಮತ್ತು ರಜೋಗುಣಗಳನ್ನು ಸೋಲಿಸುತ್ತದೆ. ಈ ರೀತಿಯಲ್ಲಿ ಮೇಲುಗೈಯಾಗಲು ಸದಾ ಸ್ಪರ್ಧೆಯಿರುತ್ತದೆ.**

## ಭಾವಾರ್ಥ

ರಜೋಗುಣವು ಪ್ರಬಲವಾದಾಗ ಸತ್ವ ಮತ್ತು ತಮೋಗುಣಗಳು ಸೋಲುತ್ತವೆ. ಸತ್ವಗುಣವು ಪ್ರಬಲವಾದಾಗ ರಜೋಗುಣ ಮತ್ತು ಗಿತಮೋಗುಣಗಳು ಸೋಲುತ್ತವೆ. ತಮೋಗುಣವು ಪ್ರಬಲವಾದಾಗ ರಜೋಗುಣ ಮತ್ತು ಸತ್ವಗುಣಗಳು ಸೋಲುತ್ತವೆ. ಈ ಸ್ಪರ್ಧೆಯು ಸದಾ ನಡೆಯುತ್ತಿರುತ್ತದೆ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿ ಮುನ್ನಡೆಯಲು ವಾಸ್ತವವಾಗಿ ಮನಸ್ಸು ಮಾಡಿದವನು ಈ ಮೂರು ಗುಣಗಳನ್ನೂ ಮೀರಬೇಕು. ಪ್ರಕೃತಿಯ ಯಾವುದೊಂದು ಗುಣದ ಪ್ರಾಬಲ್ಯವು ಮನುಷ್ಯನ ವ್ಯವಹಾರಗಳು, ಚಟುವಟಿಕೆಗಳು, ಆಹಾರ ಮೊದಲಾದವುಗಳಲ್ಲಿ ಪ್ರಕಟವಾಗುತ್ತದೆ. ಇದೆಲ್ಲವನ್ನೂ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗುತ್ತದೆ. ಮನುಷ್ಯನು ಇಚ್ಛಿಸಿದರೆ ಅಭ್ಯಾಸದಿಂದ ಅವನು ಸತ್ವಗುಣವನ್ನು ಬೆಳೆಸಿಕೊಳ್ಳಬಹುದು ಮತ್ತು ಹೀಗೆ ತಮೋಗುಣವನ್ನೂ, ರಜೋಗುಣವನ್ನೂ ಸೋಲಿಸಬಹುದು. ಹೀಗೆಯೇ ಮನುಷ್ಯನು ರಜೋಗುಣವನ್ನು ಬೆಳೆಸಿಕೊಂಡು ಸತ್ವಗುಣವನ್ನೂ, ತಮೋಗುಣವನ್ನೂ ಸೋಲಿಸಬಹುದು ಅಥವಾ ತಮೋಗುಣವನ್ನು ಬೆಳೆಸಿಕೊಂಡು ಸತ್ವಗುಣ ಮತ್ತು ರಜೋಗುಣಗಳನ್ನು ಸೋಲಿಸಬಹುದು. ಇವು ಪ್ರಕೃತಿಯ ಮೂರು ಗುಣಗಳಾದರೂ ಮನುಷ್ಯನು ಸಂಕಲ್ಪ ಮಾಡಿದರೆ ಸತ್ವಗುಣವನ್ನು ಪಡೆಯಬಲ್ಲ; ಸತ್ವಗುಣವನ್ನೂ ಮೀರಿ ಶುದ್ಧಸತ್ವದಲ್ಲಿ ನೆಲೆಗೊಳ್ಳಬಲ್ಲ. ಇದಕ್ಕೆ **ವಸುದೇವ** ಸ್ಥಿತಿ ಎಂದು ಹೆಸರು. ಈ ಸ್ಥಿತಿಯಲ್ಲಿ ಮನುಷ್ಯನು ಭಗವದ್ವಿಜ್ಞಾನವನ್ನು ಅರ್ಥಮಾಡಿಕೊಳ್ಳಬಲ್ಲ. ವಿಶಿಷ್ಟ ಚಟುವಟಿಕೆಗಳ ಅಭಿವ್ಯಕ್ತಿಯಿಂದ ಮನುಷ್ಯನು ಯಾವ ಗುಣದಲ್ಲಿದ್ದಾನೆ ಎಂದು ಅರ್ಥಮಾಡಿಕೊಳ್ಳಬಹುದು.

## ಶ್ಲೋಕ - 11

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ ವಿವೃದ್ಧಂ ಸತ್ತ್ವಮಿತ್ಯುತ ॥೧೧॥**

**ಸರ್ವದ್ವಾರೇಷು**—ಎಲ್ಲ ದ್ವಾರಗಳಲ್ಲಿ; **ದೇಹೇ ಅಸ್ಮಿನ್**—ಈ ಶರೀರದಲ್ಲಿ; **ಪ್ರಕಾಶಃ**—ಪ್ರಕಾಶವು; **ಉಪಜಾಯತೇ**—ಬೆಳೆಯುತ್ತದೆ; **ಜ್ಞಾನಮ್**—ಜ್ಞಾನವನ್ನು; **ಯದಾ**—ಯಾವಾಗ; **ತದಾ**—ಆ ಕಾಲದಲ್ಲಿ; **ವಿದ್ಯಾತ್**—ತಿಳಿ; **ವಿವೃದ್ಧಮ್**—ವೃದ್ಧಿಯಾಗಿದೆ; **ಸತ್ತ್ವಮ್**—ಸತ್ವಗುಣವು; **ಇತಿ ಉತ**—ಹೀಗೆ ಹೇಳಲಾಗಿದೆ.

## ಅನುವಾದ

**ದೇಹದ ಎಲ್ಲ ದ್ವಾರಗಳನ್ನೂ ಜ್ಞಾನವು ಬೆಳಗಿದಾಗ ಸತ್ವಗುಣದ ಅಭಿವ್ಯಕ್ತಿಯನ್ನು ಅನುಭವಿಸಬಹುದು.**

## ಭಾವಾರ್ಥ

ದೇಹಕ್ಕೆ ಒಂಬತ್ತು ದ್ವಾರಗಳಿವೆ — ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಹೊಳ್ಳೆಗಳು, ಬಾಯಿ, ಜನನಾಂಗ ಮತ್ತು ಗುದ. ಪ್ರತಿಯೊಂದು ದ್ವಾರಕ್ಕೂ ಸತ್ವಗುಣದ ಲಕ್ಷಣಗಳಿಂದ ಬೆಳಕು ಬಂದಾಗ ಮನುಷ್ಯನು ಸತ್ವಗುಣವನ್ನು ಬೆಳೆಸಿಕೊಂಡಿದ್ದಾನೆ ಎಂದು ಅರ್ಥಮಾಡಿಕೊಳ್ಳಬೇಕು. ಸತ್ವಗುಣದಲ್ಲಿ ಮನುಷ್ಯನು ವಸ್ತುಗಳನ್ನು ಸರಿಯಾದ ಸ್ಥಿತಿಯಲ್ಲಿ ಕಾಣಬಲ್ಲ, ವಸ್ತುಗಳನ್ನು ಸರಿಯಾದ ಸ್ಥಿತಿಯಲ್ಲಿ ಕೇಳಬಲ್ಲ, ವಸ್ತುಗಳನ್ನು ಸರಿಯಾದ ಸ್ಥಿತಿಯಲ್ಲಿ ರುಚಿನೋಡಬಲ್ಲ. ಅಂತರಂಗ ಮತ್ತು ಬಹಿರಂಗಗಳಲ್ಲಿ ಮನುಷ್ಯನು ಪರಿಶುದ್ಧನಾಗುತ್ತಾನೆ. ಪ್ರತಿಯೊಂದು ದ್ವಾರದಲ್ಲಿಯೂ ಸುಖದ ಲಕ್ಷಣಗಳಿರುತ್ತವೆ, ಅದು ಸತ್ವದ ಸ್ಥಿತಿ.

## ಶ್ಲೋಕ - 12

**ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ |**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ||೧೨||**

**ಲೋಭಃ**—ದುರಾಸೆಯು; **ಪ್ರವೃತ್ತಿಃ**—ಚಟುವಟಿಕೆಯು; **ಆರಮ್ಭಃ**—ಪ್ರಯತ್ನವು; **ಕರ್ಮಣಾಮ್**—ಚಟುವಟಿಕೆಗಳ; **ಅಶಮಃ**—ನಿಯಂತ್ರಿಸಲಾಗದಿರುವಿಕೆ; **ಸ್ಪೃಹಾ**—ಆಸೆಯು; **ರಜಸಿ**—ರಾಜಸಗುಣವು; **ಏತಾನಿ**—ಈ ಎಲ್ಲವೂ; **ಜಾಯನ್ತೇ**—ಬೆಳೆಯುತ್ತವೆ; **ವಿವೃದ್ಧೇ**—ಅತಿಯಾಗಲು; **ಭರತ ಋಷಭ**—ಭರತ ವಂಶದ ಪ್ರಮುಖನೇ.

## ಅನುವಾದ

**ಭರತ ವಂಶದಲ್ಲಿ ಮುಖ್ಯನಾದ ಅರ್ಜುನನೆ! ರಜೋಗುಣವು ಹೆಚ್ಚಿದಾಗ, ಅತಿ ಮೋಹ, ಫಲಾಪೇಕ್ಷೆ ಇರುವ ಕರ್ಮ, ಅಧಿಕ ಶ್ರಮ, ತಡೆಯಲಾಗದ ಬಯಕೆ ಮತ್ತು ಹಂಬಲ — ಈ ಲಕ್ಷಣಗಳು ಹೆಚ್ಚುತ್ತವೆ.**

## ಭಾವಾರ್ಥ

ರಜೋಗುಣವಿರುವವನಿಗೆ ತಾನು ಆಗಲೇ ಪಡೆದಿರುವ ಸ್ಥಾನದಿಂದ ತೃಪ್ತಿ ಎನ್ನುವುದೇ

ಇಲ್ಲ; ಇನ್ನೂ ಉತ್ತಮ ಸ್ಥಾನಕ್ಕೆ ಏರಲು ಹಂಬಲಿಸುತ್ತಾನೆ. ವಾಸದ ಮನೆ ಕಟ್ಟಿಕೊಳ್ಳಲು ಬಯಸಿದರೆ, ತಾನು ಎಂದೆಂದೂ ಅದೇ ಮನೆಯಲ್ಲಿ ವಾಸಮಾಡಬಲ್ಲೆ ಎನ್ನುವಂತೆ ಅರಮನೆಯಂತಹ ಮನೆಯನ್ನು ಕಟ್ಟುತ್ತಾನೆ. ಇಂದ್ರಿಯ ತೃಪ್ತಿಗಾಗಿ ಬಹು ಹಂಬಲಿಸುತ್ತಾನೆ. ಇಂದ್ರಿಯ ತೃಪ್ತಿಗೆ ಕೊನೆ ಎಂಬುದೇ ಇಲ್ಲ. ಅವನು ಯಾವಾಗಲೂ ತನ್ನ ಸಂಸಾರದೊಂದಿಗೇ ಮತ್ತು ತನ್ನ ಮನೆಯಲ್ಲೇ ಇರಲು ಬಯಸುತ್ತಾನೆ ಮತ್ತು ಇಂದ್ರಿಯ ತೃಪ್ತಿಯ ಪ್ರಕ್ರಿಯೆಯನ್ನು ಮುಂದುವರಿಸಲು ಬಯಸುತ್ತಾನೆ; ಇದು ನಿಲ್ಲುವುದೇ ಇಲ್ಲ. ಇವೆಲ್ಲ ರಜೋಗುಣಕ್ಕೆ ಸಹಜವಾದ ಲಕ್ಷಣಗಳು ಎಂದು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 13

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನನ್ದನ ॥೧೩॥**

**ಅಪ್ರಕಾಶಃ**—ಅಂಧಕಾರವು; **ಅಪ್ರವೃತ್ತಿಃ**—ನಿಷ್ಕ್ರಿಯತೆಯು; **ಚ**—ಮತ್ತು; **ಪ್ರಮಾದಃ**—ಮತಿ ಭ್ರಮಣೆಯು; **ಮೋಹಃ**—ಭ್ರಾಂತಿಯು; **ಏವ**—ಖಂಡಿತವಾಗಿಯೂ; **ಚ**—ಕೂಡ; **ತಮಸಿ**—ತಮೋಗುಣವು; **ಏತಾನಿ**—ಇವು; **ಜಾಯಂತೇ**—ವ್ಯಕ್ತವಾಗುತ್ತವೆ; **ವಿವೃದ್ಧೇ**—ವೃದ್ಧಿಯಾದಾಗ; **ಕುರುನನ್ದನ**—ಕುರು ಪುತ್ರನೇ.

## ಅನುವಾದ

**ಕುರುವಂಶಜನಾದ ಅರ್ಜುನನೆ! ತಮೋಗುಣವು ವೃದ್ಧಿಯಾದಾಗ ಕತ್ತಲು, ಜಡತ್ವ, ಹುಚ್ಚು ಮತ್ತು ಭ್ರಾಂತಿಗಳು ಕಾಣಿಸಿಕೊಳ್ಳುತ್ತವೆ.**

## ಭಾವಾರ್ಥ

ಪ್ರಕಾಶವು ಇಲ್ಲದಿದ್ದಾಗ ಜ್ಞಾನವು ಇರುವುದಿಲ್ಲ. ತಮೋಗುಣದಲ್ಲಿ ಇರುವವನು ಒಂದು ನಿಯಂತ್ರಕ ತತ್ವಕ್ಕೆ ಅನುಗುಣವಾಗಿ ಕೆಲಸಮಾಡುವುದಿಲ್ಲ. ಅವನಿಗೆ ವ್ಯರ್ಥವಾಗಿ, ಮನಸೋ ಇಚ್ಛೆ ಕೆಲಸ ಮಾಡುವ ಬಯಕೆ. ಅವನಿಗೆ ಕೆಲಸಮಾಡುವ ಶಕ್ತಿ ಇದ್ದರೂ ಪ್ರಯತ್ನ ಮಾಡುವುದಿಲ್ಲ. ಇದಕ್ಕೆ ಭ್ರಾಂತಿ ಎಂದು ಹೆಸರು. ಪ್ರಜ್ಞೆಯು ಕೆಲಸ ಮಾಡುತ್ತಿದ್ದರೂ ಬದುಕಿನಲ್ಲಿ ಚಟುವಟಿಕೆ ಇರುವುದಿಲ್ಲ. ತಮೋಗುಣದಲ್ಲಿ ಇರುವವನ ಲಕ್ಷಣಗಳು ಇವು.

## ಶ್ಲೋಕ - 14

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥೧೪॥**

**ಯದಾ**—ಯಾವಾಗ; **ಸತ್ತ್ವೇ**—ಸತ್ವಗುಣವು; **ಪ್ರವೃದ್ಧೇ**—ಹೆಚ್ಚಾದಲ್ಲಿ; **ತು**—ಆದರೆ; **ಪ್ರಲಯಮ್**—ಪ್ರಳಯವನ್ನು; **ಯಾತಿ**—ಹೊಂದುತ್ತಾನೆ; **ದೇಹಭೃತ್**—ದೇಹಧಾರಿಯು; **ತದಾ**—ಆಗ; **ಉತ್ತಮ**

**ವಿದಾಮ್**—ಮಹರ್ಷಿಗಳ; **ಲೋಕಾನ್**—ಲೋಕಗಳನ್ನು; **ಅಮಲಾನ್**—ಶುದ್ಧವಾದ; **ಪ್ರತಿಪದ್ಯತೇ**—ಹೊಂದುತ್ತಾನೆ.

## ಅನುವಾದ

**ಸತ್ವಗುಣದಲ್ಲಿ ಮನುಷ್ಯನು ಸತ್ತರೆ ಅವನು ಮಹರ್ಷಿಗಳ ಪರಿಶುದ್ಧವಾದ ಉನ್ನತ ಲೋಕಗಳನ್ನು ತಲಪುತ್ತಾನೆ.**

## ಭಾವಾರ್ಥ

ಸತ್ವಗುಣದಲ್ಲಿರುವವನು ಬ್ರಹ್ಮಲೋಕ ಅಥವಾ ಜನಲೋಕಗಳಂತಹ ಉನ್ನತ ಲೋಕಗಳನ್ನು ಸೇರುತ್ತಾನೆ ಮತ್ತು ಅಲ್ಲಿ ಸ್ವರ್ಗ ಸುಖವನ್ನು ಅನುಭವಿಸುತ್ತಾನೆ. **ಅಮಲಾನ್** ಎನ್ನುವ ಪದವು ಮಹತ್ವವಾದದ್ದು; "ರಜೋಗುಣ, ತಮೋಗುಣಗಳಿಂದ ಮುಕ್ತವಾದದ್ದು", ಎಂದು ಅದರ ಅರ್ಥ. ಐಹಿಕ ಜಗತ್ತಿನಲ್ಲಿ ಕಶ್ಮಲಗಳಿವೆ, ಆದರೆ ಸತ್ವಗುಣವು ಐಹಿಕ ಜಗತ್ತಿನ ಅಸ್ತಿತ್ವದ ಅತ್ಯಂತ ಪರಿಶುದ್ಧ ರೂಪ. ಬೇರೆ ಬೇರೆ ರೀತಿಗಳ ಜೀವಿಗಳಿಗೆ ಬೇರೆ ಬೇರೆ ರೀತಿಗಳ ಲೋಕಗಳಿವೆ. ಸತ್ವಗುಣದಲ್ಲಿ ಮರಣ ಹೊಂದಿದವರು ಮಹರ್ಷಿಗಳು, ಮಹಾಭಕ್ತರು ಇರುವ ಲೋಕಗಳಿಗೆ ಏರುತ್ತಾರೆ.

## ಶ್ಲೋಕ - 15

**ರಜಸಿ ಪ್ರಲಯಂ ಗತ್ವಾ ಕರ್ಮಸಙ್ಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥೧೫॥**

**ರಜಸಿ**—ರಜೋಗುಣದಲ್ಲಿ; **ಪ್ರಲಯಮ್**—ಪ್ರಳಯವನ್ನು; **ಗತ್ವಾ**—ಹೊಂದಿ; **ಕರ್ಮಸಙ್ಗಿಷು**—ಕಾಮ್ಯಕರ್ಮಗಳಲ್ಲಿ ನಿರತರಾದವರ ಸಹವಾಸದಲ್ಲಿ; **ಜಾಯತೇ**—ಜನ್ಮತಾಳುತ್ತಾನೆ; **ತಥಾ**—ಅದೇ ಪ್ರಕಾರ; **ಪ್ರಲೀನಃ**—ಪ್ರಲಯ ಹೊಂದುವವನು; **ತಮಸಿ**—ತಮೋಗುಣದಲ್ಲಿ; **ಮೂಢಯೋನಿಷು**—ಪಶು ಜಾತಿಗಳಲ್ಲಿ; **ಜಾಯತೇ**—ಹುಟ್ಟುತ್ತಾನೆ.

## ಅನುವಾದ

**ರಜೋಗುಣದಲ್ಲಿ ಮರಣಹೊಂದುವ ಮನುಷ್ಯನು ಫಲಾಪೇಕ್ಷೆಯಿರುವ ಕರ್ಮಗಳಲ್ಲಿ ತೊಡಗಿರುವವರ ಮಧ್ಯೆ ಹುಟ್ಟುತ್ತಾನೆ; ತಮೋಗುಣದಲ್ಲಿ ಮನುಷ್ಯನು ಸತ್ತರೆ ಪ್ರಾಣಿ ವರ್ಗದಲ್ಲಿ ಹುಟ್ಟುತ್ತಾನೆ.**

## ಭಾವಾರ್ಥ

ಆತ್ಮವು ಮನುಷ್ಯಜೀವನದ ನೆಲೆಯನ್ನು ತಲಪಿದರೆ ಅದಕ್ಕೆ ಮತ್ತೆ ಅಧಃಪತನ ಆಗುವುದೇ ಇಲ್ಲ ಎಂದು ಕೆಲವರ ಭಾವನೆ. ಇದು ಸರಿಯಲ್ಲ. ಈ ಶ್ಲೋಕದಲ್ಲಿ ಹೇಳಿರುವ ಪ್ರಕಾರ ಮನುಷ್ಯನು ತಮೋಗುಣವನ್ನು ಬೆಳೆಸಿಕೊಂಡರೆ ಅವನು ಸತ್ತನಂತರ ಪ್ರಾಣಿರೂಪಕ್ಕೆ ಇಳಿಯುತ್ತಾನೆ.

ಮತ್ತೆ ಮನುಷ್ಯ ಜೀವನಕ್ಕೆ ಬರಲು ಅವನು ವಿಕಾಸಪ್ರಕ್ರಿಯೆಯಿಂದ ತನ್ನನ್ನು ಮೇಲಕ್ಕೆ ಎತ್ತಿಕೊಳ್ಳಬೇಕಾಗುತ್ತದೆ. ಆದುದರಿಂದ ಮನುಷ್ಯ ಜೀವನದ ವಿಷಯದಲ್ಲಿ ಗಂಭೀರವಾದ ಆಸಕ್ತಿಯಿರುವವರು ಸತ್ವಗುಣವನ್ನು ಆರಿಸಿಕೊಳ್ಳಬೇಕು. ಒಳ್ಳೆಯ ಸಹವಾಸದಲ್ಲಿ ಗುಣಗಳನ್ನು ಮೀರಬೇಕು; ಕೃಷ್ಣಪ್ರಜ್ಞೆಯಲ್ಲಿ ನೆಲೆಸಬೇಕು. ಇದು ಮನುಷ್ಯನ ಜೀವನದ ಗುರಿ. ಇಲ್ಲವಾದರೆ ಮನುಷ್ಯನು ಮತ್ತೆ ಮನುಷ್ಯನ ಅಂತಸ್ತಿಗೆ ಬರುತ್ತಾನೆ ಎನ್ನುವುದು ಖಚಿತವಿಲ್ಲ.

## ಶ್ಲೋಕ - 16

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ |**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ||೧೬||**

**ಕರ್ಮಣಃ**—ಕರ್ಮದ; **ಸುಕೃತಸ್ಯ**—ಪುಣ್ಯಕರ; **ಆಹುಃ**—ಎಂದು ಹೇಳಲಾಗಿದೆ; **ಸಾತ್ತ್ವಿಕಮ್**—ಸತ್ವಗುಣವು; **ನಿರ್ಮಲಮ್**—ಶುದ್ಧವಾದ; **ಫಲಮ್**—ಫಲವು; **ರಜಸಃ**—ರಜೋಗುಣದ; **ತು**—ಆದರೆ; **ಫಲಮ್**—ಫಲವು; **ದುಃಖಮ್**—ಕ್ಲೇಶವು; **ಅಜ್ಞಾನಮ್**—ಅಜ್ಞಾನವು; **ತಮಸಃ**—ತಮೋಗುಣದ; **ಫಲಮ್**—ಫಲವು.

## ಅನುವಾದ

**ಸುಕೃತದ ಫಲ ಪರಿಶುದ್ಧವಾದದ್ದು; ಅದು ಸಾತ್ವಿಕ ಎಂದು ಹೇಳುತ್ತಾರೆ. ಆದರೆ ರಜೋಗುಣದಲ್ಲಿ ಮಾಡಿದ ಕೆಲಸದಿಂದ ದುಃಖವು ಬರುತ್ತದೆ; ತಮೋಗುಣದಲ್ಲಿ ಮಾಡಿದ ಕೆಲಸದಿಂದ ಅಜ್ಞಾನವು ಬರುತ್ತದೆ.**

## ಭಾವಾರ್ಥ

ಸಾತ್ವಿಕ ಗುಣದಲ್ಲಿ ಮಾಡಿದ ಪುಣ್ಯಕಾರ್ಯಗಳ ಫಲವು ಪರಿಶುದ್ಧವಾದದ್ದು. ಆದುದರಿಂದ ಎಲ್ಲ ಭ್ರಾಂತಿಯಿಂದ ಮುಕ್ತರಾದ ಮುನಿಗಳು ಸುಖವಾದ ಸ್ಥಿತಿಯಲ್ಲಿದ್ದಾರೆ. ರಜೋಗುಣದ ಕೆಲಸಗಳು ದುಃಖವನ್ನೇ ತರುತ್ತವೆ. ಐಹಿಕ ಸುಖಕ್ಕಾಗಿ ಮಾಡಿದ ಕೆಲಸವು ವಿಫಲವಾಗುವುದು ಖಂಡಿತ. ಉದಾಹರಣೆಗೆ, ಮನುಷ್ಯನು ತನಗೆ ಗಗನಚುಂಬಿಕಟ್ಟಡ ಬೇಕೆಂದು ಬಯಸಿದರೆ ಅದನ್ನು ಕಟ್ಟುವ ಮೊದಲು ಎಷ್ಟೋ ದುಃಖವನ್ನು ಅನುಭವಿಸಬೇಕಾಗುತ್ತದೆ. ರಾಶಿ ಹಣವನ್ನು ಸಂಪಾದಿಸಲು ಬಂಡವಾಳಗಾರನು ಕಷ್ಟಪಡಬೇಕಾಗುತ್ತದೆ. ಕಟ್ಟಡವನ್ನು ಕಟ್ಟಲು ಗುಲಾಮರಂತೆ ಶ್ರಮಿಸುವವರು ದೈಹಿಕ ಶ್ರಮವನ್ನು ಪಡಬೇಕಾಗುತ್ತದೆ. ಈ ದುಃಖಗಳು ಇದ್ದೇ ಇರುತ್ತವೆ. ಹೀಗೆ ಭಗವದ್ಗೀತೆಯು ರಜೋಗುಣದ ಪ್ರಭಾವದಿಂದ ಮಾಡಿದ ಯಾವುದೇ ಕೆಲಸದಿಂದ ಖಂಡಿತವಾಗಿಯೂ ಬಹಳ ದುಃಖವಾಗುತ್ತದೆ ಎಂದು ಹೇಳುತ್ತದೆ. ಮಾನಸಿಕ ಸುಖ ಎಂದು ಕರೆಸಿಕೊಳ್ಳುವ ಸುಖವು — "ನನಗೆ ಈ ಮನೆ ಇದೆ ಅಥವಾ ಈ ಹಣ ಇದೆ" ಎನ್ನುವ ಸುಖವು — ಒಂದಿಷ್ಟು ಇರಬಹುದು. ಆದರೆ ಇದು ವಾಸ್ತವ ಸುಖವಲ್ಲ.

ತಮೋಗುಣದ ವಿಷಯ ಹೇಳುವುದಾದರೆ, ಕರ್ತೃವಿಗೆ ಜ್ಞಾನವಿಲ್ಲ, ಆದುದರಿಂದ ಅವನ ಚಟುವಟಿಕೆಗಳಿಂದ ತತ್ಕಾಲಕ್ಕೆ ದುಃಖ. ಅನಂತರ ಅವನು ಪ್ರಾಣಿ ಜೀವನದತ್ತ ಹೋಗುವನು.

ಪ್ರಾಣಿ ಜೀವನವು ಎಂದೂ ದುಃಖಕರವಾದದ್ದೇ; ಆದರೆ ಮಾಯೆಯ ಪ್ರಭಾವದಿಂದ ಪ್ರಾಣಿಗಳಿಗೆ ಇದು ತಿಳಿಯುವುದಿಲ್ಲ. ಬಡ ಪ್ರಾಣಿಗಳನ್ನು ಕೊಲ್ಲುವುದೂ ತಮೋಗುಣದ ಪರಿಣಾಮವೇ. ಪ್ರಾಣಿಯನ್ನು ಕೊಲ್ಲುವವರಿಗೆ ಮುಂದೆ ತಮ್ಮನ್ನು ಕೊಲ್ಲುವುದಕ್ಕೆ ಅಗತ್ಯವಾದ ದೇಹವು ಪ್ರಾಣಿಗೆ ದೊರೆಯುತ್ತದೆ ಎನ್ನುವುದು ತಿಳಿಯದು. ಇದು ಪ್ರಕೃತಿಯ ನಿಯಮ. ಮನುಷ್ಯರ ಸಮಾಜದಲ್ಲಿ ಮನುಷ್ಯನೊಬ್ಬನು ಇನ್ನೊಬ್ಬನನ್ನು ಕೊಂದರೆ ಅವನನ್ನು ನೇಣುಹಾಕಬೇಕು. ಇದು ರಾಜ್ಯದ ನಿಯಮ. ಅಜ್ಞಾನದಿಂದಾಗಿ ಜನರಿಗೆ ಪರಮ ಪ್ರಭುವು ನಿಯಂತ್ರಿಸುವ ಸಂಪೂರ್ಣ ರಾಜ್ಯವೊಂದಿದೆ ಎನ್ನುವುದು ತಿಳಿಯದು. ಜೀವಂತವಾದ ಪ್ರತಿಯೊಂದು ಪ್ರಾಣಿಯೂ ಭಗವಂತನ ಮಗು. ಒಂದು ಇರುವೆಯನ್ನು ಕೊಲ್ಲುವುದನ್ನೂ ಅವನು ಸಹಿಸಲಾರ. ಅದಕ್ಕೆ ತಕ್ಕಂತೆ ಮನುಷ್ಯನು ಅನುಭವಿಸಲೇಬೇಕು. ಆದುದರಿಂದ ನಾಲಿಗೆಯ ರುಚಿಗಾಗಿ ಪ್ರಾಣಿಗಳನ್ನು ಕೊಲ್ಲುವುದು ಅತ್ಯಂತ ಕೀಳು ಅಜ್ಞಾನ. ಭಗವಂತನು ಎಷ್ಟೋ ಸೊಗಸಾದ ವಸ್ತುಗಳನ್ನು ಕೊಟ್ಟಿದ್ದಾನೆ; ಆದುದರಿಂದ ಮನುಷ್ಯನು ಪ್ರಾಣಿಗಳನ್ನು ಕೊಲ್ಲುವ ಅಗತ್ಯವೇ ಇಲ್ಲ. ಏನೇ ಆಗಲಿ ಮನುಷ್ಯನು ಮಾಂಸವನ್ನು ತಿನ್ನುವ ಚಪಲವನ್ನು ತೀರಿಸಿಕೊಂಡರೆ ಅವನು ಅಜ್ಞಾನದಿಂದ ಹಾಗೆ ನಡೆಯುತ್ತಿದ್ದಾನೆ, ತನ್ನ ಭವಿಷ್ಯವನ್ನು ತುಂಬ ಕತ್ತಲನ್ನಾಗಿ ಮಾಡಿಕೊಳ್ಳುತ್ತಿದ್ದಾನೆ ಎಂದು ತಿಳಿಯಬೇಕು. ಎಲ್ಲ ವಧೆಗಳಲ್ಲಿ ಗೋವಧೆ ಅತ್ಯಂತ ಕೆಟ್ಟದ್ದು. ಏಕೆಂದರೆ ಹಸುವು ಹಾಲನ್ನು ಕೊಟ್ಟು, ನಮಗೆ ಎಲ್ಲ ಬಗೆಯ ಸಂತೋಷವನ್ನು ಕೊಡುತ್ತದೆ. ವೇದ ಸಾಹಿತ್ಯದಲ್ಲಿ (ಋಗ್ ವೇದ, 9.4.64) **ಗೋಭಿಃ ಪ್ರೀಣಿತ-ಮತ್ಸರಮ್** ಎನ್ನುವ ಮಾತುಗಳು, ಹಾಲಿನಿಂದ ಸಂತೃಪ್ತನಾಗಿ ಹಸುವನ್ನು ಕೊಲ್ಲಲು ಅಪೇಕ್ಷಿಸುವವನು ಅತ್ಯಂತ ತಮಸ್ಸಿನಲ್ಲಿದ್ದಾನೆ ಎನ್ನುವುದನ್ನು ಸೂಚಿಸುತ್ತವೆ. ವೇದ ಸಾಹಿತ್ಯದಲ್ಲಿ ಈ ಪ್ರಾರ್ಥನೆ ಇದೆ —

**ನಮೋ ಬ್ರಹ್ಮಣ್ಯ ದೇವಾಯ ಗೋ ಬ್ರಾಹ್ಮಣ ಹಿತಾಯ ಚ |**
**ಜಗದ್ಧಿತಾಯ ಕೃಷ್ಣಾಯ ಗೋವಿನ್ದಾಯ ನಮೋ ನಮಃ ||**

"ನನ್ನ ಪ್ರಭುವೇ, ನೀನು ಗೋವುಗಳಿಗೂ ಬ್ರಾಹ್ಮಣರಿಗೂ ಒಳ್ಳೆಯದನ್ನು ಬಯಸುವವನು ಮತ್ತು ಸಮಸ್ತ ಮಾನವ ಸಮಾಜಕ್ಕೂ, ಪ್ರಪಂಚಕ್ಕೂ ಒಳ್ಳೆಯದನ್ನು ಬಯಸುವವನು." (ವಿಷ್ಣು ಪುರಾಣ 1.19.65) ಇದರ ಭಾವಾರ್ಥವೆಂದರೆ ಈ ಪ್ರಾರ್ಥನೆಯಲ್ಲಿ ಗೋವುಗಳ ಮತ್ತು ಬ್ರಾಹ್ಮಣರ ರಕ್ಷಣೆಯನ್ನು ವಿಶೇಷವಾಗಿ ಹೇಳಿದೆ. ಬ್ರಾಹ್ಮಣರು ಆಧ್ಯಾತ್ಮಿಕ ಶಿಕ್ಷಣದ ಪ್ರತೀಕ. ಗೋವುಗಳು ಅತ್ಯಂತ ಮೌಲಿಕವಾದ ಆಹಾರದ ಪ್ರತೀಕ. ಈ ಎರಡು ಜೀವಂತ ಪ್ರಾಣಿಗಳಿಗೆ, ಬ್ರಾಹ್ಮಣರಿಗೆ ಮತ್ತು ಗೋವುಗಳಿಗೆ ಎಲ್ಲ ರಕ್ಷಣೆಯನ್ನು ಕೊಡಬೇಕು — ಅದು ನಾಗರಿಕತೆಯ ನಿಜವಾದ ಪ್ರಗತಿ. ಆಧುನಿಕ ಮಾನವ ಸಮಾಜವು ಆಧ್ಯಾತ್ಮಿಕ ಜ್ಞಾನವನ್ನು ಅಲಕ್ಷ್ಯಮಾಡಿದೆ, ಗೋವಧೆಗೆ ಪ್ರೋತ್ಸಾಹ ಕೊಟ್ಟಿದೆ. ಆದುದರಿಂದ ಮಾನವ ಸಮಾಜವು ತಪ್ಪುದಿಕ್ಕಿನಲ್ಲಿ ಮುಂದಕ್ಕೆ ಹೋಗುತ್ತಿದೆ ಮತ್ತು ಆತ್ಮನಾಶಕ್ಕೆ ದಾರಿಮಾಡಿಕೊಡುತ್ತಿದೆ ಎಂದು ಅರ್ಥಮಾಡಿಕೊಳ್ಳಬೇಕು. ಯಾವ ಸಮಾಜವು ತನ್ನ ಪೌರರನ್ನು ಅವರ ಮುಂದಿನ ಜನ್ಮಗಳಲ್ಲಿ ಪ್ರಾಣಿಗಳಾಗುವಂತೆ ಮಾರ್ಗದರ್ಶನ ಮಾಡುತ್ತದೆಯೋ ಅದು ನಿಶ್ಚಯವಾಗಿಯೂ ಮಾನವೀಯ ನಾಗರಿಕತೆಯಲ್ಲ. ಈಗಿನ ಮಾನವೀಯ ನಾಗರಿಕತೆಯಂತೂ ರಜೋಗುಣ, ತಮೋಗುಣಗಳಿಂದ ತುಂಬ ಕೆಳನೆಲೆಗಿಳಿದು ದಾರಿ ತಪ್ಪುತ್ತಿದೆ; ಇದೊಂದು ಬಹು ಅಪಾಯಕಾರಿಯಾದ ಯುಗ; ಮಾನವ ಕುಲವನ್ನು ದೊಡ್ಡವಿಪತ್ತಿನಿಂದ ಉಳಿಸಲು ಅತ್ಯಂತ ಸುಲಭವಾದ ಪ್ರಕ್ರಿಯೆಯಾದ ಕೃಷ್ಣಪ್ರಜ್ಞೆಯನ್ನು ಲಭ್ಯಮಾಡಿಕೊಡಲು ಎಲ್ಲ ರಾಷ್ಟ್ರಗಳೂ

ಎಚ್ಚರಿಕೆ ವಹಿಸಬೇಕು.

## ಶ್ಲೋಕ - 17

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ |**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ||೧೭||**

**ಸತ್ತ್ವಾತ್**—ಸತ್ವಗುಣದಿಂದ; **ಸಂಜಾಯತೇ**—ಬೆಳೆಯುತ್ತದೆ; **ಜ್ಞಾನಮ್**—ಜ್ಞಾನವು; **ರಜಸಃ**—ರಜೋಗುಣದಿಂದ; **ಲೋಭಃ**—ದುರಾಸೆಯು; **ಏವ**—ಖಂಡಿತವಾಗಿಯೂ; **ಚ**—ಕೂಡ; **ಪ್ರಮಾದ**—ಮತಿಭ್ರಮಣೆ; **ಮೋಹೌ**—ಮತ್ತು ಭ್ರಾಂತಿಯು; **ತಮಸಃ**—ತಮೋಗುಣದಿಂದ; **ಭವತಃ**—ಬೆಳೆಯುತ್ತವೆ; **ಅಜ್ಞಾನಮ್**—ಅಜ್ಞಾನವು; **ಏವ**—ಖಂಡಿತವಾಗಿಯೂ; **ಚ**—ಕೂಡ.

## ಅನುವಾದ

**ಸತ್ವಗುಣದಿಂದ ನಿಜವಾದ ಜ್ಞಾನವು ಬೆಳೆಯುತ್ತದೆ; ರಜೋಗುಣದಿಂದ ಲೋಭವು ಬೆಳೆಯುತ್ತದೆ; ತಮೋಗುಣದಿಂದ ಅಜ್ಞಾನ, ಬಹು ಮೂರ್ಖತನ, ಹುಚ್ಚು ಮತ್ತು ಭ್ರಾಂತಿಗಳು ಬೆಳೆಯುತ್ತವೆ.**

## ಭಾವಾರ್ಥ

ಈಗಿನ ನಾಗರಿಕತೆಯು ಜೀವಿಗಳಿಗೆ ಬಹು ಹಿತಕರವಾದದ್ದಲ್ಲ. ಆದುದರಿಂದ ಕೃಷ್ಣಪ್ರಜ್ಞೆಯನ್ನು ಸಲಹೆ ಮಾಡಿದೆ. ಕೃಷ್ಣಪ್ರಜ್ಞೆಯ ಮೂಲಕ ಸಮಾಜವು ಸತ್ವಗುಣವನ್ನು ಬೆಳೆಸಿಕೊಳ್ಳುವುದು. ಸತ್ವಗುಣವು ಬೆಳೆದಾಗ ಜನರು ಸಂಗತಿಗಳನ್ನು ಅವು ವಾಸ್ತವವಾಗಿ ಇರುವಂತೆ ಕಾಣುವರು. ತಮೋಗುಣದಲ್ಲಿ ಮನುಷ್ಯರು ಪ್ರಾಣಿಗಳಂತೆಯೇ ಇರುತ್ತಾರೆ; ಸಂಗತಿಗಳನ್ನು ಸ್ಪಷ್ಟವಾಗಿ ನೋಡಲಾರರು. ಉದಾಹರಣೆಗೆ, ಅವರು ಒಂದು ಪ್ರಾಣಿಯನ್ನು ಕೊಲ್ಲುವುದರಿಂದ ಮುಂದಿನ ಜನ್ಮದಲ್ಲಿ ಅದೇ ಪ್ರಾಣಿಯು ಅವರನ್ನು ಕೊಲ್ಲುವ ಸಂಭವವನ್ನು ಸೃಷ್ಟಿಸುತ್ತಿದ್ದಾರೆ; ಆದರೆ ಇದು ಅವರಿಗೆ ಕಾಣುವುದಿಲ್ಲ. ಜನರಿಗೆ ನಿಜವಾದ ಜ್ಞಾನದಲ್ಲಿ ಶಿಕ್ಷಣವಿಲ್ಲ; ಆದುದರಿಂದ ಅವರು ಹೊಣೆಗೇಡಿಗಳಾಗುತ್ತಾರೆ. ಈ ಹೊಣೆಗೇಡಿತನವನ್ನು ತಡೆಯಲು ಜನ ಸಾಮಾನ್ಯರಿಗೆ ಸತ್ವಗುಣವನ್ನು ಬೆಳೆಸಿಕೊಳ್ಳಲು ಶಿಕ್ಷಣ ಇರಬೇಕು. ಸತ್ವಗುಣದಲ್ಲಿ ವಾಸ್ತವವಾಗಿ ಅವರಿಗೆ ಶಿಕ್ಷಣವು ದೊರೆತಾಗ ಅವರು, ಎಲ್ಲ ವಾಸ್ತವ ಸ್ಥಿತಿಯನ್ನು ಸಂಪೂರ್ಣವಾಗಿ ತಿಳಿದುಕೊಂಡು ಸಮಾಧಾನ ಬುದ್ಧಿಯಲ್ಲಿರುತ್ತಾರೆ. ಆಗ ಜನರು ಸುಖವಾಗಿ, ಅಭಿವೃದ್ಧಿಸ್ಥಿತಿಯಲ್ಲಿರುತ್ತಾರೆ. ಜನರಲ್ಲಿ ಬಹು ಸಂಖ್ಯಾತರು ಸುಖವಾಗಿ, ಅಭಿವೃದ್ಧಿ ಸ್ಥಿತಿಯಲ್ಲಿ ಇಲ್ಲದಿದ್ದರೂ, ಜನತೆಯ ಒಂದು ಭಾಗ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಂಡು ಸತ್ವಗುಣದಲ್ಲಿ ಅಚಲರಾದರೆ ಇಡೀ ಪ್ರಪಂಚದಲ್ಲಿ ಶಾಂತಿ ಸಮೃದ್ಧಿಗಳು ಸಾಧ್ಯವಾಗಬಹುದು. ಹಾಗಲ್ಲದೆ ಜಗತ್ತು ರಜೋಗುಣ ತಮೋಗುಣಗಳಿಗೆ ಮುಡಿಪಾದರೆ ಶಾಂತಿಯಾಗಲೀ ಸಮೃದ್ಧಿಯಾಗಲೀ ಸಾಧ್ಯವಿಲ್ಲ. ರಜೋಗುಣದಲ್ಲಿ ಜನರು ಲೋಭಿಗಳಾಗುತ್ತಾರೆ; ಅವರ ಇಂದ್ರಿಯ ಸುಖದ ಹಂಬಲಕ್ಕೆ ಮಿತಿಯೇ ಇರುವುದಿಲ್ಲ. ಮನುಷ್ಯನಿಗೆ ಇಂದ್ರಿಯ ತೃಪ್ತಿಗಾಗಿ ಸಾಕಷ್ಟು ಹಣವೂ, ತಕ್ಕಷ್ಟು ವ್ಯವಸ್ಥೆಯೂ ಇದ್ದರೂ ಸುಖವು ಇರುವುದಿಲ್ಲ; ಮನಃಶಾಂತಿಯೂ ಇರುವುದಿಲ್ಲ ಎನ್ನುವುದನ್ನು ಕಾಣಬಹುದು. ಮನುಷ್ಯನು ರಜೋಗುಣದಲ್ಲಿ ನೆಲೆಯಾಗಿರುತ್ತಾನೆ.

ಆದುದರಿಂದ ಇದು ಸಾಧ್ಯವಿಲ್ಲ. ಮನುಷ್ಯನಿಗೆ ಸುಖವೇ ಬೇಕಾಗಿದ್ದರೆ ಅವನ ಹಣ ಸಹಾಯಮಾಡಲಾರದು; ಕೃಷ್ಣಪ್ರಜ್ಞೆಯ ಅಭ್ಯಾಸದಿಂದ ಅವನು ಸತ್ವಗುಣಕ್ಕೆ ಏರಬೇಕು. ರಜೋಗುಣದಲ್ಲಿ ತೊಡಗಿರುವಾಗ ಮನುಷ್ಯನು ಮಾನಸಿಕವಾಗಿ ಅಸುಖಿಯಾಗಿರುತ್ತಾನೆ; ಮಾತ್ರವಲ್ಲ ಅವನ ವೃತ್ತಿಯು ಕಷ್ಟದಾಯಕವಾಗುತ್ತದೆ. ತಾನು ಇದ್ದ ಸ್ಥಿತಿಯಲ್ಲೇ ಇರಲು, ಸಾಕಷ್ಟು ಹಣವನ್ನು ಸಂಪಾದಿಸಲು ಮನುಷ್ಯನು ಎಷ್ಟೋ ಯೋಜನೆಗಳನ್ನೂ, ಹಂಚಿಕೆಗಳನ್ನೂ ಮಾಡಬೇಕಾಗುತ್ತದೆ. ಇದೆಲ್ಲ ದುಃಖಕರವೇ. ತಮೋಗುಣದಲ್ಲಿ ಮನುಷ್ಯರು ಹುಚ್ಚರಾಗುತ್ತಾರೆ. ತಮ್ಮ ಪರಿಸ್ಥಿತಿಯಿಂದ ಯಾತನೆ ಪಟ್ಟು ಮಾದಕವಸ್ತುಗಳ ಆಶ್ರಯ ಪಡೆಯುತ್ತಾರೆ. ಇದರಿಂದ ಇನ್ನಷ್ಟು ಅಜ್ಞಾನದಲ್ಲಿ ಮುಳುಗುತ್ತಾರೆ. ಅವರ ಭವಿಷ್ಯವು ತುಂಬ ಕತ್ತಲಾಗಿರುತ್ತದೆ.

## ಶ್ಲೋಕ - 18

**ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛನ್ತಿ ತಾಮಸಾಃ ॥೧೮॥**

**ಊರ್ಧ್ವಮ್**—ಮೇಲಕ್ಕೆ; **ಗಚ್ಛನ್ತಿ**—ಹೋಗುತ್ತಾರೆ; **ಸತ್ತ್ವಸ್ಥಾಃ**—ಸತ್ವಗುಣದಲ್ಲಿ ಇರುವವರು; **ಮಧ್ಯೇ**—ಮಧ್ಯದಲ್ಲಿ; **ತಿಷ್ಠನ್ತಿ**—ಇರುತ್ತಾರೆ; **ರಾಜಸಾಃ**—ರಜೋಗುಣದಲ್ಲಿ ಇರುವವರು; **ಜಘನ್ಯ**—ಕೀಳು; **ಗುಣ**—ಗುಣದ; **ವೃತ್ತಿಸ್ಥಾಃ**—ವೃತ್ತಿಯ; **ಅಧಃ**—ಕೆಳಕ್ಕೆ; **ಗಚ್ಛನ್ತಿ**—ಹೋಗುತ್ತಾರೆ; **ತಾಮಸಾಃ**—ತಮೋಗುಣ ಉಳ್ಳ ವ್ಯಕ್ತಿಗಳು.

## ಅನುವಾದ

**ಸತ್ವಗುಣದಲ್ಲಿರುವವರು ಕ್ರಮೇಣ ಊರ್ಧ್ವ ಲೋಕಗಳಿಗೆ ಏರಿಹೋಗುವರು. ರಜೋಗುಣದಲ್ಲಿರುವವರು ಭೂಲೋಕದಲ್ಲಿ ವಾಸಮಾಡುವರು. ಅಸಹ್ಯಕರವಾದ ತಾಮಸಗುಣದಲ್ಲಿರುವವರು ನರಕಲೋಕಗಳಿಗೆ ಇಳಿಯುವರು.**

## ಭಾವಾರ್ಥ

ಈ ಶ್ಲೋಕದಲ್ಲಿ ಗುಣತ್ರಯಗಳಲ್ಲಿನ ಕರ್ಮಗಳ ಫಲಗಳನ್ನು ಇನ್ನೂ ಸ್ಪಷ್ಟವಾಗಿ ನಿರೂಪಿಸಿದೆ. ಸ್ವರ್ಗಲೋಕಗಳೆಲ್ಲ ಸೇರಿ ಊರ್ಧ್ವಲೋಕ ಮಂಡಲವೊಂದಿದೆ; ಅಲ್ಲಿ ಎಲ್ಲರೂ ಉನ್ನತ ಸ್ಥಾನದಲ್ಲಿರುತ್ತಾರೆ. ಸತ್ವಗುಣವನ್ನು ಬೆಳೆಸಿಕೊಂಡಿರುವ ಪ್ರಮಾಣಕ್ಕೆ ಅನುಗುಣವಾಗಿ ಜೀವಿಯನ್ನು ಈ ಮಂಡಲಕ್ಕೆ ವರ್ಗಾಯಿಸಲಾಗುವುದು. ಅತ್ಯಂತ ಉನ್ನತಲೋಕವೆಂದರೆ ಸತ್ಯಲೋಕ ಅಥವಾ ಬ್ರಹ್ಮಲೋಕ. ಈ ವಿಶ್ವದ ಅತ್ಯಂತ ಮುಖ್ಯ ವ್ಯಕ್ತಿಯಾದ ಬ್ರಹ್ಮನು ಇಲ್ಲಿ ವಾಸಿಸುತ್ತಾನೆ. ಬ್ರಹ್ಮಲೋಕದಲ್ಲಿನ ಜೀವನದ ಅಚ್ಚರಿಗೊಳಿಸುವ ಸ್ಥಿತಿಯನ್ನು ಲೆಕ್ಕಹಾಕುವುದಕ್ಕೆ ನಮಗೆ ಸಾಧ್ಯವಿಲ್ಲ ಎಂದು ಆಗಲೇ ನೋಡಿದ್ದೇವೆ; ಆದರೆ ಬದುಕಿನ ಅತ್ಯುನ್ನತ ಸ್ಥಿತಿಯಾದ ಸತ್ವಗುಣವು ನಮ್ಮನ್ನು ಇಲ್ಲಿಗೆ ತರಬಲ್ಲದು.

ರಜೋಗುಣದಲ್ಲಿ ಬೆರಕೆ ಇದೆ. ಅದು ಸತ್ವಗುಣ ಮತ್ತು ತಮೋಗುಣಗಳಿಗೆ ಮಧ್ಯದಲ್ಲಿದೆ. ಮನುಷ್ಯನು ಸದಾ ಪರಿಶುದ್ಧನಾಗಿರುವುದಿಲ್ಲ; ಸಂಪೂರ್ಣವಾಗಿ ರಜೋಗುಣದಲ್ಲಿಯೇ ಇದ್ದರೂ ಆತ ರಾಜನಾಗಿ ಅಥವಾ ಶ್ರೀಮಂತನಾಗಿ ಭೂಮಿಯ ಮೇಲೆ ಇರುತ್ತಾನೆ. ಆದರೆ ಬೆರಕೆಯೂ ಇರುವುದರಿಂದ ಆತ ಕೆಳಕ್ಕೆ ಹೋಗಿಬಿಡಬಹುದು. ರಜೋಗುಣ ಅಥವಾ ತಮೋಗುಣದಲ್ಲಿರುವ ಈ ಭೂಲೋಕದ ಜನರು ಯಂತ್ರದಲ್ಲಿ ಕುಳಿತು ಬಲಪ್ರಯೋಗದಿಂದ ಮೇಲಿನ ಲೋಕಗಳನ್ನು ಪ್ರವೇಶಿಸಲಾರರು. ರಜೋಗುಣದ ಮನುಷ್ಯನು ಮುಂದಿನ ಜನ್ಮದಲ್ಲಿ ಹುಚ್ಚನಾಗುವ ಸಾಧ್ಯತೆಯೂ ಇದೆ.

ಅತ್ಯಂತ ಕೀಳಾದ ತಮೋಗುಣವನ್ನು ಇಲ್ಲಿ ಅಸಹ್ಯವಾದದ್ದು ಎಂದು ವರ್ಣಿಸಿದೆ. ತಮೋಗುಣವನ್ನು ಬೆಳೆಸಿಕೊಳ್ಳುವುದು ಅತ್ಯಂತ ಅಪಾಯಕಾರಿ. ಐಹಿಕ ಪ್ರಕೃತಿಯಲ್ಲಿ ಅದೇ ಅತ್ಯಂತ ಕೀಳುಮಟ್ಟದ ಗುಣ. ಮನುಷ್ಯನ ಮಟ್ಟಕ್ಕಿಂತ ಕೆಳಗೆ ಪಕ್ಷಿಗಳು, ಪ್ರಾಣಿಗಳು, ಸರೀಸೃಪಗಳು, ಮರಗಳು ಇತ್ಯಾದಿಯಾಗಿ ಎಂಬತ್ತು ಲಕ್ಷ ಜೀವವರ್ಗಗಳಿವೆ. ತಮೋಗುಣವನ್ನು ಬೆಳೆಸಿಕೊಂಡದ್ದಕ್ಕೆ ಅನುಗುಣವಾಗಿ ಜನರನ್ನು ಈ ಅಸಹ್ಯಸ್ಥಿತಿಗಳಿಗೆ ಇಳಿಸಲಾಗುತ್ತದೆ. ಇಲ್ಲಿ **ತಾಮಸಾಃ** ಎನ್ನುವ ಪದವು ಮುಖ್ಯವಾದದ್ದು. **ತಾಮಸಾಃ** ಪದವು, ಮೇಲಿನ ಗುಣಕ್ಕೇರದೆ ನಿರಂತರವೂ ತಾಮಸ ಗುಣದಲ್ಲಿ ಉಳಿಯುವವರನ್ನು ಸೂಚಿಸುತ್ತದೆ. ಅವರ ಭವಿಷ್ಯವು ಬಹು ಭಯಂಕರವಾದದ್ದು.

ತಾಮಸ ಮತ್ತು ರಾಜಸ ಗುಣಗಳ ಮನುಷ್ಯರಿಗೆ ಸತ್ವಗುಣಕ್ಕೆ ಏರಲು ಒಂದು ಅವಕಾಶವಿದೆ. ಈ ಕ್ರಮಕ್ಕೆ ಕೃಷ್ಣಪ್ರಜ್ಞೆ ಎಂದು ಹೆಸರು. ಈ ಅವಕಾಶವನ್ನು ಬಳಸಿಕೊಳ್ಳದ ಮನುಷ್ಯನು ಖಂಡಿತವಾಗಿಯೂ ಕೆಳಮಟ್ಟದ ಗುಣಗಳಲ್ಲಿಯೇ ಉಳಿಯುತ್ತಾನೆ.

## ಶ್ಲೋಕ - 19

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ |**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ||೧೯||**

**ನ ಅನ್ಯಮ್**—ಬೇರೆಯಲ್ಲವೆಂದು; **ಗುಣೇಭ್ಯಃ**—ಗುಣಗಳಿಗಿಂತ; **ಕರ್ತಾರಮ್**—ಕರ್ತಾರನನ್ನು; **ಯದಾ**—ಯಾವಾಗ; **ದ್ರಷ್ಟಾ**—ದ್ರಷ್ಟಾರನು; **ಅನುಪಶ್ಯತಿ**—ಸರಿಯಾಗಿ ಕಾಣುತ್ತಾನೋ; **ಗುಣೇಭ್ಯಃ**—ಪ್ರಕೃತಿ ಗುಣಗಳಿಗೆ; **ಚ**—ಮತ್ತು; **ಪರಮ್**—ಅತೀತನಾದವನು; **ವೇತ್ತಿ**—ಎಂದು ತಿಳಿಯುತ್ತಾನೋ; **ಮತ್ ಭಾವಮ್**—ನನ್ನ ಆಧ್ಯಾತ್ಮಿಕ ಸ್ವಭಾವಕ್ಕೆ; **ಸಃ**—ಅವನು; **ಅಧಿಗಚ್ಛತಿ**—ಏರುವನು.

## ಅನುವಾದ

**ಎಲ್ಲ ಚಟುವಟಿಕೆಗಳಲ್ಲಿ ಈ ಗುಣಗಳಲ್ಲದೆ ಬೇರೆ ಕರ್ತೃವಿಲ್ಲ ಎನ್ನುವುದನ್ನು ಮನುಷ್ಯನು ಸರಿಯಾಗಿ ಅರ್ಥಮಾಡಿಕೊಂಡು, ಈ ಎಲ್ಲ ಗುಣಗಳಿಗೆ ಅತೀತನಾದ ಪರಮ ಪ್ರಭುವನ್ನು ಅರಿತಾಗ ಆಧ್ಯಾತ್ಮಿಕ ಭಾವವನ್ನು ಪಡೆಯುತ್ತಾನೆ.**

## ಭಾವಾರ್ಥ

ಯೋಗ್ಯ ಚೇತನದಿಂದ ಐಹಿಕ ಪ್ರಕೃತಿಯ ಗುಣಗಳ ವಿಷಯ ತಿಳಿದುಕೊಳ್ಳುವುದರಿಂದಲೇ ಮನುಷ್ಯನು ಅವುಗಳ ವ್ಯಾಪಾರಗಳನ್ನು ಮೀರಲು ಸಾಧ್ಯ. ನಿಜವಾದ ಗುರು ಕೃಷ್ಣ; ಅವನು ಅರ್ಜುನನಿಗೆ ಆಧ್ಯಾತ್ಮಿಕ ಜ್ಞಾನವನ್ನು ನೀಡುತ್ತಿದ್ದಾನೆ. ಹಾಗೆಯೇ, ಗುಣಗಳಿಗೆ ಅನುಗುಣವಾಗಿ ಕರ್ಮಶಾಸ್ತ್ರವನ್ನು ಕಲಿಯಬೇಕಾದದ್ದು, ಸಂಪೂರ್ಣವಾಗಿ ಕೃಷ್ಣಪ್ರಜ್ಞೆಯಲ್ಲಿ ಇರುವವರಿಂದ. ಇಲ್ಲವಾದರೆ ಮನುಷ್ಯನ ಜೀವನವು ತಪ್ಪುದಾರಿಯನ್ನು ಹಿಡಿಯುತ್ತದೆ. ತನ್ನ ಆಧ್ಯಾತ್ಮಿಕ ಸ್ಥಿತಿ, ತನ್ನ ಐಹಿಕ ದೇಹ, ತನ್ನ ಇಂದ್ರಿಯಗಳು, ತಾನು ಹೇಗೆ ಸಿಕ್ಕಿದ್ದೇನೆ, ಹೇಗೆ ಗುಣಗಳ ಪ್ರಭಾವದಲ್ಲಿದ್ದೇನೆ — ಇವೆಲ್ಲವನ್ನೂ ಯೋಗ್ಯ ಗುರುವಿನ ಉಪದೇಶದಿಂದ ಜೀವಿಯು ತಿಳಿದುಕೊಳ್ಳಬಹುದು. ಈ ಗುಣಗಳ ಹಿಡಿತಕ್ಕೆ ಸಿಕ್ಕಿ ಆತನು ನಿಸ್ಸಹಾಯಕನಾಗುತ್ತಾನೆ. ಆದರೆ ತನ್ನ ವಾಸ್ತವ ಸ್ಥಿತಿಯನ್ನು ಕಾಣಲು ಆತನಿಗೆ ಸಾಧ್ಯವಾದಾಗ ಆತನು ಆಧ್ಯಾತ್ಮಿಕ ಬದುಕಿನ ಅವಕಾಶವಿರುವ ದಿವ್ಯ ನೆಲೆಯನ್ನು ಸೇರಬಹುದು. ವಾಸ್ತವವಾಗಿ ವಿವಿಧ ಕರ್ಮಗಳ ಕರ್ತೃವು ಜೀವಿ ಅಲ್ಲವೇ ಅಲ್ಲ. ಐಹಿಕ ಪ್ರಕೃತಿಯ ಒಂದು ವಿಶಿಷ್ಟ ಗುಣವು ನಡೆಸುವ ಒಂದು ನಿರ್ದಿಷ್ಟ ಬಗೆಯ ದೇಹದಲ್ಲಿ ಇರುವುದರಿಂದ ಅವನು ಕರ್ಮ ಮಾಡಲೇಬೇಕಾಗುತ್ತದೆ. ಆಧ್ಯಾತ್ಮಿಕ ಅಧಿಕಾರದ ನೆರವಿಲ್ಲದಿದ್ದರೆ ಮನುಷ್ಯನು ತಾನು ವಾಸ್ತವವಾಗಿ ಯಾವ ಸ್ಥಿತಿಯಲ್ಲಿದ್ದೇನೆ ಎಂದು ತಿಳಿಯಲಾರ. ಸದ್ಗುರುವಿನ ಸಹವಾಸದಲ್ಲಿ ಆತನು ತನ್ನ ನಿಜವಾದ ಸ್ಥಿತಿಯನ್ನು ಕಾಣಬಲ್ಲ. ಈ ತಿಳಿವಳಿಕೆಯಿಂದ ಆತನು ಕೃಷ್ಣಪ್ರಜ್ಞೆಯಲ್ಲಿ ದೃಢನಾಗುವುದು ಸಾಧ್ಯವಾಗುತ್ತದೆ. ಕೃಷ್ಣಪ್ರಜ್ಞೆಯಲ್ಲಿ ಇರುವವನು ಐಹಿಕ ಪ್ರಕೃತಿಯ ಗುಣಗಳ ಪ್ರಭಾವಕ್ಕೆ ಸಿಕ್ಕಿಕೊಳ್ಳುವುದಿಲ್ಲ. ಕೃಷ್ಣನಿಗೆ ಶರಣಾದವನು ಐಹಿಕ ಪ್ರಕೃತಿಯ ವ್ಯಾಪಾರಗಳಿಂದ ಮುಕ್ತನಾಗುತ್ತಾನೆ ಎಂದು ಏಳನೆಯ ಅಧ್ಯಾಯದಲ್ಲಿ ಆಗಲೇ ಹೇಳಿದೆ. ಸಂಗತಿಗಳನ್ನು ವಾಸ್ತವವಾಗಿ ಕಾಣಬಲ್ಲವನ ಮೇಲೆ ಐಹಿಕ ಪ್ರಕೃತಿಯ ಪ್ರಭಾವವು ಕ್ರಮೇಣ ನಿಂತು ಹೋಗುತ್ತದೆ.

## ಶ್ಲೋಕ - 20

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥೨೦॥**

**ಗುಣಾನ್**—ಗುಣಗಳನ್ನು; **ಏತಾನ್**—ಈ ಎಲ್ಲ; **ಅತೀತ್ಯ**—ದಾಟಿ; **ತ್ರೀನ್**—ಮೂರು; **ದೇಹೀ**—ದೇಹಿಯು; **ದೇಹ**—ಶರೀರದಿಂದ; **ಸಮುದ್ಭವಾನ್**—ಉತ್ಪನ್ನವಾದ; **ಜನ್ಮ**—ಹುಟ್ಟು; **ಮೃತ್ಯು**—ಮರಣ; **ಜರಾ**—ಮತ್ತು ಮುಪ್ಪುಗಳ; **ದುಃಖೈಃ**—ದುಃಖಗಳಿಂದ; **ವಿಮುಕ್ತಃ**—ಮುಕ್ತನಾಗಿ; **ಅಮೃತಮ್**—ಅಮೃತವನ್ನು; **ಅಶ್ನುತೇ**—ಅನುಭೋಗಿಸುತ್ತಾನೆ.

## ಅನುವಾದ

**ದೇಹಧಾರಿಯಾದ ಜೀವಿಯು ಐಹಿಕ ದೇಹದೊಂದಿಗೆ ಸಹಯೋಗವಿರುವ ಈ ಮೂರು ಗುಣಗಳನ್ನು ಮೀರಬಲ್ಲವನಾಗಬೇಕು. ಆಗ ಅವನು ಹುಟ್ಟು, ಸಾವು, ಮುಪ್ಪು ಮತ್ತು ಅವುಗಳ ದುಃಖಗಳಿಂದ ಬಿಡುಗಡೆ ಹೊಂದಿ ಈ ಜನ್ಮದಲ್ಲಿಯೇ ಅಮೃತವನ್ನು ಸವಿಯುತ್ತಾನೆ.**

## ಭಾವಾರ್ಥ

ಈ ದೇಹದಲ್ಲಿಯೂ ಸಹ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಆಧ್ಯಾತ್ಮಿಕ ಸ್ಥಿತಿಯಲ್ಲಿರುವುದು ಹೇಗೆ ಸಾಧ್ಯ ಎನ್ನುವುದನ್ನು ಈ ಶ್ಲೋಕದಲ್ಲಿ ಹೇಳಿದೆ. **ದೇಹೀ** ಎನ್ನುವ ಸಂಸ್ಕೃತ ಪದಕ್ಕೆ 'ದೇಹವಿರುವ' ಎಂದರ್ಥ. ಈ ಐಹಿಕ ದೇಹದಲ್ಲಿದ್ದರೂ ಆಧ್ಯಾತ್ಮಿಕ ಜ್ಞಾನದಲ್ಲಿ ತನ್ನ ಮುನ್ನಡೆಯಿಂದ ಮನುಷ್ಯನು ಪ್ರಕೃತಿ ಗುಣಗಳ ಪ್ರಭಾವದಿಂದ ಮುಕ್ತನಾಗಬಲ್ಲ. ಈ ದೇಹದಲ್ಲಿಯೇ ಆಧ್ಯಾತ್ಮಿಕ ಜೀವನದ ಸುಖವನ್ನು ಅನುಭವಿಸಬಲ್ಲ. ಏಕೆಂದರೆ ಈ ದೇಹವನ್ನು ಬಿಟ್ಟನಂತರ ನಿಶ್ಚಯವಾಗಿಯೂ ಅವನು ಆಧ್ಯಾತ್ಮಿಕ ಗಗನಕ್ಕೆ ಹೋಗುವನು. ಆದರೆ ಈ ದೇಹದಲ್ಲಿಯೂ ಅವನು ಆಧ್ಯಾತ್ಮಿಕ ಸುಖವನ್ನು ಸವಿಯಬಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಕೃಷ್ಣಪ್ರಜ್ಞೆಯಲ್ಲಿ ಮಾಡುವ ಭಕ್ತಿಸೇವೆಯು ಐಹಿಕ ಬಂಧನದಿಂದ ಬಿಡುಗಡೆಯಾದದ್ದರ ಗುರುತು; ಇದನ್ನು ಹದಿನೆಂಟನೆಯ ಅಧ್ಯಾಯದಲ್ಲಿ ವಿವರಿಸಲಾಗುವುದು. ಐಹಿಕ ಪ್ರಕೃತಿ ಗುಣಗಳ ಪ್ರಭಾವದಿಂದ ಬಿಡುಗಡೆಯಾದಾಗ ಮನುಷ್ಯನು ಭಕ್ತಿಸೇವೆಯನ್ನು ಪ್ರವೇಶಿಸುತ್ತಾನೆ.

## ಶ್ಲೋಕ - 21

**ಅರ್ಜುನ ಉವಾಚ**

**ಕೈರ್ ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ |**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ||೨೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಕೈಃ**—ಯಾವ; **ಲಿಂಗೈಃ**—ಸಂಕೇತಗಳಿಂದ; **ತ್ರೀನ್**—ಮೂರು; **ಗುಣಾನ್**—ಗುಣಗಳನ್ನು; **ಏತಾನ್**—ಈ ಎಲ್ಲ; **ಅತೀತಃ**—ದಾಟಿದವನಾಗಿ; **ಭವತಿ**—ಇರುತ್ತಾನೆ; **ಪ್ರಭೋ**—ನನ್ನ ಸ್ವಾಮಿಯೇ; **ಕಿಮ್**—ಏನು; **ಆಚಾರಃ**—ಆಚಾರವು; **ಕಥಮ್**—ಹೇಗೆ; **ಚ**—ಕೂಡ; **ಏತಾನ್**—ಈ; **ತ್ರೀನ್**—ಮೂರು; **ಗುಣಾನ್**—ಗುಣಗಳನ್ನು; **ಅತಿವರ್ತತೇ**—ದಾಟುತ್ತಾನೆ.

## ಅನುವಾದ

**ಅರ್ಜುನನು ಪ್ರಶ್ನಿಸಿದನು — ಪ್ರಿಯ ಪ್ರಭುವೇ, ಈ ಗುಣತ್ರಯಗಳನ್ನು ಮೀರಿದವನ ಲಕ್ಷಣಗಳು ಯಾವುವು? ಆತನು ಹೇಗೆ ನಡೆದುಕೊಳ್ಳುತ್ತಾನೆ? ಅವನು ಹೇಗೆ ಪ್ರಕೃತಿ ಗುಣಗಳನ್ನು ಮೀರುತ್ತಾನೆ?**

## ಭಾವಾರ್ಥ

ಈ ಶ್ಲೋಕದಲ್ಲಿ ಅರ್ಜುನನ ಪ್ರಶ್ನೆಗಳು ತುಂಬ ಯುಕ್ತವಾಗಿವೆ. ಆಗಲೇ ಐಹಿಕ ಗುಣಗಳನ್ನು ಮೀರಿದ ಮನುಷ್ಯನ ಲಕ್ಷಣಗಳನ್ನು ಅವನು ತಿಳಿದುಕೊಳ್ಳಲು ಬಯಸುತ್ತಾನೆ. ಇಂತಹ ದಿವ್ಯ ಮನುಷ್ಯನ ಲಕ್ಷಣಗಳೇನು ಎಂದು ಮೊದಲು ಪ್ರಶ್ನಿಸುತ್ತಾನೆ. ಆತನು ಆಗಲೇ ಐಹಿಕ ಪ್ರಕೃತಿ ಗುಣಗಳ ಪ್ರಭಾವವನ್ನು ಮೀರಿದ್ದಾನೆ ಎಂದು ಅರ್ಥಮಾಡಿಕೊಳ್ಳುವುದು ಹೇಗೆ? ಅವನು

ಹೇಗೆ ಬದುಕುತ್ತಾನೆ? ಮತ್ತು ಅವನ ಚಟುವಟಿಕೆಗಳು ಯಾವುವು ಎನ್ನುವುದು ಎರಡನೆಯ ಪ್ರಶ್ನೆ. ಅವು ನಿಯಂತ್ರಿತವೆ ಅಥವಾ ಅನಿಯಂತ್ರಿತವೆ? ಅನಂತರ ಅರ್ಜುನನು ದಿವ್ಯ ಸ್ವಭಾವವನ್ನು ಪಡೆದುಕೊಳ್ಳುವ ಮಾರ್ಗವೇನು ಎಂದು ಕೇಳುತ್ತಾನೆ. ಅದು ಬಹಳ ಮುಖ್ಯವಾದದ್ದು. ಯಾವಾಗಲೂ ಆಧ್ಯಾತ್ಮಿಕವಾಗಿ ನೆಲೆಸಿರಲು ನೇರವಾದ ಮಾರ್ಗ ತಿಳಿಯದಿದ್ದರೆ ಅದರ ಲಕ್ಷಣಗಳನ್ನು ತೋರುವ ಸಾಧ್ಯತೆಯಿಲ್ಲ. ಆದುದರಿಂದ ಅರ್ಜುನನು ಕೇಳಿದ ಈ ಎಲ್ಲ ಪ್ರಶ್ನೆಗಳೂ ಮುಖ್ಯವಾದವು; ಪ್ರಭುವು ಅವುಗಳಿಗೆ ಉತ್ತರ ಹೇಳುತ್ತಾನೆ.

## ಶ್ಲೋಕ 22-25

**ಶ್ರೀ ಭಗವಾನುವಾಚ**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ |**
**ನ ದ್ವೇಷ್ಟಿ ಸಮ್ಪ್ರವೃತ್ತಾನಿ ನ ನಿವೃತ್ತಾನಿ ಕಾಙ್ಕ್ಷತಿ ||೨೨||**

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ |**
**ಗುಣಾ ವರ್ತನ್ತ ಇತ್ಯೇವಂ ಯೋಽವತಿಷ್ಠತಿ ನೇಙ್ಗತೇ ||೨೩||**

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ |**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ||೨೪||**

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ |**
**ಸರ್ವಾರಮ್ಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ||೨೫||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಪ್ರಕಾಶಮ್**—ಪ್ರಕಾಶವನ್ನು; **ಚ**—ಮತ್ತು; **ಪ್ರವೃತ್ತಿಮ್**—ಆಸಕ್ತಿಯನ್ನು; **ಚ**—ಮತ್ತು; **ಮೋಹಮ್**— ಭ್ರಾಂತಿಯನ್ನು; **ಏವ ಚ**—ಕೂಡ; **ಪಾಣ್ಡವ**—ಪಾಂಡು ಪುತ್ರನೇ; **ನ ದ್ವೇಷ್ಟಿ**—ದ್ವೇಷಿಸುವುದಿಲ್ಲ; **ಸಮ್ಪ್ರವೃತ್ತಾನಿ**—ಬೆಳೆದದ್ದನ್ನೂ ಕೂಡ; **ನ**—ಇಲ್ಲ; **ನಿವೃತ್ತಾನಿ**—ಬೆಳವಣಿಗೆಯ ತಡೆಯನ್ನೂ ಕೂಡ; **ಕಾಙ್ಕ್ಷತಿ**—ಬಯಸುತ್ತಾನೆ; **ಉದಾಸೀನವತ್**—ಉದಾಸೀನನಂತೆ; **ಆಸೀನಃ**—ನೆಲೆಸಿ; **ಗುಣೈಃ**—ಗುಣಗಳಿಂದ; **ಯಃ**—ಯಾರು; **ನ ವಿಚಾಲ್ಯತೇ**—ವಿಚಲಿತನಾಗುವುದಿಲ್ಲವೋ; **ಗುಣಾಃ**— ಗುಣಗಳು; **ವರ್ತನ್ತೇ**—ವರ್ತಿಸುತ್ತವೆ; **ಇತಿ ಏವಮ್**—ಹೀಗೆ ತಿಳಿದು; **ಯಃ**—ಯಾರು; **ಅವತಿಷ್ಠತಿ** —ಉಳಿಯುತ್ತಾನೆ; **ನ ಇಙ್ಗತೇ**—ತತ್ತರಿಸುವುದಿಲ್ಲವೋ; **ಸಮ**—ಸಮಾನವಾಗಿ; **ದುಃಖ**—ದುಃಖದಲ್ಲಿ; **ಸುಖಃ**—ಸುಖದಲ್ಲಿ; **ಸ್ವಸ್ಥಃ**—ತಾನಿದ್ದು; **ಸಮ**—ಸಮನಾದ; **ಲೋಷ್ಟ**—ಮಣ್ಣು ಹೆಂಟೆ; **ಅಶ್ಮ**—ಕಲ್ಲು; **ಕಾಞ್ಚನಃ**—ಚಿನ್ನ; **ತುಲ್ಯ**—ಸಮಾನವಾಗಿ ಕಾಣುವ; **ಪ್ರಿಯ**—ಪ್ರೀತಿಪಾತ್ರ; **ಅಪ್ರಿಯಃ**—ಅಪ್ರಿಯಗಳು; **ಧೀರಃ**—ಸ್ಥಿರನು; **ತುಲ್ಯ**—ಸಮಾನವಾದ; **ನಿನ್ದಾ**—ನಿಂದೆ; **ಆತ್ಮಸಂಸ್ತುತಿಃ**—ತನ್ನ ಹೊಗಳಿಕೆಗಳುಳ್ಳವನು; **ಮಾನ**—ಗೌರವ; **ಅಪಮಾನಯೋಃ**—ಮತ್ತು ಅಗೌರವದಲ್ಲಿ; **ತುಲ್ಯಃ**—ಸಮಾನನು; **ತುಲ್ಯಃ**—ಸಮಾನನು; **ಮಿತ್ರ**—ಸ್ನೇಹಿತರ; **ಅರಿ**—ಶತ್ರುಗಳ; **ಪಕ್ಷಯೋಃ**—ಪಕ್ಷಗಳಿಗೆ; **ಸರ್ವ**—ಎಲ್ಲ; **ಆರಮ್ಭ**—ಪ್ರಯತ್ನಗಳ; **ಪರಿತ್ಯಾಗೀ**—ತ್ಯಾಗಿಯು; **ಗುಣ ಅತೀತಃ**—ಭೌತಿಕ ಪ್ರಕೃತಿ ಗುಣಗಳಿಗೆ ಅತೀತನು; **ಸಃ**—ಅವನು; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆಂದನು — ಪಾಂಡುವಿನ ಮಗನಾದ ಅರ್ಜುನನೆ, ಈ ಲಕ್ಷಣಗಳಿರುವ ಮನುಷ್ಯನು ಗುಣಗಳನ್ನು ಮೀರಿದವನು ಎಂದು ಹೇಳುತ್ತಾರೆ; ಅವನು ಬೆಳಕು, ಪ್ರವೃತ್ತಿ ಮತ್ತು ಮೋಹಗಳು ಇದ್ದಾಗ, ಅವನ್ನು ದ್ವೇಷಿಸುವುದಿಲ್ಲ. ಅವು ಮರೆಯಾದಾಗ ಅವುಗಳನ್ನು ಬಯಸುವುದಿಲ್ಲ; ಅವನು ಐಹಿಕ ಗುಣಗಳ ಈ ಎಲ್ಲ ಪ್ರತಿಕ್ರಿಯೆಗಳ ಉದ್ದಕ್ಕೂ ನಿಶ್ಚಲವಾಗಿ ಮತ್ತು ನಿರಾತಂಕವಾಗಿ ಇರುತ್ತಾನೆ. ಗುಣಗಳು ಮಾತ್ರವೇ ಕೆಲಸ ಮಾಡುತ್ತವೆ ಎನ್ನುವುದನ್ನು ಅರ್ಥಮಾಡಿಕೊಂಡು ಉದಾಸೀನನಾಗಿ ಮತ್ತು ಆಧ್ಯಾತ್ಮಿಕ ಮನಸ್ಕನಾಗಿ ಉಳಿಯುತ್ತಾನೆ; ಅವನು ಆತ್ಮನಲ್ಲಿ ಸ್ಥಿರನಾಗಿ ಸುಖ ದುಃಖಗಳನ್ನು ಒಂದೇ ರೀತಿ ಕಾಣುತ್ತಾನೆ; ಒಂದು ಮಣ್ಣಿನ ಹೆಂಟೆ, ಒಂದು ಕಲ್ಲು ಮತ್ತು ಒಂದು ಚಿನ್ನದ ತುಂಡು ಎಲ್ಲವನ್ನೂ ಸಮದೃಷ್ಟಿಯಿಂದ ಕಾಣುತ್ತಾನೆ. ಪ್ರಿಯ ಅಪ್ರಿಯಗಳ ವಿಷಯದಲ್ಲಿ ಒಂದೇ ಸಮನೆ ಇರುತ್ತಾನೆ; ಹೊಗಳಿಕೆ ಮತ್ತು ತೆಗಳಿಕೆ, ಮಾನ ಮತ್ತು ಅಪಮಾನ ಇವುಗಳ ವಿಷಯದಲ್ಲಿ ಒಂದೇ ರೀತಿ ಇದ್ದು ಸ್ಥಿರನಾಗಿರುತ್ತಾನೆ. ಮಿತ್ರ ಮತ್ತು ಶತ್ರುಗಳ ವಿಷಯದಲ್ಲಿ ಒಂದೇ ರೀತಿ ನಡೆದುಕೊಳ್ಳುತ್ತಾನೆ ಮತ್ತು ಎಲ್ಲ ಐಹಿಕ ಚಟುವಟಿಕೆಗಳನ್ನು ಪರಿತ್ಯಜಿಸಿರುತ್ತಾನೆ.**

## ಭಾವಾರ್ಥ

ಅರ್ಜುನನು ಮೂರು ಬೇರೆ ಬೇರೆ ಪ್ರಶ್ನೆಗಳನ್ನು ಕೇಳಿದನು ಮತ್ತು ಪ್ರಭುವು ಅವುಗಳನ್ನು ಒಂದಾದ ಮೇಲೊಂದರಂತೆ ಉತ್ತರಿಸುತ್ತಾನೆ. ಆಧ್ಯಾತ್ಮಿಕ ನೆಲೆಯಲ್ಲಿರುವವನಿಗೆ ಅಸೂಯೆಯಿಲ್ಲ, ಅವನು ಏನನ್ನೂ ಬಯಸುವುದಿಲ್ಲ ಎಂದು ಕೃಷ್ಣನು ಮೊದಲು ಸೂಚಿಸುತ್ತಾನೆ. ಐಹಿಕ ದೇಹವನ್ನು ಧರಿಸಿ ಜೀವಿಯು ಈ ಐಹಿಕ ಜಗತ್ತಿನಲ್ಲಿ ಇರುವಾಗ ಅವನು ಐಹಿಕ ಪ್ರಕೃತಿಯ ಮೂರು ಗುಣಗಳಲ್ಲಿ ಒಂದರ ನಿಯಂತ್ರಣದಲ್ಲಿ ಇರುತ್ತಾನೆ ಎಂದು ಅರ್ಥಮಾಡಿಕೊಳ್ಳಬೇಕು. ಅವನು ವಾಸ್ತವವಾಗಿ ದೇಹದಿಂದ ಹೊರಗಿದ್ದಾಗ ಐಹಿಕಗುಣಗಳ ಮುಷ್ಟಿಯಿಂದ ಪಾರಾಗಿದ್ದಾನೆ. ಆದರೆ ಅವನು ಐಹಿಕ ದೇಹದಿಂದ ಹೊರಗೆ ಎಷ್ಟು ಕಾಲ ಇರುವುದಿಲ್ಲವೋ ಅಷ್ಟು ಕಾಲ ತಟಸ್ಥನಾಗಿರಬೇಕು. ಆತನು ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗಬೇಕು; ಆಗ ಐಹಿಕ ದೇಹದೊಡನೆ ಅವನ ಏಕತ್ವ ಭಾವವು ತಂತಾನೆ ಮರೆತು ಹೋಗುತ್ತದೆ. ಮನುಷ್ಯನಿಗೆ ಐಹಿಕ ದೇಹದ ಪ್ರಜ್ಞೆ ಇದ್ದಾಗ ಅವನು ಇಂದ್ರಿಯ ತೃಪ್ತಿಗಾಗಿಯೇ ಕೆಲಸ ಮಾಡುತ್ತಾನೆ. ಆದರೆ ಪ್ರಜ್ಞೆಯನ್ನು ಕೃಷ್ಣನಿಗೆ ವರ್ಗಾಯಿಸಿದಾಗ ಇಂದ್ರಿಯ ತೃಪ್ತಿಯು ತಾನಾಗಿಯೇ ನಿಲ್ಲುತ್ತದೆ. ಮನುಷ್ಯನಿಗೆ ಈ ಐಹಿಕ ದೇಹದ ಅಗತ್ಯವಿಲ್ಲ; ಆತನು ಐಹಿಕ ದೇಹದ ಆದೇಶಗಳನ್ನು ಒಪ್ಪಬೇಕಾಗಿಲ್ಲ. ದೇಹದೊಳಗಿನ ಐಹಿಕ ಗುಣಗಳು ಕೆಲಸಮಾಡುತ್ತವೆ; ಆದರೆ ಜೀವಾತ್ಮನಾಗಿ ಆತ್ಮವು ಇಂತಹ ಚಟುವಟಿಕೆಗಳಿಂದ ದೂರವಿರುತ್ತಾನೆ. ಅವನು ಹೇಗೆ ದೂರವಾಗುತ್ತಾನೆ? ಆತನಿಗೆ ದೇಹವನ್ನು ಅನುಭವಿಸುವುದೂ ಬೇಡ; ಅದರಿಂದ ಹೊರಕ್ಕೆ ಹೋಗುವುದೂ ಬೇಡ. ಹೀಗೆ ಆಧ್ಯಾತ್ಮಿಕ ಸ್ಥಿತಿಯಲ್ಲಿದ್ದು ಭಕ್ತನು ತಾನಾಗಿಯೇ ಮುಕ್ತನಾಗುತ್ತಾನೆ. ಐಹಿಕ ಪ್ರಕೃತಿಯ ಗುಣಗಳ ಪ್ರಭಾವದಿಂದ ಸ್ವತಂತ್ರನಾಗಲು ಅವನು ಪ್ರಯತ್ನಿಸಬೇಕಾಗಿಲ್ಲ.

ಮುಂದಿನ ಪ್ರಶ್ನೆಯು ಆಧ್ಯಾತ್ಮಿಕ ನೆಲೆಯಲ್ಲಿರುವ ಮನುಷ್ಯನ ವ್ಯಾಪಾರಗಳನ್ನು ಕುರಿತದ್ದು.

ಮಾನ, ಅಪಮಾನಗಳೆಂದು ಜನರು ಯಾವುದನ್ನು ಕರೆಯುವರೋ ಅವುಗಳು ಐಹಿಕ ನೆಲೆಯಲ್ಲಿರುವ ಮನುಷ್ಯನ ಮೇಲೆ ಪರಿಣಾಮ ಮಾಡುತ್ತವೆ. ಆದರೆ ಆಧ್ಯಾತ್ಮಿಕ ನೆಲೆಯಲ್ಲಿರುವ ಮನುಷ್ಯನ ಮೇಲೆ ಇಂತಹ ಹುಸಿಮಾನಾಪಮಾನಗಳು ಯಾವುದೇ ಪರಿಣಾಮವನ್ನು ಮಾಡುವುದಿಲ್ಲ. ಆತನು ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯವನ್ನು ಮಾಡುತ್ತಾನೆ; ಇನ್ನೊಬ್ಬ ಮನುಷ್ಯನು ತನ್ನನ್ನು ಗೌರವಿಸುವನೇ, ಅಪಮಾನ ಮಾಡುವನೇ ಎಂದು ಗಮನಿಸುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ತನ್ನ ಕರ್ತವ್ಯಕ್ಕೆ ಅನುಕೂಲವಾದ ಸಂಗತಿಗಳನ್ನು ಸ್ವೀಕರಿಸುತ್ತಾನೆ; ಇಲ್ಲವಾದರೆ ಯಾವುದೇ ಐಹಿಕ ವಸ್ತುವು ಅದು ಕಲ್ಲಾಗಿರಲಿ, ಚಿನ್ನವಾಗಿರಲಿ, ಅವನಿಗೆ ಬೇಕಿಲ್ಲ. ಕೃಷ್ಣಪ್ರಜ್ಞೆಯ ಆಚಾರದಲ್ಲಿ ತನಗೆ ನೆರವಾಗುವ ಪ್ರತಿಯೊಬ್ಬನನ್ನೂ ತನ್ನ ಪ್ರಿಯಮಿತ್ರನೆಂದು ಪರಿಗಣಿಸುತ್ತಾನೆ; ತನ್ನ ಶತ್ರು ಎನಿಸಿಕೊಂಡವನನ್ನು ದ್ವೇಷಿಸುವುದಿಲ್ಲ. ಅವನು ಸಮಚಿತ್ತನಾಗಿರುತ್ತಾನೆ. ಎಲ್ಲವನ್ನೂ ಒಂದೇ ಮಟ್ಟದಲ್ಲಿ ಕಾಣುತ್ತಾನೆ. ಏಕೆಂದರೆ ತನಗೂ ಐಹಿಕ ಅಸ್ತಿತ್ವಕ್ಕೂ ಸಂಬಂಧವಿಲ್ಲ ಎಂದು ಅವನಿಗೆ ಗೊತ್ತು. ಸಾಮಾಜಿಕ ಮತ್ತು ರಾಜಕೀಯ ವಿಷಯಗಳು ಅವನ ಮೇಲೆ ಪರಿಣಾಮ ಮಾಡುವುದಿಲ್ಲ. ಏಕೆಂದರೆ ಅವನಿಗೆ ಅಲ್ಪಕಾಲದ ಏಳು ಬೀಳುಗಳ ಮತ್ತು ಕ್ಷೋಭೆಗಳ ಪರಿಸ್ಥಿತಿ ಗೊತ್ತು. ತನಗಾಗಿ ಏನನ್ನು ಮಾಡಲೂ ಅವನು ಪ್ರಯತ್ನಿಸುವುದಿಲ್ಲ. ಕೃಷ್ಣನಿಗಾಗಿ ಅವನು ಏನನ್ನು ಬೇಕಾದರೂ ಪ್ರಯತ್ನಿಸುತ್ತಾನೆ. ಆದರೆ ಸ್ವಂತಕ್ಕಾಗಿ ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಇಂತಹ ನಡತೆಯಿಂದ ಮನುಷ್ಯನು ವಾಸ್ತವವಾಗಿ ಆಧ್ಯಾತ್ಮಿಕ ನೆಲೆಯನ್ನು ಪಡೆಯುತ್ತಾನೆ.

## ಶ್ಲೋಕ - 26

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ |**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ||೨೬||**

**ಮಾಮ್**—ನನಗೆ; **ಚ**—ಕೂಡ; **ಯಃ**—ಯಾವ ವ್ಯಕ್ತಿಯು; **ಅವ್ಯಭಿಚಾರೇಣ**—ತಪ್ಪದೇ; **ಭಕ್ತಿಯೋಗೇನ**—ಭಕ್ತಿಸೇವೆಯಿಂದ; **ಸೇವತೇ**—ಸೇವೆಸಲ್ಲಿಸುತ್ತಾನೋ; **ಸಃ**—ಅವನು; **ಗುಣಾನ್**—ಭೌತಿಕ ಪ್ರಕೃತಿ ಗುಣಗಳನ್ನು; **ಸಮತೀತ್ಯ**—ಮೀರಿ; **ಏತಾನ್**—ಈ ಎಲ್ಲ; **ಬ್ರಹ್ಮ ಭೂಯಾಯ**—ಬ್ರಹ್ಮವೇದಿಕೆಗೆ ಏರಿದವನು; **ಕಲ್ಪತೇ**—ಆಗುವವನು.

## ಅನುವಾದ

**ಎಲ್ಲ ಸನ್ನಿವೇಶಗಳಲ್ಲಿಯೂ ಲೋಪಮಾಡದೆ ಸಂಪೂರ್ಣ ಭಕ್ತಿಸೇವೆಯಲ್ಲಿ ನಿರತನಾದವನು ಕೂಡಲೇ ಐಹಿಕ ಪ್ರಕೃತಿ ಗುಣಗಳನ್ನು ಮೀರುತ್ತಾನೆ; ಹೀಗೆ ಬ್ರಹ್ಮನ್ ಹಂತಕ್ಕೆ ಬರುತ್ತಾನೆ.**

## ಭಾವಾರ್ಥ

ದಿವ್ಯ ಸ್ಥಿತಿಯನ್ನು ಸಾಧಿಸುವ ಮಾರ್ಗವೇನು? ಇದು ಅರ್ಜುನನ ಮೂರನೆಯ ಪ್ರಶ್ನೆ. ಈ ಶ್ಲೋಕವು ಈ ಪ್ರಶ್ನೆಗೆ ಉತ್ತರ. ಹಿಂದೆಯೇ ವಿವರಿಸಿದಂತೆ, ಐಹಿಕ ಜಗತ್ತು ಐಹಿಕ ಪ್ರಕೃತಿ ಗುಣಗಳ ಪ್ರಭಾವದಲ್ಲಿ ಕೆಲಸಮಾಡುತ್ತದೆ. ಪ್ರಕೃತಿ ಗುಣಗಳ ಚಟುವಟಿಕೆಗಳಿಂದ ಮನುಷ್ಯನು ಕ್ಷೋಭೆಗೊಳ್ಳಬಾರದು. ತನ್ನ ಪ್ರಜ್ಞೆಯನ್ನು ಇಂತಹ ಗುಣಗಳ ಚಟುವಟಿಕೆಗಳಲ್ಲಿ ತೊಡಗಿಸುವುದರ

ಬದಲು ಅವನು ತನ್ನ ಪ್ರಜ್ಞೆಯನ್ನು ಕೃಷ್ಣನಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ತೊಡಗಿಸಬಹುದು. ಕೃಷ್ಣನಿಗೆ ಸಂಬಂಧಿಸಿದ ಚಟುವಟಿಕೆಗಳಿಗೆ ಭಕ್ತಿಯೋಗ ಎಂದು ಹೆಸರು; ಹೀಗೆಂದರೆ ಸದಾ ಕೃಷ್ಣನಿಗಾಗಿ ಕೆಲಸ ಮಾಡುವುದು. ಈ ಕಲ್ಪನೆ ಕೃಷ್ಣನನ್ನು ಮಾತ್ರವಲ್ಲ, ರಾಮ ಮತ್ತು ನಾರಾಯಣರಂತೆ ಅವನ ಎಲ್ಲ ಸ್ವಾಂಶ ವಿಸ್ತರಣೆಗಳನ್ನು ಒಳಗೊಳ್ಳುತ್ತದೆ. ಆತನ ಸ್ವಾಂಶ ವಿಸ್ತರಣೆಗಳು ಅಸಂಖ್ಯಾತ. ಕೃಷ್ಣನ ಯಾವುದೇ ರೂಪದ ಅಥವಾ ಸ್ವಾಂಶ ವಿಸ್ತರಣೆಗಳಲ್ಲಿ ಒಂದರ ಸೇವೆಯಲ್ಲಿ ನಿರತನಾದವನು ದಿವ್ಯಸ್ಥಿತಿಯಲ್ಲಿದ್ದಾನೆ ಎಂದು ಭಾವಿಸಲಾಗುತ್ತದೆ. ಕೃಷ್ಣನ ಎಲ್ಲ ರೂಪಗಳೂ ಸಂಪೂರ್ಣವಾಗಿ ಆಧ್ಯಾತ್ಮಿಕ; ನಿತ್ಯಾನಂದ ಜ್ಞಾನಮಯ ಎನ್ನುವುದನ್ನು ಗಮನಿಸಬೇಕು. ಇಂತಹ ದೇವೋತ್ತಮ ಪುರುಷರು ಸರ್ವಶಕ್ತರು, ಸರ್ವಜ್ಞರು, ಅವರಿಗೆ ಎಲ್ಲ ದಿವ್ಯ ಗುಣಗಳಿವೆ. ಐಹಿಕ ಪ್ರಕೃತಿ ಗುಣಗಳನ್ನು ಗೆಲ್ಲುವುದು ಬಹು ಕಷ್ಟ; ದೃಢಸಂಕಲ್ಪ ಮಾಡಿ ಕೃಷ್ಣನ ಅಥವಾ ಅವನ ಸ್ವಾಂಶ ವಿಸ್ತರಣೆಗಳ ಸೇವೆಯಲ್ಲಿ ಒಬ್ಬನು ತೊಡಗಿದರೆ, ಪ್ರಕೃತಿ ಗುಣಗಳನ್ನು ಸುಲಭವಾಗಿ ದಾಟಬಹುದು. ಇದನ್ನು ಆಗಲೇ ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ. ಕೃಷ್ಣನಿಗೆ ಶರಣಾಗತನಾದವನು ಕೂಡಲೇ ಐಹಿಕ ಪ್ರಕೃತಿ ಗುಣಗಳ ಪ್ರಭಾವಕ್ಕೆ ಅತೀತನಾಗುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಅಥವಾ ಭಕ್ತಿಸೇವೆಯಲ್ಲಿ ಇರುವುದೆಂದರೆ ಕೃಷ್ಣನೊಡನೆ ಸಮಾನತೆಯನ್ನು ಸಾಧಿಸುವುದು ಎಂದು ಅರ್ಥ. ತಾನು ನಿತ್ಯಜ್ಞಾನಾನಂದನು, ಚಿನ್ನದ ಕಣಗಳು ಚಿನ್ನದ ಗಣಿಯ ಅಂಶಗಳಾಗಿರುವಂತೆ ಜೀವಿಗಳು ತನ್ನ ವಿಭಿನ್ನಾಂಶಗಳು ಎಂದು ಪ್ರಭುವು ಹೇಳುತ್ತಾನೆ. ಹೇಗೆ ಬಂಗಾರದ ಕಣಗಳು ಗುಣದಲ್ಲಿ ಚಿನ್ನದ ಗಣಿಗೆ ಸಮವೋ ಹಾಗೆಯೇ ಜೀವಿಯು ತನ್ನ ದಿವ್ಯ ಸ್ಥಿತಿಯಲ್ಲಿ ಬಂಗಾರದ ಗಣಿಯಂತಿರುವ ಕೃಷ್ಣನಿಗೆ ಗುಣದಲ್ಲಿ ಸಮನಾಗುತ್ತಾನೆ. ವ್ಯಕ್ತಿತ್ವದಲ್ಲಿನ ವ್ಯತ್ಯಾಸವು ಮುಂದುವರಿಯುತ್ತದೆ. ಇಲ್ಲವಾದರೆ ಭಕ್ತಿಯೋಗದ ಪ್ರಶ್ನೆಯೇ ಇರುವುದಿಲ್ಲ. ಭಕ್ತಿಯೋಗದ ಅರ್ಥ ಇದು. ಪ್ರಭು ಇದ್ದಾನೆ, ಭಕ್ತನಿದ್ದಾನೆ, ಪ್ರಭು-ಭಕ್ತರ ನಡುವಣ ಪ್ರೀತಿಯ ವಿನಿಮಯವಿದೆ. ಆದುದರಿಂದ ದೇವೋತ್ತಮ ಪರಮ ಪುರುಷನಲ್ಲಿ ಮತ್ತು ವ್ಯಕ್ತಿಗತ ಜೀವಿಯಲ್ಲಿ ಇಬ್ಬರು ವ್ಯಕ್ತಿಗಳ ವೈಯಕ್ತಿಕ ವಿಶೇಷವೂ ಇರುತ್ತದೆ. ಇಲ್ಲವಾದರೆ ಭಕ್ತಿಯೋಗಕ್ಕೆ ಅರ್ಥವೇ ಇಲ್ಲ. ಪ್ರಭುವಿನೊಡನೆ ಒಂದೇ ದಿವ್ಯ ಸ್ಥಿತಿಯಲ್ಲಿ ಮನುಷ್ಯನು ಇರದಿದ್ದರೆ ಅವನು ಪರಮ ಪ್ರಭುವಿನ ಸೇವೆಯನ್ನು ಮಾಡಲಾರ. ರಾಜನ ವೈಯಕ್ತಿಕ ಸಹಾಯಕನಾಗಬೇಕಾದರೆ ಮನುಷ್ಯನು ಅಗತ್ಯವಾದ ಅರ್ಹತೆಗಳನ್ನು ಪಡೆಯಬೇಕು. ಅರ್ಹತೆ ಎಂದರೆ ಬ್ರಹ್ಮನ್‌ನಾಗುವುದು, ಅಥವಾ ಎಲ್ಲ ಐಹಿಕ ಕಲ್ಮಷದ ಸೋಂಕಿನಿಂದ ಮುಕ್ತನಾಗುವುದು. ವೇದ ಸಾಹಿತ್ಯದಲ್ಲಿ **ಬ್ರಹ್ಮೈವ ಸನ್ ಬ್ರಹ್ಮಾಪಿ ಏತಿ** ಎಂದು ಹೇಳಿದೆ. ಬ್ರಹ್ಮನಾಗುವುದರ ಮೂಲಕ ಮನುಷ್ಯನು ಪರಮ ಬ್ರಹ್ಮನನ್ನು ಪಡೆಯಬಹುದು. ಹೀಗೆಂದರೆ ಮನುಷ್ಯನು ಗುಣಾತ್ಮಕವಾಗಿ ಬ್ರಹ್ಮನ್‌ನೊಂದಿಗೆ ಒಂದಾಗಬೇಕು ಎಂದು ಅರ್ಥ. ಬ್ರಹ್ಮನನ್ನು ಸಾಧಿಸಿದ ಮನುಷ್ಯನು ಪ್ರತ್ಯೇಕ ಆತ್ಮವಾಗಿ ನಿತ್ಯಬ್ರಹ್ಮನ್‌ನ ಗುರುತನ್ನು ಕಳೆದುಕೊಳ್ಳುವುದಿಲ್ಲ.

## ಶ್ಲೋಕ - 27

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ |**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾನ್ತಿಕಸ್ಯ ಚ ||೨೭||**

**ಬ್ರಹ್ಮಣಃ**—ನಿರಾಕಾರ ಬ್ರಹ್ಮಜ್ಯೋತಿಯ; **ಹಿ**—ಖಂಡಿತವಾಗಿಯೂ; **ಪ್ರತಿಷ್ಠಾ**—ಆಶ್ರಯವು; **ಅಹಮ್**—ನಾನಾಗಿದ್ದೇನೆ; **ಅಮೃತಸ್ಯ**—ಅಮೃತವಾದ; **ಅವ್ಯಯಸ್ಯ**—ಅವಿನಾಶಿಯಾದ; **ಚ**—ಕೂಡ;

**ಶಾಶ್ವತಸ್ಯ**—ಶಾಶ್ವತವಾದ; **ಚ**—ಮತ್ತು; **ಧರ್ಮಸ್ಯ**—ಸ್ವರೂಪ ಸ್ಥಿತಿಯ; **ಸುಖಸ್ಯ**—ಸುಖದ; **ಐಕಾನ್ತಿಕಸ್ಯ**—ಅಂತಿಮವಾದ; **ಚ**—ಕೂಡ.

## ಅನುವಾದ

**ನಿರಾಕಾರ ಬ್ರಹ್ಮನಿಗೆ ಮೃತ್ಯುವಿಲ್ಲ. ಅವನು ಅವಿನಾಶಿ, ಶಾಶ್ವತ; ಪರಮ ಸುಖವೇ ಅದರ ಸಹಜಸ್ಥಿತಿ. ನಾನು ಈ ನಿರಾಕಾರ ಬ್ರಹ್ಮನಿಗೆ ಆಧಾರ.**

## ಭಾವಾರ್ಥ

ಬ್ರಹ್ಮನ ಸ್ವರೂಪವು ಅಮರತ್ವ, ಅವಿನಾಶಿತ್ವ, ನಿತ್ಯತೆ ಮತ್ತು ಸುಖ. ಬ್ರಹ್ಮನ್‌ನು ದಿವ್ಯ ಸಾಕ್ಷಾತ್ಕಾರದ ಪ್ರಾರಂಭ. ಪರಮಾತ್ಮನು ದಿವ್ಯ ಸಾಕ್ಷಾತ್ಕಾರದಲ್ಲಿ ಮಧ್ಯದ ಅಥವಾ ಎರಡನೆಯ ಘಟ್ಟ ಮತ್ತು ದೇವೋತ್ತಮ ಪರಮ ಪುರುಷನು ಪರಿಪೂರ್ಣ ಸತ್ಯದ ಪರಮ ಸಾಕ್ಷಾತ್ಕಾರ. ಆದುದರಿಂದ ಪರಮಾತ್ಮನೂ ನಿರಾಕಾರ ಬ್ರಹ್ಮನೂ ಪರಮ ಪುರುಷನಲ್ಲಿ ಇದ್ದಾರೆ. ಐಹಿಕ ಪ್ರಕೃತಿಯು ಪರಮ ಪ್ರಭುವಿನ ಕೆಳಮಟ್ಟದ ಶಕ್ತಿಯ ಅಭಿವ್ಯಕ್ತಿ ಎಂದು ಏಳನೆಯ ಅಧ್ಯಾಯದಲ್ಲಿ ವಿವರಿಸಿದೆ. ಕೆಳಮಟ್ಟದ ಐಹಿಕ ಪ್ರಕೃತಿಗೆ ಮೇಲ್ಮಟ್ಟದ ಪ್ರಕೃತಿಯ ಅಂಶಗಳನ್ನು ನೀಡಿ ಪ್ರಭುವು ಅದಕ್ಕೆ ಗರ್ಭಾಧಾನ ಮಾಡುತ್ತಾನೆ. ಐಹಿಕ ಪ್ರಕೃತಿಗೆ ಇದು ಆಧ್ಯಾತ್ಮಿಕ ಸ್ಪರ್ಶ. ಈ ಐಹಿಕ ಪ್ರಕೃತಿಯಿಂದ ಬದ್ಧನಾದ ಜೀವಿಯು ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳಲು ಪ್ರಾರಂಭಿಸಿದಾಗ ಅವನು ಐಹಿಕ ಅಸ್ತಿತ್ವದಿಂದ ಮೇಲೇರುತ್ತಾನೆ; ಕ್ರಮೇಣ ಅವನು ಪರಮ ಸತ್ಯದ ಬ್ರಹ್ಮನ್ ಪರಿಕಲ್ಪನೆಗೆ ಏರುತ್ತಾನೆ. ಬದುಕಿನ ಬ್ರಹ್ಮನ್ ಪರಿಕಲ್ಪನೆಯ ಸಾಧನೆಯು ಆತ್ಮಸಾಕ್ಷಾತ್ಕಾರದಲ್ಲಿ ಮೊದಲನೆಯ ಹಂತ. ಈ ಹಂತದಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದವನು ಐಹಿಕ ಸ್ಥಿತಿಯನ್ನು ಮೀರಿರುತ್ತಾನೆ. ಆದರೆ ವಾಸ್ತವವಾಗಿ ಅವನು ಬ್ರಹ್ಮ ಸಾಕ್ಷಾತ್ಕಾರದಲ್ಲಿ ಪರಿಪೂರ್ಣನಾಗಿರುವುದಿಲ್ಲ. ಆತನು ಬಯಸಿದರೆ ಬ್ರಹ್ಮಸ್ಥಿತಿಯಲ್ಲಿಯೇ ಮುಂದುವರಿಯ ಬಹುದು. ಅನಂತರ ಅವನು ಕ್ರಮೇಣ ಪರಮಾತ್ಮ ಸಾಕ್ಷಾತ್ಕಾರಕ್ಕೆ ಏರಿ ಅಲ್ಲಿಂದ ದೇವೋತ್ತಮ ಪರಮ ಪುರುಷನ ಸಾಕ್ಷಾತ್ಕಾರಕ್ಕೆ ಏರಬಹುದು. ವೇದಸಾಹಿತ್ಯದಲ್ಲಿ ಇದರ ಅನೇಕ ನಿದರ್ಶನಗಳಿವೆ. ನಾಲ್ವರು ಕುಮಾರರು ಮೊದಲು ಪರಮ ಸತ್ಯದ ನಿರಾಕಾರ ಬ್ರಹ್ಮನ್ ಕಲ್ಪನೆಯಲ್ಲಿ ನೆಲೆಸಿದ್ದರು. ಅನಂತರ ಕ್ರಮೇಣ ಭಕ್ತಿಸೇವೆಯ ನೆಲೆಗೆ ಏರಿದರು. ಬ್ರಹ್ಮನ್‌ನ ನಿರಾಕಾರ ಕಲ್ಪನೆಯ ಆಚೆಗೆ ಏರಲಾರದವನು ಕೆಳಕ್ಕೆ ಬಿದ್ದುಬಿಡುವ ಅಪಾಯವಿದೆ. ನಿರಾಕಾರ ಬ್ರಹ್ಮನ್ ಹಂತಕ್ಕೆ ವ್ಯಕ್ತಿಯು ಏರಿದರೂ, ಅವನಿಗೆ ಪರಮ ಪುರುಷನ ತಿಳುವಳಿಕೆ ಇಲ್ಲದ ಕಾರಣ ಅವನು ಮುಂದೆ ಹೋಗದಿದ್ದರೆ, ಅಂತಹ ವ್ಯಕ್ತಿಯ ಬುದ್ಧಿ ಪರಿಶುದ್ಧವಾಗಿಲ್ಲ ಎಂದು ಶ್ರೀಮದ್ಭಾಗವತದಲ್ಲಿ ಹೇಳಲಾಗಿದೆ. ಆದುದರಿಂದ ಬ್ರಹ್ಮನ್ ನೆಲೆಗೆ ಏರಿದ್ದರೂ ಮನುಷ್ಯನು ಪ್ರಭುವಿನ ಭಕ್ತಿಸೇವೆಯಲ್ಲಿ ತೊಡಗದಿದ್ದರೆ ಅವನು ಬಿದ್ದುಬಿಡುವ ಸಾಧ್ಯತೆಯಿದೆ. ವೇದದ ಭಾಷೆಯಲ್ಲಿ ಹೀಗೆ ಹೇಳಿದೆ — **ರಸೋ ವೈ ಸಃ ರಸಂ ಹಿ ಏವಾಯಂ ಲಬ್ಧ್ವಾನನ್ದೀ ಭವತಿ** "ಮನುಷ್ಯನು ಆನಂದದ ಭಂಡಾರವಾದ ಮತ್ತು ದೇವೋತ್ತಮ ಪುರುಷನಾದ ಕೃಷ್ಣನನ್ನು ಅರ್ಥಮಾಡಿಕೊಂಡಾಗ ಅವನಿಗೆ ದಿವ್ಯಾನಂದವಾಗುತ್ತದೆ" (ತೈತ್ತಿರೀಯ ಉಪನಿಷತ್ತು 2.7.1). ಪರಮ ಪ್ರಭುವಿನಲ್ಲಿ ಆರು ಸಿರಿಗಳು ತುಂಬಿವೆ; ಭಕ್ತನು ಅವನನ್ನು ಸಮೀಪಿಸಿದಾಗ ಈ ಆರು ಸಿರಿಗಳ ವಿನಿಮಯವಾಗುತ್ತದೆ. ಅರಸನ ಸೇವಕನು ಸ್ವಲ್ಪ ಹೆಚ್ಚು ಕಡಮೆ ಅರಸನಿಗೆ

ಸಮನಾಗುತ್ತಾನೆ. ಹೀಗೆ ಶಾಶ್ವತ ಸುಖ, ಅವಿನಾಶಿ ಸುಖ ಮತ್ತು ಶಾಶ್ವತ ಬದುಕು ಭಕ್ತಿಸೇವೆಯನ್ನು ಹಿಂಬಾಲಿಸುತ್ತವೆ; ಆದ್ದರಿಂದ ಬ್ರಹ್ಮನ್ ಸಾಕ್ಷಾತ್ಕಾರ ಅಥವಾ ಶಾಶ್ವತತೆ ಅಥವಾ ಅವನ ಅವಿನಾಶಿತ್ವಗಳು ಭಕ್ತಿಸೇವೆಯಲ್ಲಿ ಸೇರಿವೆ. ಭಕ್ತಿಸೇವೆಯಲ್ಲಿ ನಿರತನಾದ ಮನುಷ್ಯನು ಆಗಲೇ ಇದನ್ನು ಹೊಂದಿರುತ್ತಾನೆ.

ಜೀವಿಯು ಸ್ವಭಾವದಿಂದ ಬ್ರಹ್ಮನ್‌ನಾದರೂ ಐಹಿಕ ಜಗತ್ತಿನ ಮೇಲೆ ಪ್ರಭುತ್ವ ನಡೆಸಲು ಬಯಸುತ್ತಾನೆ. ಇದರಿಂದ ಅವನು ಕೆಳಕ್ಕೆ ಬೀಳುತ್ತಾನೆ. ಜೀವಿಯು ತನ್ನ ಸ್ವರೂಪದಲ್ಲಿ ಐಹಿಕ ಪ್ರಕೃತಿಯ ಗುಣತ್ರಯಗಳನ್ನು ಮೀರಿದವನು. ಆದರೆ ಐಹಿಕ ಪ್ರಕೃತಿಯ ಸಹವಾಸವು ಅವನನ್ನು ಸತ್ವ, ರಜಸ್ಸು, ತಮಸ್ಸುಗಳೆಂಬ ಐಹಿಕ ಪ್ರಕೃತಿ ಗುಣಗಳಲ್ಲಿ ಸಿಗಿಸುತ್ತದೆ. ಈ ಗುಣತ್ರಯಗಳ ಸಹವಾಸದಿಂದ ಅವನಲ್ಲಿ ಐಹಿಕ ಜಗತ್ತಿನ ಮೇಲೆ ಯಜಮಾನಿಕೆ ನಡೆಸುವ ಬಯಕೆ ಇರುತ್ತದೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯಲ್ಲಿ ತೊಡಗುವುದರಿಂದ ಆತನು ಕೂಡಲೇ ದಿವ್ಯಸ್ಥಿತಿಯಲ್ಲಿ ನೆಲೆಸುತ್ತಾನೆ ಮತ್ತು ಐಹಿಕ ಪ್ರಕೃತಿಯನ್ನು ತಾನು ನಿಯಂತ್ರಿಸಬೇಕೆಂಬ ಅವನ ನೀತಿಬಾಹಿರ ಅಪೇಕ್ಷೆಯು ಹೊರಟುಹೋಗುತ್ತದೆ. ಭಕ್ತಿಸೇವೆಯ ಸಾಕ್ಷಾತ್ಕಾರಕ್ಕಾಗಿ ಶ್ರವಣ, ಕೀರ್ತನ, ಸ್ಮರಣ ಇವುಗಳಿಂದ ಪ್ರಾರಂಭವಾಗುವ ಒಂಬತ್ತು ವಿಧಾನಗಳನ್ನು ಹೇಳಿದೆ. ಭಕ್ತಿಸೇವೆಯ ಈ ಪ್ರಕ್ರಿಯೆಯನ್ನು ಭಕ್ತರ ಸಹವಾಸದಲ್ಲಿ ಅಭ್ಯಾಸಮಾಡಬೇಕು. ಇಂತಹ ಸಹವಾಸದಿಂದ, ಗುರುವಿನ ಪ್ರಭಾವದಿಂದ ಕ್ರಮೇಣ ಯಜಮಾನಿಕೆ ನಡೆಸುವ ಐಹಿಕ ಅಪೇಕ್ಷೆಯು ನಿರ್ಮೂಲವಾಗುತ್ತದೆ; ಮನುಷ್ಯನು ಪ್ರಭುವಿನ ಪ್ರೇಮಪೂರ್ವಕ ದಿವ್ಯ ಸೇವೆಯಲ್ಲಿ ದೃಢವಾಗಿ ನೆಲೆಕಾಣುತ್ತಾನೆ. ಈ ವಿಧಾನವನ್ನು ಈ ಅಧ್ಯಾಯದ ಇಪ್ಪತ್ತೆರಡನೆಯ ಶ್ಲೋಕದಿಂದ ಕೊನೆಯ ಶ್ಲೋಕದವರೆಗೆ ಸೂಚಿಸಲಾಗಿದೆ. ಪ್ರಭುವಿನ ಭಕ್ತಿಸೇವೆ ತುಂಬ ಸರಳವಾದದ್ದು. ಮನುಷ್ಯನು ಸದಾ ಪ್ರಭುವಿನ ಸೇವೆಯಲ್ಲಿ ನಿರತನಾಗಿರಬೇಕು; ದೇವರ ಪ್ರಸಾದವನ್ನು ಸ್ವೀಕರಿಸಬೇಕು; ಪ್ರಭುವಿನ ಚರಣಕಮಲಗಳಿಗೆ ಅರ್ಪಿಸಿದ ಹೂವುಗಳ ಸುವಾಸನೆಯನ್ನು ಪಡೆಯಬೇಕು; ಪ್ರಭುವಿನ ದಿವ್ಯ ಲೀಲೆಗಳ ಸ್ಥಳಗಳನ್ನು ನೋಡಬೇಕು; ಪ್ರಭುವಿನ ವಿವಿಧ ಕಾರ್ಯಗಳ ವಿಷಯ, ತನ್ನ ಭಕ್ತರೊಡನೆ ಆತನ ಪ್ರೀತಿಯ ವಿನಿಮಯ ಇವನ್ನು ಕುರಿತು ಓದಬೇಕು. ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂಬ ದಿವ್ಯ ಮಂತ್ರವನ್ನು ಸದಾ ಉಚ್ಚರಿಸಬೇಕು. ಪ್ರಭುವಿನ ಹಾಗೂ ಅವನ ಭಕ್ತರ ಜಯಂತಿಗಳಂದು, ಅವರ ಅಂತರ್ಧಾನದ ಸ್ಮರಣೆಯ ದಿನಗಳಂದು ಉಪವಾಸ ಮಾಡಬೇಕು. ಇಂತಹ ಪ್ರಕ್ರಿಯೆಯನ್ನು ಅನುಸರಿಸುವುದರಿಂದ ಮನುಷ್ಯನು ಎಲ್ಲ ಐಹಿಕ ಚಟುವಟಿಕೆಗಳ ವಿಷಯದಲ್ಲಿ ಸಂಪೂರ್ಣವಾಗಿ ನಿರ್ಲಿಪ್ತನಾಗುತ್ತಾನೆ. ಹೀಗೆ ಬ್ರಹ್ಮಜ್ಯೋತಿಯಲ್ಲಿ ಅಥವಾ ಬ್ರಹ್ಮಪರಿಕಲ್ಪನೆಯ ವೈವಿಧ್ಯಗಳಲ್ಲಿ ನೆಲೆಯನ್ನು ಕಾಣಬಲ್ಲವನು ಗುಣದಲ್ಲಿ ದೇವೋತ್ತಮ ಪರಮ ಪುರುಷನಿಗೆ ಸಮನಾಗುತ್ತಾನೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಭೌತಿಕ ಪ್ರಕೃತಿಯ ತ್ರಿಗುಣಗಳು" ಎಂಬ ಹದಿನಾಲ್ಕನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

ಅಧ್ಯಾಯ - 15

# ಪುರುಷೋತ್ತಮ ಯೋಗ

## ಶ್ಲೋಕ - 1

**ಶ್ರೀ ಭಗವಾನುವಾಚ**
**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೧॥**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಊರ್ಧ್ವಮೂಲಮ್**—ಮೇಲೆ ಬೇರುಗಳುಳ್ಳದ್ದು; **ಅಧಃ**—ಕೆಳಕ್ಕೆ; **ಶಾಖಮ್**—ರೆಂಬೆಗಳುಳ್ಳದ್ದು; **ಅಶ್ವತ್ಥಮ್**—ಅಶ್ವತ್ಥವೃಕ್ಷವು; **ಪ್ರಾಹುಃ**—ಎಂದು ಹೇಳಲಾಗಿದೆ; **ಅವ್ಯಯಮ್**—ಶಾಶ್ವತವಾದ; **ಛನ್ದಾಂಸಿ**—ವೇದಮಂತ್ರಗಳು; **ಯಸ್ಯ**—ಯಾವುದರ; **ಪರ್ಣಾನಿ**—ಎಲೆಗಳೋ; **ಯಃ**—ಯಾರು; **ತಮ್**—ಅದನ್ನು; **ವೇದ**—ತಿಳಿಯುತ್ತಾನೋ; **ಸಃ**—ಅವನು; **ವೇದವಿತ್**—ವೇದಗಳನ್ನು ತಿಳಿದವನು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಬೇರುಗಳು ಮೇಲಿರುವ ಮತ್ತು ರೆಂಬೆಗಳು ಕೆಳಗಿರುವ ಅವಿನಾಶಿಯಾದ ಅಶ್ವತ್ಥ ವೃಕ್ಷವೊಂದಿದೆ. ಅದರ ಎಲೆಗಳು ವೇದ ಮಂತ್ರಗಳು ಎಂದು ಹೇಳುತ್ತಾರೆ. ಈ ಮರವನ್ನು ತಿಳಿದವನು ವೇದಗಳನ್ನು ತಿಳಿದವನು.**

## ಭಾವಾರ್ಥ

ಭಕ್ತಿಯೋಗದ ಚರ್ಚೆಯ ಅನಂತರ ಯಾರಾದರೂ 'ವೇದಗಳ ವಿಷಯವೇನು' ಎಂದು ಕೇಳಬಹುದು. ವೇದಾಧ್ಯಯನದ ಉದ್ದೇಶವು ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಎಂದು ಈ ಅಧ್ಯಾಯದಲ್ಲಿ ಹೇಳಿದೆ. ಆದುದರಿಂದ ಕೃಷ್ಣಪ್ರಜ್ಞೆಯಲ್ಲಿರುವವನು, ಭಕ್ತಿಸೇವೆಯಲ್ಲಿ ನಿರತನಾಗಿರುವವನು ಆಗಲೇ ವೇದಗಳನ್ನು ತಿಳಿದುಕೊಂಡಿದ್ದಾನೆ.

ಈ ಐಹಿಕ ಜಗತ್ತಿನಲ್ಲಿ ಸಿಕ್ಕಿಬೀಳುವುದನ್ನು ಇಲ್ಲಿ ಅಶ್ವತ್ಥ ವೃಕ್ಷಕ್ಕೆ ಹೋಲಿಸಿದೆ. ಫಲಾಪೇಕ್ಷಿತ ಕರ್ಮಗಳಲ್ಲಿ ನಿರತನಾದವನ ಮಟ್ಟಿಗೆ ಅಶ್ವತ್ಥ ವೃಕ್ಷಕ್ಕೆ ಕೊನೆಯೇ ಇಲ್ಲ. ಅವನು ಒಂದು ರೆಂಬೆಯಿಂದ ಇನ್ನೊಂದು ರೆಂಬೆಗೆ, ಇನ್ನೊಂದಕ್ಕೆ, ಇನ್ನೊಂದಕ್ಕೆ ಅಲೆಯುತ್ತಾನೆ. ಈ ಐಹಿಕ ಜಗತ್ತಿನ ವೃಕ್ಷಕ್ಕೆ ಕೊನೆಯೇ ಇಲ್ಲ. ಈ ವೃಕ್ಷಕ್ಕೆ ಅಂಟಿಕೊಂಡವನಿಗೆ ಮುಕ್ತಿಯ ಸಾಧ್ಯತೆಯೇ ಇಲ್ಲ.

ಮನುಷ್ಯನು ಮೇಲೇರಲು ರಚಿತವಾಗಿರುವ ವೇದಮಂತ್ರಗಳನ್ನು ಮರದ ಎಲೆಗಳೆಂದು ಕರೆದಿದೆ. ಈ ಮರದ ಬೇರುಗಳು ಮೇಲ್ಮುಖವಾಗಿ ಬೆಳೆಯುತ್ತವೆ; ಬ್ರಹ್ಮನು ಈ ವಿಶ್ವದ ಅತ್ಯುನ್ನತ

ಲೋಕದಲ್ಲಿ ಇದ್ದಾನೆ. ಈ ಮರದ ಬೇರುಗಳು ಅಲ್ಲಿಂದ ಪ್ರಾರಂಭವಾಗುತ್ತವೆ. ಅವಿನಾಶಿಯಾದ ಈ ಮಾಯೆಯ ವೃಕ್ಷವನ್ನು ಮನುಷ್ಯನು ಅರ್ಥಮಾಡಿಕೊಂಡರೆ ಅದರಿಂದ ಹೊರಕ್ಕೆ ಬರಬಲ್ಲ.

ಬಿಡಿಸಿಕೊಳ್ಳುವ ಈ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಬೇಕು. ಈ ಐಹಿಕ ತೊಡಕಿನಿಂದ ಪಾರಾಗಲು ಹಲವು ಪ್ರಕ್ರಿಯೆಗಳಿವೆ ಎಂದು ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದೆ. ಪರಮ ಪ್ರಭುವಿನ ಭಕ್ತಿಸೇವೆಯೇ ಅತ್ಯುತ್ತಮ ಮಾರ್ಗ ಎನ್ನುವುದನ್ನು ಹದಿಮೂರನೆಯ ಅಧ್ಯಾಯದವರೆಗೆ ಕಂಡಿದ್ದೇವೆ. ಭಕ್ತಿಸೇವೆಯ ಮೂಲ ತತ್ವವು ಐಹಿಕ ಕ್ರಿಯೆಗಳಲ್ಲಿ ನಿರಾಸಕ್ತಿ ಮತ್ತು ಪ್ರಭುವಿನ ದಿವ್ಯಸೇವೆಯಲ್ಲಿ ಆಸಕ್ತಿ. ಐಹಿಕ ಜಗತ್ತಿನಲ್ಲಿನ ಆಸಕ್ತಿಯನ್ನು ಕಿತ್ತುಹಾಕುವ ಪ್ರಕ್ರಿಯೆಯನ್ನು ಈ ಅಧ್ಯಾಯದ ಪ್ರಾರಂಭದಲ್ಲಿ ಚರ್ಚಿಸಿದೆ. ಐಹಿಕ ಜಗತ್ತಿನ ಬೇರು ಮೇಲಕ್ಕೆ ಸಾಗುತ್ತದೆ. ಎಂದರೆ ಅದು ಸಮಸ್ತ ಐಹಿಕ ವಸ್ತುವಿನಿಂದ, ವಿಶ್ವದ ಅತ್ಯುನ್ನತ ಲೋಕದಿಂದ ಪ್ರಾರಂಭವಾಗುತ್ತದೆ. ಅಲ್ಲಿಂದ ಅದು ಇಡೀ ವಿಶ್ವವನ್ನು ವ್ಯಾಪಿಸುತ್ತದೆ. ಅದರ ಹಲವಾರು ರೆಂಬೆಗಳು ವಿವಿಧ ಲೋಕವ್ಯೂಹಗಳನ್ನು ಪ್ರತಿನಿಧಿಸುತ್ತವೆ. ಹಣ್ಣುಗಳು ಜೀವಿಯ ಕರ್ಮಗಳ ಫಲವನ್ನು ಪ್ರತಿನಿಧಿಸುತ್ತವೆ; ಧರ್ಮ, ಆರ್ಥಿಕ ಬೆಳವಣಿಗೆ, ಇಂದ್ರಿಯ ತೃಪ್ತಿ ಮತ್ತು ಮುಕ್ತಿ ಇವೇ ಆ ಫಲಗಳು.

ಶಾಖೆಗಳು ಕೆಳಮುಖವಾಗಿ ಬೇರುಗಳು ಮೇಲ್ಮುಖವಾಗಿರುವ ಈ ವೃಕ್ಷವನ್ನು ಸುಲಭವಾಗಿ ಕಾಣಲಾಗುವುದಿಲ್ಲ, ಆದರೆ ಅಂತಹ ವೃಕ್ಷವುಂಟು. ಜಲಾಶಯದ ಪಕ್ಕದಲ್ಲಿ ಈ ಮರವನ್ನು ಕಾಣಬಹುದು. ದಡದ ಮೇಲಿನ ಮರಗಳ ಪ್ರತಿಬಿಂಬದಲ್ಲಿ ಶಾಖೆಗಳು ಕೆಳಮುಖವಾಗಿರುವುದನ್ನು, ಬೇರುಗಳು ಮೇಲಿರುವುದನ್ನು ನಾವು ಕಾಣಬಹುದು. ಎಂದರೆ ಈ ಐಹಿಕ ಜಗತ್ತಿನ ವೃಕ್ಷವು ಆಧ್ಯಾತ್ಮಿಕ ಜಗತ್ತಿನ ನಿಜವಾದ ವೃಕ್ಷದ ಪ್ರತಿಬಿಂಬ ಮಾತ್ರ. ಮರದ ಪ್ರತಿಬಿಂಬವು ನೀರ ಮೇಲಿರುವಂತೆ ಆಧ್ಯಾತ್ಮಿಕ ಜಗತ್ತಿನ ಈ ಪ್ರತಿಬಿಂಬವು ಆಸೆಯ ಮೇಲಿರುತ್ತದೆ. ವಸ್ತುಗಳು ಈ ಪ್ರತಿಬಿಂಬಿತ ಐಹಿಕ ಬೆಳಕಿನಲ್ಲಿ ನೆಲೆಯಾಗುವುದಕ್ಕೆ ಆಸೆಯೇ ಕಾರಣ. ಈ ಐಹಿಕ ಅಸ್ತಿತ್ವದಿಂದ ಹೊರಕ್ಕೆ ಹೋಗಲು ಬಯಸುವವನು ವಿಶ್ಲೇಷಣಾತ್ಮಕ ಅಧ್ಯಯನದಿಂದ ಈ ವೃಕ್ಷವನ್ನು ಸಂಪೂರ್ಣವಾಗಿ ತಿಳಿದುಕೊಳ್ಳಬೇಕು. ಆಗ ಅವನು ಅದರೊಡನೆ ತನ್ನ ಸಂಬಂಧವನ್ನು ಕಡಿದುಕೊಳ್ಳಬಹುದು.

ಈ ಮರವು ನಿಜವಾದ ಮರದ ಪ್ರತಿಬಿಂಬವಾದದ್ದರಿಂದ ಅದರ ಪಡಿಯಚ್ಚಾಗಿದೆ. ಆಧ್ಯಾತ್ಮಿಕ ಜಗತ್ತಿನಲ್ಲಿ ಪ್ರತಿಯೊಂದೂ ಇದೆ. ಈ ಐಹಿಕ ವೃಕ್ಷದ ಬೇರು ಬ್ರಹ್ಮನೆಂದು ನಿರಾಕಾರವಾದಿಗಳು ಭಾವಿಸುತ್ತಾರೆ; ಸಾಂಖ್ಯ ಸಿದ್ಧಾಂತದ ಪ್ರಕಾರ ಪ್ರಕೃತಿ, ಪುರುಷ ಈ ಬೇರಿನಿಂದ ಬರುತ್ತಾರೆ; ಅನಂತರ ಗುಣತ್ರಯಗಳು, ಅನಂತರ ಪಂಚಮಹಾಭೂತಗಳು, ಅನಂತರ ದಶೇಂದ್ರಿಯಗಳು, ಮನಸ್ಸು ಮೊದಲಾದವು ಬರುತ್ತವೆ. ಹೀಗೆ ಅವರು ಇಡೀ ಐಹಿಕ ಜಗತ್ತನ್ನು ಇಪ್ಪತ್ನಾಲ್ಕು ಘಟಕಾಂಶಗಳಾಗಿ ವಿಭಾಗಿಸುತ್ತಾರೆ. ಬ್ರಹ್ಮನು ಎಲ್ಲ ಅಭಿವ್ಯಕ್ತಿಗಳ ಕೇಂದ್ರವಾದರೆ ಈ ಐಹಿಕ ಜಗತ್ತು 180 ಡಿಗ್ರಿಗಳಷ್ಟು ಕೇಂದ್ರದ ಅಭಿವ್ಯಕ್ತಿ. ಇನ್ನುಳಿದ 180 ಡಿಗ್ರಿಗಳ ಮಟ್ಟಿಗೆ ಆಧ್ಯಾತ್ಮಿಕ ಜಗತ್ತು. ಐಹಿಕ ಜಗತ್ತು ವಕ್ರ ಪ್ರತಿಬಿಂಬ. ಆದುದರಿಂದ ಆಧ್ಯಾತ್ಮಿಕ ಜಗತ್ತಿನಲ್ಲಿ ಇದೇ ವೈವಿಧ್ಯವಿರುತ್ತದೆ. ಆದರೆ ಅದು ವಾಸ್ತವವಾಗಿರುತ್ತದೆ. ಪ್ರಕೃತಿಯು ಪರಮ ಪ್ರಭುವಿನ ಬಹಿರಂಗ ಶಕ್ತಿ; ಸ್ವತಃ ಪರಮ ಪ್ರಭುವೇ ಪುರುಷ. ಇದನ್ನು ಭಗವದ್ಗೀತೆಯಲ್ಲಿ

ವಿವರಿಸಿದೆ. ಈ ಅಭಿವ್ಯಕ್ತಿಯು ಐಹಿಕವಾದದ್ದರಿಂದ ಅದು ಅಲ್ಪಕಾಲದ್ದು. ಪ್ರತಿಬಿಂಬವು ತಾತ್ಕಾಲಿಕ; ಅದು ಕೆಲವೊಮ್ಮೆ ಕಾಣಿಸುತ್ತದೆ; ಕೆಲವೊಮ್ಮೆ ಕಾಣುವುದಿಲ್ಲ. ಈ ಪ್ರತಿಬಿಂಬದ ಮೂಲವು ಶಾಶ್ವತವಾದದ್ದು. ನಿಜವಾದ ವೃಕ್ಷದ ಐಹಿಕ ಪ್ರತಿಬಿಂಬವನ್ನು ತೊಡೆದು ಹಾಕಬೇಕು. ಒಬ್ಬ ಮನುಷ್ಯನು ವೇದಗಳನ್ನು ತಿಳಿದುಕೊಂಡಿದ್ದಾನೆ ಎಂದಾಗ ಈ ಐಹಿಕ ಜಗತ್ತಿನಲ್ಲಿನ ಆಸಕ್ತಿಯನ್ನು ಹೇಗೆ ಕತ್ತರಿಸಿ ಹಾಕಬೇಕು ಎನ್ನುವುದನ್ನು ಅವನು ತಿಳಿದುಕೊಂಡಿದ್ದಾನೆ ಎಂದೇ ಭಾವನೆ. ಆ ಪ್ರಕ್ರಿಯೆಯನ್ನು ತಿಳಿದ ಮನುಷ್ಯನು ವಾಸ್ತವವಾಗಿ ವೇದಗಳನ್ನು ತಿಳಿದುಕೊಂಡಿದ್ದಾನೆ. ವೇದಗಳ ಕರ್ಮಕಾಂಡಗಳ ಸೂತ್ರಗಳಿಂದ ಆಕರ್ಷಿತನಾಗುವ ಮನುಷ್ಯನು ಮರದ ಸುಂದರವಾದ ಹಸಿರೆಲೆಗಳಿಂದ ಆಕರ್ಷಿತನಾಗುತ್ತಾನೆ. ಆತನಿಗೆ ವೇದಗಳ ಉದ್ದೇಶವು ಸರಿಯಾಗಿ ಅರ್ಥವಾಗಿರುವುದಿಲ್ಲ. ದೇವೋತ್ತಮ ಪುರುಷನೇ ತಿಳಿಸಿಕೊಡುವಂತೆ, ಈ ಪ್ರತಿಬಿಂಬವಾದ ಮರವನ್ನು ಕಡಿದು ಹಾಕಿ ಆಧ್ಯಾತ್ಮಿಕ ಜಗತ್ತಿನ ನಿಜವಾದ ಮರವನ್ನು ಪಡೆಯುವುದೇ ವೇದಗಳ ಉದ್ದೇಶ.

## ಶ್ಲೋಕ - 2

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸನ್ತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ ॥೨॥**

**ಅಧಃ**—ಕೆಳಮುಖವಾಗಿ; **ಚ**—ಮತ್ತು; **ಊರ್ಧ್ವಮ್**—ಮೇಲ್ಮುಖವಾಗಿ; **ಪ್ರಸೃತಾಃ**—ವಿಸ್ತರಿಸಿವೆ; **ತಸ್ಯ**—ಅದರ; **ಶಾಖಾಃ**—ಕೊಂಬೆಗಳು; **ಗುಣ**—ಪ್ರಕೃತಿ ಗುಣಗಳಿಂದ; **ಪ್ರವೃದ್ಧಾಃ**—ಬೆಳೆದಿವೆ; **ವಿಷಯ**—ಇಂದ್ರಿಯ ವಿಷಯಗಳೆಂಬ; **ಪ್ರವಾಲಾಃ**—ಕುಡಿಗಳುಳ್ಳದ್ದಾಗಿದೆ; **ಅಧಃ**—ಕೆಳಮುಖವಾಗಿ; **ಚ**—ಮತ್ತು; **ಮೂಲಾನಿ**—ಬೇರುಗಳು; **ಅನುಸನ್ತತಾನಿ**—ವಿಸ್ತರಿಸಿವೆ; **ಕರ್ಮ**—ಕರ್ಮಕ್ಕೆ; **ಅನುಬನ್ಧೀನಿ**—ಬದ್ಧವಾದ; **ಮನುಷ್ಯಲೋಕೇ**—ಮಾನವ ಸಮಾಜದ ಪ್ರಪಂಚದಲ್ಲಿ.

## ಅನುವಾದ

**ಈ ಮರದ ಬೇರುಗಳು ಕೆಳಮುಖವಾಗಿಯೂ, ಮೇಲ್ಮುಖವಾಗಿಯೂ ಹರಡಿಕೊಂಡಿವೆ; ಐಹಿಕ ಪ್ರಕೃತಿಯ ಗುಣತ್ರಯಗಳು ಅದನ್ನು ಪೋಷಿಸುತ್ತವೆ. ಇಂದ್ರಿಯಗಳ ವಸ್ತುಗಳು ಇದರ ಕುಡಿಗಳು. ಈ ಮರಕ್ಕೆ ಕೆಳಮುಖವಾದ ಬೇರುಗಳು ಉಂಟು. ಇವು ಮನುಷ್ಯಕುಲದ ಫಲಾಪೇಕ್ಷಿತ ಕರ್ಮಗಳೊಂದಿಗೆ ಬಂಧಿತವಾಗಿವೆ.**

## ಭಾವಾರ್ಥ

ಅಶ್ವತ್ಥ ವೃಕ್ಷದ ವರ್ಣನೆಯನ್ನು ಇಲ್ಲಿ ಇನ್ನಷ್ಟು ವಿವರಿಸಲಾಗಿದೆ. ಅದರ ರೆಂಬೆಗಳು ಎಲ್ಲ ದಿಕ್ಕಿನಲ್ಲಿಯೂ ಚಾಚಿಕೊಂಡಿವೆ. ಕೆಳಭಾಗಗಳಲ್ಲಿ ಮನುಷ್ಯರು, ಪ್ರಾಣಿಗಳು, ಕುದುರೆಗಳು, ಹಸುಗಳು, ನಾಯಿಗಳು, ಬೆಕ್ಕುಗಳು ಮೊದಲಾದ ಜೀವಿಗಳ ವಿವಿಧ ಅಭಿವ್ಯಕ್ತಿಗಳು ಇವೆ. ಇವು ರೆಂಬೆಗಳ ಕೆಳಭಾಗಗಳಲ್ಲಿ ನೆಲೆಸಿವೆ; ಮೇಲಿನ ಭಾಗಗಳಲ್ಲಿ ದೇವತೆಗಳು, ಗಂಧರ್ವರು ಮೊದಲಾದ

ಉತ್ತಮ ರೂಪದ ಜೀವಿಗಳು ಮತ್ತು ಇನ್ನೂ ಉನ್ನತ ಜೀವವರ್ಗಗಳೂ ಇವೆ. ನೀರು ಮರವನ್ನು ಪೋಷಿಸುವಂತೆ ಐಹಿಕ ಪ್ರಕೃತಿಯ ಮೂರು ಗುಣಗಳು ಈ ಮರವನ್ನು ಪೋಷಿಸುತ್ತವೆ. ಕೆಲವೊಮ್ಮೆ ಒಂದಿಷ್ಟು ಭೂಭಾಗವು ನೀರಿಲ್ಲದೆ ಬಂಜರಾಗಿರುವುದನ್ನು, ಕೆಲವೊಮ್ಮೆ ಒಂದು ಭಾಗವು ಹಸಿರಾಗಿರುವುದನ್ನು ಕಾಣುತ್ತೇವೆ; ಇದೇ ರೀತಿಯಲ್ಲಿ ಐಹಿಕಪ್ರಕೃತಿಯ ನಿರ್ದಿಷ್ಟ ಗುಣಗಳು ಪ್ರಮಾಣದಲ್ಲಿ ಹೆಚ್ಚಾಗಿರುವಾಗ ಅದಕ್ಕನುಗುಣವಾಗಿ ವಿವಿಧ ಜೀವವರ್ಗಗಳು ಕಾಣಿಸಿಕೊಳ್ಳುತ್ತವೆ.

ಈ ಮರದ ಕುಡಿಗಳು ಇಂದ್ರಿಯಗಳ ವಸ್ತುಗಳು ಎಂದು ಭಾವಿಸಲಾಗಿದೆ. ಬೇರೆ ಬೇರೆ ಪ್ರಕೃತಿಗಳ ಗುಣಗಳನ್ನು ಬೆಳೆಸಿಕೊಂಡಾಗ ನಾವು ಬೇರೆ ಬೇರೆ ಇಂದ್ರಿಯಗಳನ್ನು ಬೆಳೆಸಿಕೊಳ್ಳುತ್ತೇವೆ. ಇಂದ್ರಿಯಗಳ ಮೂಲಕ ನಾವು ವಿವಿಧ ರೀತಿಗಳ ಇಂದ್ರಿಯ ವಸ್ತುಗಳನ್ನು ಅನುಭವಿಸುತ್ತೇವೆ. ವಿವಿಧ ಇಂದ್ರಿಯ ವಸ್ತುಗಳ ಅನುಭವಕ್ಕೆ ಅಂಟಿಕೊಂಡ ಕಿವಿಗಳು, ಮೂಗು, ಕಣ್ಣುಗಳು ಇತ್ಯಾದಿಯಾದ ಇಂದ್ರಿಯಗಳು ರೆಂಬೆಗಳ ಕೊನೆಗಳಾಗಿವೆ. ಶಬ್ದ, ರೂಪ, ಸ್ಪರ್ಶ ಮೊದಲಾದ ಇಂದ್ರಿಯ ವಸ್ತುಗಳು ಕುಡಿಗಳಾಗಿವೆ. ಪ್ರಿಯ, ಅಪ್ರಿಯಗಳು ಸಣ್ಣಪುಟ್ಟ ಬೇರುಗಳಾಗಿವೆ; ಇವು ಕಷ್ಟದ ಮತ್ತು ಇಂದ್ರಿಯ ಸುಖದ ವಿವಿಧ ರೂಪಗಳ ಉಪ ಉತ್ಪನ್ನಗಳು. ಪಾಪ ಪುಣ್ಯಗಳ ಪ್ರವೃತ್ತಿಗಳು ಈ ಉಪಬೇರುಗಳಿಂದ ಬೆಳೆಯುತ್ತವೆ ಎಂದು ಭಾವಿಸಲಾಗಿದೆ; ಈ ಉಪಬೇರುಗಳು ಎಲ್ಲ ದಿಕ್ಕುಗಳಲ್ಲಿ ಚಾಚಿಕೊಂಡಿವೆ. ನಿಜವಾದ ಬೇರು ಬ್ರಹ್ಮ ಲೋಕದಲ್ಲಿದೆ; ಇತರ ಬೇರುಗಳು ಮನುಷ್ಯ ಲೋಕವ್ಯೂಹಗಳಲ್ಲಿವೆ. ಮನುಷ್ಯನು ಹಲವಾರು ಕರ್ಮಗಳ ಫಲಗಳನ್ನು ಮೇಲಿನ ಲೋಕವ್ಯೂಹಗಳಲ್ಲಿ ಅನುಭವಿಸಿದ ಅನಂತರ ಭೂಮಿಗಿಳಿದು ಬರುತ್ತಾನೆ ಮತ್ತು ತನ್ನ ಕರ್ಮವನ್ನು ಮುಂದುವರಿಸುತ್ತಾನೆ. ಈ ಮನುಷ್ಯಲೋಕವನ್ನು ಕರ್ಮಕ್ಷೇತ್ರ ಎಂದು ಭಾವಿಸಲಾಗಿದೆ.

## ಶ್ಲೋಕ 3-4

ನ ರೂಪಮಸ್ಯೇಹ ತಥೋಪಲಭ್ಯತೇ
ನಾನ್ತೋ ನ ಚಾದಿರ್ನ ಚ ಸಮ್ಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲಮ್
ಅಸಙ್ಗಶಸ್ತ್ರೇಣ ದೃಢೇನ ಛಿತ್ವಾ ॥೩॥

ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತನ್ತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥೪॥

ನ—ಇಲ್ಲ; ರೂಪಮ್—ಆಕಾರವನ್ನು; ಅಸ್ಯ—ಈ ವೃಕ್ಷದ; ಇಹ—ಈ ಪ್ರಪಂಚದಲ್ಲಿ; ತಥಾ—ಕೂಡ; ಉಪಲಭ್ಯತೇ—ಕಾಣಬಲ್ಲುದು; ನ—ಎಂದಿಗೂ ಇಲ್ಲ; ಅನ್ತಃ—ಕೊನೆಯು; ನ—ಎಂದಿಗೂ ಇಲ್ಲ; ಚ—ಕೂಡ; ಆದಿಃ—ಪ್ರಾರಂಭವು; ನ—ಎಂದಿಗೂ ಇಲ್ಲ; ಚ—ಕೂಡ; ಸಂಪ್ರತಿಷ್ಠಾ—ತಳಪಾಯವು; ಅಶ್ವತ್ಥಮ್—ಅಶ್ವತ್ಥವೃಕ್ಷವನ್ನು; ಏನಮ್—ಈ; ಸು ವಿರೂಢ—ಬಲವಾಗಿ; ಮೂಲಮ್—ಬೇರುಬಿಟ್ಟಿರುವ; ಅಸನ್ಗ ಶಸ್ತ್ರೇಣ—ಅಸಂಗದ ಶಸ್ತ್ರದಿಂದ; ದೃಢೇನ—ದೃಢವಾದ;

ಛಿತ್ತ್ವಾ—ಕತ್ತರಿಸಿ; ತತಃ—ಅನಂತರ; ಪದಮ್—ಸ್ಥಿತಿಯನ್ನು; ತತ್—ಆ; ಪರಿಮಾರ್ಗಿತವ್ಯಮ್—ಕಂಡುಹಿಡಿಯಬೇಕು; ಯಸ್ಮಿನ್—ಯಾವುದರಲ್ಲಿ; ಗತಾಃ—ಹೋದವರು; ನ ನಿವರ್ತನ್ತಿ—ಹಿಂದಿರುಗುವುದಿಲ್ಲ; ಭೂಯಃ—ಮತ್ತೆ; ತಮ್—ಆ; ಏವ—ಖಂಡಿತವಾಗಿಯೂ; ಚ—ಕೂಡ; ಆದ್ಯಮ್—ಮೂಲನಾದ; ಪುರುಷಮ್—ದೇವೋತ್ತಮ ಪುರುಷನನ್ನು; ಪ್ರಪದ್ಯೇ—ಶರಣಾಗಬೇಕು; ಯತಃ—ಯಾರಿಂದ; ಪ್ರವೃತ್ತಿಃ—ಪ್ರಾರಂಭವು; ಪ್ರಸೃತಾ—ವಿಸ್ತರಿಸಿದೆ; ಪುರಾಣೀ—ಬಹು ಪ್ರಾಚೀನವಾದ.

## ಅನುವಾದ

**ಈ ಮರದ ನಿಜವಾದ ರೂಪವನ್ನು ಈ ಜಗತ್ತಿನಲ್ಲಿ ಕಾಣಲಾಗುವುದಿಲ್ಲ. ಅದರ ಅಂತ್ಯ, ಆದಿ ಅಥವಾ ಅಸ್ತಿವಾರಗಳನ್ನು ಯಾರೂ ಅರ್ಥಮಾಡಿಕೊಳ್ಳಲಾರರು. ಆದರೆ ಮನುಷ್ಯನು ದೃಢ ಮನಸ್ಸಿನಿಂದ ಅನಾಸಕ್ತಿಯ ಶಸ್ತ್ರದಿಂದ ದೃಢವಾದ ಬೇರಿರುವ ಈ ಮರವನ್ನು ಕಡಿದು ಹಾಕಬೇಕು. ಅನಂತರ, ಯಾವ ಸ್ಥಳಕ್ಕೆ ಒಮ್ಮೆ ಹೋದರೆ ಮತ್ತೆ ಹಿಂದಿರುಗುವುದಿಲ್ಲವೋ ಆ ಸ್ಥಳವನ್ನು ಹುಡುಕಬೇಕು; ಅಲ್ಲಿ ದೇವೋತ್ತಮ ಪರಮ ಪುರುಷನಿಗೆ ಶರಣಾಗಬೇಕು; ಅನಾದಿಕಾಲದಿಂದ ಎಲ್ಲವೂ ಅವನಿಂದಲೇ ಪ್ರಾರಂಭವಾಯಿತು; ಎಲ್ಲವೂ ಅವನಿಂದಲೇ ವಿಸ್ತಾರಗೊಂಡಿವೆ.**

## ಭಾವಾರ್ಥ

ಅಶ್ವತ್ಥ ವೃಕ್ಷದ ನಿಜವಾದ ರೂಪವನ್ನು ಈ ಐಹಿಕ ಜಗತ್ತಿನಲ್ಲಿ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಬೇರು ಮೇಲುಗಡೆ ಇರುವುದರಿಂದ ನಿಜವಾದ ವೃಕ್ಷದ ವಿಸ್ತರಣೆ ಇನ್ನೊಂದು ಕೊನೆಯಲ್ಲಿದೆ. ವೃಕ್ಷದ ಐಹಿಕ ವಿಸ್ತರಣೆಯಲ್ಲಿ ಸಿಕ್ಕಿಕೊಂಡ ಮನುಷ್ಯನು ಮರವು ಎಷ್ಟು ದೂರ ಹೋಗುತ್ತದೆ ಎನ್ನುವುದನ್ನಾಗಲೀ, ಈ ಮರದ ಪ್ರಾರಂಭವನ್ನಾಗಲೀ ಕಾಣಲಾರ. ಆದರೂ ಮನುಷ್ಯನು ಕಾರಣವನ್ನು ಹುಡುಕಬೇಕಾಗಿದೆ. 'ನಾನು ನನ್ನ ತಂದೆಯ ಮಗ. ನನ್ನ ತಂದೆ ಇಂತಹವರ ಮಗ ಇತ್ಯಾದಿ'. ಹೀಗೆ ಹುಡುಕಿಕೊಂಡು ಹೋದರೆ ಬ್ರಹ್ಮನನ್ನು ತಲಪುತ್ತೇವೆ. ಅವನನ್ನು ಗರ್ಭೋದಕಶಾಯಿ ವಿಷ್ಣುವು ಸೃಷ್ಟಿಸಿದನು. ಈ ರೀತಿಯಲ್ಲಿ ಕಡೆಗೆ ದೇವೋತ್ತಮ ಪರಮ ಪುರುಷನನ್ನು ತಲಪಿದಾಗ ಸಂಶೋಧನೆಯ ಕೆಲಸ ಮುಗಿಯುತ್ತದೆ. ಈ ಮರದ ಮೂಲ ಎಂದರೆ ದೇವೋತ್ತಮ ಪರಮ ಪುರುಷನನ್ನು ಅವನ ಜ್ಞಾನವಿರುವ ಭಕ್ತರ ಸಹವಾಸದ ಮೂಲಕ ಹುಡುಕಬೇಕಾಗುತ್ತದೆ. ಆ ತಿಳುವಳಿಕೆಯಿಂದ ಮನುಷ್ಯನು ಕ್ರಮೇಣ ವಾಸ್ತವತೆಯ ಈ ಮಿಥ್ಯಾ ಪ್ರತಿಬಿಂಬದಿಂದ ಬೇರೆಯಾಗುತ್ತಾನೆ. ಜ್ಞಾನವನ್ನು ಪಡೆದು, ಸಂಬಂಧವನ್ನು ಕತ್ತರಿಸಿ ಹಾಕಿ ನಿಜವಾದ ಮರದಲ್ಲಿ ವಾಸ್ತವವಾಗಿ ನೆಲೆಯನ್ನು ಪಡೆಯುತ್ತಾನೆ.

ಈ ಸಂಬಂಧದಲ್ಲಿ ಅಸಙ್ಗ ಎನ್ನುವ ಪದವು ಬಹು ಮುಖ್ಯವಾದದ್ದು. ಏಕೆಂದರೆ ಜೀವಿಗೆ ಇಂದ್ರಿಯ ಸುಖದಲ್ಲಿ ಮತ್ತು ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸುವುದರಲ್ಲಿ ಆಸಕ್ತಿ ಬಹಳ ಬಲವಾಗಿರುತ್ತದೆ. ಆದುದರಿಂದ ಅಧಿಕಾರಯುತ ಧರ್ಮಗ್ರಂಥಗಳ ಆಧಾರದ ಮೇಲೆ ಆಧ್ಯಾತ್ಮಿಕ ವಿಜ್ಞಾನದ ಚರ್ಚೆಯಿಂದ ಮನುಷ್ಯನು ಅನಾಸಕ್ತಿಯನ್ನು ಕಲಿಯಬೇಕು. ನಿಜವಾಗಿ

ಜ್ಞಾನವಿರುವವರಿಂದ ಕೇಳಿ ತಿಳಿಯಬೇಕು. ಭಕ್ತರ ಸಹವಾಸದಲ್ಲಿ ನಡೆಯುವ ಇಂತಹ ಚರ್ಚೆಯಿಂದ ಮನುಷ್ಯನು ದೇವೋತ್ತಮ ಪರಮ ಪುರುಷನ ಬಳಿಗೆ ಬರುತ್ತಾನೆ. ಅನಂತರ ಮನುಷ್ಯನು ಮಾಡಬೇಕಾದ ಮೊದಲ ಕೆಲಸ ಅವನಿಗೆ ಶರಣಾಗುವುದು. ಮನುಷ್ಯನು ಒಮ್ಮೆ ಹೋದರೆ ಮತ್ತೆ ಈ ಮಿಥ್ಯಾಪ್ರತಿಬಿಂಬದ ಮರಕ್ಕೆ ಹಿಂದಿರುಗದೇ ಇರುವಂತಹ ಸ್ಥಳವಿದೆ. ಅದರ ವರ್ಣನೆಯನ್ನು ಇಲ್ಲಿ ಕೊಟ್ಟಿದೆ. ಪ್ರತಿಯೊಂದು ವಸ್ತು ಯಾವ ಮೂಲ ಬೇರಿನಿಂದ ಮೂಡಿಬಂದಿದೆಯೋ ಆ ಮೂಲ ಬೇರು ದೇವೋತ್ತಮ ಪರಮ ಪುರುಷನಾದ ಕೃಷ್ಣ. ಆ ದೇವೋತ್ತಮ ಪುರುಷನ ಅನುಗ್ರಹವನ್ನು ಪಡೆಯಲು ಮನುಷ್ಯನು ಶರಣಾದರೆ ಸಾಕು. ಇದು ಶ್ರವಣ, ಕೀರ್ತನ ಮುಂತಾದವುಗಳಿಂದ ಭಕ್ತಿಸೇವೆಯನ್ನು ಮಾಡುವುದರ ಫಲ. ಈ ಐಹಿಕ ಜಗತ್ತಿನ ವಿಸ್ತರಣೆಗೆ ಅವನೇ ಕಾರಣ. ಪ್ರಭುವೇ ಇದನ್ನು ವಿವರಿಸಿದ್ದಾನೆ — **ಅಹಂ ಸರ್ವಸ್ಯ ಪ್ರಭವಃ** — 'ನಾನು ಎಲ್ಲದರ ಮೂಲ'. ಆದುದರಿಂದ ಐಹಿಕ ಬದುಕಿನ ಈ ಬಲವಾದ ಅಶ್ವತ್ಥ ವೃಕ್ಷದ ತೊಡಕಿನಿಂದ ತಪ್ಪಿಸಿಕೊಳ್ಳಬೇಕಾದರೆ ಮನುಷ್ಯನು ಕೃಷ್ಣನಿಗೆ ಶರಣಾಗತನಾಗಬೇಕು. ಕೃಷ್ಣನಿಗೆ ಶರಣಾಗುತ್ತಲೇ ಮನುಷ್ಯನು ತಾನಾಗಿಯೇ ಈ ಐಹಿಕ ವಿಸ್ತರಣೆಯಿಂದ ದೂರಾಗುತ್ತಾನೆ.

## ಶ್ಲೋಕ - 5

**ನಿರ್ಮಾನಮೋಹಾ ಜಿತಸಙ್ಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್**
**ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥೫॥**

**ನಿಃ ಮಾನ ಮೋಹಾಃ**—ಮಿಥ್ಯಾಹಂಕಾರ ಮತ್ತು ಭ್ರಾಂತಿಗಳಿಲ್ಲದ; **ಜಿತ ಸಙ್ಗ ದೋಷಾಃ**—ಸಹವಾಸದ ದೋಷಗಳನ್ನು ಗೆದ್ದ; **ಅಧ್ಯಾತ್ಮ**—ಅಧ್ಯಾತ್ಮ ಜ್ಞಾನದಲ್ಲಿ; **ನಿತ್ಯಾಃ**—ಶಾಶ್ವತರಾದ; **ವಿನಿವೃತ್ತ ಕಾಮಾಃ**—ಕಾಮದ ಸಂಗವಿಲ್ಲದ; **ದ್ವನ್ದ್ವೈಃ**—ದ್ವಂದ್ವಗಳಿಂದ; **ವಿಮುಕ್ತಾಃ**—ಮುಕ್ತರಾದ; **ಸುಖ ದುಃಖ**—ಸುಖ ದುಃಖ; **ಸಂಜ್ಞೈಃ**—ಎಂಬ; **ಗಚ್ಛನ್ತಿ**—ಹೊಂದುತ್ತಾರೆ; **ಅಮೂಢಾಃ**—ದಿಗ್ಭ್ರಮೆಗೊಳ್ಳದವರು; **ಪದಮ್**—ಸ್ಥಿತಿಯನ್ನು; **ಅವ್ಯಯಮ್**—ಶಾಶ್ವತವಾದ; **ತತ್**—ಆ.

## ಅನುವಾದ

**ಸುಳ್ಳು ಪ್ರತಿಷ್ಠೆಯಿಂದ, ಮೋಹದಿಂದ ಮತ್ತು ಸುಳ್ಳು ಸಂಗದಿಂದ ಮುಕ್ತರಾದವರು, ನಿತ್ಯವಾದುದನ್ನು ಅರಿತವರು, ಐಹಿಕ ಕಾಮವನ್ನು ತ್ಯಜಿಸಿದವರು, ಸುಖ ದುಃಖಗಳ ದ್ವಂದ್ವದಿಂದ ಬಿಡುಗಡೆಯಾದವರು ಮತ್ತು ಗೊಂದಲವಿಲ್ಲದೆ ಆ ಪರಮ ಪುರುಷನಿಗೆ ಶರಣಾಗುವುದು ಹೇಗೆ ಎನ್ನುವುದನ್ನು ತಿಳಿದವರು ಇಂತಹವರು ಆ ಶಾಶ್ವತವಾದ ರಾಜ್ಯವನ್ನು ಪಡೆಯುವರು.**

## ಭಾವಾರ್ಥ

ಶರಣಾಗತಿಯ ಪ್ರಕ್ರಿಯೆಯನ್ನು ಇಲ್ಲಿ ತುಂಬ ಚೆನ್ನಾಗಿ ವರ್ಣಿಸಿದೆ. ಮೊದಲನೆಯ ಅರ್ಹತೆಯೆಂದರೆ ಮನುಷ್ಯನು ಗರ್ವದಿಂದ ಭ್ರಾಂತನಾಗಬಾರದು. ತಾನೇ ಐಹಿಕ ಪ್ರಕೃತಿಯ ಪ್ರಭು ಎಂದುಕೊಂಡ ಬದ್ಧ ಆತ್ಮನು ಜಂಭದಿಂದ ಬೀಗುತ್ತಾನೆ; ಆದುದರಿಂದ ದೇವೋತ್ತಮ

ಪರಮ ಪುರುಷನಿಗೆ ಶರಣಾಗುವುದು ಆತನಿಗೆ ಕಷ್ಟ. ನಿಜವಾದ ಜ್ಞಾನವನ್ನು ಬೆಳೆಸಿಕೊಂಡು ಮನುಷ್ಯನು ತಾನು ಐಹಿಕ ಪ್ರಕೃತಿಯ ಪ್ರಭುವಲ್ಲ, ದೇವೋತ್ತಮ ಪರಮ ಪುರುಷನೇ ಪ್ರಭು ಎಂದು ತಿಳಿಯಬೇಕು. ಗರ್ವದಿಂದ ಬರುವ ಭ್ರಮೆಯಿಂದ ಮನುಷ್ಯನು ಮುಕ್ತನಾದಾಗ ಅವನು ಶರಣಾಗತಿಯ ಪ್ರಕ್ರಿಯೆಯನ್ನು ಪ್ರಾರಂಭಿಸಬಹುದು. ಈ ಐಹಿಕ ಪ್ರಪಂಚದಲ್ಲಿ ಯಾವುದಾದರೂ ಗೌರವವನ್ನು ಸದಾ ನಿರೀಕ್ಷಿಸುತ್ತಿರುವ ಮನುಷ್ಯನು ಪರಮ ಪುರುಷನಿಗೆ ಶರಣಾಗತನಾಗಲಾರ. ಅಹಂಕಾರದ ಕಾರಣ ಮಾಯೆ. ಮನುಷ್ಯನಿಗೆ ತಾನು ಈ ಜಗತ್ತಿನ ಪ್ರಭು ಎನ್ನುವ ಮೂರ್ಖಭಾವನೆ ಇರುತ್ತದೆ. ಹೀಗೆ ಅವನು ಎಲ್ಲ ವಿಷಯಗಳನ್ನು ಜಟಿಲಗೊಳಿಸುತ್ತಾನೆ ಮತ್ತು ಯಾವಾಗಲೂ ಕಷ್ಟದಲ್ಲಿರುತ್ತಾನೆ. ಇಡೀ ಪ್ರಪಂಚವು ಈ ಭಾವನೆಯಲ್ಲಿಯೇ ಮುಂದುವರಿಯುತ್ತದೆ. ಈ ಭೂಮಿಯು ಮಾನವ ಸಮಾಜಕ್ಕೆ ಸೇರಿದ್ದು ಎಂದು ಜನರು ಭಾವಿಸುತ್ತಾರೆ. ತಾವು ಭೂಮಿಯ ಒಡೆಯರು ಎನ್ನುವ ಸುಳ್ಳುಭಾವನೆಯಿಂದ ಅದನ್ನು ಹಂಚಿಕೊಂಡಿದ್ದಾರೆ. ಮಾನವ ಸಮಾಜವೇ ಈ ಪ್ರಪಂಚದ ಒಡೆಯ ಎನ್ನುವ ಸುಳ್ಳು ಭಾವನೆಯಿಂದ ಮನುಷ್ಯನು ಹೊರಬರಬೇಕು. ಮನುಷ್ಯನು ಇಂತಹ ಸುಳ್ಳುಭಾವನೆಯಿಂದ ಬಿಡುಗಡೆ ಹೊಂದಿದಾಗ ಕೌಟುಂಬಿಕ, ಸಾಮಾಜಿಕ ಮತ್ತು ರಾಷ್ಟ್ರೀಯ ಅಭಿಮಾನಗಳಿಂದ ಮೂಡಿದ ಎಲ್ಲ ಸುಳ್ಳು ಸಹಯೋಗಗಳಿಂದಲೂ ಅವನು ಬಿಡುಗಡೆಯಾಗುತ್ತಾನೆ. ಈ ತಪ್ಪು ಸಹಯೋಗಗಳು ಮನುಷ್ಯನನ್ನು ಈ ಐಹಿಕ ಜಗತ್ತಿಗೆ ಬಂಧಿಸುತ್ತವೆ. ಈ ಹಂತದ ಅನಂತರ ಮನುಷ್ಯನು ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳಬೇಕು. ವಾಸ್ತವವಾಗಿ ಯಾವುದು ತನ್ನದು; ಯಾವುದು ತನ್ನದಲ್ಲ ಎನ್ನುವ ಅರಿವನ್ನು ಬೆಳೆಸಿಕೊಳ್ಳಬೇಕು. ವಿಷಯಗಳನ್ನು ಯಥಾರ್ಥವಾಗಿ ಇರುವಂತೆ ತಿಳಿದುಕೊಂಡಾಗ ಅವನು ಸುಖ ದುಃಖ, ಸಂತೋಷ ನೋವು ಇಂತಹ ದ್ವಂದ್ವ ಪರಿಕಲ್ಪನೆಗಳಿಂದ ಮುಕ್ತನಾಗುತ್ತಾನೆ. ಅವನ ಜ್ಞಾನ ಪರಿಪೂರ್ಣವಾಗುತ್ತದೆ. ಆಗ ದೇವೋತ್ತಮ ಪರಮ ಪುರುಷನಿಗೆ ಶರಣಾಗುವುದು ಅವನಿಗೆ ಸಾಧ್ಯವಾಗುತ್ತದೆ.

## ಶ್ಲೋಕ - 6

**ನ ತದ್ ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ |**
**ಯದ್ ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ||೬||**

**ನ**—ಇಲ್ಲ; **ತತ್**—ಅದು; **ಭಾಸಯತೇ**—ಪ್ರಕಾಶಿಸುತ್ತದೆ; **ಸೂರ್ಯಃ**—ಸೂರ್ಯನು; **ನ**—ಇಲ್ಲ; **ಶಶಾನ್ಕಃ**—ಚಂದ್ರನು; **ನ**—ಇಲ್ಲ; **ಪಾವಕಃ**—ಅಗ್ನಿಯು, ವಿದ್ಯುಚ್ಛಕ್ತಿಯು; **ಯತ್**—ಎಲ್ಲಿ; **ಗತ್ವಾ**—ಹೋಗಿ; **ನ ನಿವರ್ತನ್ತೇ**—ಹಿಂದಿರುಗುವುದಿಲ್ಲವೋ; **ತತ್ ಧಾಮ**—ಆ ಧಾಮವು; **ಪರಮಮ್**—ಪರಮ; **ಮಮ**—ನನ್ನದು.

## ಅನುವಾದ

**ನನ್ನ ಆ ಪರಮಧಾಮವನ್ನು ಸೂರ್ಯ ಚಂದ್ರರಾಗಲೀ, ಅಗ್ನಿ ವಿದ್ಯುಚ್ಛಕ್ತಿಗಳಾಗಲೀ ಬೆಳಗುವುದಿಲ್ಲ. ಅದನ್ನು ತಲಪಿದವರು ಈ ಐಹಿಕ ಜಗತ್ತಿಗೆ ಮತ್ತೆ ಬರುವುದೇ ಇಲ್ಲ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನ ನಿವಾಸವಾದ ಆಧ್ಯಾತ್ಮಿಕ ಜಗತ್ತಿಗೆ ಕೃಷ್ಣಲೋಕ, ಗೋಲೋಕ ವೃಂದಾವನ ಎಂದು ಹೆಸರು. ಅದನ್ನು ಇಲ್ಲಿ ವರ್ಣಿಸಿದೆ. ಆಧ್ಯಾತ್ಮಿಕ ಗಗನದಲ್ಲಿ ಸೂರ್ಯನ ಬೆಳಕು, ಬೆಳದಿಂಗಳು, ಅಗ್ನಿ ಅಥವಾ ವಿದ್ಯುಚ್ಛಕ್ತಿ ಯಾವುದೂ ಅಗತ್ಯವಿಲ್ಲ. ಏಕೆಂದರೆ ಎಲ್ಲ ಲೋಕಗಳೂ ಸ್ವಯಂ ಪ್ರಭೆಯಿಂದ ಬೆಳಗುತ್ತವೆ. ಈ ವಿಶ್ವದಲ್ಲಿ ಸ್ವಯಂಪ್ರಭೆಯಿರುವ ಲೋಕ ಒಂದೇ ಒಂದು, ಅದು ಸೂರ್ಯ. ಆದರೆ ಆಧ್ಯಾತ್ಮಿಕ ಗಗನದಲ್ಲಿ ಎಲ್ಲ ಲೋಕಗಳಿಗೂ ಸ್ವಯಂಪ್ರಭೆಯುಂಟು. ವೈಕುಂಠಲೋಕಗಳೆಂದು ಕರೆಯಲಾಗಿರುವ ಲೋಕಗಳ ಬೆಳಗುವ ಕಾಂತಿಯೇ ಬ್ರಹ್ಮಜ್ಯೋತಿಯಂತೆ ಪ್ರಕಾಶಿಸುವ ಆಕಾಶವಾಗಿದೆ. ವಾಸ್ತವವಾಗಿ ಪ್ರಭೆಯು ಕೃಷ್ಣನ ಲೋಕವಾದ ಗೋಲೋಕ ವೃಂದಾವನದಿಂದ ಮೂಡಿ ಬರುತ್ತದೆ. **ಮಹತ್ ತತ್ತ್ವ**ವು ಎಂದರೆ ಐಹಿಕ ಜಗತ್ತು ಆ ಮಹಾಪ್ರಭೆಯನ್ನು ಮುಚ್ಚಿಬಿಡುತ್ತದೆ. ಇದನ್ನು ಬಿಟ್ಟರೆ ಬೆಳಗುವ ಆಕಾಶದ ಬಹುಭಾಗ ಆಧ್ಯಾತ್ಮಿಕ ಲೋಕಗಳಿಂದ ತುಂಬಿರುತ್ತದೆ. ಈ ಲೋಕಗಳಿಗೆ ವೈಕುಂಠಗಳೆಂದು ಹೆಸರು. ಅವುಗಳಲ್ಲಿ ಮುಖ್ಯವಾದದ್ದು ಗೋಲೋಕ ವೃಂದಾವನ.

ಜೀವಿಯು ಈ ಕತ್ತಲು ಮುಸುಕಿದ ಐಹಿಕ ಜಗತ್ತಿನಲ್ಲಿ ಇರುವಷ್ಟು ಕಾಲವೂ ಬದ್ಧಜೀವನದಲ್ಲಿರುತ್ತಾನೆ. ಈ ಐಹಿಕ ಜಗತ್ತಿನ ಮಿಥ್ಯವಾದ, ವಕ್ರವಾದ ಮರದ ಮೂಲಕ ಕತ್ತರಿಸಿಕೊಂಡು ಆಧ್ಯಾತ್ಮಿಕ ಗಗನವನ್ನು ತಲಪುತ್ತಲೇ ಆತನು ಮುಕ್ತನಾಗುತ್ತಾನೆ. ಆಗ ಅವನು ಮತ್ತೆ ಇಲ್ಲಿಗೆ ಬರುವ ಸಂಭವವೇ ಇಲ್ಲ. ತನ್ನ ಬದ್ಧಜೀವನದಲ್ಲಿ ಜೀವಿಯು ತಾನೇ ಈ ಐಹಿಕ ಜಗತ್ತಿನ ಪ್ರಭು ಎಂದು ಭಾವಿಸುತ್ತಾನೆ. ಆದರೆ ಮುಕ್ತ ಸ್ಥಿತಿಯಲ್ಲಿ ಅವನು ಆಧ್ಯಾತ್ಮಿಕ ಲೋಕವನ್ನು ಪ್ರವೇಶಿಸಿ ಪರಮ ಪ್ರಭುವಿನ ಸಂಗಾತಿಯಾಗುತ್ತಾನೆ. ಆಗ ಅವನು ನಿತ್ಯ ಜ್ಞಾನಾನಂದ ಬದುಕನ್ನು ಸವಿಯುತ್ತಾನೆ.

ಈ ವಿಷಯವು ಮನುಷ್ಯನನ್ನು ಆಕರ್ಷಿಸಬೇಕು. ಆತನು ಆ ನಿತ್ಯ ಜಗತ್ತಿಗೆ ಸಾಗಿಹೋಗಿ ವಾಸ್ತವಿಕತೆಯ ಈ ಮಿಥ್ಯಾ ಪ್ರತಿಬಿಂಬದಿಂದ ಬಿಡುಗಡೆ ಹೊಂದಲು ಬಯಸಬೇಕು. ಈ ಜಗತ್ತಿನಲ್ಲಿ ಅತ್ಯಾಸಕ್ತಿ ಇರುವವನಿಗೆ ಆ ಮೋಹವನ್ನು ಕತ್ತರಿಸುವುದು ಕಷ್ಟ. ಆದರೆ ಅವನು ಭಕ್ತರ ಸಹವಾಸದಲ್ಲಿ, ಕೃಷ್ಣಪ್ರಜ್ಞೆಯನ್ನು ಅನುಸರಿಸಿದರೆ ಕ್ರಮೇಣ ಅನಾಸಕ್ತನಾಗುವ ಸಾಧ್ಯತೆಯುಂಟು. ಅದಕ್ಕಾಗಿ ಅವನು ಕೃಷ್ಣಪ್ರಜ್ಞೆಯಲ್ಲಿರುವವರ ಸಹವಾಸವನ್ನು ಮಾಡಬೇಕು. ಕೃಷ್ಣಪ್ರಜ್ಞೆಗೆ ಮುಡಿಪಾದ ಸಮಾಜವನ್ನು ಹುಡುಕಿಕೊಂಡು ಹೋಗಬೇಕು. ಭಕ್ತಿಸೇವೆಯನ್ನು ಮಾಡುವುದು ಹೇಗೆ ಎಂದು ಕಲಿತುಕೊಳ್ಳಬೇಕು. ಈ ರೀತಿಯಲ್ಲಿ ಅವನು ಐಹಿಕ ಜಗತ್ತಿನ ಮೋಹವನ್ನು ಕತ್ತರಿಸಿಹಾಕಬಹುದು. ಕಾವಿಯ ಬಟ್ಟೆಯನ್ನು ಧರಿಸಿದ ಮಾತ್ರದಿಂದಲೇ ಐಹಿಕ ಜಗತ್ತಿನ ಆಕರ್ಷಣೆಯಿಂದ ಬಿಡುಗಡೆಯಾಗುವುದಿಲ್ಲ. ಅ ವನು ಪ್ರಭುವಿನ ಭಕ್ತಿಸೇವೆಯಲ್ಲಿ ಆಸಕ್ತಿಯನ್ನು ಪಡೆಯಬೇಕು. ಆದುದರಿಂದ ಹನ್ನೆರಡನೆಯ ಅಧ್ಯಾಯದಲ್ಲಿ ವರ್ಣಿಸಿರುವ ಭಕ್ತಿಸೇವೆಯೊಂದೇ ನಿಜವಾದ ವೃಕ್ಷದ ಮಿಥ್ಯಾಪ್ರತಿಬಿಂಬದಿಂದ ಬಿಡುಗಡೆಹೊಂದುವ ಮಾರ್ಗ; ಇದನ್ನು ಮನುಷ್ಯನು ಗಂಭೀರವಾಗಿ ತೆಗೆದುಕೊಳ್ಳಬೇಕು. ಎಲ್ಲ ಬಗೆಯ ಪ್ರಕ್ರಿಯೆಗಳು ಐಹಿಕ ಪ್ರಕೃತಿಯಿಂದ ಕಲ್ಮಷವಾಗುವುದನ್ನು ಹದಿನಾಲ್ಕನೆಯ ಅಧ್ಯಾಯದಲ್ಲಿ ವರ್ಣಿಸಿದೆ. ಭಕ್ತಿಸೇವೆಯೊಂದೇ ಪರಿಶುದ್ಧವಾಗಿ ಆಧ್ಯಾತ್ಮಿಕವಾದದ್ದು ಎಂದು ವರ್ಣಿಸಿದೆ.

ಇಲ್ಲಿ **ಪರಮಂ ಮಮ** ಎನ್ನುವ ಮಾತುಗಳು ಮುಖ್ಯವಾದವು. ವಾಸ್ತವವಾಗಿ ಮೂಲೆ ಮೂಲೆಯೂ ಪ್ರಭುವಿನ ಸ್ವತ್ತು. ಆದರೆ ಆಧ್ಯಾತ್ಮಿಕ ಜಗತ್ತು **ಪರಮಮ್,** ಆರು ಸಿರಿಗಳಿಂದ ತುಂಬಿದ್ದು. ಆಧ್ಯಾತ್ಮಿಕ ಜಗತ್ತಿನಲ್ಲಿ ಸೂರ್ಯನ ಬೆಳಕು, ಚಂದ್ರನ ಬೆಳಕು ಅಥವಾ ನಕ್ಷತ್ರಗಳ ಅಗತ್ಯವಿಲ್ಲ ಎನ್ನುವುದನ್ನು ಕಠ ಉಪನಿಷತ್ (2.2.15) ದೃಢಪಡಿಸುತ್ತದೆ — **(ನ ತತ್ರ ಸೂರ್ಯೋ ಭಾತಿ ನ ಚನ್ದ್ರ ತಾರಕಮ್);** ಇಡೀ ಆಧ್ಯಾತ್ಮಿಕ ಜಗತ್ತನ್ನು ಪರಮ ಪ್ರಭುವಿನ ಅಂತರಂಗ ಶಕ್ತಿಯು ಬೆಳಗುತ್ತದೆ. ಶರಣಾಗತಿಯಿಂದ ಮಾತ್ರ ಆ ಪರಮ ಧಾಮವನ್ನು ಪಡೆಯಲು ಸಾಧ್ಯ. ಬೇರಾವ ರೀತಿಯಿಂದಲೂ ಸಾಧ್ಯವಿಲ್ಲ.

## ಶ್ಲೋಕ - 7

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥೭॥**

**ಮಮ**—ನನ್ನ; **ಏವ**—ಖಂಡಿತವಾಗಿಯೂ; **ಅಂಶಃ**—ಅವಶಿಷ್ಟ ಕಣವಾದ; **ಜೀವಲೋಕೇ**—ಬದ್ಧಜೀವನದ ಜಗತ್ತಿನಲ್ಲಿ; **ಜೀವ ಭೂತಃ**—ಬದ್ಧ ಜೀವಿಯು; **ಸನಾತನಃ**—ಶಾಶ್ವತನಾದ; **ಮನಃ**—ಮನಸ್ಸಿನೊಂದಿಗೆ; **ಷಷ್ಠಾನಿ**—ಆರು; **ಇನ್ದ್ರಿಯಾಣಿ**—ಇಂದ್ರಿಯಗಳನ್ನು; **ಪ್ರಕೃತಿ**—ಭೌತಿಕ ಪ್ರಕೃತಿಯಲ್ಲಿ; **ಸ್ಥಾನಿ**—ನೆಲೆಸಿ; **ಕರ್ಷತಿ**—ಕಠಿಣವಾಗಿ ಹೋರಾಡುತ್ತಾನೆ.

## ಅನುವಾದ

**ಈ ಬದ್ಧಜಗತ್ತಿನಲ್ಲಿರುವ ಜೀವಿಗಳು ನನ್ನ ನಿತ್ಯವಾದ ಸಣ್ಣ ಸಣ್ಣ ಭಾಗಗಳು. ಬದ್ಧಜೀವನದಿಂದಾಗಿ ಅವರು ಮನಸ್ಸು ಸೇರಿದಂತೆ ಆರು ಇಂದ್ರಿಯಗಳೊಡನೆ ಬಹುವಾಗಿ ಕಷ್ಟಪಡುತ್ತಾರೆ.**

## ಭಾವಾರ್ಥ

ಈ ಶ್ಲೋಕದಲ್ಲಿ ಜೀವಿಯ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ಹೇಳಿದೆ. ಜೀವಿಯು ಎಂದೆಂದೂ ಪ್ರಭುವಿನ ವಿಭಿನ್ನಾಂಶವಾದ ಸಣ್ಣ ಭಾಗ. ತನ್ನ ಬದ್ಧಜೀವನದಲ್ಲಿ ಅವನು ವ್ಯಕ್ತಿತ್ವವನ್ನು ಪಡೆಯುತ್ತಾನೆ ಮತ್ತು ಮುಕ್ತ ಸ್ಥಿತಿಯಲ್ಲಿ ಪರಮ ಪ್ರಭುವಿನೊಡನೆ ಒಂದಾಗುತ್ತಾನೆ ಎಂದಲ್ಲ. ಅವನು ನಿರಂತರವಾಗಿ ಬೇರೆಯಾದವನು. ಸನಾತನಃ ಎಂದು ಸ್ಪಷ್ಟವಾಗಿ ಹೇಳಿದೆ. ವೇದದ ಪ್ರಕಾರ ಪರಮ ಪ್ರಭುವು ಅಸಂಖ್ಯಾತ ವಿಸ್ತರಣಗಳಲ್ಲಿ ಪ್ರಕಟವಾಗುತ್ತಾನೆ ಮತ್ತು ವಿಸ್ತಾರಗೊಳ್ಳುತ್ತಾನೆ; ಇವುಗಳಲ್ಲಿ ಪ್ರಮುಖ ವಿಸ್ತರಣಗಳಿಗೆ **ವಿಷ್ಣುತತ್ತ್ವ** ಎಂದು ಹೆಸರು. ಎರಡನೆಯ ಮಹತ್ವದ ವಿಸ್ತರಣಗಳಿಗೆ ಜೀವಿಗಳು ಎಂದು ಹೆಸರು. ತನ್ನ ವೈಯಕ್ತಿಕ ವಿಸ್ತರಣೆಯಿಂದ ಆತನು ರಾಮ, ನರಸಿಂಹ ದೇವ, ವಿಷ್ಣುಮೂರ್ತಿ ಮೊದಲಾದ ರೂಪಗಳಲ್ಲಿ ಮತ್ತು ವೈಕುಂಠ ಲೋಕಗಳ ಪ್ರಮುಖ ದೇವತೆಗಳಲ್ಲಿ ಪ್ರಕಟವಾಗುತ್ತಾನೆ. ಬೇರೆಯಾದ ವಿಸ್ತರಣಗಳು, ಎಂದರೆ ಜೀವಿಗಳು, ನಿತ್ಯ ಸೇವಕರು. ದೇವೋತ್ತಮ ಪರಮ ಪುರುಷನ ವೈಯಕ್ತಿಕ ವಿಸ್ತರಣೆಗಳಾದ ದೇವೋತ್ತಮನ ಪ್ರತ್ಯೇಕ ವ್ಯಕ್ತಿತ್ವಗಳು ಎಂದೆಂದೂ ಇರುತ್ತಾರೆ. ಹೀಗೆಯೇ ಬೇರೆಯಾದ ವಿಸ್ತರಣೆಗಳಾದ ಜೀವಿಗಳಿಗೂ ವ್ಯಕ್ತಿತ್ವಗಳಿವೆ. ಜೀವಿಗಳು ಪರಮ ಪ್ರಭುವಿನಿಂದ ಬೇರೆಯಾದ

ವಿಭಿನ್ನಾಂಶಗಳು. ಅವುಗಳಿಗೂ ಅವನ ಗುಣಗಳ ಸ್ವಲ್ಪ ಭಾಗಗಳಿವೆ. ಅವುಗಳಲ್ಲಿ ಸ್ವಾತಂತ್ರ್ಯವು ಒಂದು. ಆ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಂಡು ಮನುಷ್ಯನು ಬದ್ಧ ಜೀವಿಯಾಗುತ್ತಾನೆ; ಸ್ವಾತಂತ್ರ್ಯದ ಸದುಪಯೋಗದಿಂದ ಅವನಿಗೆ ಯಾವಾಗಲೂ ಮುಕ್ತಿಯು ದೊರೆಯುತ್ತದೆ. ಎರಡರಲ್ಲಿ ಯಾವುದೇ ಆಗಲಿ, ಅವನು ಪರಮ ಪ್ರಭುವಿನಂತೆಯೇ ನಿತ್ಯನು. ಮುಕ್ತ ಸ್ಥಿತಿಯಲ್ಲಿ ಅವನು ಐಹಿಕ ಸ್ಥಿತಿಯಿಂದ ಬಿಡುಗಡೆ ಹೊಂದುತ್ತಾನೆ; ಅವನು ಪ್ರಭುವಿನ ದಿವ್ಯಸೇವೆಗೆ ಮುಡಿಪಾದವನು; ಅವನ ಬದ್ಧಸ್ಥಿತಿಯಲ್ಲಿ ಪ್ರಕೃತಿಯ ಐಹಿಕ ಗುಣಗಳು ಅವನ ಮೇಲೆ ಪ್ರಭಾವವನ್ನು ಬೀರುತ್ತವೆ. ಅವನು ಭಗವಂತನ ಪ್ರೇಮಪೂರ್ವಕ ಸೇವೆಯನ್ನು ಮರೆಯುತ್ತಾನೆ. ಪರಿಣಾಮವಾಗಿ ಅವನು ಐಹಿಕ ಜಗತ್ತಿನಲ್ಲಿ ಅಸ್ತಿತ್ವವನ್ನು ಉಳಿಸಿಕೊಳ್ಳಲು ಬಹಳ ಕಷ್ಟ ಪಡಬೇಕಾಗುತ್ತದೆ.

ಜೀವಿಗಳು ಪರಮ ಪ್ರಭುವಿನ ವಿಭಿನ್ನಾಂಶಗಳು; ಮನುಷ್ಯರು, ಬೆಕ್ಕುಗಳು, ನಾಯಿಗಳು ಮಾತ್ರವಲ್ಲ, ಐಹಿಕ ಜಗತ್ತಿನ ಮಹಾನ್ ನಿಯಂತ್ರಕರಾದ ಬ್ರಹ್ಮ, ಶಿವ ಮತ್ತು ವಿಷ್ಣುವು ಸಹ ಪರಮ ಪ್ರಭುವಿನ ವಿಭಿನ್ನಾಂಶಗಳು. ಅವರೆಲ್ಲ ಶಾಶ್ವತರು; ಅಲ್ಪಕಾಲದ ಅಭಿವ್ಯಕ್ತಿಗಳಲ್ಲ. **ಕರ್ಷತಿ** ('ಶ್ರಮ ಪಡುವುದು' ಅಥವಾ 'ಬಹುವಾಗಿ ಸೆಣಸುವುದು') ಎನ್ನುವ ಪದ ಅರ್ಥವತ್ತಾದದ್ದು. ಬದ್ಧ ಜೀವಿಯು, ಕಬ್ಬಿಣದ ಸರಪಳಿ ತೊಟ್ಟವನಂತೆ, ಬಂಧಿತನಾದವನು. ಅವನನ್ನು ಮಿಥ್ಯಾ ಅಹಂಭಾವವು ಬಂಧಿಸಿದೆ; ಈ ಐಹಿಕ ಅಸ್ತಿತ್ವಕ್ಕೆ ಅವನನ್ನು ತಳ್ಳುತ್ತಿರುವ ಮುಖ್ಯಸಾಧನ ಮನಸ್ಸು. ಮನಸ್ಸು ಸತ್ವಗುಣದಲ್ಲಿದ್ದರೆ ಅವನ ಚಟುವಟಿಕೆಗಳು ಒಳಿತಾಗಿರುತ್ತವೆ. ಮನಸ್ಸು ರಜೋಗುಣದಲ್ಲಿದ್ದರೆ ಅವನ ಚಟುವಟಿಕೆಗಳು ತೊಂದರೆಯನ್ನು ಉಂಟುಮಾಡುವಂತೆ ಇರುತ್ತವೆ. ಮನಸ್ಸು ತಮೋಗುಣದಲ್ಲಿದ್ದರೆ ಅವನು ಕೆಳಗಿನ ಜೀವವರ್ಗಗಳಲ್ಲಿ ಸಂಚರಿಸುತ್ತಾನೆ. ಆದರೆ ಈ ಶ್ಲೋಕದಲ್ಲಿ ಇಷ್ಟು ಸ್ಪಷ್ಟವಾಗಿದೆ — ಐಹಿಕ ಶರೀರವು ಬದ್ಧ ಆತ್ಮನನ್ನು ಮನಸ್ಸು ಮತ್ತು ಇಂದ್ರಿಯಗಳಿಂದ ಮುಚ್ಚುತ್ತದೆ; ಆತನು ಮುಕ್ತನಾದಾಗ ಈ ಐಹಿಕ ಮರೆಯು ನಾಶವಾಗುತ್ತದೆ. ಆದರೆ ಅವನ ಅಧ್ಯಾತ್ಮ ದೇಹವು ತನ್ನ ವೈಯಕ್ತಿಕ ರೂಪದಲ್ಲಿ ಪ್ರಕಟವಾಗುತ್ತದೆ. ಮಾಧ್ಯನ್ದಿನಾಯನಶ್ರುತಿಯಲ್ಲಿ ಹೀಗೆ ಹೇಳಿದೆ — **ಸವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮ್ ಅತಿಸೃಜ್ಯ ಬ್ರಹ್ಮಾಭಿಸಮ್ಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣೈವೇದಂ ಸರ್ವಮ್ ಅನುಭವತಿ.** ಜೀವಿಯು ಈ ಐಹಿಕ ಶರೀರವನ್ನು ತ್ಯಜಿಸಿ ಆಧ್ಯಾತ್ಮಿಕ ಲೋಕವನ್ನು ಪ್ರವೇಶಿಸಿದಾಗ ಅವನು ತನ್ನ ಆಧ್ಯಾತ್ಮಿಕ ಶರೀರವನ್ನು ಮತ್ತೆ ಪಡೆಯುತ್ತಾನೆ. ಜೀವಿಯು ತನ್ನ ಆಧ್ಯಾತ್ಮಿಕ ಶರೀರದಲ್ಲಿ ದೇವೋತ್ತಮ ಪರಮ ಪುರುಷನನ್ನು ತನ್ನ ಕಣ್ಣೆದುರಿಗೇ ಕಾಣಬಲ್ಲ; ಪರಮ ಪ್ರಭುವಿನ ಮಾತನ್ನು ಕೇಳಬಲ್ಲ ಮತ್ತು ಸಮ್ಮುಖದಲ್ಲಿ ಮಾತನಾಡಬಲ್ಲ; ಪರಮ ಪುರುಷನನ್ನು ಅವನಿರುವಂತೆಯೇ ಅರ್ಥಮಾಡಿಕೊಳ್ಳಬಲ್ಲ; ಹೀಗೆಂದು ಇಲ್ಲಿ ಹೇಳಿದೆ. ಸ್ಮೃತಿಯಿಂದ ಇದನ್ನು ತಿಳಿದುಕೊಳ್ಳಬಹುದು. **ವಸನ್ತಿ ಯತ್ರ ಪುರುಷಾಃ ಸರ್ವೇ ವೈಕುಣ್ಠ ಮೂರ್ತಯಃ** — ಆಧ್ಯಾತ್ಮಿಕ ಲೋಕಗಳಲ್ಲಿ ದೇವೋತ್ತಮ ಪರಮ ಪುರುಷನ ಲಕ್ಷಣಗಳಂತೆಯೇ ಲಕ್ಷಣಗಳಿರುವ ದೇಹಗಳಲ್ಲಿ ಪ್ರತಿಯೊಬ್ಬನೂ ವಾಸಿಸುತ್ತಾನೆ. ದೇಹದ ರಚನೆಯ ಮಟ್ಟಿಗೆ ವಿಭಿನ್ನಾಂಶಗಳಾದ ಜೀವಿಗಳಿಗೂ **ವಿಷ್ಣುಮೂರ್ತಿ**ಯ ವಿಸ್ತರಣೆಗಳಿಗೂ ವ್ಯತ್ಯಾಸವಿಲ್ಲ, ಎಂದರೆ ಮುಕ್ತಿ ದೊರೆತಾಗ ದೇವೋತ್ತಮ ಪರಮ ಪುರುಷನ ಕೃಪೆಯಿಂದ ಜೀವಿಯು ಒಂದು ಆಧ್ಯಾತ್ಮಿಕ ಶರೀರವನ್ನು ಪಡೆಯುತ್ತಾನೆ.

**ಮಮೈವಾಂಶಃ** ("ಪರಮ ಪ್ರಭುವಿನ ಸಣ್ಣ ಭಾಗಗಳಾದ ವಿಭಿನ್ನಾಂಶಗಳು") ಎನ್ನುವ ಪದಗಳು ಬಹು ಅರ್ಥವತ್ತಾದವು. ಪರಮ ಪ್ರಭುವಿನ ಸಣ್ಣಭಾಗವು ಯಾವುದಾದರೂ ಐಹಿಕ ಭಾಗದಂತಲ್ಲ. ಆತ್ಮವನ್ನು ತುಂಡುಮಾಡಲು ಸಾಧ್ಯವಿಲ್ಲ ಎನ್ನುವುದನ್ನು ಎರಡನೆಯ ಅಧ್ಯಾಯದಲ್ಲಿ ಆಗಲೇ ತಿಳಿದುಕೊಂಡಿದ್ದೇವೆ. ಈ ಭಾಗವನ್ನು ಭೌತಿಕವಾಗಿ ರೂಪಿಸಿಲ್ಲ. ಅದು ತುಂಡುಗಳನ್ನಾಗಿ ಮಾಡಿ ಮತ್ತೆ ಜೋಡಿಸಲು ಸಾಧ್ಯವಾಗುವ ಜಡವಸ್ತುವಿನಂತಲ್ಲ. ಆ ಪರಿಕಲ್ಪನೆಯು ಇಲ್ಲಿ ಅನ್ವಯಿಸುವುದಿಲ್ಲ. ಏಕೆಂದರೆ ಸನಾತನ (ಶಾಶ್ವತ) ಎನ್ನುವ ಸಂಸ್ಕೃತ ಪದವನ್ನು ಬಳಸಿದೆ. ಸಣ್ಣ ಭಾಗವು ಶಾಶ್ವತ. ಪ್ರತಿಯೊಂದು ಪ್ರತ್ಯೇಕ ದೇಹದಲ್ಲಿಯೂ ಪರಮ ಪ್ರಭುವಿನ ಸಣ್ಣ ಭಾಗವು ಇದೆ **(ದೇಹಿನೋಽಸ್ಮಿನ್ ಯಥಾದೇಹೇ)** ಎಂದು ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಹೇಳಿದೆ. ಆ ಸಣ್ಣ ಭಾಗವು ದೇಹದ ತೊಡಕಿನಿಂದ ಬಿಡುಗಡೆಯಾದಾಗ ಆಧ್ಯಾತ್ಮಿಕ ಗಗನದಲ್ಲಿ ಆಧ್ಯಾತ್ಮಿಕ ಲೋಕದಲ್ಲಿ ತನ್ನ ಮೂಲ ಆಧ್ಯಾತ್ಮಿಕ ದೇಹವನ್ನು ಮತ್ತೆ ಪಡೆಯುತ್ತದೆ; ಅದು ಪರಮ ಪ್ರಭುವಿನ ಸಹವಾಸವನ್ನು ಅನುಭವಿಸುತ್ತದೆ. ಆದರೆ ಚಿನ್ನದ ವಿಭಿನ್ನಾಂಶಗಳು ಸಹ ಚಿನ್ನವೇ ಆಗಿರುವಂತೆ, ಸಣ್ಣ ಭಾಗವು ಪರಮ ಪ್ರಭುವಿನ ವಿಭಿನ್ನಾಂಶವಾಗಿರುವುದರಿಂದ, ಜೀವಿಯು ಗುಣದಲ್ಲಿ ಪ್ರಭುವಿನೊಡನೆ ಒಂದು ಎಂದು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 8

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ |**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿವಾಶಯಾತ್ ||೮||**

**ಶರೀರಮ್**—ದೇಹವನ್ನು; **ಯತ್**—ಹೇಗೆ; **ಅವಾಪ್ನೋತಿ**—ಪಡೆಯುತ್ತಾನೋ; **ಯತ್**—ಹೇಗೆ; **ಚ ಅಪಿ**—ಕೂಡ; **ಉತ್ಕ್ರಾಮತಿ**—ತ್ಯಜಿಸುತ್ತಾನೋ; **ಈಶ್ವರಃ**—ದೇಹದ ಒಡೆಯನು; **ಗೃಹೀತ್ವಾ**—ಸ್ವೀಕರಿಸಿ; **ಏತಾನಿ**—ಇವೆಲ್ಲವನ್ನೂ; **ಸಂಯಾತಿ**—ಹೊರಟು ಹೋಗುತ್ತಾನೆ; **ವಾಯುಃ**—ಗಾಳಿಯು; **ಗಂಧಾನ್**—ವಾಸನೆಗಳನ್ನು; **ಇವ**—ಹಾಗೆ; **ಆಶಯಾತ್**—ಅವುಗಳ ಆಕರದಿಂದ.

## ಅನುವಾದ

**ಗಾಳಿಯು ಗಂಧಗಳನ್ನು ಒಯ್ಯುವಂತೆ ಐಹಿಕ ಜಗತ್ತಿನಲ್ಲಿ ಜೀವಿಯು ತನ್ನ ಜೀವನದ ವಿವಿಧ ಕಲ್ಪನೆಗಳನ್ನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಒಯ್ಯುತ್ತಾನೆ. ಹೀಗೆ ಅವನು ಒಂದು ಬಗೆಯ ದೇಹವನ್ನು ಪಡೆಯುತ್ತಾನೆ. ಮತ್ತೊಂದು ದೇಹವನ್ನು ಪಡೆಯಲು ಮೊದಲಿನ ದೇಹವನ್ನು ಬಿಡುತ್ತಾನೆ.**

## ಭಾವಾರ್ಥ

ಇಲ್ಲಿ ಜೀವಿಯನ್ನು **ಈಶ್ವರ** ಎಂದು ವರ್ಣಿಸಿದೆ. ಹೇಗೆಂದರೆ ತನ್ನ ದೇಹವನ್ನು ನಿಯಂತ್ರಿಸುವವನು ಎಂದರ್ಥ. ಅವನು ಬಯಸಿದಲ್ಲಿ ತನ್ನ ದೇಹವನ್ನು ಉತ್ತಮ ವರ್ಗಕ್ಕೆ ಬದಲಾಯಿಸಬಹುದು; ಅವನು ಬಯಸಿದಲ್ಲಿ ತನ್ನ ಕೆಳಗಿನ ವರ್ಗಕ್ಕೆ ಸಾಗಬಹುದು. ಬಹು

ಅಲ್ಪವಾದ ಸ್ವಾತಂತ್ರ್ಯ ಉಂಟು. ಅವನ ದೇಹಕ್ಕೆ ಆಗುವ ಬದಲಾವಣೆಯು ಅವನನ್ನು ಅವಲಂಬಿಸಿದೆ. ಸಾವಿನ ಸಮಯದಲ್ಲಿ ಅವನು ಸೃಷ್ಟಿಸಿರುವ ಪ್ರಜ್ಞೆಯು ಅವನನ್ನು ಮುಂದಿನ ಬಗೆಯ ದೇಹಕ್ಕೆ ಕೊಂಡೊಯ್ಯುವುದು. ಅವನು ತನ್ನ ಪ್ರಜ್ಞೆಯನ್ನು ಒಂದು ಬೆಕ್ಕಿನ ಅಥವಾ ನಾಯಿಯ ಪ್ರಜ್ಞೆಯಂತೆ ಮಾಡಿದ್ದರೆ ಅವನು ಬೆಕ್ಕು ಅಥವಾ ನಾಯಿಯ ದೇಹವನ್ನು ಪಡೆಯುವುದು ಖಂಡಿತ. ಅವನು ತನ್ನ ಮನಸ್ಸನ್ನು ದೈವೀಗುಣಗಳಲ್ಲಿ ಕೇಂದ್ರೀಕರಿಸಿದ್ದರೆ ಅವನು ದೇವತೆಯ ರೂಪವನ್ನು ಪಡೆಯುತ್ತಾನೆ. ಅವನು ಕೃಷ್ಣಪ್ರಜ್ಞೆಯಲ್ಲಿದ್ದರೆ ಅವನನ್ನು ಕೃಷ್ಣಲೋಕಕ್ಕೆ ವರ್ಗಮಾಡಲಾಗುತ್ತದೆ. ಅವನು ಕೃಷ್ಣನ ಸಂಗಾತಿಯಾಗುತ್ತಾನೆ. ಈ ದೇಹವು ನಾಶವಾದ ಮೇಲೆ ಎಲ್ಲವೂ ಮುಗಿದು ಹೋಗುತ್ತದೆ ಎನ್ನುವುದು ಸುಳ್ಳುವಾದ. ವ್ಯಕ್ತಿಗತ ಆತ್ಮನು ದೇಹದಿಂದ ದೇಹಕ್ಕೆ ಸಾಗುತ್ತಾನೆ ಮತ್ತು ಅವನ ಈಗಿನ ದೇಹವು, ಈಗಿನ ಚಟುವಟಿಕೆಗಳು, ಅವನ ಮುಂದಿನ ದೇಹದ ಹಿನ್ನೆಲೆಯಾಗುತ್ತದೆ. ಕರ್ಮಕ್ಕೆ ಅನುಗುಣವಾಗಿ ಮನುಷ್ಯನಿಗೆ ಬೇರೆ ಶರೀರವು ಬರುತ್ತದೆ. ಕಾಲವು ಕಳೆದಾಗ ಅವನು ಈ ದೇಹವನ್ನು ತ್ಯಜಿಸಬೇಕು. ಮುಂದಿನ ದೇಹದ ಕಲ್ಪನೆಯನ್ನು ಸೂಕ್ಷ್ಮ ಶರೀರವು ಕೊಂಡೊಯ್ಯುತ್ತದೆ. ಮುಂದಿನ ಜನ್ಮದಲ್ಲಿ ಅದು ಇನ್ನೊಂದು ದೇಹವನ್ನು ಪಡೆಯುತ್ತದೆ ಎಂದು ಇಲ್ಲಿ ಹೇಳಿದೆ. ದೇಹದಿಂದ ದೇಹಕ್ಕೆ ಸಾಗಿ ದೇಹದಲ್ಲಿರುವಾಗ ಹೋರಾಡುವುದಕ್ಕೆ **ಕರ್ಷತಿ** ಅಥವಾ ಉಳಿವಿಗಾಗಿ ಹೋರಾಟ ಎಂದು ಹೆಸರು.

## ಶ್ಲೋಕ - 9

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**

**ಶ್ರೋತ್ರಮ್**—ಕಿವಿಗಳನ್ನು; **ಚಕ್ಷುಃ**—ಕಣ್ಣುಗಳನ್ನು; **ಸ್ಪರ್ಶನಮ್**—ಸ್ಪರ್ಶವನ್ನು; **ಚ**—ಕೂಡ; **ರಸನಮ್**—ನಾಲಿಗೆಯನ್ನು; **ಘ್ರಾಣಮ್**—ಘ್ರಾಣಶಕ್ತಿಯನ್ನು; **ಏವ**—ಕೂಡ; **ಚ**—ಮತ್ತು; **ಅಧಿಷ್ಠಾಯ**—ಆಶ್ರಯಿಸಿ; **ಮನಃ**—ಮನಸ್ಸನ್ನೂ; **ಚ**—ಕೂಡ; **ಅಯಮ್**—ಅವನು; **ವಿಷಯಾನ್**—ಇಂದ್ರಿಯ ವಸ್ತುಗಳನ್ನು; **ಉಪಸೇವತೇ**—ಅನುಭೋಗಿಸುತ್ತಾನೆ.

## ಅನುವಾದ

**ಜೀವಿಯು ಹೀಗೆ ಇನ್ನೊಂದು ಜಡ ದೇಹವನ್ನು ಪಡೆಯುತ್ತಾನೆ; ಒಂದು ನಿರ್ದಿಷ್ಟ ಬಗೆಯ ಕಿವಿ, ಕಣ್ಣು, ನಾಲಿಗೆ, ಮೂಗು ಮತ್ತು ಸ್ಪರ್ಶೇಂದ್ರಿಯಗಳನ್ನು ಪಡೆಯುತ್ತಾನೆ; ಇವನ್ನು ಮನಸ್ಸಿನ ಸುತ್ತ ಜೋಡಿಸಿದೆ. ಹೀಗೆ ಅವನು ಇಂದ್ರಿಯ ವಸ್ತುಗಳ ಒಂದು ವಿಶಿಷ್ಟ ತಂಡವನ್ನು ಅನುಭವಿಸುತ್ತಾನೆ.**

## ಭಾವಾರ್ಥ

ಬೇರೆ ಮಾತುಗಳಲ್ಲಿ ಹೇಳುವುದಾದರೆ, ಜೀವಿಯು ತನ್ನ ಪ್ರಜ್ಞೆಯಲ್ಲಿ ಬೆಕ್ಕು ನಾಯಿಗಳ ಗುಣಗಳನ್ನು ಬೆರೆಸಿದರೆ, ಮುಂದಿನ ಜನ್ಮದಲ್ಲಿ ಬೆಕ್ಕು ಅಥವಾ ನಾಯಿಯ ದೇಹವನ್ನು ಪಡೆದು ಅನುಭವಿಸುತ್ತಾನೆ. ಮೂಲತಃ ಪ್ರಜ್ಞೆಯು ನೀರಿನಂತೆ ಶುದ್ಧ. ನೀರಿನಲ್ಲಿ ಒಂದು ಬಣ್ಣವನ್ನು

ಬೆರೆಸಿದರೆ ಅದು ಬದಲಾಗುತ್ತದೆ. ಹಾಗೆಯೇ ಜೀವಾತ್ಮನು ಪರಿಶುದ್ಧನಾದದ್ದರಿಂದ ಪ್ರಜ್ಞೆಯು ಪರಿಶುದ್ಧ. ಆದರೆ ಪ್ರಜ್ಞೆಯು ಭೌತಿಕ ಗುಣಗಳ ಸಹವಾಸಕ್ಕನುಗುಣವಾಗಿ ಪರಿವರ್ತನೆಗೊಳ್ಳುತ್ತದೆ. ನೈಜಪ್ರಜ್ಞೆ ಎಂದರೆ ಶ್ರೀಕೃಷ್ಣ ಪ್ರಜ್ಞೆಯೇ. ಆದುದರಿಂದ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ನೆಲೆಯನ್ನು ಪಡೆದಾಗ ಅವನ ಜೀವನವು ಪರಿಶುದ್ಧವಾಗಿರುತ್ತದೆ. ಆದರೆ ಐಹಿಕ ಮನೋಧರ್ಮವು ಅವನ ಪ್ರಜ್ಞೆಯೊಡನೆ ಬೆರಕೆಯಾದರೆ ಮುಂದಿನ ಜನ್ಮದಲ್ಲಿ ಅದಕ್ಕೆ ಅನುಗುಣವಾದ ದೇಹವನ್ನು ಪಡೆಯುತ್ತಾನೆ. ಮತ್ತೆ ಅವನಿಗೆ ಮನುಷ್ಯ ದೇಹವೇ ಲಭ್ಯವಾಗುತ್ತದೆ ಎಂದೇನೂ ಇಲ್ಲ; 84,00,000 ಜೀವವರ್ಗಗಳಿವೆ; ಆದುದರಿಂದ ಅವನು ಬೆಕ್ಕು, ನಾಯಿ, ಹಂದಿ, ದೇವತೆ ಅಥವಾ ಇತರ ಹಲವಾರು ರೂಪಗಳಲ್ಲಿ ಒಂದನ್ನು ಪಡೆಯಬಹುದು.

## ಶ್ಲೋಕ - 10

**ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ |**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ||೧೦||**

**ಉತ್ಕ್ರಾಮನ್ತಮ್**—ದೇಹವನ್ನು ಬಿಡುವವನನ್ನು; **ಸ್ಥಿತಮ್**—ದೇಹದಲ್ಲಿ ನೆಲೆಸಿರುವವನನ್ನು; **ವಾ ಅಪಿ**—ಅಥವಾ; **ಭುಂಜಾನಮ್**—ಅನುಭೋಗಿಸುತ್ತಿರುವವನನ್ನು; **ವಾ**—ಅಥವಾ; **ಗುಣ ಅನ್ವಿತಮ್**—ಭೌತಿಕ ಪ್ರಕೃತಿ ಗುಣಗಳ ಪ್ರಭಾವದಲ್ಲಿರುವವನನ್ನು; **ವಿಮೂಢಾಃ**—ಮೂರ್ಖ ವ್ಯಕ್ತಿಗಳು; **ನ ಅನುಪಶ್ಯನ್ತಿ**—ಎಂದೂ ಕಾಣಲಾರರು; **ಪಶ್ಯನ್ತಿ**—ಕಾಣುತ್ತಾರೆ; **ಜ್ಞಾನ ಚಕ್ಷುಷಃ**—ಜ್ಞಾನ ಚಕ್ಷುಗಳನ್ನು ಹೊಂದಿರುವವರು.

## ಅನುವಾದ

**ಜೀವಿಯು ತನ್ನ ದೇಹವನ್ನು ಹೇಗೆ ಬಿಡಬಲ್ಲ, ಪ್ರಕೃತಿಯ ಗುಣಗಳ ಪ್ರಭಾವದಿಂದ ಅವನು ಯಾವ ಬಗೆಯ ದೇಹವನ್ನು ಅನುಭವಿಸುತ್ತಾನೆ — ಇದೆಲ್ಲವನ್ನೂ ಮೂಢರು ಅರ್ಥಮಾಡಿಕೊಳ್ಳಲಾರರು; ಆದರೆ ಜ್ಞಾನದಲ್ಲಿ ಶಿಕ್ಷಣ ಪಡೆದ ಕಣ್ಣುಗಳಿರುವವನು ಇದೆಲ್ಲವನ್ನೂ ಕಾಣಬಲ್ಲ.**

## ಭಾವಾರ್ಥ

**ಜ್ಞಾನಚಕ್ಷುಷಃ** ಎನ್ನುವ ಮಾತು ಬಹು ಮಹತ್ವದ್ದು. ಜೀವಿಯು ಅವನ ಈಗಿನ ದೇಹವನ್ನು ಹೇಗೆ ಬಿಡುತ್ತಾನೆ, ಮುಂದಿನ ಜನ್ಮದಲ್ಲಿ ಅವನು ಯಾವ ದೇಹ ರೂಪವನ್ನು ಪಡೆಯುತ್ತಾನೆ, ಅವನು ಒಂದು ನಿರ್ದಿಷ್ಟ ದೇಹ ರೂಪದಲ್ಲಿ ಏಕೆ ವಾಸಿಸುತ್ತಿದ್ದಾನೆ — ಇವನ್ನೆಲ್ಲ ಜ್ಞಾನವಿಲ್ಲದೆ ಮನುಷ್ಯನು ತಿಳಿದುಕೊಳ್ಳಲಾರ. ಇದಕ್ಕೆ ಭಗವದ್ಗೀತೆ ಮತ್ತು ಅಂತಹ ಸಾಹಿತ್ಯವನ್ನು ಯೋಗ್ಯ ಗುರುವಿನಿಂದ ಕೇಳಿ ಗಳಿಸಿಕೊಂಡ ಜ್ಞಾನವು ದೊಡ್ಡಪ್ರಮಾಣದಲ್ಲಿ ಅಗತ್ಯ. ಇವೆಲ್ಲವನ್ನೂ ಗ್ರಹಿಸಲು ಶಿಕ್ಷಣವನ್ನು ಪಡೆದಿರುವವನು ಅದೃಷ್ಟಶಾಲಿ. ಪ್ರತಿಯೊಬ್ಬ ಜೀವಿಯೂ ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ ದೇಹವನ್ನು ಬಿಡುತ್ತಾನೆ, ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ ಬದುಕಿರುತ್ತಾನೆ ಮತ್ತು ಐಹಿಕ ಪ್ರಕೃತಿಯ ಪ್ರಭಾವದಲ್ಲಿ ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ

ಜೀವನವನ್ನು ಸವಿಯುತ್ತಿದ್ದಾನೆ. ಇದರ ಪರಿಣಾಮವಾಗಿ ಇಂದ್ರಿಯ ಸುಖದ ಭ್ರಮೆಯಲ್ಲಿ ಅವನು ವಿವಿಧ ರೀತಿಗಳ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಕಾಮ ಮತ್ತು ಲೋಭಗಳಿಂದ ನಿರಂತರವಾಗಿ ಮೋಸ ಹೋಗುವವರು ದೇಹವು ಬದಲಾಗುತ್ತದೆ ಎನ್ನುವುದನ್ನೂ, ಒಂದು ನಿರ್ದಿಷ್ಟ ದೇಹದಲ್ಲಿ ತಾವು ವಾಸಿಸುವುದನ್ನೂ, ಅರ್ಥಮಾಡಿಕೊಳ್ಳುವ ಶಕ್ತಿಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಾರೆ. ಅದು ಅವರಿಗೆ ಅರ್ಥವಾಗುವುದಿಲ್ಲ. ಆದರೆ ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಂಡವರು, ಆತ್ಮನು ದೇಹದಿಂದ ಭಿನ್ನ ಮತ್ತು ಬೇರೆ ಬೇರೆ ರೀತಿಗಳಲ್ಲಿ ತನ್ನ ದೇಹವನ್ನು ಬದಲಾಯಿಸಿ ಅನುಭವಿಸುತ್ತಾನೆ ಎನ್ನುವುದನ್ನು ಕಾಣಬಲ್ಲರು. ಇಂತಹ ಜ್ಞಾನವಿರುವ ಮನುಷ್ಯನು, ಬದ್ಧಜೀವಿಯು ಈ ಐಹಿಕ ಅಸ್ತಿತ್ವದಲ್ಲಿ ಹೇಗೆ ದುಃಖಪಡುತ್ತಿದ್ದಾನೆ ಎನ್ನುವುದನ್ನು ಅರ್ಥಮಾಡಿಕೊಳ್ಳಬಲ್ಲ. ಕೃಷ್ಣಪ್ರಜ್ಞೆಯಲ್ಲಿ ಬಹಳ ಬೆಳೆದಿರುವವರು ಈ ಜ್ಞಾನವನ್ನು ಜನ ಸಾಮಾನ್ಯಕ್ಕೆ ಕೊಡಲು ಸಾಧ್ಯವಾದಷ್ಟು ಪ್ರಯತ್ನಿಸುತ್ತಾರೆ. ಏಕೆಂದರೆ ಅವರ ಬದ್ಧಜೀವನವು ಬಹು ಕಷ್ಟಮಯವಾದದ್ದು. ಅವರು ಅದರಿಂದ ಹೊರಗೆ ಬರಬೇಕು. ಕೃಷ್ಣಪ್ರಜ್ಞೆಯುಳ್ಳವರಾಗ ಬೇಕು ಮತ್ತು ತಾವು ಆಧ್ಯಾತ್ಮಿಕ ಜಗತ್ತಿಗೆ ಹೋಗಲು ಸಾಧ್ಯವಾಗುವಂತೆ ಮುಕ್ತರಾಗಬೇಕು.

## ಶ್ಲೋಕ - 11

**ಯತನ್ತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋऽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥೧೧॥**

**ಯತನ್ತಃ**—ಪ್ರಯತ್ನಿಸುತ್ತಿರುವ; **ಯೋಗಿನಃ**—ಯೋಗಿಗಳು; **ಚ**—ಕೂಡ; **ಏನಮ್**—ಈ; **ಪಶ್ಯಂತಿ**—ನೋಡುತ್ತಾರೆ; **ಆತ್ಮನಿ**—ಆತ್ಮನಲ್ಲಿ; **ಅವಸ್ಥಿತಮ್**—ನೆಲೆಸಿರುವವನನ್ನು; **ಯತಂತಃ**—ಪ್ರಯತ್ನಿಸುತ್ತಿರುವವರು; **ಅಪಿ**—ಆದರೂ; **ಅಕೃತ ಆತ್ಮಾನಃ**—ಆತ್ಮಸಾಕ್ಷಾತ್ಕಾರ ಹೊಂದದವರು; **ನ**—ಇಲ್ಲ; **ಏನಮ್**—ಇದನ್ನು; **ಪಶ್ಯನ್ತಿ**—ನೋಡುತ್ತಾರೆ; **ಅಚೇತಸಃ**—ಬೆಳೆಯದ ಮನಸ್ಸುಳ್ಳವರು.

## ಅನುವಾದ

**ಆತ್ಮಸಾಕ್ಷಾತ್ಕಾರದಲ್ಲಿ ನೆಲೆಯಾಗಿದ್ದು ಪ್ರಯತ್ನ ಪಡುತ್ತಿರುವ ಆಧ್ಯಾತ್ಮಿಕವಾದಿಗಳು ಇದೆಲ್ಲವನ್ನೂ ಸ್ಪಷ್ಟವಾಗಿ ಕಾಣಬಲ್ಲರು. ಆದರೆ ಯಾರ ಮನಸ್ಸು ಬೆಳೆದಿಲ್ಲವೋ ಮತ್ತು ಯಾರು ಆತ್ಮಸಾಕ್ಷಾತ್ಕಾರದಲ್ಲಿ ನೆಲೆಯನ್ನು ಪಡೆದಿಲ್ಲವೋ ಅವರು ಪ್ರಯತ್ನಪಟ್ಟರೂ ಏನಾಗುತ್ತಿದೆ ಎನ್ನುವುದನ್ನು ಕಾಣಲಾರರು.**

## ಭಾವಾರ್ಥ

ಆಧ್ಯಾತ್ಮಿಕ ಆತ್ಮಸಾಕ್ಷಾತ್ಕಾರದ ಮಾರ್ಗದಲ್ಲಿ ಹಲವಾರು ಮಂದಿ ಆಧ್ಯಾತ್ಮಿಕವಾದಿಗಳಿದ್ದಾರೆ. ಆದರೆ ಆತ್ಮಸಾಕ್ಷಾತ್ಕಾರದಲ್ಲಿ ನೆಲೆಯಿಲ್ಲದವರು ಜೀವಿಯ ದೇಹದಲ್ಲಿ ಹೇಗೆ ಬದಲಾವಣೆಗಳಾಗುತ್ತಿವೆ ಎನ್ನುವುದನ್ನು ಕಾಣಲಾರರು. ಈ ಸಂದರ್ಭದಲ್ಲಿ **ಯೋಗಿನಃ** ಎನ್ನುವ ಪದವು ಮಹತ್ವದ್ದು. ಇಂದು ಯೋಗಿಗಳೆಂದು ಕರೆಸಿಕೊಳ್ಳುವವರು ಅನೇಕರಿದ್ದಾರೆ.

ಯೋಗಿಗಳ ಸಂಘಗಳೆಂದು ಕರೆಸಿಕೊಳ್ಳುವ ಎಷ್ಟೋ ಸಂಘಗಳಿವೆ. ಆದರೆ ಆತ್ಮಸಾಕ್ಷಾತ್ಕಾರದ ವಿಷಯದಲ್ಲಿ ಅವರು ಕುರುಡರು. ಅವರು ಯಾವುದೋ ಬಗೆಯ ಅಂಗಸಾಧನೆಯ ಹುಚ್ಚಿಗೆ ಬಿದ್ದವರು. ದೇಹವು ದೃಢವಾಗಿದ್ದು ಆರೋಗ್ಯದಿಂದಿದ್ದರೆ ಸಾಕು, ಅವರು ತೃಪ್ತಿಪಟ್ಟುಕೊಳ್ಳುತ್ತಾರೆ. ಇದಕ್ಕೆ ಸಂಬಂಧಪಟ್ಟಂತೆ ಬೇರೆ ಯಾವ ಮಾಹಿತಿಯೂ ಇಲ್ಲ. ಅವರನ್ನು **ಯತನ್ತೋಽಪಿ ಅಕೃತಾತ್ಮಾನಃ** ಎಂದು ಕರೆಯಲಾಗಿದೆ. ಅವರು ಹೆಸರಿಗೆ ಮಾತ್ರದ ಯೋಗಪದ್ಧತಿಯಲ್ಲಿ ಪ್ರಯತ್ನಿಸಿದರೂ ಆತ್ಮಸಾಕ್ಷಾತ್ಕಾರ ಹೊಂದಲಾರರು. ಇಂತಹ ಜನರು ಆತ್ಮವು ದೇಹದಿಂದ ದೇಹಕ್ಕೆ ಹೋಗುವ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳಲಾರರು. ಯೋಗಾಭ್ಯಾಸದಲ್ಲಿ ಇರುತ್ತ ಆತ್ಮನ, ಜಗತ್ತಿನ ಮತ್ತು ಪರಮ ಪ್ರಭುವಿನ ಸಾಕ್ಷಾತ್ಕಾರ ಮಾಡಿಕೊಂಡಿರುವವರು ಎಂದರೆ ಭಕ್ತಿಯೋಗಿಗಳು. ಕೃಷ್ಣಪ್ರಜ್ಞೆಯಲ್ಲಿ, ಪರಿಶುದ್ಧ ಭಕ್ತಿಸೇವೆಯಲ್ಲಿ ನಿರತರಾಗಿರುವವರು ಮಾತ್ರ ಸಂಗತಿಗಳು ಹೇಗೆ ಘಟಿಸುತ್ತವೆ ಎಂದು ಅರ್ಥಮಾಡಿಕೊಳ್ಳಬಲ್ಲರು.

## ಶ್ಲೋಕ - 12

**ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ |**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ||೧೨||**

**ಯತ್**—ಯಾವುದು; **ಆದಿತ್ಯಗತಮ್**—ಸೂರ್ಯನ ಬೆಳಕಿನಲ್ಲಿರುವ; **ತೇಜಃ**—ತೇಜಸ್ಸು; **ಜಗತ್**—ಇಡಿಯ ಜಗತ್ತನ್ನು; **ಭಾಸಯತೇ**—ಪ್ರಕಾಶಿಸುತ್ತದೋ; **ಅಖಿಲಮ್**—ಪೂರ್ಣವಾಗಿ; **ಯತ್**—ಯಾವುದು; **ಚನ್ದ್ರಮಸಿ**—ಚಂದ್ರನಲ್ಲಿ; **ಯತ್**—ಯಾವುದು; **ಚ**—ಕೂಡ; **ಅಗ್ನೌ**—ಅಗ್ನಿಯಲ್ಲಿ; **ತತ್**—ಅದು; **ತೇಜಃ**—ತೇಜಸ್ಸು; **ವಿದ್ಧಿ**—ಎಂದು ತಿಳಿದುಕೊ; **ಮಾಮಕಮ್**—ನನ್ನಿಂದಾದ.

## ಅನುವಾದ

**ಇಡೀ ಜಗತ್ತಿನಿಂದ ಕತ್ತಲನ್ನು ಚದುರಿಸುವ ಸೂರ್ಯನ ತೇಜಸ್ಸು ನನ್ನಿಂದ ಬರುತ್ತದೆ. ಚಂದ್ರನ ತೇಜಸ್ಸು, ಅಗ್ನಿಯ ತೇಜಸ್ಸು ನನ್ನಿಂದ ಬರುತ್ತದೆ.**

## ಭಾವಾರ್ಥ

ಮೂಢರು ಸಂಗತಿಗಳು ಹೇಗೆ ಘಟಿಸುತ್ತವೆ ಎನ್ನುವುದನ್ನು ಅರ್ಥಮಾಡಿಕೊಳ್ಳಲಾರರು. ಆದರೆ ಭಗವಂತನು ಇಲ್ಲಿ ವಿವರಿಸುವುದನ್ನು ಅರ್ಥಮಾಡಿಕೊಳ್ಳುವುದರ ಮೂಲಕ ಮನುಷ್ಯನು ಜ್ಞಾನದಲ್ಲಿ ನೆಲೆಹೊಂದಲು ಪ್ರಾರಂಭಿಸಬಹುದು. ಪ್ರತಿಯೊಬ್ಬರೂ ಸೂರ್ಯ, ಚಂದ್ರ, ಅಗ್ನಿ ಮತ್ತು ವಿದ್ಯುಚ್ಛಕ್ತಿಗಳನ್ನು ನೋಡುತ್ತಾರೆ. ಸೂರ್ಯನ ತೇಜಸ್ಸು, ಚಂದ್ರನ ತೇಜಸ್ಸು, ವಿದ್ಯುಚ್ಛಕ್ತಿ ಅಥವಾ ಅಗ್ನಿಯ ತೇಜಸ್ಸು ದೇವೋತ್ತಮ ಪರಮ ಪುರುಷನಿಂದ ಬರುತ್ತದೆ ಎನ್ನುವುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು ಅಷ್ಟೆ. ಕೃಷ್ಣಪ್ರಜ್ಞೆಯ ಪ್ರಾರಂಭವೆನಿಸುವ ಜೀವನದ ಇಂತಹ ಪರಿಕಲ್ಪನೆಯಲ್ಲಿ ಈ ಐಹಿಕ ಜಗತ್ತಿನಲ್ಲಿ ಬದ್ಧವಾದ ಆತ್ಮಕ್ಕೆ ಪ್ರಗತಿಗೆ ಬೇಕಾದಷ್ಟು ಅವಕಾಶವಿದೆ. ಜೀವಿಗಳು ಮೂಲತಃ ಪರಮ ಪ್ರಭುವಿನ ವಿಭಿನ್ನಾಂಶಗಳು; ಇಲ್ಲಿ ಅವರು ಹೇಗೆ ಭಗವದ್ಧಾಮಕ್ಕೆ ಹಿಂದಿರುಗಬಹುದು ಎನ್ನುವುದನ್ನು ಸೂಚಿಸಿದ್ದಾನೆ.

ಇಡೀ ಸೌರವ್ಯೂಹವನ್ನು ಸೂರ್ಯನು ಬೆಳಗುತ್ತಿದ್ದಾನೆ ಎನ್ನುವುದನ್ನು ಈ ಶ್ಲೋಕದಿಂದ ನಾವು ಅರ್ಥಮಾಡಿಕೊಳ್ಳಬಹುದು. ಬೇರೆ ಬೇರೆ ವಿಶ್ವಗಳಿವೆ ಮತ್ತು ಬೇರೆ ಬೇರೆ ಸೌರವ್ಯೂಹಗಳಿವೆ. ಬೇರೆ ಬೇರೆ ಸೂರ್ಯರೂ, ಚಂದ್ರರೂ, ಲೋಕಗಳೂ ಇವೆ. ಆದರೆ ಪ್ರತಿವಿಶ್ವದಲ್ಲಿಯೂ ಒಬ್ಬನೇ ಸೂರ್ಯನಿದ್ದಾನೆ. ಭಗವದ್ಗೀತೆಯಲ್ಲಿ ಹೇಳಿದಂತೆ (10.21), ಚಂದ್ರನು ನಕ್ಷತ್ರಗಳಲ್ಲಿ ಒಬ್ಬ. **(ನಕ್ಷತ್ರಾಣಾಮ್ ಅಹಂ ಶಶೀ).** ಆಧ್ಯಾತ್ಮಿಕ ಗಗನದಲ್ಲಿ ಪರಮ ಪ್ರಭುವಿನ ದಿವ್ಯ ಪ್ರಭೆಯೇ ಸೂರ್ಯನ ಬೆಳಕಿಗೆ ಕಾರಣ. ಸೂರ್ಯೋದಯದೊಡನೆ ಮನುಷ್ಯರ ಕೆಲಸಕಾರ್ಯಗಳು ಪ್ರಾರಂಭವಾಗುತ್ತವೆ. ಅವರು ಅಡಿಗೆ ಮಾಡಿಕೊಳ್ಳಲು ಬೆಂಕಿಯನ್ನು ಹೊತ್ತಿಸುತ್ತಾರೆ. ಕಾರ್ಖಾನೆಗಳನ್ನು ಪ್ರಾರಂಭಿಸಲು ಬೆಂಕಿಯನ್ನು ಹೊತ್ತಿಸುತ್ತಾರೆ. ಬೆಂಕಿಯ ಸಹಾಯದಿಂದ ಎಷ್ಟೋ ಕೆಲಸಗಳಾಗುತ್ತವೆ. ಆದುದರಿಂದ ಸೂರ್ಯೋದಯ, ಅಗ್ನಿ ಮತ್ತು ಬೆಳದಿಂಗಳು ಜೀವಿಗಳಿಗೆ ತುಂಬ ಆಹ್ಲಾದವನ್ನುಂಟು ಮಾಡುತ್ತವೆ. ಅವರ ಸಹಾಯವಿಲ್ಲದೆ ಯಾವ ಜೀವಿಯೂ ಬದುಕಲಾರ. ಆದುದರಿಂದ ಸೂರ್ಯನ, ಚಂದ್ರನ, ಅಗ್ನಿಯ ಬೆಳಕು ಮತ್ತು ವೈಭವಗಳು ದೇವೋತ್ತಮ ಪರಮ ಪುರುಷನಾದ ಕೃಷ್ಣನಿಂದ ಮೂಡಿಬರುತ್ತವೆ ಎಂದು ಮನುಷ್ಯನು ಅರ್ಥಮಾಡಿಕೊಂಡರೆ ಅವನ ಕೃಷ್ಣಪ್ರಜ್ಞೆಯು ಪ್ರಾರಂಭವಾಗುತ್ತದೆ. ಬೆಳದಿಂಗಳು ಎಲ್ಲ ತರಕಾರಿಗಳನ್ನೂ ಪೋಷಿಸುತ್ತದೆ. ಬೆಳದಿಂಗಳು ಎಷ್ಟು ಆಹ್ಲಾದಕರ ಎಂದರೆ ಜನರು ದೇವೋತ್ತಮ ಪರಮ ಪುರುಷನಾದ ಕೃಷ್ಣನ ಕರುಣೆಯಿಂದ ತಾವು ಬದುಕಿದ್ದೇವೆ ಎನ್ನುವುದನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರು. ಅವನ ಕರುಣೆಯಿಲ್ಲದೇ ಸೂರ್ಯನಿರುವಂತಿಲ್ಲ. ಅವನ ಕರುಣೆಯಿಲ್ಲದೇ ಚಂದ್ರನಿರುವಂತಿಲ್ಲ ಮತ್ತು ಅವನ ಕರುಣೆಯಿಲ್ಲದೇ ಅಗ್ನಿಯಿರುವಂತಿಲ್ಲ. ಹಾಗೆಯೇ ಸೂರ್ಯ, ಚಂದ್ರ ಮತ್ತು ಅಗ್ನಿಗಳ ಸಹಾಯವಿಲ್ಲದೆ ಯಾರೂ ಬದುಕಲು ಸಾಧ್ಯವಿಲ್ಲ. ಬದ್ಧ ಆತ್ಮನಲ್ಲಿ ಕೃಷ್ಣಪ್ರಜ್ಞೆಯನ್ನು ಜಾಗೃತಗೊಳಿಸುವ ಕೆಲವು ವಿಚಾರಗಳು ಇವು.

## ಶ್ಲೋಕ - 13

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥೧೩॥**

**ಗಾಮ್**—ಲೋಕಗಳನ್ನು; **ಆವಿಶ್ಯ**—ಪ್ರವೇಶಿಸಿ; **ಚ**—ಕೂಡ; **ಭೂತಾನಿ**—ಜೀವಿಗಳನ್ನು; **ಧಾರಯಾಮಿ**—ಸಂರಕ್ಷಿಸುತ್ತೇನೆ; **ಅಹಮ್**—ನಾನು; **ಓಜಸಾ**—ನನ್ನ ಶಕ್ತಿಯಿಂದ; **ಪುಷ್ಣಾಮಿ**—ಪೋಷಿಸುತ್ತೇನೆ; **ಚ**—ಮತ್ತು; **ಔಷಧೀಃ**—ಗಿಡಮೂಲಿಕೆಗಳನ್ನು; **ಸರ್ವಾಃ**—ಎಲ್ಲ; **ಸೋಮಃ**—ಚಂದ್ರನು; **ಭೂತ್ವಾ**—ಆಗಿ; **ರಸ ಆತ್ಮಕಃ**—ರಸವನ್ನು ಒದಗಿಸುವ.

## ಅನುವಾದ

**ನಾನು ಪ್ರತಿಯೊಂದು ಲೋಕವನ್ನೂ ಪ್ರವೇಶಿಸುತ್ತೇನೆ ಮತ್ತು ನನ್ನ ಶಕ್ತಿಯಿಂದ ಅವು ತಮ್ಮ ಪಥದಲ್ಲಿ ಉಳಿಯುತ್ತವೆ. ನಾನು ಚಂದ್ರನಾಗುತ್ತೇನೆ ಮತ್ತು ಹಾಗೇ ಎಲ್ಲ ತರಕಾರಿಗಳಿಗೆ ಜೀವರಸವನ್ನು ನೀಡುತ್ತೇನೆ.**

## ಭಾವಾರ್ಥ

ಎಲ್ಲ ಲೋಕಗಳು ಪ್ರಭುವಿನ ಶಕ್ತಿಯಿಂದಲೇ ಗಾಳಿಯಲ್ಲಿ ತೇಲುತ್ತವೆ ಎಂದು ತಿಳಿದಿದೆ. ಪ್ರಭುವು ಪ್ರತಿಯೊಂದು ಅಣುವಿನಲ್ಲಿ, ಪ್ರತಿಯೊಂದು ಲೋಕದಲ್ಲಿ ಮತ್ತು ಪ್ರತಿಯೊಬ್ಬ ಜೀವಿಯಲ್ಲಿ ಪ್ರವೇಶಿಸುತ್ತಾನೆ. ಇದನ್ನು ಬ್ರಹ್ಮಸಂಹಿತೆಯಲ್ಲಿ ಚರ್ಚಿಸಿದೆ. ದೇವೋತ್ತಮ ಪರಮ ಪುರುಷನಾದ ಪರಮಾತ್ಮನ ಒಂದು ಪೂರ್ಣಭಾಗವು ಲೋಕವನ್ನೂ, ವಿಶ್ವವನ್ನೂ, ಜೀವಿಯನ್ನೂ ಮತ್ತು ಅಣುವನ್ನೂ ಸಹ ಪ್ರವೇಶಿಸುತ್ತದೆ ಎಂದು ಅಲ್ಲಿ ಹೇಳಿದೆ. ಅವನ ಪ್ರವೇಶದಿಂದ ಪ್ರತಿಯೊಂದರ ಉಚಿತ ಅಭಿವ್ಯಕ್ತಿಯಾಗುತ್ತದೆ. ಜೀವಾತ್ಮನು ಇದ್ದಾಗ ಜೀವಂತ ಮನುಷ್ಯನು ನೀರಿನ ಮೇಲೆ ತೇಲಬಲ್ಲ. ಆದರೆ ಜೀವದ ಕಿಡಿಯು ದೇಹವನ್ನು ಬಿಟ್ಟು ದೇಹವು ಸತ್ತಾಗ ಅದು ಮುಳುಗುತ್ತದೆ. ನಿಜ, ಕೊಳೆತುಹೋಗುವಾಗ ಅದು ಹುಲ್ಲಿನಂತೆ ಮತ್ತು ಇತರ ವಸ್ತುಗಳಂತೆ ತೇಲುತ್ತದೆ. ಆದರೆ ಮನುಷ್ಯನು ಸಾಯುತ್ತಲೇ ಅವನು ನೀರಿನಲ್ಲಿ ಮುಳುಗುತ್ತಾನೆ. ಹೀಗೆಯೇ ಈ ಎಲ್ಲ ಲೋಕಗಳೂ ಆಕಾಶದಲ್ಲಿ ತೇಲುತ್ತಿವೆ; ಇದಕ್ಕೆ ಕಾರಣ ದೇವೋತ್ತಮ ಪರಮ ಪುರುಷನ ಪರಮ ಶಕ್ತಿಯ ಪ್ರವೇಶ. ಭಗವಂತನ ಶಕ್ತಿಯು ಮುಷ್ಟಿಯೊಳಗಿರುವ ಮಣ್ಣಿನಂತೆ ಪ್ರತಿಯೊಂದು ಲೋಕವನ್ನೂ ಬೀಳದಂತೆ ತಡೆ ಹಿಡಿದಿದೆ. ಯಾರಾದರೂ ಒಂದು ಹಿಡಿ ಮಣ್ಣನ್ನು ಕೈಯಲ್ಲಿ ಹಿಡಿದುಕೊಂಡರೆ ಆ ಮಣ್ಣು ಬೀಳುವ ಸಾಧ್ಯತೆ ಇಲ್ಲ. ಆದರೆ ಅದನ್ನು ಗಾಳಿಯಲ್ಲಿ ಎಸೆದರೆ ಅದು ಕೆಳಕ್ಕೆ ಬೀಳುತ್ತದೆ. ಹಾಗೆಯೇ ವಾಸ್ತವವಾಗಿ ಪರಮ ಪ್ರಭುವಿನ ವಿಶ್ವರೂಪವು ಗಾಳಿಯಲ್ಲಿ ತೇಲುತ್ತಿರುವ ಈ ಲೋಕಗಳನ್ನು ತನ್ನ ಮುಷ್ಟಿಯಲ್ಲಿ ಹಿಡಿದುಕೊಂಡಿದೆ. ಅವನ ಶಕ್ತಿ ಸಾಮರ್ಥ್ಯಗಳಿಂದ ಎಲ್ಲ ಚರಾಚರ ವಸ್ತುಗಳು ತಮ್ಮ ಸ್ಥಳದಲ್ಲೇ ಉಳಿಯುತ್ತವೆ. ದೇವೋತ್ತಮ ಪರಮ ಪುರುಷನಿಂದ ಸೂರ್ಯನು ಬೆಳಗುತ್ತಾನೆ ಮತ್ತು ಲೋಕಗಳು ಒಂದೇ ಸಮನಾಗಿ ಚಲಿಸುತ್ತವೆ ಎಂದು ವೇದಗಳ ಸ್ತೋತ್ರಗಳಲ್ಲಿ ಹೇಳಿದೆ. ಅವನು ಇಲ್ಲದಿದ್ದರೆ ಎಲ್ಲ ಲೋಕಗಳೂ ಗಾಳಿಯಲ್ಲಿನ ಮಣ್ಣಿನಂತೆ ಚದುರಿಹೋಗಿ ವಿನಾಶವಾಗುತ್ತಿದ್ದವು. ಹಾಗೆಯೇ ಚಂದ್ರನು ಎಲ್ಲ ತರಕಾರಿಗಳನ್ನು ಪೋಷಿಸುವುದು ದೇವೋತ್ತಮ ಪರಮ ಪುರುಷನಿಂದಾಗಿ. ಚಂದ್ರನ ಪ್ರಭಾವದಿಂದ ತರಕಾರಿಗಳು ರುಚಿಯಾಗುತ್ತವೆ. ಬೆಳುದಿಂಗಳಿಲ್ಲದಿದ್ದರೆ ತರಕಾರಿಗಳು ಬೆಳೆಯುವುದಾಗಲೀ, ರುಚಿಯಾಗುವುದಾಗಲೀ ಸಾಧ್ಯವಿಲ್ಲ. ಪರಮ ಪ್ರಭುವು ನೀಡುವುದರಿಂದ ಮನುಕುಲವು ಕೆಲಸಮಾಡುತ್ತಿದೆ, ನೆಮ್ಮದಿಯಾಗಿದೆ ಮತ್ತು ಆಹಾರವನ್ನು ಸವಿಯುತ್ತದೆ. ಇಲ್ಲವಾದರೆ ಮನುಕುಲವು ಉಳಿಯಲಾರದು. **ರಸಾತ್ಮಕಃ** ಎನ್ನುವ ಪದವು ಬಹಳ ಮುಖ್ಯವಾದದ್ದು. ಚಂದ್ರನ ಮೂಲಕ ಪರಮ ಪ್ರಭುವು ಬೀರುವ ಪ್ರಭಾವದಿಂದಾಗಿ ಎಲ್ಲ ವಸ್ತುಗಳೂ ರುಚಿಯಾಗುತ್ತವೆ.

## ಶ್ಲೋಕ - 14

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥೧೪॥**

**ಅಹಮ್**—ನಾನು; **ವೈಶ್ವಾನರಃ**—ಸ್ವಾಂಶ ವಿಸ್ತರಣೆಯಾದ ಜಠರಾಗ್ನಿಯು; **ಭೂತ್ವಾ**—ಆಗಿ;

**ಪ್ರಾಣಿನಾಮ್**—ಎಲ್ಲ ಜೀವಿಗಳ; **ದೇಹಮ್**—ಶರೀರಗಳಲ್ಲಿ; **ಆಶ್ರಿತಃ**—ನೆಲೆಸಿ; **ಪ್ರಾಣ**—ಬಹಿರ್ಮುಖವಾದ ವಾಯು; **ಅಪಾನ**—ಅಧೋಮುಖವಾದ ವಾಯುಗಳನ್ನು; **ಸಮಾಯುಕ್ತಃ**—ಸಮತೋಲನದಲ್ಲಿರಿಸಿ; **ಪಚಾಮಿ**—ಜೀರ್ಣ ಮಾಡುತ್ತೇನೆ; **ಅನ್ನಮ್**—ಆಹಾರವನ್ನು; **ಚತುಃ ವಿಧಮ್**—ನಾಲ್ಕು ಬಗೆಯ.

## ಅನುವಾದ

**ಎಲ್ಲ ಜೀವಿಗಳ ದೇಹಗಳಲ್ಲಿ ಜಠರಾಗ್ನಿ ನಾನು. ದೇಹದಿಂದ ಹೊರಕ್ಕೆ ಹೋಗುವ ಮತ್ತು ಒಳಕ್ಕೆ ಬರುವ ಪ್ರಾಣವಾಯುವಿನೊಂದಿಗೆ ಸೇರಿ ನಾನು ನಾಲ್ಕು ವಿಧವಾದ ಆಹಾರವನ್ನು ಜೀರ್ಣಮಾಡುತ್ತೇನೆ.**

## ಭಾವಾರ್ಥ

ಆಯುರ್ವೇದ ಶಾಸ್ತ್ರಕ್ಕೆ ಅನುಗುಣವಾಗಿ, ಹೊಟ್ಟೆಗೆ ಹೋಗುವ ಆಹಾರವನ್ನೆಲ್ಲ ಅರಗಿಸುವ ಜಠರಾಗ್ನಿಯುಂಟು. ಈ ಅಗ್ನಿಯು ಪ್ರಜ್ವಲಿಸದೆ ಇರುವಾಗ ಹಸಿವು ಇರುವುದಿಲ್ಲ. ಅಗ್ನಿ ಕೆಲಸಮಾಡುತ್ತಿರುವಾಗ ನಮಗೆ ಹಸಿವಾಗುತ್ತದೆ. ಒಮ್ಮೊಮ್ಮೆ ಈ ಅಗ್ನಿ ಸರಿಯಾಗಿ ಉರಿಯುತ್ತಿಲ್ಲದಿರುವಾಗ ಚಿಕಿತ್ಸೆ ಅಗತ್ಯವಾಗುತ್ತದೆ. ಏನೇ ಇರಲಿ, ಈ ಅಗ್ನಿಯು ದೇವೋತ್ತಮ ಪರಮ ಪುರುಷನ ಪ್ರತಿನಿಧಿ. ಪರಮ ಪ್ರಭು ಅಥವಾ ಬ್ರಹ್ಮನ್ ಅಗ್ನಿಯ ರೂಪದಲ್ಲಿ ಹೊಟ್ಟೆಯೊಳಗಿದ್ದಾನೆ; ಎಲ್ಲ ಬಗೆಯ ಆಹಾರವನ್ನು ಜೀರ್ಣಮಾಡುತ್ತಾನೆ (**ಅಯಂ ಅಗ್ನಿರ್ ವೈಶ್ವಾನರೋ ಯೋಽಯಮ್ ಅನ್ತಃ ಪುರುಷೇ ಯೇನೇದಂ ಅನ್ನಂ ಪಚ್ಯತೇ**) ಎಂದು ವೇದ ಮಂತ್ರಗಳೂ ದೃಢಪಡಿಸುತ್ತವೆ (ಬೃಹದಾರಣ್ಯಕ ಉಪನಿಷತ್ತು, 5.9.1). ಅವನು ಎಲ್ಲ ಬಗೆಯ ಆಹಾರವನ್ನು ಅರಗಿಸಿಕೊಳ್ಳಲು ನೆರವಾಗುವುದರಿಂದ ಜೀವಿಯು ಆಹಾರವನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಸ್ವತಂತ್ರನಲ್ಲ. ಜೀರ್ಣವಾಗಲು ಪರಮ ಪ್ರಭುವು ಸಹಾಯಮಾಡದಿದ್ದರೆ ಆಹಾರ ಸೇವನೆ ಸಾಧ್ಯವಿಲ್ಲ. ಹೀಗೆ ಅವನು ಆಹಾರವನ್ನು ಉತ್ಪಾದಿಸುತ್ತಾನೆ, ಅರಗಿಸುತ್ತಾನೆ. ಅವನ ಕೃಪೆಯಿಂದ ನಾವು ಬದುಕನ್ನು ಸವಿಯುತ್ತೇವೆ. ವೇದಾಂತ ಸೂತ್ರದಲ್ಲಿ (1.2.27) ಇದನ್ನು ದೃಢಪಡಿಸಲಾಗಿದೆ. **ಶಬ್ದಾದಿಭ್ಯೋಽನ್ತಃ ಪ್ರತಿಷ್ಠಾನಾಚ್ಚ.** ಪ್ರಭುವು ಶಬ್ದದಲ್ಲಿದ್ದಾನೆ, ದೇಹದಲ್ಲಿದ್ದಾನೆ, ಗಾಳಿಯಲ್ಲಿದ್ದಾನೆ ಮತ್ತು ಜೀರ್ಣಶಕ್ತಿಯಾಗಿ ಹೊಟ್ಟೆಯಲ್ಲಿದ್ದಾನೆ. ಆಹಾರಗಳಲ್ಲಿ ನಾಲ್ಕು ವಿಧ; ಕೆಲವನ್ನು ನುಂಗುತ್ತೇವೆ, ಕೆಲವನ್ನು ಅಗಿಯುತ್ತೇವೆ, ಕೆಲವನ್ನು ನೆಕ್ಕುತ್ತೇವೆ, ಕೆಲವನ್ನು ಒಳಗೆ ಎಳೆದುಕೊಳ್ಳುತ್ತೇವೆ. ಅವೆಲ್ಲಕ್ಕೂ ಅವನೇ ಜೀರ್ಣಶಕ್ತಿ.

## ಶ್ಲೋಕ - 15

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**

**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾನ್ತಕೃದ್ ವೇದವಿದೇವ ಚಾಹಮ್ ||೧೫||**

**ಸರ್ವಸ್ಯ**—ಸಕಲ ಜೀವಿಗಳ; **ಚ**—ಮತ್ತು; **ಅಹಮ್**—ನಾನು; **ಹೃದಿ**—ಹೃದಯದಲ್ಲಿ; **ಸಂನಿವಿಷ್ಟಃ**—ನೆಲೆಸಿ; **ಮತ್ತಃ**—ನನ್ನಿಂದಲೇ; **ಸ್ಮೃತಿಃ**—ನೆನಪು; **ಜ್ಞಾನಮ್**—ಜ್ಞಾನವು; **ಅಪೋಹನಮ್**—ಮರೆವು; **ಚ**—ಮತ್ತು; **ವೇದೈಃ**—ವೇದಗಳಿಂದ; **ಚ**—ಕೂಡ; **ಸರ್ವೈಃ**—ಎಲ್ಲ; **ಅಹಮ್**—ನಾನು; **ಏವ**—ಖಂಡಿತವಾಗಿಯೂ; **ವೇದ್ಯಃ**—ತಿಳಿಯಲಾಗುವವನು; **ವೇದಾನ್ತ ಕೃತ್**—ವೇದಾಂತದ ಸಂಕಲನಕಾರನು; **ವೇದವಿತ್**—ವೇದಗಳನ್ನು ಅರಿತವನು; **ಏವ**—ಖಂಡಿತವಾಗಿಯೂ; **ಚ**—ಮತ್ತು; **ಅಹಮ್**—ನಾನು.

## ಅನುವಾದ

**ನಾನು ಪ್ರತಿಯೊಬ್ಬರ ಹೃದಯದಲ್ಲಿ ನೆಲೆಸಿದ್ದೇನೆ; ಸ್ಮರಣೆ, ಜ್ಞಾನ ಮತ್ತು ಮರೆವು ನನ್ನಿಂದ ಬರುತ್ತವೆ. ಎಲ್ಲ ವೇದಗಳಿಂದ ತಿಳಿಯಬೇಕಾದವನು ನಾನು. ವೇದಾಂತ ಕರ್ತೃ ನಾನು. ವೇದಗಳನ್ನು ತಿಳಿದವನೂ ನಾನೇ.**

## ಭಾವಾರ್ಥ

ಪರಮಾತ್ಮನಾಗಿ ಪರಮ ಪ್ರಭುವು ಎಲ್ಲರ ಹೃದಯಗಳಲ್ಲಿ ನೆಲೆಸಿದ್ದಾನೆ; ಎಲ್ಲ ಚಟುವಟಿಕೆಗಳೂ ಅವನಿಂದ ಪ್ರೇರಿತವಾಗುತ್ತವೆ. ಜೀವಿಯು ತನ್ನ ಹಿಂದಿನ ಜನ್ಮದ ವಿಷಯವನ್ನು ಸಂಪೂರ್ಣವಾಗಿ ಮರೆಯುತ್ತಾನೆ; ಆದರೆ ಅವನು ಎಲ್ಲ ಕೆಲಸದ ಸಾಕ್ಷಿಯಾದ ಪರಮ ಪ್ರಭುವಿನ ಆಣತಿಯಂತೆ ಕೆಲಸಮಾಡಬೇಕು. ಆದುದರಿಂದ ಅವನು ತನ್ನ ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಕೆಲಸವನ್ನು ಪ್ರಾರಂಭಿಸುತ್ತಾನೆ. ಅಗತ್ಯವಾದ ಜ್ಞಾನವನ್ನೂ ಸ್ಮರಣೆಯನ್ನೂ ಅವನಿಗೆ ನೀಡಲಾಗುತ್ತದೆ. ಹಾಗೆಯೇ ಅವನು ತನ್ನ ಹಿಂದಿನ ಜನ್ಮದ ಬಗ್ಗೆ ಮರೆಯುತ್ತಾನೆ. ಹೀಗೆ ಪ್ರಭುವು ಸರ್ವವ್ಯಾಪಿ ಮಾತ್ರವಲ್ಲ; ಅವನು ಪ್ರತಿಯೊಬ್ಬರ ಹೃದಯದಲ್ಲಿ ಅಂತರ್ಯಾಮಿಯೂ ಆಗಿದ್ದಾನೆ. ವಿವಿಧ ಕರ್ಮಗಳಿಗೆ ಪ್ರತಿಫಲವನ್ನು ನೀಡುತ್ತಾನೆ. ಅವನು ನಿರಾಕಾರ ಬ್ರಹ್ಮನ್‌ನಾಗಿ, ದೇವೋತ್ತಮ ಪರಮ ಪುರುಷನಾಗಿ ಮತ್ತು ಅಂತರ್ಯಾಮಿ ಪರಮಾತ್ಮನಾಗಿ ಪೂಜಾರ್ಹ. ಮಾತ್ರವಲ್ಲ, ವೇದಗಳ ಅವತಾರದ ರೂಪನಾಗಿಯೂ ಪೂಜಾರ್ಹನು. ಜನರು ತಮ್ಮ ಬದುಕನ್ನು ಯೋಗ್ಯ ರೀತಿಯಲ್ಲಿ ರೂಪಿಸಿಕೊಂಡು ಭಗವದ್ಧಾಮಕ್ಕೆ ಹಿಂದಿರುಗುವಂತೆ ವೇದಗಳು ಸರಿಯಾದ ಆದೇಶವನ್ನು ನೀಡುತ್ತವೆ. ದೇವೋತ್ತಮ ಪರಮ ಪುರುಷನಾದ ಕೃಷ್ಣನ ವಿಷಯವಾಗಿ ವೇದಗಳು ಜ್ಞಾನವನ್ನು ನೀಡುತ್ತವೆ. ವೇದವ್ಯಾಸರ ಅವತಾರದಲ್ಲಿ ಕೃಷ್ಣನೇ ವೇದಾಂತ ಸೂತ್ರವನ್ನು ಸಂಕಲಿಸಿದನು. ಶ್ರೀಮದ್ಭಾಗವತದಲ್ಲಿ ಶ್ರೀ ವೇದವ್ಯಾಸರು ನೀಡಿರುವ ವೇದಾಂತ ಸೂತ್ರದ ಭಾಷ್ಯವು ಅದರ ನಿಜವಾದ ಅರ್ಥವನ್ನು ಕೊಡುತ್ತದೆ. ಪರಮ ಪ್ರಭುವು ಎಷ್ಟು ಪೂರ್ಣನೆಂದರೆ ಬದ್ಧ ಆತ್ಮದ ಬಿಡುಗಡೆಗಾಗಿ ಅವನೇ ಆಹಾರವನ್ನು ನೀಡಿ ಜೀರ್ಣಗೊಳಿಸುತ್ತಾನೆ. ಅವನೇ ಬದ್ಧಾತ್ಮನ ಕರ್ಮಗಳ ಸಾಕ್ಷಿ. ವೇದಗಳ ರೂಪದಲ್ಲಿ ಅವನೇ ಜ್ಞಾನದಾತ ಮತ್ತು ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನಾಗಿ ಅವನೇ ಭಗವದ್ಗೀತೆಯನ್ನು

ಉಪದೇಶಿಸುತ್ತಾನೆ. ಬದ್ಧ ಆತ್ಮರು ಅವನನ್ನೇ ಪೂಜಿಸಬೇಕು. ಹೀಗೆ ಭಗವಂತನು ಸರ್ವಮಂಗಳ; ಭಗವಂತನು ಸರ್ವಕೃಪಾಮಯ.

**ಅನ್ತಃ ಪ್ರವಿಷ್ಟಃ ಶಾಸ್ತಾ ಜನಾನಾಮ್.** ಜೀವಿಯು ತನ್ನ ಈಗಿನ ದೇಹವನ್ನು ಬಿಡುತ್ತಲೇ ಅದನ್ನು ಮರೆತು ಬಿಡುತ್ತಾನೆ. ಆದರೆ ಪರಮ ಪ್ರಭುವಿನಿಂದ ಪ್ರೇರಿತನಾಗಿ ತನ್ನ ಕೆಲಸವನ್ನು ಮತ್ತೆ ಪ್ರಾರಂಭಿಸುತ್ತಾನೆ. ಅವನು ಮರೆತರೂ ಅವನ ಹಿಂದಿನ ಜನ್ಮವನ್ನು ಎಲ್ಲಿ ಮುಗಿಸಿದನೋ ಅಲ್ಲಿಂದ ತನ್ನ ಕೆಲಸವನ್ನು ಮುಂದುವರಿಸುವಂತೆ ಪ್ರಭುವು ಅವನಿಗೆ ಬುದ್ಧಿಶಕ್ತಿಯನ್ನು ಕೊಡುತ್ತಾನೆ. ಹೀಗೆ ತನ್ನ ಹೃದಯದಲ್ಲಿ ನೆಲೆಸಿರುವ ಪರಮ ಪ್ರಭುವಿನ ಆದೇಶದಂತೆ ಜೀವಿಯು ಈ ಜಗತ್ತಿನಲ್ಲಿ ಸುಖವನ್ನೋ ಕಷ್ಟವನ್ನೋ ಪಡುತ್ತಾನೆ; ಅಷ್ಟೇ ಅಲ್ಲ, ವೇದಗಳನ್ನು ಅರ್ಥಮಾಡಿಕೊಳ್ಳುವ ಅವಕಾಶವನ್ನು ಭಗವಂತನಿಂದ ಪಡೆಯುತ್ತಾನೆ. ವೇದದ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ನಿಜವಾಗಿ ಮನುಷ್ಯನಿಗೆ ಶ್ರದ್ಧೆಯಿದ್ದರೆ ಕೃಷ್ಣನು ಅಗತ್ಯವಾದ ಬುದ್ಧಿಶಕ್ತಿಯನ್ನು ಕೊಡುತ್ತಾನೆ. ವೇದದ ಜ್ಞಾನವನ್ನು ಅರ್ಥಮಾಡಿಕೊಳ್ಳಲು ಅವನು ಏಕೆ ಇಷ್ಟಪಡುತ್ತಾನೆ? ಏಕೆಂದರೆ ಕೃಷ್ಣನನ್ನು ತನ್ನ ಮಟ್ಟಿಗೆ ಅರ್ಥಮಾಡಿಕೊಳ್ಳುವುದು ಜೀವಿಗೆ ಅಗತ್ಯ. ವೇದ ಸಾಹಿತ್ಯವು ಇದನ್ನೂ ದೃಢಪಡಿಸುತ್ತದೆ — **ಯೋಽಸೌ ಸರ್ವೈರ್ ವೇದೈರ್ ಗೀಯತೇ.** ನಾಲ್ಕು ವೇದಗಳಿಂದ ಪ್ರಾರಂಭಿಸಿ ವೇದಾಂತ ಸೂತ್ರ, ಉಪನಿಷತ್ತುಗಳು ಮತ್ತು ಪುರಾಣಗಳು ಎಲ್ಲ ವೇದ ಸಾಹಿತ್ಯದಲ್ಲಿ ಪರಮ ಪ್ರಭುವಿನ ಮಹಿಮೆಯನ್ನು ಹೊಗಳಿದೆ. ವೇದದಲ್ಲಿ ಹೇಳಿರುವ ವಿಧಿಗಳನ್ನು ಆಚರಿಸುವುದು, ವೈದಿಕ ತತ್ವಶಾಸ್ತ್ರವನ್ನು ಚರ್ಚಿಸುವುದು ಮತ್ತು ಭಕ್ತಿಪೂರ್ವಕವಾಗಿ ಪ್ರಭುವಿನ ಪೂಜೆ — ಇವುಗಳಿಂದ ಅವನನ್ನು ಪಡೆಯಬಹುದು. ಆದುದರಿಂದ ವೇದಗಳ ಉದ್ದೇಶವು ಕೃಷ್ಣನನ್ನು ಅರ್ಥಮಾಡಿಕೊಳ್ಳುವುದೇ ಆಗಿದೆ. ಕೃಷ್ಣನನ್ನು ಮತ್ತು ಅವನನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಕ್ರಿಯೆ ಇವುಗಳನ್ನು ಅರ್ಥಮಾಡಿಕೊಳ್ಳಲು ವೇದಗಳು ನಮಗೆ ಮಾರ್ಗದರ್ಶನ ಮಾಡುತ್ತವೆ. ದೇವೋತ್ತಮ ಪರಮ ಪುರುಷನೇ ಪರಮ ಗುರಿ. ಇದನ್ನು ವೇದಾಂತ ಸೂತ್ರವು (1.1.4) ಈ ಮಾತುಗಳಲ್ಲಿ ದೃಢಪಡಿಸುತ್ತದೆ — **ತತ್ ತು ಸಮನ್ವಯಾತ್.** ಮನುಷ್ಯನು ಪರಿಪೂರ್ಣತೆಯನ್ನು ಮೂರು ಹಂತಗಳಲ್ಲಿ ಪಡೆಯಬಹುದು. ವೇದ ಸಾಹಿತ್ಯವನ್ನು ತಿಳಿದುಕೊಂಡು ಮನುಷ್ಯನು ದೇವೋತ್ತಮ ಪರಮ ಪುರುಷನೊಡನೆ ತನ್ನ ಸಂಬಂಧವನ್ನು ಅರ್ಥಮಾಡಿಕೊಳ್ಳಬಹುದು. ವಿವಿಧ ಪ್ರಕ್ರಿಯೆಗಳನ್ನು ಆಚರಿಸುವ ಮೂಲಕ ದೇವೋತ್ತಮ ಪರಮ ಪುರುಷನ ಬಳಿ ಸಾರಬಹುದು. ಕೊನೆಯಲ್ಲಿ ಪರಮಗುರಿಯನ್ನು ಸಾಧಿಸಬಹುದು; ದೇವೋತ್ತಮ ಪರಮ ಪುರುಷನೇ ಆ ಪರಮಗುರಿ. ಈ ಶ್ಲೋಕದಲ್ಲಿ ವೇದಗಳ ಉದ್ದೇಶ, ವೇದಗಳ ಅರ್ಥಸ್ವೀಕಾರ ಮತ್ತು ವೇದಗಳ ಗುರಿ ಇವನ್ನು ಸ್ಪಷ್ಟವಾಗಿ ವಿವರಿಸಿದೆ.

## ಶ್ಲೋಕ - 16

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥೧೬॥**

**ದ್ವೌ**—ಎರಡು; **ಇಮೌ**—ಈ; **ಪುರುಷೌ**—ಜೀವಿಗಳು; **ಲೋಕೇ**—ಜಗತ್ತಿನಲ್ಲಿ; **ಕ್ಷರಃ**—ಚ್ಯುತಿ ಹೊಂದಬಲ್ಲ; **ಚ**—ಮತ್ತು; **ಅಕ್ಷರಃ**—ಚ್ಯುತಿ ಹೊಂದದ; **ಏವ**—ಖಂಡಿತವಾಗಿಯೂ; **ಚ**—ಮತ್ತು;

**ಕ್ಷರಃ**—ಚ್ಯುತಿ ಹೊಂದಬಲ್ಲವು; **ಸರ್ವಾಣಿ**—ಎಲ್ಲ; **ಭೂತಾನಿ**—ಜೀವಿಗಳು; **ಕೂಟಸ್ಥಃ**—ಏಕತ್ವದಲ್ಲಿರುವವನು; **ಅಕ್ಷರಃ**—ಚ್ಯುತಿ ಹೊಂದದವನು; **ಉಚ್ಯತೇ**—ಎಂದು ಹೇಳಲಾಗಿದೆ.

## ಅನುವಾದ

**ಪುರುಷರಲ್ಲಿ ಎರಡು ವರ್ಗಗಳು. ಕ್ಷರರು ಮತ್ತು ಅಕ್ಷರರು. ಈ ಐಹಿಕ ಜಗತ್ತಿನಲ್ಲಿ ಎಲ್ಲ ಜೀವಿಗಳು ಕ್ಷರ. ಆಧ್ಯಾತ್ಮಿಕ ಜಗತ್ತಿನಲ್ಲಿ ಎಲ್ಲ ಜೀವಿಗಳು ಅಕ್ಷರ.**

## ಭಾವಾರ್ಥ

ಆಗಲೇ ವಿವರಿಸಿದಂತೆ ವ್ಯಾಸದೇವರಾಗಿ ತನ್ನ ಅವತಾರದಲ್ಲಿ ಪ್ರಭುವು ವೇದಾಂತ ಸೂತ್ರಗಳನ್ನು ಸಂಗ್ರಹಿಸಿದನು. ಪ್ರಭುವು ಸಂಕ್ಷೇಪವಾಗಿ ವೇದಾಂತ ಸೂತ್ರದ ತಿರುಳನ್ನು ಇಲ್ಲಿ ಕೊಡುತ್ತಿದ್ದಾನೆ. ಅಸಂಖ್ಯಾತರಾದ ಜೀವಿಗಳನ್ನು ಕ್ಷರರು ಮತ್ತು ಅಕ್ಷರರು ಎಂದು ಎರಡು ವರ್ಗಗಳಾಗಿ ವಿಂಗಡಿಸಬಹುದು ಎಂದು ಪ್ರಭುವು ಹೇಳುತ್ತಾನೆ. ಜೀವಿಗಳು ದೇವೋತ್ತಮ ಪರಮ ಪುರುಷನಿಂದ ಶಾಶ್ವತವಾಗಿ ಬೇರೆಯಾದ ವಿಭಿನ್ನಾಂಶಗಳು. ಅವರು ಐಹಿಕ ಜಗತ್ತಿನೊಡನೆ ಸಂಪರ್ಕಪಡೆದಾಗ ಅವರನ್ನು **ಜೀವಭೂತ** ಎಂದು ಕರೆಯಲಾಗುವುದು. **ಕ್ಷರಃ ಸರ್ವಾಣಿ ಭೂತಾನಿ** ಎಂಬ ಇಲ್ಲಿ ಕೊಟ್ಟಿರುವ ಸಂಸ್ಕೃತ ಪದಗಳ ಅರ್ಥವೇನೆಂದರೆ ಜೀವಿಗಳು ಕ್ಷರರು. ಆದರೆ ದೇವೋತ್ತಮ ಪರಮ ಪುರುಷನೊಡನೆ ಒಂದಾದವರನ್ನು ಅಕ್ಷರರು ಎಂದು ಕರೆದಿದೆ. ಒಂದಾಗುವುದು ಎಂದರೆ ಅವರಿಗೆ ವ್ಯಕ್ತಿತ್ವವಿಲ್ಲ ಎಂದಲ್ಲ; ಆದರೆ ವಿಯೋಗವಿಲ್ಲ. ಅವರೆಲ್ಲ ಸೃಷ್ಟಿಯ ಉದ್ದೇಶಕ್ಕೆ ಹೊಂದಿಕೊಂಡವರು. ನಿಜ, ಆಧ್ಯಾತ್ಮಿಕ ಜಗತ್ತಿನಲ್ಲಿ ಸೃಷ್ಟಿ ಎನ್ನುವುದಿಲ್ಲ. ಆದರೆ ವೇದಾಂತ ಸೂತ್ರದಲ್ಲಿ ಹೇಳಿರುವ ಹಾಗೆ ದೇವೋತ್ತಮ ಪರಮ ಪುರುಷನು ಮೂಡಿಬರುವ ಎಲ್ಲದಕ್ಕೂ ಮೂಲವಾದದ್ದರಿಂದ ಆ ಪರಿಕಲ್ಪನೆಯನ್ನು ವಿವರಿಸಿದೆ.

ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನ ಮಾತಿನಂತೆ ಜೀವಿಗಳಲ್ಲಿ ಎರಡು ವರ್ಗಗಳು. ಇದಕ್ಕೆ ವೇದಗಳಲ್ಲಿ ಸಾಕ್ಷ್ಯವಿದೆ. ಆದುದರಿಂದ ಈ ವಿಷಯದಲ್ಲಿ ಸಂದೇಹವಿಲ್ಲ. ಈ ಲೋಕದಲ್ಲಿ ಮನಸ್ಸು ಮತ್ತು ಪಂಚೇಂದ್ರಿಯಗಳೊಡನೆ ಸೆಣಸುತ್ತಿರುವ ಜೀವಿಗಳಿಗೆ ಐಹಿಕ ಶರೀರಗಳಿವೆ. ಈ ಶರೀರಗಳು ಬದಲಾಗುತ್ತಿರುತ್ತವೆ; ಜೀವಿಯು ಬದ್ಧನಾಗಿರುವವರೆಗೆ ಜಡವಸ್ತುವಿನೊಡನೆ ಸಂಬಂಧದಿಂದ ಅವನ ದೇಹವು ಬದಲಾವಣೆ ಹೊಂದುತ್ತಿರುತ್ತದೆ. ಜಡವಸ್ತುವು ಬದಲಾಗುತ್ತಿರುತ್ತದೆ. ಆದುದರಿಂದ ಜೀವಿಯು ಬದಲಾಗುತ್ತಿರುವಂತೆ ಕಾಣುತ್ತದೆ. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ದೇಹವು ಜಡವಸ್ತುವಿನಿಂದ ಆಗಿರುವುದಿಲ್ಲ; ಆದುದರಿಂದ ಬದಲಾವಣೆಯಿಲ್ಲ. ಐಹಿಕ ಜಗತ್ತಿನಲ್ಲಿ ಜೀವಿಯು ಆರು ಬದಲಾವಣೆಗಳನ್ನು ಹೊಂದುತ್ತಾನೆ. ಹುಟ್ಟು, ಬೆಳವಣಿಗೆ, ಕಾಲಾವಧಿ, ಸಂತಾನೋತ್ಪತ್ತಿ, ಕ್ಷಯಿಸುವುದು ಮತ್ತು ಕಣ್ಮರೆಯಾಗುವುದು. ಇವು ಐಹಿಕ ಶರೀರದ ಬದಲಾವಣೆಗಳು. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ದೇಹಕ್ಕೆ ಬದಲಾವಣೆಯಿಲ್ಲ; ಅದಕ್ಕೆ ಮುಪ್ಪಿಲ್ಲ, ಹುಟ್ಟಿಲ್ಲ, ಸಾವಿಲ್ಲ. ಅಲ್ಲಿ ಎಲ್ಲವೂ ಏಕತೆಯಲ್ಲಿರುತ್ತದೆ. **ಕ್ಷರಃ ಸರ್ವಾಣಿ ಭೂತಾನಿ** — ಮೊಟ್ಟಮೊದಲು ಸೃಷ್ಟಿಯಾದ ಬ್ರಹ್ಮನಿಂದ ಪ್ರಾರಂಭಿಸಿ ಸಣ್ಣ ಇರುವೆಯವರೆಗೆ, ಜಡವಸ್ತುವಿನೊಡನೆ ಸಂಪರ್ಕಪಡೆದ ಯಾವುದೇ ಜೀವಿಯು ತನ್ನ ದೇಹವನ್ನು ಬದಲಾಯಿಸುತ್ತಿರುತ್ತದೆ. ಅವರೆಲ್ಲರೂ ಕ್ಷರರು. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ಅವರೆಲ್ಲರೂ

ಏಕತ್ವದಲ್ಲಿ ಮುಕ್ತರಾದವರು.

## ಶ್ಲೋಕ - 17

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ||೧೭||**

**ಉತ್ತಮಃ**—ಅತ್ಯುತ್ತಮನು; **ಪುರುಷಃ**—ಪುರುಷನು; **ತು**—ಆದರೆ; **ಅನ್ಯಃ**—ಇನ್ನೊಬ್ಬನು; **ಪರಮ**—ಪರಮನಾದ; **ಆತ್ಮಾ**—ಆತ್ಮನು; **ಇತಿ**—ಎಂದು; **ಉದಾಹೃತಃ**—ಹೇಳಲಾಗಿದೆ; **ಯಃ**—ಯಾವ; **ಲೋಕ**—ವಿಶ್ವದ; **ತ್ರಯಮ್**—ಮೂರು ಭಾಗಗಳನ್ನು; **ಆವಿಶ್ಯ**—ಪ್ರವೇಶಿಸಿ; **ಬಿಭರ್ತಿ**—ಪೋಷಿಸುತ್ತಾನೆ; **ಅವ್ಯಯಃ**—ಅವ್ಯಯನಾದ; **ಈಶ್ವರಃ**—ಪ್ರಭುವು.

### ಅನುವಾದ

**ಇವರಿಬ್ಬರಲ್ಲದೆ ಅತ್ಯುತ್ತಮನಾದ ಜೀವಂತ ವ್ಯಕ್ತಿಯಾದ ಪರಮಾತ್ಮನು ಸ್ವತಃ ಅವಿನಾಶಿ. ಅವನು ಮೂರು ಜಗತ್ತುಗಳನ್ನೂ ಪ್ರವೇಶಿಸಿದ್ದಾನೆ ಮತ್ತು ಅವುಗಳನ್ನು ಪಾಲಿಸುತ್ತಿದ್ದಾನೆ.**

### ಭಾವಾರ್ಥ

ಈ ಶ್ಲೋಕದ ಅರ್ಥವನ್ನು ಕಠ ಉಪನಿಷತ್ತಿನಲ್ಲಿ (2.2.13) ಮತ್ತು ಶ್ವೇತಾಶ್ವತರ ಉಪನಿಷತ್ತಿನಲ್ಲಿ (6.15) ಸೊಗಸಾಗಿ ವಿವರಿಸಿದೆ. ಅಸಂಖ್ಯಾತ ಜೀವಿಗಳಲ್ಲಿ ಕೆಲವರು ಬದ್ಧರು; ಇನ್ನು ಕೆಲವರು ಮುಕ್ತರು. ಇವರ ಮೇಲೆ ಪರಮಾತ್ಮನಾದ ಪರಮ ಪುರುಷನಿದ್ದಾನೆ ಎಂದು ಅಲ್ಲಿ ಸ್ಪಷ್ಟವಾಗಿ ಹೇಳಿದೆ. ಉಪನಿಷತ್ತಿನ ಪಂಕ್ತಿ ಇದು. **ನಿತ್ಯೋ ನಿತ್ಯಾನಾಂ ಚೇತನಸ್ ಚೇತನಾನಾಮ್.** ಇದರ ಭಾವಾರ್ಥ ಹೀಗಿದೆ — ಬದ್ಧರಾದ ಮತ್ತು ಮುಕ್ತರಾದ ಎಲ್ಲ ಜೀವಿಗಳಲ್ಲಿ ಒಬ್ಬ ಪರಮ ಜೀವಂತ ಪುರುಷನಿದ್ದಾನೆ. ಅವನು ದೇವೋತ್ತಮ ಪರಮ ಪುರುಷ; ಅವನು ಅವರನ್ನು ಪಾಲಿಸುತ್ತಾನೆ ಮತ್ತು ಅವರ ಬೇರೆ ಬೇರೆ ಕರ್ಮಗಳಿಗೆ ಅನುಗುಣವಾಗಿ ಭೋಗಕ್ಕೆ ಎಲ್ಲ ಅನುಕೂಲಗಳನ್ನು ಕೊಡುತ್ತಾನೆ. ಆ ದೇವೋತ್ತಮ ಪರಮ ಪುರುಷನು ಪ್ರತಿಯೊಬ್ಬರ ಹೃದಯದಲ್ಲಿಯೂ ಪರಮಾತ್ಮನಾಗಿ ಇದ್ದಾನೆ. ಅವನನ್ನು ಅರ್ಥಮಾಡಿಕೊಳ್ಳುವ ವಿವೇಕಿಯು ಪರಿಪೂರ್ಣ ಶಾಂತಿಯನ್ನು ಪಡೆಯಲು ಅರ್ಹನು; ಇತರರು ಅರ್ಹರಲ್ಲ.

## ಶ್ಲೋಕ - 18

**ಯಸ್ಮಾತ್ಕ್ಷರ ಮತೀತೋಽಹಮಕ್ಷರಾದಪಿ ಚೋತ್ತಮಃ |**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ||೧೮||**

**ಯಸ್ಮಾತ್**—ಏಕೆಂದರೆ; **ಕ್ಷರಮ್**—ನಾಶವಾಗುವುದಕ್ಕೆ; **ಅತೀತಃ**—ಅತೀತನು; **ಅಹಮ್**—ನಾನು; **ಅಕ್ಷರಾತ್**—ಚ್ಯುತಿ ಹೊಂದದವರನ್ನು ಮೀರಿ; **ಅಪಿ**—ಕೂಡ; **ಚ**—ಮತ್ತು; **ಉತ್ತಮಃ**—ಅತಿ ಉತ್ತಮನು; **ಅತಃ**—ಆದ್ದರಿಂದ; **ಅಸ್ಮಿ**—ಆಗಿದ್ದೇನೆ; **ಲೋಕೇ**—ಪ್ರಪಂಚದಲ್ಲಿ; **ವೇದೇ**—ವೇದ

ಸಾಹಿತ್ಯದಲ್ಲಿ; **ಚ**—ಮತ್ತು; **ಪ್ರಥಿತಃ**—ಪ್ರಸಿದ್ಧನು; **ಪುರುಷ ಉತ್ತಮಃ**—ಪರಮ ಪುರುಷನೆಂದು.

## ಅನುವಾದ

**ನಾನು ಕ್ಷರ ಮತ್ತು ಅಕ್ಷರಗಳಿಗೆ ಅತೀತನು ಮತ್ತು ಅತ್ಯುತ್ತಮನು. ಆದುದರಿಂದ ಪ್ರಪಂಚವೂ ವೇದಗಳೂ ಪುರುಷೋತ್ತಮನೆಂದು ನನ್ನನ್ನು ಪ್ರಾರ್ಥನೆಮಾಡುತ್ತವೆ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಬದ್ಧ ಆತ್ಮನಾಗಲೀ, ಮುಕ್ತ ಆತ್ಮನಾಗಲೀ ಮೀರಲಾರರು. ಆದುದರಿಂದ ಅವನು ಪುರುಷೋತ್ತಮನು. ಜೀವಿಗಳು ಮತ್ತು ದೇವೋತ್ತಮ ಪರಮ ಪುರುಷನು ವ್ಯಕ್ತಿಗಳು ಎನ್ನುವುದು ಈಗ ಸ್ಪಷ್ಟವಾಗಿದೆ. ಆದರೆ ವ್ಯತ್ಯಾಸವೆಂದರೆ ಬದ್ಧ ಸ್ಥಿತಿಯಲ್ಲಾಗಲೀ, ಮುಕ್ತ ಸ್ಥಿತಿಯಲ್ಲಾಗಲೀ ಪ್ರಮಾಣದಲ್ಲಾಗಲೀ ಜೀವಿಗಳು ದೇವೋತ್ತಮ ಪರಮ ಪುರುಷನ ಊಹಾತೀತವಾದ ಶಕ್ತಿಗಳನ್ನು ಮೀರಿಸಲಾರರು. ಪರಮ ಪ್ರಭುವೂ ಜೀವಿಗಳೂ ಒಂದೇ ಮಟ್ಟದವರು ಅಥವಾ ಎಲ್ಲ ರೀತಿಯಲ್ಲಿಯೂ ಸಮಾನರು ಎಂದು ಯೋಚಿಸುವುದು ತಪ್ಪಾಗುತ್ತದೆ. ಅವರ ವ್ಯಕ್ತಿತ್ವಗಳಲ್ಲಿ ಮೇಲು-ಕೀಳುಗಳ ಪ್ರಶ್ನೆಯಿದೆ. **ಉತ್ತಮ** ಎನ್ನುವ ಪದವು ಬಹು ಅರ್ಥವತ್ತಾದದ್ದು. ದೇವೋತ್ತಮ ಪರಮ ಪುರುಷನನ್ನು ಯಾರೂ ಮೀರಿಸಲಾರರು.

**ಲೋಕೇ** ಎನ್ನುವ ಪದಕ್ಕೆ **ಪೌರುಷ ಆಗಮ** (ಸ್ಮೃತಿ ಧರ್ಮಗ್ರಂಥ)ಗಳಲ್ಲಿ ಎಂದರ್ಥ. ನಿರುಕ್ತಿ ನಿಘಂಟಿನಲ್ಲಿ ದೃಢಪಡಿಸಿದಂತೆ **ಲೋಕ್ಯತೇ ವೇದಾರ್ಥೋಽನೇನ** — 'ವೇದಗಳ ಉದ್ದೇಶವನ್ನು ಸ್ಮೃತಿ ಧರ್ಮಗ್ರಂಥಗಳಲ್ಲಿ ವಿವರಿಸಿದೆ.'

ಅಂತರ್ಯಾಮಿ ಪರಮಾತ್ಮನಾಗಿ ಪರಮ ಪ್ರಭುವನ್ನು ವೇದಗಳಲ್ಲಿಯೇ ವರ್ಣಿಸಿದೆ. ಈ ಕೆಳಗಿನ ಶ್ಲೋಕವು ವೇದಗಳಲ್ಲಿದೆ (ಛಾಂದೋಗ್ಯ ಉಪನಿಷತ್, 8.12.3) — **ತಾವದ್ ಏಷ ಸಮ್ಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರೂಪಂ ಸಮ್ಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ.** "ದೇಹದಿಂದ ಹೊರಗೆ ಬಂದ ಪರಮಾತ್ಮನು ನಿರಾಕಾರ ಬ್ರಹ್ಮಜ್ಯೋತಿಯನ್ನು ಪ್ರವೇಶಿಸುತ್ತಾನೆ; ಅನಂತರ ಅವನು ತನ್ನ ರೂಪದಲ್ಲಿ ತನ್ನ ಆಧ್ಯಾತ್ಮಿಕ ವ್ಯಕ್ತಿತ್ವದಲ್ಲಿ ಇರುತ್ತಾನೆ. ಆ ಪರಮೋನ್ನತನಿಗೆ ಪರಮ ಪುರುಷನೆಂದು ಹೆಸರು." ಹೀಗೆಂದರೆ, ಪುರುಷೋತ್ತಮನು ತನ್ನ ದಿವ್ಯಪ್ರಭೆಯನ್ನು ತೋರುತ್ತಿದ್ದಾನೆ ಮತ್ತು ಪಸರಿಸುತ್ತಿದ್ದಾನೆ. ಈ ಪ್ರಭೆಯು ಪರಮಪ್ರಭೆ ಎಂದರ್ಥ. ಪುರುಷೋತ್ತಮನಿಗೆ ಪರಮಾತ್ಮನಾಗಿ ಒಂದು ಸ್ಥಳೀಯ ಲಕ್ಷಣವಿದೆ. ಸತ್ಯವತಿ ಮತ್ತು ಪರಾಶರ ಮುನಿಗಳ ಮಗನಾಗಿ ಅವತರಿಸಿ ವ್ಯಾಸದೇವರಾಗಿ ಅವನು ವೇದ ಜ್ಞಾನವನ್ನು ವಿವರಿಸುತ್ತಾನೆ.

## ಶ್ಲೋಕ - 19

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥೧೯॥**

**ಯಃ**—ಯಾವ; **ಮಾಮ್**—ನನ್ನನ್ನು; **ಏವಮ್**—ಹೀಗೆ; **ಅಸಮ್ಮೂಢಃ**—ಸಂದೇಹವಿಲ್ಲದವನು; **ಜಾನಾತಿ**—ತಿಳಿಯುತ್ತಾನೋ; **ಪುರುಷ ಉತ್ತಮಮ್**—ದೇವೋತ್ತಮ ಪರಮ ಪುರುಷನೆಂದು; **ಸಃ**—ಅವನು; **ಸರ್ವವಿತ್**—ಸರ್ವಜ್ಞನು; **ಭಜತಿ**—ಭಕ್ತಿಸೇವೆಯನ್ನು ಸಲ್ಲಿಸುತ್ತಾನೆ; **ಮಾಮ್**—ನನಗೆ; **ಸರ್ವಭಾವೇನ**—ಎಲ್ಲ ರೀತಿಗಳಲ್ಲಿ; **ಭಾರತ**—ಭರತ ಪುತ್ರನೇ.

## ಅನುವಾದ

**ಭರತ ವಂಶದವನಾದ ಅರ್ಜುನನೆ! ಯಾರು ನನ್ನನ್ನು ಸಂದೇಹವಿಲ್ಲದೆ ದೇವೋತ್ತಮ ಪರಮ ಪುರುಷನೆಂದು ತಿಳಿಯುತ್ತಾನೋ ಅವನು ಎಲ್ಲವನ್ನೂ ತಿಳಿದವನು. ಆದ್ದರಿಂದ ಆತನು ಸಂಪೂರ್ಣ ಭಕ್ತಿಸೇವೆಯಲ್ಲಿ ನಿರತನಾಗಿರುತ್ತಾನೆ.**

## ಭಾವಾರ್ಥ

ಜೀವಿಗಳು ಮತ್ತು ಪರಮ ಪರಿಪೂರ್ಣ ಸತ್ಯ ಇವುಗಳ ಸ್ವರೂಪವನ್ನು ಕುರಿತು ತತ್ವಶಾಸ್ತ್ರದ ಹಲವು ಊಹಾತ್ಮಕ ಚಿಂತನೆಗಳಿವೆ. ಕೃಷ್ಣನು ಪುರುಷೋತ್ತಮನೆಂದು ತಿಳಿದವನು ಎಲ್ಲವನ್ನೂ ಬಲ್ಲವನು ಎಂದು ಈ ಶ್ಲೋಕದಲ್ಲಿ ದೇವೋತ್ತಮ ಪರಮ ಪುರುಷನು ಸ್ಪಷ್ಟವಾಗಿ ವಿವರಿಸುತ್ತಾನೆ. ಪರಿಪೂರ್ಣವಾಗಿ ತಿಳಿಯದವನು ಪರಮಸತ್ಯವನ್ನು ಕುರಿತು ಊಹಾತ್ಮಕ ಚಿಂತನೆ ಮಾಡುತ್ತಲೇ ಇರುತ್ತಾನೆ; ಆದರೆ ಪರಿಪೂರ್ಣವಾಗಿ ತಿಳಿದವನು ತನ್ನ ಮೌಲಿಕವಾದ ಸಮಯವನ್ನು ಹಾಳುಮಾಡದೆ ನೇರವಾಗಿ ಕೃಷ್ಣಪ್ರಜ್ಞೆಯಲ್ಲಿ ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗುತ್ತಾನೆ. ಇಡೀ ಭಗವದ್ಗೀತೆಯುದ್ದಕ್ಕೂ ಹೆಜ್ಜೆ ಹೆಜ್ಜೆಗೂ ಈ ಅಂಶವನ್ನು ಒತ್ತಿ ಹೇಳಿದೆ. ಇಷ್ಟಾದರೂ ಪರಮ ಪರಿಪೂರ್ಣ ಸತ್ಯವೂ ಜೀವಿಗಳೂ ಒಂದೇ ಎಂದು ಭಾವಿಸುವ ಭಗವದ್ಗೀತೆಯ ಎಷ್ಟೋಮಂದಿ ಹಠಮಾರಿ ವ್ಯಾಖ್ಯಾನಕಾರರಿದ್ದಾರೆ.

ವೇದದ ಜ್ಞಾನವನ್ನು ಶ್ರುತಿ ಎಂದು ಕರೆದಿದೆ. ಹೀಗೆಂದರೆ ಕೇಳಿ ತಿಳಿದುಕೊಳ್ಳುವುದು. ಸಂದೇಶವನ್ನು ಕೃಷ್ಣ ಮತ್ತು ಅವನ ಪ್ರತಿನಿಧಿಗಳಂತಹ ಅಧಿಕಾರಿಗಳಿಂದ ವಾಸ್ತವವಾಗಿ ಪಡೆಯಬೇಕು. ಕೃಷ್ಣನು ಇಲ್ಲಿ ಪ್ರತಿಯೊಂದನ್ನೂ ಬಹು ಸೊಗಸಾಗಿ ಸ್ಪಷ್ಟಪಡಿಸುತ್ತಾನೆ. ಮನುಷ್ಯನು ಈ ಮೂಲದಿಂದ ಕೇಳಿ ತಿಳಿದುಕೊಳ್ಳಬೇಕು. ಹಂದಿಗಳಂತೆ ಸುಮ್ಮನೆ ಕೇಳಿದರೆ ಸಾಲದು. ತಕ್ಕ ಆಚಾರ್ಯರಿಂದ ಕೇಳಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿರಬೇಕು. ಎಂದರೆ, ವಿದ್ವತ್ಪೂರ್ಣವಾಗಿ ಸುಮ್ಮನೆ ಊಹಾತ್ಮಕ ಚಿಂತನೆ ಮಾಡಬೇಕು ಎಂದಲ್ಲ. ಈ ಜೀವಿಗಳು ಯಾವಾಗಲೂ ದೇವೋತ್ತಮ ಪರಮ ಪುರುಷನಿಗೆ ಅಧೀನರು ಎನ್ನುವುದನ್ನು ನಮ್ರನಾಗಿ ಭಗವದ್ಗೀತೆಯಿಂದ ಕೇಳಬೇಕು. ದೇವೋತ್ತಮ ಪರಮ ಪುರುಷನಾದ ಶ್ರೀಕೃಷ್ಣನು ಹೇಳುವಂತೆ ಇದನ್ನು ಅರ್ಥಮಾಡಿಕೊಳ್ಳಬಲ್ಲವನೇ ವೇದಗಳ ಉದ್ದೇಶವನ್ನು ಬಲ್ಲವನು; ಬೇರೆ ಯಾರಿಗೂ ವೇದಗಳ ಉದ್ದೇಶವು ತಿಳಿಯದು.

**ಭಜತಿ** ಎನ್ನುವ ಶಬ್ದವು ಬಹಳ ಅರ್ಥವತ್ತಾದದ್ದು. ಅನೇಕ ಸ್ಥಳಗಳಲ್ಲಿ ಭಜತಿ ಎನ್ನುವ ಪದವನ್ನು ಪರಮ ಪ್ರಭುವಿನ ಸೇವೆಗೆ ಸಂಬಂಧಿಸಿದಂತೆ ಬಳಸಿದೆ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಪ್ರಭುವಿನ ಭಕ್ತಿಸೇವೆಯಲ್ಲಿ ಮನುಷ್ಯನು ತೊಡಗಿದ್ದರೆ ಅವನಿಗೆ ಎಲ್ಲ ವೇದ

ಜ್ಞಾನವು ತಿಳಿದಿದೆ ಎಂದು ಅರ್ಥಮಾಡಿಕೊಳ್ಳಬೇಕು. ಮನುಷ್ಯನು ಕೃಷ್ಣನ ಭಕ್ತಿಸೇವೆಯಲ್ಲಿ ನಿರತನಾಗಿದ್ದರೆ ಪರಮ ಪರಿಪೂರ್ಣ ಸತ್ಯವನ್ನು ಅರಿಯಲು ಬೇರೆ ಯಾವುದೇ ಆಧ್ಯಾತ್ಮಿಕ ಪ್ರಕ್ರಿಯೆಯ ಅಗತ್ಯವಿಲ್ಲ ಎಂದು ವೈಷ್ಣವ ಪರಂಪರೆಯಲ್ಲಿ ಹೇಳಿದೆ. ಅವನು ಆಗಲೇ ಆ ಮಟ್ಟಕ್ಕೆ ಬಂದಿದ್ದಾನೆ. ಏಕೆಂದರೆ ಅವನು ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗಿದ್ದಾನೆ. ಅರಿವಿನ ಪೂರ್ವಭಾವಿ ಪ್ರಕ್ರಿಯೆಗಳನ್ನೆಲ್ಲ ಅವನು ಮುಗಿಸಿದ್ದಾನೆ. ಆದರೆ ಲಕ್ಷಾಂತರ ಜನ್ಮಗಳಲ್ಲಿ ಊಹಾತ್ಮಕ ಚಿಂತನೆ ಮಾಡಿಯೂ, ಕೃಷ್ಣನೇ ದೇವೋತ್ತಮ ಪರಮ ಪುರುಷ ಮತ್ತು ತಾನು ಅವನಿಗೆ ಶರಣಾಗಬೇಕು ಎನ್ನುವ ಮಟ್ಟಕ್ಕೆ ಯಾರಾದರೂ ಬಾರದೇ ಹೋದರೆ, ಅಷ್ಟೊಂದು ವರ್ಷಗಳಲ್ಲಿ ಮತ್ತು ಜನ್ಮಗಳಲ್ಲಿ ಮಾಡಿದ ಅವನ ಊಹಾತ್ಮಕ ಚಿಂತನೆ ಕೇವಲ ವ್ಯರ್ಥಕಾಲಹರಣ.

## ಶ್ಲೋಕ - 20

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥೨೦॥**

**ಇತಿ**—ಹೀಗೆ; **ಗುಹ್ಯತಮಮ್**—ಅತಿ ರಹಸ್ಯವಾದ; **ಶಾಸ್ತ್ರಮ್**—ಅಪೌರುಷೇಯ ಧರ್ಮ ಗ್ರಂಥವನ್ನು; **ಇದಮ್**—ಈ; **ಉಕ್ತಮ್**—ಹೇಳಲಾಗಿದೆ; **ಮಯಾ**—ನನ್ನಿಂದ; **ಅನಘ**—ಪಾಪರಹಿತನೇ; **ಏತತ್**—ಇದನ್ನು; **ಬುದ್ಧ್ವಾ**—ತಿಳಿದು; **ಬುದ್ಧಿಮಾನ್**—ಬುದ್ಧಿವಂತನು; **ಸ್ಯಾತ್**—ಆಗುತ್ತಾನೆ; **ಕೃತ ಕೃತ್ಯಃ**—ತನ್ನ ಪ್ರಯತ್ನಗಳಲ್ಲಿ ಅತ್ಯಂತ ಪರಿಪೂರ್ಣನು; **ಚ**—ಮತ್ತು; **ಭಾರತ**—ಭರತ ಪುತ್ರನೇ.

## ಅನುವಾದ

**ಪಾಪರಹಿತನಾದ ಅರ್ಜುನನೆ, ಇದು ವೇದಗಳ ಅತ್ಯಂತ ರಹಸ್ಯವಾದ ಭಾಗ. ಇದನ್ನು ಅರ್ಥಮಾಡಿಕೊಂಡವನು ಬುದ್ಧಿವಂತನಾಗುತ್ತಾನೆ; ಅವನ ಎಲ್ಲ ಪ್ರಯತ್ನಗಳು ಪರಿಪೂರ್ಣವಾಗುತ್ತವೆ.**

## ಭಾವಾರ್ಥ

ಇದು ಎಲ್ಲ ಅಪೌರುಷೇಯ ಧರ್ಮಗ್ರಂಥಗಳ ತಿರುಳು ಎಂದು ಇಲ್ಲಿ ಪ್ರಭುವು ಸ್ಪಷ್ಟವಾಗಿ ವಿವರಿಸುತ್ತಾನೆ. ದೇವೋತ್ತಮ ಪರಮ ಪುರುಷನು ಕೊಟ್ಟಿರುವಂತೆ ಇದನ್ನು ಅರ್ಥಮಾಡಿಕೊಳ್ಳಬೇಕು. ಆಗ ಮನುಷ್ಯನು ದಿವ್ಯ ಜ್ಞಾನದಲ್ಲಿ ಪರಿಣತನೂ ಪರಿಪೂರ್ಣನೂ ಆಗುತ್ತಾನೆ. ಎಂದರೆ, ದೇವೋತ್ತಮ ಪರಮ ಪುರುಷನ ಈ ತತ್ವಜ್ಞಾನವನ್ನು ತಿಳಿದುಕೊಳ್ಳಬೇಕು ಮತ್ತು ಅವನ ದಿವ್ಯಸೇವೆಯಲ್ಲಿ ತೊಡಗಬೇಕು; ಆಗ ಪ್ರತಿಯೊಬ್ಬರೂ ಐಹಿಕ ಪ್ರಕೃತಿಯ ಗುಣಗಳ ಎಲ್ಲ ಕಲ್ಮಷದ ಸೋಂಕಿನಿಂದ ಬಿಡುಗಡೆಯನ್ನು ಹೊಂದಬಹುದು. ಭಕ್ತಿಸೇವೆಯು ಆಧ್ಯಾತ್ಮಿಕ ಅರಿವಿನ ಒಂದು ಪ್ರಕ್ರಿಯೆ. ಭಕ್ತಿಸೇವೆಯು ಇರುವೆಡೆಯಲ್ಲಿ ಐಹಿಕ ಕಲ್ಮಷದ ಸೋಂಕು ಇರಲಾರದು. ಪ್ರಭುವಿಗೆ ಭಕ್ತಿಸೇವೆ, ಪ್ರಭು — ಎರಡೂ ಒಂದೇ. ಏಕೆಂದರೆ ಅವು ಅಲೌಕಿಕವಾದವು; ಭಕ್ತಿಸೇವೆಯು ಪರಮ ಪ್ರಭುವಿನ ಅಂತರಂಗ ಶಕ್ತಿಯಲ್ಲಿ ನಡೆಯುತ್ತದೆ. ಪ್ರಭುವನ್ನು ಸೂರ್ಯ ಎನ್ನುತ್ತಾರೆ; ಅಜ್ಞಾನವನ್ನು ಕತ್ತಲು ಎನ್ನುತ್ತಾರೆ. ಸೂರ್ಯನಿರುವ ಕಡೆ

ಕತ್ತಲೆಯ ಪ್ರಶ್ನೆಯೇ ಇಲ್ಲ. ಆದುದರಿಂದ, ಸದ್ಗುರುವಿನ ಯೋಗ್ಯಮಾರ್ಗದರ್ಶನದಲ್ಲಿ ಭಕ್ತಿಸೇವೆಯು ಇರುವ ಕಡೆ ಅಜ್ಞಾನದ ಮಾತೇ ಇಲ್ಲ.

ಬುದ್ಧಿವಂತರೂ ಪರಿಶುದ್ಧರೂ ಆಗಲು ಪ್ರತಿಯೊಬ್ಬರೂ ಈ ಕೃಷ್ಣಪ್ರಜ್ಞೆಯನ್ನು ಅನುಸರಿಸಬೇಕು; ಭಕ್ತಿಸೇವೆಯಲ್ಲಿ ತೊಡಗಬೇಕು. ಕೃಷ್ಣನನ್ನು ಅರ್ಥಮಾಡಿಕೊಂಡು ಭಕ್ತಿಸೇವೆಯಲ್ಲಿ ನಿರತರಾಗುವ ಈ ಸ್ಥಿತಿಗೆ ಮನುಷ್ಯನು ಬರಬೇಕು. ಹಾಗಲ್ಲದೆ ಯಾವುದೋ ಸಾಮಾನ್ಯ ಮನುಷ್ಯನ ದೃಷ್ಟಿಯಲ್ಲಿ ಅವನು ಎಷ್ಟೇ ಬುದ್ಧಿವಂತನಾದರೂ ಆತನಿಗೆ ಪರಿಪೂರ್ಣ ಬುದ್ಧಿ ಇಲ್ಲ.

ಅರ್ಜುನನನ್ನು **ಅನಘ** ಎಂದು ಸಂಬೋಧಿಸಲಾಗಿದೆ. ಇದು ಅರ್ಥವತ್ತಾಗಿದೆ. **ಅನಘ,** ಎಂದರೆ ಪಾಪರಹಿತ. ಮನುಷ್ಯನು ಎಲ್ಲ ಪಾಪಮಯ ಪ್ರತಿಕ್ರಿಯೆಗಳಿಂದ ಮುಕ್ತನಾಗದಿದ್ದರೆ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಮನುಷ್ಯನು ಎಲ್ಲ ಕಲ್ಮಷದ ಸೋಂಕಿನಿಂದ, ಎಲ್ಲ ಪಾಪಕರ್ಮದಿಂದ ಮುಕ್ತನಾಗಬೇಕು; ಆಗ ಅವನಿಗೆ ಅರ್ಥವಾಗುತ್ತದೆ. ಆದರೆ ಭಕ್ತಿಸೇವೆಯ ಪರಿಶುದ್ಧತೆ ಮತ್ತು ಶಕ್ತಿ ಎಷ್ಟು ಎಂದರೆ ಮನುಷ್ಯನು ಭಕ್ತಿಸೇವೆಯಲ್ಲಿ ತೊಡಗಿದನೆಂದರೆ ಅವನು ತಂತಾನೇ ಪಾಪರಹಿತನಾಗುತ್ತಾನೆ.

ಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಪರಿಶುದ್ಧ ಭಕ್ತರ ಸಹವಾಸದಲ್ಲಿ ಭಕ್ತಿಸೇವೆಯನ್ನು ಮಾಡುತ್ತಿರುವಾಗ ಕೆಲವು ಅಂಶಗಳನ್ನು ಸಂಪೂರ್ಣವಾಗಿ ಗೆಲ್ಲುವುದು ಅಗತ್ಯ. ಬಹು ಮುಖ್ಯವಾದ ಸಂಗತಿ ಎಂದರೆ ಮನುಷ್ಯನು ಹೃದಯದೌರ್ಬಲ್ಯವನ್ನು ಗೆಲ್ಲಬೇಕು. ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸುವ ಬಯಕೆಯಿಂದ ಮೊದಲನೆಯ ಪತನವಾಗುತ್ತದೆ. ಇದರಿಂದ ಮನುಷ್ಯನು ಪರಮ ಪ್ರಭುವಿನ ಪ್ರೇಮಪೂರ್ವಕ ದಿವ್ಯ ಸೇವೆಯನ್ನು ಬಿಟ್ಟುಬಿಡುತ್ತಾನೆ. ಎರಡನೆಯ ಹೃದಯ ದೌರ್ಬಲ್ಯವೆಂದರೆ ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆಯನ್ನು ನಡೆಸುವ ಪ್ರವೃತ್ತಿಯನ್ನು ಬೆಳೆಸಿಕೊಂಡಂತೆ, ಮನುಷ್ಯನು ಜಡವಸ್ತುವಿನಲ್ಲಿ ಮತ್ತು ಆದರ ಗಳಿಕೆಯಲ್ಲಿ ಆಸಕ್ತಿಹೊಂದುತ್ತಾನೆ. ಐಹಿಕ ಅಸ್ತಿತ್ವದ ಸಮಸ್ಯೆಗಳಿಗೆ ಹೃದಯದ ಈ ದೌರ್ಬಲ್ಯಗಳೇ ಕಾರಣ. ಈ ಅಧ್ಯಾಯದಲ್ಲಿ ಮೊದಲ ಐದು ಶ್ಲೋಕಗಳು ಈ ಹೃದಯ ದೌರ್ಬಲ್ಯಗಳಿಂದ ಬಿಡುಗಡೆ ಪಡೆಯುವ ಪ್ರಕ್ರಿಯೆಯನ್ನು ವರ್ಣಿಸುತ್ತವೆ. ಆರನೆಯ ಶ್ಲೋಕದಿಂದ ಕೊನೆಯವರೆಗೆ ಅಧ್ಯಾಯದ ಭಾಗವು **ಪುರುಷೋತ್ತಮ ಯೋಗ**ವನ್ನು ಚರ್ಚಿಸುತ್ತದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಪುರುಷೋತ್ತಮ ಯೋಗ" ಎಂಬ ಹದಿನೈದನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

## ಅಧ್ಯಾಯ - 16

# ದೈವೀ ಹಾಗೂ ಆಸುರೀ ಸ್ವಭಾವಗಳು

### ಶ್ಲೋಕ 1-3

**ಶ್ರೀ ಭಗವಾನುವಾಚ**

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥೧॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥೨॥**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ॥೩॥**

**ಶ್ರೀಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಅಭಯಮ್**—ನಿರ್ಭೀತಿಯು; **ಸತ್ತ್ವ ಸಂಶುದ್ಧಿಃ**—ತನ್ನ ಅಸ್ತಿತ್ವದ ಶುದ್ಧಿಯು; **ಜ್ಞಾನ**—ಜ್ಞಾನದಲ್ಲಿ; **ಯೋಗ**—ಸಂಯೋಜಿಸುವ; **ವ್ಯವಸ್ಥಿತಿಃ**—ಸನ್ನಿವೇಶವು; **ದಾನಮ್**—ದಾನವು; **ದಮಃ**—ಮನೋನಿಗ್ರಹವು; **ಚ**—ಮತ್ತು; **ಯಜ್ಞಃ**—ಯಜ್ಞಾಚರಣೆಯು; **ಚ**—ಮತ್ತು; **ಸ್ವಾಧ್ಯಾಯಃ**—ವೇದ ಸಾಹಿತ್ಯಾಧ್ಯಯನ; **ತಪಃ**—ತಪಸ್ಸು; **ಆರ್ಜವಮ್**—ಸರಳತೆ; **ಅಹಿಂಸಾ**—ಅಹಿಂಸೆ; **ಸತ್ಯಮ್**—ಸತ್ಯ; **ಅಕ್ರೋಧಃ**—ಕೋಪವಿಲ್ಲದಿರುವಿಕೆ; **ತ್ಯಾಗಃ**—ತ್ಯಾಗವು; **ಶಾನ್ತಿಃ**—ಶಾಂತಿಯು; **ಅಪೈಶುನಮ್**—ತಪ್ಪು ಹುಡುಕುವುದರಲ್ಲಿ ವಿಮುಖತೆ; **ದಯಾ**—ದಯೆ; **ಭೂತೇಷು**—ಎಲ್ಲ ಜೀವಿಗಳಲ್ಲಿಯೂ; **ಅಲೋಲುಪ್ತ್ವಮ್**—ಲೋಭವಿಲ್ಲದಿರುವಿಕೆ; **ಮಾರ್ದವಮ್**—ಸಭ್ಯತೆ; **ಹ್ರೀಃ**—ಸೌಜನ್ಯ; **ಅಚಾಪಲಮ್**—ದೃಢತೆ; **ತೇಜಃ**—ತೇಜಸ್ಸು; **ಕ್ಷಮಾ**—ಕ್ಷಮೆ; **ಧೃತಿಃ**—ಸ್ಥೈರ್ಯ; **ಶೌಚಮ್**—ಶುಚಿತ್ವ; **ಅದ್ರೋಹಃ**—ಅಸೂಯೆಯಿಲ್ಲದಿರುವಿಕೆ; **ನ ಅತಿಮಾನಿತಾ**—ಗೌರವ ನಿರೀಕ್ಷೆ ಇಲ್ಲದಿರುವಿಕೆ; **ಭವನ್ತಿ**—ಇರುತ್ತವೆ; **ಸಮ್ಪದಮ್**—ಗುಣಗಳನ್ನು; **ದೈವೀಮ್**—ದಿವ್ಯಸ್ವಭಾವದ; **ಅಭಿಜಾತಸ್ಯ**—ತಳೆದು ಹುಟ್ಟಿದವನಿಗೆ; **ಭಾರತ**—ಭರತಪುತ್ರನೇ.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಭರತವಂಶದವನಾದ ಅರ್ಜುನನೆ! ಅಭಯ, ಅಸ್ತಿತ್ವದ ಶುದ್ಧಿ, ದಿವ್ಯಜ್ಞಾನವನ್ನು ಬೆಳೆಸಿಕೊಳ್ಳುವುದು, ದಾನ, ಆತ್ಮಸಂಯಮ, ಯಜ್ಞ, ವೇದಾಧ್ಯಯನ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಕೋಪಮಾಡಿಕೊಳ್ಳದಿರುವುದು, ತ್ಯಾಗ, ಶಾಂತಿ, ತಪ್ಪು ಹುಡುಕುವುದರಲ್ಲಿ ವಿಮುಖತೆ, ಎಲ್ಲ ಜೀವಿಗಳಲ್ಲಿ ದಯೆ, ದುರಾಶೆಯಿಲ್ಲದಿರುವುದು,**

**ಮೃದುಸ್ವಭಾವ, ನಮ್ರತೆ, ದೃಢಸಂಕಲ್ಪ, ತೇಜಸ್ಸು, ಕ್ಷಮೆ, ಸ್ಥೈರ್ಯ, ಶುಚಿತ್ವ ಮತ್ತು ಅಸೂಯೆಯಿಂದಲೂ ಗೌರವಕ್ಕಾಗಿ ಆಸೆಪಡುವುದರಿಂದಲೂ ಮುಕ್ತವಾಗಿರುವುದು — ಈ ದಿವ್ಯ ಗುಣಗಳು ದೈವೀ ಸ್ವಭಾವವಿರುವ ಪುಣ್ಯಶೀಲರಲ್ಲಿ ಇರುತ್ತವೆ.**

## ಭಾವಾರ್ಥ

ಹದಿನೈದನೆಯ ಅಧ್ಯಾಯದ ಪ್ರಾರಂಭದಲ್ಲಿ ಈ ಐಹಿಕ ಜಗತ್ತೆಂಬ ಅಶ್ವತ್ಥವೃಕ್ಷವನ್ನು ವಿವರಿಸಲಾಗಿದೆ. ಅದರಿಂದ ಹೊರಕ್ಕೆ ಬರುವ ಹೆಚ್ಚಿನ ಬೇರುಗಳನ್ನು ಜೀವಿಗಳ ಕರ್ಮಗಳಿಗೆ ಹೋಲಿಸಲಾಯಿತು; ಇವುಗಳಲ್ಲಿ ಕೆಲವು ಶುಭವಾದವು, ಮತ್ತೆ ಕೆಲವು ಅಶುಭವಾದವು. ಒಂಬತ್ತನೆಯ ಅಧ್ಯಾಯದಲ್ಲಿ ಸಹ ದೇವಾಸುರರನ್ನು ವಿವರಿಸಲಾಯಿತು. ವೇದದ ವಿಧಿಗಳಿಗನುಗುಣವಾಗಿ ಸತ್ವಗುಣದ ಕರ್ಮಗಳು ಮುಕ್ತಿಯ ಮಾರ್ಗದಲ್ಲಿ ಮುನ್ನಡೆಯಲು ಶುಭಕರವಾದವು ಎಂದು ಪರಿಗಣಿಸಲಾಗಿದೆ; ಇಂತಹ ಕರ್ಮಗಳಿಗೆ **ದೈವೀಪ್ರಕೃತಿ** ಎಂದು ಹೆಸರು. ಈ ದಿವ್ಯ ಸ್ವಭಾವದಲ್ಲಿ ನೆಲೆಸಿರುವವರು ಮುಕ್ತಿಮಾರ್ಗದಲ್ಲಿ ಪ್ರಕೃತಿಯನ್ನು ಸಾಧಿಸುತ್ತಾರೆ. ಆದರೆ ರಾಜಸ ಮತ್ತು ತಾಮಸ ಗುಣಗಳಲ್ಲಿ ಕರ್ಮ ಮಾಡುವವರಿಗೆ ಮುಕ್ತಿಯ ಸಾಧ್ಯತೆಯೇ ಇಲ್ಲ. ಅವರು ಐಹಿಕ ಜಗತ್ತಿನಲ್ಲಿ ಮನುಷ್ಯರಾಗಿಯೇ ಉಳಿಯಬೇಕಾಗುತ್ತದೆ ಅಥವಾ ಪ್ರಾಣಿವರ್ಗಗಳ ಅಥವಾ ಇನ್ನೂ ಕೆಳಮಟ್ಟದ ಜೀವರೂಪಗಳ ಮಟ್ಟಕ್ಕೆ ಇಳಿಯಬೇಕಾಗುತ್ತದೆ. ಈ ಹದಿನಾರನೆಯ ಅಧ್ಯಾಯದಲ್ಲಿ ದಿವ್ಯಸ್ವಭಾವ ಮತ್ತು ಅದರ ಆನುಷಂಗಿಕ ಗುಣಗಳನ್ನೂ, ಆಸುರೀ ಸ್ವಭಾವ ಮತ್ತು ಅದರ ಗುಣಗಳನ್ನೂ ಪ್ರಭುವು ವಿವರಿಸುತ್ತಾನೆ. ಈ ಗುಣಗಳ ಅನುಕೂಲ ಮತ್ತು ಅನನುಕೂಲಗಳನ್ನು ಅವನು ವಿವರಿಸುತ್ತಾನೆ.

ದಿವ್ಯಗುಣಗಳೊಡನೆ ಅಥವಾ ದೈವೀ ಪ್ರವೃತ್ತಿಗಳೊಡನೆ ಹುಟ್ಟಿದವನನ್ನು **ಅಭಿಜಾತಸ್ಯ** ಎಂದು ಕರೆದಿರುವುದು ಬಹು ಮಹತ್ವದ ಅಂಶ. ದೈವೀ ವಾತಾವರಣದಲ್ಲಿ ಸಂತಾನವನ್ನು ಪಡೆಯುವುದಕ್ಕೆ ವೈದಿಕ ಧರ್ಮಗ್ರಂಥಗಳಲ್ಲಿ ಗರ್ಭಾಧಾನ ಸಂಸ್ಕಾರ ಎಂದು ಹೆಸರು. ತಂದೆತಾಯಿಯರು ದೈವೀ ಗುಣಗಳಿರುವ ಮಗುವು ಬೇಕೆಂದು ಬಯಸಿದರೆ ಅವರು ಮನುಷ್ಯನ ಸಾಮಾಜಿಕ ಬದುಕಿಗಾಗಿ ಸೂಚಿಸಿದ ಹತ್ತು ತತ್ವಗಳನ್ನು ಅನುಸರಿಸಬೇಕು. ಒಳ್ಳೆಯ ಮಗುವನ್ನು ಪಡೆಯಲು ನಡೆಯುವ ಕಾಮಭೋಗವು ಸ್ವಯಂ ಕೃಷ್ಣನೇ ಎಂದು ಹಿಂದೆ ಭಗವದ್ಗೀತೆಯಲ್ಲಿ ಅಭ್ಯಾಸ ಮಾಡಿದ್ದೇವೆ. ಕಾಮಜೀವನವನ್ನು ಕೃಷ್ಣಪ್ರಜ್ಞೆಯಲ್ಲಿ ಬಳಸಿದಾಗ ಅದನ್ನು ದೂಷಿಸಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಇರುವವರಾದರೂ ಬೆಕ್ಕು ಮತ್ತು ನಾಯಿಗಳಂತೆ ಮಕ್ಕಳನ್ನು ಪಡೆಯಬಾರದು; ಆದರೆ ಮಕ್ಕಳು ಜನಿಸಿದನಂತರ ಕೃಷ್ಣಪ್ರಜ್ಞೆಯನ್ನು ಹೊಂದುವಂತೆ ಸಂತಾನ ಪಡೆಯಬೇಕು. ಕೃಷ್ಣಪ್ರಜ್ಞೆಯಲ್ಲಿ ತನ್ಮಯರಾದ ತಂದೆತಾಯಿಯರಲ್ಲಿ ಹುಟ್ಟಿದ ಮಕ್ಕಳಿಗೆ ಇದೇ ಲಾಭವಾಗಬೇಕು.

ವರ್ಣಾಶ್ರಮಧರ್ಮವು ಸಮಾಜವನ್ನು ಸಾಮಾಜಿಕ ಜೀವನದ ನಾಲ್ಕು ಭಾಗಗಳಾಗಿ ಮತ್ತು ನಾಲ್ಕು ವೃತ್ತಿವಿಭಾಗಗಳಾಗಿ ಅಥವಾ ಜಾತಿಗಳಾಗಿ ಭಾಗಮಾಡುತ್ತದೆ. ಈ ಸಾಮಾಜಿಕ ಸಂಸ್ಥೆಯ ಉದ್ದೇಶವು ಸಮಾಜವನ್ನು ಹುಟ್ಟಿಗೆ ಅನುಗುಣವಾಗಿ ವಿಭಾಗಿಸುವುದಲ್ಲ. ಈ ವಿಭಾಗಗಳು ವಿದ್ಯಾ ಅರ್ಹತೆಗಳಿಗೆ ಅನುಗುಣವಾದವು. ಇವುಗಳ ಉದ್ದೇಶ ಸಮಾಜಕ್ಕೆ ಶಾಂತಿಯನ್ನೂ ಅಭ್ಯುದಯವನ್ನೂ ತಂದುಕೊಡುವುದು. ಇಲ್ಲಿ ಪ್ರಸ್ತಾಪಿಸಿದ ಗುಣಗಳನ್ನು ಮನುಷ್ಯನು ಆಧ್ಯಾತ್ಮಿಕ ಅರಿವಿನಲ್ಲಿ ಮುನ್ನಡೆಯಲು ಅಗತ್ಯವಾದ ದಿವ್ಯಗುಣಗಳು ಎಂದು ವಿವರಿಸಿದೆ; ಇವುಗಳಿಂದ

ಮನುಷ್ಯನು ಐಹಿಕ ಜಗತ್ತಿನಿಂದ ಬಿಡುಗಡೆಯನ್ನು ಹೊಂದಬಲ್ಲ.

ವರ್ಣಾಶ್ರಮ ವ್ಯವಸ್ಥೆಯಲ್ಲಿ ಸನ್ಯಾಸಿಯನ್ನು ಎಲ್ಲ ಸಾಮಾಜಿಕ ಅಂತಸ್ತುಗಳ ಮತ್ತು ವರ್ಣಗಳ ಗುರು ಅಥವಾ ಮುಖ್ಯಸ್ಥನೆಂದು ಪರಿಗಣಿಸಲಾಗುತ್ತದೆ. ಸಮಾಜದ ಇನ್ನು ಮೂರು ವರ್ಗಗಳಿಗೆ, ಎಂದರೆ ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರಿಗೆ, ಬ್ರಾಹ್ಮಣನು ಗುರು ಎಂದು ಪರಿಗಣಿಸಲಾಗುತ್ತದೆ. ಆದರೆ ವ್ಯವಸ್ಥೆಯ ಮೇಲ್ತುದಿಯಲ್ಲಿರುವ ಸನ್ಯಾಸಿಯು ಬ್ರಾಹ್ಮಣರಿಗೂ ಗುರು ಎಂದು ಭಾವಿಸಲಾಗುತ್ತದೆ. ಸನ್ಯಾಸಿಯ ಮೊದಲನೆಯ ಅರ್ಹತೆ ನಿರ್ಭಯ. ಸನ್ಯಾಸಿಗೆ ಯಾವುದೇ ನೆರವು ಅಥವಾ ಖಚಿತತೆ ಇಲ್ಲದಿರುವುದರಿಂದ ಆತನು ದೇವೋತ್ತಮ ಪರಮ ಪುರುಷನ ಕರುಣೆಯನ್ನಷ್ಟೇ ನೆಚ್ಚಬೇಕು. "ನನ್ನ ಸಂಬಂಧಗಳನ್ನು ಬಿಟ್ಟ ಮೇಲೆ ನನ್ನನ್ನು ಯಾರು ನೋಡಿಕೊಳ್ಳುತ್ತಾರೆ? " ಎಂದು ಯೋಚಿಸುವ ಮನುಷ್ಯನು ಸನ್ಯಾಸವನ್ನು ಸ್ವೀಕರಿಸಲೇಬಾರದು. ಅಂತರ್ಯಾಮಿ ಪರಮಾತ್ಮನಾಗಿ ಕೃಷ್ಣನು ಅಥವಾ ದೇವೋತ್ತಮ ಪರಮ ಪುರುಷನು ಸದಾ ಒಳಗಿದ್ದಾನೆ, ಅವನು ಎಲ್ಲವನ್ನೂ ನೋಡುತ್ತಾನೆ, ಮನುಷ್ಯನು ಏನು ಮಾಡಬೇಕೆಂದು ಉದ್ದೇಶಿಸಿದ್ದಾನೆ ಎನ್ನುವುದು ಅವನಿಗೆ ತಿಳಿದಿರುತ್ತದೆ ಎಂದು ಮನುಷ್ಯನಿಗೆ ಸಂಪೂರ್ಣ ನಂಬಿಕೆ ಇರಬೇಕು. ತನಗೆ ಶರಣಾಗತನಾದ ಆತ್ಮವನ್ನು ಪರಮಾತ್ಮನಾದ ಕೃಷ್ಣನು ನೋಡಿಕೊಳ್ಳುತ್ತಾನೆ ಎಂದು ದೃಢನಂಬಿಕೆಯು ಅಗತ್ಯ. "ನಾನು ಒಬ್ಬನೇ ಇರುವುದೇ ಇಲ್ಲ. ಅರಣ್ಯದ ಅತಿ ಕತ್ತಲು ಪ್ರದೇಶದಲ್ಲಿ ನಾನಿದ್ದರೂ ಕೃಷ್ಣನು ನನ್ನೊಡನೆ ಇರುತ್ತಾನೆ, ಅವನು ಎಲ್ಲ ರಕ್ಷಣೆಯನ್ನು ಕೊಡುತ್ತಾನೆ" ಎಂದು ಯೋಚಿಸಬೇಕು. ಈ ದೃಢನಂಬಿಕೆಗೆ **ಅಭಯ** ಎಂದು ಹೆಸರು. ಸನ್ಯಾಸಿಯಾಗಿರುವವನಿಗೆ ಈ ಮಾನಸಿಕ ಸ್ಥಿತಿಯು ಅತ್ಯವಶ್ಯ.

ಅನಂತರ ಆತನು ತನ್ನ ಬದುಕನ್ನು ಶುದ್ಧಗೊಳಿಸಿಕೊಳ್ಳಬೇಕು. ಸನ್ಯಾಸಿಜೀವನದಲ್ಲಿ ಅನುಸರಿಸಬೇಕಾದ ನಿಯಮನಿಬಂಧನೆಗಳು ಎಷ್ಟೋ ಇವೆ. ಎಲ್ಲಕ್ಕೂ ಮುಖ್ಯವಾದುದೆಂದರೆ, ಸನ್ಯಾಸಿಯು ಒಬ್ಬ ಹೆಂಗಸಿನೊಡನೆ ನಿಕಟ ಸಂಬಂಧವನ್ನು ಹೊಂದಿರುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸಿದೆ. ಏಕಾಂತಸ್ಥಳದಲ್ಲಿ ಆತನು ಹೆಂಗಸಿನೊಡನೆ ಮಾತನಾಡುವುದನ್ನು ನಿಷೇಧಿಸಿದೆ. ಚೈತನ್ಯ ಮಹಾಪ್ರಭುಗಳು ಆದರ್ಶ ಸನ್ಯಾಸಿಗಳಾಗಿದ್ದರು; ಅವರು ಪುರಿಯಲ್ಲಿದ್ದಾಗ ಅವರ ಭಕ್ತೆಯರು ಪ್ರಣಾಮಗಳನ್ನು ಸಲ್ಲಿಸಲು ಅವರ ಹತ್ತಿರ ಸಹ ಬರುವಂತಿರಲಿಲ್ಲ. ಅವರು ದೂರದಿಂದ ನಮಸ್ಕರಿಸುವಂತೆ ಹೇಳಲಾಗುತ್ತಿತ್ತು. ಇದು ಇಡೀ ಮಹಿಳಾವರ್ಗವನ್ನು ದ್ವೇಷಿಸುವುದರ ಗುರುತಲ್ಲ; ಸನ್ಯಾಸಿಯು ಮಹಿಳೆಯರೊಂದಿಗೆ ನಿಕಟ ಸಂಬಂಧವನ್ನು ಹೊಂದಿರಬಾರದೆಂಬ ನಿಷೇಧವಷ್ಟೇ. ತನ್ನ ಬದುಕನ್ನು ಪರಿಶುದ್ಧಗೊಳಿಸಿಕೊಳ್ಳಲು ಮನುಷ್ಯನು ಬದುಕಿನಲ್ಲಿ ಒಂದು ಸ್ಥಾನದ ನಿಯಮ ನಿಬಂಧನೆಗಳನ್ನು ಅನುಸರಿಸಬೇಕು. ಸನ್ಯಾಸಿಯು ಹೆಂಗಸರೊಡನೆ ನಿಕಟಸಂಬಂಧವನ್ನು ಹೊಂದಿರಬಾರದು ಮತ್ತು ಇಂದ್ರಿಯತೃಪ್ತಿಗಾಗಿ ಆಸ್ತಿಯನ್ನು ಹೊಂದಿರಬಾರದು ಎಂದು ಕಟ್ಟುನಿಟ್ಟಾಗಿ ನಿಯಮಮಾಡಿದೆ. ಚೈತನ್ಯ ಮಹಾಪ್ರಭುಗಳೇ ಆದರ್ಶಸನ್ಯಾಸಿಗಳಾಗಿದ್ದರು. ಹೆಂಗಸರ ವಿಷಯದಲ್ಲಿ ಅವರು ಕಟ್ಟುನಿಟ್ಟಾಗಿದ್ದರು ಎನ್ನುವುದನ್ನು ಅವರ ಜೀವನದಿಂದಲೇ ನಾವು ತಿಳಿಯಬಹುದು. ಭಗವಂತನ ಅತ್ಯಂತ ಉದಾರವಾದ ಅವತಾರ ಅವರು. ಅತ್ಯಂತ ಪತಿತ ಬದ್ಧ ಆತ್ಮಗಳನ್ನು ಸ್ವೀಕರಿಸುತ್ತಿದ್ದರು ಎಂದು ಜನರು ಭಾವಿಸಿದ್ದರು; ಆದರೆ ಅವರು ಹೆಂಗಸರೊಡನೆ ಸಹವಾಸದ ವಿಷಯದಲ್ಲಿ ಸನ್ಯಾಸಾಶ್ರಮದ ನಿಯಮ ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದರು. ಅವರ ವೈಯಕ್ತಿಕ ಸಂಗಾತಿಗಳಲ್ಲಿ ಛೋಟಾ ಹರಿದಾಸ ಎನ್ನುವವನು ಒಬ್ಬ.

ಅವನು ಚೈತನ್ಯ ಮಹಾಪ್ರಭುಗಳ ಇತರ ಅಂತರಂಗ ಸಂಗಾತಿಗಳೊಡನೆ ಚೈತನ್ಯ ಮಹಾಪ್ರಭುಗಳ ಜೊತೆಗಿದ್ದ. ಆದರೆ ಹೇಗೋ ಏನೋ ಈ ಛೋಟಾ ಹರಿದಾಸನು ಒಬ್ಬ ತರುಣಿಯ ಕಡೆ ಕಾಮದೃಷ್ಟಿಯನ್ನು ಬೀರಿದ. ಚೈತನ್ಯ ಮಹಾಪ್ರಭುಗಳು ಎಷ್ಟು ಕಟ್ಟುನಿಟ್ಟಾಗಿದ್ದರೆಂದರೆ ಆತನನ್ನು ತಮ್ಮ ವೈಯಕ್ತಿಕ ಸಂಗಾತಿಗಳ ತಂಡದಿಂದ ಕೂಡಲೇ ಹೊರಕ್ಕೆ ಹಾಕಿದರು. ಚೈತನ್ಯ ಮಹಾಪ್ರಭುಗಳು ಹೀಗೆಂದರು — "ಐಹಿಕ ಪ್ರಕೃತಿಯ ಮುಷ್ಟಿಯಿಂದ ಬಿಡಿಸಿಕೊಂಡು ಆಧ್ಯಾತ್ಮಿಕ ಪ್ರಕೃತಿಗೆ ಏರಿ ಮತ್ತೆ ಭಗವದ್ಧಾಮಕ್ಕೆ ಹಿಂದಿರುಗುವ ಗುರಿಯನ್ನು ಒಬ್ಬ ಸನ್ಯಾಸಿ ಅಥವಾ ಬೇರೆ ಯಾರಾದರೂ ಹೊಂದಿರಬಹುದು; ಅಂತಹವನು ಇಂದ್ರಿಯ ತೃಪ್ತಿಗಾಗಿ ಐಹಿಕ ಆಸ್ತಿಯ ಕಡೆ ಅಥವಾ ಹೆಂಗಸರ ಕಡೆ ನೋಡುವುದು ಮಹಾಪಾಪ. ಆತನು ಅವುಗಳನ್ನು ಅನುಭವಿಸದೆ ಇರಬಹುದು. ಆದರೆ ಅಂತಹ ಪ್ರವೃತ್ತಿಯಿಂದ ಅವುಗಳ ಕಡೆ ನೋಡುವುದೇ ಎಂತಹ ಪಾಪವೆಂದರೆ ಇಂತಹ ಪಾಪದ ಬಯಕೆಗಳನ್ನು ಅನುಭವಿಸುವ ಮೊದಲು ಆತ್ಮಹತ್ಯೆ ಮಾಡಿಕೊಳ್ಳುವುದು ಉತ್ತಮ." ಶುದ್ಧೀಕರಣದ ಪ್ರಕ್ರಿಯೆಗಳು ಇವು.

**ಜ್ಞಾನ ಯೋಗ ವ್ಯವಸ್ಥಿತಿ**—ಜ್ಞಾನಾಭಿವೃದ್ಧಿಯಲ್ಲಿ ನಿರತನಾಗಿರುವುದು ಮುಂದಿನ ಅಂಶ. ಆಧ್ಯಾತ್ಮಿಕ ಮುನ್ನಡೆಯ ತಮ್ಮ ನಿಜವಾದ ಜೀವನವನ್ನು ಮರೆತ ಗೃಹಸ್ಥರಿಗೆ ಮತ್ತು ಇತರರಿಗೆ ಜ್ಞಾನವನ್ನು ಹಂಚುವುದು ಸನ್ಯಾಸಿ ಜೀವನದ ಉದ್ದೇಶ. ಸನ್ಯಾಸಿಯು ತನ್ನ ಜೀವನೋಪಾಯಕ್ಕಾಗಿ ಮನೆಮನೆಗೆ ಹೋಗಿ ಭಿಕ್ಷೆ ಬೇಡಬೇಕೆಂದು ನಿರೀಕ್ಷಿಸಲಾಗಿದೆ. ಆದರೆ ಅವನು ಭಿಕ್ಷುಕ ಎಂದು ಇದರ ಅರ್ಥವಲ್ಲ. ನಮ್ರತೆಯು ಅಧ್ಯಾತ್ಮದಲ್ಲಿ ನೆಲೆ ಪಡೆದ ಮನುಷ್ಯನ ಅರ್ಹತೆಗಳಲ್ಲೊಂದು; ನಮ್ರತೆಯಿಂದ ಮಾತ್ರವೇ ಸನ್ಯಾಸಿಯು ಮನೆಮನೆಗೆ ಹೋಗುತ್ತಾನೆ. ಆದರೆ ಹಾಗೆ ಹೋಗುವುದು ಗೃಹಸ್ಥರ ಕೃಷ್ಣಪ್ರಜ್ಞೆಯನ್ನು ಎಚ್ಚರಿಸುವ ಸಲುವಾಗಿ; ಭಿಕ್ಷೆ ಬೇಡುವ ಉದ್ದೇಶದಿಂದಲ್ಲ. ಇದು ಸನ್ಯಾಸಿಯ ಕರ್ತವ್ಯ. ಆತನು ವಾಸ್ತವವಾಗಿ ಪ್ರಗತಿಯನ್ನು ಸಾಧಿಸಿದ್ದರೆ ಮತ್ತು ಅವನ ಗುರುವು ಹಾಗೆ ಅಪ್ಪಣೆ ಮಾಡಿದರೆ ಅವನು ತರ್ಕಬದ್ಧವಾಗಿ ಮತ್ತು ತಿಳುವಳಿಕೆಯಿಂದ ಕೃಷ್ಣಪ್ರಜ್ಞೆಯನ್ನು ಉಪದೇಶಿಸಬೇಕು. ಅಷ್ಟು ಪ್ರಗತಿಯನ್ನು ಸಾಧಿಸದಿರುವ ಮನುಷ್ಯನು ಸನ್ಯಾಸಾಶ್ರಮವನ್ನು ಸ್ವೀಕರಿಸಬಾರದು. ಸಾಕಷ್ಟು ಜ್ಞಾನವಿಲ್ಲದೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದರೂ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಸದ್ಗುರುವಿನಿಂದ ಕೇಳುವುದರಲ್ಲಿ ನಿರತನಾಗಬೇಕು. ಸನ್ಯಾಸಿಯು ನಿರ್ಭಯದಲ್ಲಿ, **ಸತ್ಯ ಸಂಶುದ್ಧಿಯಲ್ಲಿ** (ಪರಿಶುದ್ಧತೆ) ಮತ್ತು ಜ್ಞಾನಯೋಗದಲ್ಲಿ ನೆಲೆಯನ್ನು ಪಡೆಯಬೇಕು.

ಮುಂದಿನ ಅಂಶ **ದಾನ**. ದಾನವನ್ನು ಗೃಹಸ್ಥರಿಗೆ ಹೇಳಿದೆ. ಗೃಹಸ್ಥರು ಋಜುವಾದ ರೀತಿಯಲ್ಲಿ ಜೀವನೋಪಾಯ ಮಾಡಬೇಕು ಮತ್ತು ಇಡೀ ಪ್ರಪಂಚದಲ್ಲಿ ಕೃಷ್ಣಪ್ರಜ್ಞೆಯನ್ನು ಹರಡಲು ತಮ್ಮ ಆದಾಯದಲ್ಲಿ 100ಕ್ಕೆ 50ರಷ್ಟನ್ನು ಖರ್ಚುಮಾಡಬೇಕು. ಗೃಹಸ್ಥನು ಈ ರೀತಿಯ ಕೆಲಸದಲ್ಲಿ ತೊಡಗಿರುವ ಸಂಸ್ಥೆಗಳಿಗೆ ದಾನ ಮಾಡಬೇಕು. ದಾನವನ್ನು ಯೋಗ್ಯ ಪಾತ್ರನಿಗೆ ಕೊಡಬೇಕು. ಮುಂದೆ ವಿವರಿಸುವಂತೆ ಬೇರೆ ಬೇರೆ ಬಗೆಗಳ ದಾನಗಳುಂಟು—ಸತ್ವ, ರಜಸ್ಸು ಮತ್ತು ತಮಸ್ಸು ಗುಣಗಳಲ್ಲಿ ದಾನ ಮಾಡಬಹುದು. ಧರ್ಮಗ್ರಂಥಗಳು ಸತ್ವಗುಣದ ದಾನವನ್ನು ಹೇಳಿವೆ. ಆದರೆ ರಜಸ್ಸು ಮತ್ತು ತಮಸ್ಸುಗಳಲ್ಲಿ ದಾನವನ್ನು ಹೇಳಿಲ್ಲ. ಏಕೆಂದರೆ ಆ ಹಣವು ಹಾಳಾದಂತೆಯೇ. ಪ್ರಪಂಚದಲ್ಲೆಲ್ಲ ಕೃಷ್ಣಪ್ರಜ್ಞೆಯನ್ನು ಹರಡಲು ಮಾತ್ರ ದಾನವನ್ನು ಕೊಡಬೇಕು. ಇದು ಸತ್ವಗುಣದ ದಾನ.

**ದಮ** (ಆತ್ಮ ಸಂಯಮ) ವನ್ನು ಕುರಿತು ಹೇಳುವುದಾದರೆ ಅದು ಧಾರ್ಮಿಕ ಸಮಾಜದ ಇತರ ಆಶ್ರಮಗಳವರಿಗೆ ಮಾತ್ರವೇ ಹೇಳಿದ್ದಲ್ಲ, ವಿಶೇಷವಾಗಿ ಗೃಹಸ್ಥನಿಗೆ ಹೇಳಿದ್ದು. ಗೃಹಸ್ಥನಿಗೆ ಹೆಂಡತಿಯಿದ್ದರೂ ಅನಗತ್ಯವಾಗಿ ಕಾಮ ಜೀವನಕ್ಕೆ ಇಂದ್ರಿಯಗಳನ್ನು ಬಳಸಬಾರದು. ಗೃಹಸ್ಥನಿಗೆ ಕಾಮಜೀವನದಲ್ಲಿಯೂ ಕಟ್ಟುಪಾಡುಗಳಿವೆ. ಸಂತಾನಪ್ರಾಪ್ತಿಗಾಗಿ ಮಾತ್ರ ಕಾಮಜೀವನವನ್ನು ಬಳಸಬೇಕು. ಆತನಿಗೆ ಮಕ್ಕಳು ಬೇಡದಿದ್ದರೆ ಹೆಂಡತಿಯೊಡನೆ ಕಾಮಜೀವನವನ್ನು ನಡೆಸಬಾರದು. ಆಧುನಿಕ ಸಮಾಜವು ಮಕ್ಕಳ ಹೊಣೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸಂತಾನ ನಿರೋಧ ರೀತಿಗಳನ್ನು, ಇನ್ನೂ ಅಸಹ್ಯವಾದ ರೀತಿಗಳನ್ನು ಬಳಸಿ ಕಾಮಜೀವನವನ್ನು ಭೋಗಿಸುತ್ತದೆ. ಇದು ದಿವ್ಯ ಗುಣವಲ್ಲ, ರಾಕ್ಷಸೀಗುಣ. ಗೃಹಸ್ಥನಾದರೂ ಆಧ್ಯಾತ್ಮಿಕ ಜೀವನದಲ್ಲಿ ಮುನ್ನಡೆಯಲು ಬಯಸುವವನು ತನ್ನ ಕಾಮಜೀವನವನ್ನು ನಿಯಂತ್ರಿಸಬೇಕು; ಕೃಷ್ಣನ ಸೇವೆಯ ಉದ್ದೇಶವಿಲ್ಲದೆ ಅವನು ಒಂದು ಮಗುವನ್ನೂ ಪಡೆಯಬಾರದು. ಕೃಷ್ಣಪ್ರಜ್ಞೆಯಲ್ಲಿರುವ ಮಕ್ಕಳನ್ನು ಪಡೆಯುವ ಸಾಮರ್ಥ್ಯವಿದ್ದರೆ ನೂರಾರು ಮಕ್ಕಳಿಗೆ ಜನ್ಮ ಕೊಡಬಹುದು. ಆದರೆ ಈ ಸಾಮರ್ಥ್ಯವಿಲ್ಲದೆ ಇಂದ್ರಿಯ ಭೋಗಕ್ಕಾಗಿ ಕಾಮಜೀವನವನ್ನು ನಡೆಸಬಾರದು.

ಗೃಹಸ್ಥರು ಮಾಡಬೇಕಾದ ಇನ್ನೊಂದು ಕರ್ತವ್ಯವೆಂದರೆ **ಯಜ್ಞ**. ಏಕೆಂದರೆ ಯಜ್ಞಗಳಿಗೆ ಬಹಳ ಹಣಬೇಕು. ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸನ್ಯಾಸ; ಈ ಆಶ್ರಮಗಳಲ್ಲಿರುವವರಲ್ಲಿ ಹಣವಿರುವುದಿಲ್ಲ; ಅವರು ಭಿಕ್ಷೆ ಬೇಡಿ ಜೀವಿಸುತ್ತಾರೆ. ಆದುದರಿಂದ ವಿವಿಧ ಬಗೆಗಳ ಯಜ್ಞವನ್ನು ಗೃಹಸ್ಥರು ನಡೆಸಬೇಕು. ವೇದಸಾಹಿತ್ಯದಲ್ಲಿ ವಿಧಿಸಿರುವಂತೆ ಅವರು **ಅಗ್ನಿ ಹೋತ್ರ** ಯಜ್ಞಗಳನ್ನು ಮಾಡಬೇಕು. ಆದರೆ ಈಗ ಈ ಯಜ್ಞಗಳಿಗೆ ತುಂಬ ವೆಚ್ಚವಾಗುತ್ತದೆ. ಯಾವ ಗೃಹಸ್ಥನಿಗೂ ಅವುಗಳನ್ನು ಮಾಡಲು ಸಾಧ್ಯವಿಲ್ಲ. ಈ ಯುಗದಲ್ಲಿ ಮಾಡಬೇಕೆಂದು ಹೇಳಿರುವ ಅತ್ಯುತ್ತಮ ಯಜ್ಞಕ್ಕೆ ಸಂಕೀರ್ತನ ಯಜ್ಞ ಎಂದು ಹೆಸರು. ಸಂಕೀರ್ತನ ಯಜ್ಞವೆಂದರೆ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಸಂಕೀರ್ತನ ಮಾಡುವುದು. ಇದು ಅತ್ಯುತ್ತಮವಾದ ಮತ್ತು ಸ್ವಲ್ಪವೂ ವೆಚ್ಚವಿಲ್ಲದ ಯಜ್ಞ; ಪ್ರತಿಯೊಬ್ಬರೂ ಇದನ್ನು ಮಾಡಿ ಪ್ರಯೋಜನವನ್ನು ಪಡೆಯಬಹುದು. ಹೀಗೆ ದಾನ, ಆತ್ಮ ಸಂಯಮ ಮತ್ತು ಯಜ್ಞಗಳನ್ನು ಮಾಡುವುದು — ಈ ಮೂರೂ ಗೃಹಸ್ಥನಿಗಾಗಿ ಹೇಳಿರುವುದು.

**ಸ್ವಾಧ್ಯಾಯ** ಎಂದರೆ ವೇದಾಧ್ಯಯನವನ್ನು ಬ್ರಹ್ಮಚರ್ಯಕ್ಕೆ ಎಂದರೆ ವಿದ್ಯಾರ್ಥಿಜೀವನಕ್ಕೆ ಹೇಳಿದೆ. ಬ್ರಹ್ಮಚಾರಿಗಳಿಗೆ ಹೆಂಗಸರೊಡನೆ ಯಾವುದೇ ಸಂಬಂಧ ಇರಬಾರದು; ಅವರು ಬ್ರಹ್ಮಚರ್ಯದಲ್ಲಿ ಇದ್ದು ಆಧ್ಯಾತ್ಮಿಕ ಜ್ಞಾನವನ್ನು ಬೆಳೆಸಿಕೊಳ್ಳಲು ವೇದಸಾಹಿತ್ಯದ ಅಧ್ಯಯನದಲ್ಲಿ ಮನಸ್ಸನ್ನು ತೊಡಗಿಸಬೇಕು. ಇದಕ್ಕೆ ಸ್ವಾಧ್ಯಾಯ ಎಂದು ಹೆಸರು.

**ತಪಸ್ಸು** ವಾನಪ್ರಸ್ಥ ಜೀವನಕ್ಕಾಗಿ ವಿಶೇಷವಾಗಿ ಹೇಳಿರುವುದು. ಮನುಷ್ಯನು ತನ್ನ ಜೀವನಪೂರ್ತಿ ಗೃಹಸ್ಥನಾಗಿ ಉಳಿಯಬಾರದು; ಜೀವನದಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಈ ನಾಲ್ಕು ಆಶ್ರಮಗಳಿವೆ ಎನ್ನುವುದನ್ನು ಯಾವಾಗಲೂ ನೆನಪಿಟ್ಟುಕೊಳ್ಳಬೇಕು. ಗೃಹಸ್ಥ ಜೀವನದ ಅನಂತರ ಮನುಷ್ಯನು ನಿವೃತ್ತನಾಗಬೇಕು. ಮನುಷ್ಯನು 100ವರ್ಷ ಕಾಲ ಬದುಕಿದ್ದರೆ ಆತನು 25 ವರ್ಷಗಳನ್ನು ಬ್ರಹ್ಮಚರ್ಯ ಜೀವನದಲ್ಲಿ, 25 ವರ್ಷಗಳನ್ನು

ಗೃಹಸ್ಥಾಶ್ರಮದಲ್ಲಿ, 25 ವರ್ಷಗಳನ್ನು ವಾನಪ್ರಸ್ಥದಲ್ಲಿ ಮತ್ತು 25 ವರ್ಷಗಳನ್ನು ಸನ್ಯಾಸದಲ್ಲಿ ಕಳೆಯಬೇಕು. ಇದು ವೇದದಲ್ಲಿ ಹೇಳಿರುವ ಧಾರ್ಮಿಕ ತತ್ವಗಳು. ಗೃಹಸ್ಥಾಶ್ರಮದಿಂದ ನಿವೃತ್ತನಾದವನು ದೇಹ, ಮನಸ್ಸು ಮತ್ತು ನಾಲಿಗೆಗಳ ವಿಷಯದಲ್ಲಿ ಅತ್ಯಂತ ಕಟ್ಟುನಿಟ್ಟಾಗಿರಬೇಕು. ಇದು ತಪಸ್ಸು. ಇಡೀ ವರ್ಣಾಶ್ರಮಧರ್ಮದ ಸಮಾಜವಿರುವುದೇ ತಪಸ್ಸಿಗಾಗಿ. ತಪಸ್ಸಿಲ್ಲದೆ ಮನುಷ್ಯನು ಮುಕ್ತಿಯನ್ನು ಪಡೆಯಲಾರ. ಬದುಕಿನಲ್ಲಿ ವೈರಾಗ್ಯದ ಅಗತ್ಯವಿಲ್ಲ, ಮನುಷ್ಯನು ಊಹಾತ್ಮಕ ಚಿಂತನೆ ಮಾಡುತ್ತಾ ಸಾಗಬಹುದು ಮತ್ತು ಎಲ್ಲವೂ ಸೊಗಸಾಗಿರುತ್ತದೆ ಎಂಬ ಅಭಿಪ್ರಾಯವನ್ನು ವೇದಸಾಹಿತ್ಯವಾಗಲೀ ಭಗವದ್ಗೀತೆಯಾಗಲೀ ಪ್ರತಿಪಾದಿಸುವುದಿಲ್ಲ. ಇಂತಹ ಸಿದ್ಧಾಂತಗಳನ್ನು ಇನ್ನಷ್ಟು ಹಿಂಬಾಲಕರನ್ನು ಸೇರಿಸಿಕೊಳ್ಳಲು ಪ್ರಯತ್ನಿಸುವ ಹುಸಿ ಅಧ್ಯಾತ್ಮವಾದಿಗಳು ಸೃಷ್ಟಿಸುತ್ತಾರೆ. ನಿಯಮ ನಿಬಂಧನೆಗಳಿದ್ದರೆ ಜನರು ಆಕರ್ಷಿತರಾಗುವುದಿಲ್ಲ. ಆದುದರಿಂದ ತೋರಿಕೆಯ ಧರ್ಮದ ಹೆಸರಿನಲ್ಲಿ ಹಿಂಬಾಲಕರನ್ನು ಬಯಸುವವರು ತಮ್ಮ ವಿದ್ಯಾರ್ಥಿಗಳ ಜೀವನಕ್ಕಾಗಲೀ ತಮ್ಮ ಜೀವನಕ್ಕಾಗಲೀ ಕಟ್ಟುಪಾಡುಗಳನ್ನು ಹಾಕುವುದಿಲ್ಲ. ಆದರೆ ವೇದಗಳು ಈ ರೀತಿಯನ್ನು ಒಪ್ಪುವುದಿಲ್ಲ.

ಬ್ರಾಹ್ಮಣ ಗುಣವಾದ ಸರಳತೆಯನ್ನು ಕುರಿತು ಹೇಳುವುದಾದರೆ ಒಂದು ವಿಶಿಷ್ಟ ಆಶ್ರಮದವರು ಮಾತ್ರ ಈ ತತ್ವವನ್ನು ಆಚರಿಸಿದರೆ ಸಾಲದು; ಬ್ರಹ್ಮಚರ್ಯಾಶ್ರಮದಲ್ಲಿರಲಿ, ಗೃಹಸ್ಥಾಶ್ರಮದಲ್ಲಿರಲಿ, ವಾನಪ್ರಸ್ಥಾಶ್ರಮದಲ್ಲಿರಲಿ ಅಥವಾ ಸನ್ಯಾಸಾಶ್ರಮದಲ್ಲಿರಲಿ ಪ್ರತಿಯೊಬ್ಬರೂ ಇದನ್ನು ಅನುಸರಿಸಬೇಕು. ಮನುಷ್ಯನು ಬಹು ಸರಳವಾಗಿ ಮತ್ತು ನೇರವಾಗಿ ಇರಬೇಕು.

**ಅಹಿಂಸೆ** ಎಂದರೆ ಯಾವುದೇ ಜೀವಿಯ ಪ್ರಗತಿಶೀಲ ಬದುಕನ್ನು ತಡೆಯದಿರುವುದು. ದೇಹವನ್ನು ಕೊಂದರೂ ಆತ್ಮದ ಕಿಡಿಯು ಸಾಯುವುದಿಲ್ಲವಾದ್ದರಿಂದ ಇಂದ್ರಿಯತೃಪ್ತಿಗಾಗಿ ಪ್ರಾಣಿಗಳನ್ನು ಕೊಲ್ಲುವುದರಿಂದ ಕೆಡುಕಿಲ್ಲ ಎಂದು ಯೋಚಿಸಬಾರದು. ಧಾನ್ಯಗಳು, ಹಣ್ಣುಗಳು ಮತ್ತು ಹಾಲು ಸಮೃದ್ಧಿಯಾಗಿದ್ದರೂ ಈಗಿನ ಕಾಲದಲ್ಲಿ ಮನುಷ್ಯರು ಪ್ರಾಣಿಗಳನ್ನು ತಿನ್ನುವ ಅಭ್ಯಾಸವನ್ನು ಮಾಡಿಕೊಂಡಿರುತ್ತಾರೆ. ಪ್ರಾಣಿಹತ್ಯೆಯ ಅಗತ್ಯವೇ ಇಲ್ಲ. ಈ ಆದೇಶವು ಎಲ್ಲರಿಗೂ ಅನ್ವಯಿಸುತ್ತದೆ. ಬೇರೆ ಮಾರ್ಗವೇ ಇಲ್ಲದಿದ್ದರೆ ಪ್ರಾಣಿಯನ್ನು ಕೊಲ್ಲಬಹುದು. ಆದರೆ ಅದನ್ನು ಯಜ್ಞದಲ್ಲಿ ಅರ್ಪಿಸಬೇಕು. ಏನೇ ಆಗಲಿ, ಮನುಷ್ಯನಿಗೆ ಸಮೃದ್ಧವಾಗಿ ಆಹಾರವು ದೊರೆಯುವಾಗ ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಮುನ್ನಡೆಯಲು ಬಯಸುವವರು ಪ್ರಾಣಿಹಿಂಸೆಯನ್ನು ಮಾಡಬಾರದು. ಯಾರ ಪ್ರಗತಿಶೀಲ ಬದುಕಿಗೂ ಅಡ್ಡಿಮಾಡದಿರುವುದೇ ನಿಜವಾದ ಅಹಿಂಸೆ. ಒಂದು ವರ್ಗದ ಪ್ರಾಣಿಜೀವನದಿಂದ ಮತ್ತೊಂದಕ್ಕೆ ಸಾಗುತ್ತ ಪ್ರಾಣಿಗಳು ತಮ್ಮ ಜೀವನ ವಿಕಾಸದಲ್ಲಿ ಮುನ್ನಡೆಯುತ್ತಿವೆ. ಯಾವುದಾದರೂ ಪ್ರಾಣಿಯನ್ನು ಕೊಂದರೆ ಅದರ ಮುನ್ನಡೆಗೆ ಅಡ್ಡಿಯಾಗುತ್ತದೆ. ಒಂದು ಪ್ರಾಣಿಯು ಒಂದು ನಿರ್ದಿಷ್ಟ ದೇಹದಲ್ಲಿ ಇಷ್ಟು ದಿನಗಳು ಅಥವಾ ಇಷ್ಟು ವರ್ಷಗಳು ಇರಬೇಕಾಗಿದ್ದರೆ ಮತ್ತು ಅಕಾಲಿಕವಾಗಿ ಕೊಲ್ಲಲ್ಪಟ್ಟರೆ ಅದು ಆ ಜೀವರೂಪಕ್ಕೆ ಮತ್ತೆ ಬರಬೇಕಾಗುತ್ತದೆ; ಇನ್ನೊಂದು ಜೀವವರ್ಗಕ್ಕೆ ಏರಬೇಕಾದರೆ ಹಿಂದಕ್ಕೆ ಬಂದು ಉಳಿದಿದ್ದ ದಿನಗಳನ್ನು ಮುಗಿಸಬೇಕಾಗುತ್ತದೆ. ಆದುದರಿಂದ ತನ್ನ ರುಚಿಗಾಗಿ ಅವುಗಳ ಪ್ರಗತಿಯನ್ನು ತಡೆಯಬಾರದು. ಇದಕ್ಕೆ ಅಹಿಂಸೆ ಎಂದು ಹೆಸರು.

**ಸತ್ಯಮ್** ವೈಯಕ್ತಿಕ ಲಾಭಕ್ಕಾಗಿ ಸತ್ಯವನ್ನು ತಿರುಚಬಾರದು ಎಂದು ಇದರ ಅರ್ಥ. ವೇದ ಸಾಹಿತ್ಯದಲ್ಲಿ ಕೆಲವು ಕಷ್ಟವಾದ ಭಾಗಗಳಿವೆ, ಆದರೆ ಅವುಗಳ ಅರ್ಥವನ್ನೂ ಉದ್ದೇಶವನ್ನೂ ಸದ್ಗುರುವಿನಿಂದ ತಿಳಿಯಬೇಕು. ಇದು ವೇದಗಳನ್ನು ಅರ್ಥ ಮಾಡಿಕೊಳ್ಳಲು ಅಗತ್ಯವಾದ ಪ್ರಕ್ರಿಯೆ. ಶ್ರುತಿ ಎಂದರೆ ಅಧಿಕಾರಿಯಿಂದ ಕೇಳಬೇಕು ಎಂದು ಅರ್ಥ. ತನ್ನ ವೈಯಕ್ತಿಕ ಲಾಭಕ್ಕಾಗಿ ಯಾವುದೋ ವ್ಯಾಖ್ಯಾನವನ್ನು ಕೊಡಬಾರದು. ಭಗವದ್ಗೀತೆಯ ಮೂಲಪಾಠಕ್ಕೆ ತಪ್ಪು ವ್ಯಾಖ್ಯಾನವನ್ನು ನೀಡುವ ಎಷ್ಟೋ ವ್ಯಾಖ್ಯಾನಗಳಿವೆ. ಪದದ ನಿಜವಾದ ಅರ್ಥವನ್ನು ಕೊಡಬೇಕು. ಅದನ್ನು ಒಬ್ಬ ಸದ್ಗುರುವಿನಿಂದ ತಿಳಿದುಕೊಳ್ಳಬೇಕು.

**ಅಕ್ರೋಧ** ಎಂದರೆ ಕೋಪಕ್ಕೆ ಕಡಿವಾಣ ಹಾಕುವುದು. ಪ್ರಚೋದನೆ ಇದ್ದರೂ ಮನುಷ್ಯನು ಸಹನೆಯಿಂದ ಇರಬೇಕು. ಏಕೆಂದರೆ ಮನುಷ್ಯನು ಕೋಪ ಮಾಡಿಕೊಂಡನೆಂದರೆ ಅವನ ಇಡೀ ದೇಹವು ಮಲಿನವಾಗುತ್ತದೆ. ಕೋಪವು ರಾಜಸ ಗುಣದಿಂದ ಮತ್ತು ಕಾಮದಿಂದ ಹುಟ್ಟಿದ್ದು. ಆದುದರಿಂದ ಆಧ್ಯಾತ್ಮಿಕ ನೆಲೆಯಲ್ಲಿರುವ ಮನುಷ್ಯನು ಕೋಪ ಮಾಡಿಕೊಳ್ಳದಂತೆ ತಡೆದುಕೊಳ್ಳಬೇಕು. **ಅಪೈಶುನಮ್** ಎಂದರೆ ಇತರರಲ್ಲಿ ತಪ್ಪು ಹುಡುಕಬಾರದು ಅಥವಾ ಅನಗತ್ಯವಾಗಿ ಅವರನ್ನು ತಿದ್ದಬಾರದು. ಕಳ್ಳನನ್ನು ಕಳ್ಳ ಎನ್ನುವುದು ತಪ್ಪು ಹುಡುಕಿದಂತಲ್ಲ. ಆದರೆ ಪ್ರಾಮಾಣಿಕ ಮನುಷ್ಯನನ್ನು ಕಳ್ಳ ಎನ್ನುವುದು ಆಧ್ಯಾತ್ಮಿಕ ಜೀವನದಲ್ಲಿ ಮುನ್ನಡೆಯುತ್ತಿರುವವನ ಮಟ್ಟಿಗೆ ದೊಡ್ಡ ಅಪರಾಧ. **ಹ್ರೀ** ಎಂದರೆ ಮನುಷ್ಯನು ವಿನಯದಿಂದ ಇರಬೇಕು. ಅಸಹ್ಯವಾದ ಕೆಲಸವನ್ನು ಮಾಡಬಾರದು. **ಅಚಾಪಲಂ**, ದೃಢ ಸಂಕಲ್ಪ, ಎಂದರೆ ಮನುಷ್ಯನು ಯಾವುದೇ ಪ್ರಯತ್ನದಲ್ಲಿ ಕಳವಳ ಪಡಬಾರದು ಅಥವಾ ಹತಾಶನಾಗಬಾರದು. ಒಂದು ಪ್ರಯತ್ನವು ವಿಫಲವಾಗಬಹುದು. ಆದರೆ ಅದಕ್ಕಾಗಿ ಮನುಷ್ಯನು ದುಃಖಪಡಬಾರದು; ಅವನು ತಾಳ್ಮೆಯಿಂದ ಮತ್ತು ದೃಢಮನಸ್ಸಿನಿಂದ ಪ್ರಗತಿಯನ್ನು ಸಾಧಿಸಬೇಕು.

**ತೇಜಸ್** ಎನ್ನುವ ಪದವನ್ನು ಇಲ್ಲಿ ಹೇಳಿರುವುದು ಕ್ಷತ್ರಿಯರಿಗಾಗಿ. ದುರ್ಬಲರಿಗೆ ರಕ್ಷಣೆಯನ್ನು ನೀಡಲು ಕ್ಷತ್ರಿಯರು ಯಾವಾಗಲೂ ಬಲಶಾಲಿಗಳಾಗಿರಬೇಕು. ಅಹಿಂಸೆಯಿಂದಿರುವವರೆಂದು ಅವರು ತೋರಿಸಿಕೊಳ್ಳಬಾರದು. ಹಿಂಸೆ ಅಗತ್ಯವಾದರೆ ಅವರು ಅದನ್ನು ಉಪಯೋಗಿಸಬೇಕು. ಆದರೆ ತನ್ನ ಶತ್ರುವು ಮಣಿಯುವಂತೆ ಮಾಡಬಲ್ಲವನು ಕೆಲವು ಸನ್ನಿವೇಶಗಳಲ್ಲಿ ಕ್ಷಮೆಯನ್ನು ತೋರಬಹುದು. ಸಣ್ಣಪುಟ್ಟ ತಪ್ಪುಗಳನ್ನು ಅವನು ಕ್ಷಮಿಸಬಹುದು.

**ಶೌಚಮ್** ಎಂದರೆ ಶುಚಿಯಾಗಿರುವುದು. ಮನಸ್ಸು ದೇಹಗಳಲ್ಲಿ ಮಾತ್ರವಲ್ಲ ವ್ಯವಹಾರಗಳಲ್ಲಿ ಸಹ ಶುಚಿಯಾಗಿರುವುದು. ಇದನ್ನು ವಿಶೇಷವಾಗಿ ವ್ಯಾಪಾರಿಗಳಿಗೆ ಹೇಳಿದೆ; ಅವರು ಕಾಳಸಂತೆಯಲ್ಲಿ ವ್ಯವಹರಿಸಬಾರದು. **ನಾತಿಮಾನಿತಾ**, ಮನ್ನಣೆಯನ್ನು ನಿರೀಕ್ಷಿಸದೆ ಇರುವುದು, ಕಾರ್ಮಿಕ ವರ್ಗದವರಾದ ಶೂದ್ರರಿಗೆ ಅನ್ವಯಿಸುತ್ತದೆ. ವೇದಗಳ ಆದೇಶಗಳ ಪ್ರಕಾರ ನಾಲ್ಕು ವರ್ಣಗಳಲ್ಲಿ ಇವರದೇ ಅತ್ಯಂತ ಕೆಳಗಿನದೆಂದು ಭಾವಿಸಲಾಗಿದೆ. ಅವರು ಅನಗತ್ಯ ಪ್ರತಿಷ್ಠೆ ಅಥವಾ ಗೌರವದಿಂದ ನಡೆಯಬಾರದು; ತಮ್ಮ ಸ್ಥಾನದಲ್ಲಿಯೇ ಉಳಿಯಬೇಕು. ಸಾಮಾಜಿಕ ವ್ಯವಸ್ಥೆಯನ್ನು ಉಳಿಸಿಕೊಂಡು ಬರಲು ಅವರು ಮೇಲಿನ ವರ್ಗಗಳವರಿಗೆ ಗೌರವವನ್ನು ತೋರಿಸಬೇಕು.

ಇಲ್ಲಿ ಪ್ರಸ್ತಾಪಿಸಿರುವ 26 ಅರ್ಹತೆಗಳು ದಿವ್ಯಗುಣಗಳು. ಸಾಮಾಜಿಕ ಮತ್ತು ವೃತ್ತಿಯ ವ್ಯವಸ್ಥೆಯ ಬೇರೆ ಬೇರೆ ಅಂತಸ್ತುಗಳಿಗೆ ಅನುಗುಣವಾಗಿ ಅವುಗಳನ್ನು ಬೆಳೆಸಿಕೊಳ್ಳಬೇಕು. ಇದರ

ಸಾರಾಂಶವೆಂದರೆ ಐಹಿಕ ಸ್ಥಿತಿಗತಿಗಳು ತೀರ ದುಃಖಕರವಾಗಿದ್ದರೂ ಎಲ್ಲ ವರ್ಗಗಳ ಮನುಷ್ಯನು ಅಭ್ಯಾಸದಿಂದ ಈ ಗುಣಗಳನ್ನು ಬೆಳೆಸಿಕೊಂಡರೆ ಕ್ರಮೇಣ ಆಧ್ಯಾತ್ಮಿಕ ಸಾಕ್ಷಾತ್ಕಾರದ ಅತ್ಯುನ್ನತ ನೆಲೆಗೆ ಏರಲು ಸಾಧ್ಯವಾಗುತ್ತದೆ.

## ಶ್ಲೋಕ - 4

**ದಮ್ಭೋ ದರ್ಪೋऽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ |**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಮ್ಪದಮಾಸುರೀಮ್ ||೪||**

**ದಮ್ಭಃ**—ಅಹಂಕಾರವು; **ದರ್ಪಃ**—ದರ್ಪವು; **ಅಭಿಮಾನಃ**—ದುರಭಿಮಾನವು; **ಚ**—ಮತ್ತು; **ಕ್ರೋಧಃ**—ಕೋಪವು; **ಪಾರುಷ್ಯಮ್**—ಕಾಠಿಣ್ಯವು; **ಏವ**—ಖಂಡಿತವಾಗಿಯೂ; **ಚ**—ಮತ್ತು; **ಅಜ್ಞಾನಮ್**—ಅಜ್ಞಾನವು; **ಚ**—ಮತ್ತು; **ಅಭಿಜಾತಸ್ಯ**—ತಳೆದು ಹುಟ್ಟಿದವನಿಗೆ; **ಪಾರ್ಥ**—ಪೃಥೆಯ ಮಗನೇ; **ಸಮ್ಪದಮ್**—ಗುಣಗಳನ್ನು; **ಆಸುರೀಮ್**—ಅಸುರ ಸ್ವಭಾವದ.

## ಅನುವಾದ

**ಪಾರ್ಥನೆ, ಜಂಬ, ದರ್ಪ, ಅಭಿಮಾನ, ಕ್ರೋಧ, ಕ್ರೌರ್ಯ ಮತ್ತು ಅಜ್ಞಾನ ಈ ಗುಣಗಳು ರಾಕ್ಷಸೀ ಸ್ವಭಾವಕ್ಕೆ ಸೇರಿದವು.**

## ಭಾವಾರ್ಥ

ಈ ಶ್ಲೋಕದಲ್ಲಿ ನರಕಕ್ಕೆ ರಾಜಮಾರ್ಗವನ್ನು ವರ್ಣಿಸಿದೆ. ರಾಕ್ಷಸೀ ಸ್ವಭಾವದವರು ಆಧ್ಯಾತ್ಮಿಕ ಮುನ್ನಡೆಗೆ ಬೇಕಾದ ಆ ತತ್ವಗಳನ್ನು ತಾವು ಅನುಸರಿಸದಿದ್ದರೂ ಧರ್ಮ ಮತ್ತು ಆಧ್ಯಾತ್ಮಿಕ ವಿಜ್ಞಾನದ ಮುನ್ನಡೆಯ ಪ್ರದರ್ಶನವನ್ನು ಮಾಡಲು ಬಯಸುತ್ತಾರೆ. ಯಾವುದೋ ಬಗೆಯ ಶಿಕ್ಷಣವಿದೆಯೆಂದು ಅಥವಾ ಅಷ್ಟೊಂದು ಆಸ್ತಿಯಿದೆಯೆಂದು ಅವರು ದುರಹಂಕಾರಿಗಳಾಗಿರುತ್ತಾರೆ. ಇತರರು ತಮ್ಮನ್ನು ಪೂಜಿಸಬೇಕೆಂದು ಅವರ ಅಪೇಕ್ಷೆ; ಜನರು ತಮ್ಮನ್ನು ಗೌರವಿಸದಿದ್ದರೂ ತಮಗೆ ಗೌರವ ಸಲ್ಲಬೇಕೆಂದು ಕೇಳುತ್ತಾರೆ. ಸಣ್ಣ ವಿಷಯಗಳಿಗೆಲ್ಲ ಸಿಟ್ಟುಮಾಡಿಕೊಳ್ಳುತ್ತಾರೆ; ಮೃದುವಾಗಿ ಮಾತನಾಡುವುದಿಲ್ಲ, ಕಠಿಣವಾಗಿ ಮಾತನಾಡುತ್ತಾರೆ. ಏನು ಮಾಡಬಹುದು, ಏನು ಮಾಡಬಾರದು ಎಂದು ಅವರಿಗೆ ತಿಳಿದಿರುವುದಿಲ್ಲ. ಎಲ್ಲವನ್ನೂ ತಮ್ಮ ಮನಸ್ಸು ಬಂದಂತೆ ಮಾಡುತ್ತಾರೆ; ಯಾರ ಅಧಿಕಾರವನ್ನೂ ಅವರು ಗುರುತಿಸುವುದಿಲ್ಲ. ತಮ್ಮ ತಾಯಂದಿರ ಗರ್ಭದಲ್ಲಿ ತಮ್ಮ ದೇಹಗಳು ಪ್ರಾರಂಭವಾದಾಗಿನಿಂದ ಈ ರಾಕ್ಷಸೀಯ ಗುಣಗಳನ್ನು ಅವರು ಆರಿಸಿಕೊಂಡಿರುತ್ತಾರೆ. ಅವರು ಬೆಳೆಯುತ್ತ ಹೋದಂತೆ ಈ ಅಶುಭಕರ ಗುಣಗಳನ್ನು ಪ್ರಕಟಿಸುತ್ತಾರೆ.

## ಶ್ಲೋಕ - 5

**ದೈವೀ ಸಮ್ಪದ್ವಿಮೋಕ್ಷಾಯ ನಿಬನ್ಧಾಯಾಸುರೀ ಮತಾ |**
**ಮಾ ಶುಚಃ ಸಮ್ಪದಂ ದೈವೀಮಭಿಜಾತೋऽಸಿ ಪಾಣ್ಡವ ||೫||**

**ದೈವೀ**—ದಿವ್ಯವಾದ; **ಸಮ್ಪತ್**—ಸಂಪತ್ತುಗಳು; **ವಿಮೋಕ್ಷಾಯ**—ವಿಮೋಚನೆಗಾಗಿ; **ನಿಬನ್ಧಾಯ**—

ಬಂಧನಕ್ಕಾಗಿ; **ಆಸುರೀ**—ಆಸುರೀ ಗುಣಗಳು; **ಮತಾ**—ಎಂದು ಪರಿಗಣಿತವಾಗಿವೆ; **ಮಾ ಶುಚಃ**—ಶೋಕಪಡಬೇಡ; **ಸಮ್ಪದಮ್**—ಸಂಪತ್ತುಗಳನ್ನು; **ದೈವೀಮ್**—ದಿವ್ಯವಾದ; **ಅಭಿಜಾತಃ**—ತಳೆದು ಹುಟ್ಟಿದವನು; **ಅಸಿ**—ಆಗಿದ್ದೀಯೆ; **ಪಾಣ್ಡವ**—ಪಾಂಡುಪುತ್ರನೇ.

## ಅನುವಾದ

**ದೈವೀ ಗುಣಗಳು ಮುಕ್ತಿಗೆ ಸಾಧನವಾಗುತ್ತವೆ; ಆಸುರೀಗುಣಗಳು ಬಂಧನಕ್ಕೆ ಸಾಧನವಾಗುತ್ತವೆ. ಪಾಂಡುಪುತ್ರನಾದ ಅರ್ಜುನನೇ, ಶೋಕಿಸಬೇಡ. ಏಕೆಂದರೆ ನೀನು ದೈವೀ ಸಂಪತ್ತಿನೊಡನೆ ಹುಟ್ಟಿದ್ದೀಯೆ.**

## ಭಾವಾರ್ಥ

ಅರ್ಜುನನು ಆಸುರೀಗುಣಗಳೊಡನೆ ಹುಟ್ಟಿಲ್ಲ ಎಂದು ಹೇಳಿ ಕೃಷ್ಣನು ಅವನನ್ನು ಪ್ರೋತ್ಸಾಹಿಸಿದನು. ಅವನು ಯುದ್ಧದಲ್ಲಿ ತೊಡಗುವುದು ಆಸುರೀ ವೃತ್ತಿಯಲ್ಲ. ಏಕೆಂದರೆ ಅವನು ಅದರ ಸಾಧಕಬಾಧಕಗಳನ್ನು ಕುರಿತು ವಿಚಾರಿಸುತ್ತಿದ್ದನು. ಭೀಷ್ಮದ್ರೋಣರಂತೆ ಗೌರವಾರ್ಹರಾದ ವ್ಯಕ್ತಿಗಳನ್ನು ಕೊಲ್ಲಬೇಕೇ ಬೇಡವೆ ಎಂದು ಯೋಚಿಸುತ್ತಿದ್ದ ಅವನು ಕೋಪ, ಒಣಪ್ರತಿಷ್ಠೆ ಅಥವಾ ಕ್ರೌರ್ಯದ ಪ್ರಭಾವದಿಂದ ಕ್ರಿಯೆಯಲ್ಲಿ ತೊಡಗಿರಲಿಲ್ಲ. ಆದುದರಿಂದ ಅವನು ಆಸುರೀ ಸಂಪದದವನಲ್ಲ. ಕ್ಷತ್ರಿಯನಿಗೆ ಶತ್ರುಗಳತ್ತ ಬಾಣ ಬಿಡುವುದು ದಿವ್ಯಗುಣ ಮತ್ತು ಅಂತಹ ಕರ್ತವ್ಯವನ್ನು ಮಾಡದಿರುವುದು ರಾಕ್ಷಸೀಗುಣ ಎಂದು ಭಾವಿಸಲಾಗಿದೆ. ಆದುದರಿಂದ ಅರ್ಜುನನು ಶೋಕಿಸಲು ಕಾರಣವಿಲ್ಲ. ಬದುಕಿನ ವಿವಿಧ ವರ್ಣಗಳ ನಿಯಂತ್ರಕ ತತ್ವಗಳನ್ನು ಅನುಸರಿಸುವವರು ದಿವ್ಯನೆಲೆಯಲ್ಲಿರುತ್ತಾರೆ.

## ಶ್ಲೋಕ - 6

**ದ್ವೌ ಭೂತಸರ್ಗೌ ಲೋಕೇऽಸ್ಮಿನ್ ದೈವ ಆಸುರ ಏವ ಚ |**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ||೬||**

**ದ್ವೌ**—ಎರಡು; **ಭೂತ ಸರ್ಗೌ**—ಸೃಷ್ಟಿಸಿದ ಜೀವಿಗಳು; **ಲೋಕೇ**—ಜಗತ್ತಿನಲ್ಲಿ; **ಅಸ್ಮಿನ್**—ಈ; **ದೈವಃ**—ದೈವಿಕ; **ಆಸುರಃ**—ಆಸುರೀ; **ಏವ**—ಖಂಡಿತವಾಗಿಯೂ; **ಚ**—ಮತ್ತು; **ದೈವಃ**—ದೈವಿಕವು; **ವಿಸ್ತರಶಃ**—ವಿಸ್ತಾರವಾಗಿ; **ಪ್ರೋಕ್ತಃ**—ಹೇಳಲ್ಪಟ್ಟಿದೆ; **ಆಸುರಮ್**—ಅಸುರಿಯನ್ನು; **ಪಾರ್ಥ**—ಪಾರ್ಥನೇ; **ಮೇ**—ನನ್ನಿಂದ; **ಶೃಣು**—ಕೇಳು.

## ಅನುವಾದ

**ಪಾರ್ಥನೆ, ಜಗತ್ತಿನಲ್ಲಿ ಸೃಷ್ಟಿಯಾಗಿರುವವರಲ್ಲಿ ಎರಡು ವಿಧಗಳು ಇವೆ. ಒಂದು ದೈವೀವರ್ಗ ಮತ್ತು ಇನ್ನೊಂದು ಆಸುರೀವರ್ಗ. ದೈವೀಗುಣಗಳನ್ನು ಈಗಾಗಲೇ ವಿವರವಾಗಿ ಹೇಳಿದ್ದೇನೆ. ಇನ್ನು ಆಸುರೀಗುಣಗಳನ್ನು ಕೇಳು.**

## ಭಾವಾರ್ಥ

ಅರ್ಜುನನಿಗೆ ಅವನು ದೈವೀಗುಣಗಳೊಡನೆ ಹುಟ್ಟಿದ್ದಾನೆ ಎನ್ನುವ ಆಶ್ವಾಸನೆಯನ್ನು ಕೊಟ್ಟು ಕೃಷ್ಣನು ಈಗ ಆಸುರೀ ರೀತಿಯನ್ನು ವರ್ಣಿಸುತ್ತಿದ್ದಾನೆ. ಈ ಪ್ರಪಂಚದಲ್ಲಿರುವ ಬದ್ಧಜೀವಿಗಳನ್ನು ಎರಡು ವರ್ಗಗಳಾಗಿ ವಿಂಗಡಿಸಿದೆ. ದೈವೀಗುಣಗಳನ್ನು ಪಡೆದು ಹುಟ್ಟಿದವರು ನಿಯಂತ್ರಿತ ಬದುಕನ್ನು ನಡೆಸುತ್ತಾರೆ; ಎಂದರೆ ಅವರು ಶಾಸ್ತ್ರಗಳಲ್ಲಿ ಹೇಳಿರುವ ಮತ್ತು ಆಚಾರ್ಯರು ಹೇಳುವ ಆದೇಶಗಳನ್ನು ನಡೆಸುತ್ತಾರೆ. ಅಧಿಕಾರಯುತ ಶಾಸ್ತ್ರಗ್ರಂಥಗಳ ಬೆಳಕಿನಲ್ಲಿ ಮನುಷ್ಯನು ತನ್ನ ಕರ್ತವ್ಯಗಳನ್ನು ಮಾಡಬೇಕು. ಇದನ್ನು ದೈವೀಮನೋಧರ್ಮ ಎನ್ನುತ್ತಾರೆ. ಶಾಸ್ತ್ರಗಳಲ್ಲಿ ವಿಧಿಸಿರುವ ನಿಯಂತ್ರಕ ಸೂತ್ರಗಳನ್ನು ಪಾಲಿಸದೆ ತನ್ನ ಅನಿಸಿಕೆಗಳಂತೆ ನಡೆಯುವವನನ್ನು ಆಸುರೀ ಎಂದು ಕರೆಯುತ್ತಾರೆ. ಧರ್ಮಗ್ರಂಥಗಳ ನಿಯಂತ್ರಕ ಸೂತ್ರಗಳನ್ನು ಅನುಸರಿಸುವುದನ್ನು ಬಿಟ್ಟು ಬೇರೆ ಮಾನದಂಡವೇ ಇಲ್ಲ. ದೇವತೆಗಳು ಮತ್ತು ಅಸುರರು ಇಬ್ಬರೂ ಪ್ರಜಾಪತಿಯ ಮಕ್ಕಳು. ಒಂದೇ ವ್ಯತ್ಯಾಸವೆಂದರೆ ಒಬ್ಬರು ವೇದಗಳ ಆದೇಶಗಳನ್ನು ಪಾಲಿಸುತ್ತಾರೆ, ಇನ್ನೊಬ್ಬರು ಪಾಲಿಸುವುದಿಲ್ಲ ಎಂದು ವೇದ ಸಾಹಿತ್ಯದಲ್ಲಿ ಹೇಳಿದೆ.

## ಶ್ಲೋಕ - 7

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ |**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ||೭||**

**ಪ್ರವೃತ್ತಿಮ್**—ಸಮಂಜಸವಾಗಿ ವರ್ತಿಸುವುದನ್ನು; **ಚ**—ಕೂಡ; **ನಿವೃತ್ತಿಮ್**—ಸಮಂಜಸವಾಗಿ ಮಾಡದಿರುವುದನ್ನು; **ಚ**—ಮತ್ತು; **ಜನಾಃ**—ವ್ಯಕ್ತಿಗಳು; **ನ ವಿದುಃ**—ತಿಳಿದಿರುವುದಿಲ್ಲ; **ಆಸುರಾಃ**—ಆಸುರೀಗುಣದ; **ನ**—ಎಂದಿಗೂ ಇಲ್ಲ; **ಶೌಚಮ್**—ಶುಚಿತ್ವವು; **ನ**—ಇಲ್ಲ; **ಅಪಿ**—ಕೂಡ; **ಚ**—ಮತ್ತು; **ಆಚಾರಃ**—ಆಚಾರವು; **ನ**—ಎಂದಿಗೂ ಇಲ್ಲ; **ಸತ್ಯಮ್**—ಸತ್ಯವು; **ತೇಷು**—ಅವರಲ್ಲಿ; **ವಿದ್ಯತೇ**—ಇರುತ್ತದೆ.

## ಅನುವಾದ

**ಆಸುರೀ ಪ್ರಕೃತಿಯವರಿಗೆ ಏನು ಮಾಡಬೇಕು, ಏನು ಮಾಡಬಾರದು ಎಂದು ತಿಳಿಯದು. ಅವರಲ್ಲಿ ಶುಚಿತ್ವವಿಲ್ಲ, ಸನ್ನಡತೆಯಿಲ್ಲ, ಸತ್ಯವಿಲ್ಲ.**

## ಭಾವಾರ್ಥ

ಪ್ರತಿಯೊಂದು ನಾಗರಿಕ ಮಾನವ ಸಮಾಜದಲ್ಲಿಯೂ ಪ್ರಾರಂಭದಿಂದ ನಡೆಸಿಕೊಂಡು ಬಂದಿರುವ ಧಾರ್ಮಿಕ ಗ್ರಂಥಗಳ ನಿಯಮ ನಿಬಂಧನೆಗಳಿರುತ್ತವೆ. ಆರ್ಯರು ವೈದಿಕ ನಾಗರಿಕತೆಯನ್ನು ಸ್ವೀಕರಿಸಿ ಅತ್ಯಂತ ಉನ್ನತ ನಾಗರಿಕತೆಯ ಜನತೆ ಎಂದು ಪ್ರಸಿದ್ಧರಾಗಿದ್ದಾರೆ. ವಿಶೇಷವಾಗಿ ಅವರಲ್ಲಿ ಧರ್ಮಗ್ರಂಥಗಳ ಆದೇಶಗಳನ್ನು ಅನುಸರಿಸದೆ ಇರುವವರನ್ನು ಅಸುರರೆಂದು ಕರೆಯುತ್ತಾರೆ. ಆದುದರಿಂದ ರಾಕ್ಷಸರಿಗೆ ಧರ್ಮಗ್ರಂಥಗಳ ನಿಯಮಗಳು ತಿಳಿಯದು ಮತ್ತು ಅವರಿಗೆ ಅವುಗಳನ್ನು ಅನುಸರಿಸುವ ಒಲವೂ ಇಲ್ಲ ಎಂದು ಇಲ್ಲಿ ಹೇಳಿದೆ. ಅವರಲ್ಲಿ

ಬಹುಮಂದಿಗೆ ನಿಯಮಗಳು ತಿಳಿದಿಲ್ಲ ಮತ್ತು ಕೆಲವರಿಗೆ ತಿಳಿದಿದ್ದರೂ ಅವುಗಳನ್ನು ಅನುಸರಿಸುವ ಪ್ರವೃತ್ತಿ ಇಲ್ಲ. ಅವರಿಗೆ ಶ್ರದ್ಧೆಯಿಲ್ಲ; ವೇದಗಳ ಆದೇಶದಂತೆ ನಡೆಯಲು ಅವರಿಗೆ ಇಷ್ಟ ಇಲ್ಲ. ಬಹಿರಂಗವಾಗಿಯಾಗಲೀ, ಅಂತರಂಗವಾಗಿಯಾಗಲೀ ರಾಕ್ಷಸರು ಶುಚಿಯಾಗಿರುವುದಿಲ್ಲ. ಮನುಷ್ಯನು ಸ್ನಾನ, ಹಲ್ಲುಜ್ಜುವುದು, ಕ್ಷೌರ ಮಾಡಿಕೊಳ್ಳುವುದು, ಬಟ್ಟೆ ಬದಲಾಯಿಸುವುದು ಮೊದಲಾದವುಗಳಿಂದ ತನ್ನ ದೇಹವನ್ನು ಸ್ವಚ್ಛವಾಗಿ ಇಟ್ಟುಕೊಳ್ಳಲು ಎಚ್ಚರಿಕೆ ವಹಿಸಬೇಕು. ಅಂತರಂಗಶುದ್ಧಿಯ ಮಟ್ಟಿಗೆ ಹೇಳುವುದಾದರೆ ಮನುಷ್ಯನು ಸದಾ ದೇವರ ಹೆಸರುಗಳನ್ನು ಸ್ಮರಿಸಬೇಕು ಮತ್ತು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎಂದು ಸಂಕೀರ್ತನೆ ಮಾಡಬೇಕು. ಬಹಿರಂಗ ಮತ್ತು ಅಂತರಂಗಶುದ್ಧಿಯ ಈ ನಿಯಮಗಳನ್ನು ರಾಕ್ಷಸರು ಇಷ್ಟಪಡುವುದೂ ಇಲ್ಲ; ಅನುಸರಿಸುವುದೂ ಇಲ್ಲ.

ನಡತೆಯ ವಿಷಯ ಹೇಳುವುದಾದರೆ ಮನುಷ್ಯನ ನಡತೆಗೆ ಮಾರ್ಗದರ್ಶನ ಮಾಡುವ ಅನೇಕ ನಿಯಮ ನಿಬಂಧನೆಗಳಿವೆ. ಉದಾಹರಣೆಗೆ ಮನುಸಂಹಿತೆಯು ಮನುಕುಲದ ಕಾನೂನು. ಇವತ್ತಿಗೂ ಹಿಂದೂಗಳು ಮನುಸಂಹಿತೆಯನ್ನು ಅನುಸರಿಸುತ್ತಾರೆ. ಪಿತ್ರಾರ್ಜಿತದ ಕಾನೂನುಗಳು ಮತ್ತು ಇತರ ಕಾನೂನು ಅಂಶಗಳು ಈ ಗ್ರಂಥದಿಂದ ಬಂದಿವೆ. ಹೆಂಗಸಿಗೆ ಸ್ವಾತಂತ್ರ್ಯವನ್ನು ಕೊಡಬಾರದೆಂದು ಮನುಸಂಹಿತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. ಹೀಗೆಂದರೆ ಹೆಂಗಸರನ್ನು ದಾಸರಂತೆ, ಗುಲಾಮರಂತೆ ನಡೆಸಿಕೊಳ್ಳಬೇಕೆಂದಲ್ಲ. ಆದರೆ ಅವರು ಮಕ್ಕಳು ಇದ್ದಂತೆ. ಮಕ್ಕಳಿಗೆ ಸ್ವಾತಂತ್ರ್ಯವನ್ನು ಕೊಡುವುದಿಲ್ಲ, ಆದರೆ ಅವರು ಗುಲಾಮರಾಗಿ ಇರುತ್ತಾರೆ ಎಂದು ಅರ್ಥವಲ್ಲ. ರಾಕ್ಷಸರು ಇಂತಹ ಆದೇಶಗಳನ್ನು ಮರೆತಿದ್ದಾರೆ. ಗಂಡಸರಿಗಿರುವಷ್ಟು ಸ್ವಾತಂತ್ರ್ಯವನ್ನು ಹೆಂಗಸರಿಗೂ ಕೊಡಬೇಕೆಂದು ಅವರು ಯೋಚಿಸುತ್ತಾರೆ. ಹಾಗಿದ್ದರೂ ಜಗತ್ತಿನ ಸಾಮಾಜಿಕ ಸ್ಥಿತಿಯನ್ನು ಇದು ಸುಧಾರಿಸಿಲ್ಲ. ವಾಸ್ತವವಾಗಿ ಬದುಕಿನ ಪ್ರತಿಯೊಂದು ಹಂತದಲ್ಲಿಯೂ ಹೆಂಗಸರಿಗೆ ರಕ್ಷಣೆಯನ್ನು ಕೊಡಬೇಕು. ಚಿಕ್ಕ ವಯಸ್ಸಿನಲ್ಲಿ ಅವಳ ತಂದೆಯೂ, ಯೌವನದಲ್ಲಿ ಅವಳ ಗಂಡನೂ ಮತ್ತು ಮುಪ್ಪಿನಲ್ಲಿ ಬೆಳೆದ ಗಂಡುಮಕ್ಕಳೂ ರಕ್ಷಣೆಯನ್ನು ಕೊಡಬೇಕು. ಮನುಸಂಹಿತೆಯ ಪ್ರಕಾರ ಇದು ಯೋಗ್ಯವಾದ ಸಾಮಾಜಿಕ ನಡತೆ. ಆದರೆ ಆಧುನಿಕ ವಿದ್ಯಾಭ್ಯಾಸವು ಹೆಂಗಸಿನ ಬದುಕಿನ ಒಂದು ವಿಸ್ತರಿತ ಪರಿಕಲ್ಪನೆಯನ್ನು ಕೃತಕವಾಗಿ ಸೃಷ್ಟಿಸಿದೆ. ಇದರಿಂದ ಮಾನವ ಸಮಾಜದಲ್ಲಿ ಈಗ ವಾಸ್ತವವಾಗಿ ಮದುವೆಯೆನ್ನುವುದು ಕಲ್ಪನೆಯಷ್ಟೇ ಆಗಿದೆ. ಹೆಂಗಸಿನ ನೈತಿಕ ಸ್ಥಿತಿಯೂ ಈಗ ಅಷ್ಟೇನೂ ಚೆನ್ನಾಗಿಲ್ಲ. ಹೀಗೆ ರಾಕ್ಷಸರು ಸಮಾಜಕ್ಕೆ ಒಳಿತಾಗುವ ಯಾವುದೇ ಬೋಧನೆಯನ್ನು ಒಪ್ಪಿಕೊಳ್ಳುವುದಿಲ್ಲ. ಅವರು ಮಹರ್ಷಿಗಳ ಅನುಭವವನ್ನೂ ಋಷಿಗಳು ವಿಧಿಸಿರುವ ನಿಯಮ ನಿಬಂಧನೆಗಳನ್ನೂ ಅನುಸರಿಸದೆ ಇರುವುದರಿಂದ ರಾಕ್ಷಸೀಜನದ ಸ್ಥಿತಿಯು ಈಗ ತುಂಬ ದುಃಖಕರವಾಗಿದೆ.

## ಶ್ಲೋಕ - 8

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ |**
**ಅಪರಸ್ಪರಸಮ್ಭೂತಂ ಕಿಮನ್ಯತ್ ಕಾಮಹೈತುಕಮ್ ||೮||**

**ಅಸತ್ಯಮ್**—ನಿಜವಲ್ಲದ್ದು; **ಅಪ್ರತಿಷ್ಠಮ್**—ಆಧಾರವಿಲ್ಲದ್ದು; **ತೇ**—ಅವರು; **ಜಗತ್**—

ವಿಶ್ವಾಭಿವ್ಯಕ್ತಿಯು; **ಆಹುಃ**—ಎಂದು ಹೇಳುತ್ತಾರೆ; **ಅನೀಶ್ವರಮ್**—ನಿಯಂತ್ರಕನಿಲ್ಲದ್ದು; **ಅಪರಸ್ಪರ**—ಕಾರಣವಿಲ್ಲದೆ; **ಸಮ್ಭೂತಂ**—ಹುಟ್ಟಿದುದು; **ಕಿಮ್ ಅನ್ಯತ್**—ಇತರ ಕಾರಣವಿಲ್ಲ; **ಕಾಮಹೈತುಕಮ್**—ಅದು ಕಾಮನಿಮಿತ್ತ ಮಾತ್ರದಿಂದ ಆಗಿದೆ.

## ಅನುವಾದ

**ಈ ಜಗತ್ತು ಅಸತ್ಯ, ಅದಕ್ಕೆ ಆಧಾರವಿಲ್ಲ, ಅದನ್ನು ನಿಯಂತ್ರಿಸುವ ದೇವರಿಲ್ಲ ಎಂದು ಅವರು ಹೇಳುವರು. ಇದು ಕಾಮದಿಂದ ಹುಟ್ಟಿದ್ದು ಮತ್ತು ಕಾಮವಲ್ಲದೆ ಬೇರೇನೂ ಕಾರಣವಿಲ್ಲ ಎಂದು ಅವರು ಹೇಳುತ್ತಾರೆ.**

## ಭಾವಾರ್ಥ

ರಾಕ್ಷಸರು ಪ್ರಪಂಚವು ಕಾಲ್ಪನಿಕ ದೃಶ್ಯಗಳ ಮಾಲೆ ಅಷ್ಟೆ ಎಂದು ಭಾವಿಸುತ್ತಾರೆ. ಕಾರ್ಯಕಾರಣವಿಲ್ಲ, ನಿಯಂತ್ರಕನಿಲ್ಲ, ಉದ್ದೇಶವಿಲ್ಲ, ಎಲ್ಲವೂ ಅವಾಸ್ತವ; ಈ ವಿಶ್ವದ ಅಭಿವ್ಯಕ್ತಿಯು ಆಕಸ್ಮಿಕವಾದ ಕ್ರಿಯೆ, ಪ್ರತಿಕ್ರಿಯೆಗಳಿಂದ ಮೂಡುತ್ತದೆ ಎಂದು ಅವರು ಹೇಳುತ್ತಾರೆ. ಜಗತ್ತನ್ನು ದೇವರು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ಸೃಷ್ಟಿಸಿದ್ದಾನೆ ಎಂದು ಅವರು ಭಾವಿಸುವುದಿಲ್ಲ. ಅವರಿಗೆ ಅವರದೇ ಸಿದ್ಧಾಂತವಿದೆ; ಜಗತ್ತು ತನ್ನದೇ ರೀತಿಯಲ್ಲಿ ಆಗಿದೆ ಮತ್ತು ಅದರ ಹಿಂದೆ ದೇವರಿದ್ದಾನೆ ಎಂದು ನಂಬಲು ಕಾರಣವೇನೂ ಇಲ್ಲ ಎಂಬುದೇ ಅವರ ಸಿದ್ಧಾಂತ. ಅವರಿಗೆ ಚೇತನಕ್ಕೂ ಜಡವಸ್ತುವಿಗೂ ವ್ಯತ್ಯಾಸವಿಲ್ಲ. ಅವರು ಪರಮಾತ್ಮನನ್ನು ಒಪ್ಪುವುದಿಲ್ಲ. ಎಲ್ಲವೂ ಜಡವಸ್ತುವಷ್ಟೇ; ಇಡೀ ವಿಶ್ವವು ಅಜ್ಞಾನದ ಮುದ್ದೆ ಎಂದು ಅವರು ಭಾವಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ಎಲ್ಲವೂ ಶೂನ್ಯವೇ; ಅಸ್ತಿತ್ವದಲ್ಲಿರುವುದೆಲ್ಲವೂ ಗ್ರಹಿಕೆಯ ಅಜ್ಞಾನದಿಂದ ಉಂಟಾದುವು. ವಾಸ್ತವವಾಗಿ ಅಸ್ತಿತ್ವದಲ್ಲಿರುವ ಎಷ್ಟೋ ವಸ್ತುಗಳನ್ನು ನಾವು ಕನಸಿನಲ್ಲಿ ಸೃಷ್ಟಿಸುತ್ತೇವೆ. ಆದರೆ ಎಚ್ಚೆತ್ತ ಮೇಲೆ ಅವೆಲ್ಲವೂ ಕೇವಲ ಕನಸು ಎಂದು ಅರಿಯುತ್ತೇವೆ. ಇದೇ ರೀತಿ ವೈವಿಧ್ಯದ ಅಭಿವ್ಯಕ್ತಿಯೆಲ್ಲ ಅಜ್ಞಾನದ ಪ್ರದರ್ಶನ ಮಾತ್ರ ಎಂದು ಅವರು ಭಾವಿಸುತ್ತಾರೆ. ವಾಸ್ತವವಾಗಿ ರಾಕ್ಷಸರು ಬದುಕು ಕನಸು ಎಂದು ಹೇಳಿದರೂ ಈ ಕನಸನ್ನು ಸವಿಯುವುದರಲ್ಲಿ ಅವರು ಬಹು ಗಟ್ಟಿಗರು. ಆದುದರಿಂದ ಜ್ಞಾನವನ್ನು ಪಡೆಯುವುದರ ಬದಲು ಅವರು ತಮ್ಮ ಕನಸಿನ ರಾಜ್ಯದಲ್ಲಿ ಹೆಚ್ಚು ಹೆಚ್ಚಾಗಿ ತೊಡಗಿಕೊಳ್ಳುತ್ತಾರೆ. ಮಗುವು ಗಂಡಸು ಮತ್ತು ಹೆಂಗಸಿನ ಕೂಟದ ಪರಿಣಾಮವಷ್ಟೇ. ಆದುದರಿಂದ ಈ ಜಗತ್ತು ಆತ್ಮವೇ ಇಲ್ಲದೆ ಹುಟ್ಟಿದೆ ಎಂದು ಅವರು ನಿರ್ಣಯಿಸುತ್ತಾರೆ. ಅವರ ಮಟ್ಟಿಗೆ ಜಡವಸ್ತುವಿನ ಸಂಯೋಗವೇ ಜೀವಿಗಳ ಉತ್ಪತ್ತಿಗೆ ಕಾರಣ. ಆತ್ಮದ ಅಸ್ತಿತ್ವದ ಪ್ರಶ್ನೆಯೇ ಇಲ್ಲ. ಕಾರಣವೇ ಇಲ್ಲದೆ ಬೆವರಿನಿಂದ ಮತ್ತು ಹೆಣದಿಂದ ಅನೇಕ ಜೀವಂತ ಪ್ರಾಣಿಗಳು ಸೃಷ್ಟಿಯಾಗುವಂತೆ ಇಡೀ ಜೀವಜಗತ್ತು ವಿಶ್ವದ ಅಭಿವ್ಯಕ್ತಿಯ ಐಹಿಕ ಸಂಯೋಗಗಳಿಂದ ಮೂಡಿಬಂದಿದೆ. ಆದುದರಿಂದ ಈ ಅಭಿವ್ಯಕ್ತಿಗೆ ಐಹಿಕ ಪ್ರಕೃತಿಯೇ ಕಾರಣ, ಬೇರೆ ಕಾರಣವಿಲ್ಲ ಎಂದು ಅವರ ವಾದ. ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿರುವ ಮಾತುಗಳಲ್ಲಿ ಅವರಿಗೆ ನಂಬಿಕೆಯಿಲ್ಲ— **ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್** "ಇಡೀ ಐಹಿಕ ಪ್ರಪಂಚವು ನನ್ನ ಆದೇಶಕ್ಕೆ ಅನುಗುಣವಾಗಿ ಮುಂದುವರಿಯುತ್ತಿದೆ", ಎಂದರೆ ಪ್ರಪಂಚದ ಸೃಷ್ಟಿಯ ವಿಷಯವು ರಾಕ್ಷಸರಿಗೆ ಪರಿಪೂರ್ಣವಾಗಿ ತಿಳಿಯದು. ಅವರಲ್ಲಿ ಪ್ರತಿಯೊಬ್ಬನಿಗೂ ತನ್ನದೇ ಆದ ವಿಶಿಷ್ಟ

ಸಿದ್ಧಾಂತವಿರುತ್ತದೆ. ಅವರ ಅಭಿಪ್ರಾಯದಲ್ಲಿ ಧರ್ಮಗ್ರಂಥಗಳ ಒಂದು ವ್ಯಾಖ್ಯಾನ ಇನ್ನೊಂದು ವ್ಯಾಖ್ಯಾನದಷ್ಟೇ ಯೋಗ್ಯವಾದದ್ದು. ಶಾಸ್ತ್ರಗಳ ಆದೇಶಗಳ ಪ್ರಮಾಣೀಕೃತ ತಿಳುವಳಿಕೆಯಲ್ಲಿ ಅವರಿಗೆ ವಿಶ್ವಾಸವಿಲ್ಲ.

## ಶ್ಲೋಕ - 9

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ |**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ||೯||**

**ಏತಾಮ್**—ಈ; **ದೃಷ್ಟಿಮ್**—ದೃಷ್ಟಿಯನ್ನು; **ಅವಷ್ಟಭ್ಯ**—ಸ್ವೀಕರಿಸಿ; **ನಷ್ಟ**—ಕಳೆದುಕೊಂಡು; **ಆತ್ಮಾನಃ**—ತಮ್ಮನ್ನು; **ಅಲ್ಪಬುದ್ಧಯಃ**—ಮಂದಮತಿಗಳು; **ಪ್ರಭವನ್ತಿ**—ಏಳಿಗೆ ಹೊಂದುವರು; **ಉಗ್ರ ಕರ್ಮಾಣಃ**—ದುಃಖಮಯ ಕಾರ್ಯಗಳಲ್ಲಿ ನಿರತರಾಗಿ; **ಕ್ಷಯಾಯ**—ನಾಶಕ್ಕಾಗಿ; **ಜಗತಃ**—ಜಗತ್ತಿನ; **ಅಹಿತಾಃ**—ಅಹಿತಕರರಾಗಿ.

## ಅನುವಾದ

**ಇಂತಹ ನಿರ್ಣಯಗಳನ್ನು ಅನುಸರಿಸುವ ರಾಕ್ಷಸೀ ಸ್ವಭಾವದವರು ನಷ್ಟಾತ್ಮರು. ಅವರಿಗೆ ಬುದ್ಧಿಯಿಲ್ಲ; ಅವರು ಜಗತ್ತಿನ ನಾಶಕ್ಕೆ ಕಾರಣವಾಗುವ ಉಗ್ರಕರ್ಮಗಳನ್ನು ಮಾಡುತ್ತಾರೆ.**

## ಭಾವಾರ್ಥ

ರಾಕ್ಷಸೀ ಸ್ವಭಾವದವರು ಪ್ರಪಂಚವನ್ನು ನಾಶಕ್ಕೆ ಒಯ್ಯುವ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಅವರು ಅಲ್ಪಬುದ್ಧಿಯವರೆಂದು ಪ್ರಭುವು ಇಲ್ಲಿ ಹೇಳುತ್ತಾನೆ. ದೇವರ ಕಲ್ಪನೆ ಇಲ್ಲದಿರುವ ಪ್ರಾಪಂಚಿಕವಾದಿಗಳು ತಾವು ಪ್ರಗತಿಹೊಂದುತ್ತಿದ್ದೇವೆ ಎಂದು ಭಾವಿಸುತ್ತಾರೆ. ಆದರೆ ಭಗವದ್ಗೀತೆಯ ಪ್ರಕಾರ ಅವರು ಬುದ್ಧಿಯಿಲ್ಲದ ಮೂರ್ಖರು. ಅವರು ಈ ಐಹಿಕ ಜಗತ್ತನ್ನು ಸಾಧ್ಯವಾದಷ್ಟೂ ಭೋಗಿಸಲು ಪ್ರಯತ್ನಿಸುತ್ತಾರೆ; ಆದುದರಿಂದ ಇಂದ್ರಿಯತೃಪ್ತಿಗೆ ಹೊಸದೇನನ್ನಾದರೂ ಸೃಷ್ಟಿಸುವುದರಲ್ಲೇ ಸದಾ ಮಗ್ನರಾಗಿರುತ್ತಾರೆ. ಇಂತಹ ಪ್ರಾಪಂಚಿಕ ಹೊಸ ಸೃಷ್ಟಿಗಳು ಮನುಷ್ಯನ ನಾಗರಿಕತೆಯ ಮುನ್ನಡೆ ಎಂದು ಭಾವಿಸುತ್ತಾರೆ. ಆದರೆ ಇದರ ಪರಿಣಾಮವೆಂದರೆ ಜನರು ಹೆಚ್ಚು ಹೆಚ್ಚು ಹಿಂಸಾಪ್ರವೃತ್ತಿಯವರಾಗುತ್ತಾರೆ ಮತ್ತು ಕ್ರೂರಿಗಳಾಗುತ್ತಾರೆ. ಪ್ರಾಣಿಗಳ ವಿಷಯದಲ್ಲಿಯೂ ಇತರ ಮನುಷ್ಯರ ವಿಷಯದಲ್ಲಿಯೂ ಹೆಚ್ಚು ಕ್ರೂರಿಗಳಾಗುತ್ತಾರೆ. ಅವರಿಗೆ ಒಬ್ಬರೊಡನೆ ಇನ್ನೊಬ್ಬರು ಹೇಗೆ ನಡೆದುಕೊಳ್ಳಬೇಕು ಎನ್ನುವುದು ತಿಳಿಯದು. ಆಸುರೀ ಸ್ವಭಾವದ ಜನರಲ್ಲಿ ಪ್ರಾಣಿಹತ್ಯೆಯು ಎದ್ದುಕಾಣುತ್ತದೆ. ಅವರು ಕಟ್ಟಕಡೆಗೆ ಎಲ್ಲರಿಗೂ ವಿನಾಶವನ್ನು ತರುವ ಏನನ್ನಾದರೂ ಕಂಡುಹಿಡಿಯುತ್ತಾರೆ ಅಥವಾ ಸೃಷ್ಟಿಸುತ್ತಾರೆ. ಆದುದರಿಂದ ಇಂತಹ ಜನರನ್ನು ಪ್ರಪಂಚದ ಶತ್ರುಗಳೆಂದು ಭಾವಿಸಲಾಗುತ್ತದೆ. ಈ ಶ್ಲೋಕವು ಪರೋಕ್ಷವಾಗಿ ಮುಂದೆ ಬರಲಿದ್ದ ಅಣ್ವಸ್ತ್ರಗಳ ಸೃಷ್ಟಿಯನ್ನು ನಿರೀಕ್ಷಿಸುತ್ತದೆ; ಇಂದು ಇಡೀ ಜಗತ್ತು ಅಣ್ವಸ್ತ್ರಗಳ ವಿಷಯದಲ್ಲಿ ಹೆಮ್ಮೆಪಡುತ್ತದೆ. ಯಾವ ಕ್ಷಣದಲ್ಲಾದರೂ ಯುದ್ಧವಾಗಬಹುದು, ಮತ್ತು ಈ ಅಣ್ವಸ್ತ್ರಗಳು ವಿನಾಶವನ್ನೇ ಮಾಡಬಹುದು. ಇಂತಹ ವಸ್ತುಗಳನ್ನು ಸೃಷ್ಟಿಸುವುದೇ ಪ್ರಪಂಚದ ವಿನಾಶಕ್ಕಾಗಿ

ಮಾತ್ರ; ಅದನ್ನು ಇಲ್ಲಿ ಸೂಚಿಸಿದೆ. ದೇವರಲ್ಲಿ ನಂಬಿಕೆ ಇಲ್ಲದಿರುವುದರಿಂದ ಮನುಷ್ಯ ಸಮಾಜದಲ್ಲಿ ಇಂತಹ ಅಸ್ತ್ರಗಳನ್ನು ಸೃಷ್ಟಿಮಾಡುತ್ತಾರೆ; ಜಗತ್ತಿನ ಶಾಂತಿ ಮತ್ತು ಶ್ರೇಯಸ್ಸು ಅವುಗಳ ಉದ್ದೇಶವಲ್ಲ.

## ಶ್ಲೋಕ - 10

**ಕಾಮಮಾಶ್ರಿತ್ಯ ದುಷ್ಪೂರಂ ದಮ್ಭಮಾನಮದಾನ್ವಿತಾಃ |**
**ಮೋಹಾದ್ ಗೃಹೀತ್ವಾಸದ್ ಗ್ರಾಹಾನ್ ಪ್ರವರ್ತನ್ತೇಽಶುಚಿವ್ರತಾಃ ||೧೦||**

**ಕಾಮಮ್**—ಕಾಮವನ್ನು; **ಆಶ್ರಿತ್ಯ**—ಆಶ್ರಯಿಸಿ; **ದುಷ್ಪೂರಮ್**—ಪೂರೈಸಲಾಗದ; **ದಮ್ಭ**—ಗರ್ವ; **ಮಾನ**—ಮಿಥ್ಯಾ ಮರ್ಯಾದೆ; **ಮದ ಅನ್ವಿತಾಃ**—ಮದಗಳಿಂದ ಕೂಡಿ; **ಮೋಹಾತ್**—ಭ್ರಮೆಯಿಂದ; **ಗೃಹೀತ್ವಾ**—ಗ್ರಹಿಸಿ; **ಅಸತ್**—ಅಶಾಶ್ವತವಾದ; **ಗ್ರಾಹಾನ್**—ವಸ್ತುಗಳನ್ನು; **ಪ್ರವರ್ತನ್ತೇ**—ಮೆರೆಯುತ್ತಾರೆ; **ಅಶುಚಿ**—ಅಶುಚಿಯಾದ; **ವ್ರತಾಃ**—ವರ್ತನೆಯುಳ್ಳವರಾಗಿ.

## ಅನುವಾದ

**ತೃಪ್ತಿಯೇ ಆಗದ ಕಾಮವನ್ನು ಆಶ್ರಯಿಸಿ ಡಂಭ ಮತ್ತು ಒಣಪ್ರತಿಷ್ಠೆಗಳ ಉನ್ಮಾದದಲ್ಲಿ ಮೈಮರೆತು ಆಸುರೀ ಸ್ವಭಾವದವರು ಮೋಹಕ್ಕೊಳಗಾಗುತ್ತಾರೆ. ಅಶಾಶ್ವತವಾದ ವಿಷಯಗಳಿಂದ ಆಕರ್ಷಿತರಾಗಿ ಸದಾ ಅಶುಚಿಕರ್ಮಗಳಿಗೆ ಬದ್ಧರಾಗಿರುತ್ತಾರೆ.**

## ಭಾವಾರ್ಥ

ಆಸುರೀ ಮನೋಧರ್ಮವನ್ನು ಇಲ್ಲಿ ವರ್ಣಿಸಿದೆ. ರಾಕ್ಷಸರ ಕಾಮಕ್ಕೆ ತೃಪ್ತಿಯೇ ಇಲ್ಲ. ಐಹಿಕ ಭೋಗದಲ್ಲಿ ತೃಪ್ತಿಯೇ ಇಲ್ಲದ ತಮ್ಮ ಬಯಕೆಯನ್ನು ಬೆಳೆಸುತ್ತಾ, ಬೆಳೆಸುತ್ತಾ ಹೋಗುತ್ತಾರೆ. ಅಶಾಶ್ವತವಾದ ವಸ್ತುಗಳನ್ನು ಸ್ವೀಕರಿಸುವುದರಿಂದ ಅವರು ಸದಾ ಆತಂಕದಿಂದ ತುಂಬಿದ್ದರೂ ಮಾಯೆಯ ಕಾರಣದಿಂದ ಇಂತಹ ಕರ್ಮಗಳಲ್ಲಿ ನಿರತರಾಗಿಯೇ ಇರುತ್ತಾರೆ. ಅವರಿಗೆ ಜ್ಞಾನವಿಲ್ಲ; ತಾವು ತಪ್ಪುದಾರಿಯಲ್ಲಿ ಹೋಗುತ್ತಿದ್ದೇವೆ ಎಂದು ಅವರು ಹೇಳಲಾರರು. ಅಶಾಶ್ವತವಾದ ವಸ್ತುಗಳನ್ನು ಸ್ವೀಕರಿಸಿ ಆಸುರೀ ಸ್ವಭಾವದ ಈ ಜನರು ತಮ್ಮದೇ ದೇವರನ್ನು ಮತ್ತು ತಮ್ಮವೇ ಸ್ತೋತ್ರಗಳನ್ನು ಸೃಷ್ಟಿಮಾಡುತ್ತಾರೆ ಮತ್ತು ಅವುಗಳಂತೆಯೇ ಸಂಕೀರ್ತನೆ ಮಾಡುತ್ತಾರೆ. ಇದರ ಪರಿಣಾಮವೆಂದರೆ ಅವರು ಎರಡು ವಿಷಯಗಳಿಂದ ಆಕರ್ಷಿತರಾಗುತ್ತಾರೆ — ಕಾಮಭೋಗ ಮತ್ತು ಐಹಿಕ ಸಂಪತ್ತಿನ ಶೇಖರಣೆ. **ಅಶುಚಿವ್ರತಾಃ,** 'ಅಶುಚಿವ್ರತಗಳು' ಎನ್ನುವ ಮಾತು ಈ ಸಂದರ್ಭದಲ್ಲಿ ಬಹಳ ಮಹತ್ವದ್ದು. ಇಂತಹ ಆಸುರೀ ಜನರಿಗೆ ಮದ್ಯ, ಸ್ತ್ರೀ, ಜೂಜು ಮತ್ತು ಮಾಂಸಭಕ್ಷಣೆ ಇವುಗಳದೇ ಆಕರ್ಷಣೆ. ಇವು ಅವರ ಅಶುಚಿಯಾದ ಅಭ್ಯಾಸಗಳು. ಅಹಂಕಾರ ಮತ್ತು ಒಣಪ್ರತಿಷ್ಠೆಗಳಿಂದ ಪ್ರೇರಿತರಾಗಿ ಅವರು ವೈದಿಕ ಆದೇಶಗಳು ಒಪ್ಪದ ಕೆಲವು ಧಾರ್ಮಿಕ ತತ್ವಗಳನ್ನು ಸೃಷ್ಟಿಸುತ್ತಾರೆ. ಇಂತಹ ಆಸುರೀ ಸ್ವಭಾವದ ಜನರು ಜಗತ್ತಿನಲ್ಲಿ ಅತ್ಯಂತ ಅಸಹ್ಯವನ್ನುಂಟುಮಾಡುವ ಜನರಾದರೂ ಕೃತಕ ರೀತಿಗಳಲ್ಲಿ ಜಗತ್ತು ಅವರಿಗೆ ಸುಳ್ಳು ಗೌರವವನ್ನು ಸೃಷ್ಟಿಸುತ್ತದೆ. ನರಕದ ಕಡೆಗೆ ಜಾರುತ್ತಿದ್ದರೂ ತಾವು ತುಂಬ ಮುಂದುವರಿದವರು ಎಂದು ಅವರು ಭಾವಿಸುತ್ತಾರೆ.

## ಶ್ಲೋಕ 11-12

**ಚಿನ್ತಾಮಪರಿಮೇಯಾಂ ಚ ಪ್ರಲಯನ್ತಾಮುಪಾಶ್ರಿತಾಃ |**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ||೧೧||**

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ |**
**ಈಹನ್ತೇ ಕಾಮಭೋಗಾರ್ಥಮನ್ಯಾಯೇನಾರ್ಥಸಞ್ಚಯಾನ್ ||೧೨||**

**ಚಿನ್ತಾಮ್**—ಭಯ ಮತ್ತು ಆತಂಕಗಳನ್ನು; **ಅಪರಿಮೇಯಾಮ್**—ಅಳತೆಗೆ ನಿಲುಕದ; **ಚ**—ಮತ್ತು; **ಪ್ರಲಯ ಅನ್ತಾಮ್**—ಮರಣದವರೆಗೆ; **ಉಪಾಶ್ರಿತಾಃ**—ಆಶ್ರಯಿಸಿ; **ಕಾಮ ಉಪಭೋಗ**—ಇಂದ್ರಿಯತೃಪ್ತಿಯೆ; **ಪರಮಾಃ**—ಜೀವನದ ಅತ್ಯುನ್ನತ ಗುರಿ ಉಳ್ಳವರಾಗಿ; **ಏತಾವತ್**—ಹೀಗೆ; **ಇತಿ**—ಈ ರೀತಿಯಲ್ಲಿ; **ನಿಶ್ಚಿತಾಃ**—ಎಂದು ನಿಶ್ಚಯಿಸಿಕೊಂಡು; **ಆಶಾ ಪಾಶ**—ಆಶೆಯ ಬಲೆಯ; **ಶತೈಃ**—ನೂರಾರರಿಂದ; **ಬದ್ಧಾಃ**—ಬದ್ಧರಾಗಿ; **ಕಾಮ**—ಕಾಮ; **ಕ್ರೋಧ**—ಕೋಪಗಳ; **ಪರಾಯಣಾಃ**—ಮನೋಭಾವದಲ್ಲಿಯೇ ಯಾವಾಗಲೂ ಇರುತ್ತಾ; **ಈಹನ್ತೇ**—ಬಯಸುತ್ತಾರೆ; **ಕಾಮ**—ಕಾಮ; **ಭೋಗ**—ಇಂದ್ರಿಯ ಭೋಗಗಳ; **ಅರ್ಥಮ್**—ಉದ್ದೇಶಕ್ಕಾಗಿ; **ಅನ್ಯಾಯೇನ**— ಅನ್ಯಾಯದಿಂದ; **ಅರ್ಥ**—ಸಂಪತ್ತಿನ; **ಸಞ್ಚಯಾನ್**—ಸಂಗ್ರಹವನ್ನು.

### ಅನುವಾದ

**ಇಂದ್ರಿಯ ಭೋಗವೇ ಮಾನವ ನಾಗರಿಕತೆಯ ಮುಖ್ಯ ಅಗತ್ಯ ಎಂದು ಅವರು ನಂಬುತ್ತಾರೆ. ಹೀಗೆ ಬದುಕಿನ ಕೊನೆಯವರೆಗೆ ಅವರದು ಅಳೆಯಲಾಗದ ಆತಂಕ. ಲಕ್ಷಾಂತರ ಬಯಕೆಗಳ ಬಲೆಯಲ್ಲಿ ಸಿಕ್ಕಿಬಿದ್ದು ಕಾಮಕ್ರೋಧಗಳಲ್ಲಿ ತನ್ಮಯರಾಗಿ ಅವರು ಇಂದ್ರಿಯ ತೃಪ್ತಿಗಾಗಿ ಅನ್ಯಾಯವಾದ ರೀತಿಯಲ್ಲಿ ಹಣವನ್ನು ಸಂಗ್ರಹಿಸುತ್ತಾರೆ.**

### ಭಾವಾರ್ಥ

ಇಂದ್ರಿಯ ಭೋಗವೇ ಬದುಕಿನ ಪರಮಗುರಿ ಎಂದು ರಾಕ್ಷಸೀ ಸ್ವಭಾವದವರು ಒಪ್ಪುತ್ತಾರೆ. ಸಾಯುವವರೆಗೆ ಈ ಪರಿಕಲ್ಪನೆಯನ್ನೇ ಸಾಧಿಸುತ್ತಾರೆ. ಸಾವಿನಾಚೆಯ ಬದುಕಿನಲ್ಲಿ ಅವರಿಗೆ ನಂಬಿಕೆಯಿಲ್ಲ; ತನ್ನ ಕರ್ಮಗಳಿಗೆ ಅನುಗುಣವಾಗಿ ಮನುಷ್ಯನು ಬೇರೆ ಬೇರೆ ರೀತಿಗಳ ದೇಹಗಳನ್ನು ಪಡೆಯುತ್ತಾನೆ ಎಂದು ಅವರಿಗೆ ನಂಬಿಕೆಯಿಲ್ಲ. ಅವರ ಬದುಕಿನ ಯೋಜನೆಗಳು ಮುಗಿಯುವುದೇ ಇಲ್ಲ. ಅವರು ಯೋಜನೆಯಾದ ಮೇಲೆ ಯೋಜನೆಯನ್ನು ಸಿದ್ಧಗೊಳಿಸುತ್ತಾ ಹೋಗುತ್ತಾರೆ. ಅವುಗಳಿಗೆ ಮುಕ್ತಾಯವೇ ಇಲ್ಲ. ಇಂತಹ ಆಸುರೀ ಸ್ವಭಾವದ ಒಬ್ಬ ವ್ಯಕ್ತಿಯ ವೈಯಕ್ತಿಕ ಅನುಭವ ನಮಗಿದೆ. ಇನ್ನೇನು ಸಾಯುವಾಗಲೂ ಅವನು ತನ್ನ ಯೋಜನೆಗಳು ಮುಗಿದಿಲ್ಲ, ಆದದ್ದರಿಂದ ತನ್ನ ಆಯುಸ್ಸನ್ನು ಇನ್ನು ನಾಲ್ಕು ವರ್ಷಗಳ ಕಾಲ ಹೆಚ್ಚಿಸಬೇಕೆಂದು ವೈದ್ಯರನ್ನು ಬೇಡಿಕೊಳ್ಳುತ್ತಿದ್ದ. ವೈದ್ಯನು ಆಯುಸ್ಸನ್ನು ಒಂದು ಕ್ಷಣದ ಮಟ್ಟಿಗೂ ಹೆಚ್ಚಿಸಲಾರ ಎನ್ನುವುದು ಇಂತಹ ಮೂರ್ಖರಿಗೆ ತಿಳಿಯದು. ಎಚ್ಚರಿಕೆಯ ಪತ್ರವನ್ನು ಕೊಟ್ಟಮೇಲೆ ಮನುಷ್ಯನ ಅಪೇಕ್ಷೆಯ ಪರಿಗಣನೆಯೇ ಇಲ್ಲ. ಮನುಷ್ಯನು ಅನುಭವಿಸಲು ನಿಗದಿಮಾಡಿರುವ ಕಾಲಕ್ಕೆ ಒಂದುಕ್ಷಣವನ್ನು ಸೇರಿಸುವುದಕ್ಕೂ ಪ್ರಕೃತಿಯ ನಿಯಮಗಳು ಅವಕಾಶ ಕೊಡುವುದಿಲ್ಲ.

ದೇವರಲ್ಲಾಗಲೀ ತನ್ನೊಳಗಿರುವ ಪರಮಾತ್ಮನಲ್ಲಾಗಲೀ ನಂಬಿಕೆಯಿಲ್ಲದ ಆಸುರೀ ಸ್ವಭಾವದ ಮನುಷ್ಯನು ಇಂದ್ರಿಯತೃಪ್ತಿಗಾಗಿ ಮಾತ್ರವೇ ಎಲ್ಲ ವಿಧದ ಪಾಪಕರ್ಮಗಳನ್ನು ಮಾಡುತ್ತಾನೆ. ತನ್ನ ಹೃದಯದಲ್ಲಿ ಒಬ್ಬ ಸಾಕ್ಷಿ ಕುಳಿತಿದ್ದಾನೆ ಎಂದು ಅವನಿಗೆ ತಿಳಿಯದು. ವ್ಯಕ್ತಿಗತ ಆತ್ಮದ ಕರ್ಮಗಳನ್ನು ಪರಮಾತ್ಮನು ವೀಕ್ಷಿಸುತ್ತಿರುತ್ತಾನೆ. ಉಪನಿಷತ್ತುಗಳಲ್ಲಿ ಹೇಳಿರುವಂತೆ ಒಂದು ಮರದ ಮೇಲೆ ಎರಡು ಪಕ್ಷಿಗಳು ಕುಳಿತಿವೆ. ಒಂದು ಕ್ರಿಯೆಯಲ್ಲಿ ನಿರತವಾಗಿದ್ದು, ರೆಂಬೆಯಲ್ಲಿನ ಹಣ್ಣುಗಳನ್ನು ಸವಿಯುತ್ತಿರುತ್ತದೆ ಅಥವಾ ಅವುಗಳಿಂದ ಕಷ್ಟಪಡುತ್ತಿರುತ್ತದೆ; ಇನ್ನೊಂದು ಸಾಕ್ಷಿಯಾಗಿ ನೋಡುತ್ತಿರುತ್ತದೆ. ಆಸುರೀ ಸ್ವಭಾವದವನಿಗೆ ವೈದಿಕ ಧರ್ಮಗ್ರಂಥಗಳ ತಿಳುವಳಿಕೆಯಿಲ್ಲ. ಅವನಿಗೆ ಶ್ರದ್ಧೆಯೂ ಇಲ್ಲ. ಆದುದರಿಂದ ಪರಿಣಾಮ ಏನೇ ಆಗಲಿ, ಇಂದ್ರಿಯಭೋಗಕ್ಕಾಗಿ ಏನನ್ನು ಬೇಕಾದರೂ ಮಾಡುವ ಸ್ವಾತಂತ್ರ್ಯವು ತನಗಿದೆ ಎಂದು ಭಾವಿಸುತ್ತಾನೆ.

## ಶ್ಲೋಕ 13-15

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ |**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ||೧೩||**

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ |**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ||೧೪||**

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ |**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ||೧೫||**

**ಇದಮ್**—ಇದನ್ನು; **ಅದ್ಯ**—ಈ ದಿನ; **ಮಯಾ**—ನನ್ನಿಂದ; **ಲಬ್ಧಮ್**—ಪಡೆಯಲಾಗಿದೆ; **ಇಮಮ್**—ಇದನ್ನು; **ಪ್ರಾಪ್ಸ್ಯೇ**—ಪಡೆಯುತ್ತೇನೆ; **ಮನಃ ರಥಮ್**—ನನ್ನ ಇಚ್ಛೆಗನುಗುಣವಾಗಿ; **ಇದಮ್**—ಇದು; **ಅಸ್ತಿ**—ಇದೆ; **ಇದಮ್**—ಇದು; **ಅಪಿ**—ಕೂಡ; **ಮೇ**—ನನ್ನ; **ಭವಿಷ್ಯತಿ**—ಮುಂದೆ ವೃದ್ಧಿಸುವುದು; **ಪುನಃ**—ಮತ್ತೆ; **ಧನಮ್**—ಸಂಪತ್ತು; **ಅಸೌ**—ಆ; **ಮಯಾ**—ನನ್ನಿಂದ; **ಹತಃ**—ಕೊಲ್ಲಲ್ಪಟ್ಟಿದ್ದಾನೆ; **ಶತ್ರುಃ**—ವೈರಿಯು; **ಹನಿಷ್ಯೇ**—ಕೊಲ್ಲುತ್ತೇನೆ; **ಚ**—ಕೂಡ; **ಅಪರಾನ್**—ಬೇರೆಯವರನ್ನು; **ಅಪಿ**—ಖಂಡಿತವಾಗಿಯೂ; **ಈಶ್ವರಃ**—ಪ್ರಭುವು; **ಅಹಮ್**—ನಾನು; **ಅಹಮ್**—ನಾನು; **ಭೋಗೀ**—ಭೋಗಿಸುವವನು; **ಸಿದ್ಧಃ**—ಸಿದ್ಧನು; **ಅಹಮ್**—ನಾನು; **ಬಲವಾನ್**—ಬಲಶಾಲಿಯು; **ಸುಖೀ**—ಸುಖಿಯು; **ಆಢ್ಯಃ**—ಶ್ರೀಮಂತನು; **ಅಭಿಜನವಾನ್**—ಸಿರಿವಂತ ಬಂಧುಗಳಿಂದ ಸುತ್ತುವರಿಯಲ್ಪಟ್ಟವನು; **ಅಸ್ಮಿ**—ಆಗಿದ್ದೇನೆ; **ಕಃ**—ಯಾರು; **ಅನ್ಯಃ**—ಬೇರೆಯವರು; **ಅಸ್ತಿ**—ಇದ್ದಾರೆ; **ಸದೃಶಃ**—ಸಮಾನರು; **ಮಯಾ**—ನನಗೆ; **ಯಕ್ಷ್ಯೇ**—ಯಜ್ಞಮಾಡುತ್ತೇನೆ, **ದಾಸ್ಯಾಮಿ**—ದಾನನೀಡುತ್ತೇನೆ; **ಮೋದಿಷ್ಯೇ**—ಸಂತೋಷಿಸುತ್ತೇನೆ; **ಇತಿ**—ಹೀಗೆ; **ಅಜ್ಞಾನ**—ಅಜ್ಞಾನದಿಂದ; **ವಿಮೋಹಿತಾಃ**—ಭ್ರಾಂತರಾದವರು.

## ಅನುವಾದ

**ಆಸುರೀ ಸ್ವಭಾವದವನು ಹೀಗೆ ಯೋಚಿಸುತ್ತಾನೆ — "ನನಗೆ ಇವತ್ತು ಇಷ್ಟು ಸಂಪತ್ತಿದೆ ಮತ್ತು**

**ನನ್ನ ಯೋಜನೆಗಳಿಗೆ ಅನುಗುಣವಾಗಿ ಇನ್ನೂ ಹೆಚ್ಚಾಗಿ ಸಂಪಾದಿಸುತ್ತೇನೆ. ಈಗ ನನ್ನದು ಇಷ್ಟಿದೆ, ಮುಂದೆ ಹೆಚ್ಚು ಹೆಚ್ಚಾಗುತ್ತಾ ಹೋಗುತ್ತದೆ. ಅವನು ನನ್ನ ಶತ್ರು, ಅವನನ್ನು ನಾನು ಕೊಂದಿದ್ದೇನೆ. ನನ್ನ ಇತರ ಶತ್ರುಗಳೂ ಕೊಲ್ಲಲ್ಪಡುವರು. ನಾನು ಎಲ್ಲದರ ಪ್ರಭು. ಭೋಗಪಡುವವನೂ ನಾನೇ. ನಾನು ಪರಿಪೂರ್ಣ, ಬಲಶಾಲಿ ಮತ್ತು ಸುಖಿ. ನಾನೇ ಅತ್ಯಂತ ಶ್ರೀಮಂತ. ಶ್ರೀಮಂತ ನಂಟರು ನನ್ನ ಸುತ್ತ ಇದ್ದಾರೆ. ನನ್ನಷ್ಟು ಬಲಶಾಲಿಯಾದವರು ಮತ್ತು ಸುಖಿಯಾದವರು ಯಾರೂ ಇಲ್ಲ. ನಾನು ಯಾಗಮಾಡುವೆನು. ಒಂದಿಷ್ಟು ದಾನ ಕೊಡುವೆನು ಅನಂತರ ಮೋದಪಡುವೆನು." ಹೀಗೆ ಇಂತಹ ಮನುಷ್ಯರು ಅಜ್ಞಾನದಿಂದ ಭ್ರಾಂತರಾಗುತ್ತಾರೆ.**

## ಶ್ಲೋಕ - 16

**ಅನೇಕಚಿತ್ತವಿಭ್ರಾನ್ತಾ ಮೋಹಜಾಲಸಮಾವೃತಾಃ |**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ||೧೬||**

**ಅನೇಕ**—ನಾನಾಬಗೆಯ; **ಚಿತ್ತ**—ಚಿತ್ತ ಚಾಂಚಲ್ಯದಿಂದ; **ವಿಭ್ರಾನ್ತಾಃ**—ಭ್ರಾಂತರಾದ; **ಮೋಹ**—ಮೋಹಗಳ; **ಜಾಲ**—ಬಲೆಯಿಂದ; **ಸಮಾವೃತಾಃ**—ಆವೃತರಾದ; **ಪ್ರಸಕ್ತಾಃ**—ಆಸಕ್ತರು; **ಕಾಮ ಭೋಗೇಷು**—ಇಂದ್ರಿಯ ಭೋಗಗಳಲ್ಲಿ; **ಪತನ್ತಿ**—ಬೀಳುತ್ತಾರೆ; **ನರಕೇ**—ನರಕದಲ್ಲಿ; **ಅಶುಚೌ**—ಅಶುಚಿಯಾದ.

## ಅನುವಾದ

**ಹೀಗೆ ಅವರು ಹಲವಾರು ಆತಂಕಗಳಿಂದ ಭ್ರಾಂತರಾಗಿ ಮಾಯೆಯ ಬಲೆಯಲ್ಲಿ ಬಂಧಿತರಾಗಿ ಇಂದ್ರಿಯ ಭೋಗದಲ್ಲಿ ಅತಿಯಾಗಿ ಆಸಕ್ತರಾಗುತ್ತಾರೆ ಮತ್ತು ನರಕಕ್ಕೆ ಬೀಳುತ್ತಾರೆ.**

## ಭಾವಾರ್ಥ

ಆಸುರೀ ಸ್ವಭಾವದ ಮನುಷ್ಯನ ಹಣದಾಸೆಗೆ ಮಿತಿಯೆನ್ನುವುದೇ ಇಲ್ಲ. ಈಗ ತನ್ನ ಹತ್ತಿರ ಎಷ್ಟು ಹಣವಿದೆ ಎಂದು ಮಾತ್ರವೇ ಅವನು ಯೋಚಿಸುತ್ತಾನೆ. ಆ ಹಣದ ಭಂಡಾರವನ್ನು ಇನ್ನೂ ಬೆಳೆಸಲು ಯೋಜನೆಗಳನ್ನು ಮಾಡುತ್ತಾನೆ. ಈ ಕಾರಣಗಳಿಂದ ಅವನು ಯಾವುದೇ ಪಾಪಕರ್ಮಗಳನ್ನು ಮಾಡಲು ಹಿಂದೆಗೆಯುವುದಿಲ್ಲ. ಕಾನೂನಿಗೆ ವಿರುದ್ಧವಾದ ರೀತಿಯಲ್ಲಿ ತೃಪ್ತಿಪಡಲು ಕಾಳಸಂತೆಯಲ್ಲಿ ವ್ಯವಹರಿಸುತ್ತಾನೆ. ಭೂಮಿ, ಸಂಸಾರ, ಮನೆ ಮತ್ತು ಬ್ಯಾಂಕಿನಲ್ಲಿ ಹಣ, ಹೀಗೆ ಆಗಲೇ ತನಗಿರುವ ಸ್ವತ್ತಿಗೆ ಅವನು ಸಂಪೂರ್ಣವಾಗಿ ಮನಸೋಲುತ್ತಾನೆ. ಅವುಗಳನ್ನು ಹೆಚ್ಚಿಸಿಕೊಳ್ಳಲು ಸದಾ ಯೋಚನೆ ಮಾಡುತ್ತಿರುತ್ತಾನೆ. ಅವನಿಗೆ ತನ್ನ ಶಕ್ತಿಯಲ್ಲಿ ನಂಬಿಕೆ. ತಾನು ಪಡೆಯುತ್ತಿರುವುದೆಲ್ಲ ತನ್ನ ಹಿಂದಿನ ಪುಣ್ಯಕಾರ್ಯಗಳಿಂದ ಎಂದು ಅವನಿಗೆ ತಿಳಿಯದು. ಇಂತಹ ಸ್ವತ್ತುಗಳನ್ನು ಸಂಗ್ರಹಿಸಲು ಅವನಿಗೊಂದು ಅವಕಾಶವನ್ನು ಕೊಡಲಾಗಿದೆ. ಆದರೆ ಅವನಿಗೆ ಹಿಂದಿನ ಕಾರಣಗಳ ಕಲ್ಪನೆಯೇ ಇಲ್ಲ. ತನ್ನ ಶ್ರೀಮಂತಿಕೆಯೆಲ್ಲಕ್ಕೂ ತನ್ನ ಶ್ರಮವೇ ಕಾರಣ ಎಂದಷ್ಟೇ ಯೋಚಿಸುತ್ತಾನೆ. ಆಸುರೀ ಸ್ವಭಾವದ ಮನುಷ್ಯನು ವೈಯಕ್ತಿಕವಾಗಿ ತಾನು ಮಾಡುವ ಕೆಲಸದ ಸಾಮರ್ಥ್ಯವನ್ನು ನಂಬುತ್ತಾನೆ; ಕರ್ಮದ ನಿಯಮವನ್ನಲ್ಲ. ಕರ್ಮದ ನಿಯಮದ ಪ್ರಕಾರ ಮನುಷ್ಯನು ಹಿಂದೆ ಮಾಡಿದ ಪುಣ್ಯಕಾರ್ಯಗಳಿಂದಾಗಿ ಉನ್ನತ ಕುಟುಂಬದಲ್ಲಿ ಹುಟ್ಟುತ್ತಾನೆ,

ಶ್ರೀಮಂತನಾಗುತ್ತಾನೆ, ಬಹು ಒಳ್ಳೆಯ ಶಿಕ್ಷಣವನ್ನು ಪಡೆಯುತ್ತಾನೆ ಅಥವಾ ತುಂಬ ಸುಂದರನಾಗುತ್ತಾನೆ. ಆಸುರೀ ಸ್ವಭಾವದವರು ಇವೆಲ್ಲ ಆಕಸ್ಮಿಕಗಳು ಮತ್ತು ಮನುಷ್ಯನ ವೈಯಕ್ತಿಕ ಸಾಮರ್ಥ್ಯದಿಂದ ಆದವು ಎಂದು ಯೋಚಿಸುತ್ತಾರೆ. ಜನರ ಸೌಂದರ್ಯದ ಮತ್ತು ವಿದ್ಯಾಭ್ಯಾಸದ ವೈವಿಧ್ಯದ ಹಿಂದೆ ಯಾವುದೋ ವ್ಯವಸ್ಥೆಯಿದೆ ಎಂದು ಅವರು ಅರ್ಥಮಾಡಿಕೊಳ್ಳಲಾರರು. ಇಂತಹ ಆಸುರೀ ಸ್ವಭಾವದ ಮನುಷ್ಯನೊಡನೆ ಸ್ಪರ್ಧೆಗೆ ನಿಲ್ಲುವವನು ಅವನ ಶತ್ರುವಾಗುತ್ತಾನೆ. ಆಸುರೀ ಸ್ವಭಾವದ ಜನರು ಹಲವರಿದ್ದಾರೆ. ಅವರಲ್ಲಿ ಪ್ರತಿಯೊಬ್ಬನೂ ಇತರರಿಗೆ ಶತ್ರು. ಹಗೆತನವು ಹೆಚ್ಚು ಹೆಚ್ಚು ಆಳವಾಗುತ್ತಾ ಹೋಗುತ್ತದೆ. ಜನರ ನಡುವೆ, ಅನಂತರ ಸಂಸಾರಗಳ ನಡುವೆ, ಅನಂತರ ಸಮಾಜಗಳ ನಡುವೆ, ಕಡೆಗೆ ರಾಷ್ಟ್ರಗಳ ನಡುವೆ ಹಗೆತನ ಹೆಚ್ಚಾಗುತ್ತದೆ. ಇದರಿಂದಾಗಿ ಇಡೀ ಪ್ರಪಂಚದಲ್ಲಿ ಸದಾ ಘರ್ಷಣೆ, ಯುದ್ಧ ಮತ್ತು ಶತ್ರುತ್ವ ಉಂಟಾಗುತ್ತದೆ.

ಆಸುರೀ ಸ್ವಭಾವದ ಪ್ರತಿಯೊಬ್ಬನೂ ತಾನು ಇತರರೆಲ್ಲರನ್ನೂ ಬಲಿಕೊಟ್ಟು ಬದುಕಬಲ್ಲೆ ಎಂದು ಭಾವಿಸುತ್ತಾನೆ. ಸಾಮಾನ್ಯವಾಗಿ ಆಸುರೀ ಸ್ವಭಾವದ ಮನುಷ್ಯನು ತಾನೇ ದೇವೋತ್ತಮನು ಎಂದು ಭಾವಿಸುತ್ತಾನೆ. ಆಸುರೀ ಸ್ವಭಾವದ ಉಪದೇಶಕನು ತನ್ನ ಹಿಂಬಾಲಕರಿಗೆ ಹೀಗೆ ಹೇಳುತ್ತಾನೆ, "ದೇವರನ್ನು ಬೇರೆಡೆ ಏಕೆ ಹುಡುಕುತ್ತೀರಿ? ನೀವುಗಳೆಲ್ಲ ದೇವರೇ ! ನಿಮಗೆ ಇಷ್ಟ ಬಂದಂತೆ ಮಾಡಬಹುದು. ದೇವರಲ್ಲಿ ನಂಬಿಕೆ ಇಡಬೇಡಿ. ದೇವರನ್ನು ಬಿಸುಡಿ. ದೇವರು ಸತ್ತು ಹೋಗಿದ್ದಾನೆ." ಆಸುರೀ ಸ್ವಭಾವದವನ ಉಪದೇಶಗಳು ಇವೇ.

ತನ್ನಷ್ಟೇ ಅಥವಾ ತನಗಿಂತ ಹೆಚ್ಚು ಶ್ರೀಮಂತರಾದವರನ್ನು ಮತ್ತು ಪ್ರಭಾವಶಾಲಿಗಳಾದವರನ್ನು ಆಸುರೀಸ್ವಭಾವದ ಮನುಷ್ಯನು ಕಂಡರೂ ತನಗಿಂತ ಶ್ರೀಮಂತರಾದವರೂ ತನಗಿಂತ ಪ್ರಭಾವಶಾಲಿಗಳು ಆದವರು ಯಾರೂ ಇಲ್ಲ ಎಂದೇ ಯೋಚಿಸುತ್ತಾನೆ. ಮೇಲಿನ ಲೋಕವ್ಯೂಹಗಳಿಗೆ ಏರುವ ವಿಷಯವಾಗಿ ಹೇಳುವುದಾದರೆ, ಅವನಿಗೆ ಯಜ್ಞಗಳನ್ನು ಮಾಡುವುದರಲ್ಲಿ ನಂಬಿಕೆ ಇಲ್ಲ. ಯಜ್ಞದ ತಮ್ಮದೇ ಪ್ರಕ್ರಿಯೆಯನ್ನು ಸೃಷ್ಟಿ ಮಾಡುತ್ತೇವೆ, ಯಾವುದೇ ಉನ್ನತ ಲೋಕವನ್ನು ತಾವು ತಲಪಲು ಸಾಧ್ಯವಾಗುವ ಯಾವುದಾದರೂ ಯಂತ್ರವನ್ನು ಮಾಡುತ್ತೇವೆ ಎಂದು ಅಸುರರು ಭಾವಿಸುತ್ತಾರೆ. ಇಂತಹ ಅಸುರ ಸ್ವಭಾವದ ಮನುಷ್ಯನ ಅತ್ಯುತ್ತಮ ನಿದರ್ಶನ ರಾವಣ. ಅವನು ಒಂದು ಯೋಜನೆಯನ್ನು ಜನರ ಮುಂದಿಟ್ಟ. ಅದರ ಪ್ರಕಾರ ತಾನು ಮಹಡಿ ಮೆಟ್ಟಲುಗಳನ್ನು ನಿರ್ಮಿಸುವೆನೆಂದ. ವೇದಗಳಲ್ಲಿ ವಿಧಿಸಿರುವ ಯಜ್ಞಗಳನ್ನು ಮಾಡದೆಯೇ ಜನರು ಸ್ವರ್ಗಲೋಕಗಳನ್ನು ತಲಪಬಹುದು ಎಂದ. ಹೀಗೆಯೇ ಈ ಯುಗದಲ್ಲಿ ಇಂತಹ ಆಸುರೀ ಸ್ವಭಾವದ ಜನರು ಯಾಂತ್ರಿಕ ವ್ಯವಸ್ಥೆಗಳಿಂದ ಉನ್ನತ ಸ್ವರ್ಗಲೋಕಗಳನ್ನು ತಲಪಲು ಶ್ರಮಿಸುತ್ತಿದ್ದಾರೆ. ಇವೆಲ್ಲ ಗೊಂದಲದಲ್ಲಿರುವವರ ನಿದರ್ಶನಗಳು. ಇದರ ಪರಿಣಾಮವೆಂದರೆ, ಅವರಿಗೇ ತಿಳಿಯದೆ ಅವರು ನರಕಕ್ಕೆ ಜಾರುತ್ತಿದ್ದಾರೆ. ಇಲ್ಲಿ ಮೋಹಜಾಲ ಎಂಬ ಸಂಸ್ಕೃತಪದವು ಮಹತ್ವಪೂರ್ಣವಾದುದು. ಜಾಲ ಎಂದರೆ ಬಲೆ. ಬಲೆಯಲ್ಲಿ ಸಿಕ್ಕಿಬಿದ್ದ ಮೀನುಗಳಂತೆ, ಅವರಿಗೆ ಹೊರಕ್ಕೆ ಬರಲು ದಾರಿಯೇ ಇಲ್ಲ.

## ಶ್ಲೋಕ - 17

**ಆತ್ಮಸಮ್ಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ |**
**ಯಜನ್ತೇ ನಾಮಯಜ್ಞೈಸ್ತೇ ದಮ್ಭೇನಾವಿಧಿಪೂರ್ವಕಮ್ ||೧೭||**

**ಆತ್ಮ ಸಮ್ಭಾವಿತಾಃ**—ಆತ್ಮ ಸಂತೃಪ್ತರಾದ; **ಸ್ತಬ್ಧಾಃ**—ಉದ್ಧಟರು; **ಧನಮಾನ**—ಹಣ ಮತ್ತು ಮಿಥ್ಯಾ ಗೌರವಗಳ; **ಮದ**—ಭ್ರಾಂತಿಯಲ್ಲಿ; **ಅನ್ವಿತಾಃ**—ಮಗ್ನರಾದ; **ಯಜನ್ತೇ**—ಯಜ್ಞವನ್ನಾಚರಿಸುತ್ತಾರೆ; **ನಾಮ**—ಹೆಸರಿಗೆ ಮಾತ್ರ; **ಯಜ್ಞೈಃ**—ಯಜ್ಞಗಳಿಂದ; **ತೇ**—ಅವರು; **ದಮ್ಭೇನ**—ಗರ್ವದಿಂದ; **ಅವಿಧಿ ಪೂರ್ವಕಮ್**—ಯಾವ ನಿಯಮ ನಿಯಂತ್ರಣಗಳನ್ನು ಅನುಸರಿಸದೆ.

## ಅನುವಾದ

**ಅವರು ತಮ್ಮ ವಿಷಯದಲ್ಲಿ ಸಂಪೂರ್ಣ ತೃಪ್ತರು ಮತ್ತು ಯಾವಾಗಲೂ ಉದ್ಧಟರು. ಸಂಪತ್ತು ಮತ್ತು ಒಣ ಪ್ರತಿಷ್ಠೆಗಳಿಂದ ಭ್ರಾಂತರಾದವರು. ಕೆಲವೊಮ್ಮೆ ಅವರು ಯಾವ ನಿಯಮ ನಿಬಂಧನೆಗಳನ್ನೂ ಅನುಸರಿಸದೆ, ಜಂಭದಿಂದ ಹೆಸರಿಗೆ ಮಾತ್ರ ಯಜ್ಞಗಳನ್ನು ಮಾಡುತ್ತಾರೆ.**

## ಭಾವಾರ್ಥ

ಆಸುರೀ ಸ್ವಭಾವದವರು ತಾವೇ ಸರ್ವಸ್ವ ಎಂದು ಭಾವಿಸಿ ಯಾವ ಅಧಿಕಾರಕ್ಕಾಗಲೀ ಧರ್ಮಗ್ರಂಥಕ್ಕಾಗಲೀ ಲಕ್ಷ್ಯಮಾಡುವುದಿಲ್ಲ; ಕೆಲವೊಮ್ಮೆ ಹೆಸರಿಗೆ ಮಾತ್ರ ಧಾರ್ಮಿಕ ಅಥವಾ ಯಜ್ಞದ ವಿಧಿಗಳನ್ನು ಅನುಸರಿಸುತ್ತಾರೆ. ಅವರಿಗೆ ಯಾರ ಅಧಿಕಾರದಲ್ಲಿಯೂ ನಂಬಿಕೆ ಇಲ್ಲದಿರುವುದರಿಂದ ಬಹು ಉದ್ಧಟರಾಗಿರುತ್ತಾರೆ. ಒಂದಿಷ್ಟು ಹಣವನ್ನು, ಸುಳ್ಳು ಪ್ರತಿಷ್ಠೆಯನ್ನು, ಸಂಪಾದಿಸುವುದರಿಂದ ಆಗುವ ಭ್ರಾಂತಿಯೇ ಇದಕ್ಕೆ ಕಾರಣ. ಕೆಲವೊಮ್ಮೆ ಇಂತಹ ಅಸುರರು ಉಪದೇಶಕನ ಪಾತ್ರವನ್ನು ವಹಿಸುವರು. ಜನರನ್ನು ತಪ್ಪುದಾರಿಗೆ ಎಳೆಯುವರು ಮತ್ತು ಧಾರ್ಮಿಕ ಸುಧಾರಕರೆಂದು ಅಥವಾ ದೇವರ ಅವತಾರಗಳೆಂದು ಹೆಸರು ಪಡೆಯುವರು. ಇವರು ತೋರಿಕೆಯ ಯಜ್ಞಮಾಡುವರು ಅಥವಾ ದೇವತೆಗಳನ್ನು ಪೂಜಿಸುವರು ಅಥವಾ ತಮ್ಮದೇ ದೇವರನ್ನು ಸೃಷ್ಟಿಮಾಡುವರು. ಜನಸಾಮಾನ್ಯರು ಅವರೇ ದೇವರೆಂದು ಪ್ರಚಾರ ಮಾಡಿ ಅವರನ್ನು ಪೂಜಿಸುತ್ತಾರೆ. ಅವರು ಧಾರ್ಮಿಕ ತತ್ವಗಳಲ್ಲಿ ಅಥವಾ ಆಧ್ಯಾತ್ಮಿಕ ತತ್ವಗಳಲ್ಲಿ ಮುಂದುವರಿದಿದ್ದಾರೆ ಎಂದು ಮೂರ್ಖರು ಭಾವಿಸುತ್ತಾರೆ. ಇವರು ಸನ್ಯಾಸಿಗಳ ವೇಷಧರಿಸಿ ಆ ವೇಷದಲ್ಲಿ ಅಸಂಬದ್ಧವಾಗಿ ನಡೆದುಕೊಳ್ಳುತ್ತಾರೆ. ವಾಸ್ತವವಾಗಿ ಸನ್ಯಾಸಿಗಳು ಹಲವಾರು ಕಟ್ಟುಪಾಡುಗಳನ್ನು ಅನುಸರಿಸಬೇಕು. ಆದರೆ ಅಸುರರು ಇಂತಹ ಕಟ್ಟುಪಾಡುಗಳಿಗೆ ಲಕ್ಷ್ಯಮಾಡುವುದಿಲ್ಲ. ಮನುಷ್ಯನು ಯಾವ ದಾರಿಯನ್ನು ಮಾಡಿಕೊಂಡರೆ ಅದೇ ಅವನ ದಾರಿಯಾಗುತ್ತದೆ. ಮನುಷ್ಯನು ಅನುಸರಿಸಲೇಬೇಕಾದ ಪ್ರಮಾಣವಾದ ಮಾರ್ಗವಿಲ್ಲ ಎಂದು ಇವರು ಭಾವಿಸುತ್ತಾರೆ. **ಅವಿಧಿಪೂರ್ವಕಮ್** ಎಂದರೆ ನಿಯಮ ನಿಬಂಧನೆಗಳನ್ನು ಅಲಕ್ಷ್ಯ ಮಾಡುವುದು. ಇದನ್ನು ಇಲ್ಲಿ ವಿಶೇಷವಾಗಿ ಒತ್ತಿಹೇಳಿದೆ. ಇವೆಲ್ಲಕ್ಕೂ ಅಜ್ಞಾನ ಮತ್ತು ಮಾಯೆ ಕಾರಣ.

### ಶ್ಲೋಕ - 18

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯ ಸೂಯಕಾಃ ||೧೮||**

**ಅಹಂಕಾರಮ್**—ಅಹಂಕಾರವನ್ನು; **ಬಲಮ್**—ಬಲವನ್ನು; **ದರ್ಪಮ್**—ದರ್ಪವನ್ನು; **ಕಾಮಮ್**—ಕಾಮವನ್ನು; **ಕ್ರೋಧಮ್**—ಕೋಪವನ್ನು; **ಚ**—ಮತ್ತು; **ಸಂಶ್ರಿತಾಃ**—ಆಶ್ರಯಿಸಿ; **ಮಾಮ್**—ನನ್ನನ್ನು; **ಆತ್ಮ**—ತಮ್ಮ; **ಪರ**—ಮತ್ತು ಇತರರ; **ದೇಹೇಷು**—ದೇಹಗಳಲ್ಲಿರುವ; **ಪ್ರದ್ವಿಷನ್ತಃ**—ತೆಗಳುತ್ತಾರೆ; **ಅಭ್ಯಸೂಯಕಾಃ**—ಅಸೂಯಾಪರರಾದವರು.

### ಅನುವಾದ

**ಅಹಂಕಾರ, ಬಲ, ದರ್ಪ, ಕಾಮ ಮತ್ತು ಕ್ರೋಧಗಳಿಂದ ಅಸುರರು ದಿಗ್ಭ್ರಾಂತರಾಗುತ್ತಾರೆ; ಅವರ ದೇಹಗಳಲ್ಲಿ ಮತ್ತು ಇತರರ ದೇಹಗಳಲ್ಲಿ ಇರುವ ದೇವೋತ್ತಮ ಪರಮ ಪುರುಷನನ್ನು ದ್ವೇಷಿಸಿ ನಿಜವಾದ ಧರ್ಮವನ್ನು ಹಳಿದು ಮಾತನಾಡುತ್ತಾರೆ.**

### ಭಾವಾರ್ಥ

ಆಸುರೀ ಸ್ವಭಾವದ ಮನುಷ್ಯನು ಯಾವಾಗಲೂ ದೇವರ ಪರಮಾಧಿಕಾರದ ವಿರುದ್ಧವಾಗಿರುತ್ತಾನೆ. ಧರ್ಮಗ್ರಂಥಗಳನ್ನು ನಂಬಲು ಅವನು ಇಷ್ಟಪಡುವುದಿಲ್ಲ. ಧರ್ಮಗ್ರಂಥಗಳ ವಿಷಯದಲ್ಲಿ ಮತ್ತು ದೇವೋತ್ತಮ ಪರಮ ಪುರುಷನ ಇರುವಿಕೆಯ ವಿಷಯದಲ್ಲಿ ಅವನಿಗೆ ಅಸೂಯೆ. ಇದಕ್ಕೆ ಕಾರಣ ಅವನ ನಾಮಮಾತ್ರ ಪ್ರತಿಷ್ಠೆ ಮತ್ತು ಆಸ್ತಿ ಮತ್ತು ಬಲಗಳ ಗಳಿಕೆ. ಈ ಬಾಳು ಮುಂದಿನ ಬಾಳಿಗೆ ಸಿದ್ಧತೆ ಎಂದು ಅವನಿಗೆ ತಿಳಿಯದು. ಇದು ತಿಳಿಯದಿರುವುದರಿಂದ ಅವನು ತನ್ನ ವಿಷಯದಲ್ಲಿಯೂ ಇತರರ ವಿಷಯದಲ್ಲಿಯೂ ಅಸೂಯೆಪಡುತ್ತಾನೆ. ಇತರರ ದೇಹಗಳಿಗೂ ತನ್ನ ದೇಹಕ್ಕೂ ಹಿಂಸೆ ಮಾಡುತ್ತಾನೆ. ಅವನಿಗೆ ಜ್ಞಾನವಿಲ್ಲದಿರುವುದರಿಂದ ದೇವೋತ್ತಮ ಪುರುಷನ ಪರಮಾಧಿಕಾರಕ್ಕೆ ಲಕ್ಷ್ಯಮಾಡುವುದಿಲ್ಲ. ಧರ್ಮಗ್ರಂಥಗಳ ಮತ್ತು ದೇವೋತ್ತಮ ಪರಮ ಪುರುಷನ ವಿಷಯದಲ್ಲಿ ಅವನಿಗೆ ಅಸೂಯೆ. ಆದುದರಿಂದ ಅವನು ದೇವರ ಅಸ್ತಿತ್ವದ ವಿರುದ್ಧ ಹುಸಿವಾದಗಳನ್ನು ಮಾಡುತ್ತಾನೆ ಮತ್ತು ಧರ್ಮಗ್ರಂಥಗಳ ಅಧಿಕಾರವನ್ನು ನಿರಾಕರಿಸುತ್ತಾನೆ. ಪ್ರತಿಯೊಂದು ಕಾರ್ಯದಲ್ಲಿಯೂ ತಾನು ಸ್ವತಂತ್ರ ಮತ್ತು ಬಲಶಾಲಿ ಎಂದು ಭಾವಿಸುತ್ತಾನೆ. ಬಲ, ಅಧಿಕಾರ ಅಥವಾ ಶ್ರೀಮಂತಿಕೆಯಲ್ಲಿ ಯಾರೂ ತನ್ನ ಸಮಾನರಿಲ್ಲ. ಆದುದರಿಂದ ತಾನು ಏನನ್ನಾದರೂ ಮಾಡಬಹುದು, ಯಾರೂ ತನ್ನನ್ನು ತಡೆಯಲು ಸಾಧ್ಯವಿಲ್ಲ ಎಂದು ಭಾವಿಸುತ್ತಾನೆ. ತನ್ನ ಇಂದ್ರಿಯಕರ್ಮಗಳ ಪ್ರಗತಿಯನ್ನು ತಡೆಯಬಲ್ಲ ಶತ್ರುವು ಯಾರಾದರೂ ಇದ್ದರೆ ತನ್ನ ಶಕ್ತಿಯಿಂದಲೇ ಅವನನ್ನು ಕೊಚ್ಚಿಹಾಕಲು ಹಂಚಿಕೆಗಳನ್ನು ಹಾಕುತ್ತಾನೆ.

### ಶ್ಲೋಕ - 19

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ |**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ||೧೯||**

**ತಾನ್**—ಅವರನ್ನು; **ಅಹಮ್**—ನಾನು; **ದ್ವಿಷತಃ**—ಅಸೂಯಾಪರರಾದ; **ಕ್ರೂರಾನ್**—ದುಷ್ಟರಾದ; **ಸಂಸಾರೇಷು**—ಭೌತಿಕ ಅಸ್ತಿತ್ವದ ಸಾಗರದಲ್ಲಿ; **ನರ ಅಧಮಾನ್**—ನರಾಧಮರಾದ; **ಕ್ಷಿಪಾಮಿ**—ಹಾಕುತ್ತೇನೆ; **ಅಜಸ್ರಮ್**—ಎಂದೆಂದಿಗೂ; **ಅಶುಭಾನ್**—ಅಮಂಗಲಕರರಾದ; **ಆಸುರೀಷು**—ಆಸುರೀಯ; **ಏವ**—ಖಂಡಿತವಾಗಿಯೂ; **ಯೋನಿಷು**—ಗರ್ಭಗಳಲ್ಲಿ.

## ಅನುವಾದ

**ಅಸೂಯಾಪರರು, ಕ್ರೂರರು, ನರಾಧಮರು ಆದವರನ್ನು ನಾನು ನಿರಂತರವಾಗಿ ಐಹಿಕ ಅಸ್ತಿತ್ವದ ಸಾಗರಕ್ಕೆ ನೂಕುತ್ತೇನೆ. ಹಲವಾರು ಆಸುರೀ ಜೀವವರ್ಗಗಳಿಗೆ ತಳ್ಳುತ್ತೇನೆ.**

## ಭಾವಾರ್ಥ

ಒಂದು ನಿರ್ದಿಷ್ಟ ಆತ್ಮವನ್ನು ಒಂದು ನಿರ್ದಿಷ್ಟ ದೇಹದಲ್ಲಿ ಇಡುವುದು ಪರಮ ಸಂಕಲ್ಪದ ಪ್ರಶ್ನಾತೀತ ಹಕ್ಕು ಎಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಸೂಚಿಸಿದೆ. ಆಸುರೀ ಮನುಷ್ಯನು ಪ್ರಭುವಿನ ಪರಮಾಧಿಕಾರವನ್ನು ಒಪ್ಪಿಕೊಳ್ಳದೇ ಹೋಗಬಹುದು. ಅವನು ಮನಸೋ ಇಚ್ಛೆ ವರ್ತಿಸುತ್ತಾನೆಂಬುದು ನಿಜವಾದುದು. ಆದರೆ ಅವನ ಮುಂದಿನ ಜನ್ಮವು ಅವನನ್ನು ಅವಲಂಬಿಸಿಲ್ಲ; ದೇವೋತ್ತಮ ಪರಮ ಪುರುಷನ ತೀರ್ಮಾನವನ್ನು ಅವಲಂಬಿಸಿದೆ. ವ್ಯಕ್ತಿಗತ ಆತ್ಮವನ್ನು ಸಾವಿನನಂತರ ಒಬ್ಬ ತಾಯಿಯ ಗರ್ಭದಲ್ಲಿ ಇಡಲಾಗುತ್ತದೆ. ಅಲ್ಲಿ ಪರಮಶಕ್ತಿಯ ಮೇಲ್ವಿಚಾರಣೆಯಲ್ಲಿ ಅದಕ್ಕೆ ಒಂದು ನಿರ್ದಿಷ್ಟ ಬಗೆಯ ದೇಹವು ಲಭ್ಯವಾಗುತ್ತದೆ ಎಂದು ಶ್ರೀಮದ್ಭಾಗವತದ ಮೂರನೆಯ ಸ್ಕಂಧದಲ್ಲಿ ಹೇಳಿದೆ. ಆದುದರಿಂದಲೇ ನಾವು ಐಹಿಕ ಅಸ್ತಿತ್ವದಲ್ಲಿ ಪ್ರಾಣಿಗಳು, ಕೀಟಗಳು, ಮನುಷ್ಯರು ಮೊದಲಾದ ಅನೇಕ ಬಗೆಯ ಜೀವವರ್ಗಗಳನ್ನು ಕಾಣುತ್ತೇವೆ. ಎಲ್ಲವನ್ನೂ ಮೇಲಿನ ಸ್ಥಾನದ ಶಕ್ತಿಯು ವ್ಯವಸ್ಥೆ ಮಾಡುತ್ತದೆ. ಅವೆಲ್ಲ ಆಕಸ್ಮಿಕಗಳಲ್ಲ; ಆಸುರೀ ಪ್ರಕೃತಿಯವರನ್ನು ನಿರಂತರವಾಗಿ ರಾಕ್ಷಸರ ಗರ್ಭಗಳಲ್ಲಿ ಇಡಲಾಗುತ್ತದೆ. ಹೀಗೆ ಅವರು ನರಾಧಮರಾಗಿ ಅಸೂಯಾಪರರಾಗಿಯೇ ಉಳಿಯುತ್ತಾರೆ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಇಂತಹ ಆಸುರೀ ವರ್ಗದವರು ಯಾವಾಗಲೂ ಅತಿಕಾಮಿಗಳಾಗಿ ಯಾವಾಗಲೂ ಹಿಂಸಾಪರರು, ದ್ವೇಷ ಬರಿಸುವಂತಹವರು ಮತ್ತು ಕೊಳಕರು ಆಗಿರುತ್ತಾರೆ ಎಂದು ಪರಿಗಣಿಸಲಾಗಿದೆ. ಕಾಡಿನ ಹಲವು ಬಗೆಗಳ ಬೇಟೆಗಾರರನ್ನು ಆಸುರೀ ಜೀವವರ್ಗಕ್ಕೆ ಸೇರಿದವರೆಂದು ಪರಿಗಣಿಸಲಾಗುತ್ತದೆ.

## ಶ್ಲೋಕ - 20

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ |**
**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್ ||೨೦||**

**ಆಸುರೀಮ್**—ದೈತ್ಯ; **ಯೋನಿಮ್**—ಜೀವಜಾತಿಗಳನ್ನು; **ಆಪನ್ನಾಃ**—ಹೊಂದಿದ; **ಮೂಢಾಃ**—ಮೂಢರು; **ಜನ್ಮನಿ ಜನ್ಮನಿ**—ಜನ್ಮ ಜನ್ಮಾಂತರಗಳಲ್ಲಿ; **ಮಾಮ್**—ನನ್ನನ್ನು; **ಅಪ್ರಾಪ್ಯ**—ಪಡೆಯದೆ; **ಏವ**—ಖಂಡಿತವಾಗಿಯೂ; **ಕೌನ್ತೇಯ**—ಕುಂತೀಪುತ್ರನೇ; **ತತಃ**—ಅನಂತರ; **ಯಾನ್ತಿ**—ಹೋಗುತ್ತಾರೆ; **ಅಧಮಾಮ್**—ನಿಂದನೀಯವಾದ; **ಗತಿಮ್**—ಗತಿಗೆ.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ಆಸುರೀ ಜೀವ ವರ್ಗಗಳಲ್ಲಿ ಮತ್ತೆ ಮತ್ತೆ ಹುಟ್ಟುವ ಇಂತಹ ಜನರು ಎಂದೂ ನನ್ನ ಬಳಿಗೆ ಬರಲಾರರು. ಕ್ರಮೇಣ ಅವರು ಅಧಮ ಗತಿಗೆ ಇಳಿಯುತ್ತಾರೆ.**

## ಭಾವಾರ್ಥ

ಭಗವಂತನು ಸರ್ವದಯಾಪರ ಎಂದು ಗೊತ್ತಿದೆ. ಆದರೆ ಆಸುರೀ ಸ್ವಭಾವದವರಿಗೆ ದೇವರು ಎಂದೂ ದಯೆ ತೋರಿಸುವುದಿಲ್ಲ ಎಂಬುದನ್ನು ಇಲ್ಲಿ ಕಾಣುತ್ತೇವೆ. ಈ ಮಾತನ್ನು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಜನ್ಮ ಜನ್ಮಾಂತರಗಳಲ್ಲಿಯೂ ಅವರಂತಹ ಅಸುರರ ಗರ್ಭಗಳಲ್ಲಿಯೇ ಅವರನ್ನು ಇಡಲಾಗುವುದು. ಪರಮ ಪ್ರಭುವಿನ ಕರುಣೆಯನ್ನು ಪಡೆಯದೆ ಅವರು ಕೆಳಕೆಳಕ್ಕೆ ಹೋಗುವರು. ಕಡೆಗೆ ಬೆಕ್ಕುಗಳು, ನಾಯಿಗಳು ಮತ್ತು ಹಂದಿಗಳಂತಹ ದೇಹಗಳನ್ನು ಅವರು ಪಡೆಯುತ್ತಾರೆ. ಮುಂದಿನ ಜನ್ಮದಲ್ಲಿ ಯಾವ ಘಟ್ಟದಲ್ಲಿಯೂ ಇಂತಹ ಅಸುರರಿಗೆ ಭಗವಂತನ ದಯೆಯು ದೊರಕುವ ಸಾಧ್ಯತೆಯೇ ಇಲ್ಲ ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ವೇದಗಳಲ್ಲಿಯೂ ಇಂತಹ ಜನರು ನಾಯಿಗಳು, ಹಂದಿಗಳು, ಆಗುವ ದುರ್ಗತಿಗೆ ಬರುತ್ತಾರೆ ಎಂದು ಹೇಳಿದೆ. ದೇವರು ಇಂತಹ ಅಸುರರಿಗೆ ದಯೆತೋರದಿದ್ದರೆ, ಅವನನ್ನು ಸರ್ವದಯಾಪರ ಎಂದು ಪ್ರಸಾರಮಾಡಬಾರದು ಎಂದು ಈ ಸಂದರ್ಭದಲ್ಲಿ ವಾದಮಾಡಬಹುದು. ಈ ಪ್ರಶ್ನೆಗೆ ಉತ್ತರವಾಗಿ, ಪರಮ ಪ್ರಭುವು ಯಾರನ್ನೂ ದ್ವೇಷಿಸುವುದಿಲ್ಲ ಎನ್ನುವುದನ್ನು ವೇದಾಂತಸೂತ್ರದಲ್ಲಿ ಕಾಣುತ್ತೇವೆ. ಅಸುರರನ್ನು ಬದುಕಿನ ಅತ್ಯಂತ ಹೀನಸ್ಥಿತಿಯಲ್ಲಿ ಇಡುವುದು ಸಹ ಅವನ ದಯೆಯ ಒಂದು ಲಕ್ಷಣ. ಕೆಲವೊಮ್ಮೆ ಪರಮ ಪ್ರಭುವು ಅಸುರರನ್ನು ಕೊಲ್ಲುತ್ತಾನೆ; ಹೀಗೆ ಕೊಲ್ಲುವುದೂ ಅವರ ಒಳಿತಿಗೇ; ಏಕೆಂದರೆ ಪರಮ ಪ್ರಭುವು ಯಾರನ್ನು ಕೊಂದರೆ ಅವರಿಗೆ ಮುಕ್ತಿ ದೊರೆಯುತ್ತದೆ ಎಂದು ವೈದಿಕ ಸಾಹಿತ್ಯದಲ್ಲಿ ಕಾಣುತ್ತೇವೆ. ರಾವಣ, ಕಂಸ, ಹಿರಣ್ಯಕಶಿಪು ಮೊದಲಾದ ಅಸುರರನ್ನು ಕೊಲ್ಲುವುದಕ್ಕಾಗಿಯೇ ಭಗವಂತನು ವಿವಿಧ ಅವತಾರಗಳನ್ನು ತಾಳಿದ ಎಂದು ಇತಿಹಾಸದಲ್ಲಿ ನಿದರ್ಶನಗಳನ್ನು ಕಾಣುತ್ತೇವೆ. ಆದುದರಿಂದ ಭಗವಂತನಿಂದ ಹತರಾಗುವ ಅದೃಷ್ಟವಿರುವ ಅಸುರರಿಗೆ ಭಗವಂತನು ದಯೆಯನ್ನು ತೋರಿಸುತ್ತಾನೆ.

## ಶ್ಲೋಕ - 21

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥**

**ತ್ರಿವಿಧಮ್**—ಮೂರು ವಿಧದ; **ನರಕಸ್ಯ**—ನರಕದ; **ಇದಮ್**—ಇದು; **ದ್ವಾರಮ್**—ಬಾಗಿಲು; **ನಾಶನಮ್**—ನಾಶಕಾರಕವಾದ; **ಆತ್ಮನಃ**—ತನ್ನ; **ಕಾಮಃ**—ಕಾಮ; **ಕ್ರೋಧಃ**—ಕೋಪ; **ತಥಾ**—ಹಾಗೆಯೇ; **ಲೋಭಃ**—ಲೋಭವು; **ತಸ್ಮಾತ್**—ಆದ್ದರಿಂದ; **ಏತತ್**—ಈ; **ತ್ರಯಮ್**—ಮೂರನ್ನೂ; **ತ್ಯಜೇತ್**—ತ್ಯಜಿಸಬೇಕು.

## ಅನುವಾದ

**ನರಕಕ್ಕೆ ಮೂರು ದ್ವಾರಗಳಿವೆ — ಕಾಮ, ಕ್ರೋಧ ಮತ್ತು ಲೋಭ. ಪ್ರತಿಯೊಬ್ಬ ವಿವೇಕಿಯೂ**

**ಇವುಗಳನ್ನು ಬಿಡಬೇಕು. ಏಕೆಂದರೆ ಅವು ಆತ್ಮದ ಅವನತಿಗೆ ಕಾರಣವಾಗುತ್ತವೆ.**

## ಭಾವಾರ್ಥ

ಆಸುರೀ ಬದುಕಿನ ಪ್ರಾರಂಭವನ್ನು ಇಲ್ಲಿ ವರ್ಣಿಸಿದೆ. ಮನುಷ್ಯನು ತನ್ನ ಕಾಮದ ತೃಪ್ತಿಗಾಗಿ ಪ್ರಯತ್ನಿಸುತ್ತಾನೆ. ತೃಪ್ತಿ ದೊರೆಯದಿದ್ದಾಗ ಕ್ರೋಧ ಮತ್ತು ಲೋಭ ಹುಟ್ಟುತ್ತವೆ. ಆಸುರೀ ಜೀವವರ್ಗಕ್ಕೆ ಜಾರಿಹೋಗಲು ಇಷ್ಟವಿಲ್ಲದ ವಿವೇಚನಾವಂತನು, ಈ ಮೂರು ವೈರಿಗಳನ್ನು ಬಿಟ್ಟುಬಿಡಲು ಪ್ರಯತ್ನಿಸಬೇಕು. ಈ ಲೌಕಿಕ ತೊಡಕಿನಿಂದ ಬಿಡುಗಡೆಯು ಸಾಧ್ಯವೇ ಇಲ್ಲದಿರುವಷ್ಟು ಮಟ್ಟಿಗೆ ಇವು ಆತ್ಮವನ್ನು ಕೊಲ್ಲುತ್ತವೆ.

## ಶ್ಲೋಕ - 22

**ಏತೈರ್ವಿಮುಕ್ತಃ ಕೌನ್ತೇಯ ತಮೋದ್ವಾರೈಸ್ತ್ರಿಭಿರ್ನರಃ |**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ||೨೨||**

**ಏತೈಃ**—ಈ; **ವಿಮುಕ್ತಃ**—ಬಿಡುಗಡೆಗೊಂಡ; **ಕೌನ್ತೇಯ**—ಕುಂತಿಯ ಮಗನೇ; **ತಮಃ ದ್ವಾರೈಃ**—ಅಜ್ಞಾನದ ಬಾಗಿಲಿನಿಂದ; **ತ್ರಿಭಿಃ**—ಮೂರುವಿಧದ; **ನರಃ**—ಮನುಷ್ಯನು; **ಆಚರತಿ**—ಆಚರಿಸುತ್ತಾನೆ; **ಆತ್ಮನಃ**—ತನಗಾಗಿ; **ಶ್ರೇಯಃ**—ಶ್ರೇಯಸ್ಸನ್ನು; **ತತಃ**—ಅನಂತರ; **ಯಾತಿ**—ಹೋಗುತ್ತಾನೆ; **ಪರಾಮ್**—ಪರಮವಾದ; **ಗತಿಮ್**—ಗತಿಗೆ.

## ಅನುವಾದ

**ಕುಂತಿಯ ಮಗನಾದ ಅರ್ಜುನನೆ, ನರಕದ ಈ ದ್ವಾರಗಳಿಂದ ತಪ್ಪಿಸಿಕೊಂಡವನು ಆತ್ಮ ಸಾಕ್ಷಾತ್ಕಾರಕ್ಕೆ ನೆರವಾಗುವ ಕರ್ಮಗಳನ್ನು ಮಾಡುತ್ತಾನೆ. ಹೀಗೆ ಕ್ರಮೇಣ ಪರಮಗತಿಯನ್ನು ಹೊಂದುತ್ತಾನೆ.**

## ಭಾವಾರ್ಥ

ಮನುಷ್ಯ ಜೀವನದ ಮೂವರು ಶತ್ರುಗಳಾದ ಕಾಮ, ಕ್ರೋಧ ಮತ್ತು ಲೋಭಗಳ ವಿಷಯದಲ್ಲಿ ಮನುಷ್ಯನು ಬಹಳ ಎಚ್ಚರಿಕೆಯಿಂದಿರಬೇಕು. ಕಾಮ, ಕ್ರೋಧ, ಲೋಭಗಳಿಂದ ಮುಕ್ತನಾದಷ್ಟೂ ಅವನ ಬದುಕು ಶುದ್ಧವಾಗುತ್ತದೆ. ಅನಂತರ ಅವನು ವೇದಸಾಹಿತ್ಯದ ನಿಯಮ ನಿಬಂಧನೆಗಳನ್ನು ಅನುಸರಿಸಬಹುದು. ಬದುಕಿನ ನಿಯಂತ್ರಕ ಸೂತ್ರಗಳನ್ನು ಅನುಸರಿಸುವುದರಿಂದ ಮನುಷ್ಯನು ಕ್ರಮೇಣ ಆತ್ಮಸಾಕ್ಷಾತ್ಕಾರದ ನೆಲೆಗೆ ಏರುತ್ತಾನೆ. ಅವನು ಇಂತಹ ಅಭ್ಯಾಸದಿಂದ ಕೃಷ್ಣಪ್ರಜ್ಞೆಗೆ ಏರುವಷ್ಟು ಅದೃಷ್ಟಶಾಲಿಯಾದರೆ ಅವನಿಗೆ ಜಯವು ಖಂಡಿತ. ವೇದ ಸಾಹಿತ್ಯದಲ್ಲಿ ಮನುಷ್ಯನು ಶುದ್ಧೀಕರಣದ ಹಂತಕ್ಕೆ ಬರಲು ಸಾಧ್ಯವಾಗುವಂತೆ ಕ್ರಿಯೆ, ಪ್ರತಿಕ್ರಿಯೆಗಳ ರೀತಿಗಳನ್ನು ವಿಧಿಸಿದೆ. ಈ ಇಡೀ ವಿಧಾನಕ್ಕೆ ಕಾಮ, ಕ್ರೋಧ, ಮತ್ತು ಲೋಭಗಳನ್ನು ಬಿಟ್ಟುಬಿಡುವುದೇ ಆಧಾರ. ಈ ಪ್ರಕ್ರಿಯೆಯ ಅರಿವನ್ನು ಬೆಳೆಸಿಕೊಂಡು ಮನುಷ್ಯನು ಆತ್ಮಸಾಕ್ಷಾತ್ಕಾರದ ಅತ್ಯುನ್ನತ ಸ್ಥಾನಕ್ಕೆ ಏರಬಹುದು. ಭಕ್ತಿಸೇವೆಯಲ್ಲಿ ಈ ಆತ್ಮಸಾಕ್ಷಾತ್ಕಾರವು ಪರಿಪೂರ್ಣವಾಗುತ್ತದೆ. ಆ ಭಕ್ತಿಸೇವೆಯಲ್ಲಿ ಬದ್ಧ ಆತ್ಮದ ಮುಕ್ತಿಯು ಖಂಡಿತ. ಆದುದರಿಂದ ವೈದಿಕ ವ್ಯವಸ್ಥೆಯಲ್ಲಿ ನಾಲ್ಕು

ವರ್ಣಗಳನ್ನು ಮತ್ತು ನಾಲ್ಕು ಆಶ್ರಮಗಳನ್ನು ಸ್ಥಾಪಿಸಿದೆ. ಇದಕ್ಕೆ ಸಾಮಾಜಿಕ ವರ್ಗ ಮತ್ತು ಆಧ್ಯಾತ್ಮಿಕ ವಿಭಾಗಗಳ ಪದ್ಧತಿ ಎಂದು ಹೆಸರು. ವಿವಿಧ ಜಾತಿಗಳಿಗೆ ಅಥವಾ ಸಾಮಾಜಿಕ ವಿಭಾಗಗಳಿಗೆ ಬೇರೆ ಬೇರೆ ನಿಯಮ ನಿಬಂಧನೆಗಳಿವೆ. ಮನುಷ್ಯನಿಗೆ ಅವುಗಳನ್ನು ಅನುಸರಿಸಲು ಸಾಧ್ಯವಾದರೆ ಅವನು ತಂತಾನೇ ಆಧ್ಯಾತ್ಮಿಕ ಸಾಕ್ಷಾತ್ಕಾರದ ಅತ್ಯುನ್ನತ ನೆಲೆಗೆ ಏರುವನು. ಆಗ ಅವನಿಗೆ ನಿಸ್ಸಂದೇಹವಾಗಿಯೂ ಮುಕ್ತಿಯು ದೊರೆಯುವುದು.

## ಶ್ಲೋಕ - 23

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ||೨೩||**

**ಯಃ**—ಯಾರು; **ಶಾಸ್ತ್ರವಿಧಿಮ್**—ಧರ್ಮಗ್ರಂಥಗಳ ನಿಯಮಗಳನ್ನು; **ಉತ್ಸೃಜ್ಯ**—ತ್ಯಜಿಸಿ; **ವರ್ತತೇ**—ವರ್ತಿಸುತ್ತಾನೋ; **ಕಾಮಕಾರತಃ**—ಕಾಮದಲ್ಲಿ ಸ್ವೇಚ್ಛೆಯಾಗಿ ವರ್ತಿಸಿ; **ನ**—ಎಂದಿಗೂ ಇಲ್ಲ; **ಸಃ**—ಅವನು; **ಸಿದ್ಧಿಮ್**—ಪರಿಪೂರ್ಣತೆಯನ್ನು; **ಅವಾಪ್ನೋತಿ**—ಹೊಂದುತ್ತಾನೆ; **ನ**—ಎಂದಿಗೂ ಇಲ್ಲ; **ಸುಖಮ್**—ಸುಖವನ್ನು; **ನ**—ಎಂದಿಗೂ ಇಲ್ಲ; **ಪರಾಮ್**—ಪರಮವಾದ; **ಗತಿಮ್**—ಪರಿಪೂರ್ಣ ಹಂತವನ್ನು.

## ಅನುವಾದ

**ಯಾರು ಶಾಸ್ತ್ರವಿಧಿಗಳನ್ನು ತ್ಯಜಿಸಿ ತನ್ನ ಅನಿಸಿಕೆಗಳಂತೆ ಕರ್ಮ ಮಾಡುವನೋ ಅವನಿಗೆ ಪರಿಪೂರ್ಣತೆಯಾಗಲೀ, ಸುಖವಾಗಲೀ, ಪರಮಗತಿಯಾಗಲೀ ದೊರೆಯುವುದಿಲ್ಲ.**

## ಭಾವಾರ್ಥ

ಮೇಲೆ ವರ್ಣಿಸಿದಂತೆ, ಬೇರೆ ಬೇರೆ ಜಾತಿಗಳಿಗೆ ಮತ್ತು ಆಶ್ರಮಗಳವರಿಗೆ ಶಾಸ್ತ್ರವಿಧಿಗಳನ್ನು ಹೇಳಿದೆ. ಎಲ್ಲರೂ ಈ ನಿಯಮ ನಿಬಂಧನೆಗಳನ್ನು ಅನುಸರಿಸಬೇಕೆಂದು ನಿರೀಕ್ಷಿಸಿದೆ. ಅವನ್ನು ಅನುಸರಿಸದೆ ಮನುಷ್ಯನು ತನ್ನ ಕಾಮ, ಕ್ರೋಧ, ಲೋಭಗಳಿಗೆ ಅನುಗುಣವಾಗಿ ಮನಸೋ ಇಚ್ಛೆ ನಡೆದರೆ ಅವನು ಎಂದೂ ತನ್ನ ಜೀವನದಲ್ಲಿ ಪರಿಪೂರ್ಣನಾಗುವುದಿಲ್ಲ. ಎಂದರೆ ಮನುಷ್ಯನಿಗೆ ತಾತ್ವಿಕವಾಗಿ ಎಲ್ಲವೂ ತಿಳಿದಿರಬಹುದು. ಆದರೆ ಅವನು ಅವುಗಳನ್ನು ತನ್ನ ಬದುಕಿನಲ್ಲಿಯೇ ಅನುಸರಿಸದಿದ್ದರೆ ಅವನನ್ನು ನರಾಧಮನೆಂದು ಕರೆಯುತ್ತಾರೆ. ಮನುಷ್ಯರೂಪದಲ್ಲಿ ಜೀವಿಯು ವಿವೇಚನೆಯಿಂದ ಇರುತ್ತಾನೆ, ತನ್ನ ಬದುಕನ್ನು ಅತ್ಯುನ್ನತ ನೆಲೆಗೆ ಕೊಂಡೊಯ್ಯಲು ನೀಡಿರುವ ನಿಯಮಗಳನ್ನು ಅನುಸರಿಸುತ್ತಾನೆ ಎಂದು ನಿರೀಕ್ಷಿಸಲಾಗುವುದು. ಆದರೆ ಅವನು ಅವುಗಳನ್ನು ಅನುಸರಿಸದೆ ಹೋದರೆ ತನ್ನನ್ನು ತಾನೇ ಕೀಳುಮಾಡಿಕೊಳ್ಳುತ್ತಾನೆ. ಅವನು ನಿಯಮ ನಿಬಂಧನೆಗಳನ್ನು, ನೈತಿಕ ತತ್ವಗಳನ್ನು, ಅನುಸರಿಸಿಯೂ ಕಟ್ಟಕಡೆಗೆ ಪರಮ ಪ್ರಭುವನ್ನು ಅರಿಯುವ ಸ್ಥಿತಿಗೆ ಬರದಿದ್ದರೆ, ಅವನ ಜ್ಞಾನವೆಲ್ಲ ಹಾಳಾಗುತ್ತದೆ. ಅವನು ದೇವರ ಅಸ್ತಿತ್ವವನ್ನು ಒಪ್ಪಿಕೊಂಡರೂ ಭಗವಂತನ ಸೇವೆಯಲ್ಲಿ ನಿರತನಾಗದಿದ್ದರೆ ಅವನ ಪ್ರಯತ್ನಗಳು ಹಾಳಾಗುತ್ತವೆ. ಆದುದರಿಂದ ಮನುಷ್ಯನು ಕ್ರಮಕ್ರಮೇಣ

ಕೃಷ್ಣಪ್ರಜ್ಞೆಯ ಮತ್ತು ಭಕ್ತಿಸೇವೆಯ ನೆಲೆಗೆ ಏರಬೇಕು; ಆಗ ಅವನು ಅಲ್ಲಿಯೇ ಅತ್ಯುನ್ನತ ಪರಿಪೂರ್ಣತೆಯ ಹಂತವನ್ನು ಮುಟ್ಟಬಲ್ಲ. ಬೇರೆ ರೀತಿಯಲ್ಲಲ್ಲ.

**ಕಾಮ ಕಾರತಃ** ಎನ್ನುವ ಪದವು ಬಹಳ ಮುಖ್ಯವಾದದ್ದು. ನಿಯಮಗಳನ್ನು ಉಲ್ಲಂಘಿಸುವವನು ಕಾಮದಲ್ಲಿ ಕರ್ಮಮಾಡುತ್ತಾನೆ. ಅದನ್ನು ನಿಷೇಧಿಸಿದೆ ಎಂದು ತಿಳಿದಿದ್ದೂ ಮಾಡುತ್ತಾನೆ. ಇದಕ್ಕೆ ಹುಚ್ಚು ಅನಿಸಿಕೆ ಎಂದು ಹೆಸರು. ಇಂತಹದನ್ನು ಮಾಡಬೇಕು ಎಂದು ಅವನಿಗೆ ತಿಳಿದಿರುತ್ತದೆ; ಆದರೂ ಮಾಡುವುದಿಲ್ಲ. ಆದುದರಿಂದ ಅವನನ್ನು ವಿಚಿತ್ರ ಮನುಷ್ಯ ಎಂದು ಕರೆಯುತ್ತಾರೆ. ಇಂತಹ ಮನುಷ್ಯರಿಗೆ ಪರಮ ಪ್ರಭುವಿನಿಂದ ದೋಷಾರೋಪಣೆಗೆ ಒಳಗಾಗುವುದೇ ವಿಧಿ. ಮನುಷ್ಯ ಜೀವನಕ್ಕೆ ಉದ್ದೇಶಿಸಿರುವ ಪರಿಪೂರ್ಣತೆಯನ್ನು ಇಂತಹವರು ಪಡೆಯಲಾರರು. ಮನುಷ್ಯನ ಅಸ್ತಿತ್ವವನ್ನು ಪರಿಶುದ್ಧಗೊಳಿಸುವುದೇ ಮನುಷ್ಯ ಜನ್ಮದ ವಿಶೇಷ ಉದ್ದೇಶ; ನಿಯಮ ನಿಬಂಧನೆಗಳನ್ನು ಅನುಸರಿಸದೆ ಇರುವವನು ತನ್ನನ್ನು ಪರಿಶುದ್ಧಗೊಳಿಸಿಕೊಳ್ಳಲಾರ; ಅವನು ಸುಖದ ನಿಜವಾದ ಹಂತವನ್ನು ತಲಪಲಾರ.

## ಶ್ಲೋಕ - 24

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ |**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||೨೪||**

**ತಸ್ಮಾತ್**—ಆದ್ದರಿಂದ; **ಶಾಸ್ತ್ರಮ್**—ಧರ್ಮಗ್ರಂಥಗಳು; **ಪ್ರಮಾಣಮ್**—ಪ್ರಮಾಣ; **ತೇ**—ನಿನಗೆ; **ಕಾರ್ಯ**—ಕರ್ತವ್ಯ; **ಅಕಾರ್ಯ**—ನಿಷಿದ್ಧ ಕಾರ್ಯಗಳ; **ವ್ಯವಸ್ಥಿತೌ**—ನಿರ್ಧಾರದಲ್ಲಿ; **ಜ್ಞಾತ್ವಾ**—ತಿಳಿದು; **ಶಾಸ್ತ್ರ**—ಧರ್ಮಗ್ರಂಥದ; **ವಿಧಾನ**—ನಿಯಂತ್ರಣಗಳು; **ಉಕ್ತಮ್**—ಹೇಳಿರುವಂತೆ; **ಕರ್ಮ**—ಕೆಲಸವನ್ನು; **ಕರ್ತುಮ್**—ಮಾಡಲು; **ಇಹ**—ಜಗತ್ತಿನಲ್ಲಿ; **ಅರ್ಹಸಿ**—ಅರ್ಹನಾಗಿದ್ದೀಯೆ.

## ಅನುವಾದ

**ಆದುದರಿಂದ ಮನುಷ್ಯನು ಶಾಸ್ತ್ರಕ್ಕೆ ಅನುಗುಣವಾಗಿ ಯಾವುದು ಕರ್ತವ್ಯ, ಯಾವುದು ಕರ್ತವ್ಯವಲ್ಲ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಇಂತಹ ನಿಯಮ ನಿಬಂಧನೆಗಳನ್ನು ತಿಳಿದುಕೊಂಡು ಮನುಷ್ಯನು, ತಾನು ಕ್ರಮೇಣ ಮೇಲಕ್ಕೇರುವುದು ಸಾಧ್ಯವಾಗುವಂತೆ ಕರ್ಮಮಾಡಬೇಕು.**

## ಭಾವಾರ್ಥ

ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವಂತೆ, ವೇದಗಳ ಎಲ್ಲ ನಿಯಮ ನಿಬಂಧನೆಗಳ ಗುರಿ ಕೃಷ್ಣನನ್ನು ತಿಳಿದುಕೊಳ್ಳುವುದು. ಭಗವದ್ಗೀತೆಯಿಂದ ಕೃಷ್ಣನನ್ನು ಅರ್ಥಮಾಡಿಕೊಂಡು ಮನುಷ್ಯನು ಭಕ್ತಿಸೇವೆಯಲ್ಲಿ ನಿರತನಾಗಿ, ಕೃಷ್ಣಪ್ರಜ್ಞೆಯಲ್ಲಿ ನೆಲೆಯನ್ನು ಪಡೆಯಬೇಕು. ಆಗ ವೇದಸಾಹಿತ್ಯವು ನೀಡಬಲ್ಲ ಅತ್ಯುನ್ನತ ಪರಿಪೂರ್ಣತೆಯನ್ನು ಅವನು ಪಡೆಯಬಹುದು. ಚೈತನ್ಯ ಮಹಾಪ್ರಭುಗಳು ಈ ಪ್ರಕ್ರಿಯೆಯನ್ನು ಬಹಳ ಸುಲಭಗೊಳಿಸಿದರು. ಜನರಿಗೆ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಎನ್ನುವುದನ್ನು ಸಂಕೀರ್ತನೆ

ಮಾಡಿ ಭಕ್ತಿಸೇವೆಯಲ್ಲಿ ನಿರತರಾಗಿ ದೇವರ ಪ್ರಸಾದವನ್ನು ಸ್ವೀಕರಿಸಿದರೆ ಸಾಕು ಎಂದು ಹೇಳಿದರು. ಈ ಎಲ್ಲ ಭಕ್ತಿಪೂರ್ವಕ ಕರ್ಮಗಳಲ್ಲಿ ನೇರವಾಗಿ ತೊಡಗಿದವನು ಎಲ್ಲ ವೇದಸಾಹಿತ್ಯವನ್ನೂ ಅಧ್ಯಯನ ಮಾಡಿದ್ದಾನೆ ಎಂದೇ ಅರ್ಥ. ಈ ನಿರ್ಣಯಕ್ಕೆ ಅವನು ಪರಿಪೂರ್ಣರೀತಿಯಲ್ಲಿ ಬಂದಿದ್ದಾನೆ. ಕೃಷ್ಣಪ್ರಜ್ಞೆಯಲ್ಲಿ ಇರದ ಅಥವಾ ಭಕ್ತಿಸೇವೆಯಲ್ಲಿ ನಿರತರಾಗಿಲ್ಲದ ಸಾಮಾನ್ಯ ಮನುಷ್ಯರು ಏನು ಮಾಡಬೇಕು, ಏನು ಮಾಡಬಾರದು ಎನ್ನುವುದನ್ನು ವೇದಗಳ ಆದೇಶಗಳಿಗೆ ಅನುಗುಣವಾಗಿ ತೀರ್ಮಾನ ಮಾಡಬೇಕು. ವಾದ ಮಾಡದೆ ಹಾಗೆ ನಡೆದುಕೊಳ್ಳಬೇಕು. ಇದಕ್ಕೆ ಶಾಸ್ತ್ರಗಳ ತತ್ವಗಳ ಅನುಸರಣೆ ಎಂದು ಕರೆಯುತ್ತಾರೆ. ಬದ್ಧ ಆತ್ಮಗಳಲ್ಲಿ ಕಾಣುವ ನಾಲ್ಕು ಮುಖ್ಯದೋಷಗಳು ಶಾಸ್ತ್ರಗಳಲ್ಲಿ ಇರುವುದಿಲ್ಲ. ಅಪರಿಪೂರ್ಣ ಇಂದ್ರಿಯಗಳು, ಮೋಸಮಾಡುವ ಪ್ರವೃತ್ತಿ, ತಪ್ಪುಮಾಡಿಯೇ ಮಾಡುವುದು ಮತ್ತು ಖಂಡಿತವಾಗಿ ಮಾಯೆಯಿಂದ ಬದ್ಧರಾಗಿರುವುದು ಇವು ಈ ದೋಷಗಳು. ಬದ್ಧ ಜೀವನದಲ್ಲಿರುವ ಈ ನಾಲ್ಕು ಮುಖ್ಯದೋಷಗಳ ಕಾರಣದಿಂದ ಮನುಷ್ಯನಿಗೆ ನಿಯಮ ನಿಬಂಧನೆಗಳನ್ನು ರೂಪಿಸುವ ಅರ್ಹತೆಯಿರುವುದಿಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ನಿಯಮ ನಿಬಂಧನೆಗಳು ಮೇಲೆ ಹೇಳಿದ ದೋಷಗಳಿಗೆ ಅತೀತವಾಗಿರುತ್ತವೆ. ಆದುದರಿಂದ ಎಲ್ಲ ಹಿರಿಯ ಸಂತರೂ, ಆಚಾರ್ಯರೂ, ಮಹಾತ್ಮರೂ ಚಾಚೂ ತಪ್ಪದೆ ಇವನ್ನು ಒಪ್ಪಿಕೊಳ್ಳುತ್ತಾರೆ.

ಭಾರತದಲ್ಲಿ ಆಧ್ಯಾತ್ಮಿಕ ಅರಿವಿನ ಅನೇಕ ಪಂಥಗಳಿವೆ. ಇವನ್ನು ಸಾಮಾನ್ಯವಾಗಿ ನಿರಾಕಾರವಾದಿಗಳು ಮತ್ತು ಸಾಕಾರವಾದಿಗಳು ಎಂದು ಎರಡು ವರ್ಗಗಳಾಗಿ ವಿಂಗಡಿಸಲಾಗುತ್ತದೆ. ಇಬ್ಬರೂ ವೇದಗಳ ತತ್ವಗಳಿಗೆ ಅನುಗುಣವಾಗಿ ಬದುಕುತ್ತಾರೆ. ಧರ್ಮಶಾಸ್ತ್ರಗಳ ತತ್ವಗಳನ್ನು ಅನುಸರಿಸದೆ ಮನುಷ್ಯನು ಪರಿಪೂರ್ಣತೆಯ ನೆಲೆಗೆ ಏರಲಾರ. ಆದುದರಿಂದ ಶಾಸ್ತ್ರಗಳ ಭಾವಾರ್ಥವನ್ನು ಅರ್ಥಮಾಡಿಕೊಳ್ಳಬಲ್ಲವನನ್ನು ಅದೃಷ್ಟಶಾಲಿ ಎಂದು ಹೇಳುತ್ತಾರೆ.

ಮನುಷ್ಯ ಸಮಾಜದಲ್ಲಿ ದೇವೋತ್ತಮ ಪರಮ ಪುರುಷನ ಅರಿವಿನ ಸೂತ್ರಗಳ ದ್ವೇಷವೇ ಎಲ್ಲ ಪತನಗಳಿಗೆ ಕಾರಣ. ಮನುಷ್ಯನ ಜೀವನದಲ್ಲಿ ಅದೇ ಮಹಾಪರಾಧ. ಆದುದರಿಂದ ದೇವೋತ್ತಮ ಪರಮ ಪುರುಷನ ಐಹಿಕ ಶಕ್ತಿಯಾದ ಮಾಯೆಯು ಸದಾ ನಮಗೆ ತ್ರಿವಿಧ ಕ್ಲೇಶಗಳ ರೂಪದಲ್ಲಿ ತೊಂದರೆಯನ್ನು ಕೊಡುತ್ತಿರುತ್ತದೆ. ಈ ಐಹಿಕ ಶಕ್ತಿಯು ಐಹಿಕ ಪ್ರಕೃತಿಯ ತ್ರಿಗುಣಗಳಿಂದ ಆಗಿದೆ. ಮನುಷ್ಯನ ಮುಂದೆ ಪರಮ ಪ್ರಭುವಿನ ಅರಿವಿನ ಮಾರ್ಗವು ತೆರೆದುಕೊಳ್ಳುವ ಮುನ್ನ, ಅವನು ಕಡೆಯಪಕ್ಷ ಸತ್ವಗುಣಕ್ಕಾದರೂ ಏರಬೇಕು. ಸತ್ವಗುಣದ ಮಟ್ಟಕ್ಕಾದರೂ ಏರದಿದ್ದರೆ ಮನುಷ್ಯನು ತಮಸ್ಸು ಮತ್ತು ರಜಸ್ಸುಗಳಲ್ಲಿ ಉಳಿಯುತ್ತಾನೆ; ಅಸುರೀ ಜೀವನಕ್ಕೆ ಇದೇ ಕಾರಣ. ರಾಜಸ ಮತ್ತು ತಾಮಸ ಗುಣಗಳವರು ಧರ್ಮಶಾಸ್ತ್ರಗಳನ್ನು ಹಳಿಯುತ್ತಾರೆ; ಸಾಧುವನ್ನು ಹಳಿಯುತ್ತಾರೆ ಮತ್ತು ದೇವೋತ್ತಮ ಪರಮ ಪುರುಷನ ಯೋಗ್ಯವಾದ ಅರಿವನ್ನು ಹಳಿಯುತ್ತಾರೆ. ಅವರು ಗುರುವಿನ ಆದೇಶಗಳನ್ನು ಉಲ್ಲಂಘಿಸುತ್ತಾರೆ ಮತ್ತು ಧರ್ಮಗ್ರಂಥಗಳ ನಿಲುವುಗಳಿಗೆ ಲಕ್ಷ್ಯ ಮಾಡುವುದಿಲ್ಲ. ಭಕ್ತಿಸೇವೆಯ ಮಹಿಮೆಯನ್ನು ಕೇಳಿಯೂ ಅವರು ಆಕರ್ಷಿತರಾಗುವುದಿಲ್ಲ. ಹೀಗೆ ಅವರು ಮೇಲೇರಲು ತಮ್ಮದೇ ಮಾರ್ಗವನ್ನು

ಸೃಷ್ಟಿಸುತ್ತಾರೆ. ಬದುಕಿನ ಆಸುರೀ ಅಂತಸ್ತಿಗೆ ಕೊಂಡೊಯ್ಯುವ ಮನುಷ್ಯ ಸಮಾಜದ ಕೆಲವು ದೋಷಗಳು ಇವು. ಆದರೆ ಉನ್ನತಿಯ ಮಾರ್ಗಕ್ಕೆ ಮತ್ತು ಮೇಲಿನ ಹಂತಕ್ಕೆ ಕರೆದೊಯ್ಯಬಲ್ಲ ಯೋಗ್ಯನಾದ ಸದ್ಗುರುವಿನ ಮಾರ್ಗದರ್ಶನ ಪಡೆಯಲು ಸಾಧ್ಯವಾದರೆ ಮನುಷ್ಯನ ಬದುಕು ಯಶಸ್ವಿಯಾಗುತ್ತದೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ದೈವೀ ಹಾಗೂ ಆಸುರೀ ಸ್ವಭಾವಗಳು" ಎಂಬ ಹದಿನಾರನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಅಧ್ಯಾಯ - 17

# ಶ್ರದ್ಧೆಯ ಪ್ರಭೇಧಗಳು

## ಶ್ಲೋಕ - 1

**ಅರ್ಜುನ ಉವಾಚ**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ |**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ||೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಯೇ**—ಯಾರು; **ಶಾಸ್ತ್ರವಿಧಿಮ್**—ಶಾಸ್ತ್ರವಿಧಿಗಳನ್ನು; **ಉತ್ಸೃಜ್ಯ**—ತ್ಯಜಿಸಿ; **ಯಜನ್ತೇ**—ಪೂಜಿಸುತ್ತಾರೋ; **ಶ್ರದ್ಧಯಾ**—ಪೂರ್ಣ ಶ್ರದ್ಧೆಯಿಂದ; **ಅನ್ವಿತಾಃ**—ಕೂಡಿದವರಾಗಿ; **ತೇಷಾಮ್**—ಅವರ; **ನಿಷ್ಠಾ**—ಶ್ರದ್ಧೆಯು; **ತು**—ಆದರೆ; **ಕಾ**—ಏನು; **ಕೃಷ್ಣ**—ಕೃಷ್ಣನೇ; **ಸತ್ತ್ವಮ್**—ಸತ್ವಗುಣದ್ದೋ; **ಆಹೋ**—ಅಥವಾ; **ರಜಃ**—ರಜೋಗುಣದ್ದೋ; **ತಮಃ**—ತಮೋಗುಣದ್ದೋ.

### ಅನುವಾದ

**ಅರ್ಜುನನು ಪ್ರಶ್ನಿಸಿದನು — ಕೃಷ್ಣ, ಧರ್ಮಶಾಸ್ತ್ರಗಳ ತತ್ವಗಳನ್ನು ಅನುಸರಿಸದೆ ತಮ್ಮ ಕಲ್ಪನೆಗೆ ಅನುಗುಣವಾಗಿ ಪೂಜೆಮಾಡುವವರ ಸ್ಥಿತಿ ಏನು? ಅವರು ಸತ್ವಗುಣದವರೇ, ರಜೋಗುಣದವರೇ, ತಾಮಸಗುಣದವರೇ?**

### ಭಾವಾರ್ಥ

ನಾಲ್ಕನೆಯ ಅಧ್ಯಾಯದ ಮೂವತ್ತೊಂಬತ್ತನೆಯ ಶ್ಲೋಕದಲ್ಲಿ ಹೀಗೆ ಹೇಳಿದೆ — ಒಂದು ಪೂಜಾವಿಧಾನವನ್ನೇ ಶ್ರದ್ಧೆಯಿಂದ ಆಚರಿಸಿಕೊಂಡು ಬಂದವನು ಕ್ರಮೇಣ ಜ್ಞಾನದ ಹಂತಕ್ಕೆ ಏರುತ್ತಾನೆ ಮತ್ತು ಶಾಂತಿ, ಶ್ರೇಯಸ್ಸುಗಳ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುತ್ತಾನೆ. ಶಾಸ್ತ್ರದಲ್ಲಿ ವಿಧಿಸಿರುವ ತತ್ವಗಳನ್ನು ಪಾಲಿಸದಿರುವವನಿಗೆ ಅಸುರ ಎಂದು ಹೆಸರು; ಶಾಸ್ತ್ರವಿಧಿಗಳನ್ನು ನಿಷ್ಠೆಯಿಂದ ಪಾಲಿಸುವವನಿಗೆ ದೇವ ಎಂದು ಹೆಸರು ಎಂದು ಹದಿನಾರನೆಯ ಅಧ್ಯಾಯದಲ್ಲಿ ನಿರ್ಣಯಿಸಿದೆ. ಶಾಸ್ತ್ರದ ವಿಧಿಗಳಲ್ಲಿ ಹೇಳಿಲ್ಲದೆ ಇರುವ ಕೆಲವು ನಿಯಮಗಳನ್ನು ಮನುಷ್ಯನು ಶ್ರದ್ಧೆಯಿಂದ ಅನುಸರಿಸಿದರೆ ಅವನ ಸ್ಥಿತಿ ಏನು? ಅರ್ಜುನನ ಈ ಸಂಶಯವನ್ನು ಕೃಷ್ಣನು ಪರಿಹರಿಸಬೇಕು. ಮನುಷ್ಯನೊಬ್ಬನನ್ನು ಆರಿಸಿಕೊಂಡು, ಅವನನ್ನು ದೇವರನ್ನಾಗಿ ಮಾಡಿ, ಅವನಲ್ಲಿ ನಂಬಿಕೆ ಇಟ್ಟು, ಅವನನ್ನು ಪೂಜಿಸುತ್ತಿರುವವರು ಸತ್ವದಲ್ಲಿ ಪೂಜಿಸುವರೇ, ರಾಜಸದಲ್ಲಿಯೇ, ತಾಮಸದಲ್ಲಿಯೇ? ಇಂತಹವರು ಬದುಕಿನಲ್ಲಿ ಪರಿಪೂರ್ಣತೆಯನ್ನು ಪಡೆಯುವರೆ? ನಿಜವಾದ ಜ್ಞಾನದಲ್ಲಿ ನೆಲೆಗೊಂಡು ಅತ್ಯುನ್ನತ ಪರಿಪೂರ್ಣತೆಯ ಸ್ಥಿತಿಗೆ ಏರಲು

ಅವರಿಗೆ ಸಾಧ್ಯವೆ? ಶಾಸ್ತ್ರಗಳ ನಿಯಮ ನಿಬಂಧನೆಗಳನ್ನು ಅನುಸರಿಸದಿದ್ದರೂ ಯಾವುದೋ ಒಂದರಲ್ಲಿ ಭಕ್ತಿಯನ್ನಿಟ್ಟುಕೊಂಡು ದೇವರುಗಳನ್ನೂ, ದೇವತೆಗಳನ್ನೂ, ಮನುಷ್ಯರನ್ನೂ ಪೂಜಿಸುವವರಿಗೆ ಅವರ ಪ್ರಯತ್ನಗಳಲ್ಲಿ ಯಶಸ್ಸು ದೊರೆಯುವುದೆ? ಅರ್ಜುನನು ಕೃಷ್ಣನಿಗೆ ಈ ಪ್ರಶ್ನೆಗಳನ್ನು ಕೇಳುತ್ತಿದ್ದಾನೆ.

## ಶ್ಲೋಕ - 2

**ಶ್ರೀ ಭಗವಾನುವಾಚ**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ |**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ||೨||**

**ಶ್ರೀ ಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ತ್ರಿ ವಿಧಾ**—ಮೂರು ಬಗೆಗಳ; **ಭವತಿ**—ಆಗುತ್ತದೆ; **ಶ್ರದ್ಧಾ**—ಶ್ರದ್ಧೆಯು; **ದೇಹಿನಾಮ್**—ದೇಹಿಗಳ; **ಸಾ**—ಅದು; **ಸ್ವ ಭಾವಜಾ**—ಅವನ ಐಹಿಕ ತ್ರಿಗುಣಗಳಿಗೆ ಅನುಸಾರವಾಗಿ; **ಸಾತ್ತ್ವಿಕೀ**—ಸತ್ವಗುಣದ್ದು; **ರಾಜಸೀ**—ರಜೋಗುಣದ್ದು; **ಚ**—ಕೂಡ; **ಏವ**—ಖಂಡಿತವಾಗಿಯೂ; **ತಾಮಸೀ**—ತಮೋಗುಣದ್ದು; **ಚ**—ಮತ್ತು; **ಇತಿ**—ಹೀಗೆ; **ತಾಮ್**—ಅದನ್ನು; **ಶೃಣು**—ನನ್ನಿಂದ ಆಲಿಸು.

## ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ದೇಹಧಾರಿಯಾದ ಆತ್ಮನು ಪಡೆದ ಪ್ರಕೃತಿಗುಣಗಳಿಗೆ ಅನುಗುಣವಾಗಿ ಮನುಷ್ಯನ ಶ್ರದ್ಧೆಯು ಮೂರು ಬಗೆಗಳದ್ದು ಆಗಿರಬಹುದು — ಸಾತ್ವಿಕ, ರಾಜಸ, ತಾಮಸ. ಈಗ ಆ ಬಗ್ಗೆ ಕೇಳು.**

## ಭಾವಾರ್ಥ

ಶಾಸ್ತ್ರಗಳ ನಿಯಮ ನಿಬಂಧನೆಗಳನ್ನು ತಿಳಿದು, ಸೋಮಾರಿತನದಿಂದಲೋ, ಜಡತ್ವದಿಂದಲೋ, ಆ ನಿಯಮ ನಿಬಂಧನೆಗಳನ್ನು ಅನುಸರಿಸುವುದನ್ನು ಬಿಟ್ಟುಬಿಡುವವರು, ಐಹಿಕ ಪ್ರಕೃತಿಯ ಗುಣಗಳ ಅಧೀನರು. ಸತ್ವ, ರಾಜಸ, ತಾಮಸಗಳಲ್ಲಿ ಅವರ ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಅವರು ಒಂದು ವಿಶಿಷ್ಟಗುಣದ ಸ್ವಭಾವವನ್ನು ಪಡೆಯುತ್ತಾರೆ. ಪ್ರಕೃತಿಯ ಬೇರೆ ಬೇರೆ ಗುಣಗಳೊಡನೆ ಜೀವಿಯ ಸಹಯೋಗ ನಿರಂತರವಾಗಿ ನಡೆದುಕೊಂಡೇ ಬಂದಿದೆ; ಜೀವಿಯು ಐಹಿಕ ಪ್ರಕೃತಿಯ ಸಂಪರ್ಕವನ್ನು ಪಡೆದಿರುವುದರಿಂದ, ಐಹಿಕ ಗುಣಗಳೊಂದಿಗೆ ಅವನ ಸಹಯೋಗಕ್ಕೆ ಅನುಗುಣವಾಗಿ ಅವನು ಬೇರೆ ಬೇರೆ ರೀತಿಗಳ ಮನೋಧರ್ಮವನ್ನು ಪಡೆಯುತ್ತಾನೆ. ಆದರೆ ಸದ್ಗುರುವಿನ ಸಹವಾಸವನ್ನು ಪಡೆದು ಅವನ ನಿಯಮಗಳಿಗೆ, ಶಾಸ್ತ್ರಗ್ರಂಥಗಳಿಗೆ, ವಿಧೇಯನಾಗಿ ನಡೆದುಕೊಂಡರೆ ಈ ಸ್ವಭಾವವನ್ನು ಬದಲಾಯಿಸಬಹುದು. ಕ್ರಮೇಣ ಮನುಷ್ಯನು ತನ್ನ ಸ್ವಭಾವವನ್ನು ತಾಮಸದಿಂದ ಸಾತ್ವಿಕಕ್ಕೆ ಅಥವಾ ರಾಜಸದಿಂದ ಸಾತ್ವಿಕಕ್ಕೆ ಮಾರ್ಪಾಡು ಮಾಡಿಕೊಳ್ಳಬಹುದು. ಇದರ ನಿರ್ಣಯವೆಂದರೆ ನಿರ್ದಿಷ್ಟ ಪ್ರಕೃತಿ ಗುಣದಲ್ಲಿ ಕುರುಡು ಶ್ರದ್ಧೆಯು ಮನುಷ್ಯನಿಗೆ ಪರಿಪೂರ್ಣತೆಯ ಹಂತವನ್ನು

ತಲಪಲು ನೆರವಾಗಲಾರದು. ಮನುಷ್ಯನು ವಿಷಯಗಳನ್ನು ವಿವೇಚನೆಯಿಂದ, ಸದ್ಗುರುವಿನ ಜೊತೆಗೆ ಪರಿಶೀಲಿಸಬೇಕು. ಆಗ ಅವನು ತನ್ನ ಸ್ಥಿತಿಯನ್ನು ಇನ್ನೂ ಉತ್ತಮ ಗುಣಕ್ಕೆ ಏರಿಸಿಕೊಳ್ಳಬಹುದು.

## ಶ್ಲೋಕ - 3

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ |**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ||೩||**

**ಸತ್ತ್ವ ಅನುರೂಪಾ**—ಅಸ್ತಿತ್ವಕ್ಕೆ ಅನುಸಾರವಾಗಿ; **ಸರ್ವಸ್ಯ**—ಪ್ರತಿಯೊಬ್ಬನ; **ಶ್ರದ್ಧಾ**—ಶ್ರದ್ಧೆಯು; **ಭವತಿ**—ಉಂಟಾಗುತ್ತದೆ; **ಭಾರತ**—ಭರತ ಪುತ್ರನೇ; **ಶ್ರದ್ಧಾ**—ಶ್ರದ್ಧಾ; **ಮಯಃ**—ಪೂರ್ಣನಾದ; **ಅಯಮ್**—ಈ; **ಪುರುಷಃ**—ಜೀವಿಯು; **ಯಃ**—ಯಾರು; **ಯತ್**—ಯಾವ; **ಶ್ರದ್ಧಃ**—ಶ್ರದ್ಧೆಯುಳ್ಳವನೋ; **ಸಃ**—ಅದೇ; **ಏವ**—ಖಂಡಿತವಾಗಿಯೂ; **ಸಃ**—ಅವನು.

## ಅನುವಾದ

**ಭರತವಂಶಜನಾದ ಅರ್ಜುನನೆ, ವಿವಿಧ ಪ್ರಕೃತಿ ಗುಣಗಳಲ್ಲಿ ಮನುಷ್ಯನು ಬದುಕಿದ ರೀತಿಗನುಗುಣವಾಗಿ ಅವನು ನಿರ್ದಿಷ್ಟ ಶ್ರದ್ಧೆಯನ್ನು ಬೆಳೆಸಿಕೊಳ್ಳುತ್ತಾನೆ. ಜೀವಿಯು ಗಳಿಸಿಕೊಂಡ ಗುಣಗಳಿಗೆ ಅನುಗುಣವಾಗಿ ಅವನು ಒಂದು ನಿರ್ದಿಷ್ಟ ಶ್ರದ್ಧೆಯವನು ಎಂದು ಹೇಳುತ್ತಾರೆ.**

## ಭಾವಾರ್ಥ

ಮನುಷ್ಯನು ಏನೇ ಆಗಿರಲಿ ಅವನಿಗೊಂದು ನಿರ್ದಿಷ್ಟ ರೀತಿಯ ಶ್ರದ್ಧೆಯಿರುತ್ತದೆ. ಅವನು ಪಡೆದುಕೊಂಡ ಸ್ವಭಾವಕ್ಕನುಗುಣವಾಗಿ ಅವನ ಶ್ರದ್ಧೆಯು ಸಾತ್ವಿಕ, ರಾಜಸ ಅಥವಾ ತಾಮಸ ಎಂದು ಪರಿಗಣಿಸುತ್ತಾರೆ. ತನ್ನ ವಿಶಿಷ್ಟ ರೀತಿಯ ಶ್ರದ್ಧೆಗನುಗುಣವಾಗಿ ಮನುಷ್ಯನು ನಿರ್ದಿಷ್ಟ ವ್ಯಕ್ತಿಗಳೊಡನೆ ಬೆರೆಯುತ್ತಾನೆ. ವಾಸ್ತವಾಂಶವೆಂದರೆ ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವಂತೆ, ಪ್ರತಿಯೊಬ್ಬ ಜೀವಿಯೂ ಮೂಲತಃ ಪರಮ ಪ್ರಭುವಿನ ವಿಭಿನ್ನಾಂಶ. ಆದುದರಿಂದ ಮೂಲತಃ ಮನುಷ್ಯನು ಐಹಿಕ ಪ್ರಕೃತಿಯ ಎಲ್ಲ ಗುಣಗಳಿಗೆ ಅತೀತನು. ಆದರೆ ಮನುಷ್ಯನು ದೇವೋತ್ತಮ ಪರಮ ಪುರುಷನೊಡನೆ ತನ್ನ ಸಂಬಂಧವನ್ನು ಮರೆತು, ಬದ್ಧಜೀವನದಲ್ಲಿ ಐಹಿಕ ಪ್ರಕೃತಿಯೊಡನೆ ಸಂಪರ್ಕ ಬೆಳೆಸಿದಾಗ, ಆತನು ಐಹಿಕ ಪ್ರಕೃತಿಯ ವೈವಿಧ್ಯಗಳೊಡನೆ ಸಹಯೋಗದಿಂದ ತನ್ನ ಸ್ಥಾನವನ್ನು ರೂಪಿಸುತ್ತಾನೆ. ಇದರ ಪರಿಣಾಮವಾದ ಕೃತಕ ಶ್ರದ್ಧೆ ಮತ್ತು ಅಸ್ತಿತ್ವಗಳೂ ಐಹಿಕ, ಅಷ್ಟೇ. ಮನುಷ್ಯನನ್ನು ಯಾವುದೋ ಒಂದು ಭಾವನೆ ಅಥವಾ ಬದುಕಿನ ಗ್ರಹಿಕೆ ಮುನ್ನಡೆಸಬಹುದು. ಆದರೆ ಮೂಲತಃ ಅವನು ನಿರ್ಗುಣ ಅಥವಾ ಗುಣಗಳಿಗೆ ಅತೀತನು. ಆದುದರಿಂದ ಪರಮ ಪ್ರಭುವಿನೊಡನೆ ತನ್ನ ಸಂಬಂಧವನ್ನು ಮರಳಿ ಪಡೆಯಲು, ಮನುಷ್ಯನು ತಾನು ಪಡೆದುಕೊಂಡ ಐಹಿಕ ಕಲ್ಮಷವನ್ನು ತೊಡೆದುಕೊಳ್ಳಬೇಕು. ಭಯವಿಲ್ಲದೆ ಮರಳಿ ಹೋಗಬಹುದಾದ ಮಾರ್ಗವು ಇದೊಂದೇ — ಕೃಷ್ಣಪ್ರಜ್ಞೆ. ಕೃಷ್ಣಪ್ರಜ್ಞೆಯಲ್ಲಿ ನೆಲೆಸಿದ್ದರೆ ಅವನು ಆ ಮಾರ್ಗದ ಮೂಲಕ ಪರಿಪೂರ್ಣತೆಯ ಹಂತಕ್ಕೆ ನಿಶ್ಚಯವಾಗಿಯೂ ಏರುತ್ತಾನೆ.

ಅವನು ಆತ್ಮಸಾಕ್ಷಾತ್ಕಾರಕ್ಕೆ ಈ ಮಾರ್ಗವನ್ನು ಅನುಸರಿಸದಿದ್ದರೆ ನಿಶ್ಚಯವಾಗಿಯೂ ಪ್ರಕೃತಿಗುಣಗಳ ಪ್ರಭಾವವೇ ಅವನನ್ನು ನಡೆಸುವುದು.

ಈ ಶ್ಲೋಕದಲ್ಲಿ ಶ್ರದ್ಧಾ ಎನ್ನುವ ಮಾತು ಬಹು ಮುಖ್ಯವಾದದ್ದು. ಶ್ರದ್ಧೆಯು ಮೂಲತಃ ಸಾತ್ವಿಕಗುಣದಿಂದ ಬರುತ್ತದೆ. ಒಬ್ಬ ದೇವತೆಯಲ್ಲಿ ಅಥವಾ ತಾನೇ ಸೃಷ್ಟಿಸಿದ ದೇವರಲ್ಲಿ ಅಥವಾ ಮನಸ್ಸಿನ ಒಂದು ಸೃಷ್ಟನೆಯಲ್ಲಿ ಮನುಷ್ಯ ಶ್ರದ್ಧೆಯನ್ನಿಟ್ಟಿರಬಹುದು. ಮನುಷ್ಯನ ಬಲವಾದ ಶ್ರದ್ಧೆಯು ಐಹಿಕ ಒಳಿತಿನ ಕಾರ್ಯಗಳನ್ನು ಸೃಷ್ಟಿಸುತ್ತದೆ ಎಂದು ನಂಬಿಕೆ. ಆದರೆ ಐಹಿಕ ಬದ್ಧಜೀವನದಲ್ಲಿ ಯಾವ ಕ್ರಿಯೆಗಳೂ ಸಂಪೂರ್ಣವಾಗಿ ಪರಿಶುದ್ಧವಲ್ಲ. ಅವುಗಳಲ್ಲಿ ಬೆರಕೆಯಿರುತ್ತದೆ. ಅವು ಪರಿಶುದ್ಧವಾಗಿ ಸಾತ್ವಿಕವಾಗಿರುವುದಿಲ್ಲ. ಪರಿಶುದ್ಧ ಸಾತ್ವಿಕತೆಯು ದಿವ್ಯವಾದದ್ದು. ಪರಿಶುದ್ಧ ಸಾತ್ವಿಕತೆಯಲ್ಲಿ ಮನುಷ್ಯನು ದೇವೋತ್ತಮ ಪರಮ ಪುರುಷನ ನಿಜವಾದ ಸ್ವಭಾವವನ್ನು ಅರ್ಥಮಾಡಿಕೊಳ್ಳಬಹುದು. ಮನುಷ್ಯನ ಶ್ರದ್ಧೆಯು ಸಂಪೂರ್ಣವಾಗಿ ಪರಿಶುದ್ಧವಾದ ಸಾತ್ವಿಕತೆ ಆಗುವವರೆಗೆ, ಆ ಶ್ರದ್ಧೆಯು ಐಹಿಕ ಪ್ರಕೃತಿಯ ಯಾವುದೇ ಗುಣದಿಂದ ಮಲಿನಹೊಂದಬಹುದು. ಕಲ್ಮಷಗೊಂಡ ಐಹಿಕ ಪ್ರಕೃತಿಯ ಗುಣಗಳು ಹೃದಯದವರೆಗೆ ಹರಡಿಕೊಂಡಿರುತ್ತವೆ. ಆದುದರಿಂದ ಐಹಿಕ ಪ್ರಕೃತಿಯ ಒಂದು ನಿರ್ದಿಷ್ಟಗುಣದ ಸಂಪರ್ಕ ಹೊಂದಿರುವ ಹೃದಯದ ಸ್ಥಾನಕ್ಕನುಗುಣವಾಗಿ, ಮನುಷ್ಯನ ಶ್ರದ್ಧೆಯ ಸ್ಥಾಪನೆಯಾಗುತ್ತದೆ. ಇದನ್ನು ಅರ್ಥಮಾಡಿಕೊಳ್ಳಬೇಕು — ಮನುಷ್ಯನ ಹೃದಯವು ಸಾತ್ವಿಕವಾಗಿದ್ದರೆ ಅವನ ಶ್ರದ್ಧೆಯೂ ಸಾತ್ವಿಕವಾಗಿರುತ್ತದೆ. ಅವನ ಹೃದಯವು ರಾಜಸವಾಗಿದ್ದರೆ ಅವನ ಶ್ರದ್ಧೆಯೂ ರಾಜಸವಾಗಿರುತ್ತದೆ. ಅವನ ಹೃದಯವು ತಾಮಸದ ಅಥವಾ ಮಾಯೆಯ ಗುಣವನ್ನು ಹೊಂದಿದ್ದರೆ ಅವನ ಶ್ರದ್ಧೆಯೂ ಹಾಗೆಯೇ ಮಲಿನವಾಗಿರುತ್ತದೆ. ಹೀಗೆ ಜಗತ್ತಿನಲ್ಲಿ ಬೇರೆ ಬೇರೆ ರೀತಿಗಳ ಧರ್ಮಗಳಿವೆ. ಪರಿಶುದ್ಧ ಸಾತ್ವಿಕತೆಯು ಧಾರ್ಮಿಕ ಶ್ರದ್ಧೆಯ ನಿಜವಾದ ತತ್ವದ ನೆಲೆ. ಆದರೆ ಹೃದಯವು ಕಲ್ಮಷವಾಗಿರುವುದರಿಂದ ವಿವಿಧ ಬಗೆಗಳ ಧಾರ್ಮಿಕ ತತ್ವಗಳನ್ನು ಕಾಣುತ್ತೇವೆ. ಹೀಗೆ ಶ್ರದ್ಧೆಯ ಬೇರೆ ಬೇರೆ ವಿಧಗಳಿಗನುಗುಣವಾಗಿ ಪೂಜೆಯ ಬೇರೆ ಬೇರೆ ವಿಧಗಳಿವೆ.

## ಶ್ಲೋಕ - 4

**ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ |**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ||೪||**

**ಯಜನ್ತೇ**—ಆರಾಧಿಸುತ್ತಾರೆ; **ಸಾತ್ತ್ವಿಕಾಃ**—ಸತ್ವಗುಣದಲ್ಲಿರುವವರು; **ದೇವಾನ್**—ದೇವತೆಗಳನ್ನು; **ಯಕ್ಷ ರಕ್ಷಾಂಸಿ**—ದೈತ್ಯರನ್ನು; **ರಾಜಸಾಃ**—ರಜೋಗುಣದಲ್ಲಿರುವವರು; **ಪ್ರೇತಾನ್**—ಪ್ರೇತಗಳಾದ; **ಭೂತ ಗಣಾನ್**—ಭೂತಗಳನ್ನು; **ಚ**—ಮತ್ತು; **ಅನ್ಯೇ**—ಇತರ; **ಯಜನ್ತೇ**—ಪೂಜಿಸುತ್ತಾರೆ; **ತಾಮಸಾಃ**—ತಮೋಗುಣದಲ್ಲಿರುವ; **ಜನಾಃ**—ಜನರು.

## ಅನುವಾದ

**ಸಾತ್ವಿಕ ಸ್ವಭಾವದ ಮನುಷ್ಯರು ದೇವತೆಗಳನ್ನು ಪೂಜಿಸುತ್ತಾರೆ; ರಾಜಸ ಸ್ವಭಾವದವರು ರಾಕ್ಷಸರನ್ನು ಪೂಜಿಸುತ್ತಾರೆ; ತಾಮಸಗುಣದವರು ಭೂತ ಪ್ರೇತಗಳನ್ನು ಪೂಜಿಸುತ್ತಾರೆ.**

## ಭಾವಾರ್ಥ

ಇಲ್ಲಿ ದೇವೋತ್ತಮ ಪರಮ ಪುರುಷನು ಅವರವರ ಬಹಿರಂಗ ಕರ್ಮಗಳಿಗೆ ಅನುಗುಣವಾಗಿ ಪೂಜಿಸುವವರಲ್ಲಿ ವಿವಿಧ ಬಗೆಗಳನ್ನು ವರ್ಣಿಸುತ್ತಾನೆ. ಧರ್ಮಗ್ರಂಥಗಳ ಆದೇಶದ ಪ್ರಕಾರ ದೇವೋತ್ತಮ ಪರಮ ಪುರುಷನು ಮಾತ್ರ ಪೂಜಾರ್ಹನು; ಆದರೆ ಧರ್ಮಗ್ರಂಥಗಳ ಆದೇಶಗಳನ್ನು ಚೆನ್ನಾಗಿ ತಿಳಿಯದವರು ಅಥವಾ ಅದರಲ್ಲಿ ಹೆಚ್ಚು ಶ್ರದ್ಧೆಯಿಲ್ಲದವರು ಐಹಿಕ ಪ್ರಕೃತಿಯ ಗುಣಗಳಲ್ಲಿ ತಮ್ಮ ತಮ್ಮ ವಿಶಿಷ್ಟ ನೆಲೆಗಳಿಗನುಗುಣವಾಗಿ ಬೇರೆ ಬೇರೆ ವಸ್ತುಗಳನ್ನು ಪೂಜೆಮಾಡುತ್ತಾರೆ. ಸಾತ್ವಿಕ ಸ್ವಭಾವದಲ್ಲಿ ನೆಲೆಗೊಂಡವರು ಸಾಮಾನ್ಯವಾಗಿ ದೇವತೆಗಳನ್ನು ಪೂಜಿಸುತ್ತಾರೆ. ಬ್ರಹ್ಮ, ಶಿವ ಮತ್ತು ಇಂದ್ರ, ಚಂದ್ರ ಮತ್ತು ಸೂರ್ಯ ಇವರೆಲ್ಲ ದೇವತಾಗಣದಲ್ಲಿ ಸೇರಿದ್ದಾರೆ. ಅನೇಕ ಮಂದಿ ದೇವತೆಗಳಿದ್ದಾರೆ. ಸಾತ್ವಿಕ ಸ್ವಭಾವದವರು ಒಂದು ನಿರ್ದಿಷ್ಟವಾದ ಉದ್ದೇಶಕ್ಕಾಗಿ ಒಬ್ಬ ನಿರ್ದಿಷ್ಟ ದೇವತೆಯನ್ನು ಪೂಜಿಸುತ್ತಾರೆ. ಹಾಗೆಯೇ ರಾಜಸಗುಣದವರು ರಾಕ್ಷಸರನ್ನು ಪೂಜಿಸುತ್ತಾರೆ. ನಮಗೆ ನೆನಪಿರುವಂತೆ ಎರಡನೆಯ ಮಹಾಯುದ್ಧದ ಕಾಲದಲ್ಲಿ ಕಲ್ಕತ್ತೆಯಲ್ಲಿ ಒಬ್ಬ ಮನುಷ್ಯನು ಹಿಟ್ಲರನನ್ನು ಪೂಜಿಸಿದ. ಏಕೆಂದರೆ ಯುದ್ಧವಾದದ್ದರಿಂದ ಆ ಮನುಷ್ಯನು ಕಾಳಸಂತೆಯಲ್ಲಿ ವ್ಯವಹಾರಮಾಡಿ ತುಂಬ ಐಶ್ವರ್ಯವನ್ನು ಪಡೆದ. ಹೀಗೆ ರಾಜಸ ಮತ್ತು ತಾಮಸಗುಣಗಳವರು ಸಾಮಾನ್ಯವಾಗಿ ಒಬ್ಬ ಬಲಶಾಲಿ ಮನುಷ್ಯನನ್ನು ದೇವರನ್ನಾಗಿ ಆರಿಸಿಕೊಳ್ಳುತ್ತಾರೆ. ಯಾರನ್ನು ಬೇಕಾದರೂ ದೇವರೆಂದು ಪೂಜಿಸಬಹುದು, ಫಲ ಒಂದೇ ಎಂದು ಅವರು ಭಾವಿಸುತ್ತಾರೆ.

ರಾಜಸಗುಣದವರು ಇಂತಹ ದೇವತೆಗಳನ್ನು ಪೂಜಿಸಿ ಸೃಷ್ಟಿಸುತ್ತಾರೆ; ತಾಮಸಗುಣದವರು ಭೂತಪ್ರೇತಗಳನ್ನು ಪೂಜಿಸುತ್ತಾರೆ; ಇದನ್ನು ಇಲ್ಲಿ ಸ್ಪಷ್ಟವಾಗಿ ವರ್ಣಿಸಿದೆ. ಹಲವೊಮ್ಮೆ ಜನರು ಸತ್ತು ಹೋಗಿರುವ ಒಬ್ಬ ಮನುಷ್ಯನ ಸಮಾಧಿಯ ಬಳಿ ಪೂಜೆ ಸಲ್ಲಿಸುತ್ತಾರೆ. ಲೈಂಗಿಕ ಸೇವೆಯು ಸಹ ತಾಮಸಗುಣದಲ್ಲಿದೆ ಎಂದು ಭಾವಿಸಲಾಗಿದೆ. ಹಾಗೆಯೇ ಭಾರತದ ಮೂಲೆಗಳ ಹಳ್ಳಿಗಳಲ್ಲಿ ಭೂತ ಪ್ರೇತಗಳನ್ನು ಪೂಜಿಸುವವರಿದ್ದಾರೆ. ಭಾರತದಲ್ಲಿ ಒಮ್ಮೊಮ್ಮೆ ಕೆಳವರ್ಗದವರು ಕಾಡಿಗೆ ಹೋಗುತ್ತಾರೆ ಮತ್ತು ಯಾವುದಾದರೂ ಮರದಲ್ಲಿ ಒಂದು ಪ್ರೇತವು ವಾಸಿಸುತ್ತದೆ ಎಂದು ತಿಳಿದಿದ್ದರೆ, ಆ ಮರವನ್ನು ಪೂಜಿಸಿ ಬಲಿಗಳನ್ನು ಕೊಡುತ್ತಾರೆ ಎಂದು ನಾವು ನೋಡಿದ್ದೇವೆ. ಈ ವಿಧವಾದ ಪೂಜೆಗಳು ನಿಜವಾಗಿ ದೇವರ ಪೂಜೆಯಲ್ಲ. ದೇವರ ಪೂಜೆ ಇರುವುದು ಪರಿಶುದ್ಧ ಸತ್ವಗುಣದಲ್ಲಿ ಆಧ್ಯಾತ್ಮಿಕವಾಗಿ ನೆಲೆಗೊಂಡವರಿಗೆ. ಶ್ರೀಮದ್ಭಾಗವತದಲ್ಲಿ (4.3.23) ಹೀಗೆ ಹೇಳಿದೆ — **ಸತ್ತ್ವಂ ವಿಶುದ್ಧಂ ವಸುದೇವ ಶಬ್ದಿತಮ್** — 'ಮನುಷ್ಯನು ಸಂಪೂರ್ಣವಾಗಿ ಶುದ್ಧಸತ್ವದಲ್ಲಿ ನೆಲೆಗೊಂಡಾಗ ಅವನು ವಾಸುದೇವನನ್ನು ಪೂಜಿಸುತ್ತಾನೆ.' ಇದರ ಭಾವಾರ್ಥ ಹೀಗೆ — ಐಹಿಕ ಪ್ರಕೃತಿಯ ಗುಣಗಳನ್ನು ಸಂಪೂರ್ಣವಾಗಿ ಕಳೆದುಕೊಂಡು ಪರಿಶುದ್ಧರಾದವರು ಮತ್ತು ಆಧ್ಯಾತ್ಮಿಕ ನೆಲೆಯಲ್ಲಿರುವವರು ದೇವೋತ್ತಮ ಪರಮ ಪುರುಷನನ್ನು ಪೂಜಿಸಬಲ್ಲರು.

ನಿರಾಕಾರವಾದಿಗಳು ಸಾತ್ವಿಕ ಗುಣದಲ್ಲಿ ನೆಲೆಗೊಂಡವರು ಎಂದು ನಂಬಿಕೆ. ಅವರು ಐದು ಬಗೆಯ ದೇವತೆಗಳನ್ನು ಪೂಜಿಸುತ್ತಾರೆ. ಐಹಿಕ ಜಗತ್ತಿನಲ್ಲಿ ಅವರು ನಿರಾಕಾರ ವಿಷ್ಣುವನ್ನು ಪೂಜಿಸುತ್ತಾರೆ. ಈ ರೂಪಕ್ಕೆ ದಾರ್ಶನಿಕ ವಿಷ್ಣು ಎಂದು ಹೆಸರು. ವಿಷ್ಣುವು ದೇವೋತ್ತಮ ಪರಮ ಪುರುಷನ ವಿಸ್ತರಣೆ. ಆದರೆ ನಿರಾಕಾರವಾದಿಗಳಿಗೆ ಕಟ್ಟಕಡೆಗೆ ದೇವೋತ್ತಮ ಪರಮ ಪುರುಷನಲ್ಲಿ ನಂಬಿಕೆಯಿಲ್ಲ. ಆದುದರಿಂದ ಅವರು ವಿಷ್ಣುರೂಪವು ನಿರಾಕಾರ ಬ್ರಹ್ಮನ ಮತ್ತೊಂದು ಅಂಶ ಎಂದಷ್ಟೇ ಭಾವಿಸುತ್ತಾರೆ. ಹಾಗೆಯೇ ಬ್ರಹ್ಮನು ರಾಜಸಗುಣದ ನಿರಾಕಾರ ರೂಪ ಎಂದು ಭಾವಿಸುತ್ತಾರೆ. ಹೀಗೆ ಅವರು ಕೆಲವೊಮ್ಮೆ ಪೂಜಾರ್ಹರಾದ ಐದು ಬಗೆಯ ದೇವತೆಗಳನ್ನು ವರ್ಣಿಸುತ್ತಾರೆ. ಆದರೆ ಅವರು ನಿರಾಕಾರ ಬ್ರಹ್ಮನೇ ವಾಸ್ತವ ಸತ್ಯ ಎಂದು ಭಾವಿಸುವುದರಿಂದ ಕಟ್ಟಕಡೆಯದಾಗಿ ಎಲ್ಲ ಪೂಜಾರ್ಹ ವಸ್ತುಗಳನ್ನು ಬಿಟ್ಟುಬಿಡುತ್ತಾರೆ. ಕಡೆಯದಾಗಿ, ಐಹಿಕ ಪ್ರಕೃತಿಯ ಬೇರೆ ಬೇರೆ ಗುಣಗಳನ್ನು ಆಧ್ಯಾತ್ಮಿಕ ಸ್ವಭಾವದ ಜನರ ಸಹವಾಸದಿಂದ ಪರಿಶುದ್ಧಗೊಳಿಸಬಹುದು.

## ಶ್ಲೋಕ 5-6

**ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ |**
**ದಮ್ಭಾಹಙ್ಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ||೫||**

**ಕರ್ಷಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ |**
**ಮಾಂ ಚೈವಾನ್ತಃ ಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ||೬||**

**ಅಶಾಸ್ತ್ರ**—ಶಾಸ್ತ್ರದಲ್ಲಿಲ್ಲದ; **ವಿಹಿತಮ್**—ನಿರ್ದೇಶಿತವಾದ; **ಘೋರಮ್**—ಹಾನಿಕರವಾದ; **ತಪ್ಯನ್ತೇ**—ಆಚರಿಸುತ್ತಾರೆ; **ಯೇ**—ಯಾವ; **ತಪಃ**—ತಪಸ್ಸುಗಳನ್ನು; **ಜನಾಃ**—ಜನರು; **ದಮ್ಭ**—ಜಂಭ; **ಅಹಙ್ಕಾರ**—ಮತ್ತು ಅಹಂಕಾರಗಳಿಂದ; **ಸಂಯುಕ್ತಾಃ**—ಕೂಡಿದ; **ಕಾಮ**—ಕಾಮದ; **ರಾಗ**—ಆಸಕ್ತಿಯ; **ಬಲ**—ಬಲದಿಂದ; **ಅನ್ವಿತಾಃ**—ಒತ್ತಾಯಿಸಲ್ಪಟ್ಟ; **ಕರ್ಷಯನ್ತಃ**—ತೊಂದರೆ ಪಡಿಸುತ್ತಿರುವ; **ಶರೀರಸ್ಥಮ್**—ಶರೀರದಲ್ಲಿರುವ; **ಭೂತಗ್ರಾಮಮ್**—ಭೌತಿಕಾಂಶಗಳ ಸಂಯೋಜನೆಯನ್ನು; **ಅಚೇತಸಃ**—ದಾರಿ ತಪ್ಪಿದ ಮನೋಭಾವದಿಂದ ಕೂಡಿದ; **ಮಾಮ್**—ನನ್ನನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಅನ್ತಃ**—ಒಳಗೆ; **ಶರೀರಸ್ಥಮ್**—ದೇಹದಲ್ಲಿರುವ; **ತಾನ್** —ಅವುಗಳನ್ನು; **ವಿದ್ಧಿ**—ತಿಳಿದುಕೊ; **ಆಸುರ ನಿಶ್ಚಯಾನ್**—ದೈತ್ಯರೆಂದು.

## ಅನುವಾದ

**ಅವರು ಶಾಸ್ತ್ರದಲ್ಲಿ ವಿಧಿಸದಿರುವ ಘೋರತಪಸ್ಸುಗಳನ್ನು ಆಚರಿಸುತ್ತಾರೆ. ಇವನ್ನು ಅವರು ಜಂಬ ಮತ್ತು ಅಹಂಕಾರಗಳಿಂದ ಮಾಡುತ್ತಾರೆ. ಕಾಮ ಮತ್ತು ಮೋಹಗಳೇ ಅವರಿಗೆ ಪ್ರೇರಣೆ. ಅವರು ಮೂರ್ಖರು ಮತ್ತು ದೇಹದ ಭೌತಿಕಾಂಶಗಳನ್ನೂ, ಒಳಗೆ ವಾಸಿಸುವ ಪರಮಾತ್ಮನನ್ನೂ ಹಿಂಸಿಸುತ್ತಾರೆ. ಇಂತಹವರು ನಿಶ್ಚಯವಾಗಿಯೂ ಅಸುರರು.**

## ಭಾವಾರ್ಥ

ಧರ್ಮಗ್ರಂಥಗಳ ಆದೇಶಗಳಲ್ಲಿ ಹೇಳದಿರುವ ತಪಸ್ಸುಗಳನ್ನು ಸೃಷ್ಟಿಮಾಡುವವರು ಇದ್ದಾರೆ. ಉದಾಹರಣೆಗೆ ಸಂಪೂರ್ಣವಾಗಿ ರಾಜಕೀಯವಾದ ಗುರಿಯನ್ನು ಸಾಧಿಸಲು ಉಪವಾಸ ಮಾಡುವುದು. ಇದನ್ನು ಧರ್ಮಗ್ರಂಥಗಳ ಆದೇಶಗಳಲ್ಲಿ ಹೇಳಿಲ್ಲ. ಆಧ್ಯಾತ್ಮಿಕ ಮುನ್ನಡೆಗಾಗಿ ಉಪವಾಸಮಾಡಬೇಕೆಂದು ಧರ್ಮಗ್ರಂಥಗಳು ಹೇಳಿವೆ. ಯಾವುದೋ ರಾಜಕೀಯ ಗುರಿ ಅಥವಾ ಸಾಮಾಜಿಕ ಉದ್ದೇಶಕ್ಕಾಗಿ ಅಲ್ಲ. ಭಗವದ್ಗೀತೆಯ ಪ್ರಕಾರ ಇಂತಹ ತಪಸ್ಸುಗಳನ್ನು ಮಾಡುವವರು ನಿಶ್ಚಯವಾಗಿಯೂ ಅಸುರರು. ಅವರ ಕೆಲಸಗಳು ಧರ್ಮಗ್ರಂಥಗಳ ಆದೇಶಗಳಿಗೆ ವಿರುದ್ಧವಾದವು; ಅವು ಜನಸಾಮಾನ್ಯರಿಗೆ ಒಳ್ಳೆಯದನ್ನು ಮಾಡುವುದಿಲ್ಲ. ವಾಸ್ತವವಾಗಿ ಅವರು ಜಂಬ, ಮಿಥ್ಯ ಅಹಂಭಾವ, ಕಾಮ ಮತ್ತು ಐಹಿಕ ಭೋಗದಲ್ಲಿ ಆಸಕ್ತಿ — ಇದರಿಂದ ಕೆಲಸಮಾಡುತ್ತಾರೆ. ಇಂತಹ ಚಟುವಟಿಕೆಗಳಿಂದ ದೇಹದ ರಚನೆಯಲ್ಲಿರುವ ಐಹಿಕ ಘಟಕಾಂಶಗಳು ಕ್ಷೋಭೆಗೊಳ್ಳುತ್ತವೆ; ಅಷ್ಟೇ ಅಲ್ಲ, ದೇಹದಲ್ಲಿ ವಾಸಿಸುವ ದೇವೋತ್ತಮ ಪರಮ ಪುರುಷನಿಗೂ ಕ್ಷೋಭೆಯಾಗುತ್ತದೆ. ಹೀಗೆ ಯಾವುದೋ ರಾಜಕೀಯ ಉದ್ದೇಶಕ್ಕಾಗಿ ಮಾಡುವ ಉಪವಾಸ ಅಥವಾ ತಪಸ್ಸು ನಿಶ್ಚಯವಾಗಿಯೂ ಇತರರನ್ನು ತುಂಬ ಕಲಕುತ್ತದೆ. ಇವನ್ನು ವೈದಿಕ ಸಾಹಿತ್ಯದಲ್ಲಿ ಹೇಳಿಲ್ಲ. ಆಸುರೀ ಸ್ವಭಾವದವನು ಈ ರೀತಿಯಲ್ಲಿ ತನ್ನ ಅಪೇಕ್ಷೆಯನ್ನು ನಡೆಸಿಕೊಡುವಂತೆ ತನ್ನ ಶತ್ರುವನ್ನು ಅಥವಾ ಇತರ ಪಕ್ಷಗಳನ್ನು ಬಲಾತ್ಕಾರ ಮಾಡಬಹುದು ಎಂದು ಯೋಚಿಸಬಹುದು. ಆದರೆ ಕೆಲವೊಮ್ಮೆ ಇಂತಹ ಉಪವಾಸದಿಂದ ಮನುಷ್ಯನು ಸಾಯುತ್ತಾನೆ. ದೇವೋತ್ತಮ ಪರಮ ಪುರುಷನು ಇಂತಹ ಕಾರ್ಯಗಳಿಗೆ ಸಮ್ಮತಿಸುವುದಿಲ್ಲ; ಇವುಗಳಲ್ಲಿ ತೊಡಗುವವರು ಅಸುರರು ಎಂದು ಹೇಳುತ್ತಾನೆ. ಇಂತಹ ಪ್ರದರ್ಶನಗಳಿಂದ ದೇವೋತ್ತಮ ಪರಮ ಪುರುಷನಿಗೆ ಅವಮಾನವಾಗುತ್ತದೆ. ಏಕೆಂದರೆ ವೈದಿಕ ಧಾರ್ಮಿಕ ಗ್ರಂಥಗಳ ಆದೇಶಗಳನ್ನು ಉಲ್ಲಂಘಿಸಿ ಮಾಡುವ ಕೆಲಸಗಳು ಅವು. ಈ ಸಂದರ್ಭದಲ್ಲಿ **ಅಚೇತಸಃ** ಎನ್ನುವ ಪದವು ಅರ್ಥವತ್ತಾದದ್ದು. ಸಾಮಾನ್ಯ ಮನಸ್ಥಿತಿಯಲ್ಲಿರುವ ಜನರು ಧರ್ಮಗ್ರಂಥಗಳ ಆದೇಶವನ್ನು ಪಾಲಿಸಬೇಕು. ಈ ಸ್ಥಿತಿಯಲ್ಲಿಲ್ಲದವರು ಧರ್ಮಗ್ರಂಥಗಳನ್ನು ಅಸಡ್ಡೆಮಾಡಿ ಉಲ್ಲಂಘಿಸುತ್ತಾರೆ. ತಮ್ಮದೇ ಆದ ರೀತಿಗಳಲ್ಲಿ ತಪಸ್ಸುಗಳನ್ನು ಸೃಷ್ಟಿಮಾಡುತ್ತಾರೆ. ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ಆಸುರೀ ಸ್ವಭಾವದವರಿಗೆ ಕಡೆಯಲ್ಲಿ ಆಗುವ ಗತಿಯನ್ನು ಸದಾ ನೆನಪಿಡಬೇಕು. ಅವರು ಆಸುರೀ ಸ್ವಭಾವದವರ ಗರ್ಭಗಳಲ್ಲಿ ಜನ್ಮತಾಳುವಂತೆ ಪ್ರಭುವು ಅವರಿಗೆ ಬಲಾತ್ಕಾರ ಮಾಡುತ್ತಾನೆ; ಆದುದರಿಂದ ಅವರು ಜನ್ಮ ಜನ್ಮಾಂತರಗಳಲ್ಲಿ ದೇವೋತ್ತಮ ಪರಮ ಪುರುಷನೊಡನೆ ತಮ್ಮ ಸಂಬಂಧವನ್ನು ತಿಳಿಯದೆ, ಆಸುರೀ ತತ್ವಗಳಿಗೆ ಅನುಗುಣವಾಗಿ ಬದುಕುತ್ತಾರೆ. ಆದರೆ ವೇದಜ್ಞಾನದ ಮಾರ್ಗಕ್ಕೆ ಅವರನ್ನು ತಿರುಗಿಸಬಲ್ಲ ಗುರುವಿನ ಮಾರ್ಗದರ್ಶನವು ಸುಯೋಗದಿಂದ ಅವರಿಗೆ ದೊರೆತರೆ, ಅವರು ಈ ಬಂಧನದಿಂದ ಬಿಡಿಸಿಕೊಳ್ಳಬಹುದು ಮತ್ತು ಕಡೆಗೆ ಪರಮ ಗುರಿಯನ್ನು ಸೇರಬಹುದು.

## ಶ್ಲೋಕ - 7

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥೭॥**

**ಆಹಾರಃ**—ಆಹಾರವು; **ತು**—ಖಂಡಿತವಾಗಿಯೂ; **ಅಪಿ**—ಕೂಡ; **ಸರ್ವಸ್ಯ**—ಪ್ರತಿಯೊಬ್ಬರ; **ತ್ರಿವಿಧಃ**—ಮೂರು ವಿಧವಾದುದು; **ಭವತಿ**—ಆಗುತ್ತದೆ; **ಪ್ರಿಯಃ**—ಪ್ರಿಯವಾದ; **ಯಜ್ಞಃ**—ಯಜ್ಞವು; **ತಪಃ**—ತಪಸ್ಸು; **ತಥಾ**—ಕೂಡ; **ದಾನಮ್**—ದಾನವು; **ತೇಷಾಮ್**—ಅವುಗಳ; **ಭೇದಮ್**—ವ್ಯತ್ಯಾಸಗಳನ್ನು; **ಇಮಮ್**—ಈ; **ಶೃಣು**—ಕೇಳು.

## ಅನುವಾದ

**ಪ್ರತಿ ಮನುಷ್ಯನೂ ಇಷ್ಟಪಡುವ ಆಹಾರದಲ್ಲಿ ಕೂಡ ಐಹಿಕ ಪ್ರಕೃತಿಯ ಗುಣತ್ರಯಗಳಿಗೆ ಅನುಗುಣವಾಗಿ ಮೂರು ರೀತಿಗಳು. ಯಜ್ಞಗಳು, ತಪಸ್ಸು ಮತ್ತು ದಾನಗಳ ವಿಷಯದಲ್ಲಿ ಸಹ ಇದು ನಿಜ. ಅವುಗಳ ಭೇದವನ್ನು ಕೇಳು.**

## ಭಾವಾರ್ಥ

ಐಹಿಕ ಪ್ರಕೃತಿಯ ಗುಣಗಳಲ್ಲಿನ ಬೇರೆ ಬೇರೆ ನೆಲೆಗಳಿಗೆ ಅನುಗುಣವಾಗಿ ಆಹಾರ ಸ್ವೀಕಾರ, ಯಜ್ಞಗಳ ಮತ್ತು ತಪಸ್ಸಿನ ಆಚರಣೆ ಮತ್ತು ದಾನಗಳು ಇವುಗಳಲ್ಲಿಯೂ ವ್ಯತ್ಯಾಸವಿದೆ. ಅವೆಲ್ಲವನ್ನೂ ಒಂದೇ ಮಟ್ಟದಲ್ಲಿ ಆಚರಿಸುವುದಿಲ್ಲ. ಯಾವ ಆಚರಣೆಗಳೂ ಐಹಿಕ ಪ್ರಕೃತಿಯ ಯಾವ ಗುಣಗಳಲ್ಲಿವೆ ಎಂದು ವಿಶ್ಲೇಷಣೆ ಮಾಡಿ ತಿಳಿದುಕೊಳ್ಳಬಲ್ಲವರು ವಿವೇಕಶಾಲಿಗಳು; ಎಲ್ಲ ಬಗೆಯ ಯಜ್ಞ, ಆಹಾರ ಅಥವಾ ದಾನ ಒಂದೇ ಎಂದು ಭಾವಿಸುವವರಿಗೆ ತಾರತಮ್ಯ ಜ್ಞಾನವಿಲ್ಲ ಮತ್ತು ಅವರು ಮೂರ್ಖರು. ಮನುಷ್ಯನು ತನಗೆ ಬೇಕಾದಂತೆ ನಡೆಯಬಹುದು, ಹಾಗೆ ನಡೆದರೂ ಪರಿಪೂರ್ಣತೆಯನ್ನು ಪಡೆಯಬಹುದು ಎಂದು ಕೆಲವರು ಧರ್ಮಪ್ರಚಾರಕರು ವಾದಿಸುತ್ತಾರೆ. ಆದರೆ ಈ ಮೂರ್ಖಮಾರ್ಗದರ್ಶಕರು ಧರ್ಮಗ್ರಂಥದ ನಿರ್ದೇಶನಕ್ಕೆ ಅನುಗುಣವಾಗಿ ನಡೆಯುತ್ತಿಲ್ಲ. ಅವರು ಮಾರ್ಗಗಳನ್ನು ಸೃಷ್ಟಿಮಾಡಿ ಜನಸಾಮಾನ್ಯರನ್ನು ತಪ್ಪು ದಾರಿಗೆ ಎಳೆಯುತ್ತಿದ್ದಾರೆ.

## ಶ್ಲೋಕ - 8

**ಆಯುಃ ಸತ್ತ್ವ ಬಲಾರೋಗ್ಯಸುಖಪ್ರೀತಿವಿವರ್ಧನಾಃ |**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ||೮||**

**ಆಯುಃ**—ಆಯುರ್ದಾಯ; **ಸತ್ತ್ವ**—ಅಸ್ತಿತ್ವ; **ಬಲ**—ಬಲ; **ಆರೋಗ್ಯ**—ಆರೋಗ್ಯ; **ಸುಖ**—ಸುಖ; **ಪ್ರೀತಿ**—ಮತ್ತು ತೃಪ್ತಿಗಳನ್ನು; **ವಿವರ್ಧನಾಃ**—ಹೆಚ್ಚಿಸುವ; **ರಸ್ಯಾಃ**—ರಸರೂಪಿಯಾದ; **ಸ್ನಿಗ್ಧಾಃ**—ಸ್ನಿಗ್ಧವಾದ; **ಸ್ಥಿರಾಃ**—ಬಹುಕಾಲ ಇರುವ; **ಹೃದ್ಯಾಃ**—ಹೃದಯಕ್ಕೆ ಮುದ ನೀಡುವ; **ಆಹಾರಾಃ**—ಆಹಾರವು; **ಸಾತ್ತ್ವಿಕ**—ಸತ್ವಗುಣಯುಕ್ತನಿಗೆ; **ಪ್ರಿಯಾಃ**—ರುಚಿಕರವು.

## ಅನುವಾದ

**ಸಾತ್ವಿಕಗುಣದವರಿಗೆ ಪ್ರಿಯವಾದ ಆಹಾರಗಳು ಆಯುಸ್ಸನ್ನು ಹೆಚ್ಚಿಸುತ್ತವೆ; ಮನುಷ್ಯನ ಬದುಕನ್ನು ಪರಿಶುದ್ಧಗೊಳಿಸುತ್ತವೆ; ಬಲ, ಆರೋಗ್ಯ, ಸುಖ ಮತ್ತು ತೃಪ್ತಿಗಳನ್ನು ಹೆಚ್ಚಿಸುತ್ತವೆ. ಅಂತಹ**

**ಆಹಾರಗಳು ರಸಯುಕ್ತವಾಗಿರುತ್ತವೆ, ಜಿಡ್ಡಿನಿಂದ ಕೂಡಿರುತ್ತವೆ, ಆರೋಗ್ಯಕರವಾಗಿರುತ್ತವೆ ಮತ್ತು ಹೃದಯಕ್ಕೆ ಪ್ರಿಯವಾಗಿರುತ್ತವೆ.**

## ಶ್ಲೋಕ - 9

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ |**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ||೯||**

**ಕಟು**—ಕಹಿ; **ಆಮ್ಲ**—ಹುಳಿ; **ಲವಣ**—ಉಪ್ಪು; **ಅತಿ ಉಷ್ಣ**—ಹೆಚ್ಚು ಬಿಸಿ; **ತೀಕ್ಷ್ಣ**—ಖಾರ; **ರೂಕ್ಷ**—ಒಣಗಿದ; **ವಿದಾಹಿನಃ**—ಮತ್ತು ಸುಡುತ್ತಿರುವ; **ಆಹಾರಾಃ**—ಆಹಾರಗಳು; **ರಾಜಸಸ್ಯ**—ರಾಜಸ ಗುಣ ಉಳ್ಳವನಿಗೆ; **ಇಷ್ಟಾಃ**—ರುಚಿಕರವು; **ದುಃಖ**—ದುಃಖ; **ಶೋಕ**—ಕ್ಲೇಶ; **ಆಮಯ**—ರೋಗಗಳನ್ನು; **ಪ್ರದಾಃ**—ಉಂಟು ಮಾಡುವ.

## ಅನುವಾದ

**ಬಹು ಕಹಿಯಾದ, ಹುಳಿಯಾದ, ಉಪ್ಪಾದ, ಉಷ್ಣವಾದ, ತೀಕ್ಷ್ಣವಾದ, ಒಣಕಲಾದ ಮತ್ತು ಸುಡುತ್ತಿರುವ ಆಹಾರಗಳು ರಾಜಸ ಸ್ವಭಾವದವರಿಗೆ ಪ್ರಿಯವಾದವು. ಇಂತಹ ಆಹಾರಗಳು ದುಃಖವನ್ನು, ಶೋಕವನ್ನು, ರೋಗವನ್ನು ಉಂಟುಮಾಡುವವು.**

## ಶ್ಲೋಕ - 10

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ |**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ||೧೦||**

**ಯಾತಯಾಮಮ್**—ತಿನ್ನುವುದಕ್ಕೆ ಮೂರು ಘಂಟೆ ಮೊದಲು ಮಾಡಿದ; **ಗತರಸಮ್**—ರುಚಿಕಳೆದುಕೊಂಡ; **ಪೂತಿ**—ದುರ್ವಾಸನೆಯುಳ್ಳ; **ಪರ್ಯುಷಿತಮ್**—ಹಳಸಿದ; **ಚ**—ಕೂಡ; **ಯತ್**—ಯಾವುದು; **ಉಚ್ಛಿಷ್ಟಮ್**—ಬೇರೆಯವರು ತಿಂದು ಉಳಿದ; **ಅಪಿ**—ಕೂಡ; **ಚ**—ಮತ್ತು; **ಅಮೇಧ್ಯಮ್**—ಸ್ಪರ್ಶಯೋಗ್ಯವಲ್ಲದ; **ಭೋಜನಮ್**—ಭೋಜನವು; **ತಾಮಸ**—ತಾಮಸಗುಣ ಉಳ್ಳವನಿಗೆ; **ಪ್ರಿಯಮ್**—ಪ್ರಿಯವು.

## ಅನುವಾದ

**ತಿನ್ನುವುದಕ್ಕೆ ಮೂರು ಗಂಟೆಗಳಿಗೂ ಮೊದಲು ಸಿದ್ಧಮಾಡಿದ ಆಹಾರ, ರುಚಿಯಿಲ್ಲದ, ಕೆಡುತ್ತಿರುವ ಹಳಸಿದ ಆಹಾರ ಮತ್ತು ಉಚ್ಛಿಷ್ಟವೂ, ಅಸ್ಪೃಶ್ಯವೂ ಆದ ಆಹಾರವು ತಾಮಸಗುಣದವರಿಗೆ ಪ್ರಿಯವಾದವು.**

## ಭಾವಾರ್ಥ

ಆಹಾರದ ಉದ್ದೇಶವು ಆಯುಸ್ಸನ್ನು ಹೆಚ್ಚಿಸುವುದು, ಮನಸ್ಸನ್ನು

ಪರಿಶುದ್ಧಗೊಳಿಸುವುದು ಮತ್ತು ದೇಹಶಕ್ತಿಯನ್ನು ಹೆಚ್ಚಿಸುವುದು. ಇದೊಂದೇ ಅದರ ಉದ್ದೇಶ. ಹಿಂದಿನ ಕಾಲದಲ್ಲಿ ಹೆಚ್ಚು ಅಧಿಕಾರದಿಂದ ಹೇಳಬಲ್ಲವರು, ಆರೋಗ್ಯಕ್ಕೆ ಸಹಾಯಕವಾಗಿ ಆಯುಸ್ಸನ್ನು ಹೆಚ್ಚಿಸುವುದರಲ್ಲಿ ಅತ್ಯುತ್ತಮವಾದ ಆಹಾರಗಳನ್ನು ಆರಿಸಿದರು. ಹಾಲು ಉತ್ಪನ್ನಗಳು, ಸಕ್ಕರೆ, ಅಕ್ಕಿ, ಗೋಧಿ, ಹಣ್ಣುಗಳು ಮತ್ತು ತರಕಾರಿಗಳು ಇಂತಹ ಆಹಾರ. ಈ ಆಹಾರಗಳು ಸಾತ್ವಿಕಗುಣದವರಿಗೆ ಬಹುಪ್ರಿಯ. ಬೇಯಿಸಿದ ಧಾನ್ಯ, ಸಕ್ಕರೆಪಾಕ ಮೊದಲಾದ ಇತರ ಆಹಾರಗಳನ್ನು ಸ್ವತಃ ಅಷ್ಟು ರುಚಿಯಿಲ್ಲದಿದ್ದರೂ, ಹಾಲು ಅಥವಾ ಇತರ ಆಹಾರಗಳನ್ನು ಬೆರೆಸಿ ರುಚಿಕರವನ್ನಾಗಿ ಮಾಡಬಹುದು. ಆಗ ಅವು ಸಾತ್ವಿಕವಾಗುತ್ತವೆ. ಈ ಆಹಾರಗಳು ಸ್ವಭಾವತಃ ಪರಿಶುದ್ಧವಾದವು. ಮಾಂಸ ಮತ್ತು ಮದ್ಯಗಳಂತೆ ಮುಟ್ಟಬಾರದ ವಸ್ತುಗಳಿಂದ ಅವು ಭಿನ್ನವಾದವು. ಎಂಟನೆಯ ಶ್ಲೋಕದಲ್ಲಿ ಹೇಳಿದ ಕೊಬ್ಬಿನ ಆಹಾರಗಳಿಗೂ, ಪ್ರಾಣಿಗಳನ್ನು ಕೊಂದು ಪಡೆಯುವ ಪ್ರಾಣಿಗಳ ಕೊಬ್ಬಿಗೂ ಸಂಬಂಧವಿಲ್ಲ. ಪ್ರಾಣಿಗಳ ಕೊಬ್ಬು ಹಾಲಿನ ರೂಪದಲ್ಲಿ ದೊರೆಯುತ್ತದೆ; ಎಲ್ಲ ಆಹಾರಗಳಲ್ಲಿ ಅತ್ಯಂತ ಆಶ್ಚರ್ಯಕರವಾದ ಆಹಾರ ಹಾಲು. ಹಾಲು, ಬೆಣ್ಣೆ, ಗಿಣ್ಣು ಮತ್ತು ಇಂತಹ ಉತ್ಪನ್ನಗಳು ಮುಗ್ಧ ಪ್ರಾಣಿಗಳನ್ನು ಕೊಲ್ಲುವ ಅಗತ್ಯವೇ ಇಲ್ಲದೆ ಪ್ರಾಣಿಗಳ ಕೊಬ್ಬನ್ನು ಕೊಡುತ್ತವೆ. ಪಾಶವೀ ಮನೋಧರ್ಮದಿಂದ ಮಾತ್ರ ಈ ಹತ್ಯೆ ನಡೆಯುತ್ತದೆ. ಅಗತ್ಯವಾದ ಕೊಬ್ಬನ್ನು ನಾಗರಿಕ ರೀತಿಯಲ್ಲಿ ಪಡೆದುಕೊಳ್ಳುವುದು ಹಾಲಿನಿಂದ. ಕೊಲ್ಲುವುದು ಮಾನವವರ್ಗಕ್ಕಿಂತ ಕೀಳುವರ್ಗದವರ ರೀತಿಯಾಗಿದೆ. ಸಸಾರಜನಕವು (proteins) ಬಟಾಣಿ, ಬೇಳೆ, ಗೋಧಿ ಮೊದಲಾದುವುಗಳಲ್ಲಿ ಸಾಕಷ್ಟು ದೊರೆಯುತ್ತದೆ.

ರಾಜಸ ಸ್ವಭಾವದ ಆಹಾರವು ಕಹಿಯಾಗಿರುತ್ತದೆ, ತುಂಬ ಉಪ್ಪಾಗಿರುತ್ತದೆ ಅಥವಾ ತುಂಬ ಕಾರವಾಗಿರುತ್ತದೆ. ಅದಕ್ಕೆ ಅತಿಯಾಗಿ ಕೆಂಪು ಮೆಣಸನ್ನು ಸೇರಿಸಿರುತ್ತದೆ; ಅದು ಜಠರದಲ್ಲಿ ಜಠರ ರಸವನ್ನು ಕಡಮೆಮಾಡಿ ನೋವನ್ನೂ ರೋಗವನ್ನು ಉಂಟುಮಾಡುತ್ತದೆ. ತಾಮಸಗುಣದ ಆಹಾರವು ಮುಖ್ಯವಾಗಿ ಹೊಸದಾಗಿರುವುದಿಲ್ಲ. ಅಡಿಗೆ ಮಾಡಿದ ಅನಂತರ ಮೂರು ಗಂಟೆಗಳಿಗೂ ಹೆಚ್ಚಿನ ಕಾಲ ಬಿಟ್ಟು, ತಿನ್ನುವ ಆಹಾರವು (ಪ್ರಸಾದವನ್ನು ಹೊರತುಪಡಿಸಿ) ತಾಮಸ ಎಂದು ಭಾವಿಸಲಾಗುತ್ತದೆ. ಅವು ಕೊಳೆಯುತ್ತಿರುವುದರಿಂದ ಇಂತಹ ಆಹಾರಗಳಿಗೆ ದುರ್ವಾಸನೆ ಬರುತ್ತದೆ; ಈ ಗುಣದ ಜನರನ್ನು ಅದು ಆಕರ್ಷಿಸಿದರೂ ಸಾತ್ವಿಕ ಗುಣದವರಿಗೆ ಅಸಹ್ಯವಾಗುತ್ತದೆ.

ಪರಮ ಪ್ರಭುವಿಗೆ ಮೊದಲು ನೈವೇದ್ಯ ಮಾಡಿದ ಅಥವಾ ಮೊದಲು ಸಾಧುಗಳು, ವಿಶೇಷವಾಗಿ ಗುರುಗಳು ತಿಂದ ಆಹಾರದ ಶೇಷವನ್ನು ಮಾತ್ರ ತಿನ್ನಬಹುದು. ಇಲ್ಲವಾದರೆ ಆಹಾರದ ಉಚ್ಛಿಷ್ಟ ಭಾಗವನ್ನು ತಾಮಸಗುಣಕ್ಕೆ ಯೋಗ್ಯವಾದದ್ದು ಎಂದು ಭಾವಿಸುತ್ತಾರೆ. ಅವು ಸೋಂಕನ್ನು ಅಥವಾ ಕಾಯಿಲೆಯನ್ನು ಹೆಚ್ಚಿಸುತ್ತವೆ. ತಾಮಸಗುಣದವರಿಗೆ ಇಂತಹ ಆಹಾರವು ತುಂಬ ರುಚಿಯಾಗಿರುತ್ತದೆ. ಆದರೆ ಸಾತ್ವಿಕಗುಣದವರು ಅದನ್ನು ಇಷ್ಟಪಡುವುದಿಲ್ಲ; ಮುಟ್ಟುವುದು ಸಹ ಇಲ್ಲ. ಅತ್ಯುತ್ತಮ ಆಹಾರ ಎಂದರೆ ದೇವೋತ್ತಮ ಪರಮ ಪುರುಷನ ಪ್ರಸಾದ. ಭಗವದ್ಗೀತೆಯಲ್ಲಿ ಪ್ರಭುವು ತರಕಾರಿ, ಹಿಟ್ಟು, ಮತ್ತು ಹಾಲು ಇವುಗಳಿಂದ ಮಾಡಿ ಭಕ್ತಿಪೂರ್ವಕವಾಗಿ ಅರ್ಪಿಸಿದ ನೈವೇದ್ಯವನ್ನು ಸ್ವೀಕರಿಸುತ್ತೇನೆ ಎಂದು ಹೇಳಿದ್ದಾನೆ. **ಪತ್ರಂ ಪುಷ್ಪಂ ಫಲಂ ತೋಯಮ್.** ದೇವೋತ್ತಮ ಪರಮ ಪುರುಷನು ಮುಖ್ಯವಾಗಿ ಸ್ವೀಕರಿಸುವುದು ಭಕ್ತಿ ಮತ್ತು ಪ್ರೀತಿಗಳನ್ನು. ಆದರೆ ಪ್ರಸಾದವನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ಸಿದ್ಧಮಾಡಬೇಕೆಂದು ಹೇಳಿದೆ. ಧರ್ಮಗ್ರಂಥದ ನಿರ್ದೇಶನದ ಪ್ರಕಾರ ಸಿದ್ಧಪಡಿಸಿ ದೇವೋತ್ತಮ ಪರಮ ಪುರುಷನಿಗೆ ನೈವೇದ್ಯ ಮಾಡಿದ ಆಹಾರವನ್ನು,

ಬಹುಕಾಲದ ಹಿಂದೆ ಸಿದ್ಧಮಾಡಿದ್ದರೂ ತಿನ್ನಬಹುದು; ಏಕೆಂದರೆ ಅದು ದಿವ್ಯವಾದದ್ದು. ಆದುದರಿಂದ ಆಹಾರವನ್ನು ಪೂತಿನಾಶಕವನ್ನಾಗಿ, ತಿನ್ನಲು ಯೋಗ್ಯವಾಗಿ ಮತ್ತು ಎಲ್ಲರಿಗೂ ರುಚಿಯಾಗಿ ಮಾಡಲು ಅದನ್ನು ದೇವೋತ್ತಮ ಪರಮ ಪುರುಷನಿಗೆ ಅರ್ಪಿಸಬೇಕು.

## ಶ್ಲೋಕ - 11

**ಅಫಲಾಕಾಙ್ಕ್ಷಿಭಿರ್ಯಜ್ಞೋ ವಿಧಿದಿಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥೧೧॥**

**ಅಫಲ ಆಕಾಙ್ಕ್ಷಿಭಿಃ**—ಫಲಾಪೇಕ್ಷೆ ಇಲ್ಲದವರಿಂದ; **ಯಜ್ಞಃ**—ಯಜ್ಞವು; **ವಿಧಿದಿಷ್ಟಃ**—ಶಾಸ್ತ್ರನಿರ್ದೇಶದ ಪ್ರಕಾರ; **ಯಃ**—ಯಾವುದು; **ಇಜ್ಯತೇ**—ಆಚರಿಸಲಾಗುತ್ತದೋ; **ಯಷ್ಟವ್ಯಮ್**—ಆಚರಿಸಲ್ಪಡಬೇಕು; **ಏವ**—ಖಂಡಿತವಾಗಿಯೂ; **ಇತಿ**—ಹೀಗೆ; **ಮನಃ**—ಮನಸ್ಸನ್ನು; **ಸಮಾಧಾಯ**—ಸ್ಥಿರಗೊಳಿಸಿ; **ಸಃ**—ಅದು; **ಸಾತ್ತ್ವಿಕಃ**—ಸತ್ವಗುಣದಲ್ಲಿರುವಂತಹದು.

## ಅನುವಾದ

**ಯಜ್ಞಗಳಲ್ಲಿ, ಧರ್ಮಗ್ರಂಥಗಳ ಆದೇಶಕ್ಕನುಗುಣವಾಗಿ, ಕರ್ತವ್ಯ ದೃಷ್ಟಿಯಿಂದ, ಫಲಾಪೇಕ್ಷೆಯಿಲ್ಲದವರು ಮಾಡುವ ಯಜ್ಞವು ಸಾತ್ವಿಕವಾದದ್ದು.**

## ಭಾವಾರ್ಥ

ಮನಸ್ಸಿನಲ್ಲಿ ಒಂದು ಉದ್ದೇಶವನ್ನಿಟ್ಟುಕೊಂಡು ಸಾಮಾನ್ಯವಾಗಿ ಯಜ್ಞವನ್ನು ಮಾಡುತ್ತಾರೆ; ಆದರೆ ಇಂತಹ ಯಾವ ಆಸೆಯೂ ಇಲ್ಲದೆ ಯಜ್ಞಮಾಡಬೇಕೆಂದು ಇಲ್ಲಿ ಹೇಳಿದೆ. ಅದನ್ನು ಕರ್ತವ್ಯವೆಂದು ಮಾಡಬೇಕು. ದೇವಸ್ಥಾನಗಳಲ್ಲಿ ಅಥವಾ ಚರ್ಚುಗಳಲ್ಲಿ ಆಚರಿಸುವ ವಿಧಿಗಳನ್ನು ನೋಡಿ. ಅವನ್ನು ಸಾಮಾನ್ಯವಾಗಿ ಐಹಿಕ ಲಾಭದ ಉದ್ದೇಶಕ್ಕಾಗಿ ಮಾಡುತ್ತಾರೆ. ಆದರೆ ಅದು ಸಾತ್ವಿಕವಲ್ಲ. ಮನುಷ್ಯನು ದೇವಸ್ಥಾನಕ್ಕೆ ಅಥವಾ ಚರ್ಚಿಗೆ ಕರ್ತವ್ಯ ಎಂದು ಹೋಗಬೇಕು. ದೇವೋತ್ತಮ ಪರಮ ಪುರುಷನಿಗೆ ಗೌರವವನ್ನು ಸಲ್ಲಿಸಬೇಕು ಮತ್ತು ಹೂವುಗಳನ್ನೂ, ನೈವೇದ್ಯವನ್ನೂ ಅರ್ಪಿಸಬೇಕು. ದೇವರನ್ನು ಪೂಜೆಮಾಡುವುದಷ್ಟಕ್ಕೇ ದೇವಸ್ಥಾನಕ್ಕೆ ಹೋಗಿ ಪ್ರಯೋಜನವಿಲ್ಲ ಎಂದು ಎಲ್ಲರೂ ಯೋಚಿಸುತ್ತಾರೆ. ಆದರೆ ಧರ್ಮಗ್ರಂಥಗಳ ಆದೇಶಗಳು ಆರ್ಥಿಕ ಲಾಭಗಳಿಗಾಗಿ ಪೂಜೆಮಾಡಬೇಕು ಎಂದು ಹೇಳಿಲ್ಲ. ದೇವರಿಗೆ ಗೌರವವನ್ನು ಅರ್ಪಿಸುವುದಕ್ಕಾಗಿಯೇ ದೇವಸ್ಥಾನಕ್ಕೆ ಹೋಗಬೇಕು. ಅದರಿಂದ ಮನುಷ್ಯನು ಸಾತ್ವಿಕನಾಗುತ್ತಾನೆ. ಧರ್ಮಗ್ರಂಥಗಳ ಆಜ್ಞೆಗಳನ್ನು ಪಾಲಿಸಿ ದೇವೋತ್ತಮ ಪರಮ ಪುರುಷನಿಗೆ ಗೌರವವನ್ನು ಸಲ್ಲಿಸುವುದು, ನಾಗರಿಕನಾದ ಪ್ರತಿಯೊಬ್ಬ ಮನುಷ್ಯನ ಕರ್ತವ್ಯ.

## ಶ್ಲೋಕ - 12

**ಅಭಿಸನ್ಧಾಯ ತು ಫಲಂ ದಮ್ಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥**

**ಅಭಿಸನ್ಧಾಯ**—ಅಪೇಕ್ಷಿಸುತ್ತ; **ತು**—ಆದರೆ; **ಫಲಮ್**—ಫಲವನ್ನು; **ದಮ್ಭ**—ಜಂಬದ; **ಅರ್ಥಮ್**—ಉದ್ದೇಶಕ್ಕಾಗಿ; **ಅಪಿ**—ಕೂಡ; **ಚ**—ಮತ್ತು; **ಏವ**—ಖಂಡಿತವಾಗಿಯೂ; **ಯತ್**—ಯಾವುದು; **ಇಜ್ಯತೇ**—ಆಚರಿಸಲಾಗುತ್ತದೋ; **ಭರತ ಶ್ರೇಷ್ಠ**—ಭರತ ಶ್ರೇಷ್ಠನೇ; **ತಮ್**—ಆ; **ಯಜ್ಞಮ್**—ಯಜ್ಞವನ್ನು; **ವಿದ್ಧಿ**—ತಿಳಿ; **ರಾಜಸಮ್**—ರಾಜಸಗುಣದಲ್ಲಿ ಇರುವಂತಹದು ಎಂದು.

## ಅನುವಾದ

**ಭರತವಂಶದ ಶ್ರೇಷ್ಠನೇ, ಐಹಿಕ ಲಾಭಕ್ಕಾಗಿ ಅಥವಾ ಅಹಂಕಾರದಿಂದಾಗಿ ಮಾಡುವ ಯಜ್ಞವು ರಾಜಸವೆಂದು ತಿಳಿದುಕೊ.**

## ಭಾವಾರ್ಥ

ಕೆಲವೊಮ್ಮೆ ಯಜ್ಞಗಳನ್ನೂ ಮತ್ತು ವಿಧಿಗಳನ್ನೂ ಸ್ವರ್ಗ ಸಾಮ್ರಾಜ್ಯಕ್ಕೆ ಹೋಗಬೇಕೆಂದು ಅಥವಾ ಲೋಕದಲ್ಲಿ ಯಾವುದಾದರೂ ಐಹಿಕ ಲಾಭವಾಗಬೇಕೆಂದು ಮಾಡುತ್ತಾರೆ. ಅಂತಹ ಯಜ್ಞಗಳು ಅಥವಾ ವಿಧಿಗಳ ಆಚರಣೆಗಳನ್ನು ರಾಜಸವೆಂದು ಪರಿಗಣಿಸುತ್ತಾರೆ.

## ಶ್ಲೋಕ - 13

**ವಿಧಿಹೀನಮಸೃಷ್ಟಾನ್ನಂ ಮನ್ತ್ರಹೀನಮದಕ್ಷಿಣಮ್ |**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ||೧೩||**

**ವಿಧಿಹೀನಮ್**—ಶಾಸ್ತ್ರನಿರ್ದೇಶನವಿಲ್ಲದ; **ಅಸೃಷ್ಟ ಅನ್ನಮ್**—ಪ್ರಸಾದ ವಿತರಣೆಯಿಲ್ಲದ; **ಮನ್ತ್ರ ಹೀನಮ್**—ವೈದಿಕ ಮಂತ್ರಗಳ ಪಠನವಿಲ್ಲದ; **ಅದಕ್ಷಿಣಮ್**—ಪುರೋಹಿತರಿಗೆ ದಕ್ಷಿಣೆ ಇಲ್ಲದ; **ಶ್ರದ್ಧಾ**—ಶ್ರದ್ಧೆಯು; **ವಿರಹಿತಮ್**—ಇಲ್ಲದ; **ಯಜ್ಞಮ್**—ಯಜ್ಞವು; **ತಾಮಸಮ್**—ತಮೋಗುಣದಲ್ಲಿ ಇರುವಂತಹದು; **ಪರಿಚಕ್ಷತೇ**—ಎಂದು ಪರಿಗಣಿಸಲ್ಪಡಬೇಕು.

## ಅನುವಾದ

**ಧರ್ಮಗ್ರಂಥಗಳ ಆದೇಶಗಳನ್ನು ಲಕ್ಷ್ಯಮಾಡದೆ, ಪ್ರಸಾದವನ್ನು ಹಂಚದೆ, ವೇದಗಳ ಸ್ತೋತ್ರಗಳನ್ನೂ ಹೇಳದೆ, ಪುರೋಹಿತರಿಗೆ ಸಂಭಾವನೆ ಇಲ್ಲದೆ ಮತ್ತು ಶ್ರದ್ಧೆಯಿಲ್ಲದೆ ಮಾಡಿದ ಯಜ್ಞವನ್ನು ತಾಮಸಗುಣದ್ದು ಎಂದು ಪರಿಗಣಿಸಲಾಗುತ್ತದೆ.**

## ಭಾವಾರ್ಥ

ತಾಮಸಗುಣದಲ್ಲಿ ಶ್ರದ್ಧೆಯಿಡುವುದೆಂದರೆ ವಾಸ್ತವವಾಗಿ ಶ್ರದ್ಧೆಯೇ ಇಲ್ಲದಿದ್ದಂತೆ. ಕೆಲವೊಮ್ಮೆ ಜನರು ಹಣವನ್ನು ಗಳಿಸುವುದಕ್ಕಾಗಿಯೇ ಯಾವುದಾದರೂ ದೇವತೆಯನ್ನು ಪೂಜಿಸಿ, ಅನಂತರ ಧರ್ಮಗ್ರಂಥಗಳ ಆದೇಶವನ್ನು ಅಲಕ್ಷ್ಯಮಾಡಿ, ಹಣವನ್ನು ಮನರಂಜನೆಗೆ ಬಳಸುತ್ತಾರೆ. ಧಾರ್ಮಿಕತೆಯ ಆಡಂಬರದ ಪ್ರದರ್ಶನವಾದ ಇಂತಹ ಸಮಾರಂಭಗಳನ್ನು ಪ್ರಾಮಾಣಿಕವೆಂದು ಒಪ್ಪಲಾಗದು. ಇವೆಲ್ಲ ತಾಮಸ ಸ್ವಭಾವದವು; ಇವು ಆಸುರೀ ಮನೋಧರ್ಮವನ್ನು ಸೃಷ್ಟಿಸುತ್ತವೆ.

ಇವುಗಳಿಂದ ಮಾನವ ಸಮಾಜಕ್ಕೆ ಉಪಯೋಗವಿಲ್ಲ.

## ಶ್ಲೋಕ - 14

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪॥**

**ದೇವ**—ಪರಮ ಪ್ರಭು; **ದ್ವಿಜ**—ಬ್ರಾಹ್ಮಣ; **ಗುರು**—ಗುರು; **ಪ್ರಾಜ್ಞ**—ಮತ್ತು ಪೂಜಾರ್ಹ ವ್ಯಕ್ತಿಗಳ; **ಪೂಜನಮ್**—ಪೂಜೆಯು; **ಶೌಚಮ್**—ಶುಚಿತ್ವವು; **ಆರ್ಜವಮ್**—ಸರಳತೆಯು; **ಬ್ರಹ್ಮಚರ್ಯಮ್**—ಬ್ರಹ್ಮಚರ್ಯವು; **ಅಹಿಂಸಾ**—ಅಹಿಂಸೆಯು; **ಚ**—ಕೂಡ; **ಶಾರೀರಮ್**—ದೇಹಕ್ಕೆ ಸಂಬಂಧಿಸಿದ; **ತಪಃ**—ತಪಸ್ಸು; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ಪರಮ ಪ್ರಭುವಿನ ಪೂಜೆ, ಬ್ರಾಹ್ಮಣರ ಪೂಜೆ, ಗುರುವಿನ ಪೂಜೆ, ತಂದೆ ತಾಯಿಯಂತಹ ಹಿರಿಯರ ಪೂಜೆ, ಶುಚಿತ್ವ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ ಇವೆಲ್ಲ ಸೇರಿ ದೇಹದ ತಪಸ್ಸು ಎನ್ನಿಸಿಕೊಳ್ಳುತ್ತದೆ.**

## ಭಾವಾರ್ಥ

ಭಗವಂತನು ಇಲ್ಲಿ ವಿವಿಧ ರೀತಿಗಳ ವ್ರತ-ತಪಸ್ಸುಗಳನ್ನು ವಿವರಿಸುತ್ತಾನೆ. ಮೊದಲು ಅವನು ದೇಹವು ಆಚರಿಸುವ ವ್ರತ-ತಪಸ್ಸುಗಳನ್ನು ವಿವರಿಸುತ್ತಾನೆ. ದೇವರಿಗೆ, ದೇವತೆಗಳಿಗೆ, ಪರಿಪೂರ್ಣರೂ, ಅರ್ಹರೂ ಆದ ಬ್ರಾಹ್ಮಣರಿಗೆ, ಗುರುವಿಗೆ, ತಂದೆ ತಾಯಿಯರಂತಹ ಹಿರಿಯರಿಗೆ ಮತ್ತು ವೇದಗಳ ಜ್ಞಾನವಿರುವ ವ್ಯಕ್ತಿಗೆ, ಗೌರವವನ್ನು ತೋರಿಸಬೇಕು ಅಥವಾ ತೋರಿಸಲು ಕಲಿಯಬೇಕು. ಅವರನ್ನು ಯೋಗ್ಯ ರೀತಿಯಲ್ಲಿ ಗೌರವಿಸಬೇಕು. ತನ್ನನ್ನು ಹೊರಗಡೆಯೂ, ಒಳಗಡೆಯೂ ಶುದ್ಧಿಮಾಡಿಕೊಳ್ಳುವುದನ್ನು ಅಭ್ಯಾಸಮಾಡಿಕೊಳ್ಳಬೇಕು. ನಡತೆಯಲ್ಲಿ ಸರಳವಾಗಿರುವುದನ್ನು ಕಲಿಯಬೇಕು. ಧರ್ಮಗ್ರಂಥಗಳ ಆದೇಶವಿಲ್ಲದ ಏನನ್ನೂ ಮಾಡಬಾರದು. ವೈವಾಹಿಕ ಜೀವನದ ಹೊರಗೆ ಲೈಂಗಿಕ ರತಿಯನ್ನು ಪಡೆಯಬಾರದು. ಏಕೆಂದರೆ ಧರ್ಮಗ್ರಂಥವು ಮದುವೆಯಲ್ಲಿ ಮಾತ್ರ ಲೈಂಗಿಕ ರತಿಗೆ ಅನುಮತಿ ಕೊಡುತ್ತದೆ; ಬೇರೆ ರೀತಿಯಲ್ಲಲ್ಲ. ಇದಕ್ಕೆ ಬ್ರಹ್ಮಚರ್ಯ ಎಂದು ಹೆಸರು. ದೇಹದ ಮಟ್ಟಿಗೆ ಇವು ವ್ರತ-ತಪಸ್ಸುಗಳು.

## ಶ್ಲೋಕ - 15

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥೧೫॥**

**ಅನುದ್ವೇಗ ಕರಮ್**—ಉದ್ವೇಗಕರವಲ್ಲದ; **ವಾಕ್ಯಮ್**—ಮಾತುಗಳು; **ಸತ್ಯಮ್**—ಸತ್ಯವಾದ; **ಪ್ರಿಯ**—ಪ್ರಿಯವಾದ; **ಹಿತಮ್**—ಹಿತಕರವಾದ; **ಚ**—ಕೂಡ; **ಯತ್**—ಯಾವುದು; **ಸ್ವಾಧ್ಯಾಯ**

—ವೇದಾಧ್ಯಯನದ; **ಅಭ್ಯಸನಮ್**—ಅಭ್ಯಾಸವು; **ಚ**—ಕೂಡ; **ಏವ**—ಖಂಡಿತವಾಗಿಯೂ; **ವಾಕ್ ಮಯಮ್**—ಮಾತುಗಳ; **ತಪಃ**—ತಪಸ್ಸು; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ಸತ್ಯವಾದ, ಸಂತೋಷಕರವಾದ, ಹಿತವಾದ ಮತ್ತು ಇತರರ ಮನಸ್ಸನ್ನು ಕಲಕದ ಮಾತುಗಳನ್ನಾಡುವುದು, ಕ್ರಮತಪ್ಪದೆ ವೇದಸಾಹಿತ್ಯವನ್ನು ವಾಚನ ಮಾಡುವುದು ಇವೆಲ್ಲ ಸೇರಿ ಮಾತಿನ ತಪಸ್ಸಾಗುತ್ತದೆ.**

## ಭಾವಾರ್ಥ

ಮನುಷ್ಯನು ಇತರರ ಮನಸ್ಸನ್ನು ಕಲಕದಂತೆ ಮಾತನಾಡಬೇಕು. ನಿಜ, ಗುರುವು ಮಾತನಾಡಿದಾಗ ತನ್ನ ವಿದ್ಯಾರ್ಥಿಗಳ ಮಾರ್ಗದರ್ಶನಕ್ಕಾಗಿ ಸತ್ಯವನ್ನು ಹೇಳಬೇಕಾಗುತ್ತದೆ. ಆದರೆ ಅವನ ಮಾತು ಇತರರ ಮನಸ್ಸುಗಳನ್ನು ಉದ್ವೇಗಗೊಳಿಸುವಂತಿದ್ದರೆ, ಅವನು ತನ್ನ ವಿದ್ಯಾರ್ಥಿಗಳಲ್ಲದವರೊಡನೆ ಮಾತನಾಡಬಾರದು. ಇದು ಮಾತಿನ ಮಟ್ಟಿಗೆ ತಪಸ್ಸು. ಇದಲ್ಲದೆ ಮನುಷ್ಯನು ಅಸಂಬದ್ಧವಾಗಿ ಮಾತನಾಡಬಾರದು. ಆಧ್ಯಾತ್ಮಿಕ ವಲಯಗಳಲ್ಲಿ ಮಾತನಾಡುವ ರೀತಿಯೆಂದರೆ, ಧರ್ಮಗ್ರಂಥಗಳು ಸಮ್ಮತಿಸುವ ಏನನ್ನಾದರೂ ಹೇಳುವುದು. ಅವನು ಹೇಳುವುದನ್ನು ಸಮರ್ಥಿಸಲು, ಮಾತನಾಡುವವನು ಕೂಡಲೇ ಆಧ್ಯಾತ್ಮಿಕ ಅಧಿಕಾರಿಗಳ ಮಾತನ್ನು ಉದ್ಧರಿಸಿ ಹೇಳಬೇಕು. ಇಂತಹ ಮಾತು ಕೇಳಲು ಕಿವಿಗೆ ಬಹಳ ಪ್ರಿಯವಾಗಿರಬೇಕು. ಇಂತಹ ಚರ್ಚೆಗಳಿಂದ ಮನುಷ್ಯನು ಅತ್ಯುನ್ನತ ಫಲವನ್ನು ಪಡೆಯಬಹುದು; ಮತ್ತು ಮಾನವ ಸಮಾಜವನ್ನು ಮೇಲೆತ್ತಬಹುದು. ವೇದ ಸಾಹಿತ್ಯದಲ್ಲಿ ಇಂತಹ ಮಾತುಗಳ ಅಮಿತ ಭಂಡಾರವೇ ಇದೆ. ಅದನ್ನು ಅಭ್ಯಾಸಮಾಡಬೇಕು. ಇದಕ್ಕೆ ಮಾತಿನ ತಪಸ್ಸು ಎಂದು ಹೆಸರು.

## ಶ್ಲೋಕ - 16

**ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ |**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ||೧೬||**

**ಮನಃ ಪ್ರಸಾದಃ**—ಮನಸ್ಸಿನ ತೃಪ್ತಿಯು; **ಸೌಮ್ಯತ್ವಮ್**—ಬೇರೆಯವರ ವಿಚಾರದಲ್ಲಿ ವಂಚನೆ ಇಲ್ಲದಿರುವುದು; **ಮೌನಮ್**—ಮೌನವು; **ಆತ್ಮ**—ಸ್ವಯಂ; **ವಿನಿಗ್ರಹಃ**—ನಿಗ್ರಹವು; **ಭಾವ**—ಸ್ವಭಾವದ; **ಸಂಶುದ್ಧಿಃ**—ಶುದ್ಧಿಯು; **ಇತಿ**—ಹೀಗೆ; **ಏತತ್**—ಇದು; **ತಪಃ**—ತಪಸ್ಸು; **ಮಾನಸಮ್**—ಮನಸ್ಸಿನ; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ಮನಸ್ಸಿನ ಪ್ರಸಾದತೆ, ಸರಳತೆ, ಮೌನ, ಆತ್ಮಸಂಯಮ ಮತ್ತು ಅಸ್ತಿತ್ವದ ಶುದ್ಧಿ ಇವು ಮನಸ್ಸಿನ ತಪಸ್ಸು.**

## ಭಾವಾರ್ಥ

ಮನಸ್ಸಿನ ತಪಸ್ಸು ಮಾಡಲು ದನ್ನು ಇಂದ್ರಿಯಭೋಗದಿಂದ ಬಿಡಿಸಬೇಕು. ಯಾವಾಗಲೂ ಇತರರಿಗೆ ಒಳಿತನ್ನು ಮಾಡುವಂತೆಯೇ ಯೋಚಿಸಲು ಮನಸ್ಸಿಗೆ ಶಿಕ್ಷಣ ಕೊಡಬೇಕು. ಮನಸ್ಸಿಗೆ ಅತ್ಯುತ್ತಮ ಶಿಕ್ಷಣವೆಂದರೆ ವಿಚಾರ ಗಾಂಭೀರ್ಯ. ಮನುಷ್ಯನು ಕೃಷ್ಣಪ್ರಜ್ಞೆಯಿಂದ ಹೊರ ಹೋಗಬಾರದು. ಇಂದ್ರಿಯ ಭೋಗವನ್ನು ಯಾವಾಗಲೂ ದೂರವಿಡಬೇಕು. ತನ್ನ ಸ್ವಭಾವವನ್ನು ಶುದ್ಧಿಗೊಳಿಸುವುದೆಂದರೆ ಕೃಷ್ಣಪ್ರಜ್ಞೆಯನ್ನು ಪಡೆಯುವುದು. ಇಂದ್ರಿಯ ಭೋಗದ ಯೋಚನೆಗಳಿಂದ ಮನಸ್ಸನ್ನು ದೂರ ಇಡುವುದರಿಂದಲೇ ಮನಸ್ಸಿನ ತೃಪ್ತಿಯನ್ನು ಪಡೆಯಬಹುದು. ಇಂದ್ರಿಯ ಸುಖವನ್ನು ಕುರಿತು ಯೋಚಿಸಿದಷ್ಟೂ ಮನಸ್ಸಿಗೆ ಅತೃಪ್ತಿಯಾಗುತ್ತದೆ. ಈ ಯುಗದಲ್ಲಿ ನಾವು ಇಂದ್ರಿಯ ಸುಖದ ಬೇರೆ ಬೇರೆ ಬಗೆಗಳಲ್ಲಿ, ಅನಗತ್ಯವಾಗಿ, ಮನಸ್ಸನ್ನು ತೊಡಗಿಸುತ್ತೇವೆ. ಆದುದರಿಂದ ಮನಸ್ಸು ತೃಪ್ತಿಹೊಂದಲು ಅವಕಾಶವೇ ಇಲ್ಲ. ಅತ್ಯುತ್ತಮ ಮಾರ್ಗವೆಂದರೆ ವೈದಿಕ ಸಾಹಿತ್ಯಕ್ಕೆ ಮನಸ್ಸನ್ನು ತಿರುಗಿಸುವುದು. ಪುರಾಣಗಳಲ್ಲಿ ಮತ್ತು ಮಹಾಭಾರತದಲ್ಲಿ ಇರುವಂತೆ ವೈದಿಕ ಸಾಹಿತ್ಯವು ತೃಪ್ತಿಕೊಡುವ ಕಥೆಗಳಿಂದ ತುಂಬಿ ಹೋಗಿವೆ. ಮನುಷ್ಯನು ಈ ತಿಳುವಳಿಕೆಯ ಲಾಭವನ್ನು ಪಡೆದುಕೊಂಡು ಪರಿಶುದ್ಧನಾಗಬಹುದು. ಮನಸ್ಸಿನಲ್ಲಿ ಕಪಟವಿರಬಾರದು. ಮನುಷ್ಯನು ಎಲ್ಲರ ಹಿತವನ್ನು ಕುರಿತು ಯೋಚಿಸಬೇಕು. ಮೌನ ಎಂದರೆ ಮನುಷ್ಯನು ಯಾವಾಗಲೂ ಆತ್ಮಸಾಕ್ಷಾತ್ಕಾರವನ್ನು ಕುರಿತು ಯೋಚಿಸುತ್ತಿದ್ದಾನೆ ಎಂದು ಅರ್ಥ. ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಈ ಅರ್ಥದಲ್ಲಿ ಪರಿಪೂರ್ಣ ಮೌನವನ್ನಾಚರಿಸುತ್ತಾನೆ. ಮನಸ್ಸಿನ ನಿಯಂತ್ರಣ ಎಂದರೆ ಮನಸ್ಸನ್ನು ಇಂದ್ರಿಯಸುಖದಿಂದ ಬಿಡಿಸುವುದು. ಮನುಷ್ಯನು ತನ್ನ ವ್ಯವಹಾರಗಳಲ್ಲಿ ನೇರವಾಗಿರಬೇಕು ಮತ್ತು ಈ ರೀತಿಯಲ್ಲಿ ತನ್ನ ಬದುಕನ್ನು ಶುದ್ಧಗೊಳಿಸಿಕೊಳ್ಳಬೇಕು. ಈ ಗುಣಗಳೆಲ್ಲ ಸೇರಿ ಮನಸ್ಸಿನ ತಪಸ್ಸು.

## ಶ್ಲೋಕ - 17

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ |**
**ಅಫಲಾಕಾಙ್ಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ||೧೭||**

**ಶ್ರದ್ಧಯಾ**—ಶ್ರದ್ಧೆಯಿಂದ; **ಪರಯಾ**—ದಿವ್ಯವಾದ; **ತಪ್ತಮ್**—ಆಚರಿಸಲ್ಪಟ್ಟ; **ತಪಃ**—ತಪಸ್ಸು; **ತತ್**—ಅದು; **ತ್ರಿವಿಧಮ್**—ಮೂರು ಬಗೆಯದು; **ನರೈಃ**—ಮನುಷ್ಯರಿಂದ; **ಅಫಲ ಆಕಾಙ್ಕ್ಷಿಭಿಃ**—ಫಲಾಪೇಕ್ಷೆ ಇಲ್ಲದೆ; **ಯುಕ್ತೈಃ**—ತೊಡಗಿದವರಿಂದ; **ಸಾತ್ತ್ವಿಕಮ್**—ಸಾತ್ವಿಕಗುಣದಲ್ಲಿ ಇರುವಂತಹದು; **ಪರಿಚಕ್ಷತೇ**—ಎಂದು ಕರೆಯಲಾಗಿದೆ.

## ಅನುವಾದ

**ಮನುಷ್ಯರು ಐಹಿಕ ಲಾಭವನ್ನು ನಿರೀಕ್ಷಿಸದೆ, ಪರಮ ಪ್ರಭುವಿಗಾಗಿಯೇ ಕೆಲಸಮಾಡುತ್ತ, ದಿವ್ಯಶ್ರದ್ಧೆಯಿಂದ ಆಚರಿಸುವ ಈ ತ್ರಿವಿಧ ತಪಸ್ಸಿಗೆ ಸಾತ್ವಿಕ ತಪಸ್ಸು ಎಂದು ಹೆಸರು.**

## ಶ್ಲೋಕ - 18

**ಸತ್ಕಾರಮಾನಪೂಜಾರ್ಥಂ ತಪೋ ದಮ್ಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥೧೮॥**

**ಸತ್ಕಾರ**—ಸತ್ಕಾರ; **ಮಾನ**—ಗೌರವ; **ಪೂಜಾ**—ಪೂಜೆಗಳ; **ಅರ್ಥಮ್**—ಕಾರಣಕ್ಕಾಗಿ; **ತಪಃ**—ತಪಸ್ಸು; **ದಮ್ಭೇನ**—ಜಂಭದಿಂದ; **ಚ**—ಕೂಡ; **ಏವ**—ಖಂಡಿತವಾಗಿಯೂ; **ಯತ್**—ಯಾವುದು; **ಕ್ರಿಯತೇ**—ಆಚರಿಸಲ್ಪಡುತ್ತದೋ; **ತತ್**—ಅದು; **ಇಹ**—ಈ ಜಗತ್ತಿನಲ್ಲಿ; **ಪ್ರೋಕ್ತಮ್**—ಎಂದು ಹೇಳಲಾಗಿದೆ; **ರಾಜಸಮ್**—ರಜೋಗುಣದಲ್ಲಿ ಇರುವಂತಹದು; **ಚಲಮ್**—ಚಂಚಲವಾದ; **ಅಧ್ರುವಮ್**—ತಾತ್ಕಾಲಿಕವಾದ.

### ಅನುವಾದ

**ಡಂಭಕ್ಕಾಗಿ ಮತ್ತು ಗೌರವ ಪೂಜೆಗಳನ್ನು ಪಡೆಯುವುದಕ್ಕಾಗಿ ಮಾಡುವ ತಪಸ್ಸು ರಾಜಸ ಎಂದು ಹೇಳುತ್ತಾರೆ. ಇದು ಸ್ಥಿರವೂ ಅಲ್ಲ, ಶಾಶ್ವತವೂ ಅಲ್ಲ.**

### ಭಾವಾರ್ಥ

ಕೆಲವೊಮ್ಮೆ ಮನುಷ್ಯರು ಜನರನ್ನು ಆಕರ್ಷಿಸಿ ಇತರರಿಂದ ಸನ್ಮಾನ, ಗೌರವ ಮತ್ತು ಪೂಜೆಗಳನ್ನು ಪಡೆಯಲು ವ್ರತ-ತಪಸ್ಸನ್ನು ಆಚರಿಸುತ್ತಾರೆ. ರಾಜಸ ಸ್ವಭಾವದವರು ತಮ್ಮ ಕೆಳಗಿನವರು ತಮ್ಮನ್ನು ಪೂಜಿಸಲು, ಕಾಲು ತೊಳೆಯಲು ಮತ್ತು ಧನವನ್ನು ಅರ್ಪಿಸಲು ಅವಕಾಶವನ್ನು ಕೊಡುತ್ತಾರೆ. ತಪಸ್ಸಿನ ಆಚರಣೆಯಿಂದ ಹೀಗೆ ಕೃತಕವಾಗಿ ಮಾಡಿದ ಏರ್ಪಾಡುಗಳನ್ನು ರಾಜಸ ಎಂದು ಭಾವಿಸಲಾಗುತ್ತದೆ. ಇವುಗಳ ಪರಿಣಾಮಗಳು ಸ್ವಲ್ಪ ಕಾಲದವು; ಇವನ್ನು ಸ್ವಲ್ಪ ಕಾಲ ಮುಂದುವರಿಸಬಹುದು. ಆದರೆ ಇವು ಶಾಶ್ವತವಲ್ಲ.

## ಶ್ಲೋಕ - 19

**ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥೧೯॥**

**ಮೂಢ**—ಮೂರ್ಖತನದ; **ಗ್ರಾಹೇಣ**—ಪ್ರಯತ್ನದಿಂದ; **ಆತ್ಮನಃ**—ತನ್ನ; **ಯತ್**—ಯಾವುದು; **ಪೀಡಯಾ**—ಹಿಂಸೆಯಿಂದ; **ಕ್ರಿಯತೇ**—ಆಚರಿಸಲ್ಪಡುತ್ತದೋ; **ತಪಃ**—ತಪಸ್ಸು; **ಪರಸ್ಯ**—ಇತರರ; **ಉತ್ಸಾದನ ಅರ್ಥಮ್**—ನಾಶಮಾಡುವುದಕ್ಕಾಗಿ; **ವಾ**—ಅಥವಾ; **ತತ್**—ಅದು; **ತಾಮಸಮ್**—ತಾಮಸಗುಣದಲ್ಲಿ ಇರುವಂತಹದು; **ಉದಾಹೃತಮ್**—ಎಂದು ಹೇಳಲಾಗುತ್ತದೆ.

### ಅನುವಾದ

**ಮೂರ್ಖತನದಿಂದ ತನ್ನನ್ನೇ ಹಿಂಸೆ ಮಾಡಿಕೊಂಡು ಅಥವಾ ಇತರರನ್ನು ನಾಶಮಾಡಲು ಅಥವಾ ಅವರಿಗೆ ತೊಂದರೆ ಮಾಡಲು ಮಾಡುವ ತಪಸ್ಸು ತಾಮಸ ತಪಸ್ಸು ಎಂದು ಹೇಳಲಾಗುತ್ತದೆ.**

## ಭಾವಾರ್ಥ

ಹಿರಣ್ಯಕಶಿಪುವು ಅಮರನಾಗಲು ಮತ್ತು ದೇವತೆಗಳನ್ನು ಕೊಲ್ಲಲು ಕಠಿಣ ತಪಸ್ಸುಗಳನ್ನು ಮಾಡಿದನು. ಹೀಗೆ ಅಸುರರು ಮೂರ್ಖ ತಪಸ್ಸನ್ನು ಮಾಡಿದ ನಿದರ್ಶನಗಳಿವೆ. ಹಿರಣ್ಯಕಶಿಪುವು ಇಂತಹ ವರಗಳಿಗಾಗಿಯೇ ಬ್ರಹ್ಮನನ್ನು ಬೇಡಿದನು. ಆದರೆ ಕಟ್ಟಕಡೆಗೆ ದೇವೋತ್ತಮ ಪರಮ ಪುರುಷನು ಅವನನ್ನು ಕೊಂದನು. ಅಸಾಧ್ಯವಾದುದಕ್ಕಾಗಿ ತಪಸ್ಸನ್ನು ಮಾಡುವುದು ನಿಶ್ಚಯವಾಗಿಯೂ ತಾಮಸವಾದದ್ದು.

## ಶ್ಲೋಕ - 20

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥೨೦॥**

**ದಾತವ್ಯಮ್**—ದಾನಕ್ಕೆ ಅರ್ಹವಾದುದು; **ಇತಿ**—ಹೀಗೆ; **ಯತ್**—ಯಾವುದು; **ದಾನಮ್**—ದಾನವು; **ದೀಯತೇ**—ಕೊಡಲ್ಪಡುತ್ತದೋ; **ಅನುಪಕಾರಿಣೇ**—ಪ್ರತಿಫಲವನ್ನು ಗಮನಿಸದೆ; **ದೇಶೇ**—ವಿಶಿಷ್ಟ ಸ್ಥಳದಲ್ಲಿ; **ಕಾಲೇ**—ಯೋಗ್ಯ ಕಾಲದಲ್ಲಿ; **ಚ**—ಕೂಡ; **ಪಾತ್ರೇ**—ಅರ್ಹ ವ್ಯಕ್ತಿಗೆ; **ಚ**—ಮತ್ತು; **ತತ್**—ಆ; **ದಾನಮ್**—ದಾನವು; **ಸಾತ್ತ್ವಿಕಮ್**—ಸತ್ವಗುಣದಲ್ಲಿ ಇರುವಂತಹದು; **ಸ್ಮೃತಮ್**—ಎಂದು ಪರಿಗಣಿತವಾಗಿದೆ.

## ಅನುವಾದ

**ಪ್ರತಿಫಲದ ನಿರೀಕ್ಷಣೆಯಿಲ್ಲದೆ ಯೋಗ್ಯನಾದವನಿಗೆ ಸರಿಯಾದ ಕಾಲ ಮತ್ತು ದೇಶಗಳಲ್ಲಿ ಕರ್ತವ್ಯವೆಂದು ಮಾಡಿದ ದಾನವು ಸಾತ್ವಿಕ ದಾನ.**

## ಭಾವಾರ್ಥ

ವೇದಸಾಹಿತ್ಯದಲ್ಲಿ, ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ತೊಡಗಿದವವನಿಗೆ ದಾನವನ್ನು ಕೊಡುವುದು ಯೋಗ್ಯ ಎಂದು ಹೇಳಿದೆ. ವಿವೇಚನೆ ಇಲ್ಲದೆ ದಾನಮಾಡಲು ಹೇಳಿಲ್ಲ. ಆಧ್ಯಾತ್ಮಿಕ ಪರಿಪೂರ್ಣತೆಯನ್ನು ಯಾವಾಗಲೂ ಪರಿಗಣಿಸಬೇಕು. ಆದುದರಿಂದ ಯಾತ್ರಾ ಸ್ಥಳದಲ್ಲಿ, ಚಂದ್ರಗ್ರಹಣ ಮತ್ತು ಸೂರ್ಯಗ್ರಹಣಗಳ ಸಮಯದಲ್ಲಿ, ತಿಂಗಳಿನ ಕೊನೆಯಲ್ಲಿ ಇಲ್ಲವೆ ಯೋಗ್ಯ ಬ್ರಾಹ್ಮಣನಿಗೆ, ವೈಷ್ಣವನಿಗೆ (ಭಕ್ತನಿಗೆ) ಅಥವಾ ದೇವಾಲಯಗಳಲ್ಲಿ ದಾನ ಮಾಡುವುದು ಯೋಗ್ಯ ಎಂದು ಹೇಳಿದೆ. ಇಂತಹ ದಾನಗಳನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಕೊಡಬೇಕು. ಬಡಬಗ್ಗರಿಗೆ ಕೆಲವೊಮ್ಮೆ ಅನುಕಂಪದಿಂದ ದಾನವನ್ನು ಕೊಡುವುದುಂಟು. ಆದರೆ ಬಡವನಾದವನು ದಾನಕ್ಕೆ ಸರಿಯಾದ ಪಾತ್ರನಲ್ಲದಿದ್ದರೆ ಆಧ್ಯಾತ್ಮಿಕ ಮುನ್ನಡೆಯಾಗುವುದಿಲ್ಲ. ಇತರ ಮಾತುಗಳಲ್ಲಿ ಹೇಳುವುದಾದರೆ, ವೇದ ಸಾಹಿತ್ಯವು ವಿವೇಚನೆ ಇಲ್ಲದ ದಾನವನ್ನು ಯೋಗ್ಯ ಎಂದು ಹೇಳುವುದಿಲ್ಲ.

## ಶ್ಲೋಕ - 21

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ |**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ||೨೧||**

**ಯತ್**—ಯಾವುದು; **ತು**—ಆದರೆ; **ಪ್ರತಿ ಉಪಕಾರ ಅರ್ಥಮ್**—ಪ್ರತಿಫಲಾಪೇಕ್ಷೆಗಾಗಿ; **ಫಲಮ್**—ಫಲವನ್ನು; **ಉದ್ದಿಶ್ಯ**—ಬಯಸಿ; **ವಾ**—ಅಥವಾ; **ಪುನಃ**—ಮತ್ತೆ; **ದೀಯತೇ**—ಕೊಡಲ್ಪಡುತ್ತದೋ; **ಚ**—ಕೂಡ; **ಪರಿಕ್ಲಿಷ್ಟಮ್**—ಈರ್ಷ್ಯೆಪಡುತ್ತಾ; **ತತ್**—ಆ; **ದಾನಮ್**—ದಾನವು; **ರಾಜಸಮ್**—ರಾಜಸಗುಣದಲ್ಲಿ ಇರುವಂತಹದು; **ಸ್ಮೃತಮ್**—ಎಂದು ತಿಳಿಯಲಾಗುತ್ತದೆ.

## ಅನುವಾದ

**ಆದರೆ ಪ್ರತ್ಯುಪಕಾರದ ಬಯಕೆಯಿಂದ ಅಥವಾ ಕರ್ಮಫಲಾಪೇಕ್ಷೆಯಿಂದ ಅಥವಾ ಇಷ್ಟವಿಲ್ಲದೆ ನೀಡುವ ದಾನವನ್ನು ರಾಜಸ ಎಂದು ಹೇಳುತ್ತಾರೆ.**

## ಭಾವಾರ್ಥ

ಕೆಲವೊಮ್ಮೆ ಸ್ವರ್ಗಸಾಮ್ರಾಜ್ಯಕ್ಕೆ ಏರಲು, ಕೆಲವೊಮ್ಮೆ ತುಂಬ ಕ್ಲೇಶದಿಂದ ಮತ್ತು "ನಾನು ಈ ರೀತಿಯಲ್ಲಿ ಇಷ್ಟೇಕೆ ಖರ್ಚು ಮಾಡಿದೆ" ಎಂದು ಮುಂದೆ ಪಶ್ಚಾತ್ತಾಪಪಡುವಂತೆ ದಾನವನ್ನು ಕೊಡಲಾಗುತ್ತದೆ. ಕೆಲವೊಮ್ಮೆ ಮೇಲಿನವರು ವಿನಂತಿ ಮಾಡಿದರೆಂದು, ಉಪಕಾರ ಪ್ರಜ್ಞೆಯಿಂದ ದಾನವನ್ನು ನೀಡುತ್ತಾರೆ. ಈ ಬಗೆಯ ದಾನವನ್ನು ರಾಜಸಗುಣದಲ್ಲಿ ಕೊಟ್ಟರು ಎಂದು ಹೇಳುತ್ತಾರೆ.

ಇಂದ್ರಿಯ ಸುಖಕ್ಕೆ ನಿವಾಸವಾದ ಸಂಸ್ಥೆಗಳಿಗೆ ಕೊಡುಗೆಗಳನ್ನು ನೀಡುವ ಉದಾರವಾದ ಪ್ರತಿಷ್ಠಾನಗಳಿವೆ. ವೇದ ಧರ್ಮಗ್ರಂಥಗಳು ಇಂತಹ ದಾನವನ್ನು ಸಮರ್ಥಿಸುವುದಿಲ್ಲ. ಸಾತ್ವಿಕ ದಾನವನ್ನು ಮಾತ್ರ ಮಾಡಬೇಕೆಂದು ಹೇಳುತ್ತವೆ.

## ಶ್ಲೋಕ - 22

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ |**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ||೨೨||**

**ಅದೇಶ**—ಅಶುದ್ಧ ಸ್ಥಳ; **ಕಾಲೇ**—ಮತ್ತು ಅಪವಿತ್ರ ಕಾಲಗಳಲ್ಲಿ; **ಯತ್**—ಯಾವ; **ದಾನಮ್**—ದಾನವು; **ಅಪಾತ್ರೇಭ್ಯಃ**—ಅನರ್ಹ ವ್ಯಕ್ತಿಗಳಿಗೆ; **ಚ**—ಕೂಡ; **ದೀಯತೇ**—ಕೊಡಲ್ಪಡುತ್ತದೋ; **ಅಸತ್ ಕೃತಮ್**—ಗೌರವವಿಲ್ಲದೆ; **ಅವಜ್ಞಾತಮ್**—ಸಮರ್ಪಕ ಗಮನವಿಲ್ಲದೆ; **ತತ್**—ಅದು; **ತಾಮಸಮ್**—ತಾಮಸಗುಣದಲ್ಲಿ ಇರುವಂತಹದು; **ಉದಾಹೃತಮ್**—ಎಂದು ಹೇಳಲಾಗುತ್ತದೆ.

## ಅನುವಾದ

**ಅಶುಚಿಯಾದ ಸ್ಥಳದಲ್ಲಿ, ಅನುಚಿತವಾದ ಕಾಲದಲ್ಲಿ, ಅಪಾತ್ರನಿಗೆ ಕೊಟ್ಟ ದಾನ ಅಥವಾ ಯೋಗ್ಯ**

**ಲಕ್ಷ್ಯವಿಲ್ಲದೆ, ಗೌರವವಿಲ್ಲದೆ ಕೊಟ್ಟ ದಾನವನ್ನು ತಾಮಸ ದಾನ ಎಂದು ಕರೆಯುತ್ತಾರೆ.**

## ಭಾವಾರ್ಥ

ಮದ್ಯಪಾನ ಮತ್ತು ಜೂಜಾಟಗಳಲ್ಲಿ ತೊಡಗುವುದಕ್ಕೆ ನೀಡುವ ದಾನವನ್ನು ಇಲ್ಲಿ ಪ್ರೋತ್ಸಾಹಿಸಿಲ್ಲ. ಅಂತಹ ಕೊಡುಗೆಯು ತಾಮಸಗುಣಕ್ಕೆ ಸೇರಿದ್ದು. ಅಂತಹ ದಾನದಿಂದ ಒಳಿತಾಗುವುದಿಲ್ಲ; ಅದರ ಬದಲು ಪಾಪಿಗಳಿಗೆ ಪ್ರೋತ್ಸಾಹ ಸಿಗುತ್ತದೆ. ಹಾಗೆಯೇ ಯೋಗ್ಯವಾದ ಮನುಷ್ಯನಿಗೆ ಗೌರವ ಮತ್ತು ಲಕ್ಷ್ಯವಿಲ್ಲದೆ ದಾನವನ್ನು ನೀಡಿದರೆ, ಅದು ತಾಮಸಗುಣದಲ್ಲಿರುವುದು ಎಂದು ಹೇಳಿದೆ.

## ಶ್ಲೋಕ - 23

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ |**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ||೨೩||**

**ಓಮ್**—ಪರಮೋನ್ನತನ ಸೂಚಕವಾದ; **ತತ್**—ಅದು; **ಸತ್**—ಶಾಶ್ವತ; **ಇತಿ**—ಹೀಗೆ; **ನಿರ್ದೇಶಃ**—ನಿರ್ದೇಶನವು; **ಬ್ರಹ್ಮಣಃ**—ಪರಮೋನ್ನತನ; **ತ್ರಿವಿಧಃ**—ಮೂರು ಬಗೆಯದು; **ಸ್ಮೃತಃ**—ಎಂದು ಪರಿಗಣಿಸಲಾಗಿದೆ; **ಬ್ರಾಹ್ಮಣಾಃ**—ಬ್ರಾಹ್ಮಣರು; **ತೇನ**—ಅದರಿಂದ; **ವೇದಾಃ**—ವೇದ ಸಾಹಿತ್ಯವು; **ಚ**—ಕೂಡ; **ಯಜ್ಞಾಃ**—ಯಜ್ಞಗಳು; **ಚ**—ಕೂಡ; **ವಿಹಿತಾಃ**—ಉಪಯೋಗಿಸಲ್ಪಟ್ಟಿವೆ; **ಪುರಾ**—ಹಿಂದೆಯೇ.

## ಅನುವಾದ

**ಸೃಷ್ಟಿಯಾದ ಕಾಲದಿಂದ ಓಂ ತತ್ ಸತ್ ಎನ್ನುವ ಪದಗಳನ್ನು ಪರಮ ಪರಿಪೂರ್ಣ ಸತ್ಯವನ್ನು ನಿರ್ದೇಶಿಸಲು ಬಳಸಲಾಯಿತು. ವೇದ ಸ್ತೋತ್ರಗಳನ್ನು ಹೇಳುವಾಗ ಮತ್ತು ಪರಮ ಪ್ರಭುವಿನ ಸುಪ್ರೀತಿಗಾಗಿ ಮಾಡುವ ಯಜ್ಞಗಳಲ್ಲಿ ಬ್ರಾಹ್ಮಣರು ಈ ಮೂರು ಸಂಕೇತಗಳನ್ನು ಬಳಸುತ್ತಿದ್ದರು.**

## ಭಾವಾರ್ಥ

ತಪಸ್ಸು, ಯಜ್ಞ, ಜ್ಞಾನ ಮತ್ತು ಆಹಾರಗಳನ್ನು ಸಾತ್ವಿಕ, ರಾಜಸ ಮತ್ತು ತಾಮಸ ಗುಣಗಳ ಮೂರು ಮಾರ್ಗಗಳಾಗಿ ವಿಭಾಗಿಸಲಾಗಿದೆ ಎಂದು ಆಗಲೇ ವಿವರಿಸಲಾಗಿದೆ. ಆದರೆ ಮೊದಲನೆಯ ವರ್ಗವಾಗಲೀ, ಎರಡನೆಯ ವರ್ಗವಾಗಲೀ ಅಥವಾ ಮೂರನೆಯ ವರ್ಗವಾಗಲೀ, ಅವೆಲ್ಲ ಐಹಿಕ ಪ್ರಕೃತಿಯ ಸೋಂಕಿನಿಂದ ಬದ್ಧವಾಗಿದೆ. **ಓಂ ತತ್ ಸತ್,** ದೇವೋತ್ತಮ ಪರಮ ಪುರುಷ, ಶಾಶ್ವತ ಆಗಿರುವ ಪರಮ ಪ್ರಭುವನ್ನು ಉದ್ದೇಶಿಸಿ ಅವನ್ನು ಬಳಸಿದಾಗ ಅವು ಆಧ್ಯಾತ್ಮಿಕ ಉನ್ನತಿಯ ಸಾಧನಗಳಾಗುತ್ತವೆ. ಧರ್ಮಗ್ರಂಥಗಳ ಆದೇಶಗಳಲ್ಲಿ ಇಂತಹ ಗುರಿಯನ್ನು ಸೂಚಿಸಿದೆ. **ಓಂ ತತ್ ಸತ್** ಈ ಮೂರು ಪದಗಳು ವಿಶೇಷವಾಗಿ ದೇವೋತ್ತಮ ಪರಮ ಪುರುಷನಾದ ಪರಮಸತ್ಯವನ್ನು ಸೂಚಿಸುತ್ತವೆ. **ಓಂ** ಎನ್ನುವ ಪದವು ಎಲ್ಲ ವೇದಸ್ತೋತ್ರಗಳಲ್ಲಿಯೂ ಕಾಣುತ್ತದೆ.

ಧರ್ಮಗ್ರಂಥಗಳ ನಿಯಮಗಳನ್ನು ಅನುಸರಿಸದೆ ಕರ್ಮಮಾಡುವವನು ಪರಮ ಸತ್ಯವನ್ನು ಪಡೆಯಲಾರ. ಅವನಿಗೆ ಅಲ್ಪಕಾಲದ ಒಂದಿಷ್ಟು ಫಲ ದೊರೆಯುತ್ತದೆ. ಆದರೆ ಬಾಳಿನ ಕಟ್ಟಕಡೆಯ ಗುರಿ ಲಭ್ಯವಾಗುವುದಿಲ್ಲ. ಇದರ ನಿರ್ಣಯವೆಂದರೆ ದಾನ, ಯಜ್ಞ ಮತ್ತು ತಪಸ್ಸುಗಳನ್ನು ಸಾತ್ವಿಕವಾಗಿ ಮಾಡಬೇಕು. ರಾಜಸವಾಗಿ ಅಥವಾ ತಾಮಸವಾಗಿ ಮಾಡಿದಾಗ ನಿಶ್ಚಯವಾಗಿಯೂ ಅವುಗಳ ಗುಣಮಟ್ಟವು ಕ್ಷೀಣಿಸುತ್ತದೆ. **ಓಂ ತತ್ ಸತ್** ಮೂರು ಪದಗಳನ್ನು ಪರಮ ಪ್ರಭುವಿನ ಪಾವನ ನಾಮವಾದ **ಓಂ ತದ್ ವಿಷ್ಣೋಃ** ಎನ್ನುವುದರೊಂದಿಗೆ ಉಚ್ಚರಿಸುತ್ತಾರೆ. ವೇದದ ಒಂದು ಸ್ತೋತ್ರವನ್ನೋ ಪರಮ ಪ್ರಭುವಿನ ಪಾವನ ನಾಮವನ್ನೋ ಹೇಳಿದಾಗಲೆಲ್ಲಾ **ಓಂ** ಅನ್ನು ಸೇರಿಸುತ್ತಾರೆ. ಇದು ವೇದ ಸಾಹಿತ್ಯದ ಸೂಚನೆ. ಈ ಮೂರು ಪದಗಳನ್ನು ವೇದದ ಸ್ತೋತ್ರಗಳಿಂದ ತೆಗೆದುಕೊಂಡಿದೆ. **ಓಂ ಇತಿ ಏತದ್ ಬ್ರಹ್ಮಣೋ ನೇದಿಷ್ಠಂ ನಾಮ** (ಋಗ್ವೇದ) ಎನ್ನುವುದು ಮೊದಲನೆಯ ಗುರಿಯನ್ನು ಸೂಚಿಸುತ್ತದೆ. **ತತ್ ತ್ವಮ್ ಅಸಿ** (ಛಾಂದೋಗ್ಯ ಉಪನಿಷತ್ತು 6.8.7) ಎನ್ನುವುದು ಎರಡನೆಯ ಗುರಿಯನ್ನು ಸೂಚಿಸುತ್ತದೆ. **ಸದ್ ಏವ ಸೌಮ್ಯ** (ಛಾಂದೋಗ್ಯ ಉಪನಿಷತ್ತು 6.2.1) ಎನ್ನುವುದು ಮೂರನೆಯ ಗುರಿಯನ್ನು ಸೂಚಿಸುತ್ತದೆ. ಇವನ್ನು ಸೇರಿಸಿದಾಗ **ಓಂ ತತ್ ಸತ್** ಆಗುತ್ತದೆ. ಹಿಂದೆ ಮೊಟ್ಟಮೊದಲನೆಯದಾಗಿ ಸೃಷ್ಟಿಯಾದ ಜೀವಿ ಬ್ರಹ್ಮನು ಯಜ್ಞಗಳನ್ನು ಮಾಡಿದಾಗ, ಈ ಮೂರು ಶಬ್ದಗಳಿಂದ ಅವನು ದೇವೋತ್ತಮ ಪರಮ ಪುರುಷನನ್ನು ನಿರ್ದೇಶಿಸಿದನು. ಆದುದರಿಂದ ಗುರು ಶಿಷ್ಯ ಪರಂಪರೆಯಲ್ಲಿ ಇದೇ ತತ್ವವನ್ನು ಯಾವಾಗಲೂ ಅನುಸರಿಸಿದೆ. ಆದುದರಿಂದ ಈ ಸ್ತೋತ್ರಕ್ಕೆ ಬಹು ಮಹತ್ವವಿದೆ. ಈ ಕಾರಣಕ್ಕಾಗಿ ಯಾವ ಕರ್ಮವನ್ನೇ ಆಗಲಿ **ಓಂ ತತ್ ಸತ್**ಗಾಗಿ, ಎಂದರೆ ದೇವೋತ್ತಮ ಪರಮ ಪುರುಷನಿಗಾಗಿ ಮಾಡುವುದು ಯೋಗ್ಯ ಎಂದು ಭಗವದ್ಗೀತೆಯು ಸೂಚಿಸುತ್ತದೆ. ಈ ಮೂರು ಪದಗಳೊಡನೆ ಮನುಷ್ಯನು ತಪಸ್ಸು, ದಾನ ಮತ್ತು ಯಜ್ಞಗಳನ್ನು ಮಾಡಿದಾಗ ಅವನು ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುತ್ತಿದ್ದಾನೆ. ಕೃಷ್ಣಪ್ರಜ್ಞೆಯು ಆಧ್ಯಾತ್ಮಿಕ ಕರ್ಮಗಳ ವೈಜ್ಞಾನಿಕ ನಿರ್ವಹಣೆ. ಅದು ಮನುಷ್ಯನು ಮರಳಿ ಭಗವದ್ಧಾಮಕ್ಕೆ ಹಿಂದಿರುಗುವುದನ್ನು ಸಾಧ್ಯಮಾಡುತ್ತದೆ. ಇಂತಹ ಆಧ್ಯಾತ್ಮಿಕ ರೀತಿಯಲ್ಲಿ ಕರ್ಮವನ್ನು ಮಾಡಿದರೆ ಶಕ್ತಿಯು ನಷ್ಟವಾಗುವುದಿಲ್ಲ.

## ಶ್ಲೋಕ - 24

**ತಸ್ಮಾದ್ ಓಂ ಇತ್ಯುದಾಹೃತ್ಯ ಯಜ್ಞದಾನ ತಪಃ ಕ್ರಿಯಾಃ |**
**ಪ್ರವರ್ತನ್ತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ||೨೪||**

**ತಸ್ಮಾತ್**—ಆದ್ದರಿಂದ; **ಓಮ್**—ಓಂಕಾರದಿಂದ ಆರಂಭಿಸಿ; **ಇತಿ**—ಹೀಗೆ; **ಉದಾಹೃತ್ಯ**—ಸೂಚಿಸುತ್ತ; **ಯಜ್ಞ**—ಯಾಗ; **ದಾನ**—ದಾನ; **ತಪಃ**—ತಪಸ್ಸು; **ಕ್ರಿಯಾಃ**—ಆಚರಣೆಗಳು; **ಪ್ರವರ್ತನ್ತೇ**—ಪ್ರಾರಂಭವಾಗುತ್ತವೆ; **ವಿಧಾನ ಉಕ್ತಾಃ**—ಶಾಸ್ತ್ರಗಳ ನಿಯಮಕ್ಕನುಗುಣವಾಗಿ; **ಸತತಮ್**—ಯಾವಾಗಲೂ; **ಬ್ರಹ್ಮವಾದಿನಾಮ್**—ಆಧ್ಯಾತ್ಮಿಕವಾದಿಗಳ.

## ಅನುವಾದ

**ಆದುದರಿಂದ ಧರ್ಮಗ್ರಂಥಗಳ ನಿಯಮಗಳಿಗೆ ಅನುಗುಣವಾಗಿ ಯಜ್ಞ, ದಾನ ಮತ್ತು ತಪಸ್ಸುಗಳ ಆಚರಣೆಯನ್ನು ಕೈಗೊಳ್ಳುವ ಅಧ್ಯಾತ್ಮವಾದಿಗಳು ಪರಮ ಸತ್ಯವನ್ನು ಪಡೆಯಲು ಯಾವಾಗಲೂ ಓಂ ನಿಂದ ಪ್ರಾರಂಭಿಸುತ್ತಾರೆ.**

## ಭಾವಾರ್ಥ

**ಓಂ ತದ್ ವಿಷ್ಣೋಃ ಪರಮಂ ಪದಂ** (ಋಗ್ವೇದ 1.22.20) ವಿಷ್ಣುವಿನ ಪಾದಪದ್ಮಗಳು ಪರಮ ಭಕ್ತಿಯ ವೇದಿಕೆ. ಎಲ್ಲವನ್ನೂ ದೇವೋತ್ತಮ ಪರಮ ಪುರುಷನ ಪರವಾಗಿ ಮಾಡುವುದರಿಂದ ಎಲ್ಲ ಕರ್ಮಗಳೂ ಪರಿಪೂರ್ಣವಾಗುವುದು ಖಂಡಿತ.

## ಶ್ಲೋಕ - 25

**ತದಿತ್ಯನಭಿಸನ್ಧಾಯ ಫಲಂ ಯಜ್ಞತಪಃ ಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷಕಾಂಕ್ಷಿಭಿಃ ॥೨೫॥**

**ತತ್**—ಅದು; **ಇತಿ**—ಹೀಗೆ; **ಅನಭಿಸನ್ಧಾಯ**—ಅಪೇಕ್ಷಿಸದೆ; **ಫಲಮ್**—ಕಾಮ್ಯ ಫಲವನ್ನು; **ಯಜ್ಞ**—ಯಜ್ಞ; **ತಪಃ**—ತಪಸ್ಸುಗಳ; **ಕ್ರಿಯಾಃ**—ಚಟುವಟಿಕೆಗಳು; **ದಾನ**—ದಾನದ; **ಕ್ರಿಯಾಃ**— ಕ್ರಿಯೆಗಳು; **ಚ**—ಕೂಡ; **ವಿವಿಧಾಃ**—ಬಗೆ ಬಗೆಯ; **ಕ್ರಿಯನ್ತೇ**—ಮಾಡಲ್ಪಡುತ್ತವೆ; **ಮೋಕ್ಷ ಕಾಂಕ್ಷಿಭಿಃ**—ನಿಜವಾಗಿ ಮೋಕ್ಷವನ್ನು ಅಪೇಕ್ಷಿಸುವವರಿಂದ.

## ಅನುವಾದ

**ಮನುಷ್ಯನು ಯಾವ ಫಲಾಪೇಕ್ಷೆಯಿಲ್ಲದೆ 'ತತ್' ಎಂಬ ಪದವನ್ನು ಉಚ್ಚರಿಸಿ, ವಿವಿಧ ಬಗೆಗಳ ಯಜ್ಞ, ತಪಸ್ಸು ಮತ್ತು ದಾನಗಳನ್ನು ಮಾಡಬೇಕು. ಇಂತಹ ಆಧ್ಯಾತ್ಮಿಕ ಕರ್ಮಗಳ ಉದ್ದೇಶ ಮೋಕ್ಷವನ್ನು ಪಡೆಯುವುದು.**

## ಭಾವಾರ್ಥ

ಆಧ್ಯಾತ್ಮಿಕ ಸ್ಥಾನಕ್ಕೆ ಏರಲು ಬಯಸುವ ಮನುಷ್ಯನು ಯಾವುದೇ ಐಹಿಕ ಲಾಭಕ್ಕಾಗಿ ಕರ್ಮ ಮಾಡಬಾರದು. ಆಧ್ಯಾತ್ಮಿಕ ರಾಜ್ಯವಾದ ಭಗವದ್ಧಾಮಕ್ಕೆ ಹಿಂದಿರುಗುವ ಕಟ್ಟಕಡೆಯ ಲಾಭಕ್ಕಾಗಿ ಕರ್ಮಗಳನ್ನು ಮಾಡಬೇಕು.

## ಶ್ಲೋಕ 26-27

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥೨೬॥**

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ |**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ||೨೭||**

**ಸತ್ ಭಾವೇ**—ಪರಮೋನ್ನತನ ಸ್ವಭಾವದ ವಸ್ತುತಃ ಜ್ಞಾನದಲ್ಲಿ; **ಸಾಧುಭಾವೇ**—ಭಕ್ತನ ಸ್ವಭಾವದ ವಸ್ತುತಃ ಜ್ಞಾನದಲ್ಲಿ; **ಚ**—ಕೂಡ; **ಸತ್**—ಸತ್ ಶಬ್ದವು; **ಇತಿ**—ಹೀಗೆ; **ಏತತ್**—ಈ; **ಪ್ರಯುಜ್ಯತೇ**—ಉಪಯೋಗಿಸಲ್ಪಡುತ್ತದೆ; **ಪ್ರಶಸ್ತೇ**—ಪರಂಪರಾಗತ; **ಕರ್ಮಣಿ**—ಕಾರ್ಯಗಳಲ್ಲಿ; **ತಥಾ**—ಕೂಡ; **ಸತ್ ಶಬ್ದಃ**—ಸತ್ ಶಬ್ದವು; **ಪಾರ್ಥ**—ಪಾರ್ಥನೇ; **ಯುಜ್ಯತೇ**—ಉಪಯೋಗಿಸಲ್ಪಡುತ್ತದೆ; **ಯಜ್ಞೇ**—ಯಜ್ಞದಲ್ಲಿ; **ತಪಸಿ**—ತಪಸ್ಸಿನಲ್ಲಿ; **ದಾನೇ**—ದಾನದಲ್ಲಿ; **ಚ**—ಕೂಡ; **ಸ್ಥಿತಿಃ**—ಸನ್ನಿವೇಶವು; **ಸತ್**—ಪರಮ; **ಇತಿ**—ಎಂದು; **ಚ**—ಮತ್ತು; **ಉಚ್ಯತೇ**—ಉಚ್ಚರಿತವಾಗುತ್ತದೆ; **ಕರ್ಮ**—ಕರ್ಮವು; **ಚ**—ಕೂಡ; **ಏವ**—ಖಂಡಿತವಾಗಿಯೂ; **ತತ್**—ಅದಕ್ಕಾಗಿ; **ಅರ್ಥೀಯಮ್**—ಉದ್ದೇಶಿತವಾದ; **ಸತ್**—ಪರಮ; **ಇತಿ**—ಎಂದು; **ಏವ**—ಖಂಡಿತವಾಗಿಯೂ; **ಅಭಿಧೀಯತೇ**—ಸೂಚಿಸಲ್ಪಡುತ್ತದೆ.

## ಅನುವಾದ

**ಅರ್ಜುನನೆ! ಭಕ್ತಿಸೇವೆಯ ಗುರಿಯು ಪರಿಪೂರ್ಣ ಸತ್ಯ. ಅದನ್ನು 'ಸತ್' ಎನ್ನುವ ಪದವು ಸೂಚಿಸುತ್ತದೆ. ಇಂತಹ ಯಜ್ಞಗಳನ್ನು ಮಾಡುವಾತನನ್ನು ಮತ್ತು ಪರಮ ಪುರುಷನ ಸುಪ್ರೀತಿಗಾಗಿ ದಿವ್ಯಸ್ವಭಾವಕ್ಕೆ ನಿಷ್ಠವಾಗಿ ನಡೆಸುವ ಎಲ್ಲ ಯಜ್ಞ, ತಪಸ್ಸು ಮತ್ತು ದಾನಗಳನ್ನು 'ಸತ್' ಎಂದು ಕರೆಯುತ್ತಾರೆ.**

## ಭಾವಾರ್ಥ

**ಪ್ರಶಸ್ತೇ ಕರ್ಮಣಿ** ಅಥವಾ 'ವಿಧಿಸಿದ ಕರ್ತವ್ಯಗಳು' ಎನ್ನುವ ಮಾತು ವೇದ ಸಾಹಿತ್ಯದಲ್ಲಿ ಶುದ್ಧಿಯ ವಿಧಾನಗಳಾಗಿ ಹೇಳಿರುವ ಹಲವಾರು ಕರ್ಮಗಳನ್ನು ಸೂಚಿಸುತ್ತದೆ; ಈ ಸಂಸ್ಕಾರಗಳು ಗರ್ಭಧಾರಣೆಯ ಸಮಯದಿಂದ ಮನುಷ್ಯನ ಜೀವನದ ಕೊನೆಯವರೆಗೆ ನಡೆಸಬೇಕಾದವು. ಜೀವಿಯ ಕಟ್ಟಕಡೆಯ ಮುಕ್ತಿಗಾಗಿ ಇಂತಹ ಸಂಸ್ಕಾರಗಳನ್ನು ಆಚರಿಸಲಾಗುವುದು. ಇಂತಹ ಎಲ್ಲ ಕರ್ಮಗಳಲ್ಲಿ **ಓಂ ತತ್ ಸತ್** ಎನ್ನುವ ಮಾತುಗಳನ್ನು ಉಚ್ಚರಿಸಬೇಕೆಂದು ಸೂಚಿಸಿದೆ. **ಸದ್ಭಾವೇ** ಮತ್ತು **ಸಾಧುಭಾವೇ** ಎನ್ನುವ ಮಾತುಗಳು ಆಧ್ಯಾತ್ಮಿಕ ಸ್ಥಿತಿಯನ್ನು ಸೂಚಿಸುತ್ತವೆ. ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದಕ್ಕೆ ಸತ್ತ್ವ ಎಂದು ಹೆಸರು; ಕೃಷ್ಣಪ್ರಜ್ಞೆಯ ಕರ್ಮಗಳ ಸಂಪೂರ್ಣ ಅರಿವು ಇರುವವನಿಗೆ ಸಾಧು ಎಂದು ಹೆಸರು. ಆಧ್ಯಾತ್ಮಿಕ ವಸ್ತುವು ಭಕ್ತರ ಸಹವಾಸದಲ್ಲಿ ಸ್ಪಷ್ಟವಾಗುತ್ತದೆ ಎಂದು ಶ್ರೀಮದ್ಭಾಗವತದಲ್ಲಿ ಹೇಳಿದೆ (3.25.25). ಅಲ್ಲಿ ಬಳಸಿರುವ ಮಾತುಗಳು **ಸತಾಂ ಪ್ರಸನ್ಗಾತ್.** ಸತ್ಸಂಗವಿಲ್ಲದೆ ಮನುಷ್ಯನು ದಿವ್ಯ ಜ್ಞಾನವನ್ನು ಪಡೆಯಲಾರ. ಮನುಷ್ಯನಿಗೆ ದೀಕ್ಷೆ ಕೊಡುವಾಗ ಅಥವಾ ಉಪವೀತವನ್ನು ಧಾರಣೆಮಾಡಿಸುವಾಗ **ಓಂ ತತ್ ಸತ್** ಎನ್ನುವ ಪದಗಳನ್ನು ಉಚ್ಚರಿಸಲಾಗುತ್ತದೆ. ಹೀಗೆಯೇ ಎಲ್ಲ ಯಜ್ಞಗಳ ಆಚರಣೆಯ ಗುರಿಯು ಪರಮ ಪ್ರಭು ಅಥವಾ **ಓಂ ತತ್ ಸತ್. ತದರ್ಥೀಯಮ್** ಎನ್ನುವ ಶಬ್ದದ ಅರ್ಥವೆಂದರೆ ಪರಮ ಪ್ರಭುವನ್ನು ಪ್ರತಿನಿಧಿಸುವ ಯಾವುದಕ್ಕಾದರೂ ಸೇವೆ ಸಲ್ಲಿಸುವುದು. ಇದರಲ್ಲಿ ಭಗವಂತನ ದೇವಸ್ಥಾನದಲ್ಲಿ ಅಡಿಗೆ ಮಾಡುವುದು, ಸಹಾಯ ಮಾಡುವುದು, ಅಥವಾ ಪ್ರಭುವಿನ ಮಹಿಮೆಯನ್ನು ಪ್ರಸಾರಮಾಡುವ ಬೇರೆ ಯಾವುದೇ ಕೆಲಸ ಮಾಡುವುದೂ

ಸೇರಿರುತ್ತದೆ. ಹೀಗೆ ಓಂ ತತ್ ಸತ್ ಎನ್ನುವ ಪರಮ ಪದಗಳನ್ನು ಎಲ್ಲ ಕರ್ಮಗಳನ್ನೂ ಪರಿಪೂರ್ಣಗೊಳಿಸಿ, ಎಲ್ಲವನ್ನೂ ಪೂರ್ಣಮಾಡಲು ಅನೇಕ ರೀತಿಗಳಲ್ಲಿ ಬಳಸಲಾಗುತ್ತದೆ.

## ಶ್ಲೋಕ - 28

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ |**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ||೨೮||**

**ಅಶ್ರದ್ಧಯಾ**—ಶ್ರದ್ಧೆಯಿಲ್ಲದೆ; **ಹುತಮ್**—ಯಜ್ಞದಲ್ಲಿ ಅರ್ಪಿಸಲ್ಪಟ್ಟಿದ್ದು; **ದತ್ತಮ್**—ನೀಡಲ್ಪಟ್ಟಿದ್ದು; **ತಪಃ**—ತಪಸ್ಸು; **ತಪ್ತಮ್**—ಆಚರಿಸಲ್ಪಟ್ಟ; **ಕೃತಮ್**—ಅನುಷ್ಠಾನ ಮಾಡಲ್ಪಟ್ಟಿದ್ದು; **ಚ**—ಕೂಡ; **ಯತ್**—ಯಾವುದೋ; **ಅಸತ್**—ಮಿಥ್ಯೆ; **ಇತಿ**—ಎಂದು; **ಉಚ್ಯತೇ**—ಹೇಳಲ್ಪಡುತ್ತದೆ; **ಪಾರ್ಥ**—ಪೃಥೆಯ ಪುತ್ರನೇ; **ನ**—ಎಂದಿಗೂ ಇಲ್ಲ; **ಚ**—ಕೂಡ; **ತತ್**—ಅದು; **ಪ್ರೇತ್ಯ**—ಮರಣದ ಅನಂತರ; **ನ ಉ**—ಅಥವಾ ಇಲ್ಲ; **ಇಹ**—ಈ ಜನ್ಮದಲ್ಲಿ.

## ಅನುವಾದ

**ಅರ್ಜುನನೆ! ಪರಮ ಪ್ರಭುವಿನಲ್ಲಿ ಶ್ರದ್ಧೆಯಿಲ್ಲದೆ ಮಾಡಿದ ಯಾವುದೇ ಯಜ್ಞ, ದಾನ ಅಥವಾ ತಪಸ್ಸು ಅಶಾಶ್ವತ. ಅದನ್ನು 'ಅಸತ್' ಎಂದು ಕರೆಯುತ್ತಾರೆ.**

## ಭಾವಾರ್ಥ

ಯಜ್ಞವಾಗಲಿ, ದಾನವಾಗಲಿ, ತಪಸ್ಸಾಗಲಿ ಈ ಆಧ್ಯಾತ್ಮಿಕ ಗುರಿ ಇಲ್ಲದೆ ಏನನ್ನು ಮಾಡಿದರೂ ಅದು ನಿರರ್ಥಕ. ಆದುದರಿಂದ ಅಂತಹ ಕರ್ಮಗಳು ಅಸಹ್ಯಕರವಾದವು ಎಂದು ಈ ಶ್ಲೋಕದಲ್ಲಿ ಹೇಳಿದೆ. ಎಲ್ಲವನ್ನೂ ಕೃಷ್ಣಪ್ರಜ್ಞೆಯಲ್ಲಿ ಪರಮ ಪ್ರಭುವಿಗಾಗಿ ಮಾಡಬೇಕು. ಇಂತಹ ಶ್ರದ್ಧೆ ಮತ್ತು ಯೋಗ್ಯವಾದ ಮಾರ್ಗದರ್ಶನ ಇಲ್ಲದೆ ಹೋದರೆ ಫಲ ದೊರೆಯುವುದೇ ಇಲ್ಲ. ಎಲ್ಲ ವೇದಸಾಹಿತ್ಯದಲ್ಲಿಯೂ ಪರಮ ಪ್ರಭುವಿನಲ್ಲಿ ಶ್ರದ್ಧೆಯನ್ನು ಇಟ್ಟಿರಬೇಕು ಎಂದು ಹೇಳಿದೆ. ಎಲ್ಲ ವೈದಿಕ ಆದೇಶಗಳನ್ನು ಅನುಸರಿಸುವಾಗಲೂ ಕಡೆಯ ಗುರಿಯು ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು. ಈ ತತ್ವವನ್ನು ಅನುಸರಿಸದೆ ಯಾರಿಗೂ ಜಯವು ದೊರೆಯುವುದಿಲ್ಲ. ಆದುದರಿಂದ ಅತ್ಯುತ್ತಮ ಮಾರ್ಗ ಎಂದರೆ, ಪ್ರಾರಂಭದಿಂದಲೂ ಸದ್ಗುರುವಿನ ಮಾರ್ಗದರ್ಶನದಲ್ಲಿ ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವುದು. ಸಕಲ ಕಾರ್ಯಗಳಲ್ಲಿ ಯಶಸ್ಸುಗಳಿಸಲು ಇದೇ ಮಾರ್ಗವಾಗಿದೆ.

ಬದ್ಧಸ್ಥಿತಿಯಲ್ಲಿ ಜನರು, ದೇವತೆಗಳು, ಪ್ರೇತಗಳು ಮತ್ತು ಕುಬೇರನಂತಹ ಯಕ್ಷರ ಪೂಜೆಗೆ ಆಕರ್ಷಿತರಾಗುತ್ತಾರೆ. ಸತ್ವಗುಣವು ರಾಜಸ ಮತ್ತು ತಾಮಸ ಗುಣಗಳಿಗಿಂತ ಉತ್ತಮವಾದದ್ದು, ಆದರೆ ನೇರವಾಗಿ ಕೃಷ್ಣಪ್ರಜ್ಞೆಯನ್ನು ಅನುಸರಿಸುವವನು ಐಹಿಕ ಪ್ರಕೃತಿಯ ಮೂರು ಗುಣಗಳಿಗೂ ಅತೀತನಾಗುತ್ತಾನೆ. ಕ್ರಮಕ್ರಮವಾಗಿ ಮೇಲೇರುವ ಪ್ರಕ್ರಿಯೆಯೊಂದು ಇದ್ದರೂ, ಪರಿಶುದ್ಧ ಭಕ್ತರ ಸಹವಾಸದಲ್ಲಿ ಮನುಷ್ಯನು ನೇರವಾಗಿ ಕೃಷ್ಣಪ್ರಜ್ಞೆಯನ್ನು ಅನುಸರಿಸಿದರೆ, ಅದೇ ಅತ್ಯುತ್ತಮ ಮಾರ್ಗ. ಈ ಅಧ್ಯಾಯದಲ್ಲಿ ಅದನ್ನೇ ಮಾಡಬೇಕೆಂದು

ಹೇಳಿದೆ. ಈ ರೀತಿಯಲ್ಲಿ ಯಶಸ್ವಿಯಾಗಲು, ಮನುಷ್ಯನು ಯೋಗ್ಯವಾದ ಗುರುವನ್ನು ಪಡೆದುಕೊಳ್ಳಬೇಕು ಮತ್ತು ಅವನ ಮಾರ್ಗದರ್ಶನದಲ್ಲಿ ಶಿಕ್ಷಣವನ್ನು ಪಡೆಯಬೇಕು. ಆಗ ಮನುಷ್ಯನಿಗೆ ಪರಮ ಪ್ರಭುವಿನಲ್ಲಿ ಶ್ರದ್ಧೆಯು ಬೆಳೆಯುತ್ತದೆ. ಆ ಶ್ರದ್ಧೆಯು ಕಾಲಕ್ರಮೇಣ ಪರಿಪಕ್ವವಾದಾಗ, ಅದನ್ನು ದೇವರಲ್ಲಿ ಪ್ರೇಮ ಎಂದು ಕರೆಯುತ್ತಾರೆ. ಜೀವಿಗಳ ಪರಮ ಗುರಿ ಈ ಪ್ರೇಮವೇ. ಆದುದರಿಂದ ಮನುಷ್ಯನು ನೇರವಾಗಿ ಕೃಷ್ಣಪ್ರಜ್ಞೆಯನ್ನು ಅನುಸರಿಸಬೇಕು. ಹದಿನೇಳನೆಯ ಅಧ್ಯಾಯದ ಸಂದೇಶ ಇದೇ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಶ್ರದ್ಧೆಯ ಪ್ರಬೇಧಗಳು" ಎಂಬ ಹದಿನೇಳನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

## ಅಧ್ಯಾಯ - 18

# ಉಪಸಂಹಾರ — ವೈರಾಗ್ಯದ ಪರಿಪೂರ್ಣತೆ

### ಶ್ಲೋಕ - 1

**ಅರ್ಜುನ ಉವಾಚ**

**ಸನ್ನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ |**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿ ನಿಷೂದನ ||೧||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ಸನ್ನ್ಯಾಸಸ್ಯ**—ಸನ್ಯಾಸದ; **ಮಹಾಬಾಹೋ**—ಮಹಾಬಾಹುವೇ; **ತತ್ತ್ವಮ್**—ಸತ್ಯವನ್ನು; **ಇಚ್ಛಾಮಿ**—ಬಯಸುತ್ತೇನೆ; **ವೇದಿತುಮ್**—ತಿಳಿಯಲು; **ತ್ಯಾಗಸ್ಯ**—ತ್ಯಾಗದ; **ಚ**—ಕೂಡ; **ಹೃಷೀಕೇಶ**—ಇಂದ್ರಿಯಗಳ ಒಡೆಯನೇ; **ಪೃಥಕ್**—ಪ್ರತ್ಯೇಕವಾಗಿ; **ಕೇಶಿ ನಿಷೂದನ**—ಕೇಶಿದೈತ್ಯನನ್ನು ಕೊಂದವನೇ.

### ಅನುವಾದ

**ಅರ್ಜುನನು ಹೇಳಿದನು — ಮಹಾಬಾಹುವೇ, ಕೇಶಿರಾಕ್ಷಸನನ್ನು ಕೊಂದವನೇ, ಹೃಷೀಕೇಶನೇ, ತ್ಯಾಗ ಮತ್ತು ಸನ್ಯಾಸಗಳ ಉದ್ದೇಶವನ್ನು ತಿಳಿದುಕೊಳ್ಳಲು ನಾನು ಬಯಸುತ್ತೇನೆ.**

### ಭಾವಾರ್ಥ

ವಾಸ್ತವವಾಗಿ ಭಗವದ್ಗೀತೆಯು ಹದಿನೇಳು ಅಧ್ಯಾಯಗಳಲ್ಲಿ ಮುಗಿಯುತ್ತದೆ. ಹದಿನೆಂಟನೆಯ ಅಧ್ಯಾಯವು ಮೊದಲು ಚರ್ಚೆ ಮಾಡಿದ ವಿಷಯಗಳ ಹೆಚ್ಚುವರಿ ಸಂಗ್ರಹ. ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿಯೂ ಕೃಷ್ಣನು, ದೇವೋತ್ತಮ ಪರಮ ಪುರುಷನ ಭಕ್ತಿಸೇವೆಯೇ ಬದುಕಿನ ಪರಮಗುರಿ ಎಂದು ಒತ್ತಿಹೇಳುತ್ತ ಬಂದಿದ್ದಾನೆ. ಹದಿನೆಂಟನೆಯ ಅಧ್ಯಾಯದಲ್ಲಿ ಇದೇ ಅಂಶವನ್ನು ಅತ್ಯಂತ ಗುಪ್ತವಾದ ಜ್ಞಾನಮಾರ್ಗ ಎಂದು ಸಂಗ್ರಹವಾಗಿ ಹೇಳಿದೆ. ಮೊದಲ ಆರು ಅಧ್ಯಾಯಗಳಲ್ಲಿ ಭಕ್ತಿಸೇವೆಗೆ ಒತ್ತು ಕೊಡಲಾಗಿದೆ. **ಯೋಗಿನಾಮ್ ಅಪಿ ಸರ್ವೇಷಾಮ್** ...... "ಎಲ್ಲ ಯೋಗಿಗಳಲ್ಲಿ, ಸದಾ ನನ್ನನ್ನೇ ಕುರಿತು ತನ್ನಲ್ಲೇ ಯೋಚಿಸುವವನೇ ಶ್ರೇಷ್ಠನು. " ಅನಂತರದ ಆರು ಅಧ್ಯಾಯಗಳಲ್ಲಿ ಶುದ್ಧ ಭಕ್ತಿಸೇವೆ, ಅದರ ಸ್ವರೂಪ ಮತ್ತು ಚಟುವಟಿಕೆಗಳನ್ನು ಚರ್ಚಿಸಲಾಯಿತು. ಕಡೆಯ ಆರು ಅಧ್ಯಾಯಗಳಲ್ಲಿ ಜ್ಞಾನ, ತ್ಯಾಗ, ಐಹಿಕ ಪ್ರಕೃತಿಯ ಮತ್ತು ಆಧ್ಯಾತ್ಮಿಕ ಪ್ರಕೃತಿಯ ಕರ್ಮಗಳನ್ನು ಮತ್ತು ಭಕ್ತಿಸೇವೆಗಳನ್ನು ವರ್ಣಿಸಲಾಗಿದೆ. ಎಲ್ಲ ಕರ್ಮಗಳನ್ನೂ ಪರಮ ಪ್ರಭುವಿನೊಡನೆ ಮಾಡಬೇಕು, ಪರಮ ಪ್ರಭುವನ್ನು **ಓಂ ತತ್ ಸತ್** ಎನ್ನುವ ಪದಗಳು ಪ್ರತಿನಿಧಿಸುತ್ತವೆ. ಇವು ಪರಮ ಪುರುಷ ವಿಷ್ಣುವನ್ನು ಸೂಚಿಸುತ್ತವೆ ಎನ್ನುವ ನಿರ್ಣಯಕ್ಕೆ ಬರಲಾಯಿತು. ಭಗವದ್ಗೀತೆಯ ಮೂರನೆಯ ಭಾಗವು

ಜೀವನದ ಪರಮ ಉದ್ದೇಶವು ಭಕ್ತಿಸೇವೆಯಲ್ಲದೆ ಬೇರೇನೂ ಅಲ್ಲ ಎಂದು ತೋರಿಸಿಕೊಟ್ಟಿದೆ. ಹಿಂದಿನ ಆಚಾರ್ಯರುಗಳನ್ನೂ, ಬ್ರಹ್ಮಸೂತ್ರ ಅಥವಾ ವೇದಾಂತಸೂತ್ರಗಳನ್ನೂ ಉದ್ಧರಿಸಿ, ಇದನ್ನು ತೋರಿಸಿಕೊಡಲಾಯಿತು. ಕೆಲವರು ನಿರಾಕಾರವಾದಿಗಳು ವೇದಾಂತ ಸೂತ್ರದ ಜ್ಞಾನಕ್ಕೆ ತಮ್ಮದೇ ಏಕಸ್ವಾಮ್ಯ ಎಂದು ಭಾವಿಸುತ್ತಾರೆ. ಆದರೆ ಭಕ್ತಿಸೇವೆಯನ್ನು ತಿಳಿಸಿಕೊಡುವುದೇ ವೇದಾಂತಸೂತ್ರದ ಉದ್ದೇಶ. ಏಕೆಂದರೆ ಸ್ವತಃ ಪ್ರಭುವೇ ವೇದಾಂತಸೂತ್ರವನ್ನು ರಚಿಸಿದವನು ಮತ್ತು ಅವನಿಗೆ ಅದು ತಿಳಿದಿದೆ. ಅದನ್ನು ಹದಿನೈದನೆಯ ಅಧ್ಯಾಯದಲ್ಲಿ ವರ್ಣಿಸಲಾಗಿದೆ. ಪ್ರತಿಯೊಂದು ಧರ್ಮಗ್ರಂಥದ ಹಾಗೂ ವೇದದ ಗುರಿಯು ಭಕ್ತಿಸೇವೆ. ಅದನ್ನು ಭಗವದ್ಗೀತೆಯಲ್ಲಿ ವಿವರಿಸಿದೆ.

ಎರಡನೆಯ ಅಧ್ಯಾಯದಲ್ಲಿ ಇಡೀ ವಿಷಯವನ್ನು ಸಂಗ್ರಹವಾಗಿ ಹೇಳಿದಂತೆ, ಹದಿನೆಂಟನೆಯ ಅಧ್ಯಾಯದಲ್ಲಿಯೂ ಎಲ್ಲ ಉಪದೇಶದ ಸಾರಾಂಶವನ್ನು ಕೊಟ್ಟಿದೆ. ಸನ್ಯಾಸ ಮತ್ತು ಪ್ರಕೃತಿಯ ಗುಣತ್ರಯಗಳನ್ನು ಮೀರಿದ ಆಧ್ಯಾತ್ಮಿಕ ಸ್ಥಾನವನ್ನು ಪಡೆಯುವುದೇ ಬದುಕಿನ ಗುರಿ ಎಂದು ಸೂಚಿಸಿದೆ. ಭಗವದ್ಗೀತೆಯ ನೇರ, ಸ್ಪಷ್ಟ ವಸ್ತುಗಳಾದ ತ್ಯಾಗ ಮತ್ತು ಸನ್ಯಾಸಗಳನ್ನು ಸ್ಪಷ್ಟಪಡಿಸಿಕೊಳ್ಳಲು ಅರ್ಜುನನು ಬಯಸುತ್ತಾನೆ. ಆದುದರಿಂದ ಈ ಎರಡು ಪದಗಳ ಅರ್ಥವನ್ನು ಕೇಳುತ್ತಾನೆ.

ಈ ಶ್ಲೋಕದಲ್ಲಿ ಪರಮ ಪ್ರಭುವನ್ನು ಸಂಬೋಧಿಸಲು ಬಳಸಿರುವ ಹೃಷೀಕೇಶ ಮತ್ತು ಕೇಶಿನಿಷೂದನ ಎಂಬ ಎರಡು ಶಬ್ದಗಳು ಅರ್ಥವತ್ತಾದವು. ಹೃಷೀಕೇಶ ಎಂದರೆ ಎಲ್ಲ ಇಂದ್ರಿಯಗಳ ಸ್ವಾಮಿಯಾದ ಕೃಷ್ಣ; ಮಾನಸಿಕ ಶಾಂತಿಯನ್ನು ಪಡೆಯಲು ಅವನು ಸದಾ ನಮಗೆ ನೆರವಾಗಬಲ್ಲ. ತಾನು ಸಮಚಿತ್ತನಾಗಿ ಉಳಿಯುವ ರೀತಿಯಲ್ಲಿ ಎಲ್ಲವನ್ನೂ ಸಂಗ್ರಹಿಸಿ ಹೇಳಬೇಕೆಂದು ಅರ್ಜುನನು ಅವನನ್ನು ಪ್ರಾರ್ಥಿಸುತ್ತಾನೆ. ಆದರೂ ಅವನಿಗೆ ಸಂದೇಹಗಳಿವೆ; ಸಂದೇಹಗಳನ್ನು ಯಾವಾಗಲೂ ಅಸುರರಿಗೆ ಹೋಲಿಸುತ್ತಾರೆ. ಆದುದರಿಂದ ಅವನು ಕೃಷ್ಣನನ್ನು ಕೇಶಿನಿಷೂದನ ಎಂದು ಸಂಬೋಧಿಸುತ್ತಾನೆ. ಕೇಶಿಯು ಬಹು ಭಯಂಕರನಾದ ಒಬ್ಬ ಅಸುರ; ಅವನನ್ನು ಕೃಷ್ಣನು ಕೊಂದನು; ಕೃಷ್ಣನು ಸಂದೇಹವೆಂಬ ಅಸುರನನ್ನು ಕೊಲ್ಲುತ್ತಾನೆ ಎಂದು ಅರ್ಜುನನು ನಿರೀಕ್ಷಿಸುತ್ತಿದ್ದಾನೆ.

## ಶ್ಲೋಕ - 2

**ಶ್ರೀಭಗವಾನುವಾಚ**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ |**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ||೨||**

**ಶ್ರೀಭಗವಾನ್ ಉವಾಚ**—ದೇವೋತ್ತಮ ಪರಮ ಪುರುಷನು ಹೇಳಿದನು; **ಕಾಮ್ಯಾನಾಮ್**—ಆಸೆಯಿಂದ ಕೂಡಿರುವ; **ಕರ್ಮಣಾಮ್**—ಕಾರ್ಯಗಳ; **ನ್ಯಾಸಮ್**—ತ್ಯಾಗವು; **ಸನ್ನ್ಯಾಸಮ್**—ಸನ್ಯಾಸಾಶ್ರಮವೆಂದು; **ಕವಯಃ**—ವಿದ್ವಾಂಸರು; **ವಿದುಃ**—ತಿಳಿಯುತ್ತಾರೆ; **ಸರ್ವ**—ಎಲ್ಲ; **ಕರ್ಮ**—ಕಾರ್ಯಗಳ; **ಫಲ**—ಫಲಗಳ; **ತ್ಯಾಗಮ್**—ತ್ಯಾಗವನ್ನು; **ಪ್ರಾಹುಃ**—ಕರೆದಿದ್ದಾರೆ; **ತ್ಯಾಗಮ್**—ತ್ಯಾಗವೆಂದು; **ವಿಚಕ್ಷಣಾಃ**—ಅನುಭವಿಗಳು.

### ಅನುವಾದ

**ದೇವೋತ್ತಮ ಪರಮ ಪುರುಷನು ಹೀಗೆ ಹೇಳಿದನು — ಐಹಿಕ ಬಯಕೆಯ ಆಧಾರವಿರುವ ಕರ್ಮಗಳನ್ನು ತ್ಯಜಿಸುವುದನ್ನೇ ಮಹಾವಿದ್ವಾಂಸರು ಸನ್ಯಾಸವೆಂದು ಕರೆಯುತ್ತಾರೆ. ಎಲ್ಲ ಕರ್ಮಗಳ ಫಲಗಳನ್ನು ಬಿಟ್ಟುಬಿಡುವುದನ್ನೇ ವಿದ್ವಾಂಸರು ತ್ಯಾಗ ಎಂದು ಕರೆಯುತ್ತಾರೆ.**

### ಭಾವಾರ್ಥ

ಫಲಾಪೇಕ್ಷೆಯಿಂದ ಕರ್ಮಮಾಡುವುದನ್ನು ಬಿಟ್ಟುಬಿಡಬೇಕು. ಇದು ಭಗವದ್ಗೀತೆಯ ಉಪದೇಶ. ಆದರೆ ಉನ್ನತಮಟ್ಟದ ಆಧ್ಯಾತ್ಮಿಕ ಜ್ಞಾನಕ್ಕಾಗಿ ಮಾಡುವ ಕೆಲಸಕಾರ್ಯಗಳನ್ನು ಬಿಡಬೇಕಾಗಿಲ್ಲ. ಇದನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟಮಾಡಿದೆ. ಯಾವುದಾದರೊಂದು ನಿರ್ದಿಷ್ಟ ಉದ್ದೇಶದಿಂದ ಯಜ್ಞಮಾಡಲು ವಿವಿಧ ರೀತಿಗಳನ್ನು ವೈದಿಕ ಸಾಹಿತ್ಯದಲ್ಲಿ ಹೇಳಿದೆ. ಒಳ್ಳೆಯ ಮಗನನ್ನು ಪಡೆಯಲು ಅಥವಾ ಮೇಲಿನ ಲೋಕಗಳಿಗೆ ಏರಲು ಮಾಡಬೇಕಾದ ಕೆಲವು ಯಜ್ಞಗಳಿವೆ. ಆದರೆ ಬಯಕೆಗಳಿಂದ ಪ್ರೇರಿತವಾದ ಯಜ್ಞಗಳನ್ನು ನಿಲ್ಲಿಸಬೇಕು; ತನ್ನ ಹೃದಯವನ್ನು ಶುದ್ಧಿಮಾಡಿಕೊಳ್ಳಲು ಅಥವಾ ಆಧ್ಯಾತ್ಮಿಕ ವಿಜ್ಞಾನದಲ್ಲಿ ಮುಂದುವರಿಯಲು ಮಾಡುವ ಯಜ್ಞಗಳನ್ನು ಬಿಡಬಾರದು.

## ಶ್ಲೋಕ - 3

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |**
**ಯಜ್ಞದಾನತಪಃ ಕರ್ಮ ನ ತ್ಯಾಜ್ಯಮಿತಿ ಚಾಪರೇ ||೩||**

**ತ್ಯಾಜ್ಯಮ್**—ತ್ಯಜಿಸಬೇಕಾದುದು; **ದೋಷವತ್**—ದೋಷದಂತೆ; **ಇತಿ**—ಎಂದು; **ಏಕೇ**—ಒಂದು ಗುಂಪಿನ; **ಕರ್ಮ**—ಕರ್ಮವನ್ನು; **ಪ್ರಾಹುಃ**—ಹೇಳುತ್ತಾರೆ; **ಮನೀಷಿಣಃ**—ಮಹಾಚಿಂತಕರು; **ಯಜ್ಞ**—ಯಜ್ಞ; **ದಾನ**—ದಾನ; **ತಪಃ**—ತಪಸ್ಸು; **ಕರ್ಮ**—ಕರ್ಮಗಳು; **ನ ತ್ಯಾಜ್ಯಮ್**—ಎಂದೂ ತ್ಯಜಿಸಬೇಕಾದವುಗಳಲ್ಲ; **ಇತಿ**—ಎಂದು; **ಚ**—ಮತ್ತು; **ಅಪರೇ**—ಅನ್ಯರು.

### ಅನುವಾದ

**ಎಲ್ಲ ಬಗೆಯ ಕಾಮ್ಯಕರ್ಮಗಳು ದೋಷಯುಕ್ತ; ಅವುಗಳನ್ನು ಬಿಟ್ಟುಬಿಡಬೇಕೆಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ಇನ್ನೂ ಕೆಲವರು ಮಹಾ ಚಿಂತಕರು ಯಜ್ಞ, ದಾನ ಮತ್ತು ತಪಸ್ಸುಗಳನ್ನು ಬಿಡಲೇಬಾರದೆಂದು ಹೇಳುತ್ತಾರೆ.**

### ಭಾವಾರ್ಥ

ವೈದಿಕ ಸಾಹಿತ್ಯದಲ್ಲಿ ಹೇಳಿರುವ ಅನೇಕ ಕರ್ಮಗಳ ವಿಷಯದಲ್ಲಿ ವಾದ ವಿವಾದವಿದೆ. ಉದಾಹರಣೆಗೆ ಯಜ್ಞಕ್ಕಾಗಿ ಪ್ರಾಣಿಯನ್ನು ಕೊಲ್ಲಬಹುದು ಎಂದು ಹೇಳಿದೆ. ಆದರೆ ಪ್ರಾಣಿಹತ್ಯೆಯು ಸಂಪೂರ್ಣವಾಗಿ ಅಸಹ್ಯಕರವಾದದ್ದು ಎಂದು ಕೆಲವರು ವಾದಿಸುತ್ತಾರೆ. ವೇದಸಾಹಿತ್ಯದಲ್ಲಿ, ಯಜ್ಞದಲ್ಲಿ

ಪ್ರಾಣಿಯನ್ನು ಕೊಲ್ಲಬೇಕೆಂದು ಸೂಚಿಸಿದ್ದರೂ, ಪ್ರಾಣಿಯನ್ನು ಕೊಂದಿದೆ ಎಂದು ಭಾವಿಸುವುದಿಲ್ಲ. ಯಜ್ಞವು ಪ್ರಾಣಿಗೆ ಹೊಸಜೀವನವನ್ನು ಕೊಡುತ್ತದೆ. ಕೆಲವೊಮ್ಮೆ ಯಜ್ಞದಲ್ಲಿ ಕೊಲ್ಲಲಾದ ಪ್ರಾಣಿಗೆ ಹೊಸಪ್ರಾಣಿಜೀವನವನ್ನು ಕೊಡಲಾಗುತ್ತದೆ; ಕೆಲವೊಮ್ಮೆ ಪ್ರಾಣಿಯನ್ನು ಕೂಡಲೇ ಮನುಷ್ಯರೂಪದ ಜೀವನಕ್ಕೆ ಎತ್ತಲಾಗುತ್ತದೆ. ಆದರೆ ಋಷಿಗಳಲ್ಲಿ ಭಿನ್ನಾಭಿಪ್ರಾಯವಿದೆ. ಪ್ರಾಣಿಯನ್ನು ಯಾವಾಗಲೂ ಕೊಲ್ಲಬಾರದು ಎಂದು ಕೆಲವರು ಹೇಳುತ್ತಾರೆ. ಇನ್ನೂ ಕೆಲವರು ಒಂದು ನಿರ್ದಿಷ್ಟ ಯಜ್ಞಕ್ಕಾಗಿ ಪ್ರಾಣಿಯನ್ನು ಕೊಲ್ಲುವುದು ಒಳ್ಳೆಯದು ಎಂದು ಹೇಳುತ್ತಾರೆ. ಯಜ್ಞದ ಕಾರ್ಯಕ್ರಮಗಳನ್ನು ಕುರಿತ ಈ ಭಿನ್ನಾಭಿಪ್ರಾಯಗಳನ್ನು ಈಗ ಸ್ವತಃ ಪ್ರಭುವೇ ಸ್ಪಷ್ಟಪಡಿಸುತ್ತಿದ್ದಾನೆ.

## ಶ್ಲೋಕ - 4

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ |**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಮ್ಪ್ರಕೀರ್ತಿತಃ ||೪||**

**ನಿಶ್ಚಯಮ್**—ನಿರ್ಧಾರವನ್ನು; **ಶೃಣು**—ಕೇಳು; **ಮೇ**—ನನ್ನಿಂದ; **ತತ್ರ**—ಅಲ್ಲಿ; **ತ್ಯಾಗೇ**—ತ್ಯಾಗದ ವಿಚಾರದಲ್ಲಿ; **ಭರತ ಸತ್ತಮ**—ಭರತಶ್ರೇಷ್ಠನೇ; **ತ್ಯಾಗಃ**—ತ್ಯಾಗವು; **ಹಿ**—ಖಂಡಿತವಾಗಿಯೂ; **ಪುರುಷವ್ಯಾಘ್ರ**—ಪುರುಷವ್ಯಾಘ್ರನೇ; **ತ್ರಿವಿಧಃ**—ಮೂರು ಬಗೆಯದು ಎಂದು; **ಸಮ್ಪ್ರಕೀರ್ತಿತಃ**—ಘೋಷಿಸಲಾಗಿದೆ.

## ಅನುವಾದ

**ಭರತವಂಶದವರಲ್ಲಿ ಶ್ರೇಷ್ಠನಾದವನೆ, ಸನ್ಯಾಸವನ್ನು ಕುರಿತು ನನ್ನ ನಿರ್ಣಯವನ್ನು ಈಗ ಕೇಳು. ಮನುಷ್ಯರಲ್ಲಿ ವ್ಯಾಘ್ರನಾದವನೆ, ಧರ್ಮಗ್ರಂಥಗಳಲ್ಲಿ ಸನ್ಯಾಸವು ಮೂರು ಬಗೆಗಳದು ಎಂದು ಹೇಳಿದೆ.**

## ಭಾವಾರ್ಥ

ಸನ್ಯಾಸವನ್ನು ಕುರಿತು ಭಿನ್ನಾಭಿಪ್ರಾಯಗಳಿದ್ದರೂ ದೇವೋತ್ತಮ ಪರಮ ಪುರುಷನಾದ ಕೃಷ್ಣನು ಇಲ್ಲಿ ತನ್ನ ತೀರ್ಪನ್ನು ಕೊಡುತ್ತಾನೆ. ಇದನ್ನೇ ಅಂತಿಮವೆಂದು ಸ್ವೀಕರಿಸಬೇಕು. ಏನೇ ಆದರೂ ವೇದಗಳು ಪ್ರಭುವೇ ನೀಡಿದ ಬೇರೆ ಬೇರೆ ಶಾಸನಗಳು. ಪ್ರಭುವೇ ಇಲ್ಲಿ ಇದ್ದಾನೆ; ಅವನ ಮಾತನ್ನು ಅಂತಿಮ ಎಂದು ತೆಗೆದುಕೊಳ್ಳಬೇಕು. ಸನ್ಯಾಸದ ಪ್ರಕ್ರಿಯೆಯನ್ನು, ಯಾವ ಐಹಿಕ ಪ್ರಕೃತಿಯ ಗುಣಗಳಲ್ಲಿ ಮಾಡಿದೆ ಎನ್ನುವುದಕ್ಕೆ ಅನುಗುಣವಾಗಿ, ಅದನ್ನು ಪರಿಶೀಲಿಸಬೇಕು.

## ಶ್ಲೋಕ - 5

**ಯಜ್ಞದಾನತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ||೫||**

**ಯಜ್ಞ**—ಯಜ್ಞ; **ದಾನ**—ದಾನ; **ತಪಃ**—ತಪಸ್ಸು; **ಕರ್ಮ**—ಕರ್ಮಗಳು; **ನ ತ್ಯಾಜ್ಯಮ್**—ಎಂದಿಗೂ

ತ್ಯಜಿಸಲ್ಪಡಬಾರದು; **ಕಾರ್ಯಮ್**—ಮಾಡಲ್ಪಡಲೇಬೇಕು; **ಏವ**—ಖಂಡಿತವಾಗಿಯೂ; **ತತ್**—ಅದು; **ಯಜ್ಞಃ**—ಯಜ್ಞವು; **ದಾನಮ್**—ದಾನವು; **ತಪಃ**—ತಪಸ್ಸು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಪಾವನಾನಿ**—ಶುದ್ಧಿಕಾರಕಗಳು; **ಮನೀಷಿಣಾಮ್**—ಮಹಾತ್ಮರಿಗೂ ಕೂಡ.

## ಅನುವಾದ

**ಯಜ್ಞ, ದಾನ, ತಪಸ್ಸುಗಳನ್ನು ಬಿಡಬಾರದು; ಅವುಗಳನ್ನು ಮಾಡಬೇಕು. ವಾಸ್ತವವಾಗಿ ಯಜ್ಞ, ದಾನ, ತಪಸ್ಸುಗಳು ಮಹಾತ್ಮರನ್ನು ಸಹ ಪರಿಶುದ್ಧಗೊಳಿಸುತ್ತವೆ.**

## ಭಾವಾರ್ಥ

ಯೋಗಿಗಳು ಮಾನವಸಮಾಜದ ಪ್ರಗತಿಗಾಗಿ ಕಾರ್ಯಗಳನ್ನು ಮಾಡಬೇಕು. ಮನುಷ್ಯನನ್ನು ಆಧ್ಯಾತ್ಮಿಕ ಜೀವನಕ್ಕೇರಿಸಲು ಅನೇಕ ಶುದ್ಧೀಕರಣ ವಿಧಾನಗಳಿವೆ. ಉದಾಹರಣೆಗೆ ಹೇಳುವುದಾದರೆ ಮದುವೆಯ ಸಮಾರಂಭವು ಇಂತಹ ಯಜ್ಞಗಳಲ್ಲಿ ಒಂದು. ಇದಕ್ಕೆ **ವಿವಾಹಯಜ್ಞ** ಎಂದು ಹೆಸರು. ಸನ್ಯಾಸಾಶ್ರಮದಲ್ಲಿರುವ ಮತ್ತು ಸಂಸಾರ ಬಾಂಧವ್ಯಗಳನ್ನು ಬಿಟ್ಟಿರುವ ಸನ್ಯಾಸಿಯು ಮದುವೆಯ ಆಚರಣೆಯನ್ನು ಬೆಂಬಲಿಸಬೇಕೆ? ಮನುಷ್ಯನಿಗೆ ಒಳಿತುಮಾಡುವ ಯಾವುದೇ ಯಜ್ಞವನ್ನು ಬಿಡಲೇಬಾರದು ಎಂದು ಪ್ರಭುವು ಇಲ್ಲಿ ಹೇಳುತ್ತಾನೆ. ವಿವಾಹಯಜ್ಞದ ಉದ್ದೇಶ ಆಧ್ಯಾತ್ಮಿಕ ಮುನ್ನಡೆಗೆ ಅಗತ್ಯವಾದ ಶಾಂತಿಯನ್ನು ಪಡೆಯುವಂತೆ ಮನುಷ್ಯನ ಮನಸ್ಸನ್ನು ನಿಯಂತ್ರಿಸುವುದು. ಸನ್ಯಾಸಿಗಳು ಸಹ ಬಹುಮಂದಿಗೆ ವಿವಾಹಯಜ್ಞವನ್ನು ಮಾಡಿಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಸನ್ಯಾಸಿಗಳು ಹೆಂಗಸರೊಡನೆ ಇರಲೇಬಾರದು; ಆದರೆ ಬದುಕಿನ ಇನ್ನೂ ಕೆಳಹಂತಗಳಲ್ಲಿರುವ ತರುಣನು ವಿವಾಹದಲ್ಲಿ ಹೆಂಡತಿಯನ್ನು ಸ್ವೀಕರಿಸಬಾರದು ಎಂದು ಇದರ ಅರ್ಥವಲ್ಲ. ವಿಧಿಸಿರುವ ಎಲ್ಲ ಯಜ್ಞಗಳ ಗುರಿಯು ಪರಮ ಪ್ರಭುವನ್ನು ಪಡೆಯುವುದು. ಆದುದರಿಂದ ಕೆಳಗಿನ ಹಂತಗಳಲ್ಲಿ ಅವುಗಳನ್ನು ಬಿಡಬಾರದು. ಹೀಗೆಯೇ ದಾನದ ಗುರಿಯು ಹೃದಯವನ್ನು ಪರಿಶುದ್ಧಗೊಳಿಸುವುದು. ಹಿಂದೆ ವಿವರಿಸಿದಂತೆ ಪಾತ್ರರಾದವರಿಗೆ ದಾನವನ್ನು ಕೊಟ್ಟರೆ, ಅದು ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿಗೆ ಕಾರಣವಾಗುತ್ತದೆ.

## ಶ್ಲೋಕ - 6

**ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ |**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ||೬||**

**ಏತಾನಿ**—ಈ ಎಲ್ಲ; **ಅಪಿ**—ಖಂಡಿತವಾಗಿಯೂ; **ತು**—ಆದರೆ; **ಕರ್ಮಾಣಿ**—ಕರ್ಮಗಳು; **ಸಙ್ಗಮ್**—ಸಂಗವನ್ನು; **ತ್ಯಕ್ತ್ವಾ**—ತ್ಯಜಿಸಿ; **ಫಲಾನಿ**—ಫಲಗಳನ್ನು; **ಚ**—ಕೂಡ; **ಕರ್ತವ್ಯಾನಿ**—ಕರ್ತವ್ಯವೆಂದು ಮಾಡಲ್ಪಡಬೇಕು; **ಇತಿ**—ಹೀಗೆ; **ಮೇ**—ನನ್ನ; **ಪಾರ್ಥ**—ಪೃಥೆಯ ಪುತ್ರನೇ; **ನಿಶ್ಚಿತಮ್**—ನಿಶ್ಚಿತವಾದ; **ಮತಮ್**—ಅಭಿಪ್ರಾಯವು; **ಉತ್ತಮಮ್**—ಉತ್ತಮವಾದ.

## ಅನುವಾದ

**ಪಾರ್ಥನೇ, ಎಲ್ಲ ಕರ್ಮಗಳನ್ನು ಆಸಕ್ತಿ ಇಲ್ಲದೆ ಮತ್ತು ಫಲಾಪೇಕ್ಷೆಯಿಲ್ಲದೆ ಮಾಡಬೇಕು.**

**ಅವನ್ನು ಕರ್ತವ್ಯ ಎಂದು ಮಾಡಬೇಕು. ಇದು ನನ್ನ ಅಂತಿಮ ಅಭಿಪ್ರಾಯ.**

## ಭಾವಾರ್ಥ

ಯಜ್ಞಗಳು ಪರಿಶುದ್ಧಗೊಳಿಸುತ್ತವೆ; ಆದರೂ ಇವುಗಳ ಆಚರಣೆಯಿಂದ ಮನುಷ್ಯನು ಫಲವನ್ನು ನಿರೀಕ್ಷಿಸಬಾರದು. ಎಂದರೆ ಬದುಕಿನಲ್ಲಿ ಲೌಕಿಕ ಪ್ರಗತಿಯನ್ನು ಸಾಧಿಸುವ ಎಲ್ಲ ಯಜ್ಞಗಳನ್ನು ಬಿಟ್ಟುಬಿಡಬೇಕು; ಆದರೆ ಮನುಷ್ಯನ ಜೀವನವನ್ನು ಪರಿಶುದ್ಧಮಾಡಿ ಅದನ್ನು ಆಧ್ಯಾತ್ಮದ ಮಟ್ಟಕ್ಕೆ ಏರಿಸುವ ಯಜ್ಞಗಳನ್ನು ನಿಲ್ಲಿಸಬಾರದು. ಕೃಷ್ಣಪ್ರಜ್ಞೆಗೆ ಕೊಂಡೊಯ್ಯುವುದೆಲ್ಲವನ್ನೂ ಪ್ರೋತ್ಸಾಹಿಸಬೇಕು. ಭಗವಂತನ ಭಕ್ತಿಸೇವೆಗೆ ಕರೆದೊಯ್ಯುವ ಯಾವುದೇ ಕರ್ಮವನ್ನಾದರೂ ಸ್ವೀಕರಿಸಬೇಕೆಂದು ಶ್ರೀಮದ್ಭಾಗವತದಲ್ಲಿಯೂ ಹೇಳಿದೆ. ಇದು ಅತ್ಯಂತ ಉನ್ನತವಾದ ಧಾರ್ಮಿಕ ಒರೆಗಲ್ಲು. ಭಗವಂತನ ಭಕ್ತಿಸೇವೆಯಲ್ಲಿ ತನಗೆ ನೆರವಾಗುವ ಯಾವುದೇ ಕರ್ಮ, ಯಜ್ಞ ಅಥವಾ ದಾನವನ್ನು ಭಕ್ತನು ಸ್ವೀಕರಿಸಬೇಕು.

## ಶ್ಲೋಕ - 7

**ನಿಯತಸ್ಯತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ |**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ||೭||**

**ನಿಯತಸ್ಯ**—ವಿಹಿತವಾದ; **ತು**—ಆದರೆ; **ಸನ್ನ್ಯಾಸಃ**—ವಿರಕ್ತಿಯು; **ಕರ್ಮಣಃ**—ಕರ್ಮಗಳ; **ನ ಉಪಪದ್ಯತೇ**—ಎಂದೂ ಯೋಗ್ಯವಲ್ಲ; **ಮೋಹಾತ್**—ಭ್ರಾಂತಿಯಿಂದ; **ತಸ್ಯ**—ಅವುಗಳ; **ಪರಿತ್ಯಾಗಃ**—ತ್ಯಾಗವು; **ತಾಮಸಃ**—ತಮೋಗುಣದಲ್ಲಿ ಇರುವಂತಹದು; **ಪರಿಕೀರ್ತಿತಃ**—ಎಂದು ಹೇಳಲಾಗಿದೆ.

## ಅನುವಾದ

**ವಿಧಿತ ಕರ್ತವ್ಯಗಳನ್ನು ತ್ಯಜಿಸಲೇಬಾರದು. ಮನುಷ್ಯನು ಮೋಹದಿಂದಾಗಿ ತನ್ನ ನಿಯಮಿತ ಕರ್ತವ್ಯಗಳನ್ನು ಬಿಟ್ಟುಬಿಟ್ಟರೆ ಅಂತಹ ಪರಿತ್ಯಾಗವು ತಾಮಸ ಗುಣದಲ್ಲಿ ಮಾಡಿದುದು ಎಂದು ಹೇಳುತ್ತಾರೆ.**

## ಭಾವಾರ್ಥ

ಐಹಿಕ ತೃಪ್ತಿಗಾಗಿ ಮಾಡುವ ಕರ್ಮವನ್ನು ಬಿಟ್ಟುಬಿಡಬೇಕು; ಆದರೆ ಪರಮ ಪ್ರಭುವಿಗಾಗಿ ಆಹಾರವನ್ನು ಸಿದ್ಧಮಾಡುವುದು, ನೈವೇದ್ಯವನ್ನು ಅರ್ಪಿಸಿ ಪ್ರಸಾದವನ್ನು ಸ್ವೀಕರಿಸುವುದು — ಹೀಗೆ ಆಧ್ಯಾತ್ಮಿಕ ಚಟುವಟಿಕೆಗೆ ನೆರವಾಗುವ ಕರ್ಮಗಳನ್ನು ಬಿಡಲೇಬಾರದು. ಸನ್ಯಾಸಿಯಾದವನು ತನಗಾಗಿ ಅಡಿಗೆ ಮಾಡಿಕೊಳ್ಳಲೇಬಾರದು ಎಂದು ಹೇಳಿದೆ. ತನಗಾಗಿ ಅಡಿಗೆ ಮಾಡಿಕೊಳ್ಳುವುದನ್ನು ನಿಷೇಧಿಸಿದೆ. ಆದರೆ ಪರಮ ಪ್ರಭುವಿಗಾಗಿ ಅಡಿಗೆ ಮಾಡುವುದನ್ನು ನಿಷೇಧಿಸಿಲ್ಲ. ಹೀಗೆಯೇ ಕೃಷ್ಣಪ್ರಜ್ಞೆಯಲ್ಲಿ ತನ್ನ ಶಿಷ್ಯನು ಮುನ್ನಡೆಯಲು ಸಹಾಯ ಮಾಡುವುದಕ್ಕಾಗಿ ಸನ್ಯಾಸಿಯು ವಿವಾಹ ಸಮಾರಂಭವನ್ನು ನಡೆಸಬಹುದು. ಇಂತಹ ಕರ್ಮಗಳನ್ನು ಮನುಷ್ಯನು ತ್ಯಜಿಸಿದರೆ ಅವನು ತಾಮಸಗುಣದಿಂದ ಹೀಗೆ ಮಾಡುತ್ತಿದ್ದಾನೆ ಎಂದು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 8

**ದುಃಖಮಿತ್ಯೇವ ಯತ್ ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ |**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ||೮||**

**ದುಃಖಮ್**—ದುಃಖವು; **ಇತಿ**—ಎಂದು; **ಏವ**—ಖಂಡಿತವಾಗಿಯೂ; **ಯತ್**—ಯಾವ; **ಕರ್ಮ**—ಕರ್ಮವನ್ನು; **ಕಾಯ**—ಶರೀರದ; **ಕ್ಲೇಶ**—ತೊಂದರೆಯ; **ಭಯಾತ್**—ಹೆದರಿಕೆಯಿಂದ; **ತ್ಯಜೇತ್**—ತ್ಯಜಿಸುತ್ತಾನೋ; **ಸಃ**—ಅವನು; **ಕೃತ್ವಾ**—ಮಾಡಿದನಂತರ; **ರಾಜಸಮ್**—ರಜೋಗುಣದಲ್ಲಿ; **ತ್ಯಾಗಮ್**—ತ್ಯಾಗವನ್ನು; **ನ**—ಇಲ್ಲ; **ಏವ**—ಖಂಡಿತವಾಗಿಯೂ; **ತ್ಯಾಗ**—ತ್ಯಾಗದ; **ಫಲಮ್** —ಫಲಗಳನ್ನು; **ಲಭೇತ್**—ಪಡೆಯುತ್ತಾನೆ.

## ಅನುವಾದ

**ನಿಯಮಿತ ಕರ್ತವ್ಯಗಳನ್ನು ಕ್ಲೇಶದಾಯಕವೆಂದಾಗಲೀ, ದೇಹಾಯಾಸದ ಭಯದಿಂದಾಗಲೀ, ಬಿಟ್ಟುಬಿಡುವವನು ರಾಜಸಗುಣದಿಂದ ತ್ಯಜಿಸಿದನೆಂದು ಭಾವಿಸಲಾಗುತ್ತದೆ. ಅಂತಹ ಕರ್ಮದಿಂದ ತ್ಯಾಗದಲ್ಲಿ ಪ್ರಗತಿ ಸಾಧಿಸಲಾಗುವುದಿಲ್ಲ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವವನು ತಾನು ಫಲಾಪೇಕ್ಷಿತ ಕರ್ಮವನ್ನು ಮಾಡುತ್ತಿದ್ದೇನೆ ಎಂಬ ಭಯದಿಂದ ಹಣವನ್ನು ಸಂಪಾದಿಸುವುದನ್ನು ಬಿಟ್ಟು ಬಿಡಬಾರದು. ಕೆಲಸ ಮಾಡಿ ತನ್ನ ಹಣವನ್ನು ಕೃಷ್ಣಪ್ರಜ್ಞೆಯಲ್ಲಿ ತೊಡಗಿಸಲು ಅವನಿಗೆ ಸಾಧ್ಯವಾಗಬಹುದು ಅಥವಾ ಬೆಳಗ್ಗೆ ಬಹುಬೇಗ ಏಳುವುದರಿಂದ ತನ್ನ ದಿವ್ಯ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗಬಹುದು; ಭಯದಿಂದ ಅಥವಾ ಇಂತಹ ಕರ್ಮಗಳು ಕ್ಲೇಶದಾಯಕವೆಂಬ ಭಾವನೆ ಇರುವುದರಿಂದ ಬಿಟ್ಟುಬಿಡಬಾರದು. ಇಂತಹ ತ್ಯಾಗವು ರಾಜಸ ಸ್ವಭಾವದ್ದು. ರಾಜಸ ಕಾರ್ಯದ ಫಲವು ಯಾವಾಗಲೂ ದುಃಖದಾಯಕ. ಈ ಮನೋಧರ್ಮದಿಂದ ಮನುಷ್ಯನು ಕರ್ಮತ್ಯಾಗವನ್ನು ಮಾಡಿದರೆ ಆ ತ್ಯಾಗದ ಫಲವು ಅವನಿಗೆ ಬರುವುದಿಲ್ಲ.

## ಶ್ಲೋಕ - 9

**ಕಾರ್ಯಮಿತ್ಯೇವ ಯತ್ ಕರ್ಮ ನಿಯತಂ ಕ್ರಿಯತೇಽರ್ಜುನ |**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ||೯||**

**ಕಾರ್ಯಮ್**—ಮಾಡಲೇಬೇಕಾದುದು; **ಇತಿ**—ಎಂದು; **ಏವ**—ನಿಜವಾಗಿಯೂ; **ಯತ್**—ಯಾವ; **ಕರ್ಮ**—ಕರ್ಮವನ್ನು; **ನಿಯತಮ್**—ವಿಹಿತವಾದ; **ಕ್ರಿಯತೇ**—ಮಾಡುವನೋ; **ಅರ್ಜುನ**—ಅರ್ಜುನನೇ; **ಸಂಗಮ್**—ಸಂಗವನ್ನು; **ತ್ಯಕ್ತ್ವಾ**—ತ್ಯಜಿಸಿ; **ಫಲಮ್**—ಫಲವನ್ನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಸಃ**—ಆ; **ತ್ಯಾಗಃ**—ತ್ಯಾಗವು; **ಸಾತ್ತ್ವಿಕಃ**—ಸತ್ವಗುಣದಲ್ಲಿ ಇರುವಂತಹದು; **ಮತಃ**—ನನ್ನ ಅಭಿಪ್ರಾಯದಲ್ಲಿ.

### ಅನುವಾದ

**ಹೇ ಅರ್ಜುನ, ಮನುಷ್ಯನು ವಿಹಿತ ಕರ್ತವ್ಯವನ್ನು, ಅದನ್ನು ಮಾಡಲೇಬೇಕು ಎನ್ನುವ ಕಾರಣದಿಂದ ಮಾತ್ರವೇ ಮಾಡಿ, ಎಲ್ಲ ಐಹಿಕ ಸಂಗವನ್ನೂ, ಕರ್ಮಫಲಾಪೇಕ್ಷೆಯನ್ನೂ ತ್ಯಜಿಸಿದಾಗ, ಅವನ ತ್ಯಾಗವು ಸಾತ್ವಿಕವೆಂದು ಹೇಳುತ್ತಾರೆ.**

### ಭಾವಾರ್ಥ

ವಿಧಿತ ಕರ್ತವ್ಯಗಳನ್ನು ಈ ಮನೋಧರ್ಮದಲ್ಲಿ ಮಾಡಬೇಕು. ಫಲದ ಮೋಹವಿಲ್ಲದೆ ಕರ್ಮ ಮಾಡಬೇಕು; ಕರ್ಮದ ಗುಣಗಳಿಂದ ದೂರವಿರಬೇಕು. ಕೃಷ್ಣಪ್ರಜ್ಞೆಯಿಂದ ಕಾರ್ಖಾನೆಯಲ್ಲಿ ಕೆಲಸಮಾಡುವವನು, ಕಾರ್ಖಾನೆಯ ಕೆಲಸದಲ್ಲಿ ಮೋಹವನ್ನು ಇಟ್ಟುಕೊಂಡಿರುವುದಿಲ್ಲ; ಕಾರ್ಖಾನೆಯ ಕೆಲಸಗಾರರಲ್ಲಿಯೂ ಆಸಕ್ತಿಯನ್ನು ಹೊಂದಿರುವುದಿಲ್ಲ. ಅವನು ಕೃಷ್ಣನಿಗಾಗಿ ದುಡಿಯುತ್ತಾನೆ, ಅಷ್ಟೆ. ಕೃಷ್ಣನಿಗಾಗಿ ಫಲವನ್ನು ತ್ಯಾಗಮಾಡಿದಾಗ ಅವನು ಆಧ್ಯಾತ್ಮಿಕವಾಗಿ ಕರ್ಮಮಾಡುತ್ತಿದ್ದಾನೆ.

## ಶ್ಲೋಕ - 10

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ |**
**ತ್ಯಾಗೀ ಸತ್ತ್ವ ಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ||೧೦||**

**ನ ದ್ವೇಷ್ಟಿ**—ದ್ವೇಷಿಸುವುದಿಲ್ಲ; **ಅಕುಶಲಮ್**—ಅಶುಭವಾದ; **ಕರ್ಮ**—ಕರ್ಮವನ್ನು; **ಕುಶಲೇ**—ಶುಭದಲ್ಲಿ; **ನ ಅನುಷಜ್ಜತೇ**—ಅನುರಕ್ತನಾಗುವುದಿಲ್ಲ; **ತ್ಯಾಗೀ**—ತ್ಯಾಗಿಯು; **ಸತ್ತ್ವ**—ಸತ್ವದಲ್ಲಿ; **ಸಮಾವಿಷ್ಟಃ**—ಮಗ್ನನಾದ; **ಮೇಧಾವೀ**—ಬುದ್ಧಿವಂತನಾದ; **ಛಿನ್ನ**—ಕತ್ತರಿಸಿದ; **ಸಂಶಯಃ**—ಎಲ್ಲ ಸಂಶಯಗಳುಳ್ಳ.

### ಅನುವಾದ

**ಸಾತ್ವಿಕ ಗುಣದಲ್ಲಿ ನೆಲೆಗೊಂಡವನು ಅಶುಭ ಕರ್ಮವನ್ನು ದ್ವೇಷಿಸುವುದೂ ಇಲ್ಲ, ಶುಭಕರ್ಮದಲ್ಲಿ ಮೋಹಗೊಳ್ಳುವುದೂ ಇಲ್ಲ. ಸಾತ್ವಿಕ ಗುಣದಲ್ಲಿ ನೆಲೆಗೊಂಡಿರುವ ಇಂತಹ ಬುದ್ಧಿವಂತ ತ್ಯಾಗಿಯು ಕರ್ಮದ ವಿಷಯವಾಗಿ ಸಂದೇಹಗಳನ್ನು ಹೊಂದಿರುವುದಿಲ್ಲ.**

### ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿ ಇರುವವನು ಅಥವಾ ಸಾತ್ವಿಕ ಗುಣದವನು, ಯಾರನ್ನೇ ಆಗಲಿ ಅಥವಾ ತನ್ನ ದೇಹಕ್ಕೆ ತೊಂದರೆ ಕೊಡುವ ಏನನ್ನೇ ಆಗಲಿ ದ್ವೇಷಿಸುವುದಿಲ್ಲ. ತನ್ನ ಕರ್ತವ್ಯದ ಕ್ಲೇಶದಾಯಕ ಪರಿಣಾಮಗಳಿಗೆ ಹೆದರದೆ ಯೋಗ್ಯ ಸ್ಥಳದಲ್ಲಿ ಯೋಗ್ಯ ಕಾಲದಲ್ಲಿ ತನ್ನ ಕರ್ಮವನ್ನು ಮಾಡುತ್ತಾನೆ. ಅಧ್ಯಾತ್ಮದಲ್ಲಿ ನೆಲೆಸಿರುವ ಇಂತಹ ಮನುಷ್ಯನು ತನ್ನ ಕರ್ಮಗಳಲ್ಲಿ ಅತ್ಯಂತ ಕುಶಲಿ ಮತ್ತು ಸಂದೇಹಾತೀತ ಎಂದು ಅರ್ಥಮಾಡಿಕೊಳ್ಳಬೇಕು.

## ಶ್ಲೋಕ - 11

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ |**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ||೧೧||**

**ನ**—ಎಂದಿಗೂ ಇಲ್ಲ; **ಹಿ**—ಖಂಡಿತವಾಗಿಯೂ; **ದೇಹಭೃತಾ**—ದೇಹಧಾರಿಯಿಂದ; **ಶಕ್ಯಮ್**—ಸಾಧ್ಯವು; **ತ್ಯಕ್ತುಮ್**—ತ್ಯಜಿಸಲು; **ಕರ್ಮಾಣಿ**—ಕರ್ಮಗಳನ್ನು; **ಅಶೇಷತಃ**—ಸಂಪೂರ್ಣವಾಗಿ; **ಯಃ**—ಯಾರು; **ತು**—ಆದರೆ; **ಕರ್ಮ**—ಕರ್ಮದ; **ಫಲ**—ಫಲದ; **ತ್ಯಾಗೀ**—ತ್ಯಾಗಿಯೋ; **ಸಃ**—ಅವನು; **ತ್ಯಾಗೀ**—ತ್ಯಾಗಿಯು; **ಇತಿ**—ಎಂದು; **ಅಭಿಧೀಯತೇ**—ಹೇಳಲಾಗಿದೆ.

### ಅನುವಾದ

**ದೇಹಧಾರಿಯಾದವನಿಗೆ ಎಲ್ಲ ಕರ್ಮಗಳನ್ನೂ ತ್ಯಜಿಸುವುದು ಸಾಧ್ಯವೇ ಇಲ್ಲ, ನಿಜ. ಆದರೆ ಕರ್ಮಫಲವನ್ನು ತ್ಯಜಿಸುವವನನ್ನು ನಿಜವಾದ ತ್ಯಾಗಿ ಎಂದು ಕರೆಯುತ್ತಾರೆ.**

### ಭಾವಾರ್ಥ

ಮನುಷ್ಯನು ಯಾವಾಗಲೂ ಕೆಲಸವನ್ನು ತ್ಯಜಿಸಲಾರ ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಆದುದರಿಂದ ಕೃಷ್ಣನಿಗಾಗಿ ಕರ್ಮ ಮಾಡಿ, ಕರ್ಮಫಲವನ್ನು ಅನುಭವಿಸದೆ, ಎಲ್ಲವನ್ನೂ ಕೃಷ್ಣನಿಗೆ ಅರ್ಪಿಸುವವನು ನಿಜವಾದ ತ್ಯಾಗಿ. ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘಕ್ಕಾಗಿ (ಇಸ್ಕಾನ್) ತಮ್ಮ ಕಚೇರಿಯಲ್ಲಿ ಅಥವಾ ಕಾರ್ಖಾನೆಯಲ್ಲಿ ಅಥವಾ ಬೇರಾವುದಾದರೂ ಸ್ಥಳದಲ್ಲಿ ಬಹು ಕಷ್ಟಪಟ್ಟು ಕೆಲಸಮಾಡುವ ಹಲವು ಸದಸ್ಯರಿದ್ದಾರೆ; ತಾವು ಗಳಿಸಿದುದೆಲ್ಲವನ್ನೂ ಸಂಘಕ್ಕೆ ಕೊಟ್ಟುಬಿಡುತ್ತಾರೆ. ಇಂತಹ ಉನ್ನತಿಗೇರಿದ ವ್ಯಕ್ತಿಗಳು ನಿಜವಾಗಿಯೂ ಸನ್ಯಾಸಿಗಳು; ಸನ್ಯಾಸಾಶ್ರಮದಲ್ಲಿ ನೆಲೆಹೊಂದಿದವರು. ಕರ್ಮಫಲವನ್ನು ತ್ಯಾಗ ಮಾಡುವುದು ಹೇಗೆ, ಯಾವ ಉದ್ದೇಶಕ್ಕಾಗಿ ತ್ಯಾಗಮಾಡಬೇಕು ಎನ್ನುವುದರ ಸ್ಪಷ್ಟವಾದ ರೂಪರೇಖೆ ಇಲ್ಲಿದೆ.

## ಶ್ಲೋಕ - 12

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ |**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ನ್ಯಾಸಿನಾಂ ಕ್ವಚಿತ್ ||೧೨||**

**ಅನಿಷ್ಟಮ್**—ನರಕಕ್ಕೆ ಒಯ್ಯುವ; **ಇಷ್ಟಮ್**—ಸ್ವರ್ಗಕ್ಕೆ ಒಯ್ಯುವ; **ಮಿಶ್ರಮ್**—ಮಿಶ್ರವಾದ; **ಚ**—ಮತ್ತು; **ತ್ರಿವಿಧಮ್**—ಮೂರು ಬಗೆಯ; **ಕರ್ಮಣಃ**—ಕರ್ಮದ; **ಫಲಮ್**—ಫಲವು; **ಭವತಿ**—ಆಗುತ್ತದೆ; **ಅತ್ಯಾಗಿನಾಮ್**—ತ್ಯಾಗಿಗಳಲ್ಲದವರಿಗೆ; **ಪ್ರೇತ್ಯ**—ಮರಣಾನಂತರ; **ನ**—ಇಲ್ಲ; **ತು**—ಆದರೆ; **ಸನ್ನ್ಯಾಸಿನಾಮ್**—ಸನ್ಯಾಸಿಗಳಿಗೆ; **ಕ್ವಚಿತ್**—ಯಾವ ಕಾಲದಲ್ಲಿಯೂ.

### ಅನುವಾದ

**ತ್ಯಾಗಮಾಡದಿರುವವರಿಗೆ ಸಾವಿನ ಅನಂತರ ಮೂರು ಬಗೆಯ ಕರ್ಮಫಲಗಳು ಲಭಿಸುತ್ತವೆ —**

**ಪ್ರಿಯವಾದದ್ದು, ಅಪ್ರಿಯವಾದದ್ದು, ಮಿಶ್ರವಾದದ್ದು. ಆದರೆ ಸನ್ಯಾಸಿಗಳಿಗೆ ಸುಖಪಡುವ ಅಥವಾ ದುಃಖಪಡುವ ಫಲ ಯಾವುದೂ ಇರುವುದಿಲ್ಲ.**

### ಭಾವಾರ್ಥ

ಕೃಷ್ಣನೊಡನೆ ತನ್ನ ಸಂಬಂಧದ ಅರಿವಿನಿಂದ ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು ಯಾವಾಗಲೂ ಮುಕ್ತನು. ಆದುದರಿಂದ ಅವನು ಸತ್ತನಂತರ ತನ್ನ ಕರ್ಮಗಳ ಫಲವನ್ನು ಅನುಭವಿಸಬೇಕಾಗುವುದಿಲ್ಲ.

## ಶ್ಲೋಕ - 13

**ಪಞ್ಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಙ್ಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥೧೩॥**

**ಪಞ್ಚ**—ಐದು; **ಏತಾನಿ**—ಈ; **ಮಹಾಬಾಹೋ**—ಮಹಾಬಾಹುವೇ; **ಕಾರಣಾನಿ**—ಕಾರಣಗಳನ್ನು; **ನಿಬೋಧ**—ತಿಳಿದುಕೋ; **ಮೇ**—ನನ್ನಿಂದ; **ಸಾಙ್ಖ್ಯೇ**—ವೇದಾಂತದ; **ಕೃತ ಅನ್ತೇ**—ಸಿದ್ಧಾಂತದಲ್ಲಿ; **ಪ್ರೋಕ್ತಾನಿ**—ಹೇಳಲ್ಪಟ್ಟಿವೆ; **ಸಿದ್ಧಯೇ**—ಸಿದ್ಧಿಗಾಗಿ; **ಸರ್ವ**—ಎಲ್ಲ; **ಕರ್ಮಣಾಮ್**—ಕರ್ಮಗಳ.

### ಅನುವಾದ

**ಮಹಾಬಾಹುವಾದ ಅರ್ಜುನನೆ, ವೇದಾಂತಕ್ಕೆ ಅನುಗುಣವಾಗಿ ಎಲ್ಲ ಕರ್ಮಗಳ ಸಿದ್ಧಿಗೆ ಐದು ಕಾರಣಗಳಿವೆ. ಅವನ್ನು ನನ್ನಿಂದ ತಿಳಿದುಕೋ.**

### ಭಾವಾರ್ಥ

ಮಾಡಿದ ಯಾವುದೇ ಕಾರ್ಯಕ್ಕೂ ಸ್ವಲ್ಪ ಪ್ರತಿಕ್ರಿಯೆ ಇರಲೇಬೇಕಷ್ಟೆ. ಆದ್ದರಿಂದ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ಕರ್ಮದ ಪ್ರತಿಕ್ರಿಯೆಯಿಂದ ಕಷ್ಟವನ್ನೂ ಪಡುವುದಿಲ್ಲ, ಸುಖವನ್ನೂ ಪಡುವುದಿಲ್ಲ ಎನ್ನುವುದು ಹೇಗೆ ಎಂಬ ಪ್ರಶ್ನೆಯು ಉದ್ಭವವಾಗುವುದು. ಇದು ಹೇಗೆ ಸಾಧ್ಯ ಎನ್ನುವುದನ್ನು ತೋರಿಸಲು ಪ್ರಭುವು ವೇದಾಂತವನ್ನು ಉದ್ಧರಿಸುತ್ತಿದ್ದಾನೆ. ಎಲ್ಲ ಚಟುವಟಿಕೆಗಳಿಗೆ ಐದು ಕಾರಣಗಳಿವೆ ಮತ್ತು ಎಲ್ಲ ಚಟುವಟಿಕೆಗಳಲ್ಲಿ ಯಶಸ್ಸಿಗೆ ಈ ಐದು ಕಾರಣಗಳನ್ನು ಪರಿಗಣಿಸಬೇಕು ಎಂದು ಹೇಳುತ್ತಾನೆ. ಸಾಂಖ್ಯ ಎನ್ನುವುದು ಜ್ಞಾನದ ಕಾಂಡ ಮತ್ತು ವೇದಾಂತವು ಎಲ್ಲ ಮುಖ್ಯ ಆಚಾರ್ಯರು ಒಪ್ಪಿಕೊಂಡ ಜ್ಞಾನದ ಕಡೆಯ ಕಾಂಡ. ಹೀಗೆಂದು ವೇದಾಂತಸೂತ್ರವನ್ನು ಶಂಕರರು ಒಪ್ಪಿಕೊಳ್ಳುತ್ತಾರೆ. ಆದುದರಿಂದ ಅಂತಹ ಅಧಿಕೃತ ಜನರ ಅಭಿಪ್ರಾಯವನ್ನು ಪಡೆಯಬೇಕು.

ಕಟ್ಟಕಡೆಯ ನಿಯಂತ್ರಣವು ಪರಮಾತ್ಮನ ಕೈಯಲ್ಲಿದೆ. ಭಗವದ್ಗೀತೆಯಲ್ಲಿ ಹೇಳಿದಂತೆ **ಸರ್ವಸ್ಯ ಚಾಹಮ್ ಹೃದಿ ಸನ್ನಿವಿಷ್ಟಃ**. ಪ್ರತಿಯೊಬ್ಬನ ಹಿಂದಿನ ಕರ್ಮಗಳನ್ನು ನೆನಪಿಗೆ ತಂದುಕೊಟ್ಟು ಪರಮಾತ್ಮನು ಅವನನ್ನು ಕೆಲವು ಚಟುವಟಿಕೆಗಳಲ್ಲಿ ತೊಡಗಿಸುತ್ತಾನೆ. ಅಂತರಂಗದಿಂದ ಅವನ ಆದೇಶದಂತೆ ಮಾಡಿದ ಕೃಷ್ಣಪ್ರಜ್ಞೆಯ ಕರ್ಮಗಳಿಂದ, ಈ

ಬದುಕಿನಲ್ಲಾಗಲೀ ಸತ್ತ ಅನಂತರದ ಬದುಕಿನಲ್ಲಾಗಲೀ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

## ಶ್ಲೋಕ - 14

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಞ್ಚಮಮ್ ॥೧೪॥**

**ಅಧಿಷ್ಠಾನಮ್**—ಸ್ಥಳವು; **ತಥಾ**—ಕೂಡ; **ಕರ್ತಾ**—ಕರ್ತನು; **ಕರಣಮ್**—ಸಾಧನಗಳು; **ಚ**—ಮತ್ತು; **ಪೃಥಕ್ ವಿಧಮ್**—ಭಿನ್ನ ಬಗೆಯವು; **ವಿವಿಧಾಃ**—ವಿವಿಧವಾದ; **ಚ**—ಮತ್ತು; **ಪೃಥಕ್**—ಪ್ರತ್ಯೇಕ; **ಚೇಷ್ಟಾಃ**—ಪ್ರಯತ್ನಗಳುಳ್ಳವು; **ದೈವಮ್**—ಪರಮೋತ್ತಮನು; **ಚ**—ಕೂಡ; **ಏವ**—ಖಂಡಿತವಾಗಿಯೂ; **ಅತ್ರ**—ಇಲ್ಲಿ; **ಪಞ್ಚಮಮ್**—ಐದನೆಯವನು.

## ಅನುವಾದ

**ಕರ್ಮಸ್ಥಳ (ದೇಹ), ಕರ್ತ, ವಿವಿಧ ಇಂದ್ರಿಯಗಳು, ವಿವಿಧ ಪ್ರಯತ್ನಗಳು ಮತ್ತು ಕಟ್ಟಕಡೆಯದಾಗಿ ಪರಮಾತ್ಮ ಈ ಐದೂ, ಕ್ರಿಯೆಯ ಐದು ಅಂಶಗಳು.**

## ಭಾವಾರ್ಥ

**ಅಧಿಷ್ಠಾನಮ್** ಎನ್ನುವ ಪದವು ದೇಹವನ್ನು ಸೂಚಿಸುತ್ತದೆ. ದೇಹದೊಳಗಿನ ಆತ್ಮವು ಚಟುವಟಿಕೆಗಳ ಪರಿಣಾಮವನ್ನು ಸಾಧಿಸಲು ಕೆಲಸಮಾಡುತ್ತದೆ. ಆದುದರಿಂದ ಇದಕ್ಕೆ **ಕರ್ತಾ** 'ಮಾಡುವವನು' ಎಂದು ಅರ್ಥ. ಆತ್ಮನು ಕ್ಷೇತ್ರಜ್ಞ ಮತ್ತು ಕರ್ತ ಎಂದು ಶ್ರುತಿಯಲ್ಲಿ ಹೇಳಿದೆ. **ಏಷ ಹಿ ದ್ರಷ್ಟಾ ಸ್ರಷ್ಟಾ** (ಪ್ರಶ್ನ ಉಪನಿಷತ್ 4.9) ಇದನ್ನು ವೇದಾಂತ ಸೂತ್ರದಲ್ಲಿ **ಜ್ಞೋsತ ಏವ** (2.3.18) ಮತ್ತು **ಕರ್ತಾ ಶಾಸ್ತ್ರಾರ್ಥವತ್ತ್ವಾತ್** (2.3.33) ಎನ್ನುವ ಶ್ಲೋಕಗಳಲ್ಲಿ ದೃಢಪಡಿಸಿದೆ. ಇಂದ್ರಿಯಗಳು ಕರ್ಮಸಾಧನಗಳು; ಇಂದ್ರಿಯಗಳ ಮೂಲಕ ಆತ್ಮವು ಹಲವು ವಿಧಗಳಲ್ಲಿ ಕರ್ಮವನ್ನು ಮಾಡುತ್ತದೆ. ಪ್ರತಿಯೊಂದು ಕರ್ಮಕ್ಕೂ ಬೇರೆ ಪ್ರಯತ್ನವಿದೆ. ಆದರೆ ಮನುಷ್ಯನ ಎಲ್ಲ ಕರ್ಮಗಳು ಪರಮಾತ್ಮನ ಸಂಕಲ್ಪವನ್ನು ಅವಲಂಬಿಸಿವೆ. ಪರಮಾತ್ಮನು ಮಿತ್ರನಾಗಿ ಹೃದಯದಲ್ಲಿ ಕುಳಿತಿದ್ದಾನೆ. ಪರಮ ಪ್ರಭುವು ಪರಮ ಕಾರಣನು. ಈ ಸನ್ನಿವೇಶದಲ್ಲಿ ಹೃದಯದಲ್ಲಿ ನೆಲೆಸಿರುವ ಪರಮಾತ್ಮನ ಆದೇಶಕ್ಕೆ ಅನುಗುಣವಾಗಿ ಕೃಷ್ಣಪ್ರಜ್ಞೆಯಲ್ಲಿ ಕರ್ಮಮಾಡುವವನು ಯಾವುದೇ ಕರ್ಮದಿಂದ ಬಂಧಿತನಾಗುವುದಿಲ್ಲ. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿರುವವರು ಅಂತಿಮವಾಗಿ ತಮ್ಮ ಕರ್ಮಗಳಿಗೆ ಹೊಣೆಗಾರರಲ್ಲ. ಎಲ್ಲವೂ ಪರಮ ಸಂಕಲ್ಪವನ್ನು, ಪರಮಾತ್ಮನನ್ನು, ದೇವೋತ್ತಮ ಪರಮ ಪುರುಷನನ್ನು ಅವಲಂಬಿಸಿವೆ.

## ಶ್ಲೋಕ - 15

**ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಞ್ಚೈತೇ ತಸ್ಯ ಹೇತವಃ ॥೧೫॥**

**ಶರೀರ**—ದೇಹ; **ವಾಕ್**—ಮಾತು; **ಮನೋಭಿಃ**—ಮನಸ್ಸುಗಳಿಂದ; **ಯತ್**—ಯಾವ; **ಕರ್ಮ**—

ಕರ್ಮವನ್ನು; **ಪ್ರಾರಭತೇ**—ಆರಂಭಿಸುವನೋ; **ನರಃ**—ವ್ಯಕ್ತಿಯು; **ನ್ಯಾಯ್ಯಮ್**—ನ್ಯಾಯವಾದ; **ವಾ**—ಅಥವಾ; **ವಿಪರೀತಮ್**—ವಿರುದ್ಧವಾದ; **ವಾ**—ಅಥವಾ; **ಪಞ್ಚ**—ಐದು; **ಏತೇ**—ಈ; **ತಸ್ಯ**—ಅದರ; **ಹೇತವಃ**—ಕಾರಣಗಳು.

## ಅನುವಾದ

**ಮನುಷ್ಯನು ದೇಹ, ಮನಸ್ಸು ಮತ್ತು ಮಾತುಗಳ ಮೂಲಕ ಮಾಡುವ ನ್ಯಾಯ ಅಥವಾ ಅನ್ಯಾಯ — ಕರ್ಮಕ್ಕೆ ಈ ಐದು ಅಂಶಗಳೇ ಕಾರಣ.**

## ಭಾವಾರ್ಥ

ಈ ಶ್ಲೋಕದಲ್ಲಿ ನ್ಯಾಯ ಮತ್ತು ಅನ್ಯಾಯ ಎನ್ನುವ ಪದಗಳು ಬಹು ಅರ್ಥವತ್ತಾದವು. ನ್ಯಾಯವಾದ ಕೆಲಸವೆಂದರೆ ಧರ್ಮಗ್ರಂಥಗಳು ವಿಧಿಸಿರುವ ಆದೇಶಗಳಿಗೆ ಅನುಗುಣವಾಗಿ ಮಾಡಿದ ಕಾರ್ಯ. ಅನ್ಯಾಯವಾದ ಕೆಲಸವೆಂದರೆ ಧರ್ಮಗ್ರಂಥಗಳ ಆದೇಶಗಳಿಗೆ ವಿರುದ್ಧವಾಗಿ ಮಾಡಿದ ಕಾರ್ಯ. ಆದರೆ ಏನನ್ನೇ ಮಾಡಿದರೂ ಅದರ ಪೂರ್ವ ಅನುಷ್ಠಾನಕ್ಕೆ ಈ ಐದು ಅಂಶಗಳು ಅಗತ್ಯ.

## ಶ್ಲೋಕ - 16

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ |**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ||೧೬||**

**ತತ್ರ**—ಅಲ್ಲಿ; **ಏವಮ್**—ಹೀಗೆ; **ಸತಿ**—ಇದ್ದು; **ಕರ್ತಾರಮ್**—ಕರ್ತಾರನೆಂದು; **ಆತ್ಮಾನಮ್**—ತನ್ನನ್ನು; **ಕೇವಲಮ್**—ಮಾತ್ರವೇ; **ತು**—ಆದರೆ; **ಯಃ**—ಯಾರು; **ಪಶ್ಯತಿ**—ನೋಡುತ್ತಾನೋ; **ಅಕೃತ ಬುದ್ಧಿತ್ವಾತ್**—ಮಂದಬುದ್ಧಿಯ ನಿಮಿತ್ತ; **ನ**—ಎಂದಿಗೂ ಇಲ್ಲ; **ಸಃ**—ಅವನು; **ಪಶ್ಯತಿ**—ನೋಡುತ್ತಾನೆ; **ದುರ್ಮತಿಃ**—ಮೂರ್ಖನು.

## ಅನುವಾದ

**ಆದುದರಿಂದ ಈ ಐದು ಅಂಶಗಳನ್ನು ಪರಿಗಣಿಸದೆ ತಾನೊಬ್ಬನೇ ಕರ್ತ ಎಂದು ಯೋಚಿಸುವವನು, ನಿಶ್ಚಯವಾಗಿಯೂ ಬಹು ಬುದ್ಧಿವಂತನಲ್ಲ; ಅವನು ವಸ್ತುಸ್ಥಿತಿಯನ್ನು ಕಾಣಲಾರ.**

## ಭಾವಾರ್ಥ

ಪರಮಾತ್ಮನು ಮಿತ್ರನಾಗಿ ಒಳಗಡೆ ಕುಳಿತು ತನ್ನ (ಮನುಷ್ಯನ) ಕರ್ಮಗಳನ್ನು ನಿರ್ವಹಿಸುತ್ತಿದ್ದಾನೆ ಎನ್ನುವುದನ್ನು ಮೂರ್ಖನು ಅರ್ಥಮಾಡಿಕೊಳ್ಳಲಾರ. ಕರ್ಮಸ್ಥಳ (ದೇಹ), ಕರ್ತ, ವಿವಿಧ ಇಂದ್ರಿಯಗಳು, ವಿವಿಧ ಪ್ರಯತ್ನಗಳು ಇವು ಐಹಿಕ ಕಾರಣಗಳಾದರೂ ದೇವೋತ್ತಮ ಪರಮ ಪುರುಷನೇ ಅಂತಿಮ ಕಾರಣ. ಆದುದರಿಂದ ಮನುಷ್ಯನು ನಾಲ್ಕು ಐಹಿಕ ಕಾರಣಗಳನ್ನು ಮಾತ್ರವಲ್ಲದೆ, ಕಾರ್ಯಸಾಧಕ ಕಾರಣವನ್ನು ಅರ್ಥಮಾಡಿಕೊಳ್ಳಬೇಕು. ಪರಮೋನ್ನತನನ್ನು

ಕಾಣಲಾರದವನು ತಾನೇ ಕರ್ತ ಎಂದು ಭಾವಿಸುತ್ತಾನೆ.

## ಶ್ಲೋಕ - 17

**ಯಸ್ಯ ನಾಹಙ್ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ |**
**ಹತ್ವಾಪಿ ಸ ಇಮಾಂಲ್ಲೋಕಾನ್ನ ಹನ್ತಿ ನ ನಿಬಧ್ಯತೇ ||೧೭||**

**ಯಸ್ಯ**—ಯಾರಿಗೆ; **ನ**—ಎಂದಿಗೂ ಇಲ್ಲವೋ; **ಅಹಙ್ಕೃತಃ**—ಅಹಂಕಾರದ; **ಭಾವಃ**—ಸ್ವಭಾವವು; **ಬುದ್ಧಿಃ**—ಬುದ್ಧಿಯು; **ಯಸ್ಯ**—ಯಾರ; **ನ ಲಿಪ್ಯತೇ**—ಆಸಕ್ತವಾಗುವುದಿಲ್ಲವೋ; **ಹತ್ವಾ**—ಕೊಂದರೂ; **ಅಪಿ**—ಕೂಡ; **ಸ**—ಅವನು; **ಇಮಾನ್**—ಈ; **ಲೋಕಾನ್**—ಲೋಕಗಳನ್ನು; **ನ ಹನ್ತಿ**—ಕೊಲ್ಲುವುದಿಲ್ಲ; **ನ ನಿಬಧ್ಯತೇ**—ನಿಲುಕುವುದಿಲ್ಲ.

## ಅನುವಾದ

**ಅಹಂಕಾರದಿಂದ ಪ್ರೇರಿತನಾಗದವನು, ಬುದ್ಧಿಯು ಲಿಪ್ತನಾಗದಿರುವವನು, ಈ ಜಗತ್ತಿನಲ್ಲಿ ಮನುಷ್ಯರನ್ನು ಕೊಂದರೂ ಅವನು ಕೊಂದಂತೆ ಅಲ್ಲ. ಅವನ ಕಾರ್ಯಗಳು ಅವನನ್ನು ಬಂಧಿಸುವುದಿಲ್ಲ.**

## ಭಾವಾರ್ಥ

ಯುದ್ಧ ಮಾಡಬಾರದೆಂಬ ಭಾವನೆಯು ಅಹಂಕಾರದಿಂದ ಬಂದದ್ದು ಎಂದು ಪ್ರಭುವು ಅರ್ಜುನನಿಗೆ ತಿಳಿಸುತ್ತಾನೆ. ಅರ್ಜುನನು ತಾನೇ ಕರ್ಮಕರ್ತ ಎಂದು ಯೋಚಿಸಿದ. ಆದರೆ ಅಂತರಂಗದಲ್ಲಿ ಮತ್ತು ಬಹಿರಂಗದಲ್ಲಿ ಇರುವ ಪರಮ ಅನುಮತಿಯನ್ನು ಅವನು ಗಮನಿಸಲಿಲ್ಲ. ಪರಮ ಆಜ್ಞೆ ಇದೆ ಎನ್ನುವುದನ್ನು ಮನುಷ್ಯನು ತಿಳಿಯದಿದ್ದರೆ ಅವನು ಏಕೆ ಕರ್ಮ ಮಾಡಬೇಕು? ಆದರೆ ಕರ್ಮದ ಸಾಧನೆಗಳನ್ನು, ತಾನೇ ಕರ್ತನೆನ್ನುವುದನ್ನು ಮತ್ತು ಪರಮ ಪ್ರಭುವು ಪರಮ ಅನುಮತಿಯನ್ನು ಕೊಡುವವನು ಎನ್ನುವುದನ್ನು ತಿಳಿದವನು ಏನನ್ನೇ ಮಾಡಲಿ ಪರಿಪೂರ್ಣನಾಗಿರುತ್ತಾನೆ. ಪರಮಾತ್ಮನ ಅಥವಾ ದೇವೋತ್ತಮ ಪರಮ ಪುರುಷನ ಮಾರ್ಗದರ್ಶನದಲ್ಲಿ, ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು, ಕೊಂದರೂ ಕೊಲ್ಲುವುದಿಲ್ಲ. ಹಾಗೆ ಕೊಂದದ್ದರ ಪ್ರತಿಕ್ರಿಯೆಯಿಂದ ಅವನ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಸಿಪಾಯಿಯು ಮೇಲಧಿಕಾರಿಯ ಆಜ್ಞೆಯಂತೆ ಕೊಂದಾಗ ಅವನ ವಿಷಯಕ್ಕೆ ಶಿಕ್ಷೆಕೊಡುವಂತಿಲ್ಲ. ಆದರೆ ಸಿಪಾಯಿಯು ವೈಯಕ್ತಿಕ ಕಾರಣಕ್ಕಾಗಿ ಕೊಂದರೆ ನಿಶ್ಚಯವಾಗಿಯೂ ನ್ಯಾಯಾಲಯವು ಅವನ ವಿಷಯದಲ್ಲಿ ದಂಡನೆ ವಿಧಿಸುತ್ತದೆ.

## ಶ್ಲೋಕ - 18

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ |**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಙ್ಗ್ರಹಃ ||೧೮||**

**ಜ್ಞಾನಮ್**—ಜ್ಞಾನವು; **ಜ್ಞೇಯಮ್**—ಜ್ಞಾನ ವಿಷಯವು; **ಪರಿಜ್ಞಾತಾ**—ತಿಳಿಯುವವನು; **ತ್ರಿವಿಧಾ**—

ಮೂರು ಬಗೆಯ; **ಕರ್ಮ**—ಕರ್ಮದ; **ಚೋದನಾ**—ಪ್ರಚೋದನೆಯು; **ಕರಣಮ್**—ಇಂದ್ರಿಯಗಳು; **ಕರ್ಮ**—ಕರ್ಮವು; **ಕರ್ತಾ**—ಕರ್ತನು; **ಇತಿ**—ಹೀಗೆ; **ತ್ರಿವಿಧಃ**—ಮೂರು ಬಗೆಯ; **ಕರ್ಮ**—ಕರ್ಮದ; **ಸನ್ಗ್ರಹಃ**—ಸಂಗ್ರಹವು.

## ಅನುವಾದ

**ಜ್ಞಾನ, ಜ್ಞೇಯ ಮತ್ತು ಜ್ಞಾನಿ ಇವು ಮೂರೂ ಕರ್ಮವನ್ನು ಪ್ರೇರಿಸುವ ಅಂಶಗಳು; ಇಂದ್ರಿಯಗಳು ಕರ್ಮ ಮತ್ತು ಕರ್ತ — ಇವು ಕರ್ಮದ ಮೂರು ಘಟಕಗಳು.**

## ಭಾವಾರ್ಥ

ದೈನಂದಿನ ಕರ್ಮಕ್ಕೆ ಮೂರು ಬಗೆಯ ಪ್ರೇರಣೆಗಳುಂಟು — ಜ್ಞಾನ, ಜ್ಞೇಯ ಮತ್ತು ಜ್ಞಾನಿ. ಕರ್ಮ ಸಾಧನಗಳು ಕರ್ಮ ಮತ್ತು ಕರ್ತ. ಇವನ್ನು ಕರ್ಮದ ಘಟಕಗಳು ಎನ್ನುತ್ತಾರೆ. ಯಾವುದೇ ಮನುಷ್ಯನು ಮಾಡಿದ ಕರ್ಮಕ್ಕೆ ಈ ಅಂಶಗಳುಂಟು. ಕರ್ಮಮಾಡುವ ಮೊದಲು ಯಾವುದಾದರೂ ಪ್ರೇರಣೆಯಿರುತ್ತದೆ; ಇದನ್ನು ಸ್ಫೂರ್ತಿ ಎಂದು ಕರೆಯುತ್ತಾರೆ. ವಾಸ್ತವವಾಗಿ ಕೆಲಸ ಮಾಡುವ ಮೊದಲು ಕಂಡುಕೊಂಡ ಪರಿಹಾರಗಳು ಕರ್ಮದ ಒಂದು ಸೂಕ್ಷ್ಮರೂಪ. ಅನಂತರ ಕರ್ಮವು ಕಾರ್ಯರೂಪವನ್ನು ಪಡೆಯುತ್ತದೆ. ಮೊದಲು ಮನುಷ್ಯನು ವಿಚಾರ, ಭಾವ ಮತ್ತು ಸಂಕಲ್ಪ ಇವುಗಳ ಮಾನಸಿಕ ಪ್ರಕ್ರಿಯೆಗಳನ್ನು ಅನುಭವಿಸಬೇಕು. ಇದಕ್ಕೆ ಪ್ರೇರಣೆ ಎಂದು ಹೆಸರು. ಕರ್ಮಕ್ಕೆ ಸ್ಫೂರ್ತಿಯು ಧರ್ಮಗ್ರಂಥದಿಂದ ಬರಲಿ, ಗುರುವಿನ ಉಪದೇಶದಿಂದ ಬರಲಿ ಅದು ಒಂದೇ. ಸ್ಫೂರ್ತಿಯೂ ಇದ್ದು, ಕರ್ಮವೂ ಇದ್ದಾಗ ವಾಸ್ತವ ಚಟುವಟಿಕೆಯು ಮನಸ್ಸು ಸೇರಿದಂತೆ ಇಂದ್ರಿಯಗಳ ನೆರವಿನಿಂದ ಆಗುತ್ತದೆ. ಮನಸ್ಸು ಎಲ್ಲ ಇಂದ್ರಿಯಗಳ ಕೇಂದ್ರ. ಒಂದು ಕಾರ್ಯದ ಎಲ್ಲ ಘಟಕಗಳ ಒಟ್ಟಾರೆ ಮೊತ್ತವನ್ನು ಕರ್ಮಸಂಗ್ರಹ ಎಂದು ಕರೆಯುತ್ತಾರೆ.

## ಶ್ಲೋಕ - 19

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |**
**ಪ್ರೋಚ್ಯತೇ ಗುಣಸಙ್ಖ್ಯಾನೇ ಯಥಾವಚ್ಛೃಣು ತಾನ್ಯಪಿ ||೧೯||**

**ಜ್ಞಾನಮ್**—ಜ್ಞಾನ; **ಕರ್ಮ**—ಕರ್ಮ; **ಚ**—ಕೂಡ; **ಕರ್ತಾ**—ಕರ್ತಾರ; **ಚ**—ಕೂಡ; **ತ್ರಿಧಾ**—ಮೂರು ಬಗೆ; **ಏವ**—ಖಂಡಿತವಾಗಿಯೂ; **ಗುಣಭೇದತಃ**—ವಿಭಿನ್ನ ಪ್ರಕೃತಿ ಗುಣಗಳ ಪ್ರಕಾರ; **ಪ್ರೋಚ್ಯತೇ**—ಎಂದು ಹೇಳಲಾಗಿದೆ; **ಗುಣಸಙ್ಖ್ಯಾನೇ**—ವಿಭಿನ್ನ ಗುಣಗಳ ಪ್ರಕಾರ; **ಯಥಾವತ್**—ಅವು ಇರುವಂತೆ; **ಶೃಣು**—ಕೇಳು; **ತಾನಿ**—ಅವೆಲ್ಲವನ್ನು; **ಅಪಿ**—ಕೂಡ.

## ಅನುವಾದ

**ಐಹಿಕ ಪ್ರಕೃತಿಯ ಮೂರು ಬೇರೆ ಬೇರೆ ಗುಣಗಳಿಗೆ ಅನುಗುಣವಾಗಿ ಜ್ಞಾನ, ಕರ್ಮ ಮತ್ತು ಕರ್ತ ಇವುಗಳಲ್ಲಿ ಮೂರು ವಿಧ. ಅವುಗಳ ವಿಷಯವನ್ನು ನನ್ನಿಂದ ತಿಳಿದುಕೋ.**

### ಭಾವಾರ್ಥ

ಹದಿನಾಲ್ಕನೆಯ ಅಧ್ಯಾಯದಲ್ಲಿ ಐಹಿಕ ಪ್ರಕೃತಿಯ ಮೂರು ಗುಣಗಳ ವಿಭಾಗಗಳನ್ನು ವಿವರವಾಗಿ ವರ್ಣಿಸಲಾಯಿತು. ಸತ್ವಗುಣವು ಪ್ರಕಾಶಮಾನವಾದದ್ದು, ರಾಜಸಗುಣವು ಪ್ರಾಪಂಚಿಕವಾದದ್ದು ಮತ್ತು ತಾಮಸಗುಣದಿಂದ ಸೋಮಾರಿತನ ಮತ್ತು ಜಡತ್ವಗಳುಂಟಾಗುತ್ತವೆ ಎಂದು ಆ ಅಧ್ಯಾಯದಲ್ಲಿ ಹೇಳಿದೆ. ಐಹಿಕ ಪ್ರಕೃತಿಯ ಗುಣಗಳೆಲ್ಲ ಬಂಧಿಸುವಂತಹವು. ಅವು ಮುಕ್ತಿಯ ಮೂಲಗಳಲ್ಲ. ಸತ್ವಗುಣದಲ್ಲಿ ಸಹ ಮನುಷ್ಯನು ಬದ್ಧನಾಗುತ್ತಾನೆ. ಹದಿನೇಳನೆಯ ಅಧ್ಯಾಯದಲ್ಲಿ ಐಹಿಕ ಪ್ರಕೃತಿಯ ವಿವಿಧ ಗುಣಗಳ ವಿವಿಧ ಬಗೆಗಳ, ಮನುಷ್ಯರು ಅನುಸರಿಸುವ ವಿವಿಧ ರೀತಿಗಳ ಪೂಜೆಯನ್ನು ವರ್ಣಿಸಲಾಯಿತು. ಈ ಶ್ಲೋಕದಲ್ಲಿ ಪ್ರಭುವು ತಾನು ಗುಣತ್ರಯಗಳಿಗೆ ಅನುಗುಣವಾಗಿ ಬೇರೆ ಬೇರೆ ಬಗೆಗಳ ಜ್ಞಾನ, ಕರ್ತರು ಮತ್ತು ಕರ್ಮ ಇವುಗಳನ್ನು ಕುರಿತು ಮಾತನಾಡಲು ಬಯಸುವುದಾಗಿ ಹೇಳುತ್ತಾನೆ.

### ಶ್ಲೋಕ - 20

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ |**
**ಅವಿಭಕ್ತಂ ವಿಭಕ್ತೇಷು ತಜ್‌ಜ್ಞಾನಂ ವಿದ್ಧಿ ಸಾತ್ತ್ವಿಕಮ್ ||೨೦||**

**ಸರ್ವಭೂತೇಷು**—ಎಲ್ಲ ಜೀವಿಗಳಲ್ಲಿ; **ಯೇನ**—ಯಾವುದರಿಂದ; **ಏಕಮ್**—ಒಂದು; **ಭಾವಮ್**—ಸನ್ನಿವೇಶವನ್ನು; **ಅವ್ಯಯಮ್**—ನಾಶರಹಿತವಾದ; **ಈಕ್ಷತೇ**—ನೋಡುತ್ತಾನೋ; **ಅವಿಭಕ್ತಮ್**—ವಿಭಜಿತವಾಗದ; **ವಿಭಕ್ತೇಷು**—ಅಸಂಖ್ಯ ವಿಭಾಗಗಳಲ್ಲಿ; **ತತ್**—ಆ; **ಜ್ಞಾನಮ್**—ಜ್ಞಾನವನ್ನು; **ವಿದ್ಧಿ**—ತಿಳಿದುಕೊ; **ಸಾತ್ತ್ವಿಕಮ್**—ಸತ್ವಗುಣದಲ್ಲಿ ಇರುವಂತಹದು ಎಂದು.

### ಅನುವಾದ

**ಜೀವಿಗಳಲ್ಲಿ ಅಸಂಖ್ಯಾತ ರೂಪಗಳು; ಆದರೂ ಅವೆಲ್ಲವುಗಳಲ್ಲಿ ಒಂದೇ ಅಭಿನ್ನ ಆಧ್ಯಾತ್ಮಿಕ ಸ್ವಭಾವವನ್ನು ಕಾಣಿಸಬಲ್ಲ ಜ್ಞಾನವೆಂದರೆ ಸಾತ್ವಿಕ ಎಂದು ನೀನು ಅರ್ಥಮಾಡಿಕೊಳ್ಳಬೇಕು.**

### ಭಾವಾರ್ಥ

ಜೀವಿಯು ದೇವತೆಯಾಗಿರಲಿ, ಮನುಷ್ಯನಾಗಿರಲಿ, ಪಕ್ಷಿಯಾಗಿರಲಿ, ಪ್ರಾಣಿಯಾಗಿರಲಿ, ಜಲಜೀವಿಯಾಗಿರಲಿ, ಸಸ್ಯವಾಗಿರಲಿ ಎಲ್ಲ ಜೀವಿಗಳಲ್ಲಿಯೂ ಒಬ್ಬನೇ ಜೀವಾತ್ಮನನ್ನು ಕಾಣುವವನು ಸಾತ್ವಿಕ ಜ್ಞಾನವನ್ನು ಹೊಂದಿದವನು. ಅವರವರ ಹಿಂದಿನ ಕರ್ಮಕ್ಕೆ ಅನುಸಾರವಾಗಿ ಅವರಿಗೆ ಬೇರೆ ಬೇರೆ ದೇಹಗಳಿದ್ದರೂ ಎಲ್ಲ ಜೀವಿಗಳಲ್ಲಿ ಒಬ್ಬನೇ ಜೀವಾತ್ಮನಿದ್ದಾನೆ. ಏಳನೆಯ ಅಧ್ಯಾಯದಲ್ಲಿ ವರ್ಣಿಸಿದಂತೆ, ಪ್ರತಿಯೊಂದು ದೇಹದಲ್ಲಿ ಜೀವಶಕ್ತಿಯ ಅಭಿವ್ಯಕ್ತಿಗೆ ಕಾರಣ, ಪರಮ ಪ್ರಭುವಿನ ಒಂದು ಉತ್ತಮ ಶ್ರೇಷ್ಠ ಪ್ರಕೃ ತಿ. ಹೀಗೆ ಎಲ್ಲ ದೇಹಗಳಲ್ಲಿಯೂ ಒಂದು ಉತ್ತಮ ಪ್ರಕೃತಿಯನ್ನು, ಜೀವಶಕ್ತಿಯನ್ನು ಕಾಣುವುದು ಸಾತ್ವಿಕವಾದದ್ದು. ದೇಹಗಳು ನಾಶವಾಗುವುವಾದರೂ ಆ ಜೀವ ಚೈತನ್ಯವು ಅವಿನಾಶಿ. ದೇಹಗಳಲ್ಲಿ ವ್ಯತ್ಯಾಸಗಳನ್ನು ಕಾಣುತ್ತೇವೆ;

ಬದ್ಧ ಜೀವನದಲ್ಲಿ ಐಹಿಕ ಅಸ್ತಿತ್ವದ ಹಲವಾರು ರೂಪಗಳಿರುವುದರಿಂದ ಜೀವಶಕ್ತಿಯು ವಿಭಾಗವಾದಂತೆ ಕಾಣುತ್ತದೆ. ಇಂತಹ ನಿರಾಕಾರ ಜ್ಞಾನವು ಆತ್ಮ ಸಾಕ್ಷಾತ್ಕಾರದ ಒಂದು ಮುಖ.

## ಶ್ಲೋಕ - 21

**ಪೃಥಕ್ತ್ವೇನ ತು ಯಜ್‌ಜ್ಞಾನಂ ನಾನಾ ಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್‌ಜ್ಞಾನಂ ವಿದ್ಧಿ ರಾಜಸಮ್ ॥೨೧॥**

**ಪೃಥಕ್ತ್ವೇನ**—ವಿಭಜಿತವಾದ ಕಾರಣದಿಂದ; **ತು**—ಆದರೆ; **ಯತ್**—ಯಾವ; **ಜ್ಞಾನಮ್**— ಜ್ಞಾನವನ್ನು; **ನಾನಾ ಭಾವಾನ್**—ಅನೇಕ ಸನ್ನಿವೇಶಗಳೆಂದು; **ಪೃಥಕ್ ವಿಧಾನ್**—ವಿಭಿನ್ನವಾದ; **ವೇತ್ತಿ**—ತಿಳಿಯುತ್ತಾನೋ; **ಸರ್ವೇಷು**—ಎಲ್ಲ; **ಭೂತೇಷು**—ಜೀವಿಗಳಲ್ಲಿ; **ತತ್**—ಆ; **ಜ್ಞಾನಮ್** —ಜ್ಞಾನವನ್ನು; **ವಿದ್ಧಿ**—ತಿಳಿಯಬೇಕು; **ರಾಜಸಮ್**—ರಜೋಗುಣದ ಪ್ರಕಾರದ್ದು ಎಂದು.

## ಅನುವಾದ

**ಯಾವ ಜ್ಞಾನದ ಕಾರಣದಿಂದ ಪ್ರತಿಯೊಂದು ಬೇರೆ ದೇಹದಲ್ಲಿಯೂ ಬೇರೆ ಬಗೆಯ ಜೀವಿಯನ್ನು ಮನುಷ್ಯನು ಕಾಣುತ್ತಾನೋ ಆ ಜ್ಞಾನವು ರಾಜಸ ಎಂದು ತಿಳಿ.**

## ಭಾವಾರ್ಥ

ಐಹಿಕ ದೇಹವೇ ಜೀವಿ ಮತ್ತು ದೇಹವು ನಾಶವಾದಾಗ ಪ್ರಜ್ಞೆಯೂ ನಾಶವಾಗುತ್ತದೆ ಎಂಬ ಕಲ್ಪನೆಯನ್ನು ರಾಜಸ ಎಂದು ಕರೆಯುತ್ತಾರೆ. ಈ ಜ್ಞಾನದ ಪ್ರಕಾರ ದೇಹಗಳಲ್ಲಿ ವ್ಯತ್ಯಾಸವಿರುವುದಕ್ಕೆ ಕಾರಣ ಬೇರೆ ಬೇರೆ ಬಗೆಯ ಪ್ರಜ್ಞೆಗಳ ಬೆಳವಣಿಗೆ; ಇಲ್ಲವಾದರೆ ಪ್ರಜ್ಞೆಯನ್ನು ಪ್ರಕಟಗೊಳಿಸುವ ಪ್ರತ್ಯೇಕ ಆತ್ಮವೇ ಇಲ್ಲ. ದೇಹವೇ ಆತ್ಮ; ದೇಹದಾಚೆ ಬೇರೆ ಆತ್ಮವಿಲ್ಲ. ಈ ಜ್ಞಾನದ ಪ್ರಕಾರ ಪ್ರಜ್ಞೆಯು ಸ್ವಲ್ಪಕಾಲದ್ದು ಅಥವಾ ಪ್ರತ್ಯೇಕ ಆತ್ಮಗಳೇ ಇಲ್ಲ; ಸರ್ವವ್ಯಾಪಿಯಾದ ಒಂದು ಆತ್ಮವಿದೆ; ಅದು ಜ್ಞಾನಮಯ; ಈ ದೇಹವು ಸ್ವಲ್ಪಕಾಲದ ಅಜ್ಞಾನದ ಅಭಿವ್ಯಕ್ತಿ ಅಥವಾ ಈ ದೇಹದಾಚೆ ವಿಶೇಷವಾದ ಪ್ರತ್ಯೇಕ ಆತ್ಮವಾಗಲೀ ಪರಮಾತ್ಮನಾಗಲೀ ಇಲ್ಲ. ಇಂತಹ ಎಲ್ಲ ಕಲ್ಪನೆಗಳು ರಾಜಸ ಗುಣದ ಉತ್ಪನ್ನಗಳು ಎಂದು ಪರಿಗಣಿಸುತ್ತಾರೆ.

## ಶ್ಲೋಕ - 22

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥೨೨॥**

**ಯತ್**—ಯಾವುದು; **ತು**—ಆದರೆ; **ಕೃತ್ಸ್ನವತ್**—ಸರ್ವಸ್ವವಾಗಿ; **ಏಕಸ್ಮಿನ್**—ಒಂದೇ; **ಕಾರ್ಯೇ**—ಕಾರ್ಯದಲ್ಲಿ; **ಸಕ್ತಮ್**—ಆಸಕ್ತವಾದುದೋ; **ಅಹೈತುಕಮ್**—ಕಾರಣವಿಲ್ಲದ; **ಅತತ್ತ್ವ ಅರ್ಥವತ್**—ನೈಜತೆಯ ಜ್ಞಾನವಿಲ್ಲದ; **ಅಲ್ಪಮ್**—ಅತ್ಯಲ್ಪವಾದ; **ಚ**—ಮತ್ತು; **ತತ್**—ಅದು; **ತಾಮಸಮ್**—ತಮೋಗುಣದಲ್ಲಿ ಇರುವಂತಹದು; **ಉದಾಹೃತಮ್**—ಎಂದು ಹೇಳಲಾಗಿದೆ.

## ಅನುವಾದ

**ಯಾವ ಜ್ಞಾನದಿಂದ ಸತ್ಯದ ತಿಳುವಳಿಕೆಯಿಲ್ಲದೆ ಒಂದು ಬಗೆಯ ಕರ್ಮವೇ ಸರ್ವಸ್ವ ಎಂದು ಭಾವಿಸುತ್ತೇವೆಯೋ, ಯಾವ ಜ್ಞಾನವು ಅಲ್ಪವಾದದ್ದೋ, ಅದು ತಾಮಸಗುಣದಲ್ಲಿ ಇದೆ ಎಂದು ಹೇಳುತ್ತಾರೆ.**

## ಭಾವಾರ್ಥ

ಸಾಮಾನ್ಯ ಮನುಷ್ಯನ ಜ್ಞಾನವು ಯಾವಾಗಲೂ ತಮಸ್ಸಿನ ಗುಣದಲ್ಲಿ ಇರುತ್ತದೆ. ಏಕೆಂದರೆ ಬದ್ಧಜೀವನದಲ್ಲಿ ಪ್ರತಿಯೊಬ್ಬ ಜೀವಿಯೂ ತಾಮಸ ಗುಣದಲ್ಲಿಯೇ ಹುಟ್ಟುತ್ತಾನೆ. ಅಧಿಕೃತ ಜನರ ಮಾರ್ಗದರ್ಶನದಿಂದ ಅಥವಾ ಧರ್ಮಗ್ರಂಥಗಳ ಆದೇಶದಿಂದ ಜ್ಞಾನವನ್ನು ಬೆಳೆಸಿಕೊಳ್ಳದವನ ಜ್ಞಾನವು ದೇಹಕ್ಕೆ ಸೀಮಿತವಾಗಿರುತ್ತದೆ. ಅವನಿಗೆ ಧರ್ಮಗ್ರಂಥದ ಆದೇಶಗಳಿಗನುಗುಣವಾಗಿ ಕೆಲಸ ಮಾಡುವ ಯೋಚನೆಯಿಲ್ಲ. ಅವನಿಗೆ ಹಣವೇ ದೇವರು. ಜ್ಞಾನವೆಂದರೆ ದೇಹದ ಕೇಳಿಕೆಗಳನ್ನು ತೃಪ್ತಿಪಡಿಸುವುದು. ಇಂತಹ ಜ್ಞಾನಕ್ಕೂ ಪರಮ ಸತ್ಯಕ್ಕೂ ಸಂಬಂಧವೇ ಇಲ್ಲ. ಇದು ಸ್ವಲ್ಪ ಹೆಚ್ಚು ಕಡಮೆ ಸಾಮಾನ್ಯ ಪ್ರಾಣಿಗಳ ಜ್ಞಾನದಂತೆಯೇ ಇದೆ — ತಿನ್ನುವುದು, ಮಲಗುವುದು, ರಕ್ಷಣೆ ಮತ್ತು ಮೈಥುನ ಇವುಗಳ ಜ್ಞಾನ. ಇಲ್ಲಿ ಇಂತಹ ಜ್ಞಾನವನ್ನು ತಮೋಗುಣದ ಉತ್ಪನ್ನ ಎಂದು ಹೇಳಿದೆ; ಎಂದರೆ ಈ ದೇಹದಾಚೆಗಿನ ಜೀವಾತ್ಮನನ್ನು ಕುರಿತ ಜ್ಞಾನವನ್ನು ಸಾತ್ವಿಕಗುಣ ಎಂದು ಕರೆಯಲಾಗಿದೆ. ಪ್ರಾಪಂಚಿಕ ತರ್ಕ ಮತ್ತು ಊಹಾತ್ಮಕ ಚಿಂತನೆಗಳಿಂದ ಪ್ರಮೇಯಗಳನ್ನೂ ತತ್ವಗಳನ್ನೂ ಸೃಷ್ಟಿಸುವ ಜ್ಞಾನವು ರಾಜಸ ಗುಣದಿಂದಾದದ್ದು; ದೇಹವನ್ನು ನೆಮ್ಮದಿಯಾಗಿಡುವ ಒಂದೇ ವಿಷಯಕ್ಕೆ ಸಂಬಂಧಿಸಿದ ಜ್ಞಾನವು ತಾಮಸ ಜ್ಞಾನ ಎಂದು ಹೇಳಲಾಗಿದೆ.

## ಶ್ಲೋಕ - 23

**ನಿಯತಂ ಸಙ್ಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥೨೩॥**

**ನಿಯತಮ್**—ನಿಯತವಾದ; **ಸಙ್ಗರಹಿತಮ್**—ಆಸಕ್ತಿ ರಹಿತವಾದ; **ಅರಾಗದ್ವೇಷತಃ**—ಪ್ರೀತಿ ಅಥವಾ ಅಸೂಯೆ ಇಲ್ಲದೆ; **ಕೃತಮ್**—ಮಾಡಲ್ಪಟ್ಟ; **ಅಫಲಪ್ರೇಪ್ಸುನಾ**—ಕಾಮ್ಯಫಲಾಪೇಕ್ಷೆ ಇಲ್ಲದವನಿಂದ; **ಕರ್ಮ**—ಕರ್ಮಗಳು; **ಯತ್**—ಯಾವುದೋ; **ತತ್**—ಅದು; **ಸಾತ್ತ್ವಿಕಮ್**— ಸತ್ವಗುಣದಲ್ಲಿ ಇರುವಂತಹದು; **ಉಚ್ಯತೇ**—ಎಂದು ಕರೆಯಲಾಗಿದೆ.

## ಅನುವಾದ

**ನಿಯತವಾಗಿ ಯಾವ ಮೋಹವಿಲ್ಲದೆ, ರಾಗದ್ವೇಷಗಳಿಲ್ಲದೆ ಮತ್ತು ಕರ್ಮಫಲಾಪೇಕ್ಷೆಯಿಲ್ಲದೆ ಮಾಡಿದ ಕರ್ಮವನ್ನು ಸಾತ್ವಿಕ ಎಂದು ಹೇಳಲಾಗುತ್ತದೆ.**

## ಭಾವಾರ್ಥ

ಸಮಾಜದ ವಿವಿಧ ಆಶ್ರಮಗಳು ಮತ್ತು ವಿಭಾಗಗಳಿಗೆ ಅನುಗುಣವಾಗಿ

ಧರ್ಮಗ್ರಂಥಗಳು ವಿಧಿಸಿದ ವೃತ್ತಿ ನಿಯಂತ್ರಿತ ಕರ್ತವ್ಯಗಳನ್ನು ಮಾಡಬೇಕು; ಇವನ್ನು ಮೋಹವಿಲ್ಲದೆ, ಸ್ವಾಮ್ಯದ ಹಕ್ಕುಗಳಿಲ್ಲದೆ, ಪ್ರೀತಿದ್ವೇಷಗಳಿಲ್ಲದೆ ಮಾಡಬೇಕು; ಕೃಷ್ಣಪ್ರಜ್ಞೆಯಲ್ಲಿ ಪರಮ ಪ್ರಭುವಿನ ಸಂತೃಪ್ತಿಗಾಗಿ ತನ್ನ ತೃಪ್ತಿ ಅಥವಾ ತನ್ನ ಭೋಗವಿಲ್ಲದೆ ಮಾಡಬೇಕು; ಇಂತಹ ಕರ್ಮಗಳನ್ನು ಸಾತ್ವಿಕ ಕರ್ಮಗಳು ಎಂದು ಕರೆಯುತ್ತಾರೆ.

## ಶ್ಲೋಕ - 24

**ಯತ್ತು ಕಾಮೇಪ್ಸುನಾ ಕರ್ಮ ಸಾಹಙ್ಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ ರಾಜಸಮುದಾಹೃತಮ್ ॥೨೪॥**

**ಯತ್**—ಯಾವ; **ತು**—ಆದರೆ; **ಕಾಮ ಈಪ್ಸುನಾ**—ಕಾಮ್ಯಫಲಾಪೇಕ್ಷೆಯುಳ್ಳವನಿಂದ; **ಕರ್ಮ**—ಕರ್ಮವು; **ಸ ಅಹಙ್ಕಾರೇಣ**—ಅಹಂಕಾರದೊಂದಿಗೆ; **ವಾ**—ಅಥವಾ; **ಪುನಃ**—ಮತ್ತೆ; **ಕ್ರಿಯತೇ**—ಆಚರಿಸಲಾಗುತ್ತದೋ; **ಬಹುಲ ಆಯಾಸಮ್**—ಮಹಾಶ್ರಮದಿಂದ; **ತತ್**—ಅದು; **ರಾಜಸಮ್**—ರಜೋಗುಣದಲ್ಲಿ ಇರುವಂತಹದು; **ಉದಾಹೃತಮ್**—ಎಂದು ಹೇಳಲಾಗುತ್ತದೆ.

## ಅನುವಾದ

**ಆದರೆ ತನ್ನ ಕಾಮನೆಗಳ ತೃಪ್ತಿಯನ್ನು ಬಯಸುವ ಮನುಷ್ಯನು ಮಾಡಿದ ಮತ್ತು ಮಿಥ್ಯಾಹಂಕಾರದಿಂದ ಮಾಡಿದ ಕರ್ಮವನ್ನು ರಾಜಸ ಕರ್ಮ ಎಂದು ಕರೆಯುತ್ತಾರೆ.**

## ಶ್ಲೋಕ - 25

**ಅನುಬನ್ಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥೨೫॥**

**ಅನುಬನ್ಧಂ**—ಭವಿಷ್ಯದ ಬಂಧನ; **ಕ್ಷಯಮ್**—ನಾಶ; **ಹಿಂಸಾಮ್**—ಇತರರ ಸಂಕಟಗಳ; **ಅನಪೇಕ್ಷ್ಯ**—ಪರಿಣಾಮಗಳನ್ನು ಪರಿಭಾವಿಸದೆ; **ಚ**—ಕೂಡ; **ಪೌರುಷಮ್**—ಸ್ವಾಯತ್ತವಾದ; **ಮೋಹಾತ್**—ಭ್ರಮೆಯಿಂದ; **ಆರಭ್ಯತೇ**—ಆರಂಭ ಮಾಡಲ್ಪಡುವುದೋ; **ಕರ್ಮ**—ಕರ್ಮವು; **ಯತ್**—ಯಾವ; **ತತ್**—ಅದು; **ತಾಮಸಮ್**—ತಮೋಗುಣದಲ್ಲಿ ಇರುವಂತಹದು; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ಮಾಯಾವಶನಾಗಿ, ಧರ್ಮ ಗ್ರಂಥಗಳನ್ನು ಅಲಕ್ಷಿಸಿ, ಮುಂದಿನ ಬಂಧನವನ್ನಾಗಲಿ, ಹಿಂಸೆಯನ್ನಾಗಲಿ, ಇತರರಿಗೆ ಉಂಟಾಗುವ ಯಾತನೆಯನ್ನಾಗಲಿ, ಲಕ್ಷಿಸದೆ ಮಾಡಿದ ಕರ್ಮವನ್ನು ತಾಮಸ ಕರ್ಮ ಎಂದು ಕರೆಯುತ್ತಾರೆ.**

## ಭಾವಾರ್ಥ

ಮನುಷ್ಯನು ತನ್ನ ಕರ್ಮಗಳನ್ನು ರಾಜ್ಯಕ್ಕಾಗಲಿ ಯಮದೂತರಿಗಾಗಲಿ

ಒಪ್ಪಿಸಬೇಕಾಗುತ್ತದೆ. ಹೊಣೆಗೇಡಿತನದ ಕರ್ಮವು ವಿನಾಶಕರವಾದದ್ದು. ಏಕೆಂದರೆ ಅದು ಧರ್ಮಗ್ರಂಥದ ನಿಯಂತ್ರಕ ತತ್ವಗಳನ್ನು ನಾಶಮಾಡುತ್ತದೆ. ಹಲವೊಮ್ಮೆ ಅದಕ್ಕೆ ಹಿಂಸೆಯೇ ಆಧಾರ; ಅದು ಇತರ ಜೀವಿಗಳಿಗೆ ಸಂಕಟವನ್ನು ಉಂಟುಮಾಡುತ್ತದೆ. ಇಂತಹ ಹೊಣೆಗೇಡಿ ಕರ್ಮವನ್ನು ಮನುಷ್ಯನು ತನ್ನ ವೈಯಕ್ತಿಕ ಅನುಭವದ ಕಾರಣದಿಂದ ನಡೆಸುತ್ತಾನೆ. ಇದಕ್ಕೆ ಮಾಯೆ ಎಂದು ಹೆಸರು. ಇಂತಹ ಮಾಯೆಯ ಕೆಲಸವೆಲ್ಲ ತಾಮಸ ಗುಣದ ಸೃಷ್ಟಿ.

## ಶ್ಲೋಕ - 26

**ಮುಕ್ತ ಸಙ್ಗೋऽನಹಂವಾದೀ ಧೃತ್ಯುತ್ಸಾಹಸಮನ್ವಿತಃ |**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ||೨೬||**

**ಮುಕ್ತ ಸಙ್ಗಃ**—ಸಕಲ ಭೌತಿಕ ಸಂಗದಿಂದ ಮುಕ್ತನಾದ; **ಅನಹಂವಾದೀ**—ಅಹಂಕಾರವಿಲ್ಲದ; **ಧೃತಿ**—ದೃಢ ನಿರ್ಧಾರ; **ಉತ್ಸಾಹ**—ಮಹಾ ಉತ್ಸಾಹಗಳಿಂದ; **ಸಮನ್ವಿತಃ**—ಕೂಡಿದ; **ಸಿದ್ಧಿ**—ಪರಿಪೂರ್ಣತೆ; **ಅಸಿದ್ಧ್ಯೋಃ**—ವಿಫಲತೆಗಳಲ್ಲಿ; **ನಿರ್ವಿಕಾರಃ**—ಬದಲಾಗದ; **ಕರ್ತಾ**—ಕರ್ತಾರನು; **ಸಾತ್ತ್ವಿಕಃ**—ಸತ್ವಗುಣದಲ್ಲಿ ಇರುವವನು; **ಉಚ್ಯತೇ**—ಎಂದು ಹೇಳಲಾಗುತ್ತದೆ.

## ಅನುವಾದ

**ಐಹಿಕ ಪ್ರಕೃತಿಯ ಗುಣಗಳ ಸಂಗವಿಲ್ಲದೆ, ದುರಹಂಕಾರವಿಲ್ಲದೆ, ಜಯಾಪಜಯಗಳಲ್ಲಿ ವಿಚಲಿತನಾಗದೆ ದೃಢನಿಶ್ಚಯ ಮತ್ತು ಉತ್ಸಾಹದಿಂದ ತನ್ನ ಕರ್ತವ್ಯವನ್ನು ಮಾಡುವವನು ಸಾತ್ವಿಕ ಕರ್ತ ಎಂದು ಹೇಳಲಾಗುತ್ತದೆ.**

## ಭಾವಾರ್ಥ

ಕೃಷ್ಣಪ್ರಜ್ಞೆಯಲ್ಲಿರುವವನು ಯಾವಾಗಲೂ ಐಹಿಕ ಪ್ರಕೃತಿಯ ಗುಣಗಳನ್ನು ಮೀರಿದವನು. ಅವನಿಗೆ ವಹಿಸಿದ ಕೆಲಸದಿಂದ ಅವನು ಯಾವ ಫಲವನ್ನೂ ನಿರೀಕ್ಷಿಸುವುದಿಲ್ಲ. ಏಕೆಂದರೆ ಅವನು ಮಿಥ್ಯಾಹಂಕಾರ ಮತ್ತು ಗರ್ವಗಳನ್ನು ಮೀರಿದವನು. ಆದರೂ ಅವನು ಕೆಲಸವು ಮುಗಿಯುವವರೆಗೆ ಯಾವಾಗಲೂ ಉತ್ಸಾಹಿಯಾಗಿರುತ್ತಾನೆ. ಅವನು ಕೈಗೊಂಡ ಕಾರ್ಯದ ನೋವನ್ನು ಕುರಿತು ಚಿಂತಿಸುವುದಿಲ್ಲ; ಯಾವಾಗಲೂ ಉತ್ಸಾಹದಿಂದಿರುತ್ತಾನೆ. ಜಯಾಪಜಯಗಳನ್ನು ಲಕ್ಷ್ಯಮಾಡುವುದಿಲ್ಲ; ನೋವು ನಲಿವುಗಳಲ್ಲಿ ಸಮಚಿತ್ತನಾಗಿರುತ್ತಾನೆ. ಇಂತಹ ಕೆಲಸಗಾರನು ಸಾತ್ವಿಕ ಗುಣದಲ್ಲಿ ನೆಲೆಯಾದವನು.

## ಶ್ಲೋಕ - 27

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋऽಶುಚಿಃ |**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ||೨೭||**

**ರಾಗೀ**—ಬಹಳವಾಗಿ ಆಸಕ್ತನಾದ; **ಕರ್ಮಫಲ**—ಕರ್ಮಫಲವನ್ನು; **ಪ್ರೇಪ್ಸುಃ**—ಅಪೇಕ್ಷಿಸುವ; **ಲುಬ್ಧಃ**—ಲೋಭಿಯಾದ; **ಹಿಂಸಾ ಆತ್ಮಕಃ**—ಸದಾ ಅಸೂಯೆ ಪಡುವ; **ಅಶುಚಿಃ**—ಅಶುಚಿಯಾದ;

**ಹರ್ಷ ಶೋಕ ಅನ್ವಿತಃ**—ಸುಖದುಃಖಗಳಿಗೆ ಒಳಗಾದ; **ಕರ್ತಾ**—ಕರ್ತನು; **ರಾಜಸಃ**—ರಜೋಗುಣದಲ್ಲಿ ಇರುವವನು; **ಪರಿಕೀರ್ತಿತಃ**—ಎಂದು ಹೇಳಲಾಗಿದೆ.

### ಅನುವಾದ

**ಕರ್ಮ ಮತ್ತು ಕರ್ಮಫಲಗಳಿಗೆ ಅಂಟಿಕೊಂಡು ಆ ಫಲಗಳನ್ನು ಸವಿಯಲು ಬಯಸುವವನು ಲೋಭಿ, ಸದಾ ಅಸೂಯಾಪರ, ಕೊಳಕ, ಸುಖದುಃಖಗಳಿಂದ ವಿಚಲಿತನಾಗುವವನು — ಇಂತಹ ಮನುಷ್ಯನು ರಾಜಸ ಸ್ವಭಾವದವನು ಎಂದು ಹೇಳುತ್ತಾರೆ.**

### ಭಾವಾರ್ಥ

ಪ್ರಾಪಂಚಿಕತೆ, ಮನೆ, ಹೆಂಡತಿ, ಮಕ್ಕಳು ಇವರಲ್ಲಿ ಅತಿ ಮೋಹದ ಕಾರಣದಿಂದ ಒಂದು ಬಗೆಯ ಕರ್ಮಕ್ಕೆ ಅಥವಾ ಫಲಕ್ಕೆ ಮನುಷ್ಯನು ಅಂಟಿಕೊಳ್ಳುತ್ತಾನೆ. ಇಂತಹ ಮನುಷ್ಯನಿಗೆ ಬದುಕಿನಲ್ಲಿ ಮೇಲೇರಬೇಕೆಂಬ ಅಪೇಕ್ಷೆ ಏನೂ ಇರುವುದಿಲ್ಲ. ಈ ಜಗತ್ತನ್ನು ಐಹಿಕವಾಗಿ ಸಾಧ್ಯವಾದಷ್ಟು ನೆಮ್ಮದಿಯಾಗಿ ಮಾಡಿಕೊಳ್ಳುವುದೇ ಅವನ ಕಾಳಜಿ. ಸಾಮಾನ್ಯವಾಗಿ ಅವನಿಗೆ ದುರಾಸೆ; ತಾನು ಗಳಿಸಿದುದೆಲ್ಲ ಶಾಶ್ವತ, ಎಂದೂ ಕಳೆದುಹೋಗುವುದಿಲ್ಲ ಎಂದು ಅವನು ಭಾವಿಸುತ್ತಾನೆ. ಇಂತಹ ಮನುಷ್ಯನಿಗೆ ಇತರರನ್ನು ಕಂಡರೆ ಅಸೂಯೆ. ಇಂದ್ರಿಯ ಸುಖಕ್ಕಾಗಿ ಎಂತಹ ಕೆಟ್ಟ ಕೆಲಸವನ್ನಾದರೂ ಮಾಡಲು ಅವನು ಸಿದ್ಧ. ಆದುದರಿಂದ ಇಂತಹ ಮನುಷ್ಯನು ಕೊಳಕ; ತನ್ನ ಸಂಪಾದನೆ ಪರಿಶುದ್ಧವೇ ಅಲ್ಲವೇ ಎನ್ನುವ ಯೋಚನೆಯೇ ಅವನಿಗಿಲ್ಲ. ತನ್ನ ಕೆಲಸವು ಯಶಸ್ವಿಯಾದರೆ ಅವನಿಗೆ ಬಹಳ ಖುಷಿ. ತನ್ನ ಕೆಲಸದಲ್ಲಿ ಅಪಜಯವಾದರೆ ತುಂಬ ಸಂಕಟಪಡುತ್ತಾನೆ. ಹೀಗೆ ಕರ್ಮ ಮಾಡುವವನದು ರಾಜಸ ಸ್ವಭಾವ.

## ಶ್ಲೋಕ - 28

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ |**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ||೨೮||**

**ಅಯುಕ್ತಃ**—ಶಾಸ್ತ್ರದ ವಿಧಿಗಳನ್ನು ಗಮನಿಸದ; **ಪ್ರಾಕೃತಃ**—ಪ್ರಾಪಂಚಿಕನಾದ; **ಸ್ತಬ್ಧಃ**—ಹಟವಾದಿಯಾದ; **ಶಠಃ**—ವಂಚಕನಾದ; **ನೈಷ್ಕೃತಿಕಃ**—ಇತರರನ್ನು ಹೀಯಾಳಿಸುವುದರಲ್ಲಿ ಪರಿಣತನಾದ; **ಅಲಸಃ**—ಸೋಮಾರಿಯಾದ; **ವಿಷಾದೀ**—ಉತ್ಸಾಹವಿಹೀನನಾದ; **ದೀರ್ಘಸೂತ್ರೀ**—ತಡಮಾಡುವ; **ಚ**—ಕೂಡ; **ಕರ್ತಾ**—ಕರ್ತನು; **ತಾಮಸಃ**—ತಮೋಗುಣದಲ್ಲಿ ಇರುವವನು; **ಉಚ್ಯತೇ**—ಎಂದು ಹೇಳಲಾಗುತ್ತದೆ.

### ಅನುವಾದ

**ಧರ್ಮಗ್ರಂಥಗಳ ಆದೇಶಗಳಿಗೆ ವಿರುದ್ಧವಾಗಿಯೇ ಯಾವಾಗಲೂ ಕೆಲಸ ಮಾಡುವವನೂ ಪ್ರಾಪಂಚಿಕ ಮನೋಧರ್ಮದವನೂ, ಹಠಮಾರಿಯೂ, ಮೋಸಮಾಡುವವನೂ, ಇತರರಿಗೆ ಅವಮಾನ ಮಾಡುವುದರಲ್ಲಿ ನಿಪುಣನೂ, ಸೋಮಾರಿಯೂ, ಸದಾ ವಿಷಾದದಲ್ಲಿರುವವನೂ, ಮಾಡಬೇಕಾದ**

**ಕೆಲಸವನ್ನು ಮುಂದಕ್ಕೆ ಹಾಕುವವನೂ ಆದ ಕರ್ತನನ್ನು ತಾಮಸಗುಣದ ಕರ್ತನೆನ್ನುತ್ತಾರೆ.**

## ಭಾವಾರ್ಥ

ಧರ್ಮಗ್ರಂಥಗಳ ಆದೇಶಗಳಲ್ಲಿ ಯಾವ ಬಗೆಯ ಕೆಲಸವನ್ನು ಮಾಡಬೇಕು ಮತ್ತು ಯಾವ ಬಗೆಯ ಕೆಲಸವನ್ನು ಮಾಡಬಾರದು ಎನ್ನುವುದನ್ನು ಕಾಣುತ್ತೇವೆ. ಈ ಆದೇಶಗಳಿಗೆ ಲಕ್ಷ್ಯಮಾಡದವರು ಮಾಡಬಾರದ ಕೆಲಸಗಳಲ್ಲಿ ನಿರತರಾಗುತ್ತಾರೆ; ಇಂತಹವರು ಸಾಮಾನ್ಯವಾಗಿ ಪ್ರಾಪಂಚಿಕ ಮನೋಧರ್ಮದವರಾಗಿರುತ್ತಾರೆ. ಅವರು ಪ್ರಕೃತಿಯ ಗುಣಗಳಿಗೆ ಅನುಗುಣವಾಗಿ ಕೆಲಸ ಮಾಡುತ್ತಾರೆ; ಧರ್ಮಗ್ರಂಥದ ಆದೇಶಗಳಿಗೆ ಅನುಗುಣವಾಗಿ ಅಲ್ಲ. ಇಂತಹ ಕರ್ತರು ಅಷ್ಟೇನೂ ಮೃದುವಾಗಿರುವುದಿಲ್ಲ. ಸಾಮಾನ್ಯವಾಗಿ ಅವರು ಉಪಾಯಗಾರರು ಮತ್ತು ಇತರರಿಗೆ ಅವಮಾನ ಮಾಡುವುದರಲ್ಲಿ ನಿಪುಣರು. ಅವರು ಬಹು ಸೋಮಾರಿಗಳು; ತಾವು ಮಾಡಬೇಕಾದ ಕರ್ತವ್ಯವಿದ್ದರೂ ಅದನ್ನು ಸರಿಯಾಗಿ ಮಾಡುವುದಿಲ್ಲ ಮತ್ತು ಮುಂದೆ ಮಾಡಲೆಂದು ಇಟ್ಟುಬಿಡುತ್ತಾರೆ. ಆದುದರಿಂದ ಅವರು ಖಿನ್ನರಾಗಿ ಕಾಣುತ್ತಾರೆ. ಮಾಡಬೇಕಾದ ಕೆಲಸವನ್ನು ಮುಂದಕ್ಕೆ ಹಾಕುತ್ತಾರೆ; ಒಂದು ಗಂಟೆಯಲ್ಲಿ ಮಾಡಬಹುದಾದದ್ದನ್ನು ವರ್ಷಗಟ್ಟಲೆ ಎಳೆಯುತ್ತಾರೆ. ಇಂತಹ ಕರ್ತರು ತಾಮಸ ಗುಣದವರು.

## ಶ್ಲೋಕ - 29

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು |**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಞ್ಜಯ ||೨೯||**

**ಬುದ್ಧೇಃ**—ಬುದ್ಧಿಯ; **ಭೇದಮ್**—ವ್ಯತ್ಯಾಸಗಳನ್ನು; **ಧೃತೇಃ**—ನಿಶ್ಚಲತೆಯ; **ಚ**—**ಕೂಡ**; **ಏವ**—ಖಂಡಿತವಾಗಿಯೂ; **ಗುಣತಃ**—ಭೌತಿಕ ತ್ರಿಗುಣಗಳಿಂದ; **ತ್ರಿವಿಧಮ್**—ಮೂರು ಬಗೆಯ; **ಶೃಣು**—ಆಲಿಸು; **ಪ್ರೋಚ್ಯಮಾನಮ್**—ನನ್ನಿಂದ ವಿವರಿಸಲ್ಪಡುವ; **ಅಶೇಷೇಣ**—ವಿವರವಾಗಿ; **ಪೃಥಕ್ತ್ವೇನ**—ಪ್ರತ್ಯೇಕವಾಗಿ; **ಧನಞ್ಜಯ**—ಧನಂಜಯನೇ.

## ಅನುವಾದ

**ಧನಂಜಯನೇ, ಐಹಿಕ ಪ್ರಕೃತಿಯ ಮೂರು ಗುಣಗಳಿಗೆ ಅನುಗುಣವಾದ ಬೇರೆ ಬೇರೆ ಬಗೆಗಳ ತಿಳುವಳಿಕೆಯ ಮತ್ತು ದೃಢಸಂಕಲ್ಪದ ವಿಷಯವನ್ನು ವಿವರವಾಗಿ ಹೇಳುತ್ತೇನೆ, ದಯವಿಟ್ಟು ಕೇಳು.**

## ಭಾವಾರ್ಥ

ಜ್ಞಾನ, ಜ್ಞೇಯ ಮತ್ತು ಜ್ಞಾನಿ ಇವುಗಳನ್ನು ಐಹಿಕ ಪ್ರಕೃತಿಯ ಗುಣಗಳಿಗೆ ಅನುಗುಣವಾಗಿ ಮೂರು ವಿಭಾಗಗಳಲ್ಲಿ ವಿವರಿಸಿ, ಇದೇ ರೀತಿಯಲ್ಲಿ ಪ್ರಭುವು ಕರ್ತನ ಬುದ್ಧಿ ಮತ್ತು ದೃಢ ಸಂಕಲ್ಪಗಳನ್ನು ವಿವರಿಸುತ್ತಿದ್ದಾನೆ.

### ಶ್ಲೋಕ - 30

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬನ್ಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೦॥**

**ಪ್ರವೃತ್ತಿಮ್**—ಕೆಲಸ ಮಾಡುವುದನ್ನು; **ಚ**—ಕೂಡ; **ನಿವೃತ್ತಿಮ್**—ಕೆಲಸ ಮಾಡದಿರುವುದನ್ನು; **ಚ**—ಮತ್ತು; **ಕಾರ್ಯ**—ಮಾಡಲೇಬೇಕಾದುದನ್ನು; **ಅಕಾರ್ಯೇ**—ಮಾಡಲೇಬಾರದುದನ್ನು; **ಭಯ**—ಭೀತಿ; **ಅಭಯೇ**—ನಿರ್ಭೀತಿಗಳನ್ನು; **ಬನ್ಧಮ್**—ಬಂಧನ; **ಮೋಕ್ಷಮ್**—ಮುಕ್ತಿಗಳನ್ನು; **ಚ**—ಮತ್ತು; **ಯಾ**—ಯಾವ; **ವೇತ್ತಿ**—ತಿಳಿಯುತ್ತದೆಯೋ; **ಬುದ್ಧಿಃ**—ಬುದ್ಧಿಯು; **ಸಾ**—ಅದು; **ಪಾರ್ಥ**—ಪಾರ್ಥನೇ; **ಸಾತ್ತ್ವಿಕೀ**—ಸತ್ವಗುಣದಲ್ಲಿರುವಂತಹದು.

### ಅನುವಾದ

**ಪಾರ್ಥನೇ, ಏನನ್ನು ಮಾಡಲೇಬೇಕು ಮತ್ತು ಏನನ್ನು ಮಾಡಬಾರದು, ಯಾವುದಕ್ಕೆ ಭಯಪಡಬೇಕು ಮತ್ತು ಯಾವುದಕ್ಕೆ ಭಯಪಡಬಾರದು, ಯಾವುದು ಬಂಧಿಸುತ್ತದೆ ಮತ್ತು ಯಾವುದು ಬಿಡುಗಡೆ ಮಾಡುತ್ತದೆ ಎನ್ನುವುದನ್ನು ತಿಳಿಸಿಕೊಡುವ ಬುದ್ಧಿಯು ಸಾತ್ವಿಕ ಗುಣದಲ್ಲಿದೆ.**

### ಭಾವಾರ್ಥ

ಧರ್ಮಗ್ರಂಥಗಳ ಆದೇಶಗಳಿಗೆ ಅನುಗುಣವಾಗಿ ಕೆಲಸಮಾಡುವುದಕ್ಕೆ ಪ್ರವೃತ್ತಿ ಎಂದು ಹೆಸರು; ಹೀಗೆಂದರೆ ಯೋಗ್ಯವಾದ ಕೆಲಸಗಳನ್ನು ಮಾಡುವುದು. ಹೀಗೆ ಆದೇಶಿಸಲ್ಪಡದ ಕಾರ್ಯಗಳನ್ನು ಮಾಡಬಾರದು. ಧರ್ಮಗ್ರಂಥಗಳ ಆದೇಶಗಳನ್ನು ತಿಳಿಯದವನು ಕರ್ಮದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಲ್ಲಿ ಸಿಕ್ಕಿಕೊಳ್ಳುತ್ತಾನೆ. ಬುದ್ಧಿಶಕ್ತಿಯಿಂದ ತಾರತಮ್ಯ ಮಾಡುವುದು ಸಾತ್ವಿಕ ಗುಣಕ್ಕೆ ಸೇರಿದ್ದು.

### ಶ್ಲೋಕ - 31

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥೩೧॥**

**ಯಯಾ**—ಯಾವುದರಿಂದ; **ಧರ್ಮಮ್**—ಧರ್ಮತತ್ವಗಳನ್ನು; **ಅಧರ್ಮಮ್**—ಅಧರ್ಮವನ್ನು; **ಚ**—ಮತ್ತು; **ಕಾರ್ಯಮ್**—ಮಾಡಲೇಬೇಕಾದುದನ್ನು; **ಚ**—ಕೂಡ; **ಅಕಾರ್ಯಮ್**—ಮಾಡಬಾರದುದನ್ನು; **ಏವ**—ಖಂಡಿತವಾಗಿಯೂ; **ಚ**—ಕೂಡ; **ಅಯಥಾವತ್**—ಅಪರಿಪೂರ್ಣವಾಗಿ; **ಪ್ರಜಾನಾತಿ**—ತಿಳಿಯುತ್ತಾನೋ; **ಬುದ್ಧಿಃ**—ಬುದ್ಧಿಯು; **ಸಾ**—ಆ; **ಪಾರ್ಥ**—ಪಾರ್ಥನೇ; **ರಾಜಸೀ**—ರಜೋಗುಣದಲ್ಲಿರುವಂತಹದು.

### ಅನುವಾದ

**ಪಾರ್ಥನೇ, ಧರ್ಮಾಧರ್ಮಗಳ ನಡುವೆ, ಮಾಡಬಹುದಾದ ಮತ್ತು ಮಾಡಬಾರದ ಕಾರ್ಯಗಳ**

**ನಡುವೆ ವ್ಯತ್ಯಾಸವನ್ನು ಗ್ರಹಿಸದ ಬುದ್ಧಿಯು ರಾಜಸ ಗುಣದಲ್ಲಿದೆ.**

## ಶ್ಲೋಕ - 32

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ |**
**ಸರ್ವಾರ್ಥಾನ್ ವಿಪರೀ ತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ||೩೨||**

**ಅಧರ್ಮಮ್**—ಅಧರ್ಮವನ್ನು; **ಧರ್ಮಮ್**—ಧರ್ಮ; **ಇತಿ**—ಎಂದು; **ಯಾ**—ಯಾವುದು; **ಮನ್ಯತೇ**—ತಿಳಿಯುತ್ತದೋ; **ತಮಸಾ**—ಭ್ರಾಂತಿಯಿಂದ; **ಆವೃತಾ**—ಆವೃತವಾದ; **ಸರ್ವ ಅರ್ಥಾನ್**—ಎಲ್ಲ ವಿಷಯಗಳನ್ನು; **ವಿಪರೀತಾನ್**—ತಪ್ಪುದಾರಿಯಲ್ಲಿ; **ಚ**—ಕೂಡ; **ಬುದ್ಧಿಃ**—ಬುದ್ಧಿಯು; **ಸಾ**—ಆ; **ಪಾರ್ಥ**—ಪಾರ್ಥನೇ; **ತಾಮಸೀ**—ತಮೋಗುಣದಲ್ಲಿರುವಂತಹದು.

## ಅನು ವಾದ

**ಪಾರ್ಥನೇ, ಮಾಯೆ ಮತ್ತು ಕತ್ತಲುಗಳ ಪ್ರಭಾವದಿಂದ ಅಧರ್ಮವನ್ನು ಧರ್ಮವೆಂದೂ, ಧರ್ಮವನ್ನು ಅಧರ್ಮವೆಂದೂ ತಿಳಿಯುವ ಬುದ್ಧಿಯು ತಾಮಸಿಕವಾದದ್ದು.**

## ಭಾವಾರ್ಥ

ತಾಮಸಿಕವಾದ ಬುದ್ಧಿಯು ಕೆಲಸ ಮಾಡಬೇಕಾದ ರೀತಿಗೆ ವಿರುದ್ಧವಾಗಿ ಕೆಲಸ ಮಾಡುತ್ತದೆ. ವಾಸ್ತವವಾಗಿ ಧರ್ಮಗಳಲ್ಲದ ಧರ್ಮಗಳನ್ನು ಒಪ್ಪಿಕೊಳ್ಳುತ್ತದೆ; ವಾಸ್ತವವಾದ ಧರ್ಮವನ್ನು ತಿರಸ್ಕರಿಸುತ್ತದೆ. ಅಜ್ಞಾನಿಗಳಾದವರು ಮಹಾತ್ಮನನ್ನು ಸಾಮಾನ್ಯ ಮನುಷ್ಯನೆಂದೂ, ಸಾಮಾನ್ಯ ಮನುಷ್ಯನನ್ನು ಮಹಾತ್ಮನೆಂದೂ ತಿಳಿಯುತ್ತಾರೆ; ಸತ್ಯವನ್ನು ಅಸತ್ಯ ಎಂದೂ ಮತ್ತು ಅಸತ್ಯವನ್ನು ಸತ್ಯ ಎಂದೂ ಸ್ವೀಕರಿಸುತ್ತಾರೆ. ಅವರು ಎಲ್ಲ ಕೆಲಸ ಕಾರ್ಯಗಳಲ್ಲಿಯೂ ತಪ್ಪುದಾರಿಯನ್ನೇ ಹಿಡಿಯುತ್ತಾರೆ. ಆದುದರಿಂದ ಅವರದು ತಾಮಸಿಕ ಬುದ್ಧಿ.

## ಶ್ಲೋಕ - 33

**ಧೃತ್ಯಾ ಯಯಾ ಧಾರಯತೇ ಮನಃ ಪ್ರಾಣೇನ್ದ್ರಿಯಕ್ರಿಯಾಃ |**
**ಯೋಗೇನಾವ್ಯಭಿಚಾರಿಣ್ಯಾ ಧೃತಿ ಸಾ ಪಾರ್ಥ ಸಾತ್ತ್ವಿಕೀ ||೩೩||**

**ಧೃತ್ಯಾ**—ದೃಢನಿರ್ಧಾರದಿಂದ; **ಯಯಾ**—ಯಾವ; **ಧಾರಯತೇ**—ಧಾರಣಮಾಡಲ್ಪಡುವುದೋ; **ಮನಃ**—ಮನಸ್ಸು; **ಪ್ರಾಣ**—ಪ್ರಾಣ; **ಇನ್ದ್ರಿಯ**—ಮತ್ತು ಇಂದ್ರಿಯಗಳ; **ಕ್ರಿಯಾಃ**— ಚಟುವಟಿಕೆಗಳು; **ಯೋಗೇನ**—ಯೋಗಾಭ್ಯಾಸದಿಂದ; **ಅವ್ಯಭಿಚಾರಿಣ್ಯಾ**—ಭಂಗವಿಲ್ಲದೆ; **ಧೃತಿಃ**—ನಿರ್ಧಾರವು; **ಸಾ**—ಆ; **ಪಾರ್ಥ**—ಪಾರ್ಥನೇ; **ಸಾತ್ತ್ವಿಕೀ**—ಸತ್ವಗುಣದಲ್ಲಿರುವಂತಹದು.

## ಅನುವಾದ

**ಪಾರ್ಥನೆ, ಮುರಿಯಲಾಗದ ಸಂಕಲ್ಪ, ಒಂದೇ ಸಮನೆ ನಡೆಸುವ ಯೋಗಾಭ್ಯಾಸವು ಎತ್ತಿಹಿಡಿಯುವ**

**ಸಂಕಲ್ಪ, ಹೀಗೆ ಮನಸ್ಸು ಪ್ರಾಣ ಮತ್ತು ಇಂದ್ರಿಯಗಳ ಕರ್ಮಗಳನ್ನು ನಿಯಂತ್ರಿಸುವ ಸಂಕಲ್ಪ — ಇಂತಹ ಸಂಕಲ್ಪವು ಸಾತ್ವಿಕವಾದದ್ದು.**

### ಭಾವಾರ್ಥ

ಯೋಗವು ಪರಮಾತ್ಮನನ್ನು ಅರ್ಥಮಾಡಿಕೊಳ್ಳಲು ಒಂದು ಸಾಧನ. ದೃಢ ಮನಸ್ಸಿನಿಂದ ಮನಸ್ಸು, ಪ್ರಾಣ ಮತ್ತು ಇಂದ್ರಿಯ ವ್ಯಾಪಾರಗಳನ್ನು ಪರಮ ಪ್ರಭುವಿನಲ್ಲಿ ಕೇಂದ್ರೀಕರಿಸಿ ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸಿದವನು ಕೃಷ್ಣಪ್ರಜ್ಞೆಯಲ್ಲಿರುತ್ತಾನೆ. ಇಂತಹ ದೃಢಸಂಕಲ್ಪ ಸಾತ್ವಿಕವಾದದ್ದು. **ಅವ್ಯಭಿಚಾರಿಣ್ಯಾ** ಎನ್ನುವ ಮಾತು ಬಹಳ ಮಹತ್ವದ್ದು; ಕೃಷ್ಣಪ್ರಜ್ಞೆಯಲ್ಲಿ ನಿರತರಾದವರ ಮನಸ್ಸು ಬೇರೆ ಯಾವುದೇ ಚಟುವಟಿಕೆಯಿಂದ ವಿಚಲಿತವಾಗುವುದಿಲ್ಲ ಎನ್ನುವುದನ್ನು ಅದು ಸೂಚಿಸುತ್ತದೆ.

### ಶ್ಲೋಕ - 34

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥೩೪॥**

**ಯಯಾ**—ಯಾವ; **ತು**—ಆದರೆ; **ಧರ್ಮ**—ಧರ್ಮ; **ಕಾಮ**—ಇಂದ್ರಿಯತೃಪ್ತಿ; **ಅರ್ಥಾನ್**—ಆರ್ಥಿಕ ಅಭಿವೃದ್ಧಿಗಳನ್ನು; **ಧೃತ್ಯಾ**—ನಿರ್ಧಾರದಿಂದ; **ಧಾರಯತೇ**—ಧಾರಣ ಮಾಡುತ್ತಾನೋ; **ಅರ್ಜುನ**—ಅರ್ಜುನನೇ; **ಪ್ರಸಙ್ಗೇನ**—ಆಸಕ್ತಿಯಿಂದಾಗಿ; **ಫಲ ಆಕಾಂಕ್ಷೀ**—ಕಾಮ್ಯಫಲಗಳನ್ನು ಬಯಸಿ; **ಧೃತಿಃ**—ನಿರ್ಧಾರವು; **ಸಾ**—ಅ; **ಪಾರ್ಥ**—ಪಾರ್ಥನೇ; **ರಾಜಸೀ**—ರಜೋಗುಣದಲ್ಲಿ ಇರುವಂತಹದು.

### ಅನುವಾದ

**ಅರ್ಜುನನೆ, ಧರ್ಮದಲ್ಲಿ, ಆರ್ಥಿಕ ಬೆಳವಣಿಗೆಯಲ್ಲಿ ಮತ್ತು ಇಂದ್ರಿಯ ಭೋಗದಲ್ಲಿ ಕರ್ಮಫಲಕ್ಕೆ ಬಲವಾಗಿ ಅಂಟಿಕೊಂಡಿರುವ ದೃಢಸಂಕಲ್ಪವು ರಾಜಸವಾದದ್ದು.**

### ಭಾವಾರ್ಥ

ರಾಜಸ ಭಾವದವನು ಧಾರ್ಮಿಕ ಅಥವಾ ಆರ್ಥಿಕ ಚಟುವಟಿಕೆಗಳಲ್ಲಿ ಯಾವಾಗಲೂ ಕರ್ಮಫಲಾಪೇಕ್ಷೆಯನ್ನು ಇಟ್ಟುಕೊಂಡಿರುತ್ತಾನೆ. ಇಂದ್ರಿಯ ತೃಪ್ತಿಯೊಂದೇ ಅವನ ಬಯಕೆ. ಅವನ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳು ಹೀಗೆ ಕರ್ಮದಲ್ಲಿ ತೊಡಗಿರುತ್ತವೆ.

### ಶ್ಲೋಕ - 35

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಞ್ಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥೩೫॥**

**ಯಯಾ**—ಯಾವುದರಿಂದ; **ಸ್ವಪ್ನಮ್**—ಸ್ವಪ್ನವನ್ನು; **ಭಯಮ್**—ಭೀತಿಯನ್ನು; **ಶೋಕಮ್**—

ದುಃಖವನ್ನು; **ವಿಷಾದಮ್**—ವಿಷಾದವನ್ನು; **ಮದಮ್**—ಭ್ರಮೆಯನ್ನು; **ಏವ**—ಖಂಡಿತವಾಗಿಯೂ; **ಚ**—ಕೂಡ; **ನ ವಿಮುಞ್ಚತಿ**—ತ್ಯಜಿಸುವುದಿಲ್ಲವೋ; **ದುರ್ಮೇಧಾ**—ಬುದ್ಧಿಯಿಲ್ಲದವನು; **ಧೃತಿಃ**—ನಿರ್ಧಾರವು; **ಸಾ**—ಆ; **ಪಾರ್ಥ**—ಪಾರ್ಥನೇ; **ತಾಮಸೀ**—ತಮೋಗುಣದಲ್ಲಿರುವಂತಹದು.

## ಅನುವಾದ

**ಪಾರ್ಥನೇ, ಕನಸು ಕಾಣುವುದು, ಭಯ, ಶೋಕ, ವಿಷಾದ ಮತ್ತು ಮಾಯೆ ಇವುಗಳಾಚೆ ಹೋಗಲಾರದ ಮೂರ್ಖ ಸಂಕಲ್ಪವು ತಾಮಸಿಕವಾದದ್ದು.**

## ಭಾವಾರ್ಥ

ಸಾತ್ವಿಕ ಸ್ವಭಾವದ ಮನುಷ್ಯನು ಕನಸನ್ನೇ ಕಾಣುವುದಿಲ್ಲ ಎಂದು ನಿರ್ಧರಿಸಬಾರದು. ಇಲ್ಲಿ 'ಸ್ವಪ್ನ' ಎಂದರೆ ಅತಿನಿದ್ರೆ. ಸ್ವಪ್ನಕಾಣುವುದು ಯಾವಾಗಲೂ ಉಂಟು; ಸಾತ್ವಿಕ, ರಾಜಸ ಅಥವಾ ತಾಮಸ ಯಾವುದೇ ಗುಣದಲ್ಲಿಯೂ ಸ್ವಪ್ನ ಕಾಣುವುದು ಸಹಜ ಘಟನೆ. ಆದರೆ ಕೆಲವರು ಅತಿನಿದ್ರೆಯನ್ನು ಬಿಡಲಾರರು; ಐಹಿಕ ವಸ್ತುಗಳನ್ನು ಸವಿಯುವ ಜಂಭವನ್ನು ಬಿಡಲಾರರು. ಅವರು ಸದಾ ಐಹಿಕ ಜಗತ್ತಿನ ಮೇಲೆ ಯಜಮಾನಿಕೆ ನಡೆಸುವ ಸ್ವಪ್ನವನ್ನೇ ಕಾಣುತ್ತಿರುತ್ತಾರೆ. ಅವರ ಪ್ರಾಣ, ಮನಸ್ಸು ಮತ್ತು ಇಂದ್ರಿಯಗಳು ಹೀಗೆ ನಿರತವಾಗಿರುತ್ತವೆ. ಇಂತಹವರಿಗೆ ತಾಮಸಿಕ ಸಂಕಲ್ಪವಿದೆ ಎಂದು ಭಾವಿಸಲಾಗುತ್ತದೆ.

## ಶ್ಲೋಕ - 36

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ |**
**ಅಭ್ಯಾಸಾದ್ ರಮತೇ ಯತ್ರ ದುಃಖಾನ್ತಂ ಚ ನಿಗಚ್ಛತಿ ||೩೬||**

**ಸುಖಮ್**—ಸುಖವನ್ನು; **ತು**—ಆದರೆ; **ಇದಾನೀಮ್**—ಈಗ; **ತ್ರಿ ವಿಧಮ್**—ಮೂರು ಬಗೆಯ; **ಶೃಣು**—ಕೇಳು; **ಮೇ**—ನನ್ನಿಂದ; **ಭರತ ಋಷಭ**—ಭರತಶ್ರೇಷ್ಠನೇ; **ಅಭ್ಯಾಸಾತ್**—ಅಭ್ಯಾಸದಿಂದ; **ರಮತೇ**—ಭೋಗಿಸುತ್ತಾನೆ; **ಯತ್ರ**—ಎಲ್ಲಿ; **ದುಃಖ**—ದುಃಖದ; **ಅನ್ತಮ್**—ಕೊನೆಯನ್ನು; **ಚ**—ಕೂಡ; **ನಿಗಚ್ಛತಿ**—ಪಡೆಯುತ್ತಾನೆ.

## ಅನುವಾದ

**ಭರತ ಶ್ರೇಷ್ಠನೇ, ಬದ್ಧ ಆತ್ಮವು ಮೂರು ಬಗೆಗಳ ಸುಖವನ್ನು ಸವಿಯುತ್ತದೆ. ಕೆಲವೊಮ್ಮೆ ಇವುಗಳಿಂದ ಅವನ ಎಲ್ಲ ದುಃಖವೂ ಅಂತ್ಯಗೊಳ್ಳುತ್ತದೆ. ಇದನ್ನು ಕುರಿತು ಹೇಳುತ್ತೇನೆ, ಕೇಳು.**

## ಭಾವಾರ್ಥ

ಬದ್ಧ ಆತ್ಮವು ಐಹಿಕ ಸುಖವನ್ನು ಮತ್ತೆ ಮತ್ತೆ ಸವಿಯಲು ಪ್ರಯತ್ನಿಸುತ್ತದೆ. ಇದು ಚರ್ವಿತ ಚರ್ವಣ. ಆದರೆ ಕೆಲಮೊಮ್ಮೆ ಹೀಗೆ ಸುಖಪಡುವಾಗ ಮಹಾತ್ಮನೊಬ್ಬನ ಸಹವಾಸದಿಂದ ಅವನು ಐಹಿಕ ಬಂಧನದಿಂದ ಬಿಡುಗಡೆಯಾಗುತ್ತಾನೆ. ಬದ್ಧ ಆತ್ಮನು ಯಾವುದಾದರೊಂದು

ಬಗೆಯ ಇಂದ್ರಿಯ ತೃಪ್ತಿಯಲ್ಲಿ ಸದಾ ನಿರತನಾಗಿರುತ್ತಾನೆ; ಆದರೆ ಸತ್ಸಂಗದಿಂದಾಗಿ ಇದು ಒಂದೇ ಅಂಶದ ಪುನರಾವರ್ತನೆ ಎಂದು ಅರ್ಥವಾಗಿ, ತನ್ನ ನಿಜವಾದ ಕೃಷ್ಣಪ್ರಜ್ಞೆಯು ಅವನಲ್ಲಿ ಜಾಗೃತವಾದಾಗ, ಅವನು ಕೆಲವೊಮ್ಮೆ ಹೀಗೆ ಪುನರಾವರ್ತನೆಗೊಳ್ಳುವ ತೋರಿಕೆಯ ಸುಖದಿಂದ ಎಚ್ಚರಗೊಳ್ಳುತ್ತಾನೆ.

## ಶ್ಲೋಕ - 37

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ |**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ||೩೭||**

**ಯತ್**—ಯಾವ; **ತತ್**—ಅದು; **ಅಗ್ರೇ**—ಪ್ರಾರಂಭದಲ್ಲಿ; **ವಿಷಮ್ ಇವ**—ವಿಷದಹಾಗೆ; **ಪರಿಣಾಮೇ**—ಅಂತ್ಯದಲ್ಲಿ; **ಅಮೃತ**—ಅಮೃತಕ್ಕೆ; **ಉಪಮಮ್**—ಹೋಲಿಸಬಹುದಾದದ್ದು; **ತತ್**—ಆ; **ಸುಖಮ್**—ಸುಖವು; **ಸಾತ್ತ್ವಿಕಮ್**—ಸತ್ವಗುಣದಲ್ಲಿರುವಂತಹದು; **ಪ್ರೋಕ್ತಮ್**— ಎಂದು ಹೇಳಲಾಗಿದೆ; **ಆತ್ಮ**—ಆತ್ಮ; **ಬುದ್ಧಿ**—ಬುದ್ಧಿಗಳ; **ಪ್ರಸಾದಜಮ್**— ತೃಪ್ತಿಯಿಂದ ಜನಿಸಿದ.

### ಅನುವಾದ

**ಯಾವುದು ಪ್ರಾರಂಭದಲ್ಲಿ ವಿಷದಂತಿದ್ದು ಕಡೆಗೆ ಅಮೃತದಂತೆ ಆಗುತ್ತದೆಯೋ, ಯಾವುದು ಆತ್ಮ ಸಾಕ್ಷಾತ್ಕಾರದ ಹಂತಕ್ಕೆ ಜಾಗೃತಗೊಳಿಸುವುದೋ, ಅದನ್ನು ಸಾತ್ವಿಕ ಸುಖ ಎಂದು ಕರೆಯುತ್ತಾರೆ.**

### ಭಾವಾರ್ಥ

ಆತ್ಮ ಸಾಕ್ಷಾತ್ಕಾರದ ಅನ್ವೇಷಣೆಯಲ್ಲಿ ಮನಸ್ಸನ್ನು ಹಾಗೂ ಇಂದ್ರಿಯಗಳನ್ನು ನಿಯಂತ್ರಣಗೊಳಿಸಲು ಮತ್ತು ಮನಸ್ಸನ್ನು ಆತ್ಮದಲ್ಲಿ ಕೇಂದ್ರೀಕರಿಸಲು, ಮನುಷ್ಯನು ಅನೇಕ ನಿಯಮ ನಿಬಂಧನೆಗಳನ್ನು ಅನುಸರಿಸಬೇಕಾಗುತ್ತದೆ. ಈ ಎಲ್ಲ ಪ್ರಕ್ರಿಯೆಗಳೂ ಬಹು ಶ್ರಮದಾಯಕ, ವಿಷದಂತೆ ಕಹಿ. ಆದರೆ ನಿಯಮಗಳನ್ನು ಯಶಸ್ವಿಯಾಗಿ ಪಾಲಿಸಿ ದಿವ್ಯಸ್ಥಿತಿಗೆ ಬಂದರೆ ಅವನು ನಿಜವಾದ ಅಮೃತವನ್ನು ಕುಡಿಯಲು ಪ್ರಾರಂಭಿಸುತ್ತಾನೆ ಮತ್ತು ಸುಖಪಡುತ್ತಾನೆ.

## ಶ್ಲೋಕ - 38

**ವಿಷಯೇನ್ದ್ರಿಯ ಸಂಯೋಗಾದ್ಯತ್ತದಗ್ರೇಽಮೃತೋಪಮಮ್ |**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ||೩೮||**

**ವಿಷಯ**—ಇಂದ್ರಿಯ ವಿಷಯಗಳ; **ಇನ್ದ್ರಿಯ**—ಮತ್ತು ಇಂದ್ರಿಯಗಳು; **ಸಂಯೋಗಾತ್**—ಸಂಯೋಗದಿಂದ; **ಯತ್**—ಯಾವ; **ತತ್**—ಅದು; **ಅಗ್ರೇ**—ಪ್ರಾರಂಭದಲ್ಲಿ; **ಅಮೃತ ಉಪಮಮ್**—ಅಮೃತದಂತೆ; **ಪರಿಣಾಮೇ**—ಕೊನೆಯಲ್ಲಿ; **ವಿಷಮ್ ಇವ**—ವಿಷದ ಹಾಗೋ; **ತತ್**—ಆ; **ಸುಖಮ್**—ಸುಖವು; **ರಾಜಸಮ್**—ರಜೋಗುಣದಲ್ಲಿರುವಂತಹದೆಂದು; **ಸ್ಮೃತಮ್**—ಪರಿಗಣಿತವಾಗಿದೆ.

## ಅನುವಾದ

**ಒಂದು ಬಗೆಯ ಸುಖವು ಇಂದ್ರಿಯಗಳು ತಮ್ಮ ವಸ್ತುವಿನೊಡನೆ ಸಂಪರ್ಕ ಪಡೆಯುವುದರಿಂದ ಉಂಟಾಗುತ್ತದೆ. ಇದು ಪ್ರಾರಂಭದಲ್ಲಿ ಅಮೃತದಂತಿದ್ದು ಕಡೆಗೆ ವಿಷವಾಗುತ್ತದೆ; ಇದು ರಾಜಸ ಗುಣದ ಸುಖ ಎಂದು ಹೇಳಲಾಗುತ್ತದೆ.**

## ಭಾವಾರ್ಥ

ತರುಣ ತರುಣಿಯರ ಭೇಟಿಯಾಗುತ್ತದೆ; ಅವಳನ್ನು ನೋಡುವಂತೆ, ಮುಟ್ಟುವಂತೆ, ಕೂಡುವಂತೆ ತರುಣನನ್ನು ಇಂದ್ರಿಯಗಳು ದೂಡುತ್ತವೆ. ಪ್ರಾರಂಭದಲ್ಲಿ ಇದು ಇಂದ್ರಿಯಗಳಿಗೆ ಬಹು ಸಂತೋಷವನ್ನು ಕೊಡಬಹುದು. ಆದರೆ ಕಡೆಯಲ್ಲಿ ಅಥವಾ ಸ್ವಲ್ಪ ಸಮಯದ ಅನಂತರ ಇದು ವಿಷಸಮಾನವಾಗುತ್ತದೆ. ಅವರು ಬೇರೆ ಬೇರೆಯಾಗುತ್ತಾರೆ ಅಥವಾ ವಿವಾಹ ವಿಚ್ಛೇದನವಾಗುತ್ತದೆ; ಗೋಳಾಟ, ದುಃಖ ಎಲ್ಲ ಆಗುತ್ತವೆ. ಇಂತಹ ಸುಖವು ಯಾವಾಗಲೂ ರಾಜಸವಾದದ್ದು. ಇಂದ್ರಿಯಗಳು ಮತ್ತು ಇಂದ್ರಿಯಗಳ ವಸ್ತುಗಳ ಸಂಯೋಗದಿಂದ ಪಡೆಯುವ ಸುಖವು ಯಾವಾಗಲೂ ದುಃಖಕರವಾದದ್ದು; ಎಲ್ಲ ರೀತಿಗಳಿಂದಲೂ ಇದನ್ನು ತಪ್ಪಿಸಿಕೊಳ್ಳಬೇಕು.

## ಶ್ಲೋಕ - 39

**ಯದಗ್ರೇ ಚಾನುಬನ್ಧೇ ಚ ಸುಖಂ ಮೋಹನಮಾತ್ಮನಃ |**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ||೩೯||**

**ಯತ್**—ಯಾವುದು; **ಅಗ್ರೇ**—ಪ್ರಾರಂಭದಲ್ಲಿ; **ಚ**—ಕೂಡ; **ಅನುಬನ್ಧೇ**—ಅಂತ್ಯದಲ್ಲಿಯೂ; **ಚ**—ಕೂಡ;**ಸುಖಮ್**—ಸುಖವು; **ಮೋಹನಮ್**—ಮೋಹಕವು; **ಆತ್ಮನಃ**—ತನ್ನ; **ನಿದ್ರಾ**—ನಿದ್ರೆ; **ಆಲಸ್ಯ**—ಸೋಮಾರಿತನ; **ಪ್ರಮಾದ**—ಭ್ರಮೆಗಳ; **ಉತ್ಥಮ್**—ಉತ್ಪನ್ನಗಳಾದ; **ತತ್**—ಅದು; **ತಾಮಸಮ್**—ತಮೋಗುಣದಲ್ಲಿ ಇರುವಂತಹದು; **ಉದಾಹೃತಮ್**—ಎಂದು ಹೇಳಲಾಗುತ್ತದೆ.

## ಅನುವಾದ

**ಆತ್ಮಸಾಕ್ಷಾತ್ಕಾರಕ್ಕೆ ಕುರುಡಾದ, ಮೊದಲಿನಿಂದ ಕಡೆಯವರೆಗೆ ಭ್ರಾಂತಿಯೇ ಆದ, ಸೋಮಾರಿತನ ಮತ್ತು ಮಾಯೆಯಿಂದ ಉದ್ಭವವಾಗುವ ಸುಖವನ್ನು ತಾಮಸಿಕ ಎಂದು ಹೇಳುತ್ತಾರೆ.**

## ಭಾವಾರ್ಥ

ಆಲಸ್ಯದಲ್ಲಿ ಮತ್ತು ನಿದ್ರೆಯಲ್ಲಿ ಸಂತೋಷಪಡುವವನದು ನಿಶ್ಚಯವಾಗಿಯೂ ತಾಮಸ ಗುಣ. ಹೇಗೆ ಕರ್ಮವನ್ನು ಮಾಡಬೇಕು, ಹೇಗೆ ಮಾಡಬಾರದು ಎನ್ನುವುದನ್ನು ತಿಳಿಯದವನದೂ ತಾಮಸ ಗುಣ. ತಾಮಸ ಗುಣದವನಿಗೆ ಎಲ್ಲವೂ ಮಾಯೆಯೇ. ಪ್ರಾರಂಭದಲ್ಲಿಯಾಗಲೀ ಮುಕ್ತಾಯದಲ್ಲಾಗಲೀ ಸುಖವಿಲ್ಲ. ರಾಜಸ ಗುಣದ ಮನುಷ್ಯನಿಗೆ ಪ್ರಾರಂಭದಲ್ಲಿ ಯಾವುದಾದರೂ

ರೀತಿಯ ಕ್ಷಣಿಕ ಸಂತೋಷವಿರಬಹುದು, ಕಡೆಯಲ್ಲಿ ದುಃಖವೇ. ಆದರೆ ತಾಮಸ ಸ್ವಭಾವದವನಿಗೆ ಪ್ರಾರಂಭದಲ್ಲಿಯೂ ಕಡೆಯಲ್ಲಿಯೂ ಸಂಕಟವೇ.

## ಶ್ಲೋಕ - 40

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ |**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ||೪೦||**

**ನ**—ಇಲ್ಲ; **ತತ್**—ಅದು; **ಅಸ್ತಿ**—ಇದೆ; **ಪೃಥಿವ್ಯಾಮ್**—ಭೂಮಿಯ ಮೇಲೆ; **ವಾ**—ಅಥವಾ; **ದಿವಿ**—ಊರ್ಧ್ವಲೋಕಗಳಲ್ಲಿ; **ದೇವೇಷು**—ದೇವತೆಗಳಲ್ಲಿ; **ವಾ**—ಅಥವಾ; **ಪುನಃ**—ಮತ್ತೆ; **ಸತ್ತ್ವಮ್**—ಅಸ್ತಿತ್ವವು; **ಪ್ರಕೃತಿಜೈಃ**—ಭೌತಿಕ ಪ್ರಕೃತಿಯಿಂದ ಹುಟ್ಟಿದ; **ಮುಕ್ತಮ್**—ಮುಕ್ತವಾದದ್ದು; **ಯತ್**—ಯಾವುದೋ; **ಏಭಿಃ**—ಇವುಗಳ ಪ್ರಭಾವದಿಂದ; **ಸ್ಯಾತ್**—ಇದೆ; **ತ್ರಿಭಿಃ**—ಮೂರು; **ಗುಣೈಃ**—ಭೌತಿಕ ಪ್ರಕೃತಿ ಗುಣಗಳಿಂದ.

## ಅನುವಾದ

**ಈ ಲೋಕದಲ್ಲಾಗಲೀ, ಮೇಲಿನ ಲೋಕವ್ಯೂಹಗಳ ದೇವತೆಗಳಲ್ಲಾಗಲೀ, ಐಹಿಕ ಪ್ರಕೃತಿಯಿಂದ ಹುಟ್ಟಿದ ಈ ಮೂರು ಗುಣಗಳಿಂದ ಬಿಡುಗಡೆ ಹೊಂದಿದ ಜೀವಿ ಯಾರೂ ಇಲ್ಲ.**

## ಭಾವಾರ್ಥ

ವಿಶ್ವದ ಮೇಲೆ ಐಹಿಕ ಪ್ರಕೃತಿಯ ಗುಣತ್ರಯಗಳ ಒಟ್ಟು ಪ್ರಭಾವವನ್ನು ಇಲ್ಲಿ ಪ್ರಭುವು ಸಂಗ್ರಹವಾಗಿ ಹೇಳುತ್ತಾನೆ.

## ಶ್ಲೋಕ - 41

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರನ್ತಪ |**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ||೪೧||**

**ಬ್ರಾಹ್ಮಣ**—ಬ್ರಾಹ್ಮಣ; **ಕ್ಷತ್ರಿಯ**—ಕ್ಷತ್ರಿಯ; **ವಿಶಾಮ್**—ಮತ್ತು ವೈಶ್ಯರ; **ಶೂದ್ರಾಣಾಮ್**—ಶೂದ್ರರ; **ಚ**—ಮತ್ತು; **ಪರನ್ತಪ**—ಶತ್ರು ಮರ್ದನನೇ; **ಕರ್ಮಾಣಿ**—ಕರ್ಮಗಳು; **ಪ್ರವಿಭಕ್ತಾನಿ**—ವಿಭಜಿತವಾಗಿವೆ; **ಸ್ವಭಾವ**—ಅವರ ಸ್ವಭಾವದಿಂದ; **ಪ್ರಭವೈಃ**—ಹುಟ್ಟಿದ; **ಗುಣೈಃ**—ಭೌತಿಕ ಪ್ರಕೃತಿ ಗುಣಗಳಿಂದ.

## ಅನುವಾದ

**ಶತ್ರುಗಳನ್ನು ಗೆಲ್ಲುವ ಅರ್ಜುನನೆ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಐಹಿಕ ಗುಣಗಳಿಗೆ ಅನುಗುಣವಾಗಿ ತಮ್ಮ ಸ್ವಂತ ಸ್ವಭಾವಗಳಿಂದ ಹುಟ್ಟಿಬಂದ ಗುಣಗಳಿಂದ ಬೇರೆ ಬೇರೆಯಾಗಿರುತ್ತಾರೆ.**

## ಶ್ಲೋಕ - 42

**ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೪೨॥**

**ಶಮಃ**—ಶಾಂತಿಯು; **ದಮಃ**—ಆತ್ಮನಿಗ್ರಹವು; **ತಪಃ**—ತಪಸ್ಸು; **ಶೌಚಮ್**—ಶುಚಿಯು; **ಕ್ಷಾನ್ತಿಃ**—ತಾಳ್ಮೆಯು; **ಆರ್ಜವಮ್**—ಪ್ರಾಮಾಣಿಕತೆಯು; **ಏವ**—ಖಂಡಿತವಾಗಿಯೂ; **ಚ**—ಮತ್ತು; **ಜ್ಞಾನಮ್**—ಜ್ಞಾನವು; **ವಿಜ್ಞಾನಮ್**—ವಿಜ್ಞಾನವು; **ಆಸ್ತಿಕ್ಯಮ್**—ಧಾರ್ಮಿಕತೆಯು; **ಬ್ರಹ್ಮ**—ಬ್ರಾಹ್ಮಣರ; **ಕರ್ಮ**—ಕರ್ತವ್ಯ; **ಸ್ವಭಾವಜಮ್**—ಸ್ವಭಾವದಿಂದ ಜನಿಸಿದ.

## ಅನುವಾದ

**ಶಾಂತಿಸ್ವಭಾವ, ಆತ್ಮಸಂಯಮ, ತಪಸ್ಸು, ಸಹನೆ, ಪ್ರಾಮಾಣಿಕತೆ, ಜ್ಞಾನ, ವಿವೇಕ ಮತ್ತು ಆಸ್ತಿಕ್ಯ — ಈ ಸಹಜಗುಣಗಳಿಂದ ಬ್ರಾಹ್ಮಣರು ಕರ್ಮವನ್ನು ಮಾಡುತ್ತಾರೆ.**

## ಶ್ಲೋಕ - 43

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರ ಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥**

**ಶೌರ್ಯಮ್**—ಶೌರ್ಯವು; **ತೇಜಃ**—ತೇಜಸ್ಸು; **ಧೃತಿಃ**—ನಿರ್ಧಾರವು; **ದಾಕ್ಷ್ಯಮ್**—ವ್ಯಾವಹಾರಿಕ ಜಾಣತನವು; **ಯುದ್ಧೇ**—ಯುದ್ಧದಲ್ಲಿ; **ಚ**—ಮತ್ತು; **ಅಪಿ**—ಕೂಡ; **ಅಪಲಾಯನಮ್**—ಓಡಿಹೋಗದಿರುವುದು; **ದಾನಮ್**—ಧಾರಾಳತನ; **ಈಶ್ವರ**—ನಾಯಕತ್ವದ; **ಭಾವಃ**—ಸ್ವಭಾವವು; **ಚ**—ಮತ್ತು; **ಕ್ಷಾತ್ರಮ್**—ಕ್ಷತ್ರಿಯನ; **ಕರ್ಮ**—ಕರ್ತವ್ಯ; **ಸ್ವಭಾವಜಮ್**—ಸ್ವಭಾವದಿಂದ ಜನಿಸಿದ.

## ಅನುವಾದ

**ಶೌರ್ಯ, ತೇಜಸ್ಸು, ದೃಢಸಂಕಲ್ಪ, ದಕ್ಷತೆ, ಯುದ್ಧದಲ್ಲಿ ಧೈರ್ಯ, ಔದಾರ್ಯ ಮತ್ತು ನಾಯಕತ್ವ ಇವು ಕ್ಷತ್ರಿಯರಿಗೆ ಕೆಲಸ ಮಾಡಲು ಸಹಜ ಗುಣಗಳು.**

## ಶ್ಲೋಕ - 44

**ಕೃಷಿ ಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥೪೪॥**

**ಕೃಷಿ**—ಉಳುವುದು; **ಗೋ**—ಹಸುಗಳ; **ರಕ್ಷ್ಯ**—ರಕ್ಷಣೆ; **ವಾಣಿಜ್ಯಮ್**—ವ್ಯಾಪಾರ; **ವೈಶ್ಯ**—ವೈಶ್ಯರ; **ಕರ್ಮ**—ಕರ್ತವ್ಯ; **ಸ್ವಭಾವಜಮ್**—ಸ್ವಭಾವದಿಂದ ಜನಿಸಿದ; **ಪರಿಚರ್ಯಾ**—ಸೇವೆಯಿಂದ; **ಆತ್ಮಕಮ್**—ಕೂಡಿರುವುದು; **ಕರ್ಮ**—ಕರ್ತವ್ಯವು; **ಶೂದ್ರಸ್ಯ**—ಶೂದ್ರರಿಗೆ; **ಅಪಿ**—ಕೂಡ; **ಸ್ವಭಾವಜಮ್**—ಸ್ವಭಾವದಿಂದ ಹುಟ್ಟಿದ.

## ಅನುವಾದ

**ಕೃಷಿ, ಗೋರಕ್ಷಣೆ ಮತ್ತು ವಾಣಿಜ್ಯ ಇವು ವೈಶ್ಯರಿಗೆ ಸಹಜವಾದ ಕೆಲಸ; ಶ್ರಮ ಮತ್ತು ಇತರರ ಸೇವೆ ಇವು ಶೂದ್ರರಿಗೆ ಸಹಜವಾದವು.**

## ಶ್ಲೋಕ - 45

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥೪೫॥**

**ಸ್ವೇ ಸ್ವೇ**—ತಮ್ಮ ತಮ್ಮ; **ಕರ್ಮಣಿ**—ಕೆಲಸದಲ್ಲಿ; **ಅಭಿರತಃ**—ತೊಡಗಿ; **ಸಂಸಿದ್ಧಿಮ್**—ಪರಿಪೂರ್ಣತೆಯನ್ನು; **ಲಭತೇ**—ಪಡೆಯುತ್ತಾನೆ; **ನರಃ**—ಮನುಷ್ಯನು; **ಸ್ವಕರ್ಮ**—ತನ್ನ ಕರ್ತವ್ಯದಲ್ಲಿ; **ನಿರತಃ**—ನಿರತನಾದವನು; **ಸಿದ್ಧಿಮ್**—ಸಿದ್ಧಿಯನ್ನು; **ಯಥಾ**—ಹೇಗೆ; **ವಿನ್ದತಿ**— ಹೊಂದುತ್ತಾನೆ; **ತತ್**—ಅದನ್ನು; **ಶೃಣು**—ಕೇಳು.

## ಅನುವಾದ

**ತನ್ನ ತನ್ನ ಕರ್ಮದ ಗುಣಗಳನ್ನು ಅನುಸರಿಸಿ ಪ್ರತಿಯೊಬ್ಬ ಮನುಷ್ಯನೂ ಪರಿಪೂರ್ಣನಾಗಬಹುದು. ಇದನ್ನು ಹೇಗೆ ಮಾಡಬಹುದು ಎನ್ನುವುದನ್ನು ತಿಳಿಸುತ್ತೇನೆ, ಕೇಳು.**

## ಶ್ಲೋಕ - 46

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥೪೬॥**

**ಯತಃ**—ಯಾರಿಂದ; **ಪ್ರವೃತ್ತಿಃ**—ಉದ್ಗಮವೋ; **ಭೂತಾನಾಮ್**—ಎಲ್ಲ ಜೀವಿಗಳ; **ಯೇನ**—ಯಾರಿಂದ; **ಸರ್ವಮ್**—ಎಲ್ಲವೂ; **ಇದಮ್**—ಇದು; **ತತಮ್**—ವ್ಯಾಪಿಸಿದೆಯೋ; **ಸ್ವಕರ್ಮಣಾ**—ತನ್ನ ಕರ್ತವ್ಯಗಳಿಂದ; **ತಮ್**—ಅವನನ್ನು; **ಅಭ್ಯರ್ಚ್ಯ**—ಆರಾಧಿಸುತ್ತ; **ಸಿದ್ಧಿಮ್**—ಸಿದ್ಧಿಯನ್ನು; **ವಿನ್ದತಿ**—ಹೊಂದುತ್ತಾನೆ; **ಮಾನವಃ**—ಮನುಷ್ಯನು.

## ಅನುವಾದ

**ಪ್ರಭುವು ಸರ್ವಜೀವಿಗಳ ಮೂಲ ಮತ್ತು ಸರ್ವವ್ಯಾಪಿ; ಅವನನ್ನು ಪೂಜಿಸುವುದರಿಂದ ಮತ್ತು ತನ್ನ ಕರ್ಮವನ್ನು ಮಾಡುವುದರಿಂದ ಮನುಷ್ಯನು ಸಿದ್ಧಿಯನ್ನು ಪಡೆಯಬಹುದು.**

## ಭಾವಾರ್ಥ

ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವಂತೆ ಎಲ್ಲ ಜೀವಿಗಳೂ ಪರಮ ಪ್ರಭುವಿನ ವಿಭಿನ್ನಾಂಶಗಳು. ಹೀಗೆ ಪರಮ ಪ್ರಭುವು ಎಲ್ಲ ಜೀವಿಗಳ ಆದಿ. ಇದನ್ನು ವೇದಾಂತ ಸೂತ್ರದಲ್ಲಿ ದೃಢಪಡಿಸಿದೆ. **ಜನ್ಮಾದಿ ಅಸ್ಯ ಯತಃ**. ಆದ್ದರಿಂದ ಪ್ರತಿಯೊಬ್ಬ ಜೀವಿಯ ಬದುಕಿನ ಪ್ರಾರಂಭವು

ಪ್ರಭುವೇ. ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ಹೇಳಿರುವಂತೆ ಪರಮ ಪ್ರಭುವು ತನ್ನ ಬಹಿರಂಗ ಶಕ್ತಿ ಮತ್ತು ಅಂತರಂಗ ಶಕ್ತಿ — ಈ ಎರಡು ಶಕ್ತಿಗಳಿಂದ ಸರ್ವವ್ಯಾಪಿಯಾಗಿದ್ದಾನೆ. ಆದುದರಿಂದ ಪರಮ ಪ್ರಭುವನ್ನು ಅವನ ಶಕ್ತಿಗಳೊಡನೆ ಮನುಷ್ಯನು ಪೂಜಿಸಬೇಕು. ಸಾಮಾನ್ಯವಾಗಿ ವೈಷ್ಣವ ಭಕ್ತರು ಪರಮ ಪ್ರಭುವನ್ನು ಅವನ ಅಂತರಂಗ ಶಕ್ತಿಯೊಡನೆ ಪೂಜಿಸುತ್ತಾರೆ. ಅವನ ಬಹಿರಂಗ ಶಕ್ತಿಯು ಅಂತರಂಗ ಶಕ್ತಿಯ ಒಂದು ವಕ್ರಬಿಂಬ. ಬಹಿರಂಗ ಶಕ್ತಿಯು ಒಂದು ಹಿನ್ನೆಲೆ; ಆದರೆ ಪರಮ ಪ್ರಭುವು ಪರಮಾತ್ಮನಾಗಿ ಸ್ವಾಂಶ ವಿಸ್ತರಣೆಯಿಂದ ಎಲ್ಲೆಲ್ಲೂ ಇದ್ದಾನೆ. ಅವನು ಎಲ್ಲೆಲ್ಲೂ ಎಲ್ಲ ದೇವತೆಗಳ, ಎಲ್ಲ ಮನುಷ್ಯರ, ಎಲ್ಲ ಪ್ರಾಣಿಗಳ ಪರಮಾತ್ಮನು. ಆದುದರಿಂದ ಪರಮ ಪ್ರಭುವಿನ ವಿಭಿನ್ನಾಂಶನಾಗಿ ತಾನು ಪರಮ ಪ್ರಭುವಿಗೆ ಸಲ್ಲಿಸಬೇಕಾದ ಸೇವೆ ಇದೆ ಎಂದು ಮನುಷ್ಯನು ತಿಳಿದುಕೊಳ್ಳಬೇಕು. ಪ್ರತಿಯೊಬ್ಬನೂ ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾಗಬೇಕು. ಹೀಗೆ ಮಾಡಬೇಕೆಂದು ಈ ಶ್ಲೋಕದಲ್ಲಿ ಹೇಳಿದೆ.

ಇಂದ್ರಿಯಗಳ ಒಡೆಯನಾದ ಹೃಷೀಕೇಶನು ತನ್ನನ್ನು ಒಂದು ನಿರ್ದಿಷ್ಟ ವೃತ್ತಿಯಲ್ಲಿ ತೊಡಗಿಸಿದ್ದಾನೆ ಎಂದು ಪ್ರತಿಯೊಬ್ಬನೂ ಯೋಚಿಸಬೇಕು. ಮನುಷ್ಯನು ನಿರತನಾಗಿರುವ ಕೆಲಸದ ಫಲದ ಮೂಲಕ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಪೂಜಿಸಬೇಕು. ಮನುಷ್ಯನು ಸದಾ ಹೀಗೆ ಕೃಷ್ಣಪ್ರಜ್ಞೆಯಲ್ಲಿ ಆಲೋಚಿಸಿದರೆ ಭಗವಂತನ ಕೃಪೆಯಿಂದ ಅವನಿಗೆ ಎಲ್ಲದರ ಅರಿವೂ ಬರುತ್ತದೆ. ಇದು ಬದುಕಿನ ಪರಿಪೂರ್ಣತೆ. ಭಗವದ್ಗೀತೆಯಲ್ಲಿ ಪ್ರಭುವು **ತೇಷಾಮ್ ಅಹಮ್ ಸಮುದ್ಧರ್ತಾ** (1.2.7) ಎಂದು ಹೇಳುತ್ತಾನೆ. ಪರಮ ಪ್ರಭುವೇ ಸ್ವತಃ ಅಂತಹ ಭಕ್ತನನ್ನು ಉದ್ಧರಿಸುವ ಹೊಣೆಯನ್ನು ಹೊರುತ್ತಾನೆ. ಅದೇ ಬದುಕಿನ ಉನ್ನತ ಪರಿಪೂರ್ಣತೆಯಾಗಿದೆ. ಮನುಷ್ಯನು ಯಾವುದೇ ವೃತ್ತಿಯಲ್ಲಿರಲಿ ಅವನು ಪರಮ ಪ್ರಭುವನ್ನು ಸೇವಿಸಿದರೆ ಅತ್ಯುನ್ನತ ಪರಿಪೂರ್ಣತೆಯನ್ನು ಸಾಧಿಸುವನು.

## ಶ್ಲೋಕ - 47

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೪೭॥**

**ಶ್ರೇಯಾನ್**—ಉತ್ತಮವು; **ಸ್ವಧರ್ಮಃ**—ಸ್ವ ವೃತ್ತಿಯು; **ವಿಗುಣಃ**—ಅಪರಿಪೂರ್ಣವಾಗಿ ಆಚರಿಸಿದ; **ಪರಧರ್ಮಾತ್**—ಮತ್ತೊಬ್ಬರ ವೃತ್ತಿಗಿಂತಲೂ; **ಸು ಅನುಷ್ಠಿತಾತ್**—ಪರಿಪೂರ್ಣವಾಗಿ ಆಚರಿಸಿದ; **ಸ್ವಭಾವ ನಿಯತಮ್**—ಸ್ವಭಾವಕ್ಕನುಗುಣವಾಗಿ ವಿಹಿತವಾದ; **ಕರ್ಮ**—ಕರ್ಮವನ್ನು; **ಕುರ್ವನ್**—ಆಚರಿಸುತ್ತ; **ನ ಆಪ್ನೋತಿ**—ಹೊಂದುವುದಿಲ್ಲ; **ಕಿಲ್ಬಿಷಮ್**—ಪಾಪಮಯ ಪ್ರತಿಕ್ರಿಯೆಗಳನ್ನು.

## ಅನುವಾದ

**ಪರಧರ್ಮವನ್ನು ಸ್ವೀಕರಿಸಿ ಅದನ್ನು ಪರಿಪೂರ್ಣವಾಗಿ ಮಾಡುವುದಕ್ಕಿಂತ, ಸ್ವಧರ್ಮವನ್ನು ಅಪರಿಪೂರ್ಣವಾಗಿ ಮಾಡುವುದೇ ಶ್ರೇಯಸ್ಕರ. ತನ್ನ ಸ್ವಭಾವಕ್ಕನುಗುಣವಾಗಿ ವಿಧಿಸಿದ ಕರ್ತವ್ಯಗಳನ್ನು ಮಾಡಿದಾಗ ಪಾಪಕರ ಪ್ರತಿಕ್ರಿಯೆಗಳಾಗುವುದಿಲ್ಲ.**

## ಭಾವಾರ್ಥ

ಮನುಷ್ಯನ ಧರ್ಮವನ್ನು ಭಗವದ್ಗೀತೆಯಲ್ಲಿ ವಿಧಿಸಿದೆ. ಹಿಂದಿನ ಶ್ಲೋಕಗಳಲ್ಲಿ ಆಗಲೇ ಚರ್ಚಿಸಿದಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಕರ್ತವ್ಯಗಳನ್ನು ಅವರವರ ಗುಣಗಳಿಗೆ ಅನುಗುಣವಾಗಿ ವಿಧಿಸಿದೆ. ಒಬ್ಬನು ಇನ್ನೊಬ್ಬನ ಕರ್ತವ್ಯವನ್ನು ಅನುಕರಿಸಬಾರದು. ಒಬ್ಬ ಮನುಷ್ಯನು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿರಬಹುದು. ಆದರೆ ಸ್ವಭಾವತಃ ಶೂದ್ರರು ಮಾಡುವ ಕರ್ಮದಿಂದ ಆಕರ್ಷಿತನಾದರೆ ಆತನು ಕೃತಕವಾಗಿ ತಾನು ಬ್ರಾಹ್ಮಣ ಎಂದು ಹೇಳಿಕೊಳ್ಳಬಾರದು. ಹೀಗೆ ಮನುಷ್ಯನು ತನ್ನ ಧರ್ಮಕ್ಕನುಗುಣವಾಗಿ ಕರ್ಮಮಾಡಬೇಕು. ಪರಮ ಪ್ರಭುವಿನ ಸೇವೆಯಲ್ಲಿ ಮಾಡುವ ಯಾವ ಕೆಲಸವೂ ಕೀಳಲ್ಲ. ಬಾ ್ರಹ್ಮಣನ ವೃತ್ತಿಧರ್ಮವು ನಿಶ್ಚಯವಾಗಿಯೂ ಸಾತ್ವಿಕವಾದದ್ದು. ಆದರೆ ಸ್ವಭಾವದಿಂದ ಸಾತ್ವಿಕನಲ್ಲದ ಮನುಷ್ಯನು ಬ್ರಾಹ್ಮಣನ ವೃತ್ತಿಧರ್ಮವನ್ನು ಅನುಕರಿಸಬಾರದು. ಕ್ಷತ್ರಿಯನು ಮಾಡಬೇಕಾದ ಹಲವು ಹೇಯವಾದ ಕೆಲಸಗಳಿವೆ. ಕ್ಷತ್ರಿಯನು ತನ್ನ ಶತ್ರುಗಳನ್ನು ಕೊಲ್ಲಲು ಹಿಂಸೆ ಮಾಡಬೇಕಾಗುತ್ತದೆ. ಕೆಲವೊಮ್ಮೆ ರಾಜತಾಂತ್ರಿಕತೆಗಾಗಿ ಕ್ಷತ್ರಿಯನು ಸುಳ್ಳನ್ನು ಹೇಳಬೇಕಾಗುತ್ತದೆ. ಇಂತಹ ಹಿಂಸೆ ಮತ್ತು ಕಪಟಗಳು ರಾಜಕೀಯ ವ್ಯವಹಾರಗಳೊಂದಿಗೆ ಹೋಗುತ್ತವೆ. ಆದರೆ ಕ್ಷತ್ರಿಯನು ತನ್ನ ವೃತ್ತಿಧರ್ಮವನ್ನು ಬಿಟ್ಟು ಬ್ರಾಹ್ಮಣನ ಕರ್ತವ್ಯಗಳನ್ನು ಮಾಡಲು ಪ್ರಯತ್ನಿಸಕೂಡದು.

ಪರಮ ಪ್ರಭುವನ್ನು ಸಂತೃಪ್ತಿಗೊಳಿಸಲು ಮನುಷ್ಯನು ಪ್ರಯತ್ನಿಸಬೇಕು. ಉದಾಹರಣೆಗೆ ಅರ್ಜುನನು ಕ್ಷತ್ರಿಯ. ಅವನು ಇನ್ನೊಂದು ಪಕ್ಷದೊಡನೆ ಯುದ್ಧ ಮಾಡಲು ಹಿಂಜರಿಯುತ್ತಿದ್ದ. ಆದರೆ ದೇವೋತ್ತಮ ಪರಮ ಪುರುಷನನ್ನು ಸಂತೃಪ್ತಿಗೊಳಿಸಲು ಯುದ್ಧಮಾಡಬೇಕಾದರೆ ನೀತಿಭ್ರಷ್ಟನಾಗುವ ಹೆದರಿಕೆಯ ಅಗತ್ಯವೇ ಇಲ್ಲ. ವ್ಯವಹಾರ ಕ್ಷೇತ್ರದಲ್ಲಿ ಸಹ ವ್ಯಾಪಾರಿಯು ಕೆಲವೊಮ್ಮೆ ಅನೇಕ ಸುಳ್ಳುಗಳನ್ನು ಹೇಳಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಲಾಭ ಬರುವುದಿಲ್ಲ. ಒಮ್ಮೊಮ್ಮೆ ವ್ಯಾಪಾರಿಯು, "ಪ್ರೀತಿಯ ಗಿರಾಕಿಯೆ, ನಿಮಗೋಸ್ಕರ ನಾನು ಲಾಭವನ್ನೇ ಬಿಟ್ಟು ಬಿಡುತ್ತಿದ್ದೇನೆ", ಎಂದು ಹೇಳುತ್ತಾನೆ, ಆದರೆ ಲಾಭವಿಲ್ಲದೆ ವರ್ತಕನು ಇರುವುದಕ್ಕೆ ಸಾಧ್ಯವಿಲ್ಲ ಎನ್ನುವುದನ್ನು ತಿಳಿದಿರಬೇಕು. ಆದುದರಿಂದ ವ್ಯಾಪಾರಿಯು ತಾನು ಲಾಭಮಾಡುತ್ತಿಲ್ಲ ಎಂದು ಹೇಳಿದರೆ ಅದೊಂದು ಸರಳವಾದ ಸುಳ್ಳು ಎಂದು ಭಾವಿಸಬೇಕು. ಸುಳ್ಳು ಹೇಳುವುದು ಕಡ್ಡಾಯವಾದ ವೃತ್ತಿಯಲ್ಲಿ ತಾನಿರುವುದರಿಂದ ತಾನು ತನ್ನ ವೃತ್ತಿಯನ್ನು ಬಿಟ್ಟು ಬ್ರಾಹ್ಮಣ ವೃತ್ತಿಯನ್ನು ಅನುಸರಿಸಬೇಕೆಂದು ವರ್ತಕನು ಯೋಚಿಸಬಾರದು. ಹೀಗೆ ಮಾಡಬೇಕೆಂದು ಇಲ್ಲಿ ಹೇಳಿಲ್ಲ. ಮನುಷ್ಯನು ತನ್ನ ಕರ್ಮದಿಂದ ದೇವೋತ್ತಮ ಪರಮ ಪುರುಷನ ಸೇವೆ ಮಾಡಿದರೆ ಅವನು ಕ್ಷತ್ರಿಯನೇ ವೈಶ್ಯನೇ ಅಥವಾ ಶೂದ್ರನೇ ಎನ್ನುವುದು ಮುಖ್ಯವಲ್ಲ. ಬೇರೆ ಬೇರೆ ಬಗೆಯ ಯಜ್ಞಗಳನ್ನು ಮಾಡುವ ಬ್ರಾಹ್ಮಣರು ಕೆಲವೊಮ್ಮೆ ಪ್ರಾಣಿಗಳನ್ನು ಕೊಲ್ಲಬೇಕಾಗುತ್ತದೆ; ಏಕೆಂದರೆ ಒಮ್ಮೊಮ್ಮೆ ಇಂತಹ ಯಜ್ಞಗಳಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಾರೆ. ಹೀಗೆಯೇ ತನ್ನ ವೃತ್ತಿಯಲ್ಲಿ ನಿರತನಾದ ಕ್ಷತ್ರಿಯನು ಶತ್ರುವನ್ನು ಕೊಂದರೆ ಅದು ಪಾಪವಲ್ಲ. ಈ ವಿಷಯಗಳನ್ನು ಸ್ಪಷ್ಟವಾಗಿ ಮತ್ತು ವಿವರವಾಗಿ ಮೂರನೆಯ ಅಧ್ಯಾಯದಲ್ಲಿ ಹೇಳಿದೆ — ಪ್ರತಿಯೊಬ್ಬನೂ ಯಜ್ಞಕ್ಕಾಗಿ ಅಥವಾ ದೇವೋತ್ತಮ ಪರಮ ಪುರುಷನಾದ ವಿಷ್ಣುವಿಗಾಗಿ ಕರ್ಮಮಾಡಬೇಕು. ವೈಯಕ್ತಿಕ ಇಂದ್ರಿಯ ತೃಪ್ತಿಗಾಗಿ ಮಾಡುವ ಯಾವುದೇ ಕರ್ಮವು ಬಂಧನದ ಕಾರಣವಾಗುತ್ತದೆ. ಇದೆಲ್ಲದರ

ನಿರ್ಣಯವೆಂದರೆ ಪ್ರತಿಯೊಬ್ಬನೂ ತಾನು ಪಡೆದ ವಿಶಿಷ್ಟ ಪ್ರಕೃತಿಗುಣಕ್ಕೆ ಅನುಗುಣವಾಗಿ ಕರ್ಮನಿರತನಾಗಬೇಕು ಮತ್ತು ಪರಮ ಪ್ರಭುವಿನ ಪರಮೋದ್ದೇಶವನ್ನು ನೆರವೇರಿಸಲು ಮಾತ್ರ ಕರ್ಮ ಮಾಡಲು ತೀರ್ಮಾನಿಸಬೇಕು.

## ಶ್ಲೋಕ - 48

**ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನ ತ್ಯಜೇತ್ |**
**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ||೪೮||**

**ಸಹಜಮ್**—ಜೊತೆಯಲ್ಲಿ ಜನಿಸಿದ; **ಕರ್ಮ**—ಕರ್ಮವನ್ನು; **ಕೌನ್ತೇಯ**—ಕುಂತೀಪುತ್ರನೇ; **ಸದೋಷಮ್**—ದೋಷಯುಕ್ತವು; **ಅಪಿ**—ಆಗಿದ್ದರೂ; **ನ ತ್ಯಜೇತ್**—ತ್ಯಜಿಸಲೇಬಾರದು; **ಸರ್ವ ಆರಮ್ಭಾಃ**—ಎಲ್ಲ ಪ್ರಯತ್ನಗಳೂ; **ಹಿ**—ಖಂಡಿತವಾಗಿಯೂ; **ದೋಷೇಣ**—ದೋಷದಿಂದ; **ಧೂಮೇನ**—ಹೊಗೆಯಿಂದ; **ಅಗ್ನಿಃ**—ಬೆಂಕಿಯ; **ಇವ**—ಹಾಗೆ; **ಆವೃತಾಃ**—ಮುಚ್ಚಿರುವವು.

## ಅನುವಾದ

**ಅಗ್ನಿಯು ಹೊಗೆಯಿಂದ ಆವೃತವಾದಂತೆ, ಪ್ರತಿಯೊಂದು ಪ್ರಯತ್ನವೂ ಯಾವುದಾದರೂ ದೋಷದಿಂದ ಆವೃತವಾಗಿರುತ್ತದೆ. ಕುಂತಿಯ ಮಗನಾದ ಅರ್ಜುನನೆ, ಮನುಷ್ಯನ ಸ್ವಧರ್ಮದಿಂದ ಬರುವ ಕರ್ಮವು ದೋಷದಿಂದ ಕೂಡಿದ್ದರೂ ಅದನ್ನು ಬಿಡಬಾರದು.**

## ಭಾವಾರ್ಥ

ಬದ್ಧಜೀವನದಲ್ಲಿ ಎಲ್ಲ ಕರ್ಮಕ್ಕೂ ಐಹಿಕ ಪ್ರಕೃತಿಯ ಗುಣಗಳ ಕಲ್ಮಷವು ಅಂಟಿರುತ್ತದೆ. ಬ್ರಾಹ್ಮಣನಾದವನು ಪ್ರಾಣಿಹತ್ಯೆಯಂತಹ ಅಗತ್ಯವಾದ ಕರ್ಮಗಳನ್ನು ಮಾಡಬೇಕಾಗುತ್ತದೆ. ಕ್ಷತ್ರಿಯನು ಎಷ್ಟೇ ಧಾರ್ಮಿಕನಾದರೂ ಶತ್ರುಗಳೊಡನೆ ಹೋರಾಡಬೇಕಾಗುತ್ತದೆ. ಹಾಗೆಯೇ ವ್ಯಾಪಾರಿಯು ಎಷ್ಟೇ ಧಾರ್ಮಿಕನಾದರೂ ವ್ಯಾಪಾರ ಕ್ಷೇತ್ರದಲ್ಲುಳಿಯಲು ತನ್ನ ಲಾಭವನ್ನು ಬಚ್ಚಿಡಬೇಕಾಗುತ್ತದೆ; ಅಥವಾ ಕೆಲವೊಮ್ಮೆ ಕಾಳಸಂತೆಯಲ್ಲಿ ವ್ಯವಹಾರ ಮಾಡಬೇಕಾಗುತ್ತದೆ. ಇವೆಲ್ಲ ಅಗತ್ಯವಾದವು. ಮನುಷ್ಯನು ಅವುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಹೀಗೆಯೇ ಶೂದ್ರನು ದುಷ್ಟ ಯಜಮಾನನ ಸೇವೆಯಲ್ಲಿರಬಹುದು; ಯಜಮಾನನು ಮಾಡಬಾರದ ಕೆಲಸವನ್ನು ಮಾಡಬೇಕೆಂದು ಅಪ್ಪಣೆ ಕೊಟ್ಟರೂ ಅವನು ಅದನ್ನು ನಡೆಸಬೇಕು. ಇಂತಹ ದೋಷಗಳಿದ್ದರೂ ಮನುಷ್ಯನು ತನಗೆ ವಿಧಿಸಿದ ಕರ್ತವ್ಯಗಳನ್ನು ಮಾಡಿಕೊಂಡು ಹೋಗಬೇಕು. ಏಕೆಂದರೆ ಅವನ ಸ್ವಭಾವದಿಂದಲೇ ಅವು ಹುಟ್ಟಿವೆ.

ಇಲ್ಲಿ ಒಂದು ಬಹು ಸೊಗಸಾದ ಉಪಮಾನವನ್ನು ಕೊಟ್ಟಿದೆ. ಅಗ್ನಿಯು ಪರಿಶುದ್ಧ. ಆದರೂ ಹೊಗೆ ಇರುತ್ತದೆ. ಆದರೆ ಹೊಗೆಯು ಅಗ್ನಿಯನ್ನು ಅಶುದ್ಧ ಮಾಡುವುದಿಲ್ಲ. ಅಗ್ನಿಯಲ್ಲಿ ಹೊಗೆ ಇದ್ದರೂ ಎಲ್ಲ ಘಟಕಗಳಲ್ಲಿ ಅಗ್ನಿಯೇ ಅತ್ಯಂತ ಪರಿಶುದ್ಧ ಎಂದು ಭಾವಿಸಲಾಗಿದೆ. ಕ್ಷತ್ರಿಯನ ವೃತ್ತಿಯನ್ನು ಬಿಟ್ಟು ಬ್ರಾಹ್ಮಣನ ವೃತ್ತಿಯನ್ನು ಆರಿಸಿಕೊಂಡರೆ ಬ್ರಾಹ್ಮಣನ ವೃತ್ತಿಯಲ್ಲಿ ಅಸಂತೋಷಕರವಾದ ಕರ್ತವ್ಯಗಳಿರುವುದಿಲ್ಲ ಎಂಬ ಖಾತರಿ ಏನೂ ಇಲ್ಲ. ಆದುದರಿಂದ ಐಹಿಕ

ಜಗತ್ತಿನಲ್ಲಿ ಐಹಿಕ ಪ್ರಕೃತಿಯ ಕಲ್ಮಷದ ಸೋಂಕಿನಿಂದ ಯಾರೂ ಸಂಪೂರ್ಣವಾಗಿ ಮುಕ್ತರಾಗಿರಲು ಸಾಧ್ಯವಿಲ್ಲ ಎನ್ನುವ ನಿರ್ಣಯಕ್ಕೆ ಬರಬಹುದು. ಈ ಸಂದರ್ಭದಲ್ಲಿ ಅಗ್ನಿ ಮತ್ತು ಹೊಗೆಯ ಉದಾಹರಣೆಯು ಬಹು ಸೂಕ್ತವಾಗಿದೆ. ಚಳಿಗಾಲದಲ್ಲಿ ಬೆಂಕಿಯಲ್ಲಿದ್ದ ಒಂದು ಕೆಂಡವನ್ನು ತೆಗೆದುಕೊಂಡರೆ ಕೆಲವೊಮ್ಮೆ ಹೊಗೆಯು ಕಣ್ಣಿಗೂ ದೇಹದ ಇತರ ಭಾಗಗಳಿಗೂ ತೊಂದರೆಯನ್ನು ಮಾಡುತ್ತದೆ; ಇಂತಹ ತೊಂದರೆ ಕೊಡುವ ಸನ್ನಿವೇಶದಲ್ಲಿಯೂ ಮನುಷ್ಯನು ಬೆಂಕಿಯ ಉಪಯೋಗವನ್ನು ಪಡೆದುಕೊಳ್ಳಬೇಕು. ಹಾಗೆಯೇ ಕೆಲವು ತೊಂದರೆ ಕೊಡುವ ಅಂಶಗಳಿವೆ ಎಂದ ಮಾತ್ರಕ್ಕೆ ಮನುಷ್ಯನು ತನ್ನ ಸಹಜವಾದ ವೃತ್ತಿಯನ್ನು ಬಿಟ್ಟುಬಿಡಬಾರದು. ಅದರ ಬದಲು, ಕೃಷ್ಣಪ್ರಜ್ಞೆಯಲ್ಲಿ ತನ್ನ ವೃತ್ತಿಯ ಕರ್ತವ್ಯವನ್ನು ಮಾಡಿ ಪರಮ ಪ್ರಭುವಿನ ಸೇವೆ ಮಾಡಲು ಸಂಕಲ್ಪ ಮಾಡಬೇಕು. ಇದು ಪರಿಪೂರ್ಣತೆ ತರುವ ಅಂಶ. ಪರಮ ಪ್ರಭುವಿಗೆ ಒಪ್ಪಿಗೆಯಾಗುವಂತೆ ಯಾವುದಾದರೂ ವೃತ್ತಿಯನ್ನು ಅನುಸರಿಸಿದಾಗ ಆ ವೃತ್ತಿಯಲ್ಲಿನ ದೋಷಗಳೆಲ್ಲ ಪರಿಶುದ್ಧವಾಗುತ್ತವೆ. ಕರ್ಮಫಲವು ಭಕ್ತಿಸೇವೆಯ ಸಂಬಂಧದಿಂದ ಪರಿಶುದ್ಧವಾದಾಗ ಮನುಷ್ಯನು ತನ್ನೊಳಗಿನ ಆತ್ಮವನ್ನು ಕಾಣುವುದರಲ್ಲಿ ಪರಿಪೂರ್ಣನಾಗುತ್ತಾನೆ. ಅದೇ ಆತ್ಮ ಸಾಕ್ಷಾತ್ಕಾರ.

## ಶ್ಲೋಕ - 49

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ |**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ||೪೯||**

**ಅಸಕ್ತ ಬುದ್ಧಿಃ**—ಅನಾಸಕ್ತ ಬುದ್ಧಿಯನ್ನು ಹೊಂದಿದ; **ಸರ್ವತ್ರ**—ಎಲ್ಲ ಕಡೆಗಳಲ್ಲಿ; **ಜಿತ ಆತ್ಮಾ**—ಮನಸ್ಸಿನ ನಿಯಂತ್ರಣವನ್ನು ಹೊಂದಿದ; **ವಿಗತ ಸ್ಪೃಹಃ**—ಭೌತಿಕ ಆಸೆಗಳಿಲ್ಲದವನು; **ನೈಷ್ಕರ್ಮ್ಯಸಿದ್ಧಿಮ್**—ಪ್ರತಿಕ್ರಿಯಾರಹಿತ ಸಿದ್ಧಿಯನ್ನು; **ಪರಮಾಮ್**—ಪರಮೋನ್ನತವಾದ; **ಸಂನ್ಯಾಸೇನ**—ಸನ್ಯಾಸಾಶ್ರಮದಿಂದ; **ಅಧಿಗಚ್ಛತಿ**—ಹೊಂದುತ್ತಾನೆ.

## ಅನುವಾದ

**ಆತ್ಮ ಸಂಯಮವಿದ್ದು ಮೋಹರಹಿತನಾದವನು, ಐಹಿಕ ಭೋಗಗಳನ್ನು ಅಲಕ್ಷ್ಯ ಮಾಡುವವನು, ಸನ್ಯಾಸವನ್ನು ಅಭ್ಯಾಸ ಮಾಡಿ ಪ್ರತಿಕ್ರಿಯೆಗಳಿಂದ ಮುಕ್ತವಾದ ಸ್ವಾತಂತ್ರ್ಯದ ಅತ್ಯುನ್ನತ ಹಂತವನ್ನು ಪಡೆಯಬಲ್ಲ.**

## ಭಾವಾರ್ಥ

ನಿಜವಾದ ತ್ಯಾಗವೆಂದರೆ ಮನುಷ್ಯನು ತಾನು ಪರಮ ಪ್ರಭುವಿನ ವಿಭಿನ್ನಾಂಶ ಎಂದೂ, ಈ ಕಾರಣದಿಂದ ತನ್ನ ಕರ್ಮದ ಫಲವನ್ನು ಅನುಭವಿಸಲು ತನಗೆ ಹಕ್ಕಿಲ್ಲ ಎಂದೂ ಸದಾ ಯೋಚಿಸುವುದು. ಅವನು ಪರಮ ಪ್ರಭುವಿನ ವಿಭಿನ್ನಾಂಶವಾದದ್ದರಿಂದ ಅವನ ಕೆಲಸದ ಫಲವನ್ನು ಪರಮ ಪ್ರಭುವು ಸವಿಯಬೇಕು. ವಾಸ್ತವವಾಗಿ ಇದೇ ಕೃಷ್ಣಪ್ರಜ್ಞೆ. ಕೃಷ್ಣಪ್ರಜ್ಞೆಯಲ್ಲಿ ಕರ್ಮ ಮಾಡುವವನು ನಿಜವಾಗಿ ಸನ್ಯಾಸಿ. ಇಂತಹ ಮನೋಧರ್ಮದ ಮನುಷ್ಯನು ವಾಸ್ತವವಾಗಿ

ಪರಮ ಪ್ರಭುವಿಗಾಗಿ ಕರ್ಮಮಾಡುತ್ತಾನೆ; ಇದರಿಂದ ಅವನಿಗೆ (ಮನುಷ್ಯನಿಗೆ) ತೃಪ್ತಿಯಾಗುತ್ತದೆ. ಅವನಿಗೆ ಯಾವ ಐಹಿಕ ವಸ್ತುವಿನಲ್ಲೂ ಮೋಹವಿಲ್ಲ; ಪ್ರಭುವಿನ ಸೇವೆಯಿಂದ ಬರುವ ದಿವ್ಯಸುಖವನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಸಂತೋಷವನ್ನು ಕಾಣದಿರುವುದು ಅವನಿಗೆ ಅಭ್ಯಾಸವಾಗಿರುತ್ತದೆ. ಸನ್ಯಾಸಿಯು ತನ್ನ ಹಿಂದಿನ ಕರ್ಮಗಳ ಫಲಗಳಿಂದ ಮುಕ್ತನಾಗಿರುತ್ತಾನೆ ಎಂದು ನಂಬಿಕೆ; ಆದರೆ ಕೃಷ್ಣಪ್ರಜ್ಞೆಯಲ್ಲಿರುವವನು ಸನ್ಯಾಸಾಶ್ರಮವನ್ನು ಸ್ವೀಕರಿಸದೆಯೇ ಈ ಪರಿಪೂರ್ಣತೆಯನ್ನು ತಂತಾನೇ ಸಾಧಿಸುತ್ತಾನೆ. ಮನಸ್ಸಿನ ಈ ಸ್ಥಿತಿಗೆ **ಯೋಗಾರೂಢ** ಅಥವಾ ಯೋಗದ ಪರಿಪೂರ್ಣತೆಯ ಹಂತ ಎಂದು ಹೆಸರು. ಮೂರನೆಯ ಅಧ್ಯಾಯದಲ್ಲಿ ದೃಢಪಡಿಸಿದಂತೆ **ಯಸ್ತ್ವಾತ್ಮರತಿರ್ ಏವ ಸ್ಯಾತ್** — ತನ್ನಲ್ಲಿಯೇ ತೃಪ್ತಿಯನ್ನು ಕಂಡುಕೊಂಡವನು ತನ್ನ ಕರ್ಮಗಳ ಯಾವುದೇ ರೀತಿಯ ಪ್ರತಿಕ್ರಿಯೆಗೂ ಭಯಪಡಬೇಕಾಗಿಲ್ಲ.

## ಶ್ಲೋಕ - 50

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ |**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ||೫೦||**

**ಸಿದ್ಧಿಮ್**—ಸಿದ್ಧಿಯನ್ನು; **ಪ್ರಾಪ್ತಃ**—ಪಡೆದವನು; **ಯಥಾ**—ಹೇಗೆ; **ಬ್ರಹ್ಮ**—ಪರಮೋನ್ನತನನ್ನು; **ತಥಾ**—ಹಾಗೆ; **ಆಪ್ನೋತಿ**—ಹೊಂದುತ್ತಾನೆ ಎಂದು; **ನಿಬೋಧ**—ತಿಳಿಯಲು ಪ್ರಯತ್ನಿಸು; **ಮೇ**—ನನ್ನಿಂದ; **ಸಮಾಸೇನ**—ಸಂಗ್ರಹವಾಗಿ; **ಏವ**—ಖಂಡಿತವಾಗಿಯೂ; **ಕೌನ್ತೇಯ**—ಕುಂತೀಪುತ್ರನೇ; **ನಿಷ್ಠಾ**—ಹಂತವು; **ಜ್ಞಾನಸ್ಯ**—ಜ್ಞಾನದ; **ಯಾ**—ಯಾವುದು; **ಪರಾ**—ದಿವ್ಯವಾದ.

## ಅನುವಾದ

**ಅರ್ಜುನನೆ, ಬ್ರಹ್ಮನ್ ಎನ್ನುವುದು ಪರಮ ಪರಿಪೂರ್ಣತೆಯ ಹಂತ ಹಾಗೂ ಅತ್ಯುನ್ನತ ಜ್ಞಾನದ ಹಂತ. ನಾನು ಈಗ ಸಂಗ್ರಹವಾಗಿ ಹೇಳುವ ರೀತಿಯಲ್ಲಿ ಕರ್ಮವನ್ನು ಮಾಡಿ ಬ್ರಹ್ಮನ್‌ನನ್ನು ಹೇಗೆ ಸಾಧಿಸಬಹುದು ಎನ್ನುವುದನ್ನು ತಿಳಿದುಕೊ.**

## ಭಾವಾರ್ಥ

ತನ್ನ ವೃತ್ತಿಕರ್ತವ್ಯದಲ್ಲಿ ನಿರತನಾಗಿ ಆ ಕರ್ತವ್ಯವನ್ನು ದೇವೋತ್ತಮ ಪರಮ ಪುರುಷನಿಗಾಗಿ ಮಾಡುವಷ್ಟರಿಂದಲೇ ಮನುಷ್ಯನು ಅತ್ಯುನ್ನತ ಪರಿಪೂರ್ಣ ಸ್ಥಿತಿಯನ್ನು ಹೇಗೆ ಸಾಧಿಸಬಹುದು ಎನ್ನುವುದನ್ನು ಪ್ರಭುವು ಅರ್ಜುನನಿಗೆ ವರ್ಣಿಸುತ್ತಾನೆ. ಪರಮ ಪ್ರಭುವಿನ ಸಂತೃಪ್ತಿಗಾಗಿ ಮನುಷ್ಯನು ತನ್ನ ಕರ್ಮಫಲವನ್ನು ತ್ಯಜಿಸುವಷ್ಟರಿಂದಲೇ ಬ್ರಹ್ಮನ್‌ನ ಪರಮ ಹಂತವನ್ನು ಪಡೆಯುತ್ತಾನೆ. ಇದು ಆತ್ಮಸಾಕ್ಷಾತ್ಕಾರದ ಪ್ರಕ್ರಿಯೆ. ಜ್ಞಾನದ ನಿಜವಾದ ಪರಿಪೂರ್ಣತೆಯೆಂದರೆ ಪರಿಶುದ್ಧ ಕೃಷ್ಣಪ್ರಜ್ಞೆಯನ್ನು ಪಡೆಯುವುದು. ಇದನ್ನು ಮುಂದಿನ ಶ್ಲೋಕಗಳಲ್ಲಿ ವರ್ಣಿಸಿದೆ.

## ಶ್ಲೋಕ 51-53

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ |**
**ಶಬ್ದಾದೀನ್ ವಿಷಯಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ||೫೧||**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ |**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ||೫೨||**

**ಅಹನ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ |**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ||೫೩||**

**ಬುದ್ಧ್ಯಾ**—ಬುದ್ಧಿಯಿಂದ; **ವಿಶುದ್ಧಯಾ**—ಪೂರ್ಣಶುದ್ಧವಾದ; **ಯುಕ್ತಃ**—ನಿರತನಾದ; **ಧೃತ್ಯಾ**—ನಿರ್ಧಾರದಿಂದ; **ಆತ್ಮಾನಮ್**—ತನ್ನನ್ನು; **ನಿಯಮ್ಯ**—ನಿಯಂತ್ರಿಸಿ; **ಚ**—ಕೂಡ; **ಶಬ್ದ ಆದೀನ್**—ಶಬ್ದ ಮೊದಲಾದ; **ವಿಷಯಾನ್**—ಇಂದ್ರಿಯ ವಿಷಯಗಳನ್ನು; **ತ್ಯಕ್ತ್ವಾ**—ತ್ಯಜಿಸಿ; **ರಾಗ**—ಆಸಕ್ತಿ; **ದ್ವೇಷೌ**—ದ್ವೇಷಗಳನ್ನು; **ವ್ಯುದಸ್ಯ**—ಬದಿಗಿರಿಸಿ; **ಚ**—ಕೂಡ; **ವಿವಿಕ್ತಸೇವೀ**—ಏಕಾಂತಸ್ಥಳದಲ್ಲಿ ವಾಸಿಸುವ; **ಲಘು ಆಶೀ**—ಅತ್ಯಲ್ಪ ಆಹಾರ ಸೇವಿಸುವ; **ಯತ**—ನಿಯಂತ್ರಿಸಿದ; **ವಾಕ್**—ಮಾತು; **ಕಾಯ**—ಶರೀರ; **ಮಾನಸಃ**—ಮನಸ್ಸುಗಳುಳ್ಳ; **ಧ್ಯಾನ ಯೋಗ ಪರಃ**—ಸಮಾಧಿ ಮಗ್ನನಾದ; **ನಿತ್ಯಮ್**—ದಿನದ ಇಪ್ಪತ್ತನಾಲ್ಕು ಗಂಟೆಗಳೂ; **ವೈರಾಗ್ಯಮ್**—ವೈರಾಗ್ಯವನ್ನು; **ಸಮುಪಾಶ್ರಿತಃ**—ಆಶ್ರಯಿಸಿದ; **ಅಹನ್ಕಾರಂ**—ಅಹಂಕಾರವನ್ನು; **ಬಲಮ್**—ಮಿಥ್ಯಾಬಲವನ್ನು; **ದರ್ಪಮ್**— ಹುಸಿ ಗರ್ವವನ್ನು; **ಕಾಮಮ್**—ಕಾಮವನ್ನು; **ಕ್ರೋಧಮ್**—ಕೋಪವನ್ನು; **ಪರಿಗ್ರಹಮ್**—ಐಹಿಕ ವಸ್ತುಗಳ ಸ್ವೀಕಾರವನ್ನು; **ವಿಮುಚ್ಯ**—ತ್ಯಜಿಸಿದ; **ನಿರ್ಮಮಃ**—ಒಡೆತನದ ಭಾವನೆ ಇಲ್ಲದ; **ಶಾಂತಃ**—ಶಾಂತನು; **ಬ್ರಹ್ಮ ಭೂಯಾಯ**—ಆತ್ಮ ಸಾಕ್ಷಾತ್ಕಾರಕ್ಕೆ; **ಕಲ್ಪತೇ**— ಅರ್ಹನಾಗುತ್ತಾನೆ.

### ಅನುವಾದ

**ಆತ್ಮಸಾಕ್ಷಾತ್ಕಾರದ ಸ್ಥಿತಿಗೆ ನಿಶ್ಚಯವಾಗಿ ಏರುವವನು ಹೀಗಿರುತ್ತಾನೆ—ಅವನು ಬುದ್ಧಿಯಿಂದ ಪರಿಶುದ್ಧನಾಗಿರುತ್ತಾನೆ. ಧೃತಿಯಿಂದ ಮನಸ್ಸನ್ನು ನಿಯಂತ್ರಿಸುತ್ತಾನೆ. ಇಂದ್ರಿಯತೃಪ್ತಿಯ ವಸ್ತುಗಳನ್ನು ತ್ಯಜಿಸುತ್ತಾನೆ. ರಾಗದ್ವೇಷಗಳಿಂದ ಮುಕ್ತನಾಗಿರುತ್ತಾನೆ. ಏಕಾಂತಸ್ಥಳದಲ್ಲಿ ವಾಸಮಾಡುತ್ತಾನೆ. ಸ್ವಲ್ಪ ಮಾತ್ರವೇ ಆಹಾರವನ್ನು ಸ್ವೀಕರಿಸುತ್ತಾನೆ. ತನ್ನ ದೇಹ, ಮನಸ್ಸು ಮತ್ತು ವಾಕ್‌ಶಕ್ತಿಯನ್ನು ನಿಯಂತ್ರಿಸುತ್ತಾನೆ. ಸದಾ ಸಮಾಧಿಯಲ್ಲಿರುತ್ತಾನೆ. ಅಹಂಕಾರ, ದರ್ಪ, ಕಾಮ, ಕ್ರೋಧ ಮತ್ತು ಐಹಿಕ ವಸ್ತುಗಳ ಗಳಿಕೆಗಳಿಂದ ಮುಕ್ತನಾಗಿರುತ್ತಾನೆ. ಒಡೆತನದ ಭಾವನೆಯಿಲ್ಲದವನಾಗಿರುತ್ತಾನೆ ಮತ್ತು ಶಾಂತ ಮನಸ್ಕನಾಗಿರುತ್ತಾನೆ.**

### ಭಾವಾರ್ಥ

ಬುದ್ಧಿಯಿಂದ ಪರಿಶುದ್ಧನಾದವನು ಸತ್ವಗುಣದಲ್ಲಿಯೇ ಉಳಿಯುತ್ತಾನೆ. ಹೀಗೆ ಮನುಷ್ಯನು ಮನಸ್ಸನ್ನು ನಿಗ್ರಹಿಸಿ ಸದಾ ಸಮಾಧಿಯಲ್ಲಿರುತ್ತಾನೆ. ಅವನಿಗೆ ಇಂದ್ರಿಯ ಸುಖದ ವಸ್ತುಗಳಲ್ಲಿ ಮೋಹವಿಲ್ಲ; ತನ್ನ ಕೆಲಸಕಾರ್ಯಗಳಲ್ಲಿ ರಾಗದ್ವೇಷಗಳಿಂದ ಮುಕ್ತನಾಗಿರುತ್ತಾನೆ.

ಹೀಗೆ ಮೋಹವಿಲ್ಲದ ಮನುಷ್ಯನು ಸಹಜವಾಗಿ ಏಕಾಂತಸ್ಥಳದಲ್ಲಿರಲು ಬಯಸುತ್ತಾನೆ. ಅಗತ್ಯವಾದುದಕ್ಕಿಂತ ಹೆಚ್ಚು ತಿನ್ನುವುದಿಲ್ಲ. ದೇಹ ಮತ್ತು ಮನಸ್ಸಿನ ವ್ಯಾಪಾರವನ್ನು ನಿಯಂತ್ರಿಸುತ್ತಾನೆ. ಆತನಿಗೆ ಅಹಂಕಾರವಿಲ್ಲ. ಏಕೆಂದರೆ ಅವನು ದೇಹವೇ ತಾನು ಎಂದು ಭಾವಿಸುವುದಿಲ್ಲ. ಐಹಿಕ ವಸ್ತುಗಳನ್ನು ಸ್ವೀಕರಿಸಿ ದೇಹವನ್ನು ಕೊಬ್ಬಿಸಿ ಬಲಶಾಲಿಯನ್ನಾಗಿ ಮಾಡಲು ಅವನಿಗೆ ಇಷ್ಟವಿಲ್ಲ. ಬದುಕಿನ ಬಗ್ಗೆ ದೈಹಿಕ ಪರಿಕಲ್ಪನೆ ಇಲ್ಲವಾದುದರಿಂದ ಅವನಿಗೆ ದರ್ಪವಿಲ್ಲ. ಪ್ರಭುವಿನ ಕೃಪೆಯಿಂದ ತನಗೆ ಲಭ್ಯವಾದುದರಲ್ಲಿ ತೃಪ್ತಿಪಟ್ಟುಕೊಳ್ಳುತ್ತಾನೆ ಮತ್ತು ಇಂದ್ರಿಯ ಸುಖವಿಲ್ಲದಿದ್ದರೆ ಕೋಪಮಾಡಿಕೊಳ್ಳುವುದಿಲ್ಲ. ಅವನು ಇಂದ್ರಿಯಗಳ ವಸ್ತುಗಳನ್ನು ಪಡೆಯಲು ಪ್ರಯತ್ನಿಸುವುದಿಲ್ಲ. ಅಹಂಕಾರದಿಂದ ಸಂಪೂರ್ಣವಾಗಿ ಮುಕ್ತನಾದಾಗ ಎಲ್ಲ ಐಹಿಕ ವಸ್ತುಗಳಲ್ಲಿ ಮೋಹವನ್ನು ಬಿಟ್ಟುಬಿಡುತ್ತಾನೆ. ಬ್ರಹ್ಮನ್‌ನ ಆತ್ಮಸಾಕ್ಷಾತ್ಕಾರದ ಹಂತ ಇದು. ಇದನ್ನು ಬ್ರಹ್ಮಭೂತ ಹಂತ ಎಂದು ಕರೆಯುತ್ತಾರೆ. ಮನುಷ್ಯನು ಬದುಕಿನ ಐಹಿಕ ಪರಿಕಲ್ಪನೆಯಿಂದ ಬಿಡುಗಡೆ ಹೊಂದಿದಾಗ ಶಾಂತಮನಸ್ಕನಾಗುತ್ತಾನೆ ಮತ್ತು ತಳಮಳಗೊಳ್ಳುವುದಿಲ್ಲ. ಇದನ್ನು ಭಗವದ್ಗೀತೆಯಲ್ಲಿ ವರ್ಣಿಸಿದೆ (2.70).

**ಆಪೂರ್ಯಮಾಣಮಚಲ ಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥**

"ಸದಾ ತುಂಬಿದ್ದರೂ ಅಚಲವಾಗಿರುವ ಸಮುದ್ರವನ್ನು ಪ್ರವೇಶಿಸುವ ನದಿಗಳಂತೆ ಅವಿರತವಾಗಿ ಹರಿದುಬರುವ ಆಸೆಗಳಿಂದ ಯಾರು ತಳಮಳಗೊಳ್ಳುವುದಿಲ್ಲವೋ ಆತನಿಗೆ ಮಾತ್ರ ಶಾಂತಿ ದೊರೆಯುತ್ತದೆ. ಅಂತಹ ಆಸೆಗಳನ್ನು ತೃಪ್ತಿಗೊಳಿಸಲು ಬಯಸುವವನಿಗಲ್ಲ."

## ಶ್ಲೋಕ - 54

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಙ್ಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥೫೪॥**

**ಬ್ರಹ್ಮಭೂತಃ**—ಪರಮೋನ್ನತನೊಂದಿಗೆ ಒಂದಾದ; **ಪ್ರಸನ್ನ ಆತ್ಮಾ**—ಪೂರ್ಣ ಆನಂದಮಯನಾದವನು; **ನ ಶೋಚತಿ**—ದುಃಖಿಸುವುದಿಲ್ಲ; **ನ ಕಾಙ್ಕ್ಷತಿ**—ಇಚ್ಛಿಸುವುದಿಲ್ಲ; **ಸಮಃ**—ಸಮಾನ ಭಾವವುಳ್ಳವನು; **ಸರ್ವೇಷು**—ಎಲ್ಲ; **ಭೂತೇಷು**—ಜೀವಿಗಳಲ್ಲಿ; **ಮತ್‌ಭಕ್ತಿಮ್**—ನನ್ನ ಭಕ್ತಿಸೇವೆಯನ್ನು; **ಲಭತೇ**—ಪಡೆಯುತ್ತಾನೆ; **ಪರಾಮ್**—ದಿವ್ಯವಾದ.

## ಅನುವಾದ

**ಹೀಗೆ ಆಧ್ಯಾತ್ಮಿಕ ನೆಲೆಯಲ್ಲಿರುವವನು ಕೂಡಲೇ ಪರಮ ಬ್ರಹ್ಮನ್‌ನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ ಮತ್ತು ಸಂಪೂರ್ಣವಾಗಿ ಪ್ರಸನ್ನನಾಗುತ್ತಾನೆ. ಅವನು ಯಾವಾಗಲೂ ಶೋಕಿಸುವುದಿಲ್ಲ ಅಥವಾ ಏನನ್ನೂ ಬಯಸುವುದಿಲ್ಲ. ಅವನು ಎಲ್ಲ ಜೀವಿಗಳನ್ನೂ ಒಂದೇ**

**ಸಮನಾಗಿ ಕಾಣುತ್ತಾನೆ. ಇಂತಹ ಸ್ಥಿತಿಯಲ್ಲಿ ಅವನು ನನ್ನ ಪರಿಶುದ್ಧ ಭಕ್ತಿಸೇವೆಯನ್ನು ಪಡೆಯುತ್ತಾನೆ.**

## ಭಾವಾರ್ಥ

ನಿರಾಕಾರವಾದಿಗೆ **ಬ್ರಹ್ಮಭೂತ** ಹಂತವನ್ನು ಮುಟ್ಟಿ ಪರಮ ಸತ್ಯದೊಂದಿಗೆ ಒಂದಾಗುವುದು ಕಟ್ಟಕಡೆಯ ಮಾತು, ಅದೇ ಅಂತ್ಯ. ಆದರೆ ಸಾಕಾರವಾದಿಯು ಅಥವಾ ಪರಿಶುದ್ಧ ಭಕ್ತನು ಪರಿಶುದ್ಧ ಭಕ್ತಿಸೇವೆಯಲ್ಲಿ ತೊಡಗಲು ಇನ್ನೂ ದೂರ ಹೋಗಬೇಕಾಗುತ್ತದೆ. ಹೀಗೆಂದರೆ, ಪರಮ ಪ್ರಭುವಿನ ಭಕ್ತಿಸೇವೆಯಲ್ಲಿ ನಿರತನಾದವನು ಆಗಲೇ ಮುಕ್ತಸ್ಥಿತಿಯಲ್ಲಿದ್ದಾನೆ. ಈ ಮುಕ್ತಸ್ಥಿತಿಗೆ ಬ್ರಹ್ಮಭೂತ ಅಥವಾ ಪರಮಸತ್ಯದೊಂದಿಗೆ ಒಂದಾಗುವುದು ಎಂದು ಹೆಸರು. ಪರಮಸತ್ಯದೊಂದಿಗೆ ಏಕತ್ವವನ್ನು ಸಾಧಿಸದೆ ಮನುಷ್ಯನು ಅವನ ಸೇವೆಯನ್ನು ಮಾಡಲಾರ. ಪರಿಪೂರ್ಣ ಪರಿಕಲ್ಪನೆಯಲ್ಲಿ ಸೇವೆಯನ್ನು ಸ್ವೀಕರಿಸುವವನಿಗೂ, ಸೇವೆಯನ್ನು ಮಾಡುವವನಿಗೂ ವ್ಯತ್ಯಾಸವಿಲ್ಲ. ಆದರೆ ಇನ್ನೂ ಉನ್ನತ ಆಧ್ಯಾತ್ಮಿಕ ಅರ್ಥದಲ್ಲಿ ವ್ಯತ್ಯಾಸ ಉಂಟು.

ಬದುಕಿನ ಈ ಐಹಿಕ ಪರಿಕಲ್ಪನೆಯಲ್ಲಿ ಮನುಷ್ಯನು ಇಂದ್ರಿಯ ತೃಪ್ತಿಗಾಗಿ ಕರ್ಮ ಮಾಡಿದಾಗ ದುಃಖವೇ ಉಂಟಾಗುತ್ತದೆ. ಆದರೆ ಆಧ್ಯಾತ್ಮಿಕ ಜಗತ್ತಿನಲ್ಲಿ ಪರಿಶುದ್ಧ ಭಕ್ತಿಸೇವೆಯಲ್ಲಿ ನಿರತನಾದಾಗ ವ್ಯಕ್ತಿಗೆ ದುಃಖವಿಲ್ಲ. ಕೃಷ್ಣಪ್ರಜ್ಞೆಯಲ್ಲಿರುವ ಭಕ್ತನು ಯಾವುದಕೂ ದುಃಖಪಡಬೇಕಾಗಿಲ್ಲ; ಏನನ್ನೂ ಬಯಸಬೇಕಾಗಿಲ್ಲ. ಭಗವಂತನು ಪೂರ್ಣನಾದದ್ದರಿಂದ ಕೃಷ್ಣಪ್ರಜ್ಞೆಯಿಂದ ಭಗವಂತನ ಸೇವೆಯಲ್ಲಿ ನಿರತನಾದವನು ಸಹ ಪೂರ್ಣನಾಗುತ್ತಾನೆ. ಅವನು, ಕೊಳಕು ನೀರೆಲ್ಲ ಹೋದ ನದಿಯ ಹಾಗೆ. ಪರಿಶುದ್ಧಭಕ್ತನಿಗೆ ಕೃಷ್ಣನನ್ನು ಬಿಟ್ಟು ಬೇರಾವ ಯೋಚನೆಯೂ ಇಲ್ಲದಿರುವುದರಿಂದ ಅವನು ಸದಾ ಪ್ರಸನ್ನನಾಗಿರುತ್ತಾನೆ. ಅವನು ಪ್ರಭುವಿನ ಸೇವೆಯಲ್ಲಿ ಪೂರ್ಣನಾಗಿರುತ್ತಾನೆ; ಆದುದರಿಂದ ಯಾವುದೇ ಐಹಿಕ ನಷ್ಟಕ್ಕಾಗಿ ದುಃಖಿಸುವುದಿಲ್ಲ; ಐಹಿಕ ಗಳಿಕೆಗೆ ಆಸೆಪಡುವುದಿಲ್ಲ. ಅವನಿಗೆ ಐಹಿಕ ಭೋಗದ ಆಸೆಯಿಲ್ಲ, ಏಕೆಂದರೆ ಪ್ರತಿಯೊಬ್ಬ ಜೀವಿಯೂ ಪರಮ ಪ್ರಭುವಿನ ವಿಭಿನ್ನಾಂಶ, ಆದುದರಿಂದ ನಿರಂತರವಾಗಿ ಪ್ರಭುವಿನ ಸೇವಕ ಎನ್ನುವುದು ಅವನಿಗೆ ತಿಳಿದಿದೆ. ಐಹಿಕ ಸುಖದಲ್ಲಿ ಅವನು, ಒಬ್ಬರು ಮೇಲು ಮತ್ತೊಬ್ಬರು ಕೀಳು ಎಂದು ಕಾಣುವುದಿಲ್ಲ. ಮೇಲಿನ ಮತ್ತು ಕೆಳಗಿನ ಸ್ಥಾನಗಳು ಕ್ಷಣಿಕ; ಕ್ಷಣಿಕವಾಗಿ ಗೋಚರವಾಗುವ ಅಥವಾ ಅದೃಶ್ಯವಾಗುವ ಸಂಗತಿಗಳಿಗೂ ಭಕ್ತನಿಗೂ ಸಂಬಂಧವಿಲ್ಲ. ಅವನು ಕಲ್ಲಿಗೂ ಚಿನ್ನಕ್ಕೂ ಒಂದೇ ಬೆಲೆ ಕೊಡುತ್ತಾನೆ. ಇದು ಬ್ರಹ್ಮಭೂತ ಸ್ಥಿತಿ. ಪರಿಶುದ್ಧ ಭಕ್ತನು ಈ ಸ್ಥಿತಿಯನ್ನು ಸುಲಭವಾಗಿ ತಲಪುತ್ತಾನೆ. ಅಸ್ತಿತ್ವದ ಈ ಸ್ಥಿತಿಯಲ್ಲಿ ಪರಮಬ್ರಹ್ಮನೊಡನೆ ಒಂದಾಗಿ ತನ್ನ ಪ್ರತ್ಯೇಕ ವ್ಯಕ್ತಿತ್ವವನ್ನು ನಾಶಗೊಳಿಸುವ ಯೋಚನೆಯು ನರಕಸದೃಶವಾಗುತ್ತದೆ. ಸ್ವರ್ಗಸಾಮ್ರಾಜ್ಯವನ್ನು ಸೇರುವ ವಿಚಾರವು ಬರಿಯ ಭ್ರಮೆಯಾಗುತ್ತದೆ ಮತ್ತು ಇಂದ್ರಿಯಗಳು ಹಲ್ಲುಮುರಿದ ಹಾವಿನಂತಾಗುತ್ತವೆ. ಹಲ್ಲು ಮುರಿದ ಹಾವಿನಿಂದ ಹೇಗೆ ಭಯವಿಲ್ಲವೋ ಹಾಗೆ ಪ್ರಯತ್ನವೇ ಇಲ್ಲದೆ ನಿಯಂತ್ರಿತವಾಗುವ ಇಂದ್ರಿಯಗಳಿಂದ ಭಯವಿಲ್ಲ. ಪ್ರಾಪಂಚಿಕತೆಯ ಸೋಂಕು ತಗುಲಿದವನಿಗೆ ಪ್ರಪಂಚವು ದುಃಖಮಯ. ಆದರೆ ಭಕ್ತನಿಗೆ ಇಡೀ ಪ್ರಪಂಚವು ವೈಕುಂಠದಂತೆ. ಭಕ್ತನ ಮಟ್ಟಿಗೆ ಐಹಿಕ ವಿಶ್ವದಲ್ಲಿನ ಅತ್ಯುನ್ನತ ವ್ಯಕ್ತಿಯು ಇರುವೆಗಿಂತ ಮುಖ್ಯವಲ್ಲ.

ಚೈತನ್ಯ ಮಹಾಪ್ರಭುಗಳು ಈ ಯುಗಕ್ಕೆ ಪರಿಶುದ್ಧ ಭಕ್ತಿಸೇವೆಯನ್ನು ಉಪದೇಶಿಸಿದರು. ಅವರ ದಯೆಯಿಂದ ಈ ಹಂತವನ್ನು ಮುಟ್ಟಬಹುದು.

## ಶ್ಲೋಕ - 55

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ |**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ||೫೫||**

**ಭಕ್ತ್ಯಾ**—ಶುದ್ಧವಾದ ಭಕ್ತಿಸೇವೆಯಿಂದ; **ಮಾಮ್**—ನನ್ನನ್ನು; **ಅಭಿಜಾನಾತಿ**—ತಿಳಿಯಬಲ್ಲನು; **ಯಾವಾನ್**—ಸಾಧ್ಯವಿರುವಷ್ಟು; **ಯಃ ಚ ಅಸ್ಮಿ**—ನಾನಿರುವಂತೆ; **ತತ್ತ್ವತಃ**—ಸತ್ಯದಲ್ಲಿ; **ತತಃ**—ಅನಂತರ; **ಮಾಮ್**—ನನ್ನನ್ನು; **ತತ್ತ್ವತಃ**—ಸತ್ಯದಲ್ಲಿ; **ಜ್ಞಾತ್ವಾ**—ತಿಳಿದು; **ವಿಶತೇ**—ಪ್ರವೇಶಿಸುತ್ತಾನೆ; **ತತ್ ಅನನ್ತರಮ್**—ಆಮೇಲೆ.

## ಅನುವಾದ

**ಭಕ್ತಿಸೇವೆಯಿಂದ ಮಾತ್ರ, ದೇವೋತ್ತಮ ಪರಮ ಪುರುಷನಾದ ನನ್ನನ್ನು ನಾನಿರುವಂತೆ ಮನುಷ್ಯನು ಅರ್ಥಮಾಡಿಕೊಳ್ಳಬಲ್ಲ. ಇಂತಹ ಭಕ್ತಿಯಿಂದ ಮನುಷ್ಯನು ನನ್ನ ಪೂರ್ಣಪ್ರಜ್ಞೆಯನ್ನು ಪಡೆದಾಗ ಭಗವದ್ಧಾಮವನ್ನು ಪ್ರವೇಶಿಸಬಲ್ಲ.**

## ಭಾವಾರ್ಥ

ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನೂ, ಅವನ ಸ್ವಾಂಶ ವಿಸ್ತರಣೆಗಳನ್ನೂ, ಊಹಾತ್ಮಕ ಚಿಂತನೆಯಿಂದ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ; ಭಕ್ತರಲ್ಲದವರು ಅರ್ಥಮಾಡಿಕೊಳ್ಳಲಾರರು. ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಯಾರಾದರೂ ಬಯಸಿದರೆ ಅವನೊಬ್ಬ ಪರಿಶುದ್ಧ ಭಕ್ತನ ಮಾರ್ಗದರ್ಶನದಲ್ಲಿ, ಪರಿಶುದ್ಧ ಭಕ್ತಿಸೇವೆಯನ್ನು ಮಾಡಬೇಕು. ಇಲ್ಲವಾದರೆ ದೇವೋತ್ತಮ ಪರಮ ಪುರುಷನ ಬಗ್ಗೆ ಸತ್ಯವು ಎಂದೂ ಮರೆಮಾಚಿಯೇ ಇರುತ್ತದೆ. ಭಗವದ್ಗೀತೆಯಲ್ಲಿ ಆಗಲೇ ಹೇಳಿರುವಂತೆ (7.25) **ನಾಹಂ ಪ್ರಕಾಶಃ ಸರ್ವಸ್ಯ** — ಅವನು ಎಲ್ಲರಿಗೂ ಪ್ರಕಟವಾಗುವುದಿಲ್ಲ. ವಿಶೇಷವಾದ ವಿದ್ವತ್ತಿನಿಂದ ಅಥವಾ ಊಹಾತ್ಮಕ ಚಿಂತನೆಯಿಂದಲೇ ಯಾರೂ ದೇವರನ್ನು ಅರ್ಥಮಾಡಿಕೊಳ್ಳಲಾರರು. ವಾಸ್ತವವಾಗಿಯೂ ಕೃಷ್ಣಪ್ರಜ್ಞೆಯಲ್ಲಿ ಮತ್ತು ಭಕ್ತಿಸೇವೆಯಲ್ಲಿ ನಿರತನಾದವನು ಮಾತ್ರ ಕೃಷ್ಣನೆಂದರೆ ಏನು ಎಂದು ಅರ್ಥಮಾಡಿಕೊಳ್ಳಬಲ್ಲ. ವಿಶ್ವವಿದ್ಯಾಲಯಗಳ ಪದವಿಗಳು ಇಲ್ಲಿ ನೆರವಾಗುವುದಿಲ್ಲ.

ಕೃಷ್ಣ ವಿಜ್ಞಾನವನ್ನು ಸಂಪೂರ್ಣವಾಗಿ ಬಲ್ಲವನು ಕೃಷ್ಣನ ನಿವಾಸವಾದ ಆಧ್ಯಾತ್ಮಿಕ ಸಾಮ್ರಾಜ್ಯವನ್ನು ಪ್ರವೇಶಿಸಲು ಅರ್ಹನಾಗುತ್ತಾನೆ. ಬ್ರಹ್ಮನಾಗುವುದೆಂದರೆ ಮನುಷ್ಯನು ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆ ಎಂದು ಅರ್ಥವಲ್ಲ. ಭಕ್ತಿಸೇವೆಯು ಇದ್ದೇ ಇದೆ. ಭಕ್ತಿಸೇವೆಯು ಇರುವಷ್ಟು ಕಾಲವೂ ದೇವರು, ಭಕ್ತ, ಭಕ್ತಿಸೇವೆಯ ಪ್ರಕ್ರಿಯೆ ಇರಲೇಬೇಕು. ಮುಕ್ತಿ ದೊರೆತನಂತರವೂ ಇಂತಹ ಜ್ಞಾನ ನಾಶವಾಗುವುದಿಲ್ಲ. ಮುಕ್ತಿಯೆಂದರೆ ಐಹಿಕ ಜೀವನದ ಕಲ್ಪನೆಯಿಂದ ಬಿಡುಗಡೆಯನ್ನು ಪಡೆಯುವುದು. ಆಧ್ಯಾತ್ಮಿಕ ಜೀವನದಲ್ಲಿಯೂ ಅದೇ

ವ್ಯತ್ಯಾಸವುಂಟು; ಅದೇ ವ್ಯಕ್ತಿತ್ವವುಂಟು; ಆದರೆ ಅವು ಇರುವುದು ಶುದ್ಧ ಕೃಷ್ಣಪ್ರಜ್ಞೆಯಲ್ಲಿ. ಮನುಷ್ಯನು ನಿರಾಕಾರ ಬ್ರಹ್ಮನ್‌ನಲ್ಲಿ ಏಕರೂಪವಾಗುತ್ತಾನೆ ಎನ್ನುವುದು ಅದ್ವೈತ ಸಿದ್ಧಾಂತ; **ವಿಶತೇ,** 'ನನ್ನನ್ನು ಪ್ರವೇಶಿಸುತ್ತಾನೆ' ಎನ್ನುವ ಮಾತು ಈ ಸಿದ್ಧಾಂತವನ್ನು ಸಮರ್ಥಿಸುತ್ತದೆ ಎಂದು ತಪ್ಪಾಗಿ ತಿಳಿಯಬಾರದು. ಇಲ್ಲಿ **ವಿಶತೇ** ಎಂದರೆ ಮನುಷ್ಯನು ಪರಮ ಪ್ರಭುವಿನ ಸಹವಾಸದಲ್ಲಿ ನಿರತನಾಗಿ, ಅವನಿಗೆ ಸೇವೆ ಸಲ್ಲಿಸಲು ತನ್ನ ವ್ಯಕ್ತಿತ್ವದಲ್ಲಿಯೇ ಪರಮ ಪ್ರಭುವಿನ ನಿವಾಸವನ್ನು ಪ್ರವೇಶಿಸಬಲ್ಲ ಎಂದರ್ಥ. ಉದಾಹರಣೆಗೆ, ಒಂದು ಹಸಿರು ಪಕ್ಷಿಯು ಹಸಿರು ಮರವನ್ನು ಪ್ರವೇಶಿಸುವುದು ಮರದೊಡನೆ ಒಂದಾಗುವುದಕ್ಕಲ್ಲ; ಮರದ ಹಣ್ಣುಗಳನ್ನು ಸವಿಯಲು. ಸಾಮಾನ್ಯವಾಗಿ ನಿರಾಕಾರವಾದಿಗಳು ಸಮುದ್ರದ ಆಳಕ್ಕೆ ಹರಿದು ಅದರೊಡನೆ ಒಂದಾಗುವ ನದಿಯ ಉದಾಹರಣೆಯನ್ನು ಕೊಡುತ್ತಾರೆ. ನಿರಾಕಾರವಾದಿಗೆ ಇದರಿಂದ ಸುಖವುಂಟಾಗಬಹುದು. ಆದರೆ ಸಮುದ್ರದಲ್ಲಿನ ಜಲಜೀವಿಯಂತೆ ಸಾಕಾರವಾದಿಯು ಸ್ವಂತ ವ್ಯಕ್ತಿತ್ವವನ್ನು ಉಳಿಸಿಕೊಳ್ಳುತ್ತಾನೆ. ನಾವು ಸಮುದ್ರದ ಆಳಕ್ಕೆ ಹೋದರೆ ಅನೇಕ ಜೀವಂತ ಪ್ರಾಣಿಗಳನ್ನು ಕಾಣುತ್ತೇವೆ . ಸಮುದ್ರದ ಮೇಲ್ಮೈಯನ್ನು ಅರಿತರೆ ಸಾಲದು; ಸಮುದ್ರದ ಆಳದಲ್ಲಿ ವಾಸಿಸುವ ಜಲಜೀವಿಗಳ ಸಂಪೂರ್ಣ ತಿಳುವಳಿಕೆಯು ಮನುಷ್ಯನಿಗಿರಬೇಕು. ತನ್ನ ಪರಿಶುದ್ಧ ಭಕ್ತಿಸೇವೆಯಿಂದ ಭಕ್ತನು ಸತ್ಯವಾಗಿಯೂ ಪರಮ ಪ್ರಭುವಿನ ದಿವ್ಯಗುಣಗಳನ್ನೂ, ಸಿರಿಗಳನ್ನೂ ಅರ್ಥಮಾಡಿಕೊಳ್ಳಬಹುದು. ಹನ್ನೊಂದನೆಯ ಅಧ್ಯಾಯದಲ್ಲಿ ಹೇಳಿರುವಂತೆ ಭಕ್ತಿಸೇವೆಯಿಂದ ಮಾತ್ರ ಇದನ್ನು ಅರ್ಥಮಾಡಿಕೊಳ್ಳಬಹುದು. ಇಲ್ಲಿ ಇದನ್ನು ದೃಢಪಡಿಸಿದೆ. ಭಕ್ತಿಸೇವೆಯಿಂದ ಮನುಷ್ಯನು ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಂಡು ಅವನ ಸಾಮ್ರಾಜ್ಯವನ್ನು ಪ್ರವೇಶಿಸಬಹುದು.

ಐಹಿಕ ಪರಿಕಲ್ಪನೆಗಳಿಂದ ಬಿಡುಗಡೆಯಾಗಿ ಬ್ರಹ್ಮಭೂತ ಹಂತವನ್ನು ತಲಪಿದ ಮೇಲೆ ಭಗವಂತನನ್ನು ಕುರಿತು ಶ್ರವಣ ಮಾಡುವುದರಿಂದ ಭಕ್ತಿಸೇವೆಯು ಪ್ರಾರಂಭವಾಗುತ್ತದೆ. ಪರಮ ಪ್ರಭುವಿನ ವಿಷಯವನ್ನು ಕೇಳಿದಾಗ ಬ್ರಹ್ಮಭೂತ ಸ್ಥಿತಿಯು ತಂತಾನೇ ಬೆಳೆಯುತ್ತದೆ; ಐಹಿಕ ಕಲ್ಮಷದ ಸೋಂಕು — ಎಂದರೆ ಲೋಭ ಮತ್ತು ಕಾಮ — ತಾನಾಗಿಯೇ ಮಾಯವಾಗುತ್ತದೆ. ಕಾಮ ಮತ್ತು ಬಯಕೆಗಳು ಭಕ್ತನ ಹೃದಯದಿಂದ ಮಾಯವಾದಂತೆ ಅವನು ಪ್ರಭುವಿನ ಸೇವೆಯಲ್ಲಿ ಇನ್ನೂ ಆಸಕ್ತನಾಗುತ್ತಾನೆ. ಇಂತಹ ಆಸಕ್ತಿಯಿಂದ ಅವನು ಐಹಿಕ ಸೋಂಕಿನಿಂದ ಬಿಡುಗಡೆ ಹೊಂದುತ್ತಾನೆ. ಬದುಕಿನ ಆ ಸ್ಥಿತಿಯಲ್ಲಿ ಅವನು ಪರಮ ಪ್ರಭುವನ್ನು ಅರ್ಥಮಾಡಿಕೊಳ್ಳಬಲ್ಲ. ಶ್ರೀಮದ್ಭಾಗವತವೂ ಇದನ್ನೇ ಹೇಳಿದೆ. ಬಿಡುಗಡೆಯ ಅನಂತರ ಭಕ್ತಿಪ್ರಕ್ರಿಯೆಯು ಅಥವಾ ದಿವ್ಯಸೇವೆಯು ಮುಂದುವರಿಯುತ್ತದೆ. ವೇದಾಂತ ಸೂತ್ರವು (4.1.12) ಇದನ್ನು ದೃಢಪಡಿಸುತ್ತದೆ. **ಆ ಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್.** ಮುಕ್ತಿಯ ಅನಂತರವೂ ಭಕ್ತಿಸೇವಾ ಪ್ರಕ್ರಿಯೆಯು ಮುಂದುವರಿಯುತ್ತದೆ ಎಂದು ಇದರ ಅರ್ಥ. ಶ್ರೀಮದ್ಭಾಗವತದಲ್ಲಿ ನಿಜವಾದ ಭಕ್ತಿಪೂರ್ವಕ ಮುಕ್ತಿಯನ್ನು ಜೀವಿಯು ಸ್ವಂತ ವ್ಯಕ್ತಿತ್ವದಲ್ಲಿ ಸ್ವರೂಪಸ್ಥಿತಿಯಲ್ಲಿ ಮತ್ತೆ ಸ್ಥಾಪಿತವಾಗುವುದು ಎಂದು ವಿವರಿಸಿದೆ. ಸ್ವರೂಪ ಸ್ಥಿತಿಯನ್ನು ಆಗಲೇ ವಿವರಿಸಿದೆ. ಪ್ರತಿಯೊಬ್ಬ ಜೀವಿಯೂ ಪರಮ ಪ್ರಭುವಿನ ವಿಭಿನ್ನಾಂಶ. ಆದುದರಿಂದ ಸೇವೆ ಸಲ್ಲಿಸುವುದೇ ಅವನ ಸಹಜ ಸ್ಥಿತಿ. ಮುಕ್ತಿಯ ಅನಂತರವೂ ಈ ಸೇವೆಯು ನಿಲ್ಲುವುದೇ ಇಲ್ಲ. ಬದುಕಿನ ಮಿಥ್ಯಾಕಲ್ಪನೆಗಳಿಂದ ಬಿಡುಗಡೆ ಹೊಂದುವುದೇ ನಿಜವಾದ ಮುಕ್ತಿ.

## ಶ್ಲೋಕ - 56

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ |**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ||೫೬||**

**ಸರ್ವ**—ಎಲ್ಲ; **ಕರ್ಮಾಣಿ**—ಕರ್ಮಗಳನ್ನು; **ಅಪಿ**—ಆದರೂ; **ಸದಾ**—ಯಾವಾಗಲೂ; **ಕುರ್ವಾಣಃ**—ಆಚರಿಸುತ್ತ; **ಮತ್ ವ್ಯಪಾಶ್ರಯಃ**—ನನ್ನ ರಕ್ಷಣೆಯಲ್ಲಿ; **ಮತ್‌ಪ್ರಸಾದಾತ್**—ನನ್ನ ಅನುಗ್ರಹದಿಂದ; **ಅವಾಪ್ನೋತಿ**—ಹೊಂದುತ್ತಾನೆ; **ಶಾಶ್ವತಮ್**—ಶಾಶ್ವತವಾದ; **ಪದಮ್**—ಧಾಮವನ್ನು; **ಅವ್ಯಯಮ್**—ಅವಿನಾಶಿಯಾದ.

### ಅನುವಾದ

**ನನ್ನ ಪರಿಶುದ್ಧ ಭಕ್ತನು ಎಲ್ಲ ಬಗೆಯ ವ್ಯಾಪಾರಗಳಲ್ಲಿ ನಿರತನಾಗಿದ್ದರೂ ನನ್ನ ರಕ್ಷಣೆಯಲ್ಲಿ, ನನ್ನ ಕೃಪೆಯಿಂದ ಶಾಶ್ವತವೂ ಅವ್ಯಯವೂ ಆದ ನಿವಾಸವನ್ನು ಸೇರುತ್ತಾನೆ.**

### ಭಾವಾರ್ಥ

**ಮದ್ ವ್ಯಪಾಶ್ರಯಃ** ಎಂದರೆ ಪರಮ ಪ್ರಭುವಿನ ರಕ್ಷಣೆಯಲ್ಲಿ ಎಂದರ್ಥ. ಐಹಿಕ ಸೋಂಕಿನಿಂದ ಬಿಡುಗಡೆ ಹೊಂದಲು ಪರಿಶುದ್ಧ ಭಕ್ತನು ಪರಮ ಪ್ರಭುವಿನ ಅಥವಾ ಅವನ ಪ್ರತಿನಿಧಿಯಾದ ಗುರುವಿನ ಮಾರ್ಗದರ್ಶನದಲ್ಲಿ ಕಾರ್ಯ ಮಾಡುತ್ತಾನೆ. ಪರಿಶುದ್ಧ ಭಕ್ತನಿಗೆ ಕಾಲದ ಮಿತಿಯಿಲ್ಲ. ಅವನು ಯಾವಾಗಲೂ, ದಿನದಲ್ಲಿ ಇಪ್ಪತ್ತನಾಲ್ಕು ಗಂಟೆಗಳ ಕಾಲವೂ, ನೂರಕ್ಕೆ ನೂರರಷ್ಟು ಮಟ್ಟಿಗೆ, ಪರಮ ಪ್ರಭುವಿನ ಆದೇಶಕ್ಕೆ ಅನುಗುಣವಾಗಿ, ವ್ಯಾಪಾರಗಳಲ್ಲಿ ತೊಡಗಿರುತ್ತಾನೆ. ಹೀಗೆ ಕೃಷ್ಣಪ್ರಜ್ಞೆಯಲ್ಲಿ ನಿರತನಾದ ಭಕ್ತನಿಗೆ ಪ್ರಭುವು ಬಹು ಕರುಣಾಳು. ಎಷ್ಟು ಕಷ್ಟಗಳಿದ್ದರೂ ಕಡೆಗೆ ಅವನಿಗೆ ದಿವ್ಯನಿವಾಸ ಅಥವಾ ಕೃಷ್ಣಲೋಕವು ಲಭ್ಯವಾಗುತ್ತದೆ. ಅಲ್ಲಿ ಅವನಿಗೆ ಪ್ರವೇಶ ಖಚಿತ; ಇದರಲ್ಲಿ ಅನುಮಾನವೇ ಇಲ್ಲ. ಆ ಪರಮ ನಿವಾಸದಲ್ಲಿ ಯಾವುದೂ ಬದಲಾಗುವುದಿಲ್ಲ; ಎಲ್ಲವೂ ಶಾಶ್ವತ, ಅವ್ಯಯ ಮತ್ತು ಜ್ಞಾನಮಯ.

## ಶ್ಲೋಕ - 57

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ |**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ||೫೭||**

**ಚೇತಸಾ**—ಬುದ್ಧಿಯಿಂದ; **ಸರ್ವ ಕರ್ಮಾಣಿ**—ಎಲ್ಲ ಕಾರ್ಯಗಳನ್ನು; **ಮಯಿ**—ನನ್ನಲ್ಲಿ; **ಸಂನ್ಯಸ್ಯ**—ತ್ಯಜಿಸಿ; **ಮತ್‌ಪರಃ**—ನನ್ನ ರಕ್ಷಣೆಯಲ್ಲಿ; **ಬುದ್ಧಿಯೋಗಮ್**—ಭಕ್ತಿ ಕಾರ್ಯಗಳನ್ನು; **ಉಪಾಶ್ರಿತ್ಯ**—ಆಶ್ರಯಿಸಿ; **ಮತ್ ಚಿತ್ತಃ**—ನನ್ನ ಪ್ರಜ್ಞೆಯಲ್ಲಿ; **ಸತತಮ್**—ದಿನದ ಇಪ್ಪತ್ತನಾಲ್ಕು ಗಂಟೆಗಳೂ; **ಭವ**—ಇರು.

### ಅನುವಾದ

**ಎಲ್ಲ ಚಟುವಟಿಕೆಗಳಲ್ಲಿಯೂ ನನ್ನನ್ನು ಅವಲಂಬಿಸು ಮತ್ತು ಯಾವಾಗಲೂ ನನ್ನ ರಕ್ಷಣೆಯಲ್ಲಿ**

**ಕೆಲಸಮಾಡು. ಇಂತಹ ಭಕ್ತಿಸೇವೆಯಲ್ಲಿ ಸಂಪೂರ್ಣವಾಗಿ ನನ್ನ ಪ್ರಜ್ಞೆಯನ್ನು ಹೊಂದಿರು.**

## ಭಾವಾರ್ಥ

ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವಾಗ ಅವನು ಜಗತ್ತಿನ ಪ್ರಭುವಾಗಿ ಕೆಲಸಮಾಡುವುದಿಲ್ಲ. ಸೇವಕನ ಹಾಗೆ ಮನುಷ್ಯನು ಸಂಪೂರ್ಣವಾಗಿ ಪರಮ ಪ್ರಭುವಿನ ಆದೇಶದಂತೆ ಕೆಲಸ ಮಾಡಬೇಕು. ಸೇವಕನಿಗೆ ವೈಯಕ್ತಿಕ ಸ್ವಾತಂತ್ರ್ಯವಿಲ್ಲ. ಅವನು ಪ್ರಭುವಿನ ಆಜ್ಞೆಯಂತೆ ನಡೆದುಕೊಳ್ಳುತ್ತಾನೆ. ಪರಮ ಪ್ರಭುವಿನ ಪರವಾಗಿ ಕೆಲಸಮಾಡುವ ಸೇವಕನಿಗೆ ಲಾಭನಷ್ಟಗಳ ಗೊಡವೆಯಿಲ್ಲ. ಅ ವನು ಪ್ರಭುವಿನ ಅಪ್ಪಣೆಯ ಪ್ರಕಾರ ತನ್ನ ಕರ್ತವ್ಯವನ್ನು ಮಾಡುತ್ತಾನೆ, ಅಷ್ಟೆ. ಅರ್ಜುನನು ಕೃಷ್ಣನ ವೈಯಕ್ತಿಕ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ. ಆದರೆ ಕೃಷ್ಣನು ಎದುರಿಗಿಲ್ಲದಿದ್ದಾಗ ಮನುಷ್ಯನು ಹೇಗೆ ಕೆಲಸ ಮಾಡಬೇಕು ಎಂದು ಯಾರಾದರೂ ವಾದ ಮಾಡಬಹುದು. ಈ ಗ್ರಂಥದಲ್ಲಿ ಕೃಷ್ಣನು ನೀಡಿದ ಆದೇಶದಂತೆ ಮತ್ತು ಕೃಷ್ಣನ ಪ್ರತಿನಿಧಿಯ ಮಾರ್ಗದರ್ಶನದಂತೆ ಮನುಷ್ಯನು ಕೆಲಸ ಮಾಡಿದರೆ ಪರಿಣಾಮವು ಒಂದೇ ಆಗುತ್ತದೆ. ಈ ಶ್ಲೋಕದಲ್ಲಿ **ಮತ್ಪರಃ** ಎನ್ನುವ ಸಂಸ್ಕೃತ ಪದವು ಬಹು ಮುಖ್ಯವಾದದ್ದು. ಕೃಷ್ಣನನ್ನು ಸಂತೃಪ್ತಿಪಡಿಸಲು ಕೃಷ್ಣನಿಗಾಗಿ ಕಾರ್ಯ ಮಾಡುವುದನ್ನು ಬಿಟ್ಟು ಮನುಷ್ಯನಿಗೆ ಬೇರೇನೂ ಗುರಿಯಿಲ್ಲ ಎಂದು ಇದು ಸೂಚಿಸುತ್ತದೆ. ಹೀಗೆ ಕೆಲಸಮಾಡುವಾಗ ಮನುಷ್ಯನು ಕೃಷ್ಣನನ್ನು ಕುರಿತು ಮಾತ್ರ ಯೋಚಿಸಬೇಕು. "ಈ ನಿರ್ದಿಷ್ಟ ಕರ್ತವ್ಯವನ್ನು ನಿರ್ವಹಿಸಲು ಕೃಷ್ಣನು ನನ್ನನ್ನು ನೇಮಿಸಿದ್ದಾನೆ." ಈ ರೀತಿ ಕೆಲಸಮಾಡುವಾಗ ಸಹಜವಾಗಿ ಮನುಷ್ಯನು ಕೃಷ್ಣನನ್ನು ಕುರಿತು ಯೋಚಿಸಬೇಕು. ಇದು ಪರಿಪೂರ್ಣ ಕೃಷ್ಣಪ್ರಜ್ಞೆ. ಆದರೆ ಮನುಷ್ಯನು ಮನಸ್ವೀ ನಡೆದುಕೊಂಡು ಫಲವನ್ನು ಕೃಷ್ಣನಿಗೆ ಅರ್ಪಿಸಬಾರದು ಎನ್ನುವುದನ್ನು ಗಮನಿಸಬೇಕು. ಇಂತಹ ಕರ್ತವ್ಯವು ಕೃಷ್ಣಪ್ರಜ್ಞೆಯ ಭಕ್ತಿಸೇವೆಯಲ್ಲಿ ಮಾಡಿದುದಲ್ಲ. ಮನುಷ್ಯನು ಕೃಷ್ಣನ ಅಪ್ಪಣೆಯ ಪ್ರಕಾರ ಕೆಲಸ ಮಾಡಬೇಕು. ಇದು ಬಹಳ ಮುಖ್ಯವಾದ ಅಂಶ. ಕೃಷ್ಣನ ಅಪ್ಪಣೆಯು ಸದ್ಗುರುವಿನಿಂದ ಗುರುಶಿಷ್ಯ ಪರಂಪರೆಯಿಂದ ಬರುತ್ತದೆ. ಆದುದರಿಂದ ಗುರುವಿನ ಅಪ್ಪಣೆಯನ್ನು ಜೀವನದ ಪ್ರಧಾನ ಕರ್ತವ್ಯ ಎಂದು ಸ್ವೀಕರಿಸಬೇಕು. ಮನುಷ್ಯನು ನಿಜವಾದ ಗುರುವನ್ನು ಪಡೆದುಕೊಂಡು ಅವನ ಆದೇಶಕ್ಕೆ ಅನುಗುಣವಾಗಿ ನಡೆದುಕೊಂಡರೆ ಕೃಷ್ಣಪ್ರಜ್ಞೆಯಲ್ಲಿ ಮನುಷ್ಯನ ಬದುಕಿನ ಪರಿಪೂರ್ಣತೆಯು ಖಚಿತವಾಗುತ್ತದೆ.

## ಶ್ಲೋಕ - 58

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಙ್ಕಾರಾನ್ನ ಶ್ರೋಷ್ಯಸಿ ವಿನಙ್ಕ್ಷ್ಯಸಿ ॥೫೮॥**

**ಮತ್**—ನನ್ನ; **ಚಿತ್ತಃ**—ಪ್ರಜ್ಞೆಯಲ್ಲಿದ್ದು; **ಸರ್ವ**—ಎಲ್ಲ; **ದುರ್ಗಾಣಿ**—ಆತಂಕಗಳನ್ನು; **ಮತ್ಪ್ರಸಾದಾತ್**—ನನ್ನ ಅನುಗ್ರಹದಿಂದ; **ತರಿಷ್ಯಸಿ**—ದಾಟುತ್ತೀಯೆ; **ಅಥ**—ಆದರೆ; **ಚೇತ್**—ಒಂದು ವೇಳೆ; **ತ್ವಮ್**—ನೀನು; **ಅಹಙ್ಕಾರಾತ್**—ಅಹಂಕಾರದಿಂದ; **ನ ಶ್ರೋಷ್ಯಸಿ** —ಶ್ರವಣ ಮಾಡದಿದ್ದರೆ; **ವಿನಙ್ಕ್ಷ್ಯಸಿ**—ನಾಶವಾಗುತ್ತೀಯೆ.

## ಅನುವಾದ

**ನೀನು ನನ್ನ ಪ್ರಜ್ಞೆಯನ್ನು ಹೊಂದಿದಾಗ ಬದ್ಧಜೀವನದ ಎಲ್ಲ ಅಡ್ಡಿಗಳನ್ನು ನನ್ನ ಕೃಪೆಯಿಂದ ನಿವಾರಿಸಿಕೊಳ್ಳುವೆ. ಆದರೆ ನೀನು ಇಂತಹ ಪ್ರಜ್ಞೆಯಲ್ಲಿ ಕೆಲಸಮಾಡದೆ ಅಹಂಕಾರದಿಂದ ಕೆಲಸ ಮಾಡಿದರೆ, ನನ್ನ ಮಾತನ್ನು ಕೇಳದೆ ಹೋದರೆ ಮುಳುಗಿಹೋಗುತ್ತೀಯೆ.**

## ಭಾವಾರ್ಥ

ಪೂರ್ಣ ಕೃಷ್ಣಪ್ರಜ್ಞೆಯಲ್ಲಿರುವ ಮನುಷ್ಯನು ತನ್ನ ಅಸ್ತಿತ್ವದ ಕರ್ತವ್ಯಗಳನ್ನು ನಿರ್ವಹಿಸುವ ವಿಷಯದಲ್ಲಿ ಅನಗತ್ಯವಾಗಿ ಆತಂಕಪಟ್ಟುಕೊಳ್ಳುವುದಿಲ್ಲ. ಎಲ್ಲ ಆತಂಕದಿಂದ ಹೀಗೆ ಪಡೆಯಬಹುದಾದ ಮಹತ್ತರವಾದ ಬಿಡುಗಡೆಯನ್ನು ಮೂರ್ಖರು ಅರ್ಥಮಾಡಿಕೊಳ್ಳಲಾರರು. ಕೃಷ್ಣಪ್ರಜ್ಞೆಯಲ್ಲಿ ಕಾರ್ಯ ಮಾಡುವವನಿಗೆ ಶ್ರೀಕೃಷ್ಣನು ಅತ್ಯಂತ ಆತ್ಮೀಯ ಸ್ನೇಹಿತನಾಗುತ್ತಾನೆ. ತನ್ನ ಸ್ನೇಹಿತನ ನೆಮ್ಮದಿಯನ್ನು ಆತನು ಸದಾ ನೋಡಿಕೊಳ್ಳುತ್ತಾನೆ; ದಿನದಲ್ಲಿ ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ಪ್ರಭುವನ್ನು ಸಂತೋಷಗೊಳಿಸುವ ಕಾರ್ಯದಲ್ಲಿ ಅಷ್ಟೊಂದು ಶ್ರದ್ಧೆಯಿಂದ ನಿರತನಾಗಿರುವ ಸ್ನೇಹಿತನಿಗೆ ಭಗವಂತನು ತನ್ನನ್ನು ಕೊಟ್ಟುಕೊಳ್ಳುತ್ತಾನೆ. ಆದುದರಿಂದ ಬದುಕಿನ ದೈಹಿಕ ಪರಿಕಲ್ಪನೆಯ ಅಹಂಕಾರದಲ್ಲಿ ಮನುಷ್ಯನು ಕೊಚ್ಚಿಹೋಗಿಬಿಡಬಾರದು. ತಾನು ಐಹಿಕ ಪ್ರಕೃತಿಯ ನಿಯಮಗಳಿಗೆ ಬದ್ಧನಲ್ಲ ಅಥವಾ ತಾನು ಮನಸ್ಸು ಬಂದಂತೆ ಕೆಲಸ ಮಾಡಲು ಸ್ವತಂತ್ರ ಎಂದು ಮನುಷ್ಯನು ಹುಸಿಯಾಗಿ ಯೋಚಿಸಬಾರದು. ಅವನು ಆಗಲೇ ಕಟ್ಟುನಿಟ್ಟಾದ ಐಹಿಕ ನಿಯಮಗಳಿಗೆ ಒಳಗಾಗಿದ್ದಾನೆ. ಆದರೆ ಅವನು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುತ್ತಲೇ ಮುಕ್ತನಾಗುತ್ತಾನೆ, ಎಲ್ಲ ಐಹಿಕ ಗೊಂದಲಗಳಿಂದ ಬಿಡುಗಡೆ ಹೊಂದುತ್ತಾನೆ. ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡದವನು ಐಹಿಕ ಸುಳಿಯಲ್ಲಿ, ಹುಟ್ಟು ಸಾವುಗಳ ಸಮುದ್ರದಲ್ಲಿ ಮುಳುಗಿ ಹೋಗುತ್ತಿದ್ದಾನೆ ಎನ್ನುವುದನ್ನು ಎಚ್ಚರಿಕೆಯಿಂದ ಗಮನಿಸಬೇಕು. ಯಾವ ಬದ್ಧ ಆತ್ಮಕ್ಕೂ ಏನು ಮಾಡಬೇಕು ಅಥವಾ ಏನು ಮಾಡಬಾರದು ಎನ್ನುವುದು ವಾಸ್ತವವಾಗಿ ತಿಳಿಯದು. ಆದರೆ ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡುವವನು ಕೆಲಸ ಮಾಡಲು ಸ್ವತಂತ್ರನು. ಏಕೆಂದರೆ ಎಲ್ಲವನ್ನೂ ಕೃಷ್ಣನು ಒಳಗಿನಿಂದ ಪ್ರೇರೇಪಿಸುತ್ತಾನೆ ಮತ್ತು ಗುರುವು ದೃಢಪಡಿಸುತ್ತಾನೆ.

## ಶ್ಲೋಕ - 59

**ಯದಹನ್ಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥**

**ಯತ್**—ಯಾವ; **ಅಹನ್ಕಾರಮ್**—ಅಹಂಕಾರವನ್ನು; **ಆಶ್ರಿತ್ಯ**—ಆಶ್ರಯಿಸಿ; **ನ ಯೋತ್ಸ್ಯೇ**—ನಾನು ಯುದ್ಧಮಾಡುವುದಿಲ್ಲ; **ಇತಿ**—ಎಂದು; **ಮನ್ಯಸೇ**—ಯೋಚಿಸುತ್ತೀಯೋ; **ಮಿಥ್ಯಾ ಏಷಃ**—ಇದೆಲ್ಲವೂ ಸುಳ್ಳು; **ವ್ಯವಸಾಯಃ**—ನಿರ್ಧಾರವು; **ತೇ**—ನಿನ್ನ; **ಪ್ರಕೃತಿಃ**—ಭೌತಿಕ ಪ್ರಕೃತಿಯು; **ತ್ವಾಮ್**—ನಿನ್ನನ್ನು; **ನಿಯೋಕ್ಷ್ಯತಿ**—ತೊಡಗಿಸುತ್ತದೆ.

## ಅನುವಾದ

**ನೀನು ನನ್ನ ಆದೇಶದಂತೆ ಯುದ್ಧಮಾಡದೆ ಹೋದರೆ ತಪ್ಪು ದಾರಿ ಹಿಡಿಯುತ್ತೀಯೆ. ನಿನ್ನ ಪ್ರಕೃತಿಗನುಗುಣವಾಗಿ ನೀನು ಯುದ್ಧದಲ್ಲಿ ತೊಡಗಲೇಬೇಕಾಗುತ್ತದೆ.**

## ಭಾವಾರ್ಥ

ಅರ್ಜುನನು ಯೋಧ ಮತ್ತು ಹುಟ್ಟಿನಿಂದ ಅವನದು ಕ್ಷತ್ರಿಯ ಸ್ವಭಾವ. ಆದುದರಿಂದ ಯುದ್ಧಮಾಡುವುದು ಅವನ ಸಹಜಧರ್ಮ. ಆದರೆ ಅವನು ಗುರು, ತಾತ ಮತ್ತು ಸ್ನೇಹಿತರನ್ನು ಕೊಲ್ಲುವುದರಿಂದ ತಾನು ಪಾಪವನ್ನು ಸಂಘಟಿಸುತ್ತೇನೆ ಎಂದು ಅಹಂಕಾರದಿಂದ ಭಯಪಟ್ಟ. ವಾಸ್ತವವಾಗಿ ಅವನು ಇಂತಹ ಕರ್ಮದ ಸತ್ಫಲ ಮತ್ತು ದುಷ್ಫಲಗಳನ್ನು ತಾನೇ ನಿರ್ದೇಶಿಸುವಂತೆ, ತಾನು ತನ್ನ ಕಾರ್ಯಗಳ ಯಜಮಾನ ಎಂದು ಭಾವಿಸಿದ. ದೇವೋತ್ತಮ ಪರಮ ಪುರುಷನೇ ಅಲ್ಲಿದ್ದು ಯುದ್ಧಮಾಡುವಂತೆ ಆದೇಶಿಸುತ್ತಿದ್ದಾನೆ ಎನ್ನುವುದನ್ನು ಮರೆತ. ಇದು ಬದ್ಧ ಆತ್ಮದ ವಿಸ್ಮರಣೆ. ಯಾವುದು ಸರಿ ಯಾವುದು ತಪ್ಪು ಎಂದು ಪುರುಷೋತ್ತಮನು ಆದೇಶಿಸುತ್ತಾನೆ. ಬದುಕಿನಲ್ಲಿ ಪರಿಪೂರ್ಣತೆಯನ್ನು ಪಡೆಯಲು ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡಬೇಕು, ಅಷ್ಟೆ. ಯಾವ ಮನುಷ್ಯನೂ ತನ್ನ ವಿಧಿಯನ್ನು ಪರಮ ಪ್ರಭುವಿನಂತೆ ತಿಳಿದುಕೊಳ್ಳಲಾರ. ಆದುದರಿಂದ ಅತ್ಯುತ್ತಮ ಮಾರ್ಗವೆಂದರೆ ಪರಮ ಪ್ರಭುವಿನ ಆದೇಶವನ್ನು ಪಡೆದು ಕಾರ್ಯ ಮಾಡುವುದು. ದೇವೋತ್ತಮ ಪರಮ ಪುರುಷನ ಆಜ್ಞೆಯನ್ನಾಗಲಿ ಭಗವಂತನ ಪ್ರತಿನಿಧಿಯಾದ ಗುರುವಿನ ಆಜ್ಞೆಯನ್ನಾಗಲೀ ಯಾರೂ ಅಸಡ್ಡೆ ಮಾಡಬಾರದು. ದೇವೋತ್ತಮ ಪರಮ ಪುರುಷನ ಆಜ್ಞೆಯನ್ನು ಕಾರ್ಯಗತ ಮಾಡಲು ಮನುಷ್ಯನು ಸ್ವಲ್ಪವೂ ಹಿಂಜರಿಯದೆ ಕಾರ್ಯನಿಷ್ಠನಾಗಬೇಕು. ಇದರಿಂದ ಎಲ್ಲ ಸನ್ನಿವೇಶಗಳಲ್ಲಿಯೂ ಅವನಿಗೆ ಕ್ಷೇಮ.

## ಶ್ಲೋಕ - 60

**ಸ್ವಭಾವಜೇನ ಕೌನ್ತೇಯ ನಿಬದ್ಧಃ ಸ್ವೇನ ಕರ್ಮಣಾ |**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋऽಪಿ ತತ್ ||೬೦||**

**ಸ್ವಭಾವಜೇನ**—ಸ್ವಭಾವದಿಂದ ಹುಟ್ಟಿದ; **ಕೌನ್ತೇಯ**—ಕುಂತೀ ಪುತ್ರನೇ; **ನಿಬದ್ಧಃ**— ಬದ್ಧನಾಗಿದ್ದೀಯೆ; **ಸ್ವೇನ**—ನಿನ್ನ ಸ್ವಂತ; **ಕರ್ಮಣಾ**—ಕರ್ಮಗಳಿಂದ; **ಕರ್ತುಮ್**—ಮಾಡಲು; **ನ ಇಚ್ಛಸಿ**— ಬಯಸುವುದಿಲ್ಲವೋ; **ಯತ್**—ಯಾವುದನ್ನು; **ಮೋಹಾತ್**—ಮೋಹದಿಂದ; **ಕರಿಷ್ಯಸಿ**— ಮಾಡುವೆ; **ಅವಶಃ**—ಸ್ವಂತ ಇಚ್ಛೆಯಿಲ್ಲದೆ; **ಅಪಿ**—ಕೂಡ; **ತತ್**—ಅದನ್ನು.

## ಅನುವಾದ

**ಮೋಹದಿಂದ ನೀನು ನನ್ನ ಆದೇಶದಂತೆ ಕೆಲಸ ಮಾಡಲು ಒಪ್ಪುತ್ತಿಲ್ಲ. ಆದರೆ ಅರ್ಜುನನೆ, ನಿನ್ನ ಸ್ವಭಾವದಿಂದ ಹುಟ್ಟಿದ ಕರ್ಮವನ್ನು ನೀನು ಮಾಡಿಯೇ ಮಾಡುತ್ತೀಯೆ.**

## ಭಾವಾರ್ಥ

ಪರಮ ಪ್ರಭುವಿನ ಆದೇಶದಂತೆ ಕರ್ಮ ಮಾಡಲು ಮನುಷ್ಯನು ನಿರಾಕರಿಸಿದರೆ ಅವನಲ್ಲಿ ನೆಲೆಯಾಗಿರುವ ಗುಣಗಳು ಅವನು ಕರ್ಮ ಮಾಡುವಂತೆ ಬಲಾತ್ಕರಿಸುತ್ತವೆ. ಪ್ರತಿಯೊಬ್ಬನೂ ಪ್ರಕೃತಿಯ ಗುಣಗಳ ನಿರ್ದಿಷ್ಟ ಜೋಡಣೆಯ ಪ್ರಭಾವದಲ್ಲಿರುತ್ತಾನೆ. ಆ ರೀತಿಯಲ್ಲಿ ಕರ್ಮ ಮಾಡುತ್ತಾನೆ. ಆದರೆ, ಸ್ವಇಚ್ಛೆಯಿಂದ ಪರಮ ಪ್ರಭುವಿನ ಆದೇಶದಂತೆ ಕಾರ್ಯ ಮಾಡುವವನು ಧನ್ಯನಾಗುತ್ತಾನೆ.

## ಶ್ಲೋಕ - 61

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ||೬೧||**

**ಈಶ್ವರಃ**—ಪರಮ ಪ್ರಭುವು; **ಸರ್ವ ಭೂತಾನಾಮ್**—ಸಕಲ ಜೀವಿಗಳ; **ಹೃತ್‌ದೇಶೇ**—ಹೃದಯ ಸ್ಥಾನದಲ್ಲಿ; **ಅರ್ಜುನ**—ಅರ್ಜುನನೇ; **ತಿಷ್ಠತಿ**—ವಾಸಿಸುತ್ತಾನೆ; **ಭ್ರಾಮಯನ್**—ತಿರುಗಿಸುತ್ತ; **ಸರ್ವ ಭೂತಾನಿ**—ಎಲ್ಲ ಜೀವಿಗಳನ್ನು; **ಯನ್ತ್ರ**—ಯಂತ್ರದ ಮೇಲೆ; **ಆರೂಢಾನಿ**—ಇರಿಸಲ್ಪಟ್ಟು; **ಮಾಯಯಾ**—ಭೌತಿಕ ಶಕ್ತಿಯ ಪ್ರಭಾವದಿಂದ.

## ಅನುವಾದ

**ಅರ್ಜುನನೆ, ಪರಮ ಪ್ರಭುವು ಪ್ರತಿಯೊಬ್ಬನ ಹೃದಯದಲ್ಲಿಯೂ ಇದ್ದಾನೆ; ಐಹಿಕ ಶಕ್ತಿಯಿಂದ ಮಾಡಿದ ಯಂತ್ರದಲ್ಲಿ ಕುಳಿತವರಂತೆ ಇರುವ ಎಲ್ಲ ಜೀವಿಗಳ ತಿರುಗಾಟವನ್ನು ನಿರ್ದೇಶಿಸುತ್ತಿದ್ದಾನೆ.**

## ಭಾವಾರ್ಥ

ಅರ್ಜುನನೇ ಸರ್ವಜ್ಞನಲ್ಲ. ಯುದ್ಧಮಾಡುವ ಅಥವಾ ಮಾಡದಿರುವ ಅವನ ನಿರ್ಧಾರವು ಅವನ ಮಿತವಾದ ವಿವೇಚನೆಗೆ ಒಳಪಟ್ಟದ್ದು. ಜೀವಿಯು ಸರ್ವಶಕ್ತನಲ್ಲ ಎಂದು ಶ್ರೀಕೃಷ್ಣನು ಉಪದೇಶಿಸಿದ. ದೇವೋತ್ತಮ ಪರಮ ಪುರುಷನು ಅಥವಾ ಸ್ವಯಂ ಶ್ರೀಕೃಷ್ಣನು ಅಂತರ್ಯಾಮಿ ಪರಮಾತ್ಮನಾಗಿ ಜೀವಿಯನ್ನು ಆದೇಶಿಸುತ್ತಾ ಹೃದಯದಲ್ಲಿ ನೆಲೆಸಿರುತ್ತಾನೆ. ದೇಹಗಳನ್ನು ಬದಲಾಯಿಸಿದ ಅನಂತರ ಜೀವಿಯು ತನ್ನ ಹಿಂದಿನ ಕರ್ಮಗಳನ್ನು ಮರೆತು ಬಿಡುತ್ತಾನೆ; ಆದರೆ ಭೂತ, ವರ್ತಮಾನ, ಭವಿಷ್ಯತ್ತುಗಳನ್ನು ಬಲ್ಲ ಪರಮಾತ್ಮನು ಅವನ ಎಲ್ಲ ಕಾರ್ಯಗಳಿಗೆ ಸಾಕ್ಷಿಯಾಗಿರುತ್ತಾನೆ. ಆದುದರಿಂದ ಈ ಪರಮಾತ್ಮನು ಜೀವಿಯ ಎಲ್ಲ ಕಾರ್ಯಗಳನ್ನು ನಿರ್ದೇಶಿಸುತ್ತಾನೆ. ಜೀವಿಯು ತನ್ನ ಅರ್ಹತೆಗೆ ಅನುಗುಣವಾದದ್ದನ್ನು ಪಡೆಯುತ್ತಾನೆ; ಪರಮಾತ್ಮನ ನಿರ್ದೇಶನದಲ್ಲಿ ಐಹಿಕ ಶಕ್ತಿಯಲ್ಲಿ ಸೃಷ್ಟಿಯಾದ ಐಹಿಕ ದೇಹದಲ್ಲಿ ಜೀವಿಯು ಸಾಗುತ್ತಾನೆ. ಜೀವಿಯನ್ನು ಒಂದು ನಿರ್ದಿಷ್ಟ ಬಗೆಯ ದೇಹದಲ್ಲಿ ಇರಿಸುತ್ತಲೇ ಆ ದೇಹದ ರಚನೆಯ ಪ್ರಭಾವದಿಂದ ಅವನು ಕೆಲಸಮಾಡಬೇಕಾಗುತ್ತದೆ. ವಾಹನಗಳ ಚಾಲಕರಾದ ಜೀವಿಗಳು ಅವರೇ ಆದರೂ ಬಹುವೇಗದ ಕಾರಿನಲ್ಲಿ ಕುಳಿತವನು ಇನ್ನೂ ನಿಧಾನವಾದ ಕಾರಿನಲ್ಲಿ ಕುಳಿತವನಿಗಿಂತ ವೇಗವಾಗಿ ಹೋಗುತ್ತಾನೆ. ಹೀಗೆಯೇ ಪರಮಾತ್ಮನ ಅಪ್ಪಣೆಯಂತೆ, ಒಂದು ನಿರ್ದಿಷ್ಟ ಬಗೆಯ

ಜೀವಿಗೆ ತನ್ನ ಹಿಂದಿನ ಬಯಕೆಗಳಿಗೆ ಅನುಗುಣವಾಗಿ ಕರ್ಮ ಮಾಡಲು ಐಹಿಕ ಪ್ರಕೃತಿಯು ಒಂದು ನಿರ್ದಿಷ್ಟ ಬಗೆಯ ದೇಹವನ್ನು ರೂಪಿಸುತ್ತದೆ. ಜೀವಿಯು ಸ್ವತಂತ್ರನಲ್ಲ. ತಾನು ದೇವೋತ್ತಮ ಪರಮ ಪುರುಷನಿಂದ ಸ್ವತಂತ್ರನು ಎಂದು ಮನುಷ್ಯನು ಯೋಚಿಸಬಾರದು. ವ್ಯಕ್ತಿಯು ಯಾವಾಗಲೂ ಪ್ರಭುವಿನ ನಿಯಂತ್ರಣದಲ್ಲಿಯೇ ಇರುತ್ತಾನೆ. ಆದುದರಿಂದ ಶರಣಾಗತನಾಗುವುದೇ ಮನುಷ್ಯನ ಕರ್ತವ್ಯ. ಈ ಅಪ್ಪಣೆಯನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ.

## ಶ್ಲೋಕ - 62

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥**

**ತಮ್**—ಅವನಿಗೆ; **ಏವ**—ಖಂಡಿತವಾಗಿಯೂ; **ಶರಣಂ ಗಚ್ಛ**—ಶರಣು ಹೋಗು; **ಸರ್ವಭಾವೇನ**—ಎಲ್ಲ ರೀತಿಗಳಲ್ಲಿ; **ಭಾರತ**—ಭರತ ವಂಶಜನೇ; **ತತ್ ಪ್ರಸಾದಾತ್**—ಅವನ ಅನುಗ್ರಹದಿಂದ; **ಪರಾಮ್**—ದಿವ್ಯವಾದ; **ಶಾನ್ತಿಮ್**—ಶಾಂತಿಯನ್ನು; **ಸ್ಥಾನಮ್**—ಧಾಮವನ್ನು; **ಪ್ರಾಪ್ಸ್ಯಸಿ**—ಹೊಂದುವೆ; **ಶಾಶ್ವತಮ್**—ಶಾಶ್ವತವಾದ.

## ಅನುವಾದ

**ಭರತವಂಶದಲ್ಲಿ ಶ್ರೇಷ್ಠನಾದವನೆ, ಸಂಪೂರ್ಣವಾಗಿ, ಅವನಿಗೆ ಶರಣಾಗತನಾಗು. ಅವನ ಕೃಪೆಯಿಂದ ನೀನು ದಿವ್ಯಶಾಂತಿಯನ್ನು, ಪರಮವೂ ಶಾಶ್ವತವೂ ಆದ ಸ್ಥಾನವನ್ನು ಪಡೆಯುತ್ತೀಯೆ.**

## ಭಾವಾರ್ಥ

ಆದುದರಿಂದ ಜೀವಿಯು ಪ್ರತಿಯೊಬ್ಬರ ಹೃದಯದಲ್ಲಿ ನೆಲೆಸಿರುವ ದೇವೋತ್ತಮ ಪರಮ ಪುರುಷನಿಗೆ ಶರಣಾಗತನಾಗಬೇಕು; ಆಗ ಅವನು ಈ ಐಹಿಕ ಅಸ್ತಿತ್ವದ ಎಲ್ಲ ಬಗೆಯ ದುಃಖಗಳಿಂದ ಬಿಡುಗಡೆ ಹೊಂದುತ್ತಾನೆ. ಹೀಗೆ ಶರಣಾಗತನಾಗುವುದರಿಂದ ಅವನು ಈ ಜನ್ಮದ ಎಲ್ಲ ದುಃಖಗಳಿಂದ ಬಿಡುಗಡೆಯಾಗುವುದು ಮಾತ್ರವಲ್ಲ, ಕಡೆಯಲ್ಲಿ ಅವನು ಭಗವಂತನನ್ನು ಸೇರುವನು. ವೇದಸಾಹಿತ್ಯವು (ಋಗ್ವೇದ 1.22.20) ದಿವ್ಯಲೋಕವನ್ನು **ತದ್ವಿಷ್ಣೋಃ ಪರಮಂ ಪದಮ್** ಎಂದು ವರ್ಣಿಸಿದೆ. ಸೃಷ್ಟಿಯೆಲ್ಲವೂ ದೇವರ ರಾಜ್ಯವಾದದ್ದರಿಂದ ಐಹಿಕವಾದದ್ದೆಲ್ಲ ನಿಜವಾಗಿ ಆಧ್ಯಾತ್ಮಿಕವೇ; ಆದರೆ **ಪರಮಂ ಪದಮ್** ಎನ್ನುವುದು ವಿಶೇಷವಾಗಿ ಶಾಶ್ವತ ನಿವಾಸಕ್ಕೆ ಅನ್ವಯಿಸುತ್ತದೆ; ಇದಕ್ಕೆ ಆಧ್ಯಾತ್ಮಿಕ ಗಗನ ಅಥವಾ ವೈಕುಂಠ ಎಂದು ಹೆಸರು.

ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ, **ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ** — ಪ್ರಭುವು ಪ್ರತಿಯೊಬ್ಬನ ಹೃದಯದಲ್ಲಿ ಪೀಠಸ್ಥನಾಗಿದ್ದಾನೆ ಎಂದು ಹೇಳಿದೆ. ಆದುದರಿಂದ ಮನುಷ್ಯನು ತನ್ನೊಳಗಿರುವ ಪರಮಾತ್ಮನಿಗೆ ಶರಣಾಗತನಾಗಬೇಕೆಂಬ ಈ ಸಲಹೆಯ ಅರ್ಥವು ದೇವೋತ್ತಮ ಪರಮ ಪುರುಷನಾದ ಕೃಷ್ಣನಿಗೆ ಶರಣಾಗತನಾಗಬೇಕೆಂದೇ. ಅರ್ಜುನನು ಕೃಷ್ಣನನ್ನು ಪರಮ ಪ್ರಭುವೆಂದು ಆಗಲೇ ಒಪ್ಪಿಕೊಂಡಿದ್ದಾನೆ. ಹತ್ತನೆಯ ಅಧ್ಯಾಯದಲ್ಲಿ **ಪರಂ ಬ್ರಹ್ಮ ಪರಂ ಧಾಮ** ಎಂದು ಒಪ್ಪಿಕೊಂಡಿದ್ದಾನೆ. ಕೃಷ್ಣನು ದೇವೋತ್ತಮ ಪರಮ ಪುರುಷನೆಂದು, ಎಲ್ಲ ಜೀವಿಗಳ

ಪರಂಧಾಮನೆಂದು ಅರ್ಜುನನು ಒಪ್ಪಿಕೊಂಡಿದ್ದಾನೆ; ಇದಕ್ಕೆ ಕಾರಣ ತನ್ನ ವೈಯಕ್ತಿಕ ಅನುಭವ ಮಾತ್ರವಲ್ಲ, ನಾರದ, ಅಸಿತ, ದೇವಲ ಮತ್ತು ವ್ಯಾಸರಂತಹ ಮಹಾ ಪುರುಷರ ಸಾಕ್ಷ್ಯವೂ ಕಾರಣ.

## ಶ್ಲೋಕ - 63

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ ಗುಹ್ಯತರಂ ಮಯಾ |**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ||೬೩||**

**ಇತಿ**—ಹೀಗೆ; **ತೇ**—ನಿನಗೆ; **ಜ್ಞಾನಮ್**—ಜ್ಞಾನವು; **ಆಖ್ಯಾತಮ್**—ವಿವರಿಸಲ್ಪಟ್ಟಿದೆ; **ಗುಹ್ಯಾತ್**—ರಹಸ್ಯಕ್ಕಿಂತ; **ಗುಹ್ಯತರಮ್**—ಇನ್ನೂ ರಹಸ್ಯಮಯವಾದ; **ಮಯಾ**—ನನ್ನಿಂದ; **ವಿಮೃಶ್ಯ**—ವಿಮರ್ಶಿಸಿ; **ಏತತ್**—ಇದನ್ನು; **ಅಶೇಷೇಣ**—ಪೂರ್ಣವಾಗಿ; **ಯಥಾ**—ಹೇಗೆ; **ಇಚ್ಛಸಿ**—ಇಷ್ಟಪಡುತ್ತೀಯೋ; **ತಥಾ**—ಹಾಗೆ; **ಕುರು**—ಆಚರಿಸು.

## ಅನುವಾದ

**ಹೀಗೆ ನಿನಗೆ ಗುಹ್ಯಕ್ಕಿಂತ ಗುಹ್ಯತರವಾದ ಜ್ಞಾನವನ್ನು ವಿವರಿಸಿದ್ದೇನೆ. ಇದನ್ನು ಕುರಿತು ಸಂಪೂರ್ಣವಾಗಿ ವಿಮರ್ಶಿಸಿ ನಿನ್ನ ಇಷ್ಟದಂತೆ ಮಾಡು.**

## ಭಾವಾರ್ಥ

ಪ್ರಭುವು ಅರ್ಜುನನಿಗೆ ಆಗಲೇ ಬ್ರಹ್ಮಭೂತದ ಜ್ಞಾನವನ್ನು ವಿವರಿಸಿದ್ದಾನೆ. ಬ್ರಹ್ಮಭೂತದ ಸ್ಥಿತಿಯಲ್ಲಿರುವವನು ಸಂತೋಷವಾಗಿರುತ್ತಾನೆ; ಅವನು ಯಾವಾಗಲೂ ದುಃಖಿಸುವುದಿಲ್ಲ ಮತ್ತು ಏನನ್ನೂ ಬಯಸುವುದಿಲ್ಲ. ಇದಕ್ಕೆ ರಹಸ್ಯಜ್ಞಾನವೂ ಕಾರಣ. ಕೃಷ್ಣನು ಪರಮಾತ್ಮನ ಜ್ಞಾನವನ್ನು ತಿಳಿಸಿಕೊಡುತ್ತಾನೆ. ಇದೂ ಬ್ರಹ್ಮಜ್ಞಾನವೇ; ಆದರೆ ಉತ್ತಮವಾದದ್ದು.

**ಯಥೇಚ್ಛಸಿ ತಥಾ ಕುರು** — 'ನಿನ್ನ ಇಷ್ಟದಂತೆ ನೀನು ಮಾಡಬಹುದು' ಎನ್ನುವ ಮಾತುಗಳು ಭಗವಂತನು ಜೀವಿಯ ಅಲ್ಪಸ್ವಾತಂತ್ರ್ಯದಲ್ಲಿ ಕೈಹಾಕುವುದಿಲ್ಲ ಎಂದು ತೋರಿಸುತ್ತದೆ. ಮನುಷ್ಯನು ತನ್ನ ಬದುಕಿನ ಸ್ಥಿತಿಯನ್ನು ಹೇಗೆ ಉತ್ತಮಗೊಳಿಸಿಕೊಳ್ಳಬಹುದು ಎನ್ನುವುದನ್ನು ಭಗವದ್ಗೀತೆಯಲ್ಲಿ ಪ್ರಭುವು ಎಲ್ಲ ರೀತಿಗಳಲ್ಲಿ ವರ್ಣಿಸಿದ್ದಾನೆ. ಅರ್ಜುನನಿಗೆ ಕೊಟ್ಟ ಅತ್ಯುತ್ತಮ ಉಪದೇಶವೆಂದರೆ ಅವನೊಳಗೆ ನೆಲೆಸಿರುವ ಪರಮಾತ್ಮನಿಗೆ ಶರಣಾಗತನಾಗುವುದು. ಸರಿಯಾದ ವಿವೇಚನೆಯಿಂದ ಮನುಷ್ಯನು ಪರಮಾತ್ಮನ ಅಪ್ಪಣೆಗೆ ಅನುಗುಣವಾಗಿ ನಡೆದುಕೊಳ್ಳಲು ಒಪ್ಪಬೇಕು. ಇದರಿಂದ ಅವನು ಮನುಷ್ಯ ಜೀವನದ ಅತ್ಯುನ್ನತ ಪರಿಪೂರ್ಣತೆಯ ಹಂತವಾದ ಕೃಷ್ಣಪ್ರಜ್ಞೆಯಲ್ಲಿ ಸದಾ ನೆಲೆಸಲು ಸಹಾಯವಾಗುತ್ತದೆ. ದೇವೋತ್ತಮ ಪರಮ ಪುರುಷನು ಯುದ್ಧಮಾಡಬೇಕೆಂದು ಅರ್ಜುನನಿಗೆ ನೇರವಾಗಿ ನಿರ್ದೇಶಿಸುತ್ತಿದ್ದಾನೆ. ದೇವೋತ್ತಮ ಪರಮ ಪುರುಷನಿಗೆ ಶರಣಾಗುವುದು ಮನುಷ್ಯನ ಅತ್ಯುತ್ತಮ ಹಿತಾಸಕ್ತಿಗಳಿಗೆ ಯೋಗ್ಯವಾದದ್ದು. ಅದು ಭಗವಂತನ ಹಿತಾಸಕ್ತಿಗಳಿಗಾಗಿ ಅಲ್ಲ. ಶರಣಾಗುವ ಮುನ್ನ ಈ ವಿಷಯವನ್ನು ಕುರಿತು ಬುದ್ಧಿಶಕ್ತಿಗೆ ಎಷ್ಟು ಸಾಧ್ಯವೋ ಅಷ್ಟು ಯೋಚಿಸುವ ಸ್ವಾತಂತ್ರ್ಯವು ಮನುಷ್ಯನಿಗುಂಟು; ದೇವೋತ್ತಮ ಪರಮ ಪುರುಷನ ಆದೇಶವನ್ನು ಒಪ್ಪಿಕೊಳ್ಳಲು ಇದೇ ಅತ್ಯುತ್ತಮ ಮಾರ್ಗ. ಇಂತಹ ಆದೇಶವು ಕೃಷ್ಣನ

ನಿಜವಾದ ಪ್ರತಿನಿಧಿಯಾದ ಗುರುವಿನಿಂದಲೂ ಬರುತ್ತದೆ.

## ಶ್ಲೋಕ - 64

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥೬೪॥**

**ಸರ್ವ ಗುಹ್ಯ ತಮಮ್**—ಎಲ್ಲಕ್ಕಿಂತ ಅತ್ಯಂತ ರಹಸ್ಯವಾದ; **ಭೂಯಃ**—ಪುನಃ; **ಶೃಣು**—ಕೇಳು; **ಮೇ**—ನನ್ನ; **ಪರಮಮ್**—ಪರಮೋನ್ನತವಾದ; **ವಚಃ**—ಉಪದೇಶವನ್ನು; **ಇಷ್ಟಃ ಅಸಿ**—ನೀನು ಪ್ರಿಯನಾಗಿದ್ದೀಯೆ; **ಮೇ**—ನನಗೆ; **ದೃಢಮ್**—ಬಹಳ; **ಇತಿ**—ಎಂದು; **ತತಃ**—ಆದ್ದರಿಂದ; **ವಕ್ಷ್ಯಾಮಿ**—ಹೇಳುತ್ತಿದ್ದೇನೆ; **ತೇ**—ನಿನಗೆ; **ಹಿತಮ್**—ಹಿತವನ್ನು.

## ಅನುವಾದ

**ನೀನು ನನಗೆ ಅತ್ಯಂತ ಪ್ರಿಯನಾದ ಸ್ನೇಹಿತನಾಗಿರುವುದರಿಂದ, ನಿನಗೆ ನನ್ನ ಪರಮೋಪದೇಶವನ್ನು, ಅತ್ಯಂತ ರಹಸ್ಯವಾದ ಜ್ಞಾನವನ್ನು ಹೇಳುತ್ತಿದ್ದೇನೆ. ಇದನ್ನು ನನ್ನಿಂದ ಕೇಳು. ಏಕೆಂದರೆ ಇದು ನಿನ್ನ ಹಿತಕ್ಕಾಗಿಯೇ.**

## ಭಾವಾರ್ಥ

ಪ್ರಭುವು ಅರ್ಜುನನಿಗೆ ರಹಸ್ಯ ಜ್ಞಾನವನ್ನೂ, (ಬ್ರಹ್ಮಜ್ಞಾನ) ಇನ್ನೂ ರಹಸ್ಯಜ್ಞಾನವನ್ನೂ (ಪ್ರತಿಯೊಬ್ಬರ ಹೃದಯದಲ್ಲಿರುವ ಪರಮಾತ್ಮನ ಜ್ಞಾನ) ನೀಡಿದ್ದಾನೆ. ಈಗ ಅವನು ಅತ್ಯಂತ ರಹಸ್ಯವಾದ ಜ್ಞಾನಭಾಗವನ್ನು ನೀಡುತ್ತಿದ್ದಾನೆ; ಇದು ದೇವೋತ್ತಮ ಪರಮ ಪುರುಷನಿಗೆ ಶರಣಾಗತನಾಗು ಎನ್ನುವುದು. ಒಂಬತ್ತನೆಯ ಅಧ್ಯಾಯದ ಕೊನೆಯಲ್ಲಿ ಅವನು **ಮನ್ಮನಾಃ** — "ಯಾವಾಗಲೂ ನನ್ನನ್ನು ಕುರಿತು ಯೋಚಿಸು" ಎಂದು ಹೇಳಿದ್ದಾನೆ. ಭಗವದ್ಗೀತೆಯ ಉಪದೇಶಗಳ ಸಾರವನ್ನು ಒತ್ತಿಹೇಳುವುದಕ್ಕಾಗಿ ಈ ಉಪದೇಶವನ್ನು ಇಲ್ಲಿ ಮತ್ತೆ ಹೇಳಿದೆ. ಸಾಮಾನ್ಯ ಮನುಷ್ಯನು ಈ ಸಾರವನ್ನು ಅರ್ಥಮಾಡಿಕೊಳ್ಳಲಾರ. ವಾಸ್ತವವಾಗಿ ಕೃಷ್ಣನಿಗೆ ಬಹಳ ಪ್ರಿಯನಾದವನು, ಕೃಷ್ಣನ ಪರಿಶುದ್ಧ ಭಕ್ತನು ಮಾತ್ರ ಇದನ್ನು ಅರ್ಥಮಾಡಿಕೊಳ್ಳಬಲ್ಲ. ವೇದ ಸಾಹಿತ್ಯದಲ್ಲೆಲ್ಲ ಅತ್ಯಂತ ಮುಖ್ಯವಾದ ನಿರ್ದೇಶನ ಇದು. ಈ ಸಂಬಂಧದಲ್ಲಿ ಕೃಷ್ಣನು ಹೇಳುತ್ತಿರುವುದು ಅತಿ ಮುಖ್ಯವಾದ ಭಾಗ. ಅರ್ಜುನನು ಮಾತ್ರವಲ್ಲ, ಎಲ್ಲ ಜೀವಿಗಳೂ ಅದನ್ನು ಅನುಷ್ಠಾನ ಮಾಡಬೇಕು.

## ಶ್ಲೋಕ - 65

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**

**ಮತ್ ಮನಾಃ**—ನನ್ನನ್ನು ಕುರಿತು ಚಿಂತಿಸುವವನು; **ಭವ**—ಆಗು; **ಮತ್ ಭಕ್ತಃ**—ನನ್ನ ಭಕ್ತನು; **ಮತ್ ಯಾಜೀ**—ನನ್ನ ಆರಾಧಕನು; **ಮಾಮ್**—ನನಗೆ; **ನಮಸ್ಕುರು**—ನಮಸ್ಕಾರಗಳನ್ನು ಅರ್ಪಿಸು;

**ಮಾಮ್**—ನನ್ನಲ್ಲಿಗೆ; **ಏವ**—ಖಂಡಿತವಾಗಿಯೂ; **ಏಷ್ಯಸಿ**—ಬರುವೆ; **ಸತ್ಯಮ್**—ಸತ್ಯವಾಗಿಯೂ; **ತೇ**—ನಿನಗೆ; **ಪ್ರತಿಜಾನೇ**—ಮಾತುಕೊಡುತ್ತೇನೆ; **ಪ್ರಿಯಃ**—ಪ್ರೀತಿಪಾತ್ರನು; **ಅಸಿ**—ಆಗಿದ್ದೀಯೆ; **ಮೇ**—ನನಗೆ.

## ಅನುವಾದ

**ಯಾವಾಗಲೂ ನನ್ನನ್ನು ಕುರಿತು ಚಿಂತಿಸು, ನನ್ನ ಭಕ್ತನಾಗು, ನನ್ನನ್ನು ಪೂಜಿಸು ಮತ್ತು ನನಗೆ ನಮಸ್ಕರಿಸು. ಆಗ ನೀನು ನಿಶ್ಚಯವಾಗಿಯೂ ನನ್ನ ಬಳಿಗೆ ಬರುತ್ತೀಯೆ. ನೀನು ನನ್ನ ಬಹುಪ್ರಿಯ ಸ್ನೇಹಿತನಾದದ್ದರಿಂದ ನಿನಗೆ ಈ ಭರವಸೆಯನ್ನು ಕೊಡುತ್ತೇನೆ.**

## ಭಾವಾರ್ಥ

ಜ್ಞಾನದ ಅತ್ಯಂತ ರಹಸ್ಯವಾದ ಭಾಗ ಇದು. ಮನುಷ್ಯನು ಕೃಷ್ಣನ ಪರಿಶುದ್ಧ ಭಕ್ತನಾಗಬೇಕು. ಸದಾ ಅವನನ್ನು ಕುರಿತು ಚಿಂತಿಸಬೇಕು ಮತ್ತು ಅವನಿಗಾಗಿ ಕೆಲಸ ಮಾಡಬೇಕು. ಮನುಷ್ಯನು ಔಪಚಾರಿಕ ಧ್ಯಾನಮಾಡುವವನಾಗಬಾರದು. ಸದಾ ಕೃಷ್ಣನನ್ನು ಕುರಿತು ಚಿಂತಿಸಲು ಅವಕಾಶವಿರುವಂತೆ ಬದುಕನ್ನು ರೂಪಿಸಿಕೊಳ್ಳಬೇಕು. ತನ್ನ ನಿತ್ಯದ ಎಲ್ಲ ಚಟುವಟಿಕೆಗಳು ಕೃಷ್ಣನಿಗೆ ಸಂಬಂಧಪಟ್ಟಿರುವಂತೆ ಮನುಷ್ಯನು ಸದಾ ಕೆಲಸ ಮಾಡಬೇಕು. ಇಪ್ಪತ್ತನಾಲ್ಕು ಗಂಟೆಗಳ ಕಾಲವೂ ಕೃಷ್ಣನನ್ನು ಕುರಿತು ಚಿಂತಿಸದೆ ಇರುವುದು ಸಾಧ್ಯವೇ ಇಲ್ಲ ಎನ್ನುವ ರೀತಿಯಲ್ಲಿ ತನ್ನ ಬದುಕನ್ನು ವ್ಯವಸ್ಥೆಗೊಳಿಸಿಕೊಳ್ಳಬೇಕು. ಇಂತಹ ಪರಿಶುದ್ಧ ಕೃಷ್ಣಪ್ರಜ್ಞೆಯಲ್ಲಿ ಇರುವ ಮನುಷ್ಯನು ನಿಶ್ಚಯವಾಗಿಯೂ ಕೃಷ್ಣನ ನಿವಾಸಕ್ಕೆ ಹಿಂದಿರುಗುತ್ತಾನೆ. ಅಲ್ಲಿ ಕೃಷ್ಣನನ್ನು ಎದುರಿಗೆ ನೋಡುತ್ತಾ ಅವನ ಸಹವಾಸದಲ್ಲಿರುತ್ತಾನೆ ಎಂದು ಪ್ರಭುವು ಭರವಸೆ ನೀಡುತ್ತಾನೆ. ಅರ್ಜುನನು ಕೃಷ್ಣನಿಗೆ ಪ್ರಿಯಸಖನಾದದ್ದರಿಂದ ಅವನಿಗೆ ಜ್ಞಾನದ ಈ ಅತ್ಯಂತ ರಹಸ್ಯಭಾಗವನ್ನು ಹೇಳಿದೆ. ಅರ್ಜುನನ ಮಾರ್ಗವನ್ನು ಅನುಸರಿಸುವ ಯಾರೇ ಆಗಲಿ ಕೃಷ್ಣನ ಪ್ರಿಯಸಖನಾಗಬಹುದು ಮತ್ತು ಅರ್ಜುನನ ಪರಿಪೂರ್ಣತೆಯನ್ನೇ ಸಾಧಿಸಬಹುದು.

ಕೃಷ್ಣನು ಎರಡು ಕೈಗಳಲ್ಲಿ ಕೊಳಲನ್ನು ಹಿಡಿದ, ಸುಂದರ ವದನದ, ಕೂದಲಿನಲ್ಲಿ ನವಿಲುಗರಿ ಮೆರೆಯುವ ನೀಲ ವರ್ಣದ ಬಾಲಕ; ಮನುಷ್ಯನು ಈ ರೂಪದ ಕೃಷ್ಣನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು ಎಂದು ಈ ಮಾತುಗಳು ಒತ್ತಿ ಹೇಳುತ್ತವೆ. ಬ್ರಹ್ಮಸಂಹಿತೆಯಲ್ಲೂ, ಇತರ ಸಾಹಿತ್ಯಗಳಲ್ಲೂ ಕೃಷ್ಣನ ವರ್ಣನೆಗಳಿವೆ. ದೇವೋತ್ತಮನಾದ ಕೃಷ್ಣನ ಈ ಮೂಲರೂಪದಲ್ಲಿ ಮನುಷ್ಯನು ತನ್ನ ಮನಸ್ಸನ್ನು ಕೇಂದ್ರೀಕರಿಸಬೇಕು. ಪ್ರಭುವಿನ ಇತರ ರೂಪಗಳತ್ತ ಸಹ ಗಮನವನ್ನು ಹರಿಸಬಾರದು. ವಿಷ್ಣು, ನಾರಾಯಣ, ರಾಮ, ವರಾಹ ಮೊದಲಾಗಿ ಪ್ರಭುವಿಗೆ ಅನೇಕಾನೇಕ ರೂಪಗಳುಂಟು. ಆದರೆ ಮನುಷ್ಯನು ಅರ್ಜುನನ ಮುಂದಿದ್ದ ರೂಪದಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕು. ಕೃಷ್ಣನ ರೂಪದಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದೇ ಜ್ಞಾನದ ಅತ್ಯಂತ ರಹಸ್ಯ ಭಾಗ; ಅರ್ಜುನನು ಕೃಷ್ಣನ ಅತ್ಯಂತ ಪ್ರಿಯ ಸ್ನೇಹಿತನಾದದ್ದರಿಂದ ಇದನ್ನು ತಿಳಿಸಿಕೊಟ್ಟಿದೆ.

## ಶ್ಲೋಕ - 66

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥**

**ಸರ್ವಧರ್ಮಾನ್**—ಎಲ್ಲ ಪ್ರಕಾರದ ಧರ್ಮಗಳನ್ನು; **ಪರಿತ್ಯಜ್ಯ**—ತ್ಯಜಿಸಿ; **ಮಾಮ್**—ನನ್ನನ್ನು; **ಏಕಮ್**—ಮಾತ್ರ; **ಶರಣಮ್**—ಶರಣು; **ವ್ರಜ**—ಹೋಗು; **ಅಹಮ್**—ನಾನು; **ತ್ವಾಮ್**—ನಿನ್ನನ್ನು; **ಸರ್ವ**—ಎಲ್ಲ; **ಪಾಪೇಭ್ಯಃ**—ಪಾಪಗಳಿಂದ; **ಮೋಕ್ಷಯಿಷ್ಯಾಮಿ**—ವಿಮೋಚನೆಗೊಳಿಸುತ್ತೇನೆ; **ಮಾ ಶುಚಃ**—ಶೋಕಿಸಬೇಡ.

## ಅನುವಾದ

**ಎಲ್ಲ ಧರ್ಮಗಳನ್ನೂ ಪರಿತ್ಯಜಿಸಿ ನನಗೆ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತನನ್ನಾಗಿ ಮಾಡುತ್ತೇನೆ; ಹೆದರಿಕೊಳ್ಳಬೇಡ.**

## ಭಾವಾರ್ಥ

ಪ್ರಭುವು ವಿವಿಧ ಬಗೆಗಳ ಜ್ಞಾನವನ್ನೂ, ಧಾರ್ಮಿಕ ಪ್ರಕ್ರಿಯೆಗಳನ್ನೂ ವರ್ಣಿಸಿದ್ದಾನೆ. ಪರಮ ಬ್ರಹ್ಮನ್‌ನ ಜ್ಞಾನ, ಪರಮಾತ್ಮನ ಜ್ಞಾನ, ವಿವಿಧ ರೀತಿಗಳ ವರ್ಣಾಶ್ರಮಧರ್ಮಗಳ ಜ್ಞಾನ, ಸನ್ಯಾಸಾಶ್ರಮದ ಜ್ಞಾನ, ನಿರ್ಲಿಪ್ತತೆ, ಇಂದ್ರಿಯ ಮತ್ತು ಮನಸ್ಸುಗಳ ನಿಯಂತ್ರಣ, ಧ್ಯಾನ ಮೊದಲಾದವುಗಳ ಜ್ಞಾನ — ಹೀಗೆ ಹಲವು ಬಗೆಯ ಜ್ಞಾನ ನೀಡಿದ್ದಾನೆ. ಅನೇಕ ರೀತಿಗಳಲ್ಲಿ ಬೇರೆಬೇರೆ ಬಗೆಗಳ ಧರ್ಮವನ್ನು ವರ್ಣಿಸಿದ್ದಾನೆ. ಈಗ ಭಗವದ್ಗೀತೆಯನ್ನು ಸಂಗ್ರಹವಾಗಿ ಹೇಳುತ್ತ ಅರ್ಜುನನು ತನಗೆ ವಿವರಿಸಿದ ಎಲ್ಲ ಪ್ರಕ್ರಿಯೆಗಳನ್ನು ಬಿಟ್ಟು ಕೃಷ್ಣನಿಗೆ ಶರಣಾಗತನಾಗಬೇಕು ಎಂದು ಹೇಳುತ್ತಾನೆ. ಇಂತಹ ಶರಣಾಗತಿಯು ಅವನನ್ನು ಎಲ್ಲ ಪಾಪಕರ್ಮಗಳಿಂದ ರಕ್ಷಿಸುತ್ತದೆ. ಏಕೆಂದರೆ ಸ್ವತಃ ಪ್ರಭುವೇ ಅವನನ್ನು ರಕ್ಷಿಸುವುದಾಗಿ ಮಾತುಕೊಡುತ್ತಾನೆ. ಏಳನೆಯ ಅಧ್ಯಾಯದಲ್ಲಿ ಎಲ್ಲ ಪಾಪಮಯ ಪ್ರಕ್ರಿಯೆಗಳಿಂದ ಬಿಡುಗಡೆಯಾದವನು ಮಾತ್ರ ಶ್ರೀಕೃಷ್ಣನ ಪೂಜೆಯನ್ನು ಕೈಗೊಳ್ಳಬಹುದು ಎಂದು ಹೇಳಿದೆ. ಆದುದರಿಂದ ಮನುಷ್ಯನು ತಾನು ಎಲ್ಲ ಪಾಪಕರ್ಮಗಳಿಂದ ಮುಕ್ತನಾಗದೆ ಶರಣಾಗತಿಯ ವಿಧಾನವನ್ನು ಕೈಗೊಳ್ಳುವಂತಿಲ್ಲ ಎಂದು ಯೋಚಿಸಬಹುದು. ಇಂತಹ ಸಂದೇಹಗಳಿಗೆ ಉತ್ತರವಾಗಿ ಮನುಷ್ಯನು ಎಲ್ಲ ಪಾಪಮಯ ಪ್ರಕ್ರಿಯೆಗಳಿಂದ ಮುಕ್ತನಾಗದಿದ್ದರೂ ಶ್ರೀಕೃಷ್ಣನಿಗೆ ಶರಣಾಗತನಾಗುವ ಪ್ರಕ್ರಿಯೆ ಮಾತ್ರದಿಂದಲೇ ಅವನು ಮುಕ್ತನಾಗುತ್ತಾನೆ ಎಂದು ಇಲ್ಲಿ ಹೇಳಿದೆ. ಪಾಪಮಯ ಪ್ರತಿಕ್ರಿಯೆಗಳಿಂದ ಬಿಡಿಸಿಕೊಳ್ಳಲು ಶ್ರಮಪಡುವ ಅಗತ್ಯವೇ ಇಲ್ಲ. ಮನುಷ್ಯನು ಒಂದಿಷ್ಟೂ ಹಿಂಜರಿಯದೆ ಕೃಷ್ಣನನ್ನು ಎಲ್ಲ ಜೀವಿಗಳ ಪರಮೋದ್ಧಾರಕ ಎಂದು ಸ್ವೀಕರಿಸಬೇಕು. ಶ್ರದ್ಧೆ ಮತ್ತು ಪ್ರೀತಿಗಳಿಂದ ಮನುಷ್ಯನು ಅವನಿಗೆ ಶರಣಾಗಬೇಕು.

ಕೃಷ್ಣನಿಗೆ ಶರಣಾಗುವ ಪ್ರಕ್ರಿಯೆಯನ್ನು ಹರಿಭಕ್ತಿ ವಿಲಾಸದಲ್ಲಿ ವರ್ಣಿಸಿದೆ (11.676)

**ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಮ್ ।**
**ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವೇ ವರಣಂ ತಥಾ ।**
**ಆತ್ಮ ನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥**

ಭಕ್ತಿಪೂರ್ವಕ ಪ್ರಕ್ರಿಯೆಗೆ ಅನುಗುಣವಾಗಿ ಮನುಷ್ಯನು ಕಟ್ಟಕಡೆಗೆ ಪ್ರಭುವಿನ ಭಕ್ತಿಸೇವೆಗೆ ಕರೆದೊಯ್ಯುವ ಧಾರ್ಮಿಕ ತತ್ವಗಳನ್ನು ಒಪ್ಪಿಕೊಂಡರೆ ಸಾಕು. ಅವನು ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನ ಸ್ಥಾನಕ್ಕೆ ಅನುಗುಣವಾಗಿ ಒಂದು ನಿರ್ದಿಷ್ಟ ವೃತ್ತಿಕರ್ತವ್ಯವನ್ನು ಮಾಡಬಹುದು; ಆದರೆ ತನ್ನ ಕರ್ತವ್ಯವನ್ನು ಮಾಡುವುದರಿಂದ ಮನುಷ್ಯನು ಕೃಷ್ಣಪ್ರಜ್ಞೆಯ ಹಂತಕ್ಕೆ ಬರದಿದ್ದರೆ ಅವನ ಕಾರ್ಯಗಳು ವ್ಯರ್ಥ. ಕೃಷ್ಣಪ್ರಜ್ಞೆಯ ಪರಿಪೂರ್ಣ ಹಂತಕ್ಕೆ ಕರೆದೊಯ್ಯದ್ದು ಏನೇ ಇರಲಿ ಅದನ್ನು ತಪ್ಪಿಸಬೇಕು. ಕೃಷ್ಣನು ತನ್ನನ್ನು ಎಲ್ಲ ಸನ್ನಿವೇಶಗಳಲ್ಲಿಯೂ, ಎಲ್ಲ ಕಷ್ಟಗಳಿಂದಲೂ ಪಾರುಮಾಡುತ್ತಾನೆ ಎಂಬ ವಿಶ್ವಾಸವು ಮನುಷ್ಯನಿಗಿರಬೇಕು. ಜೀವನೋಪಾಯಕ್ಕೆ ಏನು ಮಾಡಬೇಕು ಎಂದು ಯೋಚಿಸುವ ಅಗತ್ಯವಿಲ್ಲ. ಅದನ್ನು ಕೃಷ್ಣನು ನೋಡಿಕೊಳ್ಳುತ್ತಾನೆ. ತಾನು ಸಹಾಯಹೀನ, ಬದುಕಿನಲ್ಲಿ ತನ್ನ ಪ್ರಗತಿಗೆ ಕೃಷ್ಣನೊಬ್ಬನೇ ಆಧಾರ ಎಂದು ಯೋಚಿಸಬೇಕು. ಮನುಷ್ಯನು ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಭಗವಂತನ ಭಕ್ತಿಸೇವೆಯಲ್ಲಿ ಗಂಭೀರವಾಗಿ ತೊಡಗುತ್ತಲೇ ಅವನಿಗೆ ಎಲ್ಲ ಐಹಿಕ ಪ್ರಕೃತಿಯ ಸೋಂಕಿನಿಂದ ಬಿಡುಗಡೆಯಾಗುತ್ತದೆ. ಜ್ಞಾನವನ್ನು ಬೆಳೆಸಿಕೊಳ್ಳುವುದು, ಯೋಗಪದ್ಧತಿಯಲ್ಲಿ ಧ್ಯಾನ ಮಾಡುವುದು ಮುಂತಾಗಿ ಹಲವು ಧಾರ್ಮಿಕ ಮತ್ತು ಶುದ್ಧೀಕರಣ ವಿಧಾನಗಳಿವೆ. ಆದರೆ ಕೃಷ್ಣನಿಗೆ ಶರಣಾಗತನಾದವನು ಇಷ್ಟೊಂದು ರೀತಿಗಳಲ್ಲಿ ಕಾರ್ಯನಿರತನಾಗಬೇಕಾಗಿಲ್ಲ. ಕೃಷ್ಣನಿಗೆ ಶರಣಾಗತನಾದರೆ ಸಾಕು. ಅದು ಅವನು ಅನಗತ್ಯವಾಗಿ ಕಾಲಹರಣ ಮಾಡುವುದನ್ನು ತಪ್ಪಿಸುತ್ತದೆ. ಹೀಗೆ ಮನುಷ್ಯನು ತಕ್ಷಣವೇ ಎಲ್ಲ ಪ್ರಗತಿಯನ್ನು ಸಾಧಿಸಿ ಎಲ್ಲ ಪಾಪಮಯ ಪ್ರಕ್ರಿಯೆಗಳಿಂದ ಬಿಡುಗಡೆ ಹೊಂದಬಹುದು.

ಮನುಷ್ಯನು ಕೃಷ್ಣನ ಸುಂದರವಾದ ದರ್ಶನದಿಂದ ಆಕರ್ಷಿತನಾಗಬೇಕು. ಅವನು ಸರ್ವಮೋಹಕನಾದದ್ದರಿಂದಲೇ ಅವನ ಹೆಸರು ಕೃಷ್ಣ. ಸುಂದರವಾದ, ಸರ್ವಶಕ್ತನಾದ ಕೃಷ್ಣನ ದರ್ಶನದಿಂದ ಆಕರ್ಷಿತನಾದವನು ಭಾಗ್ಯವಂತ. ಆಧ್ಯಾತ್ಮಿಕ ವಾದಿಗಳಲ್ಲಿ ವಿವಿಧ ರೀತಿಗಳವರಿದ್ದಾರೆ; ಅವರಲ್ಲಿ ಕೆಲವರಿಗೆ ನಿರಾಕಾರ ಬ್ರಹ್ಮನ್ ದರ್ಶನದಲ್ಲಿ ಆಸಕ್ತಿ. ಕೆಲವರು ಪರಮಾತ್ಮ ಸ್ವರೂಪದಿಂದ ಆಕರ್ಷಿತರಾಗುತ್ತಾರೆ; ಆದರೆ ದೇವೋತ್ತಮ ಪರಮ ಪುರುಷನ ವೈಯಕ್ತಿಕ ಸ್ವರೂಪದಿಂದ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ದೇವೋತ್ತಮ ಪರಮ ಪುರುಷನಾದ ಕೃಷ್ಣನಿಂದ ಆಕರ್ಷಿತನಾದವನು ಅತ್ಯಂತ ಪರಿಪೂರ್ಣ ಆಧ್ಯಾತ್ಮಿಕವಾದಿ. ಎಂದರೆ ಸಂಪೂರ್ಣ ಪ್ರಜ್ಞೆಯಲ್ಲಿ ಕೃಷ್ಣನಿಗೆ ಭಕ್ತಿಸೇವೆಯನ್ನು ಮಾಡುವುದು ಜ್ಞಾನದ ಅತ್ಯಂತ ರಹಸ್ಯಭಾಗ; ಇದೇ ಇಡೀ ಭಗವದ್ಗೀತೆಯ ಸಾರಸರ್ವಸ್ವ. ಕರ್ಮಯೋಗಿಗಳು, ಅನುಭವಗಮ್ಯ ತತ್ವಜ್ಞಾನಿಗಳು, ಹಠಯೋಗಿಗಳು ಮತ್ತು ಭಕ್ತರು ಎಲ್ಲರಿಗೂ ಆಧ್ಯಾತ್ಮಿಕವಾದಿಗಳು ಎಂದು ಹೆಸರು. ಆದರೆ ಪರಿಶುದ್ಧ ಭಕ್ತನು ಎಲ್ಲರಲ್ಲಿ ಶ್ರೇಷ್ಠನು. **ಮಾ ಶುಚಃ** "ಹೆದರಬೇಡ, ಹಿಂಜರಿಯಬೇಡ, ಆತಂಕಪಡಬೇಡ." ಎನ್ನುವ ಮಾತುಗಳು ಬಹು ಅರ್ಥವತ್ತಾದವು. ಎಲ್ಲ ಬಗೆಯ ಧಾರ್ಮಿಕರೂಪಗಳನ್ನು ಬಿಟ್ಟು ಕೃಷ್ಣನಿಗೆ ಶರಣಾಗತನಾಗುವುದು ಹೇಗೆ ಎಂದು ತೊಡಕಾಗಬಹುದು. ಆದರೆ ಅಂತಹ ಆತಂಕವು ನಿಷ್ಪ್ರಯೋಜಕವಾದದ್ದು.

## ಶ್ಲೋಕ - 67

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥**

**ಇದಮ್**—ಇದನ್ನು; **ತೇ**—ನಿನ್ನಿಂದ; **ನ**—ಎಂದಿಗೂ ಇಲ್ಲ; **ಅತಪಸ್ಕಾಯ**—ತಪಸ್ಸು ಮಾಡದೆ ಇರುವವನಿಗೆ; **ನ**—ಎಂದಿಗೂ ಇಲ್ಲ; **ಅಭಕ್ತಾಯ**—ಭಕ್ತನಲ್ಲದವನಿಗೆ; **ಕದಾಚನ**—ಯಾವ ಕಾಲದಲ್ಲಿಯೂ; **ನ**—ಎಂದಿಗೂ ಇಲ್ಲ; **ಚ**—ಕೂಡ; **ಅಶುಶ್ರೂಷವೇ**—ಭಕ್ತಿಸೇವೆಯಲ್ಲಿ ತೊಡಗದೇ ಇರುವವನಿಗೆ; **ವಾಚ್ಯಮ್**—ಹೇಳಲ್ಪಡತಕ್ಕದ್ದು; **ನ**—ಎಂದಿಗೂ ಇಲ್ಲ; **ಚ**—ಕೂಡ; **ಮಾಮ್**—ನನ್ನತ್ತ; **ಯಃ**—ಯಾರು; **ಅಭ್ಯಸೂಯತಿ**—ಅಸೂಯೆಪಡುತ್ತಾನೋ.

## ಅನುವಾದ

**ತಪಸ್ಸು ಮಾಡದವನಿಗೆ, ಭಕ್ತನಲ್ಲದವನಿಗೆ, ಭಕ್ತಿಸೇವೆಯಲ್ಲಿ ನಿರತನಾಗದವನಿಗೆ ಈ ರಹಸ್ಯ ಜ್ಞಾನವನ್ನು ವಿವರಿಸಬಾರದು; ನನ್ನ ವಿಷಯದಲ್ಲಿ ಅಸೂಯೆಪಡುವವನಿಗೆ ಹೇಳಬಾರದು.**

## ಭಾವಾರ್ಥ

ಕೆಲವರು ಧಾರ್ಮಿಕ ಪ್ರಕ್ರಿಯೆಯ ತಪಸ್ಸನ್ನು ಆಚರಿಸಿರುವುದಿಲ್ಲ. ಕೃಷ್ಣಪ್ರಜ್ಞೆಯಲ್ಲಿ ಭಕ್ತಿಸೇವೆಯನ್ನು ಮಾಡಲು ಪ್ರಯತ್ನಿಸಿರುವುದಿಲ್ಲ. ಪರಿಶುದ್ಧ ಭಕ್ತನ ಸೇವೆ ಮಾಡಿರುವುದಿಲ್ಲ; ಕೃಷ್ಣನನ್ನು ಒಬ್ಬ ಐತಿಹಾಸಿಕ ವ್ಯಕ್ತಿ ಎಂದು ಮಾತ್ರ ಪರಿಗಣಿಸುತ್ತಾರೆ; ಕೃಷ್ಣನ ಮಹಿಮೆಯನ್ನು ಕಂಡು ಅಸೂಯೆಪಡುತ್ತಾರೆ. ಈ ವರ್ಗಗಳಿಗೆ ಸೇರಿದ ಯಾರಿಗೂ ಜ್ಞಾನದ ಈ ಅತ್ಯಂತ ರಹಸ್ಯ ಭಾಗವನ್ನು ಹೇಳಬಾರದು. ಕೃಷ್ಣನನ್ನು ಕಂಡು ಅಸೂಯೆಪಡುವ ಮತ್ತು ಕೃಷ್ಣನನ್ನು ಬೇರೆ ರೀತಿಯಲ್ಲಿ ಪೂಜೆಮಾಡುವ ಆಸುರೀ ಸ್ವಭಾವದವರಿದ್ದಾರೆ. ಅವರು ವ್ಯಾಪಾರ ಮನೋಧರ್ಮದಿಂದ ಭಗವದ್ಗೀತೆಯನ್ನು ಬೇರೊಂದು ರೀತಿಯಲ್ಲಿ ವಿವರಿಸುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಆದರೆ ಕೃಷ್ಣನನ್ನು ಅರ್ಥಮಾಡಿಕೊಳ್ಳಲು ವಾಸ್ತವವಾಗಿ ಬಯಸುವವರು ಭಗವದ್ಗೀತೆಯ ಇಂತಹ ವ್ಯಾಖ್ಯಾನಗಳಿಂದ ದೂರವಿರಬೇಕು. ವಾಸ್ತವವಾಗಿ ಇಂದ್ರಿಯಲೋಲುಪರಾದವರು ಭಗವದ್ಗೀತೆಯ ಉದ್ದೇಶವನ್ನು ಅರ್ಥಮಾಡಿಕೊಳ್ಳಲಾರರು. ವಿಷಯಸುಖಾಭಿಲಾಷೆ ಇಲ್ಲದೆ ಮನುಷ್ಯನು ಕಟ್ಟುನಿಟ್ಟಾಗಿ ವೇದಧರ್ಮಗ್ರಂಥಗಳಲ್ಲಿ ವಿಧಿಸಿದ ಶಿಸ್ತನ್ನು ಪಾಲಿಸುತ್ತಿದ್ದರೂ ಅವನು ಭಕ್ತನಲ್ಲದಿದ್ದರೆ ಕೃಷ್ಣನನ್ನು ಅರ್ಥಮಾಡಿಕೊಳ್ಳಲಾರ. ಭಗವದ್ಗೀತೆಯಲ್ಲಿ ಕೃಷ್ಣನು ತಾನೇ ಪರಮ ಪ್ರಭುವು ಮತ್ತು ಯಾವುದೂ ತನಗಿಂತ ಮೇಲಿಲ್ಲ, ತನಗೆ ಸಮಾನವೂ ಅಲ್ಲ ಎಂದು ಹೇಳಿದ್ದಾನೆ. ಆದುದರಿಂದ ಹಲವಾರು ಮಂದಿಗೆ ಕೃಷ್ಣನಲ್ಲಿ ಅಸೂಯೆ. ಕೃಷ್ಣನನ್ನು ಕಂಡು ಅಸೂಯೆಪಡುವವರು ಬಹುಮಂದಿ ಇದ್ದಾರೆ. ಇಂತಹವರಿಗೆ ಭಗವದ್ಗೀತೆಯ ವಿಷಯವನ್ನು ಹೇಳಬಾರದು. ಅದು ಅವರಿಗೆ ಅರ್ಥವಾಗುವುದಿಲ್ಲ. ಶ್ರದ್ಧೆಯಿಲ್ಲದವರು ಭಗವದ್ಗೀತೆಯನ್ನಾಗಲೀ ಕೃಷ್ಣನನ್ನಾಗಲೀ ಅರ್ಥಮಾಡಿಕೊಳ್ಳುವ ಸಾಧ್ಯತೆಯೇ ಇಲ್ಲ. ಕೃಷ್ಣನನ್ನು ಅರ್ಥಮಾಡಿಕೊಳ್ಳದೆ ಪರಿಶುದ್ಧಭಕ್ತನ ಅಧಿಕಾರವಾಣಿಯಿಂದ ಭಗವದ್ಗೀತೆಯ ವ್ಯಾಖ್ಯಾನವನ್ನು ಮಾಡಲು ಪ್ರಯತ್ನಿಸಬಾರದು.

## ಶ್ಲೋಕ - 68

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ |**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ||೬೮||**

**ಯಃ**—ಯಾರು; **ಇದಮ್**—ಈ; **ಪರಮಮ್**—ಪರಮೋನ್ನತವಾದ; **ಗುಹ್ಯಮ್**—ಅತಿರಹಸ್ಯವನ್ನು; **ಮತ್**—ನನ್ನ; **ಭಕ್ತೇಷು**—ಭಕ್ತರಲ್ಲಿ; **ಅಭಿಧಾಸ್ಯತಿ**—ವಿವರಿಸುತ್ತಾನೋ; **ಭಕ್ತಿಮ್**—ಭಕ್ತಿಸೇವೆಯನ್ನು; **ಮಯಿ**—ನನ್ನಲ್ಲಿ; **ಪರಾಮ್**—ದಿವ್ಯವಾದ; **ಕೃತ್ವಾ**—ಮಾಡಿ; **ಮಾಮ್**—ನನ್ನಲ್ಲಿಗೆ; **ಏವ**—ಖಂಡಿತವಾಗಿಯೂ; **ಏಷ್ಯತಿ**—ಬರುತ್ತಾನೆ; **ಅಸಂಶಯಃ**—ಸಂಶಯವಿಲ್ಲದೆ.

## ಅನುವಾದ

**ಈ ಪರಮರಹಸ್ಯವನ್ನು ಭಕ್ತರಿಗೆ ಹೇಳುವವನಿಗೆ ಪರಿಶುದ್ಧ ಭಕ್ತಿಸೇವೆಯನ್ನು ಮಾಡುವ ಅವಕಾಶವು ನಿಶ್ಚಯವಾಗಿಯೂ ದೊರೆಯುವುದು; ಅದರ ಅಂತ್ಯದಲ್ಲಿ ಅವನು ನನ್ನ ಬಳಿಗೆ ಹಿಂದಿರುಗಿ ಬರುತ್ತಾನೆ.**

## ಭಾವಾರ್ಥ

ಸಾಮಾನ್ಯವಾಗಿ ಭಗವದ್ಗೀತೆಯನ್ನು ಭಕ್ತರು ತಮ್ಮತಮ್ಮೊಳಗೆ ಚರ್ಚಿಸಬೇಕೆಂದು ಸಲಹೆ ಮಾಡಿದೆ. ಏಕೆಂದರೆ ಭಕ್ತರಲ್ಲದವರಿಗೆ ಕೃಷ್ಣನಾಗಲೀ, ಭಗವದ್ಗೀತೆಯಾಗಲೀ ಅರ್ಥವಾಗುವುದಿಲ್ಲ. ಕೃಷ್ಣನನ್ನು, ಭಗವದ್ಗೀತೆಯನ್ನು ಯಥಾರ್ಥವಾಗಿ ಸ್ವೀಕರಿಸದೆ ಇರುವವರು ಭಗವದ್ಗೀತೆಯನ್ನು ಮನಸ್ಸಿಗೆ ಬಂದಂತೆ ವಿವರಿಸಿ ಅಪರಾಧಿಗಳಾಗಬಾರದು. ಕೃಷ್ಣನನ್ನು ದೇವೋತ್ತಮ ಪರಮ ಪುರುಷ ಎಂದು ಒಪ್ಪಲು ಸಿದ್ಧರಾಗಿರುವವರಿಗೆ ಭಗವದ್ಗೀತೆಯನ್ನು ವಿವರಿಸಬೇಕು. ಅದು ಭಕ್ತರಿಗೆ ಮಾತ್ರ ವಸ್ತು; ಊಹಾತ್ಮಕ ಚಿಂತನೆಗಳನ್ನು ಮಾಡುವವರಿಗಲ್ಲ. ಆದರೆ ಭಗವದ್ಗೀತೆಯನ್ನು ಯಥಾರ್ಥವಾಗಿ ಶ್ರದ್ಧೆಯಿಂದ ನಿರೂಪಿಸಲು ಪ್ರಯತ್ನಿಸುವವನು ಭಕ್ತಿಪೂರ್ವಕ ಚಟುವಟಿಕೆಗಳಲ್ಲಿ ಮುನ್ನಡೆಯುವನು ಮತ್ತು ಜೀವನದಲ್ಲಿ ಪರಿಶುದ್ಧ ಭಕ್ತಿಸೇವೆಯನ್ನು ತಲಪುವನು. ಇಂತಹ ಪರಿಶುದ್ಧ ಭಕ್ತಿಯ ಪರಿಣಾಮವಾಗಿ ಅವನು ಭಗವದ್ಧಾಮಕ್ಕೆ ಹೋಗುವುದು ನಿಶ್ಚಯ.

## ಶ್ಲೋಕ - 69

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ |**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ||೬೯||**

**ನ**—ಎಂದಿಗೂ ಇಲ್ಲ; **ಚ**—ಮತ್ತು; **ತಸ್ಮಾತ್**—ಅವನಿಗಿಂತ; **ಮನುಷ್ಯೇಷು**—ಮನುಷ್ಯರಲ್ಲಿ; **ಕಶ್ಚಿತ್**—ಯಾರೊಬ್ಬನೂ; **ಮೇ**—ನನಗೆ; **ಪ್ರಿಯಕೃತ್ ತಮಃ**—ಅತ್ಯಂತ ಪ್ರಿಯನು; **ಭವಿತಾ**—ಆಗುವವನು; **ನ**—ಇಲ್ಲ; **ಚ**—ಮತ್ತು; **ಮೇ**—ನನಗೆ; **ತಸ್ಮಾತ್**—ಅವನಿಗಿಂತ; **ಅನ್ಯಃ**—ಬೇರೊಬ್ಬನು; **ಪ್ರಿಯತರಃ**—ಪ್ರಿಯತರನು; **ಭುವಿ**—ಈ ಜಗತ್ತಿನಲ್ಲಿ.

## ಅನುವಾದ

**ಪ್ರಪಂಚದಲ್ಲಿ ಇವನಿಗಿಂತ ನನಗೆ ಪ್ರಿಯನಾದ ಸೇವಕನಿಲ್ಲ. ಇವನಿಗಿಂತ ಪ್ರಿಯನಾದವನು ಮುಂದೆಯೂ ಇರುವುದಿಲ್ಲ.**

## ಶ್ಲೋಕ - 70

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ |**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ||೭೦||**

**ಅಧ್ಯೇಷ್ಯತೇ**—ಅಧ್ಯಯನ ಮಾಡುವನೋ; **ಚ**—ಕೂಡ; **ಯಃ**—ಯಾರು; **ಇಮಮ್**—ಈ; **ಧರ್ಮ್ಯಮ್**—ಪವಿತ್ರವಾದ; **ಸಂವಾದಮ್**—ಸಂವಾದವನ್ನು; **ಆವಯೋಃ**—ನಮ್ಮಿಬ್ಬರ; **ಜ್ಞಾನ**—ಜ್ಞಾನದ; **ಯಜ್ಞೇನ**—ಯಜ್ಞದಿಂದ; **ತೇನ**—ಅವನಿಂದ; **ಅಹಮ್**—ನಾನು; **ಇಷ್ಟಃ**—ಆರಾಧಿತನು; **ಸ್ಯಾಮ್**—ಆಗುತ್ತೇನೆ; **ಇತಿ**—ಎಂಬುದು; **ಮೇ**—ನನ್ನ; **ಮತಿಃ**—ಅಭಿಪ್ರಾಯವು.

## ಅನುವಾದ

**ನಮ್ಮ ಈ ಪವಿತ್ರ ಸಂಭಾಷಣೆಯನ್ನು ಯಾರು ಅಧ್ಯಯನ ಮಾಡುವನೋ, ಅವನು ತನ್ನ ಬುದ್ಧಿಶಕ್ತಿಯಿಂದ ನನ್ನನ್ನು ಪೂಜಿಸುತ್ತಾನೆ.**

## ಶ್ಲೋಕ - 71

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ |**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ||೭೧||**

**ಶ್ರದ್ಧಾವಾನ್**—ಶ್ರದ್ಧಾಪೂರ್ಣನು; **ಅನಸೂಯಃ**—ಅಸೂಯೆಯಿಲ್ಲದವನು; **ಚ**—ಮತ್ತು; **ಶೃಣುಯಾತ್**—ಕೇಳುತ್ತಾನೋ; **ಅಪಿ**—ಖಂಡಿತವಾಗಿ; **ಯಃ**—ಯಾವ; **ನರಃ**—ಮನುಷ್ಯನು; **ಸಃ**—ಅವನು; **ಅಪಿ**—ಕೂಡ; **ಮುಕ್ತಃ**—ಮುಕ್ತವಾಗಿ; **ಶುಭಾನ್**—ಮಂಗಳಕರವಾದ; **ಲೋಕಾನ್**—ಲೋಕಗಳನ್ನು; **ಪ್ರಾಪ್ನುಯಾತ್**—ಹೊಂದುತ್ತಾನೆ; **ಪುಣ್ಯಕರ್ಮಣಾಮ್**—ಪುಣ್ಯವಂತರ.

## ಅನುವಾದ

**ಇದನ್ನು ಶ್ರದ್ಧೆಯಿಂದ ಮತ್ತು ಅಸೂಯೆಯಿಲ್ಲದೆ ಕೇಳುವ ಮನುಷ್ಯನು ಪಾಪಕರ್ಮಗಳಿಂದ ಮುಕ್ತನಾಗುತ್ತಾನೆ ಮತ್ತು ಪುಣ್ಯಕರ್ಮಿಗಳು ವಾಸಿಸುವ ಶುಭಲೋಕಗಳನ್ನು ಸೇರುತ್ತಾನೆ.**

## ಭಾವಾರ್ಥ

ಪ್ರಭುವಿನ ವಿಷಯದಲ್ಲಿ ಅಸೂಯೆಪಡುವವರಿಗೆ ಗೀತೆಯನ್ನು ಹೇಳುವುದನ್ನು ಪ್ರಭುವು ನಿಷೇಧಿಸಿದ್ದಾನೆ. ಇದು ಈ ಅಧ್ಯಾಯದ ಅರವತ್ತೇಳನೆಯ ಶ್ಲೋಕದಲ್ಲಿ ಬಂದಿದೆ. ಭಗವದ್ಗೀತೆಯು ಇರುವುದು ಭಕ್ತರಿಗಾಗಿ ಮಾತ್ರ. ಆದರೆ ಒಮ್ಮೊಮ್ಮೆ ಹೀಗೂ ಆಗುತ್ತದೆ.

ಪ್ರಭುವಿನ ಭಕ್ತನೊಬ್ಬನು ಎಲ್ಲರೂ ಕೇಳಬಹುದಾದ ಪ್ರವಚನವನ್ನು ನಡೆಸುತ್ತಾನೆ. ಇಂತಹ ಪ್ರವಚನಕ್ಕೆ ಬರುವ ಜನರೆಲ್ಲ ಭಕ್ತರಾಗಿರುವರೆಂದು ನಿರೀಕ್ಷಿಸುವುದಿಲ್ಲ. ಹಾಗಾದರೆ ಎಲ್ಲರೂ ಬರಬಹುದಾದ ಪ್ರವಚನವನ್ನು ಭಕ್ತರು ಏಕೆ ನಡೆಸುತ್ತಾರೆ? ಬರುವವರೆಲ್ಲ ಭಕ್ತರಲ್ಲದಿದ್ದರೂ ಕೃಷ್ಣನಲ್ಲಿ ಅಸೂಯೆ ಇಲ್ಲದವರು ಅನೇಕ ಮಂದಿ ಇರುತ್ತಾರೆ ಎಂದು ಇಲ್ಲಿ ವಿವರಿಸಿದೆ. ದೇವೋತ್ತಮ ಪರಮ ಪುರುಷನಾಗಿ ಅವರಿಗೆ ಕೃಷ್ಣನಲ್ಲಿ ಶ್ರದ್ಧೆಯುಂಟು. ಇಂತಹವರು ಒಬ್ಬ ನಿಜವಾದ ಭಕ್ತನಿಂದ ಪ್ರಭುವಿನ ವಿಷಯವನ್ನು ತಿಳಿದುಕೊಂಡರೆ ಅದರ ಪರಿಣಾಮವಾಗಿ ಅವರು ಕೂಡಲೇ ಎಲ್ಲ ಪಾಪಕರ್ಮಗಳಿಂದ ಬಿಡುಗಡೆಯಾಗುತ್ತಾರೆ; ಅನಂತರ ಎಲ್ಲ ಧರ್ಮಾತ್ಮರು ನೆಲೆಸುವ ಲೋಕವನ್ನು ತಲಪುತ್ತಾರೆ. ಆದುದರಿಂದ ಭಗವದ್ಗೀತೆಯನ್ನು ಕೇಳಿದರೆ ಸಾಕು. ಪರಿಶುದ್ಧ ಭಕ್ತನಾಗಲು ಪ್ರಯತ್ನ ಮಾಡದಿರುವವನಿಗೂ ಪುಣ್ಯಕಾರ್ಯಗಳ ಫಲವು ದೊರೆಯುತ್ತದೆ. ಪ್ರಭುವಿನ ಪರಿಶುದ್ಧ ಭಕ್ತನು ಪ್ರತಿಯೊಬ್ಬನಿಗೂ ತನ್ನ ಎಲ್ಲ ಪಾಪಕರ್ಮಗಳಿಂದ ಬಿಡುಗಡೆ ಹೊಂದಿ ಪ್ರಭುವಿನ ಭಕ್ತನಾಗುವ ಅವಕಾಶವನ್ನು ಕೊಡುತ್ತಾನೆ.

ಸಾಮಾನ್ಯವಾಗಿ ಪಾಪಕರ್ಮಗಳಿಂದ ಬಿಡುಗಡೆ ಹೊಂದಿದವರೂ, ಪುಣ್ಯಜೀವಿಗಳೂ ಸುಲಭವಾಗಿ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಾರೆ. ಇಲ್ಲಿ **ಪುಣ್ಯಕರ್ಮಣಾಮ್** ಎನ್ನುವ ಪದವು ಬಹುಮುಖ್ಯವಾದದ್ದು. ಇದು ಅಶ್ವಮೇಧ ಯಜ್ಞದಂತೆ ವೈದಿಕ ಸಾಹಿತ್ಯದಲ್ಲಿ ಹೆಸರಿಸಿರುವ ಶ್ರೇಷ್ಠ ಯಜ್ಞಗಳನ್ನು ಮಾಡುವುದನ್ನು ಪ್ರಸ್ತಾಪಿಸುತ್ತದೆ. ಭಕ್ತಿಸೇವೆ ಮಾಡುವುದರಲ್ಲಿ ಪುಣ್ಯಾತ್ಮರಾದವರು, ಆದರೆ ಪರಿಶುದ್ಧರಲ್ಲದವರು ಧ್ರುವ ನಕ್ಷತ್ರದ ಲೋಕವನ್ನು ತಲಪಬಲ್ಲರು. ಆ ಲೋಕಕ್ಕೆ ಧ್ರುವ ಮಹಾರಾಜನು ಅಧಿಪತಿ. ಅವನು ಪ್ರಭುವಿನ ಮಹಾನ್‌ಭಕ್ತ. ಅವನಿಗೇ ಒಂದು ವಿಶೇಷ ಲೋಕವಿದೆ. ಅದನ್ನು ಧ್ರುವಲೋಕ ಎಂದು ಕರೆಯುತ್ತಾರೆ.

## ಶ್ಲೋಕ - 72

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಞ್ಜಯ ॥೭೨॥**

**ಕಚ್ಚಿತ್**—ಏನು; **ಏತತ್**—ಇದು; **ಶ್ರುತಮ್**—ಕೇಳಲ್ಪಟ್ಟಿತೆ; **ಪಾರ್ಥ**—ಅರ್ಜುನನೇ; **ತ್ವಯಾ**—ನಿನ್ನಿಂದ; **ಏಕಾಗ್ರೇಣ**—ಏಕಾಗ್ರತೆಯ; **ಚೇತಸಾ**—ಮನಸ್ಸಿನಿಂದ; **ಕಚ್ಚಿತ್**—ಏನು; **ಅಜ್ಞಾನ**—ಅಜ್ಞಾನದ; **ಸಮ್ಮೋಹಃ**—ಭ್ರಾಂತಿಯು; **ಪ್ರಣಷ್ಟಃ**—ನಷ್ಟವಾಯಿತೆ; **ತೇ**—ನಿನ್ನ; **ಧನಞ್ಜಯ**—ಧನಂಜಯನೇ.

### ಅನುವಾದ

**ಪಾರ್ಥನೇ, ಧನಂಜಯನೇ, ಇದನ್ನು ನೀನು ಗಮನವಿಟ್ಟು ಕೇಳಿದೆಯಾ? ನಿನ್ನ ಅಜ್ಞಾನ ಮತ್ತು ಮೋಹಗಳು ನಾಶವಾದವೆ?**

### ಭಾವಾರ್ಥ

ಪ್ರಭುವು ಅರ್ಜುನನ ಗುರುವಾಗಿ ನಡೆದುಕೊಳ್ಳುತ್ತಿದ್ದ. ಆದುದರಿಂದ ಇಡೀ

ಭಗವದ್ಗೀತೆಯನ್ನು ಅವನು ಸರಿಯಾದ ದೃಷ್ಟಿಯಿಂದ ಅರ್ಥಮಾಡಿಕೊಂಡನೆ ಎಂದು ಕೇಳುವುದು ಕೃಷ್ಣನ ಕರ್ತವ್ಯವಾಗಿತ್ತು. ಅರ್ಜುನನು ಸರಿಯಾಗಿ ಅರ್ಥಮಾಡಿಕೊಳ್ಳದಿದ್ದರೆ ಯಾವುದೇ ಅಂಶವನ್ನು ಮತ್ತೆ ವಿವರಿಸಲು ಅಥವಾ ಅಗತ್ಯವಾದರೆ ಇಡೀ ಭಗವದ್ಗೀತೆಯನ್ನು ಮತ್ತೆ ವಿವರಿಸಲು ಪ್ರಭುವು ಸಿದ್ಧನಾಗಿದ್ದ. ವಾಸ್ತವವಾಗಿ ಕೃಷ್ಣನಂತಹ ಅಥವಾ ಅವನ ಪ್ರತಿನಿಧಿಯಾದ ಸದ್ಗುರುವಿನಿಂದ ಭಗವದ್ಗೀತೆಯನ್ನು ಕೇಳಿದವನು ತನ್ನ ಅಜ್ಞಾನವೆಲ್ಲ ನಾಶವಾದದ್ದನ್ನು ಕಾಣುತ್ತಾನೆ. ಭಗವದ್ಗೀತೆಯು ಒಬ್ಬ ಕವಿ ಅಥವಾ ಕತೆಗಾರ ಬರೆದ ಸಾಮಾನ್ಯ ಪುಸ್ತಕವಲ್ಲ. ಅದನ್ನು ದೇವೋತ್ತಮ ಪರಮ ಪುರುಷನೇ ಹೇಳುತ್ತಾನೆ. ಈ ಉಪದೇಶಗಳನ್ನು ಕೃಷ್ಣನಿಂದ ಅಥವಾ ಅವನ ನಿಜವಾದ ಆಧ್ಯಾತ್ಮಿಕ ಪ್ರತಿನಿಧಿಯಿಂದ ಕೇಳುವ ಭಾಗ್ಯವಿರುವವನು ಮುಕ್ತನಾಗುವುದು ಮತ್ತು ಅಜ್ಞಾನದ ಕತ್ತಲಿನಿಂದ ಹೊರಬರುವುದು ನಿಶ್ಚಯ.

## ಶ್ಲೋಕ - 73

**ಅರ್ಜುನ ಉವಾಚ**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ |**
**ಸ್ಥಿತೋಽಸ್ಮಿ ಗತಸನ್ದೇಹಃ ಕರಿಷ್ಯೇ ವಚನಂ ತವ ||೭೩||**

**ಅರ್ಜುನಃ ಉವಾಚ**—ಅರ್ಜುನನು ಹೇಳಿದನು; **ನಷ್ಟಃ**—ದೂರವಾಯಿತು; **ಮೋಹಃ**—ಮೋಹವು; **ಸ್ಮೃತಿ**—ನೆನಪು; **ಲಬ್ಧಾ**—ಮತ್ತೆ ಪ್ರಾಪ್ತವಾಯಿತು; **ತ್ವತ್‌ಪ್ರಸಾದಾತ್**—ನಿನ್ನ ಅನುಗ್ರಹದಿಂದ; **ಮಯಾ**—ನನ್ನಿಂದ; **ಅಚ್ಯುತ**—ಚ್ಯುತಿರಹಿತನಾದ ಕೃಷ್ಣನೇ; **ಸ್ಥಿತಃ**—ಸುಸ್ಥಿತನು; **ಅಸ್ಮಿ**—ಆಗಿದ್ದೇನೆ; **ಗತ**—ಕಳೆದ; **ಸನ್ದೇಹಃ**—ಸಕಲ ಸಂಶಯಗಳುಳ್ಳವನು; **ಕರಿಷ್ಯೇ**—ನಡೆಸುತ್ತೇನೆ; **ವಚನಮ್**—ಆದೇಶವನ್ನು; **ತವ**—ನಿನ್ನ.

## ಅನುವಾದ

**ಅರ್ಜುನನು ಹೀಗೆ ಹೇಳಿದನು — ಪ್ರಿಯ ಕೃಷ್ಣ, ಚ್ಯುತಿ ಇಲ್ಲದವನೇ, ನನ್ನ ಮೋಹವು ಮಾಯವಾಯಿತು. ನಿನ್ನ ದಯೆಯಿಂದ ನನ್ನ ಸ್ಮೃತಿಯನ್ನು ಮತ್ತೆ ಪಡೆದಿದ್ದೇನೆ. ಈಗ ನಾನು ದೃಢ ಮನಸ್ಸಿನಿಂದಿದ್ದೇನೆ. ನನ್ನ ಸಂದೇಹಗಳಿಂದ ಬಿಡುಗಡೆಯಾಗಿದ್ದೇನೆ. ನಿನ್ನ ಅಪ್ಪಣೆಯಂತೆ ನಡೆಯಲು ಸಿದ್ಧನಾಗಿದ್ದೇನೆ.**

## ಭಾವಾರ್ಥ

ಅರ್ಜುನನು ಜೀವಿಯ ಪ್ರತಿನಿಧಿ; ಜೀವಿಯ ಸಹಜಸ್ವರೂಪ ಇದು — ಅವನು ಪರಮ ಪ್ರಭುವಿನ ಅಪ್ಪಣೆಯಂತೆ ನಡೆಯಬೇಕು. ಅವನಿರುವುದೇ ಆಧ್ಯಾತ್ಮಿಕ ಶಿಸ್ತಿಗಾಗಿ. ಜೀವಿಯ ವಾಸ್ತವಸ್ಥಾನ ಪರಮ ಪ್ರಭುವಿನ ನಿರಂತರ ಸೇವಕನದು ಎಂದು ಶ್ರೀ ಚೈತನ್ಯಮಹಾಪ್ರಭುಗಳು ಹೇಳುತ್ತಾರೆ. ಈ ತತ್ವವನ್ನು ಮರೆತು ಜೀವಿಯು ಐಹಿಕ ಪ್ರಕೃತಿಯಿಂದ ಬದ್ಧನಾಗುತ್ತಾನೆ. ಆದರೆ ಪ್ರಭುವಿನ ಸೇವೆ ಮಾಡಿದರೆ ಮತ್ತೆ ಅವನು ಭಗವಂತನ ಮುಕ್ತ ಸೇವಕನಾಗುತ್ತಾನೆ. ಜೀವಿಯ ಸಹಜ ಸ್ವರೂಪವೇ ನಿತ್ಯ ಸೇವಕನದು. ಅವನು ಭ್ರಮೆ ಹುಟ್ಟಿಸುವ ಮಾಯೆಯನ್ನಾಗಲಿ, ಪರಮ

ಪ್ರಭುವನ್ನಾಗಲಿ ಸೇವಿಸಬೇಕು. ಅವನು ಪ್ರಭುವಿನ ಸೇವೆ ಮಾಡಿದರೆ ತನ್ನ ಸಹಜ ಸ್ಥಿತಿಯಲ್ಲಿರುತ್ತಾನೆ. ಬದಲಾಗಿ ಭ್ರಾಂತಿಕಾರಕ ಬಹಿರಂಗ ಶಕ್ತಿಯನ್ನು ಸೇವಿಸಲು ಆಯ್ಕೆ ಮಾಡಿಕೊಂಡರೆ ಅವನು ಬದ್ಧಸ್ಥಿತಿಯಲ್ಲಿ ಉಳಿಯುತ್ತಾನೆ. ಮಾಯೆಯಲ್ಲಿರುವ ಜೀವಿಯು ಈ ಐಹಿಕ ಜಗತ್ತಿನಲ್ಲಿ ಸೇವೆಮಾಡುತ್ತಿದ್ದಾನೆ. ತನ್ನ ಕಾಮ ಮತ್ತು ಬಯಕೆಗಳಿಂದ ಅವನು ಬಂಧಿತನಾಗಿದ್ದಾನೆ. ಆದರೆ ತಾನು ಜಗತ್ತಿನ ಪ್ರಭು ಎಂದು ಯೋಚಿಸುತ್ತಾನೆ. ಇದಕ್ಕೆ ಮಾಯೆ ಎಂದು ಹೆಸರು. ಮನುಷ್ಯನು ಮುಕ್ತನಾದಾಗ ಅವನ ಮಾಯೆಯು ನಿವಾರಣೆಯಾಗುತ್ತದೆ; ಅವನು ಪರಮ ಪ್ರಭುವಿನ ಇಚ್ಛೆಯಂತೆ ನಡೆಯಲು ತಾನಾಗಿಯೇ ಅವನಿಗೆ ಶರಣಾಗತನಾಗುತ್ತಾನೆ. ಜೀವಿಯನ್ನು ಹಿಡಿದಿಡಲು ಮಾಯೆಯು ಬಳಸುವ ಕಡೆಯ ಭ್ರಾಂತಿ, ಕಡೆಯ ಬಲೆ ಎಂದರೆ ತಾನೇ ದೇವರು ಎನ್ನುವ ಯೋಚನೆ. ಜೀವಿಯು ತಾನು ಇನ್ನು ಬದ್ಧ ಆತ್ಮನಲ್ಲ, ದೇವರು ಎಂದು ಯೋಚಿಸುತ್ತಾನೆ. ತಾನೇ ದೇವರಾಗಿದ್ದರೆ ತನಗೆ ಸಂದೇಹ ಬರುವುದು ಹೇಗೆ ಎನ್ನುವುದನ್ನು ಯೋಚಿಸದೆ ಇರುವಷ್ಟು ಅವನು ಮೂರ್ಖ. ಅವನು ಅದನ್ನು ಯೋಚಿಸುವುದಿಲ್ಲ. ಆದುದರಿಂದ ಇದು ಮಾಯೆಯ ಕಡೆಯ ಬಲೆ. ವಾಸ್ತವವಾಗಿ ಮಾಯೆಯಿಂದ ಬಿಡುಗಡೆಯಾಗುವುದೆಂದರೆ, ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಮತ್ತು ಅವನ ಅಪ್ಪಣೆಯಂತೆ ನಡೆಯಲು ಒಪ್ಪುವುದು.

ಈ ಶ್ಲೋಕದಲ್ಲಿ **ಮೋಹ** ಎನ್ನುವ ಪದ ಬಹಳ ಮುಖ್ಯವಾದದ್ದು. ಮೋಹ ಎಂದರೆ ಜ್ಞಾನಕ್ಕೆ ವಿರುದ್ಧವಾದದ್ದು. ವಾಸ್ತವವಾಗಿ ಜೀವಿಯು ತಾನು ಎಂದೆಂದೂ ಭಗವಂತನ ಸೇವಕ ಎಂದು ಅರ್ಥಮಾಡಿಕೊಳ್ಳುವುದೇ ನಿಜವಾದ ಜ್ಞಾನ. ಆದರೆ ಜೀವಿಯು ತನ್ನ ಈ ಸ್ಥಿತಿಯನ್ನು ಕುರಿತು ಯೋಚಿಸುವುದಿಲ್ಲ; ಅವನಿಗೆ ಐಹಿಕ ಪ್ರಕೃತಿಯ ಮೇಲೆ ಯಜಮಾನಿಕೆ ನಡೆಸಬೇಕೆಂಬ ಅಪೇಕ್ಷೆ. ಆದುದರಿಂದ ಅವನು ತಾನು ಸೇವಕನಲ್ಲ, ಐಹಿಕ ಜಗತ್ತಿನ ಯಜಮಾನ ಎಂದು ಯೋಚಿಸುತ್ತಾನೆ. ಅದು ಅವನಿಗೆ ಕವಿದ ಮಾಯೆ. ಪ್ರಭುವಿನ ದಯೆಯಿಂದಾಗಲೀ ಅಥವಾ ಒಬ್ಬ ಪರಿಶುದ್ಧ ಭಕ್ತನ ದಯೆಯಿಂದಾಗಲೀ ಈ ಮಾಯೆಯನ್ನು ನಿವಾರಿಸಬಹುದು. ಮಾಯೆಯು ನಿವಾರಣೆಯಾದ ಮೇಲೆ ಮನುಷ್ಯನು ಕೃಷ್ಣಪ್ರಜ್ಞೆಯಲ್ಲಿ ಕೆಲಸ ಮಾಡಲು ಒಪ್ಪಿಕೊಳ್ಳುತ್ತಾನೆ.

ಕೃಷ್ಣನ ಆಜ್ಞೆಯಂತೆ ನಡೆದುಕೊಳ್ಳುವುದೇ ಕೃಷ್ಣಪ್ರಜ್ಞೆ. ಜಡವಸ್ತುವಿನಿಂದ ಕೂಡಿರುವ ಬಹಿರಂಗ ಶಕ್ತಿಯಿಂದ ಮಾಯೆಗೆ ಒಳಗಾದ ಬದ್ಧಾತ್ಮನು, ಪರಮ ಪ್ರಭುವೇ ಪೂರ್ಣ ಜ್ಞಾನವುಳ್ಳ ಸ್ವಾಮಿ ಮತ್ತು ಎಲ್ಲದರ ಒಡೆಯ ಎನ್ನುವುದನ್ನು ಅರಿಯನು. ಪ್ರಭುವಾದರೋ ಅಪೇಕ್ಷಿಸಿದುದನ್ನು ತನ್ನ ಭಕ್ತನಿಗೆ ಅನುಗ್ರಹಿಸಬಲ್ಲ. ಅವನು ಎಲ್ಲರ ಸ್ನೇಹಿತ; ತನ್ನ ಭಕ್ತನಲ್ಲಿ ಅವನಿಗೆ ವಿಶೇಷ ಒಲವು. ಈ ಐಹಿಕ ಪ್ರಕೃತಿಯ ಮತ್ತು ಎಲ್ಲ ಜೀವಿಗಳ ನಿಯಂತ್ರಕನು ಅವನೇ. ಅನಂತವಾದ ಕಾಲವನ್ನು ನಿಯಂತ್ರಿಸುವವನು ಅವನೇ. ಎಲ್ಲ ಸಿರಿಗಳು ಮತ್ತು ಶಕ್ತಿಗಳು ಅವನಲ್ಲಿ ತುಂಬಿ ತುಳುಕುತ್ತಿವೆ. ದೇವೋತ್ತಮ ಪರಮ ಪುರುಷನು ಭಕ್ತನಿಗೆ ತನ್ನನ್ನೇ ಕೊಟ್ಟುಕೊಳ್ಳಬಲ್ಲ. ಅವನನ್ನು ತಿಳಿಯದವನು ಮಾಯೆಗೆ ಒಳಗಾಗಿದ್ದಾನೆ. ಅಂತಹವನು ಭಕ್ತನಾಗುವುದಿಲ್ಲ; ಮಾಯೆಯ ಸೇವಕನಾಗುತ್ತಾನೆ. ಆದರೆ ಅರ್ಜುನನು ದೇವೋತ್ತಮ ಪರಮ ಪುರುಷನಿಂದ ಭಗವದ್ಗೀತೆಯನ್ನು ಕೇಳಿದ ಮೇಲೆ ಎಲ್ಲ ಮಾಯೆಯಿಂದ ಮುಕ್ತನಾದನು. ಕೃಷ್ಣನು ತನ್ನ ಸ್ನೇಹಿತ ಮಾತ್ರವಲ್ಲ,

ಅವನು ಸ್ವತಃ ದೇವೋತ್ತಮ ಪರಮ ಪುರುಷ ಎಂದು ಅರ್ಥವಾಯಿತು. ಅವನು ಕೃಷ್ಣನನ್ನು ವಾಸ್ತವವಾಗಿ ತಿಳಿದುಕೊಂಡನು. ಆದುದರಿಂದ ಭಗವದ್ಗೀತೆಯನ್ನು ಅಧ್ಯಯನ ಮಾಡುವುದೆಂದರೆ ಕೃಷ್ಣನನ್ನು ವಾಸ್ತವವಾಗಿ ತಿಳಿದುಕೊಳ್ಳುವುದು. ಮನುಷ್ಯನು ಪೂರ್ಣಜ್ಞಾನಿಯಾದಾಗ ಅವನು ಸಹಜವಾಗಿ ಕೃಷ್ಣನಿಗೆ ಶರಣಾಗತನಾಗುತ್ತಾನೆ. ಅನಗತ್ಯವಾದ ಜನಸಂಖ್ಯೆಯ ಹೆಚ್ಚಳವನ್ನು ಕಡಮೆ ಮಾಡುವುದೇ ಕೃಷ್ಣನ ಯೋಜನೆ ಎನ್ನುವುದನ್ನು ಅರ್ಜುನನು ಅರ್ಥಮಾಡಿಕೊಂಡಾಗ, ಕೃಷ್ಣನ ಅಪೇಕ್ಷೆಯಂತೆ ಯುದ್ಧಮಾಡಲು ಒಪ್ಪಿದನು. ದೇವೋತ್ತಮ ಪರಮ ಪುರುಷನ ಅಪ್ಪಣೆಯಂತೆ ಯುದ್ಧಮಾಡಲು ಅವನು ತನ್ನ ಆಯುಧಗಳಾದ ಬಿಲ್ಲುಬಾಣಗಳನ್ನು ಮತ್ತೆ ಎತ್ತಿಕೊಂಡನು.

## ಶ್ಲೋಕ - 74

**ಸಂಜಯ ಉವಾಚ**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ |**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ||೭೪||**

**ಸಂಜಯಃ ಉವಾಚ**—ಸಂಜಯನು ಹೇಳಿದನು; **ಇತಿ**—ಹೀಗೆ; **ಅಹಮ್**—ನಾನು; **ವಾಸುದೇವಸ್ಯ**—ಕೃಷ್ಣನ; **ಪಾರ್ಥಸ್ಯ**—ಅರ್ಜುನನ; **ಚ**—ಕೂಡ; **ಮಹಾ ಆತ್ಮನಃ**—ಮಹಾತ್ಮನ; **ಸಂವಾದಮ್**—ಸಂವಾದವನ್ನು; **ಇಮಮ್**—ಈ; **ಅಶ್ರೌಷಮ್**—ಕೇಳಿದ್ದೇನೆ; **ಅದ್ಭುತಮ್**—ಅದ್ಭುತವಾದ; **ರೋಮಹರ್ಷಣಮ್**—ರೋಮಾಂಚಕವಾದ.

## ಅನುವಾದ

**ಸಂಜಯನು ಹೀಗೆ ಹೇಳಿದನು — ಇಬ್ಬರು ಮಹಾತ್ಮರಾದ ಕೃಷ್ಣ ಮತ್ತು ಅರ್ಜುನರ ಸಂಭಾಷಣೆಯನ್ನು ಹೀಗೆ ಕೇಳಿದೆನು. ಈ ಸಂವಾದವು ಎಷ್ಟು ಅದ್ಭುತವಾದುದೆಂದರೆ ನನಗೆ ರೋಮಾಂಚನವಾಗಿದೆ.**

## ಭಾವಾರ್ಥ

ಭಗವದ್ಗೀತೆಯ ಪ್ರಾರಂಭದಲ್ಲಿ ಧೃತರಾಷ್ಟ್ರನು ತನ್ನ ಸಹಾಯಕನಾದ ಸಂಜಯನನ್ನು "ಕುರುಕ್ಷೇತ್ರ ರಣಭೂಮಿಯಲ್ಲಿ ಏನಾಯಿತು?" ಎಂದು ಕೇಳಿದನು. ಸಂಜಯನ ಗುರುಗಳಾದ ವ್ಯಾಸರ ಕೃಪೆಯಿಂದ ಇಡೀ ಸಂಗತಿ ಸಂಜಯನ ಹೃದಯಕ್ಕೆ ವೇದ್ಯವಾಯಿತು. ಹೀಗೆ ಅವನು ರಣರಂಗದ ವಸ್ತುವನ್ನು ವಿವರಿಸಿದನು. ಸಂವಾದವು ಬೆರಗಾಗಿಸುವಂತಿತ್ತು. ಏಕೆಂದರೆ ಇಬ್ಬರು ಮಹಾತ್ಮರ ನಡುವೆ ಇಂತಹ ಮಹತ್ವಪೂರ್ಣ ಸಂಭಾಷಣೆಯು ಹಿಂದೆ ನಡೆದಿರಲಿಲ್ಲ; ಮುಂದೆ ನಡೆಯುವುದಿಲ್ಲ. ಅದು ಆಶ್ಚರ್ಯವನ್ನುಂಟುಮಾಡಿದುದಕ್ಕೆ ಮತ್ತೊಂದು ಕಾರಣವಿತ್ತು. ದೇವೋತ್ತಮ ಪರಮ ಪುರುಷನು ತನ್ನ ಮತ್ತು ತನ್ನ ಶಕ್ತಿಗಳನ್ನು ಕುರಿತು ಪ್ರಭುವಿನ ಶ್ರೇಷ್ಠ ಭಕ್ತನಾದ, ಜೀವಿಯಾದ ಅರ್ಜುನನಿಗೆ ತಿಳಿಸಿ ಹೇಳುತ್ತಿದ್ದನು. ನಾವು ಕೃಷ್ಣನನ್ನು ಅರ್ಥಮಾಡಿಕೊಳ್ಳಲು ಅರ್ಜುನನ ಹೆಜ್ಜೆಯಲ್ಲೇ ನಡೆದರೆ ನಮಗೆ ಸುಖ ಮತ್ತು ಜಯ ಉಂಟು. ಸಂಜಯನು ಇದನ್ನು ಅರಿತುಕೊಂಡನು. ಇದು ಅರ್ಥವಾಗಲು ಪ್ರಾರಂಭವಾದಂತೆ,

ಸಂಭಾಷಣೆಯನ್ನು ಧೃತರಾಷ್ಟ್ರನಿಗೆ ಹೇಳಿದನು. ಈಗ ಅವನು, ಎಲ್ಲಿ ಕೃಷ್ಣ ಮತ್ತು ಅರ್ಜುನರು ಇರುವರೋ ಅಲ್ಲಿ ಜಯವಾಗುತ್ತದೆ ಎಂದು ನಿರ್ಣಯಿಸಿದನು.

## ಶ್ಲೋಕ - 75

**ವ್ಯಾಸಪ್ರಸಾದಾಚ್ಛ್ರುತವಾನೇತದ್ ಗುಹ್ಯಮಹಂ ಪರಮ್ |**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ||೭೫||**

**ವ್ಯಾಸಪ್ರಸಾದಾತ್**—ವೇದವ್ಯಾಸರ ಅನುಗ್ರಹದಿಂದ; **ಶ್ರುತವಾನ್**—ಕೇಳಿದೆನು; **ಏತತ್**—ಈ; **ಗುಹ್ಯಮ್**—ಗುಪ್ತವಾದ; **ಅಹಮ್**—ನಾನು; **ಪರಮ್**—ಪರಮೋನ್ನತವಾದ; **ಯೋಗಮ್**—ಯೋಗವನ್ನು; **ಯೋಗ ಈಶ್ವರಾತ್**—ಸರ್ವಯೋಗಗಳ ಪ್ರಭುವಾದ; **ಕೃಷ್ಣಾತ್**—ಕೃಷ್ಣನಿಂದ; **ಸಾಕ್ಷಾತ್**—ಸಾಕ್ಷಾತ್ತಾಗಿ; **ಕಥಯತಃ**—ಹೇಳುತ್ತಿರುವ; **ಸ್ವಯಮ್**—ಸ್ವತಃ

## ಅನುವಾದ

**ವ್ಯಾಸರ ಕೃಪೆಯಿಂದಾಗಿ ನಾನು ಈ ಅತ್ಯಂತ ರಹಸ್ಯವಾದ ಮಾತುಗಳನ್ನು ಯೋಗೇಶ್ವರನಾದ ಕೃಷ್ಣನು ಸ್ವತಃ ಅರ್ಜುನನಿಗೆ ಹೇಳುತ್ತಿರುವಾಗ ನೇರವಾಗಿ ಕೇಳಿದ್ದೇನೆ.**

## ಭಾವಾರ್ಥ

ವ್ಯಾಸರು ಸಂಜಯನ ಗುರುಗಳು; ವ್ಯಾಸರ ದಯೆಯಿಂದ ತಾನು ದೇವೋತ್ತಮ ಪರಮ ಪುರುಷನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು ಎಂದು ಸಂಜಯನು ಒಪ್ಪಿಕೊಳ್ಳುತ್ತಾನೆ. ಹೀಗೆಂದರೆ ಮನುಷ್ಯನು ಕೃಷ್ಣನನ್ನು ಅರ್ಥಮಾಡಿಕೊಳ್ಳಬೇಕಾದದ್ದು ನೇರವಾಗಿ ಅಲ್ಲ, ಗುರುವಿನ ಮಾಧ್ಯಮದ ಮೂಲಕ ಎಂದು. ಗುರುವು ಪಾರದರ್ಶಕ ಮಾಧ್ಯಮವಾದರೂ, ಅನುಭವವು ನೇರವಾದುದು. ಇದೇ ಗುರುಶಿಷ್ಯ ಪರಂಪರೆಯ ರಹಸ್ಯ. ಗುರುವು ನಿಜವಾಗಿ ಗುರುವಾದರೆ ಅರ್ಜುನನು ಕೇಳಿದಂತೆ ಭಗವದ್ಗೀತೆಯನ್ನು ನೇರವಾಗಿ ಕೇಳಬಹುದು. ಜಗತ್ತಿನಲ್ಲೆಲ್ಲ ಹಲವರು ಯೋಗಿಗಳು ಇದ್ದಾರೆ. ಆದರೆ ಕೃಷ್ಣನು ಎಲ್ಲ ಯೋಗಪದ್ಧತಿಗಳ ಪ್ರಭು. ಕೃಷ್ಣನ ಆದೇಶವನ್ನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ — ಕೃಷ್ಣನಿಗೆ ಶರಣಾಗು. ಹೀಗೆ ಮಾಡುವವನೇ ಯೋಗಿಶ್ರೇಷ್ಠನು. ಆರನೆಯ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಇದನ್ನು ದೃಢಪಡಿಸಿದೆ **ಯೋಗಿನಾಮ್ ಅಪಿ ಸರ್ವೇಷಾಮ್**.

ನಾರದರು ಕೃಷ್ಣನ ನೇರ ಶಿಷ್ಯರು; ವ್ಯಾಸರ ಗುರು. ಆದುದರಿಂದ ವ್ಯಾಸರು ಅರ್ಜುನನಷ್ಟೇ ಅರ್ಹರು. ಏಕೆಂದರೆ ಅವರು ಗುರುಶಿಷ್ಯ ಪರಂಪರೆಯಲ್ಲಿ ಬರುತ್ತಾರೆ; ಸಂಜಯನು ವ್ಯಾಸರ ನೇರ ಶಿಷ್ಯ. ಆದುದರಿಂದ ವ್ಯಾಸರ ಕೃಪೆಯಿಂದ ಸಂಜಯನ ಇಂದ್ರಿಯಗಳು ಶುದ್ಧವಾದವು. ಆತನಿಗೆ ಕೃಷ್ಣನನ್ನು ನೇರವಾಗಿ ನೋಡುವುದು ಮತ್ತು ಕೇಳುವುದು ಸಾಧ್ಯವಾಯಿತು. ಕೃಷ್ಣನ ಮಾತನ್ನು ನೇರವಾಗಿ ಕೇಳಬಲ್ಲವರು ಈ ರಹಸ್ಯ ಜ್ಞಾನವನ್ನು ಅರ್ಥಮಾಡಿಕೊಳ್ಳಬಲ್ಲರು. ಗುರುಶಿಷ್ಯ ಪರಂಪರೆಗೆ ಸೇರದಿರುವ ಮನುಷ್ಯನು ಕೃಷ್ಣನ ಉಪದೇಶವನ್ನು ನೇರವಾಗಿ ಕೇಳಲಾರ; ಆದುದರಿಂದ ಅವನ ಜ್ಞಾನವು, ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳುವ ಮಟ್ಟಿಗಾದರೂ ಅಪರಿಪೂರ್ಣ.

ಭಗವದ್ಗೀತೆಯಲ್ಲಿ ಎಲ್ಲ ಯೋಗಪದ್ಧತಿಗಳನ್ನು — ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ — ವಿವರಿಸಿದೆ. ಇಂತಹ ಎಲ್ಲ ಯೋಗಗಳ ಈಶ್ವರ, ಕೃಷ್ಣ. ಕೃಷ್ಣನನ್ನು ನೇರವಾಗಿ ಅರಿಯುವ ಭಾಗ್ಯ ಅರ್ಜುನನದು; ಹಾಗೆಯೇ ವ್ಯಾಸರ ಕೃಪೆಯಿಂದ ಸಂಜಯನೂ ಕೃಷ್ಣನ ಮಾತುಗಳನ್ನು ನೇರವಾಗಿ ಕೇಳುವ ಅದೃಷ್ಟಶಾಲಿಯಾದ ಎನ್ನುವುದನ್ನು ತಿಳಿದುಕೊಳ್ಳಬೇಕು. ಗುರುವು ವ್ಯಾಸದೇವರ ಪ್ರತಿನಿಧಿಯೂ ಹೌದು. ನೇರವಾಗಿ ಕೃಷ್ಣನಿಂದ ಕೇಳುವುದರಲ್ಲಿ ಅಥವಾ ಕೃಷ್ಣನ ಪ್ರತಿನಿಧಿಯಾದ ವ್ಯಾಸರಂತಹ ಸದ್ಗುರುವಿನಿಂದ ಆಲಿಸುವುದರಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಆದುದರಿಂದಲೇ ವೇದ ಪದ್ಧತಿಯಂತೆ, ಗುರುವಿನ ಜನ್ಮದಿನವನ್ನು ಶಿಷ್ಯರು ವ್ಯಾಸಪೂಜೆ ಎಂದು ಆಚರಿಸುತ್ತಾರೆ.

## ಶ್ಲೋಕ - 76

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ |**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ||೭೬||**

**ರಾಜನ್**—ರಾಜನೇ; **ಸಂಸ್ಮೃತ್ಯ**—ಜ್ಞಾಪಿಸಿಕೊಳ್ಳುತ್ತಾ; **ಸಂಸ್ಮೃತ್ಯ**—ಸ್ಮರಿಸುತ್ತಾ; **ಸಂವಾದಮ್**—ಸಂದೇಶವನ್ನು; **ಇಮಮ್**—ಈ; **ಅದ್ಭುತಮ್**—ಅದ್ಭುತವಾದ; **ಕೇಶವ**—ಶ್ರೀಕೃಷ್ಣ; **ಅರ್ಜುನಯೋಃ**—ಮತ್ತು ಅರ್ಜುನರ; **ಪುಣ್ಯಮ್**—ಪುಣ್ಯಕರವಾದ; **ಹೃಷ್ಯಾಮಿ**— ಹರ್ಷಪಡುತ್ತಿದ್ದೇವೆ; **ಚ**—ಕೂಡ; **ಮುಹುಃ ಮುಹುಃ**—ಮತ್ತೆ ಮತ್ತೆ.

## ಅನುವಾದ

**ಅರಸನೇ, ಕೃಷ್ಣಾರ್ಜುನರ ನಡುವಣ ಅದ್ಭುತವೂ ಪವಿತ್ರವೂ ಆದ ಸಂಭಾಷಣೆಯನ್ನು ಮತ್ತೆ ಮತ್ತೆ ಸ್ಮರಿಸಿಕೊಂಡು ಆನಂದಪಡುತ್ತಿದ್ದೇನೆ. ಪ್ರತಿಕ್ಷಣವೂ ನನಗೆ ರೋಮಾಂಚನವಾಗುತ್ತಿದೆ.**

## ಭಾವಾರ್ಥ

ಭಗವದ್ಗೀತೆಯ ಅರಿವು ಎಷ್ಟು ದಿವ್ಯವಾದದ್ದು ಎಂದರೆ ಅರ್ಜುನ ಮತ್ತು ಕೃಷ್ಣರು ಚರ್ಚಿಸಿದ ವಿಷಯಗಳನ್ನು ತಿಳಿದುಕೊಂಡವನು ಪುಣ್ಯವಂತನಾಗುತ್ತಾನೆ; ಆತನು ಅಂತಹ ಸಂವಾದಗಳನ್ನು ಮರೆಯಲು ಸಾಧ್ಯವೇ ಇಲ್ಲ. ಇದು ಆಧ್ಯಾತ್ಮಿಕ ಜೀವನದ ದಿವ್ಯನೆಲೆ. ಎಂದರೆ ಸರಿಯಾದ ಮೂಲದಿಂದ, ನೇರವಾಗಿ ಕೃಷ್ಣನಿಂದ, ಗೀತೆಯನ್ನು ಕೇಳಿದವನು ಪೂರ್ಣ ಕೃಷ್ಣಪ್ರಜ್ಞೆಯನ್ನು ಪಡೆಯುತ್ತಾನೆ. ಕೃಷ್ಣಪ್ರಜ್ಞೆಯ ಪರಿಣಾಮ ಎಂದರೆ ಮನುಷ್ಯನು ಹೆಚ್ಚು ಹೆಚ್ಚು ಜ್ಞಾನವನ್ನು ಪಡೆಯುತ್ತಾನೆ. ಸ್ವಲ್ಪ ಕಾಲ ಮಾತ್ರವಲ್ಲ, ಕ್ಷಣಕ್ಷಣವೂ ರೋಮಾಂಚಿತನಾಗಿ ಬದುಕನ್ನು ಸವಿಯುತ್ತಾನೆ.

## ಶ್ಲೋಕ - 77

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ |**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ||೭೭||**

**ತತ್**—ಆ; **ಚ**—ಕೂಡ; **ಸಂಸ್ಮೃತ್ಯ**—ಸ್ಮರಿಸಿ; **ಸಂಸ್ಮೃತ್ಯ**—ನೆನಪುಮಾಡಿ; **ರೂಪಮ್**—ರೂಪವನ್ನು; **ಅತಿ**—ತುಂಬ; **ಅದ್ಭುತಮ್**—ಅದ್ಭುತವಾದ; **ಹರೇಃ**—ಶ್ರೀಕೃಷ್ಣನ; **ವಿಸ್ಮಯಃ**—ಆಶ್ಚರ್ಯವು; **ಮೇ**—ನನಗೆ; **ಮಹಾನ್**—ಮಹತ್ತರವಾದ; **ರಾಜನ್**—ರಾಜನೇ; **ಹೃಷ್ಯಾಮಿ**— ಸಂತಸಪಡುತ್ತಿದ್ದೇನೆ; **ಚ**—ಕೂಡ; **ಪುನಃ ಪುನಃ**—ಮತ್ತೆ ಮತ್ತೆ.

## ಅನುವಾದ

**ರಾಜನೇ ಶ್ರೀಕೃಷ್ಣನ ಅದ್ಭುತ ರೂಪವನ್ನು ನಾನು ಮತ್ತೆ ಮತ್ತೆ ಸ್ಮರಿಸಿದಂತೆಲ್ಲ ನನ್ನ ವಿಸ್ಮಯವು ಹೆಚ್ಚುತ್ತಿದೆ. ನಾನು ಮತ್ತೆ ಮತ್ತೆ ಹರ್ಷಪಡುತ್ತಿದ್ದೇನೆ.**

## ಭಾವಾರ್ಥ

ವ್ಯಾಸರ ಕೃಪೆಯಿಂದ ಸಂಜಯನಿಗೂ ಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಕಾಣುವುದು ಸಾಧ್ಯವಾಯಿತೆಂದು ತೋರುತ್ತದೆ. ಶ್ರೀ ಕೃಷ್ಣನು ಇಂತಹ ರೂಪವನ್ನು ಹಿಂದೆಂದೂ ತೋರಿಸಲಿಲ್ಲ ಎಂದು ಹೇಳಲಾಗಿದೆ. ಅದನ್ನು ಅರ್ಜುನನಿಗೆ ಮಾತ್ರ ತೋರಿಸಲಾಯಿತು. ಹಾಗೆ ಅದನ್ನು ಅರ್ಜುನನಿಗೆ ತೋರಿದಾಗ ಕೆಲವರು ಮಹಾಭಕ್ತರಿಗೂ ವಿಶ್ವರೂಪವನ್ನು ನೋಡಲು ಸಾಧ್ಯವಾಯಿತು. ಅವರಲ್ಲಿ ವ್ಯಾಸರು ಒಬ್ಬರು. ಅವರು ಪ್ರಭುವಿನ ಶ್ರೇಷ್ಠ ಭಕ್ತರಲ್ಲಿ ಒಬ್ಬರು; ಅವರನ್ನು ಕೃಷ್ಣನ ಶಕ್ತಿಶಾಲೀ ಅವತಾರ ಎಂದು ಪರಿಗಣಿಸಲಾಗಿದೆ. ವ್ಯಾಸರು ಇದನ್ನು ತಮ್ಮ ಶಿಷ್ಯ ಸಂಜಯನಿಗೆ ಹೇಳಿದರು; ಅವನು ಕೃಷ್ಣನು ಅರ್ಜುನನಿಗೆ ತೋರಿಸಿದ ಅದ್ಭುತ ರೂಪವನ್ನು ಸ್ಮರಿಸಿಕೊಂಡು ಮತ್ತೆ ಮತ್ತೆ ಹರ್ಷವನ್ನನುಭವಿಸಿದ.

## ಶ್ಲೋಕ - 78

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ |**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ||೭೮||**

**ಯತ್ರ**—ಎಲ್ಲಿ; **ಯೋಗ ಈಶ್ವರಃ**—ಯೋಗೇಶ್ವರನಾದ; **ಕೃಷ್ಣಃ**—ಶ್ರೀಕೃಷ್ಣನು; **ಯತ್ರ**—ಎಲ್ಲಿ; **ಪಾರ್ಥಃ**—ಪೃಥೆಯ ಪುತ್ರನು; **ಧನುಃ ಧರಃ**—ಬಿಲ್ಲುಬಾಣಗಳನ್ನು ಹಿಡಿದ; **ತತ್ರ**—ಅಲ್ಲಿ; **ಶ್ರೀಃ**—ಸಂಪತ್ತು; **ವಿಜಯಃ**—ವಿಜಯವು; **ಭೂತಿಃ**—ಅಸಾಧಾರಣ ಶಕ್ತಿಯು; **ಧ್ರುವಾ**—ಖಂಡಿತವು; **ನೀತಿಃ**—ನೀತಿಯು; **ಮತಿಃ ಮಮ**—ನನ್ನ ಅಭಿಪ್ರಾಯವು.

## ಅನುವಾದ

**ಯೋಗೇಶ್ವರನಾದ ಕೃಷ್ಣನು ಎಲ್ಲಿರುವನೋ ಮತ್ತು ಎಲ್ಲಿ ಧನುರ್ಧಾರಿಯಾದ ಅರ್ಜುನನಿರುವನೋ ಅಲ್ಲಿ ನಿಶ್ಚಯವಾಗಿಯೂ ಸಿರಿ, ವಿಜಯ, ಅಸಾಧಾರಣ ಶಕ್ತಿ ಮತ್ತು ನೀತಿ ಇವುಗಳು ಇರುತ್ತವೆ. ಇದು ನನ್ನ ಅಭಿಪ್ರಾಯ.**

## ಭಾವಾರ್ಥ

ಭಗವದ್ಗೀತೆಯು ಧೃತರಾಷ್ಟ್ರನ ಒಂದು ಪ್ರಶ್ನೆಯಿಂದ ಪ್ರಾರಂಭವಾಯಿತು. ಭೀಷ್ಮ ದ್ರೋಣ ಮತ್ತು ಕರ್ಣರಂತಹ ಅತಿರಥ ಮಹಾರಥರ ನೆರವಿನಿಂದ ತನ್ನ ಮಕ್ಕಳಿಗೆ ಜಯವು ದೊರೆಯುತ್ತದೆ ಎಂದು ಅವನಿಗೆ ಭರವಸೆಯಿತ್ತು. ಜಯವು ತನ್ನ ಪಕ್ಷಕ್ಕೆ ಎಂದು ಅವನ ಭರವಸೆ. ಆದರೆ ರಣರಂಗವನ್ನು ವರ್ಣಿಸಿ ಸಂಜಯನು ರಾಜನಿಗೆ, "ನೀನು ವಿಜಯವನ್ನು ಕುರಿತು ಯೋಚಿಸುತ್ತಿದ್ದೀಯೆ. ಆದರೆ ನನ್ನ ಅಭಿಪ್ರಾಯದಲ್ಲಿ ಎಲ್ಲಿ ಕೃಷ್ಣಾರ್ಜುನರು ಇರುತ್ತಾರೋ ಅಲ್ಲಿಗೆ ಅದೃಷ್ಟ ಒಲಿಯುತ್ತದೆ", ಎಂದು ಹೇಳಿದ. ಧೃತರಾಷ್ಟ್ರನು ತನ್ನ ಪಕ್ಷಕ್ಕೆ ಗೆಲುವನ್ನು ನಿರೀಕ್ಷಿಸುವಂತಿಲ್ಲ ಎಂದು ಅವನು ದೃಢಪಡಿಸಿದನು. ಕೃಷ್ಣನು ಅರ್ಜುನನ ಪಕ್ಷದಲ್ಲಿದ್ದುದರಿಂದ ಆ ಪಕ್ಷಕ್ಕೆ ಜಯ ನಿಶ್ಚಿತ. ಕೃಷ್ಣನು ಅರ್ಜುನನ ಸಾರಥಿಯಾಗಲು ಒಪ್ಪಿದ್ದು ಮತ್ತೊಂದು ಸಿರಿಯ ಪ್ರದರ್ಶನ. ಕೃಷ್ಣನಲ್ಲಿ ಎಲ್ಲ ಸಿರಿಗಳೂ ತುಂಬಿತುಳುಕುತ್ತಿವೆ; ಅವುಗಳಲ್ಲಿ ತ್ಯಾಗವೂ ಒಂದು. ಇಂತಹ ತ್ಯಾಗದ ಅನೇಕ ನಿದರ್ಶನಗಳಿವೆ. ಏಕೆಂದರೆ ಕೃಷ್ಣನು ತ್ಯಾಗದ ಪ್ರಭು.

ಯುದ್ಧವು ವಾಸ್ತವವಾಗಿ ನಡೆಯುತ್ತಿದ್ದುದು ದುರ್ಯೋಧನ ಮತ್ತು ಯುಧಿಷ್ಠಿರರ ನಡುವೆ. ಅರ್ಜುನನು ತನ್ನ ಅಣ್ಣ ಯುಧಿಷ್ಠಿರನ ಪರವಾಗಿ ಯುದ್ಧಮಾಡುತ್ತಿದ್ದ. ಕೃಷ್ಣಾರ್ಜುನರು ಯುಧಿಷ್ಠಿರನ ಪಕ್ಷದಲ್ಲಿದ್ದುದರಿಂದ ಯುಧಿಷ್ಠಿರನ ವಿಜಯವು ಖಂಡಿತವಾಗಿತ್ತು. ಯಾರು ಪ್ರಪಂಚವನ್ನಾಳಬೇಕು ಎನ್ನುವುದನ್ನು ನಿರ್ಧರಿಸುವುದಕ್ಕಾಗಿಯೇ ಈ ಯುದ್ಧವು ನಡೆಯಲಿತ್ತು. ಅಧಿಕಾರವನ್ನು ಯುಧಿಷ್ಠಿರನು ಪಡೆಯುವನೆಂದು ಸಂಜಯನು ಭವಿಷ್ಯ ಹೇಳಿದ. ಯುಧಿಷ್ಠಿರನು ಧರ್ಮಾತ್ಮ ಮತ್ತು ದೈವಭಕ್ತ ಮಾತ್ರವಲ್ಲ, ಕಟ್ಟುನಿಟ್ಟಾದ ನೀತಿವಂತ; ಆದುದರಿಂದ ಅವನು ಈ ಕದನದಲ್ಲಿ ಗೆದ್ದನಂತರ ಹೆಚ್ಚು ಹೆಚ್ಚು ಅಭ್ಯುದಯವನ್ನು ಪಡೆಯುವನು ಎಂದು ಸಂಜಯ ಭವಿಷ್ಯವನ್ನು ಹೇಳಿದ. ಯುಧಿಷ್ಠಿರನು ತನ್ನ ಜೀವಮಾನದಲ್ಲಿ ಎಂದೂ ಸುಳ್ಳಾಡಿದವನಲ್ಲ.

ಭಗವದ್ಗೀತೆಯು ರಣರಂಗದಲ್ಲಿ ಇಬ್ಬರು ಸ್ನೇಹಿತರ ಸಂಭಾಷಣೆ ಎಂದು ಭಾವಿಸುವ ಅಲ್ಪಬುದ್ಧಿಯವರು ಅನೇಕ ಮಂದಿ ಇದ್ದಾರೆ. ಇ ಂತಹ ಪುಸ್ತಕವು ಧರ್ಮಗ್ರಂಥವಾಗಲಾರದು, ಕೃಷ್ಣನು ಅರ್ಜುನನಿಗೆ ಯುದ್ಧಮಾಡುವಂತೆ ಪ್ರಚೋದಿಸಿದ, ಇದು ಅನೀತಿ ಎಂದು ಅವರು ಆಕ್ಷೇಪಿಸಬಹುದು; ಆದರೆ ವಾಸ್ತವ ಸ್ಥಿತಿಯನ್ನು ಸ್ಪಷ್ಟವಾಗಿ ಹೇಳಿದೆ; ಭಗವದ್ಗೀತೆಯು ನೀತಿಯ ಪರಮೋಪದೇಶ. ನೀತಿಯ ಪರಮೋಪದೇಶವನ್ನು ಒಂಬತ್ತನೆಯ ಅಧ್ಯಾಯದ ಮೂವತ್ತನಾಲ್ಕನೆಯ ಶ್ಲೋಕದಲ್ಲಿ ಹೇಳಿದೆ — **ಮನ್ಮನಾ ಭವ ಮದ್ಭಕ್ತಃ**. ಮನುಷ್ಯನು ಕೃಷ್ಣನ ಭಕ್ತನಾಗಬೇಕು. ಎಲ್ಲ ಧರ್ಮದ ತಿರುಳು ಕೃಷ್ಣನಿಗೆ ಶರಣಾಗತನಾಗುವುದು (**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ**) ಭಗವದ್ಗೀತೆಯ ಉಪದೇಶವು ಧರ್ಮದ ಉತ್ತಮ ವಿಧಾನವನ್ನು ಮತ್ತು ನೈತಿಕ ಜೀವನದ ಪರಮ ಪ್ರಕ್ರಿಯೆಗಳನ್ನು ಒಳಗೊಂಡಿದೆ. ಉಳಿದೆಲ್ಲ ಪ್ರಕ್ರಿಯೆಗಳು ವ್ಯಕ್ತಿಯನ್ನು ಪರಿಶುದ್ಧಗೊಳಿಸಬಹುದು ಮತ್ತು ಈ ಪ್ರಕ್ರಿಯೆಗೆ ಕರೆದೊಯ್ಯಬಹುದು. ಆದರೆ ಗೀತೆಯ ಕಡೆಯ ಉಪದೇಶವೇ ಎಲ್ಲ ನೀತಿ ಮತ್ತು ಧರ್ಮಗಳ ಕಡೆಯ ಮಾತು. ಕೃಷ್ಣನಿಗೆ ಶರಣಾಗತನಾಗು. ಇದು ಹದಿನೆಂಟನೆಯ ಅಧ್ಯಾಯದ ನಿರ್ಣಯ.

ತತ್ವಜ್ಞಾನದ ಊಹಾತ್ಮಕ ಚಿಂತನೆ ಮತ್ತು ಧ್ಯಾನ ಇವುಗಳಿಂದ ಆತ್ಮಸಾಕ್ಷಾತ್ಕಾರವನ್ನು

ಸಾಧಿಸುವುದು ಒಂದು ಪ್ರಕ್ರಿಯೆ. ಆದರೆ ಕೃಷ್ಣನಿಗೆ ಶರಣಾಗುವುದು ಅತ್ಯುನ್ನತ ಪರಿಪೂರ್ಣತೆ ಎಂದು ಭಗವದ್ಗೀತೆಯಿಂದ ನಾವು ತಿಳಿಯಬಹುದು. ಇದು ಭಗವದ್ಗೀತೆಯ ಉಪದೇಶಗಳ ಸಾರ. ವರ್ಣಾಶ್ರಮ ಧರ್ಮಕ್ಕೆ ಅನುಗುಣವಾಗಿ ಮತ್ತು ವಿವಿಧ ಧರ್ಮ ಮಾರ್ಗಗಳ ಅನುಸಾರವಾಗಿ ನಿಯಂತ್ರಣತತ್ವಗಳ ಪಾಲನೆ ಜ್ಞಾನದ ರಹಸ್ಯಭಾಗವಾಗಬಹುದು. ಧರ್ಮದ ವಿಧಿಗಳು ರಹಸ್ಯವಾಗಿರಬಹುದಾದರೂ, ಧ್ಯಾನ ಮತ್ತು ಜ್ಞಾನದ ಬೆಳವಣಿಗೆ ಇವು ಇನ್ನೂ ರಹಸ್ಯವಾದವು. ಸಂಪೂರ್ಣ ಕೃಷ್ಣಪ್ರಜ್ಞೆಯಲ್ಲಿ ಕೃಷ್ಣನಿಗೆ ಶರಣಾಗತನಾಗುವುದು ಅತ್ಯಂತ ರಹಸ್ಯವಾದ ಉಪದೇಶ. ಇದೇ ಹದಿನೆಂಟನೆಯ ಅಧ್ಯಾಯದ ತಿರುಳು.

ಭಗವದ್ಗೀತೆಯ ಇನ್ನೊಂದು ಲಕ್ಷಣವೆಂದರೆ ವಾಸ್ತವವಾದ ಸತ್ಯವು ದೇವೋತ್ತಮ ಪರಮ ಪುರುಷನಾದ ಕೃಷ್ಣನೇ ಎನ್ನುವುದು. ಪರಿಪೂರ್ಣ ಸತ್ಯವು ಮೂರು ಸ್ವರೂಪಗಳಲ್ಲಿ ಸಾಕ್ಷಾತ್ಕಾರವಾಗುತ್ತದೆ. ನಿರಾಕಾರ ಬ್ರಹ್ಮನ್, ಅಂತರ್ಯಾಮಿ ಪರಮಾತ್ಮ ಮತ್ತು ಕಟ್ಟಕಡೆಗೆ ದೇವೋತ್ತಮ ಪರಮ ಪುರುಷನಾದ ಕೃಷ್ಣ. ಪರಮಸತ್ಯದ ಪರಿಪೂರ್ಣ ಜ್ಞಾನವೆಂದರೆ ಕೃಷ್ಣನ ಪರಿಪೂರ್ಣಜ್ಞಾನ. ಕೃಷ್ಣನನ್ನು ಅರ್ಥಮಾಡಿಕೊಂಡರೆ ಜ್ಞಾನದ ಎಲ್ಲ ವಿಭಾಗಗಳು ಅಂತಹ ತಿಳುವಳಿಕೆಯ ಒಂದು ಅಂಶ ಮಾತ್ರವಾಗಿವೆ. ಕೃಷ್ಣನು ಯಾವಾಗಲೂ ತನ್ನ ನಿತ್ಯ ಅಂತರಂಗ ಶಕ್ತಿಯಲ್ಲಿ ನೆಲೆಸಿರುವುದರಿಂದ ಅವನು ದಿವ್ಯನು. ಜೀವಿಗಳು ಅವನ ಶಕ್ತಿಯಿಂದ ಪ್ರಕಟರಾಗುತ್ತಾರೆ. ಇವರಲ್ಲಿ ಎರಡು ವರ್ಗಗಳು — ಶಾಶ್ವತ ಬದ್ಧರು ಮತ್ತು ಶಾಶ್ವತ ಮುಕ್ತರು. ಇಂತಹ ಜೀವಿಗಳು ಅಸಂಖ್ಯಾತ; ಅವುಗಳನ್ನು ಕೃಷ್ಣನ ಮೂಲ ಅಂಶಗಳು ಎಂದು ಪರಿಗಣಿಸುತ್ತಾರೆ. ಐಹಿಕ ಶಕ್ತಿಯು ಇಪ್ಪತ್ತನಾಲ್ಕು ಅಂಶಗಳಲ್ಲಿ ಪ್ರಕಟವಾಗುತ್ತದೆ. ನಿರಂತರ ಕಾಲವು ಸೃಷ್ಟಿಗೆ ಕಾರಣವಾಗಿದೆ; ಬಹಿರಂಗ ಶಕ್ತಿಯು ಅದನ್ನು ಸೃಷ್ಟಿಸುತ್ತದೆ ಮತ್ತು ನಾಶಮಾಡುತ್ತದೆ. ವಿಶ್ವದ ಈ ಅಭಿವ್ಯಕ್ತಿಯು ಮತ್ತೆ ಮತ್ತೆ ದೃಶ್ಯವಾಗುತ್ತದೆ ಮತ್ತು ಅದೃಶ್ಯವಾಗುತ್ತದೆ.

ಭಗವದ್ಗೀತೆಯಲ್ಲಿ ಐದು ಮುಖ್ಯ ವಿಷಯಗಳನ್ನು ಚರ್ಚಿಸಿದೆ—ದೇವೋತ್ತಮ ಪರಮ ಪುರುಷ, ಐಹಿಕ ಪ್ರಕೃತಿ, ಜೀವಿಗಳು, ಅನಂತಕಾಲ ಮತ್ತು ಎಲ್ಲ ಬಗೆಯ ಕರ್ಮಗಳು; ಎಲ್ಲವೂ ದೇವೋತ್ತಮ ಪರಮ ಪುರುಷನಾದ ಕೃಷ್ಣನನ್ನು ಅವಲಂಬಿಸಿವೆ. ಪರಿಪೂರ್ಣಸತ್ಯದ ಪರಿಕಲ್ಪನೆಗಳು — ನಿರಾಕಾರ ಬ್ರಹ್ಮನ್, ಅಂತರ್ಯಾಮಿ ಪರಮಾತ್ಮ ಮತ್ತು ಬೇರೆ ಯಾವುದೇ ಆಧ್ಯಾತ್ಮಿಕ ಪರಿಕಲ್ಪನೆ ದೇವೋತ್ತಮ ಪರಮ ಪುರುಷನ ಅರಿವಿನ ವರ್ಗದಲ್ಲಿರುತ್ತದೆ. ಮೇಲ್ನೋಟಕ್ಕೆ ದೇವೋತ್ತಮ ಪರಮ ಪುರುಷ, ಜೀವಿ, ಐಹಿಕ ನಿಸರ್ಗ ಮತ್ತು ಕಾಲಗಳು ಬೇರೆ ಬೇರೆಯೆಂದು ಕಂಡರೂ ಯಾವುದೂ ಪರಮೋನ್ನತನಿಂದ ಬೇರೆಯಲ್ಲ. ಆದರೆ ಪರಮೋನ್ನತನು ಮಾತ್ರ ಯಾವಾಗಲೂ ಎಲ್ಲದರಿಂದಲೂ ಬೇರೆ. "ಅಚಿಂತ್ಯ ಭೇದಾಭೇದ"ವು ಚೈತನ್ಯ ಮಹಾಪ್ರಭುಗಳ ತತ್ವಶಾಸ್ತ್ರ. ತತ್ವಶಾಸ್ತ್ರದ ಈ ಪದ್ಧತಿಯು ಪರಮಸತ್ಯದ ಪರಿಪೂರ್ಣ ಜ್ಞಾನವಾಗಿದೆ.

ತನ್ನ ಸಹಜ ಸ್ವರೂಪದಲ್ಲಿ ಜೀವಿಯೂ ಪರಿಶುದ್ಧ ಆತ್ಮ. ಅವನು ಪರಮಾತ್ಮನ ಒಂದು ಅಣುಕಣವಿದ್ದಂತೆ. ಶ್ರೀಕೃಷ್ಣನನ್ನು ಸೂರ್ಯನಿಗೆ ಹೋಲಿಸಬಹುದು. ಜೀವಿಗಳನ್ನು ಸೂರ್ಯಪ್ರಭೆಗೆ ಹೋಲಿಸಬಹುದು. ಜೀವಿಗಳು ಕೃಷ್ಣನ ತಟಸ್ಥಶಕ್ತಿಯಾದದ್ದರಿಂದ ಅವುಗಳಿಗೆ ಐಹಿಕ ಶಕ್ತಿಯೊಡನೆ ಅಥವಾ ಆಧ್ಯಾತ್ಮಿಕ ಶಕ್ತಿಯೊಡನೆ ಸಂಪರ್ಕ ಬೆಳೆಸುವ ಪ್ರವೃತ್ತಿಯಿರುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಜೀವಿಯು ಪ್ರಭುವಿನ ಎರಡು ಶಕ್ತಿಗಳ ನಡುವೆ ಇದ್ದಾನೆ;

ಪ್ರಭುವಿನ ಮೇಲ್ಮಟ್ಟದ ಶಕ್ತಿಗೆ ಸೇರಿರುವುದರಿಂದ ಅವನಿಗೆ ಅಣುಮಾತ್ರ ಸ್ವಾತಂತ್ರ್ಯವಿದೆ. ಆ ಸ್ವಾತಂತ್ರ್ಯವನ್ನು ಯೋಗ್ಯರೀತಿಯಲ್ಲಿ ಬೆಳೆಸಿಕೊಂಡರೆ ಅವನು ಕೃಷ್ಣನ ನೇರ ಆದೇಶವನ್ನು ಸ್ವೀಕರಿಸುತ್ತಾನೆ. ಹೀಗೆ ಹ್ಲಾದಿನೀ ಶಕ್ತಿಯಲ್ಲಿ ಅವನು ತನ್ನ ಸಹಜಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ.

**ಇಲ್ಲಿಗೆ ಶ್ರೀಮದ್ಭಗವದ್ಗೀತೆಯ "ಉಪಸಂಹಾರ — ವೈರಾಗ್ಯದ ಪರಿಪೂರ್ಣತೆ" ಎಂಬ ಹದಿನೆಂಟನೆಯ ಅಧ್ಯಾಯದ ಭಕ್ತಿವೇದಾಂತ ಭಾವಾರ್ಥವು ಮುಗಿಯಿತು.**

# ಗ್ರಂಥಕರ್ತರು

ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು 1896ರಲ್ಲಿ ಕಲ್ಕತ್ತದಲ್ಲಿ ಜನಿಸಿದರು. ಅವರು ತಮ್ಮ ಗುರುಗಳಾದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿಯವರನ್ನು 1922ರಲ್ಲಿ ಮೊದಲಬಾರಿಗೆ ಕಲ್ಕತ್ತದಲ್ಲಿ ಸಂಧಿಸಿದರು. ಮಹೋನ್ನತ ವಿದ್ವಾಂಸರೂ ಮತ್ತು ಅರವತ್ತನಾಲ್ಕು ಗೌಡೀಯ ಮಠಗಳ ಸಂಸ್ಥಾಪನಾಚಾರ್ಯರೂ ಆದ ಶ್ರೀಲ ಭಕ್ತಿ ಸಿದ್ಧಾಂತ ಸರಸ್ವತಿಯವರು, ಈ ವಿದ್ಯಾಸಂಪನ್ನನಾದ ಯುವಕನನ್ನು ಇಷ್ಟಪಟ್ಟು, ತನ್ನ ಜೀವಮಾನವನ್ನೇ ವೇದಜ್ಞಾನದ ಬೋಧನೆಗೆ ಅಂಕಿತ ಮಾಡಲು ಪೂರ್ಣವಾಗಿ ಅವನ ಮನ ಒಲಿಸಿದರು. ಶ್ರೀಲ ಪ್ರಭುಪಾದರು ಅವರ ವಿದ್ಯಾರ್ಥಿಯಾದರು ಮತ್ತು ಹನ್ನೊಂದು ವರ್ಷದ ಬಳಿಕ, ವಿಧಿವಿಹಿತ ದೀಕ್ಷೆಪಡೆದು ಅವರ ಶಿಷ್ಯರಾದರು.

ತಮ್ಮ ಪ್ರಥಮ ಭೇಟಿಯಲ್ಲಿ, ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಠಾಕೂರರು, ಶ್ರೀಲ ಪ್ರಭುಪಾದರನ್ನು ವೇದಜ್ಞಾನವನ್ನು ಇಂಗ್ಲೀಷ್ ಭಾಷೆಯ ಮೂಲಕ ಪ್ರಸಾರಮಾಡಬೇಕೆಂದು ಕೋರಿದರು. ಮುಂದಿನ ವರ್ಷಗಳಲ್ಲಿ ಶ್ರೀಲ ಪ್ರಭುಪಾದರು **ಭಗವದ್ಗೀತೆಗೆ** ವ್ಯಾಖ್ಯಾನವನ್ನು ಬರೆದರು; ಗೌಡೀಯ ಮಠದ ಕಾರ್ಯದಲ್ಲಿ ಸಹಕರಿಸಿದರು. 1944ರಲ್ಲಿ ಅವರು ಪ್ರಾರಂಭಿಸಿದ **ಬ್ಯಾಕ್ ಟು ಗಾಡ್‌ಹೆಡ್** ಎಂಬ ಇಂಗ್ಲಿಷ್ ಪಾಕ್ಷಿಕ ಪತ್ರಿಕೆಯು, ಈಗಲೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿರುವ ಅವರ ಶಿಷ್ಯರುಗಳ ಮೂಲಕ ಮುವ್ವತ್ತಕ್ಕಿಂತ ಅಧಿಕ ಭಾಷೆಗಳಲ್ಲಿ ಮುಂದುವರಿಯುತ್ತಲಿದೆ.

ಶ್ರೀಲ ಪ್ರಭುಪಾದರ ವೇದಾಂತ ಜ್ಞಾನ ಮತ್ತು ಭಕ್ತಿಯನ್ನು ಗುರುತಿಸಿ ಗೌಡೀಯ ವೈಷ್ಣವ ಸಂಘವು 1947ರಲ್ಲಿ "ಭಕ್ತಿವೇದಾಂತ" ಎಂಬ ಬಿರುದನ್ನು ನೀಡಿ ಅವರನ್ನು ಗೌರವಿಸಿತು. ಶ್ರೀಲ ಪ್ರಭುಪಾದರು 1950ರಲ್ಲಿ, ತಮ್ಮ ಐವತ್ನಾಲ್ಕನೆಯ ವರ್ಷದಲ್ಲಿ ವೈವಾಹಿಕ ಜೀವನದಿಂದ ನಿವೃತ್ತರಾದರು; ತಮ್ಮ ಅಭ್ಯಾಸ ಮತ್ತು ಬರವಣಿಗೆಗಾಗಿ ಹೆಚ್ಚು ಕಾಲವನ್ನು ವಿನಿಯೋಗಿಸಲು **ವಾನಪ್ರಸ್ಥ** ಆಶ್ರಮವನ್ನು ಸ್ವೀಕರಿಸಿದರು. ಶ್ರೀಲ ಪ್ರಭುಪಾದರು ಪವಿತ್ರವಾದ ವೃಂದಾವನಕ್ಕೆ ಪ್ರಯಾಣ ಮಾಡಿ, ಅಲ್ಲಿನ ಮಧ್ಯಯುಗದ ಪ್ರಸಿದ್ಧ ರಾಧಾ-ದಾಮೋದರ ದೇವಾಲಯದಲ್ಲಿ ನಿರಾಡಂಬರವಾಗಿ ಜೀವನವನ್ನು ಸಾಗಿಸಿದರು. ಅಲ್ಲಿ ಅವರು ಹಲವು ವರ್ಷಗಳ ಕಾಲ ಆಳವಾದ ಅಭ್ಯಾಸ ಮತ್ತು ಬರಹದಲ್ಲಿ ನಿರತರಾಗಿದ್ದು, 1956ರಲ್ಲಿ ಸಂನ್ಯಾಸವನ್ನು ಸ್ವೀಕರಿಸಿದರು. ರಾಧಾ-ದಾಮೋದರ ದೇವಾಲಯದಲ್ಲಿ ಶ್ರೀಲ ಪ್ರಭುಪಾದರು **ಶ್ರೀಮದ್ಭಾಗವತ**ದ ಹದಿನೆಂಟು ಸಾವಿರ ಶ್ಲೋಕಗಳನ್ನು ಭಾಷಾಂತರಿಸುವ ಮತ್ತು ವ್ಯಾಖ್ಯಾನಿಸುವ ಅನೇಕ ಸಂಪುಟಗಳನ್ನು ರಚಿಸುವ ಕಾರ್ಯವನ್ನು ಆರಂಭಿಸಿದರು. ಇದು ಅವರ ಜೀವನದ ಅದ್ಭುತ ಕಾರ್ಯವಾಗಿತ್ತು. ಅಲ್ಲಿದ್ದಾಗಲೇ ಅವರು "**ಇತರ ಲೋಕಗಳಿಗೆ ಸುಲಭ ಪ್ರಯಾಣ**" ಎಂಬ ಗ್ರಂಥವನ್ನೂ ಬರೆದರು.

**ಶ್ರೀಮದ್ಭಾಗವತ**ದ ಮೂರು ಸಂಪುಟಗಳನ್ನು ಪ್ರಕಾಶನ ಮಾಡಿದ ನಂತರ, ತಮ್ಮ ಗುರುಗಳ ಆದೇಶವನ್ನು ನೆರವೇರಿಸಲು ಶ್ರೀಲ ಪ್ರಭುಪಾದರು 1965ರಲ್ಲಿ ಅಮೆರಿಕೆಗೆ ಹೋದರು. ಆಗಿನಿಂದ ಅವರು, ಭಾರತದ ದಾರ್ಶನಿಕ ಮತ್ತು ಧಾರ್ಮಿಕ ಮಹಾಗ್ರಂಥಗಳಿಗೆ ಭಾಷಾಂತರಗಳನ್ನು, ವ್ಯಾಖ್ಯಾನಗಳನ್ನು ಮತ್ತು ಸಾರಾಂಶೀಕೃತ ಪರಾಮರ್ಶೆಗಳನ್ನು ಬರೆದಿದ್ದಾರೆ. ಇವುಗಳ ಪ್ರಮಾಣ

ಅರವತ್ತು ಸಂಪುಟಗಳಿಗೂ ಮೀರಿದೆ.

1965ರಲ್ಲಿ ಅವರು ಮೊದಲು ನ್ಯೂಯಾರ್ಕ್ ನಗರಕ್ಕೆ ಹಡಗಿನಲ್ಲಿ ಬಂದಾಗ, ಶ್ರೀಲ ಪ್ರಭುಪಾದರಲ್ಲಿ ಹಣವೇ ಇರಲಿಲ್ಲ. ಒಂದು ವರ್ಷ ಬಹಳ ಕಷ್ಟಪಟ್ಟ ನಂತರ 1966ರ ಜುಲೈಯಲ್ಲಿ ಅವರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವನ್ನು ಸ್ಥಾಪಿಸಿದರು. 14ನೆಯ ನವಂಬರ್ 1977ರಲ್ಲಿ ಅವರು ಭಗವದ್ಧಾಮವನ್ನು ಸೇರಿದರು. ಅಲ್ಲಿಯವರೆಗೆ ಸಂಘಕ್ಕೆ ಮಾರ್ಗದರ್ಶನ ನೀಡಿದರು. ತಾವು ಇರುವಾಗಲೇ ನೂರಕ್ಕಿಂತ ಮಿಗಿಲಾದ ಆಶ್ರಮ, ಪಾಠಶಾಲೆ, ದೇವಾಲಯ, ಕುಶಲ ಕಲಾ ಶಾಲೆ ಮತ್ತು ವ್ಯವಸಾಯ ಕ್ಷೇತ್ರಗಳನ್ನು ಒಳಗೊಂಡ ವಿಶ್ವವ್ಯಾಪಿ ಸಂಯೋಜಿತ ಸಂಸ್ಥೆಯಾಗಿ ಬೆಳೆಯುವುದನ್ನು ಕಣ್ಣಾರೆ ಕಂಡರು.

ಪ್ರಭುಪಾದರು ನವ ವೃಂದಾವನವೆಂಬ ಒಂದು ಪ್ರಾಯೋಗಿಕ ವೈದಿಕ ಕ್ಷೇತ್ರವನ್ನು ಪಶ್ಚಿಮ ವರ್ಜಿನಿಯಾದಲ್ಲಿ ಸ್ಥಾಪಿಸಿದರು. ವೈದಿಕ ಗುರುಕುಲ ಪದ್ಧತಿಯ ಶಿಕ್ಷಣವನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರಾರಂಭಿಸಿದವರೂ ಶ್ರೀಲ ಪ್ರಭುಪಾದರೇ.

ಶ್ರೀಲ ಪ್ರಭುಪಾದರು ಭಾರತದಲ್ಲಿ ಹಲವಾರು ಅಂತಾರಾಷ್ಟ್ರೀಯ ಕೇಂದ್ರಗಳ ನಿರ್ಮಾಣವನ್ನೂ ಪ್ರೋತ್ಸಾಹಿಸಿದರು. ಪಶ್ಚಿಮ ಬಂಗಾಲದಲ್ಲಿರುವ ಶ್ರೀಧಾಮ ಮಾಯಾಪುರದ ಕೇಂದ್ರದಲ್ಲಿನ ನಿವೇಶನವು ಯೋಜಿತ ಅಧ್ಯಾತ್ಮ ನಗರಕ್ಕಾಗಿ ಉದ್ದೇಶಿತವಾಗಿದೆ. ಈ ಮಹಾ ಯೋಜನೆಯ ನಿರ್ಮಾಣವು ಮುಂದಿನ ದಶಕದ ಆಚೆಗೂ ವಿಸ್ತರಿಸುವುದು. ವೃಂದಾವನದಲ್ಲಿ ಭವ್ಯವಾದ ಕೃಷ್ಣ-ಬಲರಾಮ ದೇವಾಲಯ, ಅಂತಾರಾಷ್ಟ್ರೀಯ ಅತಿಥಿಗೃಹ, ಶ್ರೀಲ ಪ್ರಭುಪಾದ ಸ್ಮಾರಕ ಮತ್ತು ವಸ್ತು ಸಂಗ್ರಹಾಲಯಗಳಿವೆ. ಬೊಂಬಾಯಿಯಲ್ಲಿಯೂ ಸಹ ಒಂದು ದೊಡ್ಡ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕೇಂದ್ರವಿದೆ. ಭಾರತದ ಉಪಖಂಡದಲ್ಲಿನ ಹನ್ನೆರಡು ಮುಖ್ಯ ಸ್ಥಳಗಳಲ್ಲಿ ಇತರ ಕೇಂದ್ರಗಳು ಯೋಜಿತವಾಗಿವೆ.

ಶ್ರೀಲ ಪ್ರಭುಪಾದರ ಅತ್ಯಂತ ಪರಿಣಾಮಕಾರಿ ಕೊಡುಗೆಯು ಅವರ ಪುಸ್ತಕಗಳೇ ಆಗಿವೆ. ತಮ್ಮ ಪ್ರಾಮಾಣ್ಯ, ಗಹನ ವಿಚಾರ ಮತ್ತು ಸ್ಪಷ್ಟತೆಗಳಿಗಾಗಿ ಅವು ವಿಶೇಷ ಗೌರವಗಳಿಸಿವೆ. ಅವುಗಳನ್ನು ಅನೇಕ ಕಾಲೇಜುಗಳ ಶಿಕ್ಷಣ ಕ್ರಮದಲ್ಲಿ ಪಠ್ಯಪುಸ್ತಕಗಳಾಗಿ ಉಪಯೋಗಿಸಲಾಗುತ್ತಿದೆ. ಅವರ ಬರಹಗಳು ಮುವ್ವತ್ತಕ್ಕಿಂತಲೂ ಹೆಚ್ಚಿನ ಭಾಷೆಗಳಿಗೆ ಅನುವಾದವಾಗಿವೆ. ಈ ಕೃತಿಗಳನ್ನು ಪ್ರಕಟಿಸುವುದಕ್ಕಾಗಿಯೇ 1972ರಲ್ಲಿ ಸ್ಥಾಪಿಸಲ್ಪಟ್ಟ ಭಕ್ತಿವೇದಾಂತ ಬುಕ್ ಟ್ರಸ್ಟ್ ಸಂಸ್ಥೆಯು ಭಾರತದ ಧರ್ಮ ಮತ್ತು ದರ್ಶನ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಪಂಚದ ಅತಿದೊಡ್ಡ ಪ್ರಕಾಶನ ಸಂಸ್ಥೆಯಾಗಿದೆ.

ಕೇವಲ ಹನ್ನೆರಡು ವರ್ಷಗಳಲ್ಲಿ, ತಮ್ಮ ವೃದ್ಧಾಪ್ಯದಲ್ಲಿಯೂ ಕೂಡ, ಶ್ರೀಲ ಪ್ರಭುಪಾದರು ಪ್ರವಚನ ಪ್ರವಾಸಗಳಿಗಾಗಿ ಭೂಮಂಡಲವನ್ನು ಹದಿನಾಲ್ಕು ಸಲ ಪರ್ಯಟನೆ ಮಾಡಿ ಆರು ಖಂಡಗಳಿಗೂ ಹೋದರು. ಅಂತಹ ಒತ್ತಡದ ಕಾರ್ಯಕ್ರಮಗಳ ನಡುವೆಯೂ ಶ್ರೀಲ ಪ್ರಭುಪಾದರು ಬರೆಯುವುದನ್ನು ಒಂದೇ ಸಮನೆ ಮುಂದುವರಿಸಿದರು. ವೇದಾಂತ, ಧರ್ಮ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಒಳಗೊಂಡಿರುವ ಅವರ ಲೇಖನಗಳು ವಾಸ್ತವವಾಗಿ ಒಂದು ಗ್ರಂಥಾಲಯವೇ ಆಗಿ ಪರಿಣಮಿಸಿದೆ.

# ಉಲ್ಲೇಖಗಳು

ಭಗವದ್ಗೀತಾ ಯಥಾರೂಪದ ಭಾವಾರ್ಥಗಳೆಲ್ಲವನ್ನು ಮಾನಕ ವೇದ ಪ್ರಮಾಣಗಳಿಂದ ದೃಢಪಡಿಸಲಾಗಿದೆ. ಈ ಸಂಪುಟದಲ್ಲಿ ಕೆಳಗಿನ ಅಧಿಕೃತ ಶಾಸ್ತ್ರಗಳನ್ನು ಉಲ್ಲೇಖಿಸಲಾಗಿದೆ.

ಅಥರ್ವ ವೇದ
ಅಮೃತ ಬಿಂದು ಉಪನಿಷತ್ತು
ಈಶೋಪನಿಷತ್ತು
ಉಪದೇಶಾಮೃತ
ಋಗ್ ವೇದ
ಕಠ ಉಪನಿಷತ್ತು
ಕೂರ್ಮ ಪುರಾಣ
ಕೌಷೀತಕಿ ಉಪನಿಷತ್ತು
ಗೋಪಾಲ ತಾಪನೀ ಉಪನಿಷತ್ತು
ಗರ್ಗ ಉಪನಿಷತ್ತು
ಚೈತನ್ಯ ಚರಿತಾಮೃತ
ಛಾಂದೋಗ್ಯ ಉಪನಿಷತ್ತು
ತೈತ್ತಿರೀಯ ಉಪನಿಷತ್ತು
ನರಸಿಂಹ ಪುರಾಣ
ನಾರದ ಪಂಚರಾತ್ರ
ನಾರಾಯಣ ಉಪನಿಷತ್ತು
ನಾರಾಯಣೀಯ
ನಿರುಕ್ತಿ ನಿಘಂಟು
ಪದ್ಮ ಪುರಾಣ
ಪರಾಶರ ಸ್ಮೃತಿ
ಪುರುಷ ಬೋಧಿನಿ ಉಪನಿಷತ್ತು
ಪ್ರಶ್ನ ಉಪನಿಷತ್ತು

# ಲಘು ಶಬ್ದಕೋಶ

ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ **ಭಗವದ್ಗೀತಾ ಯಥಾರೂಪ**ದ ಭಾಷಾಂತರ ಮತ್ತು ಭಾವಾರ್ಥಗಳು ಕೇವಲ ಊಹಾತ್ಮಕ ಚಿಂತನೆಯ ಪರಿಣಾಮಗಳಲ್ಲ ಅಥವಾ ಗ್ರಂಥಕರ್ತರ ಅಭಿಪ್ರಾಯಗಳಲ್ಲ. ಅವು ಪೂರ್ವಾಚಾರ್ಯರ ವ್ಯಾಖ್ಯಾನಗಳಿಗೆ ಸಂಪೂರ್ಣವಾಗಿ ಹೊಂದಿಕೊಳ್ಳುವ ಶಾಸ್ತ್ರಗಳಲ್ಲಿರುವ ರಹಸ್ಯ ಸಂದೇಶಗಳ ಅಧಿಕೃತ ವಿವರಣೆಗಳಾಗಿವೆ. ಆದ್ದರಿಂದ ಶ್ರೀಲ ಪ್ರಭುಪಾದರು ಬಹು ಎಚ್ಚರಿಕೆಯಿಂದ ಶಬ್ದಗಳನ್ನು ಮತ್ತು ವಾಕ್ಯಗಳನ್ನು ಆರಿಸಿಕೊಂಡಿದ್ದಾರೆ.

ಶ್ರೀಲ ಪ್ರಭುಪಾದರ **ಭಗವದ್ಗೀತಾ ಯಥಾರೂಪ**ದ ಈ ಕನ್ನಡ ಆವೃತ್ತಿಯ ಪ್ರಕಾಶಕರು, ಸಾಧ್ಯವಿದ್ದಷ್ಟು ಮಟ್ಟಿಗೂ ಶ್ರೀಲ ಪ್ರಭುಪಾದರ ಸಂದೇಶಗಳನ್ನು ಸರಿಯಾಗಿ ನೀಡಲು ಅಪಾರ ಶ್ರಮವಹಿಸಿದ್ದಾರೆ. ಅಲ್ಲಲ್ಲಿ ಬರುವ ಕೆಲವು ಪಾರಿಭಾಷಿಕ ಪದಗಳನ್ನು ಕನ್ನಡ ಓದುಗರು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯವಾಗುವಂತೆ, ಇಲ್ಲಿ ಒಂದು ಲಘು ಶಬ್ದಕೋಶವನ್ನು ಕೊಡಲಾಗಿದೆ. ಅದರಲ್ಲಿ ಶ್ರೀಲ ಪ್ರಭುಪಾದರು ಉಪಯೋಗಿಸಿದ ಮೂಲ ಆಂಗ್ಲ ಪದಗಳಿಗೆ ಸಮಾನ ಕನ್ನಡ ಪದಗಳನ್ನೂ ಮತ್ತು ಅಗತ್ಯವಾದ ಕಡೆಗಳಲ್ಲಿ ಸಂಕ್ಷಿಪ್ತ ವಿವರಣೆಗಳನ್ನೂ ನೀಡಲಾಗಿದೆ.

## ಅ

| | | |
|---|---|---|
| ಅಕರ್ಮ | - | Inaction |
| ಅಚ್ಯುತ | - | Infalliable |
| ಅಪರಾ | - | Inferior |
| ಅಪರಾ ಪ್ರಕೃತಿ | - | Inferior nature |
| ಅದ್ವೈತವಾದ | - | Impersonal Philosophy |
| ಅನುಭವಗಮ್ಯ | - | Empirical |
| ಅಲೌಕಿಕರು | - | Transcendentalists |
| ಅಪೌರುಷೇಯ ಧರ್ಮಗ್ರಂಥ | - | Revealed Scripture |
| ಅಂತರ್ಯಾಮಿ | - | Localised Supersoul |
| ಅಂತರಂಗ ಶಕ್ತಿ | - | Internal Potency |
| ಅಂಶಾವತಾರ | - | Partial Incarnation |

## ಆ

| | | |
|---|---|---|
| ಆಧ್ಯಾತ್ಮಿಕ ಆಕಾಶ | - | Spiritual Sky |
| ಆಧ್ಯಾತ್ಮಿಕವಾದಿಗಳು | - | Transcendentalists |

## ಉ

| | | |
|---|---|---|
| ಉದ್ಭೂತಿ,<br>ಉದ್ಗಮ } | - | Emanation |

## ಊ

| | | |
|---|---|---|
| ಊಹಾತ್ಮಕ ಚಿಂತನೆ | - | Mental Speculation |

## ಐ

| | | |
|---|---|---|
| ಐಹಿಕ ಭೋಗಾಸಕ್ತರು | - | Materialists |
| ಐಹಿಕ ಅಸ್ತಿತ್ವ | - | Material existence |

## ಕ

| | | |
|---|---|---|
| ಕರ್ಮಕಾಂಡೀಯ ಯಜ್ಞ | - | Ritualistic Sacrifice |
| ಕಾಮ್ಯಕರ್ಮ | - | Fruitive Action |

## ಗ

| | | |
|---|---|---|
| ಗುರುಪರಂಪರೆ<br>ಗುರುಶಿಷ್ಯ ಪರಂಪರೆ } | - | Disciplic succession |

## ಜ

| | | |
|---|---|---|
| ಜೀವಾತ್ಮ | - | Individual Soul |

## ತ

| | | |
|---|---|---|
| ತಟಸ್ಥ | - | Marginal |
| ತಟಸ್ಥ ಶಕ್ತಿ | - | Marginal Potency |

## ದ

| | | |
|---|---|---|
| ದ್ವಿಜಬಂಧು | - | Friend of twice born |
| ದೇವೋತ್ತಮ ಪರಮ ಪುರುಷ | - | Supreme Personality of Godhead |

## ಧ

| | | |
|---|---|---|
| ಧರ್ಮನಿರಪೇಕ್ಷ | - | Secular |

## ಪ

| | | |
|---|---|---|
| ಪರಾಪ್ರಕೃತಿ | - | Superior nature |
| ಪರವ್ಯೋಮ | - | Spiritual Sky |
| ಪರತರ<br>ಪರಾತ್ಪರ } | - | Absolute |
| ಪರಮಸತ್ಯ | - | Absolute Truth |
| ಪರಮಾತ್ಮ | - | Supersoul |
| ಪ್ರಕೃತಿ ಗುಣಗಳು | - | Modes of Material nature |
| ಪಾರ್ಶ್ವಿಕ ವಿಸ್ತರಣೆ | - | Partial Expansion |

## ಫ

| | | |
|---|---|---|
| ಫಲಾಪೇಕ್ಷೆಯುಳ್ಳ ಕರ್ಮ | - | Fruitive Action |

## ಬ

| | | |
|---|---|---|
| ಬದ್ಧಾತ್ಮ | - | Conditioned Soul |
| ಬಹಿರಂಗ ಶಕ್ತಿ | - | External Potency |

## ಭ

| | | |
|---|---|---|
| ಭಗವದ್ಧಾಮಕ್ಕೆ ಹಿಂದಿರುಗುವುದು | - | Back home, Back to Godhead |

## ಮ

| | | |
|---|---|---|
| ಮನೋಕಲ್ಪನೆ | - | Mental Speculation |
| ಮಾಯಾವಾದ | - | Impersonal Philosophy |
| ಮಿಥ್ಯಾಪ್ರತಿಮೆ | - | Idol |

## ಲ

| | | |
|---|---|---|
| ಲೌಕಿಕ ಅಸ್ತಿತ್ವ | - | Material Existence |

## ವ

| | | |
|---|---|---|
| ವಿಕೃತ ಛಾಯೆ<br>ವಿಕೃತ ಬಿಂಬ } | - | Perverted reflection |
| ವಿಗ್ರಹ | - | Deity |
| ವಿಧ್ಯುಕ್ತ ಆಚರಣೆ | - | Ritualistic Ceremony |
| ವಿಭಿನ್ನಾಂಶ | - | Part and Parcel |

## ಸ

| | | |
|---|---|---|
| ಸಮೀಪ ಕಾರಣ | - | Immediate cause |
| ಸ್ವರೂಪ ಸ್ಥಿತಿ | - | Constitutional position |
| ಸ್ವಾಂಶ ವಿಸ್ತರಣೆ | - | Plenary Expansion |

